ಕುಮಾರವ್ಯಾಸ ಮಹಾಕವಿಯ

# ಕರ್ಣಾಟ ಭಾರತ ಕಥಾಮಂಜರಿ


ಸಂಪಾದಕರು

**ಕುವೆಂಪು**

ಮತ್ತು

**ಮಾಸ್ತಿ ವೆಂಕಟೇಶ ಅಯ್ಯಂಗಾರ್**






ಪ್ರಕಾಶನ

ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ

1974

ಬೆಲೆ : ಏಳು ರೂಪಾಯಿಗಳು

ಕುಮಾರವ್ಯಾಸ ಮಹಾಕವಿಯ

# ಕರ್ಣಾಟ ಭಾರತ ಕಥಾಮಂಜರಿ


ಸಂಪಾದಕರು

ಕುವೆಂಪು

ಮತ್ತು

ಮಾಸ್ತಿ ವೆಂಕಟೇಶ ಅಯ್ಯಂಗಾರ್






ಪ್ರಕಾಶನ

ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ

1974



ಗದುಗಿನ ವೀರನಾರಾಯಣದೇವರ ಗುಡಿಯಲ್ಲಿರುವ "ಕುಮಾರವ್ಯಾಸರ ಕಂಬ"

ಕುಮಾರವ್ಯಾಸ ಕವಿಯ ಜನ್ಮಸ್ಥಳವಾದ ಕೋಳಿವಾಡ ಗ್ರಾಮದಲ್ಲಿರುವ ವೀರನಾರಾಯಣದೇವರು
(ಮಾಧವ ಜನಾರ್ಧನ ಎಂಬುದಾಗಿಯೂ ಕರೆಯುತ್ತಾರೆ)

# ವಿನಂತಿ

ಕನ್ನಡ ಸಾಹಿತ್ಯದಲ್ಲಿ ರತ್ನಪ್ರಾಯವಾದುದೆಂದೆನಿಸಿರುವ ಕುಮಾರವ್ಯಾಸ ಭಾರತವು ಜನತೆಗೆ ಸುಂದರವಾದ ಮುದ್ರಣದಲ್ಲೂ ಅತಿ ಸುಲಭ ಬೆಲೆಗೂ ದೊರೆಯುವಂತಾಗಬೇಕೆಂದು ೧೯೫೪ರಲ್ಲಿ ಆಗ ಮುಖ್ಯ ಮಂತ್ರಿಗಳಾಗಿದ್ದ ಶ್ರೀ ಕೆ. ಹನುಮಂತಯ್ಯನವರು ಸೂಚಿಸಿದರು. ಮೈಸೂರು ಸರ್ಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ಕೇಂದ್ರ ಸಲಹಾಸಮಿತಿ ಈ ಸೂಚನೆಯನ್ನು ಅಂಗೀಕರಿಸಿತು. ಅನಂತರ ಅದೇ ಇಲಾಖೆಯ ಪ್ರಕಟನಾಸಮಿತಿ ಕುಮಾರವ್ಯಾಸ ಭಾರತವನ್ನು ಸಂಪಾದಿಸಿಕೊಡುವ ಕಾರ್ಯವನ್ನು ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರಿಗೂ, ಶ್ರೀ ಕೆ. ವಿ. ಪುಟ್ಟಪ್ಪನವರಿಗೂ ವಹಿಸಿಕೊಡಬೇಕೆಂದು ನಿರ್ಣಯಿಸಿತು. ಈ ನಿರ್ಣಯವನ್ನು ಮೈಸೂರು ಸರ್ಕಾರವು ಒಪ್ಪಿದ್ದಲ್ಲದೆ, ಈ ಪುಸ್ತಕವನ್ನು ಕೇವಲ ಎರಡು ರೂಪಾಯಿಗಳ ಬೆಲೆಗೆ ಮಾರಬೇಕೆಂದು ಆಜ್ಞೆಮಾಡಿತು.

ಈ ಗ್ರಂಥವನ್ನು ಸಂಪಾದಿಸಿಕೊಡಲು ಒಪ್ಪಿ ಆ ಕಾರ್ಯವನ್ನು ನಿರ್ವಹಿಸಿರುವ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರಿಗೂ, ಶ್ರೀ ಕೆ. ವಿ. ಪುಟ್ಟಪ್ಪನವರಿಗೂ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯು ಋಣಿಯಾಗಿದೆ. ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟಿರುವ ಮೈಸೂರು ಸರ್ಕಾರಿ ಮುದ್ರಣಾಲಯದ ಮೈಸೂರು ಶಾಖೆಗೂ ಈ ಇಲಾಖೆಯ ವಂದನೆಗಳು ಸಲ್ಲುತ್ತವೆ.

ಅತಿ ಸುಲಭ ಬೆಲೆಯಲ್ಲಿ ದೊರೆಯುವ ಈ ಗ್ರಂಥವನ್ನು ಓದಿ ಕನ್ನಡಿಗರೆಲ್ಲರೂ ಆನಂದಿಸಲಿ.

**ಎ. ಎನ್. ಮೂರ್ತಿರಾವ್**
ಡೈರೆಕ್ಟರ್
ಮೈಸೂರು ಸರ್ಕಾರದ ಸಾಹಿತ್ಯ ಮತ್ತು
ಸಂಸ್ಕೃತಿ ಅಭಿವೃದ್ಧಿ ಇಲಾಖೆ

ಬೆಂಗಳೂರು
೨೭-೫-೧೯೫೮

# ಎರಡನೆಯ ಮುದ್ರಣವನ್ನು ಕುರಿತು

೧೯೫೮ ರಲ್ಲಿ ಮೈಸೂರು ಸರ್ಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯು. ಆಗ ಮುಖ್ಯಮಂತ್ರಿಗಳಾಗಿದ್ದ ಶ್ರೀ ಕೆ. ಹನುಮಂತಯ್ಯನವರ ನಿರ್ದೇಶನದಂತೆ ಹಲವಾರು ಜನಪ್ರಿಯ ಮಹಾ ಕೃತಿಗಳ ಸುಲಭ ಬೆಲೆಯ ಆವೃತ್ತಿಗಳನ್ನು ಪ್ರಕಟಿಸಿತು. ಆ ಶ್ರೇಣಿಯಲ್ಲಿ ಕುಮಾರವ್ಯಾಸ ಮಹಾಕವಿಯ 'ಕರ್ಣಾಟ ಭಾರತ ಕಥಾಮಂಜರಿ'ಯೂ ಒಂದು. ಆ ಮುದ್ರಣದ ಪ್ರತಿಗಳೆಲ್ಲವೂ ಬಹು ಬೇಗನೆ ಮುಗಿದು ಹೋಗಿದ್ದುದರಿಂದ ಈಗ ಮತ್ತೊಮ್ಮೆ ಅದನ್ನು ಪುನರ್ಮುದ್ರಿಸಲಾಗಿದೆ. ಈ ಕೆಲಸವನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗಕ್ಕೆ ವಹಿಸಿಕೊಟ್ಟು, ಸುಲಭ ಬೆಲೆಯಲ್ಲಿಯೇ ಅದು ಜನತೆಗೆ ದೊರೆಯುವಂತಾಗಬೇಕೆಂಬ ಘನ ಉದ್ದೇಶದಿಂದ ಧನ ಸಹಾಯ ನೀಡಿ ಸರಕಾರವು ಉಪಕಾರ ಮಾಡಿದೆ. ಇದಕ್ಕಾಗಿ ಕರ್ನಾಟಕ ಸರಕಾರಕ್ಕೆ ಹೃತ್ಪೂರ್ವಕ ಕೃತಜ್ಞತೆಗಳನ್ನರ್ಪಿಸಲು ತುಂಬಾ ಸಂತೋಷವಾಗುತ್ತದೆ.

ಇದು ಮೊದಲು ಸರ್ಕಾರದ ವತಿಯಿಂದ ಪ್ರಕಟವಾಗಿದ್ದ ಆವೃತ್ತಿಯ ಪುನರ್ಮುದ್ರಣ ಮಾತ್ರ. ಮುದ್ರಣ ಸ್ಖಾಲಿತ್ಯಗಳ ಕಡೆಗೆ ಗಮನ ಕೊಟ್ಟಿರುವುದರ ಹೊರತು ಬೇರೆ ಯಾವುದೇ ಬದಲಾವಣೆಯನ್ನು ಮಾಡಿಲ್ಲ. ಕೆಲವು ಸಂಧಿಗಳಲ್ಲಿ ಪದ್ಯಸಂಖ್ಯೆಗಳನ್ನು ಹಾಕುವಾಗ ಆಗಿದ್ದ ವ್ಯತ್ಯಾಸವನ್ನು ವಾಚಕರ ಸೌಲಭ್ಯಕ್ಕಾಗಿ ಸರಿಪಡಿಸಿದೆ. ಗ್ರಂಥ ಸಂಪಾದನ ಕ್ಷೇತ್ರಕ್ಕೆ ಕೈಹಾಕಿದ್ದರೆ ಅದು ಸುಲಭದಲ್ಲಿ ಮುಗಿಯುವ ಮತ್ತು ಇಷ್ಟು ಬೇಗ ಅಣಿಯಾಗುವ ಸಾಧ್ಯತೆ ಇರಲಿಲ್ಲ. ಆದ್ದರಿಂದ ಮೇಲಿನ ಜನಪ್ರಿಯ ಆವೃತ್ತಿಯ ಮರುಮುದ್ರಣದಿಂದ ಮಾತ್ರವೇ ತೃಪ್ತಿಪಟ್ಟುಕೊಳ್ಳಬೇಕಾಗಿ ಬಂದಿದೆ.

ಈ ಆವೃತ್ತಿಯಲ್ಲಿ ಹೊಸದಾಗಿ ನಾಲ್ಕು ಛಾಯಾಚಿತ್ರಗಳನ್ನು ಸೇರಿಸಿದೆ. ಇವುಗಳನ್ನು ಒದಗಿಸಿದವರು ಗದಗಿನ ಶ್ರೀ ಎನ್. ಪಿ. ಕುಲಕರ್ಣಿ ಅವರು. ಗ್ರಂಥದ ಸೌಂದರ್ಯವು ಆಕರ್ಷಕವಾಗುವಂತೆ ರಕ್ಷಾಕವಚ ವಿನ್ಯಾಸ ತಯಾರಿಸಿಕೊಟ್ಟಿರುವವರು ತರುಣ ಕಲಾವಿದ ಶ್ರೀ ಕೆ. ಎಲ್. ವೆಂಕಟೇಶ್. ಇವರಿಬ್ಬರಿಗೂ ಆಭಾರಿಗಳಾಗಿದ್ದೇವೆ. ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯದ ಸಿಬ್ಬಂದಿವರ್ಗದವರು ಬಹಳ ಕಷ್ಟಪಟ್ಟು ದುಡಿದು ಇಷ್ಟು ಸುಂದರವಾಗಿ ಪುಸ್ತಕವನ್ನು ಅಚ್ಚು ಮಾಡಿದ್ದಾರೆ. ನಿರ್ದೇಶಕರಾದ ಶ್ರೀ ಎಚ್. ನರಸಣ್ಣನವರಿಗೂ, ಮುದ್ರಣಾಲಯದ ಸಿಬ್ಬಂದಿವರ್ಗದ ಮಿತ್ರರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ಮೈಸೂರು
೧೫-೮-೧೯೭೪

**ಪ್ರಭುಶಂಕರ**
ನಿರ್ದೇಶಕ

||ಶ್ರೀ||

# ತೋರಣ ನಾಂದಿ

---

"ನಮಿಸಿ ನಾರಾಯಣನ ನರನ ಪುರುಷೋತ್ತಮನ
ವ್ಯಾಸ ವಾಗ್ದೇವಿಯರ ಬಳಿಕ ಪೇಳ್ವುದು ಜಯವ"

"ಕನ್ನಡ ಸಾಹಿತ್ಯ ಒಂದು ಸಾವಿರ ವರ್ಷಗಳಿಂದ ಬೆಳೆದು ಬಂದಿದೆ. ಅನೇಕ ಕವಿಕೃತಿಗಳಿಂದ ವೈವಿಧ್ಯ ರಮಣೀಯವಾಗಿದೆ. ಆ ಸಾಹಿತ್ಯ ಕ್ಷೇತ್ರದಲ್ಲಿ ಮೂರು ಪ್ರಬಲವಾದ ಪರಿವರ್ತನೆಯ ಘಟ್ಟಗಳನ್ನು ಗುರುತಿಸ ಬಹುದು. ಅಥವಾ ಆಧುನಿಕ ಕಾಲವನ್ನೂ ಗಮನಿಸಿ ಹೇಳುವುದಾದರೆ ನಾಲ್ಕು ಘಟ್ಟಗಳನ್ನು ಗುರುತಿಸಬಹುದು.

ಒಂದನೆಯದು ಹತ್ತನೆಯ ಶತಮಾನದಲ್ಲಿ; ಎರಡನೆಯದು ಹನ್ನೆರಡನೆಯ ಶತಮಾನದಲ್ಲಿ; ಮೂರನೆ ಯದು ಹದಿನಾಲ್ಕುಹದಿನೈದನೆಯ ಶತಮಾನಾವಧಿಯಲ್ಲಿ; ನಾಲ್ಕನೆಯದು ಹತ್ತೊಂಬತ್ತು ಇಪ್ಪತ್ತನೆಯ ಶತಮಾನಾವಧಿಯಲ್ಲಿ.

ಪ್ರಥಮ ನವೋದಯದಲ್ಲಿ ಜೈನಧರ್ಮರೂಪದಿಂದ ಆವಿರ್ಭೂತವಾದ ಆ ಚೇತನಶಕ್ತಿ ಕನ್ನಡಕ್ಕೆ ಆದಿಕವಿಯಾದ ಪಂಪನ ಕೃತಿಗಳಲ್ಲಿ ತನ್ನ ಭವ್ಯ ಸ್ಮಾರಕ ಸ್ತೂಪವನ್ನು ನಿರ್ಮಿಸಿಕೊಂಡಿದೆ.

ದ್ವಿತೀಯ ನವೋದಯದಲ್ಲಿ ವೀರಶೈವಧರ್ಮರೂಪದಲ್ಲಿ ಮೈದೋರಿದ ಆ ಶಕ್ತಿ ಹರಿಹರ ರಾಘವಾಂಕರ ಕೃತಿಸಮಷ್ಟಿಯಲ್ಲಿ ತನ್ನ ಚಿರಸ್ಮೃತಿಮಂದಿರವನ್ನು ಸ್ಥಾಪಿಸಿಕೊಂಡಿದೆ.

ತೃತೀಯ ನವೋದಯದಲ್ಲಿ ವೈಷ್ಣವಭಕ್ತಿರೂಪದಲ್ಲಿ ಪುನರುತ್ಥಾನವಾದ ಆ ರಸಸ್ಫೂರ್ತಿ ಕುಮಾರ ವ್ಯಾಸ ಬಿರುದಿನ ನಾರಣಪ್ಪನ ಮಹಾಕೃತಿಯಲ್ಲಿ ತನ್ನ ವಿಯಚ್ಚುಂಬಿಯಾದ ಬೃಹದ್ಗೋಪುರವನ್ನು ಕಂಡರಿಸಿ ಕೊಂಡಿದೆ".

"ಈ ನಾರಣಪ್ಪನೆ ನಮ್ಮ ಸದ್ಯದ ಅವಗಾಹನೆಗೆ ಬೇಕಾದವನು. "ಕನ್ನಡ ಕಾವ್ಯವೃಷ್ಟಿಯ ಕಾಮನ ಬಿಲ್ಲಿನಲ್ಲಿ ಈತನ ನೆಲೆ ನಟ್ಟನಡು, ನೆತ್ತಿಯಮುಂಡಿ. ಹಳೆಯ, ಹೊಸಕನ್ನಡದ ತಲೆಯ ಕಿರೀಟ. ಹಳ್ಳಿ ಹಳ್ಳಿಯಲ್ಲಿ ಅಂದೂ ಇಂದೂ ಗಮಕ ಶಿರೋಮಣಿಗಳಿಂದ ನಾಡು ನಾಡೇ ಮೊಳಗಿ ರೋಮಾಂಚನಗೊಳ್ಳುವಂತೆ ರಸವನ್ನ, ಇಂಪನ್ನ, ಲಯವನ್ನ, ತಾನವನ್ನ, ಮಾತಿನ ಹರಹನ್ನ, ಛಂದಸ್ಸಿನ ಕಣಿತವನ್ನ, ಲೀಲಾಜಾಲವಾಗಿ ಹೊಮ್ಮಿಸಿ ಹರಿಯಿಸಿದ ಮಾಟಗಾರ. ಕನ್ನಡದ ಹೊಸಹುಟ್ಟಿನಲ್ಲಿ ಹೊಸಮಾರ್ಗಕ್ಕೆ ಹೊಸಶಕ್ತಿಗೆ ದಿಕ್ಸೂಚಿ, ಧ್ರುವತಾರೆ. ವೇದವ್ಯಾಸರ ಪ್ರೇಮಕುಮಾರ, ಕುಮಾರವ್ಯಾಸನೆಂದರೂ ಸರಿ—ವೀರನಾರಾಯಣನ ಪ್ರೇಮಕಿಂಕರ, ನಮ್ಮ ನಚ್ಚಿನ ನಾರಣಪ್ಪನೆಂದರೂ ಸರಿ".

"ಮಹತ್ತಿನೊಡನೆ ಜನಪ್ರಿಯತೆಯನ್ನೂ ಪಡೆದಿರುವ ವಿರಲ ಸುಯೋಗವುಳ್ಳ ಕವಿಗಳಲ್ಲಿ ಈತ ಗಣ್ಯನು". "ಕಲಿಯಂದವರಿಗೂ ಕಾಮಧೇನುವಾಗಿ ಕನ್ನಡ ನಾಡಿನ ಜನಜೀವನದ ಹೃದಯವೇದಿಕೆಯಲ್ಲಿ ಅಗ್ರಸ್ಥಾನಸ್ಥ ಮಹಾಧ್ಯಕ್ಷನಾಗಿದ್ದಾನೆ". "ಒದ್ದೆ ಬಟ್ಟೆಯುಟ್ಟು ವೀರನಾರಾಯಣನ ಮುಂದೆ ಕುಳಿತು ಭಕ್ತಿ

ರಸಾವೇಶದಿಂದ ಆಡುತ್ತಾ ಹಾಡುತ್ತಿದ್ದ ಆ ಭಕ್ತಕವಿಯನ್ನು ನೋಡಿರಲ್ಲಿ! ಮೈಮರೆತು ಹಾಡುತ್ತಿದ್ದಾನೆ. ಜನ ಮೈಮರೆತು ಕೇಳುತ್ತಿದ್ದಾರೆ. ಅವನು ಉಟ್ಟ ಬಟ್ಟೆಯ ತೇವ ಆರಿದಂತೆಲ್ಲಾ ಅವನ ಆವೇಶವೂ ಬತ್ತುತ್ತಾ ಹೋಗುತ್ತಿದೆ. ಆದರೂ ಜನ ನಿಷ್ಪಂದರಾಗಿ ಕೇಳುತ್ತಲೇ ಇದ್ದಾರೆ......

"ದಂತಕಥೆಯಾದರೂ ಇದು ಭಾವಪೂರ್ಣವಾಗಿದೆ. ಕುಮಾರವ್ಯಾಸನ ಕಾವ್ಯಸಹ್ಯಾದ್ರಿಯ - ಪರಿಳಿತ ಗಳಲ್ಲಿ ತಲ್ಲೀನತೆಯಿಂದ ರಸಯಾತ್ರೆಯನ್ನು ಕೈಗೊಂಡ ಸಹೃದಯ ಚೇತನಕ್ಕೆ ಆ ದಂತಕಥೆಯು ಧ್ವನಿಪೂರ್ಣ ವಾಗಿ ತೋರುತ್ತದೆ. ದರ್ಶನ ಪ್ರತಿಭಾವಶಿಯಾಗಿ ಭಗವಾನ್ ವೀರನಾರಾಯಣ ಕೃಪಾಸೂತ್ರ ಚಾಲಿತನಾಗಿ ಹಾಡಿದ ಆ ಭಕ್ತಕವೀಶ್ವರನಿಗೆ ಈ ಮಾತು ಒಪ್ಪುವಂತೆ ಬೇರೆ ಎಲ್ಲರಿಗೂ ಒಪ್ಪದು".

"ನಾಡಿನ ಜನ ಶತಮಾನಗಳಿಂದ ಹಾಡಿ, ಹಾಡಿಸಿ ಕೇಳುತ್ತಲೇ ಇರುವ ಈ ಕವಿ ನಿಶ್ಚಿತವಾಗಿ ಯಾವ ಶತಮಾನದಲ್ಲಿದ್ದ ಎಂಬುದೇ ಸ್ಪಷ್ಟವಾಗಿ ತಿಳಿಯದಾಗಿದೆ. ಹದಿಮೂರನೆಯ ಶತಮಾನದಿಂದ ಹದಿನೈದನೆಯ ಶತಮಾನದ ತನಕ ಅವನ ಕಾಲ ತೇಂಕಾಡುತ್ತಿದೆ. ಮಹಿಮಾವಂತನಾದುದರಿಂದಲೊ ಏನೊ, ಆ ಎಲ್ಲ ಶತ ಮಾನಗಳಲ್ಲೂ ಅವನಿದ್ದನೆಂಬ ದಂತಕಥೆಗಳು ಬೆಳೆದುಕೊಂಡಿವೆ. ಶ್ರೀಮಾನ್ ಮಂಜೇಶ್ವರ ಗೋವಿಂದ ಪೈ ಗಳವರು ಆತ ಸುಮಾರು ೧೨೩೦–೩೫ರೊಳಗೆ ಇದ್ದಿರಬೇಕೆಂದು ಸಾಧಿಸಿದ್ದಾರೆ. ಕವಿಚರಿತಕಾರರು ಸುಮಾರು ೧೪೩೦ ಎಂದು ನಿರ್ಧರಿಸಿದ್ದಾರೆ. ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ, ಎಂದರೆ ೧೫೩೦ರಲ್ಲಿದ್ದಿರ ಬೇಕೆಂದು ಕೆಲವರು ವಾದಿಸಿದ್ದಾರೆ. ಒಟ್ಟಿನಲ್ಲಿ ಏಕಾಭಿಪ್ರಾಯವಿಲ್ಲ. ಈಗ ಸದ್ಯಕ್ಕೆ ನಮಗೆ ತಿಳಿದಿರುವಂತೆ ಕುಮಾರವ್ಯಾಸನನ್ನು ಭಾಸ್ಕರಕವಿ ಬಹಳವಾಗಿ ಅನುಕರಣೆ ಮಾಡಿರುವುದರಿಂದ (ಈ ವಿಚಾರದಲ್ಲಿ ಸಂಶಯವೇ ಇಲ್ಲ.) ೧೪೨೩ಕ್ಕಿಂತ ಮುಂಚೆಯೇ ನಾರಣಪ್ಪನು ಪ್ರಸಿದ್ಧನಾಗಿದ್ದಿರಬೇಕು ಎಂಬುದರಲ್ಲಿ ಸಂದೇಹ ಬಾರದು".

"ತನ್ನ ಕಾಲವನ್ನು ಕುಲಗೋತ್ರವನ್ನು ಬಿರುದಾಂಕಿತಗಳನ್ನು ಕುಮಾರವ್ಯಾಸನೇ ಹೇಳಿಕೊಳ್ಳಲಿಲ್ಲ. ತಮತಮಗೆ ತೋರಿದಂತೆ, ತಮ್ಮತಮ್ಮ ಆಸೆಗೆ ತಕ್ಕಂತೆ ಕೆಲವರು ಅವನಿಗೆ ಲಾಂಛನವಿತ್ತು, ಆ ಕಾರಣ ಕ್ಕಾಗಿಯೇ ಅವನಿಗೆ ತಮಗೆ ಬೇಕಾದುದೊಂದು ಕಾಲವನ್ನಿತ್ತರು. ಕಾಲವನ್ನೇನೋ ನಿರ್ಧರಿಸಲೇಬೇಕು. ಆದರೆ ಇಂತಹ ಮಹಾಕವಿ ಯಾವ ಕುಲಕ್ಕೆ ಸೇರಿದವನೆಂದು ಬೇರು ಅಗೆಯುವುದಾದರೂ ಏಕೆ?" "ಆತ ದೊಡ್ಡ ಕವಿ. ಮತತ್ವದಿಂದಲ್ಲ, ಕವಿತ್ವದಿಂದ!" "ಆತನ ಹಣೆಯಮೇಲೆ ಯಾವ ಲಾಂಛನವಿದ್ದರೇನು: ನಮಗೆ ನಮ್ಮ ಈ ದಿವ್ಯಕವಿ ನಮ್ಮವನು; ಕನ್ನಡಿಗನು; ಕನ್ನಡಿಗರ ಕುಲವನ್ನು ಒಂದಾಗಿ ಬೆಸೆಯುವವನು: ಕನ್ನಡಿಗರ ದೊಡ್ಡ ಹೆಮ್ಮೆ; ದೊಡ್ಡ ಕಣ್ಣು; ಮಹಾತ್ಮ".

**ಕವಿಯ ಕಾವ್ಯ :** "ಕುಮಾರವ್ಯಾಸ ಭಾರತವು ಕಲಿಯುದವರಿಗೂ ಕಾಮಧೇನು ಎಂದು ಹಿಂದೆಯೆ ಹೇಳಿದೆವು. ಇನ್ನು ಕಲಿತವರಿಗೆ ಕೇಳಬೇಕೆ? 'ಕಾವ್ಯಕ್ಕೆ ಗುರು'. ಆ ಗುರು ಕಾವ್ಯವನ್ನು ಓದಿ ಹುಚ್ಚಾಗದ ಸಹೃದಯರಿಲ್ಲ.

'ಕುಮಾರ ವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು
ಭಾರತ ಕಣ್ಣಲ್ಲಿ ಕುಣಿವುದು! ಮೈಯಲಿ
ಮಿಂಚಿನ ಹೊಳೆ ತುಳುಕಾಡುವುದು!'

ಕವಿಯ ಕಾವ್ಯವನ್ನು ಓದುವ ಮೊದಲು ಈ ಮಾತುಗಳನ್ನು ಕೇಳಿದರೆ ಕಾವ್ಯಸೌಂದರ್ಯಕ್ಕಾಗಿ ಅವನ್ನು ಮೆಚ್ಚಿಕೊಳ್ಳುತ್ತೇವೆ. ಆದರೆ ಕುಮಾರವ್ಯಾಸನ ಕಾವ್ಯ ಕುರುಕ್ಷೇತ್ರದಲ್ಲಿ ನಡೆಯುವ ಆ ವಿದ್ಯುದ್ ಘರ್ಷಣ ವನ್ನು ಕಂಡಾಗ, ಕಂಡು ಉಂಡಾಗ, ಅವನ ಪ್ರತಿಭಾ ವಿದ್ಯುತ್ಪ್ರವಾಹದಲ್ಲಿ ಮುಳುಗಿ ಮೇಲೆದ್ದು ಈಜಿ ಬಂದಾಗ ಮೇಲಿನಮಾತು ಸುಂದರಸತ್ಯವಾಗುತ್ತದೆ".

"ಇಂತಹ ಈ ಕಾವ್ಯವನ್ನು ಬರೆದ ಕವಿ ತನ್ನನ್ನು ಬರಿಯ 'ಲಿಪಿಕಾರ' ನೆಂದುಕೊಳ್ಳುತ್ತಾನೆ. ದರ್ಶನ ಪ್ರತಿಭೆಗೆ ತನ್ನನ್ನು ತಾನು ಲಿಪಿಕಾರನನ್ನಾಗಿ ಮಾಡಿಕೊಂಡರೆ ಮಾತ್ರ ಮಹಾಕಾವ್ಯ ಮೂಡಿಬರುತ್ತದೆ ಎಂಬುದಕ್ಕೆ ಕುಮಾರವ್ಯಾಸನೆ ಸಾಕ್ಷಿ. ಹಾಗಾಗಿ ಭಗವದಭಿವ್ಯಕ್ತಿಗೆ ಪಾತ್ರಮಾತ್ರನಾಗುತ್ತಾನೆ. ಅಂತಹವನಿಗೆ ಕಾವ್ಯ 'ರಮಣೀಯಾರ್ಥ ಪ್ರತಿಪಾದಕಃ ಶಬ್ದಃ' ಮಾತ್ರವಲ್ಲ. ಕುಮಾರವ್ಯಾಸನೆ ಹೇಳಿದ್ದಾನೆ: 'ಚಾರುಕವಿತೆಯ ಬಳಕೆಯಲ್ಲ, ವಿಚಾರಿಸುವೊಡಳವಲ್ಲ' ಎಂದು. ಕಲೆಗಾಗಿ ಕಲೆ ಎಂಬುದು ಅವನಿಗೆ ಒಲ್ಲದ ಮಾತು. ವ್ಯಾಸ ಭಾರತವನ್ನು ಕುರಿತು 'ದುರಿತವ್ಯಾಳವಿಷಜಾಂಗುಳಿಕ' 'ದುರಿತದುರ್ಗ ವಿಭೇದಕರ' 'ಕಾಯಕಲ್ಮಷ ಹರವಖಿಳ ನಿಶ್ರೇಯಸದ ಸದ್ರೂಪುವಿನ ಸಂದಾಯಕ' 'ಪುಣ್ಯಸ್ತೋಮಂತರುಗಳಿಗೆ ಈ ಮಹಾಭಾರತ ಕಥಾಮೃತ ರಾಮಣೀಯಕ ಫಲವಲಾ' ಎಂದೆಲ್ಲ ಹಾಡಿದ ಕವಿಗೆ ತನ್ನ ಭಾರತವಾದರೂ ಏನಾಗಬೇಕೆಂಬುದು ಕಾಣದಿರಲಿಲ್ಲ.

"ಆದರೆ ಈ ಭಾರತ ಆ ಭಾರತದ ಪ್ರತಿಕೃತಿಯಲ್ಲ. ಇದು ಪಂಪನ ಪ್ರತಿಚ್ಛಾಯೆಯೂ ಅಲ್ಲ. ಮಹರ್ಷಿ ವ್ಯಾಸರ ಕಾವ್ಯವನ್ನು ಕನ್ನಡದಲ್ಲಿ ಪಂಪನಂತಹ ಮಹಾಕವಿ ರಚಿಸಿದ ಮೇಲೆ ಮತ್ತೊಬ್ಬ ಕವಿ ಆ ಕಾವ್ಯವನ್ನು ಹೆಚ್ಚು ಸಮರ್ಪಕವಾಗಿ, ನವೀನವ್ಯವಾಗಿ ಮಾಡುತ್ತೇನೆಂದು ಹೊರಡುವುದು ಸಾಹಸದ ಮಾತೇ ಸರಿ. ಕುಮಾರವ್ಯಾಸ ಆ ಮಹಾ ಸಾಹಸವನ್ನು, ಸಾಹಸವೆಂದೇ ಭಾವಿಸದೆ, ಕೈಗೊಂಡಿದ್ದಾನೆ. ಪಂಪನನ್ನು ಓದಿಯೇ ಇಲ್ಲವೇನೋ ಎನ್ನುವಷ್ಟುಮಟ್ಟಿಗೆ ಹೊಸಕಾವ್ಯವನ್ನು ಸೃಷ್ಟಿಸಿದ್ದಾನೆ, ಎಂದರೆ ಯಾರೂ ಆಶ್ಚರ್ಯಗೊಳ್ಳ ಬೇಕಾಗಿಲ್ಲ. ಪಂಪ ಶ್ರೇಷ್ಠತಮವಾಗಿ ಸೃಷ್ಟಿಸಿರುವ ಭಾಗಗಳನ್ನೂ ಇವನು ಅದಕ್ಕೆ ಸರಿಮಿಗಿಲಾಗುವಂತೆ, ತಾನು ಅವನನ್ನು ಓದಿಲ್ಲದೆ ಬರೆಯುತ್ತಿರುವಂತೆ ಸೃಷ್ಟಿಸಿರುವುದನ್ನು ನೋಡಬಹುದು. ಕೃಷ್ಣ ಕರ್ಣರ ಸಂವಾದ ಪ್ರಸಂಗವೆ ಇದಕ್ಕೆ ಉದಾಹರಣೆಯಾಗಬಲ್ಲದು. ಪಂಪನ ಪ್ರತಿಭಾಶ್ವೇತಚ್ಛತ್ರದಲ್ಲಿ ತನ್ನ ಕಾವ್ಯ ಸೀಮೆಯನ್ನು ವಿಸ್ತರಿಸಿಕೊಂಡ 'ಸಾಮಂತ ಚೂಡಾಮಣಿ' ಕವಿ ರನ್ನನನ್ನೂ ಸರ್ವಸ್ವತಂತ್ರವಾದ ಅವಧೂತ ರಾಜ್ಯವನ್ನು ನಿರ್ಮಾಣಮಾಡಿಕೊಂಡ ಕವಿ ಕುಮಾರವ್ಯಾಸನನ್ನೂ ಹೋಲಿಸಿ ನೋಡಿದಾಗ ಗೊತ್ತಾಗುತ್ತದೆ– ಈ ನಾರಣಪ್ಪನ ಮಹಾಪ್ರತಿಭೆಯ ಶಕ್ತಿ".

"ಕುಮಾರವ್ಯಾಸ ವಿಶಿಷ್ಟ ಶಕ್ತಿಯ ಸ್ವತಂತ್ರ ಕವಿ. ಅವನ ಕಾವ್ಯ ಹಾಗೆಯೆ ವಿಶಿಷ್ಟ ಸ್ವತಂತ್ರ. ಪ್ರಾರಂಭದ ಪರ್ವಗಳಲ್ಲಿ ಹೆಚ್ಚು ಕಡಿಮೆ ವ್ಯಾಸರನ್ನೆ ಹಿಂಬಾಲಿಸಿಕೊಂಡು ಹೊರಟ ಈತ ಯುದ್ಧಪರ್ವಗಳು ಬಂದಾಗ ತನ್ನ ದಾರಿಯನ್ನು ತಾನು ಹಿಡಿದುಕೊಂಡು ಹೋಗುತ್ತಾನೆ. ಒಟ್ಟಿನಲ್ಲಿ ಕಥೆಗಾಗಿ ಇವನು ವ್ಯಾಸರನ್ನು ಆಶ್ರಯಿಸಿ ದ್ದಾನೆಯೇ ಹೊರತು ಪಂಪನನ್ನಲ್ಲ. ರೀತಿಯ ದೃಷ್ಟಿಯಲ್ಲಂತೂ ತನ್ನನ್ನೇ ಅಭಿವ್ಯಕ್ತಗೊಳಿಸಿಕೊಂಡಿದ್ದಾನೆ. ಕಥೆಯ ದೃಷ್ಟಿಯಲ್ಲಿ ಪಂಪನಿಗೂ ಇವನಿಗೂ ಬಹಳ ಅಂತರವಿದ್ದುದರಿಂದಲೂ ಈ 'ರೀತಿ'ಯ ಅನನ್ಯತೆ ಯಿಂದಲೂ ಕುಮಾರವ್ಯಾಸ ಭಾರತ ಕನ್ನಡದಲ್ಲಿ ವಿಶಿಷ್ಟಸ್ವತಂತ್ರ ಕೃತಿಯಾಗಿದೆ".

"ಪಂಪನಿಗೆ ಭಾರತ ಲೌಕಿಕ ಕಾವ್ಯವಾಯಿತು. ಕುಮಾರವ್ಯಾಸನಿಗೆ ಭಗವದ್ವಿಲಾಸ ಭೂಮಿಕೆಯಾಯಿತು. ಪಂಪನಿಗೆ ಅದು ತನ್ನ ಕಾವ್ಯ ಪ್ರತಿಭೆಯ ಪ್ರಕಾಶನದ ಒಂದು ಪ್ರಕಾರವಾಯಿತು. ಕುಮಾರವ್ಯಾಸನಿಗೆ ಆತ್ಮ ಪ್ರಕಾಶನದ ಏಕೈಕಪ್ರಕಾರವಾಯಿತು. ಹೀಗಾಗಿ ಪಂಪನ ಪ್ರತಿಭೆ ಇಕ್ಕಡಿಯಾಗಿ ಅವನ ಎರಡು ಕಾವ್ಯಗಳಲ್ಲಿ

ವ್ಯಕ್ತವಾದರೆ, ಇವನ ಪ್ರತಿಭೆ ಒಂದೇ ಕೃತಿಯಲ್ಲಿ ಏಕೀಭವಿಸಿ ಜಾಜ್ವಲ್ಯಮಾನವಾಯಿತು. ಪಂಪ ತನ್ನ ಪ್ರಜ್ಞೆಯನ್ನು ಲೌಕಿಕ ಕಾವ್ಯಪ್ರಜ್ಞೆಯನ್ನಾಗಿ ಒಂದೆಡೆಯೂ, ಧರ್ಮಕಾವ್ಯಪ್ರಜ್ಞೆಯನ್ನಾಗಿ ಮತ್ತೊಂದೆಡೆಯೂ ಮಾಡಿಕೊಂಡದ್ದರಿಂದ ಅವನ ವ್ಯಕ್ತಿತೆಯಲ್ಲಿ ಇಮ್ಮೊಗವನ್ನು ಕಾಣುತ್ತೇವೆ. ಕುಮಾರವ್ಯಾಸ ತನ್ನ ಕಾವ್ಯಯೋಗವನ್ನು ಆತ್ಮಯೋಗದಿಂದ ಬೇರೆಂದು ಎಂದೂ ಭಾವಿಸದೆ ಇದ್ದುದರಿಂದ ತನ್ನ ಸಮಗ್ರ ವ್ಯಕ್ತಿತೆಯ ಅಖಂಡ ಸ್ವರೂಪವನ್ನು ಅವನು ಪ್ರತಿಮಿಸುವುದು ಸಾಧ್ಯವಾಯಿತು. ಈ ದೃಷ್ಟಿಯಿಂದ ಕುಮಾರವ್ಯಾಸ ಅದ್ವಿತೀಯ".

"ಕುಮಾರವ್ಯಾಸನ ಕಾವ್ಯರೀತಿಯ ವಿಚಾರವಾಗಿ ಒಂದೆರಡು ಮಾತನ್ನು ಹೇಳದಿದ್ದರೆ ತಪ್ಪಾಗುತ್ತದೆ. ಸಾಮಾನ್ಯವಾಗಿ ಕುಮಾರವ್ಯಾಸನನ್ನು ಭಾಮಿನೀಷಟ್ಪದಿಕಾರ ಎಂದು ಹೇಳುವುದರಿಂದ ಗುರುತಿಸುವುದೂ ಉಂಟು. ಆದರೆ ಇದೇ ಅವನ ರೀತಿಯಲ್ಲ. ಆ 'ರೀತಿಯ' ಕೊನೆಯ 'ಅವಸ್ಥಾ' ಮಾತ್ರ ಅದು. ಅವನ ರೀತಿ ಮಹಾಕವಿಯ ರೀತಿ, ಮಹಾಪ್ರಾಜ್ಞನ ರೀತಿ, ಅದೇ ರೂಪಕ ರೀತಿ. "Wisdom speaks first in images"—W. B. Yeats. ಎನ್ನುವ ಮಾತುಗಳನ್ನು ಇಲ್ಲಿ ನೆನೆದುಕೊಳ್ಳಬಹುದು. ಕುಮಾರವ್ಯಾಸ ಕಾಣುವುದು ರೂಪಕಗಳನ್ನು, ಮಾತನಾಡುವುದು ರೂಪಕಗಳನ್ನು, ಅಷ್ಟೇ ಏಕೆ, ಅವನ ಸಾಧಾರಣತಮ ಭಾಷೆಯೂ ರೂಪಕದಿಂದ ದೀಪ್ತಗೊಂಡಿರುತ್ತದೆ. ಈ ಭೂಮಿಕೆಯಲ್ಲಿ ಇವನನ್ನು ಸರಿಗಟ್ಟುವ ಕವಿ ಕನ್ನಡದಲ್ಲಿಲ್ಲವೇ ಇಲ್ಲ. ಅವನನ್ನು 'ರೂಪಕಸಾಮ್ರಾಜ್ಯ ಚಕ್ರವರ್ತಿ' ಎಂದು ಕರೆದ ಮಾತು ಗಾದೆಯಾಗಿದೆ. ಉದಾಹರಣೆಗಾಗಿ, ಒಂದೆರಡು ರೂಪಕಗಳನ್ನು ನೋಡಬಹುದು: 'ಶಿವನ ಕಾರುಣ್ಯಾಯುಧವೆ ಮಸೆದುದು ಸುರೇಂದ್ರ ಸ್ನೇಹ ಸಾಣೆಯಲಿ', 'ಮುನಿಯ ಮಾತಿನ ಬಲೆಗೆ ಸಿಲುಕಿತು ಜನಪತಿಯ ಚೈತನ್ಯಮೃಗ', 'ನಮ್ಮ ಭಾಗ್ಯದ ಬಾಣಸಿಗ ವಿಧಿ ವಿಷವ ಬೆರಸುವೊಡಾರು ಕಾವರು', 'ಬಂಧುಗಳ ದರುಶನ ಫಲವಲಾ ಸಂಸಾರ ತರುವಿಂಗೆ', 'ಅಪಕೀರ್ತಿ ನಾರಿಯ ಸೆರಗ ಹಿಡಿದರು', ಹೀಗೆ ಅವನು ನುಡಿಯುವ ಭಾಷೆಯೇ ಭಾವವಾಗುತ್ತದೆ; ಭಾಷೆಯೇ ರೂಪಕವಾಗುತ್ತದೆ. ರೂಪಕವನ್ನು ಆ ನುಡಿಯಿಂದ ಬಿಡಿಸಿ ತೆಗೆಯುವುದಕ್ಕೆ ಸಾಧ್ಯವಾಗುವುದಿಲ್ಲ. ಯಾರನ್ನಾದರೂ ಅನುವಾದ ಮಾಡಬಹುದು. ಕುಮಾರವ್ಯಾಸನನ್ನು ಅನುವಾದ ಮಾಡುವುದು ಎಂದೆಂದಿಗೂ ದುಸ್ಸಾಧ್ಯ. ಕಾರಣ ಅವನ ಪ್ರತಿಭೆ ಭಾಷೆಯಲ್ಲಿ ಆವಿರ್ಭವಿಸಿದೆ. ಆದುದರಿಂದಲೇ ಅವುಗಳಲ್ಲಿ ಅವಿಭಾಜ್ಯವಾದ ಶಕ್ತಿ ಪ್ರಜ್ವಲಿಸುತ್ತದೆ. 'ಬವರವಾದರೆ ಹರನ ವದನಕೆ ಬೆವರ ತಹೆ', 'ಮೃತ್ಯು ಮರೆಹೊಕ್ಕಳು ಮಹೇಶ್ವರನ', 'ಕಾಲದಂಡವ ತಿರುಹಿ ಭುವನದಲೂಳಿಗವ ಮಾಡುವ ಕೃತಾಂತನ ಹೋಲುವೆಯ ಹೊಸಬಿಗನು ಹೊಕ್ಕನು ಭೀಮನುರವಣಿಸಿ', 'ಹಡಗು ಜಲಧಿಯಳೋಡಿ ಗಿರಿಗಳನೆಡಹಿ ನುಗ್ಗಾದಂತೆ' 'ಆಲಿಕಲುಗಳ ಕಡಿವೊಡುಕ್ಕಿನ ಚೀಲಣದ ಹಂಗೇಕೆ'?, 'ಕಾಳಕೂಟದ ಕಮಲ ತುಂಬಿಗೆ ಪಥ್ಯವಲ್ಲ', 'ಪಲಾಯನ ತವನಿಧಿ', 'ನರಶರದ ಜುಂಜುವೊಳೆಯಲಿ ಜಾರುವನೆ ಜಾಹ್ನವೀಧರ', 'ಸೀಳಬಹುದೇ ಸೀಸದುಳಿಯಲಿ ಶೈಲವನು'? 'ಬತ್ತಿದ ಕೆರೆಯೊಳಗೆ ಬಲೆಯೇಕೆ?' ವರುಣಶರ ಬಾಯರತು ನೀರಡಸಿದುದು', 'ಸುರಧೇನು ನೆರೆಗೊಡ್ಡಾಯ್ತು', 'ಕೋಲಗುರುವಿನ ಮರಣವಾರ್ತಾ ಕಾಲಸರ್ಪನ ತಂದು ಸಂಜಯ ಹೇಳಿಗೆಯನೀಡಾಡಿದನು ಧೃತರಾಷ್ಟ್ರ ನಿದಿರಿನಲಿ', 'ಕೆಂಡದ ಮಳೆಯ ತಡೆವವೆ ಕೊಡೆ'?' 'ಬೆಳುದಿಂಗಳಲಿ ಮೈ ಬೆವರುವುದೆ'? 'ಪಡುವಣ ಶೈಲ ವಿಪುಲಸ್ತಂಭ ದೀಪಿಕೆಯಂತೆ ರವಿ ಮೆರೆದ', 'ರುಧಿರದ ತಿಲಕನಾದನಲೈ ಧರಾಂಗನೆಗೆ', 'ನುಡಿಗಳ ಕಾಳಕೂಟವ ಬಡಿಸುವೆನು ಕಿವಿಯಾರ ಸವಿಯೆಂದ', 'ಮುಂದಣ ಕಾಳಗದ ಕರ್ಣಾಮೃತದ ಮಳೆಗಾಲ ಮಾದುದು ವಿಲೋಚನದ ಮಳೆಗಾಲವಾಯ್ತೆಂದ', 'ಘನಶೋಕ ವಹ್ನಿಯ ಮೇಹುಗಾಡಿನ ಮನ', 'ಅರಿವಿನ

ನೆರಗು ಹಾರಿತು', 'ಅಂಬುನಿಧಿ ಮಕರಂದವಾದರೆ ತುಂಬಿಯಾಗನೆ ವಡಬ'? 'ಸಿಡಿಲು ಸಿಗುರೆದ್ದಂತೆ!' 'ರೋಷವೀರೆಲೆಯಾಯ್ತು', 'ಮಾತು ಹೊಲಸಿನ ಗಂಧವಾಗಿದೆ'–ಇಂತಹವು ನೂರಲ್ಲ, ಸಹಸ್ರಾರು ಉದಾಹರಣೆಗಳನ್ನು ಕೊಡಬಹುದು. ಈ ಒಂದೊಂದು ರೂಪಕದ ಸಿಡಿಲಕುಡಿಯನ್ನು ಹಿಡಿದು ಅನುಭವಿಸಿರಿ! ಪ್ರಾಸಕ್ಕಾಗಿ ಬೇರೆಯ ಕವಿಗಳು ಪ್ರಯತ್ನಿಸಿದರೆ ಈ ಕವಿಗೆ ಪ್ರತಿಯೊಂದು ಪ್ರಾಸಸ್ಥಾನವೂ ಒಂದೊಂದು ಹೊಸ ಹೊಸ ರೂಪಕವನ್ನು ತಂದುಕೊಡುವುದುಂಟು.

'ಅರೆದುದೋ ಪರಬಲವ, ಕಾಲನ
ಹೊರೆದುದೋ, ಮಾರಣದ ಮಂತ್ರವ
ಬರೆದುದೋ, ಬವರಕ್ಕೆ ಬಲುಗೈಗಳನು ಕೈ ನೆಗಹಿ
ಕರೆದುದೋ, ಬಲವೆಲ್ಲ ನೀರಲಿ
ನೆರೆದುದೋ, ಮಾರ್ಬಲದ ವೀರರ
ಹರೆದುದೋ!...............'

"ಇಷ್ಟು ಶ್ರೀಮಂತನಾದ ಕುಮಾರವ್ಯಾಸ ವ್ಯಾಸ ಪಂಪರಾದ ಮೇಲೆ ಬಂದರೇನಂತೆ? ಇದಕ್ಕೆ ಒಂದೇ ಉದಾಹರಣೆಯನ್ನು ಕೊಡಬಹುದು. ಪಂಪಕವಿ ಒಂದು ಪ್ರಸಂಗವನ್ನು ವರ್ಣಿಸುವಾಗ 'ವಿಷ ಮೊಳ್ಳೆಗುಳ್ಕೊಡಮದೊಳ್ಳೆಯೆ ಕಾಳಿಯ ನಾಗನಾಗದು' ಎಂದು ಹೇಳಿದ್ದರೆ ಕುಮಾರವ್ಯಾಸ ಹೇಳಿದ ರೀತಿ ಇದು: 'ಬೆಳುದಿಂಗಳಿನ ಬಿರುಸಾರ ಸುಡುವುದು'. ಈ ರೂಪಕ ಶಕ್ತಿಯಲ್ಲಿ ಪಂಪ ನಾರಣಪ್ಪರಿಗೆ ಸಮಾನತೆ ಇಲ್ಲ. ಅವನ ರುದ್ರಶಕ್ತಿಗೆ ಏನು ಸಿಕ್ಕಿದರೂ ರೂಪಕಾಹಾರವಾಗಿಬಿಡುತ್ತದೆ. ಆದ್ದರಿಂದ ಅನ್ಯಕವಿಗಳು ಅಗಿದು ಸಿದ್ಧಗೊಳಿಸಿಟ್ಟುಕೊಂಡ ಆಹಾರ ಅವನಿಗೆ ಎಂಜಲು.

'ಆರ ದೀಪನ ಚೂರ್ಣ ಬಲದಲಿ ವೀರ ರುದ್ರನು ಜಗವ ನುಂಗುವ'

ಎನ್ನುವ ಮಾತು ಅವನ ರೂಪಕ ರುದ್ರಶಕ್ತಿಗೆ ಎತ್ತಿದ ಮಂಗಳಾರತಿಯಾಗಿದೆ. ಇಂತಹ ಶಕ್ತನಾದ್ದರಿಂದಲೇ ಕುಮಾರವ್ಯಾಸ ಅಷ್ಟು ಮಾತಾಳಿಯಾಗಿದ್ದರೂ ದುಸ್ಸಹ್ಯನಾಗಿಲ್ಲ. ಈ ಕವಿ ತನ್ನ ಶಕ್ತಿಯನ್ನು ಹೇಳಿಕೊಳ್ಳುತ್ತ 'ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ ಪದವಿಟ್ಟಳುಪದೊಂದಗ್ಗಳಿಕೆ', ಎಂದುಕೊಂಡಿದ್ದಾನೆ. ಇವನ ರೂಪಕ ನಟರಾಜ ಶಕ್ತಿಯನ್ನು ಕಂಡಾಗ ಈ ಮಾತುಗಳು ಉತ್ಪ್ರೇಕ್ಷೆಯಲ್ಲ ಎನಿಸುತ್ತದೆ". ಆದರೆ ಒಮ್ಮೊಮ್ಮೆ ಅನಿಸುತ್ತದೆ: "ಈ ಒಂದು ಶಕ್ತಿಯೆ ದೋಷವಾದುದೂ ಉಂಟು. ಪದವನ್ನೆ ಅಲ್ಲ, ಪಂಕ್ತಿಯನ್ನೇ ಅಲ್ಲ, ಸಂಧಿಗಳನ್ನೂ ತೊಡೆದುಹಾಕಿದ್ದರೆ ಅವನ ಖ್ಯಾತಿ ಹೆಚ್ಚುತ್ತಿತ್ತು", ಎಂದು. "ಆದರೂ ಯಾವೆಡೆಯಲ್ಲಿಯೂ ಅಯುಕ್ತ ಪದದ ಪ್ರಸಾರವಿಲ್ಲ; ಅದಕ್ಕಾಗಿ ನಾವು ಕವಿಯನ್ನು ಹೊಗಳಲೇಬೇಕು. ಸಾವಿರಾರು ಮಾತುಗಳು ನಿರಂಕುಶವಾಗಿ ನಡೆದಿದ್ದರೂ ಸಮಯ ಸಂದರ್ಭಗಳಿಗೆ ವಿರೋಧವಾದ ಪ್ರಯೋಗಗಳು ಅಪರೂಪ, ಪ್ರಾಯಶಃ ಇಲ್ಲವೇ ಇಲ್ಲ. ಪಾತ್ರ ಸನ್ನಿವೇಶಗಳಿಗೆ ಅನುಚಿತವಾದ ರಾಗಾಲೋಚನೆಗಳು ಕೆಲವೆಡೆಯಲ್ಲಿ ಕಾಣಬರುತ್ತವೆ. ಆಗ ಕವಿಯ ನಿರ್ಮಾಣ ಕೌಶಲವು ಕಣ್ಣುಮುಚ್ಚಿ ತೂಕಡಿಸಿದ ಹಾಗೆ ತೋರುತ್ತದೆಯೇ ಹೊರತು ಕವಿಯ ನಾಲಗೆ ಕೊಂಕಿ ತೊದಲಿದಂತೆ ಭಾಸವಾಗುವುದಿಲ್ಲ". "ವಾಚಾಳಿಯಂತೆ ಕಾಣಿಸಿಕೊಂಡರೂ ವಸ್ತುತಃ ಅವನು ವಾಗ್ಮಿ. ಕವಿತೆಯ ಹೊದಿಕೆ ಹೆಚ್ಚು ಹೆಚ್ಚು ಮಡಿಕೆಗಳನ್ನು ಪ್ರಕಟಿಸಿದರೂ ಕಾವ್ಯಪುರುಷನ ದೇಹಕ್ಕೆ ಅವೆಲ್ಲವೂ ಹೇಗೋ ಹೊಂದಿಕೊಂಡುಬಿಟ್ಟಿವೆ. ಕುಮಾರವ್ಯಾಸನ ಭಾಷಾ ಪದ್ಧತಿ ಸ್ವತಂತ್ರವಾದದ್ದು,

ಎಲ್ಲಿಯೂ ಅತಂತ್ರವಾಗಿಲ್ಲ. ಕುತಂತ್ರವಂತೂ ಅದಕ್ಕೆ ತೀರ ಹೊರಗು. ಸಂಧ್ಯಾಸಮಯ ಪಶ್ಚಿಮದಿಕ್ಕಿನಲ್ಲಿ ಬಣ್ಣಗಳ ಹರಹು ವಿಪರೀತ; ಸಾಗರದ ನೀಲವರ್ಣದ ನೀರಿನ ರಾಶಿ ವಿಪರೀತ; ವೈಶಾಖದಲ್ಲಿ ಅರಳಿಯ ಮರಕ್ಕೆ ಹಸಿರು ಎಲೆಗಳ ಸಮೃದ್ಧಿ ವಿಪರೀತ; ಹಾಗೆ ನಾರಣಪ್ಪನಲ್ಲಿ ವಚನ ವೈಭವ ವಿಪರೀತ". "ಪದ ಪ್ರಯೋಗದಲ್ಲಿ ಕುಮಾರವ್ಯಾಸ ಮೋಡಿಕಾರ, ಪದಪದಗಳಿಂದ ಭಾವ ಭಾಗೀರಥಿಯನ್ನು ಸೃಜಿಸಿ ನೆಲಕ್ಕೆ ಕರೆತರುವ ಕಲಾ ಭಗೀರಥನವನು. ಯಾವ ಯಾವ ಪದಗಳು ಎಂತೆಂತಹ ರಸದೊರತೆಯನ್ನು ಮಿಡಿಯ ಬಲ್ಲವೆಂಬುದು ಅವನಿಗೆ ಹುಟ್ಟರಿವು". "ಈ ಕವಿಯ ಹೆಸರು ಹೇಳಿದವರಿಗೂ ಶಬ್ದದಾರಿದ್ರ್ಯ ಬಾರದು". "ಕನ್ನಡದ ಭಂಡಾರವನ್ನು ಶ್ರೀಮಂತಗೊಳಿಸಿದ ಈ ಕವಿ ಸಿಕ್ಕಿದ ಕಡೆಯಿಂದೆಲ್ಲಾ ಪದಗಳನ್ನು–ರೂಪಕ ಗಳನ್ನೆಂತೋ ಹಾಗೆ ಸೂರೆಗೊಂಡಿದ್ದಾನೆ. ಬೇರೆ ಸಂದರ್ಭದಲ್ಲಿ ಅಶ್ಲೀಲವೆಂದು ಹೇಳಬಹುದಾದ ಮಾತುಗಳನ್ನೂ ಈತ ತನ್ನ ಕಾವ್ಯದಲ್ಲಿ ಸುಂದರವಾಗಿ ಶಕ್ತಿಯುತವಾಗಿ ಬಳಸಿಕೊಂಡಿದ್ದಾನೆ: 'ಗಂಡರೋ ನೀವ್ ಷಂಡರೋ ಹೇಳೆಂದಳಿಂದುಮುಖಿ', 'ಸದರಗಿದರವನರಿದು', 'ಒರಲಬೇಡವೊ ಕುನ್ನಿ', 'ಯಾದವರ ಬಡ ಕರುವೆ', ಈ ನಪುಂಸಕರೊಡನೆ ಹುಟ್ಟಿದ ನಾನು ಮೂಗುಳ್ಳವನೆ?''ಸತ್ಯದ ನುಡಿಗೆ ಹಾದರವಿಲ್ಲ', 'ರೋಷದ ಗೊಡ್ಡು ಗುರು ನಾನಾದೆ', 'ಪಾಂಡುಪುತ್ರರ ಬೊಡ್ಡಿ' ಯಾವ ಪದವೂ ಮಹಾಕವಿಗೆ ಅಶ್ಲೀಲವಲ್ಲ. ಅಶ್ಲೀಲತೆ ಆವರಣದಿಂದ ಸೃಷ್ಟವಾಗುತ್ತದೆಯೇ ಹೊರತು ಒಂದು ಪದ ತನಗೆ ತಾನೆ ಸಂಪೂರ್ಣವಾಗಿ ಅಶ್ಲೀಲವಾಗಿರದು. ಮಹಾಕವಿ, ಆವರಣ ಸೃಷ್ಟಿಯಲ್ಲಿ, ಅದರ ಅಶ್ಲೀಲತೆಯನ್ನು ತೊಳೆದು ಅಪೂರ್ವತೆಯನ್ನು ಹೊಳೆಸುತ್ತಾನೆ. ಕುಮಾರವ್ಯಾಸನಿಗೆ ಈ "ಪತಿತೋದ್ಧರಣಶಕ್ತಿ" ಅದ್ಭುತವಾಗಿದೆ. ಹಾಗೆಯೆ ಸಾಧಾರಣ ಪದಗಳ ಅರ್ಥ ಸೀಮೆಯನ್ನು ಭಾವಶ್ರೀಮಂತಿಕೆಯನ್ನು ಹೆಚ್ಚಿಸುವ ಅದ್ಭುತಶಕ್ತಿಯೂ ಹೇರಳವಾಗಿದೆ".

"ಕುಮಾರವ್ಯಾಸ ಎಷ್ಟು ವರ್ಣಿಸಿದರೂ ತೃಪ್ತಿಪಟ್ಟುಕೊಳ್ಳಲಾರ. ಅವನ ಯುದ್ಧ ವರ್ಣನೆಯೇ ಅದಕ್ಕೆ ಸಾಕ್ಷಿ. ಒಂದು ಯುದ್ಧದಂತೆ ಮತ್ತೊಂದು ಯುದ್ಧವಿಲ್ಲ; ಒಬ್ಬನ ಸಾಹಸದಂತೆ, ಶಪಥದಂತೆ ಮತ್ತೊಬ್ಬನ ಶಪಥ, ಸಾಹಸ ಇರದು; ಅಷ್ಟೇ ಏಕೆ, ಅವನ ವೀರರಲ್ಲಿ ಒಬ್ಬೊಬ್ಬರೂ ಒಂದೊಂದು ಬಗೆಯಾಗಿ ಬೈಯುತ್ತಾರೆ. ಕುಮಾರವ್ಯಾಸನಲ್ಲಿ ಅವಹೇಳನವೂ ರೂಪಕ ಮಾಲೆಯಾಗುವುದರಿಂದ ವೀರರ ಬೈಗುಳೂ ಕೂಡ ಗ್ರಾಮ್ಯವಾದರೂ ಬಹು ಸುಂದರ; ಈ ಬೈಗುಳನ್ನು ಕೇಳಬೇಕೆಂದು ಆಸೆ ಪಟ್ಟರೆ ಆಶ್ಚರ್ಯವೇನೂ ಅಲ್ಲ. ಈ ವೀರರ ಅಪಹಾಸ, ಕಟಕಿ, ಎಲ್ಲವೂ ವಿಶಿಷ್ಟವಾದುದು".

"ಕುಮಾರವ್ಯಾಸ ಅರಿಯದ ಹಾಸ್ಯದ ಪ್ರಕಾರವು ಒಂದೂ ಇಲ್ಲ. ಕಟಕಿ, ಬಿರುನುಡಿ, ಕಿರಿನುಡಿ, ವ್ಯಂಗ್ಯ, ಹಾಸ್ಯ, ಸರಸ, ವಕ್ರೋಕ್ತಿ, ಜಾಣ್ನುಡಿ, ಪರಿಹಾಸ ಎಲ್ಲವೂ ಅವನ ಬತ್ತಳಿಕೆಯಲ್ಲಿ ಸಿದ್ಧವಾಗಿರುತ್ತವೆ. ಸರಸವಿನೋದಿಗಳ ಸಕಲ ಸನ್ನಾಹವೂ ಅವನಲ್ಲಿ ಸಿದ್ಧವಿದೆ. ತಾನಾಡದೆ, ಹೆಚ್ಚಾಗಿ ಆಡದೆ, ಆ ಆ ಪಾತ್ರಗಳ ಮೂಲಕ ಆಡಿಸಿ ನಗೆಗೇಡು ಮಾಡುವನು, ನಗೆಗೀಡು ಮಾಡುವನು. ಅದಲ್ಲದೆ ಶೃಂಗಾರ ವ್ಯಂಜಕವಾದ ಹಾಸ್ಯವೇ ರಂಜಕವಾಗಬಹುದೆಂಬ ಹಳೆಯ ಮಾರ್ಗವನ್ನು ಬಿಟ್ಟು ಹೊಸಹಾದಿಯನ್ನು ತುಳಿದಿರುವನು. ಕರುಣವು ಹಾಸ್ಯಕ್ಕೆ ವಿರೋಧಿ ಎಂಬ ಮಾತನ್ನು ಬಲ್ಲನಾದರೂ ತೋರಿಕೆಯ ಕರುಣದೊಳಗಿಂದ ನಿರರ್ಗಲವಾದ ನಿರಂತರವಾದ ನಿಸ್ಸೀಮವಾದ ಹಾಸ್ಯದ ಹೊನಲನ್ನು ಹರಿಯಿಸಿರುವನು". "ಇಷ್ಟು ಸರಸಿಯಾದ ಕವಿ ಆದರೇಕೋ ರಸ ವತ್ತಾಗಿ ಅಳಲಾರ ಎಂಬ ಭಾವನೆಗೆ ಪಕ್ಕಾಗಿದ್ದಾನೆ. ಅಳಲಾರ ಎಂದರೆ ಅಳಿಸಬಲ್ಲ ಎಂದು ಹೇಳಬೇಕಾಗುತ್ತದೆ. ಇವನಿಗಿಂತ ಶಕ್ತಿಪೂರ್ಣವಾಗಿ ಅಳಿಸಬಲ್ಲವರಾರು? ಕರುಣರಸದ ಮಹಾಸ್ರೋತವನ್ನು ಇವನಿಗಿಂತ ಶಕ್ತಿ

ಯುತವಾಗಿ ಎಷ್ಟು ಜನ ಹರಿಸಬಲ್ಲರು? ಇದಕ್ಕೆ ಅಭಿಮನ್ಯುವಿನ ವೀರಮರಣದ ಪ್ರಸಂಗ, ಕರ್ಣಾವಸಾನ ಪ್ರಸಂಗಗಳೇ ಸಾಕ್ಷಿ".

"ತನ್ನ ಕೃತಿಯನ್ನು 'ವಿರಹಿಗಳ ಶೃಂಗಾರ' ಎಂದ ಕವಿ ಕುಮಾರವ್ಯಾಸ ಉಳಿದ ಬಹಳ ಕವಿಗಳಂತೆ ಅತಿ ಶೃಂಗಾರ ಪ್ರೀತನಾಗದೆ ಹದವರಿತು ತನ್ನ ಕಾವ್ಯದಲ್ಲಿ ಆ ರಸವನ್ನು ಹರಿಸಿದ್ದಾನೆ...ಕುಮಾರವ್ಯಾಸ ಯೋಗಿಯ ಕಾವ್ಯಪದ್ಧತಿಯಲ್ಲಿ ಹಲವು ದೋಷಗಳಿರಬಹುದು. ಆದರೆ ಶೃಂಗಾರಪ್ರಿಯತೆಯಿಂದ ತನ್ನ ಕೃತಿಯನ್ನು ಹದಗೆಡಿಸಿದನೆಂದು ಮಾತ್ರ ಅವನನ್ನು ದೂರುವ ಹಾಗಿಲ್ಲ. ಬೀಕ್ಕ ಕವಿಗಳು ಕ್ಲೇಶಪಟ್ಟು ಸಾಧಿಸುವ ಹಲವು ವರ್ಣನೆಗಳಿಗೆ ಇಲ್ಲಿ ಸ್ಥಳವೇ ಸಿಕ್ಕಿಲ್ಲ. ಒಂದು ವೇಳೆ ಅಂಥ ವಿಷಯ ಬಂದರೂ ಸಂದರ್ಭೋಚಿತವಾಗಿರುತ್ತದೆ.........ಭಾರತದಲ್ಲಿ ಶೃಂಗಾರವು ಅಮುಖ್ಯವಾದ ರಸ. ಅದನ್ನು ಆ ಮಟ್ಟದಲ್ಲೇ ನಿಲ್ಲಿಸಿ ಸಿದರೂ ನಿರೂಪಣೆಯನ್ನು ಲೋಕೋತ್ತರವಾಗಿ ನಿರ್ವಹಿಸುವ ಶಕ್ತಿ ಕುಮಾರವ್ಯಾಸನಂಥ ಮಹಾಕವಿಗೆ ಮಾತ್ರ ಸಾಧ್ಯ".

"ಪ್ರಕೃತಿವರ್ಣನೆಯಲ್ಲಿ ಈ ಕವಿ ಅಂಧನಲ್ಲದಿದ್ದರೂ ಉದಾಸೀನ, ವಿರಕ್ತ". "ಅಂದರೆ ಪ್ರಕೃತಿಯನ್ನೇ ಆರಾಧ್ಯವಸ್ತುವನ್ನಾಗಿ ಮಾಡಿಕೊಂಡಿಲ್ಲವೆಂದಷ್ಟೆ. ಮಾನವ ಪ್ರಕೃತಿಯ ಚಿತ್ರಣಕ್ಕೆಷ್ಟು ಬೇಕೋ ಅಷ್ಟು ಮಾತ್ರ ಪ್ರಕೃತಿಯನ್ನು ಚಿತ್ರಿಸುತ್ತಾನೆ. ವಿರಹ ಹತ ಕೀಚಕನಿಗೆ 'ಬಲಿದ ಚಂದ್ರಿಕೆ ಕರಗಿ ಕಡುಗಿದ ತವರ ವಾದುದು' ಎನ್ನುತ್ತಾನೆ. ಭೀಷ್ಮಾವಸಾನದಲ್ಲಿ ಅಸ್ತಾಚಲಗತ ಸೂರ್ಯ 'ಪಡುವಣ ಶೈಲ ವಿಪುಲಸ್ತಂಭ ದೀಪಿಕೆಯಂತೆ' ಮೆರೆದ ಎನ್ನುತ್ತಾನೆ. ಈ ಮಾತುಗಳಿಗೆ ದೀರ್ಘವಾದ ವ್ಯಾಖ್ಯಾನ ಬರೆಯಬಹುದು. ಇಷ್ಟಲ್ಲದೆ ರಮಣೀಯವಾದ ಆದರೆ ಮಿತವಾದ ಪ್ರಕೃತಿ ವರ್ಣನೆಯನ್ನು ನೋಡಿ: ವಸಂತಕಾಲ ಹೇಗಿತ್ತೆಂದರೆ 'ತೆಗೆದುದಗ್ಗದ ತಂಪು, ನದಿ ಸರಸಿಗಳ ತಡಿಯಲಿ ಹೆಜ್ಜೆಯಾದುದು, ಹಗಲು ಹಾವಸೆ ಹರಿದು ಹೊಕ್ಕರಿಸಿದುದು ಹಿಮಜಲವ, ಸೊಗಸಿದವು ನೆಳಲುಗಳು, ದೂರಕೆ ಸೆಗಳಿಕೆಗಳೇರಿದವು, ತಂಗಾಳಿಗೆ ವಿಹಾರಿಸಿ ಮೈಯ ತೆತ್ತುದು ಕೂಡೆ ಜನ ನಿಕರ'. ಮಳೆಗಾಲವನ್ನು ವರ್ಣಿಸುವ ಬಗೆ ಹೀಗೆ: 'ಉಡುಗಣದೊಡ್ಡ ಕಾಣೆನು. ಮುಗಿಲ ಬೆನಕಗೆ ಲಡ್ಡುಗೆಗಳಾದುವು ಸಮಸ್ತ ಗ್ರಹ ಸುತಾರೆಗಳು', ಸೂರ್ಯೋದಯ ತಾವರೆಯೆದೆಯ ಬೀಯಗವನ್ನು ತೆರೆಯುತ್ತದಂತೆ–ಇತ್ಯಾದಿ.

"ಮಾನವ ಪ್ರಕೃತಿಯನ್ನು ಮಾತ್ರ ಇವನಂತೆ ಬಹಳ ಜನ ಚಿತ್ರಿಸಿಲ್ಲ". "ಪಶುವಿನಿಂದ ಸ್ಥಿತಪ್ರಜ್ಞನ ವರೆಗೆ ಕುಮಾರವ್ಯಾಸಯೋಗೀಂದ್ರ ಅರಿಯದ ಮನೋವೃತ್ತಿ ಇಲ್ಲ". "ಕೇವಲ ಬಾಹ್ಯವರ್ಣನೆಯಲ್ಲಿ– 'ವಿಭಾವಾನುಭಾವಗಳ ಚಿತ್ರಣದಲ್ಲೇ–ಪಾತ್ರಗಳ ಮನಃಸ್ಥಿತಿಯನ್ನು ಘನೀಕೃತವಾದಂತೆ ಚಿತ್ರಿಸಬಲ್ಲನು. ಊಹೆದೆಗಹಿನ ಕಂಬನಿಯ ತನಿಮೋಹರದ ಘನಶೋಕ ವಹ್ನಿಯ ಮೋಹುಗಾಡಿನ ಮನದ ಕೌರವನಿತ್ತ ನೋಲಗವ', 'ಆರು ಮರುಗರು, ಘೋರ ವಿಷ ಮುನಿವರನ ಹೃದಯವ ಗೋರಿತೇನೆಂಬೆನು ಲತಾಂಗಿ ಯರಳಲ ಕಳವಳವ', 'ತನುವ ಮರೆದನು ಪುಳಕ ಜಲದಲಿ ನೆನೆದು ನಾರಾಯಣನ ಪದ ದರುಶನದ ಹರ್ಷಾ ರಣ್ಯದಲಿ ಮನ ಹೊಲಬುದಪ್ಪಿದನು' ಹೀಗೆ ನೂರಾರು ಪಂಕ್ತಿಗಳನ್ನು ಉದಾಹರಿಸಬಹುದು.

"ಕುಮಾರವ್ಯಾಸನ ಪಾತ್ರಗಳಲ್ಲಿ ಅದ್ಭುತಶಕ್ತಿಯ ಸಂಚಾರವನ್ನು ಕಾಣುತ್ತೇವೆ. ಅವನು ಸೃಷ್ಟಿಸಿದ ಭೀಮ, ದ್ರೌಪದಿ, ಅಭಿಮನ್ಯು, ಉತ್ತರ, ಕರ್ಣ, ಅರ್ಜುನ, ಕೃಷ್ಣ, ಭೀಷ್ಮ, ದ್ರೋಣ, ವಿದುರ, ಕೌರವರೇ ಇದಕ್ಕೆ ಸಾಕ್ಷಿ. ಇವರೆಲ್ಲ ಸಚೇತನ ಪಾತ್ರಗಳಾಗಿ ನಡೆದಾಡುತ್ತಾರೆ. ಜಿಗುಟಿದರೆ ರಕ್ತಸೋರುವ ಮಟ್ಟಿಗೆ

ಪಾತ್ರಗಳು ತುಂಬುಜೀವಿಯಾಗಿವೆ. ಆದರೆ ಒಮ್ಮೊಮ್ಮೆ ಶಕ್ತಿಯ ಆಧಿಕ್ಯದಿಂದ ಮೇರೆಮೀರಿ ನಡೆಯುತ್ತಾರೆ. ನಾರಣಪ್ಪನ ಪಾತ್ರಗಳಲ್ಲಿ ಅದ್ಭುತಶಕ್ತಿಯ ಸಂಚಲನೆ ಇರುವಂತೆಯೆ ಸಂಯಮವೂ ಇದ್ದಿದ್ದರೆ ಪ್ರಪಂಚದ ಸಾಹಿತ್ಯದಲ್ಲಿ ನಮ್ಮ ಕವಿ ಅದ್ವಿತೀಯನಾಗುತ್ತಿದ್ದ. ಆತನಿಗೆ ಪಂಪನ ಸಂಯಮ ಬೇಕು ಎಂದು ಎಷ್ಟೋ ವೇಳೆ ಅನ್ನಿಸುತ್ತದೆ. ಇತರ ವರ್ಣನೆಗಳಲ್ಲಿ ಈ ಸಂಯಮವಿಲ್ಲದಿದ್ದರೆ ಚಿಂತೆ ಇಲ್ಲ; ಮಾನವ ವರ್ತನೆಯ ಚಿತ್ರಣದಲ್ಲಿ ಇದು ಬೇಕೇ ಬೇಕು. ಪಂಪನ ಭೀಷ್ಮರೂ ನಾರಣಪ್ಪನ ಭೀಷ್ಮರೂ ಸೇನಾಧಿಪತ್ಯ ಸ್ವೀಕರಣ ಸನ್ನಿವೇಶದಲ್ಲಿ ಕರ್ಣನ ವಿಚಾರವಾಗಿ ಹೇಗೆ ವರ್ತಿಸುತ್ತಾರೆ ಎಂಬುದನ್ನು ನೋಡಿದರೆ ಮೇಲಿನ ಮಾತಿನ ಸತ್ಯ ಗೋಚರಿಸುತ್ತದೆ. ಹೀಗಾಗಿ ಕುಮಾರವ್ಯಾಸನ 'ಶೈಲಶಿಲ್ಪ'ಗಳಲ್ಲಿ ತೋಲ ತಪ್ಪುತ್ತದೆ. ಇದರಿಂದ ಒಂದು ಲಾಭವಾಗಿರುವುದೂ ಉಂಟು. ಅವನ ಪಾತ್ರಗಳಲ್ಲಿ 'ಪ್ರಾಕೃತ ಸಮೃದ್ಧಿ' ಯಿರುವುದರಿಂದ ನಾವಲ್ಲಿ 'ಪ್ರಾಕೃತಿಕ ರೂಕ್ಷತಾ ರಮಣೀಯತೆ' ಯನ್ನು ಕಾಣುತ್ತೇವೆ. ಹಾಗಾಗಿ ಅಲ್ಲಿ ಮಾನವ ಸ್ವಭಾವದ ಅತಿ ಸಹಜ ಸ್ವರೂಪದ ಅನುಭವ ಆಗುತ್ತದೆ".

"ಭಕ್ತಕವಿಯಾದ ಕುಮಾರವ್ಯಾಸ ಭಗವಂತ ಮಹಿಮೆಯ ವರ್ಣನೆಯ ಅತಿರೇಕದಲ್ಲಿ ಮಾನವತೆ ಯನ್ನು ಮರೆಯುತ್ತಾನೆ ಎಂಬ; ಅವನು ಬರಿಯ ದೈವಚಾಲಿತ ಪಾತ್ರರನ್ನು ಚಿತ್ರಿಸಿದನೆ ವಿನಾ ಮಹಾಭಾರತದ ವೀರರನ್ನಲ್ಲ ಎಂಬ ಭ್ರಾಂತಿ ಬರುವುದುಂಟು. ಆದರೆ ಪೌರುಷದ ಪರಾಕಾಷ್ಠೆಯ ಚಿತ್ರವನ್ನು ಬೇಕಾದರಿಲ್ಲಿ ನೋಡಿ:

ಅಭಿಮನ್ಯು ಹೇಳುತ್ತಾನೆ:

'ಬವರವಾದರೆ ಹರನ ವದನಕೆ ಬೆವರ ತಹೆನವಗಡಿಸಿದರೆ ವಾ<br>
ಸವನ ಸದೆವೆನು ಹೊಕ್ಕಡಹುದೆನಿಸುವೆನು ಭಾರ್ಗವನ;<br>
ಜವನ ಜವಗೆಡಿಸುವೆನು ಸಾಕಿನ್ನಿವರವರಲೇನರ್ಜುನನು ಮಾ<br>
ಧವನು ಮುನಿದಡೆ ಗೆಲುವೆನಂಜದೆ ರಥವ ಹರಿಸೆಂದ'

ಭೀಮ ಹೇಳುತ್ತಾನೆ–

'ಭೀಮ ಕಷ್ಟವನೆಸಗಿದನು ಹಾಯೆಂದರಾದೊಡೆ ಮುಸುಡನಮರಾದ್ರಿಯಲಿ ತೇವೆನು ದೇವ ಸಂತತಿಯ', 'ಕೃಷ್ಣ ಹಾಯ್ದರೆ ಘನಮುರಾರಿಯ ಮೀರುವೆನು' ಎಂದು. ಕೃಷ್ಣಪ್ರಿಯ ಅರ್ಜುನನನ್ನು ಕೇಳಿ:

'ಕುರುಬಲವ ಬಿಟ್ಟರೆ ಯುಧಿಷ್ಠಿರನರಮನೆಯ ಹೊಕ್ಕರೆ, ಮುರಾರಿಯ<br>
ಶರಣುವೊಕ್ಕರೆ ಸರ್ವಥಾ ಕೊಲ್ವೆನು ಜಯದ್ರಥನ'

ಇಲ್ಲೆಲ್ಲಾ ನಾವು ಕಾಣುವುದು ನಿರ್ಮಾನುಷತೆಯನ್ನಲ್ಲ, ಅಮಾನುಷತೆಯನ್ನೂ ಅಲ್ಲ; ಪರಮ ಪೌರುಷವನ್ನು. ಆದರೆ ಈ ಪೌರುಷ ಯಾವ ಮಿತಿಯಾಚೆಯಲ್ಲಿ ಅಪೌರುಷೇಯದ ಮುಂದೆ ಹೇಗೆ ತಲೆ ಬಾಗುತ್ತದೆಂಬುದನ್ನು ಕುಮಾರವ್ಯಾಸ ಅದ್ಭುತವಾಗಿ ಕಂಡಿದ್ದಾನೆ.

ಆದ್ದರಿಂದಲೇ ಅವನು ಕಂಡರಿಸಿದ ಭಕ್ತರಾರೂ ಪೌರುಷವಿಹೀನರಲ್ಲ, ನಿರ್ಮಾನುಷರಲ್ಲ. ಅರ್ಜುನ ಭೀಷ್ಮ, ಭೀಮ, ಧರ್ಮರಾಯ, ವಿದುರ, ದ್ರೌಪದಿ, (ಕರ್ಣ ಕೂಡ) ಅವನ ಭಕ್ತರಾದರೂ ಅವರಾದರೂ ಮಾನುಷಶಕ್ತಿವಿರಾಮರಲ್ಲ. ತಮ್ಮೆಲ್ಲ ಶಕ್ತಿಯಿಂದ ಕಾದುತ್ತಾರೆ, ಏದುತ್ತಾರೆ, ತಮ್ಮ ಕೈಮೀರಿದಾಗ ಭಗವದ್ ಶಕ್ತಿಯ ಮರೆಹೋಗುತ್ತಾರೆ. ಸೈಂಧವ ವಧೆಯಲ್ಲಿ ಶ್ರೀಕೃಷ್ಣನಿಗೆ ಮೊರೆಗೊಂಡ ಅರ್ಜುನನ ಬಗೆ ಇಂತಹದು.

ಭಾರತ ಯುದ್ಧದಲ್ಲಿ ಕೈದುವನ್ನು ಹಿಡಿಯುವುದಿಲ್ಲವೆಂದು ಶಪಥಮಾಡಿದ್ದ ಶ್ರೀಕೃಷ್ಣನ ಕೈಯಲ್ಲಿ ಚಕ್ರ ಹಿಡಿಸಿದ ಭೀಷ್ಮ ಪೌರುಷ ಕೊನೆಗೆ ತನ್ನ ಭಕ್ತಿನಾರಾಯಣಾಸ್ತ್ರದಿಂದ ಚಕ್ರಧಾರಿಯನ್ನು ಗೆದ್ದ ಬಗೆ ಅಂತಹದು! ಎದೆಯನ್ನು ಭೇದಿಸಿದ್ದ ಬಾಣವು ಪ್ರಾಣಹೀರುತ್ತಿರುವಾಗ ಇನ್ನೂ ಅಹತನಾಗಿದ್ದ ತನ್ನ ಬಳಿಗೆ ಬಂದ ಬ್ರಾಹ್ಮಣ ವೇಷಧಾರಿ ಶ್ರೀಕೃಷ್ಣನಿಗೆ ತನ್ನ ಕರ್ಣಕುಂಡಲ, ಅಮೃತೋದಕಗಳನ್ನು ಧಾರೆಯೆರೆದ ಶ್ರೀಕರ್ಣನ ಮಹಾತ್ಯಾಗ ಪೌರುಷವು ಭಗವದರ್ಪಿತವಾದ ಮಹಾದ್ಭುತ ವಿಧಾನ ಅಂತಹದು. ಒಟ್ಟಿನಲ್ಲಿ ಮಹಾಕವಿ ಕುಮಾರವ್ಯಾಸನ ಪಾತ್ರಗಳು ಮಾನುಷ ದೈವಶಕ್ತಿಗಳ ರಂಗಸ್ಥಲವಾಗಿವೆ; ಸಂಗಮಸ್ಥಾನವೂ ಆಗಿವೆ".

"ಮಹಾಭಾರತದ ಪ್ರಧಾನ ಪಾತ್ರಗಳನ್ನು ತನ್ನ ಕಾವ್ಯದ ಕೊನೆಯಲ್ಲಿ ಹೆಸರಿಸುವಾಗ ಪಂಪಕವಿ ಹೀಗೆನ್ನುತ್ತಾನೆ:

> 'ಛಲದೊಳ್ ದುರ್ಯೋಧನಂ, ನನ್ನಿಯೊಳ್ ಇನತನಯಂ, ಗಂಡಿನೊಳ್ ಭೀಮಸೇನಂ,
> ಬಲದೊಳ್ ಮದ್ರೇಶನ್, ಅತ್ಯುನ್ನತಿಯೊಳ್ ಅಮರಸಿಂಧೂದ್ಭವಂ ಚಾಪವಿದ್ಯಾ
> ಬಲದೊಳ್ ಕುಂಭೋದ್ಭವಂ, ಸಾಹಸದ ಮಹಿಮೆಯೊಳ್ ಫಲ್ಗುಣಂ, ಧರ್ಮದೊಳ್ ನಿ
> ರ್ಮಲಚಿತ್ತಂ ಧರ್ಮಪುತ್ರಂ; ಮಿಗಿಲ್ ಇವರ್ಗಳಿನೀ ಭಾರತಂ ಲೋಕಪೂಜ್ಯಂ'

"ಕುಮಾರವ್ಯಾಸನ ಪಾತ್ರಸೃಷ್ಟಿಯನ್ನು ವಿವೇಚಿಸುವಾಗ ಈ ಮಾಲಿಕೆಯಲ್ಲಿ ಅವನವರೆ ಆದ, ವೈಶಿಷ್ಟ್ಯಪೂರ್ಣರಾದ, ಶ್ರೀಕೃಷ್ಣ, ದ್ರೌಪದಿ, ಅಭಿಮನ್ಯು, ಉತ್ತರಕುಮಾರರನ್ನು ಸೇರಿಸಬೇಕಾಗುತ್ತದೆ. ಒಂದರ್ಥದಲ್ಲಿ ಈ ಪಾತ್ರಗಳು ಕುಮಾರವ್ಯಾಸನಿಂದಲೆ ನಮಗಿಷ್ಟು ಪರಿಚಿತವಾಗಿರುವುದು ಎಂದರೂ ಸಲ್ಲುತ್ತದೆ.

"ಶ್ರೀಕೃಷ್ಣನ ಪಾತ್ರ ಕುಮಾರವ್ಯಾಸನ ಭಾರತದಲ್ಲಿ ಅತ್ಯಂತ ಪ್ರಧಾನವೂ ವಿಶಿಷ್ಟವೂ ಸರ್ವ ಪ್ರೇರಕವೂ ಚೋದಕವೂ ಆದುದು. ಕವಿಯ ದೃಷ್ಟಿಯಲ್ಲಿ ಆತ ಯಾವುದೋ ಒಂದು ಪಾತ್ರವಲ್ಲ; ನಾಯಕಪಾತ್ರವಷ್ಟೆ ಅಲ್ಲ. ಆದರೆ ಪಾತ್ರಧಾರಿಯಾದ ಸೂತ್ರಧಾರಿ. ಹಾಗೆ ಅಲ್ಲದೆ ಅವನು ನಾಯಕಮಾತ್ರ ನಾಗಿದ್ದರೆ ಕಾವ್ಯದ ಉಳಿದ ಪಾತ್ರಗಳಂತೆ, ಸಾಮಾನ್ಯವಾಗಿ ಉಳಿದ ಕಾವ್ಯಗಳ ನಾಯಕರಂತೆ, ಅವನೂ ಒಂದಿನಿತಾದರೂ ತೊಳಲಾಟಕ್ಕೆ ಒಳಗಾಗುತ್ತಿದ್ದ. ಆದರೆ ಕುಮಾರವ್ಯಾಸನ ಕೃಷ್ಣ ಅವನ ಕಾವ್ಯಚೋದಕ ಶಕ್ತಿಯಾಗಿರುವಂತೆಯೇ, ಶ್ರವಣ ಸುಧಾ ವಿನೂತನ ಕಥನ ಕಾರಣನಾಗಿರುವಂತೆಯೇ, ಆ ಅವನ ಭಾರತದ ಪ್ರೇರಕ, ಕಾರಕಶಕ್ತಿಯೂ ಆಗಿದ್ದಾನೆ. ಎಲ್ಲೆಲ್ಲಿ ಏನೇನು ಆಗಬೇಕಾದರೂ ಅವನ ಕೈವಾಡವಿಲ್ಲದೆ ನಡೆಯುವುದೆ ಇಲ್ಲ. ಹೀಗೆ ಅವನೇ ಎಲ್ಲವನ್ನೂ ಚೋದಿಸಿ ದಿಗ್ದರ್ಶಿಸಿದರೂ ತಾನು ಮಾತ್ರ ಎಲ್ಲೂ ಅತಿ ಎನ್ನುವಂತೆ, ವಿಪರೀತ (Abnormal)ಎನ್ನುವಂತೆ ವರ್ತಿಸುವುದಿಲ್ಲ. ತನ್ನ ಅತಿಮಾನವತೆಯನ್ನು ಮನುಷ್ಯ ಕಟ್ಟಳೆಗೆ ಅಗೌರವವಾಗದಂತೆ ಪ್ರಕಾಶಗೊಳಿಸುತ್ತಾನೆ. 'ನರ ನಾಟಕವ ತಾನೇ ನಟಿಸಿ ತೋರಿದನು' ಎಂದು ಕವಿ ಹೇಳುತ್ತಾನೆ. ಕುಂತಿ ಬಂದರೆ ಕುಳಿತಿದ್ದವನು ಜಗ್ಗನೆದ್ದು ನಮಸ್ಕರಿಸುತ್ತಾನೆ. ಪಾಂಡವರು ತನ್ನ ಪರಮಭಕ್ತರಾಗಿದ್ದರೂ 'ಆಳೊಡೆಯನೆಂದೆಂಬ ಭೇದವ ಬೀಳುಕೊಟ್ಟೇ ನಡೆಸುತಿರ್ದನು ತನ್ನ ಮೈದುನರ–'

ತನ್ನ ಭಕ್ತರಿಗಾಗಿ ಶ್ರೀಕೃಷ್ಣ ಕರಗುತ್ತಿದ್ದನಂತೆ; ತನ್ನ ತಂದೆ ತಾಯಿ, ಮನೆಮಠ, ಮಡದಿ ಮಕ್ಕಳನ್ನೂ ಗಮನಿಸುತ್ತಲಿರಲಿಲ್ಲವಂತೆ! 'ಒಲಿದವರನುಜ್ಜೀವಿಸುವ ಬಗೆ ಬಲುಹು ಮುರಮಥನಂಗೆ ಮುನಿದೊಡೆ ಹಣೆಯ ಬರಹವ ತೊಡೆವನಲ್ಲದೆ ಬಳಿಕ ಸೈರಿಸನು' ಎಂದೂ, 'ಕೈತವದ ಶಿಕ್ಷಾಗುರು', 'ಸೆಣಸು ಸೇರದ

ದೇವ' ಎಂದೂ ಶ್ರೀಕೃಷ್ಣನನ್ನು ಅರಿತ ನಾವು ಅವನ ಮಹಾಕರುಣೆಯ ವಿಶ್ವಾಲಿಂಗನವನ್ನು ಮರೆಯುತ್ತೇವೆ. ಆದರೆ ಅವನ ಆ ಸ್ವರೂಪವನ್ನು ಕಂಡ ಅವನ ತಂದೆ ವಸುದೇವ, ಪಾಂಡವರಿಗೆ ಅದನ್ನು ಹೇಳುತ್ತಾನೆ ಕೇಳಿ:

'ಲೋಗರೇ ನೀವೆಮಗೆ, ನಿಮಗರಗಾಗಿ ಕರಗುವುದು ನಿಲಲಿ, ತನ
ಗಾಗದವರಿಗೆ ತನ್ನ ತೆರುವನು, ಕೊಲುವ ಹಗೆಗೊಲಿವ;
ಲೋಗರೆನ್ನವರೆಂದು ಲೋಗರಿಗಾಗಿ ಬದುಕುವನೆಂಬ ಬಲುಗೈ
ಬಾಗಿ ಕೃಷ್ಣನನೇನ ಹೇಳುವೆನೆಂದನರಸಂಗೆ'

ನಾವೆಲ್ಲ ತಿಳಿದಿರುವ ಶ್ರೀಕೃಷ್ಣನಿಗೂ ತಂದೆಯ ವಾತ್ಸಲ್ಯ ಕಂಡ ಕುಮಾರ ಭಗವಂತನಿಗೂ ಎಷ್ಟು ವ್ಯತ್ಯಾಸವಿದೆ! ಕುಮಾರವ್ಯಾಸ ಬಹುಮಟ್ಟಿಗೆ ಕಂಡರಿಸಿರುವ ಚಿತ್ರ ಇದೇ ಆಗಿದೆ. ಕರ್ಣನಿಗೂ ತನ್ನ ನಿಜ ಪದವನ್ನಿತ್ತ ಭಗವಂತ, ಕೌರವನಿಗೂ ಒಮ್ಮೊಮ್ಮೆ ತನ್ನನ್ನು ತೋರಿ ಮೆರೆದ ಮಹಿಮ ಇವನಲ್ಲದೆ ಮತ್ತೆಂಥವನು.

ಇಷ್ಟೆಲ್ಲ ಮಹಿಮಾವಂತ ಹೇಗೆ ಮುಗ್ಧನಾಗಿ ವರ್ತಿಸುತ್ತಾನೆ! ಮೇಲೆಹೇಳಿದ ತಂದೆಯ ಮಾತನ್ನು ಕೇಳಿದೊಡನೆ ಅವನು ತೋರಿದ ನಾಚಿಕೆ ಬಹು ಮನೋಜ್ಞವಾದುದು.

'ಬೊಪ್ಪನವರೇಯೆಮ್ಮ ದೂರದೆಯಿಪ್ಪವರು, ತಾನಲ್ಲ, ಸಾಕಿ
ನ್ನೊಪ್ಪದಲಿ ಬಾಯೆಂದು ಮುರರಿಪು ಕರೆದನವನಿಪನ'

ತಂದೆಯ ವಾತ್ಸಲ್ಯಕ್ಕೆ ಧರ್ಮರಾಜನೊಡನೆ ಅವನಾಡಿದ ಮಾತಿದು. ಹಾಗೆಯೇ ಮುಂದೆ ಭೀಷ್ಮನ ಮೇಲೆ ಚಕ್ರಧಾರಿಯಾಗಿ ಪ್ರಲಯೋಲ್ಕೆಯಂತೆ ಎರಗುತ್ತಿರುವಾಗ ತನ್ನ ಮಹಾ ಪ್ರಮಾದವನ್ನು ಆ ಭೀಷ್ಮ ಭಕ್ತಿ ಎಚ್ಚರಿಸಲು ನಾಚಿ ಹಿಂಬರುತ್ತಾನೆ. 'ನಚ್ಚಿನಾಳಿನ ಬಿನ್ನಹಕೆ ಮನದೊಳು ನಾಚಿ ಚಕ್ರವ ಮುಚ್ಚಿದನು' ಎಂದು ಕವಿ ಮನೋಜ್ಞವಾಗಿ ಹೇಳುತ್ತಾನೆ. ಹೀಗೆ ದೇವದೇವನಾದರೂ ಶ್ರೀಕೃಷ್ಣ ಶ್ರೇಷ್ಠ ಮಾನವ ಭಾವಗಳನ್ನು ಪ್ರದರ್ಶಿಸುವುದನ್ನು ಕಾಣುತ್ತೇವೆ.

ಮುಂದೆ ಸೈಂಧವ ವಧೆಯ ಹಿಂದಿನ ದಿನ, ಪಾಶುಪತಾಸ್ತ್ರವನ್ನು ಪಾರ್ಥನಿಗೆ ಹಸ್ತಗತವಾಗಿಸಲು ತಾನೆ ಅವನನ್ನು ಕೈಲಾಸಕ್ಕೆ, ಅವನ ಧ್ಯಾನಸ್ಥಿತಿಯಲ್ಲಿ, ಕರೆದುಕೊಂಡು ಹೋಗಿ ಶಿವನಿಂದ ಆ ಮಂತ್ರವನ್ನು ಪಡೆಸಿಕೊಡುತ್ತಾನೆ. ತಾನೇ ಏಕೆ ಆ ಶಕ್ತಿಯನ್ನು ಕೊಡಬಾರದಾಗಿತ್ತು? ಆಯಾ ಶಕ್ತಿಗಳು ಆಯಾ ಪಾತ್ರಗಳಲ್ಲೆ ಹರಿದುಬರಬೇಕೆಂಬುದನ್ನು ಉಲ್ಲಂಘಿಸದೆ ನಡೆಯುತ್ತಾನೆ, ಶ್ರೀಕೃಷ್ಣ. ಹೀಗೆ ಕುಮಾರವ್ಯಾಸ ಕಂಡ ಕೃಷ್ಣ ಭಾರತದ ಸೂತ್ರಧಾರನಾಗಿದ್ದರೂ ಪಾತ್ರಧಾರಿಯಾದ ಸೂತ್ರಧಾರನಾಗಿದ್ದಾನೆ".

ಅರ್ಜುನ ಶ್ರೀಕೃಷ್ಣನ ಪರಮಮಿತ್ರ, ಭಕ್ತ; ಗುರುದ್ರೋಣರ ಪ್ರೇಮದ ಶಿಷ್ಯ; ದಶನಾಮವಂತನಾಗಿ ಪ್ರಸಿದ್ಧನಾದ ಇವನು ಶಿವನನ್ನು ಭಯಭರಿತ ವೀರಭಕ್ತಿಯಿಂದ ಗೆದ್ದು ಸಿದ್ಧನಾಗಿದ್ದರೂ ಅಣ್ಣನ ಆಜ್ಞೆಯನ್ನು ಮಾತ್ರ ಮೀರುತ್ತಿರಲಿಲ್ಲ. 'ತಮ್ಮಣ್ಣನಾಜ್ಞೆಯಲಿ ಭ್ರಮಿತನಾಗಿಹನು' ಎಂದು ದ್ರೌಪದಿ ಹಂಗಿಸುವಷ್ಟು ಅಣ್ಣನ ಭಕ್ತ. ತನ್ನ ಪ್ರಿಯತಮನಾದ ಏಕೈಕ ಪುತ್ರನ ಮರಣದಲ್ಲಿ ಅಣ್ಣನ ಮೇಲೆ ಕೋಪಿಸಿಕೊಳ್ಳಲು ಕಾರಣವಿದ್ದರೂ ಅವನಾಡುವ ವಿಸ್ಮಯಕಾರಿಯಾದ ಸಂಯಮದ ಮಾತುಗಳನ್ನು ನೋಡಬಹುದು. ಆದರೂ ತನ್ನನ್ನೇನಾದರೂ ಅಲ್ಲಗಳೆದರೆ ಮಾತ್ರ ಯಾರನ್ನೂ ಲಕ್ಷಿಸುತ್ತಿರಲಿಲ್ಲ. ಅಂತಹ ಅಣ್ಣನ ಮೇಲೆ ಕತ್ತಿಯನ್ನು ಹಿಡಿದುಕೊಂಡು ಹೋಗುತ್ತಾನೆ. ಈ ಪ್ರಸಂಗವಂತೂ ಮಾನವ ಹೃದಯದ ಮಹಾಭಯಂಕರ

ಸ್ವಭಾವದ ಸತ್ಯ ಚಿತ್ರಣವಾಗಿದೆ. (ಕಾರಣಾಂತರದಿಂದ ಈ ಅಂಶವನ್ನು ಪಂಪಕವಿ ಬಿಟ್ಟುಬಿಟ್ಟಿದ್ದಾನೆ) ಹಾಗೆಯೇ ಭೀಮನಮೇಲೂ, ಅಷ್ಟೇ ಏಕೆ, ಭಗವಾನ್ ಶ್ರೀಕೃಷ್ಣನ ಮೇಲೂ, ಕೋಪವಲ್ಲ, ಅಸಮಾಧಾನ ಅವನಿಗುಂಟಾಗುತ್ತಿತ್ತು. ಆದರೆ ಕುಮಾರವ್ಯಾಸನ ಅರ್ಜುನನ ವೈಶಿಷ್ಟ್ಯವು ಕಾಣುವುದು ಪ್ರಧಾನವಾಗಿ ಊರ್ವಶಿಯ ಪ್ರಸಂಗದಲ್ಲಿ, ಕರ್ಣಾವಸಾನ ಪ್ರಸಂಗದಲ್ಲಿ, ಹಾಗೂ ಕಿರಾತಾರ್ಜುನೀಯ ಪ್ರಸಂಗದಲ್ಲಿ. ಕಿರಾತವೇಷದ ಶಿವನೊಡನೆ ಸೆಣಸುವಾಗ ಅವನು ತೋರಿದ ಮಾನುಷ ಅತಿಮಾನುಷ ಶಕ್ತಿ; ಶಿವನೆಂದು ತಿಳಿದಾಗ ಅವನು ತೋರಿದ ಪರಮಪಶ್ಚಾತ್ತಾಪಜನ್ಯವಾದ, ಹೃದಯಸ್ಪರ್ಶಿಯಾದ ಶರಣಾಗತಭಕ್ತಿ; ಊರ್ವಶಿಯ ಸುಮನೋಹರ ಭಯಂಕರ ಪ್ರಣಯಾಭಿಲಾಷೆಯನ್ನು ಗೆಲ್ಲುವಲ್ಲಿ ತೋರಿದ ಮಹಾದ್ಭುತ ಜಿತೇಂದ್ರಿಯರಕ್ತಿ; ತನ್ನ ಆಬಾಲಶತ್ರುವಾದ ಕರ್ಣನನ್ನು ಭೇದಿಸುವಲ್ಲಿ ತಾನು ಪಟ್ಟ ಮಾನುಷಾತೀತವಾದ ಆದರೂ ಸಹಜವಾದ ದುರ್ಭರ ಯಾತನೆ, ಇವನ್ನು ನೋಡಿದರೆ ಸಾಕು, ಕುಮಾರವ್ಯಾಸನ ಅರ್ಜುನನ ವೈಶಿಷ್ಟ್ಯ ತಿಳಿದೀತು. ಇಂತಹವನಿಗೂ, ಸದಾ ಶ್ರೀಕೃಷ್ಣ ಸನ್ನಿಧಾನದಲ್ಲೇ ಇರುತ್ತಿದ್ದ ಇಂತಹ ಪುಣ್ಯಾತ್ಮನಿಗೂ, ಆಗಾಗ್ಗೆ ಗ್ಲಾನಿಯುಂಟಾಗುತ್ತಿತ್ತು! ಯುದ್ಧಕ್ಕೆ ಪ್ರಾರಂಭದ ಗೀತೋಪದೇಶದ ಸನ್ನಿವೇಶದಲ್ಲಿ ಮಾತ್ರವೇ ಅಲ್ಲ, ಭಗದತ್ತ ವಧಾ ಪ್ರಸಂಗದಲ್ಲಿ ತನಗೆ ನೆರವು ನೀಡಿದ ಶ್ರೀಕೃಷ್ಣನ ಮೇಲೆ ಅಸಮಾಧಾನ ಪಡುವ ಮುಹೂರ್ತ ದಲ್ಲಿ; ಕರ್ಣನ ಪರಾಕ್ರಮವನ್ನು ಅವನು ಹೊಗಳಿದಾಗ ಅದನ್ನು ಸಹಿಸದ ಘಳಿಗೆಯಲ್ಲಿ; ನೊಂದ ಧರ್ಮಜ ನಾಡಿದ ಮಾತಿಗಾಗಿ ಅವನನ್ನೇ ಕೊಲ್ಲುತ್ತೇನೆಂದು ಹೊರಟ ಅಹಂಕೋಪಾಂಧನಾದ ಸಮಯದಲ್ಲಿ, ಅರ್ಜುನ ಮಾನವದೌರ್ಬಲ್ಯದ ಭಯಂಕರತೆಯನ್ನು ಅತ್ಯಂತ ಸಹಜವಾಗಿ ಪ್ರದರ್ಶಿಸಿದ್ದಾನೆ. ಭಗವಂತ ಸಾನ್ನಿಧ್ಯ ದಲ್ಲಿದ್ದವನಿಗೂ ಇದು ಬಿಡಲಿಲ್ಲವಲ್ಲ ಎಂಬುದನ್ನು ಬಹು ಮಾರ್ಮಿಕವಾಗಿ ಅರ್ಜುನನ ಚಿತ್ರದಲ್ಲಿ ನಾರಣಪ್ಪ ಕಾಣಿಸಿದ್ದಾನೆ".

"ನಾರಣಪ್ಪನ ಭೀಮ ಅತಿ ವಿಶಿಷ್ಟನಾದ ವ್ಯಕ್ತಿ. ಶಿಶುವಾಗಿದ್ದಾಗ ತಾಯ ತೊಡೆಯಿಂದ ಕೆಳಗೆ ಬಿದ್ದುದರಿಂದ ಆ ಅಡಿಗಲ್ಲೆ ಚೂರ್ಣವಾಯಿತಂತೆ! (ಈ ಪ್ರಸಂಗ ವ್ಯಾಸರಲ್ಲೂ ಬಂದಿದೆ.) ಇಂತಹ ಶಕ್ತ ಚಿಕ್ಕಂದಿನಲ್ಲಿ ಮಾಡಿದ ತುಂಟಾಟಕ್ಕೆ ಲೆಕ್ಕವಿಲ್ಲ. ಮರವೇರಿ ಆಡುತ್ತಿದ್ದ ನೂರು ಜನ ಕೌರವರನ್ನೂ ಆ ಮರದ ಬುಡವಲುಗಿಸಿ ಹಣ್ಣುಗಳಂತೆ ಕೆಳಕ್ಕೆ ಉದುರಿಸುತ್ತಾನೆ. ಅಷ್ಟೇ ಅಲ್ಲ, ಉಳಿದವರು ಭೀಷ್ಮಾದಿಗಳಲ್ಲಿಗೆ ದೂರು ಕೊಂಡೊಯ್ದರೆ, ತನ್ನ ಮೈಯನ್ನು ತಾನೆ ಮುಳ್ಳಿನಿಂದ ಪರಚಿಕೊಂಡು ಮೊದಲು ತಾನೆ ದೂರುಹೇಳು ವಂತಹ ತುಂಟ. ಇಂತಹ ಅದಮ್ಯಶಕ್ತಿಯುಳ್ಳವನು ಮುಂದೆ ಕೌರವರ ವೈರಕ್ಕೆ ನಿತ್ಯವೂ ತುತ್ತಾಗಬಂದಾಗ ತೋರಿದ ಶಕ್ತಿ, ಸಾಮರ್ಥ್ಯ, ಅದಕ್ಕಿಂತ ಹೆಚ್ಚಾಗಿ ಅವನು ವ್ಯಕ್ತಪಡಿಸಿದ ಮಹಾಸಂಯಮ ಅದ್ಭುತವಾದುದು. ಇಷ್ಟೆಲ್ಲಾ ಶಕ್ತನಾಗಿದ್ದರೂ, ಅಧರ್ಮವನ್ನು ಕಂಡು ಸಿಡಿದೇಳುವಂತಾಗುತ್ತಿದ್ದರೂ, ಅಣ್ಣನಾಜ್ಞೆಯನ್ನು ಮಾತ್ರ ಮೀರುತ್ತಿರಲಿಲ್ಲ. ಒಮ್ಮೊಮ್ಮೆ–ಮೇರೆದಪ್ಪುತ್ತಿದ್ದ ಮಳೆಗಾಲದ ಮಹಾನದಿಯಂತೆ. ಆದರದು ಅವಿನಯದಿಂದಲ್ಲ, ಅಧರ್ಮದ ಅತಿರೇಕಕ್ಕೆ ಅವನ ಅದಮ್ಯ ಶಕ್ತಿ ಸಹಿಸಲಾರದೆ ರೋಸಿಹೋಗುತ್ತಿದ್ದುದರಿಂದ. ಕೀಚಕನ ಸನ್ನಿವೇಶದಲ್ಲಿ ಮೊದಮೊದಲು ಅಣ್ಣನಾಜ್ಞೆಗೆ ಒಳಗಾಗಿ ದ್ರೌಪದಿಗೆ ಕರಗದಿದ್ದ ಅವನ ಧರ್ಮ ನಿಷ್ಠುರ ಹೃದಯ, ಕಟ್ಟಕಡೆಯಲ್ಲಿ ಅವಳ ಕಟ್ಟೊಡೆದ ದುಃಖ ಪ್ರವಾಹದಲ್ಲಿ ಕೊಚ್ಚಿಹೋಗುತ್ತದೆ. ಆಗ ಕೋಪಿಸಿಕೊಂಡ ಭೀಮ ಬಾಯ್ದೆರೆದ ಅಗ್ನಿಪರ್ವತವಾಗುತ್ತಾನೆ. 'ಭೀಮ ಕಷ್ಟವನೆಸಗಿದನು ಹಾ! ಎಂದರಾ ದೊಡೆ ಮುಸುಡನಮರಾದ್ರಿಯಲಿ ತೇವೆನು ದೇವಸಂತತಿಯ'.........'ಹಗೆಗಳನು ಹಿಂಡಿದನು ಮನ

ದೊಳಗೆ "ನಮ್ಮಣ್ಣನಾಜ್ಞೆಯ ಗೆರೆಯ ದಾಂಟಿದೆನು'. ಹಾಗೆಯೇ ದುಶ್ಶಾಸನನ ರಕ್ತವನ್ನು ಕುಡಿದು ಕೇಕೆ ಹಾಕುವ ಭೈರವಲೀಲೆಯಲ್ಲಿ ತೊಡಗಿದ್ದಾಗ ಒಮ್ಮೆ ಅಣ್ಣನನ್ನು, ಅರ್ಜುನನ್ನು ಅಷ್ಟೇ ಅಲ್ಲ ಶ್ರೀಕೃಷ್ಣನನ್ನೂ ಹಂಗಿಸುತ್ತಾನೆ.

ಇಂತಹ ಭೀಮ ಉದ್ಧುರುಟನೆನ್ನುವುದು ಸುಲಭ. ಆದರದು ತಪ್ಪು. ತನ್ನ ಮಹಿಮೆಯನ್ನು ತೋರಿದ ಆಂಜನೇಯನ ಮುಂದೆ ಮಾನವಸ್ವಭಾವದ ಅಲ್ಪಬುದ್ಧಿಯನ್ನು ನಿವೇದಿಸಿಕೊಳ್ಳುತ್ತಾ ವಿನಯ ದಿಂದ ನಿಂತುಕೊಂಡಿರುವ ಮಹಾಪ್ರಾಜ್ಞ ಭೀಮನನ್ನು ಕಂಡಾಗ, ಅವನಾಡಿದ ಮಾತನ್ನು ಕೇಳಿದಾಗ ಯಾರಿ ಗಾದರೂ ಗೌರವ ಪ್ರೀತಿ ಬಾರದಿರದು.

'ನೋಡಿದನು, ನಡುಗಿದನು, ಕಂಗಳ ಕೋಡಿಯಲಿ ನೀರೊರೆಯೆ ಹರುಷದ
ರೂಢಿಯಲಿ ಜೊಮ್ಮೆದ್ದು ಮನ ಡೆಂಡಣಿಸಿ ಭೀತಿಯಲಿ
ಬಾಡು ಮೋರೆಯನೆತ್ತಿ ಕೈಗಳ ನೀಡಿ ಕಂಗಳ ಮುಚ್ಚಿ ಮರಳಿದು
ನೋಡಿ ಶಿವಶಿವಾ ಎನುತ ಬೆಚ್ಚಿದನಡಿಗಡಿಗೆ......!'

'ಸಾಕು ಸಾಕಂಜಿದೆನು; ಮನುಜರು ಕಾಕು ಬಲರು, ನಿಜಸ್ವಭಾವವ
ನೇಕೆ ಬಿಡುವೆವು, ತಿಳಿದು ತಿಳಿಯೆವು, ಕಂಡೊಡಂಜುವೆವು!
ಸಾಕು ಪೂರ್ವದ ರೂಪಿನಲೆ ನಿವ್ಯಾ೯ಕುಲನ ಮಾಡೆನಲು ಪವನಜ
ನಾ ಕಪೀಶ್ವರ ನಗುತ ಮುನ್ನಿನ ರೂಪ ಕೈಕೊಂಡ'

ಅರಗಿನರಮನೆಯ ಉರಿಯಿಂದ ತಪ್ಪಿಸಿಕೊಂಡು ತನ್ನವರನ್ನು ಕಾಡಿಗೆ ಎತ್ತಿಕೊಂಡೊಯ್ದು ಮಲಗಿಸಿ ನಿದ್ರಾಭಂಗವಾಗದಂತೆ ಅವರ ಕಾಲೊತ್ತುತ್ತ ಅವರ ಸ್ಥಿತಿಯನ್ನು ನೆನೆದುಕೊಂಡು ಬಿಕ್ಕಿಬಿಕ್ಕಿ ಅಳುವ ಭೀಮನನ್ನು ಅಲ್ಲಿ ಕಾಣಬೇಕು, ಯಾರಿಗಾದರೂ ಎದೆ ಹಿಂಡುತ್ತದೆ.

'ಔಕುವುದು ಬಲುನಿದ್ರೆ, ನಿದ್ರೆಯ ನೂಕುವನು, ಕಣ್ಣೆವೆಗಳಲಿ ನಸು
ತೂಕಡಿಕೆ ತೋರಿದೊಡೆ ಮೈಗೆದರುವನು ಕೈಯೊಡನೆ,
ಸೋಕುವುದು ಮೈಮರವೆ, ಮರವೆಯನೋಕರಿಸುವುದು ಚಿತ್ತವೃತ್ತಿ, ನಿ
ರಾಕುಲಾಂತಃಕರಣನಾದನು ಬಳಿಕ ಕಲಿಭೀಮ',

'ಅನಿಬರಿರವನು ನೋಡಿ ಪೂರ್ವವ
ನೆನೆದು ಬಿರಿದಳುತ ಘನ ಕಾ
ನನದ ಮಧ್ಯದಲೀತನಿದ್ದನು ಹಿರಿದು ಚಿಂತಿಸುತ'

ಮಹಾಭಾರತದಲ್ಲಿ ಅಳದವರೇ ಇಲ್ಲವೆನ್ನಬಹುದು– ಶ್ರೀಕೃಷ್ಣ, ಅಭಿಮನ್ಯು ಹೊರತಾಗಿ! ಆದರೆ ಉಳಿದವರು ಅಳುವುದರಿಂದ ಆಗುವ ಪರಿಣಾಮಕ್ಕೂ ಭೀಮ ತನ್ನವರಿಗಾದ ಅಪದೆಸೆಯನ್ನು ಕಂಡು ಕಾಡಿನಲ್ಲಿ ಒಬ್ಬನೆ ಅಳುವುದಕ್ಕೂ ವ್ಯತ್ಯಾಸವಿದೆ. ಕುಮಾರವ್ಯಾಸನ ಭೀಮ ಇಂತಹವನು–ಸುಮುವಜ್ರಸಮ!"

"ಮಹಾಭಾರತದಲ್ಲೆಲ್ಲಾ ಅತಿಯಾಗಿ ನೊಂದವಳೆಂದರೆ ದ್ರೌಪದಿ ಎಂದೇ ಹೇಳಬೇಕು. ತನ್ನ ಸ್ಥಿತಿ ಯನ್ನು ಆಕೆಯೇ ಹೇಳುತ್ತಾಳೆ:

ಜನನವೇ ಪಾಂಚಾಲ ರಾಯನ ಮನೆ, ಮನೋವಲ್ಲಭರದಾರನೆ
ಮನುಜಗಿನುಜರು ಗಣ್ಯವೇ? ಗೀರ್ವಾಣರಿಂ ಮಿಗಿಲು,
ಎನಗೆ ಬಂದೆಡರೀ ವಿರಾಟನ ವನಿತೆಯರುಗಳ ಮುಡಿಯ ಕಟ್ಟುವ
ತನುವ ತಿಗುರುವ ಕಾಲನೊತ್ತುವ ಕೆಲಸದುತ್ಸಾಹ'

ಪಾಪ! ಕಾಲನೊತ್ತುವ ಕೆಲಸದುತ್ಸಾಹ! ಇಂತಹವಳನ್ನು ಕೇಳಬಲ್ಲವನು ಒಬ್ಬ ಭೀಮ. ಆದರೆ ಅವನ ಶಕ್ತಿಗೂ ಮಿತಿಯುಂಟು. ಅವಳ ದುಃಖಾಗ್ನಿಯನ್ನು ಆರಿಸಲು ಶ್ರೀಕೃಷ್ಣ ಕರುಣಾಮೃತವರ್ಷಕ್ಕೆ ಮಾತ್ರ ಸಾಧ್ಯ. ಶ್ರೀಕೃಷ್ಣ ಅವಳಿಗಾಗಿ ಆಕೆಯ ಪತಿಗಳು ಹಿಂಜರಿದರೆ ತಾನು 'ರಿಪುಗಳ ಸೀಳಿ ಕರುಳ ಮುಡಿಸ ದಿಹೆನೆ ನಿನ್ನ ಕಬರಿಯಲಿ?' ಎಂದು ಶಪಥ ಮಾಡುತ್ತಾನೆ. ಅದಕ್ಕೆ ತಾಯಿತಂದೆಯರ ಮೇಲಾಣೆಯಿಡಲೂ ಹಿಂಜರಿಯ. ಮಹಾಭಾರತದ ಉಳಿದ ಪಾತ್ರಗಳಿಗೆ ದೊರೆತ ಕೃಷ್ಣ ಕರುಣೆ ಒಂದಾದರೆ ಕೃಷ್ಣೆ ಪಡೆದ ಕರುಣೆಯೇ ಒಂದು.

ಕೃಷ್ಣನೇ ಹೇಳುತ್ತಾನೆ ತನ್ನ ಹೃದಯ ಅವಳಿಗಾಗಿ ಹೇಗೆ ಕರಗಿ ಕೋಡಿ ಹರಿದಿದೆ ಎಂಬುದನ್ನು

'ಕಮಲಮುಖಿ ಸುಲಿವಡೆದು ಲಕ್ಷ್ಮೀರಮಣ ಲಕ್ಷ್ಮೀರಮಣ, ಲಕ್ಷ್ಮೀ
ರಮಣಯೆಂದೊರಲಿದೊಡೆ ಸಂಜಯ ನೊಂದೆ ನಾನೆಂದ'

'ಕಾವುದೈ ಗೋವಿಂದ ಸಲಹೈ ದೇವಕೀಸುತ ಗಂಡರೈವರ
ಭಾವ ಬೆಟ್ಟಿತು, ನೀನಲೈ ದೇಸಿಗರ ದೈವವಲೈ,
ದೇವ ಕೆಟ್ಟೆನು ಕೆಟ್ಟೆನೈ ಕರುಣಾವಲಂಬನದಿಂದ ತಡೆಯೈ
ಜೀವನವನೆಂದೊರಲಿದಳು, ಹಂಗಿಗನು ತಾನೆಂದ'

ತನ್ನ ಗಂಡಂದಿರನ್ನು ಅವಹೇಳನ ಮಾಡುವುದನ್ನು ನೋಡಿದಾಗ ಈಕೆಯ ಪಾತ್ರೌನ್ನತ್ಯದಲ್ಲಿ ನಮಗೆ ಶಂಕೆ ಬರುವುದು ಸುಲಭ. ಆದರೆ ಅದರಲ್ಲಿ ಎಷ್ಟು ಸಹಜತೆ, ಅನಿವಾರ್ಯತೆ, ದುರ್ದಮ್ಯತೆ ಇದೆ ಎಂಬುದನ್ನು ಕವಿ ಬಲ್ಲ; ಕೃಷ್ಣ ಬಲ್ಲ.

ಮಹಾಭಾರತದಲ್ಲೆಲ್ಲಾ ಅಗ್ನಿಕನ್ಯೆಯಾಗಿ ಜಾಜ್ವಲ್ಯಮಾನವಾಗಿ ಥಳಥಳಿಸುವ ಈಕೆ ಎಷ್ಟು ಸೌಮ್ಯ ವಾಗಿ ಮುಗ್ಧವಾಗಿ ತೋರುತ್ತಾಳೆ, ಆ ತನ್ನ ಸ್ವಯಂವರ ಮಂಟಪದಲ್ಲಿ! ಕೃಷ್ಣನನ್ನು ಅಣ್ಣ ಧೃಷ್ಟದ್ಯುಮ್ನ ಪರಿಚಯಮಾಡಿಕೊಟ್ಟಾಗ ಮೊಟ್ಟಮೊದಲು ಅವನಲ್ಲಿ ಆಕೆ ಕಂಡು ತೋರಿದ ಭಾವವೇ ಭಾವ!

'ಎನಲು ಭಕುತಿಯ ಭಾವರಸದಲಿ ನೆನೆದು ಹೊಂಪುಳಿಯೋಗಿ ರೋಮಾಂ
ಚನದ ಮೈಯುಬ್ಬಿನಲಿ ತನು ಪುಳಕಾಂಬು ಪೂರದಲಿ,
ಮನದೊಳಗೆ ವಂದಿಸಿದಳೆನಗೀತನಲಿ ಗುರುಭಾವನೆಯ ಮತಿ ಸಂ
ಜನಿಸಿತೇನೆಂದರಿಯೆನೆಂದಳು ಕಮಲಮುಖಿ ನಗುತ!'

ಭಾರತಾಂತ್ಯದಲ್ಲಿ, ತನ್ನೈವರು ಮಕ್ಕಳನ್ನು ಕಳೆದುಕೊಂಡು ವಿಹ್ವಲಳಾಗಿದ್ದ ಈಕೆ, ತನ್ನ ಕುಮಾರರನ್ನು ಕೊಂದ ಅಶ್ವತ್ಥಾಮನನ್ನು ಕೊಲ್ಲಲೆಂದು ಮುನ್ನುಗ್ಗುವ ಅರ್ಜುನ ಭೀಮರನ್ನು ತಡೆಯುವಾಗ ಆಡುವ ಮಾತನ್ನು ನೋಡಿ:

ಬಂದಳಾ ದ್ರೌಪದಿಯಹಹ ಗುರು ನಂದನನ ಕೊಲಬಾರದಕಟೀ
ನಂದನರ ಮರಣದ ಮಹಾವ್ಯಥೆಯೀತನಳಿವಿನಲಿ
ಕೊಂದುಕೂಗದೆ ಕೃಪೆಯನಬಲಾ ವೃಂದ ಸಮಸುಖಿ ದುಃಖಿಗಳು ಸಾ
ರೆಂದು ಭೀಮಾರ್ಜುನರ ತೆಗೆದಳು ಬಳಿಕ ಪಾಂಚಾಲಿ!'

ಭೀಮಾರ್ಜುನರು ತಪ್ಪಿ ನಡೆಯುವಾಗಲೂ ಇವಳು ತನ್ನೆಲ್ಲ ಮಕ್ಕಳನ್ನು ಕಳೆದುಕೊಂಡೂ ತೋರಿದ ಸಂಯಮ ಎಂಥ ಘನವಾದುದು!"

"ಧರ್ಮರಾಜ ಭಾರತದ ನಾಯಕನಾಗಿದ್ದರೂ ಶ್ರೀಕೃಷ್ಣನ ಅತಿಮಾನುಷ ಶಕ್ತಿಯಲ್ಲಿ ತನ್ನ ನಾಯಕತ್ವವನ್ನು ನಿವೇದಿಸಿಕೊಂಡಿರುವಂತೆ ಕಾಣುತ್ತಾನೆ. 'ಧರ್ಮಕ್ಷಮೆಯ ಗರ ಹೊಡೆದಿಹುದು' ಎಂದು ದ್ರೌಪದಿ ಕೋಪಿಸುವಷ್ಟುಮಟ್ಟಿಗೆ ಅವನು ಧರ್ಮಪ್ರಜ್ಞಾವಂತ. ಭೀಮನ ಪ್ರಾಕೃತಿಕ ಶಕ್ತಿಯನ್ನಾಗಲಿ, ಅರ್ಜುನನ ಲೋಕೈಕ ವೀರವನ್ನಾಗಲಿ ಬಹಳಮಟ್ಟಿಗೆ ಪ್ರದರ್ಶಿಸದಿರುವುದರಿಂದ ಇವನು ಒಮ್ಮೊಮ್ಮೆ ಸಪ್ಪೆಯಾಗಿ ತೋರಿದರೂ ತೋರಬಹುದು".

"ಭೀಷ್ಮ ದ್ರೋಣರು ಮಹಾಭಾರತದ ವೃದ್ಧರು: ಜ್ಞಾನದಿಂದ, ವಯಸ್ಸಿನಿಂದ. ಇಂತಹವರು ಏನು ಕರ್ಮದಿಂದಲೋ ಏನೋ ತಮಗಿಂತಲೂ ಬಹು ಕಿರಿಯರಾದ ಮಕ್ಕಳ ಮಧ್ಯದಲ್ಲಿ ಸಿಲುಕಿಕೊಂಡು ಬದುಕಬೇಕಾಗುತ್ತದೆ. ಅವರು ತಮ್ಮ ಸಮೃದ್ಧ ವೃದ್ಧಜ್ಞಾನವು ನಿರ್ದೇಶಿಸಿದಂತೆ ನಡೆಯಬೇಕೆಂದರೆ ತಿಂದ ಉಪ್ಪಿಗೆ ತಪ್ಪಬಾರದೆಂಬ ಸಂಕಟ ಬರುತ್ತದೆ. ಹೀಗಾಗಿ ಮಹಾಪುರಾತನ ವಟವೃಕ್ಷಗಳಂತಿದ್ದ ಈ ಮಹಾಚೇತನಗಳು ಸಣ್ಣಸಣ್ಣವರ ಬಿದಿರುಗಿಚ್ಚಿಗೆ ಮೇಹುಗಾಡಾದ ಮಹಾದಾರುಣ ಸನ್ನಿವೇಶವನ್ನು ಮಹಾಭಾರತದಲ್ಲಿ ನೋಡುತ್ತೇವೆ. ಆತ್ಮ ಸಂಯಮಕ್ಕೆ ಹೆಸರುವಾಸಿಯಾದ ಭೀಷ್ಮರು ದ್ರೋಣರಿಗಿಂತ ಜ್ಞಾನ ವಯೋವೃದ್ಧರೆಂಬುದರಲ್ಲಿ ಸಂಶಯವಿಲ್ಲ. ಕುಮಾರವ್ಯಾಸನಲ್ಲಿ ಈ ಇಬ್ಬರೂ ಶ್ರೀಕೃಷ್ಣಭಕ್ತರಾಗಿದ್ದರೂ ಆ ಭಗವದ್ ಶಕ್ತಿಯನ್ನು ಪೂರ್ಣವಾಗಿ ಕಂಡುಂಡವರು ಭೀಷ್ಮರೆ. ಕೈದು ಹಿಡಿಯುವುದಿಲ್ಲವೆಂದ ಭಗವಂತನ ಕೈಯಲ್ಲಿ ಪ್ರಲಯ ಭಯಂಕರ ಚಕ್ರಧಾರಣಮಾಡಿಸಿ ಅವನನ್ನು ಆಡಿಸಿ ನಿಳಿಸಿ ನೋಡುವ ಮಹಾಶಕ್ತರು. ಅವರು. ಶ್ರೀ ಶಂಕರನ ಪ್ರಲಯ ಭಯಂಕರ ಫಾಲನೇತ್ರದೊಡನೆ ಭಕ್ತಿಯ ಚಕ್ಕಂದವಾಡಿ ಬದುಕಬಲ್ಲವರು! ಕವಿ ಕುಮಾರವ್ಯಾಸ ಹೇಳುತ್ತಾನೆ, ಅವರು ತಾಯಿ ಜಾಹ್ನವಿಯ ಮೊಲೆವಾಲನುಂಡವರು ಎಂದು! ಇಂತಹವರ ಪಾತ್ರ ಕುಮಾರವ್ಯಾಸನಲ್ಲಿ ಒಮ್ಮೊಮ್ಮೆ ತೋಲ ತಪ್ಪುವುದುಂಟು. ಅವನ್ನು ಶಕ್ತ್ಯಾಧಿಕ್ಯದ ಸಹಜ ದೋಷಗಳೆಂದು ಮರೆತರೆ ಉಳಿದಂತೆ ಇವರ ಪಾತ್ರ ಗಂಭೀರ ಭೀಷ್ಮವಾಗಿದೆ.

ಈ ಮಹಾನುಭಾವ ಶರಶಯ್ಯೆಗೇರಿದಾಗ ಮಹಾಕವಿ ಒಂದು ಮಾತನ್ನು ಹೇಳುತ್ತಾನೆ: 'ಪಡುವಣ ಶೈಲ ವಿಪುಲಸ್ತಂಭ ದೀಪಿಕೆಯಂತೆ ರವಿ ಮೆರೆದ' ಎಂದು. ಮಹಾಪುರುಷನ ಮರಣವನ್ನು ಆಚರಿಸಲು ಪ್ರಕೃತಿದೇವಿ ಪಶ್ಚಿಮಾಚಲ ವಿಪುಲಸ್ತಂಭದಮೇಲೆ ರವಿದೀಪಿಕೆಯನ್ನು ಹೊತ್ತಿಸಿಡುತ್ತಾಳೆ. ಧ್ಯಾನಗೋಚರವಾಗುವ ದಿವ್ಯತೆಯನ್ನು ಈ ಮಾತಿನಲ್ಲಿ ಕವಿ ಕಂಡಿದ್ದಾನೆ".

"ದ್ರೋಣಾಚಾರ್ಯರು ಈ ಬೆಳಕಿನಲ್ಲಿ ಪ್ರಕಾಶಮಾನವಾಗಿ ಕಾಣದಿದ್ದರೂ ಮಹಾ ತೇಜಸ್ವಿಗಳೇ ಅಹುದು. ಕುಮಾರವ್ಯಾಸ ಈ ಮಹಾವ್ಯಕ್ತಿಯ ಅಂತ್ಯವನ್ನು ದರ್ಶನಧ್ವನಿ ದೀಪ್ತವಾಗುವಂತೆ ಚಿತ್ರಿಸಿದ್ದಾನೆ. ಪ್ರಲಯ ಭೈರವರಾಗಿ ಯುದ್ಧಮಾಡುತ್ತಿರುವಾಗ ಸಪ್ತರ್ಷಿಗಳು ಜ್ಞಾನಗೋಚರವಾಗಿ ಅವರನು

ಎಚ್ಚರಿಸುವುದು, ಅವರು ಕಣ್ಮರೆಯಾದೊಡನೆಯೇ ಅವರು ಕಂಡ ಅರಿವು ಮರೆಯಾಗಿ ಮಾಯಾವರಣ ವಶಿಯಾಗಿ ಯುದ್ಧಭಯಂಕರರಾಗುವುದು, ಮತ್ತೆ ಅರಿವು, ಅನಂತರ ಪುತ್ರವ್ಯಾಮೋಹ, ಆಮೇಲೆ ವೈರಾಗ್ಯ, ನಿರ್ಯಾಣ–ಈ ಚಿತ್ರವಷ್ಟೇ ಸಾಕು, ಭಿನ್ನಭಿನ್ನಾವಸ್ಥೆಯಲ್ಲಿ ಮಾನವಚೇತನ ಹೇಗೆ ವರ್ತಿಸುತ್ತದೆ ಎಂಬುದನ್ನು ತಿಳಿಸಲು. ಆದರ ಜೊತೆಗೆ, ಭಗವದ್‌ಶಕ್ತಿ ತನ್ನ ಕೆಲಸವನ್ನು ಮಾಡಲು ಅನುಸಂಧಾನ ಮಾಡುವ ವಿಚಿತ್ರ ತಮ ರಹಸ್ಯ ಮಾರ್ಗವನ್ನಲ್ಲಿ ಕಾಣುತ್ತೇವೆ. ಭೀಷ್ಮರನ್ನು ಶ್ರೀಕೃಷ್ಣ ಒಂದು ಬಗೆಯಾಗಿ ಧರ್ಮ ವಾತ್ಸಲ ದಿಂದ ಗೆದ್ದರೆ ಇವರನ್ನು ಬೇರೊಂದು ಬಗೆಯಿಂದ–ಅವರೊಳಗಿನ ಪರಮಧರ್ಮ ಪ್ರಜ್ಞೆಯ ಜಾಗೃತಿಯ ಮೂಲಕ ಗೆಲ್ಲುವುದನ್ನಿಲ್ಲಿ ಕಾಣುತ್ತೇವೆ".

"ಪ್ರಸಿದ್ಧರಾದ ಖಳಚತುಷ್ಟಯದ ಪ್ರಧಾನರೆಂದರೆ ಕರ್ಣಕೌರವರು. ವ್ಯಾಸರು ಈ ವ್ಯಕ್ತಿಗಳನು ಅತಿ ದೂಷಿಸದೆ ಅತಿ ಪ್ರೀತಿಸದೆ ಚಿತ್ರಿಸಿಕೊಂಡು ಹೋಗಿದ್ದಾರೆ. ಮುಂದೆ ಬಂದ ಭಾಸ, ಪಂಪ ಹಾಗೂ ಆತನ ಪ್ರಭಾವದಲ್ಲಿ ಬೆಳೆದ ರನ್ನ ಇವರನ್ನು ಉದಾತ್ತೀಕರಿಸಿ ತೋರಿಸಿದ್ದಾರೆ. ಈ ಉದಾತ್ತೀಕರಣ ಮೂಲಾಂಶ ವನ್ನು ಮರೆಮಾಚುವಷ್ಟಾಗಬಾರದೆಂಬುದನ್ನು ಅವರೇನು ಮರೆತಿಲ್ಲ. ಕುಮಾರವ್ಯಾಸ ಕಥಾ ದೃಷ್ಟಿಯಿಂದ ವ್ಯಾಸರನ್ನು ಅನುಸರಿಸಿದ್ದರೂ ತನ್ನದೇ ಆದ ಭಾಗವತ ಪ್ರಜ್ಞೆಯ ದಿವ್ಯಪ್ರಭಾವದಿಂದ ಈ ವ್ಯಕ್ತಿಗಳನ್ನು ನೋಡಿರುವ ರೀತಿ ವಿಶಿಷ್ಟವಾಗಿದೆ. 'ಸೆಣಸು ಸೇರದ ದೇವ' ನನ್ನು ಕೆಣಕಿ ಬದುಕುವ ಸಾಹಸ, ತನ್ನ ಅಹಂಕಾರಕ್ಕೆ ಬಗೆಬಗೆಯಾಗಿ ಧಕ್ಕೆತಂದ ಪಾಂಡವರಿಗೆ ಒಂದಂಗುಲ ನೆಲವನ್ನೂ ಕೊಡುವುದಿಲ್ಲವೆಂಬ—ತೊಡೆಯುಡಿದು ಬಿದ್ದಾಗಲೂ ತನ್ನ ಭೂಮಿಯನ್ನು ತನ್ನ ವೈರಿಗಳಿಗೆ ಬಿಡೆನೆಂಬ–ಛಲ ಸುಯೋಧನನದು. ಕುಮಾರವ್ಯಾಸನ ಕೌರವ ಒಮ್ಮೊಮ್ಮೆ ಅನನ್ಯ ಸಾಧಾರಣವಾಗಿಯೇ ಅಭಿನಯಿಸಿದ್ದಾನೆ. ಕರ್ಣನ ಪಾತ್ರದ ದುರಂತತೆ ಹುಟ್ಟಿನಲ್ಲೆ ಅಡಗಿರುವಂತೆ ಕೌರವರ ದುರಂತತೆ ಹುಟ್ಟಿನಲ್ಲೆ ಅಡಗಿದೆಯೆಂಬ ಅಂಶವನ್ನು ಬಹು ಮನೋಜ್ಞವಾಗಿ ಮಹಾಭಾರತವೇ ಧ್ವನಿಸಿದೆ. ತನ್ನ ಓರಗಿತ್ತಿಗೆ ಮಕ್ಕಳಾಗಿ ತನಗಿನ್ನೂ ಮಕ್ಕಳಾಗಲಿಲ್ಲವೆಂದು ತನ್ನ ಬಸಿರನ್ನು–ವ್ಯಾಸ ಮಂತ್ರೋದಕ ಪೂತವಾದ ಗರ್ಭವನ್ನು ಗಾಂಧಾರಿ ಹೊಸೆದುಕೊಳ್ಳುತ್ತಾಳೆ. ಮಾತ್ಸರ್ಯದಿಂದ, ಅಕಾಲ ದಲ್ಲಾದ ಗರ್ಭಸ್ರಾವದಿಂದ ಬಂದ ಮಕ್ಕಳು ಮತ್ತೆಂತಹವರಾಗುತ್ತಾರೆ, ಜ್ಞಾತಿ ಮತ್ಸರರಾಗದೆ? ಕನ್ಯತಾ ಮುಗ್ಧತೆಯಿಂದ ಅರಿಯದೆ ಕುಂತಿ ಮಾಡಿದ ತಪ್ಪಿಗಾಗಿ ಕರ್ಣನ ಬದುಕು ಉದಾರ ಧೀರ ರಮಣೀಯ ವಾದರೂ ದುಃಖಮಯವಾಯಿತು. ಆದರೆ ತಾಯಿಯ ಹೊಟ್ಟೆಯುರಿಯಿಂದ, ಗರ್ಭಪಾತದಿಂದ ಸಿದ್ಧಿ ಪೂರ್ವದಲ್ಲಿ ಭಗ್ನಸಿದ್ಧರಾಗಿ ಹುಟ್ಟಿದ ಕೌರವರು ಶಕ್ತರಾದರೂ ಪತಿತರಾದರು. ಮಹಾಭಾರತ ಈ ಮಹಾ ಪತನವನ್ನು ಚಿತ್ರಿಸಿದೆ.

"ಕೌರವನಿಗೆ ಪಾಂಡವರಲ್ಲಿದ್ದ ಸಹಜ ವೈರಕ್ಕೆ ಪೋಷಕವಾಗುವಂತಹ ನಾಲ್ಕಾರು ಸನ್ನಿವೇಶಗಳನ್ನು ಕುಮಾರವ್ಯಾಸ ಬಹು ಸುಂದರವಾಗಿ ಚಿತ್ರಿಸಿದ್ದಾನೆ. ಚಿಕ್ಕಂದಿನಲ್ಲಿ ಭೀಮನ ಕೋಟಲೆಯಿಂದ ಹೊತ್ತಿಕೊಂಡ ಒಳಗಿದ್ದ ವೈರ, ದ್ರೌಪದೀ ಸ್ವಯಂವರದಲ್ಲಾದ ಪರಿಭವದಿಂದ, ರಾಜಸೂಯದಲ್ಲಾದ ನೂರಾರುಬಗೆಯ ಅಹಂಭಂಗ ಮಾನಭಂಗಗಳಿಂದ, ಚಿತ್ರಸೇನ ಪ್ರಸಂಗದಲ್ಲಾದ ಆತ್ಮಹತ್ಯಾಕಾರಿಯಾದ ಭಯಂಕರ ಅಪಮಾನ ದಿಂದ ದುರ್ದಮ್ಯವಾದ ವಂಶನಾಶಕ ಹಾಗೂ ಆತ್ಮನಾಶಕವಾದ ದಾವಾನಲನಾಗಿ ವೃದ್ಧಿಯಾಗುವುದನ್ನು ಕವಿ ಕುಮಾರವ್ಯಾಸ ಚಿತ್ರಿಸಿದ್ದಾನೆ. (ಇಲ್ಲಿ ಕೆಲವು ಕಡೆ ಕೌರವನಿಗಾಗಿ ಮರುಕಪಡುತ್ತೇವೆ.) ಇಂತಹ ವೈರಕ್ಕೆ ಸಹಜ ಛಲ ಪುಟವಿಡುತ್ತದೆ; ಕೃಷ್ಣ ಅದಕ್ಕೆ ಹದಗೊಡುತ್ತಾನೆ. ಇದಕ್ಕೆ ಕೃಷ್ಣ ರಾಯಭಾರ ಪ್ರಸಂಗವೆ

ಸಾಕು ಸಾಕ್ಷಿ. ಕೌರವನಿಗೆ ಆಗೊಮ್ಮೆ ಕೃಷ್ಣನ ಚಾಲನ ಮಂತ್ರ ಕಂಡಿತು. ರಾಜಸಭೆಯಲ್ಲಿ ಎಲ್ಲರಿಗೂ ವಿಶ್ವ ರೂಪವನ್ನು ತೋರಿ ತನಗೆ ಮರೆಮಾಡಿದ–ಅವನೂ ಕಂಡಿದ್ದರೇನಾಗುತ್ತಿತ್ತೊ, ಹೇಳುವರಾರು?–ಶ್ರೀಕೃಷ್ಣನ ಮಾಯಾಜಾಲವನ್ನರಿತು ಹೇಳುತ್ತಾನೆ ಕೌರವ:

'ಎನ್ನ ಹೃದಯದೊಳಿರ್ದು ಮುರಿವನು ಗನ್ನದಲಿ ಸಂಧಿಯನು; ರಿಪುಗಳೊ
ಳಿನ್ನು ತನ್ನವರವರೊಳಿರ್ದಾ ಹದನನಾಡಿಸುವ;
ಭಿನ್ನನಂತಿರೆ ತೋರಿ ಭಿನ್ನಾಭಿನ್ನನೆನಿಸಿಯೆ ಮೆರೆವ, ತಿಳಿಯಲ
ಭಿನ್ನನೀ ಮುರವೈರಿ, ನಾವಿನ್ನಂಜಲೇಕೆಂದ!'

ಮತ್ತೆ ಕೇಳಿ:

ಮಣಿದು ಬದುಕುವನಲ್ಲ, ಹಗೆಯಲಿ ಸೆಣಸಿ ಬಿಡುವವನಲ್ಲ, ಬಿಟ್ಟ ಧಾ
ರುಣಿಯ ಸಿರಿಗೆಳಸುವನಲ್ಲಳುಕಿಲ್ಲ ಕಾಯದಲಿ!
ರಣಮಹೋತ್ಸವವೆನ್ನ ಮತ, ಕೈ ದಣಿಯೆ ಹೊಯ್ದಾಡುವೆನು ಕೃಷ್ಣನ
ಕೆಣಕಿದಲ್ಲದೆ ವಹಿಲದಲಿ ಕೈವಲ ವಿಲ್ಲೆಂದ!'

"ಇದಲ್ಲವೆ ರೀತಿ! ಕೃಷ್ಣಮಾಯೆಯನ್ನರಿತೂ ಅದನ್ನು ಎದುರಿಸುವ ಛಲ! ನಾಟಕದ ನಟನಾದವನು ತನ್ನ ಮುನ್ನಿನ ಸ್ವರೂಪವನ್ನೂ ತನ್ನ ಸೂತ್ರಧಾರಿಯನ್ನೂ ಮರೆತಂತೆ ಅಭಿನಯಿಸಬೇಕಾದರೂ ಒಮ್ಮೊಮ್ಮೆ ಅದು ಸ್ಮೃತಿಪಟಲದ ಮೇಲೆ ಹಾಯ್ದು ಹೋಗುವುದುಂಟು. ತಲ್ಲೀನತೆಯಿಂದ ಅಪಾಯವಾದರೆ ಈ ಬಗೆಯ ಅತಿ ಎಚ್ಚರದಿಂದ ರಸಾಭಾಸವುಂಟಾಗಬಹುದು, ಇಲ್ಲ ರಸಭಂಗವಾದರೂ ಆಗಬಹುದು. ಇವೆರಡರ ಅಂದರೆ ಎಚ್ಚರ ಮರವೆಗಳ, ಮಧ್ಯೆಯಿದ್ದು ರಸೋತ್ಕರ್ಷಮಾಡುವ ನಟನೆ ನಟ. ಕುಮಾರವ್ಯಾಸನ ಕೌರವ ಅಂತಹವನು. ಕೃಷ್ಣನೊಡನೆ ಸೆಣಸುತ್ತಾನೆ–ರಾಜ್ಯಕ್ಕಾಗಿಯಲ್ಲ, ಕೈವಲ್ಯಕ್ಕಾಗಿ. ಹಾಗೆ ಕೈದಣಿಯೆಹೊಯ್ದಾಡಿ ಸೆಣಸಾಡುವುದರಲ್ಲಿಯೆ ಮಹೋತ್ಸವವುಂಟಂತೆ. ಕೌರವ ಪಾಂಡವರನ್ನು ಕೆಣಕಿ ಛಲಗಾರ, ಅಭಿಮಾನಿ, ರಾಜ್ಯಕಾಮಿ ಎನಿಸಿಕೊಂಡಂತೆಯೆ ಕೃಷ್ಣನನ್ನು ಕೆಣಕಿ ಕೈವಲ್ಯಕಾಮಿಯೆನಿಸಿಕೊಳ್ಳುತ್ತಾನೆ. ಇಂತಹವನು ಮಡಿದಾಗ ಕವಿ ಹೇಳುತ್ತಾನೆ 'ರುಧಿರದ ತಿಲಕನಾದನಲ್ಲೆ ಧರಾಂಗನೆಗೆ', ಎಂದು. ಈ ಒಂದು ರೂಪಕ ಕೌರವನ ಪಾತ್ರವನ್ನೆ ತೆಕ್ಕನೆ ಮೇಲೊಯ್ಯುತ್ತದೆ".

"ಈ ಕೌರವ ಕರ್ಣರ ಪ್ರೇಮ ಮಹಾಭಾರತವನ್ನೆಲ್ಲಾ ಬಿಗಿದಪ್ಪಿತಲ್ಲ! ಏನಾದರೂ ಆ ಬಿಗಿತಕ್ಕೆ ಧಕ್ಕೆ ಬಂದಿದ್ದರೇನಾಗುತ್ತಿತ್ತು? ಅರ್ಜುನ ಕೃಷ್ಣರ ಪ್ರೇಮ ಒಂದು ಕಡೆ, ಕೌರವ ಕರ್ಣರ ಪ್ರೇಮ ಮತ್ತೊಂದು ಕಡೆ. ಯಾವುದು ಹೆಚ್ಚು, ಯಾವುದು ಶ್ರೇಷ್ಠ, ಯಾರು ಹೇಳಬಲ್ಲರು? ಕರ್ಣನ ಜೀವಿತಕ್ಕೆ ಕೌರವ ದೊರೆತದ್ದು ಒಂದು ವಿಚಿತ್ರಯೋಗ. ಆದರೆ ಕೃಷ್ಣಾರ್ಜುನರ ಸ್ನೇಹಕ್ಕೆ ಅಘಟಿತವಾದುದೇನೂ ನಡೆಯಬೇಕಾಗಿರಲಿಲ್ಲ. ಹುಟ್ಟಿನಿಂದ ಸಂಬಂಧಿಗಳು; ಹುಟ್ಟಿಗಿಂತ ಹಿಂದೆ ಹೋದರೂ ನರನಾರಾಯಣರಾಗಿ ಸಂಬಂಧಿಗಳು. ಆದರೆ ಕ್ಷತ್ರಿಯ ತಿರಸ್ಕೃತನಾದ, ಗುರುತಿರಸ್ಕೃತನಾದ ಕರ್ಣನನ್ನು ಪ್ರೀತಿಸಲು ಕೌರವನಿಗೇನು ಪ್ರಬಲ ಕಾರಣವಿತ್ತು? ಪಾಂಡವರ ದ್ವೇಷ, ಗುರುಹಿರಿಯರ ತಿರಸ್ಕಾರಗಳಿಗೆ ಪಕ್ಕಾಗಿದ್ದ ಅವನಿಗೆ ಯಾರಾದರೊಬ್ಬರು ಸತ್ವಯುತರ ಗೆಳೆತನ ಬೇಕಿತ್ತು. ಕರ್ಣನಲ್ಲಿ ಆ ಗೆಳೆತನ ಸಿಕ್ಕಿತು. ಜೊತೆಗೆ ಸನ್ನಿವೇಶ ಬೇರೆ ಹಾಗೆಯೆ ಕೂಡಿಬಂತು. ಶಸ್ತ್ರ

ಪ್ರದರ್ಶನಕ್ಕೆ ಯೋಗ್ಯನಲ್ಲವೆಂದು ಗುರುವೆ ಮೊದಲಾದವರೆಲ್ಲ ಧಿಕ್ಕಾರಮಾಡಿದಾಗ, ಬಹಿರಂಗವಾಗಿ, ನಿಷ್ಕಾರಣ ವಾಗಿ ಅವಮಾನಿತನಾದ ರವಿಕುಮಾರನ ಭಾಗ್ಯಕ್ಕೆ ದೈವವಾಗಿ, ಮಾನವಾಗಿ ರಕ್ಷೆಯಾಗಿ ಬರುತ್ತಾನೆ ಕೌರವ. ಅವನ ಆ ಪ್ರೀತಿಗೆ ಪಾಂಡವರ ದ್ವೇಷವೆಷ್ಟು ಕಾರಣ, ಕರ್ಣವಿಷಯವಾದ ನಿರ್ವ್ಯಾಜ ಪ್ರೀತಿಯೆಷ್ಟು ಕಾರಣ ಎಂದು ಯೋಚಿಸಿದರೆ ಆಶ್ಚರ್ಯವಾಗಬಹುದು". "ದುರ್ಯೋಧನನ ಸ್ನೇಹ ಸ್ವಲ್ಪ ಸ್ವಾರ್ಥ ಕಲುಷಿತವಾದದ್ದು; ಕರ್ಣನದು ನಿರ್ಮಲವಾದದ್ದು, ಪ್ರಗಾಢವಾದದ್ದು, ಪ್ರಾಣಾರ್ಪಣೆಯನ್ನು ಮಾಡಿಸುವಷ್ಟು ಮಹಿಮೆ ಯುಳ್ಳದ್ದು. ಆ ಸ್ನೇಹ ಭಗವದ್‌ಭಕ್ತಿಗೆ ಸಮಾನವಾದದ್ದು. ತನ್ನ ಸ್ವಾಮಿ ಎಂತಾದರೂ ವರ್ತಿಸಲಿ, ಅವನು ತನ್ನ ಸ್ನೇಹಧರ್ಮವನ್ನು ಮರೆಯಲಿಲ್ಲ. ಅದೆಷ್ಟು ಬಗೆಯಾಗಿ, ತನ್ನ ಸ್ವಾಮಿಗಾಗಿ ಸ್ನೇಹಚೋದಿತನಾಗಿ ಮರುಗಿದನೊ. ಇದನ್ನು ಕುರಿತ ಅವನ ಹೃತ್‌ಸಂವಾದಗಳು ಕರುಣಾಪೂರ್ಣ ಕಲಶಗಳು. ನಾರಣಪ್ಪನ ಪ್ರತಿಭೆಯ ಗಂಗೆ ಆ ಅಕ್ಷಯ ಕಲಶವನ್ನು ಸದಾ ತುಂಬುತ್ತಿರುತ್ತದೆ. ಕರ್ಣ ಮಡಿದರೂ ಆ ಕಲಶ ಉಕ್ಕು ತ್ತಿರುತ್ತದೆ".

"ಒಟ್ಟಿನಲ್ಲಿ ಕರ್ಣಸುಯೋಧನರ ಸ್ನೇಹಬಂಧನ ಮಹಾಭಾರತವೆಲ್ಲವನ್ನೂ ವ್ಯಾಪಿಸಿ ಆವರಿಸಿದೆ. ತಾನು ಪಾಂಡವನೆಂದು ತಿಳಿದ ಮೇಲೆ ಧರ್ಮಸಂಕಟಕ್ಕೆ ಒಳಗಾದ ಕರ್ಣ ಕೌರವನನ್ನು ಬಿಟ್ಟು ಅವರ ಪಕ್ಷಕ್ಕೆ ಸೇರುವುದಿರಲಿ, ತಾನು ಪಾಂಡವರ ಹಿರಿಯ ಎಂಬುದೆ ಯಾರಿಗೂ ತಿಳಿಯದ ಹಾಗೆ ವರ್ತಿಸುತ್ತಾನೆ— ಕೌರವ ಪ್ರೀತಿಗಾಗಿ. ಅವನು ಅಷ್ಟು ಮಾಡದಿದ್ದರೆ, ಇಲ್ಲವೆ ಪಾಂಡವರಿಗೆ ತನ್ನ ಜನ್ಮವೃತ್ತಾಂತ ತಿಳಿಯುವಂತೆ ಮಾಡಿದ್ದರೆ ಏನಾಗುತ್ತಿತ್ತೊ? ಯುದ್ಧ ನಿಲ್ಲುತ್ತಿತ್ತೊ? ಇರಬಹುದು. ಆದರೆ ತನ್ನ ಸ್ವಾಮಿ, ತನ್ನನ್ನು ಸಾಕಿದ ಪ್ರಿಯಮಿತ್ರ ಕೌರವಸ್ವಾಮಿ, ಛಲಕ್ಕಾಗಿ ಬದುಕಿ ಸೆಣಸಿದಲ್ಲದೆ ಮಣಿದು ಬದುಕುವುದಿಲ್ಲವೆಂದು ಪಣ ಗೊಂಡಿದ್ದ ಸುಯೋಧನ ಏನಾಗುತ್ತಿದ್ದ? ಹೇಳುವುದು ಕಷ್ಟ. ಎಂತಹ ಮಹಾನಿಷ್ಠುರತ್ಯಾಗ! ನಮಗೆ ತಿಳಿದಿರುವ ಕರ್ಣ ಬರಿಯ ದಾನವೀರ; ಆದರೆ ಈ ತ್ಯಾಗವೀರನನ್ನೂ ತಿಳಿಯಬೇಕು. ಅವನ ಮಹಾತ್ಯಾಗ ತನಗಾಗಿಯಲ್ಲದೆ ಕೌರವನಿಗಾಗಿ ಅಳುತ್ತದೆ; 'ಬಾಳಲರಿಯದೆ ಕೆಟ್ಟನೋ ಕೌರವನು' ಎಂದು ಅವನಿಗಾಗಿ ಮರುಗುತ್ತದೆ. ಕೌರವನೊಡನೆ ಸಂಧಾನದ ಮಾತನ್ನಾಡೆಂದು ಶ್ರೀಕೃಷ್ಣನೆ ಸೂಚಿಸಿದಾಗಲೂ ಸ್ನೇಹಬಂಧಿತ ನಾಗಿ, ವಿಧಿಬಂಧಿತನಾಗಿ ಕರ್ಣ ಸುಮ್ಮನಾಗುತ್ತಾನೆ.

"ಕುಮಾರವ್ಯಾಸನ ಕರ್ಣನ ಜೀವನದಲ್ಲಿ ಶ್ರೀಕೃಷ್ಣ ಪರಿಣಾಮಕಾರಿಯಾದ ಶಕ್ತಿಯಾಗಿ ವರ್ತಿಸು ತ್ತಾನೆ. ಶ್ರೀಕೃಷ್ಣ ಯಾರು ಏನು ಎಂಬುದನ್ನು ಕರ್ಣ ಚೆನ್ನಾಗಿ ಬಲ್ಲ. ಆದರೂ ಸ್ನೇಹಬಂಧಿತನಾಗಿ, ವಿಧಿ ಚಾಲಿತನಾಗಿ ಬಾಯಿಕಟ್ಟಿಕೊಂಡವನಂತೆ ಇರುತ್ತಾನೆ. ಕುಮಾರವ್ಯಾಸ ಕರ್ಣನ ಮೇಲಾದ ಶ್ರೀಕೃಷ್ಣನ ಪ್ರಭಾವವನ್ನು ಅದ್ಭುತವಾಗಿ ಚಿತ್ರಿಸಿದ್ದಾನೆ. ಆದಿಪರ್ವದಲ್ಲಿ ಶಸ್ತ್ರಪ್ರದರ್ಶನ ಸನ್ನಿವೇಶದಲ್ಲಿ ಕರ್ಣನನ್ನು ಕಂಡ ಕುಂತಿಗೆ ತಾಯ್ತನದ ನೆನಪಾಗಿ ಅದನ್ನು ಹೇಳಬೇಕೆಂದಾಗ 'ವಿಷ್ಣುಮಾಯೆ' ಹಾಗಾಗದಂತೆ ಮಾಡು ತ್ತದಂತೆ. 'ಎನ್ನ ಮಗನೆನೆ ಬಂದುದಿಲ್ಲದು, ತನ್ನ ವಶವೇ ವಿಷ್ಣುಮಾಯೆಯ ಬಿನ್ನಣವಲೇ; ಮಾತು ಬಿಗಿದುದು, ಮನವನೊಳಗಿಕ್ಕಿ ತನ್ನ ತಾನೇ ಮರುಗಿ ಮೂರ್ಛಾಪನ್ನೆಯಾದಳು ಕುಂತಿ!' (ವ್ಯಾಸರಲ್ಲಿ ಈ ಸನ್ನಿವೇಶ ಚಿತ್ರಣ ಬಂದರೂ ಅದರಲ್ಲಿ ಕೃಷ್ಣಮಾಯಾಕಲ್ಪನೆಯಿಲ್ಲ.) ಮುಂದೆಲ್ಲ ಹೀಗೆಯೆ ಕೃಷ್ಣಮಾಯೆ ಬೀಸಾಟ ವಾಡಿದೆ". "ಕರ್ಣನ ಬದುಕು ಆ ಕೃಷ್ಣಮಾಯೆಗೆ ವಶವರ್ತಿಯಾಗಿಯೇ ಮುಂದುವರಿಯಿತು; ಅವನ ಜನ್ಮವೂ ಆ ಮಾಯೆಯ ಪ್ರಭಾವಕ್ಕೆ ಅಧೀನ. ಅದರ ಹೊಣೆಗಾರಿಕೆಗೆ ಕುಂತಿ ನಿಮಿತ್ತಮಾತ್ರ".

"ಕರ್ಣಾವಸಾನದ ಪ್ರಸಂಗದಲ್ಲಿ ಅರ್ಜುನನಿಗಾದ ಅದಮ್ಯವಾದ ಕರ್ಣವ್ಯಾಮೋಹವನ್ನು ನಿವಾರಿಸಲು ಶ್ರೀಕೃಷ್ಣನು ಮಾಡಿದ ಸಾಹಸ, ಬೀಸಿದ ಮಾಯೆ ಎಂತಹದು!

'ಬೀಸಿದನು ನಿಜಮಾಯೆಯನು ಡೊಳ್ಳಾಸದಲಿ, ಹರಹಿದನು ತಮವನು,
ರೋಷವನು ಬಿತ್ತಿದನು ಮನದಲಿ, ನರನ ಕಲಿಮಾಡಿ!
ಐಸೆ ಬಳಿಕೇನೆನ್ನನಖಿಳ ಗುಣದೋಷ ನಿನ್ನದು, ಪುಣ್ಯ ಪಾಪದ
ವಾಸಿ ನಮಗೇಕೆನುತ ಕೊಂಡನು ಧನುವನಾ ಪಾರ್ಥ'.

ವಿರಥನಾದ ಕರ್ಣ ಇನ್ನೂ ಅಹತನಾಗಿಯೆ ಉಳಿಯುತ್ತಾನೆ. ಅರ್ಜುನನ ಮಾರಣಾಸ್ತ್ರವು ತನ್ನ ಎದೆಯನ್ನು ಭೇದಿಸಿದ್ದರೂ ಅಮೃತನಾಗಿಯೆ ಉಳಿದಿದ್ದ ಕರ್ಣನ ಬಳಿಗೆ ಬ್ರಾಹ್ಮಣವೇಷಧಾರಿಯಾಗಿ ಕೃಷ್ಣ ಬಂದು ಅವನ ಪ್ರಾಣವಾಯುವಾಗಿದ್ದ ಕರ್ಣಕುಂಡಲವನ್ನೂ ಅವನೆದೆಯೊಳಗಿನ ಅಮೃತೋದಕವನ್ನೂ ಪಡೆದುಕೊಳ್ಳುತ್ತಾನೆ. ಹಾಗೆ ಕೃಷ್ಣ ತನ್ನ ಪರಮಪದವನ್ನು ಕರ್ಣನಿಗೆ ನೀಡುತ್ತಾನೆ. ಪತಿತನೆನಿಸಿಕೊಂಡ ವನನ್ನೂ ಭಗವಂತ ಅರೆದುನೋಡಿ ಒರೆದುನೋಡಿ, ಲೋಕಕ್ಕೆ ಅಂತಹವನ ಮಹತ್ತ್ವವನ್ನು ತೋರಿಸಿ ಕೈಹಿಡಿದು ಎತ್ತಿಕೊಳ್ಳುವ ದರ್ಶನವನ್ನಿಲ್ಲಿ ಕವಿ ಅದ್ಭುತವಾಗಿ ಕಂಡರಿಸಿದ್ದಾನೆ.

'ಪರಮ ಕರುಣಾಸಿಂಧು ಕರ್ಣಂಗಿರದೆ ನಿಜಮೂರ್ತಿಯನು ತೋರಿದ
ಸುರುತರ ಪ್ರೇಮದಲಿ ಮುಕುತಿಯ ಪದವ ಸೇಮಿಸಿದ;
ನರನನೆಚ್ಚರಿಸಿದನು, ಕರುಣಿಗೆ ಕರುಣದನುಸಂಧಾನ ಮಾಣದು,
ಧರೆಯೊಳಚ್ಚರಿಯೆನುತ ಬೆರಗಿನೊಳಿದ್ದುದಮರಗಣ!'

"ಇದೆ ಕೃಷ್ಣನು ಕರ್ಣನಿಗೆ ಬಯಸಿದ ಅಭ್ಯುದಯ, ಸುಖ. ಕೃಷ್ಣನ ಕರುಣೆಯ ಹಸುಳೆಗಳಾದ ಪಾಂಡವರಿಗೂ ಸುಲಭವಾಗಿ ದೊರೆಯದ ಪರಮಪದ ಅವರಿಗಿಂತ ಮುಂಚೆಯೆ ಕರ್ಣನಿಗೆ ದೊರೆಯಿತು...

ಕರ್ಣನ ಪಾತ್ರದಲ್ಲಿ ಕುಮಾರವ್ಯಾಸ ಅಧ್ಯಾತ್ಮದ ಹೊನ್ನಿನೆಳೆಯನ್ನು ಕಂಡು ಅವನ ಸೌಂದರ್ಯವನ್ನು ಮತ್ತಷ್ಟು ಉಜ್ವಲಗೊಳಿಸಿದ್ದಾನೆ. ಭಾಸ–ಪಂಪರು ಕಂಡರಿಸಿದ ವಿಗ್ರಹಕ್ಕೆ ಕುಮಾರವ್ಯಾಸ ಅಧ್ಯಾತ್ಮದ ವಜ್ರಕಿರೀಟವನ್ನು ತೊಡಿಸಿದ್ದಾನೆ. ಆದ್ದರಿಂದ ಕರ್ಣನ ಮೂರ್ತಿ ನಮ್ಮ ಜನತೆಯ ಮನೋಮಂದಿರದಲ್ಲಿ ಕುಂದದ ಪ್ರಭೆಯಿಂದ ಸಚೇತನವಾಗಿದೆ. ಅವನ ಸ್ನೇಹ ಜನದ ಮನವನ್ನು ಅತ್ಯುನ್ನತಿಯ ನೆಲೆಗೆ ಕೊಂಡೊಯ್ಯುವ ವಿಮಾನವಾಗಿದೆ!"

"ಮಹಾಭಾರತ ಸಹಸ್ರಾರು ವಯೋಧರ್ಮ ಮನೋಧರ್ಮವುಳ್ಳ ವ್ಯಕ್ತಿಗಳ ಸಂಗ್ರಾಮ ಭೂಮಿ. ಶ್ರೀಕೃಷ್ಣ, ಭೀಷ್ಮರಿಂದ ಅಭಿಮನ್ಯು, ಉತ್ತರನ ತನಕ ಭಿನ್ನಭಿನ್ನ ವಯಸ್ಸಿನ ಮನಸ್ಸಿನ ವ್ಯಕ್ತಿಗಳನ್ನಲ್ಲಿ ಕಾಣುತ್ತೇವೆ. ಮಹಾಭಾರತದಲ್ಲಿ ಮಕ್ಕಳಾಗಿ ಬರುವ ಈ ಉತ್ತರ ಅಭಿಮನ್ಯು ಕುಮಾರರಂತೂ ವಿಭಿನ್ನ ಸಂಸ್ಕಾರ ಪರಿಪಾಕವುಳ್ಳ ಚಿರಸ್ಮರಣೀಯ ವ್ಯಕ್ತಿಗಳಾಗಿದ್ದಾರೆ. ಈ ಚಿರಸ್ಮರಣೀಯರನ್ನು ಕಡೆದಿಟ್ಟು ಸ್ಫುಟಗೊಳಿಸಿದ ಬಹುಮಟ್ಟಿನ ಕೀರ್ತಿ ನಾರಣಪ್ಪನದೆ ಎಂದು ಧೈರ್ಯವಾಗಿ ಹೇಳಬಹುದು.

"ಉತ್ತರ ಕುಮಾರ, ಅಭಿಮನ್ಯು ಕುಮಾರ! ಎಂಥ ಜೋಡಿ, ಎಂಥ ಸಾದೃಶ್ಯ, ಎಂಥ ವೈದೃಶ್ಯ! ಇಬ್ಬರೂ ಬಹುಶಃ ಒಂದೇ ವಯಸ್ಸಿನವರು; ಅದಿರಲಿ, ಭಾವ ಭಾವಮೈದುನರು! ಪಾಂಡವ ವಂಶದ

ಕಂಡಿ ದಾಂಗುಡಿಯಿಟ್ಟದ್ದು ಉತ್ತರನ ತಂಗಿ ಉತ್ತರೆಯಿಂದ. ಇಂತಹ ಓರಗೆಯ ಬಂಧುಗಳಲ್ಲಿ ಎಂಥ ವೈಲಕ್ಷಣ್ಯ! ಉತ್ತರ ಎಂಬ ಹೆಸರು ಗಾದೆಯಾಗಿ ಬಿಟ್ಟಿದೆ. ಅವನು ವಾಕ್‌ಶೂರರ ಅಧಿನಾಯಕನಾಗಿದ್ದಾನೆ. ಅವನ ಹೆಸರಿರುವುದು ನಮ್ಮಲ್ಲಿ ಎಷ್ಟೋ ಜನರಿಗೆ ಸಮಾಧಾನ, ಧೈರ್ಯ! ಈ ವ್ಯಕ್ತಿ "ಮಹಾಭಾರತದ ಪೂರ್ವೋತ್ತರ ಪರ್ವಗಳ ಮೌನ ಗಭೀರ ಸಾಗರಗಳಿಗೆ ಹಾಸ್ಯದ ಸೇತುವಾಗಿದ್ದಾನೆ". ಹೆಂಗಳೆಯರ ಮುಂದೆ ವೀರಾಲಾಪ ಮಾಡಿ ವಾಕ್ ಶರಧಾರೆಯನ್ನು ಹರಿಸಿದ ವೀರ, ಯುದ್ಧ ಭೂಮಿಯಲ್ಲಿ ರಥದಿಂದ ಧುಮ್ಮಿಕ್ಕಿ ಓಡುವುದಾಗಲಿ, ಕಣ್ಣೆವೆ ಸೀದು ಹೋಯಿತೆಂದು ಕೈಗಳಲ್ಲಿ ಮುಖ ಮುಚ್ಚಿಕೊಳ್ಳುವುದಾಗಲಿ ಯಾರನ್ನು ತಾನೆ ನಗಿಸದು? ಆದರೆ ಈ ನಗೆಗೇಡಿ ಉತ್ತರನು ಕುಮಾರವ್ಯಾಸ ಚಿತ್ರಿಸಿರುವ ಉತ್ತರನ ಪೂರ್ವಾವಸ್ಥೆ ಮಾತ್ರ. ಅವನನ್ನು ಧನಂಜಯನು 'ಕಲಿಮಾಡಿ'ದ ಬಗೆಯನ್ನೂ ಅನಂತರ ಅವನು ನಡೆದುಕೊಂಡ ಅಪೂರ್ವ ವಿಧಾನವನ್ನೂ ನೋಡಿದರೆ ಕವಿ ಕಂಡ ಉತ್ತರನ ಉತ್ತರ ಜೀವನವೂ ವೇದ್ಯವಾದೀತು. ಹಾಸ್ಯ ಮತ್ತು ಗಭೀರತೆಯನ್ನು, ಹೇಡಿತನ ಕಲಿಗೊಳ್ಳುವುದನ್ನು ಕವಿ ಅವನ ಜೀವನದಲ್ಲಿ ಚಿತ್ರಿಸಿದ್ದಾನೆ."

"ಅಭಿಮನ್ಯುವಾದರೊ ನಿಜಕ್ಕೂ ಸಿಂಹದ ಮರಿಯೆ. ಹುಟ್ಟಿನಿಂದಲೆಂತೊ ಗುಣದಿಂದಲೂ ಹಾಗೆಯೆ ಮಹಾವೀರ. ತನ್ನ ವಯಸ್ಸಿಗೆ ಮಹಾದ್ಭುತವನ್ನೆ ಸಾಧಿಸಿದನೆನ್ನಬೇಕು. ಅವನಾಡಿದ 'ಮಕ್ಕಳಾಟ' ಕುರು ರಾಯರಿಗೆ 'ಮಾರಿಯಾಟ' 'ಮೃತ್ಯುವಾಟ' ಆಯಿತು. ಯುದ್ಧಕ್ಕೆ ಮೊದಲು ಅವನ ವೀರೋತ್ಸಾಹದ ಮಾತನ್ನು ಕೇಳಿ ಧರ್ಮರಾಜನೆ ಅಂಜಿದುದುಂಟು: 'ಶರನಿಧಿಯ ವಡಬಾನಳನ ದಳ್ಳುರಿಯ ಪರ್ಮಪ ತಿವಿವ ತುಂಬಿಗೆ ಮರುಳುಂದಲೆಯುಂಟಾದಡದು ಭವ ಭವದ ಪುಣ್ಯವಲಾ!'ಎಂದು. ಆದರೆ ಅದಕ್ಕೆ ಅಭಿಮನ್ಯು ವಿನ ಮಾತನ್ನು ಕೇಳಿ: 'ಬಿಡು, ಮರೀಚಿಯ ತೊರೆಗೆ ಹರಿಗೋಲಿಡುವರುಂಟೇ?' 'ಗಾಳಿ ಬೆಮರುವುದುಂಟೆ?' ಹಾಗೆಯೆ ಅಭಿಮನ್ಯುವಿನ ಸಾರಥಿಯೆ ಅವನ ಸಾಮರ್ಥ್ಯಕ್ಕೆ ಶಂಕಿಸುತ್ತಾನೆ. ಅದಕ್ಕವನ ಮಾತಿಷ್ಟೆ: 'ಮರುಳು ಸಾರಥಿ, ನಮ್ಮ ನಾಪ್ ಪತಿಕರಿಸಿಕೊಳಲಾಗದು, ಕಣಾ! ನೀನರಿಯೆ ನಮ್ಮಂತರವ, ನಾವಿನ್ನಾಡಿ ಫಲವೇನು?' 'ಬವರವಾದರೆ ಹರನ ನೊಸಲಿಗೆ ಬೆವರ ತಹೆ...'ಸಾಕಿನ್ನರ್ಜುನನು ಮಾಧವನು ಮುನಿದಡೆ ಗೆಲುವೆನು'. ಉತ್ತರ ಕುಮಾರನಿಗೂ ಇವನಿಗೂ ಏನಂತರ! ಅರ್ಜುನನನ್ನು ಸಾರಥಿಯಾಗಿ ಪಡೆದು ಹೊರಡುವ ಮುಂಚೆ ಅವನು ಆಡುವ ಮಾತೇನು: 'ಅರಿಯನೇ ಗಾಂಗೇಯನನು, ತಾನರಿಯದವನೇ ದ್ರೋಣ, ಕುಲದಲಿ ಕೊರತೆಯೆನಿಸುವ ಕರ್ಣನೆಂಬವನೆನಗೆ ಸಮಬಲನೆ?' 'ಬರಿಯ ಬಯಲಾಡಂಬರದಿ ತುರುವ ಹಿಡಿದೊಡೆ ತನ್ನ ಹೆಂಡಿರ ಸೆರೆಯ ತಾರದೆ ಮಾಣೆ'. ಯುದ್ಧವೇನಾದರೂ ಆದರೆ ಪ್ರಲಯಹರನ, ಫಾಲಾಕ್ಷನ, ನೊಸಲಿಗೆ ಬೆವರನ್ನು ತರುತ್ತೇನೆ ಎನ್ನುತ್ತಾನೆ ಅಭಿಮನ್ಯು. ಆದರೆ ಉತ್ತರ ಕುಮಾರ ಶತ್ರುಗಳ ಹೆಂಡಿರ ಸೆರೆ ತರುತ್ತೇನೆಂದೆನ್ನುತ್ತಾನೆ! ಎಂಥ ಅಂತರ!

"ಅನ್ಯರಿಗೆ ಅಭೇದ್ಯವಾಗಿದ್ದ ಪದ್ಮವ್ಯೂಹವನ್ನು ಏಕೈಕನಾಗಿ ಭೇದಿಸಿ ಒಳಹೊಕ್ಕ ಈ ಸಿಡಿಲಮರಿ ಬಂದ ಬಂದ ವೀರರನ್ನೆಲ್ಲ ಉತ್ತರಿಸುತ್ತಾನೆ. 'ನೀನು ಮಗು, ನಿಮ್ಮಯ್ಯ, ಭೀಮರನ್ನು ಕಳಿಸು' ಎಂದು ಅಹಂಕಾರದಿಂದ ನುಡಿದವರಿಗೆ 'ಮಗುವು ತಾನಹೆ, ತನ್ನ ಬಾಣಕೆ ಮಗುವುತನ ಬೇರಿಲ್ಲ ನೋಡು......!' "ಕೊಚ್ಚೆ ನೀರೊಳಗಾಳುತೇಳುತ ಜಲಧಿ ಕಾಲ್ವೊಳೆಯೆಂಬ ಭಂಡರ ಮುಳಿದು ಮಾಡುವುದೇನು, ಮೊದಲಲಿ ನಮ್ಮನೀ ಗೆಲಿದು ಬಳಿಕ ಭೀಮಾರ್ಜುನರ ಬಯಸುವುದು' ಎಂದು ಹೇಳುವ ಅಭಿಮನ್ಯುವಿನ ವಾಕ್ ಕಶಾಘಾತದಲ್ಲಿ ತಂದೆಗೆ ಗೌರವ ತೋರಿಸುವ ಹಾಗೂ ತನ್ನ ಗುರುತ್ವವನ್ನು ತೋರಿಸುವ ಧೀರ ವಿನಯ

ಧೋರಣೆಯನ್ನು ಕಾಣುತ್ತೇವೆ. ಕೈಗೆ ಸಿಕ್ಕಿದ ದುಶ್ಶಾಸನನ್ನು ಸೀಳಿ ಅವನ ತಿಳಿರಕ್ತದಲ್ಲಿ ತನ್ನ ತಾಯ ತುರುಬನು ನಾದಿಸುತ್ತೇನೆಂದು ಕೈದುಡುಕಿದ ಅಭಿಮನ್ಯು ತಟಕ್ಕನೆ ತನ್ನ ದೊಡ್ಡಪ್ಪನ ಶಪಥವನ್ನು ನೆನೆದು ತನ್ನ ಸಾಹಸಕ್ಕೆ ಹಿಂಜರಿದು ನಿಲ್ಲುತ್ತಾನೆ. 'ಇವನ ಕೊಂದರೆ ತಂದೆ ಎಂಗೆ ಮೆಚ್ಚುವನೊ, ಮುನಿವನೊ? ತನ್ನ ನುಡಿ ಸಂಭವಿಸ ದೆಂಬನೊ? ಭೀಮಸೇನನ ಭಾಷೆಗಂಜುವೆನು! ಇವನ ತಾನೇ ಕೊಲಲಿ, ನಮಗಿನ್ನಿವನ ತೊಡಕೇ ಬೇಡ, ಕದನದೊಳಿವನ ಭಂಗಿಸಿಬಿಡುವೆನೆಂದನು ತನ್ನ ಮನದೊಳಗೆ'.

ಯಾರೊಬ್ಬರೂ ಗೆಲ್ಲಲಾಗದೆ ಷಡ್ರಥರು ಅವನನ್ನು ಸುತ್ತುಗಟ್ಟಿ ಎದುರಿಸಿ ಛಿನ್ನಾಭಿನ್ನವಾಗುತ್ತಾರೆ. ಕೊನೆಗೆ ದ್ರೋಣರು ಕರ್ಣನನ್ನು 'ಒಡಂಬಡಿಸಿ' ಅಭಿಮನ್ಯುವಿನ ಚಾಪವನ್ನು ಹಿಂದಿನಿಂದ ಹೋಗಿ ಭೇದಿಸು ವಂತೆ ಮಾಡುತ್ತಾರೆ. ಅದನ್ನು ಕಂಡು ಈ ಸಿಂಹಕುಮಾರ ಮುಗುಳುನಗೆ ನಕ್ಕು ಆಡುವಮಾತನ್ನು ಕೇಳಿ: 'ಬೆರಗಡರಿ ಮುಖದಿರುಹಿ, ಹಿಂದಣೆನಿರಿದ ಕರ್ಣನ ನೋಡಿ ಮುಖದಲಿ ಕಿರುನಗೆಯ ಕೇವಣಿಸಿ ನುಡಿದನು ಬೆರಳನೊಲೆದೊಲೆದು......ಆವ ಶರಸಂಧಾನ ಲಾಘವದಾವ ಪರಿ, ಮಝ! ಪೂತು ಪಾಯಿಕು ದೇವ ಬಿಲ್ಲಾಳೆಂತು ಕಡಿದೈ ಕರ್ಣ ನೀ ಧನುವ! ಈ ವಿವೇಕವಿದಾರ ಸೇರುವೆ? ಯಾವಗಹುದಿದು ಹಿಂದೆ ಬಂದೆಸುವೀ ವಿಗಡತನ? ನಿನಗೆ ಮೆರೆವುದು ಕರ್ಣ!' ಧನುರ್ಭಂಗವಾದ ಮೇಲೆ ಕತ್ತಿ ಹಿರಿದು ಮತ್ತೂ ಭಯಂಕರನಾಗಿ ಯುದ್ಧ ಮಾಡುತ್ತ ಕತ್ತಿಯನ್ನೂ ಕೈಗಳನ್ನೂ ಕಳೆದುಕೊಂಡು, ರಥಚಕ್ರಗಳನ್ನೆ ತಿರ್ರನೆ ತಿರುಗಿಸಿ ಚಕ್ರಾಯುಧನಂತೆ ಯುದ್ಧಮಾಡಿ ಕೊನೆಗೆ ರಥ ಚಕ್ರವೂ ಇಲ್ಲದೆ ಇದ್ದಾಗ ತನ್ನ ಮೇಲ್ವಾದು ಬಂದ ದುಶ್ಶಾಸನ ಕುಮಾರನನ್ನು ಕೊಂದು ತಾನೂ ಮಡಿಯುತ್ತಾನೆ. ಕವಿಯ ಗಂಟಲು ಕಟ್ಟುತ್ತದೆ. ಒಂದೇ ಮಾತನಾಡುತ್ತಾನೆ: 'ಕಾಡು ಕಿಚ್ಚಿದ್ದಡವಿಯನು ಕುಡಿನಾಲಗೆಯೊಳಳವಡಿಸಿ ದಳ್ಳುರಿಜ್ವಾಲೆ ತಗ್ಗಿದವೋಲು, ಗಗನದ ಮುಗಿಲಮೋಹರವ ಧಾಳಿಯಲಿಯರೆಯಟ್ಟಿ ಸುಂಟುರುಗಾಳಿಯುರವಣೆ ನಿಂದವೊಲು ಸುರಪಾಲತನಯನ ತನಯನಸ್ತಮಿಸಿದನು ರಣದೊಳಗೆ!'

"ವೀರದ ಮಹಾಪೂರವಾಗಿ ಬಂದ ಈ ಕುಮಾರ ಕರುಣೆಯ ಮಹಾಸಾಗರವನ್ನೆ ಉಕ್ಕಿಸಿ ಹೋಗು ತ್ತಾನೆ. ಮುಂದೆ, ಪಾಂಡವರ ಶೋಕದಲ್ಲಿ, ಅದರಲ್ಲೂ ಸುಭದ್ರೆ ಅರ್ಜುನರ ದುರ್ಭರ ದುಃಖದಲ್ಲಿ ಈ ಕರುಣೆಯ ಕಡಲು ಕೊಬ್ಬಿ ಮೇರೆವರಿಯುತ್ತದೆ. ತನ್ನ ಮಗನನ್ನು ಮಕ್ಕಳ ಸಮೂಹದಲ್ಲಿ ಅರಸಿ ಕಾಣದ ಅರ್ಜುನನನ್ನು ಕಂಡಾಗ ಹೇಳಲಾಗದ ವೇದನೆಯುಂಟಾಗುತ್ತದೆ".

"ಕುಮಾರವ್ಯಾಸನ ದರ್ಶನದ ವಿಚಾರವಾಗಿ ಹೇಳದಿದ್ದರೆ ನಮ್ಮ ಮಾತು ಪೂರ್ಣವಾಗುವುದಿಲ್ಲ. ಮೊದಲೆ ಹೇಳಿದಂತೆ ಆತನದು ಭಗವದ್ದೃಷ್ಟಿಯಾದುದರಿಂದ ಅವನ ದರ್ಶನದಲ್ಲಿ ವಿಶ್ವರೂಪದರ್ಶನದ ಕಟಾಕ್ಷವಿದೆ". "ಕವಿವಿರಾಟ್ ಕುಮಾರವ್ಯಾಸನ ಮಹಿಮೆಗೆ ಕಾರಣ: ಅವನ ನಡುಗನ್ನಡದ ಭಾಮಿನೀಗಣದ ತರಂಗಶೈಲಿಯ ಸುಲಭಸರಳತೆ ಮಾತ್ರವಲ್ಲ; ಪ್ರವಾಹ ಪೂರ್ಣವಾದ ಪರ್ವತ ಭಾಗೀರಥಿಯ ಅದಮ್ಯ ವೇಗದ ಭೀಮಗಮನ ವಿನ್ಯಾಸದಿಂದ ಮುನ್ನುಗ್ಗುವ ಆತನ ಪ್ರತಿಭೆಯೊಂದೇ ಅಲ್ಲ; ಹೆಮ್ಮೋಡದಂತೆ ದಿಗಂತದಿಂದ ಅನಿರೀಕ್ಷಿತವಾಗಿ ಮೇಲ್ವಾಯುವ ಅವನ ಕಲ್ಪನಾಶಕ್ತಿ, ಕಾರ್ಗಾಳಿಯಂತೆ ಬೀಸಿ ಬಡಿಯುವ ಅವನ ಭಾವಾವೇಗ, ಮಿಂಚಿನ ಬಳ್ಳಿಯಂತೆ ಅಲ್ಲಲ್ಲಿ ತಳತಳಿಸುವ ಆತನ ರೂಪಕಾದಿಗಳ ರುದ್ರರಮ್ಯತೆ, ಸಿಡಿಲು ಗುಡುಗಿನ ಡಮರು ಡಿಂಡಿಮಗಳನ್ನೆ ಹಿಡಿದು ಬಡಿದು ಕುಣಿವ ನಾದತಾಂಡವನಂತಹ ಆತನ ರುಂದ್ರನೃತ್ಯಶೈಲಿ—ಇವು ಮಾತ್ರವೆ ಕಾರಣವಲ್ಲ, ಗದುಗಿನ ಭಾರತದ ಜನಪ್ರಿಯತೆಗೆ. ಕವಿವಿರಾಟ್ ಕುಮಾರ

ವ್ಯಾಸನ ಕಾವ್ಯಲಕ್ಷ್ಮಿಗೆ ಆಕೆಯ ನಾಡಿಯ ನಿತ್ಯಸ್ಪಂದನಗಳೇನೋ ನಿಜ, ಮೇಲೆ ಹೇಳಿದ ಗುಣಗಳೆಲ್ಲ. ಜೊತೆಗೆ ಬಹುಮುಖ್ಯವಾಗಿ, ಅವನ ಮಹಿಮೆಗೆ ಕಾರಣ–ಆತನ ಧರ್ಮದೃಷ್ಟಿ; ಆತನ ಭಗವದ್ ಭಕ್ತಿ. ಆತನ ಋಷಿದರ್ಶನ".

"ಶೈಲಿಯ ನುಣ್ಪು, ಧ್ವನಿಸೂಕ್ಷ್ಮತೆ, ವ್ಯವಹಾರ ಭೂಮಿಕೆಯಲ್ಲಿ ನಡೆಯುವ ನಾಗರಿಕ ವ್ಯಾಪಾರ ನಿರೂಪಣೆಯಲ್ಲಿ ಮೈದೋರುವ ನಯರುಚಿಯ ಸಂಸ್ಕೃತಿ, ಪ್ರಕೃತಿ ಪ್ರಪಂಚದ ವಿವರಪರಿಜ್ಞಾನ, ಪ್ರಕೃತಿ ಸೌಂದರ್ಯದಲ್ಲಿ ಗಾಢಮೋಹ, ಅದರ ಬಣ್ಣನೆಯಲ್ಲಿ ಅನುರಕ್ತಿ, ಅದರ ಶತಸಹಸ್ರಮುಖವಾದ ವೈವಿಧ್ಯದ ಒಂದೊಂದು ವಿವರದಲ್ಲಿಯೂ ಅಕ್ಕರೆಯಿಂದುಣ್ಮುವ ಆಸಕ್ತಿ–ಇತ್ಯಾದಿ ಕಲಾದೃಷ್ಟಿಯಿಂದ ಪಂಪನಿಗೆ ದ್ವಿತೀಯನೂ ಆಗದಿದ್ದರೂ ಭಾವತೀಕ್ಷ್ಣತೆಯಲ್ಲಿ, ರಸಾವೇಶದಲ್ಲಿ, ಪ್ರತಿಭಾಪ್ರವಾಹದ ದುರ್ದಮ್ಯ ವೇಗದಲ್ಲಿ, ಸಂಸ್ಕೃತಿಗೆ ತುಸು ದೂರವಾದರೂ ಪ್ರಕೃತಿಸಹಜವಾದ ಪಾರ್ವತಾರಣ್ಯಕ ರುಂದ್ರ ರೂಕ್ಷತಾ ಶಕ್ತಿಯಲ್ಲಿ ಸರ್ವವನ್ನೂ, ಸರ್ವರನ್ನೂ, ಸರ್ವಕಾಲದಲ್ಲಿಯೂ ಸರ್ವಭಾವದಲ್ಲಿಯೂ ಭಗವದ್‌ಭಕ್ತಿಯ ಶ್ರೀಮಂತಕಾಂತಿಯ ಕಣ್ಣಿನಿಂದಲೆ ಕಾಣುವ 'ವಿರಾಡ್‌ದರ್ಶನ'ದಲ್ಲಿ, ಲೌಕಿಕ ಆಗಮಿಕ ಐಹಿಕ ಆಮುಷ್ಮಿಕ ಎಂದು ಕವಲೊಡೆಯದೆ ಹಂಚದೆ ಅವಿಭಕ್ತವಾಗಿ ಆಕಾಶೋನ್ನತವಾಗಿ ಬ್ರಾಹ್ಮಭೂಮವಾಗಿ ಪರಮ ಪುರುಷಾರ್ಥ ಸ್ವಂಸ್ಪರ್ಶಿಯಾಗಿ, ಬದುಕಿಗೆ ಬೆಳಕಿತ್ತು ಬಾಳನ್ನು ಹುರಿದುಂಬಿಸುವ ಆತ್ಮಶ್ರೀಯ ದಿವ್ಯಾಗ್ನಿ ಯಲ್ಲಿ ಆದಿಕವಿ ಪಂಪನಿಗೂ ಅದ್ವಿತೀಯನಾಗಿ ಆತನನ್ನೂ ದ್ವಿತೀಯನನ್ನಾಗಿ ಮಾಡುವ ಯೋಗಿ ಕವಿ ಪೂಜ್ಯ ನಾರಣಪ್ಪ".

"ಕುಮಾರವ್ಯಾಸ ಕಂಡ ಕೃಷ್ಣ ಅವನ ಆ ದರ್ಶನದ ಪ್ರತಿಮೆಯಾಗಿ ಮೂಡಿದ್ದಾನೆ. ಆತ ನರನಾಟಕದ ಸೂತ್ರಧಾರಿ; ಮಾನುಷಪಾತ್ರಗಳೆಲ್ಲವೂ ನಟವರ್ಗಮಾತ್ರ, ಹಾಹೆಮಾತ್ರ; ಆದರೂ ಆ ಸೂತ್ರಧಾರಿಯೆ 'ನರನಾಟಕವ ತಾನೇ ನಟಿಸಿ ತೋರುತ್ತಿದ್ದ; ಸೂತ್ರಧಾರಿ ಪಾತ್ರಧಾರಿಯಾದರೆ ಹೇಗೆ ವರ್ತಿಸಬೇಕೋ ಹಾಗೆ ವರ್ತಿಸುತ್ತಿದ್ದ–ಹೀಗೆಂದು ಹಿಂದೆಯೇ ಹೇಳಿದೆವು. ಖಳಪಾತ್ರಗಳೆಂದು ಭಾವಿತವಾಗಿರುವ ಕೌರವ ಕರ್ಣರು ತಮ್ಮ ಪಾತ್ರಾಭಿನಯದಲ್ಲೆ ಮೈಮರೆತಿದ್ದರೂ ತಾವು ಪಾತ್ರಮಾತ್ರರು ಎಂಬುದನ್ನು ಕಂಡಿದ್ದರು. ಕೌರವನಲ್ಲೂ ಈ ಭಾವ ಮೂಡಿದ ಪ್ರಸಂಗವನ್ನು–ಆ ವಿಶ್ವರೂಪದರ್ಶನ ಪ್ರಸಂಗವನ್ನು–ನೆನೆದುಕೊಂಡರೆ ಸಾಕು. ಕೃಷ್ಣನನ್ನು ಕಟ್ಟಲೆಂದು ಪ್ರಯತ್ನಿಸಿದ ಕೌರವ, ತನ್ನೊಳಗು ಹೊರಗುಗಳನ್ನು ಭಿನ್ನವಾಗಿ ಆಡಿಸು ತ್ತಿರುವ ಆ ಸೂತ್ರಧಾರಿಯ ಕೈಚಳಕವನ್ನು ಅರಿತುಕೊಳ್ಳುತ್ತಾನೆ. ಕವಿ ದಿವ್ಯವಾಗಿ ಹೇಳಿದ್ದಾನೆ ಅದನ್ನು. ಇದಕ್ಕಿಂತ ಬೇಕೆ ಕುಮಾರವ್ಯಾಸನ ದಿವ್ಯದರ್ಶನಕ್ಕೆ ದೃಷ್ಟಾಂತ. ನಟನು ತನ್ನ ನಿಜತ್ವವನ್ನೂ ತನ್ನನ್ನು ಚಾಲಿಸುವ ಸೂತ್ರಧಾರನನ್ನೂ ಅರಿತುಕೊಂಡೂ ಕೂಡ ತನ್ನ ಪಾತ್ರದ ಅಭಿನಯದಲ್ಲಿ ರಸಾಭಾಸವಾಗದಂತೆ ತಾದಾತ್ಮ್ಯದಿಂದ ಅಭಿನಯಿಸುವ ಈ ಅನ್ಯಾದೃಶ ರೀತಿಯನ್ನು ನೋಡಿ ಮೂಕರಾಗುತ್ತೇವೆ.

"ಇಲ್ಲಿ ಕುಮಾರವ್ಯಾಸ ಭಗವದ್‌ಪಾರಮ್ಯವನ್ನು ಹೇಳುವ ಭರದಲ್ಲಿ ಔಚಿತ್ಯವನ್ನು ಭಂಗಗೊಳಿಸಿಲ್ಲ. ಭಗವದ್ದೃಷ್ಟಿಯೆ ಪರಮವಾದರೂ ಅದು ಮಾನುಷದೃಷ್ಟಿಯನ್ನು ಎಷ್ಟರಮಟ್ಟಿಗೆ ಆಕ್ರಮಿಸಿಕೊಂಡರೆ ಸುಂದರ ಎಂಬುದನ್ನು ಕುಮಾರವ್ಯಾಸ ಬಲ್ಲ. ಮಾನುಷಶಕ್ತಿ ದೈವಶಕ್ತಿಯ ಮುಂದೆ ನಿಲ್ಲಬಾರದು, ನಿಲ್ಲಲಾರದು ಎಂಬುದನ್ನು ಕಂಡಂತೆಯೆ ಅದೇ ಮಾನುಷಶಕ್ತಿ ದೈವಶಕ್ತಿಯನ್ನು ಭಕ್ತಿಯಿಂದ ಗೆಲ್ಲಬಲ್ಲದು ಎಂಬ ದರ್ಶನವನ್ನೂ ಅವನು ಕಂಡಿದ್ದ. ಭಕ್ತಿಯ ವಿವಿಧಾವಸ್ಥೆಯನ್ನು ವಿವಿಧ ಪ್ರಕಾರಗಳನ್ನು ಕುಮಾರವ್ಯಾಸ ಚಿತ್ರಿಸಬಲ್ಲ. ಆದರೂ

ಅವನು ಕ್ಲೈಬ್ಯ ಜನ್ಯವಾದ ಭಕ್ತಿಯನ್ನು ಪ್ರತಿಪಾದಿಸಹೋಗಿಲ್ಲ. ಕುಮಾರವ್ಯಾಸನ ಭಕ್ತಿ ದೈನ್ಯಭಕ್ತಿಯಲ್ಲ, ಕ್ಲೈಬ್ಯಭಕ್ತಿಯಲ್ಲ; ವೀರಭಕ್ತಿ. ಇದನ್ನು ಭೀಷ್ಮಪರ್ವದಲ್ಲಿ, ಕೃಷ್ಣನು ಚಕ್ರವನ್ನು ಕೈಯಲ್ಲಿ ಹಿಡಿದ ಸನ್ನಿವೇಶ ದಲ್ಲಿ ಕಾಣಬಹುದು. ಭಗವಂತನೂ ದಾರಿತಪ್ಪಬಲ್ಲ. ಅಂತಹ ವೇಳೆ ಭಕ್ತ ತಿದ್ದಬಲ್ಲ–ಶಕ್ತನಾಗಿದ್ದರೆ! ಭೀಷ್ಮ ಅಂತಹ ಭಕ್ತ. ಕುಮಾರವ್ಯಾಸನದು ಭೀಷ್ಮಭಕ್ತಿ:

> 'ಹೋದುದೊಂದಪಮೃತ್ಯು, ಲೋಕಕೆ
> ತೀದುದಿಲ್ಲಾಯುಷ್ಯ, ಮಹದಪ
> ವಾದ ದೇವಂಗಾಗಿ ತಪ್ಪಿತು, ಮುಚ್ಚುಮರೆಯೇಕೆ?
> ಕಾದುಕೊಂಡನು ಭೀಷ್ಮನೀ ಕಮ
> ಲೋದರನ ಕಿರಳಿಚಿಯು ಭಕುತಿಯ
> ಲಾದರಿಸಿದನು ಪುಣ್ಯವೆಂದನು ಕಮಲಭವ ನಗುತ'

"ಹೀಗೆ ಕುಮಾರವ್ಯಾಸ ತನ್ನ ಕಾವ್ಯದಲ್ಲಿ ಸರ್ವವನ್ನೂ ಭಗವದ್ದರ್ಶನದ ಸೂರ್ಯತೇಜಸ್ಸಿನಿಂದಲೆ ಕಂಡಿದ್ದಾನೆ". "ಮಹಾಭಾರತದಲ್ಲಿ ಇರುವ ಮಾನವ ಜೀವನದ ಜಟಿಲಕಥೆಯನ್ನು ಕಲಾಮಯವಾಗಿ ಚಿತ್ರಿ ಸುತ್ತಲೆ ಅದಕ್ಕೆ ಪ್ರೇರಕ–ತಾರಕವಾಗಿರುವ ಭಗವತ್‌ಶಕ್ತಿಯ ಲೀಲೆಯನ್ನೂ ಮಹಿಮೆಯನ್ನೂ ಬಾಯ್ತುಂಬ ಬಣ್ಣಿಸಬೇಕೆಂಬುದರಲ್ಲಿ ಆ ಸಮನ್ವಯವಿದೆ, ಕುಮಾರವ್ಯಾಸನ ವಿಶಿಷ್ಟವಾದ ಸಮ್ಯಕ್ ದರ್ಶನವಿದೆ".

"ಮಹಾಕವಿಯನ್ನು ಅನುಕರಣಮಾಡುವುದಕ್ಕೆ ಎಲ್ಲರೂ ಬಯಸುತ್ತಾರೆ. ಆದರೆ ಮಹಾಕವಿ ಅನುಕರಣೆಗೆ ಸಿಕ್ಕುವುದಿಲ್ಲ. ಅನುಕರಣಶೀಲ ಅವನನ್ನು ದಕ್ಕಿಸಿಕೊಳ್ಳಲೂ ಆರ. ಆ ದೃಷ್ಟಿಯಿಂದ ನೋಡು ವುದಾದರೆ ಮಹಾಕವಿ ಪಥ ದೀರ್ಘವಾಗಿರುತ್ತದೆಂದು ಹೇಳುವುದು ಕಷ್ಟ. ಪಂಪ ಚಂಪೂಯುಗದ ನಾಯಕ ನಾದ. ಅವನನ್ನು ಅನುಕರಿಸಿದವರೆಷ್ಟು ಕವಿಗಳೊ. ಚಂಪೂಕಾವ್ಯಪಥ ಕೊರಕಲು ಬೀಳುವಷ್ಟು ಆ ದಾರಿಯಲ್ಲಿ ಸಾಗಾಟ ನಡೆಯಿತು. ಆ ಕೊರಕಲುದಾರಿಯನ್ನು ಬಿಟ್ಟು ಹರಿಹರ ರಾಘವಾಂಕ ಕುಮಾರವ್ಯಾಸರು ಹೊರಟರು. ಆ ರಾಜಮಾರ್ಗ ಮೋಹಕವಾಗಿ ಕಂಡಂತೆ, ಸುಭದ್ರವಾಗಿ ಕಂಡಂತೆ, ಮುಂದೆ ಬಂದ ಕವಿಗಳಿಗೆ ಈ ಜನತಾ ಮಾರ್ಗ ತೋರಲಿಲ್ಲವೇನೊ. ಅಂತೂ ಈ ಕಾವ್ಯಪಥದಲ್ಲಿ ಚಂಪೂಮಾರ್ಗದಲ್ಲಾದಷ್ಟು ಗೊಂದಲವಾಗಿರ ಲಾರದು. ಕುಮಾರವ್ಯಾಸನನ್ನು ಅನುಕರಿಸಿದವರಿಗೆ ಲೆಕ್ಕವಿಲ್ಲ; ಆದರೆ ಅವನನ್ನು ಅನುಸರಿಸಿದವರು ಮಾತ್ರ ವಿರಲ. ಕುಮಾರವಾಲ್ಮೀಕಿ, ವಿಠಲನಾಥ, ಲಕ್ಷ್ಮೀಶ, ಕನಕದಾಸರು, ಭಾಸ್ಕರ ಅಷ್ಟೆ ಏಕೆ ಚಂಪೂಮಾರ್ಗದ ಷಡಕ್ಷರಿ ಎಲ್ಲರೂ ಅವನ ಪ್ರಭಾವಕ್ಕೆ ಒಳಗಾಗಿದ್ದಾರೆ. ಅವನನ್ನು ಅರಗಿಸಿಕೊಳ್ಳುವುದಕ್ಕೆ ಎಷ್ಟು ಕಷ್ಟ ಎನ್ನುವುದಕ್ಕೆ ಒಂದೇ ನಿದರ್ಶನವನ್ನು ಕೊಡಬಹುದು. ಕುಮಾರವ್ಯಾಸನ ಕಿರಾತಾರ್ಜುನೀಯ ಪ್ರಸಂಗದ ಕಥಾಭಾಗವನ್ನು ಪಂಕ್ತಿ ಪಂಕ್ತಿಯಾಗಿ ಷಡಕ್ಷರಿ ಅನುವಾದ ಮಾಡಿದ್ದಾನೆ. ಆದರೆ ಎಷ್ಟರಮಟ್ಟಿಗೆ ಅನುರಣನ ಮಾಡಲಾಗಿದೆ ನೋಡಿ:

> 'ಮಂಜು ಮುಸುಕಿದೊಡೇನು ಪರ್ವತ
> ಮಂಜುವದೆ? ಹಾಲಾಹಲವ ನೊಣ
> ನೆಂಜಲಿಸುವುದೆ? ವಡಬಶಿಖಿ ನೆನೆಯುವುದೆ ತುಷಾರದಲಿ?

ಕಂಜನಾಳದಿ ಕಟ್ಟುವಡೆವುದೆ
ಕುಂಜರನು? ನರಶರದ ಜೋಡಿನ
ಝುಂಜುವೊಳೆಯಲಿ ಜಾಹ್ನವೀಧರ ಜಾರುವನೆ? ಯೆಂದ!'

ಇದು ಕುಮಾರವ್ಯಾಸನ ಪದ್ಯ. ಅದರ ಅನುವಾದವಿಲ್ಲಿದೆ:

'ಮಂಜಿನ ಪುಂಜಮೊತ್ತರಿಸಿ ಮುತ್ತಿ ಮುಸುಂಕೆ ಭಯಾರ್ತಿಗೊಳ್ಗನೇ
ಕಂಜಸಖಂ? ಪತಂಗತತಿ ಪಾಯ್ದೊಡೆ ಬೆರ್ಚುಗುಮೇ ದವಾಗ್ನಿ ವಾ
ತಂ? ಜವದಿಂ ಪಳಂಚೆ ಗಿರಿ ಕಂಪನವಾಂಪುದೆ? ಪಾಂಡುಪುತ್ರನಾ
ತಂ ಜಡಿದೊತ್ತೆ ಜಾಱಿ ಪೆಱಸಾರ್ವನೆ ಧೀರ ಧನಂಜಯಾಂಬಕಂ?'

ಇದಕ್ಕಿಂತ ಬೇಕೆ ಬೇರೆಯ ನಿದರ್ಶನ, ಕುಮಾರವ್ಯಾಸ ಅನುವಾದಕ್ಕೆ ಸಿಕ್ಕನು ಎಂಬುದಕ್ಕೆ?"

**ಗ್ರಂಥಸಂಪಾದನ :** ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ನಾವು ಈ ಸಂಪುಟವನ್ನು ಸಂಪಾದಿಸಿದ್ದೇವೆ. ಅಂದರೆ ಸಂಶೋಧನೆಗೆ ಗಮನ ಇತ್ತಿಲ್ಲವೆಂದಲ್ಲ. ಎಲ್ಲೆಲ್ಲಿ ಸಾಧ್ಯವೊ, ಎಲ್ಲೆಲ್ಲಿ ಅನಿವಾರ್ಯವೊ ಅಲ್ಲಿ ನಾವು ನಾಲ್ಕಾರು ಓಲೆಯ ಪ್ರತಿಗಳನ್ನು ನೋಡಿದ್ದೇವೆ. ಆಗ ಮುಖ್ಯವಾಗಿ ನಾವಿಟ್ಟುಕೊಂಡಿರುವ ಪ್ರತಿಗಳು ಇವು:

೧. ಕ ೨೦೫ನೆಯ ಪ್ರತಿ; ಇದು ತಕ್ಕಮಟ್ಟಿಗೆ ಶುದ್ಧ, ವಿಶ್ವಾಸಾರ್ಹ.
೨. ಎ ೫೭ನೆಯ ಕಲ್ಲಚ್ಚಿನ ಪ್ರತಿ; ಇದು ೧೮೫೧ರಲ್ಲಿ ಮಂಗಳೂರಿನಲ್ಲಿ ಮುದ್ರಿತವಾದದ್ದು. ಇದು 'ಕ' ಪ್ರತಿಯನ್ನೆ ಬಹುಮಟ್ಟಿಗೆ ಅನುಸರಿಸಿದೆ. ಇದರಲ್ಲಿ ಮೊದಲ ನಾಲ್ಕು ಪರ್ವಗಳು ಮಾತ್ರ ಇವೆ.
೩. ಶ್ರೀ ಟಿ. ಎನ್. ಕೃಷ್ಣಯ್ಯಶೆಟ್ಟರ ಮುದ್ರಿತ ಪ್ರತಿ: ಸು. ೧೯೨೫. ಇದರಲ್ಲಿ ೧೮ ಪರ್ವಗಳು (ತಿಮ್ಮಣ್ಣನ ಉತ್ತರ ಭಾರತವೂ ಸೇರಿ) ಇವೆ. ಈ ಮುದ್ರಣಕ್ಕೆ ಮಂಗಳೂರಿನ ಪ್ರತಿಯನ್ನೆ ಅನುಸರಿಸಿರುವಂತೆ ಕಾಣುತ್ತದೆ. ಆದರೂ ಅದರಲ್ಲಿಲ್ಲದ ಕೆಲವು ಸಂಧಿಗಳು (ಉದಾ: ವಿರಾಟಪರ್ವದಲ್ಲಿ ಬರುವ ಜಟ್ಟಿಗಳ ಕಾಳಗದ ಪ್ರಸಂಗವನ್ನು ವರ್ಣಿಸುವ ಒಂದು ಸಂಧಿ) ಹೇಗೊ ಯಾರ ಕೈಯಿಂದಲೊ ಸೇರಿಕೊಂಡಿವೆ.
೪. ಓರಿಯಂಟಲ್ ಲೈಬ್ರರಿಯ ಹಿಂದಿನ ಪ್ರಕಟಣೆಗಳಲ್ಲಿ ಮೊದಲ ನಾಲ್ಕು ಪರ್ವಗಳು ಏತಕ್ಕೂ ಪ್ರಯೋಜನವಾಗಲಿಲ್ಲ. ಬಹಳ ತಪ್ಪುದಾರಿ ಹಿಡಿದಿವೆ. ಯುದ್ಧ ಪಂಚಕವನ್ನು ಮಾನ್ಯ ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಪ್ರಧಾನ ಸಂಪಾದಕತ್ವದ ನೇತೃತ್ವದಲ್ಲಿ ಶ್ರೀ ಡಿ. ಎಲ್. ನರಸಿಂಹಾಚಾರ್ಯರು (ಭೀಷ್ಮಪರ್ವವನ್ನು) ಶ್ರೀ ಎನ್. ಅನಂತರಂಗಾಚಾರ್ಯರು (ಉಳಿದ ಪರ್ವಗಳನ್ನು) ಸೊಗಸಾಗಿ ಸಂಪಾದಿಸಿದ್ದಾರೆ. ಅವರು ಅಂದು ತಮಗೆ ಸಿಕ್ಕಿದ ಎಲ್ಲ ಸಾಮಗ್ರಿಗಳನ್ನೂ ನೋಡಿ, ತೂಗಿ, ಶ್ರೇಷ್ಠವಾಗಿ ಗ್ರಂಥ ಸಂಪಾದನೆ ಮಾಡಿದ್ದಾರೆ. ಉದ್ಯೋಗ ಪರ್ವವನ್ನು ಓರಿಯಂಟಲ್ ಲೈಬ್ರರಿಯ ಶ್ರೀ ಕೃಷ್ಣಜೋಯಿಸರು ಸಂಪಾದಿಸಿದ್ದಾರೆ. ಇವರೂ ಹತ್ತಾರು ಓಲೆಯ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು, ಪಾಂಡಿತ್ಯ ಪೂರ್ಣವಾದ ರೀತಿಯಲ್ಲಿ ಸಂಪಾದಿಸಿ

ದ್ದಾರೆ. ನಾವು ಮೊದಲ ನಾಲ್ಕು ಪರ್ವಗಳಿಗೆ ಮೊದಲ ಮೂರು ಪ್ರತಿಗಳನ್ನು ಆಶ್ರಯಿಸಿದ್ದೇವೆ. ಕಲ್ಲಚ್ಚಿನ ಪ್ರತಿ ತಕ್ಕಮಟ್ಟಿಗೆ ಶುದ್ಧವಾಗಿದ್ದರೂ ಅದರಲ್ಲಾಗಲಿ ಮೊದಲ ಓರಿಯಂಟಲ್ ಲೈಬ್ರರಿಯ ಪ್ರತಿಗಳಲ್ಲಾಗಲಿ, ಇತರ ಸಂಗ್ರಹಗಳಲ್ಲಾಗಲಿ ಇರದ ಸುಂದರವಾದ ಪಾಠಾಂತರವನ್ನು ಕ ೨೦೭ನೆಯ ಪ್ರತಿಯಲ್ಲಿ ಕಂಡಿದ್ದೇವೆ. ಇಲ್ಲಿ ಅದಕ್ಕೆ ಒಂದೆ ನಿದರ್ಶನವನ್ನು ನೀಡಬಹುದು. ಆದಿಪರ್ವದಲ್ಲಿ ಈ ಪ್ರಸಂಗ ಬರುತ್ತದೆ. ಭೀಮ ದುರ್ಯೋಧನರ ವೈರವನ್ನು ಕಂಡು ಪಮ್ಮಲಮರುಗಿದ ಭೀಷ್ಮರು ಹೀಗೆನ್ನುತ್ತಾರೆ:

'ಮಂಗಳದ ಬೆಳದಿಂಗಳಿನ ಮಳೆ ಸುರಿದುದೆ ಮಹಾದೇವಾ' ಎಂದು. ಈ ಮಾತೇನೊ ಸೊಗಸಾಗಿರುವಂತೆ ಕಂಡರೂ ಅರ್ಥವಾಗಲಿಲ್ಲ. ಸಂಗ್ರಹವೊಂದರಲ್ಲಿ ಹೀಗಿತ್ತು

'ಮಂಗಳದ ಬೆಳುದಿಂಗಳಿಗೆ ಮಳೆ ಸುರಿದಂತೆ ಹಾಯೆಂದು' ಎಂದು. ಇಲ್ಲಿ ಅರ್ಥಸ್ಪಷ್ಟತೆ ದೊರೆಯಿತೆ ವಿನಾ ಮೂಲದ ಕವಿಯ ರೂಪಕದ ಸೌಂದರ್ಯ ಕಂಡಂತಾಗ ಲಿಲ್ಲ. ಆಗ ಆ ಓಲೆಯ ಪ್ರತಿಯಲ್ಲಿ ಕಂಡಿತು ಈ ಸುಂದರವಾದ ಪಾಠಾಂತರ:

'ಮಂಗಳದ ಬೆಳೆದಿಂಗಳಿನ ಮಳೆ ಸುರಿದುದೆ ಮಹಾದೇವಾ!' ಎಂದು. ಮಂಗಳದ ಬೆಳೆಗೆ ಇಂಗಳದ (ಕಾದ ಕೆಂಡದ) ಮಳೆ ಸುರಿಯಿತಲ್ಲಾ ಎನ್ನುವ ಸುಂದರವಾದ ರೂಪಕ ಕಂಡಿತು. ಹೀಗೆ ಕಾಣಬೇಕಾದ ಕುಮಾರವ್ಯಾಸನ ನೈಜಪ್ರತಿಭೆ ಇನ್ನೂ ಉಳಿದುಕೊಂಡಿದೆ. ಮಿತಕಾಲದಲ್ಲಿ ನಮ್ಮ ಶಕ್ತಿಗೆ ಸಾಧ್ಯವಾದಷ್ಟನ್ನು ನಾವಿಲ್ಲಿ, ಸಾಧಿಸಿದ್ದೇವೆ. ಈ ಹಾದಿಯಲ್ಲಿ ಆಗಬೇಕಾದ ಸಾಧನೆ ಅಗಾಧವಾಗಿದೆ.

ಉದ್ಯೋಗಪರ್ವಕ್ಕೆ ಪ್ರಚಲಿತ ಮುದ್ರಿತ ಪ್ರತಿಯನ್ನೂ ಓರಿಯಂಟಲ್ ಲೈಬ್ರರಿಯ ಸಂಶೋಧಿತ ಪ್ರತಿಯನ್ನೂ ಆಧಾರವಾಗಿಟ್ಟುಕೊಂಡಿದ್ದೇವೆ. ಆ ಗ್ರಂಥ ಸಂಪಾದನಕ್ಕೆ ಅವರು ಪ್ರಚಲಿತವಾದ ಪ್ರತಿಯನ್ನು ಬಿಟ್ಟುಬಿಟ್ಟಿರುವುದರಿಂದ ಹೀಗೆ ಮಾಡಬೇಕಾಯಿತು. ಉಳಿದ ಐದು ಪರ್ವಗಳಿಗಾಗಿ ಮೇಲೆ ಹೇಳಿದ ಓರಿಯಂಟಲ್ ಲೈಬ್ರರಿಯ ವಿಶುದ್ಧವಾದ ಪ್ರತಿಗಳನ್ನೆ ಆಶ್ರಯಿಸಿದ್ದೇವೆ. ಇಲ್ಲಿಯೂ ಪ್ರಚಲಿತವಾದ ಪ್ರತಿ ಯನ್ನು ಸಂಪಾದಕರು ಕೈ ಬಿಟ್ಟಿರುವುದರಿಂದ ನಾವು ಅದನ್ನೂ ಗಮನದಲ್ಲಿಟ್ಟುಕೊಂಡಿದ್ದೇವೆ. ಪ್ರಚಲಿತ ಪ್ರತಿಯನ್ನು ಸಂಪೂರ್ಣವಾಗಿ ತ್ಯಜಿಸುವಂತಿಲ್ಲವೆಂಬುದಕ್ಕೆ ಒಂದೇ ನಿದರ್ಶನವನ್ನು ಕೊಡುತ್ತೇವೆ.

'ಆ ಮಹಾಸ್ತ್ರದ ಹಾನಿ ರೋಷದ
ತಾಮಸಾಗ್ನಿಯ 'ನೋಡಿ' ಬಿಡಲು
ದ್ದಾಮನರ್ಜುನ ಕೊಂಡನಗ್ಗದ ಜಾತಮನ್ನುವನು'
(ಓ.ಲೈ.ಪ್ರ.) ಕರ್ಣಪರ್ವ ಸಂಧಿ ೨೩, ಪದ್ಯ ೪೭,

ಇದಕ್ಕೆ ಪಾಠಾಂತರ: 'ನೊದೆದು' (ಚ) 'ಉರಿದು' (ತ.ದ.ಪ)
ಪ್ರಚಲಿತ ಪ್ರತಿಯಲ್ಲಿ ಹೀಗಿದೆ:

............ರೋಷದ
ತಾಮಸಾಗ್ನಿಯ'ನೂದಿ' ಬಿಡಲು
ದ್ದಾಮ..................

ಇದನ್ನೆ ನಾವು ಸ್ವೀಕರಿಸಿಕೊಂಡಿದ್ದೇವೆ. ಇಂತಹವು ಹತ್ತಾರು ಸನ್ನಿವೇಶಗಳು ಬಂದಿವೆ.

ಒಟ್ಟಿನಲ್ಲಿ ನಾವು ಸಿದ್ಧಗೊಳಿಸಿರುವುದು ಜನಪ್ರಿಯ ಪ್ರತಿ ಮಾತ್ರ. ಸಂಶೋಧಿತ ವಿಶುದ್ಧ ಪ್ರತಿ ಬರದತನಕ ಕುಮಾರವ್ಯಾಸನ ಪ್ರತಿಭೆಯ ನಿಜಸ್ವರೂಪದ ಸಂಪೂರ್ಣದರ್ಶನವಾಗುವುದಿಲ್ಲ. ಹಾಗೆ ಮಾಡಲು ಅತ್ಯಂತ ಪ್ರಾಚೀನವಾದ ಹಾಗೂ ಗದುಗಿನ ಸುತ್ತಮುತ್ತಣ ಪ್ರದೇಶದಲ್ಲಿ ದೊರೆಯಬಹುದಾದ ಪ್ರತಿಗಳನ್ನೆಲ್ಲಾ ಸಂಗ್ರಹಿಸಬೇಕು, ೧೪–೧೫ನೆ ಶತಮಾನದ ಶಾಸನಗಳನ್ನೆಲ್ಲಾ ಸಂಗ್ರಹಿಸಿ ಅಭ್ಯಸಿಸಬೇಕು. ಇದು ಒಂದೆರಡು ದಶಕದ ನಾಲ್ಕಾರು ವಿದ್ವಾಂಸರ ಕೆಲಸ.

"ಕೊನೆಯದಾಗಿ, ಈ ಪ್ರಕಾಶನ ಕುಮಾರವ್ಯಾಸನನ್ನು ಮನೆಮನೆಗೂ ಕೊಂಡೊಯ್ಯುವ ಪ್ರಯತ್ನ ಮಾಡಿದೆ. ಮತ್ತೆ ಆ ದಿನ, ಕಾವ್ಯರಸಾಸ್ವಾದನದಿಂದ ಭವದ ಭಾರವನ್ನು ಹಗುರ ಮಾಡಿಕೊಳ್ಳುವ ಆ ದಿನ, ಬೇಗ ಬರುವಂತಾದರೆ ನಾವೆಲ್ಲ ಧನ್ಯರು". "ನಮ್ಮ ಪುಣ್ಯಕ್ಕೆ ನಮಗೊಂದು ವಿಶೇಷ ಸೌಕರ್ಯವಿದೆ. ಅಕ್ಷರ ಪರಿಚಯವಿಲ್ಲದವರೂ ಪುಸ್ತಕ ಕ್ರಯ ಕೊಡಲಾರದವರೂ ಗಮಕಿಗಳ ಅನುಗ್ರಹದಿಂದ ನಾರಣಪ್ಪನ ರಸಾವೇಶದ ರುಚಿಯನ್ನು ಮನದಣಿಯ ಸವಿಯಬಹುದು. ಗದುಗಿನ ಭಾರತವನ್ನು ಕುರಿತು ಮಾತನಾಡುವಾಗ ಅದರ ಅಮೃತಸುಖದ ವಿತರಣೆಗೆ ದಿನ ದಿನವೂ ದುಡಿಯುತ್ತಿರುವ ಗಮಕಿಗಳನ್ನು ನೆನೆಯದಿರುವುದು ಸಾಧ್ಯವಲ್ಲ. ನಾರಣಪ್ಪನ ಕಾವ್ಯದ ಬದುಕಿಗೆ ಗಮಕ ಕಲೆ ಶ್ವಾಸೋಚ್ಛ್ವಾಸದಂತೆ ಅತ್ಯಾವಶ್ಯಕ. ಓದಿ ಅಥವಾ ಓದಿಸಿ ಕೇಳಿದಲ್ಲದೆ ಕುಮಾರವ್ಯಾಸನ ವಾಣಿಯ ಮಹತ್ತು ಅರಿವಾಗುವುದಿಲ್ಲ. ಕವಿ ಪ್ರತಿಭೆಯ ಸೂಕ್ಷ್ಮ ಸೌಂದರ್ಯಗಳನ್ನು ಅರಿಯಲು ವಿಮರ್ಶನ ಕಲೆ ಎಷ್ಟರಮಟ್ಟಿಗೆ ಆವಶ್ಯಕವೋ ಆ ಪ್ರತಿಭೆಯನ್ನು ಆಸ್ವಾದಿಸಲು ಗಮಕ ಕಲೆ ಅಷ್ಟೇಮಟ್ಟಿಗೆ ಆವಶ್ಯಕ. ವಿಮರ್ಶಕರು ಗಮಕಿಗಳಾಗಿ, ಗಮಕಿಗಳು ವಿಮರ್ಶಕರಾಗಿ ಅಥವಾ ವಿಮರ್ಶಕರಿಂದ ಗಮಕಿಗಳರಿತು, ಗಮಕಿಗಳಿಂದ ವಿಮರ್ಶಕರನುಭವಿಸಿ, ಒಬ್ಬರಿಗೊಬ್ಬರು ನೆರವಾಗಿ ಎರಡೂ ಕಲೆಗಳ ಉಪಾಸಕರು ಅನ್ಯೋನ್ಯತೆಯಿಂದ ಕುಮಾರವ್ಯಾಸನ ಸೇವೆಗೆ ಹೊರಟರೆ ಎಂತಹ ಆಶೀರ್ವಾದವಾದೀತು! ಜನಜೀವನಕ್ಕೆ ಅಂತಹ ಪುಣ್ಯಕಾಲ ಈಗಾಗಲೆ ಸ್ವಲ್ಪಮಟ್ಟಿಗೆ ಪ್ರಾರಂಭವಾಗಿದೆ. ಇಂದಿನ ಈ ಪ್ರಕಾಶನವೇ ಮಹೋತ್ಸವವಾಗಿ ಅದಕ್ಕೊಂದು ಸಾಕ್ಷಿಯಾಗಿದೆ".

"ನಮ್ಮ ಕನ್ನಡನಾಡಿಗೆ ದೇವರು ಸಹ್ಯಾದ್ರಿಯನ್ನು ದಯಪಾಲಿಸಿದ್ದಾನೆ. ತುಂಗಾ ಕಾವೇರಿಯರನ್ನು ದಯಪಾಲಿಸಿದ್ದಾನೆ. ಪಶ್ಚಿಮ ಸಮುದ್ರದ ಸಂಗ ಸಾನ್ನಿಧ್ಯಗಳನ್ನು ಕೃಪೆಮಾಡಿದ್ದಾನೆ. ಜೊತೆಗೆ, ಅವೆಲ್ಲಕ್ಕೂ ಹೆಗಲೆಣೆಯಾಗಿ ನಿಂತರೂ ನಮಗೆ ಒಡನಾಡಿಗಳಾಗಿರುವಂತೆ ಪಂಪ ನಾರಣಪ್ಪರನ್ನೂ ಅನುಗ್ರಹಿಸಿದ್ದಾನೆ. ಅವರ ಬೆಲೆಯರಿತು ಬಾಳು ಅರಳಲಿ, ಆ ವಿಶ್ವಕವಿಗಳಿಬ್ಬರನ್ನೂ ನಮ್ಮವರೆಂದು ಹೇಳಿಕೊಳ್ಳುವ ನಮ್ಮ ಹೆಮ್ಮೆಯ ನೆತ್ತಿ ಮುಗಿಲಿಗೆ ತಾಗುತ್ತಿರಲಿ!"

---

ಇದು ಸಮಷ್ಟಿರೂಪದ ಒಂದು ಸಹೃದಯ ವಿಮರ್ಶೆ; ಕನ್ನಡನಾಡಿನ ಹಿರಿಯ ಲೇಖಕ ವಿಮರ್ಶಕರ ಬರವಣಿಗೆಗಳಿಂದ ಆಯ್ದು ಕೋದ ತೋರಣನಾಂದಿಯಾಗಿದೆ ಇದು. ಈ ನಾಂದಿಯ ತೋರಣವನ್ನು ಕಟ್ಟುವುದರಲ್ಲಿ ಅಧ್ಯಾಪಕ ತರುಣ ಮಿತ್ರರು ನನಗೆ ನೆರವಾಗಿರುವುದನ್ನು ನೆನೆಯುತ್ತೇನೆ.

ಕುವೆಂಪು

# ವಿಷಯ ಸೂಚಿ

| ಸಂಧಿ | ವಿಷಯ | | ಪುಟ |
|---|---|---|---|
| | **ಆದಿಪರ್ವ** | | |
| ೧ | ಮಂಗಳಾಚರಣೆ | ... | ೧ |
| ೨ | ಭಾರತ ಕಥಾರಂಭ | ... | ೩ |
| ೩ | ಕರ್ಣ ಜನನ | ... | ೬ |
| ೪ | ಕುರುಪಾಂಡವ ಜನನ | ... | ೮ |
| ೫ | ಪಾಂಡು ವೃತ್ತಾಂತ | ... | ೧೩ |
| ೬ | ಭೀಮ ದುರ್ಯೋಧನರ ವೈರ, ದ್ರೋಣಾಗಮನ | ... | ೧೫ |
| ೭ | ಶಸ್ತ್ರ ಪ್ರದರ್ಶನ; ದ್ರುಪದ ಮಾನಭಂಗ; ದ್ರೌಪದಿ, ಧೃಷ್ಟದ್ಯುಮ್ನರ ಜನನ | | ೧೯ |
| ೮ | ಅರಗಿನ ಅರಮನೆಯಲ್ಲಿ | ... | ೨೪ |
| ೯ | ಹಿಡಿಂಬಕ ವಧೆ, ಹೈಡಿಂಬ ಜನನ | ... | ೩೧ |
| ೧೦ | ಬಕವಧೆ | ... | ೩೩ |
| ೧೧ | ಅಂಗಾರವರ್ಮ ವೃತ್ತಾಂತ, ಪಾಂಚಾಲ ನಗರ ಪ್ರವೇಶ | ... | ೩೬ |
| ೧೨ | ಸ್ವಯಂವರ ಸಿದ್ಧತೆ | ... | ೪೦ |
| ೧೩ | ಸ್ವಯಂವರ ಮಂಟಪದಲ್ಲಿ ದ್ರೌಪದಿ | ... | ೪೨ |
| ೧೪ | ರಾಜರಾಜರನ್ನೆಲ್ಲ ಮತ್ಸ್ಯಯಂತ್ರ ಗೆದ್ದಿತು | ... | ೪೭ |
| ೧೫ | ಬ್ರಾಹ್ಮಣವೇಷಧಾರಿ ಅರ್ಜುನ: ಯಂತ್ರ ಭೇದನ, ರಿಪುನೃಪ ಮರ್ದನ | ... | ೪೯ |
| ೧೬ | ವ್ಯಾಸರ ಉಪದೇಶ, ದ್ರೌಪದಿ ಪಂಚಪಾಂಡವರ ವಿವಾಹ | ... | ೫೩ |
| ೧೭ | ಮತ್ತೆ ಹಸ್ತಿನಾಪುರಕ್ಕೆ ಪಾಂಡವರ ಪ್ರವೇಶ | ... | ೫೮ |
| ೧೮ | ರಾಜ್ಯ ವಿಭಜನೆ | ... | ೬೧ |
| ೧೯ | ಸುಭದ್ರಾ ಪರಿಣಯ | ... | ೬೩ |
| ೨೦ | ಖಾಂಡವವನ ದಹನ | ... | ೬೭ |
| | **ಸಭಾಪರ್ವ** | | |
| ೧ | ರಾಜಸೂಯಾರಂಭ | ... | ೭೩ |
| ೨ | ಜರಾಸಂಧನ ವಧೆ | ... | ೮೦ |
| ೩ | ಪಾರ್ಥ ದಿಗ್ವಿಜಯ | ... | ೮೯ |
| ೪ | ಭೀಮನ ಪೂರ್ವ ದಿಗ್ವಿಜಯ | ... | ೯೪ |
| ೫ | ಸಹದೇವನಿಂದ ದಕ್ಷಿಣ ದಿಗ್ವಿಜಯ; ಘಟೋತ್ಕಚನ ಲಂಕಾಯಾತ್ರೆ | ... | ೯೫ |
| ೬ | ನಕುಲನ ಪಶ್ಚಿಮ ದಿಗ್ವಿಜಯ | ... | ೯೯ |

## ಅರಣ್ಯಪರ್ವ

## ಕರ್ಣಪರ್ವ

## ಶಲ್ಯಪರ್ವ



## ಗದಾಪರ್ವ

ಕುಮಾರವ್ಯಾಸನ

# ಕರ್ಣಾಟ ಭಾರತ ಕಥಾಮಂಜರಿ

## ಆದಿಪರ್ವ

### ಪೀಠಿಕಾ ಸಂಧಿ

ಶ್ರೀವನಿತೆಯರಸನೆ ವಿಮಲ ರಾ
ಜೀವ ಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನನಿಕರ ದಾತಾರ
ರಾವಣಾಸುರ ಮಥನ ಶ್ರವಣ ಸು
ಧಾ ವಿನೂತನ ಕಥನ ಕಾರಣ
ಕಾವುದಾನತ ಜನವ ಗದುಗಿನ ವೀರನಾರಯಣ ೧

ಶರಣಸಂಗವ್ಯಸನ ಭುಜಗಾ
ಭರಣನಮರ ಕಿರೀಟ ಮಂಡಿತ
ಚರಣ ಚಾರುಚರಿತ್ರ ನಿರುಪಮ ಭಾಳಶಿಖಿನೇತ್ರ
ಕರಣನಿರ್ಮಲ ಭಜಕರಘ ಸಂ
ಹರಣ ದಂತಿ ಚಮೂರು ಚರ್ಮಾಂ
ಬರನೆ ಸಲಹುಗೆ ಭಕುತ ಜನರನು ಪಾರ್ವತೀರಮಣ ೨

ವರಮಣಿಗಳಿಂದೆಸೆವ ಮೌಳಿಯ
ಸರಸಿಜಾರಿಯ ಕಿರಣದೋಳಿಯ
ವಿರಚಿಸಿದ ಸಿಂಧೂರಭಾಳದಿ ಕುಣಿವ ಕುಂತಳದ
ಕರಿ ನಿಭಾಕೃತಿಯೆನಿಪ ವದನದ
ಕರದ ಪಾಶದ ಮೋದಕದ ವಿ
ಸ್ತರದ ಗಣಪತಿ ಮಾಡೆಮಗೆ ನಿರ್ವಿಘ್ನದಾಯಕವ ೩

ಗಜಮುಖನೆ ಮೆರೆವೇಕದಂತನೆ
ನಿಜಗುಣಾನ್ವಿತ ಪರಶುಧಾರನೆ
ರಜತಗಿರಿಗೊಡೆಯನ ಕುಮಾರನೆ ವಿದ್ಯೆವಾರಿಧಿಯೆ
ಅಜನು ಹರಿ ರುದ್ರಾದಿಗಳು ನೆರೆ
ಭಜಿಸುತಿಹರನವರತ ನಿನ್ನನು
ತ್ರಿಜಗವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ ೪

ವಾರಿಜಾಸನೆ ಸಕಲಶಾಸ್ತ್ರ ವಿ
ಚಾರದುದ್ಭವೆ ವಚನರಚನೋ
ದ್ಧಾರೆ ಶ್ರುತಿ ಪೌರಾಣದಾಗಮ ಸಿದ್ಧಿದಾಯಕಿಯೆ
ಶೌರಿ ಸುರಪತಿ ಸಕಲ ಮುನಿಜನ
ಸೂರಿಗಳಿಗನುಪಮದ ಯುಕುತಿಯೆ
ಶಾರದೆಯೆ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ ೫

ಆದಿ ನಾರಾಯಣಿ ಪರಾಯಣಿ
ನಾದಮಯೆ ಗಜಲಕ್ಷ್ಮಿ ಸತ್ವಗು
ಣಾಧಿದೇವತೆ ಅಮರ ವಂದಿತ ಪಾದಪಂಕರುಹೆ
ವೇದಮಾತೆಯೆ ವಿಶ್ವತೋಮುಖಿ
ಯೈದು ಭೂತಾಧಾರಿಯೆನಿಪೀ
ದ್ವಾದಶಾತ್ಮ ಜ್ಯೋತಿರೂಪಿಯೆ ನಾದೆ ಶಾರದೆಯೆ ೬

ವೀರನಾರಾಯಣನೆ ಕವಿ ಲಿಪಿ
ಕಾರ ಕುವರವ್ಯಾಸ ಕೇಳುವ
ಸೂರಿಗಳು ಸನಕಾದಿಗಳು ಜಂಗಮ ಜನಾರ್ದನರು
ಚಾರುಕವಿತೆಯ ಬಳಕೆಯಲ್ಲ ವಿ
ಚಾರಿಸುವಡಳವಲ್ಲ ಚಿತ್ತವ
ಧಾರು ಹೋ ಸರ್ವಜ್ಞರಾದರು ಸಲುಗೆ ಬಿನ್ನಪವ ೭

ಶ್ರೀಮದಮರಾಧೀಶ ನತಪದ
ತಾಮರಸ ಘನವಿಪುಳ ನಿರ್ಮಲ
ರಾಮನನುಪಮ ಮಹಿಮ ಸನ್ಮುನಿ ವಿನುತ ಜಗಭರಿತ
ಶ್ರೀಮದೂರ್ಜಿತ ಧಾಮ ಸುದಯಾ
ನಾಮನಾಹವ ಭೀಮ ರಘುಕುಲ
ರಾಮ ರಕ್ಷಿಸುವೊಲಿದು ಗದುಗಿನ ವೀರನಾರಯಣ ೮

ಶರಧಿಸುತೆ ಸನಕಾದಿ ವಂದಿತೆ
ಸುರನರೋರಗ ಮಾತೆ ಸುಜನರ
ಪೊರೆವ ದಾತೆ ಸುರಾಗ್ರಗಣ್ಯಸುಮೌನಿ ವರಸ್ತುತ್ಯೆ
ಪರಮ ಕರುಣಾ ಸಿಂಧು ಪಾವನ
ಚರಿತೆ ಪದ್ಮಜ ಮುಖ್ಯ ಸಕಲಾ
ಮರ ಸುಪೂಜಿತೆ ಲಕ್ಷ್ಮಿ ಕೊಡುಗೆಮಗಧಿಕ ಸಂಪದವ ೯

ಗಜಮುಖನ ವರಮಾತೆ ಗೌರಿಯೆ
ತ್ರಿಜಗದರ್ಚಿತ ಚಾರು ಚರಣಾಂ
ಬುಜೆಯೆ ಪಾವನಮೂರ್ತಿ ಪದ್ಮಜಮುಖ್ಯ ಸುರಪೂಜ್ಯೆ
ಭಜಕರಘ ಸಂಹರಣೆ ಸುಜನ
ವ್ರಜ ಸುಸೇವಿತೆ ಮಹಿಷ ಮರ್ದಿನಿ
ಭುಜಗ ಭೂಷಣನರಸಿ ಕೊಡು ಕಾರುಣ್ಯದಲಿ ಮತಿಯ ೧೦

ದುರಿತಕುಲಗಿರಿ ವಜ್ರದಂಡನು
ಧರೆಯ ಜಂಗಮ ಮೂರ್ತಿ ಕವಿ ವಾ
ರಿರುಹ ದಿನಮಣಿ ನಿಖಿಲ ಯತಿಪತಿ ದಿವಿಜವಂದಿತನು
ತರಳನನು ತನ್ನವನೆನುತ ಪತಿ
ಕರಿಸಿ ಮಗನೆಂದೊಲಿದು ಕರುಣದಿ
ವರವನಿತ್ತನು ದೇವ ವೇದವ್ಯಾಸ ಗುರುರಾಯ ೧೧

ವಂದಿತಾಮಳ ಚರಿತನಮರಾ
ನಂದ ಯದುಕುಲ ಚಕ್ರವರ್ತಿಯ
ಕಂದ ನತಸಂಸಾರ ಕಾನನ ಘನ ದವಾನಳನು
ನಂದನಂದನ ಸನ್ನಿಭನು ಸಾ
ನಂದದಿಂದಲೆ ನಮ್ಮವನು ಕೃಪೆ
ಯಿಂದ ಸಲಹುಗೆ ದೇವ ಜಗದಾರಾಧ್ಯ ಗುರುರಾಯ ೧೨

ತಿಳಿಯ ಹೇಳುವೆ ಕೃಷ್ಣಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ
ಹಲವು ಜನ್ಮದ ಪಾಪ ರಾಶಿಯ
ತೊಳೆವ ಜಲವಿದು ಶ್ರೀಮದಾಗಮ
ಕುಲಕೆ ನಾಯಕ ಭಾರತಾಕೃತಿ ಪಂಚಮ ಶ್ರುತಿಯ ೧೩

ಪದದ ಪೌಢಿಯ ನವರಸಂಗಳ
ವುದಿತವೆನುವಭಿಧಾನ ಭಾವವ
ಬೆದಕಲಾಗದು ಬಲ್ಲ ಪೌಢರುವಿಾ ಕಥಾಂತರಕೆ
ಇದ ವಿಚಾರಿಸೆ ಬಜೆಯ ತೊಳಸಿಯ
ವುದಕದಂತಿರೆಯಿಲ್ಲಿ ನೋಳ್ಪುದು
ಪದುಮನಾಭನ ಮಹಿಮೆ ಧರ್ಮವಿಚಾರ ಮಾತ್ರವನು ೧೪

ಹಲಗೆ ಬಳಪವ ಪಿಡಿಯದೊಂದ
ಗ್ಗಳಿಕೆ ಪದವಿಟ್ಟಳುಪದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ
ಬಳಸಿ ಬರೆಯಲು ಕಂಠಪತ್ರದ
ವುಲುಹುಗೆಡದಗ್ಗಳಿಕೆಯೆಂಬೀ
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ ೧೫

ಕೃತಿಯನವಧರಿಸುವುದು ಸುಕವಿಯ
ಮತಿಗೆ ಮಂಗಳವೀವುದಧಿಕರು
ಮಥಿಸುವುದು ತಿದ್ದುವುದು ಮರೆವುದು ಲೇಸ ಸಂಚಿಪುದು
ನುತಗುಣರು ಭಾವುಕರು ವರಪಂ
ಡಿತರು ಸುಜನರು ಸೂಕ್ತಿಕಾರರು
ಮತಿಯನೀವುದು ವೀರನಾರಾಯಣನ ಕಿಂಕರಗೆ ೧೬

ತಿಣಿಕಿದನು ಫಣಿರಾಯ ರಾಮಾ
ಯಣದ ಕವಿಗಳ ಭಾರದಲಿ ತಿಂ
ತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ
ಬಣಗು ಕವಿಗಳ ಲೆಕ್ಕಿಪನೆ ಸಾ
ಕೆಣಿಸದಿರು ಶುಕರೂಪನಲ್ಲವೆ
ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ ೧೭

ಹರಿಯ ಬಸುರೊಳಗಖಿಳ ಲೋಕದ
ವಿರಡವಡಗಿಹವೋಲು ಭಾರತ
ಶರಧಿಯೊಳಗಡಗಿಹವನೇಕ ಪುರಾಣ ಶಾಸ್ತ್ರಗಳು
ಪರಮ ಭಕ್ತಿಯಲೀ ಕೃತಿಯನವ
ಧರಿಸಿ ಕೇಳ್ವಾ ನರರ ದುರಿತಾಂ
ಕುರದ ಬೇರಿನ ಬೇಗೆಯೆಂದರುಹಿದನು ಮುನಿನಾಥ ೧೮

ಅರಸುಗಳಿಗಿದು ವೀರ ದ್ವಿಜರಿಗೆ
ಪರಮ ವೇದದ ಸಾರ ಯೋಗೀ
ಶ್ವರರ ತತ್ವವಿಚಾರ ಮಂತ್ರಿಜನಕ್ಕೆ ಬುದ್ಧಿಗುಣ
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ ೧೯

ವೇದ ಪಾರಾಯಣದ ಫಲ ಗಂ
ಗಾದಿ ತೀರ್ಥಸ್ನಾನ ಫಲ ಕೃ
ಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮಯಾಗ ಫಲ
ಮೇದಿನಿಯನೊಲಿದಿತ್ತ ಫಲ ವ
ಸ್ತ್ರಾದಿ ಕನ್ಯಾದಾನ ಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ ೨೦

ಹೇಮ ಖುರ ಶೃಂಗಾಭರಣದಲಿ
ಕಾಮಧೇನು ಸಹಸ್ರ ಕಪಿಲೆಯ
ಸೋಮ ಸೂರ್ಯ ಗ್ರಹಣದಲಿ ಸುರನದಿಯ ತೀರದಲಿ
ಶ್ರೀಮುಕುಂದಾರ್ಪಣವೆನಿಸಿ ಶತ
ಭೂಮಿದೇವರಿಗಿತ್ತ ಫಲವಹು
ದೀ ಮಹಾಭಾರತದೊಳೊಂದಕ್ಷರವ ಕೇಳ್ದರಿಗೆ ೨೧

ಚೋರ ನಿಂದಿಸಿ ಶಶಿಯ ಬೈದಡೆ
ಕ್ಷೀರವನು ಕ್ಷಯರೋಗಿ ಹಳಿದರೆ
ವಾರಣಾಸಿಯ ಹೆಳವ ನಿಂದಿಸಿ ನಕ್ಕರೇನಹುದು
ಭಾರತದ ಕಥನ ಪ್ರಸಂಗವ
ಕ್ರೂರ ಕರ್ಮಿಗಳೆತ್ತ ಬಲ್ಲರು
ಘೋರರೌರವವನ್ನು ಕೆಡಿಸುಗು ಕೇಳ್ದ ಸಜ್ಜನರ ೨೨

ವೇದಪುರುಷನ ಸುತನ ಸುತನ ಸ
ಹೋದರನ ಹೆಮ್ಮಗನ ಮಗನ ತ
ಳೋದರಿಯ ಮಾತುಳನ ರೂಪನನತುಳ ಭುಜಬಲದಿ
ಕಾದಿ ಗೆಲಿದನನಣ್ಣನವ್ವೆಯ
ನಾದಿನಿಯ ಜಠರದಲಿ ಜನಿಸಿದ
ನಾದಿ ಮೂರುತಿ ಸಲಹೊ ಗದುಗಿನ ವೀರನಾರಯಣ ೨೩

## ಎರಡನೆಯ ಸಂಧಿ

ಸೂ. ರಾಯ ಜನಮೇಜಯಗೆ ವೈಶಂ
ಪಾಯನನು ಹೇಳಿದನು ಮುನಿ ದ್ವೈ
ಪಾಯನಭಿವರ್ಣಿಸಿದ ಭಾರತ ವರ ಕಥಾಮೃತವ

ಸೂತನೈತಂದನು ಜಗದ್ವಿ
ಖ್ಯಾತ ಶೌನಕಮುಖ್ಯ ಮುನಿ ಸಂ
ಘಾತ ಪಾವನ ನೈಮಿಶಾರಣ್ಯಕ ವರಾಶ್ರಮಕೆ
ಆತನನು ಕಂಡುದು ತಪಸ್ವಿ
ವ್ರಾತ ಕುಶಲಕ್ಷೇಮ ಮಧುರ
ಪ್ರೀತಿ ವಚನಾಮೃತದಿ ಸಂಭಾವನೆಯ ಮಾಡಿದರು ೧

ಪರಮ ಪೌರಾಣಿಕ ಶಿರೋಮಣಿ
ಬರವಿದೆತ್ತಣವಾಯ್ತು ಕೌತುಕ
ವರಕಥಾ ಪೀಯೂಷಸಾರ ವಿಶೇಷವೇನುಂಟು
ಚರಿತ ಚತುರಾಶ್ರಮ ತಪೋ ನಿ
ಷ್ಠರಿಗೆ ವಿಶ್ರಮವೈ ಭವಾದೃಶ
ದರುಶನವು ನಮಗೆಂದು ನುಡಿದರು ರೋಮಹರ್ಷಣಿಯ ೨

ವಂದಿಸಿದನೈ ವರತಪೋಧನ
ವೃಂದ ಚಿತ್ತೈಸುವುದು ತಾನೇ
ನೆಂದು ನುಡಿವೆನು ಕೌತುಕಾಮೃತರಸದ ಕಡುಗಡಲ
ಹಿಂದೆ ಕೇಳಿದುದಲ್ಲ ಹೇಳ್ವುದು
ಮುಂದೆ ಹೊಸತಿದು ನಿಗಮಶತವಿದ
ರೊಂದೊರೆಗೆ ನೆರೆ ಬಾರದೆಂದನು ಸೂತ ಕೈಮುಗಿದು ೩

ಕೇಳಿದನು ಜನಮೇಜಯು ಕ್ಷಿತಿ
ಪಾಲಕನು ವರ ಸರ್ಪಯಜ್ಞ
ಸ್ಥೂಲ ಪಾಪವಿಘಾತಿಗೋಸುಗವೀ ಮಹಾಕಥೆಯ
ಕೇಳಿದೆನು ತಾನಲ್ಲಿ ಮುನಿಜನ
ಮೌಳಿಮಂಡಿತ ಚರಣಕಮಲ ವಿ
ಶಾಲ ವೇದವ್ಯಾಸಕೃತ ಭಾರತ ಕಥಾಮೃತವ ೪

ಹಾ ಮಹಾದೇವಾಯಿದೆಂತೈ
ರೋಮ ಹರ್ಷಣಿ ನಾವು ಮಾಡಿದ
ಸೋಮ ಪಾನಾದಿಗಳ ಪುಣ್ಯಸ್ತೋಮ ತರುಗಳಿಗೆ
ಈ ಮಹಾಭಾರತ ಕಥಾಮೃತ
ರಾಮಣೀಯಕ ಫಲವಲಾ ನಿ
ಸ್ಸೀಮ ಪುಣ್ಯರು ಧನ್ಯರಾವೆಂದುದು ಮುನಿಸ್ತೋಮ ೫

ಹೇಳು ಸಾಕೆಲೆ ಸೂತ ದುರಿತ
ವ್ಯಾಳ ವಿಷಜಾಂಗುಳಿಕವನು ನೀ
ಕೇಳಿದಂದದೊಳಂದು ಜನಮೇಜಯನ ಯಾಗದಲಿ
ಮೌಳಿಗಳಲಾನುವೆವು ನಿನ್ನಯ
ಹೇಳಿಕೆಯನೆನೆ ನಿಖಿಳ ಮುನಿಗಳ
ನೋಲಗಿಸುವೆನು ನಿಮ್ಮನುಜ್ಞೆಯಲೆಂದು ಕೈಮುಗಿದ ೬

ಸರ್ಪಯಜ್ಞದಲಾದ ದುರಿತದ
ದರ್ಪವನು ಕೆಡೆಬೀಳಲೊದೆಯಲು
ತರ್ಪಣಾದಿ ಕ್ರಿಯೆಗಳಲಿ ಸಾಮರ್ಥ್ಯವಿಲ್ಲೆಂದು
ದರ್ಪಕಾಹಿತಮೂರ್ತಿ ಮುನಿಮುಖ
ದರ್ಪಣನು ಶಿಷ್ಯನನು ಕರೆದು ಸ
ಮರ್ಪಿಸಿದನರಸಂಗೆ ವೇದವ್ಯಾಸ ಮುನಿರಾಯ ೭

ರಾಯ ಕೇಳ್ಳೆ ನಿಮ್ಮ ಪಾಂಡವ
ರಾಯಚರಿತವನೆಂದು ವೈಶಂ
ಪಾಯನಿಗೆ ಬೆಸಸಿದನು ಕೊಟ್ಟನು ಬಳಿಕ ಪುಸ್ತಕವ
ರಾಯನತಿ ಭಕ್ತಿಯಲಿ ವೈಶಂ
ಪಾಯನಗೆ ವಂದಿಸಿ ನಿಜಾಭಿ
ಪ್ರಾಯವನು ಕೇಳಿದನು ಚಿತ್ತೈಸುವುದು ಮುನಿನಿಕರ ೮

ವಿತತ ಪುಸ್ತಕವನು ಸುಗಂಧಾ
ಕ್ಷತೆಯೊಳರ್ಚಿಸಿ ಸೋಮ ಸೂರ್ಯ
ಕ್ಷಿತಿ ಜಲಾನಲ ವಾಯು ಗಗನಾದಿಗಳಿಗಭಿನಮಿಸಿ
ಶತಮಖಾದಿ ಸಮಸ್ತ ದೇವ
ಪ್ರತತಿಗೆರಗಿ ಸರೋಜಭವ ಪಶು
ಪತಿಗಳಿಗೆ ಕೈಮುಗಿದು ವಿಮಲ ಜ್ಞಾನಮುದ್ರೆಯಲಿ ೯

ಮನದೊಳಾದ್ಯಂಪುರುಷಮೀಶಾ
ನನನು ಪುರುಹೂತ ಪುರಸ್ಕೃತ
ನನಘನೇಕಾಕ್ಷರ ಪರಬ್ರಹ್ಮನ ಸನಾತನನ
ದನುಜರಿಪು ಸುವ್ಯಕ್ತನವ್ಯ
ಕ್ತನನು ಸದಸದ್ರೂಪನವ್ಯಯು
ನೆನಿಪ ವಿಷ್ಣುವ ನೆನೆದು ಮುನಿ ವಿಸ್ತರಿಸಿದನು ಕಥೆಯ ೧೦

ವೇದ ನಾಲ್ಕದರಂಗವಾರ
ಷ್ಟಾದಶಾದಿ ಪುರಾಣ ಸ್ಮೃತಿಗಳೊ
ಳಾದ ಪೂರ್ವೋತ್ತರದ ಮೀಮಾಂಸದ ಪರಿಕ್ರಮದ
ವಾದ ವಿಲಸನ್ನ್ಯಾಯವನು ಶ
ಬ್ದೋದಧಿಯನಳವಡಿಸಿ ರಚಿಸಿದ
ಬಾದರಾಯಣನಂಘ್ರಿಯನು ಭಜಿಸಿದನು ಮನದೊಳಗೆ ೧೧

ಅರಸ ಕೇಳ್ಳೆ ನಾರದಾದ್ಯರು
ಸರಸಿರುಹ ಸಂಭವನ ಸಭೆಯೊಳು
ವರ ಮಹಾಭಾರತವ ಕೊಂಡಾಡಿದರು ಭಕ್ತಿಯಲಿ
ವರ ಮಹತ್ವದಿ ಭಾರವತ್ವದಿ
ವರ ಮಹಾಭಾರತವಿದೊಂದೇ
ದುರಿತ ದುರ್ಗ ವಿಭೇದಕರವಿ ರೆ.ಳು ಲೋಕದಲಿ ೧೨

ಹೇಳಿದನು ಪೌಲೋಮ ಚರಿತೋ
ದ್ದಾಲಕಾಖ್ಯರ ಚರಿತವನು ಮುನಿ
ಹೇಳಿದನು ಫಣಿನಿಕರ ಗರುಡಾಸ್ತಿಕರ ಸಂಭವವ
ಮೇಲೆ ಬಳಿಕ ಪರೀಕ್ಷಿದವನೀ
ಪಾಲ ಶಾಪದ ಮರಣವನು ನೆರೆ
ಹೇಳಿದನು ಮುನಿಗಳಿಗೆ ಸರ್ಪಾಧ್ವರದ ಸಂಗತಿಯ ೧೩

ಕೇಳಿದನು ಜನಮೇಜಯ ಕ್ಷಿತಿ
ಪಾಲ ವೈಶಂಪಾಯನನು ತಾ
ಕೇಳು ದುರಿತಂಗಳಿಗೆ ಪ್ರಾಯಶ್ಚಿತ್ತ ರೂಪದಲಿ
ಕೇಳಿರೈ ಮುನಿನಿಕರವೀ ಕಲಿ
ಕಾಲದಲಿ ಫಲಿಸುವುದು ಲಕ್ಷ್ಮೀ
ಲೋಲ ನಾಮಸ್ತುತಿ ಮಹಾಭಾರತ ಕಥಾಶ್ರವಣ ೧೪

ರಾಯ ಚಿತ್ತೈಸೆಂದು ವೈಶಂ
ಪಾಯಮುನಿ ಹೇಳಿದನು ಕಮಲ ದ
ಳಾಯತಾಕ್ಷನ ಬಾಲಕೇಳಿ ವಿಧೂತಕಿಲ್ಬಿಷವ
ಕಾಯ ಕಲ್ಮಷಹರವಖಿಳ ನಿ
ಶ್ರೇಯಸದ ಸದ್ರೂಪುವಿನ ಸಂ
ದಾಯಕವ ನಿರ್ಮಲ ಮಹಾಭಾರತ ಕಥಾಮೃತವ ೧೫

ಆದಿ ಸೃಷ್ಟಿಯೊಳುದಿಸಿದರು ದ
ಕ್ಷಾದಿ ವಿಮಲ ನವಪ್ರಜೇಶ್ವರ
ರಾದರಂಬುಜಭವನ ಲೀಲಾಮಾತ್ರ ಸೂತ್ರದಲಿ
ಆದನವರೊಳಗತ್ರಿಮುನಿ ಬಳಿ
ಕಾದನಾ ಮುನಿಪತಿಗೆ ಜಗದಾ
ಹ್ಲಾದಕರ ಹಿಮಕಿರಣನಾತನಲಾಯ್ತು ಶಶಿವಂಶ ೧೬

ಸೋಮನಿಂ ಬುಧನಾ ಬುಧಂಗೆಯು
ಭೂಮಿಯಲ್ಲಿ ಪುರೂರವನು ಬಳಿ
ಕಾ ಮಹೀಪತಿಗೂರ್ವಶಿಯೊಳಾಯುಃಕುಮಾರಕನು
ಆ ಮಹೀಶಗೆ ನಹುಷ ನಹುಷಂ
ಗಾ ಮಹಾತ್ಮ ಯಯಾತಿ ಬಳಿಕೀ
ಸೋಮಕುಲವೆರಡಾಯ್ತು ಯದು ಪೂರುಗಳ ದೆಸೆಯಿಂದ ೧೭

ಯದು ಪರಂಪರೆಯಿಂದ ಯಾದವ
ರುದಿಸಿದರು ಪೂರುವಿನ ದೆಸೆಯಿಂ
ದಿದುವೆ ಕೌರವ ವಂಶವಾಯ್ತು ಯಯಾತಿ ಪೌತ್ರರಲಿ
ವಿದಿತ ಪೂರ್ವೋತ್ತರದ ಯದು ವಂ
ಶದ ಕಥಾವಿಸ್ತಾರವನು ಹೇ
ಳಿದನು ದುಷ್ಯಂತನಲಿ ಶಾಕುಂತಲೆಯ ಕಥೆ ಸಹಿತ ೧೮

ಭರತನಾ ದುಷ್ಯಂತನಿಂದವ
ತರಿಸಿದನು ತತ್ಪೂರ್ವ ನೃಪರಿಂ
ಹಿರಿದು ಸಂದನು ಬಳಿಕ ಭಾರತವಂಶವಾಯ್ತಲ್ಲಿ
ಭರತಸೂನು ಸುಹೋತ್ರನಾತನ
ವರ ಕುಮಾರಕ ಹಸ್ತಿ ಹಸ್ತಿನ
ಪುರಿಗೆ ಹೆಸರಾಯ್ತಾತನಿಂದವೆ ನೃಪತಿ ಕೇಳೆಂದ ೧೯

ವರಕುಮಾರರ ಪಂಕ್ತಿಯಲಿ ಸಂ
ವರಣನಾತಗೆ ಸೂರ್ಯಪುತ್ರಿಗೆ
ಕುರು ಮಹೀಪತಿ ಜನಿಸಿದನು ಬಳಿಕಾಯ್ತು ಕುರುವಂಶ
ವರ ಪರಂಪರೆಯೊಳ್ ಪ್ರತೀಪನು
ಧರಣಿಪತಿಯಾತನಲಿ ಶಂತನು
ಧರೆಗಧೀಶ್ವರನಾಗಿ ಬೆಳಗಿದನರಸ ಕೇಳೆಂದ ೨೦

ಸರಸಿಜಾಸನ ಕೊಟ್ಟ ಶಾಪದಿ
ಯರಸಿಯಾದಳು ಗಂಗೆ ಬಳಿಕಿ
ಬ್ಬರಿಗೆ ಮಕ್ಕಳು ವಸುಗಳೆಂಟು ವಸಿಷ್ಠ ಶಾಪದಲಿ
ನಿರಪರಾಧಿಗಳೇಳು ಜನನಾಂ
ತರಕೆ ಮರಣವ ಕಂಡರುಳಿದಂ
ಗಿರವು ಭೂಲೋಕದಲಿ ಬಲಿದುದು ಭೀಷ್ಮನಾಮದಲಿ ೨೧

ಶಾಪ ಹಿಂಗಿತು ಸ ರನದಿಗೆ ಬಳಿ
ಕಾ ಪರಾಕ್ರಮಿ ಭೀಷ್ಮ ಶಂತನು
ಭೂಪತಿಗೆ ಮಗನಾಗಿ ಬೆಳಗಿನಖಿಳ ದಿಕ್ತಟವ
ಭೂಪ ಕೇಳೈ ಉಪರಿಚರ ವಸು
ರೂಪಗರ್ಭವು ಮೀನ ಬಸುರಲಿ
ವ್ಯಾಪಿಸಿತು ಜನಿಸಿದುದು ಮಿಥುನವು ಮತ್ಸ್ಯ ಜಠರದಲಿ ೨೨

ಬಳಿಕ ಮತ್ಸ್ಯದ ಬಸುರಲುದಿಸಿದ
ನಳಿನಲೋಚನೆ ಮತ್ಸ್ಯಗಂಧಿನಿ
ಬೆಳೆವುತಿರ್ದಳು ಸಂಗವಾಯ್ತು ಪರಾಶರವ್ರತಿಯ
ಬಳಿಕ ಯೋಜನಗಂಧಿಯಲ್ಲಿಂ
ದಿಳಿದನಭ್ರಶ್ಯಾಮನುರು ಪಿಂ
ಗಳ ಜಟಾಪರಿಬದ್ಧ ವೇದವ್ಯಾಸ ಮುನಿರಾಯ ೨೩

ನೆನೆ ವಿಪತ್ತಿನೊಳೆಂದು ತಾಯನು
ತನುಜ ಬೀಳ್ಕೊಂಡನು ಪರಾಶರ
ಮುನಿ ಪುನಃ ಕನ್ಯತ್ವವನು ಕರುಣಿಸಿದನಾ ಸತಿಗೆ
ವಿನುತ ಯಮುನಾ ತೀರದಲಿ ಮಾ
ನಿನಿಯ ಕಂಡನು ಬೇಂಟೆಯಾಡುತ
ಜನಪ ಶಂತನು ಮರುಳುಗೊಂಡನು ಮದನನೆಸುಗೆಯಲಿ ೨೪

ಪರಿಮಳದ ಬಳಿವಿಡಿದು ಬಂದೀ
ತರುಣಿಯನು ಕಂಡಾರು ನೀನೆಂ
ದರಸ ಬೆಸಗೊಳುತೆಸುವ ಕಾಮನ ಶರಕೆ ಮೈಯೊಡ್ಡಿ
ಅರಮನೆಗೆ ನಡೆಯೆನಲು ತಂದೆಯ
ಪರಮ ವಚನವಲಂಘ್ಯವೆನೆ ಕಾ
ತರಿಸಿ ಭಗ್ನ ಮನೋರಥನು ಮರಳಿದನು ಮಂದಿರಕೆ ೨೫

ವಿರಹದಾವುಗೆ ಕಿಚ್ಚು ಭೂಮೀ
ಶ್ವರನ ಮುಸುಕಿತು ಬಲಿದವಸ್ಥೆಯ
ನರಸ ಬಣ್ಣಿಸಲರಿಯೆನೇಳೆಂಟೊಂಬತರ ಬಳಿಯ
ಮರಣವೀತಂಗೆಂಬ ಜನದು
ಬ್ಬರದ ಗುಜುಗುಜುವರಿದು ಯಮುನಾ
ವರನದಿಯ ತೀರಕ್ಕೆ ಬಂದನು ಭೀಷ್ಮ ವಹಿಲದಲಿ ೨೬

ಕರೆಸಿದನು ಧೀವರನನಯ್ಯಂ
ಗರಸಿಯಾಗಲಿ ನಿನ್ನ ಮಗಳೆನ
ಲರಸಿಯಾದರೆ ಮಗಳ ಮಕ್ಕಳು ರಾಜ್ಯವಾಳುವರೆ
ಅರಿದು ಸಲಿಸುವಡಿದನು ನೀ ಬರಿ
ಯರಸುತನ ನಮಗೇಕೆನಲು ಧೀ
ವರನ ಮಾತಿಂಗೀತನೆಂದನು ರಾಯ ಕೇಳೆಂದ ೨೭

ಆದರಿಲ್ಲಿಂ ಮೇಲೆ ನಾರಿಯು
ರಾದವರು ಭಾಗೀರಥಿಗೆ ಸರಿ
ಮೇದಿನಿಯ ಸಲಿಸುವೆನು ನಿನ್ನಯ ಮಗಳ ಮಕ್ಕಳಿಗೆ
ಈ ದಿವಿಜರೀ ಹರಿ ಹರ ಬ್ರ
ಹ್ಮಾದಿ ದೇವರು ಸಾಕ್ಷಿ ಹೋಗೆಂ
ದಾ ದಯಾಂಬುಧಿ ನಗುತ ನಿನ್ನಯ ಮಗಳ ಕರೆಸೆಂದ ೨೮

ತರಿಸಿದನು ದಂಡಿಗೆಯ ದಂಡಿಯ
ಚರರ ನೆಲನುಗ್ಗಡಣೆಯಲಿ ಸರ
ಸಿರುಹಮುಖಿಯನು ತಂದು ಮದುವೆಯ ಮಾಡಿದನು ಪಿತಗೆ
ಉರವಣಿಸಿ ಮಗ ನುಡಿದ ಭಾಷೆಯ
ನರಸ ಕೇಳಿದು ಬಳಿಕ ಭೀಷ್ಮಗೆ
ವರವನಿತ್ತನು ಮರಣವದು ನಿನ್ನಿಚ್ಛೆ ಹೋಗೆಂದ ೨೯

ಬಳಿಕ ಯೋಜನಗಂಧಿಯಲಿ ಮ
ಕ್ಕಳುಗಳವತರಿಸಿದರು ದೀಪ್ತ
ಜ್ವಲನತೇಜರು ಕಲ್ಪಭೂಜರು ಹಿಮಕರಾನ್ವಯಕೆ
ಲಲಿತ ಮಂಗಳ ಜಾತಕರ್ಮಾ
ವಳಿಯ ಚಿತ್ರಾಂಗದನನಾ ನೃಪ
ತಿಲಕ ನೆಗಳೆ ವಿಚಿತ್ರವೀರ್ಯನ ನಾಮಕರಣದಲಿ ೩೦

ಇರಲಿರಲು ಶಂತನು ಮಹೀಪತಿ
ಸುರರೊಳಗೆ ಸೇರಿದನು ಬಳಿಕೀ
ಧರಣಿಯೊಡೆತನವಾಯ್ತು ಚಿತ್ರಾಂಗದ ಕುಮಾರಂಗೆ
ಅರಸ ಕೇಳೈ ಕೆಲವು ಕಾಲಾಂ
ತರದಲಾತನು ಕಾದಿ ಗಂಧ
ರ್ವರಲಿ ಮಡಿದನು ಪಟ್ಟವಾಯ್ತು ವಿಚಿತ್ರವೀರ್ಯಂಗೆ ೩೧

ರಾಯ ಕೇಳೈ ಸಕಲ ರಾಜ್ಯ
ಶ್ರೀಯನಾತಂಗಿತ್ತು ಭೀಷ್ಮನು
ತಾಯ ಚಿತ್ತವ ಪಡೆದು ಮೆಚ್ಚಿಸಿದನು ಜಗತ್ರಯವ
ರಾಯ ಕುವರನ ಮದುವೆಗಬ್ಜದ
ಳಾಯತಾಕ್ಷಿಯರನು ವಿಚಾರಿಸಿ
ಹಾಯಿದನು ದಳದುಳದೊಳೊಂದು ವಿವಾಹ ಮಂಟಪಕೆ ೩೨

ಅಲ್ಲಿ ನೆರೆದಾ ಕ್ಷತ್ರವರ್ಗವ
ಚೆಲ್ಲಬಡಿದು ವಿವಾಹ ಶಾಲೆಯ
ಚೆಲ್ಲೆಗಂಗಳ ಕಮಲಮುಖಿಯರ ಮೂವರನು ಪಿಡಿದು
ಘಲ್ಲಣೆಯ ಖಂಡೆಯದ ಚೌಪಟ
ಮಲ್ಲ ಭೀಷ್ಮನು ಪುರಕೆ ತಂದವ
ರೆಲ್ಲರನು ತಮ್ಮಂಗೆ ಮದುವೆಯ ಮಾಡಲನುವಾದ ೩೩

ಆ ಕಮಲಲೋಚನೆಯರೊಳು ವೊದ
ಲಾಕೆ ಭೀಷ್ಮನ ಗಂಡನೆಂದೇ
ನೂಕಿ ಭಾಷೆಯ ಮಾಡಿ ನಿಂದಳು ಛಲದ ಬಿಗುಹಿನಲಿ
ಆಕೆ ಮಾಣಲಿ ಮಿಕ್ಕವರು ಬರ
ಲೀ ಕುಮಾರಂಗೆಂದು ವೈದಿಕ
ಲೌಕಿಕೋತ್ಸವದಿಂದ ಮದುವೆಯ ಮಾಡಿದನು ಭೀಷ್ಮ ೩೪

ಅರಸ ಚಿತ್ತೈಸಂಬೆಯೆಂಬಳು
ದುರುಳೆ ಭೀಷ್ಮನ ಕೂಟವಲ್ಲದೆ
ಮರಣದೆಡೆಯಲಿ ಬೆರಸಿದಲ್ಲದೆ ಪಂಥವಿಲ್ಲೆಂದು
ಪರಶುರಾಮನ ಭಜಿಸಿ ಹಸ್ತಿನ
ಪುರಕೆ ತಂದಳು ಹೇಳಿಸಿದಳೀ
ಸುರನದೀನಂದನನು ಮಾಡಿದ ಪರಿಯ ಕೇಳೆಂದ ೩೫

ಸತಿಯನೊಲ್ಲೆನು ಬ್ರಹ್ಮಚರ್ಯ
ಸ್ಥಿತಿಗೆ ತಪ್ಪುವನಲ್ಲ ನೀವನು
ಚಿತವ ನೆನೆದರೆ ನಡೆಯಿ ಕೊಟ್ಟೆನು ಕಾಳಗವ ನಿಮಗೆ
ವ್ರತದನಿಧಿ ಕುರುಭೂಮಿಯಲಿ ಶರ
ತತಿಯಲಿಪ್ಪತ್ತೊಂದು ದಿನ ಭೃಗು
ಸುತನೊಡನೆ ಕಾದಿದನು ವಿರಥನ ಮಾಡಿದನು ಭೀಷ್ಮ ೩೬

ನುಡಿಯ ಭಂಗಿಸಲೆಂದು ಗುರುವವ
ಗಡಿಸಿ ಹೊಕ್ಕರೆ ಸರಳವೊನೆಯಲಿ
ಕೊಡಹಿ ಬಿಸುಟನು ಬಿಟ್ಟುದಿಲ್ಲ ಮಹಾವ್ರತಸ್ಥಿತಿಯ
ನುಡಿಯ ಮೀರದ ನಮ್ಮ ಶಿಷ್ಯನ
ನೊಡಬಡಿಸಿಕೊಳ್ಳೆಂದು ನಾರಿಗೆ
ನುಡಿದು ತನ್ನಾಶ್ರಮಕೆ ಸರಿದನು ಪರಶುರಾಮಮುನಿ ೩೭

ಅಂಬೆ ಭೀಷ್ಮನ ಬೈದು ಕಂಬನಿ
ದುಂಬಿ ಹೋದಳು ತಪಕೆ ಬಳಿಕೀ
ಯಂಬಿಕೆಯನಂಬಾಲೆಯನು ರಮಿಸಿದನು ನೃಪಸೂನು
ಬೆಂಬಲಕೆ ಕಲಿಭೀಷ್ಮನಿರೆ ಚತು
ರಂಬುಧಿಯ ಮಧ್ಯದ ನೃಪಾಲ ಕ
ದಂಬವೀತಂಗಿದಿರೆ ಸಲಹಿದನಖಿಳ ಭೂತಳವ ೩೮

## ಮೂರನೆಯ ಸಂಧಿ

ಸೂ. ಚಂಡಮುನಿ ಮಂತ್ರಾಪ್ಸಯದಿ ಬರೆ
ಚಂಡಕರ ತತ್ತೇಜನಾಹವ
ಚಂಡ ವಿಕ್ರಮನವನಿಯಲಿ ಜನಿಸಿದನು ಕಲಿಕರ್ಣ

ಅರಸ ಕೇಳೈ ಕೆಲವು ಕಾಲಾಂ
ತರಕೆ ನಿಮ್ಮ ವಿಚಿತ್ರವೀರ್ಯನು
ನೆರೆದನಮರಸ್ತ್ರೀಯರ‍್ರಲಿ ಬಳಿಕೀ ನದೀಸುತನ
ಕರೆದು ನುಡಿದಳು ಮಗನೆ ರಾಜ್ಯವ
ಧರಿಸು ನೀನಿನ್ನುತ್ತರದ ಹಿಮ
ಕರಕುಲವ ಬೆಳಗೆಂದು ಯೋಜನಗಂಧಿ ಬೆಸಸಿದಳು ೧

ತಾಯೆ ನಿಮ್ಮೋಪಾದಿ ರಾಜ್ಯ
ಸ್ತ್ರೀಯಳೆಂದಾ ನುಡಿಯೊಳಗೆ ಗಾಂ
ಗೇಯ ಮುಳುಗನು ಭೀಷ್ಮವಚನಕೆ ಬೇರೆ ಮೊಳೆಯುಂಟೆ
ಕಾಯಕಲ್ಪಸುಖಕ್ಕೆ ಘನ ನಿ
ಶ್ರೇಯಸವ ಕೆಡಿಸುವನೆ ಯೆಲವದ
ಕಾಯಿಗೋಸುಗ ಕಲ್ಪವೃಕ್ಷವ ಕಡಿವನಲ್ಲೆಂದ ೨

ಮರುಗಿ ಯೋಜನಗಂಧಿ ಚಿಂತೆಯ
ಸೆರೆಗೆ ಸಿಲುಕಿದಳೊಂದು ರಾತ್ರಿಯೊ
ಳರಿದು ನೆನೆದಳು ಪೂರ್ವಸೂಚಿತ ಪುತ್ರಭಾಷಿತವ
ಮುರಿದ ಭರತಾನ್ವಯದ ಬೆಸುಗೆಯ
ತೆರನು ತೋರಿತೆ ಪುಣ್ಯವೆನುತೆ
ಚ್ಚರಿತು ನುಡಿದಳು ಮಗನೆ ವೇದವ್ಯಾಸ ಬಹುದೆಂದು ೩

ಕೆಂಜೆಡೆಯ ಕೃಷ್ಣಾಜಿನದ ಮೊನೆ
ಮುಂಜೆರಗಿನುಡಿಗೆಯ ಬಲಾಹಕ
ಪುಂಜಕಾಂತಿಯ ಪಿಂಗತರಮುಖ ಕೇಶಮುನ್ನತಿಯ
ಕಂಜನಾಭನ ಮೂರ್ತಿ ಶೋಭಾ
ರಂಜಿತನು ಜನದುರಿತ ದಶಮದ
ಭಂಜಕನು ತಾಯ್ಗೆರಗಿ ನುಡಿದನು ವ್ಯಾಸಮುನಿರಾಯ ೪

ನೆನೆದಿರೇನೌತಾಯೆ ಕೃತ್ಯವ
ನೆನಗೆ ಬೆಸಸೆನೆ ಮಗನೆ ಭಾರತ
ವಿನುತಕುಲ ಜಲರಾಶಿಯೆಡೆವರಿತುದು ವಿಚಿತ್ರನಲಿ
ತನುಜ ನೀನೇ ಬಲ್ಲೆಯೆನೆ ಕೇಳ್
ಜನನಿ ನಿಮ್ಮಡಿಯಾಜ್ಞೆಯಲಿ ಸಂ
ಜನಿಪುವೆನು ವೈಚಿತ್ರವೀರ್ಯ ಕ್ಷೇತ್ರದಲಿ ಸುತರ ೫

ಎಂದು ಬಳಿಕೇಕಾಂತ ಭವನದೊ
ಳಂದು ಮುನಿಯಿರಲಂಬಿಕೆಯನರ
ವಿಂದಮುಖಿಯಟ್ಟಿದಳು ಸೊಸೆಯನು ಮುನಿಯ ಪೊರೆಗಾಗಿ
ಬಂದು ಮುನಿಪನ ದಿವ್ಯರೂಪವ
ನಿಂದುಮುಖಿ ಕಂಡಕ್ಷಿಗಳ ಭಯ
ದಿಂದ ಮುಚ್ಚಿದಳಾಕೆ ತಿರುಗಿದಳರಸ ಕೇಳೆಂದ ೬

ಬಳಿಕಲಂಬಾಲಿಕೆಯನಲ್ಲಿಗೆ
ಕಳುಹಲಾಕೆಗೆ ಭಯದಿ ಮುಖದಲಿ
ಬಿಳುಪು ಮಸಗಿತು ಮುನಿಯ ರೌದ್ರಾಕಾರದರ್ಶನದಿ
ಲಲನೆ ಮರಳಿದಳೊಬ್ಬ ಸತಿಯನು
ಕಳುಹಲಾ ವಧು ಚಪಲದೃಷ್ಟಿಯೊ
ಳಳುಕದೀಕ್ಷಿಸಲಾಯ್ತು ಗರ್ಭಾದಾನವನಿಬರಿಗೆ ೭

ಬಂದು ಮುನಿಪತಿ ತಾಯ್ಗೆ ಕೈಮುಗಿ
ದೆಂದನಂಬಿಕೆಯಲ್ಲಿ ಜನಿಸುವ
ನಂದನನು ಜಾತ್ಯಂಧನಂಬಾಲಿಕೆಗೆ ಪಾಂಡುಮಯ
ಬಂದ ಬಳಿಕಿನ ಚಪಲೆಗತಿಬಲ
ನೆಂದು ಹೇಳಿದು ತನಗೆ ನೇಮವೆ
ಯೆಂದು ತನ್ನಾಶ್ರಮಕೆ ಸರಿದನು ಬಾದರಾಯಣನು ೮

ತುಂಬಿದುದು ನವಮಾಸ ಜನಿಸಿದ
ನಂಬಿಕೆಯ ಬಸುರಿನಲಿ ಸೂನು ಗ
ತಾಂಬಕನು ಮಗನಾದನಂಬಾಲಿಕೆಗೆ ಪಾಂಡುಮಯ
ಚುಂಬಿಸಿತು ಪರಿತೋಷ ನವ ಪುಳ
ಕಾಂಬುಗಳು ಜನಜನಿತವದನೇ
ನೆಂಬೆನುತ್ಸವವನು ಕುಮಾರೋದ್ಭವದ ವಿಭವದಲಿ ೯

ಜಾತಕರ್ಮಾದಿಯನು ಪಾರ್ಥಿವ
ಜಾತಿ ವಿಧಿವಿಹಿತದಲಿ ಗಂಗಾ
ಜಾತ ಮಾಡಿಸಿ ತುಷ್ಟಿಪಡಿಸಿದ ನಿಖಿಳ ಯಾಚಕರ
ಈತನೇ ಧೃತರಾಷ್ಟ್ರನೆರಡನೆ
ಯಾತ ಪಾಂಡು ವಿಲಾಸಿನೀ ಸಂ
ಭೂತನೀತನು ವಿದುರನೆಂದಾಯ್ತವರಿಗಭಿಧಾನ ೧೦

ಬೆಳೆವುತಿರ್ದರು ಹರಿಣಪಕ್ಷದ
ನಳಿನರಿಪುವಿನವೊಲ್ ಕುಮಾರರು
ಕುಲವಿಹಿತ ಚೌಲೋಪನಯನವನಿಬ್ಬರಿಗೆ ರಚಿಸಿ
ಕಲಿತ ವಿದ್ಯರ ಮಾಡಿ ತಾಯು
ಮ್ಮಳಿಸದಂತಿರೆ ಸೋಮವಂಶದ
ಬೆಳವಿಗೆಯನೇ ಮಾಡಿ ಕೊಂಡಾಡಿದನು ಕಲಿಭೀಷ್ಮ ೧೧

ಧಾರುಣೀಪತಿ ಚಿತ್ತವಿಸು ಗಾಂ
ಧಾರದೇಶದ ಸುಬಲರಾಜ ಕು
ಮಾರಿ ಕುಲವಧುವಾದಳಾ ಧೃತರಾಷ್ಟ್ರ ಭೂಪತಿಗೆ
ನಾರಿಯರೊಳುತ್ತಮೆಯಲಾ ಗಾಂ
ಧಾರಿಯೆನಿಸಿ ಪತಿವ್ರತಾ ವಿ
ಸ್ತಾರಗುಣದಲಿ ಮೆರೆದಳಬಲೆ ಸಮಸ್ತಜನ ಹೊಗಳೆ ೧೨

ಇತ್ತ ಕುಂತೀಭೋಜನೆಂಬ ನೃ
ಪೋತ್ತಮನ ಭವನದಲಿ ಮುರಹರ
ನತ್ತೆ ಬೆಳೆವುತ್ತಿರ್ದಳಾ ವಸುದೇವನೃಪನನುಜೆ
ಹೆತ್ತವರಿಗೋಲೈಸುವರಿಗೆ ಮ
ಹೋತ್ತಮರಿಗುಳಿವಖಿಳ ಲೋಕದ
ಚಿತ್ತಕಹುದೆನೆ ನಡೆವ ಗುಣದಲಿ ಮೆರೆದಳಾ ಕುಂತಿ ೧೩

ಒಂದು ದಿನ ದೂರ್ವಾಸಮುನಿ ನೃಪ
ಮಂದಿರಕೆ ಬರಲಾ ಮಹೀಪತಿ
ಬಂದ ಬರವಿನಲವರ ಮರೆದನು ರಾಜಕಾರ್ಯದಲಿ
ಇಂದು ಕುಂತೀಭೋಜನೊಡೆತನ
ಬೆಂದುಹೋಗಲಿಯೆಂಬ ಶಾಪವ
ನಿಂದುಮುಖಿ ನಿಲಿಸಿದಳು ಹೊರಳಿದಳವರ ಚರಣದಲಿ ೧೪

ತರುಣಿಯೊಡಗೊಂಡೊಯ್ದು ಕನ್ಯಾ
ಪರಮ ಭವನದಲಾ ಮುನಿಯನುಪ
ಚರಿಸಿದಳು ವಿವಿಧಾನ್ನ ಪಾನ ರಸಾಯನಂಗಳಲಿ
ಹರ ಮಹಾದೇವೀ ಮಗುವಿನಾ
ದರಣೆಗೀ ವಿನಯೋಪಚಾರಕೆ
ಹಿರಿದು ಮೆಚ್ಚಿದೆನೆಂದು ತಲೆದೂಗಿದನು ದೂರ್ವಾಸ ೧೫

ಮಗಳೆ ಬಾ ಕೊಳ್ ಐದು ಮಂತ್ರಾ
ಳಿಗಳನಿವು ಸಿದ್ಧಪ್ರಯೋಗವು
ಸೊಗಸು ದಿವಿಜರೊಳಾರ ಮೇಲುಂಟವರ ನೆನೆ ಸಾಕು
ಮಗನು ಜನಿಸುವನೆಂದು ಮುನಿ ಕುಂ
ತಿಗೆ ರಹಸ್ಯದೊಳರುಹಿ ಮುನಿ ಮೌ
ಳಿಗಳ ಮಣಿ ಪರಿತೋಷದಲಿ ಸರಿದನು ನಿಜಾಶ್ರಮಕೆ ೧೬

ಮಗುವುತನದಲಿ ಬೊಂಬೆಯಾಟಕೆ
ಮಗುವನೇ ತಹೆನೆಂದು ಬಂದಳು
ಗಗನನದಿಯಲಿ ಮಿಂದಳುಟ್ಟಳು ಲೋಹಿತಾಂಬರವ
ವಿಗಡಮುನಿಪನ ಮಂತ್ರವನು ನಾ
ಲಗೆಗೆ ತಂದಳು ರಾಗರಸದಲಿ
ಗಗನಮಣಿಯನು ನೋಡಿ ಕಣ್ಮುಚ್ಚಿದಳು ಯೋಗದಲಿ ೧೭

ಅರಸ ಕೇಳ್ ಮುನಿಯಿತ್ತ ಮಂತ್ರಾ
ಕ್ಷರದ ಕರಹಕೆ ತಳುವಿದರೆ ದಿನ
ಕರನ ತೇಜವ ಕೊಂಬನೇ ದೂರ್ವಾಸ ವಿಗಡನಲ
ಧರೆಗೆ ಬಂದನು ಸೂರ್ಯನಾತನ
ಕಿರಣ ಲಹರಿಯ ಹೊಯ್ಲಿನಲಿ ಸರ
ಸಿರುಹಮುಖಿ ಬೆಚ್ಚಿದಳು ಬಿಜಯಂಗೈಯಿ ನೀವೆನುತ ೧೮

ಎನ್ನಬಾರದಲೇ ಋಷಿಪ್ರತಿ
ಪನ್ನ ಮಂತ್ರವಮೋಘವದರಿಂ
ದೆನ್ನ ತೂಕದ ಮಗನಹನು ನೀನಂಜಬೇಡೆನುತ
ಕನ್ನಿಕೆಯ ಮುಟ್ಟಿದನು ಮುನ್ನಿನ
ಕನ್ನೆತನ ಕೆಡದಿರಲಿಯೆನುತವೆ
ತನ್ನ ರಥವಿದ್ದೆಡೆಗೆ ರವಿ ತಿರುಗಿದನು ವಹಿಲದಲಿ ೧೯

ಅರಸ ಕೇಳ್ ಆಶ್ಚರ್ಯವನು ತಾ
ವರೆಯ ಮಿತ್ರನ ಕರಗಿ ಕರುವಿನೊ
ಳೆರೆದರೆಂದೆನೆ ಥಳಥಳಿಸಿ ತೊಳಗುವ ತನುಚ್ಛವಿಯ
ಕುರುಳುದಲೆ ನಿಟ್ಟೆಸಳುಗಂಗಳ
ಚರಣ ಕರಪಲ್ಲವದ ಕೆಂಪಿನ
ವರಕುಮಾರನ ಕಂಡು ಬೆರಗಿನೊಳಿರ್ದಳಾ ಕುಂತಿ ೨೦

ಅಳುವ ಶಿಶುವನು ತೆಗೆದು ತಕ್ಕೆಯ
ಪುಳಕ ಜಲದಲಿ ನಾದಿ ಹರುಷದ
ಬಳಿಯ ಲಜ್ಜೆಯ ಭಯದ ಹೋರಟೆಗಳುಕಿ ಹಳುವಾಗಿ
ಕುಲದ ಸಿರಿ ತಪ್ಪುವುದಲಾ ಸಾ
ಕಿಳುಹ ಬೇಕೆಂದೆನುತ ಗಂಗಾ
ಜಲದೊಳಗೆ ಹಾಯ್ಕಿದಳು ಜನದಪವಾದ ಭೀತಿಯಲಿ ೨೧

ತಾಯೆ ಬಲ್ಲಿಂದದಲಿ ಕಂದನ
ಕಾಯಿ ಮೇಣ್ ಕೊಲ್ಲೆನುತ ಕಮಲ ದ
ಳಾಯತಾಕ್ಷಿ ಕುಮಾರಕನ ಹಾಯ್ಕಿದಳು ಮಡುವಿನಲಿ
ರಾಯ ಕೇಳೈ ಸಕಲ ಲೋಕದ
ತಾಯಲಾ ಜಾಹ್ನವಿ ತರಂಗದಿ
ನೋಯಲೀಯದೆ ಮುಳಗಲೀಯದೆ ಚಾಚಿದಳು ತಡಿಗೆ ೨೨

ಕೆದರಿ ಕಾಲಲಿ ಮಳಲ ರಾಶಿಯ
ನೊದೆದು ಕೈಗಳ ಕೊಡಹಿ ಭೋಯೆಂ
ದೊದರುತಿರ್ದನು ಶಿಶುಗಳರಸನು ರವಿಯನೀಕ್ಷಿಸುತ
ಇದನು ಕಂಡನು ಸೂತನೊಬ್ಬನು
ಮುದದ ಮುದದಲಿ ತನ್ನ ಮರೆದು
ಬ್ಬಿದನಿದೆತ್ತಣ ನಿಧಿಯೊ ಶಿವಶಿವಯೆಂದು ನಡೆತಂದ ೨೩

ತರಣಿಬಿಂಬದ ಮರಿಯೊ ಕೌಸ್ತುಭ
ಪರಮಣಿಯ ಖಂಡದ ಕಣಿಯೊ ಮ
ರ್ತ್ಯರಿಗೆ ಮಗನಿವನಲ್ಲ ಮಾಯಾ ಬಾಲಕನೊ ಮೇಣು
ಇರಿಸಿ ಹೋದವಳಾವಳೋ ಶಿಶು
ವರನ ತಾಯ್ ನಿರ್ಮೋಹೆಯೈ ಹರ
ಹರ ಮಹಾದೇವೆನುತ ತೆಗೆದಪ್ಪಿದನು ಬಾಲಕನ ೨೪

ತೃಣವಲಾ ತ್ರೈಲೋಕ್ಯ ರಾಜ್ಯವ
ಗಣಿಸುವೆನೆ ತಾನಿನ್ನು ತನ್ನಲಿ
ಋಣವಿಶೇಷವಿದೇನೋ ಮೇಣ್ ಈ ಬಾಲಕಂಗೆನುತ
ಕ್ಷಣದೊಳೊದಗುವ ಬಾಷ್ಪ ಲುಳಿತೇ
ಕ್ಷಣನು ಬಂದನು ಮನೆಗೆ ಪರುಷದ
ಕಣಿಯ ತಂದೆನು ರಮಣಿ ಕೊಳ್ಳೆಂದಿತ್ತನರ್ಭಕನ ೨೫

ಆದರಿಸಿದನು ರಾಧೆಯಲಿ ಮಗ
ನಾದನೆಂದುತ್ಸವವ ಮಾಡಿ ಮ
ಹೀ ದಿವಿಜರನು ದಾನ ಮಾನಂಗಳಲಿ ಸತ್ಕರಿಸಿ
ಆ ದಿನಂ ಮೊದಲಾಗಿ ಉದ್ಭವ
ವಾದುದವನೈಶ್ವರ್ಯ ಉನ್ನತ
ವಾದನಾ ರವಿನಂದನನು ರಾಧೇಯ ನಾಮದಲಿ ೨೬

ಹೊಳೆ ಹೊಳೆದು ಹೊಡವುರಳಿ ನಡು ಹೊ
ಸ್ತಿಲಲಿ ಮುಂಡಿಸಿ ಬೀದಿ ಬೀದಿಗ
ಳೊಳಗೆ ಸುಳಿವರ ಸನ್ನೆಯಲಿ ಕರೆಕರೆದು ನಸುನಗುತ
ಲಲಿತರತ್ನದ ಬಾಲದೊಡಿಗೆಯ
ಕಳಚಿ ಹಾಯ್ಕುವ ಹೆಸರು ಜಗದಲಿ
ಬೆಳೆವುತಿರ್ದುದು ಹಬ್ಬಿದುದು ಜನಜನದ ಕರ್ಣದಲಿ ೨೭

ಅರಸ ಕೇಳೈ ಕರ್ಣ ಪಾರಂ
ಪರೆಯೊಳೀತನ ಹೆಸರು ಜಗದಲಿ
ಹರಿದುದಲ್ಲಿಂ ಬಳಿಕಲೀತನ ನಾಮಕರಣದಲಿ
ಸುರನರೋರಗ ನಿಕರವೇ ವಿ
ಸ್ತರಿಸಿದುದು ಕರ್ಣಾಭಿಧಾನವ
ಗುರುಪರಾಕ್ರಮಿ ಬೆಳೆವುತಿರ್ದನು ಸೂತಭವನದಲಿ ೨೮

## ನಾಲ್ಕನೆಯ ಸಂಧಿ

ಸೂ. ಭರತ ವಂಶದೊಳೈದು ಮಿಗೆ ನೂ
ರ್ವರು ಕುಮಾರರು ಪಾಂಡು ಧೃತರಾ
ಷ್ಟ್ರರಿಗೆ ಜನಿಸಿದರಮಲ ಮುನಿ ಮಂತ್ರೋಪದೇಶದಲಿ

ಕೇಳು ಜನಮೇಜಯ ಧರಿತ್ರೀ
ಪಾಲ ಕುಂತೀಭೋಜ ಭೂಪತಿ
ಯಾಲಯದೊಳೀ ಕುಂತಿ ಮೆರೆದಳು ವಿವಿಧ ವಿಭವದಲಿ
ಕೇಳಿದನು ಗಾಂಗೇಯನಾ ನೀ
ಲಾಳಕಿಯ ಕುಲ ರೂಪು ಲಕ್ಷಣ
ಶೀಲವನು ಪಾಂಡುವಿಗೆ ಪಾಸಟಿಯೆಂದು ರಾಗದಲಿ ೧

ಕರೆಸಿ ಕುಂತೀಭೋಜನನು ಸ
ತ್ಕರಿಸಿ ಕುಂತಿಯ ಪಾಂಡುವಿಗೆ ಭೂ
ಸುರರ ಮತದಿಂದಗ್ನಿ ಸಾಕ್ಷಿಕ ವರವಿವಾಹವನು
ಪರಮ ವಿಭವದಲೆಸಗಿ ಮದ್ರೇ
ಶ್ವರನನುಜೆ ಮಾದ್ರಿಯನು ಪಾಂಡುವಿ
ಗರಸಿಯನು ಮಾಡಿದನು ವೈವಾಹಿಕ ಮುಹೂರ್ತದಲಿ ೨

ವರ ವಿವಾಹ ಮುಹೂರ್ತ ಸಮನಂ
ತರ ಸುಲಗ್ನದೊಳಖಿಳ ರಾಜ್ಯದ
ಧುರದ ನಿರ್ವಾಹಕ ಮಹಾಪಟ್ಟಾಭಿಷೇಚನವ
ಸುರನದೀಸುತ ಪಾಂಡುವಿಗೆ ವಿ
ಸ್ತರಿಸಿದನು ಧೃತರಾಷ್ಟ್ರ ವಿದುರರ
ಪರಮ ಪರಿತೋಷಾನುಮತದಲಿ ಮೆರೆದುದಾ ವಿಭವ ೩

ಸೋಮಕುಲದವರಲಿ ಭವತ್ ಪ್ರಪಿ
ತಾಮಹನವೋಲ್ ಧರ್ಮದಲಿ ಸಂ
ಗ್ರಾಮದಲಿ ಸತ್ಯದಲಿ ಸಾಹಿತ್ಯದಲಿ ವಿನಯದಲಿ
ಸಾಮದಲಿ ಶೌರ್ಯದಲಿ ಸುಜನ
ಪ್ರೇಮದಲಿ ನೀತಿಯಲಿ ದೃಢದಲಿ
ಭೂಮಿಯಲಿ ನಾ ಕಾಣೆನವನೀಪಾಲ ಕೇಳೆಂದ ೪

ಪಸರಿಸಿದ ಪರಿಧೌತಕೀರ್ತಿ
ಪ್ರಸರದಲಿ ಬೆಳುಪಾಯ್ತು ಜಗ ನಿ
ಪ್ಪಸರದಲಿ ಝಳಪಿಸುವ ಖಂಡೆಯ ಸಿರಿಯ ಸೊಂಪಿನಲಿ
ಮುಸಗಿತಗ್ಗದ ಕೆಂಪು ಪರಬಲ
ವಿಸರ ದಳನ ಕ್ರೋಧಮಯ ತಾ
ಮಸದಿನಸಿತಾಭಾಸಮಾದುದು ಭುವನವಿಸ್ತಾರ ೫

ಓಲಗಿಸುವುದು ಮಿತ್ರ ರಾಯರ
ಮೌಳಿಮಣಿ ಪಾಂಡುವಿನ ಚರಣ ನ
ಖಾಳಿಯನು ಸೆಣಸುವ ಮಹೀಶ್ವರ ಮೌಳಿ ಮಣಿಕಿರಣ
ಓಲಗಿಸಿತು ಪ್ರಣಯದಮರೀ
ಬಾಲೆಯರ ಪದನಖವನದನೇ
ವೇಳುವೆನು ಪಾಂಡುವಿನ ಖಂಡೆಯ ಸಿರಿಯ ಸಡಗರವ ೬

ಓಲಗಿಸಿ ಕೊಂಬಾತನಂಧ ನೃ
ಪಾಲನುಳಿದಂತಖಿಳ ಧರಣೀ
ಪಾಲಕತ್ವವ ಪಾಂಡುಭೂಪತಿಗೀ ಕುಮಾರಕರ
ಲಾಲಿಸುವ ಕುಲನೀತಿ ವಿಧದಲಿ
ಪಾಲಿಸುವ ಭರ ಭೀಷ್ಮನದು ಸಂ
ಬಾಳಿಸಿತು ನಳ ನಹುಷಚರಿತವನಿವರ ಪರಿಪಾಟಿ ೭

ನೃಪ ಪರಂಪರೆಯಿಂದ ಬಂದೀ
ವಿಪುಳ ವಂಶಸ್ಥಿತಿ ವಿಸರ್ಗವ
ನಪಹರಿಸಿದನು ಹಿಂದೆ ವೇದವ್ಯಾಸಮುನಿ ಬಂದು
ಕೃಪೆಯ ಮಾಡನೆ ತನ್ನ ಸಂತತಿ
ಕೃಪಣವಾಯ್ತೆಂದನವರತ ಕುರು
ನೃಪತಿ ಚಿಂತಾಭಾರದಲಿ ಬಳಲುವನು ಧೃತರಾಷ್ಟ್ರ ೮

ಅರಸ ಚಿತ್ತೈಸೊಂದು ದಿನ ಮುನಿ
ವರನು ಬಿಜಯಂಗೈದು ಹಸ್ತಿನ
ಪುರವ ಹೊಕ್ಕನು ರಾಜಭವನಕೆ ಬಂದು ಹರ್ಷದಲಿ
ಸುರನದೀತನುಜಾದಿಗಳ ಸ
ತ್ಕರುಣೆಯನು ಕೈಕೊಂಡು ಮಕ್ಕಳ
ಮುರಿದ ವಿಭವಕೆ ಮೈಯನಾಂತು ಮುನೀಂದ್ರನಿಂತೆಂದ ೯

ಭರತಕುಲದಲಿ ಮಕ್ಕಳಿಲ್ಲದ
ಕೊರತೆ ಕೋಮಲ ಸೌಖ್ಯಲತೆಗಿದು
ಕರಗಸವಲಾ ತಂದೆ ಬಾ ಧೃತರಾಷ್ಟ್ರ ಬಾಯೆನುತ
ಕರೆದು ಕಟ್ಟೇಕಾಂತದಲಿ ನಿ
ನ್ನರಸಿಗನುಪಮ ಪುತ್ರ ಶತವವ
ತರಿಸುವುದು ಕೊಳ್ಳೆಂದು ಕೊಟ್ಟನು ಮಂತ್ರ ಪಿಂಡಕವ ೧೦

ಧರಿಸಿದಳು ಗಾಂಧಾರಿ ಗರ್ಭೋ
ತ್ಕರವನಿತ್ತ ನಿಜಾಶ್ರಮಕೆ ಮುನಿ
ತಿರುಗಿದನು ದಿನದಿನದೊಳುಬ್ಬಿತು ರಾಯನಭ್ಯುದಯ
ಅರಸ ಕೇಳೈ ಬೇಂಟೆಗಾರರು
ಕರೆಯ ಬಂದರು ಮೃಗನಿಕಾಯದ
ನೆರವಿಗಳ ನೆಲೆಗೊಳಿಸಿ ಪಾಂಡು ನೃಪಾಲನೋಲಗಕೆ　೧೧

ಕೇಳಿದನು ಮೃಗದಿಕ್ಕೆ ಹಕ್ಕೆಯ
ಗಾಳಿಯನು ಕೊಂಬುಗಳನಾಗಳೆ
ಬೀಳು ಕೊಟ್ಟನು ರಾಜಸಭೆಯನು ರಾಯನುಚಿತವಲಿ
ಬೋಳೆ ಕವಲಂಬುಗಳ ಹದವಿಲು
ತಾಳಿಕೆಯ ಕುಪ್ಪಸದ ಬೇಂಟೆಯ
ಮೇಳದಲಿ ಭೂಪಾಲ ಹೊರವಂಟನು ನಿಜಾಲಯವ　೧೨

ಏನನೆಂಬೆನು ನಿಮ್ಮನು ಪಿತಾ
ಚೋನ್ನೃಪಾಲಕರೆಂಬವೋಲ್ ವ್ಯಸ
ನಾನುಬಂಧದ ಬೇಗೆ ಕೊಂಡೊಯ್ವುದು ಮಹೀಪತಿಯ
ಕಾನನದೊಳಾಯತದ ಶರ ಸಂ
ಧಾನ ಕಲಿತ ಶರಾಸನನು ಮೃಗ
ಹಾನಿಗಳ ಹೆಕ್ಕಳದೊಳೋಲಾಡಿದನು ಬೇಂಟೆಯಲಿ　೧೩

ಬಂದುದಾ ಪಾಂಡುವಿಗೆ ನಿನ್ನಯ
ತಂದೆಗಾದ ವಿಪತ್ತಿನಂದದ
ಲೊಂದು ಠಾವಿನಲೊಬ್ಬ ಮುನಿ ಮೃಗ ಮಿಥುನ ರೂಪಿನಲಿ
ನಿಂದು ರಮಿಸುತ್ತಿರೆ ಮೃಗದ್ವಯ
ವೆಂದು ಹೂಡಿದನಂಬನಿಬ್ಬರಿ
ಗೊಂದು ಶರದಲಿ ಕೀಲಿಸಿದಡೊರಲಿದರು ನರರಾಗಿ　೧೪

ಹಾ ಮಹಾದೇವಯೆನುತ್ತೆ ಸ
ನಾಮಮುನಿ ತೆತ್ತಿಸಿದ ಬೆನ್ನಿನ
ತೋಮರದ ಮರುಮೊನೆಯ ಕಿಬ್ಬಸುರಿನ ನಿಜಾಂಗನೆಯ
ಕಾಮಿನಿಯೆ ಕಡುನೊಂದೆಲಾಮುಖ
ತಾಮರಸವನು ತೋರು ತೋರೆನು
ತಾ ಮುನೀಶ್ವರನಪ್ಪಿ ಮುಂಡಾಡಿದನು ನಿಜಸತಿಯ　೧೫

ಕಾತರಿಪ ಮುನಿಮಿಥುನವನು ನಿ
ನ್ನಾತ ಕಂಡನು ಬಿಲ್ಲಕೊಪ್ಪಿನ
ಲಾತ ಕದಪಿನ ಮಕುಟದೊಲವಿನ ಬೆರಳ ಬಿರುದನಿಯ
ಬೀತ ಸೊಂಪಿನ ತಳಿತ ಬೆರಗಿನ
ಪಾತಕದ ಪರುತವದ ಮುಖದ ಮ
ಹೀತಳಾಧಿಪ ಸುಯ್ದು ನೊಂದನು ಶಿವಶಿವಾಯೆನುತ　೧೬

ಅರಿಯೆ ನಾನಿವರೆಂದು ಮೃಗವೆಂ
ದಿರಿದೊಡಿದು ಮತ್ತೊಂದು ಪರಿಯಾ
ಯ್ತುರುವ ಮಾಣಿಕವೆಂದು ಕೊಂಡಡೆ ಕೆಂಡವಾದುದಲ
ಸರವಿಯೇ ಹಾವಾದುದೇನೆಂ
ದರಿಯೆನೀ ಕೌತುಕವನುರೆ ಮೈ
ಮರೆಸಿ ಕೊಂದುದೆ ವಿಧಿಯೆನುತ ಹರಿತಂದನಾ ಸ್ಥಳಕೆ　೧೭

ಉಗಿದು ಬಿಸುಟನು ಸರಳ ಮಗ್ಗುಲ
ಮಗುಚಿ ನೆತ್ತರ ಹೊನಲಿನೀಟಿಗೆ
ತೆಗೆದು ತೊಳೆತೊಳೆದೊರಸಿದನು ಸಗ್ಗಳೆಯ ನೀರಿನಲಿ
ಮೃಗವಹರೆ ಮಾನಿಸರಕಟ ಪಾ
ಪಿಗಳಿಗೆತ್ತಣ ತಪವಿದೆತ್ತಣ
ಮೃಗ ವಿನೋದಕ್ರೀಡೆ ಕೊಂದಿರೆನುತ್ತ ಬಿಸುಸುಯ್ದು　೧೮

ಮತ್ತೆ ನಾವೇ ಪಾಪಿಗಳೆ ನೀ
ನುತ್ತಮನಲಾ ಸಾಕಿದೇತಕೆ
ನುತ್ತ ಮರಳುವ ಕಂಗಳಡಿಗಡಿಗುಗಿವ ಮೇಲುಸುರ
ಎತ್ತಿ ಹಾಯ್ಕುವ ಕೊರಳ ಬಿಕ್ಕುಳ
ತೆತ್ತುವಧರದ ರೋಷದಲಿ ಹೊಗೆ
ಸುತ್ತಿದುರಿವಾತುಗಳ ಸೂಸಿದರವನಿಪನ ಮೇಲೆ　೧೯

ಎಲವೊ ರಾಜಬ್ರುವನೆ ತನ್ನಯ
ಲಲನೆಯೊಡನಿರೆ ಕೊಂದೆ ನಿನ್ನಯ
ಲಲನೆಯನು ನೀ ಕೂಡಿದಾಗಲೆ ಮರಣ ನಿನಗಹುದು
ಹಲವು ಮಾತೇಕೆನುತ ಹರಣವ
ಕಳೆದುದಾ ಮುನಿ ಮಿಥುನವವನಿಪ
ತಿಲಕ ದುಮ್ಮಾನದಲಿ ಬಂದನು ಹಸ್ತಿನಾಪುರಕೆ　೨೦

ಆದ ಹದನನು ಭೀಷ್ಮ ಧೃತರಾ
ಷ್ಟ್ರಾದಿಗಳಿಗರುಹಿದರೆ ಹಯ ಮೇ
ಧಾದಿ ಯಜ್ಞದಲೀ ಮಹಾ ಪಾತಕ ವಿಘಾತಕವ
ವೈದಿಕೋಕ್ತಿಯ ಮಂತ್ರದಲಿ ಸಂ
ಪಾದಿಸುವೆವೆನೆ ಶಿರವ ಬಿದುರಿ ಮ
ಹಾ ದುರಾಗ್ರಹ ಬುದ್ಧಿಯಲಿ ಹೊರವಂಟನರಮನೆಯ　೨೧

ಸಕಲ ಭಂಡಾರವನು ಭೂಸುರ
ನಿಕರದಲಿ ಚೆಲ್ಲಿದನು ಸುಜನ
ಪ್ರಕರವನು ಗಾಂಗೇಯ ಧೃತರಾಷ್ಟ್ರರಿಗೆ ಕೈಗೊಳಿಸಿ
ಚಕಿತ ಚಿತ್ತನು ಮುನಿಹತಿಯ ಪಾ
ತಕದ ನೆತ್ತಿಯ ಸಬಳವಾವುದೊ
ಸಕಲ ಯೋಗಾವಳಿಯೊಳೆನುತ್ತೈದಿದನು ಕಾನನವ　೨೨

ಅರಸ ಕೇಳ್ ಶತಶೃಂಗ ಶೈಲದ
ವರತಪೋಧನರಾಶ್ರಮಕೆ ನಿ
ಮ್ಮರಸ ಬಂದನು ವಂದಿಸಿದನಾ ಪರಮ ಮುನಿವರರ
ಹರುಷದಲಿ ಜಾಬಾಲಿ ಗಾರ್ಗ್ಯಾಂ
ಗಿರಸ ಗಾಲವ ಗೌತಮಾದ್ಯರು
ಧರಣಿಪನ ಸಂಭಾವಿಸಿದರರ್ಘ್ಯಾಸನಾದಿಯಲಿ　೨೩

ಈತನಮಲಾಷ್ಟಾಂಗಯೋಗ ವಿ
ಧೂತ ಕಿಲ್ಬಿಷನಾ ಬಳಿಕ ಮ
ಹಾತಪಸ್ವಿಗಳೊಳಗೆ ಸಂದನು ತೀವ್ರ ತೇಜದಲಿ
ಆ ತಪೋನಿಷ್ಠಂಗೆ ತಾವತಿ
ಭೀತಿ ಭಕ್ತಿಯೊಳಧಿಕ ಶುಶ್ರೂ
ಷಾತಿಶಯದಲಿ ಮನವ ಹಿಡಿದರು ಕುಂತಿ ಮಾದ್ರಿಯರು　೨೪

ಪರಮ ವೈರಾಗ್ಯದಲಿ ನಿರಂತಃ
ಕರಣ ನಿರುಪಮ ಭಾವ ಶುದ್ಧಿಯ
ಮುರಹರ ಧ್ಯಾನೈಕ ಪೀಯೂಷಾಭಿಷೇಕದಲಿ
ಹೊರೆದು ಹೊಂಗಿದ ನಿಷ್ಪ್ರಪಂಚೋ
ತ್ಕರದ ಸುಖದುನ್ನತಿಯಲಿದ್ದನು
ಧರಣಿಪತಿ ಮುನಿಪನ ಮಹಾಘಾತಕವ ಕೆಡೆಯೊದೆದು ೨೫

ನಾರಿಯರು ಮರುಗಿದರಕಟ ಮುದಿ
ಹಾರುವನ ತನಿಬೇಂಟೆ ನಮ್ಮಯ
ಬೇರುಗೊಲೆಯಾಗಿರ್ದುದೇ ಹಾಯೆನುತ ಬಿಸುಸುಯ್ದು
ವಾರಿಜಾನನೆ ಕುಂತಿ ಮೆಲ್ಲನೆ
ಸಾರಿದಳು ನಯದಲಿ ರಹಸ್ಯದ
ಲಾರುವರಿಯದವೋಲು ಬಿನ್ನಹ ಮಾಡಿದಳು ಪತಿಗೆ ೨೬

ಭರತ ವಂಶಕೆ ಪುತ್ರ ಶತವವ
ತರಿಸುವುದು ಗಾಂಧಾರಿ ದೇವಿಗೆ
ವರ ಮುನೀಶ್ವರನಿತ್ತ ವರವದು ನಿಮ್ಮಡಿಗಳರಿಯೆ
ದುರುಳ ಮುನಿಪನ ಶಾಪವೇ ಸ್ತ್ರೀ
ಪುರುಷ ಸಂಗ ವಿರೋಧ ನಮಗಿ
ನ್ನರಸ ನಾಪುತ್ರಸ್ಯಗತಿಯೆಂದಿರದೆ ಶ್ರುತಿವಚನ ೨೭

ಧರೆಯ ರಾಜ್ಯಸ್ಥಿತಿಗೆ ಸುತರವ
ತರಿಸುವರು ಗಾಂಧಾರಿಗಾ ಪು
ತ್ರರಿಗೆ ಸುತರಾ ಸುತರ ಸುತರಾ ಸುತರ ಸೂನುಗಳು
ಧರೆ ಪರಂಪರೆಯಿಂದಲತ್ತಲೆ
ಸರಿವುದೀ ನಿಮ್ಮಡಿಗೆ ದರ್ಭಾ
ಸ್ತರಣ ಸಮಿಧಾಧಾನವೇ ಕಡೆಗೆಂದಳಾ ಕುಂತಿ ೨೮

ವನಜಮುಖಿ ಕೇಳ್ ಪುತ್ರಮುಖ ದ
ರ್ಶನವು ಸುಲಭವೆ ಪುಣ್ಯಹೀನರಿ
ಗೆನಿತು ಹಲುಬಿದರೇನು ಹಂಗಿಗರಾವು ದುಷ್ಕೃತಿಗೆ
ಮುನಿಯ ಬೇಟದ ಬೇಳುವೆಯ ಮಾ
ತಿನ ಹವಣ ನೀ ಬಲ್ಲೆ ಹೇಳಿ
ನ್ನೆನಗೆ ಕರ್ತವ್ಯವನು ಮಾನಿನಿ ಭೀತಿ ಬೇಡೆಂದ ೨೯

ನಾರಿಯರು ಮತ್ತಲ್ಲಿ ರಾಜ ಕು
ಮಾರಿಯರು ಛಲವಾದಿಗಳು ಗಾಂ
ಧಾರಿಗಾದುದು ಪುತ್ರಸಂತತಿಯೆಂಬ ಭೇದದಲಿ
ಧೀರ ಬಿನ್ನವಿಸಿದೆನು ಕಾರ್ಯದ
ಭಾರವನು ನೀ ಬಲ್ಲೆಯುವಳು ವಿ
ಕಾರಿಯೆನ್ನದಿರೆಂದು ರಾಯನ ಚರಣಕೆರಗಿದಳು ೩೦

ಲೋಲಲೋಚನೆ ದೃಢ ಪತಿವ್ರತೆ
ಯೇಳು ದುಃಖಿಸಬೇಡ ಭೃಗು ಜಾ
ಬಾಲಿ ಜಮದಗ್ನ್ಯಾದಿ ದಿವ್ಯ ಮುನೀಂದ್ರ ಗಣವಿದೆಲ
ಓಲಗಿಸುವುದು ದುಷ್ಕೃತಿಗೆ ನಿ
ಷ್ಪಾಳೆಯುವು ಬಳಿಕಹುದು ಮಂತ್ರ ವಿ
ಶಾಲ ಬೀಜದಿಯುಹುದು ಸಂತತಿ ಕಾಂತೆ ಕೇಳೆಂದ ೩೧

ಭವದನುಗ್ರಹದಿಂದ ಸುತರು
ದ್ಭವಿಸಿದರೆ ಲೇಸನ್ಯಥಾ ಸಂ
ಭವಿಸಿದರೆ ದುಷ್ಕೀರ್ತಿವಧುವೆಂಜಲಿಸಳೇ ಕುಲವ
ಅವನಿಪತಿ ಕೇಳ್ ನಹುಷ ನಳ ಪೌ
ರವ ಸುಹೋತ್ರಾದ್ಯರ ನಿಜಾತ್ಮೋ
ದ್ಭವರ ಪಾರಂಪರೆಗೆ ಗತಿಯೇನೆಂದಳಾ ಕುಂತಿ ೩೨

ಅರಸಿ ಕೇಳ್ ತದ್ವಿಜ ಪಾರಂ
ಪರೆ ಮುರಿಯೆ ತತ್ ಕ್ಷೇತ್ರದಲಿ ಮುನಿ
ವರರ ಕಾರುಣ್ಯದಲಿ ಪುತ್ರೋದ್ಭವವದೇ ವಿಹಿತ
ಪರಮ ವೈದಿಕ ಸಿದ್ಧವಿದು ಸರ
ಸಿರುಹಮುಖಿ ನಿಶ್ಶಂಕೆಯಲಿ ನೀ
ಧರಿಸು ಮುನಿ ಮಂತ್ರೋಪದೇಶವನಿದುವೆ ನಿರ್ದೋಷ ೩೩

ಆದಡವನಿಪ ಬಿನ್ನಹವು ತನ
ಗಾದಿಯಲಿ ದೂರ್ವಾಸಮುನಿ ಕರು
ಣೋದಯದಲಿತ್ತೈದು ಮಂತ್ರಾಕ್ಷರದ ವರವುಂಟು
ನೀ ದಯಾಂಬುಧಿ ನಿನ್ನನುಗ್ರಹ
ವಾದುದಾದರೆ ತದ್ವಿಧಾನದ
ಲಾದರಿಸುವೆನು ಪುತ್ರ ಕಾಮ್ಯವನೆಂದಳಾ ಕುಂತಿ ೩೪

ಲೇಸನಾಡಿದೆ ಕುಂತಿ ಮುನಿಯುಪ
ದೇಶಿಸಿದನೇ ನಮ್ಮ ಭಾಗ್ಯವಿ
ದೈಸಲೇ ನೀ ದೃಢಪತಿವ್ರತೆಯೆನ್ನನುಜ್ಞೆಯಲಿ
ಭಾಸುರರ ನೀ ಭರತವಂಶ ವಿ
ಲಾಸರನು ಕೃತ ಶತ್ರು ಪಕ್ಷ ವಿ
ನಾಶರನು ಬೆಸಲಾಗು ಹೋಗೆನ್ನಾಣೆ ಹೋಗೆಂದ ೩೫

ತರುಣಿ ಪಾಂಡುವಿನಾಜ್ಞೆಯನು ನಿಜ
ಶಿರದೊಳಾಂತು ಸಮಸ್ತ ಮುನಿ ಮು
ಖ್ಯರಿಗೆ ವಂದಿಸಿ ಹರಿ ಹರ ಬ್ರಹ್ಮಾದಿಗಳಿಗೆರಗಿ
ಸರಸಿಯಲಿ ಮಿಂದಳು ಮುನೀಂದ್ರನ
ಪರಮ ಮಂತ್ರಾಕ್ಷರವ ತಾನು
ಚ್ಚರಿಸಿ ನೆನೆದಳು ಯಮನನಾಕ್ಷಣವಾತನೈತಂದ ೩೬

ಸತಿಯ ಸಮ್ಮುಖನಾಗಿ ವೈವ
ಸ್ವತನು ನುಡಿದನಿದೇಕೆ ನಮ್ಮ
ಕ್ಷಿತಿಗೆ ಬರಿಸಿದೆಯೆನಲು ಲಜ್ಜಾವನತಮುಖಿಯಾಗಿ
ಸುತನ ಕರುಣಿಪುದೆನಲು ಭಯ ಪರಿ
ವಿತತ ವಿಮಲ ಸ್ವೇದಜಲ ಕಂ
ಪಿತೆಯ ಮುಟ್ಟಿ ತಥಾಸ್ತುವೆನುತ ಕೃತಾಂತ ಬೀಳ್ಕೊಂಡ ೩೭

ಧಾರುಣೀಪತಿ ಕೇಳು ಕುಂತೀ
ನಾರಿಗಾದುದು ಗರ್ಭ ಹರುಷದ
ಭಾರದಲಿ ಸತಿ ತಗ್ಗಿದಳು ನವ ಪೂರ್ಣಮಾಸದಲಿ
ಚಾರುತರ ನಕ್ಷತ್ರ ಶುಭದಿನ
ವಾರ ಲಗ್ನದೊಳಿಂದುಕುಲ ವಿ
ಸ್ತಾರಕನು ಸುಕುಮಾರನವತರಿಸಿದನು ಧರಣಿಯಲಿ ೩೮

ನಿರ್ಮಲಿನವಾಯ್ತಖಿಲ ದೆಸೆ ದು
ಷ್ಕರ್ಮತತಿ ಬೆಚ್ಚಿದುದು ಸಾಕ್ಷಾತ್
ಧರ್ಮವೇ ಧರಣಿಯಲಿ ನೃಪ ರೂಪಾಗಿ ಜನಿಸಿತಲ
ದುರ್ಮಹೀಶರ ಹೊತ್ತ ಭಾರದ
ಕರ್ಮ ವೇದನೆ ಧಾತ್ರಿಗಿಳಿದುದು
ಧರ್ಮವಿನ್ನೆಮಗಹುದೆನುತ ಹೆಚ್ಚಿದುದು ಮುನಿನಿಕರ ೩೯

ಧರಣಿಪತಿ ಧರ್ಮಜನ ಮುಖ ಸಂ
ದರುಶನವ ಮಾಡಿದನು ಹೆಚ್ಚಿದ
ಹರುಷ ಭಾರಕೆ ಚಿತ್ತ ತಗ್ಗಿತು ಮುಗ್ಗಿತಡಿಗಡಿಗೆ
ಹರಿದು ಪುತ್ರೋತ್ಸವದ ನುಡಿ ಗಜ
ಪುರದೊಳಬ್ಬರವಾಯ್ತು ಪಾಂಡುವಿ
ನರಸಿಯಲಿ ಸಂತಾನ ಜನಿಸಿದುದೆಂದು ಜನಜನಿತ ೪೦

ಕೇಳಿದಳು ಗಾಂಧಾರಿ ಕುಂತಿಗೆ
ಬಾಲ ಕೇಳಿ ವಿನೋದವೇ ಕೈ
ಮೇಳವಿಸಿತೇ ಮುನ್ನ ಹಾ ತಪ್ಪೇನು ತಪ್ಪೇನು
ಕಾಳು ಮಾಡಿದನೆನಗೆ ಮುನಿಪತಿ
ಕೌಳಿಕಾರನಲಾ ಸುಡೀ ಗ
ರ್ಭಾಳಿಗಳನೆಂದಬಲೆ ಹೊಸೆದಳು ಬಸುರನೊಡೆಮುರಿದು ೪೧

ಉದುರಿದವು ಧರಣಿಯಲಿ ಬಲು ಮಾಂ
ಸದ ಸುರಕ್ತದ ಘಟ್ಟಿಗಳು ಖಂ
ಡದ ಸುಢಾಳದ ಜಿಗಿಯ ಪೇಸಿಕೆ ನಿಕರ ನೂರೊಂದು
ಕೆದರಿದಳು ವಾಮಾಂಘ್ರಿಯಲಿ ನೂ
ಕಿದಳು ಹಾಯ್ಕಿವ ಹೊರಗೆನುತ ನೋ
ಡಿದಳು ಕರೆ ಕೈನೆಯರನೆನುತ ಕಠೋರ ಕೋಪದಲಿ ೪೨

ತನ ತನಗೆ ನಡು ನಡುಗಿ ಕಾಂತಾ
ಜನವು ಬಂದುದು ತಾಯೆ ಬೆಸನೇ
ನೆನಲು ಬಿಸುಡಿವನೂರ ಹೊರಗೆಂಬಾ ಮುಹೂರ್ತದಲಿ
ಮುನಿಪ ವೇದವ್ಯಾಸನಾಕೆಯ
ಮನೆಗೆ ಬಂದನು ಕಂಡನೀ ಕಾ
ಮಿನಿಯ ಕೋಲಾಹಲವಿದೇನೇನೆಂದು ಬೆಸಗೊಂಡ ೪೩

ಭರತ ಸಂತಾನಕೆ ಕುಮಾರರ
ಹೆರುವೆ ನಾ ಮುನ್ನೆಂದು ಗರ್ಭವ
ಧರಿಸಿದೆನು ನಿಮ್ಮಡಿಯ ಕೃಪೆಯಲಿ ಮಂತ್ರ ಭಾವಿತವ
ವರುಷವೆರಡಾಯ್ತಿದರ ಭಾರವ
ಧರಿಸಿದೆನು ದಾಯಾದ್ಯರೊಳಗವ
ತರಿಸಿದನು ಮಗನೆನುತ ಮುಖದಿರುಹಿದಳು ಗಾಂಧಾರಿ ೪೪

ಮರುಳ ಹೆಂಗುಸಲಾ ಮಹಾತ್ಮರ
ಪರಿಯ ನೀನೆಂತರಿವೆ ಗರ್ಭೋ
ತ್ಕರವ ಕೆಡಿಸಿದೆ ಪಾಪಿ ನೀ ಸಾರೆನುತ ಮುನಿ ಮುಳಿದು
ತರಿಸಿದನು ಘೃತಪೂರಿತದ ಕೊ
ಪ್ಪರಿಗೆಗಳನೊಂದೊಂದನೊಂದರೊ
ಳಿರಿಸಿ ಮಂತ್ರಿಸಿ ನೀರ ತಳಿದನು ರಕ್ಷೆಗಳ ರಚಿಸಿ ೪೫

ಚಿಂತೆಯಿಲ್ಲದೆ ನೂರುದಿನ ಪರಿ
ಯಂತ ರಕ್ಷಿಸು ಬಳಿಕ ನಿನ್ನಯ
ಸಂತತಿಯ ಸಾಮರ್ಥ್ಯವನು ಗಾಂಧಾರಿ ನೋಡೆಂದು
ಕಂತುಪಿತ ಸನ್ನಿಭನು ಸತಿಯನು
ಸಂತವಿಸಿ ಮರಳಿದನು ಧರಣೀ
ಕಾಂತ ಕೇಳೈ ಬನದೊಳಿತ್ತಲು ಭೀಮನುದ್ಭವವ ೪೬

ನಿಯಮದಲಿ ಕಾಮಿನಿ ಸರೋವಾ
ರಿಯಲಿ ಮಿಂದಳು ಬೀಜಮಂತ್ರ
ವ್ಯಯವ ಮಾಡಿದಳಮರ ನಿಕರವ ನೋಡಿ ಕೈಮುಗಿದು
ಬಯಸಿದಳು ವಾಯುವನು ನಿಜ ಮೂ
ರ್ತಿಯಲಿ ಬಂದು ಸಮೀರನಾ ಕುಂ
ತಿಯನು ನುಡಿಸಿದನೆಮ್ಮ ಬರಿಸಿದ ಹದನದೇನೆಂದು ೪೭

ಬರಿಸಿದುದು ಬೇರೇನು ಸುತನನು
ಕರುಣಿಸುವುದೈಸಲೆಯೆನಲು ಸಂ
ಸ್ಪರುಶನದಿ ಭವದಿಷ್ಟಮಸ್ತುಯೆನುತಲಂಬರಕೆ
ಮರಳಿದನು ಪವಮಾನನೀ ಪಂ
ಕರುಹಮುಖಿ ಬೆಸಲಾದಳೊಂದೇ
ವರುಷ ಗರ್ಭವ ಧರಿಸಿ ಪರಬಲ ಕಾಲ ಭೈರವನ ೪೮

ಅವನಿಸುತವಾರ ತ್ರಯೋದಶಿ
ದಿವದ ಮಧ್ಯದೊಳರ್ಕನಿರೆ ಸಂ
ಭವಿಸಿದನು ಮಘೆಯಲಿ ಶುಭಗ್ರಹ ಲಗ್ನದುದಯದಲಿ
ಭವದ ಮಾತ್ರದೊಳಹಿತ ಪಾರ್ಥಿವ
ನಿವಹ ನಡುಗಿತು ಭೂಮಿಪತಿ ಹೇ
ಳುವೆನದೇನನು ಭೀಮಸೇನನ ಜನನದದ್ಭುತವ ೪೯

ಭೀಮನುದಯಿಸಿದಿರುಳು ರಾಯ ಪಿ
ತಾಮಹನು ಜನಿಸಿದನಲೈ ನಿ
ಮ್ಮಾ ಮಹಾತ್ಮನ ಹುಟ್ಟು ಬೆದರಿಸಿತಖಿಳ ಜನಮನವ
ಭೂಮಿ ನಡುಗಿತು ದೆಸೆಗೆ ಹರಿದವು
ಧೂಮಕೇತುಗಳೊದರಿದವು ಬಳಿ
ಕಾ ಮಹಾನಗರದಲಿ ಭರದಲಿ ಭೂರಿ ಗೋಮಾಯು ೫೦

ಕರೆಸಿದನು ಧೃತರಾಷ್ಟ್ರನವನೀ
ಸುರರ ಬೆಸಗೊಂಡನು ಕುಮಾರನ
ದರುಶನದ ಸಮನಂತರದಲುತ್ಪಾತ ಫಲಗತಿಯ
ಭರತವಂಶವನುಳಿದ ಭೂಮಿಾ
ಶ್ವರರನಂತವನೀತನೇ ಸಂ
ಹರಿಸುವನು ಸಂದೇಹವಿದಕೇನೆಂದರಾ ದ್ವಿಜರು ೫೧

ಕುಲಕೆ ಕಂಟಕನಾದಡೊಬ್ಬನ
ಕಳೆವುದೂರಳಿವಿನಲಿ ಕಳೆವುದು
ಕುಲವನೊಂದನು ದೇಶದಳಿವಿನಲೂರ ಕೆಡಿಸುವುದು
ಇಳೆಯನಖಿಳವ ಬಿಸುಡುವುದು ತ
ನ್ನುಳಿವ ಮಾಡುವುದೆಂಬ ವಚನವ
ತಿಳಿವುದೀತನ ಬಿಸುಟು ಕಳೆ ನೀನೆಂದನಾ ವಿದುರ ೫೨

ಸುತನ ಮೋಹದ ತಿಮಿರವಾ ದು
ಸ್ಥಿತಿಯನೀಕ್ಷಿಸಲೀವುದೇ ದು
ರ್ಮತಿಯೊಳೀತನ ಬಿಸುಡಲೀಸಿದುದಿಲ್ಲ ಗಾಂಧಾರಿ
ಸುತನಿರೀಕ್ಷಣ ಜಾತಕರ್ಮೋ
ಚಿತದ ದಾನಂಗಳಲಿ ಭೂಸುರ
ತತಿಯ ದಣಿಸಿದನನಿಬರಿಗೆ ಗುಣನಾಮಕರಣದಲಿ ೫೩

ಜನಪ ದುರ್ಯೋಧನನು ದುಶ್ಶಾ
ಸನ ವಿಕರ್ಣ ಸುಬಾಹು ದುಸ್ಸಹ
ಕನಕವರ್ಣ ಸುಷೇಣ ದೀರ್ಘೋದರ ಮಹೋದರನು
ಜನವಿಜಯ ಜಲಸಂಧ ದೃಢವಾ
ಹನ ವಿವಿಂಶತಿ ಕುಂಡಧಾರಕ
ನೆನಲು ನೂರ್ವರ ನಾಮಕರಣವನರಸ ಮಾಡಿಸಿದ ೫೪

ಜನಪತಿಗೆ ಬಳಿಕೊಬ್ಬ ವೇಶ್ಯಾಂ
ಗನೆಯ ಸುತನು ಯುಯುತ್ಸು ನೂರೊಂ
ದೆನಿಸಿತರಸಿ ಕುಮಾರಕರು ಗಾಂಧಾರಿಯುದರದಲಿ
ಜನಿಸಿದರು ನೂರೊಂದು ನೂರ್ವರಿ
ಗನುಜೆ ದುಸ್ಸಳೆಯಾದಳಾ ವರ
ಮಾನಿನಿ ಜಯದ್ರಥನರಸಿಯಾದಳು ರಾಯ ಕೇಳೆಂದ ೫೫

ಅತ್ತಲಾ ಹದನಾಯ್ತು ಬಳಿಕಿನ
ಲಿತ್ತ ಧರ್ಮಜ ಭೀಮಸೇನರ
ಹೆತ್ತ ಹರುಷದೊಳಿವರು ಮೆರೆದರು ಪಾಂಡು ಕುಂತಿಯರು
ಮತ್ತೆ ಕೇಳದ್ಭುತವನುರೆ ಮೊರೆ
ವುತ್ತ ಹೆಬ್ಬುಲಿ ವರತಪೋಧನ
ರತ್ತಲೈತರೆ ಪಾಂಡು ಕೆಡಹಿದನಾ ಮೃಗಾಂತಕನ ೫೬

ಆ ಮಹಾ ರಭಸಕ್ಕೆ ಮುನಿಪ
ಸ್ತೋಮವಂಜಿತು ಪರ್ವತಾಗ್ರದ
ಲಾ ಮಹೀಪತಿಯರಸಿ ನಡುಗಿದಳಹಹ ಶಿವಯೆನುತ
ಭೀಮ ಬಿದ್ದನು ತೊಡೆಯ ಮೇಲಿಂ
ದೀ ಮಹಿಗೆ ತಚ್ಛೈಲ ಶಿಲೆ ನಿ
ರ್ನಾಮವಾದುದು ಹಸುಳೆ ಹೊರಳಿದು ಬಿದ್ದ ಭಾರದಲಿ ೫೭

ಶಿಶುವ ತೂಪಿರಿದಳು ನಿವಾಳಿಸಿ
ಬಿಸುಟಳು ರಜವನು ಮಂತ್ರ ರಕ್ಷಾ
ಪ್ರಸರವನು ಮುನಿಗಳಲಿ ಮಾಡಿಸಿದಳು ಕುಮಾರಂಗೆ
ವಸುಧೆಗತಿ ಬಲನೊಬ್ಬ ಕಂದನ
ಬೆಸಲಹೆನುಯೆಂದೆನುತ ಸಾರಸ
ಲಸಿತ ಕಮಲಾಕರದ ತೀರಕೆ ಬಂದಳಾ ಕುಂತಿ ೫೮

ಮಿಂದು ಕಡು ಶುಚಿಯಾಗಿ ಸುಮನೋ
ವೃಂದದೊಳಗಾರೈದು ನೋಡಿ ಪು
ರಂದರನ ನೆನೆದಳು ಮುನೀಂದ್ರನ ಮಂತ್ರಶಕ್ತಿಯಲಿ
ಬಂದನಲ್ಲಿಗೆ ಬಯಕೆಯೇನರ
ವಿಂದಲೋಚನೆ ಹೇಳೆನಲು ಪೂ
ರ್ಣೇಂದುಮುಖಿ ತಲೆವಾಗಿದಳು ಲಜ್ಜಾನುಭಾವದಲಿ ೫೯

ಸುತನನಿತ್ತೆನು ನಿನಗೆ ಲೋಕ
ತ್ರಿತಯದಲಿ ಬಲುಗೈ ಕಣಾ ಪಶು
ಪತಿಗೆ ಪುರುಷೋತ್ತಮಗೆ ಸರಿಮಿಗಿಲೆಂಬ ಸಂದೇಹ
ಶತ ಭವಾಂತರ ಪುಣ್ಯತರು ಕಾ
ಮಿತವ ಫಲಿಸಿತು ಹೋಗೆನುತ ಸುರ
ಪತಿ ಲತಾಂಗಿಗೆ ವರವನಿತ್ತಡರಿದನು ಗಗನವನು ೬೦

ತೀವಿದವು ನವಮಾಸ ವಿಮಲ ವಿ
ಭಾವಸುವಿನುದಯದಲಿ ಶುಭ ಲ
ಗ್ನಾವಲಂಬನ ತಾರೆಯುತ್ತರೆ ಫಲುಗುಣಾಹ್ವಯದ
ಜೀವ ಕೇಂದ್ರ ಸ್ಥಿತಿ ದಶಾ ದಿ
ಗ್ಭಾವಿತ ಗ್ರಹರಾಶಿಯಿರೆ ಗಾಂ
ಡೀವಿ ಜನಿಸಿದನೊಡನೆ ಜನಿಸಿತು ಜನದ ಸುಮ್ಮಾನ ೬೧

ದೇವದುಂದುಭಿ ಮೊಳಗಿದುವು ಕುಸು
ಮಾವಳಿಯ ಮಳೆ ಸುರಿದುದಾಡುವ
ದೇವ ವಧುಗಳ ಹೊಳೆವ ಕಂಗಳ ಥಾಳ ಮಿಂಚಿದವು
ತೀವಿದುತ್ಸಹವುಬ್ಬರಿಸೆ ಭುವ
ನಾವಳಿಯೊಳಿಂದ್ರಾದಿ ನಿಖಿಳ ಸು
ರಾವಳಿಗಳುರೆ ಕೂಡೆ ಕೊಂಡಾಡಿತು ಧನಂಜಯನ ೬೨

ರಣಭಯಂಕರನರ್ಜುನನು ಧಾ
ರುಣಿಯೊಳುದಿಸದ ಮುನ್ನ ತಿಂಗಳ
ನೆಣಿಸಿದರೆ ಮೂರಾಯ್ತು ಮಧುರೆಯ ರಾಜಭವನದಲಿ
ಗುಣರಹಿತನಚ್ಯುತನು ವರ ಶ್ರಾ
ವಣ ಬಹುಳದಷ್ಟಮಿಯಿರುಳು ರೋ
ಹಿಣಿಯುಲವತರಿಸಿದನಲೈ ದೇವಕಿಯ ಜಠರದಲಿ ೬೩

ಈತ ನರ ಋಷಿ ನಿಖಿಳ ಭುವನ
ಖ್ಯಾತ ನಾರಾಯಣನಲೈ ಬಳಿ
ಕಾತನುರ್ವೀಭಾರ ಸಂಹರಣದ ವಿನೋದದಲಿ
ಭೂತಪತಿ ಮೊದಲಾದ ದಿವಿಜ
ವ್ರಾತವೇ ನರರೂಪದಲಿ ಸಂ
ಭೂತವಾದುದು ಕೇಳು ನೃಪ ಕೃಷ್ಣಾವತಾರದಲಿ ೬೪

ಸಾಕು ಮೂವರು ಸುತರು ತನಗೆಂ
ದೀಕೆ ಮಾದ್ರೀದೇವಿಗಗ್ಗದ
ಶೋಕಿತೆಗೆ ಮಂತ್ರೋಪದೇಶ ವಿಧಾನವನು ಕಲಿಸಿ
ನಾಕ ನಿಲಯರ ವೊಲಿಸೆನಲು ಬಂ
ದಾಕೆ ಕೃತನಿಯಮದಲಿ ನೆನೆದಳು
ಲೋಕವಿಶ್ರುತರಶ್ವಿನೀ ದೇವರನು ಹರ್ಷದಲಿ ೬೫

ಬಂದರವರಿಬ್ಬರು ಮಹೀತಳ
ಕಿಂದುವದನೆಗೆ ಸುತರನಿತ್ತರು
ಮಂದಗಮನೆಯ ಕಳುಹಿ ಹಾಯ್ದರು ಗಗನಮಂಡಲಕೆ
ಒಂದು ವರುಷಕೆ ಕಿರಿಯರರ್ಜುನ
ಗಿಂದ ಬಳಿಕವತರಿಸಿದರು ಮುನಿ
ವೃಂದ ನೆರೆ ಪತಿಕರಿಸಿ ಕೊಂಡಾಡಿತು ಕುಮಾರಕರ ೬೬

ಕರಿ ತುರಗ ನಿಕರವನು ಕುಲ ಭೃ
ತ್ಯರ ವಿಲಾಸಿನಿಯರನು ರತ್ನಾ
ಭರಣ ವಸನ ಹಿರಣ್ಯ ಗೋ ಮಹಿಷಾದಿ ವಸ್ತುಗಳ
ತರಿಸಿದನು ಕಶ್ಯಪನು ಯದು ರಾ
ಯರ ಪುರೋಹಿತನಲ್ಲಿಗಾತನ
ಪರುಠವಿಸಿ ಕಳುಹಿದನು ಪಾಂಡುನೃಪಂಗೆ ವಸುದೇವ ೬೭

ಬಂದನಾ ಕಶ್ಯಪನು ಕುಂತೀ
ನಂದನರ ಕಂಡಖಿಳ ವಸ್ತುವ
ನಂದು ಕಾಣಿಕೆಯಿತ್ತು ಕಂಡನು ಪಾಂಡು ಭೂಪತಿಯ
ಅಂದು ವಸುದೇವಾದಿ ಯಾದವ
ವೃಂದ ರೋಹಿಣಿ ದೇವಕಿಯರಾ
ನಂದ ಸುಕ್ಷೇಮವನು ಕುಶಲವನರಸ ಬೆಸಗೊಂಡ . ೬೮

ಯಾದವರ ಸುಕ್ಷೇಮ ಕುಶಲವ
ನಾದರಿಸಿ ಬಳಿಕಾದ ಪರಮಾ
ಹ್ಲಾದದಲಿ ಕಶ್ಯಪನೊಳಾಲೋಚಿಸಿ ಮಹೀಪಾಲ
ವೈದಿಕೋಕ್ತಿಯ ಚೌಲವುಪನಯ
ನಾದಿ ಸಕಲ ಕ್ರಿಯೆಗಳನು ಗಾ
ರ್ಗ್ಯಾದಿ ಋಷಿಗಳನುಜ್ಞೆಯಲಿ ಮಾಡಿಸಿದನನಿಬರಿಗೆ ೬೯

ಈತನೇ ಧರ್ಮಜನು ಯೆರಡನೆ
ಯಾತ ಭೀಮನು ಬಳಿಕ ಮೂರನೆ
ಯಾತನರ್ಜುನ ನಕುಲನೈದನೆಯಾತ ಸಹದೇವ
ಈತಗಳು ಕೌಂತೇಯ ಮಾದ್ರೇ
ಯಾತಿಶಯ ಪರಿಭೇದ ರಹಿತ
ಖ್ಯಾತರೆಂದರು ಪರಮಮುನಿಗಳು ಪಾಂಡುನಂದನರ ೭೦

## ಐದನೆಯ ಸಂಧಿ

ಸೂ. ವರಮುನಿಯ ಶಾಪದಲಿ ಸರಿದನು
ಸುರರ ನಗರಿಗೆ ಪಾಂಡು ಹಸ್ತಿನ
ಪುರಕೆ ತಂದರು ಪರಮಮುನಿಗಳು ಪಾಂಡುನಂದನರ

ಕೇಳು ಜನಮೇಜಯ ಧರಿತ್ರೀ
ಪಾಲ ಶತಶೃಂಗಾದ್ರಿಯಲಿ ಭೂ
ಪಾಲನಿರ್ದನು ತನ್ನ ವೀರಕುಮಾರಕರು ಸಹಿತ
ವ್ಯಾಳ ವನಗಜ ಸಿಂಹ ವೃಕ ಶಾ
ರ್ದೂಲ ಭಯವನು ಪರಿಹರಿಸಿ ಮುನಿ
ಪಾಳಿಗಾಶ್ರಯವೆನಿಸಿದನು ಪಾವನ ತಪೋವನವ ೧

ಆ ಸಮಸ್ತ ಮುನೀಂದ್ರರೊಡನ
ಭ್ಯಾಸವಾ ದಿವ್ಯಾಶ್ರಮದ ಸಹ
ವಾಸವಾ ತಪವಾ ಕುಮಾರ ಪರಾಕ್ರಮಾಲೋಕ
ಆ ಸಮಂಜಸ ಸತಿಯರಿಬ್ಬರು
ಪಾಸನೆಗಳಾ ವಿಭವಕಿಭಪುರಿ
ಯಾ ಸಮಸ್ತೈಶ್ವರ್ಯವದು ತೃಣವಾಯ್ತು ಭೂಪತಿಗೆ ೨

ಸುತ ವಿನೋದದ ಸಿರಿಗೆ ಅಮರಾ
ವತಿಯ ಸಿರಿ ತೊತ್ತೆಂದು ವಿಮಲ
ವ್ರತ ತಪೋಲಕ್ಷ್ಮಿಗೆ ವಿಲಾಸಿನಿ ಮುಕ್ತಿವಧುವೆಂದು
ಯತಿ ಪದಾಂಬುಜ ನಿತ್ಯಸೇವಾ
ಸತಿಗೆ ದಾಸಿ ಜಗತ್ರಯಾದಿ
ಸ್ಥಿತಿ ಪದವಿಯೆಂದುಬ್ಬಿದನು ಕಲಿಪಾಂಡು ವಿಪಿನದಲಿ ೩

ವರುಷ ಹದಿನಾರಾಯ್ತು ಧರಣೀ
ಶ್ವರನ ಹಿರಿಯ ಮಗಂಗೆ ಭೀಮಗೆ
ವರುಷ ಹದಿನೈದರ್ಜುನಗೆ ಹದಿನಾಲ್ಕು ಹದಿಮೂರು
ಕಿರಿಯರಿಬ್ಬರಿಗನಿಬರಾ ಮುನಿ
ವರರಿನಧ್ಯಯನಾದಿ ವಿದ್ಯಾ
ನಿರತರಾದರು ಬಂದುದೊಂದು ವಸಂತಮಯ ಸಮಯ ೪

ತೆಗೆದುದಗ್ಗದ ತಂಪು ನದಿ ಸರ
ಸಿಗಳ ತಡಿಯಲಿ ಹಜ್ಜೆಯಾದುದು
ಹಗಲು ಹಾವಸೆ ಹರಿದು ಹೊಕ್ಕರಿಸಿದುದು ಹಿಮಜಲವ
ಸೊಗಸಿದವು ನೆಳಲುಗಳು ದೂರಕೆ
ಸೆಗಳಿಕೆಗಳೇರಿದವು ತಂಗಾ
ಳಿಗೆ ವಿಹಾರಿಸಿ ಮೈಯ ತೆತ್ತುದು ಕೂಡೆ ಜನನಿಕರ ೫

ಯೋಗಿಗೆತ್ತಿದ ಖಡುಗ ಧಾರೆ ವಿ
ಯೋಗಿಗೆತ್ತಿದ ಸಬಳವಖಿಳ ವಿ
ರಾಗಿಗಳ ಹೆಡತಲೆಯ ದಡಿ ನೈಷ್ಠಿಕರಿಗಲಗಣಸು
ಆಗಮಿಕರೆದೆ ಶೂಲ ಗರ್ವಿತ
ಗೂಗೆಗಳ ನಖಿಸಾಳವಗ್ಗದ
ಭೋಗಿಗಳ ಕುಲದೈವವೆಸೆದುದು ಕುಸುಮಮಯ ಸಮಯ ೬

ಮೊರೆವ ತುಂಬಿಯ ಗಾಯಕರ ನಯ
ಸರದ ಕೋಕಿಲ ಪಾಠಕರ ಬಂ
ಧುರದ ಗಿಳಿಗಳ ಪಂಡಿತರ ಮಾಮರದ ಕರಿಘಟೆಯ
ಅರಳಿದಂಬುಜ ಸತ್ತಿಗೆಯ ಮಂ
ಜರಿಯ ಕುಸುಮದ ಚಾಮರದ ಚಾ
ತುರ ವಸಂತನೃಪಾಲ ನಡೆದನು ಪಾಂಡುವಿನ ಮೇಲೆ ೭

ಫಲಿತ ಚೂತದ ಬಿಣ್ಪುಗಳ ನೆರೆ
ತಳಿತಶೋಕೆಯ ಕೆಂಪುಗಳ ಪರಿ
ದಳಿತ ಕಮಲದ ಕಂಪುಗಳ ಬನಬನದ ಗುಂಪುಗಳ
ಎಳ ಲತೆಯ ನುಣ್ಪುಗಳ ನವ ಪರಿ
ಮಳದ ಪವನನ ಸೊಂಪುಗಳ ವೆ
ಗ್ಗಳಿಕೆ ಝೊಳಪಿಸಿ ಹೊಯ್ದು ಸೆಳೆದುದು ಜನದ ಕಣ್ಮನವ ೮

ಪಸರಿಸಿತು ಮಧು ಮಾಸ ತಾವರೆ
ಯೆಸಳ ದೋಣಿಯು ಮೇಲೆ ಹಾಯ್ದವು
ಕುಸುಮ ರಸದುಬ್ಬರದ ತೊರೆಯನು ಕೂಡೆ ತುಂಬಿಗಳು
ಒಸರ್ವ ಮಕರಂದದ ತುಷಾರದ
ಕೆಸರೊಳದ್ದವು ಕೊಂಚೆಗಳು ಹಗ
ಲೆಸೆವ ದಂಪತಿವಕ್ಕಿ ಸಾರಸ ರಾಜಹಂಸಗಳು ೯

ಜಗವ ಹೊರೆದುದು ಬಹಳ ಪರಿಮಳ
ದೊಗುಮಿಗೆಯ ತಂಗಾಳಿ ವನ ವೀ
ಥಿಗಳ ವಳಯವ ಹೊಕ್ಕು ಮರಳಿದುದಿಲ್ಲ ವಿರಹಿಗಳು
ಹೊಗುವ ಕಾಮನ ದಳದ ಚೂಣಿಯ
ಸೊಗಸು ಹೊಯ್ದರೆ ಕೈದುವಿಕ್ಕಿತು
ವಿಗಡ ಮುನಿಜನವೇನನೆಂಬೆನು ನೃಪತಿ ಕೇಳೆಂದ ೧೦

ಆ ವಸಂತದೊಳೊಮ್ಮೆ ಮಾದ್ರೀ
ದೇವಿ ವನದೊಳಗಾಡುತಿರ್ದಳು
ಹೂವಿನಲಿ ಸರ್ವಾಂಗ ಶೃಂಗಾರದ ವಿಲಾಸದಲಿ
ಆವಳಿವಳೂರ್ವಶಿಯೊ ರಂಭೆಯೊ
ದೇವವಧುಗಳ ಸುಳಿವೊ ತಾನೆನ
ಲಾವ ಚೆಲುವಿಕೆ ಶಿವಶಿವಾಯೆಂದರಸ ಬೆರಗಾದ ೧೧

ತಾಗಿದವು ಶರನಿಕರ ಕಾಮನ
ಲಾಗು ವೇಗವದೆಂತುಟೋ ತೆಗೆ
ಹೂಗಣೆಗಳೈದಲ್ಲ ರೋಮುಗಳೆಂಟು ಕೋಟಿಯಲಿ
ತೂಗಿ ನೆಟ್ಟವು ಕಣೆಗಳೆಂಬವೊ
ಲಾ ಗರುವನಳುಕಿದನು ಪ್ರಜ್ಞಾ
ಸಾಗರಂಗಳು ಮಧ್ಯಕಟಿ ಜಾನ್ವಂಘ್ರಿ ಮಿತವಾಯ್ತು ೧೨

ಮರೆದು ಹಿಂದೆಲ್ಲವನು ಕುಂತಿಯ
ನರಿಯಲೀಯದೆ ಮೆಲ್ಲ ಮೆಲ್ಲನೆ
ತುರುಗಿದೆಳಲತೆ ವನದೊಳಾಡುವ ವಧುವ ಸಾರಿದನು
ಸೆರಗ ಹಿಡಿದರೆ ಬೇಡ ಬೇಡೆಂ
ದೆರಗಿದಳು ಚರಣದಲಿ ತರುಣಿಯ
ತುರುಬ ಹಿಡಿದೆತ್ತಿದನು ಹೆಣಗಿದರೊಡನೆ ಝೊಂಪಿಸಿದ ೧೩

ಕೊಂದೆಲಾ ಕಡುಪಾಪಿ ಮರೆದಾ
ಹಿಂದೆ ಮಾಡಿದ ಕೃತ್ಯವನು ಮುನಿ
ಯೆಂದ ನುಡಿ ಹೊಳ್ಳಹುದೆ ಸುಡು ದುರ್ವಿಷಯ ಕೆಳಸಿದಲಾ
ಬೆಂದುದೇ ನಿನ್ನರಿವು ಧೈರ್ಯವ
ನಿಂದು ನೀಗಿದೆಯಕಟ ನಿನ್ನಯ
ನಂದನರಿಗಾರುಂಟೆನುತ ಹೆಣಗಿದಳು ಲಲಿತಾಂಗಿ ೧೪

ಕೊಂಬುದೇ ಬಯಲರಿತಗಿರಿತದ
ಡೊಂಬಿನಾಗಮ ನೀತಿಗೀತಿಯ
ಶಂಬರಾರಿಯ ಸಬಳವಲ್ಲಾ ಬೇಗೆ ಮೂಡಿದುದು
ಬೆಂಬಿಡದೆ ಮರಳಿದೊಡೆ ಮರುವೊನೆ
ಗೊಂಬುದೆಂಬವೊಲವನಿಪತಿಯೊ
ತ್ತಂಬರದಿ ಹಿಡಿದಬಲೆಯನು ಕೂಡಿದನು ಕಳವಳಿಸಿ ೧೫

ಆ ಸುಖದ ಝೊಂಪಿನಲಿ ಮೈಮರೆ
ದೋಸರಿಸಿದುದು ವದನ ಕಂಗಳು
ಪೈಸರಿಸಿದವು ತೆಕ್ಕೆ ಸಡಲಿತು ದೇಹ ಬಾರಿಸಿತು
ಸೂಸಿದುದು ನಿಟ್ಟುಸುರು ರಾಣೀ
ವಾಸದುರದಲಿ ಕದಪನಿಟ್ಟು ಮ
ಹೀಶನೊರಗಿದ ಹದನ ಕಂಡಳು ಕಾಂತೆ ಭೀತಿಯಲಿ ೧೬

ಅಕಟ ಪಾಂಡು ಮಹೀಶ ವಿಷ ಕ
ನ್ನಿಕೆಯನೆನ್ನನು ಮುಟ್ಟಿದೈ ಬೇ
ಡಕಟ ಕೆಡಿಸದಿರೆನ್ನೆನೇ ತಾನರಿಯನೇ ಹದನ
ಪ್ರಕಟ ಕುರುಕುಲ ತಿಲಕರೀ ಬಾ
ಲಕರನಾರಿಗೆ ಕೊಟ್ಟೆ ತನ್ನೊಡ
ನಕಟ ಮುನಿದೈ ಮಾತನಾಡೆಂದೊರಲಿದಳು ಮಾದ್ರಿ ೧೭

ಏನಿದೆತ್ತಣ ರಭಸ ಮಾದ್ರೀ
ಮಾನಿನಿಯೊ ಹಾ ರಾಯನಾವೆಡೆ
ಹಾನಿ ಹಿರಿದುಂಟರಿವೆನಂಗಸ್ಫುರಿತ ಶಕುನದಲಿ
ಏನು ಮಾರಿಯೊ ಶಿವಶಿವಾಯೆನು
ತಾ ನಿತಂಬಿನಿ ಗಾಢ ಗತಿಯಲಿ
ಕಾನನದೊಳೈತಂದಳಕ್ಕಿಯ ಸರದ ಬಳಿವಿಡಿದು ೧೮

ಕಂಡಳವರಿಬ್ಬರನು ಧೊಪ್ಪ ನೆ
ದಿಂಡುಗೆಡೆದಳು ಮೂರ್ಛೆಯಲಿ ಮರೆ
ಗೊಂಡುದೆಚ್ಚರ ಮಾದ್ರಿ ಮಿಗೆ ಹಲುಬಿದಳು ಗೋಳಿಡುತ
ಚಂಡಿಕೆಗಳಲ್ಲಾಡೆ ಹರಿದರು
ಪಾಂಡುನಂದನರೈವರೀತನ
ಕಂಡು ಹಾಯೆಂದೊರಲಿ ಹೊರಳಿದರವನಿಪನ ಮೇಲೆ ೧೯

ಬೊಪ್ಪ ದೇಶಿಗರಾದೆವೈ ವಿಧಿ
ತಪ್ಪಿಸಿತಲಾ ನಮ್ಮ ಭಾಗ್ಯವ
ನೊಪ್ಪಿಸಿದೆ ನೀನಾರಿಗೆಮ್ಮನು ಪೂರ್ವಕಾಲದಲಿ
ಮುಪ್ಪಿನಲಿ ನಿನಗೀಯವಸ್ಥೆಯಿ
ದೊಪ್ಪುದೇ ಹೇರಡವಿಯಲಿ ಮಲ
ಗಿಪ್ಪುದೇಕೆಂದೊರಲಿ ಮರುಗಿದರಾ ಕುಮಾರಕರು ೨೦

ಕೇಳಿ ಹರಿತಂದುದು ಮುನಿವ್ರಜ
ವೇಳಿಗೆಯ ಕಡು ಶೋಕರಸದ ಥ
ಡಾಳವನು ನಿಲಿಸಿದರು ಸಂತೈಸಿಯೆ ಕುಮಾರಕರ
ಆಲಿಸಿದಳಾ ಕುಂತಿ ಮೂರ್ಛಾ
ವ್ಯಾಳವಿಷ ಪರಿಹರಿಸಿ ಧರಣೀ
ಪಾಲಕನ ನೋಡಿದಳು ಬಿಸುಟೈ ತನ್ನನಿಂದೆನುತ ೨೧

ಅರಸ ತನಗರುಹದೆ ಸುರಸ್ತ್ರೀ
ಯರಿಗೆ ಹರಿದೈ ನಿನ್ನ ವಧುಗಳ
ತುರುಬು ಕೊಯ್ಸುವೆನವರ ತೊತ್ತಿರ ಮಾಡುವೆನು ತನಗೆ
ಅರಸಿ ನೀನೀ ಮಕ್ಕಳನು ಸಂ
ವರಿಸಿಕೊಂಡಿಹುದೆಂದು ಮಾದ್ರಿಯು
ಕರವ ಹಿಡಿದರೆ ಕುಂತಿಗೆಂದಳು ಕಾಂತೆ ವಿನಯದಲಿ ೨೨

ಮರುಳಲೌ ನೀವಕ್ಕ ನಿಮ್ಮ
ವರು ಕುಮಾರರು ನಿಮ್ಮ ಕೈಯೆಡೆ
ಧರಣಿಪತಿ ನಿಡು ನಿದ್ರೆಗೈದನು ನನ್ನ ತೋಳಿನಲಿ
ಸುರವಧುಗಳೊಡನಿರಲಿ ನಿನ್ನಯ
ಹರಿಬವೆನ್ನದು ನೋಡು ತನ್ನಯ
ಪರಿಯನೀತನು ನಿನಗೆ ಕೊಡೆನೆಂದಂಘ್ರಿಗೆರಗಿದಳು ೨೩

ಮುನಿಗಳೀಕೆಯ ತಿಳುಹಿ ಮಾದ್ರಿಗೆ
ಜನಪತಿಯ ಸಹಗಮನದಲಿ ಮತ
ವೆನಿಸಿ ಶವಸಂಸ್ಕಾರವನು ವೈದಿಕವಿಧಾನದಲಿ
ಮುನಿಗಳೇ ಮಾಡಿದರು ಮಾದ್ರೀ
ವನಿತೆ ತನ್ನ ಕುಮಾರರಿಬ್ಬರ
ತನುಜ ನೀ ಸಲಹೆಂದು ಕೊಟ್ಟಳು ಧರ್ಮಜನ ಕರೆದು ೨೪

ಪತಿಯ ಸಹಗಮನದಲಿ ಮಾದ್ರೀ
ಸತಿ ಶರೀರವ ಬಿಟ್ಟಳೈವರು
ಸುತರು ಸಹಿತೀ ಕುಂತಿ ಮಿಂದು ಪರೇತ ಕೃತ್ಯವನು
ಶ್ರುತಿ ವಿಧಾನದೊಳಖಿಳ ಮುನಿ ಸಂ
ತತಿಗಳನು ಮುಂದಿಟ್ಟು ಮಾಡಿಸಿ
ಸುತರ ಪಾಲಿಸುತಿರ್ದಳಾ ಶತಶೃಂಗ ಶೈಲದಲಿ ೨೫

ಅರಸನಪಗತನಾದನಾ ನೃಪ
ನರಸಿ ಬಾಲಕಿ ಮಕ್ಕಳೈವರು
ಭರತ ಕುಲಜರು ನಾವು ತಪಸಿಗಳಿರ್ಪುದಾರಣ್ಯ
ಅರಿಗಳಾ ರಾಕ್ಷಸರು ನಾವಿ
ನ್ನಿರಿಸುವುದು ಮತವಲ್ಲ ಹಸ್ತಿನ
ಪುರದೊಳೊಪ್ಪಿಸಿ ಬಹುದು ಮತವೆಂದುದು ಮುನಿಸ್ತೋಮ ೨೬

ಎಂದು ಕುಂತೀದೇವಿ ಸಹಿತಾ
ನಂದನರನೈವರನು ಮುನಿಗಳು
ತಂದರಿಭಪುರಿಗಾಗಿ ಭೀಷ್ಮಾದಿಗಳಿಗೀ ಹದನ
ಮುಂದೆ ಸೂಚಿಸಲುತ್ಸವದಿದಿ
ರ್ವಂದರನಿಬರು ಶುಭ ಮುಹೂರ್ತದೊ
ಳಂದು ನಗರಿಯ ಹೊಗಿಸಿದನು ಪರಿತೋಷದಲಿ ಭೀಷ್ಮ ೨೭

ಇವರ ಜನನ ಕ್ರಮವನಾ ಪಾಂ
ಡುವಿನ ವಿಕ್ರಮವನು ತಪೋಧನ
ನಿವಹ ಕೊಂಡಾಡಿದುದು ಬಳಿಕಿನ ಮರಣಸಂಗತಿಯ
ಅವನಿಪನ ಸಂಸ್ಕಾರ ಮಾದ್ರೀ
ಯುವತಿ ಸಹಗಮನೋರ್ಧ್ವ ದೇಹಿಕ
ವಿವಿಧ ಕೃತ್ಯವನೀ ಪ್ರಪಂಚವನವರಿಗರುಹಿದರು ೨೮

ಮುನಿಗಳಾಕ್ಷಣ ಮರಳಿದರು ತ
ಜ್ಜನಪ ವೃತ್ತಾಂತವನು ವಿವರಿಸೆ
ಜನಜನಿತ ಬಳಿಕುಬ್ಬಿ ಹರಿದುದು ಶೋಕರಸ ಜಲಧಿ
ಜನಪ ಧೃತರಾಷ್ಟ್ರಾದಿ ಬಾಂಧವ
ಜನ ಪುನಃ ಸಂಸ್ಕಾರದಲಿ ಭೂ
ಪನನು ದಹಿಸಿದರೂರ್ಧ್ವ ದೇಹಿಕವಾಯ್ತು ಮಗುಳಲ್ಲಿ ೨೯

ಅರಸ ಕೇಳೈ ಭೀಷ್ಮ ಧೃತರಾ
ಷ್ಟ್ರರನು ಬೋಧಿಸಿ ಬಹಳ ಶೋಕ
ಜ್ವರಕೆ ಬಿಡುಗಡೆ ಮಾಡಿದನು ಪಾರಾಶರಿವ್ರತಿಪ
ಕರೆದು ಯೋಜನಗಂಧಿಯನು ನೀ
ವಿರಲು ಬೇಡಾ ತಾಯೆ ನಿಮ್ಮಾ
ಭರತ ವಂಶದೊಳೊಗೆದ ಕಿಚ್ಚುರುಹುವುದು ನೃಪಕುಲವ ೩೦

ಹೇಳಬಾರದು ಮುಂದಣದು ದು
ಷ್ಕಾಲವಿಂದಿಗೆ ನಾಳೆ ನಾಳೆಗೆ
ನಾಳೆ ಬೆಟ್ಟಿತು ವರ್ಣಧರ್ಮಾಶ್ರಮದ ನೆಲೆಹೋಯ್ತು
ಕಾಲ ವಿಷಮವು ಕೌರವಕ್ಷಿತಿ
ಪಾಲ ಪಾಂಡು ಕುಮಾರರಲಿ ಕೈ
ಮೇಳವಿಸುವುದು ತಾಯೆ ಬಿಜಯಂಗೈಯಿ ನೀವೆಂದ ೩೧

ಎನಲು ಯೋಜನಗಂಧಿ ನಿಜ ನಂ
ದನನ ನುಡಿಯೇ ವೇದಸಿದ್ಧವಿ
ದೆನುತ ಸೊಸೆಯರ ಸಹಿತ ನಡೆದಳು ವರ ತಪೋವನಕೆ
ಮುನಿಪನತ್ತಲು ಬದರಿಕಾ ನಂ
ದನಕೆ ಮರಳಿದನಿತ್ತ ಗಂಗಾ
ತನುಜ ಸಲಹಿದನಖಿಳ ಪಾಂಡವ ಕೌರವ ವ್ರಜವ ೩೨

## ಆರನೆಯ ಸಂಧಿ

ಸೂ. ಭೀಮ ದುರ್ಯೋಧನರ ಸೆಣಸಿನ
ತಾಮಸಿಕೆ ಹೆಚ್ಚಿದುದು ಕದನೋ
ದ್ದಾಮರಸ್ತ್ರಾಭ್ಯಾಸವನು ಮಾಡಿದರು ದ್ರೋಣನಲಿ

ಕೇಳು ಜನಮೇಜಯ ಮಹೀಪತಿ
ಬಾಲಕರು ನೂರಾರು ಮೆರೆದರು
ಬಾಲಕೇಳೀ ವ್ಯಸನಿಗಳು ಹೊರ ವಳಯದಲಿ ಪುರದ
ಆಳಿನೇರಿಕೆ ಹಿಡಿಗವಡೆ ಗುರಿ
ಯಾಳು ಚೆಂಡಿನ ಹೊಣಕೆ ಚಿಣಿ ಕೋ
ಲಾಳು ಗೊತ್ತಿನ ದಂಡೆಯೆನೆ ನಾನಾ ವಿನೋದದಲಿ ೧

ಗುಡುಗು ಗುತ್ತಿನಚೆಂಡು ಗುಮ್ಮನ
ಬಡಿವ ಕತ್ತಲೆ ಗುದ್ದುಗಂಬದ
ಗಡಣೆ ಕಣ್ಮುಚ್ಚಸಗವರಿ ಹರಿಹಲಗೆ ನಿಡುಗವಣೆ
ಕೆಡಹು ಕುಟ್ಟಿಗನಾದಿಯಾದವ
ಗಡ ವಿನೋದದಲಾಡಿದರು ಪಂ
ಗಡದಲೈವರು ನೂರ್ವರಿವರಿತ್ತಂಡವೊಂದಾಗಿ ೨

ಅದರೊಳೊಬ್ಬನೆ ಭೀಮನನಿಬರ
ಸದೆವ ತಾ ಸೋತರೆ ವಿಭಾಡಿಸಿ
ಕೆದರುವನು ಗೆದ್ದೋಡಿದರೆ ಬೆಂಬತ್ತಿ ಒಡಿದೆಳೆದು
ಸದೆದು ಬಿಡುವನು ಮುನ್ನ ಭೀಷ್ಮಂ
ಗೊದರಿ ದೂರುವನನಿಬರನು ಮೇ
ಳದಲಿ ಮಗುಳೊಂದಾಗಿ ಸಂಗಡವಹರು ಸೂರುಳಿದು ೩

ಕೆಣಕಿ ದುರ್ಯೋಧನನ ನೆತ್ತಿಯು
ಸಣೆದು ಹಾಯ್ವನು ನಿಮ್ಮ ನೂರ್ವರ
ಬಣಗುಗಳಿಗೆಡಗಾಲ ತೊಡರಿದೆ ಬನ್ನಿ ನೀವೆನುತ
ಗುಣವ ನುಡಿದೊಂದಾಗಿ ಕೆಳೆಗೊಂ
ಡಣಕಿಸದೆ ಮೈಮರೆಸಿ ಮರೆಯಲಿ
ಹಣಿದು ಬಿಡುವರು ಭೀಮನನು ದುರ್ಯೋಧನಾದಿಗಳು ೪

ಹೇಳುವರು ಯಮಜಂಗೆ ನಿನ್ನವ
ಸೂಳಿಗವ ನಿಲಿಸೆಂದು ಪಾರ್ಥಗೆ
ಹೇಳುವರು ಬಳಿಕವರು ಭೀಮನ ಕರೆದು ಗಾರುಡಿಸೆ
ಕೇಳುವನು ಹೈಯೆಂದು ತನ್ನಯ
ಸೋಲದಲಿ ಮೈಯೊಡ್ಡುವನು ಮೇ
ಲಾಳನೇರಿಸಿ ಹರಿದು ಸದೆವನು ಗುತ್ತಿನಲಿ ಕೆಡಹಿ ೫

ಅಳುತ ಧೃತರಾಷ್ಟ್ರಂಗೆ ಭೀಮನು
ಕಳೆದ ಹಲುಗಳನೊಡೆದ ಮೊಳಕಾ
ಲ್ಗಳನು ತೋರಿಸಿ ದೂರುವರು ದುರ್ಯೋಧನಾದಿಗಳು
ಮುಳು ಮೊನೆಗಳಲಿ ಗೀರಿ ನೆತ್ತರ
ಗಳೆದು ಹುಡಿಯಲಿ ಹೊರಳಿ ತಾ ಬಂ
ದಳುತ ಧೃತರಾಷ್ಟ್ರಂಗೆ ಭೀಷ್ಮಗೆ ದೂರುವನು ಭೀಮ ೬

ಆಕೆವಾಳರು ಭೀಷ್ಮ ವಿದುರರು
ಸಾಕು ನಿಮ್ಮೊಳು ನೂರು ನಾಲ್ವರು
ಆ ಕುಮಾರರು ಬೇರೆ ನೀನಿಹುದೊಬ್ಬ ಬೇರೆಂದು
ನೂಕಿ ಸೂರುಳು ಮಾಡಿ ಬಿಟ್ಟರೆ
ನಾಕು ಜಾವದೊಳಿಹರು ಮರುದಿನ
ವಾ ಕುಮಾರರು ತಮ್ಮೊಳೊಂದಾಗಿಹರು ಗೆಳೆಯಾಗಿ ೭

ಒಂದು ದಿನ ನೂರಾರು ಮಾನಿಸ
ರೊಂದು ಗೆಳೆಯಲಿ ಪುರದ ಹೊರಗಿಹು
ದೊಂದು ತಾವು ಪ್ರಮಾಣ ವೃಕ್ಷವ ಕಂಡು ನಡೆತರಲು
ಬಂದು ನಿಂದರು ಕೋಲ ಬಿಸುಟೀ
ವೃಂದ ಹತ್ತಿತು ಮರನನಿವನೈ
ತಂದು ತಂದೆಡೆಯಾಡಿ ಬಳಲಿದು ನೋಡಿದನು ಭೀಮ ೮

ಮರನ ಹಿಡಿದಲುಗಿದರೆ ಬಿದ್ದರು
ಭರತ ಕುಲ ಪಾಲಕರು ನೂರ್ವೈ
ವರು ಮಹಾವಾತದಲಿ ತರುಫಲನಿಕರ ಬೀಳ್ವಂತೆ
ಶಿರವೊಡೆದು ಬೆನ್ನೊಡೆದು ಮೊಳಕಾ
ಲ್ಮುರಿದು ಕೈಗಳು ಮುರಿದು ನೆತ್ತರು
ಸುರಿದು ಧೃತರಾಷ್ಟ್ರಂಗೆ ದೂರಿದರನಿಬರೀ ಹದನ ೯

ದುರುಳನವನೊಡನಾಡ ಬೇಡೆಂ
ದರಸನನಿಬರ ಸಂತವಿಟ್ಟನು
ಹಿರಿದು ಹೆಚ್ಚಿತು ಭೀಮ ದುರ್ಯೋಧನರಿಗತಿ ವೈರ
ಮರಳಿ ತಾವೊಂದಾಗುತಾತನ
ಕರೆಸಿ ವಿವಿಧ ಕ್ರೀಡೆಯಲಿ ಮೈ
ಮರೆಸಿ ಭೀಮನ ಕಟ್ಟಿ ಹಾಯ್ಕಿದರೊಂದು ಮಡುವಿನಲಿ ೧೦

ಪಾಶವನು ಹರಿದೆದ್ದು ಬಂದತಿ
ರೋಷಿ ಸದೆದನು ಮತ್ತೆ ತಮ್ಮೊಳು
ಭಾಷೆಗಳಲೊಂದಾಗಿ ಕೂಡಿದರೊಂದು ದಿವಸದಲಿ
ಆ ಸಿತಗ ಮೈಮರೆದ ಹೊತ್ತು ಮ
ಹಾಸುರದ ಫಣಿಗಳಲಿ ಕಚ್ಚಿಸಿ
ಘಾಸಿ ಮಾಡಲು ಬದುಕಿ ಬೇಸರನಡಿಗಡಿಗೆ ಭೀಮ ೧೧

ಅರಸ ಕೇಳ್ ಆಯುಷ್ಯವುಳ್ಳರೆ
ಹರಿಹರ ಬ್ರಹ್ಮಾದಿಗಳು ಸಂ
ಹರಿಸಲರಿಯರು ಬರಿದೆ ದೈನ್ಯಂಬಡುವುದೀ ಲೋಕ
ಭರತ ವಂಶದ ಬಾಹಿರರು ನಿ
ಮ್ಮರಸುಗಳು ಭೀಮಂಗೆ ಮಾಡಿದ
ಪುರಿಯನಾ ಹುರಿ ಹರಿದ ಪರಿಯನು ಮತ್ತೆ ಕೇಳೆಂದ ೧೨

ಕಾಳಕೂಟ ಹಲಾಹಲವ ಕಾ
ರ್ಕೋಲ ದಾರದ ವತ್ಸನಾಭಿ ಕ
ರಾಳ ಸೌರಾಷ್ಟ್ರಿಕವ ಶೌಕ್ಲಿಕ ಸುಪ್ರದೀಪಕವ
ಹೇಳಲರಿದೆನಿಪೆಂಟು ವಿಷವನು
ಮೇಳವಿಸಿ ಬಳಿಕುಳಿದ ಮಧುರ ವಿ
ಶಾಲವಸ್ತುಗಳಿಂದ ಕಜ್ಜಾಯಗಳ ಮಾಡಿಸಿದ ೧೩

ದಿಟ್ಟಿಸಿದರೆವೆ ಸೀವುದಂಗೈ
ಮುಟ್ಟಿದರೆ ಹುಗುಳಹುದು ಬಳಿಕವ
ನಟ್ಟ ಕೈ ಕರಣದ ಸುವಾರದ ವಿದ್ಯವೇನರಿದೊ
ಕೊಟ್ಟರೀತಂಗೆಲ್ಲವನು ಜಗ
ಜಟ್ಟಿ ಹಾಯಿಕಿಕೊಂಡು ನುಣ್ಣನೆ
ಚಿಟ್ಟು ಮುರಿಯಾಟದಲಿ ಸದೆದನು ಮತ್ತೆ ಕೌರವರ ೧೪

ಮಡುವಿನಲಿ ಹಾಯ್ಕಿದಿರಿ ಹಾವಿನ
ಹೆಡೆಯ ಕೊಂಡೂರಿದಿರಿ ಬಲು ವಿಷ
ದಡಿಗೆಗಳ ಮೆಲಿಸಿದಿರಿ ಬಲ್ಲಂದದ ವಿಕಾರದಲಿ
ಕೆಡಹಲಸು ಮಾಡಿದಿರಿ ನೂರ್ವರ
ಕಡಿದು ಶಾಕಿನಿಯರಿಗೆ ರಕುತವ
ಕುಡಿಸಿದಲ್ಲದೆ ಮುನ್ನ ಸಾವೆನೆ ಕೇಳಿ ನೀವೆಂದ ೧೫

ಒಳಗೆ ಬೆಳೆದುದು ವೈರಶಿಖಿ ಕಡೆ
ಗಳಕೆ ಹಾಯ್ದುದು ಜನನಿ ಜನಕರ
ಬಲು ನುಡಿಗಳಲಿ ನೂರ್ವರಿರ್ದಾರು ಶಕುನಿ ಮತವಿಡಿದು
ಬಲುಹುಂಗುಂದದೆ ಭೀಷ್ಮ ವಿದುರರ
ಬಳಕೆಯಲಿ ತಾವಡಗಿ ಗುಣದಲಿ
ಕೆಲನ ಮೆಚ್ಚಿಸಿ ನಡೆದರಿವರು ಯುಧಿಷ್ಠಿರಾದಿಗಳು ೧೬

ಆಟದಲಿ ತೊಡಗಿದರು ಮೊದಲಲಿ
ತೋಟಿಯನು ಸಾಕೇತಗಳ ಕಾ
ಲಾಟವನು ನಿಲಿಸುವೆನು ಶಸ್ತ್ರಾಸ್ತ್ರ ಪ್ರಸಂಗದಲಿ
ಆಟವಿಕರಿವದಿರಲಿ ಬಲಿದೊಳ
ತೋಟಿ ಬರಿದೇ ಬಿಡದು ಮೃತ್ಯುವಿ
ನೂಟ ಮುಂದಿಹುದೆಂದು ಕರೆಕರೆಗುಂದಿದನು ಭೀಷ್ಮ ೧೭

ಧರಣಿಪತಿ ಚಿತ್ತೈಸು ಗೌತಮ
ವರ ಮುನಿಗೆ ಜನಿಸಿದ ಶರದ್ವನು
ಪರಮಋಷಿಯಾತನು ತಪೋಯುತನಾಗಿ ಧನು ಸಹಿತ
ಇರುತ ಕಂಡನು ದೈವ ಗತಿಯಲಿ
ಸುರವಧುವನಾಕ್ಷಣಕೆ ಕಾಮ
ಜ್ವರಿತನಾದನು ಚಲಿಸಿತಾತನ ವೀರ್ಯವವನಿಯಲಿ ೧೮

ಅದು ಶರಸ್ತಂಭದಲಿ ನೆಲೆಯಾ
ದುದು ಮುನಿಚ್ಯುತ ವೀರ್ಯ ಮುನಿಸುತ
ರುದಿಸಿದರು ಶಂತನು ಮಹೀಪತಿ ಕಂಡು ಕೃಪೆಯಿಂದ
ಸದನದಲಿ ತನ್ಮಿಥುನವನು ಸಲ
ಹಿದನು ಕೃಪ ಕೃಪೆಯೆಂಬ ಹೆಸರಾ
ದುದು ಮಹಾಬಲನಾದನಾತನ ಕರೆಸಿದನು ಭೀಷ್ಮ ೧೯

ಆ ಕೃಪಾಚಾರಿಯನ ದೆಸೆಯಿಂ
ದೀ ಕುಮಾರರು ನಿಖಿಳ ತರ್ಕ
ವ್ಯಾಕರಣ ಮೊದಲೆನೆ ಚತುರ್ದಶ ವಿದ್ಯೆಗಳನರಿದು
ಲೋಕ ವೈದಿಕ ಮುಖ್ಯ ಸಕಲ ಕ
ಲಾ ಕುಶಲರಾದರು ಧನುಃಪ್ರವಿ
ವೇಕ ನಿಪುಣರನರಸುತಿದ್ದನು ಮತ್ತೆ ಗಾಂಗೇಯ ೨೦

ಮುನಿ ಭರದ್ವಾಜಾಖ್ಯನಿರ್ದನು
ಘನ ತಪೋನಿಷ್ಠೆಯಲಿ ದಿವಿಜಾಂ
ಗನೆಯ ಕಂಡನು ಗಾಯವಡೆದನು ಮದನನೆಸುಗೆಯಲಿ
ತನು ಪರಿಚ್ಯುತ ವೀರ್ಯವನು ಸ
ತ್ಕನಕ ಕಲಶದೊಳಿರಿಸಲಲ್ಲಿಯೆ
ಜನಿಸಿದನು ದ್ರೋಣಾಭಿಧಾನನು ಮುನಿಯ ದೆಸೆಯಿಂದ ೨೧

ದ್ರೋಣಕಲಶದೊಳಾದ ದೆಸೆಯಿಂ
ದ್ರೋಣನಾದನು ಬಳಿಕ ಮುನಿಯಾ
ದ್ರೋಣಗುಪನಯನಾದಿ ವಿಪ್ರಕ್ರಿಯೆಗಳನು ರಚಿಸಿ
ದ್ರೋಣನೊಡನೋದಿಸಿ ನೃಪಾಲ
ಶ್ರೇಣಿಯನು ಶಸ್ತ್ರಾಸ್ತ್ರ ಕಳೆಯಲಿ
ಜಾಣರನು ಮಾಡಿದನು ಭಾರದ್ವಾಜ ಮುನಿಯಂದು ೨೨

ಕೃಪನನುಜೆಯನು ತಂದು ದ್ರೋಣಂ
ಗುಪಯಮವ ಮಾಡಿದನು ಹರ್ಷದಿ
ದ್ರುಪದ ಬಂದೀ ದ್ರೋಣನೊಡನರಿದನು ಧನುಶ್ರುತಿಯ
ಕ ಪೆಯಲೀ ದ್ರೋಣಂಗೆ ಜನಿಸಿದ
ನಪರ ಶಂಕರ ರೂಪನಾಹವ
ನಿಪುಣನಶ್ವತ್ಥಾಮ ಭಾರದ್ವಾಜ ಗೋತ್ರದಲಿ ೨೩

ತಂದೆಯೊಳ್ ಶ್ರಮ ಮಾಡಿದರು ನೃಪ
ವೃಂದ ಸಹಿತೀ ದ್ರೋಣ ದ್ರುಪದರು
ನಿಂದನಾ ದ್ರುಪದಾಖ್ಯನಯ್ಯನು ದಿವಿಜ ನಗರಿಯಲಿ
ಅಂದು ಸಖ್ಯ ಪ್ರೀತಿಯನು ಸಾ
ನಂದದಲಿ ದ್ರೋಣಂಗೆ ವಿರಚಿಸಿ
ಬಂದು ನಿಜ ರಾಜ್ಯಾಭಿಷೇಕವನು ಧರಿಸಿದನು ದ್ರುಪದ ೨೪

ಇತ್ತಲೀ ದ್ರೋಣನ ಪಿತನು ಸುರ
ರತ್ತ ಸರಿದನು ಕೆಲವು ದಿವಸಕೆ
ತತ್ತಪೋವನದಲ್ಲಿ ವಿಪ್ರಕ್ರಿಯೆಗಳನು ಮಾಡಿ
ಹೊತ್ತ ದಾರಿದ್ರ್ಯದಲಿ ಮನ ಮರು
ಗುತ್ತ ದೇಶಾಂತರದೊಳಗೆ ತೊಳ
ಲುತ್ತ ಬಂದನು ತನ್ನ ಮಗ ಸಹಿತಡವಿಯಲಿ ದ್ರೋಣ ೨೫

ಪರಶುರಾಮಾಶ್ರಯಕೆ ಮುನಿಯೈ
ತರಲು ಭಾರದ್ವಾಜನನು ಸ
ತ್ಕರಿಸಿ ನುಡಿದನು ಜಾಮದಗ್ನ್ಯನು ಮಧುರ ವಚನದಲಿ
ಧರೆಯನಿತ್ತೆನು ದ್ವಿಜರಿಗೀಯವ
ಸರದೊಳಾ ನಿರ್ಧನನು ನೀನೆ
ಪರಮ ಋಷಿಯಾತಿಥ್ಯ ಪೂಜೆಗಭಾಗ್ಯ ನಾನೆಂದ ೨೬

ಧನರಹಿತ ನಾ ಹೊತ್ತ ಭಾರಿಯ
ಧನುವಿದೊಂದಿದೆ ದಿವ್ಯಶರವಿದೆ
ಮನಕೆ ಬಂದುದ ವರಿಸು ನೀನೆನೆ ದ್ರೋಣ ನಸುನಗುತ
ಎನಗೆ ನಿಮ್ಮಡಿಗಳ ಕೃಪಾಲೋ
ಕನವಲೇ ಪರಿಯಾಪ್ತಿ ಲೋಕದ
ಜನ ಮನೋರಂಜನವೆ ಬೇಹುದು ಶರವ ಕೊಡಿಯೆಂದ ೨೭

ಇವು ಮಹಾ ನಿಸ್ಸೀಮತರ ವೈ
ಷ್ಣವವಲೇ ದಿವ್ಯಾಸ್ತ್ರ ನಿವಹವ
ನವರು ಕೊಟ್ಟರು ಕೊಂಡನುಚಿತ ವಿಧಾನದಲಿ ದ್ರೋಣ
ಇವು ಮಹಾ ರಣರಂಗದಲಿ ಶಾ
ತ್ರವ ನಿವಾರಣವೈಸಲೆಮ್ಮೀ
ವ್ಯವಹೃತಿಗೆ ತಾನೇನುಪಾಯವೆನುತ್ತ ಚಿಂತಿಸಿದ ೨೮

ಮಗನೆ ಬಲ್ಲೈ ದ್ರುಪದ ಭೂಪತಿ
ಮಗುವುತನದಿಂದೆಮ್ಮ ಸಖನೋ
ಲಗಿಸುವೆವು ನಾವಲ್ಲಿ ಸಲಹನೆ ಮಿತ್ರಭಾವದಲಿ
ಹೊಗುವ ನಡೆ ಪಂಚಾಲರಾಯನ
ನಗರಿಯನು ನಾವೆಂದು ಮುನಿ ಮಾ
ಳಿಗಳ ಮಣೆಯನು ಬೀಳುಕೊಂಡನು ರೇಣುಕಾ ಸುತನ ೨೯

ಬಂದನೀತನು ದ್ರುಪದ ರಾಯನ
ಮಂದಿರಕೆಯಾ ಬಾಗಿಲವನೊಡ
ನೆಂದನೆಲವೋ ನಾವು ನಿಮ್ಮರಸಂಗೆ ಪೂರ್ವದಲಿ
ಸಂದ ಮಿತ್ರರು ದ್ರೋಣಮುನಿಪತಿ
ಯೆಂದು ನಮ್ಮಭಿಧಾನ ನೀ ಹೇ
ಳೆಂದು ಕಳುಹಲು ಬಂದು ಬಿನ್ನಹ ಮಾಡಿದನು ಹದನ ೩೦

ಸಿರಿಯು ಮದವಧಿಕ ಪ್ರತಾಪೋ
ತ್ಕರದ ಮದ ಮೊದಲಾದ ಮದ ಸಂ
ಚರಣ ರಜದಲಿ ಮಾಸಿತೀತನ ಮನದ ಮಡಿ ವರ್ಗ
ತಿರಿವ ಹಾರುವರೊಡನೆ ಭೂಮಿಾ
ಶ್ವರರಿಗೆತ್ತಣ ಮೈತ್ರಿ ಹೋಗಲಿ
ಕರೆಯಬೇಡೆನೆ ಬಂದು ಬಾಗಿಲಲವ ನಿವಾರಿಸಿದ ೩೧

ಮರೆದನೇ ತಪ್ಪೇನು ನಾ ಕಂ
ಡರುಹಿ ಮರುಳುಮಪ್ಪೆಸಲೇಯೆನು
ತುರುಬಿದರೆ ತರುಬಿದರು ಕಂಬಿಯನಿಕ್ಕಿ ಬಾಗಿಲಲಿ
ಒರೆಯನುಗುಳಿಚಿ ಖಡ್ಗದಲಿ ಬಿಡ
ದರಿದನಿಕ್ಕಲದವರನೋಲಗ
ಕುರವಣಿಸಿದನು ಮುಂದೆ ನಿಂದನು ದ್ರುಪದ ಭೂಪತಿಯು ೩೨

ಏನೆಲವೊ ಪಾಂಚಾಲ ಚಿಕ್ಕಂ
ದಾನು ನೀನೊಂದಾಗಿ ತಂದೆಯೊ
ಳೇನನರಿದೆವು ಮರೆದು ಕಳೆದಾ ಹಾ ಮಹಾದೇವ
ಏನು ಬಂದಿರಿಯೆಂಬ ಗುಣವಚ
ನಾನುರಾಗವು ಸಾಲದೇ ಧನ
ವೇನು ಫಲ ಕಕ್ಕುಲಿತೆಯೆಮಗಿಲ್ಲೆಂದನಾ ದ್ರೋಣ ೩೩

ಸೂರಿಗಳಿಗತಿ ಮೂರ್ಖರಿಗೆ ಗಂ
ಭೀರರಿಗೆ ಭಂಡರಿಗೆ ವೇದಾ
ಚಾರ ಸಂಯುಕ್ತರಿಗನಾಚಾರ ಪ್ರಸಕ್ತರಿಗೆ
ಧೀರರಿಗೆ ಹಂದೆಗಳಿಗೆತ್ತಣ
ಸೇರುವೆಗಳ್ಳೆ ಭೂಪರಿಗೆ ಬಡ
ಹಾರುವರಿಗೆತ್ತಣದು ಸಖಿತನವೆಂದನಾ ದ್ರುಪದ ೩೪

ಎಲವೊ ನಿನ್ನಾಸ್ಥಾನ ಸಹಿತೀ
ಹೊಳಲ ಸುಡುವೆನು ನಿನ್ನ ಸೀಳಿದು
ಬಲಿಯ ಕೊಡುವೆನು ಭೂತಗಣಕಿದಿರಲ್ಲ ನೀನೆನಗೆ
ಕಲಿತ ವಿದ್ಯದ ಕೋಲ ಮಕ್ಕಳ
ಕಳುಹಿ ಕಟ್ಟಿಸಿ ವಾಮ ಪಾದದಿ
ತಲೆಯನೊದೆವೆನು ಮರೆಯದಿರು ನೀನೆಂದನಾ ದ್ರೋಣ ೩೫

ಎಂದು ಭಾಷೆಯ ಮಾಡಿ ತನ್ನಯ
ನಂದನನನೊಡಗೊಂಡು ಜನಪದ
ವೃಂದ ಹಲವನು ಕಳೆದು ಬಂದನು ಹಸ್ತಿನಾಪುರಿಗೆ
ಅಂದು ಸಕಲ ಕುಮಾರಕರು ನಲ
ವಿಂದ ನಗರಿಯ ಹೊರಗೆ ಗುರಿಗಳ
ಮುಂದುವರಿದೆಸುತಿರಲು ಮುದದಲಿ ಕಂಡನಾ ದ್ರೋಣ ೩೬

ಬೆರಸಿದನು ನೆರವಿಯನು ನೋಡು
ತ್ತಿರೆ ಯುಧಿಷ್ಠಿರ ನೃಪನ ಹರಳುಂ
ಗುರ ವಿಘಾತಿಯೊಳುಗಿದು ಬಿದ್ದುದಗಾಧ ಕೂಪದಲಿ
ನೆರೆದು ತಡಿಯಲಿ ನಿಂದು ನೂರರು
ವರು ನಿರೀಕ್ಷಿಸಿ ಸಾಧ್ಯವಲ್ಲೆನು
ತಿರೆ ಮಗಂಗೆ ಮುನೀಂದ್ರನೆಂದನು ಬೇಗ ತೆಗೆಯೆಂದು ೩೭

ಸರಳ ತೊಡಚಿ ತದೀಯ ಮಣಿ ಬಂ
ಧುರದ ಮುದ್ರಿಕೆಗೆಚ್ಚು ಹಿಳುಕಿನ
ಶಿರಕೆ ಶರವಾ ಹಿಳುಕಿನಲಿ ಕಣೆಯೆಚ್ಚು ಬಂಧದಲಿ
ಸರಳ ಸಂದರ್ಭದಲಿ ನಿಮಿಷಾಂ
ತರಕೆ ಫಣಿಪನ ಹೆಡೆವಣಿಯನು
ದ್ಧರಿಸುವಂತಿರೆ ತೆಗೆದು ಬಿಸುಟನು ರತುನ ಮುದ್ರಿಕೆಯ ೩೮

ಕಂಡು ಬೆರಗಾದುದು ಕುಮಾರರ
ತಂಡ ತನತನಗೈದಿ ಭೀಷ್ಮನ
ನಂಡಲೆದುದೀ ಮುನಿಯನೀಗಲೆ ಸಂತವಿಡಿಯೆಂದು
ಚಂಡ ಭುಜಬಲನವರ ಕಾಣಿಸಿ
ಕೊಂಡು ಕೊಟ್ಟನು ಭೀಷ್ಮನವರಿಗೆ
ಖಂಡ ವಿಭವವನತುಳ ಧನಪತಿಯಾದನಾ ದ್ರೋಣ ೩೯

ವರ ಮುಹೂರ್ತದೊಳವರ ನೂರರು
ವರನು ಕೊಟ್ಟನು ಶಸ್ತ್ರವಿದ್ಯಾ
ಪರಿಣತರ ಮಾಡೆಂದು ದ್ರೋಣನ ಕೈಯಲಾ ಭೀಷ್ಮ
ಗರುಡಿ ಕಟ್ಟಿತು ನೂರು ಯೋಜನ
ವರೆಯ ವಿಸ್ತಾರದಲಿ ಸಾವಿರ
ಕುರಿಯ ಹೊಯ್ದರು ಪೂಜಿಸಿದರಾ ಚದುರ ಚಂಡಿಕೆಯ ೪೦

ಗರುಡಿ ಪೂಜಾ ವಿಭವ ಸಮನಂ
ತರದಲನಿಬರು ಸಮವ ತೊಡಗಿದ
ರರಸು ಮಕ್ಕಳು ಕೇಳಿದರು ನಾನಾ ದಿಗಂತದಲಿ
ಬರುತಲಿದ್ದರು ಕೂಡೆ ಹಸ್ತಿನ
ಪುರಿಗೆ ವಿದ್ಯಾರ್ಥಿಗಳು ಪಾರ್ಥಿವ
ವರ ಕುಮಾರರು ಬಂದು ಕಂಡರು ಶಸ್ತ್ರ ಪಂಡಿತನ ೪೧

ರಾಯ ಬಲ್ಲೈ ಮುನ್ನ ಶಿಶುವನು
ತಾಯಿ ಬಿಸುಟಳು ಗಂಗೆಯಲಿ ರಾ
ಧೇಯನಾದನು ರಾಧೆಯೆಂಬವಳೊಲಿದು ಸಾಕಿದರೆ
ಆಯತಾಕ್ಷನು ಪರಶುರಾಮನೊ
ಳಾಯುಧದ ಶ್ರಮಗಲಿತು ಬಳಿಕದು
ವಾಯುವಾದೊಡೆ ಬಂದನಾ ಗಜಪುರಿಗೆ ಕಲಿಕರ್ಣ ೪೨

ಬಂದು ಹಸ್ತಿನಪುರಿಗೆ ರಾಧಾ
ನಂದನನು ದುರ್ಯೋಧನನನೈ
ತಂದು ಕಂಡನು ಕೌರವೇಶ್ವರನವರ ಕಾಣಿಸಿದ
ಅಂದು ಮೊದಲಾಗವರ ಸಖ್ಯಕೆ
ಸಂದ ಕಾಣೆನು ಕರ್ಣ ಕುರುಪತಿ
ಗೊಂದೆ ಜೀವನವೊಂದೆ ಮನ ಮತವೊಂದೆ ಕೇಳೆಂದ ೪೩

ಬೇಟೆ ಕರ್ಣನ ಕೂಡೆ ಹಗಲಿರು
ಳಾಟ ಕರ್ಣನ ಕೂಡೆ ಷಡುರಸ
ದೂಟ ಕರ್ಣನ ಕೂಡೆ ಶಸ್ತ್ರಾಭ್ಯಾಸವವ ಕೂಡೆ
ತೋಟಿ ಮನದಲಿ ನಗೆಯ ಮಧುರದ
ನೋಟ ಕಣ್ಣೆನೊಳುಳಿದವರ ಕೂ
ಡಾಟಗಳು ತಾವಿಬ್ಬರೊಂದೆನಿಸಿದರು ಜಗವರಿಯೆ ೪೪

ಸುರಗಿ ಸಬಳ ಕಠಾರಿಯುಬ್ಬಣ
ಪರಿಗೆ ಹಿರಿಯುಬ್ಬಣವಡಾಯುಧ
ಪರಿಘ ಚಕ್ರ ಮುಸುಂಡಿ ತೋಮರ ಭಿಂಡಿವಾಳ ಚಯ
ಪರಶು ಕಕ್ಕಡೆ ಮುಸಲ ಹಲ ಮು
ದ್ಗರ ಧನುರ್ದಂಡಾದಿ ಶಸ್ತ್ರೋ
ತ್ಕರದಲನಿಬರು ಕುಶಲರಾದರು ಮುನಿಯ ಗರುಡಿಯಲಿ ೪೫

ಜನಪ ಕೇಳ್ಳೈ ಭೀಮ ದುರ್ಯೋ
ಧನರು ಗದೆಯಲಿ ಮಿಗಿಲು ಕರ್ಣಾ
ರ್ಜುನರು ಧನುವಿನಲಧಿಕರಾದರು ನೃಪಕುಮಾರರಲಿ
ತನತನಗೆ ಸರ್ವಾಯುಧಂಗಳ
ಲನಿಬರರಿದರು ಕೂಡೆ ಗುರುವಿನ
ಮನಕೆ ಹತ್ತೆಯವಾದನರ್ಜುನನಸ್ತ್ರ ಶಿಕ್ಷೆಯಲಿ ೪೬

## ಏಳನೆಯ ಸಂಧಿ

ಸೂ. ರಾಯ ಕಟಕಾಚಾರ್ಯನಿಂದ ವಿ
ಘಾಯದಲಿ ನೊಂದನಲ ಮುಖದಲಿ
ರಾಯ ದ್ರುಪದನು ಪಡೆದ ಧೃಷ್ಟದ್ಯುಮ್ನ ದ್ರೌಪದಿಯ

ಕೇಳು ಜನಮೇಜಯ ಧರಿತ್ರೀ
ಪಾಲ ಕಲಿತರು ನಿಮ್ಮ ಪೂರ್ವ ನೃ
ಪಾಲಕರು ಸರಹಸ್ಯ ಸಾಂಗೋಪಾಂಗ ವಿದ್ಯೆಗಳ
ಸ್ಥೂಲದಲಿ ಸೂಕ್ಷ್ಮದಲಿ ಬಹಳ ವಿ
ಶಾಲದಲಿ ಸಂಕೋಚದಲಿ ಲಘು
ಪಾಳಿಯಲಿ ಹಾರದಲಿ ವಿವಿಧಾನುಪ್ರಯೋಗದಲಿ ೧

ಎಡಬಲದ ಮಯಣಾಮ ಹೊಳಹಿನ
ಕಡಲ ತೆರೆವೆರೆಯದತಿ ಬವರಿಯ
ಬಿಡೆಯ ದುವ್ವಾಳಿಗಳ ಸೂಟಿಯ ಸರಳ ಸೋಹಿನಲಿ
ಕಡುಗಲಿಗಳೇರಾಟದಲಿ ಮಿಗೆ
ಝಡಿ ಪವಾಡ ದೃಢಾಯತಿಕೆಗಿದು
ಪಡಿಯ ನಳ ರೇವಂತರೆಂದುದು ರಾವುತಿಕೆಗಳಲಿ ೨

ನಗವನೊಡ್ಡಿದರೊಂದು ಸರಳಲಿ
ಹಗಿಲುಗಳೆವ ವಿದೂರ ಪಾತದಿ
ಗಗನ ಯಂತ್ರವನೆಸುವ ಜೋಕೆಯ ಜೋದ ವಿದ್ಯದಲಿ
ಉಗಿವ ಬಿಡುವೆಡಬಲನ ಬವರಿಯ
ಲಗಿವ ಲವಣಿಯ ದಂತಿ ಶಿಕ್ಷೆಗೆ
ಮಿಗಿಲು ಭಗದತ್ತಾದಿಗಳಿಗೆಂದುದು ಕುಮಾರಕರ ೩

ರಥವ ರಕ್ಷಿಸಿಕೊಂಡು ನಿಜ ಸಾ
ರಥಿಯ ಕಾಯಿದು ಮುಂದೆ ಹೂಡಿದ
ರಥ ಹಯಂಗಳ ವೈಗಳಲಿ ಮಸೆಗಾಣದಂದದಲಿ
ಪ್ರಥಿತರಿಪು ಶಸ್ತ್ರಾಸ್ತ್ರವನು ರಿಪು
ರಥಿಕರನು ಸಮರದಲಿ ಜಯಿಸುವ
ರಥಿಕ ವಿದ್ಯೆದೊಳಿವರ ಸರಿ ಸುರ ನರರೊಳಿಲ್ಲೆಂದ ೪

ಇನಿಬರೊಳು ಬಿಲುಗಾರನಾರ
ರ್ಜುನನೊ ಕರ್ಣನೊ ಭೀಮ ದುರ್ಯೋ
ಧನರೊ ಮಾದ್ರೀಸುತರೊ ಮೇಣ್ ದುಶ್ಶಾಸನಾದಿಗಳೊ
ಮನದಿ ಕೈಯಲಿ ಕಂಗಳೋ ಲೋ
ಚನವೆ ಕಂಗಳೊ ಕಾಣಬೇಕೆಂ
ದೆನುತ ಗುರು ರಚಿಸಿದನು ಲಕ್ಷ್ಯವನೊಂದು ವೃಕ್ಷದಲಿ ೫

ಕಾಣಬಾರದು ಲಕ್ಷ್ಯವಗ್ಗದ
ಜಾಣ ಭಟರಿಗೆ ಕಟ್ಟಿದೊರೆಯಿದು
ಕಾಣಿಸಿದಿರೈ ಹೂಣಿಸಿದಿರೈ ಹೂಡಿದಂಬಿನಲಿ
ಕಾಣಿರೇ ಕರ್ಣಾದಿ ಸುಭಟ
ಶ್ರೇಣಿಯೆಂಬೀ ಗುರುವಿನಣಕವ
ನಾಣೆಯಿಟ್ಟವೊಲೆಚ್ಚು ಲಕ್ಷ್ಯವ ಕೆಡಹಿದನು ಪಾರ್ಥ ೬

ಓರಿದು ಮೆಚ್ಚಿ ಧನಂಜಯನನಾ
ದರಿಸಿ ಕೊಟ್ಟನು ಸಕಲ ವಿದ್ಯವ
ನುರುತರ ಪ್ರೇಮದಲಿ ಸೆಣಸಿದೊಡೇಕಲವ್ಯಕನ
ಬೆರಳ ಕೊಂಡನು ಪಾರ್ಥನನು ಪತಿ
ಕರಿಸಿದನು ತನಗಾದ ನೆಗಳಿನ
ದರಧುರದ ಭೀತಿಯನು ಗೆಲಿದನು ನರನ ದೆಸೆಯಿಂದ ೭

ಇರಲಿರಲು ಫಲುಗುಣನನೆಕ್ಕಟಿ
ಗರೆದು ಶಸ್ತ್ರಾಸ್ತ್ರ ಪ್ರಪಂಚದ
ಪರಮ ಸಿದ್ಧಾಂತವನು ಕಲಿಸಿ ಮಹಾಸ್ತ್ರ ಸಂಗತಿಯ
ಕರುಣಿಸಿದನಾಗ್ನೇಯ ಪೌರಂ
ದರ ಮಹಾ ವಾಯವ್ಯ ವಾರುಣ
ಹರಸಖ ಬ್ರಹ್ಮಾಸ್ತ್ರ ಸೌರೋರಗ ನಗಾದಿಗಳ ೮

ಒಂದು ದಿನ ವೊಡ್ಡೋಲಗಕೆ ಗುರು
ಬಂದು ಮನ್ನಿಸಿಕೊಂಡು ನಸುನಗು
ತೆಂದನಾ ಧೃತರಾಷ್ಟ್ರ ಗಂಗಾಸೂನು ವಿದುರರಿಗೆ
ಇಂದು ಪರಿಯಂತರವು ನಿಮ್ಮಯ
ನಂದನರನೋದಿಸಿದೆನರಭಿ
ನಂದನೀಯರೊ ನಿಂದ್ಯರೋ ನೀವ್ ನೋಡಬೇಕೆಂದ ೯

ಸಕಲ ಶಸ್ತ್ರಾಸ್ತ್ರದಲಿ ಗಜ ಹಯ
ನಿಕರದೇರಾಟದಲಿ ಲೋಕ
ಪ್ರಕಟ ಮಾರ್ಗೀಕೃತ ಚತುರ್ದಶ ವಿಮಲ ವಿದ್ಯದಲಿ
ಸಕಲ ಲಕ್ಷಣ ಗಣಿತ ಗಾರುಡ
ವಿಕಟ ಭರತಾದ್ಯಖಿಲ ಕಳೆಯಲಿ
ವಿಕಳರೋ ಸಂಪೂರ್ಣರೋ ನೀವ್ ನೋಡಬೇಕೆಂದ ೧೦

ಲೇಸನೆಂದಿರಿ ಸುತರ ವಿದ್ಯಾ
ಭ್ಯಾಸ ರಚಿತ ಶ್ರಮವನಾವರಿ
ದೈಸು ನಿಮಗುತ್ಸವವಲೇ ತಪ್ಪಾವುದುಚಿತವಲೆ
ಈಸು ದಿನವೀ ಮಕ್ಕಳೊಡನಾ
ಯಾಸವಿದು ಸಾಮಾನ್ಯವೇ ನಾ
ವೇಸು ಧನ್ಯರೊ ನಿಮ್ಮ ದೆಸೆಯಿಂದೆಂದನಾ ಭೀಷ್ಮ ೧೧

ಆದಿಯಲಿ ಪುರವೈರಿ ಬಳಿಕಿನೊ
ಳಾದನಗ್ಗದ ಪರಶುಧರನೀ
ಮೇದಿನಿಯೊಳೀ ಯುಗದಲನುಪಮ ಶಸ್ತ್ರ ವಿದ್ಯದಲಿ
ವೈದಿಕದಲೀ ನಿಮ್ಮವೋಲ್ ದೊರೆ
ಯಾದನಾರು ಕುಮಾರಕರ ಪು
ಣ್ಯೋದಯದ ಕಂದೆರವೆಯ್ಸೈಸಲೆಯೆಂದನಾ ಭೀಷ್ಮ ೧೨

ಜೋಯಿಸನ ಕರೆದಖಿಳ ದಿವಸದೊ
ಳಾಯಿದರು ಶುಭದಿನವನವಗೆ ಪ
ಸಾಯದುಡುಗೊರೆ ಸಹಿತ ಮನ್ನಿಸಿ ಮನೆಗೆ ಕಳುಹಿದರು
ರಾಯನಾಜ್ಞೆಯೊಳಿಭ ಪುರದ ಹೊರ
ಗಾಯತದ ಭೂಮಿಯಲಿ ವಾಸ್ತು ವಿ
ಧೇಯವನಲಳವಡಿಸಿದರು ಹನ್ನೆರಡು ಯೋಜನವ ೧೩

ತರವಿಡಿದು ರಚಿಸಿದರು ನೆರೆಯು
ಪ್ಪರಿಗೆಗಳ ಹಂತಿಗಳನಂತಃ
ಪುರವ ತತ್ಪಾರ್ಶ್ವದಲಿ ಭಾರಿಯ ಭದ್ರ ಭವನಿಕೆಯ
ಪುರಜನದ ಪರಿಜನದ ನೆಲೆಯು
ಪ್ಪರಿಗೆಗಳ ರಚಿಸಿದರು ಹಸ್ತಿನ
ಪುರದ ಸಿರಿ ಸಾಮಾನ್ಯವೇ ನರನಾಥ ಕೇಳೆಂದ ೧೪

ನೆರೆದುದಗಣಿತ ಕರಿ ತುರಂಗಮ
ವರ ವರೂಥ ಪದಾತಿ ಭೂಮಿ
ಶ್ವರರು ಬಂದರು ನೋಡಲೆಂದು ದಿಗಂತ ಸಂತತಿಯ
ವರ ಮುಹೂರ್ತದ ದಿವಸದಲಿ ಸಾ
ಗರದ ತೆರೆ ಬಿಟ್ಟಂತೆ ಕಳನೊಳು
ನೆರೆದು ನಿಂದುದು ಜನ ನಿಕರವೇನೆಂಬೆನದ್ಭುತವ ೧೫

ಸಂದಣಿಸಿ ನೃಪ ರಾಣಿವಾಸದ
ಗೊಂದಣದ ದಂಡಿಗೆಗಳಿಳಿದವು
ಮುಂದೆ ಹೊಯ್ಕಂಬಿಗಳ ಜೋಡಿಯ ಜನ ಪಲಾಯನದ
ಬಂದರಾ ಗಾಂಧಾರಿ ಕುಂತಿಯ
ರಿಂದುಮುಖಿಯರ ಮೇಳದಲಿ ನಡೆ
ತಂದುದಗಣಿತ ಪುರವಧೂ ನಿಕುರುಂಬವೊಗ್ಗಿನಲಿ ೧೬

ವಿದುರ ಧೃತರಾಷ್ಟ್ರರು ಸಹಿತ ಸುರ
ನದಿಯ ಮಗನೈತಂದು ನವ ಭ
ದ್ರದಲಿ ಕುಳ್ಳಿರ್ದನು ಪಸಾಯಿತ ಸಚಿವ ಜನ ಸಹಿತ
ಒದರುವಗ್ಗದ ವಂದಿಗಳ ಬಿಡೆ
ಸದೆವ ಬಹು ವಿಧ ವಾದ್ಯರವ ಮಿ
ಕ್ಕೊದೆದು ಹೊಯ್ದು ದು ಲೋಕ ಮೂರರ ಕರ್ಣಕೋಟರವ ೧೭

ಪರಿಪರಿಯ ಶೃಂಗಾರದಲಿ ಸೂ
ರ್ವರು ಸಹಿತ ದುರ್ಯೋಧನನು ನಾ
ಲ್ವರು ಸಹಿತ ಯಮನಂದನನು ತಮ್ಮೆರಡು ಪಾರ್ಶ್ವದಲಿ
ಗುರುತನುಜ ಕೃಪ ಕರ್ಣ ಸುಬಲಾ
ದ್ಯರು ಪುರೋ ಭಾಗದಲಿ ಭೂಮಿ
ಶ್ವರರಸಂಖ್ಯರು ಹಿಂದೆ ಬರಲೈತಂದನಾ ದ್ರೋಣ ೧೮

ಹೊಯ್ದು ಕೋಣನ ಕುರಿಯ ಹಿಂಡಿನ
ತೊಯ್ದು ರಕ್ತೋದನವ ರಾಶಿಯ
ನೈದೆ ದೆಸೆದೆಸೆಗಳಲಿ ಬಲಿದರು ಭೂತ ತುಷ್ಟಿಗಳ
ಕೈದುಗಳ ತನಿವೆಳಗು ನೈದಿಲ
ಮೈದುನನ ಮಾರಂಕವೆನೆ ಬಂ
ದೈದೆ ರಂಗಸ್ಥಳವ ಹೊಕ್ಕುದು ರಾಜಸುತನಿಕರ ೧೯

ಬಾಗಿಲಲಿ ಕಟ್ಟಿಗೆಯ ಕೈಗಳ
ಲಾ ಗುರೂದ್ಭವ ಕೃಪರು ನಿಂದರು
ಸೀಗುರಿಯ ಸುಳಿವಿನ ತರಂಗದ ಸಾಲ ಸತ್ತಿಗೆಯ
ಸಾಗರದ ಗಳ ಗರ್ಜನೋದ್ಭಟೆ
ಹೋಗಲಿದಕದು ಪಾಡೆಯೆನೆ ಚಾ
ಪಾಗಮಾಚಾರ್ಯನ ಘಡಾವಣೆ ಘಲ್ಲಿಸಿತು ಜಗವ ೨೦

ಆ ಮಹಾ ಕಳನೆಂಟು ದಿಕ್ಕಿನ
ಹೋಮ ತೀರಲು ಘಳಿಗೆವಟ್ಟಲ
ಸೌಮುಹೂರ್ತಿಕರಾಯತ ಧ್ವನಿ ಸಾರ ಸಮಯದಲಿ
ಸೋಮ ವಂಶೋದ್ಭವ ನೃಪಾಲ ಲ
ಲಾಮನಗ್ಗದ ಧರ್ಮಸುತನು
ದ್ದಾಮ ಗುರುವಿಂಗೆರಗಿ ನಿಂದನು ನುಡಿಸಿದನು ಧನುವ ೨೧

ಅರಸ ಕೇಳ್ ಯುಧಿಷ್ಠಿರನು ಪರಿ
ಪರಿಯಯೆಸುಗೆಯ ಚಾಪ ವಿದ್ಯಾ
ನಿರತಿಶಯಕೋ ಯೆಂದು ಗರ್ಜಿಸಿತಾ ಸಭಾ ಜಲಧಿ
ಸುರಗಿ ಹಿರಿಯುಬ್ಬಣವಡಾಯುಧ
ಹರಿಗೆ ಚಕ್ರ ಮುಸುಂಡಿ ಮುದ್ಗರ
ಪರಶು ಮೊದಲಾದಖಿಳ ಶಸ್ತ್ರ ಶ್ರಮದ ತೋರಿಸಿದ ೨೨

ಕರಿ ತುರಗದೇರಾಟ ಮೊದಲಾ
ಗಿರೆ ಸಮಸ್ತ ನೃಪಾಲ ವಿದ್ಯಾ
ಪರಿಣತಿಗೆ ಹಿಗ್ಗಿದರು ಭೀಷ್ಮಾದಿಗಳು ಹರುಷದಲಿ
ಪರಿವಿಡಿಗಳಲಿ ನಕುಲ ಸಹದೇ
ವರು ವಿವಿಂಶತಿ ಚಿತ್ರಬಲ ದು
ರ್ಮರುಷಣರು ತೋರಿದರು ಶ್ರಮವನು ನೂರ್ವರೊಗ್ಗಿನಲಿ ೨೩

ಈತ ಧರ್ಮಜನಿವರು ಮಾದ್ರೀ
ಜಾತರೀತ ಸುಲೋಚನನು ಬಳಿ
ಕೀತ ದೀರ್ಘಕ ವಿಂದನಿವನಿಂತೀತನಿವನೆಂದು
ಈತ ಧನುವಿನಲೀತ ಖಡ್ಗದ
ಲೀತ ಪರಿಘದಲೀತ ಕುಂತದ
ಲೀತ ಬಲುಹೆಂದಾಥ ಭೂಪತಿಗರುಹಿದನು ವಿದುರ ೨೪

ಬಳಿಕ ನಾನಾ ದೇಶದರಸುಗ
ಳಿಳಿದು ತಮಗಳವಟ್ಟ ಶಸ್ತ್ರಾ
ವಳಿಗಳಲಿ ತೋರಿದರು ಮೆಚ್ಚಿಸಿ ತನ್ಮಹಾಸಭೆಯ
ನೆಲನನಬ್ಬರಿಸುವ ಸಭಾ ಕಳ
ಕಳವ ಮೊರೆಯನು ತಿವಿವ ಪರಿ ವೆ
ಗ್ಗಳದ ಪಾಯವಧಾರು ಮಸಗಿದುದೊಂದು ಘಟ್ಟಿನಲಿ ೨೫

ಹಗಲು ಕೈದೀವಿಗೆಯ ಬಿರುದಿನ
ವಿಗಡನಿವನಾರೆನಲು ಭೂಪಾ
ಳಿಗಳ ರತ್ನಪ್ರಭೆಯ ಲಹರಿಯ ಲಾವಣಿಗೆ ಮಿಗಿಲು
ಝಗ ಝಗಿಪ ತನುರುಚಿಯ ಮಿಂಚನು
ಮಿಗುವ ಖಡ್ಗಚ್ಛವಿಯ ತಲೆಯೊ
ತ್ತುಗಳ ಚಾವಡಿಯೊಳಗೆ ಕೌರವ ರಾಯನೈತಂದ ೨೬

ಹೋ ನಿರಂತರ ಗಜಬಜವು ತಾ
ನೇನು ಜೀಯವಧಾರು ಚಿತ್ತವ
ಧಾನವೆಂದುದು ಸಾಲ ಕಂಚುಕಿ ನಿಕರ ಕೈ ನೆಗಹಿ
ಭಾನುವಿನ ಭಾರಣೆಯವೋಲು
ತ್ಥಾನಮುಖ ಚತುರಾಕ್ಷ ಭೂಪನ
ಸೂನು ಹೊಕ್ಕನು ರಂಗವನು ಭೀಷ್ಮಾದಿಗಳಿಗೆರಗಿ ೨೭

ಬವರಿಯಲಿ ಪಯಪಾಡಿನಲಿ ಮೈ
ಲವಣಿಯಲಿ ಬಿನ್ನಾಣದಲಿ ಭಾ
ರವಣೆಯಲಿ ದೆಖ್ಖಾಳದಲಿ ವೇಗಾಯ್ಲ ರೇಖೆಯಲಿ
ತಿವಿವ ಮೊನೆಯೊಂದರಲಿ ನೂರಂ
ಗವನು ತೋರ್ಪ ವಿಭೇದದಲಿ ಕೌ
ರವ ಮಹೀಪತಿ ತೋರಿದನು ಶ್ರಮವನು ಕಠಾರಿಯಲಿ ೨೮

ಸುರಗಿಯಲಿ ಚಕ್ರದಲಿ ಹಲದಲಿ
ಹರಿಗೆಯಲಿ ಕಕ್ಕಡೆಯಲಸಿಯಲಿ
ಪರಿಘದಲಿ ಸಬಳದಲಿ ಗದೆಯಲಿ ಬಿಂಡಿವಾಳದಲಿ
ಪರಿಪರಿಯ ಚಿತ್ರದ ಚಮತ್ಕೃತಿ
ಕರವ ತೋರಿಸಿದನು ಶರಾಸನ
ಶರ ವಿಸರ ಸಂಧಾನದೊಳಗಹುದೆನಿಸಿದನು ಸಭೆಯ ೨೯

ಧೀರರೇ ಜಗಜಟ್ಟಿ ರಾಜ ಕು
ಮಾರ ಚೌಪಟಮಲ್ಲ ಕುರುಕುಲ
ಕೈರವಾಮೃತ ಕಿರಣ ಧಿರು ಧಿರು ಭಲರೆ ಭಲರೆನುತ
ಭೂರಿ ಸಭೆಯಲಿ ಸುಲಿದು ಬಿಸುಡುವ
ಸೀರೆಗಳ ತೂಪಿರಿದು ಸುಳಿವು
ಪ್ಪಾರತಿಯ ತನಿ ಹರಕೆ ತಳಿತುದು ತಾಯ ನೇಮದಲಿ ೩೦

ಏರಿ ತೋರಿದನಶ್ವ ಗಜ ರಥ
ವಾರನೇಳನು ಸಭೆಯೊಳೊಂದನು
ನೂರು ಪರಿಯಲಿ ತೋರಿದನು ಶಸ್ತ್ರಾಸ್ತ್ರ ಕೌಶಲವ
ಮೀರಿ ಹೆಚ್ಚಿದ ಹರುಷದಿಂದು
ಬ್ಬೇರಿದನು ಧೃತರಾಷ್ಟ್ರನುಬ್ಬಿದ
ಳಾರು ಮಡಿಯಲಿ ಜನನಿ ದುರ್ಯೋಧನನ ಪರಿಣತಿಗೆ ೩೧

ಮಸಗಿದಾನೆಯ ಕುಂಭದಲಿ ಝಾ
ಡಿಸುವ ಕೇಸರಿಯಂತೆ ಜಂಭನ
ಜಸದ ಝಾಡಿಗೆ ಬೆದರದಿದಿರಹ ವಜ್ರಧರನಂತೆ
ಪಸರಿಸಿದ ಪರಿವಾರ ಮಧ್ಯದೊ
ಳಸಮಬಲ ಹೊಳಕಿದನು ಮೇಘದ
ಮುಸುಕನುಗಿದಿನನಂತೆ ಮೈದೋರಿದನು ಕಲಿಭೀಮ ೩೨

ಗುರು ನದೀಸುತವಿದುರ ಧೃತರಾ
ಷ್ಟ್ರರಿಗೆ ಕೈಮುಗಿದಾಯುಧದ ಪರಿ
ಪರಿಯ ಚಿತ್ರಶ್ರಮವ ಸಾಂಗೋಪಾಂಗ ಕೌಶಲವ
ಕರಿ ತುರಗದೇರಾಟ ಮೊದಲಾ
ಗಿರೆ ಸುಯೋಧನ ರಚಿತ ವಿದ್ಯಾ
ಪರಿಣತಿಗೆ ವೆಗ್ಗಳವಿದೆನೆ ತೋರಿದನು ಕಲಿಭೀಮ ೩೩

ಕೋಲ ಗುರು ಚಿತ್ತೈಸು ಕುರು ಭೂ
ಪಾಲ ಸಮ್ಮುಖನಾಗು ಹಿಡಿ ಮಾ
ರ್ಕೋಲನೆನ್ನೊಡನೆನುತ ತಿವಿದನು ಭೀಮ ಕುರುಪತಿಯ
ಮೇಳವಿಸಿತೆರಡಂಕ ಬಂದಿಗೆ
ಕೋಲ ಹೊಯ್ದಾಟದಲಿ ಬಳಿಕಾ
ಕೀಲುಗದೆಗಳ ಹಿಡಿದು ತರುಬಿದರಧಿಕ ರೋಷದಲಿ ೩೪

ಹೊಯ್ದು ರೊಡ್ಡಿದ ರಣದ ಮೊನೆಯಲಿ
ಹಾಯ್ದರೊಳ ಸುಳಿಯಿಂದ ಕಳೆದರು
ಕಾಯ್ದು ಹೆಣಗಿದರುಪ್ಪರಕೆ ಚಾರಿದರು ಪಡಿತಳಕೆ
ಮೈದೆಗೆದರಡ ಹೊಯ್ಲಿನಲಿ ಬಲು
ಗೈದುಗಾರರು ಮನದ ಖತಿಗಿದಿ
ರೈದುದೆನೆ ಹೊಯ್ದಾಡಿದರು ಕಲಿಭೀಮ ಕೌರವರು ೩೫

ಎಲೆಲೆ ಹಿಡಿ ಹಿಡಿ ಭೀಮನನು ತೆಗೆ
ಕೆಲಕೆ ದುರ್ಯೋಧನನಿದು ಮಂ
ಗಳದ ಬೆಳೆಗಿಂಗಳಿನ ಮಳೆ ಸುರಿದುದೆ ಮಹಾದೇವ
ಕಳವಳಿಸೆ ಭೀಷ್ಮಾದಿಗಳು ನೃಪ
ತಿಲಕರಿಬ್ಬರ ನಡುವೆ ಹಾಯ್ದರು
ಕುಲಗಿರಿಗಳಂದದಲಿ ಕೃಪ ಗುರುಸುತರು ವಹಿಲದಲಿ ೩೬

ತೆಗೆದರೀತನನಿತ್ತಲಾತನ
ನುಗಿದರತ್ತಲು ಜನದ ಗಳದಿಂ
ದೊಗೆದ ಗಾಢದ ಗಜಬಜವ ಘಟ್ಟಿಸಿದರಲ್ಲಲ್ಲಿ
ಬೆಗಡು ಮೊಳೆತುದು ಭೀಷ್ಮ ವಿದುರಾ
ದಿಗಳ ಮನದಲಿ ಮೇಲೆ ಹಬ್ಬುವ
ಹಗೆಗಿದುಪಲಕ್ಷಣವಲಾಯೆಂದುದು ಬುಧವ್ರಾತ ೩೭

ಅಳಿಮಸಗಿದಂಬುಜದವೋಲ್ ಜನ
ಜಲಧಿ ಜಾತ ಕ್ಷೋಭೆಯಲಿ ವೆ
ಗ್ಗಳಿಸಿತಗ್ಗದ ಸಾಧು ವಾದವಿವಾದ ರಭಸದಲಿ
ಮೊಳಗಿದವು ಕಲ್ಪಾಂತ ಮೇಘಾ
ವಳಿಯ ಗುರುವೆನೆ ವಾದ್ಯತತಿ ಕಳ
ಕಳದೊಳರ್ಜುನ ದೇವನೆದ್ದನು ಮುನಿಯ ಸನ್ನೆಯಲಿ ೩೮

ಈತನಾರರ್ಜುನನೆ ಹೋ ಹೋ
ಮಾತು ಮಾಣಲಿ ಮಾಣಲೆಂಬೀ
ಮಾತು ಹಿಂಚಿತು ಮುನ್ನ ಮೌನದೊಳಿರ್ದುದಾಸ್ಥಾನ
ಭೀತ ಕಳಕಳ ರಂಗದಲಿ ಪುರು
ಹೂತಸುತ ಮೈದೋರಿದನು ಜನ
ವೀತನನು ಕೊಂಡಾಡುತಿರ್ದುದು ರಾಯ ಕೇಳೆಂದ ೩೯

ದ್ರೋಣ ಕೃಪ ಮೊದಲಾದ ಮಾನ್ಯ
ಶ್ರೇಣಿಗೆರಗಿದನಮರ ನಿಕರಕೆ
ಗೋಣನೆತ್ತಿದನಿಟ್ಟು ಕರಪುಟವನು ಲಲಾಟದಲಿ
ಪ್ರಾಣ ಪಣವಿದು ನಿಖಿಳ ವಿದ್ಯದ
ಜಾಣತನವಿದು ವಿನಯವೆಂದಿದು
ಕೇಣವಿಲ್ಲದೆ ನೆರವಿ ನೆರೆ ಹೊಗಳಿತು ಧನಂಜಯನ ೪೦

ನಿಲುವಿನಲಿ ಸ್ವಸ್ಥಾನದಲಿ ಕೈ
ಚಳಕದಲಿ ಭಂಗಿಯಲಿ ಭರದಲಿ
ಲುಳಿಯಲೊಯ್ಯಾರದಲಿ ಮೋಡಾಮೋಡಿಯಂದದಲಿ
ಅಳವಿಯಲಿ ಪರಿವಿಡಿಯಲೂಹಾ
ಬಲದಲವಧಾನದಲಿ ಶಸ್ತ್ರಾ
ವಳಿಯ ಸಾಂಗೋಪಾಂಗ ಶ್ರಮವನು ತೋರಿದನು ಪಾರ್ಥ ೪೧

ತುರಗಚಯ ರೇವಂತ ಮದ ಕುಂ
ಜರ ಮಹಾ ದಿವಿಜೇಂದ್ರ ಪಥ ಸಂ
ಚರಣ ವರ ಮಾರ್ತಾಂಡಯೆಂದಬ್ಬರಿಸೆ ಜನ ನಿಕರ
ತುರಗ ಗಜ ರಥ ವಿವಿಧ ಶಿಕ್ಷಾ
ಪರಿಣತಿಯ ತೋರಿದನು ಗುರು ಕೃಪ
ಸುರನದೀಜರು ಮುಳುಗಿದರು ಪುಳಕಾಂಬು ಪೂರದಲಿ ೪೨

ಮತ್ತೆ ಕೊಂಡನು ಧನುವ ನೆರವಿಯ
ನತ್ತ ಹೊಯ್ ಹೊಯ್ ಹೋಗ ಹೇಳ್ ದುರ್
ವೃತ್ತರೆದೆ ಜರ್ಝರಿತವಾಗಲು ತೋರಬೇಕೆನುತ
ಬತ್ತಳಿಕೆಯಿಂದುಗಿದು ಹೂಡಿ ವಿ
ಯತ್ತಳಕೆ ಹಾಯ್ಸಿದನು ಕರ್ಬೊಗೆ
ಸುತ್ತಿ ದಳ್ಳುರಿ ಸುರಿದುದಾಗ್ನೇಯಾಸ್ತ್ರ ಧಾರೆಯಲಿ ೪೩

ತೆಗೆಸಿದನು ಶಿಖಿಶರವ ಧನುವಿಂ
ದುಗಿಸಿದನು ವಾರುಣವನಭ್ರವ
ಮೊಗೆದುದದ್ಭುತ ವಾರಿಯುಪಸಂಹರಿಸಿದನು ಮರಳಿ
ಹಗಲನೊಂದೇ ತುತ್ತು ಮಾಡಿದ
ವಿಗಡ ತಿಮಿರಾಸ್ತ್ರದಲಿ ತಿಮಿರವ
ತೆಗೆಸಿದನು ಸೂರ್ಯಾಸ್ತ್ರದಲಿ ಬೆರಗಾಗೆ ಸುರನಿಕರ ೪೪

ಗಿರಿಶರದಲದ್ರಿಗಳ ಮೇಘದ
ಶರದಿನಭ್ರವನುರಗ ಬಾಣದಿ
ನುರು ಭುಜಂಗವನನಿಲ ಶರದಲಿ ತೀವ್ರ ಮಾರುತನ
ಪರುಠವವ ತೋರಿದನು ಜನವು
ಬ್ಬರಿಸಲಡಿಗಡಿಗಂಧ ಭೂಪನ
ಕೊರಳು ಕುಸಿದುದು ನುಡಿಯ ನಾಟಕ ಹರ್ಷಭಾರದಲಿ ೪೫

ಇವರ ಮುಖವರಳಿದವು ಗಂಗಾ
ಭವ ಕೃಪ ದ್ರೋಣಾದಿಗಳ ಬಳಿ
ಕವರ ತಲೆವಾಗಿದವು ಧೃತರಾಷ್ಟ್ರಾದಿ ಕೌರವರ
ಇವರ ಜನನಿಯ ಮುಖದ ಸುಮ್ಮಾ
ನವನು ದುರ್ಯೋಧನನ ಜನನಿಯ
ಜವಳಿ ದುಮ್ಮಾನವನು ಬಣ್ಣಿಸಲರಿಯೆ ನಾನೆಂದ ೪೬

ಬಾಯ ಹೊಯ್ ಫಲುಗುಣನ ಹೊಗಳುವ
ನಾಯಿಗಳನೇನಾಯ್ತು ಕೌತುಕ
ವಾಯಕಿವದಿರ ಪಕ್ಷಪಾತವ ನೋಡು ನೋಡೆನುತ
ಸಾಯಕವ ತಿರುಹುತ್ತಲಾ ಕ
ರ್ಣಾಯತಾಂಬಕನೆಡಬಲದ ಕುರು
ರಾಯನನುಜರ ಮೇಳದಲಿ ಹೊರವಂಟನಾ ಕರ್ಣ ೪೭

ಗುರುಗಳಿಗೆ ಕೈಮುಗಿದು ಶಿರದಲಿ
ತರಣಿ ಮಂಡಲಕೆರಗಿ ನೋಡುವ
ನೆರವಿಗಿವನಾರೀತನಾರೆಂಬದ್ಭುತವ ಬೀರಿ
ಅರಸ ಕೇಳೈ ವಿವಿಧ ಶಸ್ತ್ರೌ
ತ್ಕರದ ಶ್ರಮವನು ತೋರಿದನು ಕರಿ
ತುರಗ ರಥ ವಾಹನದ ಶಿಕ್ಷಾ ವಿದ್ಯೆಗಳು ಸಹಿತ ೪೮

ಆವ ವಿಧದಲಿ ಪಾರ್ಥ ತೋರಿದ
ನಾವ ದಿವ್ಯಾಸ್ತ್ರಪ್ರಪಂಚವ
ಪಾವಕಾನಿಲ ವಾರುಣಾದಿಯನೈದೆ ವಿರಚಿಸಿದ
ಆ ವಿಧಾನದಲಾ ವಿಹಾರವ
ಲಾ ವಿಬಂಧದಲರ್ಜುನನ ಬಾ
ಣಾವಳಿಯ ಬಿನ್ನಾಣವನು ತೋರಿದನು ಕಲಿಕರ್ಣ ೪೯

ಸೆಣಸುವಡೆ ಬಾಯೆಂದು ಪಾರ್ಥನ
ಕೆಣಕಿದನು ಘನ ರೋಷ ಶಿಖಿಯಲಿ
ಕುಣಿದವಿಬ್ಬರ ಮೀಸೆ ಕಂಗಳೊಳೊಗುವ ಕೆಂಪಿನಲಿ
ಕಣೆ ಕಣೆಗಳಾಟದಲಿ ಶರ ಖಂ
ಡಣೆಯ ಕೋಲಾಟದಲಿ ಖಣಿ ಖಣಿ
ಖಣಿಲು ಖಣಿ ಖಣಿ ಮಸಗಲೆಚ್ಚಾಡಿದರು ಚಳಕದಲಿ ೫೦

ರಾಯಸಭೆ ಕಳವಳಿಸೆ ಹೋ ಹೋ
ಹೋಯಿದೇನೇನೆನುತ ಹಿಡಿದರು
ವಾಯುಸುತಕೃಪ ಗುರುಜ ದ್ರೋಣಾದ್ಯರು ಧನಂಜಯನ
ಆಯಿತೆಲವೋ ಕರ್ಣ ನೀನನು
ನಾಯಕನೊ ನೃಪಹಾರದಲಿ ಮೇಣ್
ನಾಯಕನೊ ನೀನಾವನೆಂದನು ಕೃಪನು ಖಾತಿಯಲಿ ೫೧

ಈತನಾವನು ಕರ್ಣನೆಂಬವ
ನೀತನರ್ಜುನನೊಡನೆ ತಾ ಮಾ
ರಾತು ಕೈಮಾಡಿದನು ಕೈಕೊಳ್ಳನು ಧನಂಜಯನ
ಈತ ತಪ್ಪಲ್ಲೆನುತ ಮಿಗೆ ಮೈ
ಯಾತನಾ ಧೃತರಾಷ್ಟ್ರನೀತನ
ಮಾತೆ ಕಂಡಳು ಕುಂತಿ ನೆನೆದಳು ಪೂರ್ವಸಂಗತಿಯ ೫೨

ಎನ್ನ ಮಗನೆನೆ ಬಂದುದಿಲ್ಲದು
ತನ್ನ ವಶವೇ ವಿಷ್ಣುಮಾಯೆಯ
ಬಿನ್ನಣವಲೇ ಮಾತು ಬಿಗಿದುದು ಮನವನೊಳಗಿಕ್ಕಿ
ತನ್ನ ತಾನೇ ಮರುಗಿ ಮೂರ್ಛಾ
ಪನ್ನೆಯಾದಳು ಕುಂತಿಯಿತ್ತಲು
ಖಿನ್ನನಾದನು ಕೃಪನ ನುಡಿಯಲಿ ದುಗುಡ ಮಿಗೆ ಕರ್ಣ ೫೩

ಈತನರಸಲ್ಲೆಂದು ಕೃಪ ಪಳಿ
ಪಾತನೇ ತಪ್ಪೇನು ರಾಜ್ಯದೊ
ಳಾತನರಸೆನಿಸುವೆನು ಕರೆ ನಮ್ಮಯ ಪುರೋಹಿತರ
ಶಾತಕುಂಭಾಸನವ ಮಂಗಳ
ಜಾತ ವಸ್ತುವ ತರಿಸು ತರಿಸೆಂ
ದಾ ತತುಕ್ಷಣದಲಿ ಸುಯೋಧನನೆದ್ದ ರಭಸದಲಿ ೫೪

ತರಿಸಿ ಭದ್ರಾಸನದೊಳೀತಂ
ಗರಸು ಪದವಿಯೊಳಂಗ ದೇಶದ
ಸಿರಿಯನಿತ್ತನು ರಚಿಸಿದನು ಮೂರ್ಧಾಭಿಷೇಚನವ
ದರುಶನವನಿತ್ತಖಿಳ ಭೂಮಿ
ಶ್ವರರು ಕಂಡರು ಪೂರ್ವ ಶೈಲದ
ತರಣಿಯಂತಿರೆ ಕರ್ಣನೆಸೆದನು ರಾಜತೇಜದಲಿ ೫೫

ಈತನುತ್ಸವ ತನ್ನದೆಂದೇ
ಪ್ರೀತಿಯಲಿ ಬರೆ ಸಿಂಹಪೀಠವ
ನೀತನಿಳಿದೆರಗಿದನು ಪದದಲಿ ಬಳಿಕ ಜನಜನಿತ
ಸೂತಸುತನಿವನೆಂದು ಭುವನ
ಖ್ಯಾತವಾದುದು ಬಳಿಕ ನಸುನಗು
ತೀತನನು ಕುಲವೆತ್ತಿ ಭಂಗಿಸಿ ನುಡಿದನಾ ಭೀಮ ೫೬

ಇವನ ತಂದೆಯದಾರು ಪಾಂಡುವೊ
ಪವನನೋ ಕೃಪ ನಿಮ್ಮ ಜನ್ಮವ
ನೆವಗೆ ಹೇಳಿರೆ ಹಿರಿಯ ಗುರುಗಳ ತಾಯದಾವವಳೊ
ಅವಘಡಿಸದಿರಿ ಹಿರಿಯತನಕಂ
ಜುವೆನು ನಿಮಗೆನುತಡಿಗಡಿಗೆ ಕೌ
ರವ ಮಹೀಪತಿ ಜರಿದು ನುಡಿದನು ಗುರು ಕೃಪಾದಿಗಳ ೫೭

ಒಳಗೆ ಗಜಬಜವಾಯ್ತು ಕೈದುವ
ಸೆಳೆದುದಲ್ಲಿಯದಲ್ಲಿ ಗುರು ಕೃಪ
ರುಲುಹ ಕೇಳುವರಿಲ್ಲ ಕೈದೊಳಸಾಯ್ತು ಕಳನೊಳಗೆ
ಇಳಿದು ಭೀಷ್ಮಾದಿಗಳು ತಮ್ಮಯ
ನಿಳಯಕೈದಿದರೆರಡು ಬಲ ತ
ಮ್ಮೊಳಗೆ ತಾವೇ ಹಣಿದು ಹರಿದುದು ರಾಯ ಕೇಳೆಂದ ೫೮

ಕೆಲರು ಭೀಮನನರ್ಜುನನ ಕೆಲ
ಕೆಲರು ಕರ್ಣನ ಕೌರವೇಂದ್ರನ
ಕೆಲರು ಹೊಗಳುತ ಬಂದು ಹೊಕ್ಕರು ಹಸ್ತಿನಾಪುರವ
ಬಳಿಕಲಾ ಮರುದಿವಸದಲಿ ಮ
ಕ್ಕಳುಗಳೆಲ್ಲರ ಕರೆಸಿ ಗರುಡಿಯ
ನಿಳಯದಲಿ ಕುಳ್ಳಿರ್ದು ಗುರು ನುಡಿದನು ಕುಮಾರರಿಗೆ ೫೯

ಏನಿರೈ ಕುರುವಂಶನಳಿನೀ
ಭಾನುಗಳಿರ ವಿದಗ್ಧ ಜನ ಸುರ
ಧೇನುಗಳಿರಾವಿಂದು ನಿಮ್ಮಲಿ ದಕ್ಷಿಣಾರ್ಥಿಗಳು
ಏನನೀವಿರಿ ನಮಗೆ ಕೊಡೆ ಸಂ
ಪೂರ್ಣರೈ ಕೊಡಲಾಪ ಸತ್ತ್ವ ನಿ
ಧಾನವುಂಟೇ ಹೇಳಿಯೆಂದನು ದ್ರೋಣನನಿಬರಿಗೆ ೬೦

ಆವುದನು ಬಯಸುವಿರಿ ನಿಮ್ಮಡಿ
ಯಾವ ಕಾರ್ಯವ ಬೆಸಸಿದುದ ತಂ
ದೀವೆವಿದಕೆ ವಿಚಾರವೇನೆಂದರು ಕುಮಾರಕರು
ತೀವಿದಗ್ಧದ ಹರುಷರಸದಲಿ
ಭಾವ ನೆನೆದುದು ಮುನಿಗೆ ವರ ಶಿ
ಷ್ಯಾವಳಿಗೆ ನುಡಿದನು ನಿಜಾಭಿಪ್ರಾಯ ಸಂಗತಿಯ ೬೧

ಕೇಳಿ ಬಲ್ಲಿರೆ ಗಂಗೆಯುತ್ತರ
ಕೂಲದಲಿ ಪಾಂಚಾಲದೇಶ ನೃ
ಪಾಲನಲ್ಲಿಗೆ ದ್ರುಪದನೆಂಬವನತುಳ ಭುಜಬಲನು
ಆಳುತನದಂಗದಲಿ ಪರರಿಗೆ
ಸೋಲನವನೊಟ್ಟೈಸಿ ದ್ರುಪದ ನೃ
ಪಾಲಕನ ಪಿಡಿದೊಪ್ಪಿಸಿದರೆಮಗಹುದು ಪರಿತೋಷ ೬೨

ಐಸಲೇ ಗುರುದಕ್ಷಿಣಾರ್ಥವಿ
ದೇಸು ಘನ ತಂದೀವೆವೆಂದುಪ
ಹಾಸದಲಿ ಕೈವೊಯ್ದು ತಮ್ಮೊಳು ನಗುತ ಕೌರವರು
ಆ ಸುಯೋಧನ ಕರ್ಣಸಹಿತ ಮ
ಹೀಶ ತನುಜರು ಬೀಳುಕೊಂಡರು
ವಾಸಿ ಬೆದ್ದುದು ಪಾಂಡುಸುತ ಕೌರವ ಕುಮಾರರಿಗೆ ೬೩

ಧಾಳಿಯಿಟ್ಟುದು ರಾಯದಳ ಪಾಂ
ಚಾಲದೇಶಕೆ ಮುಂದೆ ಹೊಕ್ಕುದು
ಜೂಳಿಕೆಯಲಿ ಸುಯೋಧನಾದಿಗಳೂರನುರವಣಿಸಿ
ಧೂಳಿಗೋಟೆಯ ಕೊಂಡಿವರು ರಾ
ಜಾಲಯಕೆ ಬರೆ ದ್ರುಪದನನುಜರು
ಸೋಲಿಸಿದರೈ ಕೌರವೇಂದ್ರನ ಬಲವ ಬರಿಕೈದು ೬೪

ಪುರದ ಹೊರ ಬಾಹೆಯಲಿ ತಾವೈ
ವರು ಮಹಾ ಸನ್ನಾಹ ಚಾಪ
ಸ್ಫುರಿತ ತೂಣೀಬದ್ಧ ಕಂಪಿತ ಖಡ್ಗ ಪಾಣಿಗಳು
ಗುರು ಸಹಿತಲಿವರಿದ್ದರಿತ್ತಲು
ಪುರಜನಂಗಳ ಮುಸಲ ಹತಿಯಲಿ
ಮುರಿದು ಬಂದುದು ಕೌರವೇಂದ್ರನ ದಳ ವಿಘಾತಿಯಲಿ ೬೫

ಆತು ಕೊಂಡರು ಪಾಂಡು ಸುತರಭಿ
ಜಾತ ಸಮರವನಿವರ ಕೈಯಲಿ
ಮಾತು ಹಲವಿಲ್ಲೆನುತ ಹೊಕ್ಕರು ಕೊಂದು ಪರಬಲವ
ಘಾತಿಗಾನುವರಿಲ್ಲ ದೊರೆಯನು
ತಾತನನು ಮುತ್ತಿದರು ಗುರುಗಳಿ
ಗೀತನೇ ದಕ್ಷಿಣೆಯೆನುತ ಹಿಡಿದರು ಮಹೀಪತಿಯ ೬೬

ಕೊಂಡು ಬಂದರು ದ್ರೋಣನಿದಿರಲಿ
ದಿಂಡುಗೆಡಹಿದರೀತನನು ಕೈ
ಕೊಂಡನೆಲವೋ ದ್ರುಪದ ಸಖ ಪೂರ್ವವನು ನೆನೆಯೆನುತ
ಭಂಡನಿವನನು ಸಾಕು ಬಿಡಿ ಸಲೆ
ಚಂಡಿಯಾದನು ದರ್ಪ ವಿಷ ಮುಂ
ಕೊಂಡು ಮೂರ್ಛಿತನೇನ ಮಾಡುವೆನೆಂದನಾ ದ್ರೋಣ ೧೭

ಎಲವೊ ಕೊಟ್ಟೆನು ಜೀವದಾನವ
ನಳಲು ನಿನಗೇಕಿನಿತು ಸಾಹಸ
ದಳವಿಯಲಿ ನೀ ನೆರಹು ಹಗೆಯನು ಭಂಡ ಹೋಗೆಂದು
ಕಳೆದು ಕೊಟ್ಟೆನು ನಿನ್ನ ರಾಜ್ಯದ
ನೆಲದೊಳರ್ಧವನಿತ್ತು ನೀ ನಡೆ
ಬಳಿಕಲೆಂದೊಡಬಡಿಸಿ ದ್ರುಪದನ ಬಿಟ್ಟನಾ ದ್ರೋಣ ೧೮

ಅರಸ ಕೇಳೈ ದ್ರುಪದನೀ ಪರಿ
ಪರಿಭವಕೆ ಗುರಿಯಾಗಿ ತನ್ನಯ
ಪುರವ ಹೊಗದೈತಂದು ಗಂಗಾತೀರ ದೇಶದಲಿ
ಧರಣಿಸುರರಲಿ ಪುತ್ರಕಾಮ್ಯಾ
ಧ್ವರವ ವಿರಚಿಸಲಾಗ ಸತ್ಸೋ
ತ್ಕರುಷವಂತರನರಸಿದನು ನಾನಾಗ್ರಹಾರದಲಿ ೧೯

ದ್ರೋಣ ಭಯದಲಿ ಸಕಲ ವಿಪ್ರ
ಶ್ರೇಣಿಯಿರೆ ಯಾಜೋಪಯಾಜರು
ಪ್ರಾಣನಿಸ್ಪೃಹರಾಗಿ ಮಾಡಿಸಿದರು ಮಹಾಕ್ರತುವ
ಕೇಣವಳಿದಾಹುತಿಯನಮರರ
ಬಾಣಸಿಗಗುಣಬಡಿಸೆ ದೇವ
ಶ್ರೇಣಿ ದಣಿದುದು ಸಲಿಸಿದರು ಪಾಂಚಾಲನಭಿಮತವ ೨೦

ಅರಸ ಕೇಳೈ ಕುಂಡ ಮಧ್ಯದೊ
ಳುರಿಯ ಕರುವಿಟ್ಟೆರಕಿದರೊ ಭಾ
ಸುರ ಮಹಾನಲನಪರ ರೂಪೋ ತಾನಿದೇನೆನಲು
ಶರಪಡಾಯುಧ ಚಾಪ ವರ್ಮೋ
ತ್ಕರಸಹಿತ ರೌದ್ರಾಂಗನಾಗವ
ತರಿಸಿದನು ಪಾಂಚಾಲ ಭೂಪತಿ ಭುಜವ ಸೂಳೈಸೆ ೨೧

ವೇದಿ ಮಧ್ಯವನೊಡೆದು ಮೂಡಿದ
ಳಾದರಿಸೆ ಜನವಮಮ ಕಾಮನ
ಕೈದುವೋ ತ್ರೈಲೋಕ್ಯ ಮೋಹನ ಮಂತ್ರ ದೇವತೆಯೊ
ಕಾದುವರೆ ಕರೆ ಹರಿ ಹರ ಬ್ರ
ಹ್ಮಾದಿಗಳಿಗೊರೆಯೆಂಬ ಹೂಂಕೃತಿ
ಯಾದುದಾ ಕಾಮಂಗೆ ದ್ರುಪದಾತ್ಮಜೆಯ ಜನನದಲಿ ೨೨

ದ್ರೋಣವಧೆಗೀ ಮಗನು ಪಾರ್ಥಗೆ
ರಾಣಿಯಿಾ ಮಗಳೆಂದು ದ್ರುಪದ
ಕ್ಷೋಣಿಪತಿ ಸಲಹಿದನು ಸುತರನು ಸಾನುರಾಗದಲಿ
ದ್ರೋಣನೀತನ ಕರೆಸಿ ಶಸ್ತ್ರದ
ಜಾಣಿಕೆಯ ಕಲಿಸಿದನು ವಿಗಡರ
ಕಾಣೆನೀ ಕಲಶಜನ ಪರಿಯಲಿ ರಾಯ ಕೇಳೆಂದ ೨೩

ಮಗನು ಧೃಷ್ಟದ್ಯುಮ್ನ ದ್ರೌಪದಿ
ಮಗಳು ಭಾರದ್ವಾಜನೆತ್ತಿದ
ಹಗೆಗೆ ಹರುವಾಯ್ತೆನುತ ಓಗ್ಗಿದ ದ್ರುಪದ ಭೂಪಾಲ
ದುಗುಡದಲಿ ಕುರು ರಾಯನೀ ದಾ
ಯಿಗರ ಬಿರಿದಿನ ಬಿಂಕದಂಕೆಯ
ಬಿಗಿದ ಪರಿಯನು ನೆನೆದು ಮರುಗಿದನರಸ ಕೇಳೆಂದ ೨೪

## ಎಂಟನೆಯ ಸಂಧಿ

ಸೂ. ವಾಯುಸುತನುರಿಮನೆಯ ಕೌರವ
ರಾಯ ಕೃತಕವ ಕಳೆದು ಹೊಕ್ಕನು
ತಾಯಿ ವೊಡಹುಟ್ಟಿದರು ಸಹಿತ ಮಹಾ ವನಾಂತರವ

ಕೇಳು ಜನಮೇಜಯ ಧರಿತ್ರೀ
ಪಾಲ ಗಜನಗರಿಯಲಿ ಕೌರವ
ರಾಳ ಪಾಂಡವರಾಳ ಸೆಣಸಿನ ಕಾಲು ಮೆಟ್ಟುಗಳ
ಸೂಳು ಮತ್ಸರ ಬಿರುದು ಪಾಡಿನ
ಜೋಳಿಗಲಹದ ಕದಡು ಜೂಜಿನ
ತೋಳುವಲರೊಳತೋಟಿ ಮಸಗಿತು ದಿವಸ ದಿವಸದಲಿ ೧

ಬೀದಿಗಲಹದ ಕವಡು ಬೀಡಿನ
ಲೈದೆ ಹಬ್ಬಿತು ಬೀಡುಗಲಹದ
ಕೈದೊಳಸು ಕೊಂಡೆಸಗಿ ನಟಿಸಿತು ನಾಡು ನಾಡಿನಲಿ
ಆದುದೆರಡರಸಿಭಪುರಿಗೆ ಕಾ
ಳಾದುದಿನ್ನೇನೆಂದು ಪುರಜನ
ವೈದೆ ಹೆದರಿತು ಭೀಮ ದುರ್ಯೋಧನರ ಹೋರಟೆಗೆ ೨

ಬೇರೆ ಪಾಂಡವರಿರಲಿ ರಾಯನ
ನೂರು ಮಕ್ಕಳು ಪುರವನಾಳಲಿ
ಬೇರೆ ಕೌರವರಿರಲಿ ಪಾಂಡವರಾಳಲಿಭ ಪುರಿಯ
ನೂರರೊಡನೈವರನು ಧರಿಸಿರ
ಲಾರದೀ ಪುರಿಯೆನುತ ದುಗುಡವ
ಹೇರಿ ಹೊದಕುಳಿಗೊಳುತಲಿರ್ದುದು ಹಸ್ತಿನಾನಗರ ೩

ಒಂದು ದಿವಸ ಸುಯೋಧನನು ನಿಜ
ಮಂದಿರದೊಳೇಕಾಂತದಲಿ ಮನ
ನೊಂದು ನುಡಿದನು ಶಕುನಿ ಕರ್ಣ ಜಯದ್ರಥಾದ್ಯರಿಗೆ
ಅಂದು ಭೀಮಾರ್ಜುನರು ದ್ರುಪದನ
ತಂದು ದಕ್ಷಿಣೆಯಿತ್ತು ಗುರುವಿಗೆ
ಸಂದರೈ ಸಮರದಲಿ ಪರಿಭವವಾಯ್ತು ತಮಗೆಂದ ೪

ವನಜ ವನದಲಿ ತುರುಚಿ ಕಬ್ಬಿನ
ಬನದಿ ಕಡಸಿಗೆ ಚೂತಮಯ ಕಾ
ನನದಿ ಬೊಬ್ಬುಲಿ ಭೀಮಸೇನನಯಿರವು ತಮ್ಮೊಳಗೆ
ಇನಿತು ಪಾರ್ಥನ ಮೇಲೆ ಯಮಳರ
ಜಿನುಗಿನಲಿ ಜಾರೆನು ಯುಧಿಷ್ಠಿರ
ಜನಪನಾಗಲಿ ಮೇಣು ಮಾಣಲಿ ಭೀತಿಯಿಲ್ಲೆಂದ ೫

ಹುದು ನಡೆಯದಿವರೊಡನೆ ನಮ್ಮಲಿ
ಕದನವೇ ಕೈಗಟ್ಟುವುದು ಕಾ
ದಿದೊಡೆ ಹೆಬ್ಬಲವಹುದು ದುರ್ಬಲ ದೈವಗತಿ ಬೇರೆ
ನದಿಗಳರಳೆಯ ಹಾಸು ನವ ವಿಷ
ವುದರ ದೀಪನ ಚೂರ್ಣವಾವಂ
ಗದಲಿ ಸಾಪತ್ನರಲಿ ಸದರವ ಕಾಣೆ ತಾನೆಂದ ೬

ದುಗುಡವೇತಕೆ ಜೀಯ ಡೊಂಬಿನ
ಜಗಳವನು ತೆಗೆದರಿನ್ನವರ ಸುಂ
ಟಗೆಯನಾಯ್ವೆನವನವರ ತನುವನು ಯುದ್ಧರಂಗದಲಿ
ದಿಗುಬಲಿಯ ಕೊಡಿಸುವೆನು ಸಾಕಿ
ನ್ನೊಗುವಿಂಗೆಯ ಚಿಂತಾಂಗನೆಯನೋ
ಲಗಿಸದಿರು ಕುರುರಾಯ ಚಿತ್ತೈಸೆಂದನಾ ಕರ್ಣ ೭

ಹೊಡೆದು ಹೊಡೆ ಚೆಂಡಾಡಿ ರಿಪುಗಳ
ಗಡಣವನು ಯಮರಾಜಧಾನಿಗೆ
ನಡೆಸುವೆನು ನೀ ನೋಡುತಿರು ಸಾಕೊಂದು ನಿಮಿಷದಲಿ
ಕೊಡು ತನಗೆ ನೇಮವನು ದುಗುಡವ
ಬಿಡು ಮನಸ್ಸಿನ ಕಂದು ಕುಂದನು
ಹಿಡಿಯದಿರು ಕುರುರಾಯ ಚಿತ್ತೈಸೆಂದನಾ ಕರ್ಣ ೮

ಹಬ್ಬುಗೆಯ ಹದಿನಾಲ್ಕು ಲೋಕದ
ಮೊಬ್ಬುಗಳನೀಡಾಡಿ ನಭದೊಳ
ಗೊಬ್ಬನೇ ರವಿ ತೊಳಗಿ ಬೆಳಗುವವೋಲು ಪಾಂಡವರ
ಕೊಬ್ಬುಗಳ ನಿಲಿಸುವೆನು ಧರೆಯೊಳ
ಗೊಬ್ಬನೇ ದುರ್ಯೋಧನನು ಮ
ತ್ತೊಬ್ಬರಿಲ್ಲೆಂದೆನಿಸಿ ತೋರುವೆನೆಂದನಾ ಕರ್ಣ ೯

ವಿದುರ ಭೀಷ್ಮಾದಿಗಳು ನಿನ್ನಯ
ಸದನದೊಳಗುಂಡುಟ್ಟು ಪರರ
ಭ್ಯುದಯವನೆ ಬಯಸುವರು ದೂರುವರೆಮ್ಮನವರುಗಳ
ಹದನ ನೀನೇ ಬಲ್ಲೆ ಸಾಕಿ
ನ್ನದರ ಮಾತೇಕರಸ ತನ್ನಯ
ಕದನವನು ಚಿತ್ತೈಸು ಸಾಕಿನ್ನೆಂದನಾ ಕರ್ಣ ೧೦

ಸಹಜವೀ ನುಡಿ ಕರ್ಣನಾಡಿದ
ನಹುದು ಪಾಂಡವರೆಂಬವರು ಕಡು
ಸಹಸಿಗಳು ಗೆಲಲರಿದು ಕುಹಕೋಪಾಯ ಮಾರ್ಗದಲಿ
ಅಹಿತರನು ಗೆಲಬಹುದು ಪರಿಕರ
ಸಹಿತವರುಗಳ ನಿಮ್ಮ ಚಿತ್ತಕೆ
ಬಹರೆ ತನ್ನಭಿಮತವನವಧರಿಸೆಂದನಾ ಶಕುನಿ ೧೧

ಐದು ಮುಖವೀರೈದು ಭುಜ ಹದಿ
ನೈದು ಕಂಗಳ ವಿಗಡ ರುದ್ರನು
ಮೇದಿನಿಯ ಮೇಲೊಂದು ಶಿರ ಭುಜವೆರಡನಳವಡಿಸಿ
ಆದಿಪುರುಷನು ಭೀಮ ಪೆಸರಿನ
ಲೈದೆ ಜನಿಸಿದನಾತನಿದಿರಲಿ
ಕೈದುಕಾರನದಾವನೈ ಹೇಳೆಂದನಾ ಶಕುನಿ ೧೨

ಅರಸ ಕೇಳ್ವಿಲು ವಿದ್ಯದಲಿ ಮೂ
ವರು ಕಣಾ ಸಾಮರ್ಥ್ಯ ಪುರುಷರು
ಧರೆಯೊಳೊಬ್ಬರಿಗೊಂದು ಗುಣ ಪಾರ್ಥಂಗೆ ಮೂರು ಗುಣ
ಭರಿತವಾಗಿಹುದಾತನೊಬ್ಬನ
ಸರಿಸದಲಿ ಮಾರಾಂತು ಜೀವಿಸಿ
ಮರಳ ಬಲ್ಲವನಾವನೈ ಹೇಳೆಂದನಾ ಶಕುನಿ ೧೩

ರಾಮಚಂದ್ರನ ಚರಣಯುಗ ನಿ
ಸ್ಸೀಮ ಭೀಷ್ಮಾಚಾರಿಯರ ಶಿರ
ವಾ ಮಹಾರಥ ದ್ರೋಣನೆದೆ ನಡುಗುವುದು ಸಮರದಲಿ
ಸೌಮನಸ್ಯನು ನಿಷ್ಪ್ರಕಂಪ ಸ
ನಾಮನರ್ಜುನ ದೇವನಿದಿರಲಿ
ಭೂಮಿಯಲಿ ಬಿಲ್ಲಾಳದಾವವನೆಂದನಾ ಶಕುನಿ ೧೪

ಶತ್ರುಗಳ ಸಂಹರಿಸಿ ರಾಜ್ಯವ
ನೊತ್ತಿಯಾಳುವೆನೆಂಬ ಸಾಹಸ
ಸತ್ವಗುಣ ನಿನಗಿಲ್ಲ ಪಾಂಡವರತುಲ ಭುಜಬಲರು
ಕೃತ್ರಿಮದ ಮುಖದಿಂದ ರಿಪುಗಳ
ಕಿತ್ತು ಹಾಯಿಕಿ ನೆಲನನೇಕ
ಚ್ಛತ್ರದಲಿ ಸಲಹುವುದು ಮತ ಕೇಳೆಂದನಾ ಶಕುನಿ ೧೫

ಸೋದರರು ನೀವು ನಿಮ್ಮೊಳು
ಭೇದಮಂತ್ರವ ಮಾಡುವುದು ಮ
ರ್ಯಾದೆಯೇ ನಾವ್ ನಿಮ್ಮಡಿಯುಲರಮನೆಯ ಸೇವಕರು
ವಾದಿಸುವರಿತ್ತಂಡ ಸರಿ ಸಮ
ಗಾದರೆಯು ಕಂಡುದ ನುಡಿಯ ಬೇ
ಕಾದರಿಸು ಮೇಣ್ ಮಾಣು ಬಿನ್ನಹವೆಂದನಾ ಶಕುನಿ ೧೬

ಪಕ್ಷವೆರಡೇ ಲೋಕದೊಳ್ ಪಿತೃ
ಪಕ್ಷ ಮೇಣಾ ಮಾತೃಪಕ್ಷ ವಿ
ಪಕ್ಷ ತಂದೆಯ ದೆಸೆ ಸಪಕ್ಷವು ತಾಯ ದೆಸೆಯವರು
ತಕ್ಷಕನ ತೆರನಂತೆ ನಿಮ್ಮನು
ಭಕ್ಷಿಸುವರಾವಂಗದಲಿ ನೀ
ರೀಕ್ಷಿಸುವುದೈ ಪಾಂಡು ಪುತ್ರರನೆಂದನಾ ಶಕುನಿ ೧೭

ಮೊಳೆಯಲೇ ಮುರುಡಿಸಲು ಬೇಹುದು
ಬಲಿದ ಬಳಿಕದು ನಿನ್ನ ಹವಣೇ
ಇಳೆಯೊಳರ್ಥವನಿತ್ತು ರಿಪುಗಳ ಹೆಚ್ಚಿಸಿದ ಬಳಿಕ
ಗೆಲುವನಾವನು ದೇವ ದಾನವ
ರೊಳಗೆ ಭೀಮಾರ್ಜುನರ ಕೈ ಮನ
ದಳವನರಿಯಾ ಭಾರವೈ ಮೇಲೆಂದನಾ ಶಕುನಿ ೧೮

ಥಾರುಣಿಯೊಳು ಪಿಪೀಲಿಕೆಯು ವಿ
ಸ್ತಾರದಲಿ ಮಾಡಿದ ಮನೆಯು ಕಾ
ಳೋರಗನು ಹೊಗುವಂತೆ ರಿಪು ಕುಂತೀಕುಮಾರಕರು
ವೈರದಲಿ ಸಪ್ತಾಂಗವನು ಕೈ
ಸೂರೆಗೊಂಬರು ತಪ್ಪದಿದಕೆ ವಿ
ಚಾರವನು ಕಾಲದಲಿ ಮಾಡುವುದೆಂದನಾ ಶಕುನಿ ೧೯

ಹಿಂದೆ ನೀನವರುಗಳ ನಾನಾ
ಚಂದದಲಿ ನೋಯಿಸಿದೆ ಮನದಲಿ
ಕಂದು ಕುಂದದು ಕಷ್ಟ ವೃತ್ತಿಯನಾಚರಿಸುತಿಹರು
ಇಂದು ನೀನಾ ಪಾಂಡುಪುತ್ರರ
ನಂದಗೆಡಿಸದೆ ಬಿಟ್ಟೆಯಾದೊಡೆ
ಮುಂದೆ ಬೆಟ್ಟಿತು ರಾಜಕಾರಿಯುವೆಂದನಾ ಶಕುನಿ ೨೦

ಇರುಬಿನಲಿ ಸಿಕ್ಕಿರ್ದ ಹುಲಿಯನು
ಮುರಿದು ಕಳೆಯದೆ ತಳಪಟಕೆ ಬಿ
ಟ್ಟಿರಿಯಬಹುದೇ ಕೊಂದು ಕೂಗದೆ ಬಿಡುವುದೇ ಬಳಿಕ
ಕರುಬರಹ ಪಾಂಡವರಿಗೀಗಲೆ
ಹರುವ ನೆನೆ ಹೊರಬಿದ್ದರಾದೊಡೆ
ತರಿದು ಬಿಸುಡದೆ ಮಾಣ್ಬರೇ ಹೇಳೆಂದನಾ ಶಕುನಿ ೨೧

ಹರಿಪಯನು ವೃತ್ರಾಸುರನ ಸಂ
ಹರಿಸಲರಿಯದೆ ಗರುವದಿಂದಿರು
ತಿರಲವನು ದಿನದಿನದೊಳಣುವಣು ಮಾತ್ರವನು ಬೆಳೆದು
ಧರೆಯ ತುಂಬಲು ತನ್ನ ಸತ್ವದ
ನೆರವಣಿಗೆಗೈದಿಸದೆ ನಾನಾ
ತೆರದೊಳಾಯಸಗೊಳ್ಳನೇ ಹೇಳೆಂದನಾ ಶಕುನಿ ೨೨

ಅಡವಿಯಲಿ ಜನಿಸಿದರು ಬೆಳವಿಗೆ
ಯಡವಿಯೊಳಗಿನ್ನವರ ಬಾಳಿಕೆ
ಗಡವಿಯೇ ನೆಲಮನೆಯದಲ್ಲದೆ ಪಾಂಡುಪುತ್ರರಿಗೆ
ಪೊಡವಿಯೊಡೆತನ ಸಲ್ಲದವರನು
ನಡೆಸುವುದು ಕಾಲದಲಿ ರಾಜ್ಯವ
ಕೊಡುವುದಾವಂಗದಲಿ ಮತವಲ್ಲೆಂದನಾ ಶಕುನಿ ೨೩

ತಿಮಿರವಡಗಿದ ಲೋಕ ಶಿಕ್ಷಾ
ಕ್ರಮಣವಡಗಿದ ದಂತಿ ಕರ್ಮ
ಭ್ರಮೆಗಳಡಗಿದ ಯೋಗಿ ರುಜೆಯಡಗಿದ ನರೋತ್ತಮನು
ಹಿಮವಡಗಿದ ಸರೋಜದಂತಿಹು
ದಮಲ ಮತ ಕೇಳ್ಪಗೆಗಳಡಗಿದ
ಡಮರಪದವೆನಿಸುವುದು ಚಿತ್ತೈಸೆಂದನಾ ಶಕುನಿ ೨೪

ಬಿಡದೆ ಸುಖದುಃಖಗಳೊಳೊಂದನು
ಹಿಡಿದು ಸದ್ವ್ಯವಹಾರ ಮುಖದಲಿ
ನಡೆಯಲೊಂದರ ತುಷ್ಟಿಯೊಂದರ ನಷ್ಟ ತನಗಹುದು
ಹಿಡಿವುದಿಹಪರವೆರಡರೊಳಗಳ
ವಡಿಕೆ ತನಗಹುದೊಂದನೊಂದನು
ಬಿಡುವುದಲ್ಲದೆ ಬೇರೆ ಮತವಿಲ್ಲೆಂದನಾ ಶಕುನಿ ೨೫

ಭಾವ ಮೈದುನನಣ್ಣ ತಮ್ಮನು
ಮಾವನಳಿಯನು ಪುತ್ರಮಿತ್ರರು
ಸೇವಕರು ಸಜ್ಜನರು ಸುಜನರು ಸತ್ಯಯುತರೆಂದು
ಭಾವಿಸದಿರಾರುವನು ನಿನ್ನಯ
ಜೀವವುಳ್ಳನ್ನೆಬರ ನಿನ್ನಯ
ದೈವಗತಿಯೆಂದು ನಂಬಿಹುದೆಂದನಾ ಶಕುನಿ ೨೬

ಶತ್ರುಶೇಷವಿದಲ್ಪವೆಂದುಳು
ಹುತ್ತ ಬರಲಾಗದು ಕಣಾ ಭೂ
ಪೋತ್ತಮರುಗಳು ವೈರಿ ರಾಯರ ವಂಶ ಬೀಜವನು
ಬಿತ್ತುವರೆ ನೇತ್ರಾವಳಿಯ ಮೀ
ಟೆತ್ತಿ ಕಾರಾಗಾರದೊಳಗೆ ಕ
ಳತ್ರ ಸಹಿತಶನದಲಧಿಕ ವ್ರತವ ಮಾಡೆಂದ ೨೭

ವಿಷವನಣುವೆಂದಳುಕದುಪಭೋ
ಗಿಸಲು ಕೊಲ್ಲದೆ ಬಿಡುವುದೇ ಕರ
ಗಸದ ನಡು ಬಡವಾದರೆಯು ಕುಯ್ದಿಕ್ಕದೇ ತರುವ
ಶಿಶುವಿವನು ಸಾಮರ್ಥ್ಯ ಪುರುಷನೆ
ಪುಸಿಕಣಾಯೆಂದುಳುಹಿದೊಡೆ ರ
ಕ್ಕಸನಹನು ಮುಂದಕ್ಕೆ ತನಗವನೆಂದನಾ ಶಕುನಿ ೨೮

ಕಾಲವನು ಗೂಗೆಗಳು ನಿರ್ಜರ
ರೇಳಿಗೆಯನಾ ದೈತ್ಯರುಗಳು ತ
ಮಾಳಿ ರವಿರಶ್ಮಿಗಳನಾ ಬಲು ನಿದ್ರೆಯನು ಚೋರ
ಕಾಲ ಭುಜಗನು ಗರುಡನುಳಿವನು
ತಾಳದಂದದಿ ಪಾಂಡವರು ನಿ
ನ್ನೇಳಿಗೆಯ ಸೈರಿಸರು ಚಿತ್ತೈಸೆಂದನಾ ಶಕುನಿ ೨೯

ವಿಗಡ ರುದ್ರನು ಲೋಚನಾಗ್ನಿಯೊ
ಳೊಗುಮಿಗೆಯ ಕೋಪದಲಿ ಕಾಮನ
ಮಿಗೆ ದಹಿಸಿದಂದದಲಿ ರಿಪು ಕುಂತೀಕುಮಾರಕರ
ಹೊಗೆದು ಕಳೆ ಲಾಕ್ಷಾಭವನದಲಿ
ಹಗೆಗೆ ಹರಿವಹುದಲ್ಲದಿರ್ದೊಡೆ
ವಿಗಡಿಸುವುದೈ ರಾಜಕಾರ್ಯವಿದೆಂದನಾ ಶಕುನಿ ೩೦

ಹಿಡಿವ ಫಣಿಯನು ಹೊಡೆವ ಸಿಡಿಲನು
ಜಡಿವ ಮಾರಿಯು ನಲಿವ ರುಜೆಯನು
ಮಡಿವ ದಿನವನು ಹಾನಿವೃದ್ಧಿಯ ಹೆಚ್ಚು ಕುಂದುಗಳ
ಕಡಿವ ಹಗೆಯನು ಕಾಲಕರ್ಮದ
ಗಡಣವನು ಸುಖದುಃಖದುದಯದ
ಕಡೆ ಮೊದಲ ಕಾಣಿಸುವನಾವವನೆಂದನಾ ಶಕುನಿ ೩೧

ಇನಿತು ಚಿಂತಿಸಲೇಕೆ ಕೌರವ
ಜನಪ ನಿಮ್ಮಡಿಗಳಿಗೆ ತಾನೊಂ
ದನುವ ಬಿನ್ನಹ ಮಾಡುವೆನು ಪಾಂಡವರ ನೆಳಲಿರಲು
ನಿನಗೆ ರಾಜ್ಯವನಾಳ್ವ ಫಲ ಸಂ
ಜನಿಸಲರಿಯದು ಕಾಲದಲಿ ನೀ
ನೆನೆ ಉಪಾಯವನೊಂದನೆಂದು ಕಳಿಂಗ ಕೈ ಮುಗಿದ ೩೨

ದೇವ ದಾನವರಂತೆ ಹದ್ದಿನ
ಹಾವಿನೋಲತಿ ವೈರ ಬಂಧದ
ಠಾವು ಠವಣೆಯ ನೀರು ಭೇದಿಸುವಂತೆ ಭೇದಿಸುತ
ಕಾವವರ ಕಾವುತ್ತ ಕಂಟಕ
ಜೀವಿಗಳನಪಹರಿಸುತಂತ
ರ್ಭಾವಶುದ್ಧಿಯೊಳಿಳೆಯನಾಳುವುದೆಂದನಾ ಶಕುನಿ ೩೩

ಮತ್ಯುವಿನ ತಾಳಿಗೆಯೊಳಗ್ಗದ
ಶತ್ರುಗಳ ಸಾಮೀಪ್ಯದಲಿ ದು
ರ್ವ್ಯತ್ತರೋಲಗದೊಳಗೆ ಸಿಂಹದ ಗುಹೆಯೊಳಹಿಪತಿಯ
ಹುತ್ತಿನೊಳಗಿಹವೋಲು ಸಲೆ ಬಾ
ಳುತ್ತಲಂತಃಪುರದೊಳರಸಿರ
ಲತ್ಯಧಿಕದೆಚ್ಚರಿಕೆಯಿರಬೇಕೆಂದನಾ ಶಕುನಿ ೩೪

ಹಗೆಯ ಹೆಂಗಳನರಮನೆಗಳೊಳು
ಪೊಗಿಸಲಾಗದು ತನಗವರು ಹೇ
ಳಿಗೆಯ ಹಾವಿನವೋಲು ಸುಖತರವಲ್ಲವರಿ ನೃಪರ
ಮಗಳ ಮಕ್ಕಳ ದೆಸೆಯವರನೋ
ಲಗಿಸುವರ ಬಾಹತ್ತರ ನಿಯೋ
ಗಿಗಳ ನಂಬುವುದುಚಿತವೇ ಹೇಳೆಂದನಾ ಶಕುನಿ ೩೫

ದೈವ ಹೊಡೆದಂದದಲಿ ಬೆರೆತು ಸ
ಭಾ ವಲಯದಲಿ ಗರ್ವ ವಿಭ್ರಮ
ಭಾವ ಭೂಷಿತನಾಗಿ ವೈಹಾಯಸವನೀಕ್ಷಿಸುತ
ಹಾವಿನಂದದೊಳಿರದೆ ಹಾಸ್ಯ ರ
ಸಾವಲಂಬನನಾಗದೆಯು ಸುಖ
ಜೀವಿಯಾಗಿಹುದುತ್ತಮವು ಕೇಳೆಂದನಾ ಶಕುನಿ ೩೬

ಹೀನಮುಖ ಬಹುಮುಖ ಪರಾಙ್ಮುಖ
ದೀನಮುಖ ವಾಚಾಲಮುಖವ
ಜ್ಞಾನಮುಖವಂತರ್ಮುಖ ಬಹಿರ್ಮುಖದ ಕಾರ್ಯದಲಿ
ಆ ನರೇಂದ್ರನ ವರ್ತನಕೆ ದು
ಸ್ಥಾನವಾಗದೆ ಬಿಡದು ಸಂಶಯ
ವೇನಿದಕೆ ಕುರುರಾಯ ಚಿತ್ತೈಸೆಂದನಾ ಶಕುನಿ ೩೭

ಶಯನದಲಿ ವಹ್ನಿಯಲಿ ವೈಹಾ
ಳಿಯಲಿ ಬೇಟೆಯಲೂಟದಲಿ ಕೇ
ಳಿಯಲಿ ಸುರತ ಕ್ರೀಡೆಯಲಿ ಮಜ್ಜನದ ಸಮಯದಲಿ
ಜಯದ ಜೋಕೆಯಲೋಲಗದ ಮರ
ವೆಯಲಿ ವಾರಸ್ತ್ರೀಯರುಗಳಲಿ
ಲಯವನೈದಿಸಬಹುದು ಚಿತ್ತೈಸೆಂದನಾ ಶಕುನಿ ೩೮

ರುಜೆಯ್ಯುನಲುಗುವ ರದನವ ದ್ರುಗು
ರಜವನನುಚಿತಜಾತ ಧೂಮ
ಧ್ವಜವ ರುಣವನವಿದ್ಯೆಯನು ಗೃಹವಾಸ ಕುಂಡಲಿಯ
ವೃಜಿನವನು ಕಂಪಿತವ ವೈರಿ
ವ್ರಜವನುಳುಹುವನೆಗ್ಗ ನೆಂಬಿದು
ಸುಜನರಭಿಮತ ನಿನ್ನ ಮತವೇನೆಂದನಾ ಶಕುನಿ ೩೯

ಮಣಿದು ಕೂಪದ ಜೀವನವ ಕಡೆ
ಗಣಿಸದೇ ಘಟಯಂತ್ರ ಮೃಗರಿಪು
ಹಣಿಗಿದರೆ ಹರಿಣಂಗೆ ಗೆಲವೇ ಕಾರ್ಯಗತಿಯರಿದು
ಮಣಿವುದಳುಕುವುದಾವ ಪರಿಯಿಂ
ದೆಣಿಸಿ ಮನದಲಿ ವೆರಿ ರಾಯರ
ಹಣಿದವಾಡುವುಪಾಯವಿದು ಕೇಳೆಂದನಾ ಶಕುನಿ ೪೦

ಅಹಿಯ ಬಾಧೆಯ ಬಲೆಗೆ ಸಿಲುಕಿದ
ಮಿಹಿರ ಬಿಂಬದವೋಲು ಮಾಯಾ
ವಿಹರಣದ ವೀಥಿಯಲಿ ಸಿಕ್ಕಿದ ಜೀವರುಗಳಂತೆ
ಅಹಿತರುಪಟಳದೊಳಗೆ ಸಿಲುಕದೆ
ಕುಹಕರವದಿರ ಹರಿವ ನೆನೆ ಲೇ
ಸಹುದು ಕಾಲಕ್ಷೇಪವಿದಕೇನೆಂದನಾ ಶಕುನಿ ೪೧

ನಂಬುವರ ನೆರೆ ನಂಬು ನಂಬದ
ಡಂಬಕರ ನಂಬದಿರು ಸಂಗರ
ವೆಂಬ ಮಾತಿಗೆ ಹಂಬಲಿಸಿ ಬೆಂಬೀಳ್ವ ಬಾಹಿರರ
ನಂಬಿರದಿರರಿರಾಯ ಹನನ ವಿ
ಳಂಬನವ ಮಾಡದಿರು ರೋಷಾ
ಡಂಬರವ ರಚಿಸದಿರು ಬಹಿರಂಗದಲಿ ನೀನೆಂದ ೪೨

ಖೂಳನಹ ದಾತಾರನನು ದು
ರ್ಮೇಳನಹ ಮಿತ್ರನನು ತನಗನು
ಕೂಲೆಯಲ್ಲದ ಸತಿಯನಂತರ್ದಾಯಿಯಹ ನರನ
ವ್ಯಾಳಯುತವಹ ನಿಳಯವಿನಿತುವ
ಕಾಲದಲಿ ವರ್ಜಿಸುವುದಲ್ಲದೊ
ಡೂಳಿಗವು ಹಿರಿದಹುದು ಚಿತ್ತೈಸೆಂದನಾ ಶಕುನಿ ೪೩

ಎಲ್ಲರಿಂ ಬಹುಧನವ ಕೊಳು ನಿ
ನ್ನಲ್ಲಿ ಕಾಣೆಯ ಬರಿದೆ ಸೋಲದಿ
ರಿಲ್ಲವೆನ್ನದೆ ನುಡಿದು ಕಾಲಕ್ಷೇಪವನು ಮಾಡು
ಒಳ್ಳಿದನು ನಮಗೆಂಬ ನಯ ನುಡಿ
ಯೆಲ್ಲರಲಿ ಬೆಚ್ಚಂತೆ ರಿಪುಗಳ
ಗೆಲ್ಲಗೆಡಹುವ ಮಂತ್ರವಿದು ಕೇಳೆಂದನಾ ಶಕುನಿ ೪೪

ಧನವನಿತ್ತಾದೊಡೆಯು ಸಹ ಭೋ
ಜನವನುಂಡಾದೊಡೆಯು ಮೇಣ್ ನಿಜ
ತನುಜೆಯರನಿತ್ತಾದೊಡೆಯು ಬಳಿಸಂದು ಬೇಸರದೆ
ತನುವ ಬೆರಸಿದ್ದಾದೊಡೆಯು ನೂ
ತನಗಣವ ನುಡಿದಾದೊಡೆಯು ರಿಪು
ಜನಪತಿಯ ವಶಮಾಳ್ಪುದುಚಿತವಿದೆಂದನಾ ಶಕುನಿ ೪೫

ಕೋಶ ಪಾನಾದಿಗಳ ಮಾಡಿ ಮ
ಹೀಸುರರ ಮೇಲಾಯುಧಂಗಳ
ಸೂಸಿ ದೈವವ ಮುಟ್ಟಿ ದಿವ್ಯಾಜ್ಞೆಗಳಲೊಡಬಡಿಸಿ
ಹೇಸದರಿ ಭೂಪಾಲರನು ನಿ
ಶ್ಶೇಷವೆನಿಸುವುದಲ್ಲದಿರ್ದೊಡೆ
ಪೈಸರಿಸುವುದು ರಾಜಕಾರ್ಯವಿದೆಂದನಾ ಶಕುನಿ ೪೬

ನರಕವಿಲ್ಲದ ನರರು ನಾರಿಯ
ರುರುಬೆಯಿಲ್ಲದ ಯತಿಗಳಸುರರ
ವಿರಸವಿಲ್ಲದ ಸುರರು ಮಾಯಾಪಾಶವನು ಹರಿದ
ಪರಮ ತತ್ವಜ್ಞಾನಿವೊಲೀ
ಧರೆಯ ನರಪಾಲಕರುಗಳು ಹಗೆ
ಹರಿದು ಹೋಗಲಸಾಧ್ಯವಹುದೇನೆಂದನಾ ಶಕುನಿ ೪೭

ಮುಸಗೆ ಮೂಡಿದ ಹೊಲನು ದುಷ್ಟ
ಪ್ರಸರದೇಳಿಗೆ ಪಾಪಿಯೋಲಗ
ಹುಸಿಯ ಬಾಳುವೆ ಹುದುವಿನಾರಂಭದ ಫಲೋದಯವು
ನಸಿದು ಹೋಗದೆ ಲೋಕದೊಳಗವು
ಹೆಸರುವಡೆವವೆ ಹಗೆಯ ಹೆಚ್ಚುಗೆ
ಹಸನ ಕೊಡುವುದೆ ರಾಯ ಚಿತ್ತೈಸೆಂದನಾ ಶಕುನಿ ೪೮

ಜಾತಿ ಬಾವನ್ನದಲಿ ಸರ್ಪದ
ಭೀತಿ ಸತ್ಪುರುಷರಿಗೆ ದುರ್ಜನ
ಭೀತಿ ದೇವಾದ್ಯರಿಗೆ ದನುಜಾದಿಗಳ ಬಲು ಭೀತಿ
ಜಾತ ಮಾತ್ರಕೆ ಜನನ ಮರಣದ
ಭೀತಿ ಬೆಂಬಿಡದಂತೆ ಗೋತ್ರಜ
ಭೀತಿ ಭೂಪಾಲರಿಗೆ ಹಿರಿದಹುದೆಂದನಾ ಶಕುನಿ ೪೯

ಕರಣಿಕರು ಕರಣಿಕರೊಡನೆ ಸಹ
ಚರರು ಸಹಚರರೊಡನೆ ಸಾವಂ
ತರಲಿ ಸಾವಂತರುಗಳಾ ಮಂತ್ರಿಯಲಿ ಮಂತ್ರಿಗಳು
ತರುಣಿಯರು ತರುಣಿಯರೊಡನೆ ಪರಿ
ಕರರು ಪರಿಕರರೊಡನೆಯಿರಲೊರ
ಸೊರಸು ಮಿಗೆ ಮಸೆವುದು ಕಣಾ ಭೂಭುಜನೆ ಕೇಳೆಂದ ೫೦

ವ್ಯಾಕುಲಿತ ವಿಪ್ರರ ವಿಸತಿಯು ದಿ
ವಾಕರನ ಲೋಕಾಯತರ ರ
ತ್ನಾಕರನ ಲಾವಕರ ಹಿಸುಳರ ದಾಯಭಾಗಿಗಳ
ಶೋಕಿಗರ ಮಾಯಾವಿಗಳ ದ
ರ್ವೀಕರನ ವಿನಿಯೋಗಿಗಳ ಸ
ವೈಕ ಮತ್ಸರದೊಳಗೆ ಬದುಕುವನಾವ ಪೇಳೆಂದ ೫೧

ಮಂಜು ಮಹಿಯನು ಮುಸುಕುವಂತೆ ಧ
ನಂಜಯನು ಕಾನನವ ಸುಡುವಂ
ತಂಜಿಕೆಗಳುಮ್ಮಾಹವನು ಹೊಯ್ದೊರಸುವಂದದಲಿ
ರಂಜಕರು ಪಾಂಡವರು ನಿನ್ನನು
ಭಂಜಿಸುವರಾವಂಗದಲಿ ನವ
ಕುಂಜರನ ಕಾಲಾಟ ಸಿಂಹಕೆ ಸೇರುವುದೆಯೆಂದ ೫೨

ದನಿಗೆ ನಡೆದೊಳಪೊಕ್ಕು ಮರ ಗೂ
ಡಿನಲಿ ಸಿಲುಕಿದ ಹುಲಿಯವೋಲ್ ಕಾ
ನನದಿ ಬೀಸಿದ ಬಲೆಯೊಳಗೆ ಗಾನಕ್ಕೆ ಮನ ಸೋಲ್ದು
ಹನನವರಿಯದ ಮೃಗದವೋಲಿರು
ಬಿನಲಿ ಕೆಡಹಿದ ಕರಿಯವೋಲ್ ರಿಪು
ಜನಪರಭ್ಯುದಯದ ವಿನಾಶವನೆಸಗಬೇಕೆಂದ ೫೩

ಎಂದು ದುರ್ಯೋಧನೆಗಳ ನಾನಾ
ಚಂದದಲಿ ಬೋಧಿಸಿ ಸುನೀತಿಯ
ನಂದಗೆಡಿಸಿ ತದೀಯ ವಂಶಚ್ಛೇದ ಮಾರ್ಗವನು
ಒಂದುಗೂಡಿ ಸುಯೋಧನಂಗಾ
ನಂದವೆನಿಸಿ ಕಳಿಂಗ ಲೋಕವ
ಕೊಂದನೈ ಜನಮೇಜಯಾ ಕ್ಷಿತಿಪಾಲ ಕೇಳೆಂದ ೫೪

ಎಮ್ಮ ಬಹುಮಾನಾಪಮಾನವು
ನಿಮ್ಮದಲ್ಲದೆ ಬೇರೆ ನಮ್ಮಯ
ಸೊಮ್ಮು ಸಂಬಂಧದಲಿ ಹಿತವರ ಕಾಣೆ ನಾನಿನ್ನು
ಸಮ್ಮತದಿ ಪಾಂಡವರಿಗಗ್ನಿಯ
ಲೊಮ್ಮೆ ಹರಿವನು ನೆನೆಪನೊದವಿದ
ಡೆಮ್ಮ ಸುಕೃತೋದಯದ ಫಲವೆಂದನು ಸುಯೋಧನನು ೫೫

ಎನೆ ಕಳಿಂಗಾದಿಗಳು ತಂತ
ಮ್ಮನುಮತವ ಹೇಳಿದರು ಕೌರವ
ಜನಪನವರಿಗೆ ಕೇಡ ನಿಶ್ಚೈಸಿದನು ಮನದೊಳಗೆ
ಜನಕನಲ್ಲಿಗೆ ನಡುವಿರುಳು ಬಂ
ದನುನಯದೊಳೀ ಮಾತ ತೆಗೆದೆಂ
ದನು ವೃಕೋದರನೂಳಿಗವನರ್ಜುನನ ಸಾಹಸವ ೫೬

ಅರಿಗಳುದ್ಭವವಿನ್ನು ಗಂಟಲ
ನರಿವುದೆಮ್ಮನು ನೂರು ಮಕ್ಕಳ
ನರಸ ಬರಿದೇ ಹಡೆದು ಕೆಡಿಸಿದೆ ತಾಯ ಜವ್ವನವ
ಇರಲಿ ಭೀಮಾರ್ಜುನರು ಹಸ್ತಿನ
ಪುರದೊಳೆಮ್ಮನಿಬರನು ದೇಶಾಂ
ತರಕೆ ನೇಮಿಸು ಜೀಯ ನೂಕದು ಭೀಮನೊಡನೆಂದ ೫೭

ಅಕಟ ಮಗನೇ ಧರ್ಮಸುತ ಬಾ
ಧಕನೆ ಭೀಮಾರ್ಜುನರ ಮತಿ ಕಂ
ಟಕದೊಳೆರಗದು ಮೀರಿ ನಡೆಯರು ಧರ್ಮನಂದನನ
ಸಕಲ ರಾಜ್ಯಕೆ ಪಾಂಡುವೇ ಪಾ
ಲಕನು ತನ್ನೊಳು ತಪ್ಪಿದನೆ ಬಿಡು
ವಿಕಳ ಮತಿಗಳ ಮಾತನೆಂದನು ಮಗಗೆ ಧೃತರಾಷ್ಟ್ರ ೫೮

ಬೊಪ್ಪ ಬಿನ್ನಹವವರ ಜನಕನು
ತಪ್ಪಿ ನಡೆಯನು ನಿಮಗೆ ನೀವಿ
ನ್ನೊಪ್ಪಿಸುವುದಾ ಪಾಂಡುಸುತರಿಗೆ ರಾಜ್ಯ ವೈಭವವ
ಅಪ್ಪುದಿಳೆ ಧರ್ಮಜನ ತರುವಾ
ಯಪ್ಪುದಾ ವಿಧಿಯಲ್ಲಿ ಸಂತತಿ
ತಪ್ಪದವರಿಗೆ ಸಲಿಲ ನೆಲವಿದು ಹೊಲ್ಲೆಹೇನೆಂದ ೫೯

ಜನಪ ಸುಖದಲಿ ನಿಮ್ಮ ತಮ್ಮನ
ತನುಜರೊಡನೆಯು ರಾಜ್ಯ ಮಾಡುವು
ದನುನಯವಲಾ ಬೀಳುಕೊಡುವುದು ನಮ್ಮ ನೂರ್ವರನು
ಜನಪರುಂಟೋಲೈಸಿ ಕೊಂಬರೆ
ತನಗಿರದೆ ಖಂಡೆಯದ ಸಿರಿ ಕರೆ
ಜನನಿಯನು ಬೀಳ್ಕೊಂಬೆವಿನ್ನೇನೆಂದು ನಿಂದಿರ್ದ ೬೦

ಎಲೆ ಮಗನೆ ಎನ್ನಾಣೆ ಬಾ ಕುರು
ಕುಲತಿಲಕ ನೀ ಹೋಗಲೆನ್ನೊಡ
ಲುಳಿವುದೇ ಮರಿಯಾನೆ ಬಾರೈ ಕಂದ ಬಾಯೆಂದು
ಸೆಳೆದು ಬಿಗಿಯಪ್ಪಿದನು ಕಂಬನಿ
ದುಳುಕಿದನು ಹೇಳಿನ್ನು ಮೇಲಣ
ಬಳಕೆಯನು ರಿಪುರಾಜಕಾರ್ಯಕೆ ಬುದ್ಧಿಯೇನೆಂದ ೧೧

ನೀರ ವಿಷವಿಕ್ಕಿದೆವು ಕಿಚ್ಚಿನ
ಭಾರವಣೆಯೇಸಹುದೋ ಪುಣ್ಯವ
ಹೋರಿಸುವ ಒದಗಿದರೆ ಹೋಗಲಿ ನಮ್ಮ ಹಗೆ ಹರಿದು
ಓರಣಿಸಿತೈ ವೈರಿಗಳ ವಿ
ಸ್ತಾರ ಮರೆಯಲಿ ಜೀಯ ಜೂಜಿನ
ಬಾರುಗುತ್ತಿದು ನಿಮ್ಮ ಚಿತ್ತಕೆ ಬಹಡೆ ಮಾಡುವೆವು ೧೨

ಆವ ತೆರದಲಿ ವೈರಿ ಭಟಕುಲ
ದಾವಿಗೆಯನಿಡಿಸುವಿರಿ ನಿಮ್ಮೊಳ
ಗಾವು ಹೊರಗೇ ಮಗನೆ ಸೊಗಸೆನೆ ನಿಮ್ಮ ವೈಭವಕೆ
ಸಾವರಾಪಂದದಲಿ ಮಿಗೆ ಸಂ
ಭಾವಿಸುವುದಾ ತೆರನ ನೀ ಹೇ
ಳಾವು ಸೊಗಸುವೆವೆಂದು ನುಡಿದನು ಮಗಗೆ ಧೃತರಾಷ್ಟ್ರ ೧೩

ಕರೆಸಿ ಪಾಂಡುಕುಮಾರಕರ ನೀ
ಧರೆಯ ಹಸುಗೆಯ ಮಾಡಿ ಕೊಡು ಕರಿ
ತುರಗ ಭಂಡಾರವನು ಸಹ ದಾಯಾದ ವಿಷಯದಲಿ
ಇರವನವರಿಗೆ ವಾರಣಾವತಿ
ಪುರದೊಳಗೆ ಪರುಠವಿಸಿ ಕೊಡು ತಾ
ನುರುಹಿ ಸುಡುವೆನು ಬಳಿಕ ಲಾಕ್ಷಾಭವನ ರಚನೆಯಲಿ ೧೪

ಅಹುದು ಮಗನೇ ಮಂತ್ರವಿದು ಮತ
ವಹುದು ನಮಗೀ ಭೀಷ್ಮ ವಿದುರರು
ಕುಹಕಿಗಳು ಕೃತಭಿನ್ನವಾದರೆ ಭಾರವದು ಮೇಲೆ
ಗಹನ ಗತಿಯಲಿ ಗೂಢತರ ಸ
ನ್ನಿಹಿತ ಕರ್ಮ ಕಲಾಪದಲಿ ರಿಪು
ದಹನ ಸಿದ್ಧಿಯ ನೆನೆವುದೆಂದನು ಮಗಗೆ ಧೃತರಾಷ್ಟ್ರ ೧೫

ಜನಕನನು ಬೀಳ್ಕೊಂಡು ಕೌರವ
ಜನಪ ತನ್ನರಮನೆಯ ಸಚಿವರೊ
ಳನುಪಮಿತ ವಿಶ್ವಾಸ ಸೂಚಕನನು ಪುರೋಚನನ
ನೆನೆದ ಕೌರವ ರಾಜಕಾರ್ಯದ
ಘನವನರುಹಿ ಸಮಗ್ರ ಧನ ಸಾ
ಧನವ ಜೋಡಿಸಿ ಕೊಟ್ಟು ಕಳುಹಿದನವನ ಗುಪ್ತದಲಿ ೧೬

ಆ ಪುರೋಚನನೆಂಬವನು ಬಲು
ಪಾಪಕರ್ಮನು ಕುರುಪತಿಗೆ ಬಳಿ
ಕಾ ಪುರಾಂತರದಿಂದ ಬಂದನು ವಾರಣಾವತಿಗೆ
ಆ ಪುರದ ಜನವರಿಯದಂತಿರೆ
ಕಾಪುರುಷನಳವಡಿಸಿದನು ನಸು
ದೀಪ ತಾಗಿದೊಡೇಕರೂಪಹ ರಾಜಭವನವನು ೧೭

ನಿಗಮ ಸಂಸ್ಥಿತ ವಾಸ್ತು ರಚನಾ
ದಿಗಳನಾಯವ್ಯಯದ ತಾರಾ
ದಿಗಳ ರಾಶಿಗ್ರಹ ಬಲದ ವಿಪರೀತ ಯೋಗದಲಿ
ಹಗಲು ತೀರಲು ತಳಿತ ಕೈ ದೀ
ವಿಗೆಯ ಹಂತಿಯ ಬೆಡಗಿನಲಿ ಕೇ
ಡಿಗನು ಕೃತ್ರಿಮ ರಚನೆಯಲಿ ಮಾಡಿಸಿದನರಮನೆಯ ೧೮

ಅರಗಿನಲಿ ಭಿತ್ತಿಗಳ ನವ ಸ
ರ್ಜ್ಜರಸ ಗುಡಮಿಶ್ರದಲಿ ನೆಲೆಯು
ಪ್ಪರಿಗೆಗಳನವರಲಿ ಕವಾಟ ಸ್ತಂಭ ವೇದಿಗಳ
ವಿರಚಿಸಿದ ನವ ಸೌಧ ಭದ್ರಾ
ಸ್ತರಣ ನಂದ್ಯಾವರ್ತದಲಿ ಪರಿ
ಪರಿಯ ಬಿನ್ನಾಣದೊಳಗರಗಿನ ಮನೆಯ ಮಾಡಿಸಿದ ೧೯

ಹಿರಿಯ ಭವನದ ಸುತ್ತುವಳೆಯದ
ಮರುಹಿನಲಿ ಮನೆ ಮನೆಗಳಾ ಮಂ
ದಿರ ನಿಕಾಯಕೆ ಬಾಗಿಲೊಂದಾ ದ್ವಾರ ದೇಶದಲಿ
ಇರವು ತನ್ನದು ಬಾಗಿಲಿಕ್ಕಿದು
ಹೊರಗೆ ಮುದ್ರಿಸಿ ಕಿಚ್ಚ ಚುಚ್ಚುವ
ಪರುಠವಣೆಯಲಿ ಖಳ ಪುರೋಚನನಂದು ನಿರ್ಮಿಸಿದ ೨೦

ಧರಣಿಪತಿ ಕೇಳಿತ್ತ ಹಸ್ತಿನ
ಪುರದೊಳಗೆ ಕುಂತೀಕುಮಾರರ
ಕರೆಸಿ ಕಟ್ಟೇಕಾಂತದಲಿ ಧೃತರಾಷ್ಟ್ರ ಭೂಪಾಲ
ಬೆರಗು ಬಿನ್ನಾಣದಲಿ ಮಕ್ಕಳ
ಮರುಳ ಮಾಡಿದನೇನ ಹೇಳುವೆ
ನುರಿವನೆಯ ಬೀಡಾರದಲಿ ಬಿಡಿಸಲ್ಕೆ ಮನದಂದ ೨೧

ದುರುಳರೀ ಕೌರವರು ನೀವತಿ
ಗರುವರವದಿರು ಪಾಪ ಕರ್ಮರು
ಪರಮ ಪುಣ್ಯರು ನೀವು ತನ್ನವದಿರು ಕುಮಂತ್ರಿಗಳು
ಎರಳೆ ತೋಳನ ಸಾದು ಸುಣ್ಣದ
ನೆರವಿಗದುವಾವಗೆಯು ಸೇರುವೆ
ಯರಸ ನಿನ್ನೊಡನೆನ್ನ ಕುನ್ನಿಗಳೆನುತ ಬಿಸುಸುಯ್ದು ೨೨

ತಂದೆಯಿಲ್ಲದ ನಿಮಗೆ ಹಿತರಾ
ರೆಂದುಮರುಗುವೆನೆನ್ನ ಮಕ್ಕಳು
ಕೊಂದು ಹಿಂಡೆಯ ಕೂಳನುಂಬರೆ ಹೇಸುವವರಲ್ಲ
ಇಂದು ನಿಮಗವರಿಂದಲುಪಹತಿ
ಬಂದುದಾದರೆ ತನ್ನ ತಲೆಯಲಿ
ನಿಂದು ಹೊರೆವುದಕೀರ್ತಿ ಕಿಲ್ಬಿಷ ಮಗನೆ ಕೇಳೆಂದ ೨೩

ತಾತ ಕೆಡುವಿರಿ ನೀವು ತನಗ
ಖ್ಯಾತಿ ಕೌರವರೆಂಬುವರು ದು
ರ್ನೀತಿಕಾರರು ಭೀಷ್ಮ ವಿದುರರು ಭೀತರವದಿರಿಗೆ
ನೀತಿ ಸಮ್ಮತವಾಗಿ ಚಿತ್ತದೊ
ಳಾತ ಮತವನು ಹೇಳಿ ನಮ್ಮೊಳು
ಭೀತಿ ಬೇಡೆಂದರಸ ಹಿಡಿದನು ಧರ್ಮಜನ ಕರವ ೨೪

ಬೇರೆ ಮತವೆಮಗೇನು ಬೊಪ್ಪನ
ಚಾರಿ ನಿಮ್ಮದು ನೀವು ಬೊಪ್ಪನ
ನೂರು ಮಡಿಯೆಮಗೊಳ್ಳಿದರು ಬೇರಿನ್ನು ಹಿತರುಂಟೆ
ಬೇರಿರಿಸಿ ಕೊಡಿಸಿರಿ ನಿಮಗೆಯು
ತೋರಿದುದೆ ಮತ ನಿಮ್ಮ ನೇಮವ
ಮೀರ ಬಲ್ಲೆನೆಯೆಂದು ಧರ್ಮಜ ನುಡಿದನರಸಂಗೆ ೭೫

ಎರೆಯ ವಂಕಿಯೊ ಕಳಿತ ಮುಕ್ಕೆಯೊ
ಹುರಿಯ ಬಲೆಯೋ ರಾಗ ಸನ್ನೆಯೊ
ಸರಿಯ ಗೊರೆಯೋ ಠಕ್ಕಿನುಂಡೆಯೊ ಸವಿಯ ಚಿತ್ರಕವೊ
ಅರಸನಂಕೆಯು ಮನದ ಬಯಕೆಯು
ಹೊರೆಯ ಬಳಕೆಯನೀ ಸಮಂಜಸ
ತರದ ಸಾಕ್ಷಿಕರೆತ್ತ ಬಲ್ಲರು ಭೂಪ ಕೇಳೆಂದ ೭೬

ಕಂದ ಮನ ಮುನಿಸಿಲ್ಲಲೇ ನಾ
ವೆಂದ ನುಡಿಗೊಡಬಡುವಿರಾದೊಡೆ
ಮುಂದೆ ಪುರವಿದೆ ವಾರಣಾವತವಿಲ್ಲಿಗರುವತ್ತು
ಸಂದ ನಾಡು ಸಮಸ್ತ ವಸ್ತುಗ
ಳಿಂದ ಪೂರಿತ ಹಸ್ತಿನಾಪುರ
ದಿಂದ ಮಿಗಿಲದು ರಾಜಧಾನಿ ಸ್ಥಾನ ನಿಮಗೆಂದ ೭೭

ಹೈ ಹಸಾದ ಭವತ್ ಕೃಪಾ ಸ
ನ್ನಾಹವೇ ಸಾಮ್ರಾಜ್ಯವಾವುದ
ನೂಹಿಸಿದೊಡಾ ಸ್ಥಿತಿಯೊಳಡಗಿಹೆವೆಂದು ವಿನಯದಲಿ
ಗಾಹುಗತಕವನರಿಯದಿವರು
ತ್ಸಾಹದಲಿ ಕೈಕೊಂಡು ಭೀಷ್ಮಗೆ
ಬೇಹ ವಿದುರ ದ್ರೋಣ ಮುಖ್ಯರಿಗರುಹಿದರು ಹದನ ೭೮

ಧಾರುಣೀಪತಿ ರತ್ನಮಯ ಭಂ
ಡಾರ ಸಹಿತ ಗಜಾಶ್ವ ರಥ ಪರಿ
ವಾರವನು ಮಾಡಿದನು ಹಸಿಗೆಯನೆರಡು ಭಾಗವನು
ಕೌರವರಿಗೊಂದಿವರಿಗೊಂದೆನ
ಲೋರಣದಲಳವಡಿಸಿ ಬಹು ವಿ
ಸ್ತಾರದಲಿ ಭೀಷ್ಮಾದ್ಯರಹುದೆನಲಿವರ ಮನ್ನಿಸಿದ ೭೯

ಇವರು ಶುಭದಿನ ಶುಭಮುಹೂರ್ತ
ಪ್ರವರದಲಿ ಹೊರವಂಟರಾ ಜನ
ನಿವಹ ಮರುಗಿತರಣ್ಯವೇ ಗತಿಯರಸ ನಮಗೆಂದು
ಅವರ ಕಳುಹುತ ಬಂದರಾ ಕೌ
ರವರು ನಿಂದರು ಭೀಷ್ಮ ಕಲಶೋ
ದ್ಭವರು ಸುತರಿಗೆ ಬುದ್ಧಿ ಹೇಳಿದು ಮರಳಿದರು ಪುರಕೆ ೮೦

ವಿದುರನೊಡನೆ ತರುತ ಸಂಕೇ
ತದಲಿ ಸೂಚಿಸಿ ಮರಳಿದನು ನೃಪ
ಸುದತಿ ವರ ಗಾಂಧಾರಿ ಮೊದಲಾದಖಿಳ ರಾಣಿಯರು
ಮುದದ ಮುರುವಿನಲಿವರ ತೆಗೆದ
ಪ್ಪಿದರು ಭೂಪತಿ ಸಹಿತ ಕಡು ಶೋ
ಕದಲಿ ಕಳುಹಿಸಿಕೊಂಡು ಬಂದರು ಹಸ್ತಿನಾಪುರಕೆ ೮೧

ಅರಸ ಕೇಳೈ ಹಸ್ತಿನಾಪುರ
ವರವ ಹೊರವಡುವಾ ಮುಹೂರ್ತಕೆ
ವರುಷವಿಪ್ಪತ್ತೊಂಬತಾದುದು ಧರ್ಮನಂದನಗೆ
ವರುಷ ಹದಿಮೂರರಲಿ ಹಸ್ತಿನ
ಪುರದೊಳಿದ್ದರು ಹಿಂದೆ ಷೋಡಶ
ವರುಷ ವನದೊಳಗಿಂತು ಲೆಕ್ಕವ ನೋಡಿಕೋಯೆಂದ ೮೨

ಬಂದರೈವರು ಕುಂತಿ ಸಹಿತಾ
ನಂದದಲಿ ವರ ವಾರಣಾವತ
ಕಂದು ಪುರಜನ ಕೂಡಿ ಕನ್ನಡಿ ಕಲಶ ವಿಭವದಲಿ
ಬಂದು ತಾವಿದಿರಾಗಿ ಕುಂತೀ
ನಂದನರ ಹೊಗಿಸಿದರು ಪಟ್ಟಣ
ವಂದು ಮೆರೆದುದು ಕೂಡೆ ಗುಡಿತೋರಣದ ರಚನೆಯಲಿ ೮೩

ಬೀಡು ಕಾಣಿಕೆಯಿತ್ತು ಕಂಡುದು
ನಾಡೆ ಕಾಣಿಸಿದನು ಪುರೋಚನ
ಕೂಡೆ ಸಂದನು ಹಾಸು ಹೊಕ್ಕಾಗವರ ಮನವರಿದು
ನೋಡಿದನು ಯಮನಂದನನು ಮನೆ
ಮಾಡಿದಂದವನವರಗಿನರಮನೆ
ಗೂಡುರಿವ ಬೇಳುವೆಯ ನೆನೆದರೆ ಬೊಪ್ಪನವರೆಂದ ೮೪

ಸಮಿಧೆಗಳು ನಾವ್ ನಾಲ್ವರಯ್ಯನ
ರಮಣಿಯಾಹುತಿ ಭೀಮನೇ ಪಶು
ಕುಮತಿ ಕಟ್ಟಿಸಿದರಮನೆಯಗ್ನಿಕುಂಡವಿದು
ಎಮಗೆ ಸಂಶಯವಿಲ್ಲ ರಾಜೋ
ತ್ತಮನೊ ದುರ್ಯೋಧನನೊ ದೀಕ್ಷಾ
ಕ್ರಮವ ಧರಿಸಿದವನಾವನೆಂದನು ನಗುತ ಯಮಸೂನು ೮೫

ಜನಪ ಕೇಳೈ ವಿದುರನಟ್ಟಿದ
ಖನಕ ಬಂದನುಯಿವರ ಸಜ್ಜೆಯ
ಮನೆಯಲತಿ ಗುಪ್ತದಲಿ ನೆಲದೊಳು ಸವೆಸಿದನು ಪಥವ
ಅನುದಿನದೊಳಾ ಬಾಹಿರನು ಕಿ
ಚ್ಚಿನಲಿ ಚುಚ್ಚುವ ಸಂದುಗಟ್ಟನು
ನೆನೆವುತಿರ್ದನು ಖಳ ಪುರೋಚನನೊಡೆಯನಾಜ್ಞೆಯಲಿ ೮೬

ಒಂದು ದಿನ ಹಬ್ಬದಲಿ ಭೂಸುರ
ವೃಂದವುಂಡುದು ಪಂಚಪುತ್ರಿಕೆ
ಯೆಂದು ಬೇಡತಿಯೊಬ್ಬಳಿದ್ದಳು ಸುತರು ಸಹಿತಲ್ಲಿ
ಅಂದಿನಿರುಳು ಪುರೋಚನನು ತಾ
ನೊಂದ ನೆನೆದರೆ ದೈವಗತಿ ಬೇ
ರೊಂದ ನೆನೆದುದು ಕೇಳು ಜನಮೇಜಯ ಮಹೀಪಾಲ ೮೭

ಅವನು ನಿದ್ರೆಯೊಳರಿಯದಿರಲಾ
ಭವನ ಮುಖದಲಿ ಕಿಚ್ಚನೊಟ್ಟಿಸಿ
ಪವನಸುತ ಸಹಿತಿವರು ಹಾಯ್ದರು ಬಿಲದ ಮಾರ್ಗದಲಿ
ಅವರು ಬೆಂದರು ಮುನ್ನ ಬಳಿಕಾ
ಭವನ ಪಂಕ್ತಿಗಳುರಿದು ಕರಗಿದ
ವವನಿಯಲಿ ಹೊನಲಾಯ್ತು ಪುರಜನವೈದೆ ಬೆರಗಾಗೆ ೮೮

ಅಕಟ ಪಾಂಡವರಳಿದರೇ ಕೌ
ಳಿಕದಿ ಕೌರವರಿರಿದರೇ ಮತಿ
ವಿಕಳರವದಿರು ಬೆಂದು ಹೋದರು ಧರ್ಮದಲಿ ನಡೆದು
ಪ್ರಕಟ ಪಾಪರಿಗಹುದು ಸಾಮ್ರಾ
ಜ್ಯಕವು ಧರ್ಮಾತ್ಮರಿಗೆಯಿಾ ಪರಿ
ವಿಕಟತೆಯಸುರ ರಾಜ್ಯವೆಂದುದು ಪೌರಜನ ಮರುಗಿ ೮೯

ಮುನ್ನ ಬೆಂದನಲಾ ಪುರೋಚನ
ಕುನ್ನಿಯದು ಲೇಸಾಯ್ತು ಹದನಾ
ಪನ್ನರಾದರೆ ಅವ್ವೆಯರು ಸಹಿತಕಟ ಪಾಂಡವರು
ಇನ್ನು ಸುಡು ಸುಡು ಧರ್ಮ ಸಂಪ್ರತಿ
ಪನ್ನ ಗುಣದಾಚಾರಗಳ ಸಂ
ಪನ್ನತೆಯನೆಂದೊರಲಿ ಮರುಗಿತು ನಿಖಿಳ ಪರಿವಾರ ೯೦

ಒಗೆದುದೀ ಬೇಳಂಬ ಹಸ್ತಿನ
ನಗರಿಯಲಿ ತತ್ಪೌರಜನ ಮನ
ವುಗಿದು ಬಿದ್ದುದು ಶೋಕಮಯ ಸಾಗರದ ಮಧ್ಯದಲಿ
ಹೊಗೆದುದಾನನ ವಿದುರ ಭೀಷ್ಮಾ
ದಿಗಳಿಗಾ ಧೃತರಾಷ್ಟ್ರ ಸುತರಿಗೆ
ದುಗುಡ ದಡ್ಡಿಯ ಹರುಷ ಸಿರಿ ಹೊಕ್ಕಳು ಮುಖಾಂಬುಜವ ೯೧

ಬಂದುದಾ ಸುರನದಿಗೆ ಕೌರವ
ವೃಂದ ಪರಿಜನವೈದೆ ಶೋಕಿಸಿ
ಮಿಂದು ಗಂಗಾ ತೀರದಲಿ ಬಳಿಕೂರ್ಧ್ವ ದೇಹಿಕವ
ಸಂದ ವಿಧಿಯಲಿ ಮಾಡಿ ಪರಮಾ
ನಂದ ಮಿಗಲವರಿರ್ದರಿತ್ತಲು
ಇಂದುಕುಲ ಸಂಭವರ ವಿಧಿಯನು ಮತ್ತೆ ಕೇಳೆಂದ ೯೨

ಬಿಲಮುಖದೊಳುತ್ತರಿಸಿ ಬಲುಗ
ತ್ತಲೆಯೊಳಡವಿಯ ಮಾರ್ಗದಲಿ ಕಲು
ಮುಳುಗಳೊಳು ಕಾಪಥಕೆ ಕೋಮಲ ಚರಣಗಳ ಕೊಡುತ
ತೊಳಲಿದರು ಬೆಳಗಾಗೆ ಹಳ್ಳಿಯ
ಬಳಿಯ ಹೊದ್ದದೆ ಹಾಯ್ದು ಹೊಕ್ಕರು
ಹಳುವವನು ಬೆಳಗಡಗೆ ನಡೆದರು ಹಲವು ಯೋಜನವ ೯೩

ದಾಟಿದರು ಗಂಗೆಯನು ರಾಯನ
ಮಾಟದಲಿ ಹಲು ಮುರಿದುದೇ ನ
ಮ್ಮಾಟಕಿದು ಹಿರಿದಲ್ಲಲಾಯೆನುತೈವರಡಿಗಡಿಗೆ
ಕೋಟಲೆಯ ಕೊಲ್ಲಣಿಗೆಯಲಿ ಮೈ
ನೋಟಕಲಸದೆ ಬಿಸಿಲಲಿವರು ಮ
ಹಾಟವಿಯ ಮಧ್ಯವನು ಹೊಕ್ಕರು ನೃಪತಿ ಕೇಳೆಂದ ೯೪

## ಒಂಭತ್ತನೆಯ ಸಂಧಿ

ಸೂ. ಬೆಂಬಿಡದೆ ಕಲಿಭೀಮ ಹಿಡಿದು ಹಿ
ಡಿಂಬಕನ ಮುರಿದವನ ತಂಗಿ ಹಿ
ಡಿಂಬಿಯನು ಕೂಡಿದನು ಪಡೆದನು ಕಲಿ ಘಟೋತ್ಕಚನ

ಕೇಳು ಜನಮೇಜಯ ಧರಿತ್ರೀ
ಪಾಲ ಯಮನಂದನನ ಪಾರ್ಥನ
ಕಾಲೊಡೆದು ಬಸಿವರುಣ ಜಲದಲಿ ಬಟ್ಟೆ ಕೆಸರಾಯ್ತು
ಮೇಲೆ ಯಮಳರ ಕುಂತಿಯರನೇ
ವೇಳುವೆನು ಬೇಗದಲಿ ಕುರು ಭೂ
ಪಾಲ ಹಿಡಿಯಲಿ ಕೊಲಲೆನುತ ಕುಳ್ಳಿರ್ದರಡವಿಯಲಿ ೧

ಉರಿವ ಮನೆಯಲಿ ಸಾಯಲೀಯದೆ
ಸೆರಗ ಹಿಡಿದೆಳತಂದು ಕೊಯ್ದನು
ಕೊರಳನಕಟಾ ಭೀಮನೇ ಹಗೆಯೆಂದಳಾ ಕುಂತಿ
ಅರಸ ಹಿಡಿಯಲಿ ದಾನವರು ನಿಂ
ದಿರಿಕೆಯಲಿ ನುಂಗಲಿ ಕೃತಾರ್ಥರು
ಧರೆಯೊಳಾವೆಂದೊದರಿದರು ಮಾದ್ರೀ ಕುಮಾರಕರು ೨

ಸಾಕು ಸಾಕಾನಿರಲು ಹೆಕ್ಕಳ
ವೇಕೆ ಹೋ ಹೋಯೆನುತ ಹೊತ್ತನು
ನೂಕಿ ಹೆಗಲೆರಡರಲಿ ಕುಂತಿಯ ಧರ್ಮನಂದನನ
ಆ ಕಿರೀಟಿಯನೆಡದಲಾ ಮಾ
ದ್ರೀಕುಮಾರರ ಬಲದ ಬದಿಯೊಳ
ಗಾಕಿ ನಡೆದನು ಭೀಮನೊಡೆಹಾಯ್ದೊದೆದು ಕಲು ಮರನ ೩

ಬಂದನೀ ಪರಿ ಹಲವು ಯೋಜನ
ದಿಂದ ಹೇರಡವಿಯಲಿ ಬಳಲಿದೆ
ನೆಂದನೇ ನೀರಡಿಸಿದನೆ ಮೇಣ್ ನಿದ್ರೆಗೆಳಸಿದನೆ
ತಂದು ಕಾನನ ಮಧ್ಯದಲಿ ತರು
ವೃಂದದಡಿಯೊಳಗಿಳುಹಿ ಬಳಿಕರ
ವಿಂದದೆಲೆಯಲಿ ನೀರ ತಂದೆರೆದನು ಮಹೀಶರಿಗೆ ೪

ತಳಿರ ತರಿದೊಟ್ಟಿದನು ತರುವಿನ
ನೆಳಲೊಳಗೆ ವಿಶ್ರಮಿಸಿದರು ತನು
ಬಳಲಿಕೆಯ ಭಾರಣೆಯ ಕಡು ಜೋಡಿಸಿದ ಝೋಂಪಿನಲಿ
ಝಳಕೆ ಕಂದಿದ ಮೈಯ ಬಾಡಿದ
ಲಲಿತವದನದ ಮಾಸಿ ಕೆದರಿದ
ತಲೆಯೊಳಿರೆ ತನ್ನೈವರನು ಕಂಡಳಲಿದನು ಭೀಮ ೫

ತಾಯೆ ನೀ ದಿಟ ನಾಗ ನಗರಿಯ
ರಾಯನರಸಿಯೆ ನಿನ್ನ ಮಕ್ಕಳು
ರಾಯರೆದೆದಲ್ಲಣರೆ ಭಾರಿಯ ಬಾಹು ವಿಕ್ರಮರೆ
ಈಯವಸ್ಥೆಗೆ ಸೋಮವಂಶದ
ರಾಯತನವೆಂತಹುದು ಹೇಳಾ
ತಾಯೆ ಹೇಳೆನ್ನಾಣೆ ಹೇಳೆಂದಳಲಿದನು ಭೀಮ ೬

ಜನನಿಯಂಘ್ರಿಯನೊತ್ತಿ ಯಮ ನಂ
ದನನ ಚರಣವ ಮುರಿದು ಬಳಿಕ
ರ್ಜುನನ ಯಮಳರ ಪದವನೆಚ್ಚರದಂತೆ ಹಿಡಿಕಿಸುತ
ಅನಿಬರಿರವನು ನೋಡಿ ಪೂರ್ವವ
ನೆನೆದು ಬಿರಿದಳುತ ಘನ ಕಾ
ನನದ ಮಧ್ಯದಲೀತನಿದ್ದನು ಹಿರಿದು ಚಿಂತಿಸುತ ೭

ಓಕುವುದು ಬಲು ನಿದ್ರೆ ನಿದ್ರೆಯ
ನೂಕುವನು ಕಣ್ಣೆವೆಗಳಲಿ ನಸು
ತೂಕಡಿಕೆ ತೋರಿದೊಡೆ ಮೈಗೆದರುವನು ಕೈಯೊಡನೆ
ಸೋಕುವುದು ಮೈಮರವೆ ಮರವೆಯ
ನೋಕರಿಸುವುದು ಚಿತ್ತವೃತ್ತಿ ನಿ
ರಾಕುಲಾಂತಃಕರಣನಾದನು ಬಳಿಕ ಕಲಿಭೀಮ ೮

ವ್ಯಾಳ ಗಜ ಭೂದಾರ ವೃಕ ಶಾ
ರ್ದೂಲ ಸಿಂಹಾದಿಗಳ ಭಯವಾ
ಕೀಳ ದೈತ್ಯ ಪ್ರಕರ ಭಯವಹುದೆನ್ನ ಮರವೆಯಲಿ
ಹೇಳಲೇನವನಿನ್ನು ನಿದ್ರಾ
ವ್ಯಾಳ ವಿಷವನು ಮೊಗೆದು ಸೂಸಿ ವಿ
ಶಾಲ ಮತಿಯವಧಾನದಲಿ ಕಾದಿರ್ದನೈವರನು ೯

ಧರಣಿಪತಿ ಕೇಳೊಂದು ಮಾರಿಯ
ಮುರಿವನಿವರಿಗೆ ತದ್ವನಾಂತರ
ದರಸು ದೈತ್ಯ ಹಿಡಿಂಬನೆಂಬವನತುಲ ಭುಜಬಲನು
ಮುರಿಮುರಿದು ಮೇಗಾಳಿಯಲಿ ಮೂ
ಗರಳಿ ಮಾನವ ಗಂಧವಿದು ಗೋ
ಚರಿಸಿತೆತ್ತಣದೋ ಮಹಾದೇವೆನುತ ಬೆರಗಾದ ೧೦

ತಾಯೆ ಬಾರೌ ತಂಗಿ ಗಂಧದ
ವಾಯುವಿದೆ ಪೊಣೆಗಾರನಾಗಿ ನ
ವಾಯ ಭೋಜನವಿಂದು ದೊರಕಿತು ಮನುಜ ಮಾಂಸದಲಿ
ಸಾಯಲವದಿರ ಬಡಿದು ತಾ ತಮ
ಗಾಯವಿದು ಕೃತಪುಣ್ಯಫಲವೆನೆ
ಮಾಯಗಾತಿ ಹಸಾದವೆನುತ ಹಿಡಿಂಬಿ ಗಮಿಸಿದಳು ೧೧

ಬಂದಳವಳತಿ ರೌದ್ರರೂಪಿನೊ
ಳಂದು ಕಂಡಳು ದೂರದಲಿ ಹರಿ
ನಂದನನ ಸುಳಿದಲೆಯ ಕೆಮ್ಮೀಸೆಗಳ ಕರ್ಕಶದ
ಕೆಂದಳದ ಕೇಸರಿಯ ಕಂಗಳ
ಕುಂದ ರದನಚ್ಛವಿಯಲಿರೆ ಮನ
ಸಂದಳಾ ಖಳನನುಜೆ ಸೋತಳು ಭೀಮಸೇನಂಗೆ ೧೨

ಇವನ ರಮಣನ ಮಾಡಿಕೊಂಡೋ
ಡುವೆನು ವಿಪಿನಾಂತರಕೆ ಮುನಿದವ
ನಿವದಿರೈವರ ತಿನಲಿ ಮರದಡಿಯಲ್ಲಿ ಮಲಗಿದರ
ಇವನು ತನ್ನಯ ರೌದ್ರಮಯ ರೂ
ಪವನು ಕಂಡರೆ ಹೆದರುವನಲಾ
ಯುವತಿಯಹೆನೆಂದಸುರೆ ಸುಳಿದಳು ದಿವ್ಯರೂಪಿನಲಿ ೧೩

ಹೊಳೆವ ಕಂಗಳ ಕಾಂತಿ ಮರಗ
ತ್ತಲೆಯ ಮೊತ್ತವ ಬಿಗಿಯೆ ಮೈ ಪರಿ
ಮಳಕೆ ತೂಳುವ ತುಂಬಿಗಳ ತನುಲತೆಯ ಚೆಲುವಿಕೆಯ
ಲಲನೆ ಸುಳಿದಳು ಕುಚದ ಭಾರಕೆ
ಬಳುಕೆ ನಡು ಬಿಡದೊಲೆದು ಮೇಲುದು
ತಳೆಯೆ ಸುಳಿಗುರುಳೊಲೆಯಲಾ ಕಲಿ ಭೀಮನಿದಿರಿನಲಿ ೧೪

ಭೀಮ ನೋಡನು ನುಡಿಸನೊಯ್ಯನೆ
ತಾಮರಸಮುಖಿ ಹೊದ್ದಿದಳು ನಿ
ಸ್ಸೀಮನೈ ನೀನಾರು ಮಲಗಿದ ಮರ್ತ್ಯರಿವರಾರು
ಈ ಮಹಾರಣ್ಯದಲಿ ಬರವಿದು
ಕಾಮಿತವೆ ಕೋಮಲರಿಗೆನೆ ನಿ
ಷ್ಕಾಮ ಮನದಲಿ ಸತಿಯ ನುಡಿಸಿದನಾರು ನೀನೆಂದು ೧೫

ವನ ಹಿಡಿಂಬನದಾ ಹಿಡಿಂಬಕ
ನನುಜೆ ತಾನು ಹಿಡಿಂಬಿಯಿಾ ಕಾ
ನನವಿದೆಮ್ಮಾಶ್ರಮವಗಮ್ಯವು ದಿವಿಜ ಮನುಜರಿಗೆ
ನಿನಗೆ ಕಾಮಿಸಿ ಬಂದೆನಣ್ಣನು
ಮುನಿದೊಡಿವದಿರ ತಿನಲಿ ನೀನೇ
ಳೆನಗೆ ವಲ್ಲಭನಾಗು ಕೊಂಡೊಯ್ವೆನು ಹಿಮಾಚಲಕೆ ೧೬

ನಿನ್ನನೊಲ್ಲೆನು ಮುನಿದೆಯಾದಡೆ
ನಿನ್ನ ದೈತ್ಯನ ಕೊಂಡು ಬಾ ಹೋ
ಗೆನ್ನ ಬಲುಹನು ನೋಡು ನೀನೆನಲಸುರೆ ವಿನಯದಲಿ
ಮುನ್ನಲೇ ಮನುಮಥನ ಶರದಲಿ
ಖಿನ್ನೆಯಾಗಿಹೆ ಮರೆಯ ಹೊಕ್ಕೆನು
ತನ್ನನೀ ಪರಿ ಮುರಿದು ನುಡಿವರೆ ಎಂದಳಿಂದುಮುಖಿ ೧೭

ಅನುಜೆ ತಳುವಿದಳೆಂದು ರೋಷ
ಸ್ತನಿತ ಗದ್ಗದ ಕಂಠನೊದೆದೆ
ದ್ದನು ಮಹೀಮಂಡಲವನುಗ್ರಾಂಬಕನ ಡೊಂಬಿನಲಿ
ಅನಿಲಸುತನಿದಿರೆದ್ದನೀತನೆ
ದನುಜೆ ನಿನ್ನವನಾಯ್ತು ತಪ್ಪೇ
ನೆನುತೆ ಹಳಚಿದೊಡಾ ಹಿಡಿಂಬಕ ಜಡಿದು ಬೊಬ್ಬಿರಿದ ೧೮

ಒರಲಬೇಡವೊ ಕುನ್ನಿ ಮೆಲ್ಲನೆ
ತರುಬಿ ಕಾದುವುದೆಲವೊ ಮೈಮರೆ
ದೊರಗಿದವರೇಳ್ವರು ಕಣಾ ಸತ್ತಂತೆ ಸಾರೆನುತ
ತರುಬಿ ಹಿಡಿದಾ ಭೀಮ ಬೆನ್ನಿನೊ
ಳೆರಗಿದನು ಹೆಮ್ಮರಕೆ ಹಾಯಿದು
ಮುರಿದು ಹೊಯ್ದು ಹಿಡಿಂಬ ಕೊಡಹಿದನನಿಲನಂದನನ ೧೯

ಎದ್ದು ತಿವಿದನು ಖಳನ ಬದಿಯೊಳ
ಗದ್ದದೀತನ ಮುಷ್ಟಿ ಮುರಿದೊಡ
ನೆದ್ದು ನಿಮಿಷಕೆ ಸಂತವಿಸಿ ಹೆಮ್ಮರನ ಕೊಂಬಿನಲಿ
ಗೆದ್ದೆಯಿದ ಕೊಳ್ಳೆನುತ ಖಳನು
ಬ್ಬೆದ್ದು ಹೊಯ್ದರೆ ಮರ ಸಹಿತ ಹಿಡಿ
ದುದ್ದಿ ನೆಲದೊಳಗೊರಸಿ ಕೊಂದನು ಕಲಿ ಹಿಡಿಂಬಕನ ೨೦

ಕಳಕಳದೊಳಿವರೆದ್ದು ಯಿವಸತಿ
ಬಳಿ ಮಹಾದೇವಮ್ಮನೆಬ್ಬಿಸಿ
ಬಳಿಕ ಕಾದದೆ ತಮ್ಮ ಕೆಡಿಸಲು ಕಾಕ ಬಳಸಿದೆಲ
ಬಳಲಿದೆಮ್ಮನು ಹೊತ್ತು ತೊಳಲಿದ
ಬಳಲಿಕೆಯಲೀ ಕೇಡು ಲೇಸಾ
ಯ್ತುಳಿದೆ ಪುಣ್ಯವಿದೆಂದರಾ ಯಮನಂದನಾದಿಗಳು　　೨೧

ಖಳ ಮಡಿಯಲವನನುಜೆ ಭೀಮನ
ನೊಲಿಸಲರಿಯದೆ ಕುಂತಿಗೆಲ್ಲವ
ತಿಳುಹಿ ನುಡಿದಳು ತನ್ನ ಪೂರ್ವಾಪರದ ಸಂಗತಿಯ
ಹಲವು ಪರಿಯಲಿಯಿವರನವಳಂ
ಡಲೆದು ಭೀಮಗೆ ಹೇಳಿಸಿದಳಾ
ಫಲುಗುಣನ ಕೈಯಿಂದ ಧರ್ಮಜನಿಂದ ನುಡಿಸಿದಳು　　೨೨

ಆರು ನುಡಿಯಲು ಸರ್ವಥಾ ಖಳ
ನಾರಿಯನು ಕೈಕೊಳ್ಳೆನೆಂದೇ
ವೀರ ಬಲಿದನು ಬಳಿಕ ವೇದವ್ಯಾಸಮುನಿ ಬಂದು
ಸಾರ ನಯದಲಿ ತೋರಿ ತಿಳುಹಿ ಕು
ಮಾರ ಸಂಭವವವಧಿಯೆಂದಾ
ನಾರಿಯನು ಗಂಟಿಕ್ಕಿದನು ಮುನಿ ಭೀಮಸೇನಂಗೆ　　೨೩

ಎಲ್ಲಿ ಉಪವನ ವರಸರೋವರ
ವೆಲ್ಲಿ ಕೇಳೀ ಶೈಲ ಹಿಮಗೃಹ
ವೆಲ್ಲಿ ರಮ್ಯೋದ್ಯಾನವೆಲ್ಲಿ ವಿಹಾರ ವನಭೂಮಿ
ಅಲ್ಲಿಗಲ್ಲಿಗೆ ಹರಿದು ಮಾರುತಿ
ವಲ್ಲಭೆಯ ರಮಿಸಿದನು ಚೌಪಟ
ಮಲ್ಲ ಜನಿಸಿದ ಕಲಿ ಘಟೋತ್ಕಚನಾ ಹಿಡಿಂಬಿಯಲಿ　　೨೪

ನುಡಿದ ಸಮಯಕೆ ತನ್ನ ರಮಣಿಯ
ನೊಡಬಡಿಸಿ ಹೈಡಿಂಬ ರಾಜ್ಯದ
ವೊಡೆತನವ ನೆರೆ ಮಾಡಿ ನಿಲಿಸಿದನಾ ಘಟೋತ್ಕಚನ
ನಡೆದು ಬಂದರು ಶಾಲಿಹೋತ್ರನ
ನಡುವೆ ಕಂಡುಪಚರಿಸಿ ಕೊಂಡರು
ಪಡುವಲಭಿಮುಖರಾದರನಿಬರು ವಿಪ್ರವೇಷದಲಿ　　೨೫

## ಹತ್ತನೆಯ ಸಂಧಿ

ಸೂ. ವಿಕಟ ಭುಜಬಲರೇಕಚಕ್ರದೊ
ಳಕುಟಿಲರು ಭೂಸುರರ ರಕ್ಷಿಸಿ
ಬಕನ ಮುರಿದರು ಮೆರೆದರಮಲ ಗುಣಾಗ್ರಹಾರದಲಿ

ಕೇಳು ಜನಮೇಜಯ ಮಹೀಪತಿ
ಶಾಲಿಹೋತ್ರಾಶ್ರಮವನನಿಬರು
ಬೀಳುಕೊಂಡರು ಮತ್ತೆ ಕಂಡರು ಬಾದರಾಯಣನ
ಹೇಳಿದನು ನಿಮಗೇಕಚಕ್ರ ವಿ
ಶಾಲಪುರದೊಳಗಾರು ತಿಂಗಳು
ಕಾಲ ಸವೆಯಲಿ ಬಳಿಕ ಬಳಸುವಿರುತ್ತರೋತ್ತರವ　　೧

ಎಂದು ಮುನಿ ತಿರುಗಿದನು ಕುಂತೀ
ನಂದನರು ಸುಕ್ಷಾತ್ರ ತೇಜೋ
ವೃಂದವನು ಮುಸುಕಿದರು ವಿಮಲ ಬ್ರಹ್ಮ ರಶ್ಮಿಯಲಿ
ಅಂದವೇರಿದ ಗಡ್ಡ ದರ್ಭೆಗ
ಳಿಂದ ನೆರಿಯುಡಿಗೆಗಳ ನಾಟಕ
ದಿಂದ ಮಟ್ಟಿಯ ಧಟ್ಟು ನೊಸಲಲಿ ದೇಶಿ ಪರಿ ಮೆರೆಯೆ　　೨

ಅವನಿಪತಿ ಕೇಳೇಕಚಕ್ರವ
ನಿವರು ಹೊಕ್ಕರು ವಿಪ್ರನೊಬ್ಬನ
ಭವನದಲಿ ಮಾಡಿದರು ಬೀಡಾರವನು ವಿನಯದಲಿ
ಇವರು ಯಾಚಕ ವಿಷಯದಾತಿ
ಥ್ಯವನು ಕೈಕೊಂಡಲ್ಲಿ ಕತಿಪಯ
ದಿವಸವನು ನೂಕಿದರು ಭಿಕ್ಷಾ ವಿಹಿತ ವೃತ್ತಿಯಲಿ　　೩

ತಂದ ಭಿಕ್ಷಾಶನವನೈವರು
ನಂದನರು ತಾಯಿಗೆ ನಿವೇದಿಸ
ಲಿಂದುಮುಖಿ ಭಾಗದ್ವಯವ ಸಾನಂದದಲಿ ಮಾಡಿ
ಒಂದು ಭಾಗ ವೃಕೋದರಂಗುಳಿ
ದೊಂದು ಭಾಗವ ತಾನು ನಾಲ್ವರು
ನಂದನರು ವಿನಿಯೋಗಿಸುವರವನೀಶ ಕೇಳೆಂದ　　೪

ಸಿರಿಯ ಹೇಳ್ವರೆ ಹಸ್ತಿನಾಪುರ
ದರಸುಗಳ ಸಂತಾನ ಶೌರ್ಯದ
ಪರಿಯ ನೋಳ್ಪರೆ ಶಕ್ರ ಸೂರ್ಯರ ತೇಜಕುರೆ ಮಿಗಿಲು
ತಿರಿದ ಕೂಳನು ತಾಯಿ ಹಸುಗೆಯ
ಲೆರಡು ಭಾಗವ ಮಾಡಿ ಮಕ್ಕಳ
ಹೊರೆದಳಿನ್ನುಳಿದವರ ಪಾಡೇನರಸ ಕೇಳೆಂದ　　೫

ಉದಯವಾಗದ ಮುನ್ನ ಸುಬ್ರಾ
ಹ್ಮ್ಯದ ಮುಹೂರ್ತದಲೆದ್ದು ಜನನಿಯ
ಪದಯುಗಕ್ಕಭಿನಮಿಸಿ ಸಂಧ್ಯಾಮಠಕೆ ನಡೆತಂದು
ವಿದಿತ ಸಂಧ್ಯೋಪಾಸ್ತಿ ಜಪ ನಿಯ
ಮದ ಪುರಾಣಶ್ರವಣ ಮಧ್ಯಾ
ಹ್ನದಲಿ ಭಿಕ್ಷಾಟನಗಳಿವರಿಗೆ ನಿತ್ಯ ವಿಧಿಯೆಂದ　　೬

ಭೋಜನೋತ್ತರ ವೇಳೆಯಲಿ ನೃಪ
ರಾಜವಾರ್ತಾ ಕಥನದಿಂದ ಮ
ಹಾಜನಂಗಳೊಳಾಡುತಿರ್ದರು ನಿಜವಿನೋದದಲಿ
ರಾಜತನವನು ಮರೆದರಾ ದ್ವಿಜ
ರಾಜತೇಜದಿ ಮೆರೆದರಾ ನರ
ರಾಜರಾಜರ ನೀತಿಯಿದು ಭೂಪಾಲ ಕೇಳೆಂದ　　೭

ಇರಲಿರಲು ಮಾಸಾಂತರದಲಾ
ನೆರೆಮನೆಯ ಶೋಕಾರ್ತ ರವದ
ಬ್ಬರವ ಕೇಳಿದು ಕುಂತಿ ಸಾಯಂಕಾಲ ಸಮಯದಲಿ
ಭರದಿನೈತಂದಕಟ ಭೂಸುರ
ವರ ನಿರೋಧವಿದೇನು ದುಃಖೋ
ತ್ಕರುಷವಾಕಸ್ಮಿಕವದೆಂದಳು ಕುಂತಿ ವಿನಯದಲಿ ೮

ನಾಳೆ ವೈವಾಹೋತ್ಸವದ ದೆ
ಖ್ಖಾಳವಿದು ಪೊಡಲೀ ವಸಂತದ
ಬಾಲಿಕೆಯರೋಕುಳಿಯ ಮಳೆಯಲಿ ಸಿಡಿಲು ಸುಳಿದುದೆನೆ
ಹೇಳಿರೇ ನಿಮಗಾದವಸ್ಥೆಯ
ಕೇಳಲಾಗದೆಯೆನಲು ದ್ವಿಜನಿದ
ಕೇಳಿ ಫಲವೇನವ್ವಯೆಂದನು ಸುಯ್ದು ದುಗುಡದಲಿ ೯

ಹೇಳಬೇಹುದು ತನ್ನನಿಷ್ಟವ
ನಾಳಿಗೊಳ್ಳದ ಸುಜನ ನಿಕರಕೆ
ಕೇಳಬೇಹುದು ದೀನರಹ ವಿಪ್ರೇಂದ್ರರುಪಹತಿಯ
ಹೇಳು ನೀನೆಲೆ ವಿಪ್ರ ತಾನಿದ
ಕೇಳಿ ದುಃಖಿತೆಯಾಗಲಾಗದೆ
ಹೇಳ್ "ನ ದುಃಖಂ ಪಂಚಭಿಸ್ಸಹ" ವೆನ್ನದೇ ವಚನ ೧೦

ತಾಯೆ ಕೇಳೀ ವಿಪ್ರಪುರದೊಳ
ಗಾಯವುಂಟೆನಗೆಂದು ರಕ್ಕಸ
ನಾಯಿ ನೆಲಸಿಹನೂರ ಹೊರಗಣ ಶೈಲಶಿಖರದಲಿ
ಆಯಿದೊಬ್ಬನ ಮನೆಮನೆಗೆ ಮೇ
ಲಾಯಿ ಮಹಿಷದ್ವಯ ಸಹಿತ ನಿ
ರ್ದಾಯದಲಿ ಹನ್ನೆರಡು ಕಂಡುಗದಕ್ಕಿಯೋಗರವ ೧೧

ಇನಿತುವನು ಮನೆಮನೆಗೆ ಬಾರಿಯ
ದಿನಕೆ ತೆತ್ತಡೆ ತುಷ್ಟನಿಲ್ಲದ
ದಿನಕೆ ನುಂಗುವನೂರನೀ ಪರಿ ಹಲವು ಕಾಲದಲಿ
ಎನಗೆ ಬಂದುದು ತಾಯೆ ನಾಳಿನ
ದಿನದ ಬಾರಿಯಿದಕ್ಕೆ ತನ್ನಯ
ತನುಜ ತಾನುಳಿದಂತೆ ಮಾನಿಸರಿಲ್ಲ ತನಗೆಂದ ೧೨

ಮಗನನೀವೆನೆ ಪಾರಲೌಕಿಕ
ವಗಡಹುದಪಖ್ಯಾತಿ ತನ್ನನು
ತಗುಹುದೈಹಿಕದಲ್ಲಿ ಬಳಿಕೀ ಸಂತತಿಚ್ಛೇದ
ಬಗೆಯದೆನ್ನೊಡಲಸುರ ಘಾತಿಗೆ
ಮಿಗೆ ವಿಭಾಡಿಸಿ ಕೊಡುವೆನೆಂದೆನೆ
ನಗುತೆ ಕುಂತೀದೇವಿ ನುಡಿದಳು ವಿಪ್ರ ಕೇಳೆಂದು ೧೩

ಐಸಲೇ ನಿಮಗಾದ ಗಸಣಿಯಿ
ದೇಸರಾಪತ್ತಂಜಬೇಡ ಮ
ಹಾಸುರನ ಬಾಣಸದ ಬೀಯಕೆ ರಪಣವುಂಟೆಮಗೆ
ಐಸು ಕಂಡುಗದಕ್ಕಿಯೋಗರ
ವೈಸ ನೀನಳವಡಿಸು ಮೇಲುಂ
ಟೈಸು ಸಾಧನವನಿತುವನು ತೆಗೆಸೆಂದಳಾ ಕುಂತಿ ೧೪

ತಿರುಗಿ ನಿಮ್ಮೂರೊಳಗೆ ಕೊಳನು
ತಿರಿದು ಸಲಹುವೆನೆನ್ನ ಮಕ್ಕಳು
ಧರೆಯನಾಳುವ ಸತ್ವ ಸಹಸಿಗಳಿದ್ದು ಫಲವೇನು
ಹೊರೆಯಲರಿಯೆನು ದುರುಳನೆರಡೆಂ
ಟರಿಯನದರೊಳಗೊಬ್ಬನುದರಕೆ
ನೆರಹಲಾರೆನು ಕೊಳನೆಂದಳು ಕುಂತಿ ನಸುನಗುತ ೧೫

ಸಾಕಲಾರೆನು ಮಗನನಾತನ
ನೂಕುವೆನು ನಿಮ್ಮಸುರನೂಟಕೆ
ಸಾಕು ತನಗುಳಿದವರೆನಲ್ ದ್ವಿಜನದಕೆ ಬೆರಗಾಗಿ
ಸಾಕಲಾರದೆ ಮಗನನುರಿಯಲಿ
ನೂಕಿದವರುಂಟೆ ಮಹಾಸತಿ
ಯಾಕೆವಾಳತನಕ್ಕೆ ನಮಿಸಿದೆನೆನುತ ಕೈಮುಗಿದ ೧೬

ಮರುಳಲಾ ಬ್ರಾಹ್ಮಣ ವೃಥಾ ವಿ
ಸ್ತರಣ ವಾಕ್ಯವೆ ತನ್ನ ನುಡಿ ಸಂ
ವರಿಸು ಬಂಡಿಯ ನಡೆಸು ಭಕ್ಷ್ಯವ ಸೂಪದಂಶಕವ
ತರಿಸು ತುಪ್ಪದ ಕೊಡನನೊದವಿಸು
ಹರವಿಗಳ ಪಾಲ್ಮೊಸರನೆನೆ ಭೂ
ಸುರನು ಕುಂತಿಗೆ ಕೈಯ ಮುಗಿದನು ತಾಯೆ ಬೇಡೆನುತ ೧೭

ಏರವು ಮುಯಿಮುಟ್ಟುಂಟು ವಸ್ತೂ
ತ್ಕರದೊಳಗೆ ಭಾವಿಸಲು ಮಕ್ಕಳ
ನೆರವ ಕೊಟ್ಟವರುಂಟೆ ಮಾರಿಯ ನಾಲಿಗೆಯ ಸವಿಗೆ
ನೆರವಿ ನಗದೇ ನಮ್ಮನಿಹಪರ
ವೆರಡರಲಿ ಕೇಳಹುದು ಕಷ್ಟವು
ಗರುವೆಯಹುದೌ ತಾಯಿ ನೀ ದಿಟ ಮನುಜೆಯಲ್ಲೆಂದ ೧೮

ಏನನಿತ್ತು ದಧೀಚಿ ಲೋಗರ
ಹಾನಿಯನು ಕಾಯಿದನು ಶಿಬಿ ತಾ
ನೇನನಿತ್ತನು ಕೇಳಿದೈ ಜೀಮೂತವಾಹನನು
ಏನ ಮಾಡಿದನೆಂದು ನೀನಿದ
ನೇನುವನು ಕೇಳ್ದರಿಯಲಾ ಮ
ತ್ತೂನುವನು ನಿನ್ನವಸರಕೆ ಕೊಳ್ಳೆಂದಳಾ ಕುಂತಿ ೧೯

ಆವನರ್ಥ ಪರಾರ್ಥದಲಿ ಸಂ
ಜೀವನಿಯನೈದಿತು ಪರಾರ್ಥದೊ
ಳಾವನಸು ನಿರ್ವಾಣಮಾದುದು ಲೋಕ ಮೂರರಲಿ
ಆ ವಿರಿಂಚಿ ಪುರಂದರಾದಿಯ
ದೇವ ತತಿಗಿವರಿಬ್ಬರೇ ಸಂ
ಭಾವನೀಯರು ಕೇಳು ಭೂಸುರಯೆಂದಳಾ ಕುಂತಿ ೨೦

ಬಲುಹಿನಲಿ ಭೂಸುರನ ಚಿತ್ತವ
ತಿಳುಹಿ ಬಂದಳು ಮನೆಗೆ ಭೀಮನ
ಕೆಲಕೆ ಕರೆದಳು ಹೇಳಿದಳು ಹೇರಾಳದೌತಣವ
ಉಲಿದು ಮುದದಲಿ ಭೀಮ ಬಾಹ
ಪ್ಪಳಿಸಿದನು ಯಮನಂದನಾದಿಗ
ಳಳಲಿ ನುಡಿದರು ದೈತ್ಯಜಯ ಸಂಶಯದ ಭೇದದಲಿ ೨೧

ಮರುಳುಗಳು ನೀವೆಂದವರ ಚ
ಪ್ಪರಿಸಿದನು ಕಲಿಭೀಮನಾ ನಡು
ವಿರುಳು ತೊಡಗಿತು ವಿಪ್ರ ಭವನದ ಪಾಕಮಯ ರಭಸ
ಹೊರೆದಳೆನ್ನನು ತಾಯಿ ಕುಂತಿಯು
ಹರಸುವೆನು ಪಾರಣೆಯ ಹೊತ್ತಿನೊ
ಳರಸು ನಾಳಿನೊಳಾನೆನುತ ಹಿಗ್ಗಿದನು ಕಲಿಭೀಮ ೨೨

ಪರಿಪರಿಯ ಬಹುಭಕ್ಷ್ಯ ಪಾಕದ
ಪರಿಮಳದ ಶಾಕಾದಿಗಳ ವ್ಯಾ
ಗ್ರರಣೆಗಳ ಸೌರಭಕೆ ತಿಳಿದುದು ನಿದ್ರೆ ಪವನಜನ
ತರಣಿ ಸುಳಿದನು ಪೂರ್ವ ಶೈಲದ
ಶಿರದ ಬಳಿಯಲಿ ಭೀಮ ಕುಂತಿಯು
ಕರೆದು ಕಳುಹಿದನಾ ಮಹೀಸುರ ಗೃಹಕೆ ವಹಿಲದಲಿ ೨೩

ಏನು ಬಂದಿರಿ ತಾಯೆ ಚಾಪಳ
ವೇನೆನಲು ತೆಗೆ ಹೂಡು ಬಂಡಿಯ
ನೇನು ಜಂಜಡ ಬೇಡ ಭಕ್ಷ್ಯವ ಹಿಡಿಸು ಕುನಿಕಿಲಲಿ
ಭಾನುವುದಿಸಿದನೆನಲು ಘನ ಸು
ಮ್ನಾನದಲಿ ಸಾಧನ ಸಮಗ್ರವ
ಸೂನು ಸಹಿತಡಕಿದನು ಭಾರಿಯ ಬಂಡಿ ಜವ ಜಡಿಯೆ ೨೪

ನಳನಳಿಪ ಬಹುವಿಧದ ಭಕ್ಷ್ಯಾ
ವಳಿಯ ಹೆಡೆಗೆಗಳೋರಣಿಸಿಮಂ
ಡಳಿಸಿ ಕೂಡಿದ ಹಾಲು ತುಪ್ಪದ ಹಲವು ಹರವಿಗಳ
ಬಳಸಿ ಮುಚ್ಚಿದ ವಿವಿಧ ಶಾಕಾ
ವಳಿಯ ಬೋನದ ಬಿಗಿದ ಕುನಿಕಿಲ
ಕಳವೆಯಕ್ಕಿಯ ಕೂಳ ರಾಶಿಯ ಬಂಡಿ ಜೋಡಿಸಿತು ೨೫

ಮರಳಿ ಬಂದಳು ಕುಂತಿ ಭೀಮನ
ಕರೆದಳೇಳೈ ಪಾರಣೆಗೆ ಕಾ
ತರಿಸದಿರು ಖಳನೊಡನೆ ಸದೆವುದು ಸತ್ವದನುವರಿದು
ಬರವ ಬರಿದೇ ಬೀಯ ಮಾಡದಿ
ರುರವಣೆಯನರಿದಾನುವುದು ಸಂ
ಹರಿಸು ದೈತ್ಯನನೆಂದು ತಾಯ್ ಹರಸಿದಳು ನಂದನನ ೨೬

ಬೆರಳ ದರ್ಭೆಯ ಹರಿದು ಧೌತಾಂ
ಬರವನುಟ್ಟನು ಬಿಗಿದು ಕುಂತಿಯ
ಚರಣ ರಜವನು ಕೊಂಡು ಧರ್ಮಜನಂಘ್ರಿಗಭಿನಮಿಸಿ
ಹರುಷ ಮಿಗೆ ಹರಿತಂದು ಬಂಡಿಯ
ಶಿರದ ಹಲಗೆಯನಡರಿದನು ಬಲು
ಹುರಿಯ ಹಗ್ಗವ ಹಿಡಿದು ಜಡಿದನು ಹೂಡಿದೆತ್ತುಗಳ ೨೭

ಪುರದೊಳಗೆ ಭಿಕ್ಷಾನ್ನದಿಂದೈ
ವರು ಮಹಾಪಂಡಿತರು ನಿರ್ಧನ
ಪುರುಷರವರೊಳಗೊಬ್ಬನನು ನಮ್ಮೂರ ದಾನವನ
ಪರಿವಿಡಿಯ ಭೋಜನಕೆ ತದ್ಭೂ
ಸುರನ ತಾಯ್ಕೊಟ್ಟಳು ಗಡೇನ
ಚ್ಚರಿಯೆನುತ ಪವನಜನ ಮುತ್ತಿತು ನೋಟಕರ ನೆರವಿ ೨೮

ಪೌರ ಜನವೈತರಲು ಬಂಡಿಯ
ನೂರ ಹೊರವಂಡಿಸಿದನೆಲ್ಲರು
ದೂರದಲ್ಲಿರಿ ಸಾವವನೆ ತಾ ಸಾಕು ದೈತ್ಯನಲಿ
ಸಾರಿ ನೀವೆಂದೆನುತ ಹೂಡಿದ
ಹೋರಿಗಳ ಹೊಯ್ದುಬ್ಬರಿಸಿ ರಣ
ಧೀರ ಮಾರುತಿ ಮಿಕ್ಕು ಹರಿಸಿದನಸುರನಿದ್ದೆಡೆಗೆ ೨೯

ಎಡೆಯಲೇ ಭಕ್ಷ್ಯಾದಿಗಳ ಬರಿ
ಹೆಡೆಗೆಯುಳಿದವು ಕೂಳೊಳರ್ಧವ
ಹೊಡೆದು ಸುರಿದನು ಹಾಲುತುಪ್ಪದ ಹರವಿಯೋಜೆಯಲಿ
ಕುಡಿದು ಪಕ್ಕಲೆ ನೀರನೊಯ್ಯನೆ
ನಡೆಸಿ ತಂದನು ಕಂಡು ದನುಜನ
ನುಡಿದನೆಲವೋ ಕುನ್ನಿ ಕೂಳಿದೆ ತಿನ್ನು ಬಾರೆನುತ ೩೦

ಕಂಡು ಖಳ ಬೆರಗಾದನಿವನು
ದ್ದಂಡತನವಚ್ಚರಿಯಲಾ ಹರಿ
ಖಂಡಪರಶುಗಳಳುಕುವರು ತನ್ನೊಡನೆ ತೊಡಕುವರೆ
ಬಂಡಿ ತುಂಬಿದ ಕೂಳ ನಿವನಿಂ
ದುಂಡು ಬದುಕಲಿ ಊರ ಪಾರ್ವರ
ಹಿಂಡುವೆನುಯಿವ ಸಹಿತೆನುತ ಹಲು ಮೊರೆದನಮರಾರಿ ೩೧

ಮತ್ತೆ ಶೇಷಾನ್ನದಲಿ ತೋರುತ
ತುತ್ತುಗಳ ತೂಗುತ್ತ ಮಾರುತಿ
ಮೆತ್ತಿಕೊಂಡನು ಬಾಯೊಳವನನು ಬೆರಳಲೇಡಿಸುತ
ಇತ್ತಲೆನಯ ಹಸಿವು ಹೆಚ್ಚಿದೆ
ತುತ್ತು ಹೊಗದೊಳಗಿವನ ತೊಡಗಲ
ದೆತ್ತಲಕಟಾ ವಿಧಿಯೆನುತ ಮುರಿದೆದ್ದನಮರಾರಿ ೩೨

ಎರಡು ಕೈಯನು ಬಲಿದು ಮುಷ್ಟಿಯೊ
ಳೆರಗಿದನು ಖಳ ಬೆನ್ನನೇನಂ
ದರಿಯನಿತ್ತಲು ಭೀಮ ಬಲುದುತ್ತುಗಳ ತೋಟಿಯಲಿ
ಮರನ ಮುರಿದೆರಗಿದರೆ ಪುನರಪಿ
ಮುರಿದು ನೋಡಿದು ಬಹೆನು ನಿಲ್ಲೆನು
ತರೆಗೆಲಸ ಪೂರೈಸಲೆಂದನು ನಗುತ ಕಲಿಭೀಮ ೩೩

ಅರಸ ಕೇಳೈ ನಿಮ್ಮ ಭೀಮನ
ಪರಿಯನಾ ಪರಿ ಬಂಡಿ ತುಂಬಿದ
ಸರಕನೆಲ್ಲವ ಸಂತವಿಟ್ಟನು ತನ್ನ ಜಠರದಲಿ
ವರ ಸಮಾಧಾನದಲಿ ಕೈದೊಳೆ
ದುರವಣಿಪ ತೇಗಿನ ತರಂಗದ
ಪರಬಲಾಂತಕನೆದ್ದು ನಿಂದನು ಸಿಂಹನಾದದಲಿ ೩೪

ಉಂಡೆವೈ ಸಮಚಿತ್ತದಲಿ ನೀವ್
ಕೊಂಡಿರೈ ಘಾಯಗಳನೆಡೆಯಲಿ
ಹಿಂಡುವಿರಲೈ ನಾವು ಸಹಿತೀ ಊರ ಹಾರುವರ
ಉಂಡೆವೈ ಹಲ ಕಾಲಕಿಂದಿನ
ಲುಂಡದೂಟ ಕಣಾ ನಿಧಾನವು
ಖಂಡಪರಶುವಿನಾಣೆನುತ ಮದವೇರಿದನು ಭೀಮ ೩೫

ಪಾತಿಗೊಳ್ಳದ ಮುನ್ನ ಪವನಜ
ನೋತು ಕೊಟ್ಟನು ತನ್ನ ಹೊಯ್ಗಳ
ನಾತನೀತನು ಮುಳಿದು ಬಳಿಕಿವನೇನ ಮಾಡುವನೊ
ಈತನೆದ್ದನು ಗಜರಿ ಬಳಿಕಿನೊ
ಳಾತನಿದಿರಾದನು ಸುರಾರಿಯು
ವಾತಜನ ಹೋರಟೆಗೆ ಕೊರಳಳುಕಿದುದು ವಾಸುಕಿಯ ೩೬

ಹಿಡಿದರೊಬ್ಬರನೊಬ್ಬರುರದಲಿ
ಹೊಡೆದು ಓಂಗಿದರುಲಿದು ಹೆಮ್ಮರ
ನುಡಿಯೆ ಹೊಯ್ದಾಡಿದರು ತಿವಿದರು ತೋಳು ಬಲುಹಿನಲಿ
ಕೊಡಹಿದನು ಕಲಿ ಭೀಮನವನು
ಗ್ಗಡದ ಸತ್ವದಿಯುಂಡ ಕೂಳಿನ
ಕಡುಹ ತೋರೆಂದೊರಲಿ ತುಡಿಕಿದನನಿಲ ನಂದನನ ೩೭

ಸಿಕ್ಕಿದನು ಕಲಿಭೀಮನೆನೆ ಕೈ
ಯಿಕ್ಕಿ ಕೊಟ್ಟನು ಮೈಯನಸುರನ
ಹೊಕ್ಕು ತಿವಿದನು ತಿರುಗಿ ಬದಿಯೆಲು ನುಗ್ಗು ನುಸಿಯಾಗೆ
ಬಿಕ್ಕುಳಿಯ ತಾಳಿಗೆಯ ಮೂಗಿನೊ
ಳೊಕ್ಕು ರುಧಿರದ ಧಾರೆ ಬಿಗಿದುರೆ
ಡೊಕ್ಕರಿಸಲಸು ನೀಗಿತಸುರನ ತನುವ ನಿಮಿಷದಲಿ ೩೮

ಕೊಂದು ದನುಜನ ಪೆಣನ ಬಂಡಿಯ
ಹಿಂದೆ ಬಂಧಿಸಿ ಪುರದ ಬಾಹೆಗೆ
ತಂದು ಬಿಟ್ಟನು ತನತನಗೆ ಜನಜಾಲ ಜೋಡಿಯಲಿ
ಬಂದು ಕಂಡುದು ಹೆಣನ ಭೂಸುರ
ರಿಂದು ಧನ್ಯರು ವಿಪ್ರಜಾತಿಗೆ
ಸಂದುದಿನ್ನಗ್ಗಳಿಕೆಯೆಂದುದು ನೆರದ ಪೌರಜನ ೩೯

ಈ ಅಮಾನುಷಶಕ್ತಿಯಮರರ
ರಾಯುಗಳವಲ್ಲೆಂದು ವಿಪ್ರ ನಿ
ಕಾಯಕಿದು ಸಾಮಾನ್ಯವೇ ನಮ್ಮಗ್ರಹಾರದಲಿ
ಕಾಯಿದವರಿವರೆಂದು ವಿಪುಲ
ಶ್ರೇಯ ಪದ್ಮಜ ಸೋಮಧರ ನಾ
ರಾಯಣರು ಕೊಡಲೆಂದು ಹರಸಿತು ಭೂಸುರ ವ್ರಾತ ೪೦

## ಹನ್ನೊಂದನೆಯ ಸಂಧಿ

ಸೂ. ವೀರ ಕುಂತೀ ತನುಜರಿರುಳಂ
ಗಾರವರ್ಮನ ಗೆಲಿದು ಹೊಕ್ಕರು
ಧಾರುಣೀಸುರ ವೇಷದಲಿ ಪಾಂಚಾಲ ಪಟ್ಟಣವ

ಅರಸ ಕೇಳೈ ಕಲಿ ಬಕಾಸುರ
ಮರಣ ಸಮನಂತರದೊಳಾ ಪುರ
ವರದೊಳಿರ್ದರು ವಿಮಲ ವಿಪ್ರಸ್ತೋಮದೊಡಗೂಡಿ
ವರುಷ ತುಂಬಿತು ನಮ್ಮ ಹಸ್ತಿನ
ಪುರವ ಹೊರವಂಟಂದಿನಲಿಯೆಂ
ದರಸ ಕುಂತೀದೇವಿಗೆಂದನು ಧರ್ಮಸುತ ನಗುತ ೧

ಆ ಸಮಯದಲಿ ಬಂದನೊಬ್ಬನು
ಭೂಸುರನು ಸಕುತೂಹಲನು ಬಹು
ದೇಶ ಪರಿಯಟಣ ಪ್ರವಾಸಾಭ್ಯಾಸ ಶಿಕ್ಷೆಯಲಿ
ಗ್ರಾಸ ಯಾಚಕನಾಗಿ ತಮ್ಮ ನಿ
ವಾಸದಲಿ ಸಲೆ ತುಷ್ಟನಾದ ಮ
ಹೀಸುರನ ಮಾತಾಡಿಸಿದನಂದರಸ ವಿನಯದಲಿ ೨

ಎತ್ತಣಿಂದಲಿ ಬರವು ಬಳಿಕಿ
ನ್ನೆತ್ತ ಗಮನವು ಪೂರ್ವ ಸುಕೃತವ
ದೊತ್ತುದಿಂದಿನ ದಿವಸವಿದೆಲಾ ಸುಜನ ಸಂಸರ್ಗ
ಉತ್ತರೋತ್ತರ ಸಿದ್ಧಿಯಿಲ್ಲಿಂ
ದಿತ್ತಲೆಮಗೆನೆ ಹಸ್ತಿನಾಪುರ
ದತ್ತಣಿಂದವೆ ಬಂದೆವಾವುದು ದೇಶ ನಿಮಗೆಂದ ೩

ನಾವು ನಿಮ್ಮೋಪಾದಿಯಲಿ ತೀ
ರ್ಥಾವಲೋಕನಪರರು ಭಿಕ್ಷಾ
ಜೀವಿಗಳು ನೀವೇಸು ದಿನ ಗಜಪುರವ ಹೊರವಂಟು
ಆವನಲ್ಲಿಗೆ ಪತಿ ಯುಧಿಷ್ಠಿರ
ದೇವನೋ ದುರ್ಯೋಧನನೊ ಬಳಿ
ಕಾವುದುಂಟು ವಿಶೇಷ ಕೌರವ ಪಾಂಡುತನಯರಲಿ ೪

ಮರುಳುಗಳೊ ನೀವ್ ಮೇಣು ನಮ್ಮನು
ಮರುಳು ಮಾಡುವ ಪರಿಯೊ ಪಾಂಡವ
ರರಗು ಮನೆಯಲಿ ಬೆಂದರಿದು ಲೋಕಪ್ರಸಿದ್ಧವಲೆ
ಅರಸು ಕೌರವರಾಯನಾತನ
ಸಿರಿಯನಾತನ ಬಲುಹನಾತನ
ಪರಿಯನಭಿವರ್ಣಿಸುವಡರಿಯೆನು ವಿಪ್ರ ಕೇಳೆಂದ ೫

ಅಕಟ ಪಾಂಡವರಳಿದರೇ ಬಾ
ಧಕರೆ ಪರರಿಗೆ ಲೇಸಿನಲಿ ಕಂ
ಟಕವು ದುಗ್ಧ ವಿಷಂಗಳಲಿ ಹಾವಿಂಗೆ ಹಾನಿಯಲೆ
ವಿಕಳ ಪುಣ್ಯರು ನಿಲಲಿ ಕುರು ರಾ
ಜಕದೊಳಗೆ ಭೀಷ್ಮಾದಿ ವೃದ್ಧ
ಪ್ರಕರ ಗುರುಸುತ ಗುರು ಕೃಪಾದ್ಯರು ಕುಶಲರೇಯೆಂದ ೬

ಗುರುಸುತಾದಿ ಸಮಸ್ತ ಪರಿಜನ
ಪುರಜನಕೆ ಸುಕ್ಷೇಮ ದ್ರುಪದನ
ವರ ಕುಮಾರಿಯ ಮದುವೆ ಗಡ ಪಾಂಚಾಲ ನಗರದಲಿ
ನೆರವುತಿದೆ ನಾನಾ ದಿಗಂತದ
ಧರಣಿಪತಿಗಳು ಭೂರಿಯಲಿ ಮಿಗೆ
ಭರಿತ ದಕ್ಷಿಣೆ ಮೃಷ್ಟ ಭೋಜನವುಂಟು ನಮಗೆಂದ ೭

ನಾರವಿದು ನೃಪಕನ್ನಿಕೆಗೆ ವರ
ನಾರು ಲಗ್ನವದೆಂದು ಬಳಿಕಾ
ರಾರು ಬಂದರು ಭೂಪತಿಗಳಿದನೆಂದು ಕೇಳಿದಿರಿ
ಭೂರಿಯಲಿ ನಮಗುಂಟೆ ಮೃಷ್ಟಾ
ಹಾರ ದಕ್ಷಿಣೆ ನಮ್ಮಭೀಷ್ಟ ವಿ
ಹಾರ ವಾರ್ತೆಯಿದೆಂದು ಧರ್ಮಜ ನುಡಿದನಾ ದ್ವಿಜಗೆ ೮

ಇವರು ಕಪಟೋಪಾಧ್ಯರೆಂಬುದ
ನವನು ಬಲ್ಲನೆ ಭೂಮಿದೇವ
ಪ್ರವರನೈಸಲೆಯೆಂದು ಬಗೆದನು ಧರ್ಮನಂದನನ
ಅವನಿಯಲಿ ಪಾತಾಳದಲಿ ಸುರ
ಭವನದಲಿ ಪಾಂಚಾಲ ತನುಜೆಗೆ
ಯುವತಿಯರು ಸರಿಯಲ್ಲವೆಂಬುದ ಕೇಳ್ದಿವಾವೆಂಪ ೯

ಈಕೆಗೆಣೆಯಹ ಪರನನೀ ನರ
ಲೋಕದಲಿ ತಾ ಕಾಣೆನರ್ಜುನ
ನೀ ಕುಮಾರಿಯ ರಮಣನೆಂದೇ ಮನದ ಸಂಕಲ್ಪ
ಈಕೆಯುಪದೆಸೆಯುಮವಯದಲಿ ಕುಂ
ತೀಕುಮಾರಕರನಲ ಮುಖದಲಿ
ನಾಕದಲಿ ನೆಲೆಗೊಂಡರೆಂದುಮ್ಮಳಿಸುವನು ದ್ರುಪದ ೧೦

ಜ್ವಲನ ನೆರೆ ನುಂಗಿದನೊ ಮೇಣಂ
ಜಲಿಸಿ ಬಿಟ್ಟನೊ ಬಲ್ಲನಾವನು
ಕಲು ಹೃದಯನೈ ಕಮಲಭವನೀ ಪಾಂಡುನಂದನರ
ಸುಳಿವ ಸೈರಿಸನಕಟ ಹೂಹೆಗ
ಳಳಿವ ಹರೆಯುವೆ ಶಿವಶಿವಾಯೆಂ
ದಳಲುದೊರೆಯಲಿ ಮುಳುಗಿ ಮೂಡುವ ದ್ರುಪದಪತಿಯೆಂದ ೧೧

ಅರಸ ಕೇಳ್ವನು ಸಕಲ ದೈವ
ಜ್ಞರಲುಪಶ್ರುತಿಗಳಲಿ ಋಷಿಗಳ
ಪರಮ ಸಿದ್ಧಾಂತದಲಿ ಮಂತ್ರಾವೇಶವಚನದಲಿ
ಧರೆಯೊಳೀಗಳು ಪಾಂಡುಸುತ ಸಂ
ಚರಣೆಯುಂಟದು ಸತ್ಯವೆಂದುಪ
ಚರಿಸಿ ನುಡಿದು ಪುರೋಹಿತನು ಸಂತವಿಸುವನು ನೃಪನ ೧೨

ಸರಸಿಜಾನನೆ ನೋಡಿ ನೃಪರಲಿ
ವರಿಸುವಳು ವಲ್ಲಭನನೆಂದುಪ
ಚರಿಸುವನು ಸವಿವಾತುಗಳ ಸಾರಾಯ ಸೋನೆಯಲಿ
ಬರಿಸುವುದು ಬಹುದೇಶ ಭೂಮಿ
ಶ್ವರರನವರೊಳು ಪುಣ್ಯದಲಿ ಗೋ
ಚರಿಸರೇ ಗರುವೆಯರ ದೇವಿಗೆ ಪಾಂಡುಸುತರೆಂದ ೧೩

ಆದೊಡೀಮಗುವಿನ ಮಹಾ ಪು
ಣ್ಯೋದಯದ ಫಲವೈಸಲೇ ಬರೆ
ಮೇದಿನೀಶ್ವರರೆಲ್ಲರಿಗೆ ಲೇಖಾರ್ಥ ಸಂಗತಿಯ
ಸೋದರರು ಸಹಿತಾ ಸುಯೋಧನ
ನಾದಿಯಾದ ಸಮಸ್ತನೃಪರು ವಿ
ವಾದವಿಲ್ಲದೆ ಬರಲಿ ಕಟ್ಟಿಸು ಪಾವುಡವನೆಂದ ೧೪

ಬರೆದ ವೋಲೆಗಳಖಿಳ ಭೂಮೀ
ಶ್ವರರಿಗುಡುಗೊರೆ ಸಹಿತ ದೂತರು
ಹರಿದರುತ್ತರ ಪೂರ್ವ ದಕ್ಷಿಣ ಪಶ್ಚಿಮಂಗಳಿಗೆ
ಧರೆಯ ಕನ್ಯಾಜನ ಶಿರೋಮಣಿ
ವರ ದ್ರುಪದ ತನುಜಾ ಸ್ವಯಂವರ
ಕರಸುಗಳು ಬಹುದೆಂದು ವಾಚಿಸಿತಖಿಳ ಲೇಖಾರ್ಥ ೧೫

ಮಾಡಿದರೆ ಶತ ಯಾಗವನು ಕೈ
ಗೂಡುವಳು ಶಚಿ ಮಖ ಸಹಸ್ರವ
ಮಾಡಿ ಮೇಣ್ ಜನಿಸಿದೊಡೆ ಬಹಳೇ ದ್ರೌಪದಾದೇವಿ
ನೋಡುವೆವು ನಡೆ ಜನ್ಮ ಶತದಲಿ
ಕೂಡಿ ಕೊಬ್ಬಿದ ಪುಣ್ಯಫಲ ಕೈ
ಗೂಡುವುದೊ ತಪ್ಪೇನೆನೆನುತ ನೆರೆದುದು ನೃಪಸ್ತೋಮ ೧೬

ಆ ಪುರೋಹಿತ ವಚನದಲಿ ನಿ
ರ್ವ್ಯಾಪಿತಾಂತರ್ವ್ಯಥೆಯಲವನಿಪ
ನಾ ಪುರಪ್ರಾಂತ್ಯದಲಿ ಸುತ್ತಲು ಮೂರು ಯೋಜನದ
ತೋಪಿನಲಿ ಕಟ್ಟಿಸಿದನಗ್ಗದ
ಭೂಪರಿಗೆ ಭವನವನು ಕೇಳ್ಕೆ
ದ್ರೌಪದಿಯ ವೈವಾಹ ರಚನಾ ರಾಮಣೀಯಕವ ೧೭

ನೆರವುತಿದೆ ನಾನಾ ದಿಗಂತದ
ಧರಣಿಪರು ಕನ್ಯಾರ್ಥಿಗಳು ಭೂ
ಸುರ ಸಮೂಹದ ಸಾಲು ನೆರೆದುದು ದಕ್ಷಿಣಾರ್ಥದಲಿ
ಎರಡರೊಳು ನಿನಗೇನು ಕನ್ಯಾ
ವರಣವೋ ಮೇಣ್ ದಕ್ಷಿಣಾರ್ಥವೊ
ಬರವು ನಿಮಗುಂಟೇಯೆನುತ ದ್ವಿಜನಿವರ ಬೆಸಗೊಂಡ ೧೮

ಈಸು ಪರಿಯಲಿ ನಮ್ಮನೀವಪ
ಹಾಸ ಮಾಡುವಿರಾವು ಭಿಕ್ಷುಕ
ರೈಸಲೇ ಕನ್ಯಾರ್ಥದಲಿ ನಾವೆತ್ತ ನೃಪರೆತ್ತ
ಐಸೆ ನಿಮ್ಮೊಡೆ ನಾವು ಬಹೆವೀ
ಭೂಸುರರ ನೆರವುಂಟಲಾ ಶುಭ
ವಾಸರವ ಬೆಸಗೊಂಬೆನೆಂದನು ಧರ್ಮಸುತ ನಗುತ ೧೯

ಇವನು ಬಳಿಕ ನಿಜ ಪ್ರಯೋಜನ
ಭವನಕೈದಿದನಖಿಳ ವಾರ್ತಾ
ವಿವರಣ ವ್ಯಾಖ್ಯಾನ ಸಮನಂತರದ ಸಮಯದಲಿ
ಇವರು ತಮ್ಮೊಳಗೆಂದರವನೀ
ದಿವಿಜಪುರದಲಿ ದೈನ್ಯವೃತ್ತಿಯ
ನಿವಹ ನಿಲಲಿ ನಿರೀಕ್ಷಿಸುವೆನಾ ದ್ರುಪದ ಪಟ್ಟಣವ ೨೦

ಆ ಲತಾಂಗಿಯ ಮದುವೆಗವನೀ
ಪಾಲ ವರ್ಗದ ಬರವು ಗಡ ಹರ
ನೂಳಿಗದ ಹೆಚ್ಚಾಳು ಮಕರಧ್ವಜನ ಮೌಳಿ ಗಡ
ಮೇಳವಹ ಕಿವಿಗಳಿಗೆ ಹಂಗಹ
ವಾಲಿಗಳು ಪರಿವಿಡಿಯ ವೀಧಿಗೆ
ಸೋಲುವವೆಯೆಂದೈವರಾಲೋಚಿಸಿದರೊಳಗೊಳಗೆ ೨೧

ಅರಸ ಚಿತ್ತೈಸಮಳ ಲಗ್ನಾಂ
ತರದಲಿವರುದಯದಲಿ ಹೊರವಂ
ಟರು ಸುವಿದ್ಯಾ ಪರಿಣತರ ಪಂಡಿತರ ಗಡಣದಲಿ
ಬರುತ ಕಂಡರು ಕಳಶ ಕನ್ನಡಿ
ವರ ಯುವತಿ ಖಗ ಮೃಗದ ಬಲು ಸು
ಸ್ವರ ಸುಗಂಧಾನಿಲ ಸುಸಂಗತ ಶಕುನ ಸೂಚಕವ ೨೨

ಚಾರು ಶಕುನವಿದುತ್ತರೋತ್ತರ
ವಾರಿಗಿದು ಫಲಿಸುವುದೊ ನಮ್ಮೊಳು
ಹಾರುವರು ಹುಲು ಮೊತ್ತ ಕನ್ಯಾಲಾಭ ಫಲವಿದಕೆ
ಭೂರಿ ಭಾಗ್ಯನು ನಮ್ಮ ವಿಪ್ರರೊ
ಳಾರೆನುತ ತತ್ ಶಕುನ ಫಲ ವಿ
ಸ್ತಾರವನು ನೆರೆ ವಿವರಿಸುತ ನಡೆದುದು ಬುಧಸ್ತೋಮ ೨೩

ಧರಣಿಯುಮರರ ಗಡಣದಲಿ ನಾ
ಲೆರಡು ಪಯಣಾಂತರದಲವನೀ
ಸುರರನುಳಿದಾಶ್ರಮದೊಳಗೆ ಪಾರಾಶರವ್ರತಿಯ
ದರುಶನವ ಮಾಡಿದರು ಬಕ ಸಂ
ಹರಣ ವೃತ್ತಾಂತವನು ನೆರೆ ವಿ
ಸ್ತರಿಸಿದರು ವಿನಯದಲಿ ಬೀಳ್ಕೊಂಡರು ಮುನೀಶ್ವರನ ೨೪

ಗಮನ ಭರದಲಿ ಭಾರಿಯಧ್ವ
ಶ್ರಮವ ನೋಡದೆ ಭೂಮಿ ನಭದಲಿ
ತಮದ ಚಾವಡಿಯಿಕ್ಕಿದರೆ ಗತಿ ಚಾಪಳವ ಬಿಡದೆ
ದ್ಯುಮಣಿ ಕೈಸೆರೆಯಾಗಲಟವೀ
ಭ್ರಮಣದಲಿ ಬೆಳಗಡಗೆ ಭೂಪೋ
ತ್ತಮರು ಬಂದರು ಬಹಳ ಗಮನದೊಳರ್ಧ ರಾತ್ರಿಯಲಿ ೨೫

ಮುಂದೆ ಪಾರ್ಥನ ಬೀಸುಗೊಳ್ಳಿಗ
ಳಿಂದ ತಮದಾವಳಿ ಮುರಿಯೆ ಬಳಿ
ಸಂದು ಕುಂತೀದೇವಿ ಧರ್ಮಜ ನಕುಲ ಸಹದೇವ
ಹಿಂದೆ ಭೀಮನ ಕೈಯ ಕೊಳ್ಳಿಯ
ಬಿಂದು ಬೆಳಗಿನಲನಿಬರಟವೀ
ವೃಂದದಲಿ ಬರುತಿರ್ದರಿರುಳವನೀಶ ಕೇಳೆಂದ ೨೬

ಬರುತ ಕಂಡರು ಮುಂದೆ ಗಂಧ
ರ್ವರ ವಧೂ ನಿಕುರುಂಬವನು ನೇ
ವುರದ ಝಣ ಝಣ ರವದ ಝೇಂಕೃತಿ ಧ್ವನಿಯ
ಅರಳುಗಂಗಳ ಬೆಳಗಿನಲಿ ತಮ
ವಿರುಳು ಬೀತುದು ಬೆಸುವುದಾಗಲೆ
ಕುರುಳ ಕಾಳಿಕೆಯಿಂದ ತತ್ಕಾಂತಾ ಕದಂಬದಲಿ ೨೭

ಲಲಿತ ತನುಕಾಂತಿಗಳ ಮೊಗೆದರು
ತಿಳಿಗೊಳನ ಜಲವೆಂದು ಕಂಗಳು
ಹೊಳೆಯ ಮರಿಮೀನೆಂದು ಹೆಕ್ಕಳಿಸಿದರು ಹಿಡುಹಿನಲಿ
ಅಲರಿವಂಬುಜವೆಂದು ವದನಕೆ
ನಿಲುಕಿ ತುಂಬಿಗಳೆಂದು ಕುರುಳಿಂ
ಗಳುಕಿ ಕೈಗಳ ತೆರೆದವಧಿ ಮುಗುದೆಯರು ಖಚರಿಯರು ೨೮

ಅವರ ಮುಖಕಾಂತಿಗಳಲಂಗ
ಚ್ಛವಿಗಳಲಿ ಕಂಕಣದ ಹಾರದ
ವಿವಿಧ ರತ್ನಾಭರಣ ಕಿರಣದ ಲಲಿತ ಲಹರಿಯಲಿ
ಸವೆದುದಗ್ಗದ ತಿಮಿರವವದಿರ
ನಿವರು ಕಂಡರು ಜಲವಿಹಾರದ
ದಿವಿಜಸತಿಯರಲಾಯೆನುತ ಬರುತಿರ್ದರಡವಿಯಲಿ ೨೯

ನಾರಿಯರು ಕಂಡರು ಸುಲಜ್ಜಾ
ಭಾರದಲಿ ತಡಿಗಡೆಗೆ ಹಾಯಿದು
ಸೀರೆಗಳ ತೆರೆವಿಡಿದರಂಗೋಪಾಂಗ ಲತೆಗಳಿಗೆ
ಆರಿವರು ನಡುವಿರುಳು ದರ್ಪ ವಿ
ಕಾರದಲಿ ಕೈಕೊಳ್ಳಿರೆನುತಂ
ಗಾರವರ್ಮನು ಧನುವ ಕೊಂಡನು ನುಡಿಸಿದನು ನರನ ೩೦

ಈಸು ಭರದಲಿ ಗಮನವೆಲ್ಲಿಗೆ
ದೇಶಕಾಲವ ನೋಡದೀ ಸ
ರ್ವಾಸುರದ ಸೌರಂಭವೇನೆನೆ ಪಾರ್ಥ ನಸುನಗುತ
ದೇಶವಿದು ವನ ಕಾಲ ನಡುವಿರು
ಳೈಸಲೇ ನಿಜಕಾರ್ಯ ಸಂಗತಿ
ಗೋಸುಗವೆ ಗತಿಯೆಂದನಾ ಗಂಧರ್ವರಾಜಂಗೆ ೩೧

ನರರು ಸುಳಿವುದು ಪೂರ್ವಭಾಗದ
ಲಿರುಳಿನುತ್ತರ ಭಾಗದಲಿ ಖೇ
ಚರರು ಸುಳಿವುದು ಸೀಮೆ ಚತುರಾನನನ ಸೃಷ್ಟಿಯಲಿ
ಇರುಳಿನುತ್ತರ ಭಾಗವಿದು ನೀವ್
ನರರು ಬಹುದುದ್ದಂಡ ದರ್ಪ
ಜ್ವರಿತವಿದಕೌಷಧಿಯನೆರೆವೆನೆನುತ್ತ ತೆಗೆದೆಚ್ಚ ೩೨

ಕನಲಿ ಫಲುಗುಣನಾದಡಿದ ಕೊ
ಳ್ಳೆನುತ ಕೊಳ್ಳಿಯೊಳಿಟ್ಟನಗ್ನಿಯ
ನೆನೆದು ಮಂತ್ರಿಸಲುರಿಮುಖದ ಕಾರ್ಬೊಗೆಯ ಮೊಬ್ಬಿನಲಿ
ಹೊನಲುಗಿಡಿಗಳ ತಗಡುರಿಯ ಕೊಂ
ಡಿನಲಿ ಮುತ್ತಿತು ರಥವನಾತನ
ಧನುವನಾತನ ತನುವನಾತನ ಸರಳ ಸಾರಥಿಯ ೩೩

ಉರಿದುದಾ ರಥವವನ ಮೈಯಲಿ
ಕರಿಕುವರಿತರಲೋಡಿ ಹೊಕ್ಕನು
ಸರಸಿಯನು ಶಿಖಿಯೊಡನೆ ಹೊಕ್ಕುದು ನೀರನುರೆ ಸುರಿದು
ತರುಣಿ ಹಾಹಾ ಕೆಟ್ಟೆನೆಂದ
ಬ್ಬರಿಸಲಾ ಗಂಧರ್ವನಂಗನೆ
ಹರಿದಳೆಡೆಗೈಯಿಂದ ಸಂವರಿಸುತ್ತ ಬಿಡುಮುಡಿಯ ೩೪

ಬಂದು ಯಮನಂದನನ ಚರಣ
ದ್ವಂದ್ವದಲಿ ಚಾಚಿದಳು ನೊಸಲನು
ತಂದೆ ಕರುಣಿಸು ಕಾಂತಭಿಕ್ಷವ ಕರುಣಿಸೆನಗೆನಲು
ಮುಂದುವರಿಯದಿರೆಲೆ ಧನಂಜಯ
ಕೊಂದರೆನ್ನಾಣೇಕೆಯರಸನ
ತಂದು ಕೊಡು ಬೇಗದಲಿ ಉಪಸಂಹರಿಸು ಶಿಖಿಶರವ ೩೫

ಎನೆ ಹಸಾದವೆನುತ್ತ ನಿಮಿಷದೊ
ಳನಲನನು ನಂದಿಸಿದನಿತ್ತಲು
ಮನದ ದುಮ್ಮಾನದಲಿ ಲಜ್ಜಾ ವನತ ಮುಖನಾಗಿ
ಮನುಜರಲ್ಲಿವರಾರೊ ನೋಡುವೆ
ನೆನುತ ಹತ್ತಿರೆ ಬಂದು ನೀವಾ
ರಿನಿತು ಸಾಹಸ ಮಲ್ಲರೆಂದರ್ಜುನನ ಬೆಸಗೊಂಡ ೩೬

ನರರು ವೈದೇಶಿಗರು ಕಾರ್ಯಾ
ತುರರು ನಾವೆನಲರ್ಜುನನನುಪ
ಚರಿಸಿ ವಿವಿಧ ಗುಣಾನುಮುಖದಲ್ಲಿವರನಂಡಲೆಯೆ
ಧರೆಯೊಳುಂಟೇ ಪಾಂಡುಸುತರೆಂ
ಬರಸುಗಳು ನೀ ಕೇಳಿ ಬಲ್ಲೈ
ನಿರುತವಾದವರೆಂದು ನುಡಿದನು ನಗುತ ಕಲಿಪಾರ್ಥ ೩೭

ಶಿವ ಶಿವಾದೊಡೆ ಯಮ ಪುರಂದರ
ಪವನನಶ್ವಿನಿಯರಿಗೆ ನೀವ್ ಸಂ
ಭವಿಸಿದವರೇ ನೀವೆಮಗೆ ಸಂಭಾವನೀಯರಲ
ಇವೆ ಸಹಸ್ರ ತುರಂಗ ದಿವ್ಯೋ
ದ್ಭವವನರ್ಘ್ಯಾಭರಣರತ್ನ
ಪ್ರವರವಿವೆ ಕಾರುಣ್ಯದಲಿ ಕೈಕೊಂಬುದಿವನೆಂದ ೩೮

ಬಂದವೆಮಗಿವು ನಿನ್ನ ನಾವ್ ಬೇ
ರೆಂದು ಕಾಣೆವು ಪರಮ ಬಾಂಧವ
ರಿಂದು ಮೊದಲಾಗೆಮಗೆ ನೀನೇ ಮೌಲ್ಯಧನವೆಂದ
ಇಂದು ನಿಜರೂಪಡಗಿ ರಾಯರ
ವೃಂದವನು ನೋಡುವೆವು ದ್ರುಪದನ
ನಂದನೆಯ ವೈವಾಹ ರಚನೆಯೊಳೆಂದನಾ ಪಾರ್ಥ ೩೯

ಇವು ಮದೀಯ ಸುವಸ್ತು ನಿನ್ನಯ
ಭವನದೊಳಗಿರಲೊಂದು ಸಮಯದೊ
ಳಿವನು ತರಿಸುವೆನೆಂದು ಬಳಿಕಂಗಾರವರ್ಮಂಗೆ
ಇವರು ವಿನಯವ ಮಾಡಿ ಗಮನೋ
ತ್ಸವದಲಿರೆ ಗಂಧರ್ವ ನಸು ನಗು
ತವರಿಗೆಂದನು ಧರ್ಮಶಾಸ್ತ್ರದ ಸಾರ ಸಂಗತಿಯ ೪೦

ಮುನಿಯದಿರು ಕಲಿಪಾರ್ಥ ನಿನ್ನಯ
ಘನತರದ ವಿಕ್ರಮಕೆ ದಿವಿಜರು
ದನುಜ ಭುಜಗರು ನೆರೆಯರುಳಿದೀ ನರರ ಪಾಡೇನು
ಅನುಪಮಾನ ಕ್ಷತ್ರವಹ್ನಿಗೆ
ವಿನುತ ವಿಮಲ ಬ್ರಹ್ಮತೇಜೋ
ಘನ ಸಮೀರ ಸಹಾಯವಾಗಲಸಾಧ್ಯವೇನೆಂದ ೪೧

ಅರಸ ನಿಮ್ಮೊಳು ಪೂರ್ವದಲಿ ಸಂ
ವರಣನೆಂಬನು ಸೂರ್ಯತನುಜೆಗೆ
ಮರುಳುಗೊಂಡನು ಮರೆದು ಕಳೆದನು ರಾಜ್ಯವೈಭವವ
ಬರಿಯ ಪಾರ್ಥಿವತೇಜದಲಿ ಗೋ
ಚರಿಸದಿರೆ ತತ್ತತಿ ವಿವಾಹೋ
ತ್ಕರುಷವಾಯ್ತು ವಸಿಷ್ಠನಮಲ ಬ್ರಹ್ಮತೇಜದಲಿ ೪೨

ಆ ವಸಿಷ್ಠನ ಕೌಶಿಕನ ಯು
ದ್ಧಾವಲಂಬನವೇನನೆಂಬೆನು
ದೇವಕುಲವಂಜುವುದು ವಿಶ್ವಾಮಿತ್ರನುಬ್ಬಟೆಗೆ
ಆ ವಿವಿಧ ಮಂತ್ರಾಸ್ತ್ರವನು ಶತ
ಸಾವಿರವನಾ ಬ್ರಹ್ಮದಂಡದ
ಥಾವರದಲೇ ಗೆಲಿದನೊಬ್ಬ ವಸಿಷ್ಠಮುನಿಯೆಂದ ೪೩

ಒದಗಲಾರದೆ ತನ್ನ ಸುಕ್ಷ
ತ್ರದ ಮಹತ್ತ್ವವ ಬಿಸುಟು ಸುಬ್ರಾ
ಹ್ಮದಲಿ ಹೊಕ್ಕನು ವಿಗಡ ವಿಶ್ವಾಮಿತ್ರಮುನಿಯೆಂದು
ಅದರಿನಿಂದೀ ಕ್ಷತ್ರತೇಜದೊ
ಳುದಿತ ವಿಮಲ ಬ್ರಹ್ಮವನು ಕೂ
ಡಿದೊಡೆ ಕೌತುಕವೆಂದನಾ ಗಂಧರ್ವನರ್ಜುನಗೆ ೪೪

ಇಲ್ಲಿಗಿದೆ ನಾಲ್ಕೈದು ಯೋಜನ
ದಲ್ಲಿ ಧೌಮ್ಯಾಶ್ರಮ ವಸಿಷ್ಠಂ
ಗಲ್ಲಿ ಸನ್ನಿಧಿಯಾವಸಿಷ್ಠಂಗಾತನನುಜಾತ
ಅಲ್ಲಿ ಪೌರೋಹಿತ್ಯವನು ನಿಮ
ಗೊಲ್ಲೆನೆನ್ನದೆ ಮುನಿಪ ಮಾಡಿದ
ಡೆಲ್ಲ ಲೇಸಹುದೆಂದು ಕಳುಹಿದನಿವರನಾ ಖಚರ ೪೫

ಗಮಿಸಿದರು ಬಳಿಕವರು ಧೌಮ್ಯಾ
ಶ್ರಮಕೆ ಬಂದರು ಮುನಿಪನರ್ಘ್ಯಾ
ದ್ಯಮಲ ಸತ್ಕಾರೋಚಿತವ ಕೈಕೊಂಡು ವಿನಯದಲಿ
ಎಮಗೆ ಪೌರೋಹಿತ್ಯದಲಿ ಸಂ
ಕ್ರಮಿಸಬೇಕೆಂದೊಡಬಡಿಸಿ ಭೂ
ರಮಣರಲ್ಲಿಂದೈದಿದರು ಪಾಂಚಾಲ ಪಟ್ಟಣವ ೪೬

## ಹನ್ನೆರಡನೆಯ ಸಂಧಿ

ಸೂ. ಧರಣಿಪತಿ ನಿಜಸುತೆಯ ರೂಪೋ
ತ್ಕರದ ಸೌಭಾಗ್ಯದ ನಿರಂತರ
ಪರಮ ಶೋಭಾ ರಚನೆಯಲಿ ರಚಿಸಿದರು ಪಟ್ಟಣವ

ಭೂಮಿಪತಿ ಕೇಳ್ ನಿಮ್ಮ ಪಿತನ ಪಿ
ತಾಮಹರು ಧೌಮ್ಯಾಶ್ರಮಕೆ ಬಂ
ದಾ ಮುನೀಂದ್ರನ ಕೂಡಿಕೊಂಡರು ಖಚರ ವಚನದಲಿ
ರಾಮಣೀಯಕವಹ ಸುಶಕುನ
ಸ್ತೋಮವನು ವಿವರಿಸುತ ಹೊಕ್ಕರು
ಭೂಮಿಲಂಬದ ನೃಪರ ನೆರವಿಯ ದ್ರುಪದ ಪಟ್ಟಣವ ೧

ಭರದಿನೈತಂದಖಿಳ ಭೂಮೀ
ಶ್ವರರ ಚತುರಂಗ ಪದಹತ
ಧರಣಿ ನಿರ್ಗತ ರೇಣು ಪಟಲ ಪರಾಗ ಸಂಗದಲಿ
ಅರುಣಮಯವಾಯ್ತಖಿಳ ಜಗದಲಿ
ಸರಸಿಜಾಕ್ಷಿಯ ನೆನೆದು ಸಚರಾ
ಚರದ ಮುಖದಲಿ ರಾಗರಸವುಬ್ಬರಿಸಿದಂದದಲಿ ೨

ತರಣಿಗುಂಟೇ ಸಮಯವನಿಲಗೆ
ತೆರಹುಗೊಡುವವರಾರು ಗಗನೇ
ಚರರ ಗಮನಸ್ತಂಭವೆತ್ತಣ ಮಾತು ಖಗಕುಲಕೆ
ನೆರೆದ ಪಲವ ಸತ್ತಿಗೆಯ ಝ
ಲ್ಲರಿಯ ಸಿಂಧದ ಸೆಳೆಯ ಘನ ಸೀ
ಗುರಿಯ ಸಬಳದ ಸಾಲ ಚಮರಂಗಳ ವಿಡಾಯಿಯಲಿ ೩

ಚತುರ ಉದಧೀ ವಲಯದವನೀ
ಪತಿಗಳೇ ಕಾಮಿಸಿ ವಿರೋಧ
ಸ್ಥಿತಿಯ ನೋಡದೆ ನೂಕಿ ನಡೆದರು ದ್ರುಪದಪುರಿಗಾಗಿ
ಅತಿಬಲರು ಬಹು ರಾಜಬಲ ಪ
ದ್ಧತಿಗಳನು ನೋಡುತ್ತ ಬಂದರು
ಕೃತಕ ವಿಪ್ರೋತ್ತಮರು ಭಿಕ್ಷಾವಿಹಿತ ವೃತ್ತಿಯಲಿ ೪

ತಿರುಗಿತಿದು ಪಾಂಚಾಲ ನಗರಿಯ
ಹೊರವಳಯದಲಿ ಜಲಧಿ ಮಧ್ಯದ
ಕುರುವವೋ ಪಟ್ಟಣವೊ ಮೇಣಿದು ದೈವಗತಿಗಳಲಿ
ಉರುಬಿದೊಡೆ ಪಾಂಚಾಲಭೂಪತಿ
ತರುಬಲಾಪನೆ ಮಾವತನವಿದು
ಬರಿದೆ ಹೋಗದೆನುತ್ತ ಬಂದನು ಧರ್ಮಸುತ ನಗುತ ೫

ಪುರದೊಳಗೆ ಹೇರಾಳ ಹಬ್ಬದ
ಹರಹಿನಲಿ ಬೀಡಾರ ಭಿಕ್ಷಾ
ಚರಿತರಿಗೆ ದೊರಕುವುದೆ ಗುಡಿ ಗೂಡಾರ ಸಂತತಿಗೆ
ಅರಸುಗಳು ನಾವಲ್ಲ ಭವನಾಂ
ತರವದೇಕೆಮಗೆಂದು ಘಟ ಬಂ
ಧುರದ ಶಾಲೆಯ ಹೊಕ ರಿವರು ಕುಲಾಲ ಭವನದಲಿ ೬

ಕೊಡೆ ಹೊಸ ಭಾಂಡದಲಿ ಭಿಕ್ಷವ
ಬೇಡಿ ತೊಳಲಿದರಿವರು ರಾಯರ
ಬೀಡು ಬಿಡುತಿರ್ದುದು ಬಹಳ ನಿಸ್ಸಾಳ ರಭಸದಲಿ
ಬೀಡಿವರಿಗಿದು ನೆಲನಿವರಿಗಿದು
ಮಾಡಿದರಮನೆಯಿವರಿಗಿದು ಕರು
ಮಾಡವಿವರಿಗಿದೆಂದು ಪರುಠವಿಸಿದನು ಪಾಂಚಾಲ ೭

ಕೇರಿ ಕೇರಿಯ ಬೀದಿಗಳ ಪ
ನ್ನೀರ ಚಳೆಯದ ಕಳಸ ಕನ್ನಡಿ
ತೋರಣದ ಸೂಸಕದ ಮುತ್ತಿನ ಮಕರ ತೋರಣದ
ಓರಣದ ಹೊಂಗೆಲಸದಖಿಳಾ
ಗಾರ ಪಂಕ್ತಿಯ ಸೋಮವೀಥಿಯ
ಸೂರವೀಥಿಯ ರಚನೆಯಲಿ ರಚಿಸಿದರು ಪಟ್ಟಣವ ೮

ತೀವಿದವು ಹೊಂಗೆಲಸ ಗತಿಯಲಿ
ಲೋವೆಗಳು ಚೈತನ್ಯಮಯ ಚಿ
ತ್ರಾವಳಿಯ ಬೆಸುಗೆಗಳಲೆಸೆದವು ಭವನಭಿತ್ತಿಗಳು
ಹೂವಿನರಳಿನ ಹರಹಿನಲಿ ರ
ತ್ನಾವಳಿಗಳೊಪ್ಪಿದವಗರು ಧೂ
ಮಾವಳಿಯ ಗುಂಪಿನಲಿ ಮಘಮಘಿಸಿದವು ಮೇಘಚಯ ೯

ಕಾರಣೆಯ ಕುಂಕುಮದ ಸಾದಿನ
ಸಾರಣೆಯ ನೆಲೆಕಟ್ಟುಗಳ ಕ
ರ್ಪೂರಧೂಳಿಯ ಹೊಳಹುಗಳ ಪನ್ನೀರ ಪಕ್ಕಲೆಯ
ಚಾರು ಚಳೆಯದ ಕೆಸರಿಡುವ ಕ
ಸ್ತೂರಿಗಳ ಪೂರಾಯ ಪರಿಮಳ
ಭಾರದಲಿ ಬಿರುಗಾಳಿ ಕುಸಿದುದು ಹೇಳಲೇನೆಂದ ೧೦

ಮೇಲುಕಟ್ಟಿನ ದಿವ್ಯಚಿತ್ರ ದು
ಕೂಲನಿಚಯದ ಲಾಮಚದ ಬ
ಲ್ಲಾಳದಡ್ಡಿಗಳೆಡೆಗೆಡೆಗೆ ರಂಜಿಸುವ ಪಟ್ಟೆಗಳ
ಮೇಲುವೊದಕೆಯ ಕರ್ಪುರದ ಹೊಂ
ಬಾಳೆಗಳ ಮಲಯಜದ ಕಂಬದ
ಸಾಲುಗಳಲೊಪ್ಪಿದುದು ಚಪ್ಪರವೆರಡು ಯೋಜನದ ೧೧

ಬಿಗಿದವೆಡೆ ಮಂಟಪದ ಬಿಂಗಾ
ರಿಗಳ ಬಿಡೆಯದ ಚಮರ ಹೊಂಗೆ
ಜ್ಜೆಗಳ ಮುಕುರದ ಘಂಟೆಗಳ ಬಂಧುರದ ಬಾಸಿಗದ
ಸುಗಮ ಬಂಧದ ಬಣ್ಣ ಸರದೋ
ಳಿಗಳ ಕಂಬದ ವಜ್ರಮಯ ಧಾ
ರೆಗಳಲೆಸೆದುದು ಭದ್ರಮಂಟಪವಮಲ ಮಣಿಮಯದ ೧೨

ಕೀಲಿಸಿದ ಪಟ್ಟೆಗಳ ದಿವ್ಯ ದು
ಕೂಲದಲಿ ಹೊಂಬರಹಪಲೆಗಳ
ಜೂಳಿಕೆಯು ಕನ್ನಡಿಯು ತೋರಣಪೆರಡು ಪಕ್ಕದಲಿ
ಮೇಲುಮುತ್ತಿನ ಸೂಸಕದ ನೇ
ಪಾಳ ಚಮರಿಯು ದಾಳಿಗಳ ಸಂ
ಮೇಳದಲಿ ಸಮ ತಳಿಸಿದರು ವೈವಾಹ ಮಂಟಪವ ೧೩

ಹೊಳೆವ ಭಿತ್ತಿಯ ಸಾಲಭಂಜಿಕೆ
ಗಳಲಿ ಮೌಕ್ತಿಕ ವಜ್ರಮಣಿ ಮಂ
ಗಳ ಮಹಾರಶ್ಮಿಯಲಿ ರಚನೆಯ ಚಿತ್ರಪತ್ರದಲಿ
ಇಳೆಗಿಳಿದ ಪುಷ್ಪಕವೊ ನೂತನ
ನಳಿನಮಿತ್ರನ ರಥವೊ ಮೇಣಿದು
ಜಲಧಿಶಯನನ ಸೆಜ್ಜೆಯೋ ನಾವರಿಯೆವಿದನೆಂಬಾ ೧೪

ಝಳವ ಝೋಂಪಿಸಿ ಬೀಸಿದವು ತಂ
ಬೆಲರ ಬೀಸಣಿಗೆಗಳು ಪರಿಮಳ
ಕಲಿತ ಮಕರಂದದ ತುಷಾರದ ತುಹಿನ ರೇಣುಗಳ
ಸುಳಿವ ಸುತ್ತಣ ಸಾಲಭಂಜಿಕೆ
ಗಳಲಿ ಸೂತ್ರಿಸಿ ರಚಿಸಿದರು ಮಂ
ಗಳದ ರಿಂಗಣ ಝಾಡಿಸಿತು ವೈವಾಹ ಮಂಟಪವ ೧೫

ವರ ಜವಾಜಿಯ ಶೃಂಗಗಳ ಕ
ರ್ಪುರದ ತವಲಾಯಿಗಳ ಸಾದಿನ
ಭರಣಿಗಳ ಮೃಗನಾಭಿಗಳನಡಕಿದರು ಬಂಡಿಯಲಿ
ಸುರಿಸುರಿದು ಹಂತಿಗಳ ಹೊಂಗೊ
ಪ್ಪರಿಗೆಗಳ ತುಂಬಿದರು ಗಂಧದ
ಹಿರಿಯ ರಂಜಣಿಗೆಗಳ ಹಿಡಿದರು ಸುತ್ತುವಳಯದಲಿ ೧೬

ಬಳಿಕ ಸೊದೆಗಳ ಬಾವಿಗಳ ಪ
ಕ್ಕಲೆಯ ಪನ್ನೀರುಗಳು ಹಿಡಿದವು
ಹೊಳೆವ ಕೈರಾಟಣದ ಕಾಂಚನಮಯದ ದೋಣಿಗಳ
ತುಳುಕಿ ಬಿಗಿದರು ಕೊಪ್ಪರಿಗೆಗಳ
ವಳಯದಲಿ ನವ ಯಂತ್ರಮಯ ಪು
ತ್ಥಳಿಗಳೇ ನೀಡುವವು ಬೇಡಿದರಿಗೆ ಸುವಸ್ತುಗಳ ೧೭

ಏಕ ವಿಧದ ನವಾಯಿಯೋ ಮೂ
ಲೋಕದತಿಶಯ ವಸ್ತು ರಚನಾ
ಸೌಕುಮಾರಿಯ ಸೇವೆಗಿದು ಸಾಕಾರವಾದುದಲ
ಏಕಮಯಮತ ವಿಶ್ವಕರ್ಮ
ವ್ಯಾಕರಣ ಲಕ್ಷಣದ ಲಕ್ಷ್ಯಾ
ನೀಕವಿದರೊಂದೊರೆಗೆ ಬಹುದೇ ಭದ್ರಮಂಟಪದ ೧೮

ವಿವಿಧ ವೀಣಾವಾದ್ಯ ಕೋಮಲ
ರವದ ಮಧುರ ಮೃದಂಗ ತತಿಗಳ
ರವಣೆಗಳ ನಟ್ಟುವಿಗರುಗ್ಗಡಣೆಯ ಗಡಾವಣೆಯ
ನವವಿಧದ ವೈತಾಳಿಕರ ವರ
ಯುವತಿಯರ ಭಾರಣೆಯ ಭೂಷಣ
ರವದ ಮೇಳವು ಮುತ್ತಿ ಮುಸುಕಿತು ಚಾರು ಚಪ್ಪರವ ೧೯

ಸಾಳಗದ ಸಮ್ಮೋಹನದ ಮಳೆ
ಗಾಲವೋ ಗೀತವೊ ರಸಾಳಿಯ
ಕಾಲುವೆಯೊ ನವಕಾವ್ಯಬಂಧದ ಸಾರಸಂಗತಿಯೊ
ಆಲಿಗಳಿಗಾಯುಷ್ಯ ಫಲ ಜೀ
ವಾಳವೋ ನರ್ತನವೊ ಸೊಗಸಿನ
ಮೇಳವಣಿಗಳ ಪಾಟಿಯಾದುದು ಜನದ ಕಣ್ಮನಕೆ ೨೦

ತೀವಿದರು ಹೊರವಳಯದಲಿ ನಾ
ನಾ ವಿಧದ ನಾಟಕದ ನರ್ತನ
ಭಾವಕ ದ್ರಾವಕ ಸುಗಾಯಕ ಮಲ್ಲ ಚಿತ್ರಕರು
ಕೋವಿದರು ಕರುಷಕರು ಪಣ್ಯಾ
ಜೀವಿ ವಾಮನ ಮೂಕ ಬಧಿರಾಂ
ಧಾವಳಿಗಳೊಪ್ಪಿದರು ಸಕಲ ದಿಶಾ ಸಮಾಗತರು ೨೧

ಕವಿ ಗಮಕಿ ವಾದಿಗಳು ವಾಗ್ಮಿ
ಪ್ರವರ ಯಾಜ್ಞಿಕ ಮಾಂತ್ರಿಕರು ವೈ
ಷ್ಣವ ಮಹೇಶ್ವರ ಜೈನ ಭೈರವ ಬುದ್ಧ ಲಿಂಗಿಗಳು
ವಿವಿಧ ವರ್ಣಾಶ್ರಮ ಸುಧರ್ಮ
ವ್ಯವಹರಣ ನಿಷ್ಠರು ವಿವಾಹೋ
ತ್ಸವ ವಿಲೋಕನ ಕೌತುಕಿಗಳೊದಗಿದರಸಂಖ್ಯಾತ ೨೨

ಗಣಿತವಂತರ ನೆರವಿ ಸುಬ್ರಾ
ಹ್ಮಣರು ಸುಶ್ರೋತ್ರಿಯರು ವೈದಿಕ
ಗುಣದ ವಾಚಾಲಕರು ವಿಮಲಬ್ರಹ್ಮಋಷಿ ಸಮರು
ಪ್ರಣತ ಋಷಿಗಳು ಮುನಿವರರು ಸಂ
ದಣಿಸಿತಖಿಳದಿಗಂತರದ ಧಾ
ರುಣಿಯ ದೇವವ್ರಾತ ನೆರೆದುದು ದ್ರುಪದ ನಗರಿಯಲಿ ೨೩

ಅರಸ ಕೇಳೈ ಮೇಲೆ ವಿದ್ಯಾ
ಧರ ಮಹೋರಗ ಯಕ್ಷ ರಾಕ್ಷಸ
ಗರುಡಕಿನ್ನರ ಸಿದ್ಧ ವಸು ಗಂಧರ್ವ ಭೂತಗಣ
ವರ ಮರುದ್ಗಣ ರುದ್ರ ಮನು ಭಾ
ಸ್ಕರ ಸುಧಾಕರ ತಾರಕಾಗ್ರಹ
ಸುರಮುನಿಪ ದಿಕ್ಪಾಲತತಿ ನೆರೆದುದು ವಿಮಾನದಲಿ ೨೪

ಚಾರಣರ ಕೈವಾರ ತುಂಬುರ
ನಾರದರ ಸಂಗೀತ ರಂಭೆಯ
ಚಾರು ನರ್ತನ ಚಿತ್ರರಥನ ಮೃದಂಗ ಮೃದು ಶಬ್ದ
ಆರುಭಟೆ ಮಿಗಿಲಳ್ಳಿರಿವ ಜಂ
ಭಾರಿಯೋಲಗದಲಿ ತದೀಯ ಮ
ಹಾ ರಭಸವಿತರೇತರ ಪ್ರತಿಬಿಂಬವಾಯ್ತೆಂದ ೨೫

ರಚಿಸಿದರು ಮಂಟಪವನವರವ
ರುಚಿತ ವೃತ್ತಿಯೊಳವನಿಪಾಲ
ಪ್ರಚಯವನು ಮನ್ನಿಸಿದನಿವರನು ವಿಪ್ರ ಸಭೆಯೊಳಗೆ
ಪ್ರಚುರ ಮಣಿಯಿದೆ ಪದ್ಮರಾಗದ
ರುಚಿರ ರತ್ನವು ಜಾತರೂಪದಿ
ಖಚಿತವಾದೊಡೆ ಪುಣ್ಯವೆನುತಾ ದ್ರುಪದ ಚಿಂತಿಸಿದ ೨೬

## ಹದಿಮೂರನೆಯ ಸಂಧಿ

ಸೂ. ಕಮಲಮುಖಿ ನಡೆತಂದಳಂದಿನ
ಕಮಲೆಯೆನೆ ಪಾಂಚಾಲಸುತೆ ನಿಜ
ರಮಣರನು ನೋಡಿದಳು ಪೃಥ್ವೀಪಾಲ ಪಂಕ್ತಿಯಲಿ

ಅರಸ ಕೇಳ್ ನಾಂದೀಮುಖದ ವಿ
ಸ್ತರಣವಾದುದು ಪೂರ್ವವೇದಿಯು
ವರ ನಿಗಮ ನಿರ್ಘೋಷ ಘಾತಿಸಿತಖಿಳ ಕಲ್ಮಷವ
ಮರುದಿವಸ ಮಹಿಳಾಶಿರೋಮಣಿ
ಪರಮಸೌಭಾಗ್ಯದ ಸಮುದ್ರದ
ಸಿರಿಯ ಪರಿಣಯವೆಂದು ಸಾರಿತು ಪಾಳಯಂಗಳಲಿ ೧

ತಿಗುರ ಗೆಲುವುದು ವಶ್ಯ ತಿಲಕಾ
ದಿಗಳನಿಡುವುದು ಮೋಹನದ ಮ
ದ್ದುಗಳ ಮಾಯೆಯ ಬೀಸುವುದು ಸೂಸುವುದು ಸೊಗಸುಗಳ
ಹಗಲು ಕಾಪಿನ ರೂಪುಗಳ ಗಾ
ಹುಗಳ ಮೆರೆವುದು ಮನ್ಮಥನ ಕಾ
ಳಗದ ಖಾಡಾಖಾಡಿಯೆಂದರು ಹೊಯ್ದು ಡಂಗುರವ ೨

ಹರಸಿಕೊಂಡರು ನಿಖಿಳ ಪೃಥ್ವೀ
ಶ್ವರರು ಮಾಯಾಪುರದ ಕಾಂಚೀ
ಪುರದ ಜಾಳಾಂಧರದ ವಿವಿಧ ಸ್ಥಾನ ದೇವರಿಗೆ
ಕರಿಮುಖನ ಕಜ್ಜಾಯದಲಿ ಸ
ತ್ಕರಿಸಿ ಸಂಶಯ ಭೇದವರ್ಗದ
ಹರುಷದಲಿ ಹೊರವಂಟರೊಬ್ಬರನೊಬ್ಬರುರವಣಿಸಿ ೩

ಉಬ್ಬು ಮುರಿದುದು ರಾಯರೊಬ್ಬರ
ನೊಬ್ಬರೀಕ್ಷಿಸಿ ಚೆಲುವಿನಲಿ ಸಿರಿ
ಗೊಬ್ಬಿನಲಿ ಸಾಹಸಿಕೆಯಲಿ ಸೇನಾಸಮುದ್ರದಲಿ
ಒಬ್ಬರೊಬ್ಬರಸೂಯೆಯೊಬ್ಬರ
ನೊಬ್ಬರಳುಕಿಸುವದಟುಗಂಗಳ
ಹಬ್ಬದಲಿ ಮನ ಸಂಚು ತಪ್ಪಿತಸಾಧ್ಯ ಚಿಂತೆಯಲಿ ೪

ಹೋರೆಗರ ಹೊಳ್ಳಿರಿತ ಜೋಯಿಸ
ರಾರುಭಟೆಗಳ ಬಿಂಕ ಮಾಂತ್ರಿಕ
ರೋರೆ ಮುಸುಕಿನ ಜಾಳು ಜಪವೀ ನೃಪರ ಚಾಳೈಸೆ
ಪೂರವಿಪ ಪುಳಕಂಗಳಲಿ ಸಿಂ
ಗಾರಿಗಳು ಸೀವರಿಸದ್ವೈತಂ
ದೋರಣಿಸಿದರು ಸಾಲ ಶೋಭಿತ ಸಿಂಹಪೀಠದಲಿ ೫

ಕೌರವರು ಯಾದವರು ಸಹಿತೀ
ಧಾರುಣಿ ಕ್ಷತ್ರಿಯರ ವಂಶದ
ವೀರ ಪಾರ್ಥಿವ ವಿತತಿ ಕುಳ್ಳಿರ್ದುದು ಸರಾಗದಲಿ
ಸಾರೆ ಸೋದರ ಸಚಿವ ಮಂತ್ರಿ ಕು
ಮಾರ ಚಾಮರ ಹಡಪದೊಳಪರಿ
ವಾರ ಬಳಸಿತುವೊಬ್ಬರೊಬ್ಬರ ಸುತ್ತು ವಳಯದಲಿ ೬

ಅಂಕೆಯಿದು ಪಾರ್ಥಿವರ ವಿಭವಾ
ಲಂಕೃತಿಯನದನೇನ ಹೇಳುವೆ
ನಂಕವಿದು ಕಳನೇರಿತಾಹವವೆನಗೆ ತನಗೆನುತ
ಶಂಕರಾರಿಯ ಮಸೆದಲಗು ಮಾ
ರಂಕದುಬ್ಬಿನ ಜಂಕೆಯುಂಕೆಯ
ಬಿಂಕವನು ವಿಸ್ತರಿಸುವೆನು ನರನಾಥ ಕೇಳೆಂದ ೭

ತರಿಸು ಧನುವನು ಯಂತ್ರಮತ್ಸ್ಯವ
ನಿರಿಸು ತಳುವದೆ ತಂಗಿಯನಲಂ
ಕರಿಸು ದಂಡಿಗೆಯಿಂದ ತಾ ತೋರಿಸು ಮಹೀಶ್ವರರ
ವರನ ವರಿಸಲಿ ಲಗ್ನವಿದೆ ಹ
ತ್ತಿರೆಯೆನುತ ಪಾಂಚಾಲಭೂಪತಿ
ಕರೆದು ಧೃಷ್ಟದ್ಯುಮ್ನನನು ಬೆಸಸಿದನು ಬೇಗದಲಿ ೮

ಅರಸನಾಜ್ಞೆಯ ಮೇಲೆ ಶತ ಸಾ
ವಿರ ನಿತಂಬಿನಿಯರು ಕುಮಾರಿಯ
ಹೊರಗೆ ಬಂದರು ತಿಗುರಿದರು ಕುಂಕುಮದಲವಯವವ
ಅರಸಿ ಮಜ್ಜನ ಮಾಡಿ ನೂತನ
ವರದುಕೂಲವನುಟ್ಟು ಸಖಿಯರ
ತರದ ನೆಲನುಗ್ಗಡಣೆಯಲಿ ಬಂದಳು ನಿಜಾಲಯಕೆ ೯

ಹೊರೆಯ ಸಖಿಯರ ನೋಟ ಮೈಯಲಿ
ಹರಿದು ಬಳಲದು ಚಿತ್ತವೀಕೆಯ
ಧರಿಸಿ ಕುಸಿಯದು ಕಿವಿಗಳಿಗೆ ಮೆಲ್ನುಡಿಯ ಸವಿಸವಿದು
ಅರುಚಿಯಾಗದು ನಾಸಿಕವು ಮೈ
ಪರಿಮಳದ ಪೂರದಲಿ ಗಂಧಾಂ
ತರಕೆ ನೆರೆಯದು ರೂಪವೇನೆಂಬೆನು ನಿತಂಬಿನಿಯ ೧೦

ಮೊಲೆಗಳಲಿ ಸಿಲುಕಿದೊಡೆ ನೋಟಕೆ
ಬಳಿಕ ಪುನರಾವರ್ತಿಯೇ ಕಂ
ಗಳಿಗೆ ಕಾಮಿಸಿದರೆಯು ನಿಮಿಷಕೆ ಸಮಯವೆಲ್ಲಿಹುದು
ಲಲಿತ ಮೈಕಾಂತಿಗಳೊಳದ್ದರೆ
ಮುಳುಗಿ ತೆಗೆವವರಾತು ಜಘನ
ಸ್ಥಳಕೆ ಮುರಿದರೆ ಮರಳದಲೆ ಕಂಗಳಿಗೆ ಹುಸಿಯೆಂದ ೧೧

ಹೊಲಬುಗೆಡವೇ ಹೊಳೆವ ವಕ್ಷ
ಸ್ಥಳದೊಳಗೆ ಜನದೃಷ್ಟಿ ನಳಿತೋ
ಳ್ಗಳಲಿ ಸೆಳ್ಳುಗುರೋಳಿಯಲಿ ಕೆಂದಳದ ಶೋಭೆಯಲಿ
ಸುಳಿದಡಲ್ಲಿಯೆ ನಿಲುವು ದಶನಾ
ವಳಿಯ ಬಿಂಬಾಧರದ ಕದಪಿನ
ಚೆಲುವಿಕೆಗೆ ನರರಾಲಿ ನೆರೆಯವು ನೃಪತಿ ಕೇಳೆಂದ ೧೨

ಅಸಿಯ ನಡುವಿನ ನಿಮ್ನ ನಾಭಿಯ
ಮಸುಳ ಬಾಸೆಯ ತೋರ ಮೊಲೆಗಳ
ಮಿಸುಪ ತೊಡೆಗಳ ಚಾರು ಜಂಘೆಯ ಚರಣಪಲ್ಲವದ
ಎಸಳುಗಂಗಳ ತೊಳಗಿ ಬೆಳಗುವ
ಮುಸುಡ ಕಾಂತಿಯ ಮುರಿದ ಕುರುಳಿನ
ಬಿಸಜ ಗಂಧಿಯ ರೂಪನಭಿವರ್ಣಿಸುವಡರಿದೆಂದ ೧೩

ಪೂಸುವರೆ ಕತ್ತುರಿ ಜವಾಜಿಗ
ಳೈಸಲೇ ಪರಿಮಳವು ಪೂಸದೆ
ಸೂಸಿ ದೆಸೆ ಕಂಪಿಡುತ ಮಘಮಘಿಸುವಳು ಯೋಜನವ
ಈ ಸಮಸ್ತ ಮನುಷ್ಯಧರ್ಮದ
ದೋಷಗರ್ವಿತ ಧಾತುಗಳ ವಿ
ನ್ಯಾಸವೇ ದ್ರೌಪದಿಯ ಭಾವದ ಭಂಗಿ ಬೇರೆಂದ ೧೪

ಬೆರಳ ಚೆಲ್ವಿಕೆಯಿಂದ ಮುದ್ರಿಕೆ
ಮೆರೆಯೆ ಪಾಡಗ ನೇವುರಂಗಳು
ಕರ ಚರಣ ಸೌಂದರ್ಯದಲಿ ಬಲುಮೊಲೆಯ ಥಾಳದಲಿ
ಕೊರಳ ಮುತ್ತಿನಹಾರ ಸುಮನೋ
ಹರದ ಕದಪುಗಳಿಂದ ಕರ್ಣಾ
ಭರಣವೊಪ್ಪಿದವೇನನೆಂಬೆನು ರೂಪನಂಗನೆಯ ೧೫

ಎಸೆವಧರ ರಾಗದಲಿ ಮಿಗೆ ರಂ
ಜಿಸುವವೋಲ್ ಮಾಣಿಕ್ಯ ಮೆರೆದವು
ದಶನ ದೀಧಿತಿಯಿಂದ ಥಳಥಳಿಸಿದವು ಮುತ್ತುಗಳು
ಮಿಸುಪ ದೇಹಚ್ಛವಿಗಳಲಿ ಥಾ
ಳಿಸುವವೋಲ್ ಭೂಷಣದ ಹೇಮ
ಪ್ರಸರ ಮೆರೆದವು ಹೊಗಳೆ ಕವಿ ಯಾರಬುಜಲೋಚನೆಯ ೧೬

ಪರಿಮಳದ ಪರಮಾಣುಗಳ ಸಂ
ವರಿಸಿ ಮುಕ್ತಾಫಲದ ಕೆಂದಾ
ವರೆಯ ಮರಿದುಂಬಿಗಳ ವರ್ಣಾಂತರವನಳವಡಿಸಿ
ಸರಸ ವೀಣಾ ಧ್ವನಿಯ ಹಂಸೆಯ
ಗರುವ ಗತಿಗಳನಾಯ್ದು ಮನ್ಮಥ
ವರ ವಿರಿಂಚಿಯ ಸೃಜಿಸಿದನು ಪಾಂಚಾಲ ನಂದನೆಯ ೧೭

ಸರಸ ಲಾವಣ್ಯಾಂಬುಮಯ ತನು
ಸರಸಿಯಲಿ ಮುಳುಗಿರ್ದ ಯೌವನ
ಕರಿಯ ಕುಂಭಸ್ಥಳವೊ ವಿಪುಳ ಪಯೋಧರ ದ್ವಯವೊ
ತರಳನಯನವೊ ಶಫರಿಗಳೊ ತಾ
ವರೆಯೊ ಮುಖವೋ ತುಂಬಿಗಳೊ ನಿರಿ
ಗುರುಳುಗಳೊ ಮಣಿಗಣವೊ ರದನವೊ ಚಿತ್ರವಾಯ್ತೆಂದ ೧೮

ರಾಜಸೂಯದ ಕರ್ತೃವೋಲ್ ಜಿತ
ರಾಜಮಂಡಲವಾಯ್ತು ಮುಖವಿದು
ರಾಜರಾಜನ ಪೋಲ್ದುದಳಕಾವೇಷ್ಟಿ ತತ್ವದಲಿ
ರಾಜನುದ್ಯಾನದವೊಲಾಸ್ಯ ಸ
ರೋಜವಾಯ್ತು ತಮಾಲಪತ್ರ ವಿ
ರಾಜಿತವು ಜನಮೇಜಯ ಕ್ಷಿತಿಪಾಲ ಕೇಳೆಂದ ೧೯

ಜನಪ ಕೇಳುಪಲಾಲಿತಾಂಜನ
ವೆನೆ ಜಿತಾಕ್ಷ ವಿಪಕ್ಷವಾದವು
ವಿನುತ ಕರ್ಣ ಪ್ರಣಯಗಳು ವೃಷಸೇನ ವೈರದಲಿ
ಜನವಿಡಂಬನ ತಾರಕಾ ಮಂ
ಡನ ಕದರ್ಥಿತ ಕುಮುದವೆನೆ ಲೋ
ಚನ ಯುಗಳವೊಪ್ಪಿದವು ವರ ಪಾಂಚಾಲನಂದನೆಯ ೨೦

ಏನನೆಂಬೆನು ಮನಸಿಜನ ಮದ
ದಾನೆಯನು ಮನ್ಮಥನ ರತ್ನ ನಿ
ಧಾನವನು ಟಿಪ್ಪಣವನಂಗಜ ಮಂತ್ರ ಸೂತ್ರಕದ
ಮಾನಿನಿಯರಧಿದೈವವನು ಸು
ಜ್ಞಾನಕನ್ಯಾ ಮಾತೃಭವನ
ಸ್ಥಾನವನು ಮೂಲೋಕ ಮೋಹನವಶ್ಯ ಚಿತ್ರಕವ ೨೧

ನಾರಿಯನು ಸಂಸಾರಸುಖ ಸಾ
ಕಾರಿಯನು ಜನ ನಯನ ಕಾರಾ
ಗಾರಿಯನು ಮುನಿಧೈರ್ಯ ಸರ್ವಸ್ವಾಪಹಾರಿಯನು
ಧೀರರಿಗೆ ಮಾರಂಕವನು ವರ
ಪಾರಿಕಾಂಕ್ಷಿಯ ಚಿತ್ತಚೌರ್ಯ ವಿ
ಹಾರಿಯನು ದ್ರೌಪದಿಯನಭಿವರ್ಣಿಸುವಡಾರೆಂದ ೨೨

ನಳಿನಮುಖಿಯರ ಸಕಲಸೃಷ್ಟಿಗೆ
ಕಳಸವಿದು ಸೌಂದರ್ಯ ವಸನದ
ವಿಲಸವಿದು ರತಿರಮಣ ವೈಭವ ರತ್ನಕೋಶವಿದು
ಲಲನೆಯರ ಸೀಮಂತಮಣಿ ಜಗ
ದೊಳಗೆ ಚೆಲುವಿನ ಕಣಿ ತಪೋಧನ
ಕಳಭರಿಗೆ ಸೃಣಿಯೆನಲು ಮೆರೆದುದು ರೂಪವಂಗನೆಯ ೨೩

ಹೊಳೆ ಹೊಳೆದುದಾಭರಣ ರತ್ನಾ
ವಳಿಯ ರುಚಿ·ತನ್ಮಣಿ ರುಚಿಯ ಮು
ಕ್ಕುಳಿಸಿತಂಗಚ್ಛವಿ ತದಂಗ ಪ್ರಭೆಯನಡಹಾಯ್ದು
ಥಳಥಳಿಸಿದುದು ವದನ ಮುಖ ಮಂ
ಡಲದ ಕಾಂತಿಯನೊದೆದು ಕಂಗಳ
ಬೆಳಗು ವಿಸಟಂಬರಿದುದೇನೆಂಬೆನು ನಿತಂಬಿನಿಯ ೨೪

ಕಂಗಳಲಿ ಕುಡಿಮೋಳ ಹುಬ್ಬಿನ
ಹೊಂಗಿನಲಿ ಭಂಜವಣೆ ಭಾವದ
ಭಂಗಿಯಲಿ ಪತಿಕರಣೆ ಸಕಲ ಸಖೀ ಕದಂಬದಲಿ
ಇಂಗಿತದ ಬಿರಿಮುಗುಳ ಪರಿಮಳ
ವಂಗಹಾರ ವಿಲಾಸ ವಿಭ್ರಮ
ಭಂಗಿಗಳು ಬಿಬ್ಬೋಕ ಲಲಿತಾದಿಗಳು ದ್ರೌಪದಿಯ ೨೫

ವರ ವಸಂತನ ಬರವು ಜಾಜಿಯ
ಬಿರಿಮುಗುಳು ಮರಿದುಂಬಿಗಳ ನಯ
ಸರದ ದನಿ ಕರಿ ಕಳಭಲೀಲೆ ನವೇಕ್ಷು ರಸಧಾರೆ
ಮೆರೆವವೋಲ್ ಹೊಸ ಹೊಗರ ಜವ್ವನ
ಸಿರಿಯ ಜೋಡಣೆ ಜನಮನವನಾ
ವರಿಸಿದುದು ನಿಪ್ಪಸರದಲಿ ಪಾಂಚಾಲನಂದನೆಯ ೨೬

ಆರತಿಗಳೆತ್ತಿದರು ಬಳಿಕ
ಪ್ಪಾರತಿಯ ಹಾಯ್ಕಿದರು ಮುತ್ತಿನ
ಸಾರ ಸೇಸೆಯ ಸೂಸಿ ಹರಸಿ ಸುವಾಸಿನೀ ನಿಕರ
ಚಾರು ಮುಕುರವ ನೋಡಿ ನಿಂಪಳು
ಭಾರಣೆಯ ಗರುವಾಯಿಯಲಿ ಜಂ
ಬೀರ ಫಲವನು ಕೊಂಡಳಂಗನೆ ವಿಪ್ರಮಂತ್ರದಲಿ ೨೭

ಮುಂದೆ ಪಾಯವಧಾರು ಸತಿಯರ
ಸಂದಣಿಯ ಸಾಲಿನಲಿ ದಂಡಿಗೆ
ಗಿಂದುಮುಖಿ ಬಂದಳು ಸಿತಾಬ್ಜಕೆ ಲಕ್ಷ್ಮಿಯಂದದಲಿ
ಹಿಂದೆ ಮುಂದಿಕ್ಕೆಲದ ನಾರೀ
ವೃಂದ ನೆರೆದುದು ವೀರಪಟಹದ
ದುಂದುಭಿಯ ಡಂಬರದ ರವವಳ್ಳಿರಿದುದಂಬರವ ೨೮

ಸಾಲ ಝಲ್ಲರಿ ಮುಸುಕಿದವು ಸಮ
ಪಾಳಿಯಲಿ ಸೀಗುರಿಗಳಾಡಿದ
ವಾಲಿಯವಗಾಹಿಸದು ನೆಲನೆನಿತನಿತು ವಳಯದಲಿ
ಬಾಲೆಯರ ಮುಗ್ಧೆಯರನತಿ ಘಾ
ತಾಳೆಯರ ಕಡೆಗಣ್ಣ ಥಾಳದ
ಚಾಳೆಯರ ಚದುರೆಯರನಲ್ಲದೆ ಕಾಣೆ ನಾನೆಂದ ೨೯

ನಿರಿದಲೆಯ ಚೊಲ್ಲೆಯದ ತುಂಬಿಯ
ಮರಿಗುರುಳ ಬೈತಲೆಯ ಮುತ್ತಿನ
ಹೆರೆನೊಸಲ ನಿಡು ಪುಬ್ಬುಗಳ ಥಾಳಿಸುವ ಕದಪುಗಳ
ತುರುಗೆವೆಯ ನಿಟ್ಟೆಸಳಂಗಂಗಳ
ಮೆರೆವ ಸುಲಿಪಲ್ಲುಗಳೆಸೆವ ಸು
ಣ್ಣೊಗ್ಗರಳ ನಳಿತೋಳುಗಳ ನೀರೆಯರೈದಿತೊಗ್ಗಿನಲಿ ೩೦

ತೋರ ಮೊಲೆಗಳ ನಲಿವನಡು ಪೊರ
ವಾರಗಳ ನುಣ್ದೊಡೆಯ ಕಿರುದೊಡೆ
ಯೋರಣದ ಹಾವುಗೆಯ ಹೆಜ್ಜೆಯ ಹಂಸೆಗಳ ಗತಿಯ
ನೀರೆಯರ ಮೈಗಂಪುಗಳ ತನಿ
ಸೂರೆಗೆಳಸುವ ತುಂಬಿಗಳ ಕೈ
ವಾರಗಳ ಕಡು ಗರುವೆಯರ ನೆರೆದುದು ಸಖೀನಿವಹ ೩೧

ಕೀಲ ಕಡಗದ ವಜ್ರಲಹರಿಯ
ಜೋಲೆಯದ ಕಂಕಣದ ರವೆಯದ
ತೋಳಬಂದಿಯ ಕೊರಳ ತ್ರಿಸರದ ಬೆರಳ ಮುದ್ರಿಕೆಯ
ನೀಲರತುನದ ಪದಕ ಮಾಣಿಕ
ದೋಲೆಗಳ ಮೂಗುತಿಯ ಮುತ್ತಿನ
ಮೇಲು ಶೃಂಗಾರದ ಸಖೀಜನ ಸಂದಣಿಸಿತಲ್ಲಿ ೩೨

ವಿಲಸದೇಕಾವಳಿಯ ಮುತ್ತಿನ
ತಿಲಕ ಸೂಡಗ ಪಾಯವಟ್ಟದ
ಲಲಿತಬಂಧದ ವಜ್ರಲಹರಿಯ ತಾರಕಾವಳಿಯ
ಹೊಳೆವ ಕಾಂಚಿಯ ಕಿಂಕಿಣಿಯ ಸಂ
ಕುಲದ ನೇವುರ ವೀರ ಮುದ್ರಾ
ವಳಿಯ ಚರಣಾಭರಣದಬಲೆಯರೈದಿತೊಗ್ಗಿನಲಿ ೩೩

ಭ್ರೂಲತೆಯ ಬಿಲುಗಳ ಕಟಾಕ್ಷದ
ಕೋಲ ಹೊದೆಗಳ ಬಾಸೆಗಳ ಕರ
ಪಾಳಿಗಳ ಕಸ್ತುರಿಯ ತಿಲಕದ ಹರಿಗೆ ಹಲಗೆಗಳ
ತೋಳುಗಳ ಲೌಡಿಗಳ ಸೆಳ್ಳುಗು
ರೋಳಿಗಳ ಸುರಗಿಗಳ ಮನ್ಮಥ
ನಾಳು ನಡೆದುದು ದ್ರೌಪದಿಯ ದಂಡಿಗೆಯ ಬಳಸಿನಲಿ ೩೪

ತೋರ ಮೊಲೆಗಳ ದಂತಿ ಘಟೆಗಳ
ಚಾರು ಜಘನದ ಜೋಡಿಸಿದ ಹೊಂ
ದೇರುಗಳ ಸುಳಿಗುರುಳುಗಳ ಝಲ್ಲರಿಯ ಝಡಿಗಳ
ಚಾರುನಯನದ ಚಪಲಗತಿಗಳ
ಪಾರುವಂಗಳ ಮೇಲುವಸನದ
ಸಾರಸಿಂಧದ ಸೇನೆ ನಡೆದುದು ಸತಿಯ ಬಳಸಿನಲಿ ೩೫

ಯತಿಗಳಿಗೆ ಮೊನೆದೋರಿ ತಣಿಸದು
ವ್ರತಿಗಳಿಗೆ ಬೀರುತ ಸಮಾಧಿ
ಸ್ಥಿತರ ಮೂಗಿನ ಮೇಲಡಾಯುಧ ಧಾರೆಗಳನೆಳೆದು
ಶ್ರುತಿವಿಹಿತ ಸತ್ಕರ್ಮಿಗಳ ದೀ
ಕ್ಷಿತರ ಮತಿಯಲಿ ತಮ್ಮ ಮುದ್ರಾಂ
ಕಿತವನೊತ್ತುತ ಮೀರಿ ನಡೆದುದು ಯುವತಿಜನ ಕಟಕ ೩೬

ಆರು ನಿಲುವರು ಸಮ್ಮುಖಕೆ ಮಂದ
ನಾರಿಯರ್ಧದ ನಾರಿ ಹರಿ ತಾ
ಹೇರುರದ ಹೆಂಗುಸುರೆ ಬೊಮ್ಮನು ಮಗಳ ಮೊರೆಗೇಡಿ
ಘೋರವದು ಸುರಪತಿಯ ಕಥೆ ಮೈ
ಯಾರೆ ಹೊತ್ತನು ಮದನ ಮುದ್ರಾ
ಧಾರಿಯೆಂಬವೊಲೊದರಿದವು ಮುಂಗುಡಿಯ ಕಹಳೆಗಳು ೩೭

ಪಸರಿಸಿತು ತಂಬೆಲರು ಬೀತುದು
ಬಿಸಿಲ ಬಿಂಕ ಸರೋಜ ಸಂತತಿ
ಮುಸುಳಿದವು ಮದವೇರಿ ಮೆರೆದವು ತಾರಕಾ ನಿವಹ
ಒಸರಿದವು ಶಶಿಕಾಂತ ನೈದಿಲ
ಹಸರ ಹರಿದುದು ಚಕ್ರವಾಕದ
ಬೆಸುಗೆ ಸಡಲಿತು ಚಾರು ಚಂದ್ರಾನನೆಯ ಬರವಿನಲಿ ೩೮

ಹೊಳೆವ ಕಂಗಳ ಬೆಳಗಿನಲಿ ಕ
ತ್ತಲಿಸಿದವು ಕಾಮುಕರ ಮುಖ ತನು
ವಳಯ ಕಾಂತಿಯ ತಂಪಿನಲಿ ಬಾಡಿದವು ಬುದ್ಧಿಗಳು
ಲಲಿತವಿಭ್ರಮದಿಂದಹಂಕೃತಿ
ಶಿಲೆಗಳೊಡೆದವು ಮೋಹನದ ಹೊ
ಯ್ಲೊಳಗೆ ಹೊಳೆವಡಗಿದವು ಚಿತ್ತ ಮಹಾಮಹೀಶ್ವರರ ೩೯

ತರುಣಿಯರ ನವನೀಲ ಮಣಿಗಳ
ಕುರುಳ ಕಬರಿಯ ಭರದ ವರ ಕ
ಸ್ತುರಿಯ ತಿಲಕದ ಕಾಳಿಕೆಯ ಘನಕಾಂತಿಗಳ ಲಹರಿಗಳ
ಕೊರಳಹಾರದ ಕರ್ಣಪೂರದ
ಸರದ ಮೌಕ್ತಿಕ ರುಚಿಯ ಯಮುನಾ
ಸುರನದಿಯ ಸಂಗದಲಿ ಮುಳುಗಿತು ಸಕಲ ನೃಪ ನಿಕರ ೪೦

ಪರಿಮಳಕೆ ಮಿಗೆ ಕವಿವ ತುಂಬಿಗೆ
ಕೆರಳುವರು ಹುಬ್ಬಿನಲಿ ಪದ ನೇ
ವುರದ ನುಣ್ದನಿಗೆಳಸಿ ಮುತ್ತುವ ರಾಜಹಂಸೆಗಳ
ಹೊರೆಯ ಕೆಳದಿಗೆ ದೂರುವರು ಕೈ
ಯರಗಿಳಿಗೆ ತಮ್ಮಧರ ಬಿಂಬದ
ಮುರಿವರಿದು ಮುಖದಿರುಹುವರು ಮುಗ್ಧಾಂಗನಾನಿವಹ ೪೧

ಕಂಗಳೋರೆಯ ಥಾಳಿಸುವ ಹಾ
ಸಂಗಿಗಳ ಬಿಗುಹಿನ ದುಹಾರದ
ಭಂಗಿಗಳ ಬಲು ವಿಟರ ಕರಣದ ಸಾರಿಗಳ ಸೆರೆಯ
ಮುಂಗುಡಿಯ ನಿಜನಾರಿಯರ ಕವಿ
ವಂಗವಣೆಗಳ ಜೂಜುಗಾತಿಯ
ರಂಗನೆಯ ದಂಡಿಗೆಯ ಬಳಿವಿಡಿದರು ವಿದಗ್ಧೆಯರು ೪೨

ಹಾವುಗೆಯ ಸೀಗುರಿಯ ವರ ಚಮ
ರಾವಳಿಯ ಕರ್ಪೂರಗಂಧದ
ಹೂವುಗಳ ಕಸ್ತೂರಿಯ ಸಾದು ಜವಾಜಿ ಕುಂಕುಮದ
ತೀವಿದನುಪಮ ಭಾಜನ ವ್ರಜ
ನಾವಳಿಯ ಕನ್ನಡಿಯ ವಿವಿಧ ಸ
ಖೀ ವಿಳಾಸಿನಿಯರ ಕದಂಬಕವೈದಿತೊಗ್ಗಿನಲಿ ೪೩

ಧರಣಿಪತಿ ಕೇಳಖಿಳ ಪೃಥ್ವೀ
ಶ್ವರರ ಬಹಳಾಸ್ಥಾನದಲಿ ಮೋ
ಹರಿಸಿದರು ಮೋಹನದ ಮೋಡಾಮೋಡಿಯಬಲೆಯರು
ಅರಸುಗಳ ನಿಡುನೋಟವಲ್ಲಿಯ
ಗರುವೆಯರ ನಸುನೋಟ ತಮ್ಮೊಳು
ಬೆರಸಿ ಪೊಯ್ದಾಡಿದವು ಖಾಡಾಖಾಡಿಯಂದದಲಿ ೪೪

ದಾಯ ತಪ್ಪಿತು ಗರುವರಾಟ ವಿ
ಡಾಯಗೆಟ್ಟಿತು ವಿಟರಯೆನೋಟ ನ
ವಾಯಿಕಾರರ ಕೂಟ ಕುಸಿದುದು ಮಾರ ಶರಹತಿಗೆ
ಘಾಯವಡೆದುದು ಧ ತಿಯಘಾಟ ನ
ವಾಯಿ ಹೆಚ್ಚಿತು ಮತ್ತೆ ಬೇಟ ವ
ರಾಯತಾಕ್ಷಿಯ ಕೂಟಕೆಳಸುವ ಚದುರ ಭೂಮಿಪರ ೪೫

ಕೆಲಕಡೆಯ ಕೆಳದಿಯರ ಕಂಗಳ
ಹೊಳಹು ದುವ್ವಾಳಿಯಲಿ ಸುಮತಿ
ಸ್ಖಲಿತ ಕೆಂಧೂಳಿಯಲಿ ಮಾಸಿತು ಮನದ ಮಡಿವರ್ಗ
ಒಳಗೆಯೊತ್ತುವ ಧಗೆಯ ಹೊರಗಣ
ತಳಿತ ಬಿಮ್ಮಿನ ನಗೆಯ ನೃಪ ಮುಂ
ಡಲದ ಮೌಳಿಯನೇನನೆಂಬೆನು ರಾಯ ಕೇಳೆಂದ ೪೬

ಚೆಲುವಿಕೆಯ ಚೈತನ್ಯವೋ ಪರಿ
ಮಳದ ಪುತ್ಥಳಿಯೋ ಲತಾಂಗಿಯ
ಸುಳಿವೊ ಲಾವಣ್ಯೈಕ ರಸ ಸಾಕಾರ ವಿಭ್ರಮವೊ
ಲಲಿತ ಶೃಂಗಾರಾಬ್ಧಿ ಮಥನೋ
ಜ್ವಲಿತ ಸುಧೆಯೋ ಸಾಧಕರಿಗಿದು
ಫಲಿಸಿದರೆ ಕೃತಕೃತ್ಯರವರೆಂದುದು ಸುರಸ್ತೋಮ ೪೭

ಈಕೆಯುಂದುದಿಸಿದರೆ ಮದನಂ
ಗೇಕೆ ದೇಹತ್ಯಾಗವಹುದು ಪಿ
ನಾಕಿ ತಾ ವೈರಾಗ್ಯದಲಿ ಹೊಗುವನೆ ತಪೋವನವ
ಸಾಕು ಗೌತಮಮುನಿಯ ಮುಳಿಸಿನ
ಕಾಕು ನುಡಿ ಫಲಿಸುವುದೆಯೆನುತಾ
ನಾಕಪತಿ ರಂಭಾದಿ ಸತಿಯರ ನೋಡಿದನು ನಗುತ ೪೮

ತಂದರಾ ಪಾಂಚಾಲೆಯನು ಹೊ
ನ್ನಂದಣವಲಾಸ್ಥಾನ ಸೀಮೆಗೆ
ಮುಂದೆ ಸಿಂಹಾಸನದ ಸಾಲ ಮಹಾಮಹೀಶ್ವರರ
ಸಂದಣಿಯಲವರವರನಿವರಿವ
ರೆಂದು ವಿವರಿಸಬೇಕೆನುತ ನೃಪ
ನಂದನನು ಹೊದ್ದಿದನು ಕಮಲಾನನೆಯ ದಂಡಿಗೆಯ ೪೯

ತಂಗಿ ನೋಡೌ ತಾಯೆ ನಿನ್ನಯ
ಕಂಗಳೊಲಿವರೆ ಚಿತ್ತವಾರ್ಥಿತ
ರಂಗದಲಿ ತೂಗುವರೆ ತೋರುವೆನವನಿಪಾಲಕರ
ಇಂಗಿತದಲವರಂತರಂಗವ
ನಂಗವಟ್ಟದ ಬಳಕೆಯನು ಬಿಹಿ
ರಂಗದಲಿ ನೀನರಿಯೆನುತ ನುಡಿದನು ನಿಜಾನುಜೆಗೆ ೫೦

ಈತ ದುರ್ಯೋಧನ ಮಹೀಶ್ವರ
ನೀತ ದುಶ್ಶಾಸನನು ದುರ್ಜಯ
ನೀತ ದುಶ್ಕಳನೀತ ದುಸ್ಸಹನೀತ ಚಿತ್ರರಥ
ಈತ ದುರ್ಮದನೀತ ಚಿತ್ರಕ
ನೀತಗಳು ಕುರುವಂಶದಲಿ ವಿ
ಖ್ಯಾತರಬಲೆ ನಿರೀಕ್ಷಿಸಾ ಧೃತರಾಷ್ಟ್ರನಂದನರ ೫೧

ನೋಡಳವರನು ನುಡಿಸಲೀತನ
ಕೂಡೆ ಭಾವದೊಳಿವರ ಕೊಡಹೀ
ಡಾಡಿದಳಲಾಯೆನುತ ಧೃಷ್ಟದ್ಯುಮ್ನ ನಸುನಗುತ
ನೋಡು ತಂಗಿ ವಿರಾಟನುತ್ತರ
ಗೂಡಿ ಕೀಚಕರನು ಶ್ರುತಾಯುಧ
ಮೂಡಣರಸುಗಳನು ರವಿಧ್ವಜ ರೋಚ ಮಾನಕರ ೫೨

ನೀಲ ಚಿತ್ರಾಯುಧನು ದಕ್ಷಿಣ
ಚೋಳ ಕೇರಳ ಪಾಂಡ್ಯ ಧರಣೀ
ಪಾಲಕರೊಳೀ ಚಂದ್ರಸೇನ ಸಮುದ್ರಸೇನಕರು
ಲೋಲನಯನೆ ಕಳಿಂಗಧರಣೀ
ಪಾಲನೀತನು ಚೇಕಿತಾನ ನೃ
ಪಾಲನೀತನು ಭಾನುದತ್ತಮಹೀಶ ನೋಡೆಂದ ೫೩

ಇತ್ತಲೀಕ್ಷಿಸು ಪೌಂಡ್ರಕನ ಭಗ
ದತ್ತನನು ಕಾಂಭೋಜನನು ಹರ
ದತ್ತನನು ವರಹಂಸ ಡಿಬಿಕರ ಮಾದ್ರಭೂಪತಿಯ
ಇತ್ತಲು ಜರಾಸಂಧ ಮಣಿಮಾ
ನಿತ್ತ ಸಹದೇವನು ಬೃಹದ್ರಥ
ನಿತ್ತಲೀತನು ದಂಡಧಾರಕ ನೃಪನು ನೋಡೆಂದ ೫೪

ಭೂರಿ ಭೂರಿಶ್ರವನು ದಕ್ಷಿಣ
ವೀರಬಾಹ್ಲಿಕ ವಿಂಧ್ಯ ಚಿತ್ರ ಭ
ಗೀರಥನು ನೃಪವರ ಜಯದ್ರಥ ಶಿಬಿ ಶ್ರುತಾಯುಧರು
ವೀರ ವೃದ್ಧಕ್ಷತ್ರ ಸೃಂಜಯ
ಚಾರು ಭುಜಬಲ ಸೋಮದತ್ತ ಮ
ಹೀರಮಣರಿವರಿತ್ತಲಿದೆ ತರಳಾಕ್ಷಿ ನೋಡೆಂದ ೫೫

ಈತ ರುಕ್ಮಾಂಗದ ಜಯದ್ಬಲ
ನೀತ ಶ್ರುತಸೇನಾಚ್ಯುತಾಯುಧ
ರೀತಗಳು ನಿಯುತಾಯು ದೀರ್ಘೋದರ ಮಹೋದರರು
ಈತ ದಮಘೋಷಾತ್ಮಜನು ವಿ
ಖ್ಯಾತ ಶಿಶುಪಾಲನು ಮಹಾಬಲ
ನೀತನಶ್ವತ್ಥಾಮ ಸೌಬಲನೀತ ನೋಡೆಂದ ೫೬

ಭೂತಳದ ರವಿಯಂತೆ ಹೊಳೆಹೊಳೆ
ವಾತ ಕರ್ಣನು ತನುಜರೀತಂ
ಗೀತಗಳು ವೃಷಸೇನನಗ್ಗದ ಚಿತ್ರಸೇನಕರು
ಈತನಾಹನೆ ನೋಡೆನಲು ಭಾ
ವಾತಿಶಯ ಸಂಬಂಧ ಭಾವದೊ
ಳೀತನನು ನೋಡಿದಳು ತಿರುಹಿದಳಬಲೆ ಲೋಚನವ ೫೭

ಉಕ್ಕಿದಾ ಕಿವಿವೇಟ ಕಣ್ ಬೇ
ಟಕ್ಕೆ ತಂದುದು ಕಂಗಳೀಕೆಯ
ಮುಕ್ಕುಳಿಸಿ ಮೈ ಸೋಂಕಿನಲಿ ಲಟಕಟಸಿದುದು ಹೃದಯ
ಸಿಕ್ಕಿತಳಲಿಗೆ ಸೋತು ಸೊಕ್ಕಿನ
ಚುಕ್ಕಿಯೋ ಚಾಪಳವೊ ಸಿದ್ಧಿಯೊ
ಅಕ್ಕಜವೊ ತಾನೆನುತ ಚಿಂತಿಸಿತಾ ನೃಪವ್ರಾತ ೫೮

ಇತ್ತ ನೋಡೌ ತಂಗಿ ಯದು ಭೂ
ಪೋತ್ತಮನನಮರಾರಿ ಕದಳೀ
ಮತ್ತದಂತಿಯ ನಿಖಿಳ ನಿಗಮಾವಳಿ ಶಿರೋಮಣಿಯ
ಉತ್ತರೋತ್ತರ ರಮ್ಯಮೂರ್ತಿಯ
ನುತ್ತಮಾಮಲ ಕೀರ್ತಿಯನು ಮನ
ಹತ್ತುವಡೆ ಹಳಿವಿಲ್ಲ ಕೃಷ್ಣನ ವರಿಸು ನೀನೆಂದ ೫೯

ಮದನನಯ್ಯನು ಮೂಜಗವ ಮಾ
ಡಿದನ ತಾತನು ರೂಪ ವಿಭವವ
ನಿದರೊಳಗೆ ನೀ ನೋಡಿಕೋ ಯಾದವ ಶಿರೋಮಣಿಯ
ಸುದತಿಯರ ಸೇರುವೆಗಳ ನೋ
ಡಿದರೆ ಧಾರುಣಿ ಲಕ್ಷ್ಮಿ ಕೃಷ್ಣನ
ಪದಯುಗವನೋಲೈಸುತಿಹರಬುಜಾಕ್ಷಿ ಕೇಳೆಂದ ೬೦

ಎನಲು ಭಕುತಿಯ ಭಾವರಸದಲಿ
ನೆನೆದು ಹೊಂಪುಳಿವೋಗಿ ರೋಮಾಂ
ಚನದ ಮೈಯುಬ್ಬಿನಲಿ ತನು ಪುಳಕಾಂಬು ಪೂರದಲಿ
ಮನದೊಳಗೆ ವಂದಿಸಿದಳೆನಗೀ
ತನಲಿ ಗುರುಭಾವನೆಯ ಮತಿ ಸಂ
ಜನಿಸಿತೇನೆಂದರಿಯೆನೆಂದಳು ಕಮಲಮುಖಿ ನಗುತ ೬೧

ಹಿರಿಯನೀ ಕೃಷ್ಣಂಗೆ ನೀಲಾಂ
ಬರನು ನೋಡಾದೊಡೆ ಮುರಾರಿಯ
ಹಿರಿಯ ಮಗನನು ಲೋಕ ಮೂರರ ಬಂದಿಕಾರನನು
ಹರನ ಕಣ್ಣಿಗೆ ಬಗೆಯನೆಂಬೀ
ಬಿರುದು ಮನ್ಮಥನೀತನೀತನ
ವರ ತನುಜನನಿರುದ್ಧನಿದು ಯದುರಾಜಕುಲವೆಂದ ೬೨

ಸಾರಣನು ಕಲಿ ಸಾಂಬನೀತನು
ಚಾರು ದೀಪಕನೀತನಮಲಾ
ಕ್ರೂರ ಸತ್ಯಕನೀತ ಸಾತ್ಯಕಿ ಈತ ಕೃತವರ್ಮ
ಸಾರವೌಂಜಸನೀತನೀತ ವಿ
ದೂರಣಾದಿ ಸಮಸ್ತ ಯಾದವ
ವೀರರಿದಸಂಖ್ಯಾತ ಕೃಷ್ಣ ಕುಮಾರರಿವರೆಂದ ೬೩

ಜಗವನಿಂದ್ರಿಯ ಕರಣ ವಿಷಯಾ
ದಿಗಳನೆಲ್ಲವನೆತ್ತಿ ಮುಖದಲಿ
ತೆಗೆದು ಶ್ರುತಿಶಿರದಮಲ ತತ್ತ್ವವನರಸುವಂದದಲಿ
ಬಗೆಯ ಬಯಕೆಯ ಸೊಗಸುಗಳ ದಾ
ಯಿಗನನರಸುತ ಕುಡಿತೆಗಣ್ಣಲಿ
ಮೊಗೆದು ಸೂಸಿದಳಂಬುಜಾನನೆಯಖಿಳ ನೃಪಜನವ ೬೪

ಕೆಲರು ಮಧುರಾಪಾಂಗದಲಿ ಕಂ
ಗಳ ಮರೀಚಿಯ ಬೆಳಗಿನಲಿ ಕೆಲ
ರೆಳೆನಗೆಯ ಮಿಂಚಿನಲಿ ಸಖಿಯರ ಮೇಳವಾತಿನಲಿ
ಲಲನೆ ನೋಡಿದಳೆಂದು ಸೊಗಸಿನ
ಲೊಲಿವ ಸಖಿಯರಿಗೆಂದಳೆಂದೊಳ
ಗೊಳಗೆ ಬೆರೆತರು ಬಯಲು ಮದುವಿನ ಬಾಯ ಸವಿಗಳಲಿ ೬೫

ಗರ ವೆಯಿಂಗಿತವರಿದು ದಂಡಿಗೆ
ಮುರಿದೊಡನೆಯ್ತಂದುದೀಕೆಯ
ನೆರವಿ ಕಳುಹುತ ಕಂಗಳಲಿ ಕರಣೇಂದ್ರಿಯಂಗಳಲಿ
ಬರಿಯ ಡಿಂಬದ ಡೊಂಬಿನಲಿ ಕೇ
ಸರಿಯ ಪೀಠವನಿಳಿಯದಿರ್ದರು
ಧರಣಿಪರು ಮುರವೈರಿ ಗಂಗಾಸೂನು ಹೊರತಾಗಿ ೬೬

ಮಡಿಸಿದೆಲೆ ಬೆರಳೊಳಗೆ ಬಾಯೊಳ
ಗಡಸಿದೆಲೆ ಬಾಯೊಳಗೆ ಸಚಿವರ
ನುಡಿಯ ಕೇಳರು ಸುಳಿಯ ಕಾಣರು ಲೋಚನಾಗ್ರದಲಿ
ಕಡುಮುಳಿದ ಕಂದರ್ಪ ಶರವವ
ಘಡಿಸಿ ಕೈಗಳ ನೋಡಿ ನೃಪರೆವೆ
ಮಿಡುಕದಿರ್ದರು ಬೆರಳ ಮೂಗಿನ ಹೊತ್ತ ದುಗುಡದಲಿ ೬೭

ರಾಯನೆಂದನು ಸಕಲಧರಣೀ
ರಾಯರನು ಮನ್ನಿಸದೆ ಮರಳಿದ
ಳಾಯತಾಕ್ಷಿ ಮಹಾಸ್ವಯಂವರದಲಿ ಮಹಾದೇವ
ಜೋಯಿಸರ ಹೋರಗರ ಹೇಳಿಕೆ
ಹೋಯಿತೇ ಹೊಳ್ಳಾಗಿ ಪಾಂಡವ
ರಾಯರನು ತೋರಿಸನೆ ಗದುಗಿನ ವೀರನಾರಾಯಣ ೬೮

## ಹದಿನಾಲ್ಕನೆಯ ಸಂಧಿ

ಸೂ. ತಮತಮಗೆ ತವಕದಲಿ ಭೂಪೋ
ತ್ತಮರು ಹೋರಿದು ಬಳಲಿ ಜಾತ
ಶ್ರಮರು ಹಿಮ್ಮೆಟ್ಟಿದರು ಗೆಲಿದುದು ಧನು ಮಹಾರಥರ

ಕೇಳು ಜನಮೇಜಯನೃಪತಿ ಪಾಂ
ಚಾಲೆ ಪೊಕ್ಕಳು ಭದ್ರಮಂಟಪ
ಶಾಲೆಯನು ಮರಳಿದುದು ಮನ್ಮಥನೊಡ್ಡು ಸತಿಯೊಡನೆ
ಬಾಲೆಯನು ನಿಜರೂಪ ದರ್ಪದೊ
ಳಾಳಲರಿದಿರೆ ಬಾಹುಬಲದಲಿ
ಸೋಲಿಸುವಡನುವಾಗಿಯೆಂದರು ಹೊಯ್ದು ಡಂಗುರವ ೧

ಇದೆ ಮಹಾಧನು ಬಾಣಪಂಚಕ
ವಿದೆ ನಭೋಗ್ರದ ಯಂತ್ರ ಹೊಳವು
ತ್ತಿದೆ ವಿಭಾಡಿಸಿ ಮೆರೆವನಾವನು ಬಾಹು ವಿಕ್ರಮವ
ಇದುವೆ ಕಬ್ಬಿನ ಬಿಲು ಶರಾವಳಿ
ಯಿದು ಕುಸುಮಮಯ ಯಂತ್ರವಬಲೆಯು
ಹೃದಯವಾತನ ರಮಣನಾತನೆ ಕುಸುಮ ಶರನೆಂದ ೨

ಎಂದು ಸಾರಿದು ಭಾರಿ ಧನುವನು
ತಂದು ಧರೆಗಿಳುಹಿದರು ಯಂತ್ರವ
ನಂದವಿಟ್ಟರು ಗಗನದಲಿ ಗವಸಣಿಗೆಗಳನುಗಿದು
ಮುಂದೆ ಕೂರಂಬುಗಳ ಥರಥರ
ದಿಂದ ನಿಲಿಸಿ ಸುಗಂಧದಕ್ಷತೆ
ಯಿಂದ ಪೂಜೆಯ ರಚಿಸಿದರು ವೈದಿಕ ವಿಧಾನದಲಿ ೩

ಮಸಗಿದುದು ಬಹು ವಾದ್ಯರವ ನಿ
ಪ್ಪಸರದಲಿ ನಿಸ್ಸಾಳತತಿ ಗ
ರ್ಜಿಸಿದವಾವರ್ಜಿಸುವವೋಲ್ ಘನ ಯಂತ್ರಭೇದಿಗಳ
ಒಸಗೆಯಾಟವೊ ಬಿಲ್ಲ ಹೊಯ್ಲಿನ
ಹಸುಗೆಯಾಟವೊ ಗರುವರಿಗೆ ಗಂ
ಗಸೆಯ ಮಾಡಿತು ಚಾಪವಿತ್ತಲು ಭೂಪ ಕೇಳೆಂದ ೪

ನೆರವಿಯಲಿ ನಾನಾ ದಿಗಂತದ
ಧರಣಿಪತಿಗಳ ಹಮ್ಮಿಕೆಯಲು
ಬ್ಬರಿಸಿ ಹೊಕ್ಕರು ಬೇರೆ ಬೇರೊಬ್ಬೊಬ್ಬರುರವಣಿಸಿ
ಹರಗಿರಿಗೆ ಹುಲು ರಕ್ಕಸರು ಮ
ತ್ಸರಿಸುವಂತಾಯ್ತೇನನೆಂಬೆನು
ಧರೆಯ ಬಿಡದೀ ಧನು ವಿಭಾಡಿಸಿ ಕೆಡಹಿತವನಿಪರ ೫

ಹಾರ ಹರಿದುದು ಕರ್ಣಪೂರದ
ಚಾರು ಮಣಿಗಳು ಸಡಲಿದುವು ಪದ
ವೀರ ನೇವುರ ನೆಗ್ಗಿದವು ಕುಗ್ಗಿದವು ನೆನಹುಗಳು
ನಾರಿಯರ ಕೈ ಹೊಯ್ಲು ನಗೆಯು ನಿ
ಹಾರ ಜಡಿದುದು ಮುಸುಕುದಲೆಯ ಮ
ಹೀ ರಮಣರೋಸರಿಸಿ ಸಿಂಹಾಸನವ ಸಾರಿದರು ೬

ಮಿಡುಕದೀ ಧನು ನಮ್ಮ ರಥಾಡಿಸಿ
ಕೆಡಹಿತವನಿನ್ನಾರು ಕೊರಳಲಿ
ತೊಡಿಸಿ ತಿರುವನು ಸೆಳೆದು ಬಿಡುವರೊ ಯಂತ್ರದಲಿ ಶರವ
ಕಡುಹಿನಣ್ಣನ ಕಾಂಬೆವೈಸಲೆ
ನುಡಿದು ಮಾಡುವುದೇನೆನುತ ಸಿರಿ
ಮುಡಿಯ ಮುಸುಕಿನ ರಾಯರಿದ್ದರು ಬಯಲ ಬಿಂಕದಲಿ ೭

ಐಸಲೇ ಸೌಭಾಗ್ಯವೆಮಗೆ ಶ
ರಾಸನಾಕರುಷಣದೊಳತಿ ಬೊ
ಳ್ಳಾಸದಲಿ ಡಾವರಿಸಿ ಗೆಲಿದಳು ದ್ರುಪದಸುತೆ ನೃಪರ
ಲೇಸು ತಪ್ಪೇನಿದಕೆನುತ ಭ
ದ್ರಾಸನವನಿಳಿದುಲಿವ ತೊಡರಿನ
ಘೋಷಣೆಯ ಘಳಿಲುಗಳ ಮಗಧ ನೃಪಾಲನೈತಂದ ೮

ಬಿಲ್ಲ ಹೊರಗೈದಿದನು ಚೌಪಟ
ಮಲ್ಲ ನೋಡಿದನೈಸಲೇ ತ
ಪ್ಪಲ್ಲೆನುತ ಮೇಲ್ದಿರುಹಿದನು ಮುಂಗೈಯ ಸರಪಣಿಯ
ಬಿಲ್ಲನೆತ್ತಿದರಿವನನಂಗನೆ
ಯೊಲ್ಲಳೋ ಮೇಣೊಲಿವಳೋ ಮಿಗೆ
ಬಲ್ಲಿದನು ತಾನೀತನೆನುತಿರ್ದುದು ಸಖೀನಿವಹ ೯

ಈತ ಕುಸಿದೆತ್ತಿದಡೆ ಧನು ಮಾ
ರಾತುದಿವನೌಕಿದಡೆ ಕಾರ್ಮುಕ
ವೀತನಾರೆಂದರಿಯದಿವನೌಡೊತ್ತಿ ಮೈ ಬಲಿದ
ಘಾತಿಯಲಿ ಘಲ್ಲಿಸಿದಡಾ ಧನು
ಸೋತುದೆವೆಯಂತರಕೆ ತೊಲಗದು
ಧಾತುಗುಂದಿದನಳ್ಳಿರಿದವಳ್ಳೆಗಳು ಮಾಗಧನ ೧೦

ಬೆಮರನಾರಿಸಿಕೊಂಡು ವಿಗತ
ಶ್ರಮನು ಮೊಳಕಾಲಿಕ್ಕಿ ದಂಡೆಯೊ
ಳಮರಿ ದೇಹವ ಬಲಿದು ವಕ್ಷದೊಳೌಂಕಿ ಗಾಢದಲಿ
ಕುಮತಿಯಲ್ಲಾಡಿದರೆ ಬಿಟ್ಟುದು
ಅಮಮ ಜವೆಮಾತ್ರಕ್ಕೆ ಘನ ವಿ
ಕ್ರಮವನೊಡೆದುದು ಸದೆದುದಾತನ ಗರ್ವವಿಭ್ರಮವ ೧೧

ಕೇಳಿದನು ಕಾಂತಾಕದಂಬದ
ಘೋಳುಗಳು ಘೋಳೆಂಬ ನಗೆಗಳ
ಕಾಳು ಮಾಡಿದನೇಕೆ ಧನು ತಾನೇಕೆ ಸುಡುಯೆನುತ
ಬೇಳುವೆಯಲುಡಿದಂಕದವೊಲು
ಬ್ಬಾಳುತನ ಪೈಸರಿಸೆ ಮುಸುಕಿನ
ಮೌಳಿ ಹಿಮ್ಮೆಟ್ಟಿದನು ಕಡೆಯವ ತಿರುಗಿ ಕಿರುದೊಡೆಗೆ ೧೨

ಕೆರಳಿದನು ದಮಘೋಷನಂದನ
ನರರೆ ದಿಟ್ಟನ ಧನು ವಿಭಾಡಿಸಿ
ತೆರಳಿಚಿತಲಾ ವಿಗಡ ಚಕ್ರಾಯುಧನ ಮಾಗಧನ
ಹರಿಬವೆನ್ನದು ಹೊಳ್ಳುಗಳೆವನು
ದುರುಳ ಧನುವನು ನಗುವ ಕನ್ನೆಯು
ತುರುಬು ಕೊಯ್ಯುವೆನೆನುತ ಕಲಿ ಶಿಶುಪಾಲನೈತಂದ ೧೩

ಇವನಲೇ ರಾವಣನು ಮುನ್ನಿನ
ಭವದೊಳಗೆ ತಪ್ಪಿಲ್ಲೆನುತ ಜನ
ನಿವಹ ನಡುಗಿತು ಕೋಮಲಾಂಗಿಯ ಪುಣ್ಯವಂತೆನುತ
ಅವನಿಪತಿ ಕೇಳಣೆದನಿವ ಚಾ
ಪವನು ಬೋಳೈಸಿದನು ಬಲುಹೋ
ಶಿವಯೆನುತ ಸೀವರಿಸಿದನು ಡಾವರಿಸಿದನು ಧನುವ ೧೪

ಏನನೆಂಬೆನು ಧನು ಸಘಾಡದ
ಮಾನಭಂಗದ ಮೊದಲ ಮನೆಯೆನೆ
ಮಾನಿನಿಯುರಪಹಾಸ್ಯವೀ ಜನರೀ ನೃಪಾಲಕರ
ಹೀನ ನುಡಿಗಳ ಕಂಡು ದೈತ್ಯ ಸ
ಮಾನ ಮನದಲಿ ನೊಂದು ತಿರುಗಿದ
ನೇನನೆಂಬೆನು ಸದೆದುದಾತನ ವರ್ಗವಿಭ್ರಮವ ೧೫

ಕಂಡು ಮಾಗಧ ಕರೆದನೀ ಧನು
ಚಂಡಿಯಿದು ನಮಗಲ್ಲ ನಾವ್ ಮುಂ
ಕೊಂಡು ತಪ್ಪಿತು ನೊಪ್ಪಿತಾದುದು ಭಾರಿಯುಗ್ಗಳಿಕೆ
ಭಂಡರೀ ಭೂಮಿಪರು ದ್ರುಪದನ
ಗುಂಡುದೊತ್ತಿರು ನಗೆಯನಾನಲಿ
ಮುಂಡೆಗಳಲಿವರೆನುತ ಹಾಯ್ದರು ತಮ್ಮ ಪಟ್ಟಣಕೆ ೧೬

ಗರುವರಲ್ಲಾ ಚೈದ್ಯ ಮಾಗಧ
ರಿರದೆ ತಮ್ಮಯ ಪುರಕೆ ಗಮಿಸಿದ
ರರಸುಗಳ ಮಿಕ್ಕವರ ವಿಧಿಯನು ಕೇಳು ನರನಾಥ
ಧರಧುರದೊಳಭಿಮಾನಹಾನಿಯು
ಹುರುಳಹುದು ಬಿಲು ಹೋರಟೆಗೆ ನಿಲ
ಲರಿದೆನುತ್ತಂಗವಣೆಗುಂದಿತು ನೆರೆದ ನೃಪನಿಕರ ೧೭

ಮರುಳೆ ಪಾಂಚಾಲನ ಕುಮಾರಿಯ
ವರ ಕಟಾಕ್ಷದ ಬೀಸುವಲೆಯಲಿ
ಶರ ಮಹಾಧನುವೆಂಬ ಬಲುದಡಿವಲೆಯನಳವಡಿಸಿ
ಧರಣಿಪಾಲ ಮೃಗಂಗಳನು ಸಲೆ
ಬರಿಸಿ ಸದೆದನು ಹೊಲ್ಲೆಹೇನಂ
ತಿರಲಿ ನೋಡುವೆನೆನುತ ಶಲ್ಯನೃಪಾಲನೈತಂದ ೧೮

ಅಗ್ಗಳೆಯನಾ ಮಗಧ ಮಾತಿನ
ಲಗ್ಗಿದನು ಶಿಸುಪಾಲ ಸೋಲದ
ಸುಗ್ಗಿಯಿಬ್ಬರಿಗಾಯ್ತು ಹಲಬರಿಗಾಯ್ತು ರಣಧೂಳಿ
ತಗ್ಗುವುದೋ ಧನು ಧನುವಿಘಾತಿಗೆ
ಮುಗ್ಗುವನೊ ಮಾದ್ರೇಶನಿವರೊಳ
ಗಗ್ಗಳೆಯನಹನೆಂದು ನೋಡಿದರಂದು ನಾರಿಯರು ೧೯

ಬಂದನೀತನು ಧನುವ ಸಾರಿದು
ನಿಂದು ಸಂವರಿಸಿದನು ಕಾಂತಾ
ವೃಂದವನು ನೋಡಿದನು ಮನದಲಿ ಧಿಕ್ಕು ಧಿಗಿಲೆನುತ
ಸಂದಣೆಯು ನಭಕೊತ್ತಿ ಫಣೆಯಲಿ
ಮಂದರವ ಬಿಗಿವಂತೆ ಭುಜದಲಿ
ಮುಂದುವರಿದವುಚಿದನು ದಂಡೆಯನಿಕ್ಕಿ ಕೋಪದಲಿ ೨೦

ಕೊಳ್ಳದೀ ಧನುವೀತನುಬ್ಬಿನೊ
ಳಳ್ಳೆಗೊಬ್ಬಿನೊಳೌಕಿ ತೊಡರಿನ
ಫಲ್ಲಣೆಯ ಘನಕುಲಿಯೆ ಪಂಟಿಸಿ ನಿಮಿಷ ಮಾತ್ರದಲಿ
ಬಿಲ್ಲು ಬಿಡದವನಿಯಲಿ ಬಿದ್ದನು
ಡೊಳ್ಳು ಮೇಲಾಗಿತ್ತ ಸತಿಯರು
ಘೊಳ್ಳೆನಲು ಸುಡು ಘೋರ ಧನುವನೆನುತ್ತ ಹೊರದೆಗೆದ ೨೧

ಹಿಂಗಿದನು ಮಾದ್ರೇಶನೀ ಧನು
ಭಂಗಿಸಿತು ಮಾನ್ಯರನು ಜಡವಿದು
ಜಂಗಮತ್ವವಲೇನಹುದೊ ರ್ಕ್ಷೋಭಿಸಿತಲ್ಲೆ ಜಗವ
ಅಂಗನಾ ಪಾಣಿಗ್ರಹಣ ರಾ
ಯಂಗೆ ತಾನೀ ದುಷ್ಟ ಧನುವನು
ಭಂಗಬಡಿಸದೆ ಬಿಡೆನೆನುತ ಕರ್ಣನೈತಂದ ೨೨

ಈತನರ್ಜುನನಲ್ಲಲೇ ರೂ
ಪಾತಿಶಯವುಳ್ಳಾತ ಯಂತ್ರವ
ನೀತ ಗೆಲಿದರೆ ಪುಣ್ಯವೈಸಲೆ ತಂಗಿಗನುಸಾರಿ
ಈತ ವರನಹುದೆನುತ ಲಲನಾ
ಜಾತವಾತನನೀಕ್ಷಿಸುತ ಸಂ
ಪ್ರೀತಿಯಲಿ ಕೊಂಡಾಡುತಿರ್ದುದು ರಾಯ ಕೇಳೆಂದ ೨೩

ತುಡುಕಿದನು ಚಾಪವನು ಮಹಿಯಿಂ
ಮಿಡುಕದಿರೆ ಮಂಡಳಿಸಿ ಝಾಡಿಸಿ
ಜಡಿದು ಜರದೌಂಕಿದನು ದಂಡೆಯನಿಕ್ಕಿ ಕೋಪದಲಿ
ಹೊಡಕರಿಸಿ ಸತ್ವಾತಿಶಯವಿ
ಮ್ಮಡಿಸೆ ಸರ್ಷಪ ಮಾತ್ರ ತಿರುವನು
ತೊಡಿಸಲರಿಯದೆ ಹಿಂಗಿ ಮೌನದೊಳಿರ್ದನಾ ಕರ್ಣ ೨೪

ಇವರು ನಾಲ್ವರಿಗೊಂದೆ ಪಥ ಹಲ
ರವಗಡಿಸಿ ಮುನ್ನಳುಕಿದರು ಬಹು
ಭುವನಪತಿಗಳು ಭಾರ ಧನುವಿದೆ ಭಾಮಿನಿಯು ಮುಂದೆ
ಎವಗೆ ತವಗಿದು ವಶವೆ ಬಾವ
ನ್ನವನು ವೇಷ್ಟಿಸಿ ಭುಜಗವಿದೆಯೆಂ
ದವನಿಪರು ಹೊರಗುಂದಿದರು ಭಯಮುಖದ ದುಗುಡದಲಿ ೨೫

ಕ್ಷಿತಿಪ ಕೇಳ್ಳೆ ವಿಗಡ ಚಾಪ
ವ್ಯತಿಕರಕೆ ದುರ್ಯೋಧನಾದಿ
ಕ್ಷಿತಿಪತಿಗಳಂಜಿದುದ ಕಂಡನು ನಗುತ ಬಲರಾಮ
ಕೃತಕ ಧನುವನು ಮುರಿದು ದ್ರುಪದನ
ಸುತೆಯ ಮುಂದಲೆವಿಡಿದು ತಹೆನು
ಧೃತನಲಾ ಪಾಂಚಾಲನೆನುತಿಳಿದನು ವರಾಸನವ ೨೬

ಹಲಧರನ ಮುಸಕವನು ಕಂಡನು
ನಳಿನನಾಭನಿದೇನು ಪೀತವ
ನಿಳಿದಿರೆಲ್ಲಿಗೆ ಗಮನವಾವುದು ಕಾರ್ಯಗತಿ ನಿಮಗೆ
ತಿಳುಹಿಯೆನೆ ಬೇರೇನು ಯಂತ್ರವ
ಕಳಚಿ ಬಿಸುಟು ಲತಾಂಗಿಯನು ಹಿಡಿ
ದೆಳೆದು ತಹೆನೆನಲೈಸಲೇ ಕೇಳೆಂದನಸುರಾರಿ ೨೭

ಏನಹರು ನಿಮಗಿಂದು ಕುಂತೀ
ಮಾನಿನಿಯರತ್ತೆಯರಲೇ ತ
ತ್ಸೂನುಗಳು ಮೈದುನರು ತತ್ಪತ್ನಿಯರು ತಂಗಿಯರು
ಸಾನುರಾಗವೆ ಮನಕೆ ಸಂಶಯ
ವೇನಿದಕೆ ತಪ್ಪಿಲ್ಲ ಕುಂತೀ
ಸೂನುಗಳು ದ್ರೌಪದಿಗೆ ರಮಣರು ನೋಡಿ ನೀವೆಂದ ೨೮

ಮೂಗಿನಲಿ ಬೆರಳಿಟ್ಟು ಮಕುಟವ
ತೂಗಿದನು ಬಲರಾಮನವನಿಯ
ನೀಗಿ ಹೋದರ ಮಾತು ಪಾಂಡವರೆತ್ತಲಿವಳೆತ್ತ
ಬೇಗುದಿಯೊಳುರಿಯರಮನೆಯೊಳೊಂ
ದಾಗಿ ಬೆಂದರು ಲೋಕವರಿಯೆ ಶ
ಠಾಗಮಿಕ ನಿನಗಂಜುವೆನು ತಾನೆನುತ ಕೈಮುಗಿದ ೨೯

ಕ್ಷಿತಿಯೊಳವರಿಲ್ಲೆಂದು ದ್ರುಪದನ
ಸುತೆಗೆ ಪತಿ ಪರರೆಂದು ಯಂತ್ರ
ಚ್ಯುತಿಗೆ ನೀವುಂಟೆಂದು ತೋರಿತೆ ನಿಮ್ಮ ಚಿತ್ತದಲಿ
ಕ್ಷಿತಿಗೆ ಪಾಂಡವರಲ್ಲದಿಲ್ಲೀ
ಸತಿಗೆ ಪತಿ ಪೆರರಿಲ್ಲ ಕುಂತೀ
ಸುತರನೀಗಳೆ ತೋರುವೆನು ವಸುದೇವನಾಣೆಂದ ೩೦

ಇದು ವಿಚಿತ್ರವಲಾ ಗತಾಸುಗ
ಳುದಿಸಿದರೆ ಲೇಸೈಸಲೇ ದ್ರೌ
ಪದಿಯನವರನುರಾಗಿಸಲಿ ಭೋಗಿಸಲಿ ಭೂತಳವ
ಇದುವೆ ನಿಶ್ಚಯವಾದರವರ
ಭ್ಯುದಯವೆಮ್ಮಭ್ಯುದಯವೆಂದಾ
ಪದುಮನಾಭನ ಹೊಗಳಿ ಕುಳ್ಳಿರ್ದನು ಸರಾಗದಲಿ ೩೧

ಈಕೆಯನು ಮೆಚ್ಚಿಸದು ರಾಜಾ
ನೀಕ ಸೌಂದರ್ಯದಲಿ ಚಾಪ
ವ್ಯಾಕರಣ ಪಾಂಡಿತ್ಯವೆಂಬಡೆ ಕಾಣೆ ನಾನೀಗ
ಈಕೆಗಿನ್ನಾರೊಡೆಯರೋ ಕುಂ
ತೀ ಕುಮಾರಕರಿಲ್ಲಲೇ ಸುಡ
ಲೇಕೆ ನೆರಹಿದೆನಿವರನೆನುತಾ ದ್ರುಪದ ಚಿಂತಿಸಿದ ೩೨

ಹರ ಹರಾ ಇನ್ನಾರೊ ತಂಗಿಗೆ
ವರನು ವಾರಿಧಿ ವಲಯದವನೀ
ಶ್ವರರು ನೆರೆದಿದೆ ರೂಪು ವಿಕ್ರಮವೆರಡು ಹೊರತಾಗಿ
ನರಪತಿಗಳಿವರೈಸಲೇಯಿ
ನ್ನರಸಿಗಾವುದು ಹದನೆನುತ ವಿ
ಸ್ತರದ ಗುಜುಗುಜು ಮಸಗಿದುದು ಕಾಂತಾ ಕದಂಬದಲಿ ೩೩

ಅವನಿಪತಿಗಳು ಹೊಳ್ಳುವಾರಿದ
ರಿವರೊಳಿಲ್ಲಲೆ ದಕ್ಷಿಣೆಯ ಹಾ
ರುವ ಮಹಾಜನವಿದೆ ಸಮುದ್ರಕೆ ಪಡಿ ಸಮುದ್ರವೆನೆ
ಇವರೊಳಗೆ ಮುಂಗೈಯ ಬಲುಹು
ಳ್ಳವರು ನೆಗಹಲಿ ಧನುವನೀ ಯಂ
ತ್ರವನು ಜಯಿಸಲಿಯೆಂದು ಧೃಷ್ಟದ್ಯುಮ್ನ ಸಾರಿಸಿದ ೩೪

## ಹದಿನೈದನೆಯ ಸಂಧಿ

ಸೂ. ರಾಯಸಭೆ ನಗಲೈದಿ ಯಂತ್ರದ
ದಾಯವನು ನೆರೆ ಗೆಲಿದು ನಿರ್ಜರ
ರಾಯನಂದನ ಕಾದಿ ಗೆಲಿದನು ಸಕಲ ರಿಪು ನೃಪರ

ಕೇಳು ಜನಮೇಜಯ ಧರಿತ್ರೀ
ಪಾಲ ಪಾಂಚಾಲಿಯ ಮನೋರಥ
ಶಾಲೆಯಲಿ ಸಾರಿದರಲೈ ಸಭೆಯಲಿ ಮಹೀಸುರರ
ಏಳಿ ಭುಜಬಲವುಳ್ಳವರು ವಿ
ಪ್ರಾಳಿಯಲಿ ಬಿಲುವಿಡಿದು ಯಂತ್ರದ
ಕೋಲುಗಳ ಕೆಡಹುವುದೆಂದರು ಹೊಯ್ದು ಡಂಗುರವ ೧

ಬೆರಸುವರು ಪಾರ್ಥಿವರು ಪಾರ್ಥಿವ
ವರರೊಡನೆ ತದಲಾಭ ಪಕ್ಷಾಂ
ತರಕೆ ಪಾರ್ಥಿವ ಸುತೆಯನೀವುದು ವಿಪ್ರಜಾತಿಯಲಿ
ಪುರುಷರನುಲೋಮದಲಿ ಕನ್ಯಾ
ವರಣವಹುದು ವಿಲೋಮದಲಿ ವಿ
ಸ್ತರಿಸಲೇಕಿದ ನೀವು ಬಲ್ಲಿರಿ ಶಾಸ್ತ್ರನಿರ್ಣಯವ ೨

ಎಂದು ಸಾರಿದ ದನಿಯನಾ ದ್ವಿಜ
ವೃಂದವಾಲಿಸಿ ನಿಮಗಿದೇಕರ
ವಿಂದವದನೆಯ ತೊಡಕು ತೆಗೆ ನಾವಾರು ಧನುವಾರು
ಬಂದ ದಕ್ಷಿಣೆ ಮೃಷ್ಟಭೋಜನ
ದಿಂದ ತುಷ್ಟರು ನಾವು ನಮಗಿದ
ರಿಂದ ಬಹ ದುಷ್ಕೀರ್ತಿ ಬರಲೆಂದುದು ಬುಧವ್ರಾತ ೩

ವಚನ ಶೂರರು ನಾವು ಪಾರ್ಥಿವ
ನಿಚಯವೇ ಭುಜ ಶೂರರನಿಬರ
ನಚಲ ಧನು ಭಂಗಿಸಿತು ನಮಗೀ ವಿದ್ಯೆ ವೈದಿಕವೆ
ಉಚಿತವಲ್ಲಿದು ನಮ್ಮ ಸಾಹಸ
ರಚನೆಯನು ನೋಡುವರೆ ಪಂಡಿತ
ನಿಚಯವಿದಿರಲಿ ನಿಲಲಿ ತೋರುವೆವಲ್ಲಿ ವಿಸ್ಮಯವ ೪

ಸಾಂಗ ವೇದ ಪದಕ್ರಮದ ಸ
ರ್ವಾಂಗ ವಿಷಯದಲಖಿಳ ಪೌರಾ
ಣಂಗಳಲಿ ಮೀಮಾಂಸೆಯೊಳ್ ಸ್ಮೃತಿ ತರ್ಕಶಾಸ್ತ್ರದಲಿ
ಭಂಗಿಸುವೆವೀ ದ್ರೌಪದಿಯನಾ
ವಂಗದಲಿ ವಾತ್ಸ್ಯಾಯನಾದಿಯು
ಪಾಂಗ ವಿದ್ಯದಲೆಮ್ಮ ನೋಡೆಂದುದು ಬುಧಸ್ತೋಮ ೫

ಭರತದಲಿ ವೈದ್ಯದಲಿ ಕಾವ್ಯ ಸು
ವಿರಚಿತಾಲಂಕಾರದಲಿ ಗಜ
ತುರಗ ಲಕ್ಷಣದಲಿ ಸಮಾಹಿತ ಮಂತ್ರತಂತ್ರದಲಿ
ಸರಸ ಕವಿತಾರಚನೆಯಲಿ ವಿ
ಸ್ತರದುಪನ್ಯಾಸದಲಿ ಭೂಪತಿ
ಕರೆಸಿ ನೋಡಲಿ ನಮ್ಮನೆಂದರು ದ್ವಿಜರು ತಮತಮಗೆ ೬

ಅಲ್ಲದಿರ್ದರೆ ಶೋಧಿಸಿದ ತನಿ
ಬೆಲ್ಲವಿಕ್ಕಿದ ಹೂರಿಗೆಯ ಮದೆ
ಯಲ್ಲಿ ಪರಡಿಯ ಶಾವಿಗೆಯ ಪರಿಪರಿಯ ಪಾಯಸದ
ಪುಲ್ಲಿಗೆಯ ತತ್ಸವಿಯ ಮಂಡಿಗೆ
ಯಲ್ಲಿ ನವಘೃತ ಸೂಪದಂಶಕ
ದಲ್ಲಿ ನೋಡಲಿ ನಮ್ಮನೆಂದುದು ಧೂರ್ತ ವಟುನಿಕರ ೭

ರಸದ ಹೊರಲೇಪದಲಿ ಹುದುಗಿದ
ಮಿಸುನಿಯಂತಿರೆ ಜೀವಭಾವ
ಪ್ರಸರದೊಳಗವಲಂಬಿಸಿದ ಪರಮಾತ್ಮನಂದದಲಿ
ಎಸೆವ ವಿಪ್ರಾಕಾರದಲಿ ರಂ
ಜಿಸುವ ಭೂಪತಿ ತತ್ಸಭಾಸ
ದ್ವಿಸರ ಮಧ್ಯದೊಳಿರ್ದು ಕೇಳಿದನೀ ಮಹಾಧ್ವನಿಯ ೮

ನೋಡಿದನು ತಮ್ಮನನು ಸನ್ನೆಯ
ಮಾಡಿದಡೆ ಕೈಕೊಂಡನವನಿಪ
ಗೂಡಿ ಕುಂತಿಗೆ ಭೀಮಸೇನಂಗೆರಗಿ ಮನದೊಳಗೆ
ಕೂಡೆ ಕುಳ್ಳಿರ್ದಖಿಳ ವಿಪ್ರರ
ನೋಡಿ ಮೆಲ್ಲನೆ ಧೋತ್ರ ದರ್ಭೆಯ
ಗೂಡ ಸಂವರಿಸುತ್ತ ಸಭೆಯಿಂದೆದ್ದನಾ ಪಾರ್ಥ ೯

ಏನು ಸಿದ್ಧಿಯುಪಾಧ್ಯರೆದ್ದಿರಿ
ದೇನು ಧನುವಿಂಗಲ್ಲಲೇ ತಾ
ನೇನು ಮನದಂಘವಣೆ ಬಯಸಿದಿರೇ ನಿತಂಬಿನಿಯ
ವೈನತೇಯನ ವಿಗಡಿಸಿದ ವಿಷ
ವೇನು ಸದರವೊ ಹಾವಡಿಗರಿಗಿ
ದೇನು ನಿಮ್ಮುತ್ಸಾಹವೆಂದುದು ಧೂರ್ತ ವಟುನಿಕರ ೧೦

ಮದುವೆ ಬೇಕೇ ಶ್ರೋತ್ರಿಯ ಸ್ತೋ
ಮದಲಿ ಕನ್ಯಾರ್ಥಿಗಳು ನಾವೆಂ
ಬುದು ನಿಜಾನ್ವಯ ವಿದ್ಯೆಯಲಿ ಕೊಡುವುದು ಪರೀಕ್ಷೆಗಳ
ಮದುವೆಯಹುದಿದು ಸೌಖ್ಯ ಪುಣ್ಯ
ಪ್ರದವು ಭೂದೇವರಿಗೆ ನೀ ನೆನೆ
ದುದು ಭಗೀರಥಯತ್ನವೆಂದುದು ಭೂಸುರವ್ರಾತ ೧೧

ನೀವು ಸೈರಿಸಿ ನಿಮ್ಮ ಕಾರು
ಣ್ಯಾವಲೋಕನವುಂಟಲೇ ಸ
ದ್ಭಾವದಲಿ ನೀವ್ ರಚಿಸಿದಾಶೀರ್ವಾದ ಶಕ್ತಿಯಲಿ
ನಾವು ವಿಜಯರು ಚಾಪ ಯಂತ್ರವಿ
ದಾವ ಘನವೆಂದರ್ಜುನನ ಸಂ
ಭಾವನೋಕ್ತಿಗೆ ನಿಲ್ಲದವರೊದರಿದರು ತಮತಮಗೆ ೧೨

ಕ್ರಮಿತರಪಧರಿಸಿದಿರೆ ಶುದ್ಧ
ಭ್ರಮಿತ ಮೂಲನ ಹಿರಿಯ ವಿಪ್ರ
ಕ್ರಮಿತರೇ ದೀಕ್ಷಿತರೆ ಧನುವಿಗೆ ಯತ್ನ ಮಾಡಿದಿರೆ
ಕ್ರಮವೆ ತಾನಿದು ಕ್ಷತ್ರಿಯರನಾ
ಕ್ರಮಿಸುವುದು ಸದ್ಧರ್ಮವೇ ಉ
ಧ್ವಮಿತನಿವ ನೆರೆ ಹಳಿವ ತಹನೀ ಶ್ರೋತ್ರಿಯರ ಸಭೆಗೆ ೧೩

ಕೆಲರು ಹೋಗದಿರೆಂದು ಜರೆದರು
ಕೆಲರು ತಾನೇ ಬಲ್ಲನೆಂದರು
ಕೆಲರು ನುಡಿದರು ವಿಪ್ರಸಭೆಗಪಹಾಸ್ಯವಹುದೆಂದು
ಕೆಲರು ತಪ್ಪೇನೆಂದು ಕಳೆದರು
ಕೆಲರು ಭದ್ರಾಕಾರನೀತಂ
ಗಳುಕುವುದು ಧನು ಭಾಗ್ಯಮುಖನೆಂದುದು ಬುಧಸ್ತೋಮ ೧೪

ತೊಟ್ಟ ಹೊಸ ಯಜ್ಞೋಪವೀತದ
ಮಟ್ಟೆ ನೊಸಲಲಿ ಕುಶೆಯ ಕರಡಿಗೆ
ಕಟ್ಟಿಯಿರುಕಿದ ಕಕ್ಷೆ ಬೆರಳಲಿ ಮುರಿದ ದರ್ಭೆಗಳ
ಉಟ್ಟ ಬಾಸರ ಬಳಲುಗಚ್ಚೆಯ
ನಟ್ಟಹಾಸದ ಜನದ ನಗೆಗಳ
ನಟ್ಟವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ ೧೫

ತಿರುಗಿ ಕಂಡರು ಸಕಲ ಪೃಥ್ವೀ
ಶ್ವರರು ಗಹಗಹಿಸಿದರಿದೇನರೆ
ಮರುಳೊ ಜಡನೋ ವಿಪ್ರವೇಷಚ್ಛನ್ನ ಸುರಪತಿಯೊ
ಮರುಳುಗಳು ತಾವಕಟ ಮದನನ
ಸರಳ ಮರು ಮೊನೆಗಾವನಂತಃ
ಕರಣ ನೆರೆ ಕಳವಳಿಸದೆಂದರು ನೆರೆದ ಸಭೆಯೊಳಗೆ ೧೬

ಧನು ತನಗೆ ನೆಗಹಲ್ಕೆ ಕೃಷ್ಣಾ
ಜಿನವೊ ಸಾಲಗ್ರಾಮದೇವರೊ
ವಿನುತ ತುಳಸಿಯೊ ಕುಶವೊ ದರ್ಭೆಯೊ ಸಮಿಧೆಗಳ ಹೊರೆಯೊ
ನೆನೆದ ತಿಲವೋ ಮೇಣದಾಪಾ
ಸನದ ಕೊಳವಿಯೊ ಬಣಗು ವಿಪ್ರನ
ನೆನಹ ನೋಡಿರೆ ಘನವಲಾ ದ್ರೌಪದಿಯ ಸೌಭಾಗ್ಯ ೧೭

ಅಂಗವಿದು ಗಜ ತುರಗ ಶಸ್ತ್ರಾ
ಸ್ತ್ರಂಗಳರಿತವು ನಮಗೆ ವಿಪ್ರಂ
ಗಂಗವೇದ ಪುರಾಣ ತರ್ಕ ಸ್ಮೃತಿ ಸುವಿದ್ಯೆಗಳು
ಅಂಗವಂಗಿಗಸಾಧ್ಯವಾದುವ
ನಂಗಿಗೊಡಬಡುವುದೆ ದ್ವಿಜಾತಿಗೆ
ಸಂಗತಾನುಷ್ಠಾನಪರವೆಂದುದು ನೃಪಸ್ತೋಮ ೧೮

ಲಹರಿ ಮಸಗಿದುದತ್ತ ಕಾಂತಾ
ಬಹಳ ಪಾರಾವಾರ ಹುಬ್ಬಿನ
ವಿಹೃತಿಗಳ ತೆರೆಮಾಲೆಗಳ ಬೆಳುನಗೆಯ ಬುದಬುದದ
ಗಹಗಹಿಕೆ ಮಿಗೆ ಅಟ್ಟಹಾಸದ
ರಹಣೆಗಳ ರಭಸದ ವಿಡಂಬದ
ವಿಹರಣದಚಲ ದೃಷ್ಟಿಗಳ ಮರಿಮಿೀನ ಹೊಳಹುಗಳ ೧೯

ಇತ್ತ ನೋಡಾ ತಾಯೆ ಹಾರುವ
ರತ್ತ ಗಡ್ಡದುಪಾಧ್ಯರನು ತಾ
ವೆತ್ತುವರು ಗಡ ಧನುವನೆಸುವರು ಗಡ ತಿಮಿಂಗಿಲನ
ಹೊತ್ತುಗಳೆವರೆ ಲೇಸು ಬಳಿಕಿ
ನ್ನುತ್ತಮರಲಾ ವಿಪ್ರರೆನೆ ತಲೆ
ಗುತ್ತಿ ನಾಚಿದಳುಂಗುಟದೊಳೌಕುತ ಮಹೀತಳವ ೨೦

ಎಲವೊ ಮಟ್ಟಿಯ ಮದನ ದರ್ಭೆಯ
ತಿಲದ ಮನ್ಮಥ ವಿಮಲ ಧೋತ್ರದ
ತಳಿರುಗಾಸೆಯ ಕಾಮ ಕೃಷ್ಣಾಜಿನದ ಕಂದರ್ಪ
ನಳಿನಮುಖಿಯನು ವರಿಸು ಬಾ ನಿನ
ಗಳವಡ ವನೆಲೆಯಕ್ಕ ಕೇಳೌ
ತಲೆವಿಡಿವೆವಾವ್ಹೋಡುಯೆಂದರು ನಗುತ ಚಪಲೆಯರು ೨೧

ಅದೆ ಹಲಾಯುಧ ನೋಡು ವಿಪ್ರೌ
ಘದಲಿ ಪಾರ್ಥನ ಬರವು ಮೇಘದ
ಹೊದರುಗಳ ಹರಿದಶ್ವನಂತಿರೆ ವಿಪ್ರವೇಷದಲಿ
ವಿದಿತವೇ ವಸುದೇವನಾಣೆಂ
ದುದಕೆ ತಪ್ಪದಲೈ ಸಭಾ ಮ
ಧ್ಯದಲಿ ಬರುತಿರ್ಪಾತನರ್ಜುನನೆಂದನಸುರಾರಿ ೨೨

ಜನಪನೋ ಭೀಮಾದಿಗಳೊ ತ
ಜ್ಜನನಿಯೋ ತಾವೆಲ್ಲ ಭೂಸುರ
ಜನದ ಸಾಮಿೀಪ್ಯದಲಿ ಸಭೆಯೊಳಗಿರ್ದರೆನೆ ಕೇಳ್ದ
ನಿನಗಿದೆಂತವರರಿತವರಗಿನ
ಮನೆಗೆ ತಪ್ಪಿದರೆಂತು ಶಿವ ನೀ
ನೆನಿತು ಮಾಯಾಸಿದ್ಧನೆಂದನು ನಗುತ ಬಲರಾಮ ೨೩

ಅವನಿಪತಿ ಕೇಳಿತ್ತಲೀ ಪಾ
ರ್ಥಿವರ ಪರಿಹಾಸವನು ಕಾಂತಾ
ನಿವಹದಲಿ ನಿಬ್ಬರದ ನುಡಿಗಳನಾ ಮಹೀಸುರರ
ವಿವಿಧ ಕಟು ವಂಧುರೋಕ್ತಿ ವಿನ್ಯಾ
ಸವನು ಕೇಳುತ ಮುಗುಳುನಗೆಯಲಿ
ನವ ಮದ ದ್ವಿಪ ಗತಿಯ ಗರುವಾಯಿಯಲಿ ನಡೆತಂದ ೨೪

ಇವನ ಗತಿಮುಖಚೇಷ್ಟೆ ಭಾವೋ
ತ್ಸವ ವಿಲಾಸವುಪೇಕ್ಷೆ ಭರವಂ
ಘವಣೆ ಗರುವಿಕೆ ಗಮಕ ಭಾವವಭೀತಿ ಭುಲ್ಲವಣೆ
ಇವನ ವಿಮಲ ಕ್ಷತ್ರವಿಕ್ರಮ
ವಿವನ ಕೊಂಡಯತನವಿವೇ ಸಾ
ಕಿವನು ಘಾಟದ ವೀರನೆಂದರು ವೀರರರ್ಜುನನ ೨೫

ಬರುತ ಭೀಷ್ಮ ದ್ರೋಣ ಕೃಪರಿಂ
ಗೆರಗಿದನು ಮನದೊಳಗೆ ಯಾದವ
ರರಸ ಕುಂತಿಯ ಹರಿಯನಭಿವಂದಿಸಿದನಕ್ಷಿಯಲಿ
ಸುರಪತಿಗೆ ಗುಹ ಗಣಪ ದಿಕ್ಪಾ
ಲರಿಗೆ ರುದ್ರಾದಿತ್ಯ ವಸು ಮು
ಖ್ಯರಿಗೆ ಮಣಿದನು ಬಂದನಗ್ಗದ ಚಾಪವಿದ್ದೆಡೆಗೆ ೨೬

ಮೊದಲಲಂಬುಜಭವನನಾ ಮ
ಧ್ಯದಲಿ ಮಧುಸೂದನನನಾ ಬಿಲು
ದುದಿಯಲಾಹ್ವಾನಿಸಿದನಗ್ಗದ ನೀಲಲೋಹಿತನ
ಇದು ಮಹಾಭೂಮಿಪರ ಬಿಂಕವ
ನೊದೆದ ಧನುವೇ ಪೂತುರೆನುತೆ
ತ್ತಿದನ ಬಾಗೊತ್ತಿದನು ಕೊರಳಿಗೆ ತೊಡಿಸಿದನು ತಿರುವ ೨೭

ಹೊಯ್ದು ತಿರುವನು ಸೆಳೆದು ಕಿವಿವರೆ
ಗೊಯ್ದು ನಿದು ಹದವಿಲ್ಲಲಾ ಬಿಲು
ಹೊಯ್ದು ದಕಟಾ ಬರಿದೆ ಹೆದರಿತು ಮಾಗಧಾದಿಗಳು
ಕೈದೆಗೆದರಿದರೊಳಗೆ ಹೆಸರೆನ
ಗೈದಬೇಕೆಂದೈಸಲೇಂಯೆನು
ತ್ತೈದು ಬಾಣವ ಕೊಂಡು ಯಂತ್ರದ ಹೊಳಹನೀಕ್ಷಿಸಿದ ೨೮

ತೂಗಿ ಕಿವಿವರೆಗುಗಿದು ಯಂತ್ರವ
ತಾಗಿಸಿದನಂಬಿನಲಿ ಪಾರ್ಥನ
ಲಾಗು ವೇಗವನಾರು ಬಲ್ಲರು ಯಂತ್ರಭೇದದಲಿ
ಜಾಗು ಧಣು ಧಣು ಪೂತು ಕಾರ್ಮುಕ
ಯೋಗಸಿದ್ಧನೆ ಮಝುರೆ ಕೋದಂ
ಡಾಗಮ ತ್ರಿಪುರಾರಿಯೆಂದುದು ವಂದಿ ಸಂದೋಹ ೨೯

ಆಯೆನುತ ಬೊಬ್ಬಿರಿದು ವಿಪ್ರ ನಿ
ಕಾಯ ಕುಣಿದುದು ಕಮಲಮುಖಿ ನಿ
ರ್ದಾಯದಲಿ ಸೇರಿದಳು ಹಾರುವಗೆನುತ ಹರುಷದಲಿ
ಆ ಯುವತಿಜನ ಜಲಧಿ ಮಸಗಿತು
ಬಾಯ ಮೌನದ ಬೆರಳ ಮೂಗಿನ
ರಾಯರಿದ್ದರು ಬಿಗಿದ ಬೆರಗಿನ ಹೊತ್ತ ಮುಗುಡದಲಿ ೩೦

ಮೊಳಗಿದವು ನಿಸ್ಸಾಳ ತತಿ ಹೆ
ಕ್ಕಳದ ಪೆರ್ಚಿನೊಳಲ್ಲಿ ದಿವಿಜಾ
ವಳಿಯ ದುಂದುಭಿ ರವದಲುಬ್ಬಿದ ಸಾಧುವಾದಗಳ
ಕಳಕಳದ ಕೊಲ್ಲಣಿಗೆಯಲಿ ಪೂ
ವಳೆಯ ಪೂರದ ಹರಹಿನಲಿ ಜನ
ಮುಳುಗಿತದ್ಭುತ ರಭಸವಳ್ಳಿರಿದುದು ಜಗತ್ರಯವ ೩೧

ಕಿತ್ತ ಸುರಗಿಯ ವೀರ ಭಟರರು
ವತ್ತು ಸಾವಿರವೈದಿ ಪಾರ್ಥನ
ಸುತ್ತು ಮುತ್ತಿದರಂಗ ರಕ್ಷಣೆಗರಸನಾಜ್ಞೆಯಲಿ
ಇತ್ತ ಮಹಿಳಾಜನದ ಮೌಳಿಯ
ಮುತ್ತು ಕುಸುಮಾಯುಧನ ಥಟ್ಟಿನ
ಮತ್ತಗಜವೈತಂದಳಲ್ಲಿಗೆ ದ್ರೌಪದಾದೇವಿ ೩೨

ತೊಲತೊಲಗು ಮನ್ಮಥನ ಹೊಗರಿ
ಟ್ಟಲಗು ಬರುತಿದೆ ಸಾರು ಸಾರೆಂ
ದುಲಿದು ಕಂಚುಕಿ ನಿಕರ ಹೊಯ್ದುದು ಮುಂದೆ ಸಂದಣಿಯ
ನಳಿನಮುಖಿ ದಂಡಿಗೆಯೊಳೈತಂ
ದಿಳಿದಳೀತನ ಹೊರೆಯೊಳಾಗಳೆ
ಕಳಕಳದಲೊಳತೋಟಿ ಮಸಗಿತು ಹರುಷ ಲಜ್ಜೆಯಲಿ ೩೩

ಲಲಿತ ಮಧುರಾಪಾಂಗದಲಿ ಮು
ಕ್ಕುಳಿಸಿ ತಣಿಯವು ಕಂಗಳುಬ್ಬಿದ
ಪುಳಕ ಜಲದಲಿ ಮುಳುಗಿ ಮೂಡಿತು ಮೈ ನಿತಂಬಿನಿಯ
ತಳಿತ ಲಜ್ಜಾಭರಕೆ ಕುಸಿದ
ವ್ವಳಿಸಿತಂತಃಕರಣವಾಂಗಿಕ
ಲುಳಿತ ಸಾತ್ವಿಕ ಭಾವವವಗಡಿಸಿತ್ತು ಮಾನಿನಿಯ ೩೪

ಧರಣಿಪತಿ ಕೇಳ್ ಬಹಳ ಲಜ್ಜಾ
ಭರದ ಭಯದಲಿ ಬೆಮರಿಡುತ ಕುಚ
ಭರದಿ ಮೇಲುದು ಜಾರೆ ಜೋಡಿಸಿ ನಿಮಿರಿ ನಡನಡುಗಿ
ತರುಣಿ ನಿಜತನು ಪರಿಮಳದಲುರೆ
ಹೊರೆದ ಹೂವಿನ ದಂಡೆಯನು ನಿಜ
ವರನ ಕೊರಳಲಿ ಹಾಯ್ಕಿದಳು ಜಯವೆನೆ ಸುರಸ್ತೋಮ ೩೫

ಕೊರಳ ಹೂವಿನ ದಂಡೆಯಲಿ ನಿಜ
ಕರದ ಭಾರಿಯ ಧನುವಿನಲಿ ತನು
ಪರಿಮಳದ ನಿಟ್ಟಿಸಲುಗಂಗಳ ಕೆಲದ ಯುವತಿಯಲಿ
ವರನ ಪರಿ ಹೊಸತಾಯ್ತು ಹೊತ್ತನು
ಹರನ ಹಗೆ ಹಾರುವಿಕೆಯನು ಸ
ಮ್ಮರಸಿ ನೆರೆ ಹಾರುವತಿಯೆಂದರು ನಗುತ ಚಪಲೆಯರು ೩೬

ಜನಪ ಕೇಳೈ ಯುವತಿಯೊಡನ
ರ್ಜುನನ ತಂದರು ರಾಜಮಂದಿರ
ಕನಿಮಿಷಾವಳಿ ಹರಿದುದಭ್ರದೊಳಮರಪತಿ ಸಹಿತ
ಮನದಸೂಯದ ಮುಖದ ದುಗುಡದ
ವಿನತ ಮಕುಟದ ಕೈಯ ಗಲ್ಲದ
ಕನಲಿಕೆಯ ಕೊನರುಗಳ ಕೌರವರಾಯ ಖತಿಗೊಂಡ ೩೭

ಏನು ಹದ ಪಾಂಚಾಲ ಮಾಡಿದ
ಮಾನಭಂಗವ ಕಂಡಿರೇ ಕಾ
ನೀನ ಶಕುನಿ ಜಯದ್ರಥಾಶ್ವತ್ಥಾಮ ಮೊದಲಾದ
ಮಾನನಿಧಿಗಳು ಕಂಡಿರೇ ಮದ
ದಾನೆಗಳು ನೀವ್ಕಂಡಿರೇ ಹದ
ನೇನೆನುತ ಕುರುರಾಯ ಮೂದಲಿಸಿದನು ತನ್ನವರ ೩೮

ಹಳೆಯ ಹುಲು ಧನುವಿದನು ಹಾರುವ
ಸೆಳೆದ ಗಡ ಕೌಳಿಕದ ಯಂತ್ರವ
ಗೆಲಿದ ಗಡ ಗರುವಾಯಿಗೆಡಿಸಿದ ಗಡ ಮಹೀಶ್ವರರ
ನಳಿನಮುಖಿ ಹಾಯ್ಕಿದಳು ಗಡ ತಿರು
ಕುಳಿಯ ಕೊರಳಲಿ ದಂಡೆಯನು ನೀ
ವೊಲಿದು ಮದುವೆಯ ಮಾಡಿಯೆಂದನು ಬೈದು ಭೂಮಿಪರ ೩೯

ಭಂಡರೋ ನೀವ್ ನೆರೆದ ಧರಣೀ
ಮಂಡಲೇಶ್ವರರಕಟ ನಿಮ್ಮಯ
ಹೆಂಡಿರನು ಬಳುವಳಿಯ ಕೊಡಿ ಹಾರುವನ ಹೆಂಡತಿಗೆ
ಗಂಡುಗಲಿಗಳ ನಿಮ್ಮನನಿಬರ
ಕಂಡುಪೇಕ್ಷಿಸಿ ಯಾಚಕನ ಕೈ
ಕೊಂಡಳಿದಕೇನುಂಟು ಮನದಲಿ ವಾಸಿ ನಿಮಗೆಂದ ೪೦

ವಾಸಿಗಳನರಸುವಡೆ ದ್ರುಪದನ
ಮೀಸಲಡಗನು ಹದ್ದು ಕಾಗೆಗೆ
ಸೂಸಿ ವಿಪ್ರನ ಬಡಿದು ಬಿಡುವುದು ಮತ್ತೆ ತಿರಿದುಣಲಿ
ಆ ಸರೋಜಾನನೆಯ ನಮ್ಮ ವಿ
ಲಾಸಿನಿಯ ವೀಧಿಯಲಿ ಕೂಡುವ
ದೈಸಲೇಯೆನುತೊಡನೊಡನೆ ಗರ್ಜಿಸಿತು ನೃಪನಿಕರ ೪೧

ಏಳಿ ಹತ್ತಲಿ ಲಗ್ಗೆ ಪದಹತ
ಧೂಳಿಯಲಿ ಹಿರಿಯಗಳಿನಗಲವ
ಹೂಳಿ ಕಳೆಯಲಿ ಹರಿದು ಹತ್ತಲಿ ತೆನೆಯ ಸರಿಸದಲಿ
ಕೋಲು ಗುಂಡಿನ ಹತಿಗೆ ಹುರಿಯೊಡೆ
ದಾಳ ಹೊಯ್ ಹೊಯ್ಯೆನುತ ಸಕಲ ನೃ
ಪಾಳಿ ಗರ್ಜಿಸಿ ಮುತ್ತಿದುದು ಪಾಂಚಾಲ ಪಟ್ಟಣವ ೪೨

ಕೂಡೆ ಗಜಬಜವಾಯ್ತು ಹರಿದುದು
ನಾಡಿಗಾವಳಿ ವಿಪ್ರಸಭೆ ತೆಗೆ
ದೋಡಿತೀ ಪಾಂಡವರು ಬಂದು ಕುಲಾಲ ಭವನದಲಿ
ನೋಡುತಿರ್ದರು ಲಗ್ಗೆಯಬ್ಬರ
ವೀಡಿರಿದುದು ದಿಗಂತವನು ಕೈ
ಮಾಡಿ ಕೋಟೆಯನಿಳಿದು ಬೆರಸಿದರಾಳುವೇರಿಯಲಿ ೪೩

ಹಲ್ಲಣಿಸಿದರು ಹೊಗುವ ಜೋಣಿಯ
ಚೆಲ್ಲ ಬಡಿದರು ಸರಿಸಕಡರುವ
ಬಿಲ್ಲ ಬಿರುದರ ಮುಟ್ಟಿ ತಿವಿದರು ಸಾಲ ಸಬಳಿಗರು
ಝಲ್ಲರಿಯ ಝಾಡಿಗಳ ವಾದ್ಯದ
ಘಲ್ಲಣೆಯ ದಳ ನೆರೆದುದಲ್ಲಿಯ
ದಲ್ಲಿ ಮುತ್ತಿಗೆ ತೆಗೆಸಿದರು ಪಾಂಚಾಲ ನಾಯಕರು ೪೪

ಜೋಣಿ ಮುರಿದೈತರಲು ಬಹಳ
ಕ್ಷೋಣಿಯಲಿ ಕುರುಪತಿಯ ಥಟ್ಟಿನ
ಹೂಣಿಗರು ಹುರಿಗೊಂಡು ಕವಿದರು ಕರ್ಣ ಮೊದಲಾಗಿ
ಸಾಣೆಯಲಗಿನ ಸರಿಗೆ ಪರಬಲ
ವಾಣೆಯಿಟ್ಟವೊಲಡಿ ಮಿಡುಕದ,
ಕ್ಷೀಣ ಬಲವೋಸರಿಸಿ ತೆಗೆದುದು ದ್ರುಪದ ಪರಿವಾರ ೪೫

ಮೊದಲ ಲಗ್ಗೆಯ ಧೂಳಿಯೇ ದ್ರಾ
ಪದಿಯ ಚೈತಲೆಗಮಲ ಸಿಂಧೂ
ರದ ಸುವಿಸ್ತರವಾಗದಿರ್ದಡೆ ರಾಯನಾಣೆನುತ
ಮದಮುಖರು ಮುಂಕೊಂಡು ದುರ್ಗವ
ಬೆದರಿಸಿತು ಬೇರೇನು ದ್ರುಪದನ
ಸದನ ಸೀಮೆಯ ಬೆರಸಿ ಹೊಯ್ದರು ರಾಜಬೀದಿಯಲಿ ೪೬

ಏಳು ಮನ್ನೆಯ ಗಂಡನಾಗು ನೃ
ಪಾಲ ಮದುವೆಯ ಮನೆಗೆ ರಾಯರ
ಧಾಳಿ ಬಿದ್ದಿನವಾಯ್ತು ನಡೆ ಸಂತೈಸು ಬೀಯಗರ
ಏಳೆನಲು ಕಳಕಳವನರ್ಜುನ
ಕೇಳಿದನು ಹೊದೆಯಂಬುಗಳ ತರ
ಹೇಳಿನುತ ಕವಿದೆಚ್ಚು ಮುರಿದನು ಭಟರ ಮುಂಗುಡಿಯ ೪೭

ಅದು ಬಳಿಕ ಕಲ್ಪಾಂತ ಮೇಘದ
ಮೊದಲ ಮಳೆಯೆನೆ ಕವಿದುದಂಬಿನ
ಹೊದರು ಹುದುಗಿತು ರಾಯದಳರೌಕುಳದ ರಕ್ತದಲಿ
ಕೆದರಿದರು ಕರ್ಣಾದಿಗಳು ನೆರೆ
ಬೆದರಿದರು ಮತ್ತೊಂದು ದೆಸೆಯಲಿ
ಸದೆದು ಹೊಕ್ಕನು ಭೀಮ ಭಾರಿಯ ಮರದ ಕೊಂಬಿನಲಿ ೪೮

ತರುಬಿದನು ಮಾದ್ರೇಶ ಪವನಜ
ನುರುಬೆಯನು ಫಲುಗುಣನ ಬಾಣವ
ಮುರಿಯೆನುತ ರಾಧೇಯನಿರಿದನು ಸಿಂಹನಾದದಲಿ
ಕರುಬರೋ ಘನ ಯಂತ್ರಭೇದಿಯ
ನರಿದು ಕಾದುವ ಕುರುಡರೋ ನೀ
ವಿರಿತಕಂಘೈಸಿದಿರೆನುತ ಕೈಕೊಂಡನಾ ಭೀಮ ೪೯

ತುರಗ ರಥ ಸಾರಥಿಗಳನು ಹೊ
ಯ್ದೊರಸಿದನು ಪವಮಾನಸುತನು
ಬ್ಬರದ ಭಯದಲಿ ಶಲ್ಯ ಹಿಮ್ಮೆಟ್ಟಿದನು ಹಿನ್ನೆಲೆಗೆ
ನರನ ಶರಹತಿಗಳುಕಿ ಮೋರೆಯ
ಮುರುಹಿದನು ಕಲಿಕರ್ಣನವದಿರು
ಸರಿಯೆ ವಿಪ್ರರು ನಮ್ಮ ವಿಗ್ರಹಕೆಂದು ಖಾತಿಯಲಿ ೫೦

ಅರಸ ನಡೆ ದ್ರುಪದನ ಕಪಾಲದ
ಲಿರಲಿ ಮಾನಚ್ಯುತಿ ಮಹೀಸುರ
ವರರೊಡನೆ ಖತಿಯೇಕೆ ತೆಗೆವುದು ಹಸ್ತಿನಾಪುರಕೆ
ನೆರಹುವುದು ನೃಪವರ್ಗವನು ಬಂ
ದೊರಸುವುದು ದ್ರುಪದನ ಲಲಾಟದ
ಬರಹವನು ಕೇಳೆಂದು ನುಡಿದನು ಕರ್ಣ ಕುರುಪತಿಗೆ ೫೧

ಅಹುದು ಕರ್ಣನ ಮಾತು ತೆಗೆಯಲಿ
ಬಹಳ ಬಲವೀ ಹೊತ್ತಿನಲಿ ರಣ
ವಿಹಿತವಲ್ಲೌಕಿದಡೆ ತಪ್ಪದು ವಿಪ್ರವಧೆ ತಮಗೆ
ಮಹಿಮೆ ಮೀಸಲು ಹೋಗದೀ ಸರ
ಲಹಿತ ದರ್ಪವ ಮುಂದೆ ನೋಡಲು
ಬಹುದೆನುತ ತಿರುಗಿದನು ಕುರುಪತಿ ಹಸ್ತಿನಾಪುರಿಗೆ ೫೨

## ಹದಿನಾರನೆಯ ಸಂಧಿ

ಸೂ. ವಿಮಲಮುನಿ ಪಾಂಚಾಲ ಚಿತ್ತ
ಭ್ರಮೆಯನಪಹರಿಸಿದನು ದ್ರೌಪದಿ
ರಮಣಿಯಾದಳು ಹರನ ವರದಲಿ ಪಾಂಡು ತನಯರಿಗೆ

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವನೃಪತಿ ಪಯಣದ
ಮೇಲೆ ಪಯಣದಲೈದಿ ಹೊಕ್ಕನು ಹಸ್ತಿನಾಪುರವ
ಹೇಳಲೇನುಳಿದಖಿಳ ಧರಣೀ
ಪಾಲಕರ ದುಮ್ಮಾನವನು ಪಾಂ
ಚಾಲ ದೇಶವ ಕಳೆದು ಹೊಕ್ಕರು ತಮ್ಮ ನಗರಿಗಳ ೧

ಭೀತಿ ಹರಿದುದು ರಾಯದಳ ಸಂ
ಘಾತ ಸರಿದುದು ಮತ್ತೆ ಸುಜನ
ವ್ರಾತ ನೆರೆದುದು ಮೆರೆದುದವನೀದೇವರಗ್ಗಳಿಕೆ
ವಾತಜನು ಮರಗೊಂಬಿನಲಿ ಮಾ
ರಾತನನು ಮನ್ನಿಸಿ ಕುಲಾಲ ನಿ
ಕೇತನಕೆ ಬಂದೆರಗಿದನು ಧರ್ಮಜನ ಚರಣದಲಿ ೨

ಇತ್ತಲರ್ಜುನನಿನಸುತನ ಬೆಂ
ಬತ್ತಿ ಮುರಳಿದನವನಿಪಾಲರ
ಮುತ್ತಿಗೆಯ ತೆಗೆಸಿದನು ಜಯಲಕ್ಷ್ಮಿಯ ಕಟಾಕ್ಷದಲಿ
ಮತ್ತ ರಾಯರ ಬೆನ್ನಕಪ್ಪವ
ನೆತ್ತಿದುತ್ಸಹ ವದನದಲಿ ಹೊಗ
ರೆತ್ತಿಪಕ್ಷಿಯ ಹೊಳಹಿನಲಿ ಹೊಕ್ಕನು ನೃಪಾಲಯವ ೩

ಈತನುದಯದೊಳಿಂದು ಭೂಸುರ
ಜಾತಿಗಾಯ್ತಗ್ಗಳಿಕೆ ಪಾರ್ಥಿವ,
ರಾತರಿಂದುಬ್ಬಟೆಯ ಧನುವಿಂದಿವನ ವಶವಾಯ್ತು
ಸೋತು ತೆಗೆದ ಮಹೀಶ್ವರರ ಮಾ
ತೇತಕದು ಮಝು ಪೂತೆನುತ ಜನ
ವೀತನನು ಕೊಂಡಾಡುತಿರ್ದುದು ನೆರವಿ ನೆರವಿಯಲಿ ೪

ಬಂದನೀತನು ಗತಿಯ ಗರುವಿಕೆ
ಯಿಂದ ತರುಣಿಯ ಹೊರೆಗೆ ಬಾ ನೀ
ನೆಂದು ಕರೆದನು ಸತಿಸಹಿತ ತಿರುಗಿದನು ವಹಿಲದಲಿ
ಇಂದುಮುಖಿಯನು ಕುಂಭಕಾರನ
ಮಂದಿರದ ಹೊರಗಿರಿಸಿ ಫಲುಗುಣ
ಬಂದು ಮೈಯಿಕ್ಕಿದನು ಕುಂತಿಯ ಚರಣಕಮಲದಲಿ ೫

ತಾಯೆ ಬಿನ್ನಹವಿಂದು ಧರಣೀ
ರಾಯರೆಲ್ಲರ ಗೆಲಿದು ತಂದೆನು
ನಾಯಕವನನುಪಮಿತ ಮೌಲ್ಯವನಮಲ ಮೌಕ್ತಿಕವ
ತಾಯೆ ಚಿತ್ತೈಸಿದಿರೆಯೆನೆ ಕಡೆ
ವಾಯಿದಳು ತನಿ ಹರುಷದಲಿ ಲೇ
ಸಾಯಿತೈವರು ಕೂಡಿ ಭೋಗಿಪುದೆಂದಳಾ ಕುಂತಿ ೬

ಎನೆ ಹಸಾದವೆನುತ್ತ ಕಮಲಾ
ನನೆಯ ಹೊಡವಂಡಿಸಿದನವ್ವಗೆ
ತನುಜ ನೀ ತಂದಮಲಮೌಕ್ತಿಕವಿದೆಯೊ ಶಿವಯೆನುತ
ತನಗೆ ನುಡಿ ತೊದಲಿಸಿತಲಾ ನೀ
ವಿನಿಬರುಪಭೋಗಿಸುವುದೆಂದೆನು
ವನಿತೆಯೈವರಿಗರಸಿಯೇ ಲೇಸೆಂದಳಾ ಕುಂತಿ ೭

ಜನನಿ ತಪ್ಪದು ನಿಮ್ಮ ನುಡಿಯಿಗಾ
ವನಜಮುಖಿಯೆಮ್ಮೈವರಿಗೆ ಸತಿ
ವಿನುತ ಗುರುವಚನಾಂಬುನಿಧಿ ಮಕ್ಕಳಿಗಲಂಘ್ಯವಲೆ
ಎನೆ ಯುಧಿಷ್ಠಿರ ನೃಪತಿ ಪಾರ್ಥನ
ಕನಲಿದನು ಕಲಿ ಭೀಮನಲ್ಲೆಂ
ದನು ನಕುಲ ಸಹದೇವರನುಚಿತವೆಂದರರ್ಜುನಗೆ ೮

ಎಲ್ಲ ಧರ್ಮದ ಸಾರವನು ನೀವ್
ಬಲ್ಲಿರೈ ಸಲೆ ಹೇಳ್ವುದಾವುದು
ನಿಲ್ಲಿ ನೀವ್ ಸಹದೇವ ನಕುಲರು ನಿಮಗೆ ಮಾತೇಕೆ
ಬಲ್ಲಿರಖಿಳಾಮ್ನಾಯ ಭಾಷಿತ
ದಲ್ಲಿ ನೋಡಲು ಧರ್ಮಶಾಸ್ತ್ರದೊ
ಳೆಲ್ಲ ತಾಯಿಂದಧಿಕ ಗುರುವಿಲ್ಲೆಂದನಾ ಪಾರ್ಥ ೯

ಮಾತೃವಚನವಲಂಘ್ಯವಿದು ವಿ
ಖ್ಯಾತ ಪದ್ಧತಿ ಲೋಕಯಾತ್ರಾ
ಭೀತಿಯಲಿ ಭಯವೇಕೆ ಧರ್ಮರಹಸ್ಯನಿಷ್ಠರಿಗೆ
ವಿತರ್ಕ ಲೋಕಾನುಸರಣೆ ವಿ
ಧೂತ ಕಿಲ್ಬಿಷವಾವುದದು ಧ
ರ್ಮಾತಿಶಯವಿಹಪರಕೆ ಕಡುಹಿತವೆಂದನಾ ಪಾರ್ಥ ೧೦

ರಾಗ ಲೋಭ ವ್ಯಾಪ್ತಿಯಲಿ ನೀ
ವೀ ಗುರುವಿಗಳುಪುವರೆ ಸಲೆ ಧ
ರ್ಮಾಗಮವನಾಚರಿಸುವವಲೇ ನಮ್ಮನುಷ್ಠಾನ
ಈಗಳೀ ಗುರುವಚನ ಧರ್ಮ
ತ್ಯಾಗವೇನಿದು ಧರ್ಮವೇ ಉಪ
ಭೋಗವೈವರಿಗೆಂದು ತಿಳುಹಿದನವರನಾ ಪಾರ್ಥ ೧೧

ಮಾಡದಿರಿ ಸಂದೇಹಗಳ ಖಿಯ
ಟೋಡಿಯಿದರೊಳಗಿಲ್ಲ ಧರ್ಮದ
ಮೂಡಿಗೆಯೊಳಂಬಿರಲಿ ಬಹಿರಂಗದಲಿ ಬಳಸದಿರಿ
ಗೂಡು ಹಲವಿಹ ಪಕ್ಷಿಯೊಂದಿದ
ನಾಡಬಾರದು ಸಾಕು ಚಿಂತಿಸ
ಬೇಡಿ ನೀವೆಂದನಿಬರನು ತಿಳುಹಿದನು ಕಲಿಪಾರ್ಥ ೧೨

ಆದುದನುಮತ ತಮ್ಮೊಳಗೆ ತ
ತ್ಸೋದರರು ಸೌಹಾರ್ದದಿಂದ ತ
ಳೋದರಿಯನೊಲಿದೈವರಂಗೀಕರಿಸಿದರು ಬಳಿಕ
ಆದರಣೆಯಲಿ ಕುಂತಿ ಸೊಸೆಗೆ ವೃ
ಕೋದರನ ಭಿಕ್ಷಾನ್ನ ಭಾಗದ
ಭೇದವನು ತಿಳುಹಿದಳು ತೊಡೆಯಲಿ ತೆಗೆದು ಕುಳ್ಳಿರಿಸಿ ೧೩

ಇಳಿದನಸ್ತಾಚಲಕೆ ರವಿ ನೃಪ
ತಿಲಕರೈವರು ವಿಹಿತಕೃತ್ಯಾ
ವಳಿಗಳನು ವಿಸ್ತರಿಸಿ ಕುಂತಿಯ ಚರಣಕಭಿನಮಿಸಿ
ಜಲರುಹಾಕ್ಷನ ನಾಮಕೀರ್ತನ
ಲುಳಿತ ಪರಮಾನಂದರಸದಲಿ
ಮುಳುಗಿ ಮೂಡುತ್ತಿರ್ದರಂದು ಕುಲಾಲ ಭವನದಲಿ ೧೪

ಸಿಲುಕಿದುದು ಜನದೃಷ್ಟಿ ಬಲುಗ
ತ್ತಲೆಯ ಬಂಧದೊಳಂಧಕಾರದ
ಜಲಧಿಯಲಿ ಜಗವದ್ದುದೇನೆಂಬೆನು ಮಹಾದ್ಭುತವ
ನಳಿನಮಿತ್ರನ ಬೇಹುಕಾರರ
ಸುಳಿವೊ ತಿಮಿರದ ಪಾಳೆಯದೊಳೆನೆ
ನಿಳಯದ ಸೊಡರು ತಳಿತುದು ಕೂಡೆ ನಗರಿಯಲಿ ೧೫

ಇವರಿಗುಂಟೇ ದೀಪ ತೈಲ
ದ್ರವಿಣವಿಲ್ಲ ಕುಲಾಲ ಭವನಕೆ
ಕವಿವ ಕಗ್ಗತ್ತಲೆಯ ನುಗ್ಗೊತ್ತಿದುದು ಬೇರೊಂದು
ನವಯುವತಿಯಾಭರಣ ಮಣಿರುಚಿ
ನಿವಹವಾಕೆಯ ನಯನಕಾಂತಿಗ
ಳವನಿಪತಿ ಕೇಳ್ ನಿನ್ನ ಪಿತನ ಪಿತಾಮಹರ ಪರಿಯ ೧೬

ಜನಪ ನಂದನೆಗೊಂದು ಕೃಷ್ಣಾ
ಜಿನವನಿತ್ತರು ಶಯನ ಭಾಗಕೆ
ಜನನಿಯಂಘ್ರಿಯ ಬಳಿಯಲೊರಗಿದರೈವರೊಂದಾಗಿ
ವನಿತೆಯುವರಂಘ್ರಿಗಳ ತಲೆಗಿಂ
ಬಿನಲಿ ಮಲಗಿದಳಂದಿನಾಹವ
ಜನಿತ ಕೃತಿಯನು ನುಡಿವುತಿರ್ದನು ಪಾರ್ಥನರಸಂಗೆ ೧೭

ಗೆಲಿದ ಪರಿಯನು ಕೌರವೇಂದ್ರನ
ದಳವ ಮುರಿದಂದವನು ಕರ್ಣನ
ನಳುಕದೆಚ್ಚ ಶರಪ್ರಯೋಗದ ಚಾಪಕೌಶಲವ
ಬಲಜಲಧಿ ಮುಕ್ಕುರಿಕಿದರೆ ಮುಂ
ಡಲಿಸಿ ಮೊಗೆದಂದವನು ಶಸ್ತ್ರಾ
ವಳಿಯ ಸಂಹರಣವನು ವಿವರಿಸಿದನು ಮಹೀಪತಿಗೆ ೧೮

ಕುದುರೆಯೇರಾಟವನು ಮಾತಂ
ಗದ ಸುಶಿಕ್ಷಾಭೇದವನು ರಥ
ವಿದಿತ ಕೌಶಲವನು ಶರಾಸನವೇದ ಸಂಗತಿಯ
ಮದವದರಿ ಭಂಜನವ ದಿವ್ಯಾ
ಸ್ತ್ರದಲಿ ಮುಕ್ತಾಮುಕ್ತಸಮರಂ
ಗದ ಸುಸಂಗತಿಯಿಂದ ನೂಕಿದರಿವರು ಯಾಮಿನಿಯ ೧೯

ಆಯುಧದ ಲಕ್ಷಣವನಾ ದಿ
ವ್ಯಾಯುಧದ ಮಂತ್ರಪ್ರಭಾವವ
ನಾಯುಧದ ವಿವಿಧ ಪ್ರಯೋಗವನದರ ಪರಿವಿಡಿಯ
ರಾಯರಂಗದ ಶಕ್ತಿವರ್ಗದು
ಪಾಯಗುಣ ವಿಕ್ರಮ ಪರಾಕ್ರಮ
ನಾಯಕರ ಗುಣಕಥನದಲಿ ನೂಕಿದರು ಯಾಮಿನಿಯ ೨೦

ಮುನಿವಳೀ ಸತಿಯೆಂದು ನಿದ್ರಾಂ
ಗನೆಯು ಸೋಕಿದರವನಿಪರು ಭಾ
ಮಿನಿ ಸಹಿತಲಿರಲಿತ್ತಲೀ ಪಾಂಚಾಲ ಭೂಪತಿಯು
ತನುಜನಿವರ ಪರೀಕ್ಷೆಗೋಸುಗ
ಮುನಿಪ ಕಾಶ್ಯಪಗೂಡಿ ಕೇಳಿದ
ನನಿತು ಮಾತೆಲ್ಲವನು ಮರೆಯಲಿ ನಿಂದು ರಜನಿಯಲಿ ೨೧

ಬಂದು ಧೃಷ್ಟದ್ಯುಮ್ನನಯ್ಯಂ
ಗೆಂದನಿನನಸ್ತಮಯ ಸಂಧ್ಯಾ
ವಂದನೆಯ ತರುವಾಯ ಶಸ್ತ್ರಾಸ್ತ್ರಪ್ರಸಂಗದಲಿ –
ಸಂದ ಗಜ ಹಯ ರಥದ ಪರಿವಿಡಿ
ಯಿಂದವರು ನೃಪನೀತಿ ಸಂಗತಿ
ಯಿಂದ ರಾತ್ರಿಯ ಕಳೆದರಾರೆಂದರಿಯೆ ನಾನೆಂದ ೨೨

ಧರಣಿಪತಿ ಕೇಳ್ ವಿಪ್ರರಾದರೆ
ಸರಸ ನವ ಭೋಜನದ ಕಥೆ ಮೇಣ್
ನಿರತಿಶಯ ವೇದಾಂಗ ವೇದ ತದರ್ಥ ತರ್ಕಗಳು
ಅರಸುಗಳಿಗಾಯುಧದ ಗಜ ರಥ
ತುರಗದೇರಾಟದ ಮಹಾಸ್ತ್ರದ
ವಿರಚನೆಗಳಿವು ಜಾತಿವಿದ್ಯೆಗಳೆಂದನಾ ಮುನಿಪ ೨೩

ಭೂರಿ ಧನ ವರ್ಧನ ಸದಾ ವ್ಯವ
ಹಾರ ಲಾಭಾಲಾಭ ಚಿಂತೆಗ
ಳೂರುಜನಿತರಿಗಂತ್ಯವರ್ಣಕೆ ಕೃಷಿಯ ಮಾತುಗಳು
ಆರನಾದರು ಜಾತಿಧರ್ಮದ
ಸೇರುವೆಗಳೇ ಹೇಳುವುವು ನ
ಮ್ಮಾರಯಿಕೆಗಿವರಿಂದು ಕ್ಷತ್ರಿಯರೆಂದು ಮುನಿ ನುಡಿದ ೨೪

ಇವರು ಪಾರ್ಥಿವರೊಳಗೆ ಕೇಳ್ ಪಾಂ
ಡವರು ನಿಸ್ಸಂದೇಹವೆಂದೇ
ನಿವಗೆ ನಾವೆನ್ನೆವೆ ವಿವಾಹದ ಪೂರ್ವಕಾಲದಲಿ
ಅವರನುಪಚರಿಸೇಳು ರಚಿಸು
ತ್ಸವವನಾಯ್ತಿದೆ ಪೂರ್ವಗಿರಿಯಲಿ
ರವಿಯುದಯವೆಂದಾ ಪುರೋಹಿತ ತಿಳುಹಿದನು ನೃಪನ ೨೫

ಒಸಗೆಯಾಯಿತು ಮತ್ತೆ ಗುಡಿಯೆ
ತ್ತಿಸಿತು ನಗರಿಯೊಳಧಿಕ ಹರುಷ
ಪ್ರಸರದಲಿ ರೋಮಾಳಿ ಪಲ್ಲವಿಸಿದುದು ನರಪತಿಯ
ಬಿಸಜಬಂಧುವಿನುದಯದಲಿ ನೃಪ
ವಿಸರಸಹಿತ ಕುಲಾಲಭವನದ
ವಸುಮತೀ ವಲ್ಲಭರ ಕಂಡನು ಬಂದು ಪಾಂಚಾಲ ೨೬

ಏಳಿ ಬಿಜಯಂಗೈವುದೆಂದು ನೃ
ಪಾಲಕರನುಚಿತದಲಿ ನಿಜ ರಾ
ಜಾಲಯಕೆ ತಂದನು ನಿರೀಕ್ಷಿಸುತನಿಬರಿಂಗಿತವ
ಮೇಲು ಮೊಗದ ಗಭೀರ ಗತಿಯ ಭ
ಡಾಳವನು ಕಂಡಿವರು ರಾಯರ
ಬೀಳಿಗೆಗಳಹುದೆಂದು ನಿಶ್ಚೈಸಿದನು ಮನದೊಳಗೆ ೨೭

ಮುದದಿ ಮಂಗಳ ಮಜ್ಜನವ ಮಾ
ಡಿದರು ದಿವ್ಯಾಂಬರವನುಟ್ಟರು
ಸುದತಿಯರ ಹರಿವಾಣದಾರತಿಗಳನು ಕೈಗೊಳುತ
ಪದಕ ಕರ್ಣಾಭರಣ ಹಾರಾಂ
ಗದದಿನೊಪ್ಪಂಬಡೆದಿವರು ಪೂ
ಸಿದರು ಸಾದು ಜವಾಜಿ ಕತ್ತುರಿ ಯಕ್ಷಕರ್ದಮವ ೨೮

ಬಾಸಿಗದ ನೊಸಲಿನಲಿ ಮೆರೆವ ಮ
ಹೀಶರೈವರು ಮಂಟಪದ ನೆಲ
ಹಾಸಿನಲಿ ಕುಳ್ಳಿರ್ದರನುಪಮ ರಾಜತೇಜದಲಿ
ಆ ಸೊಸೆಯು ಸಂಗಾತ ಕುಂತಿ ವಿ
ಲಾಸದಲಿ ಕುಳ್ಳಿರ್ದಳಾ ವಿ
ನ್ಯಾಸವನು ಜನ ನೋಡುತಿರ್ದುದು ಬಿಗಿದ ಬೆರಗಿನಲಿ ೨೯

ಜಲವನಂಜುಳಿಯಿಂದ ದ್ರುಪದನು
ಸೆಳೆದು ಮೆರೆದವ ಬರಲಿ ಯಂತ್ರವ
ಗೆಲಿದ ಗರುವನು ನಿಮ್ಮ ಪಂಚಕರೊಳಗೆಯೆನೆ ನಗುತ
ಇಳಿದನವನಿಪ ಭೀಮನೊಯ್ಯನೆ
ಸುಳಿದನರ್ಜುನ ಹಿಂದೆ ಯಮಳರು
ನಳಿನವದನೆಯ ಹೊರಗೆ ಬಂದರು ಭೂಪ ಕೇಳೆಂದ ೩೦

ಬಿಸುಟನಂಜುಳಿಯುದಕವನು ನಿ
ಪ್ಪಸರದಲಿ ಬೆರಗಾಗಿ ಭೂಪರ
ಮುಸುಡನೆವೆಯಿಕ್ಕದೆ ನಿರೀಕ್ಷಿಸುತೆಂದನಾ ದ್ರುಪದ
ಅಸುರರೋ ಸುರರೋ ಭುಜಂಗರೊ
ವಸುಮತೀಶರೊ ನೀವು ದಿಟ ಮಾ
ನಿಸರ ಪರುಠವವಲ್ಲ ನೀವಾರೆಂದು ಬೆಸಗೊಂಡ ೩೧

ಈತನಗ್ಗದ ಭೀಮನರ್ಜುನ
ನೀತನಿವರ್ಗೈ ಯಮಳರೆಂಬವ
ರೀತಗಳು ನಮ್ಮಿಂದ ಕಿರಿಯರು ನಾವು ಪಾಂಡವರು
ಮಾತೆಯೆಮ್ಮೈವರಿಗೆ ಜಗವಿ
ಖ್ಯಾತೆ ಕುಂತೀದೇವಿ ತಾನಿಂ
ದೀ ತಳೋದರಿಯಾದಳೆಮ್ಮೈವರಿಗೆ ವಧುವೆಂದ ೩೨

ಕೊಂಡು ಹರಿದುದು ಹರುಷವಾ ಬ್ರ
ಹ್ಮಾಂಡದಗ್ರಕೆ ಮಗುಳಿಗೈವರು
ಗಂಡರೆನೆ ಮಗುಳದ್ದುದಾತನ ಮನ ರಸಾತಳಕೆ
ಕಂಡು ಬಲ್ಲರೆ ಕಂಗಳಲಿ ಕಿವಿ
ಕೊಂಡು ಕೇಳ್ದಿರೆ ಮುನ್ನ ನಮಗೀ
ಭಂಡತನವನು ಮಾಡುವರೆ ನೀವೆಂದನಾ ದ್ರುಪದ ೩೩

ಲೋಕಸಂಮತವಲ್ಲ ಶಾಸ್ತ್ರಾ
ನೀಕದಭಿಮತವಲ್ಲ ಕಾಪಥ
ವೇಕೆ ನಿಮಗಿದು ಪಾಂಡುಪುತ್ರರು ನೀವು ಧಾರ್ಮಿಕರು
ಪ್ರಾಕೃತರೇ ನೀವಕಟ ನಿಮ್ಮ ವಿ
ವೇಕವೇನಾಯ್ತಿಲ್ಲಿ ಇಹ ಪರ
ಲೋಕಕಿದು ಸಾಧನವೆಯೆಂದನು ದ್ರುಪದ ಭೂಪಾಲ ೩೪

ಕಾಮಮೋಹಿತರಲ್ಲ ವಿಷಯ
ಸ್ತೋಮಭಂಗಿತರಲ್ಲ ಧರ್ಮದ
ಸೀಮೆಯೊಳಗೆಳ್ಳನಿತನವಮಾನಿಸುವರಾವಲ್ಲ
ಈ ಮಹಾಸತಿಯೆಮಗೆ ಜನನಿಯ
ನೇಮದಲಿ ವಧುವಾದಳಿಂದು ವಿ
ರಾಮವೇಕೆ ವಿವೇಕಕೆಂದನು ಧರ್ಮಸುತ ನಗುತ ೩೫

ಏಕಪತಿ ಬಹುಸತಿಯರೆಂಬುದು
ಲೋಕಪದ್ಧತಿ ಕಂಡೆವಾವಿಂ
ದೇಕ ಪತ್ನಿಗೆ ಪುರುಷಪಂಚಕವನು ಮಹಾದೇವ
ಲೋಕಶಾಸ್ತ್ರ ವಿರುದ್ಧವನು ಕಿವಿ
ಯೋಕರಿಸುತಿವೆ ಕಣ್ಣನಕೆ ಸು
ವ್ಯಾಕುಲತೆ ಹಿರಿದಾದುದೆಂದನು ದ್ರುಪದ ಭೂಪಾಲ ೩೬

ಆ ಸಮಯದಲಿ ದೇವ ವೇದ
ವ್ಯಾಸಮುನಿಯೈತಂದನಲ್ಲಿ ಮ
ಹೀಶಸಭೆಯಿದಿರೆದ್ದು ಕಂಡುದು ಕಾಣಿಕೆಯ ನೀಡಿ
ದೋಷಗರ್ಭಿತ ಧರ್ಮವನು ನಿ
ರ್ದೈಸಲರಿಯದ ಮೂಢಮತಿಗೆ ಮು
ನೀಶ ಕೃಪೆ ಮಾಡೆಂದು ವೈಯಿಕ್ಕಿದನು ಪಾಂಚಾಲ ೩೭

ನೆಗಹಿದನು ದ್ರುಪದನನು ಯಮಜಾ
ದಿಗಳನೆತ್ತಿದನೊಬ್ಬರೊಬ್ಬರ
ತೆಗೆದು ತಕ್ಕೈಸಿದನು ಮುದದಲಿ ಪಾಂಡುನಂದನರ
ದುಗುಡವೇಕೈ ದ್ರುಪದ ನಿನ್ನಯ
ಮಗಳ ಸೌಭಾಗ್ಯದಲರುಂಧತಿ
ಸೊಗಸಿ ರಂಜಿಸಲರಿಯಳೆಂದನು ಕೃಷ್ಣಮುನಿ ನಗುತ ೩೮

ಅಹುದಲೇ ಬಳಿಕೇನು ತಂಗಿಯ
ಬಹಳ ಸುಕೃತೋದಯದಲರಗಿನ
ಗೃಹದ ಗಂಟಲನೊದೆದು ಸುಳಿದರು ಪಾಂಡುನಂದನರು
ಗಹನ ಯಂತ್ರವನೆಚ್ಚ ಪಾರ್ಥನ
ಮಹಿಳೆಗೆನ್ನ ಕುಮಾರಿಗೀಗಲು
ಬಹುಪತಿಗಳಾಯ್ತಿದನು ನೀವ್ ನಿರ್ಣೈಸಬೇಕೆಂದ ೩೯

ದ್ರುಪದ ಧೃಷ್ಟದ್ಯುಮ್ನ ಪಾಂಡವ
ನೃಪರು ಕಾಶ್ಯಪಗೂಡಿ ಹೊಕ್ಕರು
ವಿಪುಳತರ ಕಾರುಣ್ಯದಿಂದೇಕಾಂತ ಮಂದಿರವ
ನೃಪತಿ ಸಂಶಯವೇಕೆ ನಾವಿದ
ನಪಹರಿಸುವೆವು ಪಾಂಡುಪುತ್ರರ
ನುಪಚರಿಸು ವೈವಾಹವನು ವಿಸ್ತರಿಸು ಸಾಕೆಂದ ೪೦

ವಿಧಿವಿಹಿತ ಲೋಕಾಪವಾದವ
ನಧಿಕರಿಸಿ ವರ್ಣಾಶ್ರಮಕೆ ಸು
ವ್ಯಧಿಕರಣ ಹುಗದಂತೆ ಸದ್ವ್ಯವಹಾರ ಮಾರ್ಗದಲಿ
ವಿಧಿಸಿದರೆ ನಿಮ್ಮಂಘ್ರಿಗಳ ಸಂ
ನಿಧಿಯಲೇ ಪಾಣಿಗ್ರಹಣವನು
ವಿಧುಮುಖಿಗೆ ಮುದದಿಂದ ಮಾಡುವೆನೆಂದನಾ ದ್ರುಪಹ ೪೧

ಧರಣಿಪತಿ ಕೇಳಿವರ ತಾಯ್ಮುಂ
ದರಿಯದಾಡಿದಳಾ ನುಡಿಯನು
ತ್ತರಿಸಬಾರದು ಧರ್ಮವಿದು ಪರಮಾತ್ಮಭಕ್ತರಿಗೆ
ಗುರುವಚನದ ನಿಮಿತ್ತ ವರ ಪತಿ
ಕರಿಸಿ ಚರಿಸಿದ ಪೂರ್ವಜನ್ಮದ
ಸರಸಿಜಾಕ್ಷಿಯ ಕಥೆಯನರುಪುವೆನಿನ್ನು ಕೇಳೆಂದ ೪೨

ಮುನ್ನ ನಾರಾಯಣಿಯೆನಿಪ್ಪುದೀ
ಕನ್ನಿಕೆಯ ಪೆಸರೊಬ್ಬ ಗುಣ ಸಂ
ಪನ್ನ ಮುನಿಪನ ವಧು ಪತಿವ್ರತೆಯರಿಗೆ ಗುರುವೆನಿಸಿ
ಉನ್ನತೋನ್ನತ ಭಕ್ತಿ ಭಯದಲಿ
ತನ್ನ ಪತಿ ಪರದೈವವೆಂದು ವಿ
ಪನ್ನನನು ಕೊಂಡಾಡುತಿರ್ದಳು ರಾಯ ಕೇಳೆಂದ ೪೩

ಆ ತಪೋನಿಧಿ ಕುಷ್ಠರೋಗ ಪ
ರೀತ ಬೀಭತ್ಸೆಯಲಿ ಹುದುಗಿರ
ಲೀ ತಳೋದರಿ ಭಜಿಸುತಿರ್ದಳು ಭಾವಶುದ್ಧಿಯಲಿ
ಆತನೀಕೆಯ ಕೃತ್ಯದಲಿ ಭಾ
ವಾತಿಶಯದಲಿ ಬೋಡಿಯನು ಹಿಡಿ
ವಾತನಾಗಿರಲೊಂದು ದಿನವಿಂತಾಯ್ತು ಕೇಳೆಂದ ೪೪

ಕೊಳೆತ ಬೆರಳನು ಭುಕ್ತ ಶೇಷದೊ
ಳಿಳುಹಿದರೆ ಕಂಡೀಕೆ ಚಿತ್ತದೊ
ಳಳುಕದುಪಭೋಗಿಸೆ ಮುನೀಶ್ವರನದಕೆ ಹರುಷದಲಿ
ಎಲೆಗೆ ಮೆಚ್ಚಿದೆನಿನ್ನು ನೀ ಮನ
ವೊಲಿದುದನು ಬೇಡೆನಲು ಬಳಿಕಾ
ಲಲನೆ ನುಡಿದಳು ದಿವ್ಯರೂಪಿನೊಳೆನ್ನ ನೆರೆಯೆಂದು ೪೫

ದ್ರುಪದ ಕೇಳಾ ಕುಷ್ಠದೇಹವ
ನಪಹರಿಸಿ ಕಂದರ್ಪ ರೂಪಿನೊ
ಳುಪಚರಿಸಿ ಕಾಮಿನಿಯನವನತಿ ಕಾಮಕೇಳಿಯಲಿ
ತಪಸಿ ದಣಿದನು ತನ್ನ ಮುನ್ನಿನ
ತಪವ ನೆನೆದನು ದಣಿಯದಿರೆಯಿಾ
ಚಪಲಲೋಚನೆ ಸೆರಗ ಹಿಡಿದಳು ಹೋಗದಿರಿಯೆನುತ ೪೬

ದಿಟ್ಟ ಹೆಂಗುಸೆ ನೃಪರ ಬಸುರಲಿ
ಹುಟ್ಟು ನೀ ಹೋಗೆಂದು ಶಾಪವ
ಕೊಟ್ಟನೀಕೆಗೆ ಹಾಯ್ದನಾ ಮುನಿಪತಿ ತಪೋವನಕೆ
ನಟ್ಟಡವಿಯಲಿ ನಳಿನಮುಖಿ ಕಂ
ಗೆಟ್ಟು ಭಜಿಸಿದಳಖಿಳ ದುರಿತಘ
ರಟ್ಟನನು ದಿವಿಜೇಂದ್ರವಂದ್ಯನನಿಂದುಶೇಖರನ ೪೭

ಹಲವು ಕಾಲದಿ ತಪದೊಳಕಟಾ
ಬಳಲಿದಳಲಾ ಮುನಿಯ ವಧುವೆಂ
ದಿಳಿದನೀಶ್ವರನಾ ತಪೋವನಕಾಕೆಯೆದುರಿನಲಿ
ಸುಳಿಯೆ ಕಂದೆರೆದಬಲೆ ಕಂಡಳು
ಸುಲಭನನು ಭಕ್ತರಿಗೆ ತರ್ಕಾ
ವಳಿಗೆ ದುರ್ಲಭನನು ದುರಾಸದ ಮಹಿಮ ಧೂರ್ಜಟಿಯ ೪೮

ತರುಣಿ ಮೈಯಿಕ್ಕಿದಳು ಕರದಲಿ
ಶಿರವ ನೆಗಹಿದಳಬುಜಲೋಚನೆ
ವರವ ಕೊಟ್ಟೆನು ಬೇಡಿಕೊಳ್ಳೆನೆ ತರುಣಿ ತಲೆವಾಗಿ
ಹರಪತಿಂ ದೇಹಿ ಪ್ರಭೋ ಶಂ
ಕರ ಪತಿಂ ದೇಹಿ ಪ್ರಭೋಯೆಂ
ದರಸಿ ಬೇಡಿದಳೈದು ಬಾರಿ ಮಹೇಶನಲಿ ವರವ ೪೯

ಆದಡೈವರು ಪತಿಗಳಹರು ತ
ಳೋದರಿಯೆ ನಿನಗೆನಲು ಬೆಚ್ಚಿದ
ಳೀ ದುರಿತ ತನಗೇಕೆನುತ ಸತಿ ಮುಚ್ಚಿದಳು ಕಿವಿಯ
ಆದಡಂಜದಿರಂಜದಿರು ವರ
ವೇದಬಾಹಿರವಲ್ಲ ಸತಿಯರೊ
ಳಾದಿ ಪಾತಿವ್ರತ್ಯ ನಿನಗೆಂದನು ಮಖಧ್ವಂಸಿ ೫೦

ಶ್ರುತಿಗಳೆಂಬುದೆಯೆಮ್ಮ ನುಡಿ ಸಂ
ಸ್ಮೃತಿಗಳೆಮ್ಮಯ ಚೇಷ್ಟೆ ಧರ್ಮದ
ಗತಿ ವಿಚಾರಿಸಲೆಮ್ಮ ನೇಮವು ವಿಹಿತ ವಿಧಿಯೆಂದು
ಕ್ರತುಗಳೀ ಮನ್ವಾದಿಗಳು ಸುರ
ತತಿಗಳಬುಜಭವಾದಿ ದೇವ
ಪ್ರತತಿಯೆನ್ನಾಜ್ಞೆಯೊಳಗೆಂದಾ ಸತಿಗೆ ಶಿವ ನುಡಿದ ೫೧

ನಿನ್ನ ಕಥನವೆ ಪುಣ್ಯಕಥನವು
ನಿನ್ನ ಚರಿತವೆ ಪುಣ್ಯಚರಿತವು
ನಿನ್ನ ನೆನೆದಂಗನೆಗೆ ಬಹುದು ಪತಿವ್ರತಾಭಾವ
ಎನ್ನನುಜ್ಞೆಗೆ ಧರ್ಮ ಚಿಂತಾ
ಪನ್ನೆಯಾಗದಿರೆಂದು ಕೃಪೆಯಲಿ
ತನ್ನ ಸಿರಿ ಕರತಳವನಿರಿಸಿದನುತ್ತಮಾಂಗದಲಿ ೫೨

ಹರನ ನುಡಿಯೇ ವೇದ ಹರನಾ
ಚರಣೆಯೇ ಸನ್ಮಾರ್ಗ ಹರ ಪತಿ
ಕರಿಸಿ ನುಡಿದುದೆ ಪರಮಪಾವನ ಧರ್ಮತತ್ವವದು
ಬರಹ ಸಹಿತಾ ವಿಧಿಯನೊರಸಲು
ಹರ ಸಮರ್ಥನು ಹರನ ಬರಹವ
ನೊರಸಲಾಪರ ತೋರಿಸಾ ಬ್ರಹ್ಮಾದಿ ದೇವರಲಿ ೫೩

ಆದರಿನ್ನೈವರಿಗೀಕೆ ವಧುವೆಂ
ಬುದು ಮಹೇಶ್ವರನಾಜ್ಞೆ ನೀನಿಂ
ದಿದಕೆ ಚಿಂತಿಸಬೇಡ ಬಳಿಕಾ ಪಾಂಡುನಂದನರ
ಹದನನರುಹುವೆ ಕೇಳು ನೃಪ ಪೂ
ರ್ವದಲಿ ಸುರಪತಿ ಶಂಕರನ ಶಾ
ಪದಲಿ ನವೆದನು ಹಲವು ಯುಗ ಕೈಲಾಸ ಕುಹರದಲಿ ೫೪

ಬಳಿಕಲಿಂದ್ರನು ಮರವೆಯಲಿ ಕಳ
ವಳಿಸಲಾತಂಗೀತನಂದದಿ
ಹಲವು ಯುಗ ಸೆರೆಯಾಯ್ತು ರಜತಾಚಲದ ಕುಹರದಲಿ
ಬಿಲದಲೀ ಪರಿಯೈವರಿಂದ್ರರು
ಸಿಲುಕಿದರು ಶಂಕರನ ಖತಿಯಲಿ
ಬಳಿಕ ಬಿಡುಗಡೆಯಾಯ್ತು ಕಾತ್ಯಾಯನಿಯ ದೆಸೆಯಿಂದ ೫೫

ಜನಿಸುವುದು ನೀವೈವರಿಂದ್ರರು
ಮನುಜ ಲೋಕದೊಳರಸು ಕುಲದಲಿ
ವನಿತೆ ನಿಮ್ಮೈವರಿಗೆಯಹಳೊಬ್ಬಳೆ ನಿಧಾನವಿದು
ಎನಲು ನಡುಗಿದರಕಟ ಮೊದಲಲಿ
ಮನುಜ ಜನ್ಮವೆ ಕಷ್ಟವದರೊಳು
ವನಿತೆಯೊಡಹುಟ್ಟಿದರಿಗೊಬ್ಬಳೆ ಶಿವಶಿವಾಯೆಂದ ೫೬

ಹರಹರ ತ್ರಾಯಸ್ವ ಕರುಣಾ
ಕರ ಮಹಾದೇವೀ ದುರಂತದ
ನರಕ ಭಾಜನಮುಚಿತವೇ ನಿಮ್ಮಂಘ್ರಿದರ್ಶನಕೆ
ಕರುಣಿಸೈ ಮತ್ತೊಂದು ಪರಿಯಲಿ
ವರವನೆನೆ ನಸುನಗುತ ಗೌರೀ
ವರನು ತಿಳುಹಿದನೈವರಿಂದ್ರರಿಗರಸ ಕೇಳೆಂದ ೫೭

ಖೇಡತನವೇಕೆಳ್ಳನಿತು ಖಿಯ
ಖೋಡಿಯಿದರೊಳಗಿಲ್ಲ ಮುನಿವಧು
ಬೇಡಿದಳು ಪೂರ್ವದಲಿ ವರವನು ಪಂಚವಾಕ್ಯದಲಿ
ಜೋಡೆನಿಸಿದಳು ನಾರಿ ಧರ್ಮಕೆ
ಕೇಡು ಬಾರದು ನಿಮ್ಮ ನೆರೆ ಕೆ
ಟ್ಟಾಡಿದರ ಬಾಯ್ ಹುಳುವುದೆಂದನು ಬಾಲಶಶಿಮೌಳಿ ೫೮

ಎನೆ ಹಸಾದದಲಿಂದುಶೇಖರ
ನನು ಸುರೇಂದ್ರರು ಬೀಳುಕೊಂಡರು
ಜನಿಸಿದರು ಬಳಿಕಿವರು ಮಹಿಯಲಿ ಮರ್ತ್ಯರೂಪಾಗಿ
ನಿನಗೆ ಮಗಳೀ ವನಿತೆ ಕುಂತಿಯ
ತನುಜರಿವರಳಿಯಂದಿರೇ ನೀ
ನೆನಿತು ಧನ್ಯನೊ ಶಿವಯೆನುತ ತಲೆದೂಗಿದನು ಮುನಿಪ ೫೯

ಎಲೆ ಮರುಳೆ ಪೂರ್ವದಲಿ ತಾವ್ ತ
ಮ್ಮೊಳಗೆಯೈವರು ಜನಿಸೆ ನಿನ್ನೀ
ನಳಿನಮುಖಿಗಿವರೆಲ್ಲ ವರಗಳು ಪಾಂಡುನಂದನರು
ತಿಳಿಯದಿರೆ ನೋಡಾದೊಡೆನುತ
ಗ್ಗಳೆಯ ಮುನಿಪತಿ ದಿವ್ಯದೃಷ್ಟಿಯ
ಸಲಿಸಿದಡೆ ನೋಡಿದನು ದ್ರುಪದನು ಪಾಂಡುನಂದನರ ೬೦

ಮೆರೆವ ದೇಹಪ್ರಭೆಗಳಲಿ ಮಿರು
ಮಿರುಪ ದಿವ್ಯಾಭರಣ ಕಿರಣದ
ತುರುಗಿನಲಿ ತನಿ ಹೊಳೆವ ದಿವ್ಯಾಂಬರದ ಕಾಂತಿಯಲಿ
ಅರಿವಡಾಯ್ತೆಲ್ಲವಯವದ ಕಂ
ದರೆವ ತೇಜಃಪುಂಜ ರಸಮಯ
ದೆರಕವೆನಲಿವರೈವರೊಪ್ಪಿದರಿಂದ್ರ ತೇಜದಲಿ ೬೧

ಮನದ ಝೊಮ್ಮಿನ ಝುಡಿವ ರೋಮಾಂ
ಚನದ ಹುದುಗುವ ಹೊದರುಗಂಗಳ
ಜಿನುಗುವಾತಿನ ಹೂತ ಹರುಷದ ಹೊಂಗಿದುತ್ಸವದ
ಕೊನರೊ ಬೆವರಿನ ಕಳಿದ ಚಿಂತೆಯ
ಮನದ ಭಾವದ ರಾಗರಸದು
ಬ್ಬಿನಲಿ ಹೊಂಪುಳಿ ಹೋದನವರನು ಕಂಡು ಪಾಂಚಾಲ ೬೨

ಅರಸ ಕಂಡೆ ನರಪತಿಗಳೋ
ಸುರಪತಿಗಳೋ ಮನದ ಸಂಶಯ
ಪರಿದುದೇ ಹಳಿವಿಲ್ಲಲೇ ಲೇಸಾಗಿ ನೋಡೆನಲು
ಪರಮಋಷಿ ನೀ ಪುಣ್ಯದಲಿ ಗೋ
ಚರಿಸಿದೈ ನಿಮ್ಮಡಿಯ ನೇಮವ
ಶಿರದೊಳಾಂತೆನು ಧನ್ಯ ತಾನೆಂದರಸ ಕೈಮುಗಿದ ೬೩

ನಂಬಿದೈ ಲೇಸಾಗಿ ಲಗ್ನ ವಿ
ಲಂಬವಾಗದೆ ಧಾರೆಯೆರೆ ಕಲ
ಶಾಂಬುವಿದೆ ನೀ ಹೋಗು ಕಾಶ್ಯಪ ಹೋಮ ಸಾಧನವ
ತುಂಬು ವಹಿಲದಲವನಿಯಮರ ಕ
ದಂಬ ನೆರೆಯಲಿಯೆನಲು ದ್ರುಪದನ
ಹೊಂಬೆಳೆಯ ತನಿ ಹರುಷ ಹೊಡೆದೋರಿದುದು ಪುಳಕದಲಿ ೬೪

ಸಾರಿದರು ಮೆಟ್ಟಕ್ಕಿಗಳ ಗುಡ
ಜೀರಿಗೆಗಳೊದಗಿದವು ಲಗ್ನವಿ
ಚಾರವಾಶೀರ್ವಾದದಾಯತ ರವದ ರಭಸದಲಿ
ಧಾರೆಯೆರೆದನು ದ್ರುಪದ ಪಾಂಡು ಕು
ಮಾರರಿಗೆ ನಿಜಸುತೆಯನತಿ ವಿ
ಸ್ತಾರಿಸಿತು ವೈವಾಹರಚನೆ ವಿಶಾಲವಿಭವದಲಿ ೬೫

ಹೋಮ ಸಮನಂತರದಲಖಿಳ ಧ
ರಾಮರರ ಪೂಜೆಯಲಿ ಭೂತ
ಸ್ತೋಮ ತುಷ್ಟಿಯ ಮಾಡಿದುದು ಸನ್ಮಾನ ದಾನದಲಿ
ಆ ಮುನೀಂದ್ರಂಗೆರಗಿದರು ನೃಪ
ರೀ ಮಹಾಸತಿಸಹಿತ ವಿಮಲ
ಪ್ರೇಮದಲಿ ವ್ಯಾಮುಳುಗಿ ತೆಗೆದಪ್ಪಿದನು ಪಾಂಡವರ ೬೬

ಪರಮ ವೈಭವದಲಿ ಚತುರ್ಥಿಯ
ಮರುದಿವಸದೋಕುಳಿಯ ಪುರಜನ
ಪರಿಜನದ ಸಮ್ಮಾನ ಶರಧಿಯ ಸಾರಸಂಪದವ
ವರ ಮುನಿಪನೀಕ್ಷಿಸಿದನನಿಬರ
ಹರಸಿ ನಯನೀತಿಗಳ ಹೇಳಿದು
ಮರಳಿ ಬಿಜಯಂಗೈದು ಹೊಕ್ಕನು ಬದರಿಕಾಶ್ರಮವ ೬೭

## ಹದಿನೇಳನೆಯ ಸಂಧಿ

ಸೂ. ಧಾಳಿಯಲಿ ಬಂದರಿಬಲದ ಹೆ
ಚ್ಚಾಳುತನವನು ಮುರಿದು ಸಂಧಿಯ
ಮೇಲೆ ಧರ್ಮಜ ಬಂದು ಹೊಕ್ಕನು ಹಸ್ತಿನಾಪುರವ

ಕೇಳು ಜನಮೇಜಯ ನೃಪತಿ ಪಾಂ
ಚಾಲಸುತೆಯ ವಿವಾಹವಾರ್ತೆಯ
ಕೇಳಿದರಲೈ ಕೌರವರು ಮರುಗಿದರು ಮರುಕೊಳಿಸಿ
ಆಳ ನೆರಹಿದನಖಿಳ ದಳ ದೆ
ಖ್ಖಾಳವನು ನೋಡಿದರು ಭೂಮಿಾ
ಪಾಲ ಸಂಕುಲ ಸಹಿತ ಬಂದರು ದ್ರುಪದ ಪುರಿಗಾಗಿ ೧

ಏನ ಹೇಳುವೆ ನಿನ್ನವರ ಜಯ
ಮಾನವನು ಮತ್ತೊಂದು ಪೈಕದ
ಮಾನಭಂಗಸ್ಥಿತಿಯನೆಲೆ ಜನಮೇಜಯಕ್ಷಿತಿಪ
ಭಾನುವಿನ ಮಂಜಿನ ಶಿಲೋಚ್ಚಯ
ಸಾನುವಿನ ವಜ್ರದ ತರಕ್ಷುವ
ಧೇನುವಿನ ಹೋರಟೆಯ ಹವಣದು ಭೂಪ ಕೇಳೆಂದ ೨

ಮುರಿದುದಾ ಹೆಬ್ಬಲ ವಿಘಾತಿಯ
ಲೊರಗಿದರು ಪಟುಭಟರು ಗಜ ಹಯ
ದೊರತೆ ಬತ್ತಿತು ಭೀಮ ಪಾರ್ಥರ ಶರ ನಿದಾಘದಲಿ
ಉರುಕುಗೊಂಡರು ನಿಚ್ಚಟರು ಕೈ
ಮರೆದುದಾಚೆಯ ದೊರೆಗಳಿವದಿರು
ನೆರೆ ವಿಭಾಡಿಸೆ ತೆಗೆದು ಹಾಯ್ದರು ಹಸ್ತಿನಾಪುರಕೆ ೩

ಬಳಿಕ ಪಾಂಚಾಲಕನ ಭೀತಿಯ
ಮೊಳಕೆಯುರಿದುದು ಹರಿದುದುತ್ಸವ
ಜಲಧಿ ವಳಯದ ಭೂತಳಾಗ್ರದ ಭೂತಳೇಂದ್ರರಲಿ
ಹೊಳೆಹೊಳೆವ ರವಿ ರಶ್ಮಿಗಳ್ಪ
ಜ್ವಲಿಸುವಂತಿರೆ ಪಾಂಡುನಂದನ
ರಳವಿನುಬ್ಬಟೆ ಬಿಸಿಲು ನೆರೆ ಪಸರಿಸಿತು ದೆಸೆದೆಸೆಗೆ ೪

ಬಂದನಲ್ಲಿಗೆ ಸಕಲ ಯಾದವ
ವೃಂದ ಸಹಿತ ಮುರಾರಿ ಕುಂತೀ
ನಂದನರು ಬರಲಿದಿರುಗಾಣಿಸಿಕೊಂಡನುಚಿತದಲಿ
ತಂದ ಬಹುವಿಧ ವಸ್ತು ಕಾರವ
ನಂದು ಕೊಟ್ಟನು ಗಜ ರಥಾಶ್ವವ
ನಿಂದುವದನೆಯರಿಗೆ ವಿಚಿತ್ರಾಂಬರ ವಿಭೂಷಣವ ೫

ಮಗನೆ ಧರ್ಮಜ ಕೇಳು ಭೀಮಾ
ದಿಗಳೆ ಹರಿಯೆಮ್ಮಣ್ಣ ದೇವನ
ಮಗನು ಸೋದರ ಮಾವನೀತನು ನಿಮಗೆ ವಸುದೇವ
ವಿಗಡರೀ ಯಾದವ ನೃಪರು ಬಂ
ಧುಗಳು ನಿಮಗೆಂದೈವರನು ಕೈ
ನೆಗಹಿ ಕಮಲೋದರನ ಕೈಯಲಿ ಕೊಟ್ಟಳಾ ಕುಂತಿ ೬

ವನದೊಳಪಗತನಾದನಿವರ
ಯ್ಯನು ಕುಮಾರರ ಬಾಲ್ಯಕಾಲದೊ
ಳೆನಗೆ ರಕ್ಷಾಭಾರ ಬಿದ್ದುದು ಪತಿ ಪರೋಕ್ಷದಲಿ
ಇನಿಬರನು ಗಜಪುರಿಗೆ ಕೊಂಡೊ
ಯ್ದೆನು ಸುಯೋಧನನಿಂದ ವೈರವು
ಜನಿತವಾಯಿತು ಬಳಿಕ ಲಾಕ್ಷಾಭವನ ದಹನದಲಿ ೭

ಉರಿಯೊಳುಳಿದೆವು ನಿಮ್ಮ ಚರಣ
ಸ್ಮರಣ ಬಲದಲಿ ಬಹಳ ವಿಪಿನಾಂ
ತರದೊಳಗೆ ತೊಳಲಿದೆವು ಹೊರೆದೆವು ಸಾಯದೊಡಲುಗಳ
ಬರಬರಲು ತತ್ಪೂರ್ವ ದುಃಖೋ
ತ್ತರ ನಿವಾರಣ ದ್ರುಪದಕನ್ಯಾ
ವರಣ ನಿನ್ನೀಯಂಘ್ರಿ ದರುಶನವೆಂದಳಾ ಕುಂತಿ ೮

ದೇವಿ ಚಿತ್ತವಿಸೋಪಚಾರಕ
ಭಾವವೇ ಧರ್ಮಜನು ಭೀಮನು
ಭಾವನವರು ಧನಂಜಯಾದಿಗಳೆಮಗೆ ಮೈದುನರು
ಈವುಪಾಧಿ ಸ್ಥಳದೊಳಂತ
ರ್ಜೀವನ ಪ್ರಾಣಾದಿ ವಾಯುಗ
ಳಾವು ನಿಮ್ಮೈವರಿಗೆ ಕಾರಣವೆಂದನಸುರಾರಿ ೯

ದ್ರುಪದ ಗುಡಿಗಟ್ಟಿದನು ಕುಂತಿಯ
ವಿಪುಳ ಹರುಷವನೇನನೆಂಬೆನು
ದ್ರುಪದ ಯದು ಪರಿವಾರವುಲಿದುದು ಜಲಧಿ ಘೋಷದಲಿ
ಅಪದೆಸೆಯ ಮುಗಿಲೊಡೆದು ಹೊಳೆಹೊಳೆ
ದುಪರಿಚರ ರವಿಯಂತೆ ತತ್‌ಕ್ಷಣ
ವಿಪುಳ ತೇಜಃಪುಂಜರೆಸೆದರು ಪಾಂಡುನಂದನರು ೧೦

ಇದಿರೊಳವನಿಪ ಭೀಮನೆಡವಂ
ಕದಲಿ ಮಾದ್ರೀಸುತರು ಬಲವಂ
ಕದಲಿ ದೇವಕಿ ಕುಂತಿ ವಸುದೇವಾದಿ ಯದು ನಿಕರ
ಮುದದಿಯೈವರ ರಮಣಿ ಬಲವಂ
ಕದಲಿ ಕರುಣಾಳುವಿನ ವಾಮಾಂ
ಕದಲಿ ಫಲುಗುಣನೊಪ್ಪೆ ಮೆರೆದನು ದಾನವಧ್ವಂಸಿ ೧೧

ಆವುದೋ ಧರ್ಮಜನ ಭೀಮನ
ಭಾವಶುದ್ಧಿ ಧನಂಜಯನ ಸುಕೃ
ತಾವಲಂಬನ ಸಾರವೆಂತುಟೊ ಶಿವ ಮಹಾದೇವ
ತಾವುಗಾಣವು ವೇದವುಪನಿಷ
ದಾವಳಿಗಳೋಲೈಸಿ ಕೃಷ್ಣ ಕೃ
ಪಾ ವಿಲಾಸವ ನೋಡಿಯೆಂದುದು ಸಕಲ ಸುರನಿಕರ ೧೨

ಅರಸ ಚಿತ್ತೈಸಂದಿನೋಲಗ
ಹರಿದುದಾ ಹರಿಸೇನೆ ಬಿಟ್ಟುದು
ಪುರದ ಬಹಿರುದ್ಯಾನ ವೀಧಿಗಳೊಳಗೆ ಹರಹಿನಲಿ
ಕುರುನೃಪಾಲನ ಗುಪ್ತಚಾರರು
ಅರಿದರೀ ವಾರ್ತೆಯನು ಪುರದಲಿ
ಹರಹಿದರು ನೆರೆ ಕೇಳಿದನು ಧೃತರಾಷ್ಟ್ರನೀ ಹದನ ೧೩

ಕರೆಸಿದನು ಗಾಂಗೇಯ ಗೌತಮ
ಗುರು ಸುಯೋಧನ ಶಲ್ಯ ಸೈಂಧವ
ಗುರುತನುಜ ರಾಧೇಯ ವಿದುರ ಕಳಿಂಗ ಸೌಬಲರ
ಚರಮುಖ ಪ್ರತಿಪನ್ನ ಬಂಧುರ
ತರ ವಚೋವಿನ್ಯಾಸ ಕರ್ಣ
ಜ್ವರವೊ ಕರ್ಣಾಮೃತವೊ ಕೇಳಿರೆಯೆಂದನಂಧನೃಪ ೧೪

ಕೇಳಿರೈ ಹೇಳುವೆನು ಯಾದವ
ರಾಳು ಬಂದುದು ಗಡ ಜನಾರ್ದನ
ಕೋಳುವೋದನು ಗಡ ಯುಧಿಷ್ಠಿರ ಭೀಮ ಪಾರ್ಥರಿಗೆ
ಗಾಳಿ ಬೆಂಬಲವಾಗಲುರಿಯ ಛ
ಡಾಳವನು ನಿಶ್ಶೈಸಬಹುದೆ ವಿ
ತಾಳಿಸಿತಲೈ ನಿಮ್ಮ ಗಾರುಡವೆಂದನಾ ನೃಪತಿ ೧೫

ಎನಲು ಘರ್ಜಿಸುತರಸ ಮುರರಿಪು
ಜಿನುಗಿದರೆ ಗಿರಿ ಜರಿವುದೇ ಯಮ
ತನಜ ಭೀಮಾರ್ಜುನರು ಹಿಡಿದರೆ ಗಗನವಡಗುವುದೆ
ದನುಜರಿಪುವಿನೊಳೇನಹುದು ಬರ
ಲನಿಮಿಷರು ನೆರವಾಗಿ ರಣದಲಿ
ಜನಪ ನೋಡೆಂದರು ಜಯದ್ರಥ ಸೌಬಲಾದಿಗಳು ೧೬

ಕೊರತೆಯಲ್ಲಿದು ನಿನ್ನೆ ನಾವ್ಕಂ
ಡರಿದೆವಿವರತಿಬಲರು ಕೃಷ್ಣನ
ಬರಿ ಸಹಾಯದಲೇನು ಭೀಮಾರ್ಜುನರ ಬಲುಹೇನು
ನೆರವಣಿಗೆಯುಳ್ಳವರಲೈ ಹೊ
ಕ್ಕಿರಿದ ರಣ ಹಸಿಯಾರಿತೇ ನೀ
ವರಿಯಿರೇ ಭೂಪಾಲಯೆಂದನು ನಗುತ ಗಾಂಗೇಯ ೧೭

ಇವರ ಬಲುಹಂತಿರಲಿ ಸಾಕಿ
ನ್ನವರ ಕರೆಸು ವಿರೋಧ ಬಂಧ
ವ್ಯವಹೃತಿಗೆ ಫಲವಿಲ್ಲ ಮೂಲಚ್ಛೇದ ಕರ್ಮವಿದು
ಅವರು ಮುನ್ನತಿಬಲರು ಕೃಷ್ಣನ
ಹವಣ ನೀನೇ ಬಲ್ಲೆಯಿನ್ನೀ
ಸವಡಿಮಾರಿಯ ಸೋಕು ಲೇಸಲ್ಲೆಂದನಾ ಭೀಷ್ಮ ೧೮

ಕರೆಸು ವಿದುರನ ಕಳುಹಿ ವಾರಣ
ಪುರದ ರಾಜ್ಯ ವಿಭಾಗವನು ವಿ
ಸ್ತರಿಸಿ ಕೊಡು ಭಂಡಾರವನು ದಾಯಾದ ಮಾರ್ಗದಲಿ
ನರ ಯುಧಿಷ್ಠಿರ ಭೀಮರನು ನೀ
ಬರಿಸು ನಿಮ್ಮವಗುಣವ ನೋಡದೆ
ಬೆರಸಿ ಕೊಡುವೆವು ಕೂಡಿ ಬದುಕುವುದೆಂದನಾ ಭೀಷ್ಮ ೧೯

ಕರೆಸಿ ಕೊಡಿರೈ ನಿಮ್ಮ ಚಿತ್ತಕೆ
ಬರಿಸಿ ನಡಸುವೆನೆನ್ನ ಮಕ್ಕಳ
ದುರುಳತನದಿಂದಾದ ಹಿಂದಣ ಮಕ್ಕಳಾಟಿಕೆಯ
ಮರೆದು ಕಳೆಯಲಿ ಪಾಂಡುನಂದನ
ರೆರವಿಗರೆ ಬಾ ವಿದುರ ಭೀಷ್ಮನ
ಪರಮ ಮತವೇ ನನ್ನ ಮತ ಹೋಗೆಂದ ಧೃತರಾಷ್ಟ್ರ ೨೦

ಕಳುಹಿದರು ವಿದುರನನು ಬುದ್ಧಿಯ
ಗಲಿಸಿ ಭೀಷ್ಮಾದಿಗಳು ಪಯಣದ
ಲಲಿತ ಸನ್ನಾಹದೊಳು ಪರುಠವಿಸಿದನು ಪಾವುಡವ
ಬಳಿಕ ಸುಮುಹೂರ್ತದಲಿ ವಿಪ್ರಾ
ವಳಿಗಳಾಶೀರ್ವಾದದಲಿ ಮಂ
ಗಳತೆ ಮಿಗಿಲೊಲವಿಂದ ಹಸ್ತಿನಪುರವ ಹೊರವಂಟ ೨೧

ಕೇಳು ಭೂಪತಿ ಹಲವು ಪಯಣದ
ಮೇಲೆ ಪಯಣದಲೈದಿದನು ಪಾಂ
ಚಾಲಪುರವನು ಬಂದನರಮನೆಗಧಿಕ ಹರ್ಷದಲಿ
ಕೇಳಿದರು ಕೌಂತೇಯರೀತನ
ಲಾಲಿಸಿದರಿದಿರೈದಿ ತನು ಪುಳ
ಕಾಳಿಯಲಿ ಪೈ ಮುಳುಗೆ ತೆಗೆದಪ್ಪಿದರು ತಮತಮಗೆ ೨೨

ಕ್ಷೇಮವನು ಕುಶಲವನು ಬಂಧು
ಸ್ತೋಮದಲಿ ಕೇಳಿದರು ತಮ್ಮ
ಕ್ಷೇಮ ಕುಶಲವ ಹೇಳಿದರು ಪೂರ್ವಾಪರಸ್ಥಿತಿಯ
ಭೂಮಿಪತಿ ಚಿತ್ತೈಸು ಬಳಿಕಿನ
ರಾಮಣೀಯಕ ಯಾದವೇಂದ್ರ ಶಿ
ರೋಮಣಿಯ ಸಂಪ್ರೇಷವನು ಹೇಳಿದನು ವಿದುರಂಗೆ ೨೩

ತಂದ ಪಾವುಡವನಿತುವನು ಯಮ
ನಂದನಂಗೊಪ್ಪಿಸಿದ ದ್ರುಪದ ಮು
ಕುಂದ ಧೃಷ್ಟದ್ಯುಮ್ನ ಕಂದರ್ಪಾನಿರುದ್ಧರಿಗೆ
ತಂದ ವಸ್ತುವನಿತ್ತವನು ಸಾ
ನಂದದಲಿ ನೀಡಿದನು ನಗುತರ
ವಿಂದನಾಭನ ಪದಕೆ ಪೈಯಿಕ್ಕಿದನು ಭಕ್ತಿಯಲಿ ೨೪

ತೆಗೆದು ತಕ್ಕೈಸಿದನು ಭೀಷ್ಮಾ
ದಿಗಳ ಕುಶಲವ ಕೇಳಿದನು ನಸು
ನಗುತ ಪೈದಡವಿದನು ವಿದುರನನಾ ಕೃಪಾಜಲಧಿ
ವಿಗಡನಾ ಧೃತರಾಷ್ಟ್ರನೀ ಬಂ
ಧುಗಳ ನೆನೆವನೆ ಪಾಂಡುಸುತರಿಗೆ
ಸೊಗಸುವನೆ ನೀ ಬಂದೆ ಲೇಸಾಯ್ತೆಂದನಸುರಾರಿ ೨೫

ಕಳುಹಿದನು ಬೀಡಾರಕಾತನ
ಬಳಿಯ ಪರಿವಾರವನು ಮನ್ನಿಸಿ
ಬಳಿಕ ಮರುದಿನ ಮೇಳವಿಸಿದರು ಮಂತ್ರಶಾಲೆಯಲಿ
ತಿಳಿಹಿದನು ಧೃತರಾಷ್ಟ್ರ ಭೀಷ್ಮರ
ಲಲಿತ ಮತವನು ಬಂಧುವರ್ಗ
ಸ್ಖಲಿತವನು ಸೈರಿಸುವುದೆಂದನು ವಿನಯದಲಿ ವಿದುರ ೨೬

ಕರೆಸಿದನು ಧೃತರಾಷ್ಟ್ರನಾತನ
ಚರಣವನು ಕಾಂಬುದು ನದೀಸುತ
ಗುರು ಕೃಪರು ನಿಮಗೊಳ್ಳಿದರು ನೀವಖಿಳ ರಾಜ್ಯದಲಿ
ಸರಿಯಕೊಂಬುದು ಸೇರುವಡೆ ಗಜ
ಪುರದೊಳಿಹುದಲ್ಲದೊಡೆ ನಿಮ್ಮಯ
ಪುರದಲಿರಿ ನೀವಾತ್ಮನಿರ್ಮಿತ ರಾಜಧಾನಿಯಲಿ ೨೭

ಮುರಹರನನಹುದೆನಿಸಿ ಭೂವಿಾ
ಶ್ವರನ ಮೆಚ್ಚಿಸಿ ಭೀಮನನು ಮನ
ಬರಿಸಿ ಪಾರ್ಥನನೊಲಿಸಿ ಮಾದ್ರೀಸುತರನೊಡಬಡಿಸಿ
ಅರಸಿಗಭಿಮತವೆನಿಸಿ ಪಾಂಚಾ
ಲರಿಗೆ ಕಾರ್ಯವಿದೆನಿಸಿ ಕುಂತಿಗೆ
ಪರಮಹರುಷವ ರಚಿಸಿ ನುಡಿದನು ಸಂಧಿಯನು ವಿದುರ ೨೮

ಕದಡು ತಿಳಿದುದು ಕಾರ್ಯಗತಿಗಾ
ಸ್ಪದವ ಕೊಟ್ಟರು ಬಳಿಕ ಸುಮುಹೂ
ರ್ತದಲಿ ಪಯಣವ ಮಾಡಿದರು ಪಾಂಚಾಲ ದಳ ಸಹಿತ
ಯದುಶಿರೋಮಣಿವೆರಸಿ ಬಹು ಪಯ
ಣದಲಿ ಬಂದರು ಮೇಲೆ ಕೌರವ
ರಿದಿರುಗೊಂಡರು ಕೂಡೆ ಹೊಕ್ಕರು ಹಸ್ತಿನಾಪುರವ ೨೯

ಬಂದು ಕಾಣಿಕೆಗೊಟ್ಟು ಗಂಗಾ
ನಂದನ ಧೃತರಾಷ್ಟ್ರನನು ಸಾ
ನಂದದಲಿ ಗಾಂಧಾರಿಯನು ಗುರು ಗೌತಮಾದಿಗಳ
ವಂದಿಸಿದರಿವರೈವರವರಾ
ನಂದಜಲ ಪರಿಲುಳಿತ ನಯನಾ
ಸ್ಪಂದ ಪರಿತೋಷದಲಿ ತೆಗೆದಪ್ಪಿದರು ಪಾಂಡವರ ೩೦

ಕರೆಸಿ ತನ್ನ ಕುಮಾರಕರ ನೂ
ರ್ವರನು ಕಾಣಿಸಿದನು ಪರಸ್ಪರ
ಪರಮ ಸಂಪ್ರೀತಿಗಳ ನಿಬಿಡಾಲಿಂಗನೋತ್ಸವದ
ದರುಶನೋಚಿತ ಮಾನ್ಯಮಾನ
ಸ್ಫುರಣದಲಿ ವಿಸ್ತರಿಸಿ ಸೈಂಧವ
ಗುರುತನುಜ ರಾಧೇಯ ಸೌಬಲರಪ್ಪಿದರು ನೃಪನ ೩೧

ಯಾದವರು ಪಾಂಚಾಲರಲಿ ಸಂ
ಪಾದಿಸಿದುದನ್ಯೋನ್ಯ ಘನ ಸಂ
ವಾದ ಸುಖ ಸಂಪ್ರೀತಿ ಮೆರೆಯಲ್ಕಿಷ್ಟ ಸತ್ಕಾರ
ಆದುದುತ್ಸವ ಜನಜನಿತ ಹರು
ಷೋದಧಿಯ ಹೊನಲಿನಲಿ ಹಿಂದಣ
ಭೇದ ಕರ್ದಮವಡಗಿಹೋಯ್ತುವನೀಶ ಕೇಳೆಂದ ೩೨

ವೀತ ಭಯರನ್ಯೋನ್ಯ ಪರಮ
ಪ್ರೀತಿಗಳ ಬೆಳವಿಗೆಯಲಿದ್ದರು
ಭೂತಳಾಧಿಪರೈದು ಸಂವತ್ಸರಗಳೊಂದಾಗಿ
ಖ್ಯಾತವಿದು ಪಾಂಚಾಲಪುರದೊಳ
ತೀತವಾಯಿತ್ತೊಂದು ವರುಷವ
ಭೀತ ಧರ್ಮಸುತಂಗೆ ಮುವ್ವತ್ತಾರು ಸಮವಾಯ್ತು ೩೩

## ಹದಿನೆಂಟನೆಯ ಸಂಧಿ

ಸೂ. ದಾಯ ಭಾಗದೊಳಖಿಳ ರಾಜ್ಯ
ಶ್ರೀಯ ಹಸುಗೆಯ ಕೊಂಡು ಪಾಂಡವ
ರಾಯರೊಪ್ಪಿದರಿಂದ್ರನಿರ್ಮಿತ ರಾಜಧಾನಿಯಲಿ

ಕೇಳು ಜನಮೇಜಯ ಧರಿತ್ರೀ
ಪಾಲ ನಿಮ್ಮಯ ಪೂರ್ವಜರು ಸಮ
ಪಾಳಿಗಳ ಸೇರುವೆಯೊಳಿದ್ದರು ಸಾನುರಾಗವಲಿ
ಖೇಳಮೇಳದ ಬೇಟೆಗಳ ವೈ
ಹಾಳಿಗಳ ಜೂಜಿನ ಸಮಂಜಸ
ಲೀಲೆಗಳ ಕೇಳಿಯಲಿ ಕಳೆದರು ವರುಷ ಪಂಚಕವ ೧

ಕರೆಸಿದನು ಧೃತರಾಷ್ಟ್ರ ಭೂಪತಿ
ಮುರಹರನ ದ್ರುಪದನ ಯುಧಿಷ್ಠಿರ
ನರ ವೃಕೋದರ ಭೀಷ್ಮ ಗುರು ಕೃಪ ಕರ್ಣ ಶಕುನಿಗಳ
ಎರಡು ಭಾಗವ ಮಾಡಿ ವಿಶ್ವಂ
ಭರೆಯ ರಾಜ್ಯವನುಭಯ ರಾಯರು
ಹೊರೆ ಹೊಗದೆ ಪಾಲಿಸಲಿ ಪಂಥದೊಳೆಂದನಂಧ ನೃಪ ೨

ಅಹುದು ಹೊಲ್ಲೆಹವಲ್ಲ ಖುಲ್ಲರ
ಕುಹಕ ಕೊಳ್ಳದು ಬೇರೆ ರಾಜ್ಯದೊ
ಳಿಹರೆ ಸೇರುವೆ ವೃಷವಹುದು ದಾಯಾದ ಮಾರ್ಗದಲಿ
ಗಹನವೇಕಾಮಿಷ ಸಮುದ್ಭವ
ದಹಿತತನದುತ್ತರಣವತಿ ದು
ಸ್ಸಹವಲೇ ನೀ ನೆನೆದ ಹದ ಲೇಸೆಂದನಾ ಭೀಷ್ಮ ೩

ಅರಸ ಕೇಳ್ಕೆ ಸಕಲ ರಾಜ್ಯವ
ನೆರಡು ಭಾಗವ ಮಾಡಿ ಪೂರ್ವೋ
ತ್ತರದ ದಕ್ಷಿಣ ಪಶ್ಚಿಮಂಗಳ ಹೆಚ್ಚು ಕುಂದುಗಳ
ಪುರನಗರ ಖರ್ವಟ ಮಡಂಬ
ಸ್ಫುರಿತ ಖೇಟಗ್ರಾಮವೆಂಬವ
ನೆರಡು ಭಾಗವ ಮಾಡಿದರು ಕೂಡಿದರು ಸಮವಾಗಿ ೪

ಪುರ ಸುರೇಂದ್ರ ಪ್ರಸ್ಥವರಸಂ
ಗಿರವು ಧರ್ಮಸುತಂಗೆ ಹಸ್ತಿನ
ಪುರ ಸುಯೋಧನಗುಭಯರಾಯರ ರಾಜಧಾನಿಗಳು
ಚರಮ ದಕ್ಷಿಣವಾಗಿ ಪೂರ್ವೋ
ತ್ತರ ವಿಲಂಬಿತವಾಗಿ ಹಿಮ ಸಾ
ಗರದ ಮಧ್ಯದ ಭೂಮಿಯನು ಸೇರಿಸಿದರೆರಡಾಗಿ ೫

ವಾರಣ ಪ್ರತತಿಯನಘಾಟದ
ವಾರುವಂಗಳ ಮಣಿಮಯದ ಹೊಂ
ದೇರುಗಳನಾಭರಣವನು ತೆಗೆಸಿದರು ಸಮವಾಗಿ
ಕೌರವರು ಪಾಂಡವರುಗಳ ಮನ
ದೋರೆ ಪೋರೆಯ ತಿಳುಹಿ ವೈರ ವಿ
ಕಾರವನು ಬಿಡಿಸಿದರು ಭೀಷ್ಮಾದಿಗಳು ಹರುಷದಲಿ ೬

ಬಳಿಕ ಸುಮುಹೂರ್ತದಲಿ ಹೊರ ಗುಡಿ
ಬಳಸಿ ಹೊಯಿದವು ರಾಣಿವಾಸದ
ನಿಳಯನಿಳಯದ ತಳಿಗೆದಂಬುಲ ಮಂಗಳಾರ್ತಿಗಳ
ಫಲಸಮೂಹದ ಕಾಣಿಕೆಯ ಕೈ
ಗೊಳುತ ಗಾಂಧಾರಿಗೆ ಮಹೀಶನ
ಲಲನೆಯರಿಗಭಿನಮಿಸಿ ಕಳುಹಿಸಿಕೊಂಡರುಚಿತದಲಿ ೭

ಕಳುಹಲೈತಂದಂಧ ನೃಪತಿಯ
ನಿಲಿಸಿದರು ನಿಳಯದಲಿ ಕೌರವ
ಕುಲದ ನೂರ್ವರ ಕರ್ಣ ಶಕುನಿ ಜಯದ್ರಥಾದಿಗಳ
ನಿಲಿಸಿದರು ಗಜಪುರದ ಯೋಜನ
ದಳತೆಯಲಿ ಗುರು ಭೀಷ್ಮವಿದುರರ
ಕೆಲವು ಪಯಣವ ಬಂದು ಕಳುಹಿಸಿಕೊಂಡರುಚಿತದಲಿ ೮

ಭೂಮಿ ಲಂಬದ ನೃಪರ ಬಲದು
ದ್ದಾಮ ವಿಭವದೊಳಸುರರಿಪು ಸಹಿ
ತೀ ಮಹೀಪಾಲಕರು ಬಂದರು ಹಲವು ಪಯಣದಲಿ
ರಾಮಣೀಯಕ ರಚನೆಯಲಿ ಸು
ತ್ರಾಮ ನಗರಿಯ ಸೂತ್ರಧಾರೆಯ
ಲಾ ಮನೋಹರ ವಿಶ್ವಕರ್ಮ ವಿನಿರ್ಮಿತವ ಪುರಕೆ ೯

ಧರಣಿಪತಿ ಚಿತ್ತೈಸಿಳಾವೃತ
ವರುಷ ಮಧ್ಯದ ಹೇಮಗಿರಿಯವೊ
ಲರಮನೆಯ ಸಿರಿ ಸೋಲಿಸಿತು ಸುರರಾಜ ವೈಭವವ
ಹರಿಯ ವೀಥಿಯ ಸೋಮವೀಥಿಯ
ಮುರಿವುಗಳ ಕೇರಿಗಳ ನೆಲೆಯು
ಪ್ಪರಿಗೆಗಳ ಹೊಂಗಲಸದಲಿ ಹೊಳೆಹೊಳೆದುದಾ ನಗರ ೧೦

ಹೇಮ ನಿರ್ಮಿತ ದೇವಸದನ
ಸ್ತೋಮದಲಿ ಮಣಿಮಯದ ಫಣಿಪನ
ಹೇಮ ವಿಧಿಯಲಿ ವಿವಿಧ ರತ್ನಾವಳಿಯ ಹಸರದಲಿ
ಕಾಮರಿಪುವಿಂಗೊರೆಯ ಕಟ್ಟುವ
ವಾಮಲೋಚನೆಯರ ವಿಲಾಸದ
ಲಾ ಮಹಾಪುರವೆಸೆದುದಿಂದ್ರಪ್ರಸ್ಥ ನಾಮದಲಿ ೧೧

ವಿತತ ವಿಭವದಲಿಂದ್ರನಮರಾ
ವತಿಯ ಹೊಗುವಂದದಲಿ ದ್ರುಪದಾ
ಚ್ಯುತರು ಸಹಿತವನೀಶ ಹೊಕ್ಕನು ರಾಜಮಂದಿರವ
ಕೃತಯುಗದೊಳಾ ತ್ರೇತೆಯಲಿ ಭೂ
ಪತಿಗಳಾದರನಂತ ಕುಂತೀ
ಸುತರ ಸಿರಿಗೆಣೆಯಾದುದಿಲ್ಲವನೀಶ ಕೇಳೆಂದ ೧೨

ಬಂದು ಕಂಡುದು ಸಕಲ ಪುರಜನ
ವಂದು ಕಾಣಿಕೆಯಿತ್ತು ಸುಭಟರ
ಸಂದಣಿಯು ಗಜ ಹಯ ರಥದ ಪದಧೂತ ಧೂಳಿಯಲಿ
ಮಂದಿರದ ಬಾಗಿಲ ಗತಾಗತ
ವೃಂದದೊತ್ತೊತ್ತೆಯಲಿ ಪುರಜನ
ನಿಂದುದಲ್ಲಿಯದಲ್ಲಿ ಪಡೆಯದೆ ರಾಜದರ್ಶನವ ೧೩

ಅತಿಶಯವನೇನೆಂಬೆನಮರಾ
ವತಿಯ ಭೋಗಾವತಿಯ ಮಧ್ಯ
ಸ್ಥಿತದ ನಾಯಕ ರತುನದಂತಿರೆ ಮೆರೆದುದಾ ನಗರ
ಸತತವೀ ಪರಿ ವಿಭವವೀ ಜನ
ವಿತತಿಗಳ ಸನ್ಮಾರ್ಗದಲಿ ಸಂ
ಗತಿಗಳೀ ವಿಸ್ತಾರವೀ ಪರಿ ಭೂಪ ಕೇಳೆಂದ ೧೪

ದ್ರುಪದ ಧೃಷ್ಟದ್ಯುಮ್ನ ಮೊದಲಾ
ದಪರಿಮಿತ ಬಾಂಧವ ನಿಕಾಯವ
ನುಪಚರಿಸಿ ಕಳುಹಿದನು ಭೂಪತಿ ಪಂಚ ಕೈಕೆಯರ
ವಿಪುಳ ಕಾರುಣ್ಯದಲಿ ಪಾಂಡವ
ನೃಪ ಜನವ ಸಂತೈಸಿ ದಾನವ
ರಿಪು ನಿಜಾವಾಸಕ್ಕೆ ಬಿಜಯಂಗೈಯಲನುವಾದ ೧೫

ಕರೆಸಿ ಕುಂತಿಯ ದ್ರೌಪದಿಯರನು
ಕರಣ ವಚನಾಮೃತದ ರಸದಲಿ
ಹೊರೆದು ಕೃತ ದಾಯಾದ ವಿಷಮ ವಿರೋಧವರ್ತನವ
ಅರುಹಿ ಸುಯ್ಯಾನದ ಸಮಾಹಿತ
ತರದ ಬುದ್ಧಿಯಗಲಿಸಿ ಯಾದವ
ರರಸ ಬಿಜಯಂಗೈದನಾ ದ್ವಾರಕಿಗೆ ಹರುಷದಲಿ ೧೬

ಕಳುಹಿದನು ಪಾಂಚಾಲರನು ಯದು
ತಿಲಕ ಮೊದಲಾದಖಿಳ ಬಾಂಧವ
ಕುಲವನುತ್ಸಾಹದಲಿ ಹೊರೆದನು ನಾಡು ಬೀಡುಗಳ
ಬೆಳುಗವತೆಯನ್ಯಾಯವಾರಡಿ
ಕಳವು ದಳವುಳ ಬಂದಿ ದಾವರ
ಕೊಲೆ ಹುಸಿಗಳಿಲ್ಲಿವರ ರಾಜ್ಯದೊಳರಸ ಕೇಳೆಂದ ೧೭

ಯಾಗವಹ್ನಿಯ ಧೂಮದಲಿ ದಿಗು
ಭಾಗ ವಿವರಣವಡಗಿತು ಹವಿ
ರ್ಭಾಗ ಭೋಜನದಿಂದಲಾದುದಜೀರ್ಣವಮರರಿಗೆ
ಯಾಗ ದಕ್ಷಿಣೆಗಳಲಿ ಬಹಳ
ತ್ಯಾಗ ದಾನಕೆ ಲಟಕಟಿಸಿ ತಾ
ವಾಗಿ ಕೈಯಾನರು ಯುಧಿಷ್ಠಿರನೃಪನ ರಾಜ್ಯದಲಿ ೧೮

ಬಲಿಯ ನಹುಷನ ದುಂದುಮಾರನ
ನಳನ ಸಗರನ ನೃಗನ ಶಾಕುಂ
ತಳನ ಪುರು ಕುತ್ಸನ ಹರಿಶ್ಚಂದ್ರನ ಪುರೂರವನ
ಇಳೆಯ ವಲ್ಲಭರನಿಪ ರಾಜಾ
ವಳಿಯ ಮನಮೆಚ್ಚುಗಳನುರ್ವೀ
ಲಲನೆ ಮರೆದಳು ಮೆರೆದಳಾ ಧರ್ಮಜನ ರಾಜ್ಯದಲಿ ೧೯

ಆದಿ ಯುಗದೊಳು ಧರ್ಮವಿದ್ದುದು
ಪಾದ ನಾಲ್ಕರ ಗಾಢಗತಿಯಲಿ
ಪಾದಪೂಣೆಯವಾದುದಾ ತ್ರೇತಾ ಪ್ರಭಾವದಲಿ
ಪಾದವೆರಡಡಗಿದವು ದ್ವಾಪರ
ದಾದಿಯಲ್ಲಿ ಯುಧಿಷ್ಠಿರನ ರಾ
ಜ್ಯೋದಯದಲಂಕುರಿಸಿ ಸುಳಿದುದು ನಾಲ್ಕು ಪಾದದಲಿ ೨೦

ಅರಸ ಚಿತ್ತೈಸಾ ಯುಧಿಷ್ಠಿರ
ನರಪತಿಯ ರಾಜ್ಯಪ್ರಭಾವೋ
ತ್ಕರುಷ ವಿಸ್ತರವೇನನೆಂಬೆನು ಸಾಕದಂತಿರಲಿ
ಪರಮ ವಿಭವದೊಳೊಂದು ದಿನವೈ
ವರು ನಿಜಾಸ್ಥಾನದಲಿ ಹರಿ ವಿ
ಷ್ಟರದೊಳಿರ್ದರು ಕಂಡರತಿ ದೂರದಲಿ ನಾರದನ ೨೧

ಬಂದನಿವರೋಲಗಕೆ ಗಗನದಿ
ನಿಂದು ಮಂಡಲವಿಳಿವವೊಲ್ ನೃಪ
ವೃಂದವೆದ್ದಭಿನಮಿಸಿದುದು ಪದಯುಗಕೆ ಮುನಿಪತಿಯ
ಇಂದು ಧನ್ಯರು ನಾವಲಾ ಮುನಿ
ವಂದ್ಯ ದರ್ಶನವಾಯ್ತಪೂರ್ವವಿ
ದೆಂದು ಕುಂತೀ ತನುಜರಿದಿರೆದ್ದಂಘ್ರಿಗೆರಗಿದರು ೨೨

ಹರಸಿದನು ಮುನಿಯರ್ಘ್ಯಪಾದ್ಯೋ
ತ್ಕರವ ಮಧುಪರ್ಕಾಸನಾದಿಯ
ನರಸ ಮಾಡಿದನಮರಮುನಿ ಕೈಕೊಂಡು ಹರುಷದಲಿ
ಪರಿಮಿತದ ಸಮಯದ ವಚೋ ವಿ
ಸ್ತರಣವುಂಟೆನೆ ರಾಯನೋಲಗ
ಹರಿದುದವನೀಪಾಲ ಬಿನ್ನಹ ಮಾಡಿದನು ಮುನಿಗೆ ೨೩

ಏನು ಬಿಜಯಂಗೈದ ಹದನೆನ
ಗೇನನುಗ್ರಹ ವಚನ ನಿಮ್ಮಡಿ
ಗೇನನಾ ಬೆಸಗೈವುದೆನಗಾಜ್ಞಾಪಿಸುವುದೆನಲು
ನೀನಘಾಟದ ರಾಜಋಷಿ ನೀ
ಮಾನವನೆ ಧರ್ಮಸ್ವರೂಪನು
ನೀನು ಭವದಾಲೋಕನಾರ್ಥವು ನಮ್ಮ ಬರವೆಂದ ೨೪

ಅನುಜರನು ಹೇಳುವರೆ ಭೀಮಾ
ರ್ಜುನರು ಪಥುವಾರೆಂಬರಮರಾಂ
ಗನೆಯರಿಗೆ ನೂರೆಂಟು ಮಡಿಯಿ ದ್ರೌಪದಾದೇವಿ
ಘನ ಸಹಾಯನು ಹವಣೆನವನಂ
ಬೆನೆ ಚತುರ್ದಶ ಭುವನಪತಿ ನೃಪ
ನಿನಗೆ ಪಾಡೇ ಪನ್ನಗೇಂದ್ರ ಸುರೇಂದ್ರರಿಂದಿನಲಿ ೨೫

ಆದಡೊಂದಿಹುದೈವರಿಗೆ ವಧು
ವಾದಳೀ ದ್ರೌಪದಿ ಮಹೇಶ್ವರ
ನಾದಿಯಲಿ ಕರುಣಿಸಿದ ವರದಲಿ ಪುಣ್ಯ ಕಥನವಿದು
ಮೇದಿನಿಯೊಳೇಕಾಮಿಷ ಸ್ಥಿತಿ
ಯಾದಿಯಿದು ವಿಗ್ರಹಕೆ ತಮ್ಮೊಳು
ಕಾದಿದರು ಸುಂದೋಪಸುಂದರು ಭೂಪ ಕೇಳೆಂದ ೨೬

ಅರಸುಗಳು ತಾವಿಬ್ಬರೇಕೋ
ದರರು ಬಲುಗೈಗಳು ಸುರಾಸುರ
ನರರೊಳಡುಪಾಯಿಯಲಿ ವೆಂಠಣಿಸಿದರು ಭೂತಳವ
ನೆರೆದು ಸುರರು ಸರೋಜ ಪೀಠಂ
ಗರುಹಿದರು ಬಳಿಕಾತನಿವರನು
ಪರಿಹರಿಸುವುದಕೇನುಪಾಯವೆನುತ್ತ ಚಿಂತಿಸಿದ ೨೭

ಬಳಿಕಸಂಖ್ಯಾತದ ಸುರೋರಗ
ಲಲನೆಯರಲಿ ತಿಲಾಂಶ ಮಾತ್ರದ
ಚೆಲುವಿಕೆಯನೇ ತೆಗೆದು ನಿರ್ಮಿಸಿದನು ವರಾಂಗನೆಯು
ಬೆಳಗಿತಾಕೆಯು ಹೆಸರು ದಿವಿಜಾ
ವಳಿಯೊಳೈದೆ ತಿಲೋತ್ತಮಾಹ್ವಯ
ದಳಿಕುಲಾಳಕಿಗಬುಜಭವ ನೇಮಿಸಿದನೀ ಹದನ ೨೮

ಅವರ ಕೆಡಿಸುವ ಹದನ ಕೈಕೊಂ
ಡದವನಿಗೈತಂದಳು ವಿನೋದದೊ
ಳಿವದಿರಿದ್ದರು ಬನದೊಳಗೆ ಮದಿರಾ ಮದೋದ್ಧತರು
ಯುವತಿಯನು ಕಂಡರು ಕಟಾಕ್ಷದ
ಸವಡಿಗೋಲಿಂದೊಡೆದುದೆದೆ ಹರಿ
ದವರು ಹಿಡಿದರು ವಾಮ ದಕ್ಷಿಣ ಕರಂಗಳಂಗನೆಯು ೨೯

ಎನಗೆ ವಧು ತಾ ಮುನ್ನ ಕಂಡೆನು
ತನಗೆ ಸತಿ ತಾ ಮುನ್ನ ಹಿಡಿದೆನು
ತನಗೆನಗೆ ನೀ ನಿಲ್ಲು ನೀ ನಿಲ್ಲೆನುತ ಹೊಯ್ದಾಡಿ
ಜನಪರಿಬ್ಬರು ಮಡಿಯಲಮರಾಂ
ಗನೆ ಮುಗುಳ್ನಗೆ ನಗುತಲಬುಜಾ
ಸನನ ಹೊರಗೈದಿದಳು ಕುಂತೀತನುಜ ಕೇಳೆಂದ ೩೦

ಅವರಿನೀ ಜೀವರಿಗೆ ದುಸ್ಥಿತಿ
ಸುದತಿಯರ ದೆಸೆಯಿಂದ ರಾಜ್ಯದ
ಹುದುವಿನಲಿ ಮೋಣಾರ್ಥಗತಿಯಲನರ್ಥ ತಪ್ಪದಲೆ
ಸುದತಿ ನಿಮ್ಮೈವರಿಗೆಯಿಹಾ ದ್ರೌ
ಪದಿ ಮಹಾಸತಿ ರಾಗ ಲೋಭದ
ಕದನದಲಿ ಕಾಳಾಗದಿದ್ದರೆ ತುದಿಗೆ ಲೇಸೆಂದ ೩೧

ಅರಸ ಚಿತ್ತೈಸೊಂದು ವತ್ಸರ
ವಿರಲಿ ನಿಮ್ಮೊಬ್ಬರಲಿ ಸತಿ ಮರು
ವರುಷಕೊಬ್ಬನೊಳಿಂತು ಪಂಚಕಕೈದು ವರುಷದಲಿ
ಅರಸಿಯನು ಪತಿಸಹಿತ ಮಂಚದೊ
ಳಿರಲು ಕಾಬುದು ಸಲ್ಲದದು ಗೋ
ಚರಿಸಿದಡೆ ಬಳಿಕದಕೆ ಪ್ರಾಯಶ್ಚಿತ್ತ ವಿಧಿಯುಂಟು ೩೨

ಆರು ಕಂಡರು ಆತನೊಬ್ಬನೆ
ಧಾರುಣಿಯಲಿ ಸುತೀರ್ಥ ಯಾತ್ರಾ
ಭಾರದಲಿ ತಿರುಗುವುದು ಸುತ್ತಲು ವರುಷವೊಂದರಲಿ
ಚಾರು ನಿಷ್ಕೃತಿಯೆನಲು ಮುದದಲಿ
ನಾರದರ ದಿವ್ಯೋಪದೇಶಕೆ
ಸಾರಹೃದಯ ಹಸಾದವೆಂದನು ತಮ್ಮದಿರು ಸಹಿತ ೩೩

ಮಂಗಳವು ನಿಮಗೆಂದು ಹಂಸೆಯ
ಜೆಂಗೆ ಹಾಯ್ದನು ಬಳಿಕ ನಭದೊಳ
ಭಂಗ ಮುನಿಯಡಗಿದನು ತಮ್ಮೊಳಗೆಂದರೀ ನೃಪರು
ಅಂಗನಾ ವಿಷಯದಲಿ ಸೀಮಾ
ಸಂಗತಿಯು ಸೇರಿಸಿದನೈ ಮುನಿ
ಪುಂಗವನ ಕರುಣದಲಿ ಗದುಗಿನ ವೀರ ನಾರಯಣ ೩೪

## ಹತ್ತೊಂಬತ್ತನೆಯ ಸಂಧಿ

ಸೂ. ಆ ಸುರಾರಿ ವಿರೋಧಿ ಪುರದಲಿ
ವಾಸವಾತ್ಮಜ ಮದುವೆಯಾಗಿ ವಿ
ಲಾಸದಲಿ ಹೊಕ್ಕನು ಸುಭದ್ರಾ ಸಹಿತ ನಿಜಪುರವ

ಕೇಳು ಜನಮೇಜಯ ಧರಿತ್ರೀ
ಪಾಲ ನಾರದಮುನಿ ನರೇಂದ್ರನ
ಬೀಳುಕೊಂಡನು ಚಪಲಗತಿಯಲಿ ಚಿಗಿದನಂಬರಕೆ
ಮೇಲೆ ಭಳಿಕೊಂದವಗಡವನೇ
ಪೇಳುವೆನು ಪಾರ್ಥಂಗೆ ಬಂದುದ
ಕಾಲಗತಿಯೈಸಲೆ ವಿದೇಶ ಭ್ರಮಣವಾಯ್ತೆಂದ ೧

ನರನ ವಳಿತದೊಳೊಂದು ಸಮಯದೊ
ಳಿರುಳು ತಸ್ಕರ ಬಾಧೆಯಲಿ ಭೂ
ಸುರರು ಬಾಯ್ಬಿಡುತೈದೆಯಿಂದ್ರಪ್ರಸ್ಥ ಪುರವರವ
ಮೊರೆಯಬಾಯ್ಗಳ ಹುಲ್ಲು ಕೈಗಳ
ಹರಿದ ಮೈಗಳ ಸೆಕೆಯ ಸುಯ್ಗಳ
ತರದ ಬೈಗಳ ಕಳವಳವ ಕೇಳಿದನು ಕಲಿಪಾರ್ಥ ೨

ಕರೆಸಿ ವಿಪ್ರರ ಬಾಧೆಗಳನಾ
ದರಿಸಿ ಕೇಳಿದು ಸಂತವಿಸಿ ಪರಿ
ಹರಿಸಿ ಕೊಡುವೆನು ದುಷ್ಟಪಾಟಚ್ಚರಪರಿಪ್ಲವವ
ಮರಳಿ ನೀವೆಂದವರ ಬೀಳ್ಕೊಂ
ಡರಿ ನಿವಾರಣ ಬಂದನಗ್ಗದ
ಶರಧನುವ ಕೊಳಲೆಂದು ರಾಯನ ಸೆಜ್ಜೆಯರಮನೆಗೆ ೩

ಸಮಯವೇನೆನೆ ಜೀಯ ರಾಯನು
ರಮಣಿಯೊಡನೇಕಾಂತವೆನಲ
ಸ್ತಮಿತ ಹರುಷನು ನಿಂದು ನೆನೆದನು ತನ್ನ ಮನದೊಳಗೆ
ಅಮರಮುನಿ ಮತವೊಂದು ಮಂಚದ
ರಮಣಿ ರಮಣರ ದರುಶನವಿದ
ಕ್ರಮವೆನಿಪುದೀ ವಚನ ಸಂಘಟಿಸಿತ್ತು ತನಗೆಂದ ೪

ಈಗಲೀ ವಿಪ್ರರಲಿ ಋಳರಭಿ
ಯೋಗವಾರ್ತಾಶ್ರವಣ ಬಹು ದುರಿ
ತಾಗಮುವು ತನಗಾವುದೋ ಕರ್ತವ್ಯವೆಂದೆನುತ
ಈಗಲೀ ಸಂದಿಗ್ಧ ಸಮಯ
ತ್ಯಾಗ ಧರ್ಮ ವಿರೋಧ ಕೃತ್ಯವಿ
ಭಾಗವಾವುದೊ ಶಾಸ್ತ್ರದೃಷ್ಟಿಯೊಳೆಂದು ಚಿಂತಿಸಿದ ೫

ಎರಡು ಪಾತಕವಿವೆ ಬಲಾಬಲ
ವೆರಡರೊಳು ಸಾಮಾನ್ಯ ಪಕ್ಷಾಂ
ತರ ವಿಶೇಷವದಾವುದದರೊಳಗೆಂದು ಚಿತ್ತದಲಿ
ಒರೆದೊರೆದು ನೋಡಿದನು ತೂಕವ
ಬರೆಸಿ ಕಾಹಿನ ಕಂದುಕುಂದನು
ಪರಿಕಿಸುತ ನಿಶ್ವಸಿ ತಿಳಿದನು ತನ್ನ ಮನದೊಳಗೆ ೬

ಅರಸನರಸಿಯರೊಂದು ಮಂಚದೊ
ಳಿರಲು ಕಂಡರೆ ಭೂಪ್ರದಕ್ಷಿಣ
ವರುಷವೊಂದರೊಳಿದಕೆ ಪ್ರಾಯಶ್ಚಿತ್ತ ವಿಧಿಯುಂಟು
ಧರಣಿಯುಮರರುಪಪ್ಲವವ ಪರಿ
ಹರಿಸದಿರಲಾ ಪಾತಕಕೆ ಸಂ
ಹರಣವುಂಟೇ ಶಾಸ್ತ್ರದೃಷ್ಟಿಯೊಳೆಂದು ಚಿಂತಿಸಿದ ೭

ಎನುತ ನರನೊಳಹೊಕ್ಕು ತನ್ನಯ
ಧನು ಶರಂಗಳ ಕೊಂಡು ನುಡಿದನು
ಮುನಿವಚನ ಸಂಘಟಿತ ನೃಪದಂಪತಿ ವಿಲೋಕನದ
ಘನ ದುರಿತ ನಿಷ್ಕೃತಿಗೆ ವರುಷದೊ
ಳೆನಗೆ ದೇಶಭ್ರಮಣವಾಯ್ತೆಲೆ
ಜನಪ ಚಿಂತಿಸಬೇಡೆನುತ ಹೊರವಂಟನಾ ಪಾರ್ಥ ೮

ಇರಿದು ಕಳ್ಳರವಳ್ಳಿಗಳ ಕುರಿ
ದರಿದು ಭೂಸುರರೂರುಗಳ ಸೆರೆ
ತುರುಗಳನು ತಂದಿತ್ತನರ್ಜುನನಾ ಮಹೀಸುರರ
ತುರುಗಿದಾಶೀರ್ವಾದ ಮಳೆಗಳು
ಕರೆಯೆ ಹೆಚ್ಚಿದ ವೀರಕೀರ್ತಿಯ
ತೊರೆಗಳೊಳು ತೇಕಾಡುತಿರ್ದುದು ಸಕಲ ಜನನಿಕರ ೯

ಧಾರುಣೀಪತಿ ಕೇಳು ಗಂಗಾ
ತೀರಕೈದಿದನರ್ಜುನನು ಭಾ
ಗೀರಥೀ ಸ್ನಾನಾವಗಾಹ ವಿಶುದ್ಧ ವಿಗ್ರಹನ
ದೂರದಲಿ ಕಂಡುರಗ ರಾಜಕು
ಮಾರಿ ವರಿಸಿದಳೊಲವಿನಲಿ ಜಂ
ಭಾರಿತನಯನನಿಳುಹಿದಳು ಪಾತಾಳ ಮಂದಿರಕೆ ೧೦

ವಿಭವದಲಿ ವಾಸುಕಿಯ ತಂಗಿಯ
ನುಭಯ ವಂಶ ವಿಶುದ್ಧೆಯನು ಹರಿ
ನಿಭನು ಪಾಣಿಗ್ರಹಣವನು ಮಾಡಿದನು ವೊಲವಿನಲಿ
ಅಭಿಮತ ಕ್ರೀಡಾವಿನೋದದ
ರಭಸದಲಿ ದಿನ ಸವೆಯೆ ಗರ್ಭ
ಪ್ರಭವವಾಯ್ತು ಕುಮಾರ ಜನಿಸಿದನುರಗ ನಾರಿಯಲಿ ೧೧

ಸುತನಿರಾವಾನೆನಿಸಿ ತೊಳಗಿದ
ನತಿ ಬಹಳ ಬಲನಾತನನು ನಿಜ
ಸತಿಯುನಲ್ಲಿಯೆ ನಿಲಿಸಿ ಕಳುಹಿಸಿಕೊಂಡನುಚಿತದಲಿ
ಕ್ಷಿತಿಗೆ ಬಂದನು ಜಾಹ್ನವೀ ಸಂ
ಗತ ಸಮುದ್ರದ ತೀರದಲಿ ಸೇ
ವಿತ ಸಕಲ ತೀರ್ಥೌಘನೈದಿದನಿಂದ್ರ ದಿಜ್ಮುಖವ ೧೨

ಅರಸ ಕೇಳುತ್ತರದ ಪೂರ್ವದ
ಪರಮ ತೀರ್ಥವ್ರಾತವನು ವಿ
ಸ್ತರಿಸಿ ಸಾಗರ ತೀರದಲಿ ದಕ್ಷಿಣ ದಿಶಾವರಕೆ
ತಿರುಗಿದನು ತತ್ಪಂಚ ಗೋದಾ
ವರಿಯ ತೀರಕೆ ತುಂಗಭದ್ರಾ
ವರ ನದಿಯನುತ್ತರಿಸಿ ಕಾಂಚೀನಗರಕೈತಂದ ೧೩

ಆ ನಗರದಧಿದೈವ ನಿಕರಕೆ
ತಾ ನಮಿಸಿ ತತ್ಸಕಲ ತೀರ್ಥ
ಸ್ನಾನ ಕರ್ಮವ ರಚಿಸಿ ಬಂದನು ಜಲಧಿ ತೀರದಲಿ
ವಾನರರ ಭುಜಬಲಸಮಾಖ್ಯಾ
ನೂನಶಾಸನವನು ಸುರಾರಿ ವಿ
ತಾನ ರವಿ ರಾಹುವನು ಕಂಡನು ಸೇತು ಬಂಧನವ ೧೪

ವರ ಧನುಷ್ಕೋಟಿಯಲಿ ಮಿಂದೀ
ಶ್ವರಪದಾಂಬುಜಕೆರಗಿ ತತ್ಪರಿ
ಸರದ ಪಂಚ ತಟಾಕದಲಿ ಘನ ಮಕರರೂಪದಲಿ
ಸುರವಧುಗಳಿರಲವರ ಶಾಪವ
ಪರಿಹರಿಸಿ ತತ್ತೀರ್ಥಸೇವಾ
ಪರಮ ಪಾವನ ಕರಣನಾದನು ಭೂಪ ಕೇಳೆಂದ ೧೫

ಈತನನು ಕಂಡರಿದು ಪಾಂಡ್ಯಮ
ಹೀತಳಾಧಿಪ ನಿಜ ಕುಮಾರಿಯ
ನೀತಗಿತ್ತನು ಬಭ್ರುವಾಹನನಾದನಾಕೆಯಲಿ
ಈತ ಕಳುಹಿಸಿಕೊಂಡು ದ್ವೈತ್ಯಾ
ರಾತಿಗೆರಗಿಯನಂತಶಯನ
ಖ್ಯಾತಿ ವಿಭವವನೀಕ್ಷಿಸುತ ಹರುಷದಲಿ ನಡೆತಂದ ೧೬

ನದಿ ನದವನುತ್ತರಿಸಿ ಹರಿ ಹರ
ಪದಯುಗಳಕಭಿನಮಿಸಿ ತದ್ದೇ
ಶದ ಸುತೀರ್ಥಕ್ಷೇತ್ರವೆನಿತುಳ್ಳನಿತನಾದರಿಸಿ
ಮುದದ ಮುರವಿನ ಹಂಸೆಗಳ ತನಿ
ಮುದದ ಚಾತಕವಕ್ಕಿಗಳ ಮೇ
ಘದ ಸಘಾಡದ ಮೇಳವವ ನೋಡುತ್ತ ನಡೆತಂದ ೧೭

ಒಡ್ಡು ಮೆರೆದುದು ಮೇಘಘಟೆ ಬಿಸಿ
ಲೊಡ್ಡು ಮುರಿದುದು ಚಂದ್ರಸೂರ್ಯರ
ನಡ್ಡವಿಸಿ ಹಿಡಿಯಾಳ ಹಿಡಿದವು ಮುಗಿಲ ಚೂಣಿಗಳು
ಖಡ್ಡಿ ತಡೆವುದೆ ಕಡಲನುಡುಗಣ
ದೊಡ್ಡ ಕಾಣೆನು ಮುಗಿಲ ಬೆನಕಗೆ
ಲಡ್ಡುಗೆಗಳಾದವು ಸಮಸ್ತ ಗ್ರಹ ಸುತಾರೆಗಳು ೧೮

ಆಳ ಕರೆ ಕಟಕವನು ಸೂರ್ಯನ
ಮೇಲೆ ಬರಹೇಳೆಂಬ ಮೇಘ ನ್ರ
ಪಾಲಕನ ಡಂಗುರವೊ ಮೊಳಗುವ ಸಿಡಿಲಿನಬ್ಬರವೊ
ಆಲಿಕಲ್ಗಳೊ ಮುಗಿಲ ಮುಂಗಿಡಿ
ಯಾಳ ಹೊಯ್ಲಲಿ ಬೀಳ್ವ ತಾರಾ
ಮಾಲೆಗಳೊ ಜೀಮೂತ ಲತೆ ಲಂಬಿಸಿದುದಂಬರವ ೧೯

ಮಿಂಚಿದವು ದೆಸೆಗಳಲಿ ಗಮನಕೆ
ಮುಂಚಿದವು ಹಂಸೆಗಳು ನಭದಲಿ
ಹೊಂಚಿದುದು ಜೀವನಕೆ ಜೀವನ ವಿರಹಿ ನಿಕುರುಂಬ
ಪಂಚಪತಿಯರೊ ಮೇಣಿವರು ಪತಿ
ವಂಚಕಿಯರೋ ಗ್ರೀಷ್ಮಕಾಲದ
ಪಂಚತೆಯೊಳಾಲಿಂಗಿಸಿತು ದಿಗ್ವಧುಗಳಂಬುದವ ೨೦

ಜನಪ ಕೇಳ್ಳೆ ಕಾರ್ಮುಗಿಲ ಮುಂ
ಬನಿಗಳೊಳು ವಹಿಲದಲಿ ಕೇರಳ
ಜನಪದದ ತೌಳವದ ಕೊಂಕಣ ವಿಷಮವೀಥಿಯಲಿ
ಜಿನುಗಿನಲಿ ಬಹು ಮಳೆಗಳಲಿ ನೆನೆ
ನೆನೆದು ಸಾಗರತೀರದಲಿ ಬಂ
ದನು ಕಿರೀಟಿ ವಿಚಾರಿಸುತ ಮುರಹರನ ಪಟ್ಟಣವ ೨೧

ಪುರವ ಹೊರವಂಟೆಂಟು ತಿಂಗಳು
ಪರಿಹರಿಸಿತೀ ಕೃಷ್ಣರಾಯನ
ಪುರದೊಳಗೆ ನೂಕುವೆನು ವರ್ಷಾಕಾಲ ವಿಭ್ರಮವ
ವರುಷವೊಂದು ಸಮಾಪ್ತಿ ಬಳಿಕಿನೊ
ಳರಸನಂಘ್ರಿ ವಿಲೋಕನಾ ವಿ
ಸ್ತರಣವಹುದೆಂದಾತ ನಿಶ್ಚೈಸಿದನು ಮನದೊಳಗೆ ೨೨

ಅರಸ ಕೇಳ್ ಸಂನ್ಯಾಸಿ ವೇಷದ
ಪರಿಕರವನಳವಡಿಸಿ ಶೌರಿಯ
ಪುರದ ಹೊರ ಬಾಹೆಯಲಿ ಹೆಚ್ಚಿದ ಬನದ ಮಧ್ಯದಲಿ
ಇರುಳು ಕಗ್ಗತ್ತಲೆಯೊಳೌಕುವ
ಸರಿವಳೆಗೆ ಸಲೆ ಸೇಡುಗೊಳುತು
ಬ್ಬರಿಸಿ ಕೃಷ್ಣನ ನೆನೆವುತಿದ್ದನು ಮರನ ಪೊಳ್ಳಿನಲಿ ೨೩

ದೇವನತ್ತ ಸತ್ಯಭಾಮಾ
ದೇವಿಯರ ಮೇಳದಲಿಯಿರುತಿ
ರ್ದೀ ವಿಲಾಸವ ನೆನೆದು ನಕ್ಕನು ಶಕ್ರನಂದನನ
ಆವಲೋ ನೆನಹಿನಲಿ ಸುಳಿದಳು
ಭಾವದಲಿ ಸುಮ್ಮಾನವೇನೆನೆ
ದೇವಿ ಬೇರೊಂದಿಲ್ಲ ಮನ ನಿನ್ನಾಣೆ ಕೇಳೆಂದ ೨೪

ನರನ ನೀ ಕೇಳ್ದರಿಯಲಾ ಸೋ
ದರದ ಮೈದುನನೆನಗೆ ಕುಂತಿಯ
ವರ ಕುಮಾರಕನಾತನೀ ದ್ವಾರಾವತಿಯ ಹೊರಗೆ
ಮರದ ಹೊಳ್ಳೊಳು ಹೊಕ್ಕು ಸಿಕ್ಕಿದ
ನರಿಯವೊಲೈದಾನೆ ನಾನುಪ
ಚರಿಸಿ ಬಹೆನೆಂದೆನುತ ಮಂಚವನಿಳಿದನಸುರಾರಿ ೨೫

ಅರಸಿ ಕೇಳೀ ಬಂದ ಪಾರ್ಥನ
ಕರೆದುಪಾಯಶಾಂತರದೊಳೀವೆನು
ಸರಸಿಜಾನನೆಯನು ಸುಭದ್ರೆಯನಿಂದು ತಪ್ಪಿದರೆ
ಕರೆಸಿ ದುರ್ಯೋಧನಗೆ ಕೊಡಿಸುವ
ಭರವು ಬಲಭದ್ರನದು ಪಾರ್ಥನ
ಬರವು ಲೇಸಾಯ್ತೆನುತ ಹೊರವಂಟನು ನಿಜಾಲಯವ ೨೬

ಬಂದನಲ್ಲಿಗೆ ಫಲುಗುಣನ ಕಂ
ಡೆಂದನೀ ಶೈಲದ ಸಮೀಪದೊ
ಳಿಂದು ನಿಲು ಬಲಭದ್ರನೈತಹನುಚಿತ ವಚನದಲಿ
ಮಂದಿರಕೆ ಬರ ಹೇಳಿದರೆ ಬಾ
ಮುಂದೆ ನಿನ್ನಿಷ್ಟಾರ್ಥ ಸಿದ್ಧಿಪು
ದೆಂದು ಪಾರ್ಥನ ಸಂತವಿಸಿ ಮರಳಿದನು ಮುರವೈರಿ ೨೭

ಪರಮಹಂಸನ ಸುಳಿವು ಸಾಕ್ಷಾ
ತ್ಸರಸಿಜಾಕ್ಷನ ಲೀಲೆ ಗಡ ನ
ಮ್ಮರಸನಭ್ಯುದಯ ಪ್ರಪಂಚವಿದೆಂದು ನಗರದಲಿ
ಹರಹಿದನು ಹರಿ ಪಾರ್ಥಯನು ತಾ
ನರಿಯದಂತಿರೆ ಬಳಿಕ ನೀಲಾಂ
ಬರನು ಬಹಳೋತ್ಸವದೊಳೈದಿದನಾತನಿದ್ದೆಡೆಗೆ ೨೮

ವಂದಿಸಿದನಾ ಮುನಿಪತಿಯನಭಿ
ವಂದಿತಾಶೀರ್ವಾದ ಸಂಗತಿ
ಯಿಂದ ವಿವರಿಸಿದನು ಚತುರ್ದಶವಿದ್ಯೆಗಳ ಗಣಿಯು
ನಿಂದು ಮೂಗಿನ ಬೆರಳಿನಲಿ ಸಾ
ನಂದ ಮಿಗೆ ಬೆರಗಾಗಿ ನಮ್ಮಯ
ಮಂದಿರಕೆ ನೀವ್ ಬಿಜಯ ಮಾಡುವುದೆನುತ ಕೈಮುಗಿದ ೨೯

ನಾವು ಭಿಕ್ಷುಕರೆಮಗೆ ರಾಜ ಗೃ
ಹಾವಲಂಬನವೇಕೆ ಶೈಲ ವ
ನಾವಳಿಗಳಲಿ ವರ ನದೀತೀರದಲಿ ವಾಸಿಪೆವು
ಭಾವಿತ ಪ್ರಾರಬ್ಧಕರ್ಮ ಫ
ಲಾವಳಿಯನುಪಭೋಗಿಸುತ ದೇ
ಹಾವಸಾನವನೀಕ್ಷಿಸುತ್ತಿಹೆವೆಂದನಾ ಪಾರ್ಥ ೩೦

ಅಹುದು ನೀವೇಕಾಂತಭವನದೊ
ಳಿಹುದು ಚಾತುರ್ಮಾಸವಿದು ಸಂ
ನಿಹಿತವಾಯ್ತಾದ ನೂಕಿ ಬಿಜಯಂಗೈವುದಿಚ್ಛೆಯಲಿ
ವಿಹಿತ ಚರಿತರು ನೀವಲಾ ನಿ
ರ್ವಹಿಸುವೆನು ಶುಶ್ರೂಷೆಯನು ಕಿಂ
ಗಹನ ಮಾಡದಿರೆಂದು ತಂದನು ಯತಿಯನರಮನೆಗೆ ೩೧

ಇವರನರಮನೆಯೊಳಗೆ ಕನ್ಯಾ
ಭವನ ಮಧ್ಯದೊಳಿರಿಸಿ ಬಳಿಕಿನೊ
ಳಿವರ ಶುಶ್ರೂಷೆಗೆ ಸುಭದ್ರಾದೇವಿಯನು ಕರೆಸಿ
ಇವರ ಪೂರ್ವ ಮಹಾತ್ಮಕರು ನೀ
ನಿವರ ದೇವಾರ್ಚನೆ ಸಮಾಧಿ
ಪ್ರವರದಲಿ ಬೆಸಸಿದನು ಮಾಡುವುದೆಂದು ನೇಮಿಸಿದ ೩೨

ಹೊರಗೆ ಕೃಷ್ಣನ ಕರೆದಿವೆಲ್ಲವ
ನರುಹಿದಡೆ ಮರುಳಾಡಿದನು ಮೈ
ಮರೆದು ತಂಗಿಯನೊಯ್ದು ಬಿಸುಟಿರೆ ಬಣಗು ತಿರುಕನಲಿ
ಅರಸು ಮಗಳನು ತೊತ್ತುಗೆಲಸಕೆ
ಪರುಠವಿಸಿದಿರೆ ಶಿವಶಿವಾ ನಾ
ವರಿಯೆವಲ್ಲಿಯ ಲೇಸು ಹೊಲ್ಲೆಹವೆಮ್ಮದಲ್ಲೆಂದ ೩೩

ಮರುಳೆ ನೀ ಹೋಗಾರನೇನೆಂ
ದರಿಯೆ ಯತಿ ಸರ್ವಜ್ಞನೀತನು
ತಿರುಕನೇ ಸಾಕ್ಷಾತು ಲಕ್ಷ್ಮೀಕಾಂತ ಸನ್ನಿಭನು
ಬರಲಿ ಮಾಣಲಿ ಹಾನಿ ವೃದ್ಧಿಯ
ಹರಿಬವೆನ್ನದು ಯತಿ ಮಹಾತ್ಮರ
ನರಿಯದವರೇ ನಾವೆನುತ ಗಜರಿದನು ಬಲರಾಮ ೩೪

ಆದರೊಳ್ಳಿತು ತಂಗಿ ಬೆಸಗೈ
ದಾದರಿಸಲೀ ಯತಿಪತಿಯ ನಿಮ
ಗೀ ದುರಾಗ್ರಹವೇಕೆ ಕಾಂಬಿರಿ ಫಲವನಗ್ರದಲಿ
ಹೋದವಿದೆ ಮೌನದೊಳೆನುತ್ತಬು
ಜೋದರನು ಹಿಂಗಿದನು ಹರಿಯ ವಿ
ನೋದ ರಚನೆಯನೇನನೆಂಬೆನು ಭೂಪ ಕೇಳೆಂದ ೩೫

ಬಾಲಕಿಗೆ ಸಂನ್ಯಾಸಿ ದೇವರ
ಮೇಲೆ ಮನವಾಯ್ತವರಿಗೀಕೆಯ
ಮೇಲೆ ನೆಲಸಿತು ಚಿತ್ತ ಕಾಣೆನು ಜಪ ಸಮಾಧಿಗಳ
ಮೇಳವಿಸಿತನ್ಯೋನ್ಯ ರಾಗ ಛ
ಡಾಳಿಸಿದುದಭಿಲಾಷೆ ಕಾಮನ
ಬೇಳುವೆಗೆ ಬೆಂಡಾದುದಿಬ್ಬರ ಧೈರ್ಯವಡಿಗಡಿಗೆ ೩೬

ಮಿಡುಕುವುದು ಬಾಯ್ ಚಿತ್ತವವಳಲಿ
ತೊಡಕಿಹುದು ಜಪಮಾಲೆ ಬೆರಳಲಿ
ನಡೆವುತಿಹುದಕ್ಷಿಗಳು ಮುಕ್ಕುಳಿಸಿಹವು ಮಾನಿನಿಯ
ಮೃಡನ ಪೂಜೆಗೆ ಕೈ ಸುಭದ್ರೆಯ
ಹಿಡಿಹಿನಲಿ ಮನ ವರ ಸಮಾಧಿಯು
ತೊಡಹು ಹೊರಗೊಳಗಿಂದುಮುಖಿ ನರನಾಥ ಕೇಳೆಂದ ೩೭

ಜಾರಿದುದು ಮಳೆಗಾಲವತಿ ಬೆಳು
ಪೇರಿದವು ಮುಗಿಲುಗಳು ಕತ್ತಲೆ
ಸೂರೆವೋದುದು ಹಗಲಿರುಳು ರವಿ ಶಶಿಗಳುಪಟಳಕೆ
ತಾರಿದವು ನದಿ ನದಗಳಭ್ರಕೆ
ಹಾರಿದವು ಕಳಹಂಸೆಗಳು ತಲೆ
ದೋರಿದವು ತಾವರೆಗಳೆನೆ ಬಂದುದು ಶರತ್ಸಮಯ ೩೮

ಸುದತಿಯನು ಶುಭದಿವಸ ಸುಮುಹೂ
ರ್ತದೊಳಿರುಳು ವೈವಾಹವನು ಮಾ
ಡಿದರು ಹರಿ ವಸುದೇವ ದೇವಕಿಯುಗ್ರಸೇನ ನೃಪ
ಮದುವೆಯಾಯಿತು ಬಲನರಿಯದುದಂ
ದದಲಿ ಪೂಡಿದ ರಥವನೇರಿಸಿ
ಮದವಳಿಗೆ ಸಹಿತರ್ಜುನನ ಕಳುಹಿದನು ಮುರವೈರಿ ೩೯

ಪುರವ ಹೊರವಂಟವರು ಬರಲ
ಬ್ಬರಣೆಯಾಯ್ತರಮನೆಯೊಳಗೆ ಸಂ
ಕರುಷಣಂಗರುಹಿಪರು ಸಂನ್ಯಾಸಿಯ ಸಮಾಧಿಗಳ
ಅರಸು ಮಗಳನು ಕೊಂಡು ಹಾಯ್ದನೆ
ತಿರುಕ ಮುನಿ ಮಝಬಾಪು ಸುಭಟರ
ಕರೆ ಮುರಾರಿಯ ಮಾತು ತಾಗಿತೆನುತ್ತ ಗರ್ಜಿಸಿದ ೪೦

ಹೇಳಿವೇ ನಾವ್ ಮುನ್ನ ನೀವ್ ನೀ
ಲಾಳಕಿಯ ಕೆಡಿಸಿದಿರಲಾ ನೀ
ವಾಳ ನೆರಹಿದಡಿನ್ನು ಮಾಡುವುದೇನು ಕಡು ಮುಳಿದು
ಚಾಳಿಸಿದುದಪಕೀರ್ತಿಯಕಟ ವಿ
ಕಾಳಿಸಿತು ಯದುವಂಶವೆನೆ ಕರ
ವಾಳ ಜಡಿದೈದಿದನು ಹಲಧರನರ್ಜುನನ ರಥವ ೪೧

ಮುಸುಕಿದನು ನಾರಾಚದಲಿ ನಿ
ಪ್ಪಸರದಲಿ ಹಲಧರನ ಸೇನೆಯ
ಕುಸುರಿದರಿದನು ಕೊಂದನಗಣಿತ ಬಲವನಾ ಪಾರ್ಥ
ಎಸೆವನೇ ಸಂನ್ಯಾಸಿ ಮಾಡಿದ
ಹುಸಿಯುಪನ್ಯಾಸಕ್ಕೆ ಕೊಯ್ವೆನು
ರಸನೆಯನು ದೇವಕಿಯ ಮೇಲಾಣೆನುತ ಗರ್ಜಿಸಿದ ೪೨

ಬಳಿಕ ಹರಿದನು ಕೃಷ್ಣನೀತನ
ಕೆಲಕೆ ಕರೆದನು ಬಹಳ ರೋಷವ
ನಿಲಿಸಿರೇ ಸಾಕಿನ್ನು ವಸುದೇವಂಗೆ ದೇವಕಿಗೆ
ಮುಳಿವುದೀತನ ದೋಷವಲ್ಲಿದ
ತಿಳಿದೆವಾವರ್ಜುನನು ಗಡ ನಾ
ವಳುಕಲಿನ್ನೇಕೆನುತ ಬೋಧಿಸಿದನು ಹಲಾಯುಧನ ೪೩

ಅಕಟ ದುರ್ಯೋಧನಗೆ ತಪ್ಪಿಸಿ
ಸಕಲ ಯಾದವರಿಲ್ಲಿಗೈದರೆ
ವಿಕಳಮತಿ ನಾನೈಸಲೇ ಕೃಷ್ಣನ ಕುಮಂತ್ರವಿದು
ಅಕುಟಿಲಾಂತಃಕರಣತನ ಬಾ
ಧಕವಲೇ ಗುರುವರಿಗೆನುತ ಸ
ಭ್ರುಕುಟಿ ರೌದ್ರಾನನನು ಮುರಿದನು ಪುರಕೆ ಬಲರಾಮ ೪೪

ಹರಿಸಹಿತ ಬಲರಾಮನತ್ತಲು
ತಿರುಗಿದನು ಪವಮಾನ ಜವದಲಿ
ಪುರಕೆ ಬಂದನು ಪಾರ್ಥ ಪಯಣದ ಮೇಲೆ ಪಯಣದಲಿ
ಪುರದ ಬಹಿರೋದ್ಯಾನದಲಿ ಸಂ
ವರಿಸಿ ರಥವನು ನಿಲಿಸಿ ನೆಳಲಲಿ
ಪರಿಗತ ಶ್ರಮನಾಗಿ ನಗುತ ಸುಭದ್ರೆಗಿಂತೆಂದ ೪೫

ಅರಮನೆಗೆ ನಡೆ ದ್ರುಪದ ನಂದನೆ
ಕರೆಸಿದರೆ ನೀ ಹೋಗು ನಿರುತವ
ನರುಹದಿರು ತುರುಗಾಹಿಗಳ ಮಗಳೆಂದು ನುಡಿ ಸಾಕು
ಅರಸಿ ಮಿಗೆ ಮನ್ನಿಸುವಳಲ್ಲಿರು
ಕರೆಸಿಕೊಂಬೆನು ಬಳಿಕಲೆಂದೀ
ಸರಸಿಜಾಕ್ಷಿಯ ಕಳುಹಿದನು ನಿಜ ರಾಜಮಂದಿರಕೆ ೪೬

ಬಂದಳಬಲೆ ಸಮಸ್ತಪುರಜನ
ವಿಂದುವದನೆಯ ನೋಡುತ್ತಿದ್ದುದು
ಮಂದಿ ಕವಿದುದು ಮನುಜೆಯೋ ಸುರಲೋಕ ವಧುವೆನುತ
ಮಂದಿರಕೆ ಬರೆ ಬಾಗಿಲವದಿರು
ನಿಂದರಲ್ಲಿಯದಲ್ಲಿ ಬಳಿಕರ ೪೭
ವಿಂದಮುಖಿಯರು ಕಂಡು ದ್ರೌಪದಿಗರುಹಿದರು ಹದನ

ಕರೆಸಿ ಕಾಣಿಸಿಕೊಂಡು ಪಾಂಡವ
ರರಸಿ ಬೆಸಗೊಳಲೀಕೆ ಪಾರ್ಥನ
ಪರುತವದ ಮಾತುಗಳನೆಂದಳು ನಗೆಯ ಮೊಳೆ ಮಿನುಗೆ
ಸುರ ಭುಜಂಗಮ ವಧುವೊ ನೀ ಮೇ
ಣರಸು ಮಗಳೋ ತಂಗೀ ನೀ ಗೊ
ಲ್ಲರ ಮಗಳೆ ಪುಸಿಯೆನುತ ತಲೆದೂಗಿದಳು ಪಾಂಚಾಲಿ ೪೮

ಮಸಗಿದವು ನಿಸ್ಸಾಳ ತತಿ ಗ
ರ್ಜಿಸಿದವರ್ಜುನ ಬಂದನಿದೆ ಯೆಂ
ದೊಸಗೆವಾತಿನೊಳೂರ ಸುಳಿದರು ದೂತರಲ್ಲಲ್ಲಿ
ಶಶಿಮುಖಿಯರುಪ್ಪಾರತಿಯ ಮಿಗಿ
ಲೆಸೆವ ರತುನಾವಳಿಯ ಕಾಂತಾ
ವಿಸರ ನೂಕಿತು ಪಾರ್ಥ ಹೊಕ್ಕನು ರಾಜಮಂದಿರವ ೪೯

ಅರಸ ಭೀಮರಿಗೆರಗಿ ನಕುಲಾ
ದ್ಯರನು ಕಾಣಿಸಿಕೊಂಡು ದೇಶಾಂ
ತರದ ತೀರ್ಥೋನ್ನತಿಯನಾ ವೃತ್ತಾಂತ ಸಂಗತಿಯ
ಮುರಹರನ ಸೌಹೃದವನಾತನ
ಕರುಣ ಕನ್ಯಾಲಾಭವನು ವಿ
ಸ್ತರಿಸಿ ಹರುಷಾಂಬುಧಿಯೊಳದ್ದಿದನಗ್ರಜಾನುಜರ ೫೦

ಅರಸ ಕೇಳ್ಳೆ ದ್ರೌಪದಿಯ ಮನ
ಬರಿಸಿ ಬೇರರಮನೆಯೊಳೀಕೆಯ
ನಿರಿಸಿದನು ಹರುಷದಲಿ ಕಳೆದರು ಕಾಲ ವಿಭ್ರಮವ
ಇರಲಿರಲು ಪಾರ್ಥಗೆ ಸುಭದ್ರೆಗೆ
ವರಕುಮಾರಕನುದಿಸಿದನು ವಿ
ಸ್ತರಣವಾಯ್ತಭಿಮನ್ಯುವಿನ ಜನನೋತ್ಸವಾಭ್ಯುದಯ ೫೧

## ಇಪ್ಪತ್ತನೆಯ ಸಂಧಿ

ಸೂ. ಖಾಂಡವದ ವನ ದಹನ ದಾವೋ
ಚ್ಚಂಡ ಗಂಡರ ಗಂಡ ದಿವಿಜರ
ಹಿಂಡು ಗೋಳಿಡೆ ಧಾಳಿಯಿಟ್ಟನು ಚಂಡ ಗಾಂಡೀವಿ

ಕೇಳು ಜನಮೇಜಯ ಧರಿತ್ರೀ
ಪಾಲ ಪಾರ್ಥ ಸುಭದ್ರೆಯಲಿ ಭೂ
ಪಾಲತಿಲಕನು ಜನಿಸಿದನಲ್ಲೆ ಜಾತ ಮಾತ್ರದಲಿ
ಮೇಲು ಮೊಳಗಿನ ದುಂದುಭಿಯ ದಿವಿ
ಜಾಳಿಗಳ ಹೂವಳೆಯ ಹರುಷದ
ಮೇಳವದ ಮೈಸಿರಿಯನೇನೆಂಬೆನು ಧನಂಜಯನ ೧

ಕಲಿತನಕೆ ನೆಲೆಯಾಯ್ತು ಭುಜದ
ಗ್ಗಳಿಕೆಗಾಸ್ಪದವಾಯ್ತು ನಿಜ ಚಾ
ಪಳವ ಬಿಸುಟಳು ವೀರಸಿರಿ ವಿಕ್ರಮದ ಸಿರಿಸಹಿತ
ಹಳಿವು ಕಳವಳ ಭೀತಿ ಭಂಗ
ಸ್ಖಲನ ಕಂಪನವೆಂಬವಾತನ
ನೆಳಲ ಸೀಮೆಯ ಸೋಂಕಲಮ್ಮವು ಭೂಪ ಕೇಳೆಂದ ೨

ಜಾತಕರ್ಮದ ನಂತರದ ವಿ
ಖ್ಯಾತನಾಮ ವಿಧಾನವನು ಸಂ
ಪ್ರೀತಿಯಲಿ ಮಾಡಿದನು ಋಷಿ ಭೂಪತಿಯನುಜ್ಞೆಯಲಿ
ವೀತ ಭಯನಭಿಮನ್ಯುವೆನೆ ರಿಪು
ಜಾತ ನಡುಗಿತು ಲೋಕ ಮೂರರೊ
ಳೀತನುದಯದ ಕೀರ್ತಿ ಪಸರಿಸಿತರಸ ಕೇಳೆಂದ ೩

ಯಮಸುತಗೆ ಭೀಮಗೆ ಕಿರೀಟಿಗೆ
ಯಮಳರಿಗೆ ಸುಕುಮಾರಕರು ನಿಜ
ರಮಣಿಯಲಿ ಜನಿಸಿದರು ಶ್ರುತಸೋಮಕನು ಪ್ರತಿವಿಂಧ್ಯ
ವಿಮಲ ಶ್ರುತಕೀರ್ತಿ ಪ್ರತಾಪೋ
ತ್ತಮನು ಶ್ರುತಸೇನಾಖ್ಯನುರು ವಿ
ಕ್ರಮ ಶತಾನೀಕಾಭಿಧಾನರು ದ್ರುಪದ ತನುಜೆಯಲಿ ೪

ಇವರು ಕಳುಹಿದ ಹರುಷ ವಾರ್ತಾ
ಶ್ರವಣ ರಸದಲಿ ಮನಮುಳುಗಿ ಯಾ
ದವ ಶಿರೋಮಣಿ ರಾಮ ವಸುದೇವಾದಿಗಳು ಸಹಿತ
ಇವರ ಪುರಕೈತಂದರಿವರು
ತ್ಸವದಲಿದಿರ್ಗೊಂಡೊಸಗೆಯಲಿ ಬಾಂ
ಧವರ ಸಂಭಾವಿಸಿದರೈ ಯಮನಂದನಾದಿಗಳು ೫

ಅರಸಿ ಕಾಣವು ವೇದತತಿ ತಾ
ನರಸಿ ಬಂದನು ಭಕ್ತರನು ತನ
ಗೆರಗಿ ಮೆಚ್ಚಿಸಲರಿಯರಜ ರುದ್ರಾಮರೇಶ್ವರರು
ಎರಗುವನು ಯಮಜಂಗೆ ತನ್ನನು
ಕುರುಹುಗಾಣವು ವೇದಶಿರವಿದು
ಮರವೆಯೋ ಹರಿ ಬಂದು ಕಂಡನು ಧರ್ಮನಂದನನ ೬

ಲೀಲೆಯೋಯಿದು ಮೋಹ ಕೃಷ್ಣನ
ಬಾಲಕೇಳಿಯ ನೆನಹೊ ಬೊಮ್ಮದ
ಕೌಳಿಕದ ಕಣುಮಾಯೆಯೋ ಶಿವಶಿವ ಮಹಾದೇವ
ಕಾಲಿಗೆರಗಿದ ಕೃಷ್ಣನನು ಭೂ
ಪಾಲ ತೆಗೆದಪ್ಪಿದನು ನಿಗಮದ
ಮೌಳಿ ತಲೆವಾಗಿದವು ಲಜ್ಜಾ ಭೂರಿಭಾವದಲಿ ೭

ಅರಸ ಸಹಿತ ಸಮಸ್ತ ಯಾದವ
ಪರಿಕರದ ಮೇಳದಲಿ ಯಾದವ
ರರಸು ಬಿಜಯಂಗೈದು ಕುಂತಿಯ ಸುತರ ಭವನದಲಿ
ಅರಸಿಯರ ಸುಕುಮಾರ ವರ್ಗವ
ಕರೆಸಿ ಕಾಣಿಸಿಕೊಂಡು ದಿವ್ಯಾ
ಭರಣ ವಸನಾದಿಯಲಿ ಮನ್ನಿಸಿದನು ಮಹೀಶ್ವರರ ೮

ಜಲಧಿ ಮಧ್ಯದೊಳಿರವೊ ಗಗನ
ಸ್ಥಳವೊ ಮೇಣು ಮಹಾಂಧಕಾರದ
ಕಳಿವುಗಳ ವೈಕುಂಠವೋ ಮುನಿಜನದ ಹೃದ್ಗುಹೆಯೊ
ತಿಳಿಯೆ ಸಚರಾಚರದ ಚೇತನ
ದೊಳಗೆಯೋ ನೆಲೆಯಾವುದೆಂಬ
ಗ್ಗಳೆಯ ದೈವದ ನಿಲವ ಕಂಡೆನು ಪಾರ್ಥಭವನದಲಿ ೯

ಈತನರ್ಜುನನರಮನೆಯೊಳಭಿ
ಜಾತನೆನಿಪಭಿಮನ್ಯುವನು ಸಂ
ಪ್ರೀತಿಯಿಂದಪ್ಪಿದನು ಕೊಟ್ಟನು ಬಾಲದೊಡಿಗೆಗಳ
ಖ್ಯಾತಪಂಚ ದ್ರೌಪದಿಯ ಸಂ
ಜಾತರನು ಮನ್ನಿಸಿ ಮಹಾವಿಭ
ವಾತಿಶಯದಲಿ ಪತಿಕರಿಸಿದನು ಪಾಂಡುನಂದನರ ೧೦

ಅರಸ ಕೇಳೈ ಹಲವು ದಿನ ಸಂ
ಚರಿಸಿ ಸೌಖ್ಯದೊಳಿರ್ದು ತಮ್ಮಯ
ಪುರಿಗೆ ಬಲಭದ್ರನನು ಯಾದವರಾಯ ದಳಸಹಿತ
ಹರಿ ಸಮಾಧಾನದಲಿ ಕಳುಹಿಸಿ
ನರನೊಡನೆ ವೈಹಾಳಿ ಮೃಗಯಾ
ವರ ವಿಹಾರದೊಳಿದ್ದನಿಂದ್ರಪ್ರಸ್ಥ ನಗರಿಯಲಿ ೧೧

ಹರಿ ಧನಂಜಯರೊಂದು ದಿನ ಮೃಗ
ಹರಣ ಕೇಳಿಕಳಾಪದಲಿ ಸಂ
ಚರಿಸಿ ಬನದಲಿ ಬಹಳ ಮಾರ್ಗಶ್ರಮದ ಭಾರದಲಿ
ಬರುತ ನೀರಡಿಸಿದರು ಕಂಡರು
ಸರಸಿಯನು ರಥವಿಳಿದು ನೆಳಲಲಿ
ಪರಿಹೃತ ಶ್ರಮರಾಗೆ ಹರಿ ಹೊಕ್ಕನು ಸರೋವರವ ೧೨

ಆ ಸಮಯದಲಿ ಬಂದನೊಬ್ಬನು
ಭೂಸುರನು ಕಿಡಿಗಳ ತುಷಾರದ
ಮೀಸೆ ಗಡ್ಡದ ಸುಳಿದಲೆಯ ಕಬ್ಬೊಗೆಯ ಜುಂಜುಗಳ
ಬಾಸರದ ಬಳಲುಡಿಗೆಯ ಮಟ್ಟಿಯ
ಧೂಸರದ ಮೈದೊಡಿಗೆ ಮೆರೆಯೆ ವಿ
ಲಾಸದಲಿ ನಡೆತಂದನರ್ಜುನ ದೇವನಿದ್ದೆಡೆಗೆ ೧೩

ಹರಸಿ ವೇದಾರ್ಥವನು ಮಿಗೆ ವಿ
ಸ್ತರಿಸಿ ಕೊಂಡಾಡಿದನು ವಿಪ್ರನ
ಪರಮ ಯೋಗ್ಯತೆಗಾರು ಸರಿ ಪರಮೇಷ್ಠಿ ಹೊರತಾಗಿ
ಬರವಿದೇನೆನಗೇನನುಗ್ರಹ
ವರಿಸಿದರೆ ನಿಮ್ಮಿಷ್ಟವನು ಗೋ
ಚರಿಸುವೆನು ತಾನೆನುತ ನುಡಿದನು ಪಾರ್ಥ ಭೂಸುರಗೆ ೧೪

ಪಾರ್ಥ ಕೇಳತಿ ಗಹನವೇನ್ ಗ್ರಾ
ಸಾರ್ಥಿಗಳು ನಾವಾದೆವೆಮ್ಮ
ಸ್ವಾರ್ಥ ಸಿದ್ಧಿಯ ಘಟಿಸು ಸಾಕು ಸಮಗ್ರ ಫಲವಹುದು
ತೀರ್ಥವೇಕಿನ್ನತಿಥಿಯಿರಲು ಪ
ರಾರ್ಥಸಾಧನತನವೆ ಪರಮ
ಸ್ವಾರ್ಥವೆಂಬರು ಸುಜನರೆಂದನು ಕಪಟದ್ವಿಜ ನಗುತ ೧೫

ಕೊಟ್ಟೆನೆಂದನು ಪಾರ್ಥನಿವರೊಡ
ಬಟ್ಟರೀ ನುಡಿಗೇಳಿ ದನುಜ ಘ
ರಟ್ಟ ಬಂದನು ಹದನನರಿದನು ಹವ್ಯವಾಹನನ
ಕೊಟ್ಟುದೇನು ಕಿರೀಟಿಯಿವರೇ
ಮುಟ್ಟಿದರೆ ಮುನಿವವರಲ್ಲ ನೀ
ಕೊಟ್ಟುದುಣಬಡಿಸುವುದು ಭಾರವಿದೆಂದನಸುರಾರಿ ೧೬

ಮುಖರನಾದೈ ಪಾರ್ಥ ಬರ್ಹಿ
ರ್ಮುಖರ ಬಾಣಸದಾತನೀತನು
ಸುಖವೆ ಹೇಳೈ ತಂದೆ ಖಾಂಡವ ವನದ ನಿರ್ದಹನ
ನಿಖಿಳನಿರ್ಜರ ಬಲಸಹಿತ ಶತ
ಮಖನೊಡನೆ ವಿಗ್ರಹವಲಾ ಸಂ
ಮುಖಕೆ ಬಂದುದು ಭಂಗವೆಂದನು ನಗುತ ಮುರವೈರಿ ೧೭

ಭಂಗವೇಕೈ ಕೃಷ್ಣ ನಿರ್ಜರ
ಪುಂಗವನ ಗೆಲಿದವನ ಬಾಣಸಿ
ಗಂಗೆ ಬಾಣಸ ಮಾಡುವೆನು ಖಾಂಡವ ಮಹಾವನವ
ಅಂಘವಣೆಯನು ನೋಡು ನೀನೇ
ಕಾಂಗದಲಿ ನಿರ್ವಹಿಸುವೆನು ಭಯ
ಭಂಗವುಂಟೇ ನಿನ್ನ ಕೃಪೆಯಿರಲೆಂದನಾ ಪಾರ್ಥ ೧೮

ಮೆಚ್ಚಿದನು ಘೃತಯೋನಿ ಪೂತುರೆ
ನಿಚ್ಚಟನು ನೀನೆನುತ ಕಿಡಿಗಳ
ಬಿಚ್ಚಲುದುರಿತು ಚಾಪಮಾರ್ಗಣ ರಥ ತುರಂಗಚಯ
ಅಚ್ಚರಿಯನೇನೆಂಬೆನೈ ಸ
ಪ್ರಾರ್ಚಿಯಿತ್ತನು ವನವನಿಂದ್ರನ
ಮುಚ್ಚು ಮರೆಯೇಕಿನ್ನು ನಮಗುಣಬಡಿಸು ಸಾಕೆಂದ ೧೯

ಧರಣಿಪತಿ ಕೇಳಗ್ನಿಯಿತ್ತನು
ಹರಿ ಧನಂಜಯರಿಗೆ ರಥಂಗಳ
ನುರು ಶರಾವಳಿ ದಿವ್ಯಧನು ಕೌಮೋದಕೀ ಗದೆಯ
ವರ ತನುತ್ರ ಸಿತಾಶ್ವವಕ್ಷಯ
ಶರ ನಿಷಂಗಾದಿಗಳನಿವರು
ಬ್ಬರಿಸಿದರು ಹರುಷದಲಿ ನೆನೆದರು ನಯನ ವಾರಿಯಲಿ ೨೦

ಹೂಡಿದರು ರಥವೆರಡನಿವರು ಸ
ಘಾಡದಲಿ ಕಪಿ ಗರುಡ ಸಿಂಧವ
ಜೋಡಿಸಿದರೇರಿದರು ನಗುತ ಧನಂಜಯಾಚ್ಯುತರು
ಮೂಡಿಗೆಯ ಮೊನೆಗಣೆಗಳಿಗೆ ಕೈ
ನೀಡಿ ಬೊಬ್ಬಿರಿದರು ದಿಗಂತವ
ನೀಡಿರಿದುದಬ್ಬರಣೆ ಬಿರಿದುದು ಧರಣಿ ಧಾಳಿಯಲಿ ೨೧

ಬೊಬ್ಬಿರಿದು ಹರಿ ಪಾಂಚಜನ್ಯವ
ನುಬ್ಬಿ ಧ್ವನಿ ಮಾಡಿದನು ಪಾರ್ಥನ
ತೆಬ್ಬಿನಬ್ಬರ ತೀವಿತಾ ಬ್ರಹ್ಮಾಂಡ ಮಂಡಲವ
ಗಬ್ಬರಿಸಿದುದು ಗಗನವನು ಶರ
ದುಬ್ಬರದ ಬಲುಗಿಡಿಯ ಗಡಣವು
ಹಬ್ಬಿ ಹರಿದವು ದೆಸೆದೆಸೆಗೆ ನರನಾಥ ಕೇಳೆಂದ　೨೨

ಧಾಳಿಯಿಟ್ಟರು ಸುರವನಕೆ ಸುರ
ಜಾಲ ಸರಿಯಿತು ಬೊಬ್ಬೆಯಲಿ ದೆ
ಖ್ವಾಳಿಸಿದುದುತ್ಪಾತ ಶತ ಖಾಂಡವದ ಮಧ್ಯದಲಿ
ಕೂಳಿಗಳ ಕುಡಿ ಮೀನವೋಲ್ಬಹ
ಗಾಳಿ ಹುದುಗಿತು ನಡುಗಿದರು ವನ
ಪಾಲಕರು ನಿಂದೊಣಗಿದವು ಹರಿ ಚಂದನಾದಿಗಳು　೨೩

ತೂಗಿ ಬಾಣವ ಹೂಡಿ ಕಿವಿವರೆ
ಗಾಗಿ ಬರಸೆಳೆದಾರಿ ಬೊಬ್ಬಿರಿ
ದಾಗಲಿಂತೆಂದನು ಧನಂಜಯನಾ ಧನಂಜಯಗೆ
ಈಗಲೀ ವನದೊಳಗೆ ಖಗ ಮೃಗ
ವಾಗ ಸುರ ದನುಜಾದಿ ಜೀವರ
ಹೋಗಲೀಯದೆ ತರುಬಿ ಶರದಲಿ ಕಾಯಬೇಕೆಂದ　೨೪

ಹೈ ಸಮಗ್ರಾತಿಥ್ಯದಲಿ ನಿನ
ಗೀ ಸಮಸ್ತ ಪ್ರಾಣಿಸಹಿತ ಸು
ರೇಶನುದ್ಯಾನವನು ಕೊಟ್ಟೆನು ಬಾಣ ಧಾರೆಯಲಿ
ನೀ ಸಮಾಧಾನದಲಿ ಸುಪ್ರುರೋ
ಡಾಶವಿದೆ ಸಮಿದಾಜ್ಯ ಸಹಿತ ಮ
ಹಾ ಸುವಿಸ್ತಾರದಲಿ ಕೊಂಬುದು ಭೀತಿ ಬೇಡೆಂದ　೨೫

ಎನುತ ಬಿಡೆ ತಿರುವಾಯನೊದೆದು
ಬ್ಬಿನಲಿ ಬೊಬ್ಬಿರಿದಂಬು ಸುರಪನ
ವನವ ಮುತ್ತಿತು ಕೂಡೆ ಹೊತ್ತಿತು ಹೊಗೆಯ ಹೊರಳಿಯಲಿ
ತನಿಗಿಡಿಯ ದಳ್ಳುರಿಯ ನಾಲಿಗೆ
ಕೊನೆಗಳಲ್ಲಾಡಿದವು ಕಡು ಲಾ
ಗಿನಲಿ ಲಂಬಿಸಿ ಚುಂಬಿಸಿದುದುರಿ ಲಲಿತ ನಂದನವ　೨೬

ಹೊದರಿನಲಿ ಭುಗುಭುಗಿಲು ಭುಗಿಲೆಂ
ದೊದೆದುದುರಿಯಂಬರವನೊಣಗಿದ
ಬಿದಿರ ಮೆಳೆಯಲಿ ಧಗಧಗಿಸಿ ಛಟಛಟನೆ ಛಟಛಟಿಸಿ
ಕದಲಿ ಖರ್ಜೂರಾದಿ ತರು ಜಾ
ಲದಲಿ ಸಿಮಿ ಸಿಮಿ ಸಿಮಿ ಸಿಮಾಯತ
ವೊದಗೆ ಗಹನೋದರದೊಳಗೆ ಘಾಡಿಸಿತು ಘನ ವಹ್ನಿ　೨೭

ಏನನೆಂಬೆನು ದಿವಿಜ ರಾಜೋ
ದ್ಯಾನ ಹಾನಿಯನಾತನಾಳು ಕೃ
ಶಾನುವಿನ ತನಿಗೊಬ್ಬನೀ ಕೃಷ್ಣಾರ್ಜುನರ ಬಲುಹ
ಆ ನಿಖಿಳ ನಿರ್ಜರರು ತಾಗಿ ವಿ
ಮಾನ ಗತಿಯಲಿ ಹಾಯ್ದು ರಂದವ
ಮಾನಗತಿಯಲಿ ಗಗನದಲಿ ಗೀರ್ವಾಣಪತಿ ಪುರಕೆ　೨೮

ಹೊಗೆಯ ಬಳಿಯಲಿ ತಳಿತ ಹುಯ್ಯಲ
ಬೆಗಡಿದೇನೋ ಕೇಳೆನುತ ಸಿರಿ
ಮೊಗದ ದುಗುಡದ ಸಾವಿರಾಲಿಯೊಳೊಗುವ ಕಿಡಿಗಳಲಿ
ಹಗೆಗಳಾರು ನಿವಾತ ಕವಚಾ
ದಿಗಳೊ ತಾನಾರೆಂಬ ಶಕ್ರನ
ದುಗುಡವನು ದೇವಾಳಿ ಕಂಡುದು ದೂರಿದರು ನರನ　೨೯

ನಿನಗೆ ಮಗನೇ ಪಾರ್ಥ ನಿನ್ನರ
ಮನೆಯ ಬಾಣಸದಾತನೇ ಶಿಖಿ
ಯನುಜನೇ ಮುರವೈರಿ ನಿನಗನುಕೂಲರಾದರಲೆ
ಬನದ ಬೇಗೆಯೊ ಪರಿಭವಾಲಂ
ಬನದ ಮೊಸಗೆಯೊ ಬಂದುದಿದೆ ಬಿಡು
ಮನೆಯ ಮನ್ನೆಯ ಗಂಡನಾಗೆಂದುದು ಸುರಸ್ತೋಮ　೩೦

ಐಸಲೇ ನಮ್ಮವರಲಾ ಹೋ
ಹೋ ಸುರರು ಕಳವಳಿಸದಿರಿಯಾ
ಪೈಸನಾಹುತಿಗೊಳಲಿ ಪಾವಕನೆಮ್ಮ ಖಾಂಡವವ
ಈ ಸುರರಿಗಾ ನರರಿಗಂತರ
ವೇಸು ಪೂತುರೆ ಕಾಲಗತಿಯೆನು
ತಾ ಸುರೇಶ್ವರ ಖಾತಿಗೊಂಡನು ಕೃಷ್ಣ ಪಾರ್ಥರಿಗೆ　೩೧

ಕಾಹು ತೆಗೆಯಲಿ ಕಲ್ಪಮೇಘ
ವ್ಯೂಹಗಳ ಬರಹೇಳು ಕಾಂಬೆನು
ಸಾಹಸವನಿದರೊಳಗೆ ಕೃಷ್ಣ ಧನಂಜಯ ದ್ವಯದ
ಈ ಹದಕೆ ಪಡಿ ಪುಚ್ಚವಿಲ್ಲವ
ಗಾಹಿಸಲಿ ಖಾಂಡವವ ಹುಲ್ಲೆಯ
ಹೂಹೆಗಳು ಹೆಬ್ಬುಲಿಗೆ ಹಾಯ್ದುವೆನುತ್ತ ಗರ್ಜಿಸಿದ　೩೨

ಅರಸ ಕೇಳ್ಕಲ್ಪಾಂತ ಮೇಘೋ
ತ್ಕರದ ಪಾಳಯವೆತ್ತಿ ಬಿಟ್ಟುದು
ಧರಣಿಯುಗಲಕೆ ಧಾಳಿಯಿಟ್ಟವು ಸಿಡಿಲ ಮಿಂಚುಗಳು
ಕರಿಯ ಬರಿಕೈಗೆಣೆಯೆನಿಪ ನಿ
ಷ್ಠುರದ ಧಾರಾಸಾರ ತೆರಳಿಚಿ
ಸುರಿದುದಾ ಖಾಂಡವದ ಸೀಮಾ ಸನ್ನಿವೇಶದಲಿ　೩೩

ಆ ಸಕಲ ಸಾಗರವನೊಂದೇ
ಶ್ವಾಸದಲಿ ತೆಗೆದೆತ್ತಿ ಮೊಗುಚಿದ
ವೀ ಸಮಸ್ತ ಬಲಾಹಕಾವಳಿ ಬನದ ಮಧ್ಯದಲಿ
ಏಸು ಸಾಹಸ ಸತ್ವ ತನಗುಂ
ಟೈಸರಲಿ ತಲೆಯೆತ್ತಿ ಜಲದಲಿ
ಘಾಸಿಯಾದನು ವಹ್ನಿ ನುಡಿದನು ಕೃಷ್ಣ ಪಾರ್ಥರಿಗೆ　೩೪

ಕಲಹವಿಂದ್ರನ ಕೂಡೆ ಕಲ್ಪದ
ಮಳೆಗಳಿವು ಮಾಣಿಸಿದಪೂಟವ
ನೆಳೆದವಣಲಿನ ತುತ್ತನರ್ಜುನ ಕಾಯ್ದುಕೊಳ್ಳೆನಲು
ಮಳೆಗೆ ಶರಪಂಜರವ ವಿರಚಿಸಿ
ಬಳಿಕ ವಾಯುವ್ಯಾಸ್ತ್ರದಲಿ ನಿ
ಸ್ಖಲಿತ ಮೇಘವ್ರಜವನೆಚ್ಚನು ಪಾರ್ಥ ವಹಿಲದಲಿ　೩೫

ಏನ ಹೇಳುವೆನರಸ ಪಾರ್ಥನ
ನೂನ ಶಕ್ತಿಯನುರುಬಿದನು ಪವ
ಮಾನ ಶರದಲಿ ಪುಷ್ಕಳಾವರ್ತಾದಿ ಘನಘಟೆಯ
ಭಾನು ತಿಮಿರಂಗಳಿಗೆ ಮೇಘ ಮ
ಹಾನಿಲಂಗಳಿಗಾವುದಂತರ
ಸೋನೆ ತೆಗೆದುದು ಹೊಗೆದುದಾ ಖಾಂಡವ ಮಹೋದ್ಯಾನ ೩೬

ಹಾರಲೂದಿತು ಮೇಘವನು ಕಿಡಿ
ತೂರಲುಬ್ಬರಿಸಿದುದು ವಹ್ನಿಯ
ನೇರಿಸಿತು ಖಾಂಡವದೊಳಗೆ ಬಿರುಗಾಳಿ ಸುಳಿಸುಳಿದು
ಮೋರೆಯೊಣಗಿದುದಮರರಿಗೆ ವ್ಯ
ಮಾರಿಗಳ ಸುಡು ಮೂಲೆಯವದಿರು
ವಿಹಾರಿದರಲಾಯೆನುತ ಸುರಪತಿ ತರಿಸಿದನು ಗಜವ ೩೭

ನೆರೆದುದಮರರು ಸಿದ್ಧ ವಿದ್ಯಾ
ಧರ ಮಹೋರಗ ಯಕ್ಷ ರಾಕ್ಷಸ
ಗರುಡ ಕಿನ್ನರ ಸಾಧ್ಯ ಗುಹ್ಯಕ ಭೂತ ಗಂಧರ್ವ
ತರಣಿ ವಸು ರುದ್ರಾದಿಗಳು ಮೋ
ಹರಿಸಿದರು ಮುಂಗುಡಿಯಲಿಂದ್ರನ
ಸಿರಿಯ ರಭಸವನೇನನೆಂಬೆನು ಭೂಪ ಕೇಳೆಂದ ೩೮

ಮಸಗಿತಮರವ್ರಾತವಭ್ರವ
ಮುಸುಕಿದವು ಝಲ್ಲರಿಗಳಿಂದ್ರನ
ವಿಸಸನಕೆ ಮೆಚ್ಚಿಸುವೆ ವಸುಗಳನೆನುತ ತಮತಮಗೆ
ಮುಸುಕಿದರು ಮೃಗರಾಜ ಸಿಂಹದ
ಮುಸುಕನುಗಿವಂದದಲಿ ಬಾಣ
ಪ್ರಸರವನು ಹರಹಿದರು ಮುಂದೆ ಧನಂಜಯಾಚ್ಯುತರ ೩೯

ಹೂಣೆ ಮಿಗೆ ಹೊಕ್ಕೆಚ್ಚರೋ ಬಹು
ಬಾಣವನು ದೃಢಬಾಣರೋ ಗೀ
ರ್ವಾಣರೋ ನೀವಾರು ನುಡಿಯಿರಲೈ ಮಹಾದೇವ
ಸಾಣೆಯಲಗಿಗೆ ಸಾಲುವಿರಿ ತನಿ
ಶೋಣಿತವ ನೀವ್ಕೊಡದೆ ಸುರಪತಿ
ಯಾಣೆ ಹಿಮ್ಮೆಟ್ಟಿದರೆನುತ ಬೊಬ್ಬಿರಿದು ನರನೆಚ್ಚ ೪೦

ತುರುಗಿ ಕೂರಂಬುಗಳು ಮೈಯಲಿ
ಮುರಿದವರ್ಜುನನೆಸುಗೆಯಲಿ ಕೈ
ಮರೆದುದಮರ ನಿಕಾಯ ಕೆದರಿತು ದೊರೆಯ ಮನ್ನಿಸದೆ
ಮುರಿದುದೀ ಕೃಷ್ಣಾರ್ಜುನರ ಬೊ
ಬ್ಬಿರಿತಕವರೆದೆಯೊಡೆಯಲಿಂದ್ರನ
ಮರೆಯ ಹೊಕ್ಕುದು ದೇವಸಂತತಿ ಭೂಪ ಕೇಳೆಂದ ೪೧

ನರರು ರಚಿಸಿದ ಹವ್ಯಕವ್ಯೋ
ತ್ಕರ ಹವಿರ್ಭಾಗವನು ತಿಂದು
ಬ್ಬರಿಸಿ ದೇವಸ್ತ್ರೀ ಕದಂಬದ ಖೇಳಮೇಳದಲಿ
ಇರವು ನಿಮಗೀ ರೌದ್ರಬಾಣ
ಸ್ಫುರಿತ ಕರ್ಕಶ ವಿಸ್ಫುಲಿಂಗೋ
ತ್ಕರದ ಝಳ ನಿಮಗೇಕೆಯೆಂದನು ಪಾರ್ಥ ನಸುನಗುತ ೪೨

ಮುರಿದ ನಿರ್ಜರ ಸೇನೆಗಭಯದ
ಕರವ ನೆಗಹಿ ಕರೀಂದ್ರನನು ಶಿರ
ಬಿರಿಯಲಂಕುಶ ಮೊನೆಯೊಳೊತ್ತಿ ಮಹೋಗ್ರ ಕೋಪದಲಿ
ನರ ಮುರಾಂತಕರಿದಿರಿನಲಿ ಮದ
ಕರಿಯ ಬಿಟ್ಟನು ಶಕ್ರನಾತನ
ಬಿರುದ ಸಂಭಾವಿಸಿದರಭ್ರದ ಸೂತ ಮಾಗಧರು ೪೩

ನಮುಚಿ ಮಸ್ತಕಶೂಲ ಬಲ ಸಂ
ತಮ ಸುಭಾಸ್ಕರ ಜಂಭ ಭುಜ ವಿ
ಕ್ರಮ ಮಹಾಂಬುಧಿ ಕುಂಭಸಂಭವ ವೃತ್ರ ಗಿರಿವಜ್ರ
ಕಮಲಭವ ಹರ ವಿಷ್ಣು ಹೊರೆಗಾ
ದಮಿತ ಸುರಗಣ ಮೌಳಿಸುಣಿ ಸಂ
ಕ್ರಮಣ ಚತುರ ಪದಾಬ್ಜನೆಂದುದು ವಂದಿ ಸಂದೋಹ ೪೪

ನೂಕಿದನು ಸುರಪತಿ ಗಜವನ
ವ್ಯಾಕುಲರಲೇ ಕೃಷ್ಣ ಪಾರ್ಥರಿ
ದೇಕೆ ನಿಮಗೀ ವಾಸಿ ವಾಸವ ಲೇಸು ಮರುಳುವುದು
ನಾಕ ನಿಳಯರು ತಂದ ಗೆಲವೇ
ಸಾಕು ಸೋಲುವರಲ್ಲ ನಿಮಗೆ ವಿ
ವೇಕವುಳ್ಳರೆ ತಿರುಗಿಯೆಂದನು ಹರಿಗೆ ಕಲಿಪಾರ್ಥ ೪೫

ಜನಪ ಕೇಳಾ ಸಮಯದೊಳು ವಾ
ಗ್ವನಿತೆಯರಸನು ಗಗನಮಾರ್ಗದೊ
ಳನಿಮಿಷಾಧಿಪನಲ್ಲಿಗೈತರೆ ಕಂಡು ಸುರನಿಕರ
ತನತನಗೆ ಭಾಳದಲಿ ನಿಜ ಕರ
ವನರುಹವ ಮುಗಿಯಿಸಿದರಿಂದ್ರಂ
ಗನುವರವ ಮಾಣಿಸಲು ಬೇಕೆಂದಿಳಿದನಬ್ಜಭವ ೪೬

ಮರುಳನೈ ನೀನಿವರನಾರೆಂ
ದರಿಯಲಾ ನಾರಾಯಣನು ಮುರ
ಹರನು ನರನಲ್ಲಾ ಧನಂಜಯನಿವರು ಕಿರುಕುಳರೆ
ಮರುಳ ನೀನೆಂದಿಂದ್ರನಾನೆಯ
ತಿರುಹಿದನು ಪರಮೇಷ್ಠಿ ಯಿತ್ತಲು
ಧರಣಿಪತಿ ಕೇಳನಲ ಕೇಳಿಯನಾ ವನಾಂತದಲಿ ೪೭

ಜಂಬು ಚೂತ ಪಲಾಶ ವಟ ದಾ
ಳಿಂಬ ಬಿಲ್ವ ತಮಾಲ ಚಂಪಕ
ನಿಂಬ ಬಕುಳ ಕಪಿತ್ಥ ಕುಟಜವಶೋಕ ಪುನ್ನಾಗ
ತುಂಬುರರಳಿ ಲವಂಗ ಪೂಗ ಕ
ದಂಬ ಗುಗ್ಗುಲ ಸಾಲ ತಿಲಕಾ
ದುಂಬರಾದಿ ದ್ರುಮ ಕುಲವನಾಲಿಂಗಿಸಿತು ವಹ್ನಿ ೪೮

ಸುಳಿಸುಳಿದು ಶಶಿಕಾಂತಮಯದ
ಗ್ಗಳದ ವೇದಿಕೆಗಳಲಿ ನೀಲದ
ನೆಲೆಯ ಚೌಕಿಗೆಗಳಲಿ ಮಂಟಪದಲಿ ಲತಾವಳಿಯ
ಲಲಿತ ಸೌಧದ ಚಾರು ಚಿತ್ರಾ
ವಳಿಯ ಮೇಲ್ಕಟ್ಟುಗಳ ಭವನಂ
ಗಳಲಿ ಬಿಟ್ಟುದು ಕೂಡೆ ಪಾಳಯ ವಹ್ನಿಭೂಪತಿಯ ೪೯

ಕುರುಳ ತುಂಬಿಯು ತನಿಗೆದರಿ ಮುಖ
ಸರಸಿಜವ ಚುಂಬಿಸಿ ತಮಾಲದ
ತುರುಬ ಹಿಡಿದಧರ ಪ್ರವಾಳದ ರಸವ ನೆರೆಸವಿದು
ಉರು ಪಯೋಧರ ಬಿಲ್ವವನು ಹೊ
ಯ್ದೊರಸಿ ಕದಳಿಯ ನುಣ್ದೊಡೆಯ ನಿ
ಟ್ಟೊರಸಿ ರಮಿಸಿತು ವನಸಿರಿಯ ಪಿಪ್ಪಲ ದಳಾಂಗದಲಿ ೫೦

ಧರಣಿಪತಿ ಕೇಳ್ ಶರಭಮೃಗಪತಿ
ಕರಿ ಕಳಭ ಶಾರ್ದೂಲ ಸೂಕರ
ಕರಡಿ ಕಾಸರಶಲ ಮೃಗಾವನ ಖಡ್ಗ ಗೋಮಾಯು
ಎರಳೆ ಮೊಲ ಸಾರಂಗ ವಾನರ
ನುರು ಕುರಂಗ ಪ್ರಮುಖ ಮೃಗಕುಲ
ವುರುಬಿ ಬಿದ್ದುದು ಧಳ್ಳುರಿಯ ಬೆಳ್ಳಾರವಲೆಗಳಲಿ ೫೧

ಶುಕ ಮರಾಳ ಮಯೂರ ಟಿಟ್ಟಿಭ
ಪಿಕ ಚಕೋರ ಕಪೋತ ವಾಯಸ
ಬಕ ಪದಾಯುಧ ಚಕ್ರವಾಕ ಕಳಿಂಗ ಕಲವಿಂಕ
ಕುಕಿಲ ಸಾರಸ ಕಾಕರಿಪು ಚಾ
ತಕ ಭರದ್ವಾಜಾದಿ ಪಕ್ಷಿ
ಪ್ರಕರ ಬಿದ್ದುದು ಬಿಗಿದ ಕೇಸುರಿ ಕಣ್ಣವಲೆಗಳಲಿ ೫೨

ಹರಡೆ ಗೀಜಗ ಮರಗೊಡೆಲೆ ಕಾ
ಬುರುಲೆ ಲಾವುಗೆ ಗೌಜು ಪಾರಿವ
ನಿರಿಲೆ ಸಾಳುವ ಚಿಲಿಮಿಲಿಗ ಚೆಂಬೋತ ಮೀನ್ಬುಲಿಗ
ಮರಕುಟಿಗ ಕಬ್ಬಕ್ಕಿ ಕೊಟ್ಟುಗ
ವರಲೆ ಕೊಂಚೆ ಕಪಿಂಜ ಗಿಂಚಲು
ಗರಿಗ ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ ೫೩

ಝಳಕೆ ತಿಳಿಗೊಳದುದಕ ಕಾದು
ಚ್ಛಳಿಸಿದವು ತನಿಗುದಿದು ಮತ್ಸ್ಯಾ
ವಳಿಗಳಂಬುಜದೆಸಳು ಸೀದವು ತುಂಬಿಗಳು ಸಹಿತ
ಹಿಳಿದು ಸಿಡಿದವು ಚಾರು ಚಂದ್ರೋ
ತ್ಪಳರಚಿತ ಸೋಪಾನ ರತುನಾ
ವಳಿಯ ರಾಶಿಗಳಿದ್ದಿಲಾದವು ಬಿದ್ದ ಕಿಡಿಗಳಲಿ ೫೪

ಇಟ್ಟಣಿಸಿ ಛಿಟಿಛಿಟಿಸಿ ಶಿಖಿ ಪುಟ
ವಿಟ್ಟು ದೊಣಗಿಲು ಹೊದರಿನಲಿ ಮಿಗೆ
ತೊಟ್ಟ ಕಬ್ಬೊಗೆ ಝಗೆಯ ಹೊರಳಿಯ ಕಿಡಿಯ ಗಡಣದಲಿ
ಹುಟ್ಟಿದುರಿ ಹೆಮ್ಮರನ ಸುತ್ತಲು
ಕಟ್ಟಿತಲ್ಲಿಯ ತೊಡಕಿನಲಿ ಭುಗಿ
ಲಿಟ್ಟು ಕವಿದುದು ತುದಿಗೆ ಬಹು ಶಾಖೋಪಶಾಖೆಗಳ ೫೫

ಹೊಗೆಯ ಹಬ್ಬುಗೆ ಸತ್ಯಲೋಕವ
ನುಗಿದುದುರಿನಾಲಗೆಯ ಗರವೊ
ಟ್ಟಗೆಯ ತೊಳಲಿಕೆ ತೆರಳಿಚಿತು ತೆತ್ತೀಸು ಕೋಟಿಗಳ
ಹಗಲಗಡಿತಕೆ ಹೊಕ್ಕುದೋ ಕಡೆ
ಮುಗಿಲ ಕಾಣೆನು ದಿವವನೆತ್ತಣ
ಗಗನಮಣಿ ನಕ್ಷತ್ರ ಚಂದ್ರಮರರಸ ಕೇಳೆಂದ ೫೬

ಛಿಳಿ ಛಿಳಿಲು ಛಿಳಿ ರವದ ಘುಳು ಘುಳು
ಘುಳು ಘುಳ ಧ್ವನಿಮಯದಿ ಕಪಿಗಳ
ಕಿಳಿಕಿಳಾಯತ ರವದಿ ಮೃಗ ಸಂಕುಳದ ಕಳ ಕಳದಿ
ಹಿಳಿದುರಿವ ಹೆಬ್ಬಿದಿರ ಗಂಟಿನ
ಠಳಠಳತ್ಕಾರದಿ ದಿಶಾ ಮಂ
ಡಳದ ಮೂಲೆಗಳೊಡೆದುದದ್ಭುತವಾಯ್ತು ವನದಹನ ೫೭

ಅರಸ ಕೇಳ್ಮೈ ಮುನ್ನ ವಿತಳಕೆ
ಗರುಡ ಭಯವಾಯ್ತೆಂದು ತಕ್ಷಕ
ನಿರಿಸಿದನು ನಿಜಸುತನನಮರೇಶ್ವರನನುಜ್ಞೆಯಲಿ
ಇರಲಿರಲು ಸುತರಾದರಾತಂ
ಗುರಗ ವಂಶದೊಳಶ್ವಸೇನಗೆ
ಹಿರಿದು ಹೆಚ್ಚಿತು ತಕ್ಷಕನ ಸಂತತಿ ವನಾಂತದಲಿ ೫೮

ಆ ಮಹಾ ವನವಹ್ನಿ ಭೂತ
ಸ್ತೋಮ ಸಂಹೃತಿ ಕರ್ಮ ಶೌರ್ಯೋ
ದ್ದಾಮವವಗಾಹಿಸುತ ಬರುತಿರೆ ಮುಂದೆ ಜೋಣಿಯಲಿ
ಧೂಮವಿಳಿದುದು ಹುತ್ತಿನಲಿ ನಿ
ಸ್ಸೀಮ ಜನಿತ ಜ್ವಾಲೆಗಳ ಝಳ
ವಾ ಮಹೋರಗಚಯವ ಚುಂಬಿಸಿತರಸ ಕೇಳೆಂದ ೫೯

ಹೂಸಿ ಹುತ್ತಿನ ಮಣ್ಣ ರಂಧ್ರಿಸಿ
ಕಾಸಿದವು ಫಣಿಕುಲವ ಮೇಣ್ದೊ
ಳ್ಳಾಸದಲಿ ಡಾವರಿಸಿದವು ಕಿಡಿ ಧೂತಧೂಮದಲಿ
ಆಸುರದ ಕಬ್ಬೊಗೆಯ ಕವಚದ
ಕೇಸುರಿಗಳೊಳ ಬಿದ್ದುದುರಿ ಹೊರ
ಸೂಸಿ ಹಿಡಿದವು ಹಾವುಗಳ ಬಲು ಹೊದರ ಹೊರಳಿಗಳ ೬೦

ಹೆಡೆಯ ಮಣಿಗಳ ಕಂಡು ಸೂಸಿದ
ಕಿಡಿಗಳಹಹಾಯೆನುತ ಶಿರಗಳ
ಕೊಡಹಿ ಮರುಗಿದರುರಗಿಯರು ಮರಿಗಳಿಗೆ ಮೈಚಾಚಿ
ಕಡು ಹೊಗೆಯ ಕೇಸುರಿಯ ಕಿಡಿಗಳ
ಗಡಣದಲಿ ಕೌರೆದ್ದು ಮೈಗಳ
ಕೊಡಹಿ ಬಿಸುಸುಯ್ಯುತ್ತ ಮುಗ್ಗಿದವಹಿಗಳುರಿಯೊಳಗೆ ೬೧

ಹುದಿದುರಿವ ಹುತ್ತಿನಲಿ ಕೂಳ್ಗುದಿ
ಗುದಿದು ಸರ್ಪಸ್ತೋಮ ಮಧ್ಯದೊ
ಳೊದೆದು ಹಾಯಿದನಶ್ವಸೇನನು ಗಗನ ಮಂಡಲಕೆ
ಕೆದರಿದವು ಕೆಂಗಿಡಿಗಳುರಿಯು
ಬ್ಬಿದುದು ಘುಳುಘುಳು ರಭಸ ಮಿಗೆ ಹೆ
ಚ್ಚಿದುದು ತಬ್ಬಿದುದೀತನನು ತಡವರಿಸಿ ಗಗನದಲಿ ೬೨

ಉರಿಯ ಗಂಟಲನೊದೆದು ಫಣಿ ಮಿ
ಕ್ಕುರವಣಿಸೆ ಹಾಹಾ ಧನಂಜಯ
ಹರಿವುತಿದೆ ಹಾವೊಂದು ಹೋದುದು ಬಾಯ ತುತ್ತೆನಗೆ
ತರಿಸಿಕೊಡು ಶರವೇಧೆಯನು ವಿ
ಸ್ತರಿಸು ವಹಿಲದೊಳೆನಲು ವೈಶ್ವಾ
ನರನ ಮಾತಿಗೆ ನಗುತ ಕೊಂಡನು ವಿಜಯ ಗಾಂಡಿವವ ೬೩

ಆವ ಶರಸಂಧಾನವೋ ಗಗ
ನಾವಲಂಬಿಯು ಕೊರಳನೆಚ್ಚನು
ಪಾವಕನ ಮಧ್ಯದಲಿ ಬಿದ್ದುದು ಮುಂಡವಹಿಪತಿಯು
ಜೀವವುಳಿದುದು ಶಿರದೊಳಾತಂ
ಗಾ ವಿಗಡ ಫಣಿ ನುಡಿದುದೆಲೆ ಗಾಂ
ಡೀವಿ ಮರೆಯದಿರೆನ್ನ ಹಗೆಯಲಿ ಮರಣ ನಿನಗೆನುತ ೬೪

ಎಂದು ಗಗನದೊಳುಲಿದು ಫಣಿ ಶಿರ
ವಂದು ಪಾಯ್ದುದು ಧರೆಗೆ ರಾಧಾ
ನಂದನನ ಬತ್ತಳಿಕೆಯಲಿ ಶರವಾಗಿ ಜಗವರಿಯೆ
ಸಂದುದದು ಬಳಿಕಿತ್ತಲಿಂದ್ರನ
ನಂದನದ ಬೇಗೆಯಲಿ ಬದುಕಿತು
ಮಂದಪಾಲನ ಸುತಚತುಷ್ಟಯವರಸ ಕೇಳೆಂದ ೬೫

ಮೆಚ್ಚಿಸಿದವವು ವಹ್ನಿಸೂಕ್ತವ
ನುಚ್ಚರಿಸಿ ತಜ್ಜ್ವಲನ ಮುಖವನು
ಬಿಚ್ಚಿ ಬದುಕಿದವಾ ಮುನಿಯ ಸಂತಾನ ಪಕ್ಷಿಗಳು
ಹೆಚ್ಚಿದುರಿ ಹಬ್ಬುಗೆಯ ಹೊಯ್ಲಲಿ
ಬೆಚ್ಚಿ ಮಯನರ್ಜುನನ ಹೊಗಳಿದು
ಕಿಚ್ಚಿನಲಿ ಬದುಕಿದನು ಧರಣೀಪಾಲ ಕೇಳೆಂದ ೬೬

ಖಗ ಚತುಷ್ಟಯ ಮಯ ಸಹಿತವುರಿ
ಯುಗುಳಿತುಳಿದ ಸಮಸ್ತ ಭೂತಾ
ಳಿಗಳನಾಹುತಿಗೊಂಡನಗ್ನಿ ಧನಂಜಯಾಜ್ಞೆಯಲಿ
ಗಗನದಿಂದಿಳಿತಂದು ಸುರಪತಿ
ಮಗನ ಮನ್ನಿಸಿ ಕೊಟ್ಟನಗ್ಗದ
ಗಗನಮಣಿಗೆಣೆಯೆನಿಪ ಮಕುಟವನೊಲಿದು ಪಾರ್ಥಂಗೆ ೬೭

ಹರಿಗೆ ವಂದಿಸಿ ಮಗನನೊಲಿದಾ
ದರಿಸಿ ಮರಳಿದನಿಂದ್ರನಿತ್ತಲು
ಭರದಿನಿವರೈತಂದರಿಂದ್ರಪ್ರಸ್ಥ ಪುರವರಕೆ
ಧರಣಿಪತಿಗಾ ಖಾಂಡವದ ದ
ಳ್ಳುರಿಯ ಹೋಮದ ಹೊಸ ಕಥೆಯ ವಿ
ಸ್ತರಿಸಿ ಹೇಳಿದನಸುರರಿಪು ಭೀಮಾದಿಗಳು ನಲಿಯೆ ೬೮

ಧಾರುಣೀಶ್ವರರೈವರನು ಸುಕು
ಮಾರ ವರ್ಗವನಾ ಸುಭದ್ರಾ
ನಾರಿಯನು ಪಾಂಚಾಲೆಯನು ತತ್ಸಕಲ ಬಾಂಧವರ
ಸೂರಿಗಳ ಸಚಿವಾದಿ ನೃಪ ಪರಿ
ವಾರವನು ಪತಿಕರಿಸಿ ಬಂದನು
ದೋರಕಿಗೆ ಹರುಷದಲಿ ಗದುಗಿನ ವೀರನಾರಯಣ ೬೯

ಇತಿ ಶ್ರೀಮದಚಿಂತ್ಯಮಹಿಮ ಗದುಗು ವೀರನಾರಾಯಣ ಚರಣಾರವಿಂದ
ಮಕರಂದ ಮಧುಪಾನ ಪುಷ್ಟವಚಃ ಷಟ್ಪದೀ ನಿಕಾಯ
ಶ್ರೀಮತ್ಕುಮಾರವ್ಯಾಸ ಯೋಗೀಂದ್ರ ವಿರಚಿತಮಪ್ಪ
ಕರ್ಣಾಟ ಭಾರತ ಕಥಾಮಂಜರಿಯೊಳ್
ಆದಿಪರ್ವ ಸಮಾಪ್ತಮಾದುದು

# ಸಭಾಪರ್ವ

## ಮೊದಲನೆಯ ಸಂಧಿ

ಸೂ. ಸಭೆಯೊಳೋಲಗದೊಳು ವಿರಿಂಚಿ
ಪ್ರಭವನನುಮತದಿಂದ ಧರಣೀ
ವಿಭು ಮಹಾಕ್ರತು ರಾಜಸೂಯವನೊಲಿದು ಕೈಕೊಂಡ

ಕೇಳು ಜನಮೇಜಯ ಧರಿತ್ರೀ
ಪಾಲ ಖಾಂಡವ ವನದ ವಹ್ನಿ
ಜ್ವಾಲೆ ತೆಗೆದುದು ಕೂಡೆ ಹೊಗೆದುದು ಹೊದರ ಹೊಸಮೆಳೆಯ
ಮೇಲುಗಾಳಗದುಬ್ಬಿನಲಿ ಸಿರಿ
ಲೋಲ ಸಹಿತರ್ಜುನನು ವಿಕ್ರಮ
ದೇಳಿಗೆಯ ಪರಿತೋಷದಲಿ ತಿರುಗಿದನು ಪಟ್ಟಣಕೆ ೧

ದೂತರೈದಿದರಿವರ ಸೂರೆಯ
ಕೈತವಕಿಗರು ಕೃತಕ ವಾರ್ತಾ
ಭೀತಪುರಜನ ಮುಖದ ದುಗುಡದ ದಡ್ಡಿಗಳನುಗಿದು
ಬೀತುದಿಂದ್ರನ ಬಲುಹು ವಿಗಡನ
ವೀತಿಹೋತ್ರನ ವಿಲಗ ತಿದ್ದಿ ವಿ
ಧೂತರಿಪುಬಲ ಬಂದನಿದೆಯೆಂದರು ಮಹೀಪತಿಗೆ ೨

ಹೂತುದರಸನ ಹರುಷಲತೆ ಪುರು
ಹೂತ ವಿಜಯದ ವಿಜಯ ವಾರ್ತಾ
ಶ್ರೋತ್ರ ಸುಖಸಂಪ್ರೀತಿ ನಯನ ಜಲಾಭಿಷೇಕದಲಿ
ಮಾತು ಹಿಂಚಿತು ಮುಂಚಿದುದು ನಯ
ನಾತಿಥಿವ್ರಜ ಮುಸುಕಿತಸುರ ವಿ
ಘಾತಿ ಪಾರ್ಥನನನಿಲಸುತ ನಕುಲಾದಿ ಬಾಂಧವರ ೩

ತಳಿತ ಗುಡಿಗಳು ಸಾಲ ಕಲಶದ
ನಿಳಯ ನಿಳಯದ ಬೀದಿ ಬೀದಿಯ
ತಳಿರ ದೋರಣದೋರಣದ ನವ ಮಕರತೋರಣದ
ತಳಿಗೆ ತಂಬುಲದಾರತಿಯ ಮಂ
ಗಳಿತ ರಭಸದೊಳಖಿಳ ರಾಜಾ
ವಳಿಗಳೊಸಗೆಯೊಳಿವರು ಹೊಕ್ಕರು ರಾಜಮಂದಿರವ ೪

ಹಿರಿಯರಂಘ್ರಿದ್ವಯಕೆ ಮಣಿದರು
ಕಿರಿಯರುಚಿತ ಕ್ಷೇಮ ಕುಶಲದಿ
ಪರಿ ರಚಿತ ಪರಿರಂಭ ಮಧುರ ವಚೋ ವಿಳಾಸದಲಿ
ಅರಸನಿವರನು ಮನ್ನಿಸಿದನಾ
ದರಿಸಿತನ್ಯೋನ್ಯಾನುರಾಗ
ಸ್ಫುರಿತ ತೇಜೋಭಾವ ವಿಭ್ರಮ ಭೂಪತಿವ್ರಾತ ೫

ಅರಸ ಕೇಳೈ ಬಳಿಕ ಹರಿ ನಿಜ
ಪುರಕೆ ಬಿಜಯಂಗೆಯ್ವ ವಾರ್ತೆಯ
ನೊರೆದನವನೀಪತಿಗೆ ಭೀಮ ಧನಂಜಯಾದ್ಯರಿಗೆ
ಅರಸಿಯರಿಗಭಿಮನ್ಯು ಧರ್ಮಜ
ನರ ವೃಕೋದರಸೂನು ಮೊದಲಾ
ಗಿರೆ ಸಮಸ್ತಜನಂಗಳನು ಮನ್ನಿಸಿದನುಚಿತದಲಿ ೬

ವರಮುಹೂರ್ತದೊಳಮೃತ ಯೋಗೋ
ತ್ಕರ ಶುಭಗ್ರಹ ದೃಷ್ಟಿಯಲಿ ಹಿಮ
ಕರ ಶುಭಾವಸ್ಥೆಯಲಿ ಕೇಂದ್ರಸ್ಥಾನ ಗುರುವಿನಲಿ
ಧರಣಿಸುರರಾಶೀರ್ವಚನ ವಿ
ಸ್ತರಣ ದಧಿ ದೂರ್ವಾಕ್ಷತೆಗಳು
ಬ್ಬರದ ವಾದ್ಯ ಗಡಾವಣೆಯಲಸುರಾರಿ ಹೊರವಂಟ ೭

ಕರಯುಗದ ಚಮ್ಮಟಿಕೆ ವಾಘೆಯ
ಲರಸ ರಥವೇರಿದನು ಮುಕ್ತಾ
ಭರದ ಭಾರದ ಸತ್ತಿಗೆಯ ಪಲ್ಲವಿಸಿದನು ಭೀಮ
ಹರಿಯುಭಯ ಪಾರ್ಶ್ವದಲಿ ಸಿತ ಚಾ
ಮರವ ಚಿಮ್ಮಿದನರ್ಜುನನು ಬಂ
ಧುರದ ಹಡಪದ ಹೆಗಲಲೈದಿದರರ್ಜುನಾನುಜರು ೮

ಪೌರಜನ ಪುರಜನ ನೃಪಾಲ ಕು
ಮಾರ ಸಚಿವ ಪಸಾಯ್ತ ಭಟ ಪರಿ
ವಾರ ಧೌಮ್ಯಪ್ರಮುಖ ಸೂರಿ ಸಮಾಜರೊಗ್ಗಿನಲಿ
ತೇರ ಬಳಿವಿಡಿದೈದಿದರು ಮುರ
ವೈರಿ ವಿರಹ ವಿಧೂತ ವದನಾಂ
ಭೋರುಹರ ಸಂತೈಸಿ ಬೀಳ್ಕೊಟ್ಟನು ಕೃಪಾಜಲಧಿ ೯

ಅರಿನೃಪರು ಕುಹಕಿಗಳು ನೀವೇ
ಸರಸ ಹೃದಯರಧರ್ಮಶೀಲರು
ಪರರು ನೀವತಿ ಧರ್ಮನಿಷ್ಠರು ಹಾನಿಯುಂಟದಕೆ
ಅರಸನಾರೋಗಣೆ ವಿಹಾರದೊ
ಳಿರುಳು ಹಗಲು ಮೃಗವ್ಯಸನದೆ
ಚ್ಚರಿನೊಳಿಹುದೆಂದನಿಬರನು ಬೀಳ್ಕೊಟ್ಟನಸುರಾರಿ ೧೦

ನಾಲಗೆಗಳಸುರಾರಿ ಗುಣ ನಾ
ಮಾಳಿಯಲಿ ತುರುಗಿದವು ಕಂಗಳು
ನೀಲಮೇಘಶ್ಯಾಮನಲಿ ಬೆಚ್ಚವು ವಿಹಾರದಲಿ
ಬಾಲಕೇಳೀ ಕಥನ ಸುಧೆಯೊಳ
ಗಾಳಿ ಮುಳುಗುತ ಕಳುಹುತನಿಬರು
ಸಾಲಭಂಜಿಕೆಯಂದವಾದರು ಕೃಷ್ಣ ವಿರಹದಲಿ ೧೧

ಕಳುಹಿ ಕಂಗಳು ಮರಳಿದವು ಮನ
ಕಳುಹದಾ ದ್ವಾರಾವತಿಗೆ ಮಂ
ಗಳ ಮಹೋತ್ಸವದೊಸಗೆ ನುಡಿಯಲಿ ಹೊಕ್ಕನಸುರಾರಿ
ಬಳಿಕಿವರು ನಿಜ ರಾಜಭವನ
ಸ್ಥಳಕೆ ಬಂದರು ಸೌಮನಸ್ಯದ
ಲೀಳೆಯ ಪಾಲಿಸುತಿರ್ದರವನೀಪಾಲ ಕೇಳೆಂದ ೧೨

ಮುರಹರನ ನೇಮದಲಿ ಮಯ ವಿ
ಸ್ತರಿಸಿದನು ಪದಿನಾಲ್ಕು ತಿಂಗಳು
ವರ ಸಭಾಮಂಟಪವನನಿಬರಿಗಿವ ಕೃತಜ್ಞನಲೆ
ಕಿರಣ ಲಹರಿಯ ವಿವಿಧ ರತ್ನೋ
ತ್ಕರದ ರಚನಾಶಿಲ್ಪವಿದು ದೇ
ವರಿಗಸಾಧ್ಯವು ಶಿವಶಿವಾಯೆನೆ ಮೆರೆದುದಾಸ್ಥಾನ ೧೩

ಹತ್ತು ಸಾವಿರ ಕೈ ಪ್ರಮಾಣದ
ಸುತ್ತುವಳಯದ ಮಣಿಯ ಶಿಲೆಗಳ
ತತ್ತವಣೆಗಳ ತೆಕ್ಕೆವೆಳಗಿನ ಲಳಿಯ ಲಹರಿಗಳ
ಸುತ್ತುವಳಯದ ಪದ್ಮರಾಗದ
ಭಿತ್ತಿಗಳ ವೈಡೂರ್ಯ ಶಿಲೆಗಳ
ಮತ್ತವಾರಣ ವರ ವಿಧಾನದಲೆಸೆದುದಾಸ್ಥಾನ ೧೪

ಕರೆಸಿದನು ಮಯನೆಂಟು ಸಾವಿರ
ಸರಿಗ ರಕ್ಕಸ ಕಿಂಕರರ ನಿಜ
ಶಿರದೊಳಾಂತರು ತಂದರಿಂದ್ರಪ್ರಸ್ಥ ಪುರವರಕೆ
ಅರಸ ಕಾಣಿಸಿಕೊಂಡನದನಾ
ದರಿಸಿದನು ಭೀಮಂಗೆ ಭಾರಿಯ
ವರ ಗದಾದಂಡವನು ಕಾಣಿಕೆಯಿತ್ತು ಪೊಡವಂಟ ೧೫

ಇದು ಪುರಾತನ ಸಗರ ವಂಶಾ
ಭ್ಯುದಯ ದುರ್ಜಯ ಯೌವನಾಶ್ವನ
ಗದೆ ಕೃತಾಂತನ ಕರದ ದಂಡವನಂಡಲೆವ ಬಲದ
ಮದದಲೊಪ್ಪುವುದೆನುತ ಮಯನತಿ
ಮುದದಿ ಬಳಿಕಾ ದೇವದತ್ತಾ
ಖ್ಯದ ಮಹಾ ಶಂಖವನು ಪಾರ್ಥಗೆ ಕೊಟ್ಟು ಕೈಮುಗಿದ ೧೬

ಒಸಗೆ ಮೆರೆದುದು ಮಯನ ಮಿಗೆ ಮ
ನ್ನಿಸಿದನವನಿಪನಂಗಚಿತ್ತದೊ
ಳಸುರ ಕಿಂಕರರನಿಬರನು ಸನ್ಮಾನ ದಾನದಲಿ
ಒಸೆದು ಕಳುಹಿದನಾತನನು ದೆಸೆ
ದೆಸೆಯ ಯಾಚಕ ನಿಕರ ನೂಕಿತು
ಮುಸುಕಿತೈ ಧರ್ಮಜನ ಕೀರ್ತಿಯ ಝಾಡಿ ಮೂಜಗವ ೧೭

ದಿವಸ ದಿವಸದೊಳುಂಡುದವನೀ
ದಿವಿಜ ಸಂತತಿ ಹತ್ತು ಸಾವಿರ
ಪವರನೇನೆಂದೆಣಿಸುವೆನು ಮಾರ್ಗಣ ಮಹೋದಧಿಯ
ವಿವಿಧ ರತ್ನಾಭರಣ ಕಾಂಚನ
ನವ ದುಕೂಲದ ದಿಂಡಿನಲಿ ಬುಧ
ನಿವಹ ದಣಿದುದನಂತ ಕೃಪಣಾನಾಥ ಜನಸಹಿತ ೧೮

ಆ ಮಹೋತ್ಸವವೇಳು ದಿನವಭಿ
ರಾಮರಂಜಿತವಾಯ್ತು ಶುಭದಿನ
ರಾಮಣೀಯಕ ಲಗ್ನದಲಿ ಹೊಕ್ಕನು ಮಹಾಸಭೆಯ
ಭೂಮಿಪಾಲರನಂತ ಸುಜನ
ಸ್ತೋಮವನುಜರಮರ್ತ್ಯರೆನಿಪ ಸ
ನಾಮರಿದ್ದರು ರಾಯನೆಡ ಬಲವಂಕದಿದಿರಿನಲಿ ೧೯

ಹೊಳೆ ಹೊಳೆದುದಾಸ್ಥಾನ ಕಾಂತಾ
ವಳಿಯ ಕಂಗಳ ಬೆಳಕಿನಲಿ ತನಿ
ಮುಳುಗಿತೋಲಗ ಲಲಿತರಸ ಲಾವಣ್ಯಲಹರಿಯಲಿ
ವಿಲಸದಖಿಳಾಭರಣ ರತ್ನಾ
ವಳಿಯ ರಶ್ಮಿಯಲಡಿಗಡಿಗೆ ಪ್ರ
ಜ್ವಲಿಸಿತಾ ಸಭೆ ದೀಪ್ತಿಮಯ ವಿವಿಧಾನುಭಾವದಲಿ ೨೦

ಮೇಳದಲಿ ಗಂಧರ್ವರಿಪ್ಪ
ತ್ತೇಳು ತುಂಬುರ ಸಹಿತ ಶುದ್ಧದ
ಸಾಳಗದ ಸಂಕೀರ್ಣ ದೇಶಿಯ ವಿವಿಧ ರಚನೆಗಳ
ಬಾಳೆಯರ ಸುರಗಣಿಕೆಯರ ಮುಖ
ಚಾಳೆಯರ ಸಂಗೀತ ತಾಳದ
ತೂಳುವರೆ ತುಂಬಿದುದು ಕುಸುಮಾಯುಧನ ಕಳವಳವ ೨೧

ಆ ಮಹಾಸಭೆಯಲಿ ಯುಧಿಷ್ಠಿರ
ಭೂಮಿಪತಿ ದೂರದಲಿ ಕಂಡನು
ತಾಮರಸದಳ ನಯನ ಸಂನಿಭ ಭಾವ ಭಾವಿತನ
ಹಾ ಮಹಾದೇವೆತ್ತಣದುಭುತ
ಧಾಮವಿದು ದಿನಮಣಿಯ ತೇಜ
ಸ್ತೋಮವೆರಡರ ಧಾತುಯೆನುತೀಕ್ಷಿಸಿದರಾ ದೆಸೆಯ ೨೨

ಲಲಿತತೇಜಃಪುಂಜ ಮಿಗೆ ಥಳ
ಥಳಿಸಿತತಿ ದೂರದಲಿ ಬೆಳಗಿನ
ಗೊಳಸನುಡಿದಂತಾದುದಾಗಳೆ ತೋರಿತಾಕಾರ
ತಳಿತುದವಯವ ಶುದ್ಧವರ್ಣ
ಸ್ಥಳವು ನಿಮಿಷಕೆ ಮುನಿವರಾಕೃತಿ
ಹೊಳೆದುದಾಕ್ಷಣವೀತ ನಾರದನೆಂದುದಖಿಳಜನ ೨೩

ದಣಿಯದಾತನ ಬೆರಳು ನಾರಾ
ಯಣ ರವದ ವೀಣೆಯಲಿ ಹೃದಯಾಂ
ಗಣದ ಸೀಮೆಗೆ ಬಿಡಯವಾಗದು ಕೃಷ್ಣಪದ ಕೇಳಿ
ಪ್ರಣವರೂಪದ ಭಾವಶುದ್ಧಿಯ
ಕಣೆ ಮುರಾರಿಯ ತನ್ಮಯದ ನಿ
ರ್ಗುಣ ಮುನೀಶ್ವರನಿಳಿದನಿಂದ್ರಪ್ರಸ್ಥ ಪುರವರಕೆ ೨೪

ಬಂದನರಮನೆಗಾ ಮುನಿಯನಭಿ
ವಂದಿಸಿದುದಾಸ್ಥಾನವಿದಿರಲಿ
ನಿಂದು ಬಿಜಯಂಗೈಸಿ ತಂದರು ಸಿಂಹವಿಷ್ಟರಕೆ
ಸಂದ ಮಧುಪರ್ಕಾದಿ ಸತ್ಕೃತಿ
ಯಿಂದ ಪೂಜಿಸಿ ವಿನಯ ಮಿಗೆ ನಗು
ತೆಂದನವನೀಪಾಲನುಚಿತೋಕ್ತಿಯಲಿ ನಾರದನ ೨೫

ಕುಶಲವೇ ನಿಮ್ಮಂಘ್ರಿಗಳಿಗಿಂ
ದೊಸಗೆಯಾಯಿತು ನಮಗೆ ದರುಶನ
ವಸಮ ಸಂಸ್ಕೃತಿ ವಹ್ನಿದಗ್ಧರಿಗಮೃತ ವರ್ಷವಲೆ
ಪಶುಪತಿಯ ಪರಮೇಷ್ಠಿಯಾ ಮುರ
ದ್ವಿಷನ ಸಾಮರ್ಥ್ಯದ ಸಗಾಢದ
ದೆಸಕ ನಿಮಗುಂಟೆಂದು ಕೊಂಡಾಡಿದನು ನಾರದನ ೨೬

ಕುಶಲವೆಮಗಿಂದ್ಯೆದೆ ನೀನೀ
ವಸುಮತೀವಧುಗೊಳ್ಳಿದನೆ ಶೋ
ಭಿಸುವುದೇ ಭವದಾಜ್ಞೆಯಲಿ ವರ್ಣಾಶ್ರಮಾಚಾರ
ದೆಸೆ ದೆಸೆಗಳಮಳಾಗ್ನಿ ಹೋತ್ರ
ಪ್ರಸರಧೂಮಧ್ವಜಗಳೇ ನಿಂ
ದಿಸರಲೇ ದುರ್ಜನರು ಸುಜನರನೆಂದನಾ ಮುನಿಪ ೨೭

ಅರ್ಥದಿಂ ಧರ್ಮವನು ಧರ್ಮದಿ
ನರ್ಥವನು ಧರ್ಮಾರ್ಥವೆರಡನು
ವ್ಯರ್ಥಕಾಮದಲಳಿಯಲೇ ರಾಜ್ಯಾಭಿಲಾಷೆಯಲಿ
ಅರ್ಥಸಾಧನ ಧರ್ಮಸಾಧನ
ವರ್ಥ ಧರ್ಮದಲುಭಯ ಲೋಕಕ
ನರ್ಥ ಸಾಧನ ಕಾಮವೆಂದನು ಮುನಿ ನೃಪಾಲಂಗೆ ೨೮

ಮಾನ್ಯರನು ಧಿಕ್ಕರಿಸೆಯೆಲೆಯುವ
ಮಾನ್ಯರನು ಮನ್ನಿಸೆಯಲೇ ಸಂ
ಮಾನ್ಯರನು ಸತ್ಕರಿಸುವಾ ಹಳಿವಾ ವಿಕಾರಿಗಳ
ಅನ್ಯರನು ನಿನ್ನವರ ಮಾಡಿಯ
ನನ್ಯರನು ಬಾಹಿರರ ಮಾಡಿವ
ದಾನ್ಯರನು ನಿಗ್ರಹಿಸೆಯೆಲೆ ಭೂಪಾಲ ಕೇಳೆಂದ ೨೯

ಖಳರ ಖಂಡಿಸುವಾ ಮದ ವ್ಯಾ
ಕುಲರ ದಂಡಿಸುವಾ ದರಿದ್ರರ
ನೊಲಿದು ರಕ್ಷಿಸುವಾ ಸುಮಾಯಾವಿಗಳ ಶಿಕ್ಷಿಸುವ
ಕುಲಯುತರ ಕೊಂಡಾಡುವಾ ರಿಪು
ಬಲದ ತಲೆ ಚೆಂಡಾಡುವಾ ದು
ರ್ಬಲರನತಿ ಬಾಧಿಸೆಯಲೇ ಭೂಪಾಲ ಕೇಳೆಂದ ೩೦

ಜಾತಿ ಸಂಕರವಿಲ್ಲಲೇ ಜನ
ಜಾತದಲಿ ಹೀನೋತ್ತಮರು ನಿ
ರ್ಣೀತರೇ ನಿಜಮಾರ್ಗದಲಿ ಕುಲವಿಹಿತ ಧರ್ಮದಲಿ
ಖ್ಯಾತರೇ ಸತ್ಪುರುಷರಧಿಕ
ದ್ಯೂತ ಕೇಳಿಗಳಿಲ್ಲಲೇ ಮೃಗ
ಯಾತಿರೇಕವ್ಯಸನ ಕಿರಿದೇ ರಾಯ ನಿನಗೆಂದ ೩೧

ಗಸಣಿಯಿಲ್ಲಲೆ ನಿನಗೆ ಸಪ್ತ
ವ್ಯಸನದಲಿ ನಿನ್ನನುಜ ತನುಜರ
ಮುಸುಡಧರ್ಮದಲಿರದಲೇ ವೈದಿಕ ವಿಧಾನದಲಿ
ಸಸಿನವೇ ನಿನ್ನರಿತ ಖಳರಿಗೆ
ಹುಸಿಕರಿಗೆ ಡಂಬಕರಿಗಜ್ಞರಿ
ಗುಸುರುವಾ ನಿನ್ನಂತರಂಗವನೆಂದನಾ ಮುನಿಪ ೩೨

ಹುರುಡಿಗರನೇಕಾಂತದೊಳಗಾ
ದರಿಸುವರು ಭೇದಕರ ಬುದ್ಧಿಗೆ
ತೆರಹುಗೊಡುವರು ಕುಟಿಲರಿಗೆ ವಿಶ್ವಾಸ ಹೀನರಿಗೆ
ಮರುಳುಗೊಂಬರು ಖೂಳರಿಗೆ ಭಂ
ಡರಿಗೆ ತೆರುವರು ಧನವನೀ ಧರೆ
ಯರಸುಗಳಿಗಿದು ಸಹಜ ನಿನ್ನಂತಸ್ಥವೇನೆಂದ ೩೩

ಒಳಗೆ ಕುಜನರು ಹೊರಗೆ ಧರಣೀ
ವಳೆಯ ಮಾನ್ಯರು ಛತ್ರ ಚಮರದ
ನೆಳಲು ಖೂಳರಿಗಾತಪದ ಬಲುಬೇಗೆ ಬುಧಜನಕೆ
ಒಳಗೆ ರಾಜದ್ರೋಹಿಗಳು ಹೊರ
ವಳಯದಲಿ ಪತಿಕಾರ್ಯ ನಿಷ್ಠರು
ಬಳಸಿಹುದು ನೃಪಚರಿತ ನಿನ್ನಂತಸ್ಥವೇನೆಂದ ೩೪

ಖೂಳರೊಡನೆ ವಿನೋದ ಭಂಡರೊ
ಳಾಳಿ ಸ್ವಾಮಿದ್ರೋಹರೊಡನೆ ಸ
ಮೇಳ ನಂಬುಗೆ ಡಂಭರೊಡನೆ ವಿಕಾರಿಯೊಡನಾಟ
ಸೂಳೆಯರು ಸಮಜೀವಿಗಳು ಕುಲ
ಬಾಲಕಿಯರೋಗಡಿಕೆಯವರು ನೃ
ಪಾಲ ಜನಕಿದು ಸಹಜ ನಿನ್ನಂತಸ್ಥವೇನೆಂದ ೩೫

ಆರು ಗುಣದೊಳುಪಾಯ ನಾಲ್ಕರೊ
ಳೇರಿಹುದೆ ಮನ ರಾಜಧರ್ಮದ
ಮೂರು ವರ್ಗದೊಳೆಚ್ಚರುಂಟೇ ನಯವಿಧಾನದಲಿ
ಮೂರು ಶಕ್ತಿಗಳೊಳಗೆ ಮನ ಬೇ
ರೂರಿಹುದೆ ಸಪ್ತಾಂಗದಲಿ ಮೈ
ದೋರಿಹೈ ಬೇಸರೆಯೆಲೇ ಭೂಪಾಲ ನೀನೆಂದ ೩೬

ಪ್ರಜೆಗಳನುರಾಗಿಗಳೆ ಸುಭಟ
ವ್ರಜಕೆ ಜೀವಿತ ಸಂದಿಹುದೆ ವರ
ಸುಜನರಿಗೆ ಸಂತೋಷವೇ ಮಧುರೋಕ್ತಿ ರಚನೆಯಲಿ
ವಿಜಯ ಭೀಮರು ಯಮಳರಿವರ
ಗ್ರಜರೊಳನುಜರಭಿನ್ನರೇ ಗಜ
ಬಜಿಕೆಯಂತಃಪುರದೊಳಿಲ್ಲಲೆ ರಾಯ ಕೇಳೆಂದ ೩೭

ವಿಹಿತ ಕಾಲದ ಮೇಲೆ ಸಂಧಿಯ
ನಹಿತರೊಳು ವಿರಚಿಸುವ ಮೇಣ್ವಿ
ಗ್ರಹದ ಕಾಲಕೆ ವಿಗಡಿಸುವುದೆಂಬರಸು ನೀತಿಯಲಿ
ವಿಹಿತವೇ ಮತಿ ವೈರಿ ರಾಯರ
ವಿಹರಣವನವರಾಳು ಕುದುರೆಯ
ಬಹಳತೆಯನಲ್ಪತೆಯನರಿವೈ ರಾಯ ನೀನೆಂದ ೩೮

ಒಂದರಾಯಕೆ ಬೀಯ ಸರಿ ಮ
ತ್ತೊಂದು ಕಡೆಯಲಿ ಹೀನ ಫಲವಿ
ನ್ನೊಂದು ಕಾರ್ಯದುಪೇಕ್ಷತೆಗೆ ಮೊದಲಿಲ್ಲ ಕಡೆಯಿಲ್ಲ
ಒಂದು ದುರ್ಘಟ ದೈವ ಸಾಧಿತ
ವೊಂದು ಶಂಕಿತ ಫಲವನಿಪ್ಪವ
ಹಿಂದುಗಳಿವೈ ಮಂತ್ರದಲಿ ಭೂಪಾಲ ಕೇಳೆಂದ ೩೯

ನೆನೆದ ಮಂತ್ರವ ನಿನ್ನೊಳಾಲೋ
ಚನೆಯ ನಿಶ್ಚಯವಿಲ್ಲದಿರಲೊ
ಬ್ಬನಲಿ ಮೇಣ್ ಹಲಬರಲಿ ಜಡರಲಿ ಮತಿ ವಿಹೀನರಲಿ
ಮನ ಬರಡರಲಿ ಸಲೆ ವಿಧಾವಂ
ತನಲಿ ಮಂತ್ರಾಲೋಚನೆಯ ಸಂ
ಜನಿಸಿ ಹರಹಿನೊಳಳಿಯಲೇ ಭೂಪಾಲ ಕೇಳೆಂದ ೪೦

ಕಿರಿದುಪೇಕ್ಷೆಯ ಬಹಳ ಫಲವನು
ಹೊರೆವುದಿದು ಮೇಣಲ್ಪ ಭೇದಕೆ
ಮುರಿವುದಿದು ವಿಕ್ರಮಕೆ ವಶವಿದು ನೀತಿಸಾಧ್ಯವಿದು
ಹರಿವುದಿದು ನಯ ಶಕ್ತಿಗೆಂಬುದ
ನರಿದು ನಡೆವೈ ರಾಜಧರ್ಮದ
ಹೊರಿಗೆಯನು ಮರೆದಿರೆಯೆಲೇ ಭೂಪಾಲ ಕೇಳೆಂದ ೪೧

ಪರರು ಮಾಡಿದ ಸದ್ಗುಣಂಗಳ
ಮರೆಯೆಯಲೆ ಪರರವಗುಣಂಗಳ
ಮರೆದು ಕಳೆವಾ ಮಾನ್ಯರಿಗೆ ನೀ ಮಾಡಿದವಗುಣವ
ಮೆರೆಯೆಯಲೆ ನೀ ಮಾಡಿದುಚಿತವ
ಮರೆದು ಕಳೆವಾಚಾರವಿದು ಸ
ತ್ಪುರುಷರಭಿಮತವಿದು ಕಣಾ ಭೂಪಾಲ ಕೇಳೆಂದ ೪೨

ಭಜಿಸುವಾ ಭಕ್ತಿಯಲಿ ದೈವ
ದ್ವಿಜ ಗುರುಸ್ಥಾನವನು ದೇಶ
ಪ್ರಜೆಯನರ್ಥಾಗಮದ ಗಡಣೆಗೆ ಘಾಸಿ ಮಾಡೆಯಲೆ
ಕುಜನರಭಿಮತದುಗ್ರ ದಂಡ
ವ್ಯಜನದಲಿ ಜನ ಜಠರ ವಹ್ನಿಯ
ಸೃಜಿಸೆಯಲೆ ಭವದೀಯ ರಾಜ್ಯಸ್ಥಿತಿಯ ಹೇಳೆಂದ ೪೩

ಆಣೆಗಪಜಯವಿಲ್ಲಲೇ ಕೀ
ಳಾಣೆ ಟಂಕದೊಳಿಲ್ಲಲೇ ನಿ
ತ್ರಾಣದಲಿ ಸಂಗರವ ಹೊಗೆಯಲೆ ಶೌರ್ಯ ಗರ್ವದಲಿ
ವಾಣೆಯುವನುಚಿತದಲಿ ಧರ್ಮದ
ಲೂಣೆಯುವನಹಿತರಲುಪೇಕ್ಷೆಯ
ಕೇಣವನು ದಾನದಲಿ ಮಾಡೆಲೆ ರಾಯ ಕೇಳೆಂದ ೪೪

ಕಳವು ಪುಸಿ ಹಾದರ ವಿರೋಧ
ಸ್ಖಲಿತವಾರಡಿಬಂದಿ ದಳವುಳ
ಬೆಳಗವಿತೆಯನ್ಯಾಯ ಪರಿಭವ ತಕ್ಕು ಡೊಳ್ಳಾಸ
ಪಳಿವು ವಂಚನೆ ಜಾತಿ ಸಂಕರ
ಕೊಲೆ ವಿರೋಧವು ವಿಕೃತ ಮಾಯಾ
ವಳಿಗಳೆಂಬಿವು ನಿನ್ನೊಳಿಲ್ಲಲೆ ರಾಯ ಕೇಳೆಂದ ೪೫

ರಣಮುಖದೊಳಂಗನೆಯಲಾರೋ
ಗಣೆಯಲರಿಗಳ ಕೊಟದಲಿ ವಾ
ರಣ ತುರಗದೇರಾಟದಲಿ ವಿವಿಧಾಯುಧಂಗಳಲಿ
ಎಣೆ ನೃಪರ ಸೋಂಕಿನಲಿ ಸೆಜ್ಜೆಯ
ಲಣೆಯ ಮಜ್ಜನದಲಿ ಮಹಾಮೃಗ
ಗಣನೆಯೊಳಗೆಚ್ಚರಿಕೆಯುಂಟೇ ರಾಯ ನಿನಗೆಂದ ೪೬

ನುಡಿದೆರಡನಾಡದಿರು ಕಾರ್ಯವ
ಬಿಡದಿರಾವನೊಳಾದರೆಯು ನಗೆ
ನುಡಿಯ ಕುಂದದಿರೊಡೆಯುದಿರು ಹೃದಯವನು ಕಪಟದಲಿ
ಬಡ ಮನವ ಮಾಡದಿರು ಮಾರ್ಗದೊ
ಳಡಿಯಿಡದಿರನುಜಾತ್ಮಜರೊಳೊ
ಗ್ಗೊಡೆಯದಿರು ನೃಪನೀತಿಯಿದು ಭೂಪಾಲ ಕೇಳೆಂದ ೪೭

ನೀತಿವಿಡಿದರಸಂಗೆ ಬಹಳ
ಖ್ಯಾತವದು ಜನರಾಗ ರಾಗ
ವ್ರಾತದಿಂ ಧನ ಧನದಿ ಪರಿಕರ ಪರಿಕರದಿ ಜಯವು
ಆತ ಜಯದಿಂ ಧರ್ಮ ಧರ್ಮ ಸ
ಮೇತದಿಂ ಸುರತುಷ್ಟಿ ತುಷ್ಟಿಯ
ನೀತಿಯಿಂದಿಹಪರವ ಗೆಲುವೈ ರಾಯ ನೀನೆಂದ ೪೮

ಮಂತ್ರವುಳ್ಳವನವನೆ ಹಿರಿಯನು
ಮಂತ್ರವುಳ್ಳವನವನೆ ರಾಯನು
ಮಂತ್ರವುಳ್ಳವನವನೆ ಸಚಿವ ನಿಯೋಗಿಯೆನಿಸುವನು
ಮಂತ್ರವಿಲ್ಲದ ಬರಿಯ ಬಲು ತಳ
ತಂತ್ರದಲಿ ಫಲವಿಲ್ಲವೈ ಸ್ವಾ
ತಂತ್ರ್ಯವೆನಿಸಲ್ಕರಿವುದೇ ಭೂಪಾಲ ಕೇಳೆಂದ ೪೯

ಸತ್ಯವುಳ್ಳರೆ ಧರಣಿ ಸಾರುಗು
ಸತ್ಯವುಳ್ಳರೆ ಪದವಿ ಸಾರುಗು
ಸತ್ಯವುಳ್ಳರೆ ಸಕಲರಾಜ್ಯದ ವೀರಸಿರಿ ಸಾರ್ಗು
ಸತ್ಯವೇ ಬೇಹುದು ನೃಪರಿಗಾ
ಸತ್ಯ ಭುಜಬಲಗೂಡಿ ಮಂತ್ರದ
ಸತ್ಯವೇ ಸತ್ವಾಧಿಕವು ಭೂಪಾಲ ಕೇಳೆಂದ ೫೦

ಮೇಲನರಿಯದ ನೃಪನ ಬಾಳಿಕೆ
ಗಾಳಿಗೊಡ್ಡಿದ ಸೊಡರು ನೀರದ
ಜಾಲದೊಡ್ಡಣೆ ಸುರಧನುವಿನಾಕಾರ ಶವಮುಡಿಗೆ
ಬಾಳಿಗೌಕಿದ ಕೊರಳು ಭುಜಗನ
ಹೇಳಿಗೆಯಲಿಕ್ಕಿದ ಕರವು ಬೆ
ಳ್ಳಾರ ಹಬ್ಬುಗೆಯವನ ಸಿರಿ ಭೂಪಾಲ ಕೇಳೆಂದ ೫೧

ಆಯವಿಲ್ಲದ ಬೀಯವನು ಪೂ
ರಾಯವಿಲ್ಲದ ಗಾಯವನು ನಿ
ರ್ದಾಯವಿಲ್ಲದ ಮಂತ್ರವನು ಲೇಸಾಗಿ ಮಿಗೆ ರಚಿಸಿ
ನ್ಯಾಯವಿಲ್ಲದ ನಡವಳಿಯನ
ನ್ಯಾಯ ಹೊದ್ದುವ ಪಾತಕವ ನಿಜ
ಕಾಯದಲಿ ನೀ ಧರಿಸೆಯಲೆ ಭೂಪಾಲ ಕೇಳೆಂದ ೫೨

ಫಲವಹುದ ಕೆಡಲೀಯದಳಿ ಪರಿ
ಮಳವ ಕೊಂಬಂದದಲೆ ನೀನಾ
ಳ್ವಿಳೆಯ ಕರದರ್ಥವನು ತೆಗೆವೈ ಪ್ರಜೆಯ ನೋಯಿಸದೆ
ಹಲವು ಸನ್ಮಾನದಲಿ ನಯದಲಿ
ಚಲಿಸದಿಪ್ಪಂದದಲಿ ರಾಜ್ಯವ
ನಿಲಿಸುವಭಿಮತ ಮಂತ್ರಿಯುಂಟೇ ರಾಯ ನಿನಗೆಂದ ೫೩

ಸೂಕರನ ತುಂಬಿಯ ಮರಾಳನ
ಭೇಕವೈರಿಯ ಕಾರುರಗ ಕಪಿ
ಕೋಕಿಲನ ಬರ್ಹಿಯ ಸುಧಾಕಿರಣನ ದಿನಾಧಿಪನ
ಆಕಸದ ದರ್ಪಣದ ಬಕ ರ
ತ್ನಾಕರನಲೊಂದೊಂದು ಗುಣವಿರ
ಬೇಕು ನೃಪರಿಗೆ ನಿನ್ನೊಳುಂಟೇ ರಾಯ ಹೇಳೆಂದ ೫೪

ನೆಚ್ಚದಿರು ಸಿರಿಯನು ವೃಥಾ ಮದ
ಗಿಚ್ಚನುರಿಯಲಿ ಬೇಯದಿರು ಮಿಗೆ
ಬೆಚ್ಚಿ ಬೆದರದಿರೆದರಿನಲಿ ಸತ್ಯವನು ಚಲಿಸದಿರು
ಮೆಚ್ಚದಿರಸತ್ಯವನು ಗುಣವನು
ಮುಚ್ಚದಿರು ಅಪಕೀರ್ತಿನಾರಿಯ
ಮೆಚ್ಚದಿರು ಮರುಳಾಗದಿರು ಭೂಪಾಲ ಕೇಳೆಂದ ೫೫

ಹಲವು ವಿನಿಯೋಗದಲಿ ಸುದತಿಯ
ರೊಲುಮೆಯಲಿ ಸಕಲಾಂಗದಲಿ ನಿ
ಸ್ಖಲಿತ ನಿಜವನೆ ಧರಿಸುವಾಶ್ರಮ ವರ್ಣಭೇದದಲಿ
ಹಳಿವು ನಿನಗಾವಂಗದಲಿ ಬಳಿ
ಸಲಿಸದಲೆ ಪರತತ್ವದಲಿ ವೆ
ಗ್ಗಳಿಸದಲೆ ವೈರಾಗ್ಯಮತ ಭೂಪಾಲ ನಿನಗೆಂದ ೫೬

ಪರಿಜನಕೆ ದಯೆಯನು ಪರಸ್ತ್ರೀ
ಯರಲಿ ಭೀತಿಯ ಹಗೆಗಳಲಿ ನಿ
ಷ್ಕರುಣತೆಯ ಬಡವರಲಿ ದಾನವ ದೈವ ಗುರು ದ್ವಿಜರ
ಚರಣ ಸೇವೆಯಲಾರ್ತತೆಯ ಪಿಸು
ಣರ ನುಡಿಗಳಲಿ ಮೂರ್ಖತೆಯ ನೀ
ವಿರಚಿಪೆಯೊ ಬೇಸರುವೆಯೋ ಭೂಪಾಲ ಕೇಳೆಂದ ೫೭

ಮೋಹದವಳಲಿ ವೈದ್ಯರಲಿ ಮೈ
ಗಾಹಿನವರಲಿ ಬಾಣಸಿಗರಲಿ
ಬೇಹ ಮಂತ್ರಿಗಳಲಿ ವಿಧಾವಂತರಲಿ ಹಿರಿಯರಲಿ
ದೇಹರಕ್ಷಕರಲಿ ಸದೋದಕ
ವಾಹಿಯಲಿ ಹಡಪಾಳಿಯಲಿ ಪ್ರ
ತ್ಯೂಹವನು ವಿರಚಿಸೆಯಲೇ ಭೂಪಾಲ ಕೇಳೆಂದ ೫೮

ತರುಣಿಯಲಿ ಹಗೆಗಳಲಿ ಬಹಳೈ
ಶ್ವರಿಯದಲಿ ಶಸ್ತ್ರಾಂಗಿಯಲಿ ಸಂ
ಸ್ಮರಣದಲಿ ಮದ್ಯಪನಲಬಲಾರ್ಥಿಯಲಿ ಶೃಂಗಿಯಲಿ
ಉರಗನಲಿ ನದಿಯಲಿ ಸಖಿಯರಾ
ತುರಿಯದಲಿ ದುರ್ಮಂತ್ರಿಯಲಿ ದು
ಶ್ಚರಿತನಲಿ ವಿಶ್ವಾಸಿಸೆಯಲೇ ಭೂಪ ಕೇಳೆಂದ ೫೯

ಧಾಳರನು ಧವಳರನು ಠಕ್ಕಿನ
ಕೌಳಿಕಾರರ ಕೃತಕ ಮಾಯಾ
ಜಾಲರನು ಕಾಪುರರನಂತರ್ದ್ರಾಹಕರ ಶಠರ
ಖೂಳರನು ಖಳರನು ವಿಕಾರಿಯ
ಜಾಳು ನುಡಿಗಳ ಜಡಮತಿಯನೀ
ನಾಳಿಗೊಂಬೆಯೊ ಲಾಲಿಸುವೆಯೋ ರಾಯ ಹೇಳೆಂದ ೬೦

ಆವ ಕಾಲದೊಳಾವ ಕಾರ್ಯವ
ದಾವನಿಂದಹುದವನ ಮನ್ನಿಪ
ಠಾವಿದೆಂಬುದನರಿದಿಹೈ ಮೃಗಜೀವಿಯಂದದಲಿ
ಲಾವಕರ ನುಡಿ ಕೇಳಿ ನಡೆದರೆ
ಭೂವಳಯದೇಕಾಧಿಪತ್ಯದ
ಠಾವು ಕೆಡುವುದನರಿದಿಹೈ ಭೂಪಾಲ ಕೇಳೆಂದ ೬೧

ಅರಸು ರಾಕ್ಷಸ ಮಂತ್ರಿಯೆಂಬುವ
ಮೊರೆವ ಹುಲಿ ಪರಿವಾರ ಹದ್ದಿನ
ನೆರವಿ ಬಡವರ ಬಿನ್ನಪವನಿನ್ನಾರು ಕೇಳುವರು
ಉರಿವುರಿವುತಿದೆ ದೇಶ ನಾವಿ
ನ್ನಿರಲು ಬಾರದೆನುತ್ತ ಜನ ಬೇ
ಸರಿನ ಬೇಗೆಯಲಿರದಲೇ ಭೂಪಾಲ ಕೇಳೆಂದ ೬೨

ಧನದಲುರು ಧಾನ್ಯದಲಿ ನೆರೆದಿಂ
ಧನದಲುದಕದ ಹೆಚ್ಚುಗೆಯಲಂ
ಬಿನಲಿ ಶಸ್ತ್ರೌಘದಲಿ ಶಿಲ್ಪಿಗಳ ಶಿಲಾಳಿಯಲಿ
ವನವಳಯ ಕೋಟಾವಳಯ ಜೀ
ವನವಳಯ ಗಿರಿವಳಯ ದುರ್ಗಮ
ವೆನಿಪ ದುರ್ಗಾವಳಿ ಸಮಗ್ರವೆ ಭೂಪ ಕೇಳೆಂದ ೬೩

ಕೃಷಿ ಮೊದಲು ಸರ್ವಕ್ಕೆ ಕೃಷಿಯಿಂ
ಪಸರಿಸುವುದಾ ಕೃಷಿಯನುದ್ಯೋ
ಗಿಸುವ ಜನವನು ಪಾಲಿಸುವುದಾ ಜನಪದದ ಜನದಿ
ವಸು ತೆರಳುವುದು ವಸುವಿನಿಂ ಸಾ
ಧಿಸುವಡಾವುದಸಾಧ್ಯವದರಿಂ
ಕೃಷಿವಿಹೀನನ ದೇಶವದು ದುರ್ದೇಶ ಕೇಳೆಂದ ೬೪

ಸತಿಯರೊಲುಮೆಯ ವಿಟರುಗಳನಾ
ಸತಿಯರ ಸ್ಥಿತಿಗತಿಗೆ ತಾನೆಂ
ದತಿಶಯೋಕ್ತಿಯ ನುಡಿವವರನರಮನೆಯ ಕಾಹಿಂಗೆ
ಪತಿಕರಿಸಿದರೆ ಜಗವರಿಯುಲಾ
ಕ್ಷಿತಿಪರಭಿಮಾನವು ಮುಹೂರ್ತಕೆ
ಗತವಹುದು ನೀನರಿದಿಹೈ ಭೂಪಾಲ ಕೇಳೆಂದ ೬೫

ಖಡುಗ ಧಾರೆಯ ಮಧು ಮಹಾಹಿಯ
ಹೆಡೆಯ ಮಾಣಿಕ ವಜ್ರದಿಂ ಬಿಗಿ
ದೊಡಲಿಗೊಡ್ಡಿದ ಸುರಗಿ ಕಡುಗೆರಳಿದ ಮೃಗಾಧಿಪನ
ನಡು ಗುಹೆಯೊಳಿಹ ಸುಧೆಯ ಘಟವೀ
ಪೊಡವಿಯೊಡೆತನ ಸದರವೇ ಕಡು
ಬಡವರಿಗೆ ದೊರೆಕೊಂಬುದೇ ಭೂಪಾಲ ಕೇಳೆಂದ ೬೬

ಮಗಗೆ ಮುನಿವನು ತಂದೆ ತಂದೆಗೆ
ಮಗ ಮುನಿವನೊಡಹುಟ್ಟಿದರು ಬಲು
ಪಗೆ ಕಣಾ ತಮ್ಮೊಳಗೆ ಭೂಪರ ಕುಲದ ವಿದ್ಯವಿದು
ಬಗೆಯ ನಿನ್ನೊಡಹುಟ್ಟಿದರು ಮುಂ
ತ್ರಿಗಳೊಳಾಪ್ತರಖಿನ್ನರೇ ದಾ
ಯಿಗರೊಳಂತರ್ಬುದ್ಧವುಂಟೇ ರಾಯ ನಿನಗೆಂದ ೧೭

ಮಲೆವ ರಾಯರ ಬೆನ್ನ ಕಪ್ಪವ
ನಲಗಿನಲಿ ಕೊಂಡಾಂತ ಮನ್ನೆಯ
ಕುಲದ ತಲೆ ಚೆಂಡಾಡಿ ಗಡಿಗಳ ದುರ್ಗದಲಿ ತನ್ನ
ಬಲು ಸಚಿವರನು ನಿಲಿಸಿ ತಾ ಪುರ
ದಲಿ ವಿನೋದದಲಿರುತ ಹರುಷದ
ಲಿಳೆಯ ಪಾಲಿಸುವವನರಸು ಭೂಪಾಲ ಕೇಳೆಂದ ೧೮

ಮನ್ನಣೆಯೊಳಲ್ಪತೆಯ ನುಡಿಯೊಳ
ಗುನ್ನತಿಯನೆಸಗುವುದು ಪರರಿಗೆ
ತನ್ನವರಿಗುಗ್ಗಡದ ಪರಿಕರಣೆಯನು ಮಾತಿನಲಿ
ಭಿನ್ನವನು ತೋರುವುದು ರಾಯರ
ಗನ್ನಗತಕ ಕಣಾ ವಿಪುಳ ಸಂ
ಪನ್ನಮತಿ ನಿನಗುಂಟೆ ಭೂಮಿಪಾಲ ಕೇಳೆಂದ ೧೯

ಧನದಿ ಪಂಡಿತರಪ್ಪ ತತಿಯಾ
ಧನದಿ ಧಾರುಣಿ ಮಾನ ಮೇಣಾ
ಧನದಿ ಕಾಂತೆಯರಖಿಳ ವಸ್ತುಗಳೈದೆ ಸೇರುವುದು
ನೆನಹು ತೃಪ್ತಿಯೊಳೈದದದರಿಂ
ಧನವೆ ಸಾಧನವರಸಿಗಾ ಧನ
ವನಿತು ದೊರಕೊಳಲಿದಿರದಾರ್ೈ ಧಾತ್ರಿಪತಿಗಳಲಿ ೨೦

ಶೂರ ಧೀರನುದಾರ ಧರ್ಮೋ
ದ್ಧಾರ ವಿವಿಧ ವಿಚಾರ ಸುಜನಾ
ಧಾರ ರಿಪುಸಂಹಾರ ಚತುರೋಪಾಯ ಸಾಕಾರ
ಸಾರಮಂತ್ರ ವಿಚಾರ ಭುವನಾ
ಧಾರ ಸುಜನಸ್ವಾಮಿ ಕಾರ್ಯಾ
ಗಾರನೆನಿಸುವ ಮಂತ್ರಿಯುಂಟೇ ರಾಯ ನಿನಗೆಂದ ೨೧

ತಿಳಿದವನ ಮತಿವಿದನ ಭಾಷಾ
ವಳಿ ಲಿಪಿಜ್ಞನ ಸಾಕ್ಷರಿಕ ಮುಂ
ಡಲಿಕ ಸಾವಂತರನಶೇಷರನಿಂಗಿತವನರಿತು
ಸಲೆ ಕರೆವ ಕಳುಹಿಸುವ ನಿಲಿಸುವ
ಬಲುಹನುಳ್ಳನ ಸುಕೃತ ದುಷ್ಕೃತ
ಫಲಿತ ಕಾರ್ಯಕೆ ಮಂತ್ರಿಯುಂಟೇ ರಾಯ ನಿನಗೆಂದ ೨೨

ಜರೆ ನರೆಯ ಮೈ ಸಿರಿಯ ಕುಲ ವೃ
ದ್ಧರನು ಹೀನಾಂಗರನು ಹಿಂಸಾ
ಚರಿತರನು ಜಾತ್ಯಂಧರನು ಧನದಾಸೆಯುಳಿದವರ
ಅರಮನೆಯ ಸಂರಕ್ಷಣಾರ್ಥ ದೊ
ಳಿರಿಸಿದರೆ ಮಾನೋನ್ನತಿಕೆ ವಿ
ಸ್ತರಣವಹುದಿದನರಿದಿಹೈ ಭೂಪಾಲ ಕೇಳೆಂದ ೨೩

ಗುಳಿ ತೆವರನೀಕ್ಷಿಸುತ ಬಟ್ಟೆಯ
ಮೆಳೆ ಮರಂಗಳ ಹೊಯ್ಲ ತಪ್ಪಿಸಿ
ನೆಳಲನರಸುತ ವೇಗಗತಿ ಸಾಮಾನ್ಯಗತಿಗಳಲಿ
ಬಳಿವಿಡಿದು ಭೂಭುಜರ ಯಾನಂ
ಗಳೊಳಗಳುಕದೆ ಥಗೆಯ ಸೈರಿಸಿ
ಬಳಸುವವನೇ ಛತ್ರಧಾರಕನರಸ ಕೇಳೆಂದ ೨೪

ಬೇಸರದೆ ಕಾಳೋರಗನನ
ಡ್ಡೈಸಿ ಕಟ್ಟಿರುವೆಗಳು ಮಿಗೆ ವೇ
ಡೈಸಿ ಕಡಿದರೆಯಟ್ಟುವಂದದಲಹಿತ ಬಲದೊಳಗೆ
ಓಸರಿದೊಳಹೊಕ್ಕು ಸಮರ ವಿ
ಳಾಸವನು ನೆರೆ ಮೆರೆದು ಕೇಶಾ
ಕೇಶಿಯಲಿ ಹಿಡಿದಿರಿವವನೆ ಕಾಲಾಳು ಕೇಳೆಂದ ೨೫

ಬಿಟ್ಟ ಸೂಠಿಯಲರಿನೃಪರ ನೆರೆ
ಯಟ್ಟಿ ಮೂದಲಿಸುತ್ತ ಮುಂದಣ
ಥಟ್ಟನೊಡೆಹಾಯ್ದಹಿತ ಬಲದೊಳಗಾನೆವರಿವರಿದು
ಹಿಟ್ಟುಗುಟ್ಟುತ ಹೆಣನ ಸಾಲುಗ
ಳೊಟ್ಟು ಮೆರೆಯಲು ಕಳನ ಚೌಕದ
ಲಟ್ಟಿಯಾಡಿಸ ಬಲ್ಲವನೆ ರಾವುತನು ಕೇಳೆಂದ ೨೬

ಹೆಬ್ಬಲವನೊಡ ತುಳಿದು ಧರಣಿಯ
ನಿಬ್ಬಗಿಯ ಮಾಡಿಸುತ ಪಾಯ್ದಳ
ದೊಬ್ಬುಳಿಯ ಹರೆಗಡಿದು ಕಾದಿಸುತಾನೆಗಳ ಮೇಲೆ
ಬೊಬ್ಬಿರಿದು ಶರ ಮಳೆಯ ಕರೆವುತ
ಲಬ್ಬರಿಸಿ ಬವರದಲಿ ರಿಪುಗಳಿ
ಗುಬ್ಬಸವನೆಸಗುವನೆ ಜೋಧನು ರಾಯ ಕೇಳೆಂದ ೨೭

ಒಂದು ಕಡೆಯಲಿ ದಳ ಮುರಿದು ಮ
ತ್ತೊಂದು ದಿಕ್ಕಲಿ ಮನ್ನೆಯರು ಕವಿ
ದೊಂದು ದೆಸೆಯಲಿ ಬಲದೊಳೊಂದನೆಯಧಿಕಬಲವೆನಿಸಿ
ಬಂದು ಸಂತಾಪದಲಿ ಕಾಳಗ
ದಿಂದ ಪುರದಲಿ ನಿಂದು ಕರಿಕರಿ
ಗುಂದುವ ಕ್ಷಿತಿಪಾಲನೇ ಭೂಪಾಲ ಕೇಳೆಂದ ೨೮

ಕುದುರೆಗಳನಾರೈದು ರಥವನು
ಹದುಳಿಸುತ ಸಾರಥಿಯನೋವುತ
ಲಿದಿರ ಮುರಿವುತ ತನ್ನ ಕಾಯಿದುಕೊಳುತ ಕೆಲಬಲನ
ಸದೆದು ಮರಳುವ ಲಾಗು ವೇಗದ
ಕದನ ಕಾಲಾನಲನವನು ತಾ
ಮೊದಲಿಗನಲೈ ರಥಿಕರಿಗೆ ಭೂಪಾಲ ಕೇಳೆಂದ ೨೯

ದೊರೆಯ ಕಾಣುತ ವಂದಿಸುತ್ತಂ
ಕರಿಸುತಂತರಿಸುತ್ತ ಮಿಗೆ ಹ
ತ್ತಿರನೆನಿಸದತಿ ದೂರನೆನಿಸದೆ ಮಧ್ಯಗತನೆನಿಸಿ
ಪರಿವಿಡಿಯಲೋಲೈಸುತರಸನ
ಸಿರಿ ಮೊಗವನೀಕ್ಷಿಸುತ ಬೆಸಸಲು
ಕರ ಯುಗವನಾನುವನೆ ಸೇವಕನರಸ ಕೇಳೆಂದ ೩೦

ನರಕ ಕರ್ಮವ ಮಾಡಿಯಿಹದೊಳು
ದುರಿತ ಭಾಜನರಾಗಿ ಕಡೆಯಲಿ
ಪರಕೆ ಬಾಹಿರರಾಗಿ ನಾನಾ ಯೋನಿಯಲಿ ಸುಳಿದು
ಹೊರಳುವರು ಕೆಲಕೆಲರು ಭೂಪರು
ಧರಿಸುವರಲ್ಲೈ ರಾಜ ಧರ್ಮದ
ಹೊರಿಗೆಯನು ಮರೆದಿರೆಯಲಾ ಭೂಪಾಲ ಕೇಳೆಂದ　೮೧

ನೃಗನ ಭರತನ ದುಂದುಮಾರನ
ಸಗರನ ಪುರೂರನ ಯಯಾತಿಯ
ಮಗನ ನಹುಷನ ಕಾರ್ತವೀರ್ಯನ ನಳನ ದಶರಥನ
ಹಗಲಿರುಳು ವಲ್ಲಭರ ವಂಶದ
ವಿಗಡರಲಿ ಯಮಸೂನು ಸರಿಯೋ
ಮಿಗಿಲೊ ಎನಿಸುವ ನೀತಿಯುಂಟೇ ರಾಯ ನಿನಗೆಂದ　೮೨

ಆ ಮುನೀಂದ್ರನ ವಚನ ರಚನಾ
ತಾಮರಸ ಮಕರಂದ ಕೇಳಿಯ
ಲೀ ಮಹೀಶ ಮನೋ ಮಧುವ್ರತವುಬ್ಬಿತೊಲವಿನಲಿ
ರೋಮ ಪುಳಕದ ರುಚಿರ ಭಾವ
ಪ್ರೇಮ ಪೂರಿತ ಹರುಷ ರಸದು
ದ್ದಾಮ ನದಿಯಲಿ ಮುಳುಗಿ ಮೂಡಿದನರಸ ಕೇಳೆಂದ　೮೩

ಎಲೆ ಮುನಿಯೆ ನೀವ್ ರಚಿಸಿದೀ ನಿ
ರ್ಮಳ ನೃಪಾಲ ನಯ ಪ್ರಪಂಚವ
ಬಳಸಿದೆನು ಕೆಲ ಕೆಲವನಿನ್ನುರೆ ಬಳಸುವೆನು ಕೆಲವ
ಇಳಿದು ಧರಣಿಗೆ ಸುಳಿದು ನೀತಿ
ಸ್ಖಲಿತ ಜಡರನು ತಿದ್ದಿ ತಿಳುಹುವ
ಸುಲಭತನದಲಿ ದೇವಮುನಿ ನಿನಗಾರು ಸರಿಯೆಂದ　೮೪

ಮುನಿಯೆ ಬಿನ್ನಹವಿಂದು ನೀವಿಂ
ದ್ರನ ವಿರಿಂಚಿಯ ಯಮನ ವರುಣನ
ಧನಪತಿಯ ಶೇಷನ ಸಭಾಮಧ್ಯದಲಿ ಸುಳಿವಿರಲೆ
ಇನಿತು ರಚನೆಗೆ ಸರಿಯೊ ಮಿಗಿಲೋ
ಮನುಜ ಯೋಗ್ಯಸ್ಥಾನವೋ ಮೇ
ಣೆನಲು ನಗುತೆಂದನು ಮುನೀಶ್ವರನಾ ಯುಧಿಷ್ಠಿರಗೆ.　೮೫

ಜನಪ ಕೇಳುತ್ತೇದ ಶತ ಯೋ
ಜನ ತದರ್ಧದೊಳಗಲದಳತೆಯಿ
ದೆನಿಪುದಿಂದ್ರ ಸ್ಥಾನವಲ್ಲಿಹುದಖಿಳ ಸುರನಿಕರ
ಜನಪರಲ್ಲಿ ಯಯಾತಿಯಾತನ
ಜನಕ ನೃಗ ನಳ ಭರತ ಪೌರವ
ರೆನಿಪರಖಿಳ ಕ್ರತುಗಳಲಿ ಸಾಧಿಸಿದರಾ ಸಭೆಯ　೮೬

ವೈದಿಕೋಕ್ತಿಗಳಲಿ ಹರಿಶ್ಚಂ
ದ್ರಾದಿರಾಯರು ರಾಜಸೂಯದೊ
ಳಾದರನಿಬರೊಳಗ್ಗಳೆಯರಿಂದ್ರಂಗೆ ಸರಿ ಮಿಗಿಲು
ಆದೊಡಾ ಪುರುಹೂತ ಸಭೆಯೋ
ಪಾದಿ ಯಮನಾಸ್ಥಾನವಲ್ಲಿ ವಿ
ಷಾದದಲಿ ನಿಮ್ಮಯ್ಯನಿಹನಾತನ ಸಮೀಪದಲಿ　೮೭

ವರುಣ ಸಭೆಯೊಳಗಿಹವು ಭುಜಗೇ
ಶ್ವರ ಸಮುದ್ರ ನದೀನದಾವಳಿ
ಗಿರಿ ತರು ವ್ರಜವೆನಿಪ ಸಂಖ್ಯಾರಹಿತ ವಸ್ತುಗಳು
ಅರಸ ಕೇಳು ಕುಬೇರ ಸಭೆಯಾ
ಪರಿಯಗಲವೆಂಭತ್ತು ಯೋಜನ
ಹರಸಖನ ಸಿರಿ ಸದರವೇ ಭೂಪಾಲ ಕೇಳೆಂಪ　೮೮

ಬಗೆಯೊಳಗೆ ಮೋಳೆವುದು ಚತುರ್ದಶ
ಜಗವೆನಲು ಜಾವಳವೆ ತಸ್ಯೋ
ಲಗದ ಸಿರಿ ಪರಮೇಷ್ಠಿಗೇನರಿದೈ ಮಹೀಪತಿಯೆ
ಸುಗಮ ಗಾನಿಯರುಪನಿಷದ ವಿ
ದ್ಯೆಗಳು ವೇದಕ್ರತು ಪುರಾಣಾ
ದಿಗಳು ಬಿರುದಾವಳಿಯ ಪಾಠಕರಾತನಿದಿರಿನಲಿ　೮೯

ಮುನಿಗಳೇ ವಾಣಿಯರು ಮಂತ್ರಾಂ
ಗನೆಯರೋಲೆಯಕಾತಿಯರು ಸುರ
ಜನವೆ ಕಿಂಕರಜನವು ಸೂರ್ಯಾದಿಗಳೆ ಸಹಚರರು
ಘನ ಚತುರ್ದಶ ವಿದ್ಯೆ ಪಾಠಕ
ಜನವಲ್ಲೈ ಪಾಡೇನು ಪದುಮಾ
ಸನನ ಪರುಠವವಾ ಸಭೆಗೆ ಸರಿ ಯಾವುದೈ ನೃಪತಿ　೯೦

ಇನಿಬರಾಸ್ಥಾನದಲಿ ಸುಕೃತಿಗ
ಳೆನಿಪ ತೇಜಸ್ವಿಗಳು ಗಡ ಸುರ
ಮುನಿ ಹರಿಶ್ಚಂದ್ರಂಗೆ ಸೇರಿದ ಸುಕೃತ ಫಲವೇನು
ಜನಪನಪದೆಸೆಗೇನು ದುಷ್ಕೃತ
ವೆನಲು ನಕ್ಕನು ರಾಜಸೂಯದ
ಘನವನರಿಯಾ ಧರ್ಮನಂದನಯೆಂದನಾ ಮುನಿಪ　೯೧

ಈ ಮಹಾಕ್ರತುವರವ ನೀ ಮಾ
ಡಾ ಮಹೇಶ್ವರ ಪಂಕ್ತಿಯಲ್ಲಿ ನಿ
ರಾಮಯನು ನಿಮ್ಮಯ್ಯನಿಹನು ಸತೇಜದಲಿ ಬಳಿಕ
ಸೋಮವಂಶದ ರಾಯರೊಳಗು
ದ್ದಾಮರಹ ಬಲುಗೈ ಕುಮಾರ
ಸ್ತೋಮ ನೀವಿರಲಯ್ಯಗೇನರಿದೆಂದನಾ ಮುನಿಪ　೯೨

ಮುನಿಯ ಮಾತಿನ ಬಲೆಗೆ ಸಿಲುಕಿತು
ಜನಪತಿಯ ಚೈತನ್ಯಮೃಗವೀ
ತನ ವಚೋ ವರುಷದಲಿ ನೆನೆದವು ಕರಣವೃತ್ತಿಗಳು
ಮನದಲಂಕುರವಾಯ್ತು ನಾಲಿಗೆ
ಗೊನೆಯಲೆರಡೆಲೆಯಾಯ್ತು ಯಜ್ಞದ
ನೆನವು ಭಾರವಣೆಯಲಿ ಬಿದ್ದುದು ಧರ್ಮನಂದನನ　೯೩

ಕಳುಹಿದನು ಸುರಮುನಿಯನುದರದೊ
ಳಿಳಿದುದಂತಸ್ತಾಪ ಯಜ್ಞದ
ಬಲುಹ ನೆನೆದಡಿಗಡಿಗೆ ಕಂಪಿಸಿ ಕೈಯ ಗಲ್ಲದಲಿ
ಒಲೆದೊಲೆದು ಭಾವದಲಿ ಮಿಗೆ ಕಳ
ವಳಿಸಿ ಪದುಳಿಸಿಕೊಳುತ ಭೂಪತಿ
ತಿಲಕ ಚಿಂತಿಸಿ ನೆನೆವುತಿದ್ದನು ವೀರ ನರಯಣನ　೯೪

## ಎರಡನೆಯ ಸಂಧಿ

ಸೂ. ಬಲಿಮಥನ ಫಲುಗುಣರು ಸಹಿತ
ಗ್ಗಳಿಯಸೇಕಾಂಗದಲಿ ರಣದಲಿ
ಕಲಿ ಜರಾಸಂಧನನು ಸೀಳಿದು ಬಿಸುಟನಾ ಭೀಮ

ಕೇಳು ಜನಮೇಜಯ ಧರಿತ್ರೀ
ಪಾಲ ಮಂತ್ರಾಳೋಚನೆಗೆ ಭೂ
ಪಾಲ ಕರೆಸಿದನನುಜರನು ಧೌಮ್ಯಾದಿ ಮಂತ್ರಿಗಳ
ಮೇಳವದ ತನಿವೆಳಗುಗಳ ಮಣಿ
ಮೌಳಿಮಂಡಿತರುಪ್ಪರದ ಪಡಿ
ಸೂಳು ಪಾಯವಧಾರಿನಲಿ ಹೊಕ್ಕರು ಸಭಾ ಸ್ಥಳವ ೧

ದ್ರುಪದ ಧೃಷ್ಟದ್ಯುಮ್ನ ಮತ್ಸ್ಯಾ
ಧಿಪತಿ ಕೇಕಯ ಪಾಂಡವಾತ್ಮಜ
ರು ಪತಿಕಾರ್ಯ ವಿಚಾರನಿಷ್ಠರು ಬಂದರೋಲಗಕೆ
ನೃಪತಿ ಹದನೇನಮರ ಮುನಿವರ
ನುಪಚರಿತ ಮಂತ್ರಾರ್ಥ ಸಿದ್ಧಿಗೆ
ರಪಣ ನಮಗುಂಟೀಗ ಬೆಸಸೆಂದರು ಯುಧಿಷ್ಠಿರಗೆ ೨

ಧರೆ ನಮಗೆ ವಶವರ್ತಿ ಖಂಡೆಯ
ಸಿರಿ ನಮಗೆ ಮೈವಳಿ ಯುಧಿಷ್ಠಿರ
ನರಸುತನ ನಳ ನಹುಷ ನೃಗ ಭರತಾದಿ ಭೂಮಿಪರ
ಮರೆಸಿತೆಂಬುದು ಲೋಕವೀ ನೀ
ಬ್ಬರದ ಹೆಸರೆಮಗಿಂದು ಬೊಪ್ಪನ
ಸಿರಿಯನೇವಣ್ಣಿಸುವೆನೆಂದನು ಸುಯ್ದು ಯಮಸೂನು ೩

ಅಲ್ಲಿ ಸುರರಲಿ ಸುಪ್ರತಿಷ್ಠಿತ
ನಲ್ಲ ಗಡ ಪಾಂಡು ಕ್ಷಿತೀಶ್ವರ
ನಿಲ್ಲಿ ವೈಭವಕೇನು ಫಲ ನಾವವರ ಸದ್ಗತಿಗೆ
ಇಲ್ಲಿ ರಚಿಸಿದ ರಾಜಸೂಯದಿ
ನೆಲ್ಲವಹುದಯ್ಯಂಗೆ ಮುಖವಿದು
ದುರ್ಲಭವು ಕೈಕೊಂಡೆವಾವುದು ಮಂತ್ರವಿದಕೆಂದ ೪

ಆಗಲಿದಕೇನರಸ ದೀಕ್ಷಿತ
ನಾಗು ನಿರುಪಮ ರಾಜಸೂಯಕೆ
ಭಾಗ ಧನವನು ಭೂಮಿಪರ ಸದೆದೆಳೆದು ತಹೆವೆಂದು
ಆ ಗರುವರುಬ್ಬೇಳೆ ತಪ್ಪೇ
ನಾಗಲೀ ಗೋವಿಂದ ಮತದಲಿ
ತೂಗಿ ನೋಡುವೆವಿದರ ತೂಕವನೆಂದನಾ ಭೂಪ ೫

ಕಳುಹಿದನು ಸಾರಥಿಯನಾ ರಥ
ಕೆಲವು ದಿವಸಕೆ ಕೃಷ್ಣಭವನ
ಸ್ಥಳದ ಹೊರ ಬಾಹೆಯಲಿ ಚಾಚಿತು ಚಪಳ ಗಮನದಲಿ
ಒಳಗೆ ಬಂದನು ಪಾವುಡವ ಮುಂ
ದಿಳುಹಿದನು ಕೃಷ್ಣಂಗೆ ಪಾಂಡವ
ತಿಲಕನಟ್ಟಿದ ಹದನ ಬಿನ್ನಹ ಮಾಡಿದನು ಬಳಿಕ ೬

ತಿಳಿದನಲ್ಲಿಯ ರಾಜಕಾರ್ಯದ
ನೆಲೆಯನಕ್ರೂರಾದಿ ಸಚಿವರ
ತಿಳುಹಿದನು ಶಿಶುಪಾಲ ಕಂಸನ ಮಾವನಿಂತಿವರ
ಕೊಲುವಡಿದು ಹದ ನಮ್ಮ ಭಾವನ
ನಿಳಯದುತ್ಸಹ ಸೌಮನಸ್ಯವ
ಬಳಸುವರೆ ಹೊತ್ತಿದು ಮನೋರಥ ಸಿದ್ಧಿ ನಮಗೆಂದ ೭

ಎಂದು ವಸುದೇವಾದಿ ಯಾದವ
ವೃಂದವನು ಬಲಭದ್ರರಾಮನ
ಹಿಂದಿರಿಸಿ ಬಳಿಕಿಂದ್ರಸೇನನ ಕೂಡೆ ವೊಲವಿನಲಿ
ಬಂದನಿಂದ್ರಪ್ರಸ್ಥ ಪಟ್ಟಣ
ಕಂದು ವೊಸಗೆಯ ಗುಡಿಯ ತೋರಣ
ದಿಂದ ಕನ್ನಡಿ ಕಳಶದಲಿ ಕೊಂಡಾಡಿದರು ಹರಿಯ ೮

ಪುರಕೆ ಬಿಜಯಂಗೈಸಿ ತಂದರು
ಹರಿಯನರಮನೆಗನಿಬರಂತಃ
ಪುರದ ಕಾಣಿಕೆಗೊಂಡು ಬಾಂಧವ ಜನವನುಚಿತದಲಿ
ಹರಸಿ ಮಧುರ ಪ್ರೀತಿಯಿಂದಾ
ದರಿಸಿ ಮಂತ್ರಾಳೋಚನೆಯ ಮಂ
ದಿರದೊಳೇಕಾಂತದಲಿ ಭೂಪತಿಗೆಂದನಸುರಾರಿ ೯

ಏನು ಕರೆಸಿದಿರೈ ಪ್ರಯೋಜನ
ವೇನು ನಿಮ್ಮುತ್ಸಾಹ ಶಕ್ತಿಯೊ
ಳೇನು ದುರ್ಘಟವೇನು ಶಂಕಿತವೇನು ಸಂಸ್ಖಲಿತ
ದಾನವರ ಕೌರವರ ವೈರದೊ
ಳೇನು ವಿಗ್ರಹವಿಲ್ಲಲೇ ಹದ
ನೇನೆನಲು ಕೃಷ್ಣಂಗೆ ಬಿನ್ನಹ ಮಾಡಿದನು ನೃಪತಿ ೧೦

ದನುಜರಲಿ ಕುರುಸೇನೆಯಲಿ ಭಯ
ವೆನಗೆ ಭಾರಿಯೆ ನಿಮ್ಮ ಘನ ಪದ
ವನಜವಿದು ಸೀಸಕವಲೇ ತನ್ನುತ್ತಮಾಂಗದಲಿ
ಮುನಿಯ ಹೇಳಿಕೆ ಬೊಪ್ಪಗಮರೇಂ
ದ್ರನಲಿ ಸಮರಸವಿಲ್ಲ ಗಡ ನ
ಮ್ಮನಿಬರಲಿ ಸಾಮರ್ಥ್ಯವಿದ್ದುದಕೇನು ಫಲವೆಂದ ೧೧

ಪಿತನ ಪರಮಪ್ರೀತಿಗುನ್ನತ
ಗತಿಗೆ ನಿರ್ಮಳ ರಾಜಸೂಯ
ಕ್ರತುವೆ ಸಾಧನವೆಂದು ಮುನಿಯುಪದೇಶಿಸಿದ ತನಗೆ
ಕ್ರತು ಮಹಾಕ್ರತು ಸಕಲಧರಣೀ
ಪತಿಗಳರ್ಥವ ಗುಣದಲೀಯರು
ವ್ರತವೆನಗೆ ಸಂಕಲ್ಪವಾಯ್ತಿದಕೇನು ಹದನೆಂದ ೧೨

ತಿರುಗಿದರೆ ಸಂಕಲ್ಪ ಹಾನಿಯು
ಪರಮ ಪಾತಕವಿದು ಮಹಾ ನಿ
ಷ್ಠುರದ ಮಖವಿನ್ನಮರ ಮುನಿಪತಿ ದೇವಲೋಕದಲಿ
ಹರಹುವನು ಪರಿಹಾಸ್ಯಮಯ ಸಾ
ಗರವ ದಾಟಿಸು ಜೀಯ ಭವ ಸಾ
ಗರದಿನಿದು ಮಿಗಿಲೇ ಮುರಾಂತಕಯೆಂದನಾ ಭೂಪ ೧೩

ನಕ್ಕನಸುರವಿರೋಧಿ ಮುನಿ ಹಾ
ಯಿಕ್ಕಿದನಲಾ ಬಲೆಯನಕಟಾ
ಸಿಕ್ಕಿದಿರಲಾ ಸ್ವಾಮಿದ್ರೋಹರು ಸದರವೇ ನೃಪರು
ಅಕ್ಕಜದ ಮಖವಿದರ ಜೋಡಿಗೆ
ಚುಕ್ಕಿಯಾಯಿತು ಮನ ಮಹೀಶನ
ಮಕ್ಕಳಾಟಿಕೆಯಾಯ್ತೆನುತ ತೂಗಿದನು ಸಿರಿಮುಡಿಯ ೧೪

ಕೆದರಿ ಸಪ್ತದ್ವೀಪಪತಿಗಳ
ಸದೆದು ರಚಿಸುವ ರಾಜಸೂಯದ
ಹದನನಂಗೈಸುವನದಾರೀ ವರ್ತಮಾನದಲಿ
ಸುದತಿಯರ ಸೂಳೆಯರ ಮುಂದು
ಬ್ಬಿದೆಯಲಾ ನಾರದನ ಘಲ್ಲಣೆ
ಗಿದು ಸುದುರ್ಘಟವಿಂದು ಬಿದ್ದ ವಿಘಾತಿ ಬಲುಹೆಂದ ೧೫

ಮೊದಲಲೇ ನಿಮ್ಮವರು ನಿಮ್ಮ
ಭ್ಯುದಯವನು ಸೇರುವರೆ ಕೌರವ
ರದರೊಳಗ್ಗದ ಕರ್ಣ ಶಕುನಿ ಜಯದ್ರಥಾದಿಗಳು
ಕುದುಕುಳಿಗಳೀಚೆಯಲಿ ಕಂಸನ
ಮುದಮುಖನ ಪರಿವಾರವಿದೆ ದೂ
ರದಲಿ ಮಗಧನ ಹೊರೆಯಲದನೇ ಬಣ್ಣಿಸುವೆನೆಂದ ೧೬

ಕಾಲಯವನಾ ದಂತವಕ್ರ ನೃ
ಪಾಲರಲಿ ದುರುದುಂಬಿಯೈ ಶಿಶು
ಪಾಲ ಪೌಂಡ್ರಕರೆಂಬರಿಗೆ ಸಮದಂಡಿಯೆಮ್ಮೊಡನೆ
ಖೂಳರೀರ್ವರು ಹಂಸ ಡಿಬಿಕರು
ಸಾಲುವನ ಮುರ ನರಕರಾಳನ
ಮೇಳವವನೇನೆಂಬೆನೈ ಭೂಪಾಲ ಕೇಳೆಂದ ೧೭

ಕೆಲವರಿದರೊಳು ನಮ್ಮ ಕೈಯಲಿ
ಕೊಲೆಗೆ ಭಂಗಕೆ ಬಂದು ಬಿಟ್ಟರು
ಕೆಲಕೆ ಸರಿವವನಲ್ಲ ಮಲೆವರ ಮಾರಿ ಮಾಗಧನು
ಬಳಿಕೆಮಗೆ ಬಲವದ್ವಿರೋಧದ
ತೊಳಸು ಬಿದ್ದುದು ತೋಟಿಗಾರದೆ
ಜಲಧಿ ಮಧ್ಯದಲೂರ ಕಟ್ಟಿದೆವರಸ ಕೇಳೆಂದ ೧೮

ಮಾವದೇವನ ಮುರಿದಡಾತನ
ದೇವಿಯರು ಬಳಿಕೆಮ್ಮ ದೂರಿದ
ರಾ ವಿಗಡ ಮಗಧಂಗೆ ಮಥುರೆಯ ಮೇಲೆ ದಂಡಾಯ್ತು
ನಾವು ನಾನಾ ದುರ್ಗದಲಿ ಸಂ
ಭಾವಿಸಿದೆವಾತನನು ನಿಮ್ಮೊಡ
ನಾವು ಕೂಡಿದಡಾತ ಮುನಿಯನೆ ಭೂಪ ಕೇಳೆಂದ ೧೯

ಅರಸ ಕೇಳ್ನೂರೊಂದು ವಂಶದ
ಧರಣಿಪರು ಮಾಗಧನ ಮನೆಯಲಿ
ಸೆರೆಯಲೈದರೆ ಬಿಡಿಸಬೇಕು ನಿರಂತರಾಯದಲಿ
ದುರುಳನವ ಭಗದತ್ತ ಬಾಹ್ಲಿಕ
ನರಕ ವೃದ್ಧಕ್ಷತ್ರ ಮೊದಲಾ
ದರಸುಗಳು ಬಲ ಗರ್ವಿತರಸಂಖ್ಯಾತರಹರೆಂದ ೨೦

ಅವರಿರಲಿ ಮತ್ತಿತ್ತಲುತ್ತರ
ದವನಿಪರು ದಕ್ಕಡರು ಧರಣೀ
ಧವರೊಳಧಿಕ ದೊತಾರರಗ್ಗದ ಚೀನ ಬೋಟಕರು
ರವಿಯುದಯಗಿರಿ ಶಿಖರದಲಿ ಪಾ
ರ್ಥಿವರು ದಕ್ಷಿಣ ಚೋಳ ಪಾಂಡ್ಯ
ಪ್ರವರರದೆ ವಿಕ್ರಮ ಹಿರಣ್ಯ ಮದಾಂಧರವರೆಂದ ೨೧

ಓಕಿ ಚತುರಂಗದ ನೃಪಾಲರ
ನೂಕಬಹುದಿದಕೇನು ಯಾಗ
ವ್ಯಾಕರಣಕಿವರಿಬ್ಬರೇ ದೂಷಕರು ಧರಣಿಯಲಿ
ಈ ಕುಠಾರರು ಕದನ ಮುಖದವಿ
ವೇಕಿಗಳು ಶಿಶುಪಾಲ ಮಾಗಧ
ರಾಕೆವಾಳರು ವೈರಿರಾಯರೊಳರಸ ಕೇಳೆಂದ ೨೨

ಅಧಿಕರಿವರಿಬ್ಬರೊಳಗಾ ಮಾ
ಗಧನೆ ಬಲುಗೈ ರಾಜಸೂಯಕೆ
ಸದರವನು ನಾ ಕಾಣೆನಾತನ ಖಂಡೆಯದ ಮೊನೆಗೆ
ನಿಧನವಲ್ಲದೆ ಧನವ ನೆರಹುವ
ಹದನ ನೀನೇ ಕಾಂಬೆಯಾತನ
ವಧೆಯು ಹರಿಯದು ನಮ್ಮ ಕೈಯಲಿ ರಾಯ ಕೇಳೆಂದ ೨೩

ಕಂಸನನು ಕೆಡಹಿದೆವು ಮುರಿದೆವು
ಹಂಸ ಡಿಬಿಕರ ಪೌಂಡ್ರಕರ ನಿ
ರ್ವಂಶವೆನೆ ಸವರಿದೆವು ಮುರ ನರಕಾದಿ ದಾನವರ
ಹಿಂಸೆಯಿವನಲಿ ಹರಿಯದಿವ ನಿ
ಸ್ಸಂಶಯನು ವಿಜಯದಲಿ ಯಾಗ
ಧ್ವಂಸಕನ ನೆರೆ ಮುರಿವುಪಾಯವ ಕಾಣೆ ನಾನೆಂದ ೨೪

ಈಸು ಘನವೇ ಕೃಷ್ಣ ಯಾಗ
ದ್ವೇಷಿಗಳು ಹಿರಿದಾಗಲವಗಿ
ನ್ನೈಸಲೇ ವರರಾಜಸೂಯಾಧ್ವರಕೆ ಸಂನ್ಯಾಸ
ಈಸು ದೈತ್ಯರು ನಿನ್ನ ಕೈಯಲಿ
ಘಾಸಿಯಾದರು ಮಗಧನೊಬ್ಬನು
ಮೀಸಲಳಿಯನು ಗಡ ಮಹಾದೇವೆಂದನಾ ಭೂಪ ೨೫

ಅಹಹ ಯಾಗವ್ರತಕೆ ಭಂಗವ
ತಹುದೆ ಜೀಯ ಮುರಾರಿ ಕೃಪೆ ಸ
ನ್ನಿಹಿತವಾಗಲಿ ಸಾಕು ನೋಡಾ ತನ್ನ ಕೈಗುಣವ
ಬಹಳ ಬಲನೇ ಮಾಗಧನು ನಿನ
ಗಹಿತನೇ ತಾ ಮೀಳೆಯುವ ಸುರ
ಮಹಿಳೆಯರ ತೋಳಿನಲಿ ತೋರುವೆನೆಂದನಾ ಭೀಮ ೨೬

ಮುರುಕಿಸುವ ಮನ್ನೆಯರ ನಾಳವ
ಮುರಿವೆನಖಿಳ ದ್ವೀಪ ಪತಿಗಳ
ತೆರಿಸುವೆನು ಹೊರಿಸುವೆನು ನೆತ್ತಿಯಲವರ ವಸ್ತುಗಳ
ಕರುಬನೇ ಮಾಗಧನು ರಣದಲಿ
ತರಿವೆನಾತನ ನಿಮ್ಮ ಯಾಗದ
ಹೊರಿಗೆ ತನ್ನದು ಕರೆಸು ಋಷಿಗಳನೆಂದನಾ ಭೀಮ ೨೭

ಅಹುದಲೇ ಬಳಿಕೇನು ಯಾಗೋ
ಪಹರಣಕೆ ಸಂನ್ಯಾಸ ಗಡ ವಿ
ಗ್ರಹದಲಧಿಕರು ಗಡ ಜರಾಸಂಧಾದಿ ನಾಯಕರು
ಮಹಿಯ ಮನ್ನೆಯರಧ್ವರವ ನಿ
ರ್ವಹಿಸಲೀಯರು ಗಡ ಶಿವಾ ಶಿವ
ರಹವ ಮಾಡಿದನರಸನೆಂದನು ನಗುತ ಕಲಿಪಾರ್ಥ ೨೮

ಏಕೆ ಗಾಂಡಿವವಿದು ಶರಾವಳಿ
ಯೇಕೆ ಇಂದ್ರಾಗ್ನೇಯ ವಾರುಣ
ವೇಕೆ ರಥವಿದು ರಾಮಭೃತ್ಯ ಧ್ವಜ ವಿಳಾಸವಿದು
ಲೋಕರಕ್ಷಾ ಶಿಕ್ಷೆಗಿಂತಿವು
ಸಾಕು ಹುಲು ಮಂಡಳಿಕರಿವದಿರ
ನೂಕಲರಿಯದೆ ಜೀಯ ಜಂಜಡವೇಕೆ ಬೆಸಸೆಂದ ೨೯

ನೆರಹು ಹಾರುವರನು ದಿಗಂತಕೆ
ಹರಹು ನಮ್ಮನು ಬಂಧುವರ್ಗವ
ಕರೆಸು ರಚಿಸಲಿ ಕಾಣಬೇಹುದು ಕದನ ಕಾಮುಕರ
ಸೊರಹಲರಿಯೆನು ಸಾಧುಗಳನಾ
ದರಿಸುವೆನು ಚಾವಟೆಯರನು ಚಿ
ಮ್ಮುರಿಯ ಬಿಗಿಸುವೆನವರಿಯರ ಕಡೆಗಣ್ಣ ಕಣ್ಣಿಯಲಿ ೩೦

ಅಹುದು ಭೀಮಾರ್ಜುನರ ನುಡಿ ನಿ
ರ್ವಹಿಸದೇ ಬಳಿಕೇನು ನಿಜಕುಲ
ವಿಹಿತವಲ್ಲಾ ವಿನಯ ವಿಕ್ರಮ ವಿದ್ಯೆ ನೃಪನೀತಿ
ಗಹನವೇ ಗಂಡುಗರಿಗಿದಿರಾ
ರಹಿತ ಬಲವಿನ್ನರಸ ಚಿಂತಾ
ಮಹಿಳೆಗವಸರವಲ್ಲ ಮನ ಮಾಡೆಂದನಸುರಾರಿ ೩೧

ಎಮಗೆ ಭೀಮಾರ್ಜುನರ ಕೊಡು ರಿಪು
ರಮಣಿಯರ ಸೀಮಂತ ಮಣಿಗಳ
ನಿಮಿಷದಲಿ ತರಿಸುವೆನು ಹರಿಸುವೆನಹಿತ ಭೂಮಿಪರ
ಸಮರ ಜಯವಿನ್ನಾಯ್ತು ಯಜ್ಞೋ
ದ್ಯಮಕೆ ನಿಷ್ಪ್ರತ್ಯೂಹವಿನ್ನು
ಭ್ರಮೆಯ ಮಾಡದಿರೆಂದು ನೃಪತಿಗೆ ನುಡಿದನಸುರಾರಿ ೩೨

ಕಂಗಳನುಜರು ಚಿತ್ತ ನೀವೆ
ನ್ನಂಗವಣೆಗಿನ್ನೇನು ಭಯವಾ
ವಂಗದಲಿ ನಂಬಿಹೆವಲೇ ನಿಮ್ಮಂಘ್ರಿಪಂಕಜವ
ಸಂಗರದ ಜಯ ನಿನ್ನದಲ್ಲಿಯ
ಭಂಗ ನಿನ್ನದು ಭಕ್ತ ಜನದನು
ಸಂಗಿ ನೀನಿರಲೇನು ನಮಗರಿದೆಂದನಾ ಭೂಪ ೩೩

ವಿಗಡ ಯಾಗಕೆ ಸಕಲ ರಾಯರು
ಹಗೆ ಮರುತ್ತನು ಕಾರ್ತವೀರ್ಯಾ
ದಿಗಳು ಕೆಲವರಶಕ್ತರಾದರು ರಾಜಸೂಯದಲಿ
ಬಗೆಯಲಿದ ದುಷ್ಕಾಲವಸುರರೊ
ಳಗಡು ಮಾಗಧನವನ ಮುರಿದರೆ
ಸುಗಮ ನಿಮ್ಮಯ್ಯಂಗೆ ಸುರಪದವೆಂದನಸುರಾರಿ ೩೪

ಆರವನು ಹಿರಿದಾಗಿ ನೀ ಕೈ
ವಾರಿಸುವೆ ಕಮಲಾಕ್ಷ ಮಾಗಧ
ನಾರುಭಟೆ ತಾನೇನು ವರವೋ ಸಹಜ ವಿಕ್ರಮವೊ
ವೀರರಿದೆ ಸಿಡಿಲಂತೆ ಸಕಲ ಮ
ಹೀ ರಮಣರಿದರೊಳಗೆ ನೃಪ ಮುಖ
ವೈರಿ ಗಡ ಬೆಸಸೆಂದಡೆಂದನು ನಗುತ ಮುರವೈರಿ ೩೫

ಧರಣಿಪತಿ ಕೇಳೈ ಬೃಹದ್ರಥ
ನರಸು ಮಾಗಧಮಂಡಲಕೆ ತ
ತ್ಪುರಿ ಗಿರಿವ್ರಜವೆಂಬುದಲ್ಲಿ ಸಮಸ್ತ ವಿಭವದಲಿ
ಧರೆಯ ಪಾಲಿಸುತಿದ್ದನಾತಂ
ಗರಸಿಯರು ಸೇರಿದರು ಕಾಶೀ
ಶ್ವರನ ತನುಜೆಯರಿಬ್ಬರದುಭುತ ರೂಪು ಗುಣಯುತರು ೩೬

ಅವರೊಡನೆ ಸುಖ ಸತ್ಕಥಾ ಸಂ
ಭವ ವಿನೋದದಲಿದ್ದನೀ ವೈ
ಭವ ಫಲವಪುತ್ರರಿಗೆ ಬಹು ದುಃಖೋಪಚಯವೆಂದು
ಅವನಿಪತಿ ವೈರಾಗ್ಯದಲಿ ರಾ
ಜ್ಯವನು ಬಿಸುಟು ತಪಃ ಪ್ರಭಾವ
ವ್ಯವಹರಣೆಯಲಿ ತನುವ ನೂಕುವೆನೆನುತ ಹೊರವಂಟ ೩೭

ಊರ ಹೊರವಡುವುತ್ತ ಕಂಡನು
ಪಾರಿಕಾಂಕ್ಷಿಯನೊಬ್ಬನನು ಮುನಿ
ವೀರಕಾಂಕ್ಷಿಯನಾಂಗಿರಾತ್ಮಜ ಚಂಡ ಕೌಶಿಕನ
ನಾರಿಯರು ಸಹಿತವನ ಚರಣಾಂ
ಭೋರುಹಕ್ಕಭಿನಮಿಸಲತಿ ವಿ
ಸ್ತಾರಿಸಿದನಾಶೀರ್ವಚನವನು ಮುನಿ ನೃಪಾಲಂಗೆ ೩೮

ಏನಿದರಸನೆ ವದನದಲಿ ದು
ಮ್ಮಾನವೆನಲನಪತ್ಯತಾ ಚಿಂ
ತಾನುರೂಪದ ದುಗುಡವಿದು ನಿಮ್ಮಂಘ್ರಿ ಸೇವೆಯಲಿ
ಹಾನಿ ದುಷ್ಕೃತಕಹುದಲೇ ಸುತ
ಹೀನರಾಜ್ಯವ ಬಿಸುಟೆನೆನಗೀ
ಕಾನನದ ಸಿರಿ ಸಾಕೆನುತ ಬಿಸುಸುಯ್ದನಾ ಭೂಪ ೩೯

ಐಸಲೇ ಸುತಹೀನ ರಾಜ್ಯವಿ
ಳಾಸ ನಿಷ್ಫಲವಹುದಲೇ ಸಂ
ತೋಷವೇ ಸುತಲಾಭವಾದರೆ ಹೊಲ್ಲಯೇನಿದಕೆ
ಆ ಸಮರ್ಥ ಮುನೀಂದ್ರನಂತ
ರ್ಭಾಸಿತಾತ್ಮ ಧ್ಯಾನ ಸುಖ ವಿ
ನ್ಯಾಸದಿರಲಂಕದಲಿ ಬಿದ್ದುದು ಮಧುರ ಚೂತಫಲ ೪೦

ಕಂದೆರೆದು ಮುನಿ ಬಳಿಕ ಭೂಪತಿ
ಗೆಂದನಿದ ಕೋ ಪುತ್ರಸಂತತಿ
ಗೆಂದು ಸಾಧನವಿದನು ಕೊಡು ನೀನೊಲಿದು ವಧುಗೆನಲು
ಕಂದಿದಾನನ ಉಜ್ವಲ ಪ್ರಭೆ
ಯಿಂದ ಬೆಳಗಿತು ರಾಣಿಯರು ಸಹಿ
ತಂದು ಮುನಿ ಪದಕೆರಗಿ ಪರಿತೋಷದಲಿ ನಿಂದಿರ್ದ ೪೧

ವರವನೊಂದನು ಹೆಸರುಗೊಂಡೀ
ಧರಣಿಪತಿಗಾ ಮುನಿಪ ಕೊಟ್ಟನು
ಪುರಕೆ ಮರಳಿದನರಸನಾ ಮುನಿ ತೀರ್ಥಯಾತ್ರೆಯಲಿ
ಸರಿದನತ್ತಲು ಚೂತಫಲವಿದ
ನೆರಡು ಮಾಡಿ ಬೃಹದ್ರಥನು ತ
ನ್ನರಸಿಯರಿಗಿತ್ತನು ಯುಧಿಷ್ಠಿರ ಕೇಳು ಕೌತುಕವ ೪೨

ಬಲಿದುದವರಿಗೆ ಗರ್ಭ ಜನನದ
ನೆಲೆಯ ಕಾಲಕೆ ಸತಿಯರುದರದೊ
ಳಿಳಿದುದೊಂದೊಂದವಯವದ ಸೀಳೆರಡು ಸಮವಾಗಿ
ಬಳಿಕ ಕಂಡವರಕಟ ದುಷ್ಕೃತ
ಫಲವೆ ಸುಡಲಿವನೆನುತ ಬಿಸುಟರು
ಹೊಳಲ ಹೊರಬಾಹೆಯಲಿ ನಡುವಿರುಳರಸ ಕೇಳೆಂದ ೪೩

ನಡುವಿರುಳು ಜರೆಯೆಂಬ ರಕ್ಕಸಿ
ಯಡಗನರಸುತ ಬಂದು ಕಂಡಳು
ಮಿಡುಕುವೀ ಸೀಳೆರಡವನು ಹೊರ ಹೊಳಲ ಬಾಹೆಯಲಿ
ತುಡುಕಿದಳು ಸೀಳ್ದೇಕೆ ತಿನ್ನದೆ
ಮಡಗಿದರೊ ಕೌತುಕವದೇನೀ
ಯೆಡಬಲನಿದೆಂದಸುರೆ ದಿಟ್ಟಿಸಿ ನೋಡಿದಳು ಶಿಶುವ ೪೪

ಶಿಶುವನಾರೋ ಸೀಳ್ದು ತಿನ್ನದೆ
ಬಿಸುಟು ಹೋದರೆನುತ್ತ ಜರೆ ಸಂ
ಧಿಸಿದಳಾಕಸ್ಮಿಕದ ಸೀಳೆರಡನು ವಿನೋದದಲಿ
ಪಸರಿಸಿದುದಸು ಮೇಘರವ ಘೂ
ರ್ಮಿಸುವೊಲ್ ಚೀರಿದನು ಗಿರಿಗಳ
ಬೆಸುಗೆ ಬಿಡೆ ನಡುವಿರುಳು ಕೋಳಾಹಳಿಸಿತಾ ರಭಸ ೪೫

ಊರ ಹೊರವಳಯದಲಿದೇನು ಮ
ಹಾ ರಭಸವಿರುಳೆನುತ ಹರಿದುದು
ಪೌರಜನ ರ್ಝೋಂಪಿಸುವ ಕೈದೀವಿಗೆಯ ಬೆಳಗಿನಲಿ
ಆರಿವಳು ತಾನೆನುತ ಕಂಡುದು
ದೂರದಲಿ ದಾನವಿಯನವಳ ಘ
ನೋರುಗಳ ಸೋಗಿಲಲಿ ಕೈದೊಟ್ಟಿಲ ಕುಮಾರಕನ ೪೬

ನಿಂದುದಲ್ಲಿಯದಲ್ಲಿ ರಕ್ಕಸಿ
ಯೆಂದು ಭಯದಲಿ ಬಳಿಕ ಕರುಣದ
ಲೆಂದಳವಳಂಜದಿರಿ ಹೋಹೊ.ಯೆನುತ ಕೈ ನೆಗಹಿ
ಇಂದಿವನು ಮಗನೆನಗೆ ಭೂಪತಿ
ಬಂದನಾದರೆ ಕೊಡುವೆನೀತನ
ನೆಂದಡಾಕ್ಷಣ ಕೇಳಿ ಹರಿತಂದನು ಮಹೀಪಾಲ ೪೭

ಅರಸ ಕೋ ನಿನ್ನವನನೀ ಮುನಿ
ವರ ಕುಮಾರನನೆನ್ನ ಹೆಸರಲಿ
ಕರೆವುದೀತನ ಸೀಳ ಬೆಚ್ಚವಳಾನು ಬೆದರದಿರು
ಜರೆಯೆನಿಪುದಭಿಧಾನವೆನ್ನದು
ವರ ಜರಾಸಂಧಕನಿವನು ಸುರ
ನರರೊಳಗೆ ಬಲುಗೈಯನಹನೆಂದಿತ್ತಳರ್ಭಕನ ೪೮

ಅಸುರೆಯನು ಮನ್ನಿಸಿದನಾಕೆಯ
ಪೆಸರ ಮಗನಿವನೆಂದು ಲೋಕ
ಪ್ರಸರವರಿಯಲು ನಲವಿನಲಿ ಸಾಕಿದನು ಮಾಗಧನ
ಅಸುರರಲಿ ಮರ್ತ್ಯರಲಿ ಸುರರಲಿ
ಯೆಸಕವುಳ್ಳವನೆನಿಸಿದನು ಸಾ
ಹಸದ ಜೋಡಣೆ ಜಡಿದುದವನಲಿ ರಾಯ ಕೇಳೆಂದ ೪೯

ಅದರಿನಾ ಮಾಗಧನ ಮುರಿದ
ಲ್ಲದೆ ನೃಪಾಲಕರಂಜಿ ಕಪ್ಪದೊ
ಳೊದಗಲರಿಯರು ಮೆರೆಯಲೀಯರು ಯಾಗ ಮಂಟಪವ
ಇದು ನಿಧಾನವು ಭೀಮ ಪಾರ್ಥರಿ
ಗಿದು ಮುಹೂರ್ತವು ವೀಳೆಯವ ತಾ
ಕದನ ವಿಜಯದ ವೀರ ಸೇನೆಯನಿಕ್ಕಿ ಕಳುಹೆಂದ ೫೦

ಮರೆಯದೇತಕೆ ರಾಜಸೂಯದ
ಹೊರಿಗೆ ನಿನ್ನದು ರಾಣಿಕವ ನಾ
ನರಿಯೆನೆಮ್ಮರ್ಥಾಭಿಮಾನ ಪ್ರಾಣದೊಡೆಯನಲೆ
ಕಿರಿಯರಿವದಿರು ರಾಜಸೂಯದ
ಕರುಬರತಿ ಬಲ್ಲಿದರು ಕೃಪೆಯನು
ಮೆರೆವುದೆಂದಸುರಾರಿಯಂಘ್ರಿಗೆ ಚಾಚಿದನು ಶಿರವ ೫೧

ಎತ್ತಿದನು ಮುರವೈರಿ ರಾಯನ
ಮಸ್ತಕವ ನಸುನಗುತ ಕರೆ ಸುಮು
ಹೂರ್ತಿಕರನಕ್ಷೋಹಿಣಿಯ ಬರಹೇಳು ದಳಪತಿಯ
ಸುತ್ತಣರಸರಿಗೋಲೆಯುಡುಗೊರೆ
ಯಿತ್ತು ದೂತರ ಕಳುಹು ಬಳಿಕಿನೊ
ಳುತ್ತರೋತ್ತರಸಿದ್ಧಿ ನಿನಗಹುದೆಂದನಸುರಾರಿ ೫೨

ರೂಢಿಸಿದ ಸುಮುಹೂರ್ತದಲಿ ಹೊರ
ಬೀಡು ಬಿಟ್ಟುದು ದಧಿಯ ದೂರ್ವೆಯ
ಕೂಡಿದಕ್ಷತೆಗಳ ಸುಲಾಜಾವಳಿಯ ಮಂಗಳದ
ಜೋಡಿಗಳ ಜಯರವದ ದೈತ್ಯ ವಿ
ಭಾಡ ಸೂಕ್ತದ ವಿಗಡ ಬಿರುದು ಪ
ವಾಡಗಳ ಪಾಠಕರ ಗಡಬಡೆ ಗಾಡಿಸಿತು ನಭವ ೫೩

ಆಳು ನಡೆಯಲಿ ಮಗಧರಾಯನ
ಮೇಲೆ ದಂಡು ಮುಕುಂದ ದಳಪತಿ
ಹೇಳಿಕೆಗೆ ಭೀಮಾರ್ಜುನರ ಬರಹೇಳು ಹೇಳೆನುತ
ಆಳು ಸಾರಿದರವನಿಪತಿಗಳು
ಮೇಳದಲಿ ಹೊರವಂಟು ಬರೆ ದ
ಟ್ಟಾಳವನು ನೋಡಿದರು ನಡೆದರು ಪಯಣಗತಿಗಳಲಿ ೫೪

ಜನಪ ಕೇಳೈ ಕೃಷ್ಣ ಭೀಮಾ
ರ್ಜುನರು ವಿಮಳಸ್ನಾತಕವ್ರತ
ಮುನಿಗಳಾದರು ನಡೆದು ಪಯಣದ ಮೇಲೆ ಪಯಣದಲಿ
ಜನದ ಕಾಣಿಕೆಗೊಳುತ ನಾನಾ
ಜನಪದಂಗಳ ಕಳೆದು ಗಂಗಾ
ವಿನುತ ನದಿಯನು ಹಾಯ್ದು ಬಂದರು ಪೂರ್ವ ಮುಖವಾಗಿ ೫೫

ಬರುತ ಕಂಡರು ಕೂಡೆ ಕೊಬ್ಬಿದ
ಸಿರಿಯನೂರೂರುಗಳ ಸೊಂಪಿನ
ಭರಿತವನು ಗೋಧನ ಸಮೃದ್ಧಿಯ ಧಾನ್ಯರಾಶಿಗಳ
ವರ ನದಿಯ ಕಾಲುವೆಯ ತೋಟದ
ತೆರಳಿಕೆಯ ಪನಸಾಮ್ರ ಪೂಗೋ
ತ್ಕರದ ರಮ್ಯಾರಾಮ ಮಂಡಿತ ಮಗಧಮಂಡಲವ ೫೬

ಮೆಳೆಗಳೇ ದ್ರಾಕ್ಷೆಗಳು ವೃಕ್ಷಾ
ವಳಿಗಳೇ ಸಹಕಾರ ದಾಡಿಮ
ಫಲಿತ ಪನಸ ಕ್ರಮುಕ ಜಂಬೂ ಮಾತುಳಂಗಮಯ
ಕಳವೆ ಶಾಲೀಮಯವು ಹೊಸಲ
ಸ್ಫಳಿತ ಲಕ್ಷ್ಮೀಮಯವು ನಗರಾ
ವಳಿಗಳೆನೆ ಶೋಭಿಸಿತು ಜನಪದವಿವರ ಕಣುಮನಕೆ ೫೭

ದೇಶ ಹಗೆವನದೆಂದು ಕಡ್ಡಿಯ
ಘಾಸಿ ಮಾಡದೆ ಮಿಗೆ ವಿನೋದದ
ಲೈಸು ಪಡೆ ನಡೆತಂದು ಬಿಟ್ಟುದು ಗಿರಿಯ ತಪ್ಪಲಲಿ
ಆ ಸರೋರುಹ ಬಂಧು ಚರಮಾ
ಶಾ ಸತಿಯ ಚುಂಬಿಸೆ ಗಿರಿವ್ರಜ
ದಾ ಶಿಖರವನು ಹತ್ತಿದರು ಹರಿ ಭೀಮ ಫಲುಗುಣರು ೫೮

ವೃಷಭಚರ್ಮ ನಿಬದ್ಧ ಭೇರಿಗ
ಳೆಸೆದವಕ್ಷತೆ ಗಂಧಮಾಲ್ಯ
ಪ್ರಸರದಲಿ ಶೈಲಾಗ್ರದಲಿ ಸಂಪನ್ನ ಪೂಜೆಯಲಿ
ಅಸುರರಿಪು ಭೀಮಾರ್ಜುನರು ತ
ದ್ವಿಷಮ ಭೇರೀತ್ರಯವ ಹೊಯ್ದೆ
ಬ್ಬಿಸಿದರದುಭುತ ರವ ಮಿಗಿಲು ಕೆಡೆದುದು ಧರಿತ್ರಿಯಲಿ ೫೯

ಏನಿದದುಭುತವೆಂದು ನಡುವಿರು
ಳಾ ನರೇಶ್ವರನಮಳ ವೇದ ವಿ
ಧಾನದಲಿ ತಚ್ಛಾಂತಿಗೋಸುಗ ಕರೆಸಿ ಭೂಸುರರ
ದಾನದಲಿ ವಿವಿಧಾಗ್ನಿಕಾರ್ಯ ವಿ
ಧಾನದಲಿ ವಿಪ್ರೌಘವಚನ ಸ
ಘಾನದಲಿ ಮಗಧೇಶನಿದ್ದನು ರಾಯ ಕೇಳೆಂದ ೬೦

ಇವರು ಗಿರಿಯಿಂದಿಳಿದು ರಾತ್ರಿಯೊ
ಳವನ ನಗರಿಯ ರಾಜ ಬೀದಿಯ
ವಿವಿಧ ವಸ್ತುವ ಸೂರೆಗೊಂಡರು ಹಾಯ್ದು ದಳದುಳವ
ತ್ರಿವಿದರಡ್ಡೈಸಿದರನುಬ್ಬಿದ
ತವಕಿಗರು ಮಗಧೇಂದ್ರರಾಯನ
ಭವನವನು ಹೊಕ್ಕರು ವಿಡಂಬದ ವಿಪ್ರವೇಷದಲಿ ೬೧

ಉರವಣಿಸಿದರು ಮೂರು ಕೋಟೆಯ
ಮುರಿದರಾ ದ್ವಾರದಲಿ ರಾಯನ
ಹೊರೆಗೆ ಬಂದರು ಕಂಡರಿದಿರೆದ್ದನು ಜರಾಸಂಧ
ಧರಣಿಯಮರರಪೂರ್ವಿಗರು ಭಾ
ಸುರರು ಭದ್ರಾಕಾರರೆಂದಾ
ದರಿಸಿ ಮಧುಪರ್ಕಾದಿಗಳ ಮಾಡಿದನು ಭಕ್ತಿಯಲಿ ೬೨

ಕೇಳಿದನು ಕುಶಲವನು ಕುಶಲವ
ಹೇಳಿದರು ಕುಳ್ಳಿರಿಯೆನಲು ಭೂ
ಪಾಲಕರು ಕುಳ್ಳಿರ್ದರವೆಯಿಕ್ಕದೆ ನಿರೀಕ್ಷಿಸುತ
ಹೇಳಿರೈ ನಿಮಗಾವ ದೇಶ ವಿ
ಶಾಲ ಗೋತ್ರವದಾವುದೆನುತ ವಿ
ಲೋಲ ಮತಿ ಚಿಂತಿಸಿದನಿವದಿರು ವಿಪ್ರರಲ್ಲೆಂದು ೬೩

ಸ್ನಾತಕ ವ್ರತ ವೇಷದಲಿ ಬಂ
ದಾತಗಳು ತಾವಿವರು ಶಸ್ತ್ರ
ವ್ರಾತದಲಿ ಶಿಕ್ಷಿತರು ಕರ್ಕಶ ಬಾಹುಪಾಣಿಗಳು
ಕೈತವದಿನೈತಂದರರ್ಥವ
ನೀತಗಳು ಬಯಸರು ವಿರೋಧ
ಪ್ರೀತಿಮುಖರಿವರಾರೊ ಶಿವಶಿವಯೆನುತ ಚಿಂತಿಸಿದ ೬೪

ಆರಿವರು ದೇವತ್ರಯವೊ ಜಂ
ಭಾರಿ ಯಮ ಮಾರುತರೊ ರವಿ ರಜ
ನೀ ರಮಣ ಪಾವಕರೊ ಕಪಟ ಸ್ನಾತಕವ್ರತದ
ಧಾರುಣೀಶ್ವರರೊಳಗೆ ಧಿಟ್ಟರ
ದಾರು ತನ್ನೊಳು ತೊಡಕಿ ನಿಲುವ ವಿ
ಕಾರಿಗಳ ನಾ ಕಾಣೆನೆಂದನು ತನ್ನ ಮನದೊಳಗೆ ೬೫

ಈಗ ಮಿಡುಕುಳ್ಳವರು ಮಹಿಯಲಿ
ನಾಗಪುರದರಸುಗಳು ನಮ್ಮವ
ರಾಗಿಹರು ಪಾಂಡುವಿನ ಮಕ್ಕಳು ಮೀರಿ ಖಳರಲ್ಲ
ಸಾಗರೋಪಾಂತ್ಯದ ನರೇಂದ್ರರು
ಭೋಗಿಸಿದ ಮುತ್ತುಗಳು ಭಾವಿಸ
ಲೀ ಗಯಾಳರ ಗರ್ವವೇನು ನಿಮಿತ್ತವಾಯ್ತೆಂದ ೬೬

ಯಾದವರು ಹಿಂದೆಮ್ಮೊಡನೆ ಹಗೆ
ಯಾದವರು ಬಳಿಕವರೊಳಗೆ ತುರು
ಗಾದವನ ಕರುಗಾದವನ ಮಾಧವನ ಮಾತೇನು
ಮೇದಿನಿಯ ಮಂಡಳಿಕ ಮನ್ನೆಯ
ರಾದವರು ಸಮ್ಮೊಡನೆ ಸೆಣಸುವ
ರಾದಡಿದು ದುಷ್ಕಾಲ ವಶವಿದು ಚಿತ್ರವಾಯ್ತೆಂದ ೬೭

ಬವರಿಗರು ನೀವ್ ವಿಪ್ರವೇಷದ
ಜವನಿಕೆಯ ಜಾಣಾಯ್ಲತನದಿಂ
ದವಗಡಿಸಿ ಹೊಕ್ಕಿರಿಯಪದ್ವಾರದಲಿ ನೃಪಸಭೆಯ
ನಿವಗಿದೇನೀ ವಸನ ಕಪಟ
ವ್ಯವಹರಣೆ ಕೃತ್ರಿಮವೊ ಸಹಜವೊ
ರವಣ ಮತ್ತೇಸುಂಟು ಹೇಳಿನ್ನಂಜಬೇಡೆಂದ ೬೮

ಸ್ನಾತಕವ್ರತವೇನು ಪಾರ್ಥಿವ
ಜಾತಿಗಿಲ್ಲಲೆ ವೈಶ್ಯ ಕುಲಕಿದು
ಪಾತಕವು ನಾವಿಂದು ಪಾರ್ಥಿವ ಜಾತಿ ಸಂಭವರು
ಸ್ನಾತಕರು ನಾವ್ ವೈರಿ ಗೃಹದಲ
ಭೀತರದ್ವಾರ ಪ್ರವೇಶವ
ನೀತಿಯಲ್ಲ ಪುರಾಣಸಿದ್ಧ ವಿದೆಂದನಸುರಾರಿ ೬೯

ವೈರಿ ಭವನವೆ ನಮ್ಮದಿದು ನಾವ್
ವೈರಿಗಳೆ ನಿಮಗೆಮಗೆ ಜನಿಸಿದ
ವೈರಬಂಧ ನಿಮಿತ್ತವಾವುದು ನಿಮ್ಮ ಪಕ್ಷದಲಿ
ಆರು ನೀವೀ ಬ್ರಾಹ್ಮಣರು ನಿಮ
ಗಾರುಪಾಧ್ಯರು ಹೇಳಿ ನಿಮ್ಮ ವಿ
ಕಾರ ಬರಿದೇ ಹೋಗದೆಂದನು ಮಗಧಪತಿ ನಗುತ ೭೦

ಮುರಿದು ಹಲಬರಿಳಾಧಿನಾಥರ
ಸೆರೆಯಲಿಕ್ಕಿದೆ ರಾಜ್ಯಮದದಲಿ
ಮರೆದು ಮಾನ್ಯರನಿರಿದು ಹೆಚ್ಚಿಸಿಕೊಂಡೆ ಭುಜಬಲವ
ಅರಿಯದಳುಪಿದ ಪಾತಕಕೆ ಬಿಡು
ಸೆರೆಯ ಪ್ರಾಯಶ್ಚಿತ್ತವಿದು ನಾ
ವುರುವ ವೇಷದುಪಾಧ್ಯರೆಂದನು ನಗುತ ಮುರಹರನು ೭೧

ಆ ನೃಪಾಲರ ಮಗನೊ ಮೊಮ್ಮಗನೊ
ನೀನವರ ಬಾಂಧವನೊ ಭೃತ್ಯನೊ
ನೂನವಕ್ಷನೊ ಬೆರಳ ಬದೆಗನೊ ಕುರುಳ ಕೋಮಳನೊ
ಏನು ನಿನ್ನಂಘವಣೆ ನೀನಾ
ರಾ ನರೇಂದ್ರರ ಸೆರೆಯ ಬಿಡುಂಗಡೆ
ಗೇನನೆಂಬೆನು ರಹವನೆಂದನು ತೂಗಿ ಮಣಿಶಿರವ ೭೨

ಎಲವೊ ಧರೆಯಲಧರ್ಮಶೀಲರ
ತಲೆಯ ಚೆಂಡಾಡುವೆವು ಧರ್ಮವ
ನೊಲಿದು ಕೊಂಡಾಡುವೆವು ಶಿಕ್ಷಾ ರಕ್ಷಣ ವ್ಯಸನ
ನೆಲೆ ನಮಗೆ ನೀನರಿಯೆ ರಾಜಾ
ವಳಿಯ ಬಿಡು ಘಡ ಭಂಡ ವಿದ್ಯೆಯ
ಬಳಸುವಾ ನಮ್ಮೊಡನೆಯೆಂದನು ದಾನವಧ್ವಂಸಿ ೭೩

ಇವರು ಗಡ ಜಗದೊಳಗೆ ಶಿಕ್ಷಾ
ಸವನದಲಿ ದೀಕ್ಷಿತರು ಗಡ ಕೈ
ತವದ ಭಂಡರು ನೀವೊ ನಾವೋ ಸಾಕದಂತಿರಲಿ
ಕವಡುತನದಲಿ ದಿಟ್ಟರಹಿರಂ
ಘವಣೆಯೊಳ್ಳಿತು ನಿಮ್ಮ ನಿಜವನು
ವಿವರಿಸಿರೆ ನೀವಾರು ಹೇಳೆಂದನು ಜರಾಸಂಧ ೭೪

ಕೇಳಿ ಮಾಡುವುದೇನು ತಾನಸು
ರಾಳಿ ಧೂಳೀಪಟಲ ವೈರಿ ನೃ
ಪಾಲ ಚೌಪಟಮಲ್ಲನೀತನು ಭೀಮಸೇನ ಕಣಾ
ಭಾಳನೇತ್ರನ ಭುಜಬಲದ ಸಮ
ಪಾಳಿಯರ್ಜುನನೀತನೇಳಾ
ಕಾಳಗವ ಕೊಡು ನಮ್ಮೊಳೊಬ್ಬರಿಗೆಂದನಸುರಾರಿ ೭೫

ಕೇಳಿ ಕೆದರಿದ ಕಡು ನಗೆಯುಲಡ
ಬೀಳುತೇಳುತ ಬಿರುವನಿಯು ಕ
ಣ್ಣಾಲಿಗಳ ಝೊಮ್ಮೆದ್ದ ರೋಮದ ಜಡಿವ ಬಿಡುದಲೆಯ
ಸೂಳು ನಗೆ ಬಿಳಿನಗೆಯುಲಡಿಗಡಿ
ಗಾಳಿ ಮುಸುಗುಬ್ಬಸದಲಿದ್ದು ಕ
ರಾಳಮತಿ ಸಂತೈಸಿ ನೆರೆ ತನ್ನವರಿಗಿಂತೆಂದ ೭೬

ಈತನಾರೆಂದರಿವಿರೈ ನ
ಮ್ಮಾತ್ತನೀತನು ನಮ್ಮ ಕಂಸಂ
ಗೀತನಳಿಯನು ನಮಗೆ ಮೊಮ್ಮನು ಮಗನು ದೇವಕಿಗೆ
ಈತ ಕಾಣಿರೆ ಹಿಂದೆ ಚೌರಾ
ಶೀತಿ ದುರ್ಗದೊಳೋಡಿ ಬದುಕಿದ
ನೀತ ಬಲುಗೈ ಬಂಟನೆಂದನು ಮಗಧಪತಿ ನಗುತ ೭೭

ಕೊಳಲ ರಾಗದ ರಹಿಯೊ ಕಲ್ಲಿಯ
ಕಲಸುಗಳೋ ಹಳ್ಳಿಕಾತಿಯ
ರೊಳಗುಡಿಯ ಹಾದರವೊ ತುರುಗಾಹಿಗಳ ತೋಹುಗಳೊ
ಬಲುಸರಳ ಸರಿವಳೆಯ ಮಿದುಳೊಡೆ
ಗಲಸುಗಳಡಾಯುಧದ ತಳುಕಿನ
ಕೊಳುಗುಳದ ಜಯಸಿರಿಯ ಕಾಹಿನೊಳಾರು ನೀನೆಂದ ೭೮

ಹೋರಿ ಹೆಂಗುಸು ಬಂಡಿ ಪಕ್ಷಿ ಸ
ಮೀರಣಾಶ್ವಜಗರ ಗಾರ್ದಭ
ವೀರರೀತನ ಘಾತಿಗಳುಕಿತು ಕಂಸ ಪರಿವಾರ
ಆರುಭಟೆಯುಳ್ಳವನು ಕಂಸನ
ತೋರಹತ್ತನ ತೊಡಕಿದನು ಗಡ
ಭಾರಿಯಾಳಹನುಂಟು ಶಿವಶಿವಯೆಂದನಾ ಮಗಧ ೭೯

ಎಲವೊ ಗೋವಳ ನಿನ್ನ ಕಂಸನ
ನಿಳಯುವೋ ಪೌಂಡ್ರಕನ ಕದನದ
ಕಳನೊ ಹಂಸನ ಹೋರಟೆಯೊ ಮೇಣ್ ಡಿಬಿಕನಡುಪಾಯೊ
ಹುಲಿಗೆ ಮೊಲನಭ್ಯಾಗತನೆ ಕರಿ
ಕಳಭ ಸಿಂಹಕೆ ಸರಿಯೆ ನೀ ನಿ
ನ್ನಳವನರಿಯದೆ ಹೊಕ್ಕು ಕೆಣಕಿದೆ ಕೆಟ್ಟೆ ಹೋಗೆಂದ ೮೦

ಇದುವೆ ಚಿತ್ತದ ವಿಕಳವೋ ಮ
ದ್ಯದ ವಿಕಾರವೊ ಭಂಗಿ ತಲೆಗೇ
ರಿದುದೊ ಭಟನಾದರೆ ವಿಘಾತದಲೇಳು ಕಾಳಗಕೆ
ಸದನ ನಿನ್ನದು ಸೂಳೆಯರ ಮುಂ
ದೊದರಿ ಫಲವೇನೆದ್ದು ಬಾ ಬಾ
ಳದಲಿ ಬರೆದುದ ತೊಡೆವೆನೆಂದನು ದಾನವಧ್ವಂಸಿ ೮೧

ಎಲವೊ ಗೋಪಕುಮಾರ ಕಂಸನ
ಲಲನೆಯರ ವೈಧವ್ಯ ದುಃಖಾ
ನಲನ ನಂದಿಸಲಾಯ್ತು ನಿನ್ನಯ ರುಧಿರ ಜಲಧಾರೆ
ಅಳಿದ ಕಂಸನ ಕಾಲಯವನನ
ಕಳನ ಹರಿಬವ ಗೆಲಿದು ದೈತ್ಯಾ
ವಳಿಯ ಬಂಧುತ್ವವನು ಬಳಸುವೆನೆಂದನಾ ಮಗಧ ೮೨

ಗೋವಳರು ನಿರ್ಲಜ್ಜರದರೊಳು
ನೀವು ಗರುವರು ರಾಜಪುತ್ರರು
ಸಾವ ಬಯಸುವನೊಡನೆ ಬಂದಿರಿ ತಪ್ಪ ಮಾಡಿದಿರಿ
ನೀವು ಮಕ್ಕಳು ನಿಮ್ಮ ಹಿರಿಯರ
ಠಾವಿನಲಿ ಬುಧರಿಲ್ಲಲಾ ನಿಮ
ಗಾವ ಹದನಹುದೆನುತ ನುಡಿದನು ಭೀಮ ಫಲುಗುಣರ ೮೩

ಸಾಕಿದೇತಕೆ ಹೊಳ್ಳು ನುಡಿಗೆ ವಿ
ವೇಕಿಗಳು ಮೆಚ್ಚುವರೆ ಯುದ್ಧ
ವ್ಯಾಕರಣ ಪಾಂಡಿತ್ಯವುಳ್ಳರೆ ತೋರಿಸುವುದೆಮಗೆ
ಈ ಕಮಲನೇತ್ರಂಗೆ ಫಡ ನೀ
ನಾಕೆವಾಳನೆ ಶಿವಶಿವಾ ಜಗ
ದೇಕ ದೈವದ ಕೂಡೆ ದಂಡಿಯೆಯೆಂದನಾ ಭೀಮ ೮೪

ದಿಟ್ಟರಹಿರೋ ಸಾವನರಿಯದೆ
ಕೆಟ್ಟರಕಟಾ ಕಾಳು ಗೋಪನ
ಗೊಟ್ಟಿಯಾಟಕೆ ಗುರಿಗಳಾದಿರಿ ನಿಮ್ಮ ಗುರುಸಹಿತ
ಚಟ್ಟಳೆಯ ಚತುರಾಸ್ಯನಿವರೊಡ
ಹುಟ್ಟಿದರ ಸಮಜೋಳಿ ಗಡ ಜಗ
ಜಟ್ಟಿಗಳು ತಾವಿವರೆನುತ ತಲೆದೂಗಿದನು ಮಗಧ ೮೫

ಬೈದು ಫಲವೇನೆಮಗೆ ಮೇಳದ
ಮೈದುನರು ನೀವಲ್ಲಲೇ ದಳ
ವೈದೆ ನೂಕಲಿ ನಿಮ್ಮ ಮೂವರು ಸಹಿತ ನಮ್ಮೊಡನೆ
ಕೈದುವುಂಟೇ ತರಿಸಿ ಕೊಡಿಸುವೆ
ನೈದಿ ನೀವಾಳಾಗಿ ನಿಮ್ಮೊಡ
ನೈದುವೆನು ಬಲರಾಮನುಳಿದಾನೆಂದನಾ ಮಗಧ ೮೬

ಎಲವೊ ಬಾಹಿರ ಮಗಧ ಹಲಧರ
ನುಳಿಯೆ ಪಾಂಡವ ನೃಪರು ಪರಿಯಂ
ತಳವು ನಿನಗೊಬ್ಬಂಗೆ ಸೇರುವುದೇ ಮಹಾದೇವ
ಅಳಿವು ತಪ್ಪದು ನುಡಿಯೊಳಲ್ಪವ
ಬಳಸಲೇತಕೆ ವೀರನಹೆ ನ
ಮ್ಮೊಳಗೆ ಮೂವರೊಳೊಬ್ಬನನು ವರಿಸೆಂದನಸುರಾರಿ ೮೭

ಅಕಟ ನಿಮಗೀ ಸಮರವಾವ
ಶ್ಯಕವೆ ನಮಗಖ್ಯಾತಿಯಲ್ಲಿದು
ಸಕಲ ಜನವರಿದಿರೆಯೆನುತ ನೋಡಿದನು ತನ್ನವರ
ಪ್ರಕಟವೈ ನಿಮ್ಮಾಳುತನ ಯದು
ನಿಕರಕಾವಂಜುವೆವು ರಣ ನಾ
ಟಕ ಪಲಾಯನ ಪಂಡಿತರು ನೀವೆಂದನಾ ಮಗಧ ೮೮

ಪಾರ್ಥ ನೀ ಮಗುವೆಮ್ಮೊಡನೆ ರಣ
ದರ್ಥಿಯಾದರೆ ಭೀಮಸೇನ ಸ
ಮರ್ಥನಹನಾತಂಗೆ ಕೊಟ್ಟೆನು ಕಳನ ಕಾಳಗವ
ವ್ಯರ್ಥವಿದು ತಾ ಹೋಗಲಿನ್ನು ಪ
ರಾರ್ಥ ಕಂಟಕವಾಗಲೇತಕೆ
ತೀರ್ಥವೈಸಲೆ ಶಸ್ತ್ರಧಾರೆಯಿದೆಂದನಾ ಮಗಧ ೮೯

ತರಿಸಿದನು ಚಂದನದ ಸಾದಿನ
ಭರಣಿಗಳ ಕರ್ಪೂರ ವರಕ
ಸ್ತುರಿ ಜವಾಜಿ ಪ್ರಮುಖ ಬಹುವಿಧ ಯಕ್ಷಕರ್ದಮವ
ಹರಿ ವೃಕೋದರ ಪಾರ್ಥರಿದಿರಲಿ
ಭರಣಿಗಳ ನೂಕಿದನು ಮಾಲ್ಯಾಂ
ಬರ ವಿಲೇಪನದಿಂದಲಂಕರಿಸಿದರು ನಿಜತನುವ ೯೦

ಅಂಕಕಿಬ್ಬರು ಭಟರು ತಿಲಕಾ
ಲಂಕರಣಶೋಭೆಯಲಿ ರಣ ನಿ
ಶ್ಶಂಕರನುವಾದರು ಸುಕರ್ಪೂರ ವೀಳೆಯಂಗೊಂಡು
ಬಿಂಕದುಬ್ಬಿನ ರೋಮ ಪುಳಕದ
ಮುಂಕುಡಿಯ ಸುಮ್ಮಾನದಂಕೆಯ
ಝಂಕೆಗಳ ಭರ ಭುಲ್ಲವಿಸಿದುದು ಭೀಮ ಮಾಗಧರ ೯೧

ರಣದೊಳಾವುದು ಕೈದು ಹಿರಿಯು
ಬ್ಬಣವೊ ಪರಿಘವೊ ಸುರಗಿಯೋ ಡೊಂ
ಕಣಿಯೊ ಗದೆಯೋ ಭಿಂಡಿವಾಳವೊ ಪರಶು ತೋಮರವೊ
ಕಣೆ ಧನುವೊ ಕಕ್ಕಡೆಯೊ ಮುಷ್ಟಿಯೊ
ಹಣಿದಕಾವುದು ಸದರವದರಲಿ
ಕೆಣಕಿ ನೋಡಾ ತನ್ನನೆಂದನು ಭೀಮ ಮಾಗಧನ ೯೨

ಆಯುಧಂಗಳಲೇನು ನೀ ನಾ
ಗಾಯುತದ ಬಲನೆಂಬರಾ ನುಡಿ
ವಾಯುವೋ ಕಲಿಭೀಮ ದಿಟವೋ ನೋಡಬೇಹುದಲೆ
ಆಯಿತೇ ಸಮಜೋಳಿ ನಿನಗದು
ಪಾಯವೋ ಚೊಕ್ಕೆಯವೊ ನುಡಿ ಮನ
ದಾಯತವನನೆಗೆನುತ ಹತ್ಯಾಹತ್ತಿಗನುವಾದ ೯೩

ಧರಣಿಪತಿ ಕೇಳ್ಮಾಗಧನ ಮಂ
ದಿರದ ರಾಜಾಂಗಣದೊಳವನೀ
ಸುರರು ನೋಟಕರಾದರಿಲ್ಲಿ ಮುರಾರಿ ಫಲುಗುಣರು
ಎರಡು ಬಲ ಮೋಹರಿಸಿ ನಿಂದುದು
ಪುರದ ಹೊರ ಬಾಹೆಯಲಿ ಕೃತ ಸಂ
ಚರಣ ಕಾರ್ತಿಕ ಶುದ್ಧ ಪಾಡ್ಯದೊಳಾಹವಾರಂಭ ೯೪

ಸಿಡಿಲು ಬೊಬ್ಬಿಡುವಂತೆ ಹೊಯ್ದರು
ಮುಡುಹುಗಳ ಮಝು ಪೂತು ಮಲ್ಲನು
ತಡಿಗಡಿಗೆ ನೂಕಿದರು ಲವಣೆಯ ನೀಡಿ ಸಾರದಲಿ
ತುಡುಕಲೀಯದೆ ತಿರುಗಿದರು ಗಡ
ಬಡಿಸಿ ದಂಡೆಯೊಳೊತ್ತಿದರು ಸಮ
ಚಡಿಸಿ ನಿಂದರು ನೀಲ ನಿಷಧಾಚಲಕೆ ಮಲೆವಂತೆ ೯೫

ಸಿಕ್ಕರೊಬ್ಬರಿಗೊಬ್ಬರುರೆ ಕೈ
ಮಿಕ್ಕುಹರಿಯರು ಕೊಂಡ ಹೆಜ್ಜೆಯ
ಠಕ್ಕಿನಲಿ ಮೈಗೊಡರು ತಿರಿಮುರಿವುಗಳ ಮಂಡಿಗಳ
ಇಕ್ಕಿದರು ಗಳಹತ್ತದಲಿ ಸಲೆ
ಮಿಕ್ಕು ಸತ್ರಾಣದಲಿ ಮಿಗೆ ಸರಿ
ವೊಕ್ಕು ಹಿಡಿದರು ಬಿನ್ನಣದ ಚೊಕ್ಕೆಯದ ಜೋಡಿಯಲಿ ೯೬

ಬಿಡಿಸಿ ಗಳಹತ್ತವನು ಡೊಕ್ಕರ
ಕೊಡೆ ಮುರಿವ ಸಕುಟುಂಬ ಡೊಕ್ಕರ
ಕಡಸಿ ಕತ್ತರಿಘಟ್ಟಿಸುವ ಗಳಹತ್ತಡೊಕ್ಕರವ
ತಡೆವ ಚೌವಂಗುಲ ದುವಂಗುಲ
ಕೊಡೆಮುರಿವ ಪಟ್ಟಿಸಕೆ ಚಾಚುವ
ಝಡಿತೆಗೊದಗುವ ಭಟರು ಹೆಣಗಿದರರಸ ಕೇಳೆಂದ ೯೭

ಎಳೆದು ದಣುವಟ್ಟೆಯಲಿ ಬೊಪ್ಪರ
ದೊಳಗೆ ಜಾಳಿಸಿ ಚಿಮ್ಮಿ ಝಡಿತೆಯ
ಸೆಳೆದು ಮುಡುಹಿನಲೌಕಿ ಬಿಗಿದರು ಪಟ್ಟ ಮುಡುಹಿನಲಿ
ಸುಳಿದು ಮರ್ಕಟ ಬಂಧದಲಿ ಕರ
ವಳಯದಲಿ ಕೈದುಡುಕಿ ಶಿರವ
ಟ್ಟಳೆಯ ಚಲ್ಲಣ ಪಟ್ಟೆಯವರೊದಗಿದರು ಪಟುಭಟರು ೯೮

ಅಗಡಿಯಲಿ ಲೋಟಿಸಿ ನಿರಂತರ
ಲಗಡಿಯಲಿ ಲಾಗಿಸಿ ನಿಬಂಧದ
ಬಿಗುಹುಗಳ ಕುಮ್ಮರಿಯ ಕುಹರದ ನಾಗಬಂಧಗಳ
ತೆಗಹುಗಳ ತೊಡಕುಗಳ ತುಳುಕಿನ
ಜಗಳುಗಳ ಜೋಡಣೆಯ ನಿಡು ಸು ೯೯
ಯ್ಯುಗಳ ಸೌರಂಭದ ಸಗಾಢರು ಹೊಕ್ಕು ಹೆಣಗಿದರು

ಧೂಳಿ ಕುಡಿದುದು ಬೆಮರನಾ ಕೆಂ
ಧೂಳಿ ನೆನೆದುದು ಬೆವರಿನಲಿ ತಳ
ಮೇಲು ನಿಮಿಷಕೆ ಮೇಲು ತಳ ಬಿಡುಹುಗಳ ಬಿಗುಹುಗಳ
ಸೂಳು ನಾಸಾ ಪುಟದ ಪವನನ
ತಾಳಿಗೆಯ ಕರ್ಪುರದ ಕವಳದ
ತೋಳ ತೆಕ್ಕೆಯ ತವಕಿಗರು ಹೆಣಗಿದರು ಪಟುಭಟರು ೧೦೦

ತೀರದಿಬ್ಬರ ಸತ್ವವವನಿಯು
ಸಾರದಿಬ್ಬರ ಬಲುಹುಗಾಣದು
ಪಾರುಖಾಣೆಯುವದಟರಿಬ್ಬರ ಭುಜ ಬಲಾಟೋಪ
ಸಾರವಳಿಯದು ಮುಳಿಸು ದರ್ಪದ
ಧಾರೆ ಮುರಿಯದು ಜಯದ ತೃಷ್ಣೆಯ
ತೋರಹತ್ತರು ಹೆಣಗಿದರು ಕಲಿಭೀಮ ಮಾಗಧರು ೧೦೧

ಪೂತು ಮಝು ಜಗಜಟ್ಟಿ ದಣು ಧಣು
ವಾತಸುತ ಪರಬಲ ಭಯಂಕರ
ಸೋತನೋ ಪ್ರತಿಮಲ್ಲನೆಂದರು ಕೃಷ್ಣ ಫಲುಗುಣರು
ಭೀತನಾದನು ಭೀಮನಹಿತ ವಿ
ಘಾತಿ ಮಾಗಧರಾಯ ಮಲ್ಲ
ವ್ರಾತ ಕುಲಗಿರಿ ವಜ್ರನೆಂದುದು ಮಗಧ ಪರಿವಾರ ೧೦೨

ಅಲಸಿದರು ಬಿನ್ನಣಕೆ ಬಿಗುಹಿನ
ಕಳಿವುಗಳ ಬೇಸರಿಕೆಯಲಿ ಕಡು
ಲುಳಿ ಮಸಗಿ ಡಾವರಿಸಿ ಮನವನುಪಾಯ ಡಾವರಕೆ
ತೊಲಗಿ ನಿಂದರು ಕರ್ಪುರದ ತನಿ
ಹಳುಕನಣಲೊಳಗಡಸಿ ದಂಡೆಯ
ಬಲಿದು ಬರಸಿಡಿಲೆರಕವೆನೆ ತಾಗಿದರು ಬಳಸಿನಲಿ ೧೦೩

ಬಾಳ ಹೊಯ್ಲೋ ಸಿಡಿಲ ತೊಡರಿನ
ಸೂಳುಗಳೊ ಸಿಡಿದಲೆಯ ಗಿರಿಗಳ
ಬೀಳುಗಳೊ ಬಿರು ಹೊಯ್ಲು ಧಾರೆಯ ಕಿಡಿಯ ತುಂಡುಗಳೊ
ತೋಳ ನೆಗಹಿನ ಮುಷ್ಟಿ ಘಾತದ
ಮೇಲು ಘಾಯದ ಉಳಿಯ ಘೋಳಾ
ಘೋಳಿಗಳನಾರೆಣಿಸುವರು ಕಲಿಭೀಮ ಮಾಗಧರ ೧೦೪

ಕುಸಿದು ಘಾಯವ ಕಳೆದು ವಕ್ಷದ
ಬೆಸುಗೆ ಬಿಡೆ ಸಿಡಿದೆದ್ದು ಹೊಯ್ಲಿಗೆ
ಮುಸುಡ ತಿರುಹುವ ಮೈಯನೊಡ್ಡಿದಡೌಕಿ ಥಟ್ಟಿಸುವ
ಅಸಮಸೆಗೆ ಮೈಯಳುಕದೆರಗುವ
ಹುಸಿವ ಜಾರುವ ಹೊಳೆವ ಹಣುಗುವ
ಬೆಸುವ ಬಿಡಿಸುವ ದಿಟ್ಟವಾಳರು ಹೊಕ್ಕು ಹೆಣಗಿದರು ೧೦೫

ಪವನಜನ ರಾವಣನ ಝಾಡಿಯ
ತಿವಿತಗಳು ಚಾಣೂರ ಕೃಷ್ಣರ
ಜವಳಿ ಹೊಯ್ಲಿವರೊಳಗೆ ಜೋಡಿಸವೇನ ಹೇಳುವೆನು
ಶಿವನ ಡಮರುಗದಾಟವೋ ಭೈ
ರವನ ಫಣೆಗಣ್ಣಾಟವೋ ಬಿರು
ದಿವಿಗುಳಿನ ದೆಖ್ಖಾಳ ಮಸಗಿತು ಭೀಮ ಮಾಗಧರ ೧೦೬

ಕುಣಿದವಿಬ್ಬರ ಮುಷ್ಟಿಯಿಬ್ಬರ
ಹಣೆಯಲೆದೆಯಲಿ ಮೋರೆಯಲಿ ಭುಜ
ದಣಸಿನಲಿ ಕಂದದಲಿ ಬದಿಯಲುದರದಲಿ
ಝಣು ವಿರೋಧಿ ವಿಭಾಡ ಝಣು ಝಣು
ಝಣು ಜಗತ್ರಯ ಜಟ್ಟಿ ಝಣು ಝಣು
ಝಣು ಝಣೆಂಬಬ್ಬರಣೆ ಮಸಗಿದುದೆರಡು ಬಾಹೆಯಲಿ ೧೦೭

ಹೊಯ್ಲು ಹೊದರೆದ್ದವು ವಿಘಾತದ
ಕಯ್ಲುಳಿಯ ಕಡುಘಾಯ ಘಾಯಕೆ
ಮೆಯ್ಲವಣೆ ಲಂಬಿಸಿತು ಕಡುಹಿನ ಖತಿಯ ಕೈಮುಸಕ
ಹೊಯ್ಲು ಹೊಗೆಗಳ ಹೋರಟೆಯ ವೇ
ಗಾಯ್ಲು ಮುಷ್ಟಾಮುಷ್ಟಿ ಗತಿಯ ದೃ
ಢಾಯ್ಲರಪ್ಪಳಿಸಿದರು ಪದ ಘಟ್ಟಣೆಗೆ ನೆಲ ಕುಸಿಯೆ ೧೦೮

ಆವ ಸಾಧನೆಯೋ ವಿಘಾತಿಯ
ಲಾವಣಿಗೆಗದ್ರಿಗಳು ಬಿರಿದವು
ಮೈವಳಿಯಲುಕ್ಕಿದುದು ಕಡುಹಿನ ಖತಿಯ ಕೈಮುಸಕ
ತಾವರೆಯ ತೆತ್ತಿಗನ ಕುಮುದದ
ಜೀವಿಗನ ಮಿಗೆ ಮೇಲು ನೋಟದೊ
ಳಾ ವಿಗಡರುಗಳಡಸಿ ತಿವಿದಾಡಿದರು ಬೇಸರದೆ ೧೦೯

ತೆಗೆಯರರ್ಜುನ ಕೃಷ್ಣರೀತನ
ನುಗಿಯರವನವರವನಿರುಳಿನ
ಹಗಲ ವಿವರಣೆಯಿಲ್ಲ ಮಜ್ಜನ ಭೋಜನಾದಿಗಳ
ಬಗೆಗೆ ತಾರರು ಬಾಹುಸತ್ವದ
ಹೊಗರು ಹೋಗದು ಮನದ ಖಾತಿಯು
ತೆಗಹು ತಗ್ಗದು ಹೊಕ್ಕು ತಿವಿದಾಡಿದರು ಬೇಸರದೆ ೧೧೦

ಸತ್ವ ಸವೆಯದು ಮನದ ಮುಳಿಸಿನ
ಬಿತ್ತು ಬೀಯದು ಜಯದ ಬಯಕೆಯು
ಸುತ್ತು ಸಡಿಲದು ಬಿಂಕ ಬೀಯದು ನೋಯದಾಟೋಪ
ತೆತ್ತ ಕೈ ಕಂಪಿಸದು ಮುಷ್ಟಿಯು
ಹತ್ತುಗೆಗೆ ಮನ ಝೋಂಪಿಸದು ಮದ
ವೆತ್ತಿ ಮೆಟ್ಟಿದರೊಬ್ಬರೊಬ್ಬರ ಮರ್ಮಘಾತದಲಿ ೧೧೧

ಅರಸ ಕೇಳೈದನೆಯ ದಿವಸದೊ
ಳುರು ಭಯಂಕರವಾಯ್ತು ಕದನದ
ಭರದೊಳೆಡೆದೆರಹಿಲ್ಲ ವಿಶ್ರಮವಿಲ್ಲ ನಿಮಿಷದಲಿ
ಎರಡು ದೆಸೆಯಲಿ ವೀಳೆಯದ ಕ
ರ್ಪುರದ ಕವಳದ ಕೈ ಚಳಕದಲಿ
ತೆರಹನಲ್ಲದೆ ಮತ್ತೆ ಕಾಣೆನು ಯುದ್ಧರಂಗದಲಿ ೧೧೨

ಭರದ ಭಾರಣೆಯಲಿ ಚತುರ್ದಶಿ
ಯಿರುಳು ಮಗಧನ ಬಾಹುಸತ್ವದ
ಮುರಿವು ಮೊಳೆತುದು ಶೌರ್ಯ ಸೆಡೆದುದು ಭಯದ ಬಿಗುಹಿನಲಿ
ಉರು ಪರಾಕ್ರಮ ತೇಜ ಪಡುವಣ
ತರಣಿಯಾದುದು ಧಟ್ಟಣೆಯ ಧರ
ಧುರಕೆ ನಿರ್ದ್ರವ ಜಿಹ್ವೆಯಾದುದು ನಿಮಿಷ ನಿಮಿಷದಲಿ ೧೧೩

ಬೇಸರಿಕೆ ಬೇರೂರಿದುದು ಜಯ
ದಾಸೆ ಜಾರಿತು ದಿಟ್ಟತನದ ವಿ
ಳಾಸ ಹಾರಿತು ಸುಪ್ರತಾಪದ ಕೆಂಪು ಕರಿದಾಯ್ತು
ಮಿಸಲಳಿದುದು ಮುಳಿಸು ಶೌರ್ಯದ
ವಾಸಿ ಪೈಸರವಾಯ್ತು ರಣದಾ
ವೇಶವಿಳಿದುದು ಮಗಧಪತಿಗಿದನರಿದನಸುರಾರಿ ೧೧೪

ಹೊರಗೆ ಬಲಿದೊಳಡಿಳ್ಳವನು ಪರ
ರರಿಯದಂತಿರೆ ಶಿವಿವ ಮಗಧನ
ಪರಿಯನರಿದನು ದನುಜರಿಪು ಪರರಿಂಗಿತಜ್ಞನಲೆ
ಅರಿವುದರಿದೆ ಚರಾಚರಂಗಳ
ಹೊರಗೊಳಗು ತಾನಲ್ಲದಿಲ್ಲಿದ
ನರಿಯನೇ ಶಿವಯೆಂದನಾ ಜನಮೇಜಯನು ನಗುತ ೧೧೫

ಎಲೆಲೆ ಪವನಜ ಮಾಗಧೇಶ್ವರ
ನಳವನರಿದಾ ನಿನ್ನ ತಂದೆಯು
ಬಲುಹು ಕೊಂಡೀ ರಿಪುವ ಮುರಿ ನೆನೆ ನೆನೆ ಸಮೀರಣನ
ಬಲು ಮುಗಿಲು ಬಿರುಗಾಳಿಯೊಡ್ಡಿನೊ
ಳಳುಕದೇ ಘಡ ಬೇಗ ಮಾಡೆನೆ
ಕಲಿ ವೃಕೋದರನನಿಲರೂಪ ಧ್ಯಾನಪರನಾದ ೧೧೬

ಧ್ಯಾನದಲಿ ತನ್ಮಯತೆಯಾಗಲ
ನೂನ ಸಾಹಸನಾಗಿ ಮಗಧ ಮ
ಹಾ ನರೇಂದ್ರನ ತುಡುಕಿ ಹಿಡಿದನು ಮಲ್ಲಗಂಟಿನಲಿ
ಆ ನಗೆಯನೇವಣ್ಣಿಸುವೆನನು
ಮಾನಿಸದೆ ಬೀಸಿದನು ಬವಣಿಸೆಯ
ಭಾನುಮಂಡಲದಂತೆ ತಿರುಗಿದನಾ ಜರಾಸಂಧ ೧೧೭

ಬರಸೆಳೆದು ಕರದಿಂದ ಮಾಗಧ
ನೆರಡು ಕಾಲನು ಹಿಡಿದು ಸೀಳಿದು
ಧರೆಗೆ ಬಿಸುಟನು ಸಂಧಿಸಿದವಾ ಸೀಳ್ ತತುಕ್ಷಣಕೆ
ಮರಳಿ ಪವನಜ ಹಿಡಿದು ಸೀಳುವ
ನಿರದೆ ಮಗುಳವು ಸಂಧಿಸುವವೀ
ಪರಿ ಹಲವು ಸೂಳಿನಲಿ ಭೀಮನೊಳೊದಗಿದನು ಮಗಧ ೧೧೮

ಮುರಮಥನನದನರಿತು ನಿಜಕರ
ವೆರಡ ಪಲ್ಲಟವಾಗಿ ಸಂಧಿಸ
ಲರಿ ವಿದಾರಣ ಭೀಮ ನೋಡುತ ಮರಳಿ ಮಾಗಧನ
ಎರಡು ಸೀಳನು ಮಾಡಿ ಹೊಯ್ದು
ಬ್ಬರಿಸಿ ಪಲ್ಲಟವಾಗಿ ಸೇರಿಸಿ
ತಿರುಗಿಸಿದನೇನೆಂಬೆನುನ್ನತ ಬಾಹುಸತ್ವದಲಿ ೧೧೯

ತಿರುಹಿದನು ನೂರೆಂಟು ಸೂಳನು
ಧರೆಯೊಳಪ್ಪಳಿಸಿದನು ಬಳಿಕಾ
ಪುರ ಜನದ ಪರಿಜನದ ಹಾಹಾ ರವದ ರಹಿ ಮಸಗೆ
ತೆರಳಿತಲ್ಲಿಯದಲ್ಲಿ ಮಾಗಧ
ನರಸಿಯರು ಬಿಡುಮುಡಿಯ ಜತರದ
ಕರದ ಬಿರು ಹೊಯ್ಲಿನಲಿ ಹೊರವಂಟರು ನಿಜಾಲಯವ ೧೨೦

ಮನೆ ಮನೆಯ ಕದವಿಕ್ಕಿದವು ನೃಪ
ವನಿತೆಯರು ಹೊರವಂಟರಲ್ಲಿಯು
ಮನುಜರಡಗಿದರದ್ರಿ ಗುಹೆಯಲಿ ಬೇಹ ಬೇಹವರು
ಜನದ ಕೋಲಾಹಲವನಾತನ
ತನುಜರೋಟವನವನ ಸತಿಯರ
ನಿನದವನು ಕಂಡಸುರಹರ ಸಾರಿದನು ಕೈ ನೆಗಹಿ ೧೨೧

ಅಂಜದಿರಿ ಪುರದವರು ವನಿತೆಯ
ರಂಜದಿರಿ ಮಾಗಧನ ಪರಿಜನ
ವಂಜದಿರಿ ಮಂತ್ರಿ ಪ್ರಧಾನ ಪಸಾಯ್ತರಾದವರು
ಅಂಜದಿರಿ ಕರೆಯಿವನ ಮಗನನು
ಭಂಜಿಸುವುದಿಲ್ಲಕಟ ಭೀಮ ಧ
ನಂಜಯರು ಕೊಟ್ಟಭಯವೆಂದನು ನಗುತ ಮುರವೈರಿ ೧೨೨

ಮುರಿದು ಕೆಡಹಿದರರಿಯನಲ್ಲಿಯು
ಸೆರೆಯ ಮನೆಗಳ ಹೊಕ್ಕು ರಾಯರ
ಸೆರೆಗಳನು ಬಿಡಿಸಿದನು ನಾನಾ ದ್ವೀಪ ಪಾಲಕರ
ಮೆರೆವ ಮಣಿಮಯ ರಶ್ಮಿವಳಯದ
ಮಿರುಪ ರಥವನು ಕೊಂಡು ನಗರದ
ಹೊರವಳಯದಲಿ ಬಂದು ಹೊಕ್ಕರು ತಮ್ಮ ಪಾಳೆಯವ ೧೨೩

ಪೌರಜನ ಕಾಣಿಕೆಗಳಲಿ ಕಂ
ಸಾರಿ ಭೀಮಾರ್ಜುನರ ಕಂಡುದು
ಧಾರುಣೀಪಾಲಕರು ಬಂದರು ಬೆನ್ನಲಿವರುಗಳ
ಘೋರವಡಗಿದುದೆಮ್ಮ ಕಾರಾ
ಗಾರ ಬಂಧವಿಮುಕ್ತವಾಯ್ತುಪ
ಕಾರವೆಮ್ಮಿಂದಾವುದೆಂದರು ನೃಪರು ಕೈಮುಗಿದು ೧೨೪

ನವೆದಿರತಿ ದುಃಖದಲಿ ಬಿಡುಗಡೆ
ಪವನಸುತನಿಂದಾಯ್ತು ನಿಜ ರಾ
ಜ್ಯವನು ಹೊಗುವುದು ಪೌರಜನ ಪರಿಜನವ ಸಲಹುವುದು
ಎಮಗೆ ಮಾಳ್ಪುಪಕಾರ ಬೇರಿ
ಲ್ಲವನಿಪನ ವರ ರಾಜಸೂಯಕೆ
ನಿವನಿವಗೆ ಮುಂಕೊಂಡು ಬಹುದೆಂದನು ಮುರಾಂತಕನು ೧೨೫

ನಗರಜನ ಮಂತ್ರಿ ಪ್ರಧಾನಾ
ದಿಗಳು ಸಹಿತ ಕುಮಾರನೈತಂ
ದಗಧರನ ಪದಕೆರಗಿದನು ಭೀಮಾರ್ಜುನಾಂಘ್ರಿಯಲಿ
ಮಗಗೆ ತಂದೆಯ ಮಾರ್ಗದಲಿ ನಂ
ಬುಗೆಯೊ ಕರುಣಾ ರಕ್ಷಣದ ನಂ
ಬುಗೆಯೊ ಚಿತ್ತವಿಸೆಂದರಾ ಮಂತ್ರಿಗಳು ಕೈಮುಗಿದು ೧೨೬

ಶವವ ಸಂಸ್ಕರಿಸುವುದು ಮಾಗಧ
ನವನಿಯಲಿ ಸಹದೇವಗಭಿಷೇ
ಕವನು ಮಾಡಿಸಿದಲ್ಲದೆತ್ತಲು ಮುರಿವುದಿಲ್ಲೆಂದು
ಅವರಿಗಭಯವನಿತ್ತು, ಪರಿವಾ
ರವನು ಕಳುಹಿದರಿತ್ತಲಾತನ
ಯುವತಿಯರು ಬೇಡಿದರು ವಹ್ನಿಯ ಪಡೆದು ಮರಳಿದರು ೧೨೭

ಅವನ ಸಂಸ್ಕಾರದಲಿ ನಾರೀ
ನಿವಹ ಸಹಗತವಾಯ್ತು ವೈದಿಕ
ವಿವಿಧ ವಿಧಿಯಲಿ ಮಾಡಿದರು ಶೇಷಕ್ರಿಯಾದಿಗಳ
ಅವನ ಮಗ ಸಹದೇವನಾತಂ
ಗವನಿಯಲಿ ಪಟ್ಟಾಭಿಷೇಕೋ
ತ್ಸವವ ಮಾಡಿಸಿ ಕೊಟ್ಟನಭಯವನಾ ಪರಿಗ್ರಹಕೆ ೧೨೮

ತೇರುಗಳ ತೇಜಿಗಳನಾ ಭಂ
ಡಾರವನು ಗಜಘಟೆ ಸಹಿತ ವಿ
ಸ್ತಾರ ವಿಭವವನೊಪ್ಪುಗೊಂಡರು ಮಗಧ ನಂದನನ
ಧಾರುಣಿಯನವಗಿತ್ತು ಸಕಳ ಮ
ಹೀ ರಮಣರನು ಕಳುಹಿ ಬಂದನು
ವೀರನಾರಾಯಣನು ಶಕ್ರಪ್ರಸ್ಥಪುರವರಕೆ ೧೨೯

## ಮೂರನೆಯ ಸಂಧಿ

ಸೂ. ಭೂಪತಿಯ ನೇಮದಲಿ ಜಂಬೂ
ದ್ವೀಪ ನವ ಖಂಡದಲಿ ಸಕಳ ಮ
ಹೀಪತಿಗಳನು ಗೆಲಿದು ಕಪ್ಪವ ತಂದನಾ ಪಾರ್ಥ

ಕೇಳು ಜನಮೇಜಯ ಧರಿತ್ರೀ
ಪಾಲ ಪಾಂಡವ ಪುರಿಗೆ ಲಕ್ಷ್ಮೀ
ಲೋಲ ಬಿಜಯಂಗೈದು ಭೀಮಾರ್ಜುನರ ಗಡಣದಲಿ
ಬಾಲೆಯರ ಕಡೆಗಣ್ಣ ಮಿಂಚಿನ
ಮಾಲೆಗಳ ಲಾಜಾಭಿವರುಷದ
ಲಾಲನೆಯ ರಚನೆಯಲಿ ಹೊಕ್ಕನು ರಾಜಮಂದಿರವ ೧

ಕಂಡು ಕೃಷ್ಣನನಿವರ ಕಾಣಿಸಿ
ಕೊಂಡನರಸು ಕ್ಷೇಮ ಕುಶಲವ
ಕಂಡು ಬೆಸಗೊಳಲೇಕೆ ಬಹು ಮಾತಿನಲಿ ಫಲವೇನು
ಕಂಡೆವೈ ನಿನ್ನಮಳ ಕರುಣಾ
ಖಂಡ ಜಲಧಿಯ ಭಕ್ತಜನಕಾ
ಖಂಡಲ ದ್ರುಮವೆಂದು ತಕ್ಕೈಸಿದನು ಹರಿಪದವ ೨

ನಡೆದ ಪರಿಯನು ರಿಪು ಪುರವನವ
ಗಡಿಸಿ ಹೊಕ್ಕಂದವನು ಮಗಧನ
ತೊಡಕಿ ತೋಟಿಯ ಮಾಡಿ ಭೀಮನ ಕಾದಿಸಿದ ಪರಿಯ
ಬಿಡದೆ ಹಗಲಿರುಳೊದಗಿ ವೈರಿಯ
ಕಡೆಯ ಕಾಣಿಸಿ ನೃಪರ ಸೆರೆಗಳ
ಬಿಡಿಸಿ ಬಂದಂದವನು ವಿಸ್ತರಿಸಿದನು ಮುರವೈರಿ ೩

ಎಲೆ ಮಹೀಪತಿ ನಿನ್ನ ಯಜ್ಞ
ಸ್ಥಲಕೆ ಬಾಧಕರಿಲ್ಲ ವನದಲಿ
ಪುಲಿಯಿರಲು ಗೋಧನ ಕುಲಕೆ ಯವಸಾಂಬು ಗೋಚರವೆ
ನೆಲನ ಗರುವರ ಗೊಂದಣವನಂ
ಡಲೆವನಖಿಳ ದ್ವೀಪಪತಿಗಳ
ನೆಳಲ ಸೈರಿಸನಳಿದನವನಿನ್ನೇನು ನಿನಗೆಂದ ೪

ರಚಿಸು ಯಜ್ಞಾರಂಭವನು ನೃಪ
ನಿಚಯವನು ದಾಯಾದ್ಯರನು ಬರಿ
ಸುಚಿತ ವಚನದಲೆಮ್ಮ ಕರೆಸಿದರಾ ಕ್ಷಣಕೆ ಬಹೆವು
ಸಚಿವರಾವೆಡೆ ಕಳುಹು ಬದರಿಯ
ರುಚಿರ ಋಷಿಗಳ ಕರೆಸು ನಿನ್ನಭಿ
ರುಚಿಗೆ ನಿಷ್ಪ್ರತ್ಯೂಹವೆಂದನು ದಾನವಧ್ವಂಸಿ ೫

ಎಂದು ಕಳುಹಿಸಿಕೊಂಡು ದೋರಕಿ
ಗಿಂದಿರಾಪತಿ ಮಾಗಧನ ರಥ
ದಿಂದ ಬಿಜಯಂಗೈದನಿನಿಬರು ಕಳುಹಿ ಮರಳಿದರು
ಬಂದ ವೇದವ್ಯಾಸ ಧೌಮ್ಯರ
ನಂದು ಕರೆಸಿ ಯುಧಿಷ್ಠಿರನು ನಿಜ
ಮಂದಿರದೊಳೊಪ್ಪಿದನು ಪರಿಮಿತ ಜನ ಸಮೂಹದಲಿ ೬

ಅಕಟ ನಾರದನೇಕೆ ಯಜ್ಞ
ಪ್ರಕಟವನು ಮಾಡಿದನು ನಮಗೀ
ಸಕಲ ಧರಣೀಕ್ಷತ್ರ ವರ್ಗದ ವಿಜಯ ಕಿರುಕುಳವೆ
ವಿಕಟ ಜಂಬೂದ್ವೀಪ ಪರಿಪಾ
ಲಕರು ನಮ್ಮನಿಬರಿಗೆ ಸದರವೆ
ಸುಕರವೇ ವರ ರಾಜಸೂಯವೆನುತ್ತ ಚಿಂತಿಸಿದ ೭

ಮಣಿವರಲ್ಲರಸುಗಳು ಮಾಡದೆ
ಮಣಿದೆವಾದರೆ ಕೀರ್ತಿ ಕಾಮಿನಿ
ಕುಣಿವಳೈ ತ್ರೈಜಗದ ಜಿಹ್ವಾರಂಗ ಮಧ್ಯದಲಿ,
ಬಣಗುಗಳು ನಾವೆಂದು ನಾಕದ
ಗಣಿಕೆಯರು ನಗುವರು ಸುಯೋಧನ
ನಣಕವಾಡುವನಾಯ್ತು ತೆರನೆಂದರಸ ಬಿಸುಸುಯ್ದ ೮

ಎನಲು ಧಿಮ್ಮನೆ ನಿಂದು ಭುಗಿಲೆಂ
ದನು ಕಿರೀಟಿ ವೃಥಾಭಿಯೋಗದ
ಮನಕತಕೆ ಮಾರಾಂಕವಾಯ್ತೇ ಹರ ಮಹಾದೇವ
ನಿನಗೆಕೀರ್ತಿ ವಧೂಟಿ ಕುಣಿವಳೆ
ಜನದ ಜಿಹ್ವಾರಂಗದಲಿ ಹಾ
ಯೆನುತ ತಲೆದೂಗಿದನು ಘನ ಶೌರ್ಯಾನುಭಾವದಲಿ ೯

ಮಣಿಯರೇ ಮನ್ನೆಯರು ನಾಕದ
ಗಣಿಕೆಯರು ನಗುವರೆ ಸುಯೋಧನ
ನಣಕವಾಡುವನೇ ಶಿವಾ ತಪ್ಪೇನು ತಪ್ಪೇನು
ಕಣೆಗಳಿವು ನಾಳಿನಲಿ ಕಬ್ಬಿನ
ಕಣೆಗಳೋ ಗಾಂಡೀವವಿದು ನಿ
ರ್ಗುಣವೊ ತಾನರ್ಜುನ ಮಹೀರುಹವೆಂದನಾ ಪಾರ್ಥ ೧೦

ಸಕಲ ಜಂಬೂದ್ವೀಪ ಪರಿ ಪಾ
ಲಕರ ಭಂಡಾರಾರ್ಥಕಿದೆ ಸು
ಪ್ರಕಟವೆಂದುಂಗುರವನಿತ್ತನು ನೃಪನ ಹಸ್ತದಲಿ
ಸುಕರ ದುಷ್ಕರವೆಂಬ ಚಿಂತಾ
ವಿಕಳತೆಗೆ ನೀ ಪಾತ್ರನೇ ಸಾ
ಧಕರನೇ ಸಂಹರಿಪೆ ತಾ ವೀಳೆಯವನೆನಗೆಂದ ೧೧

ಘೂತು ಫಲುಗುಣ ನಿನ್ನ ಕುಲಕಭಿ
ಜಾತ ಶೌರ್ಯಕೆ ಗರುವಿಕೆಗೆ ಸರಿ
ಮಾತನಾಡಿದೆ ಸಲುವುದೈ ನಿನಗೆನುತ ಕೊಂಡಾಡಿ
ಈತನುತ್ತರ ದೆಸೆಗೆ ಭೀಮನು
ಶಾತಮನ್ಯುವ ದೆಸೆಗೆ ಯಮಳರ
ಭೀತರಿದ್ದ ಸೆಗೆಂದು ವೇದವ್ಯಾಸ ನೇಮಿಸ್ಟಿದ ೧೨

ನೆರಹಿ ಬಲವನು ನಾಲ್ಕು ದಿಕ್ಕಿಗೆ
ಪರುಠವಿಸಿದರು ಫಲುಗುಣನನು
ತ್ತರಕೆ ಮೂಡಲು ಪವನಸುತ ದಕ್ಷಿಣಕೆ ಸಹದೇವ
ವರುಣ ದಿಕ್ಕಿಗೆ ನಕುಲನೀ ನಾ
ಲ್ವರಿಗೆ ಕೊಟ್ಟನು ವೀಳೆಯವ ಹಿರಿ
ಯರಸಿ ತಂದಳು ತಳಿಗೆ ತಂಬುಲ ಮಂಗಳಾರತಿಯ ೧೩

ಪರಮ ಲಗ್ನದೊಳಿಂದುಕೇಂದ್ರದೊ
ಳಿರಲು ಗುರು ಭಾರ್ಗವರು ಲಗ್ನದೊ
ಳಿರೆ ಶುಭಗ್ರಹದೃಷ್ಟಿ ಸಕಳೇಕಾದಶ ಸ್ಥಿತಿಯ
ಕರಣ ತಿಥಿ ನಕ್ಷತ್ರ ವಾರೋ
ತ್ಕರದಲಭಿಮತ ಸಿದ್ಧಿಯೋಗದೊ
ಳರಸನನುಜರು ದಿಗ್ವಿಜಯಕನುವಾದರೊಗ್ಗಿನಲಿ ೧೪

ಅರಸ ವೇದವ್ಯಾಸ ಧೌಮ್ಯಾ
ದ್ಯರಿಗೆ ಬಲವಂದೆರಗಿ ಕುಂತಿಯ
ಚರಣ ಧೂಳಿಯ ಕೊಂಡು ವಿಪ್ರಪ್ರಜಕೆ ಕೈ ಮುಗಿದು
ಅರಸಿಯರು ದೂರ್ವಾಕ್ಷತೆಯ ದಧಿ
ವಿರಚಿತದ ಮಾಂಗಲ್ಯವನು ವಿ
ಸ್ತರಿಸೆ ಬಹುವಿಧ ವಾದ್ಯದಲಿ ಹೊರವಂಟರರಮನೆಯ ೧೫

ಅರಸ ಕೇಳೈ ಮೊದಲಲರ್ಜುನ
ಚರಿತವನು ವಿಸ್ತರದಲರುಪುವೆ
ನುರು ಪರಾಕ್ರಮಿ ನಡೆದು ಬಿಟ್ಟನು ಸಾಲ್ವ ದೇಶದಲಿ
ಪುರಕೆ ದೂತರ ಕಳುಹಲವನಿವ
ರುರವಣೆಗೆ ಮನವಳುಕಿ ಕೊಟ್ಟನು
ತುರಗ ಗಜ ರಥ ಧನ ವಿಲಾಸಿನಿ ಜನವನುಚಿತದಲಿ ೧೬

ಅವನ ಕಾಣಿಸಿಕೊಂಡು ರಾಜ್ಯದೊ
ಳವನ ನಿಲಿಸಿ ತದೀಯ ಸೇನಾ
ನಿವಹ ಸಹಿತಲ್ಲಿಂದ ನಡೆದನು ಮುಂದೆ ವಹಿಲದಲಿ
ಅವನಿಪತಿ ಕಟದೇವನೆಂಬವ
ನವಗಡಿಸಿ ಸರ್ವಸ್ವವನು ಕೊಂ
ಡವನ ಬಲಸಹಿತಾ ದ್ಯುಮತ್ಸೇನಕನ ಝೋಂಪಿಸಿದ ೧೭

ಆತನನು ಗೆಲಿದನು ಸುನಾಭನ
ನೀತಿಗೆಡಿಸಿ ತದೀಯ ಸೇನಾ
ವ್ರಾತ ಸಹಿತಲ್ಲಿಂದ ಪ್ರತಿವಿಂಧ್ಯಕನನಪ್ಪಳಿಸಿ
ಆತನರ್ಥವಕೊಂಡು ತತ್ಪ್ರಾ
ಗ್ಜ್ಯೋತಿಷಕೆ ಥಾಳಿಟ್ಟನಲ್ಲಿ ಮ
ಹಾತಿಬಲನನೊಡನೆ ಬಲುಹಾಯ್ತರ್ಜುನನ ಸಮರ ೧೮

ಜೀನಕರ ಬೋಟಕ ಕಿರಾತರ
ನೂನಬಲ ಸಹಿತೀ ಮಹೀಪತಿ
ಸೂನು ಕಾದಿದನೀತನಲಿ ಭಗದತ್ತನೆಂಬವನು
ಈ ನರನ ಶರ ಜಾಲವದು ಕ
ಲ್ಪಾನಲನ ಕಾಲಾಟವಿದರೊಡ
ನಾನಲಿಂದ್ರಾದ್ಯರಿಗೆ ಸದರವೆ ರಾಯ ಕೇಳೆಂದ ೧೯

ಮುರಿಯದಾ ಬಲವೀತನುರುಬೆಗೆ
ಹರಿಯದೀ ಬಲವುಭಯ ಬಲದಲಿ
ಕುರಿದರಿಯ ಕಮ್ಮರಿಯ ಕಡಿತಕೆ ಕಾಣೆನವಧಿಗಳ
ಅರಿಯದೀತನ ದುರ್ಗವೀ ಬಲ
ದಿರಿವುಗಳ ಬೇಳಂಬವನು ಬೇ
ಸರದೆ ಕಾದಿದನೆಂಟು ದಿನ ಭಗದತ್ತನೀತನಲಿ ೨೦

ಆವನೈ ನೀನಧಿಕತರ ಸಂ
ಭಾವಿತನು ಹೇಳೆನೆ ಯುಧಿಷ್ಠಿರ
ದೇವನನುಜ ಕಣಾ ಧನಂಜಯನೆನಲು ಮಿಗೆ ಮೆಚ್ಚಿ
ನಾವು ನಿಮ್ಮಯ್ಯಂಗೆ ಸಖರಿಂ
ದಾವು ನಿನ್ನವರೇನು ಬೇಹುದು
ನೀವೆಮಗೆ ಕಡು ಮಾನ್ಯರೆಂದನು ಕಂಡನರ್ಜುನನ ೨೧

ಆದರೆಮಗೆಯು ದಿವಿಜಪತಿಯೋ
ಪಾದಿ ನೀವೆಮ್ಮಣ್ಣದೇವನ
ಮೇದಿನಿಯ ಸಾಮ್ರಾಜ್ಯ ಪದವಿಯ ರಾಜಸೂಯವನು
ಆದಿರಿಸಿ ಸಾಕೆನಲು ಗಜ ಹಯ
ವಾದಿಯಾದ ಸಮಸ್ತ ವಸ್ತುವ
ನೈದೆ ಕೊಟ್ಟನು ಫಲುಗುಣಂಗೆ ಸುಮಿತ್ರಭಾವದಲಿ ೨೨

ಒಂದು ತಿಂಗಳು ಪಲವು ಮನ್ನಣೆ
ಯಿಂದ ಮನ್ನಿಸಿ ತನ್ನ ಸೇನಾ
ವೃಂದವನು ಹೇಳಿದನು ಬಳಿಯಲಿ ಕಳುಹಿದನು ನರನ
ಮುಂದೆ ನಡೆದನು ರಾಮಗಿರಿಯಲಿ
ನಿಂದು ಕಪ್ಪವ ಕೊಂಡು ನಡೆದನು
ಮುಂದಣೀಶಾನ್ಯದಲಿ ಹೊಕ್ಕನು ಭುವನಪರ್ವತವ ೨೩

ಆ ಗಿರೀಂದ್ರ ನಿವಾಸಿಗಳ ಸರಿ
ಭಾಗ ಧನವನು ಕೊಂಡು ಬಳಿಕ ಮ
ಹಾ ಗಜಾಶ್ವನ ಸೂರೆಗೊಂಡನು ಮುಂದೆ ದಂಡೆತ್ತಿ
ಆ ಗಯಾಳರ ಗಾವಿಲರ ನಿ
ರ್ಭಾಗಧೇಯರ ಮಾಡಿಯುತ್ತರ
ಭಾಗದಲಿ ತಿರುಗಿತ್ತು ಪಾಳೆಯವರಸ ಕೇಳೆಂದ ೨೪

ಗಿರಿಯ ತಪ್ಪಲ ವನಚರರ ಸಂ
ಹರಿಸಿ ಮುಂದೆ ಬೃಹಂತಕನ ಕಾ
ತರಿಸಿ ಕಾಣಿಸಿಕೊಂಡು ಸೇನಾಬಿಂದು ನಗರಿಯಲಿ
ಇರವ ಮಾಡಿ ಸುದಾಮ ದೈತ್ಯರ
ನುರೆ ವಿಭಾಡಿಸಿ ಪಾರ್ವತೇಯರ
ಪುರವ ಕೊಂಡು ವುಲೂಕರನು ಪೌರವರ ಭಂಗಿಸಿದ ೨೫

ಮುಂದೆ ದಸ್ಯುಗಳೇಳುವನು ಕ್ಷಣ
ದಿಂದ ಕಾಶ್ಮೀರಕರ ಸಾಧಿಸಿ
ಬಂದು ದಶಮಂಡಲದ ಲೋಹಿತರನು ವಿಭಾಡಿಸಿದ
ತಂದ ಕಪ್ಪದಲಾ ತ್ರಿಗರ್ತರ
ನಂದು ಹದುಳಿಸಿ ಗರುವಿತರನಾ
ಟಂದು ತೆಂಕಣದಾಭಿಚಾರಕ ರೂಪಕರ ಗೆಲಿದ ೨೬

ಥಾಳಿಯಿಟ್ಟನು ರೋಚಮಾನನ
ಮೇಲೆ ಕಪ್ಪವಕೊಂಡು ಬಿಟ್ಟುದು
ಪಾಳೆಯವು ಚಿತ್ರಾಯುಧನ ನರಸಿಂಹ ನಗರಿಯಲಿ
ಮೇಲೆ ವಂಗರ ಮುರಿದು ವರನೇ
ಪಾಳ ಕರ್ಪರ ಹೂಣೆಯರನು ವಿ
ಶಾಲ ಕಾಂಭೋಜಾದಿಗಳನಪ್ಪಳಿಸಿದನು ತಿರುಗಿ ೨೭

ಪಾರಶೀಕ ಕಿರಾತ ಬರ್ಬರ
ಪಾರಿಯಾತ್ರರ ಮುರಿದು ಸರ್ಪ ವಿ
ಹಾರವನು ಮಾಡಿದನು ಮ್ಲೇಚ್ಛ ಸಹಸ್ರಕೋಟಿಗಳ
ಕ್ಷಾರಕರ ಹೂಣಕರ ಡೊಕ್ಕರ
ಪಾರಕರ ಬುರಸಹಣ ಭೂಪರೊ
ಳಾರುಭಟೆಯಲಿ ಕಾದಿ ಕೊಂಡನು ಸಕಲ ವಸ್ತುಗಳ ೨೮

ಬೆದರಿಸಿದನಾ ಹಿಮಗಿರಿಯ ಪಾ
ರ್ಶ್ವದ ಕಿರಾತರ ಮುಂದೆ ವಾಯು
ವ್ಯದಲಿ ಶೋಧಿಸಿ ಮುರಿಳಿವನು ಹಿಮಗಿರಿಯ ಕುಕ್ಷಿಯಲಿ
ಪುದಿದ ನಾನಾ ದ್ರೋಣಿಗಳ ಮ
ಧ್ಯದ ಕಿರಾತ ಪುಳಿಂದ ನಿಚಯವ
ಸದೆದು ಹತ್ತಿದನಗ್ರಶಿಖರಕೆ ಪಾರ್ವತೀ ಪಿತನ ೨೯

ಎರಡು ಸಾವಿರ ಯೋಜನವು ಹಿಮ
ಗಿರಿಯ ಬಹಳೋತ್ಸೇಧ ಶಿಖರಕೆ
ಸರಿಸದಲಿ ಹತ್ತಿದುದು ಪಾಳಯವೇನ ಹೇಳುವೆನು
ಕರಿ ತುರಗ ವರ ರಥ ಪದಾತಿಗೆ
ಪರಿಗಣನೆಯೆಲ್ಲಿಯದು ಹಿಮಗಿರಿ
ಯೆರಡು ಸಾವಿರದಗಲ ತಿರುಗಿತು ರಾಯ ಕೇಳೆಂದ ೩೦

ಗಿರಿಯ ಕೋಣೆಯ ಕುಹರ ಗುಹೆಗಳ
ಗರುವರುಂಟೆಂದಾ ಪುಳಿಂದರ
ನೊರಸಿ ಕಾಣಿಸಿಕೊಂಡು ಕೊಂಡನು ಸಕಲ ವಸ್ತುಗಳ
ಗಿರಿಯನಿಳಿದುದು ನಡೆದು ಬಲ ಕಿಂ
ಪುರುಷ ಖಂಡದ ಬಹಳ ನದಿಗಳ
ಲೆರಡು ತಡಿಯಲಿ ತಳಿತು ಬಿಟ್ಟುದು ವನ ವನಂಗಳಲಿ ೩೧

ಅದು ಗಣನೆಗೊಂಬತ್ತು ಸಾವಿರ
ವದರೊಳಿದ್ದುದು ಯಕ್ಷಕಿನ್ನರ
ಸುದತಿಯರು ಕಿಂಪುರುಷರತಿರಾಗಿಗಳು ಸುಖಮಯರು
ಇದರ ಫಲ್ಗಣೆಗಾನಲೇನ
ಪ್ಪುದು ತದೀಯ ಜನಂಗಳಿತ್ತುದು
ಸುದತಿಯರನಾ ಮಂಡಲಕೆ ಮಿಗಿಲಾದ ವಸ್ತುಗಳ ೩೨

ಅಲ್ಲಿ ಕೆಲಕಡೆಯಲ್ಲಿ ಗಿರಿ ಗುಹೆ
ಯಲ್ಲಿ ನೆರೆದ ಕಿರಾತ ವರ್ಗವ
ಚೆಲ್ಲ ಬಡಿದಪಹರಿಸಿದನು ಬಹುವಿಧ ಮಹಾಧನವ
ಮೆಲ್ಲಮೆಲ್ಲನೆ ಹೇಮ ಕೂಟದ
ಕಲ್ಲನಡರಿದನಾ ಮಹಾದ್ರಿಗ
ಳೆಲ್ಲ ಹಿಮಶೈಲದ ಮಹೋನ್ನತಿ ಬಹಳವಿಸ್ತಾರ ೩೩

ಅಡರಿತೀ ಬಲವಿದರ ಬೊಬ್ಬೆಯ
ಗಡಬಡೆಗೆ ಪದಘಟ್ಟಣೆಗೆ ಹುಡಿ
ಹುಡಿಯಲಾ ಗಿರಿಕೋಟಿ ಕೋಳಾಹಳದ ಕೊಬ್ಬಿನಲಿ
ನಡೆದು ಬಿಟ್ಟುದು ಗಿರಿಯ ತುದಿಯಲಿ
ತುಡುಕಿದುದು ನಾನಾ ದಿಗಂತವ
ತಡೆಯದದುಭುತ ವಾದ್ಯ ಗಜ ಹಯ ರಥದ ನಿರ್ಘೋಷ ೩೪

ಹೇಮಕೂಟದ ಗಿರಿಯ ಗಂಧ
ರ್ವಾಮರರ ಝೋಂಪಿಸಿದನವರು
ದ್ದಾಮ ವಸ್ತುವ ಕೊಂಡನಿಳಿದನು ಬಳಿಕ ಪರ್ವತವ
ಆ ಮಹಾ ಹರಿವರುಷದಲ್ಲಿಯ
ಸೀಮೆ ಯೋಜನ ನವ ಸಹಸ್ರ ವಿ
ರಾಮವದರೊಳಗೆಲ್ಲ ವಿವರಿಸಲರಿಯೆ ನಾನೆಂದ ೩೫

ಉತ್ತರೋತ್ತರ ದೇವಭೂಮಿಗ
ಳೆತ್ತಣವರೀ ದಳ ನಿಚಯ ತಾ
ನೆತ್ತ ಭೂರಿಧ್ವನಿಯನೀ ಗಜಬಜವನೀ ಜನವ
ಎತ್ತಲೆಂದರಿಯರು ವಿನೋದಕೆ
ತೆತ್ತರಲ್ಲಿಯ ಪಕ್ಷಿಮೃಗ ಹಯ
ವುತ್ತಮಾಂಗನೆಯರನು ಮನ್ನಿಸಿ ಕಂಡು ಫಲುಗುಣಗೆ ೩೬

ಎರಡು ಕಡೆಯಂಬುಧಿಯ ಪಾರ್ಶ್ವದ
ದುರುಳರನು ಧಟ್ಟಿಸಿ ತದೀಯರು
ವೆರಸಿ ಬಡಗಲು ನಡೆದುದಲ್ಲಿಯ ನಿಷಧ ಪರ್ವತಕೆ
ಎರಡು ಸಾವಿರ ಯೋಜನದ ತುದಿ
ವರೆಗೆ ಹತ್ತಿತು ಬಿಟ್ಟಿತಾ ಗಿರಿ
ಬಿರಿಯೆ ಬಿರು ಸೂಳೈಸಿದವು ನಿಸ್ಸಾಳ ಕೋಟಿಗಳು ೩೭

ಮೇಲೆ ನಿಷಧಾಚಲದ ಸುತ್ತಲು
ಧಾಳಿ ಹರಿದುದು ದೆಸೆದೆಸೆಯ ದೈ
ತ್ಯಾಳಿ ಹೆಚ್ಚಿದ ದುಷ್ಟ ದಾನವ ಮಂಡಲೇಶ್ವರರ
ಶೈಲ ಶಿಖರದೊಳುಳ್ಳ ದೊರೆಗಳ
ತಾಳು ಬಾಗಿಲ ಕಂತ್ತರಲಿ ಕಾ
ಲಾಳು ಹೊಕ್ಕುದು ಹೊಯ್ದು ಕಟ್ಟಿತು ಕೂಡೆ ಸೂರೆಗಳ ೩೮

ಗಿರಿಯ ಶಿಖರದ ಮೇಲ್ಕಡೆಯನಾ
ಚರಿಸಿ ನಿಷಧಾಚಲವನಿಳಿದುದು
ನರನ ಪಾಳೆಯ ಬಿಟ್ಟುದಾಗಲಿಳಾ ವೃತದ ಮೇಲೆ
ಅರಸ ಕೇಳೊಂಬತ್ತು ಸಾವಿರ
ಪರಿಗಣಿತ ಯೋಜನದ ನೆಲ ಸುರ
ಗಿರಿಯ ಸುತ್ತಣ ದೇಶವತಿ ವರುಣೀಯತರವೆಂದ ೩೯

ಚೂಣಿಗಾನುವರಿಲ್ಲ ಪಾರ್ಥನ
ಬಾಣಕಿದಿರಾರುಂಟು ಪಾದ್ಮ
ಶ್ರೇಣಿ ಚಾತುರ್ಬಲದ ಘಲ್ಲಣೆಗಿಲ್ಲ ಗರ್ವಿತರು
ಹೂಣೆ ಹೊಕ್ಕನು ಕನಕ ಶೈಲ
ದ್ರೋಣಿಗಳ ದುರ್ಬಲ ಸುರೌಘವ
ನಾಣೆಗಂಜಿಸಿ ಕಳೆದುಕೊಂಡನು ಸಕಲ ವಸ್ತುಗಳ ೪೦

ಹರಿದು ಹತ್ತಿತು ಗಂಧಮಾದನ
ಗಿರಿಯ ಸುತ್ತಣ ಯಕ್ಷ ವಿದ್ಯಾ
ಧರರನಂಜಿಸಿ ಕೊಂಡನಲ್ಲಿಯ ಸಾರ ವಸ್ತುಗಳ
ಗಿರಿಯನಿಳಿದರು ಜಂಬು ನೇರಿಲ
ಮರನ ಕಂಡರು ಗಗನ ಚುಂಬಿತ
ವೆರಡು ಸಾವಿರ ಯೋಜನಾಂತರದೊಳತಿ ವಿಳಾಸದಲಿ ೪೧

ಅದರ ಫಲ ಹೇರಾನೆಗಳ ತೋ
ರದಲಿಹವು ಗಿರಿಸಾರ ಶಿಲೆಗಳ
ಹೊದರಿನಲಿ ಬಿದ್ದೊಡೆದು ಹೊಳೆಯಾದುದು ಮಹಾರಸದ
ಅದು ಸುಧಾಮಯವಾಯ್ತು ಜಂಬೂ
ನದಿ ಜಲಸ್ಪರ್ಶದಲಿ ಜಾಂಬೂ
ನದ ಸುವರ್ಣವೆಯಾದುದಾ ನದಿಯೆರಡು ತಡಿವಿಡಿದು ೪೨

ಆ ರಸೋದಕ ಪಾನವೇ ಸಂ
ಸಾರ ಸೌಖ್ಯದ ಸಿದ್ಧಿಯಿತರಾ
ಹಾರವಿಂಧನ ತಂಡುಲಾಗ್ನಿಕ್ರಮ ವಿಧಾನವದು
ನಾರಿಯರು ಸಹಿತಲ್ಲಿ ಸಿದ್ಧರು
ಚಾರಣರು ರಮಣೀಯ ತೀರ ವಿ
ಹಾರಿಗಳು ಬಹುರತ್ನದಿಂ ಮನ್ನಿಸಿದರರ್ಜುನನ ೪೩

ಕೇಳಿ ಸೊಗಸಿದ ವಸ್ತುವಿಗೆ ಕ
ಣ್ಣಾಲಿ ಬಿದ್ದಣವಾಯ್ತಲಾ ಸುರ
ಪಾಲ ಪದವಿದರೊರೆಗೆ ಬಹುದೇ ತೀರವಾಸಿಗಳ
ಧಾಳಿ ಧಟ್ಟಣೆಗಳನು ಮಾಣಿಸಿ
ಪಾಳೆಯವನು ಪವನ ಸರೋವರ
ವೇಲೆಯಲಿ ಬಿಡಿಸಿದನು ಜಂಬೂನದಿಯ ತೀರದಲಿ ೪೪

ಲಲಿತ ದಿವ್ಯಾಭರಣ ರತ್ನಾ
ವಳಿಯನನುಕರಿಸಿದನು ಪಾಳೆಯ
ಸುಳಿದುದಮರಾಚಲದ ಕೇಸರ ಶಿಖರಿಗಳ ಕಳೆದು
ಹೊಳೆ ಹೊಳೆವ ಮೇರುವಿನ ಸುತ್ತಣ
ವಳಯದರ್ಥವನಾಕರಿಸಿ ಕೈ
ವಳಿಸಿ ಬಿಟ್ಟನು ಹೊಕ್ಕಿಳಾವೃತವರುಷ ಸೀಮೆಯಲಿ ೪೫

ಸೇನೆ ಪಡುವಲು ತಿರುಗಿ ಸುತ್ತಣ
ವಾನುಪೂರ್ವಿಯ ಗಂಧಮಾದನ
ಸಾನುವನು ವೆಂಠಣಿಸಿಯಡರಿತು ಚೂಣಿಶೃಂಗದಲಿ
ಆ ನಗೇಂದ್ರನನಿಳಿದು ಪಡುವಣ
ಕಾನನಂಗಳ ಕೇತುಮಾಲದ
ಕಾನನಂಗಳ ಕಳೆದು ಬಿಟ್ಟುದು ಸೇನೆ ಬಳಸಿನಲಿ ೪೬

ಅಲ್ಲಿ ಸಾಗರ ತೀರ ಪರಿಯಂ
ತೆಲ್ಲಿ ಗಜಹಯವೆಲ್ಲಿ ಸುದತಿಯ
ರೆಲ್ಲಿ ಮಣಿಗಣವೆಲ್ಲಿ ಬಹುಧನವೆಲ್ಲಿ ರಮಣೀಯ
ಅಲ್ಲಿಗಲ್ಲಿಗೆ ನಡೆದು ಸಾಧಿಸಿ
ಕೆಲ್ಲೆ ಕುಹರದ ಕೋಣೆ ಬಾಗುಗ
ಳೆಲ್ಲವನು ಹೊಕ್ಕರಿಸಿ ತೆರಳಿಚಿದನು ಮಹಾಧನವ ೪೭

ಎಡಕಡೆಯಲೊಂಬತ್ತು ಸಾವಿರ
ನಡು ನೆಲನನಾಕರಿಸಿ ಮೂಡಣ
ಕಡೆಗೆ ತಿರುಗಿತು ಗಂಧಮಾದನ ಗಿರಿಯನೇರಿಳಿದು
ನಡೆದಿಳಾವೃತದೊಳಗೆ ಬಿಟ್ಟುದು
ಪಡೆ ಸುರಾದ್ರಿಯನುಳುಹಿ ಬಲದಲಿ
ನಡೆಯಲತಿ ದೂರದಲಿ ಕಂಡರು ಮಂದರಾಚಲವ ೪೮

ಇದುವೆ ಕಡೆಗೋಲಾಯ್ತು ಕಡೆವಂ
ದುದಧಿಯನು ತಾನಿದು ಮಹಾಗಿರಿ
ಯಿದರ ಬಿಂಕವ ನೋಡಬೇಕೆಂದರ್ಜುನನ ಸೇನೆ
ಒದರಿ ಹತ್ತಿತು ನಡುವಣರೆ ದು
ರ್ಗದಲಿ ಬೆಟ್ಟಂಗಳಲಿ ನೃಪರಿ
ದ್ದುದು ಮಹಾಹವವಾಯ್ತು ಪಾರ್ಥನ ಚೂಣಿಯವರೊಡನೆ ೪೯

ಇಳುಹಿದರು ಚೂಣಿಯನು ಮುಂದರೆ
ನೆಲೆಯ ಭಟರೌಕಿದರು ಭಾರಿಯ
ತಲೆವರಿಗೆಗಳಲೊತ್ತಿದರು ಹೊಗಿಸಿದರು ದುರ್ಗವನು
ಕಲುವಳಿಯ ಕೋಲಾಹಲಕ್ಕಿವ
ರಳುಕದಿರಿದರು ಸುರಗಿಯಲಿ ತೆನೆ
ವಳಿಯ ಹಿಡಿದರು ಹೊಯ್ದು ಕೇಶಾಕೇಶಿ ಯುದ್ಧದಲಿ ೫೦

ಶಕರು ಖದ್ಯೋತ ಪ್ರತಾಪರು
ವಿಕಳ ಚಿಂಘರು ದೀರ್ಘಮಯ ವೇ
ಣಿಕರು ಪಶುಪಾಲಕ ಪುಳಿಂದರು ಕಂಕಣಾಪ್ಪಯರು
ಸಕಲ ದಸ್ಯುಗಳೈದೆ ಸೋತುದು
ವಿಕಳ ಬಲವೊಪ್ಪಿಸಿತು ಸರ್ವ
ಸ್ವಕವ ಸಂಧಾನದಲಿ ನೆಲೆಯಾಯ್ತಲ್ಲಿಯರ್ಜುನನಗೆ ೫೧

ಶೋಧಿಸಿದನಾ ಗಿರಿಯನಾಚೆಯ
ಹಾದಿಯಲಿ ಹೊರವಂಟು ಬರೆ ಮರಿ
ಯಾದೆಗಿಕ್ಕಿದ ಬೆಟ್ಟವಿದ್ದುದು ಮಾಲ್ಯವಂತ ಗಿರಿ
ಭೇದಿಸಿದನದರೊಳಗು ಹೊರಗಿನ
ಲಾದ ವಸ್ತುವ ಕೊಂಡು ತಚ್ಛೈಲ
ಲೋದರವನೇರಿಳಿದು ಭದ್ರಾಶ್ವಕ್ಕೆ ನಡೆತಂದ ೫೨

ಅದು ಮಹಾ ರಮಣೀಯತರವಂ
ತವರೊಳಿದ್ದುದು ಶುದ್ಧಭೋಗಾ
ಸ್ಪದರು ಯಕ್ಷೋರಕ್ಷಗಂಧರ್ವಾಪ್ಸರೋ ನಿಕರ
ಕುದುರೆ ರಥ ಗಜ ಪತ್ತಿ ನಿರ್ಘೋ
ಷದಲಿ ಬೆಬ್ಬಳಿಯಾಯ್ತು ಬೇಳಂ
ಬದ ವಿಘಾತಿಗೆ ಸಿಲುಕಿ ತೆತ್ತುದು ಸಕಲ ವಸ್ತುಗಳ ೫೩

ದೊರಕಿತಲ್ಲಿಯಪೂರ್ವ ವಸ್ತೂ
ತ್ಕರ ಸಮುದ್ರದ್ವೀಪ ಪರಿಯಂ
ತರ ನಡೆದನೊಂಬತ್ತು ಸಾವಿರ ಯೋಜನಾಂತರವ
ತಿರುಗಿದನು ಭದ್ರಾಶ್ವಕವನಾ
ಕರಿಸಿ ಬಡಗಲು ನಡೆವರಲ್ಲಿಯ
ಗಿರಿಯ ಕಂಡರು ಹತ್ತಿದರು ಹರುಷದಲಿ ಬೊಬ್ಬಿಡುತ ೫೪

ನೀಲ ಗಿರಿಯಗ್ರದಲಿ ಬಿಟ್ಟುದು
ಪಾಳೆಯವು ಬೊಬ್ಬೆಯಲಿ ದಿಕ್ಕಿನ
ಮೂಲೆ ಬಿರಿದುದು ಜರಿದವದ್ರಿಗಳೇನನುಸುರುವೆನು
ಮೇಲು ದುರ್ಗದ ಸಂಧಿಗೊಂದಿಯೊ
ಳಾಳು ಹರಿದುದು ಸೂರೆಗೊಂಡು ವಿ
ಶಾಲ ವಸ್ತುವ ತಂದರಲ್ಲಿದ್ದರಸುಗಳ ಗೆಲಿದು ೫೫

ಎರಡು ಸಾವಿರದುದ್ದವದು ಮು
ತ್ತೆರಡು ಸಾವಿರದಗಲವದನಾ
ಕರಿಸಿ ರಮ್ಯಕ ಭೂಮಿಗಿಳಿದರು ಹೊಕ್ಕರಾ ನೆಲನ
ಅರಸ ಕೇಳಲ್ಲಲ್ಲಿ ಸುಮನೋ
ಹರದ ವಸ್ತುವ ಕೊಂಡು ನವ ಸಾ
ವಿರವನಗಲಕೆ ಸುತ್ತಿ ಬಂದರು ಗೆಲಿದು ಗರ್ವಿತರ ೫೬

ಅರಸ ಕೇಳಲ್ಲಿಂದ ಬಡಗಲು
ಹರಿದು ಬಿಟ್ಟರು ಹತ್ತಿದರು ಬೇ
ಸರದೆ ಕಲುವರಿಗಳಲಿ ಬಹಳ ಶ್ವೇತಪರ್ವತವ
ಗಿರಿಯ ತುದಿಗಳ ತೋಟದಲಿ ಗ
ಹ್ವರದ ಕೊಳ್ಳದ ಕೋಹಿನಲಿ ಹೊ
ಕ್ಕಿರಿದು ಶೋಧಿಸಿ ಕೊಂಡರಲ್ಲಿಯ ಸಾರವಸ್ತುಗಳ ೫೭

ಇಳಿದನಾ ಗಿರಿಯನು ಹಿರಣ್ಮಯ
ದೊಳಗೆ ಬಿಟ್ಟನು ಪಾಳೆಯವ ತ
ದ್ವಲಯ ಮಿಗಿಲೊಂಬತ್ತು ಸಾವಿರ ಯೋಜನಾಂತರವ
ಬಳಸಿ ಬಂದನು ವಿಮಲ ಸೌಧಾ
ವಳಿಯ ನೆಲೆಯುಪ್ಪರಿಗೆಗಳ ವರ
ಲಲನೆಯರು ಕಂಡೀತನನು ಹೊಗಳಿದರು ತಮ ತಮಗೆ ೫೮

ಈತ ಭಾರತ ವರುಷ ಪತಿಯನು
ಜಾತ ಗಡ ತತ್ಕರ್ಮ ಭೂಮಿಯ
ಲೀತನಧಿಪತಿ ಗೆಲಿದನಿತ್ತಲು ದೇವಭೂಮಿಪರ
ಈಗ ಗೌರೀಸುತನವೋಲ್ ಪುರು
ಹೂತ ತನಯನ ವೋಲು ಭುವನ
ಖ್ಯಾತನೆಂದಾ ಸ್ತ್ರೀಕಟಕ ಕೊಂಡಾಡಿತರ್ಜುನನ ೫೯

ತನ ತನಗೆ ತರುಣಿಯರು ಹೂವಿನ
ತನಿವಳೆಯ ಕರೆದರು ಕನತ್ಕಾಂ
ಚನ ವಿಭೂಷಣ ರತ್ನಚಯ ಪೂರಿತದ ಪೆಟ್ಟಿಗೆಯ
ವನಿತೆಯರನಾ ದೇಶದಲಿ ಮೀ
ಟೆನಿಪರನು ಮೃಗಪಕ್ಷಿ ಕೃಷ್ಣಾ
ಜಿನವನಂತವನಿತ್ತು ಸತ್ಕರಿಸಿದರು ಫಲುಗುಣನ ೬೦

ಧಾರುಣೀಪತಿ ಕೇಳು ದಳ ನಡು
ದಾರಿ ಬಡಗಣ ಶೃಂಗಪರ್ವತ
ದೋರೆಯಲಿ ದೊರೆಗಳನು ಥಟ್ಟಿಸಿ ಸೆಳೆದು ಬಹು ಧನವ
ಭಾರಣೆಯ ಮುಂಗುಡಿಯ ಕೊಳ್ಳಿಗ
ಳೋರಣಿಸಿ ತುದಿಗೇರಿ ಸಿದ್ಧರ
ಚಾರಣರ ವಿದ್ಯಾಧರರ ಮುತ್ತಿದರು ಮನ್ನಿಸದೆ ೬೧

ಅರಸು ಮೋಹರ ಹತ್ತಿತಾ ಗಿರಿ
ಎರಡು ಸಾವಿರದಗಲವದರಲಿ
ತುರುಗಿ ಬಿಟ್ಟಿತು ಸೇನೆ ಸೂಳೈಸಿದವು ನಿಸ್ಸಾಳ
ಬಿರಿದುದಾ ಗಿರಿ ಕೆಳಗಣುತ್ತರ
ಕುರುಗಳೆದೆ ಜರ್ಝರಿತವಾಯ್ತು
ಬ್ಬರಕೆ ಬಡಗಣ ಕಡಲು ಕವಡಿತು ತಳದ ತಾಯ್ಮಳಲ ೬೨

ನೆರೆದರಲ್ಲಿಯ ನೃಪರು ದೂತರ
ಹರಿಯ ಬಿಟ್ಟರು ಪಾರ್ಥನಿದ್ದೆಡೆ
ಗರಸ ಕೇಳವರುಗಳು ಬಂದರು ಕಂಡರರ್ಜುನನ
ಗಿರಿಯನಿಳಿಯದಿರಿತ್ತಲುತ್ತರ
ಕುರುಗಳಿಹ ಸಂಸ್ಥಾನವಿದು ಗೋ
ಚರಿಸಲರಿಯದು ನರರ ಕಾಲ್ಬುಳಿಗೆಂದರವರಂದು ೬೩

ಅಲ್ಲದಾಕ್ರಮಿಸಿದರೆ ನಿನಗವ
ರಲ್ಲಿ ಕಾಣಿಕೆ ದೊರಕಲರಿಯದು
ಬಲ್ಲಿದವರುತ್ತರದ ಕುರುಗಳು ನಿನಗೆ ಬಾಂಧವರು
ಗೆಲ್ಲದಲಿ ಫಲವಿಲ್ಲ ಸಾಹಸ
ವಲ್ಲಿ ಮೆರೆಯದು ಮರ್ತ್ಯ ದೇಹದೊ
ಳಲ್ಲಿ ಸುಳಿವುದು ಭಾರವೆಂದರು ಚರರು ಫಲುಗುಣಗೆ ೨೪

ಮಾಣಲದು ನಮಗವರು ಬಂಧು
ಶ್ರೇಣಿಗಳು ಗಡ ಹೋಗಲದು ಕ
ಟ್ಟಾಣೆಯಾವುದು ನಿಮ್ಮ ದೇಶದೊಳುಳ್ಳ ವಸ್ತುಗಳ
ವಾಣೆಯವ ಮಾಡದೆ ಸುಯಜ್ಞದ
ಕಾಣಿಕೆಯನೀವುದು ಯುಧಿಷ್ಠಿರ
ನಾಣೆ ನಿಮಗೆನೆ ತಂದು ಕೊಟ್ಟರು ಸಕಲ ವಸ್ತುಗಳ ೨೫

ತಿರುಗಿತಲ್ಲಿಂದಿತ್ತ ಪಾಳೆಯ
ಮುರಿದು ಬಿಟ್ಟು ಹಿರಣ್ಮಯವನಾ
ಕರಿಸಿ ರಮ್ಯಕದಿಂದಿಳಾವೃತದಿಂದ ದಕ್ಷಿಣಕೆ
ಭರದಿನೈದುತ ಹರಿವರುಷ ಕಿಂ
ಪುರುಷವನು ದಾಟುತ ಹಿಮಾನ್ವಿತ
ಗಿರಿಯನೇರಿದುದಿಳಿದು ಬಂದುದು ತೆಂಕ ಮುಖವಾಗಿ ೨೬

ಕಳುಹಿ ಕಳೆದನು ಹಿಂದೆ ಕೂಡಿದ
ಬಲವನವರವರೆಲ್ಲ ಯಾಗ
ಸ್ಥಳಕೆ ಬಹ ನೇಮದಲಿ ಹರಿದುದು ನಿಜ ಪುರಂಗಳಿಗೆ
ನೆಲನನಗಲದ ವಸ್ತುವಿದನೆಂ
ತಳವಡಿಸಿದನೊ ಶಿವಯೆನುತ ಸುರ
ರುಲಿಯೆ ಹೊಕ್ಕನು ಪಾರ್ಥನಿಂದ್ರಪ್ರಸ್ಥ ಪುರವರವ ೨೭

## ನಾಲ್ಕನೆಯ ಸಂಧಿ

ಸೂ. ಯಾಗಸಿದ್ಧಿಗೆ ನಡೆದು ಪೂರ್ವ ವಿ
ಭಾಗದಲಿ ಭೂಮಿಪರ ಕೆಯ್ಯಲಿ
ಸಾಗರೋಪಮ ಧನವ ಮೇಳೈಸಿದನು ಕಲಿ ಭೀಮ

ಕೇಳು ಜನಮೇಜಯ ಧರಿತ್ರೀ
ಪಾಲ ಯಮ ನಂದನನ ಭಾಗ್ಯದ
ಹೋಲಿಕೆಗೆ ಬಹರುಂಟೆ ನಳ ನಹುಷಾದಿ ರಾಯರಲಿ
ಆಳು ನಡೆದುದು ಭೀಮಸೇನನ
ಧಾಳಿಯಿದೆಯೆನೆ ತೆತ್ತುದವನೀ
ಪಾಲಕರು ತಂತಮ್ಮ ನಿಜ ವಿತ್ತಾನುರೂಪದಲಿ ೧

ನಡೆದು ಶೋಧಿಸಿ ರೋಚಮಾನನ
ಹಿಡಿದು ಬಿಟ್ಟನು ಸರ್ವ ವಿತ್ತವ
ನಡಕಿತನಿಲಜನಾಳು ಮುಂದಣ ಚೇದಿ ದೇಶದಲಿ
ಘುಡಿ ಘುಡಿಸೆ ನಿಸ್ಸಾಳವೀ ಗಡ
ಬಡೆಯಿದೇನೆನೆ ಭೀಮಸೇನನ
ಪಡೆಯೆನಲು ಶಿಶುಪಾಲ ಬಂದನು ಕಂಡನುಚಿತದಲಿ ೨

ಏನು ಬಂದೆಯಪೂರ್ವವೆನೆ ಯಾ
ಗಾನುರಾಗವನರುಪಲಿತಿ ಸು
ಮ್ಮಾನದಲಿ ಶಿಶುಪಾಲ ಹೇರಿಸಿದನು ಮಹಾಧನವ
ಮಾನಿಸರ ಕಳುಹಿದರೆ ಸಾಲದೆ
ನೀನಿದೇಕೆಂದುಚಿತದಲಿ ಸ
ನ್ಮಾನಿಸುತ ನಿಲಿಸಿದನು ತಿಂಗಳು ಪವನ ನಂದನನ ೩

ನಡೆದು ಮುಂದೆ ಕಳಿಂಗ ದೇಶದೊ
ಳಡಸಿ ಬಿಟ್ಟನು ಶೋಣಿವಂತನ
ಹಿಡಿದು ಕಪ್ಪವ ಕೊಂಡು ಸದೆದನು ಕೋಸಲೇಶ್ವರನ
ಅಡಕಿತಲ್ಲಿಯ ಧನ ಪಯೋಧಿಯ
ಕಡೆಯ ಕೋಟೆಯ ಮುರಿಯಲವನೆದೆ
ಯೊಡೆದು ದೀರ್ಘಪ್ರಜ್ಞನಿತ್ತನು ಬೇಹ ವಸ್ತುಗಳ ೪

ಆಳು ನಡೆದುದು ಚೂಣಿಯಲಿ ಗೋ
ಪಾಲನೆಂಬನ ಮುರಿಯೆ ತೆತ್ತುದ
ಹೇಳಲರಿಯೆನು ಸಂಖ್ಯೆಯನು ಮುಂದತ್ತ ಪಾಲಕನ
ಜಾಳಿಸಿದನಾ ಕಾಶಿ ರಾಜನ
ಧಾಳಿಯಲಿ ಕೊಂದನು ಸುಪಾರ್ಶ್ವನ
ಮೇಲೆ ನಡೆದನು ಗಯುನ ಮತ್ಸ್ಯನ ಗೆಲಿದನಾ ಭೀಮ ೫

ನಡೆದು ಮುಂದೆ ವಿದೇಹನನು ಸದೆ
ಬಡಿದು ಮತ್ತೆ ಕಿರಾತ ಬಲವವ
ಗಡಿಸಿ ಕಾದಿತನಂತವದರೊಳಗೇಳು ಮಾನಿಸರು
ಒಡೆಯರವದಿರವಂಗಡವ ಹುಡಿ
ಹುಡಿಯ ಮಾಡಿ ನಿಷಾದ ವರ್ಗವ
ಕೆಡಹಿ ನಿಷಧನ ಹೊಯ್ದು ಸೆಳೆದನು ಸಕಲ ವಸ್ತುಗಳ ೬

ಮಲೆತು ಕಾದಿದ ದಂಡ ಧಾರನ
ಗೆಲಿದು ಮಗಧೇಶ ಗಿರಿ ವ್ರಜ
ದೊಳಗೆ ಪಾಳೆಯ ಬಿಟ್ಟುದವನಿದಿರಾಗಿ ನಡೆತಂದು
ದಳವ ಹೇಳಿದನಾತನಲ್ಲಿಂ
ದಿಳಿದು ಕರ್ಣನ ಗೆಲಿದು ಕಪ್ಪವ
ಸೆಳೆದು ಕೊಂಡದ್ರಿಯಲಿ ಸದೆದನು ಬಹಳ ವನಚರರ ೭

ಸೂರೆಗೊಂಡಲ್ಲಿಂದ ನಡೆದನು
ಮೀರಿ ಗಂಗಾಸಂಗಮವ ಕೈ
ಮೀರಲರಿಯದೆ ಸಂಧಿಗವನೀಶ್ವರರು ವಶವಾಯ್ತು
ಹೇರಿಸಿದನನುಪಮದ ವಸ್ತುವ
ನಾರು ಸಾವಿರ ಭಂಡಿಯಲಿ ನಡೆ
ದೇರಿ ಹೊಯ್ದನು ವಾಸುದೇವನ ಪೌಂಡ್ರಕಾಹ್ವಯನ ೮

ಪುರವರವನಲ್ಲಿಂದ ಮೌಳ್ಯದ
ತೆರಳಿಕೆಯ ಮಾಡಿದನು ಮೂಡಲು
ಹರಿದು ಮುರಿದು ಸಮುದ್ರಸೇನನ ಸರ್ವಗವತೆಯಲಿ
ತೆರಳಿಯಲ್ಲಿಂದಿಂದ್ರ ಸೇನನ
ನೊರೆಸಿ ಭಂಡಾರವನು ಹೇರಿಸಿ
ಮರಳಿ ವಂಗನನಪ್ಪಳಿಸಿದನು ಲುಬ್ಧಕರು ಸಹಿತ ೯

ಸಾರಲೋಹಿತನೆಂಬ ಸಾಗರ
ತೀರವಾಸಿಗಳೊಳ ಕುರುವದ ವಿ
ಕಾರ ಚೋನೆಗ ಚೀನ ಬೋಟಕರನು ನಿವಾಸಿಗಳ
ಓರೆ ಬಾಗಿನ ಕುರುವ ಕೊಳ್ಳದ
ಗೌರಿಕರನಪ್ಪಳಿಸಿ ಮಲೆಯ ವಿ
ಹಾರಿಗಳ ಬರಿಗೈದು ತುಂಬಿಸಿದನು ಸುವಸ್ತುಗಳ ೧೦

ಥಾಳಿ ಹರಿದುದು ಪಂಚ ಗೌಳವ
ರಾಳಪೂಡ್ರಿಯರಾಂಧ್ರ ಜಾಳಾಂ
ದ್ರಾಳಿಗಳನಪ್ಪಳಿಸಿ ಹೂಡಿಸಿದನು ಮಹಾಧನವ
ಮೇಲು ದುರ್ಗದ ಪಾರ್ವತೇಯರಿ
ಗಾಳು ಹರಿದುದು ಸಂದುಗೊಂದಿಯ
ಶೈಲ ಗುಹೆಗಳೊಳರಸಿ ಹಿಡಿದನು ಬಹಳ ಧನಯುತರ ೧೧

ಅರಸಿದನು ನಾವೆಗಳಲಬ್ಧಿಯ
ಕುರುವದಲಿ ಕೊಬ್ಬಿದ ಧನಾಢ್ಯರ
ಮುರಿದು ಮರಳಿದು ಕೆಲಬಲದಲಾ ದ್ವೀಪ ಪಾಲಕರ
ಸೆರೆವಿಡಿದು ತನಿ ಸೂರೆಯಲಿ ಪಡೆ
ನೆರೆ ದಣಿಯಲಾ ಮ್ಲೇಚ್ಛ ವರ್ಗವ
ತರಿದು ಶೋಧಿಸಿ ತೆಗೆದನಲ್ಲಿಯ ಸಾರ ವಸ್ತುಗಳ ೧೨

ಆ ಮಹಾ ಘೋಟಕ ಮಹಾಪ್ವಯ
ಧಾಮದಲಿ ದಸ್ತುಗಳನತಿ ನಿ
ಸ್ಸೀಮ ಯವನ ಕರೂಪರನು ತಾಗಿದನು ಪಹಿಲದಲಿ
ಹೇಮ ಮುಕ್ತಾ ರಜತ ಚಂದನ
ರಾಮಣೀಯಕ ವಸ್ತು ನಿಚಯದ
ಸೀಮೆಗಳ ನಾನರಿಯೆನಳವಡಿಸಿದನು ಕಲಿಭೀಮ ೧೩

ಮರಳಿಯನಿಲಜನಾ ಮಹಾಮ್ಲುತ
ತರದ ವಸ್ತುವನಾನಲಾಪುದೆ
ಧರಣಿಯೆನೆ ಸಂದಣಿಸಿದವಸಂಖ್ಯಾತ ರಥಯೂಥ
ಅರಸುಗಳ ಸಹಿತೀ ಮಹಾಬಲ
ವೆರಸಿ ಬಂದನು ಭೀಮನಣ್ಣನ
ಚರಣಕೆರಗಿದನರ್ಜುನನ ತಕ್ಕೈಸಿದನು ನಗುತ ೧೪

## ಐದನೆಯ ಸಂಧಿ

ಸೂ. ನಡೆದು ವಿವಿಧ ದ್ವೀಪ ಪತಿಗಳ
ಜಡಿದು ಕಪ್ಪವ ಕೊಂಡು ತೆಂಕಣ
ಕಡಲ ವಳಯದ ನೃಪರ ಗೆಲಿದನು ವೀರ ಸಹದೇವ

ಕೇಳು ಜನಮೇಜಯ ಧರಿತ್ರೀ
ಪಾಲ ಸಹದೇವನ ಸಗಾಥಿಕೆ
ಯಾಳುತನವಿವರಾರ ಹವಣಲ್ಲೆಂಬ ತೆರನಾಯ್ತು
ಆಳು ನಡೆದುದು ತೆಂಕಣವನೀ
ಪಾಲರೀತನ ಬಿರಿಸಿಗೀತನ
ದಾಳಿಗೀತನ ದೆಸೆಗೆ ದೆಸೆಗೆಟ್ಟುದು ದಿಗಂತದಲಿ ೧

ಶೂರ ಸೇನನ ಸದೆದು ನೆರೆ ಭಂ
ಡಾರವೆಲ್ಲವ ಕೊಂಡು ತೆಂಕಣ
ವೀರಮತ್ಸ್ಯನ ಗೆಲಿದು ಸರ್ವಸ್ವಾಪಹಾರದಲಿ
ಭೂರಿ ಬಲನಹ ದಂತವಕ್ತ್ರನ
ವಾರಣಾಶ್ವ ರಥಂಗಳನು ಕೊಂ
ಡಾರುಭಟೆಯಲಿ ಮುಂದೆ ನಡೆದನು ತೆಂಕಮುಖವಾಗಿ ೨

ಖಳ ನಿಶಾಚರ ಕೋಟಿಗಳನರೆ
ಗಳಿಗೆಯೊಳಗಾಕ್ರಮಿಸಿದನು ಮುಂ
ಡಳಿಕ ಮನ್ನೆಯರಾಂಪರೇ ಚತುರಂಗ ಪದಹತಿಗೆ
ಹೊಳಿತಡಿಯ ಗಿರಿ ದುರ್ಗ ವಿಪಿನ
ಸ್ಥಳದ ಧರಣಿಪರಿದಿರುವಂದ
ಗ್ಗಳೆಯ ಗಜ ರಥ ಹಯ ಸಹಿತ ತೆತ್ತರು ಸುವಸ್ತುಗಳ ೩

ಬಂದು ಕುಂತೀಭೋಜ ಮೊಮ್ಮನ
ಮುಂದಿರದ ಸುಕ್ಷೇಮ ಕುಶಲವ
ನಂದು ಕೇಳಿದು ಕೊಟ್ಟನತಿಶಯ ಸಾರವಸ್ತುಗಳ
ಮುಂದೆ ಚರ್ಮಣ್ವತಿಯ ಜಂಭಕ
ನಂದನನನಪ್ಪಳಿಸಿ ಗಜ ಹಯ
ವೃಂದವನು ಕೊಂಡೆತ್ತಿ ಬಿಟ್ಟನವಂತಿ ದೇಶದಲಿ ೪

ತರುಬಿದರೆ ವಿಂದಾನುವಿಂದರ
ಮುರಿದು ಕಪ್ಪವ ಕೊಂಡು ಭೀಷ್ಮಕ
ನರಪತಿಯ ಗೆಲಿದಲ್ಲಿ ಮನ್ನಿಸಿಕೊಂಡನುಚಿತದಲಿ
ಬರಬರಲು ಕುಂತಲ ನೃಪನನಾ
ಕರಿಸಿ ಕಪ್ಪವ ಕೊಂಡು ಖಳ ತಿ
ತ್ತಿರಿ ಕಿಳೀಂದ್ರಕರೆಂಬ ಬೇಡರ ಧುರದೊಳೋಡಿಸಿದ ೫

ಉರವಣಿಸಿ ದಳ ತುಂಗಭದ್ರಾ
ವರ ನದಿಯನುತ್ತರಿಸಿ ಪಂಪಾ
ಸರದ ತಡಿಯಲಿ ಬಿಟ್ಟನಾ ವಿರುಪಾಕ್ಷ ಸೀಮೆಯಲಿ
ಗಿರಿಚರರ ವನಚರರ ಬಿಂಕವ
ನೊರಸಿ ಕಿಷ್ಕಿಂಧಾದ್ರಿಯಲಿ ಸಂ
ಚರಿಸಿ ಬಿಟ್ಟುದು ಕಟಕ ಬಹುವಿಧ ವಾದ್ಯ ರಭಸದಲಿ ೬

ಕೇಳಿದನು ಕಿಷ್ಕಿಂಧ ಗಿರಿಯ ವಿ
ಶಾಲ ಶೃಂಗವನು ನೆರೆ ಘನ ನಿ
ಸ್ಸಾಳ ಮೊಳಗಿದರೊಡನೆ ಮೊಳಗಿತು ಗಿರಿ ಗುಹಾನಿಕರ
ಆಳಿದೆತ್ತಣದೆನುತ ಕಪಿ ಬಲ
ಜಾಲ ನೆರೆದುದು ಮುರಿದು ತರು ಶಾ
ಖಾಳಿಗಳ ಕೈದುಗಳ ಕೈಯಲಿ ತರುಬಿದರು ಬಲವ ೭

ಕವಿದುದೀ ಚತುರಂಗ ಬಲ ಸಂ
ತವಿಸಿ ಲಗ್ಗೆಯ ಮಾಡಿ ವಾನರ
ನಿವಹದಲಿ ಕರೆದುದು ಶರಾಳಿಯ ಸುಭಟ ಮೇಘಚಯ
ತಿವಿದರಂಬಿನ ಸೋನೆಗಳುಕದೆ
ಸವಡಿ ಮರನಲಿ ಸದೆದು ಹೊಕ್ಕುದು
ರವಿಸುತನ ಸಂತತಿ ಸುಷೇಣನು ವೀರ ವೃಷಸೇನ ೮

ದೊರೆಗೆ ದೊರೆಯಿದಿರಾಗಿ ಕಾದಿತು
ತೆರಳದಿದು ದಿನವೇಳು ಪರಿಯಂ
ತರ ವಿಘಾತಿಯೊಳೊದಗೆ ಮೆಚ್ಚಿದರುಭಯ ವಾನರರು
ಅರಸ ನೀನಾರೆನೆ ಯುಧಿಷ್ಠಿರ
ನರಪತಿಯ ಕಥೆವೇಳೆ ಕೊಟ್ಟರು
ಪರಮ ವಸ್ತು ಪ್ರಚಯವನು ಮಾದ್ರೀಕುಮಾರಂಗೆ ೯

ತೆರಳುತಲ್ಲಿಂ ಬಳಿಕ ತೆಂಕಣ
ನರಪತಿಗಳಾನುವರೆ ಸೇನೆಯ
ಖುರಪುಟಕೆ ನುಗ್ಗಾಗಿ ತೆತ್ತರು ಸಕಲ ವಸ್ತುಗಳ
ಉರವಣಿಸಿ ಬಲ ನಡೆದು ನದಿಗಳ
ನರಸಿ ಕಾವೇರಿಯಲಿ ಬಿಟ್ಟುದು
ಹರಿದುದಲ್ಲಿಂ ಧಾಳಿ ಘನ ಮಾಹಿಷ್ಮತೀಪುರಕೆ ೧೦

ಧಾಳಿಯೆನಲಿದಿರಾಗಿ ಹೊರವಂ
ಟಾಳು ತಾಗಿದುದಲ್ಲಿಗಧಿಪತಿ
ನೀಲನೆಂಬಾತನು ಮಹಾಹವವಾಯ್ತು ಚೂಣಿಯಲಿ
ಹೇಳಲದ್ಭುತವುರಿದುದಧಿಕ
ಜ್ವಾಲೆಯಲಿ ಚತುರಂಗ ಬಲ ಹರ
ಭಾಳನಯನ ಕವಾಟ ತೆರೆದಂತಾಯ್ತು ನಿಮಿಷದಲಿ ೧೧

ಉರಿ ಸಮುದ್ರದೊಳದ್ದುದೋ ವೋ
ಹರವು ತೆಗೆ ತೆಗೆ ಕುನ್ನಿಗಳ ಕಾ
ತರಿಸಲೀಯದಿರಾನೆ ಮುರಿಯಲಿ ಹೊಕ್ಕ ಕುದುರೆಗಳು
ಮರಳಿಚಲಿ ತೇರುಗಳ ಸೂತರ
ಕರೆದು ವಾಘೆಯ ಸೆಳೆ ಪದಾತಿಯ
ತಿರುಗ ಹೊಯ್ ಹೊಯ್ಯೆನುತ ಮಿಗೆ ಗಜರಿದನು ಸಹದೇವ ೧೨

ರಾಯದಳವೇಕುರಿದುದೇನಿದ
ರಾಯಸವು ಹೊಸತಾಯ್ತು ವೈಶಂ
ಪಾಯನ ಮುನಿ ಹೇಳೆನಲು ನಗುತಿಂತೆಂದನಾ ಮುನಿಪ
ರಾಯ ಕೇಳ್ ಪೂರ್ವದಲಿ ಕಮ
ಲಾಯತಾಕ್ಷಿಯರುಂಟು ಹಲಬರು
ವಾಯುಸಖ ಪರದಾರ ಗಮನವ ಮೆಚ್ಚಿದನು ಬಳಿಕ · ೧೩

ಪಾವಕ ದ್ವಿಜ ವೇಷದಲಿ ಬಂ
ದಾ ವಧುಗಳೊಡನಿರಲು ನಗರವ
ಕಾವವರು ಹಾದರವ ಹಿಡಿದರು ಹವ್ಯವಾಹನನ
ಕೋವಿದರ ಮುಂದಿಕ್ಕಿದರೆ ಧ
ರ್ಮಾವಲಂಬನ ಶಾಸ್ತ್ರಗಳನು
ದ್ಭಾವಿಸಲು ಭುಗಿಲೆಂದು ತೋರಿದನಗ್ನಿ ನಿಜ ತನುವ ೧೪

ಧರಣಿಸುರರಲಿ ಸುಪ್ರಧಾನರು
ವೆರಸಿ ಬಂದಗ್ನಿಯ ಪದ ತ್ರಯ
ಕೆರಗಿ ಕೋಪಸ್ತಂಭವನು ಮಾಡಿದರು ದೈನ್ಯದಲಿ
ಪುರದಲದು ಮೊದಲಾಗಿ ಕಾಮಿನಿ
ಯರಿಗೆ ಹಾದರ ಸಲುವುದಿದು ವಿ
ಸ್ತರಣವೆಂದು ಕೃಶಾನು ವರವನು ಕೊಟ್ಟನಾ ನೃಪಗೆ ೧೫

ಅದುವೆ ಮೊದಲಾಗೀಗಳಲ್ಲಿಯ
ಸುದತಿಯರು ಸ್ವಚ್ಛಂದ ಚಾರಿಯ
ರಿದರಿನಾ ನೃಪತಿಗೆ ಸಹಾಯವನಗ್ನಿ ಮಾಡುವನು
ಇದನರಿತು ಸಹದೇವನುಪವಾ
ಸದಲಿ ಮಿಂದು ಕುಶಾಗ್ರ ಸಂಸ್ತರ
ಣದಲಿ ಪವಡಿಸಿ ಬೇಡಿಕೊಂಡನು ವಹ್ನಿಸೂಕ್ತದಲಿ ೧೬

ಯಾಗವಿದು ನಿನಗೋಸುಗವೆ ನೃಪ
ಯಾಗ ಸಿದ್ಧಿಗೆ ಬಂದೆವಲ್ಲದೆ
ಮೇಗೆ ತಾನರಿಯದೆ ಧನಾಶೆಯಲಿವನ ಝುರಿಯುವಲೆ
ಈಗ ನೀನಡ್ಡೈಸಲೆಮ್ಮಯ
ಯಾಗವುಳಿಯಲಿ ನಿನಗೆ ಮಾಣಲಿ
ಯಾಗ ಪೌರೋಹಿತ್ಯವೆಂದನು ನಗುತ ಸಹದೇವ ೧೭

ಎಂದು ನಾನಾವಿಧ ವರ ಸ್ತುತಿ
ಯಿಂದ ಹೊಗಳಿದರಗ್ನಿ ಮೆಚ್ಚಿದ
ರಿಂದು ಬಿಡಿಯೆನೆ ಬಿಟ್ಟೆನೀತನ ಮಾರಿದೆನು ನಿನಗೆ
ಎಂದು ಶಿಖಿ ಹಿಮ್ಮೆಟ್ಟಲಾ ದಳ
ಮುಂದೆ ನಡೆದುದು ನೀಲ ಪುರದಲಿ
ಸಂದಣಿಸಿ ಬಳಿಕಾತನೀತನ ಕಂಡು ಪೊಡವಂಟ ೧೮

ತೆತ್ತನವ ಸರ್ವಸ್ವವನು ತಾ
ನೆತ್ತಿ ಬಂದನು ಕೂಡೆ ಬಳಿಕಿನೊ
ಳುತ್ತರೋತ್ತರವಾಯ್ತು ಸಹದೇವನಿಗೆ ದಿಗ್ವಿಜಯ
ಮತ್ತೆ ಸಹ್ಯಾಚಲದ ಕೊಳ್ಳದ
ಗುತ್ತರಿನ ಭೂಪರ ವಿಭಾಡಿಸಿ
ಸುತ್ತಿ ಬಂದಾದರಿಸಿದನು ತದ್ಗಿರಿ ನಿವಾಸಿಗಳ ೧೯

ಇಳಿದು ಕೊಂಕಣ ಗೌಳವರ ಕೇ
ರಳರ ಸದೆದು ಮಹಾರ್ಘ ರತ್ನಾ
ವಳಿಯ ಹೇರಿಸಿದನು ಸುಚಿತ್ರಾಂಬರ ವಿಲೇಪನವ
ಜಲಧಿಯಂತರ್ದ್ವೀಪ ಪತಿಗಳ
ಕುಲವ ಶೋಧಿಸಿ ಚೋಳ ಪಾಂಡ್ಯರ
ದಳವ ಧಟ್ಟಿಸಿ ಕೊಂಡನನುಪಮ ಸಾರವಸ್ತುಗಳ ೨೦

ಕಳುಹಿದನು ಮಿಗೆಯಾಪ್ತ ಪತ್ರಾ
ವಳಿಯ ತನುಜನ ಬಳಿಗೆ ತತ್ಕ್ಷಣ
ದೊಳಗೆ ಹೇಳಿಕೆಯಾಯ್ತು ಪರಿವಾರಕೆ ಘಟೋತ್ಕಚನ
ತಿಳಿದ ಕಾರಿರುಳಿರಕವೋ ಮೇಣ್
ಖಳ ಜನದ ಹೃದಯಾಂಧಕಾರದ
ಹೊಳಕೆಯೋ ತಾನೆನುತಿರಲು ನಡೆತಂದನಾ ದನುಜ ೨೧

ಪಾಳೆಯವ ಹೊಕ್ಕನು ಘಟೋತ್ಕಚ
ನಾಳು ಸಹಿತಯ್ಯಂಗೆ ನಮಿಸಿದ
ನೂಳಿಗವ ಹೇಳೆನಗೆ ಬೆಸಸಾ ರಾಜಕಾರಿಯುಪ
ವೀಳೆಯವ ತಾಯೆನಲು ನಗುತ ವಿ
ಶಾಲ ವಿನಯಕೆ ಮೆಚ್ಚಿದನು ಬಲು
ದೋಳಿನಲಿ ಸೆಳೆದಪ್ಪಿ ಮುಂಡಾಡಿದನು ನಂದನನ ೨೨

ಮಗನೆ ಲಂಕೆಗೆ ಪೋಗು ಮಾನವ
ರಿಗೆ ಮಹೋದಧಿ ಗಮ್ಯವಲ್ಲತಿ
ವಿಗಡತನ ಬೇಡಲ್ಲಿ ವಿನಯದಲೆನ್ನ ಕಾರಿಯವ
ಸೊಗಸಿತೇ ಸಾಮದಲಿ ಕಪ್ಪವ
ತೆಗೆವುದವಗಡಿಸಿದರೆ ಬಳಿಕ
ಲ್ಲಿಗೆ ಶರಾಳಿಗಳಿವೆ ವಿಘಾತಿಗೆ ದೋಷವಿಲ್ಲೆಂದ ೨೩

ಎನೆ ಹಸಾದವ ಹಾಯ್ಕಿ ಭೀಮನ
ತನಯ ಕಳುಹಿಸಿಕೊಂಡು ತೆಂಕಲು
ಮನದಿ ಮುನ್ನವೆ ಬಂದ ರಾಮೇಶ್ವರದ ಶಿವ ಗೃಹಕೆ
ವಿನಯ ಮಿಗೆ ಪೊಡವಂಟು ರಘು ನಂ
ದನನ ಕೀರ್ತಿಸ್ತಂಭಡಂಬರ
ವೆನಿಪ ಸೇತುವ ಕಂಡು ನಡೆದನು ತೆಂಕ ಮುಖವಾಗಿ ೨೪

ತೋರಿತತಿ ದೂರದಲಿ ಲಂಕೆಯ
ಮೂರು ಶಿಖರದ ದುರ್ಗವುದಧಿಗೆ
ಮಾರುದಧಿಯೆನೆ ಮೆರೆದುದಂದು ಮಣಿಪ್ರಭಾವದಲಿ
ನೂರು ಯೋಜನ ಸೇತು ಮೂಲವ
ಮೀರಿ ನಡೆದನು ಬಡಗವಾಗಿಲ
ಕೇರಿದಗಳಿನ ಪಡಿಮೊಗವ ದಾಟಿದನು ವಹಿಲದಲಿ ೨೫

ಕೇರಿ ಕೇರಿಗಳೊಳಗೆ ನಿಜ ಪರಿ
ವಾರ ಸಹಿತ ವೃಕೋದರಾತ್ಮಜ
ನಾರಿವನು ತಾನಾರೆನಲು ನಡೆತಂದನೊಲವಿನಲಿ
ವೀರ ದಾನವ ವರ್ಗದಲಿ ಬಹ
ತೋರಹತ್ತನ ಕಂಡಪೂರ್ವ ವಿ
ಕಾರಿ ಮಾನಿಸನಲ್ಲೆನುತ ಮುತ್ತಿದುದು ಪೌರಜನ ೨೬

ಬಂದನರಮನೆಗಾಗಿ ಬಾಗಿಲ
ಮುಂದಣೆಡ ಬಲ ಹೇಮ ವೇದಿಯ
ಸಂದಣಿಯ ಜನ ನೋಡಲೆಂದನು ದೋರಪಾಲರಿಗೆ
ಇಂದು ನಾವುತ್ತರದ ಭೂಮಿಪ
ರಿಂದ ಬಂದೆವು ಪೇಳು ನಿಜ ಪತಿ
ಗೆಂದಡವ ಬಂದನು ವಿಭೀಷಣ ದೇವನೋಲಗಕೆ ೨೭

ಜೀಯ ಬಿನ್ನಹ ಬಂದನುತ್ತರ
ರಾಯನಟ್ಟಿದ ದೂತನೆನೆ ತ
ಪ್ಪಾಯಿತೇ ಹೊಗಿಸೆನಲು ಕರೆದನು ಕಲಿ ಘಟೋತ್ಕಚನ
ವಾಯು ತನುಜನ ಸುತನು ತನ್ನ ಪ
ಸಾಯತರು ಸಹಿತೊಳಗೆ ಹೊಕ್ಕ ನ
ವಾಯೆಯಲಿ ನಡೆತಂದು ಕಾಣಿಕೆ ಕೊಟ್ಟು ಪೊಡವಂಟ ೨೮

ಬಿಗಿದ ಮರಕತ ಮಣಿಯ ನೆಲಗ
ಟ್ಟುಗಳ ಹವಳದ ಹಲಗೆಗಳ ಮಾ
ಳಿಗೆಯ ವೈಡೂರ್ಯದ ಕವಾಟದ ವಜ್ರಭಿತ್ತಿಗಳ
ಹೊಗರಿಡುವ ಹರಿ ನೀಲಮಣಿ ವೇ
ದಿಗಳ ಮುತ್ತಿನ ಲಂಬಳದ ಲೋ
ವೆಗಳ ಕಾಂತಿಯ ಲಳಿಯ ಲಹರಿಯೊಳಿದ್ದನಮರಾರಿ ೨೯

ಇತ್ತ ಬಾರೈ ಕುಳ್ಳಿರೆತ್ತಣ
ದೆತ್ತ ಬರವಾರಟ್ಟಿದರು ನೀ
ವೆತ್ತಣವರೇನೆಂದು ನಿಮ್ಮಭಿಧಾನವೇನಹುದು
ಬಿತ್ತರಿಸಿ ಹೇಳೆನಲು ಕೈಮುಗಿ
ವುತ್ತ ನುಡಿದನು ರಾವಣಾನುಜ
ಚಿತ್ತವಿಪುದೆಮ್ಮಖಿಳ ಪೂರ್ವೋತ್ತರದ ಸಂಗತಿಯ ೩೦

ಸೋಮ ವಂಶದಲರಸುಗಳು ನಿ
ಸ್ಸೀಮರಿದ್ದರು ಪಲಬರದರೊಳು
ಭೂಮಿಗಧಿಪತಿ ಪಾಂಡುವಾತಂಗೈವರಾತ್ಮಜರು
ಆ ಮಹೀಪತಿ ಧರ್ಮನಂದನ
ಭೀಮ ಫಲುಗುಣ ನಕುಲನಲ್ಲಿ ಸ
ನಾಮ ಸಹದೇವಾಖ್ಯನಿನಿಬರು ಚಿತ್ತವಿಸಿಯೆಂದ ೩೧

ಅರಸನೆಂದರೆ ಸಕಲ ಧರ್ಮಕೆ
ಕರ ಚರಣವಾದಂತೆಯಾತನ
ಕಿರಿಯರಿಹರು ಚತುರ್ವಿಧೋಪಾಯ ಸ್ವರೂಪದಲಿ
ಸುರಮುನಿಯ ಮತದಿಂದ ಯಾಗೋ
ತ್ಕರುಷಕಾದುದು ಬುದ್ಧಿ ಜನಪಾ
ಧ್ವರದ ದಿಗ್ವಿಜಯಾಭಿಸಂಧಿಗೆ ಮಾಡಿದನು ಮನವ ೩೨

ಬಡಗಲರ್ಜುನನುತ್ತರಾಬ್ಧಿಯ
ತಡಿಯ ನೆಲ ಪರಿಯಂತ ವಸ್ತುವ
ಜಡಿದು ತಂದನು ಮೂಡಲಾವರಿಸಿದನು ಕಲಿ ಭೀಮ
ಪಡುವಲರ್ಜುನನನುಜ ತೆಂಕಣ
ಕಡೆಗೆ ಸಹದೇವಾಖ್ಯನೀ ಪರಿ
ನಡೆವುತಿದ್ದುದು ತಾ ಘಟೋತ್ಕಚ ಭೀಮಸುತನೆಂದ ೩೩

ಅರಸನೊಂದು ನಿಮಿತ್ತ ದೇಶಾಂ
ತರ ಪರಿಭ್ರಮಣದಲಿ ವಿಪಿನಾಂ
ತರದೊಳಿರೆ ಬಂದನು ಹಿಡಿಂಬಕನೆಂಬನಸುರಪತಿ
ಕೆರಳಿಚಿದೊಡಾ ಭೀಮನಾತನ
ನೊರಸಿದನು ಖಳನನುಜೆಯಾತಂ
ಗರಸಿಯಾದಳು ಸತಿ ಹಿಡಿಂಬಿಕೆ ಮಾತೆ ತನಗೆಂದ ೩೪

ಇನಿಬರಿಗೆ ಪತಿ ದೇವಕೀ ನಂ
ದನನಘಾಸುರ ಮಥನ ಮಧು ಸೂ
ದನ ಮುರಾಂತಕ ದೈತ್ಯ ಮರ್ದನ ಭಕ್ತಸುರಧೇನು
ಮುನಿಹೃದಯ ಪರ್ಯಂಕ ಕರುಣಾ
ವನಧಿ ರಾವಣ ಕಂಠ ಕಾನನ
ಘನ ಪರಶುವೀ ಕೃಷ್ಣನೈವರ ಜೀವಸಖನೆಂದ ೩೫

ಕ್ರತುವಿದಸುರಾರಾತಿಗೀ ಕ್ರತು
ಪತಿ ಯುಧಿಷ್ಠಿರ ದೂತ ನಾನಿದ
ರತಿಶಯವ ನೀ ಬಲ್ಲೆಯೆನೆ ನೋಡಿದನು ತನ್ನವರ
ಇತರ ವಿಧದಿಂದಧಿಕ ಪುಣ್ಯ
ಪ್ರತತಿಯುಂಟೇ ರಾಮಚಂದ್ರನ
ವಿತತ ಕೀರ್ತಿ ತ್ರೇತೆಯಿಾ ದ್ವಾಪರದಲಾಯ್ತೆಂದ ೩೬

ತಾವು ಮರ್ತ್ಯರು ಪೂರ್ವಯುಗದವ
ರಾವು ತಮ್ಮಂತರವ ನೋಡದೆ
ದೇವರೆದೆದಲ್ಲಣದ ಲಂಕೆಯ ತಾವನೀಕ್ಷಿಸದೆ
ಆವುದಂಚಿತಾನಂಚಿತವೆಂಬುದ
ಭಾವಿಸದ ಗರ್ವಿತರ ನೋಡಿ
ನ್ನಾವ ಸದರವೊ ನಾವೆನುತ ಗರ್ಜಿಸಿತು ಖಳನಿಕರ ೩೭

ನೊಸಲಿನಲಿ ಕಣ್ಣುಳ್ಳ ದೇವನು
ವೊಸೆದು ಲಂಕಾದ್ವೀಪ ಸೀಮೆಗೆ
ಮಿಸುಕಲಮ್ಮನು ಬಂದು ಕಂಡವರಿಲ್ಲ ಪಟ್ಟಣವ
ಬಿಸಜಸಂಭವನಾದಿ ದೇವ
ಪ್ರಸರ ಮಿಗೆ ನಡುಗುತ್ತಲಿಪ್ಪುದು
ನುಸಿಗಳಹ ಮಾನವರ ಪಾಡೇನೆನುತ ಗರ್ಜಿಸಿತು ೩೮

ಕಾಳಗದೊಳಿಂದೆಮಗೆ ವಿದಿಜೇಂ
ದ್ರಾಳಿಯಲಿ ಸಮುಭಟರ ಕಾಣೆವು
ಮೇಳವೇ ಮರುಳು ಪೂತು ಮರ್ತ್ಯರ ಸಹಸವೆಮ್ಮೊಡನೆ
ತೋಳನಳವಿಗೆ ಮಲೆತ ಕುರಿಗಳ
ಜಾಲದಂತಿಹುದೆಂದು ಮುಂದಕ
ರಾಳಮತಿಗಳು ನಗಲು ಕಂಡನು ಕಲಿ ಘಟೋತ್ಕಚನು ೩೯

ನಾಲಗೆಯು ನೆಣಗೊಬ್ಬುಗಳಲಿ ಛ
ಡಾಲಿಸಿದರೇನಹುದು ಸಭೆಯಲಿ
ಕಾಳಗದೊಳಿದಿರಾರು ಭೀಮಾರ್ಜುನರ ಭಾರಣೆಗೆ
ಆಳುತನವಂತಿರಲಿ ವೈಷ್ಣವ
ಮೌಳಿ ಬೆಸಸಲಿ ಕೇಳ್ವೆನೆನೆ ಕ
ಟ್ವಾಳುಗಳ ದೇವನು ವಿಭೀಷಣ ನಗುತಲಿಂತೆಂದ ೪೦

ಕಾಲವಾವುದು ತನ್ನ ಶಕ್ತಿಯು
ಕೀಳು ಮೇಲಾವುದು ಸಹಾಯದ
ಮೇಲು ಸೆರಗೇನೆಂದು ನೋಡದೆ ಬಯಲ ಗರ್ವದಲಿ
ಸೋಲುವುದು ಜಗವಿಹಪರದ ಗತಿ
ಕಾಳಹುದು ಖಳರರಿಯರದನು
ಬ್ಬೇಳುವರು ಬರಿದೆಂದು ಜರೆದನು ತನ್ನ ಮಂತ್ರಿಗಳ ೪೧

ಅದರಿನೀ ದ್ವಾಪರದಲೀ ಹರಿ
ಯುದಯಿಸಿದನಾ ಕಾಲದಲಿ ಸಲ
ಹಿದನು ನಮ್ಮನು ಹಿಡಿದನಿವರನು ವರ್ತಮಾನದಲಿ
ಪದದ ದರ್ಪದಲಂಬುಜಾಕ್ಷನ
ಪದವ ಮರೆದರೆ ಪಾತಕದ ದು
ರ್ಗದಲಿ ಕೆಡಹನೆ ನಮ್ಮನೆಂದು ವಿಭೀಷಣನು ನುಡಿದ ೪೨

ತರಿಸಿದನು ಭಂಡಾರದಲಿ ಪರಿ
ಪರಿಯ ಪೆಟ್ಟಿಗೆಗಳನು ಕಂಠಾ
ಭರಣ ಕಂಕಣ ವಜ್ರ ಮಾಣಿಕ ಮರಕತಾವಳಿಯ
ಚರಣ ನೂಪುರ ಝಳವಟಿಗೆಯುಂ
ಗುರ ಕಿರೀಟಾಂಗದ ಸುಕರ್ಣಾ
ಭರಣವನು ತೆಗೆಸಿದನು ಭೀಮಕುಮಾರ ನೋಡೆನುತ ೪೩

ನೀಲಮಣಿ ಕಾಂತಿಗಳ ಹೊಯ್ಲಲಿ
ಕಾಳ ರಜನಿಯೊಲಾಯ್ತು ಮುತ್ತಿನ
ಢಾಳ ಧವಳಿಸಲಾಯ್ತು ಚಂದ್ರಿಕೆ ತನುವ ಡೊಕ್ಕರಿಸಿ
ಮೇಲೆ ಹೊಂಬಿಸಿಲಾಯ್ತು ಮಾಣಿಕ
ದೇಳಿಗೆಯ ಲಹರಿಯಲಿ ವರ ರ
ತ್ನಾಳಿ ರುಚಿಯಲಿ ಚಂಡಿಯಾಯಿತು ದಿವಸವಂದಿನಲಿ ೪೪

ತೆಗೆಸಿದನು ಗಜದಂತಮಯ ಪೆ
ಟ್ಟಿಗೆಗಳನು ಕರ್ಪುರದ ತವಲಾ
ಯಿಗಳ ಹವಳದ ಮಂಚವನು ಮಣಿಖಚಿತ ರಚನೆಗಳ
ಬಿಗಿದ ವಜ್ರಪ್ರಭೆಯ ಹೊನ್ನಾ
ಯುಗದ ಖಡ್ಗ ಕಠಾರಿಗಳ ಝುಗ
ಝುಗಿಪ ಹೊಂಗೆಲಸದ ವಿಚಿತ್ರದ ಜೋಡು ಸೀಸಕವ ೪೫

ಗುಳವ ರೆಂಚೆಯ ಹಕ್ಕರಿಕೆ ಹ
ಲ್ಲಳವ ಮಣಿ ಕಾಂಚನಮಯಂಗಳ
ಕೆಲಸ ಗತಿಗಳ ಹೇಮರೇಖೆಯ ವಿವಿಧ ಚಿತ್ರಗಳ
ಬಿಳಿಯ ಚೌರಿಯ ಹೊರೆಗಳುರು ಹ
ತ್ತಳದ ಕಟ್ಟಿಗೆ ಬೇಂಟೆಗಳ ಹದ
ವಿಲು ತದೀಯ ಶರಾಳಿಗಳ ತಂದಿಳುಹಿದರು ಚರರು ೪೬

ಬಲಮುರಿಯ ಶಂಖಗಳ ಗಂಧದ
ಬಲು ಹೊರೆಯ ಕೃಷ್ಣಾಗರುವಿನೊ
ಟ್ಟಿಲ ಸುರಂಗಿನ ಪಟ್ಟೆಪಟ್ಟಾವಳಿಯ ದಿಂಡುಗಳ
ಪುಲಿದೊಗಲ ಕೃಷ್ಣಾಜಿನಂಗಳ
ಹೊಳೆವ ಹೊಂಗೊಪ್ಪರಿಗೆ ಚಿತ್ರಾ
ವಳಿಯ ಸತ್ತಿಗೆ ಹೇಮಘಟ ಸಂತತಿಯನೊಟ್ಟಿದರು ೪೭

ಕೀಳಿಸಿದನರಮನೆಯ ಹೇಮದ
ತಾಳ ಮರ ಹದಿನಾಲ್ಕನಧ್ವರ
ಶಾಲೆಯಿದಿರಲಿ ತೋರಣ ಸ್ತಂಭಂಗಳಹವೆಂದು
ಮೇಲೆ ರಾಕ್ಷಸ ಟಂಕದಚ್ಚಿನ
ಚಾಳಿಗೆಗಳನು ತರಿಸಿ ಕಟ್ಟಿಸಿ
ಮೇಲು ಮುದ್ರೆಗಳಿಕ್ಕಿದವು ಕರೆಸಿದನು ಹೊರೆಯುವರ ೪೮

ಕುಲಗಿರಿಯನೊಡೆ ಮೀಟಿ ತಮ್ಮಯ
ತಲೆಯೊಳಾನುವ ಕರ್ಕಶಾಂಗದ
ಕಲುದಲೆಯ ಹೇರೊಡಲ ಮಿಡುಕಿನ ಕಾಳ ರಕ್ಕಸರು
ಸೆಳೆದು ಹೊತ್ತರು ಹೊರೆಯನಿವರಿ
ಟ್ಟಳಿಸಿ ಹೊರವಂಟರು ವಿಭೀಷಣ
ಕಳುಹಿದನು ಪವಮಾನ ಸುತ ನಂದನನ ಸತ್ಕರಿಸಿ ೪೯

ದನುಜನಬ್ಧಿಯ ದಾಟಿ ಸಹದೇ
ವನ ಸಮೀಪಕೆ ಬಂದು ರಾವಣ
ನನುಜ ಮಾಡಿದ ಬಹಳ ಸತ್ಕಾರವನು ಬಿನ್ನವಿಸಿ
ಆನಿಬರನು ಕಾಣಿಸಿದನಾ ಕಾಂ
ಚನಮಯದ ಹೊರೆ ಲಕ್ಕ ಸಂಖ್ಯೆಗ
ಳನುಪಮಿತ ರಕ್ಕಸರ ಕಂಡಂಜಿದುದು ನೃಪಕಟಕ ೫೦

ಲಾಲಿಸಿದನಾ ಖಳರನೆತ್ತಿತು
ಪಾಳೆಯವು ನಡೆತಂದು ಪಯಣದ
ಮೇಲೆ ಪಯಣವನೈದಿ ಬಂದನು ತಮ್ಮ ಪಟ್ಟಣಕೆ
ಮೇಲೊಗುವ ಸುಮ್ಮಾನ ಸಿರಿಯ ಚ
ಥಾಳದಲಿ ತಂದಖಿಳ ವಸ್ತುವ
ನಾಲಯದೊಳೊಪ್ಪಿಸಿದನವನೀಪತಿಗೆ ಸಹದೇವ ೫೧

## ಆರನೆಯ ಸಂಧಿ

ಸೂ. ನಕುಲ ಪಶ್ಚಿಮ ದೆಸೆಯ ಭೂಪಾ
ಲಕರ ಗೆಲಿದನು ನೆರೆದ ರತ್ನ
ಪ್ರಕರದಿಂದಳಕಾಪುರಿಗೆ ಮಿಗಿಲಾಯ್ತು ನೃಪನಗರ

ಕೇಳು ಜನಮೇಜಯ ಧರಿತ್ರೀ
ಪಾಲ ಪಶ್ಚಿಮ ದೆಸೆಯ ಭೂಮೀ
ಪಾಲಕರ ಮೇಲೆತ್ತಿ ನಡೆದನು ನಕುಲನೊಲವಿನಲಿ
ಧಾಳಿ ಹರಿದುದು ಮರು ಯವನ ನೇ
ಪಾಳ ರೋಹಿತರೆಂದೆನಿಪ ಭೂ
ಪಾಲಕರ ಮುರಿದವರ ಸಪ್ತಾಂಗವ ವಿಭಾಡಿಸಿದ ೧

ಹೇಮಕನ ಸೈರಿಭಕನೆಂಬ ಸ
ನಾಮರನು ಮುರಿದನು ಕಳಿಂಗದ
ಭೂಮಿಪರ ಸದೆದನು ತ್ರಿಗರ್ತರ ಶಿಬಿಯ ಸಂತತಿಯ
ಹೇಮ ಮಾತ್ರವನುಳುಹದವದಿರ
ಭೂಮಿಗಳನವಗಿತ್ತು ವಸ್ತು
ಸ್ತೋಮವನು ನೆರಹಿದನು ನಡೆದನು ಮುಂದೆ ಪಶ್ಚಿಮಕೆ ೨

ಮುರಿದನಗ್ಗದ ಚೇಕಿತಾನರ
ನೆರಗಿದನು ಬರ್ಬರ ತುರುಷ್ಕರ
ನೊರಗಿಸಿದನಾಹವದೊಳಾಭೀರಕರ ಬಾಹ್ಲಿಕರ
ಸೆರೆಯ ಹಿಡಿದನು ಪಾರ್ವತೇಯರ
ನುರುಕುಗೊಳಿಸಿದ ಜೇನರಂಬ
ಷ್ಠರನು ಸಿಂಧು ಸರಸ್ವತೀ ತೀರದ ಮಹೀಶ್ವರರ ೩

ರಣದ ಸಂಕೇತಗಳೊಳುತ್ಸವ
ರಣಸಮರ್ಥರ ಹಿಂಡಿದನು ಚಾ
ರಣರ ಖುರಸಾಣರನು ಪುಷ್ಕರ ವರ ನಿವಾಸಿಗಳ
ಹಣಿದಲ್ಲಿಂದಿತ್ತ ಮಿಗೆ ಪಡು
ವಣ ದಿಗಂತದಲದಟರಸ ಪ
ಷ್ಟಣದವರ ಪಂಚನದ ಭೂಮಿಯ ಭೂಮಿಪರ ಗೆಲಿದ ೪

ಜ್ಯೋತಿಕರ ವಣ್ಣಕಟಕರ ಕೃತ
ಯಾತಿಕರ ಯೌಧೇಯ ಸಂಮೀ
ರಾತಿಶಯ ಬಡಹಾರರಮಳ ದ್ವಾರಪಾಲಕರ
ಘಾತಿಸಿದನವರುಗಳ ವಿತ್ತ
ವ್ರಾತವನು ಹೇರಿಸಿದನೆಡ ಬಲ
ದಾತಗಳನಪ್ಪಳಿಸಿ ತೆಗೆದನು ಸಕಲ ವಸ್ತುಗಳ ೫

ಮಾವನಲ್ಲಿಗೆ ಬಂದಹಾ ಮಾ
ದ್ರಾವನೀಪತಿ ಶಲ್ಯ ಮಿಗೆ ಸಂ
ಭಾವಿಸಿದನೊಲಿದಿತ್ತನೀತಂಗಖಿಳ ವಸ್ತುಗಳ
ತೀವಿದರು ಭಂಡಿಯಲಿ ಮುಂದಣ
ಜಾವಟೆಯ ಚಪಳರಿಗೆ ಹರಿಯೆ ನೃ
ಪಾವಳಿಗಳಲ್ಲಲ್ಲಿ ತೆತ್ತರು ಕಂಡ ವಸ್ತುಗಳ ೬

ತಳಿತು ಬಿಟ್ಟುದು ಸೇನೆ ಪಡುವಣ
ಜಲಧಿಯ ಕರಾವಳಿಗಳಲಿ ಕೇ
ವಳಿಸಿದರು ಕೊಲ್ಲಣಿಗೆಯಲಿ ಕೊಂಡರು ಸುವಸ್ತುಗಳ
ಕಳಿವರಿದು ಹಿಮಗಿರಿಯ ಮೂಲೆಗೆ
ನಿಲುಕಿ ಸಕಲ ಮ್ಲೇಚ್ಛ ಭೂಪಾ
ವಳಿಯ ಭಂಗಿಸಿ ಹೇರಿಸಿದನೊಂಟೆಗಳಲಾ ಧನವ ೭

ಹೇರಿದವು ಬಹು ಧನವನೊಂಟೆಗ
ಳಾರು ಸಾವಿರ ಮಿಕ್ಕ ವಸ್ತುವ
ಹೇರಿದವುಯೆತ್ತುಗಳ ಹೂಡಿದ ಭಂಡಿ ಸಾವಿರವು
ಆರು ಲಕ್ಷ ತುರಂಗ ಉಷ್ಟ್ರಗ
ಳಾರು ಕೋಟಿಗಳಾನೆ ಗಣನೆಯ
ಮೀರಿದವು ಮೃಗ ಪಕ್ಷಿ ಕೋಣನ ಕುರಿಯ ಹಿಂಡುಗಳ ೮

ಮುರಳಿತೀತನ ಸೇನೆ ಬಂದನು
ಪುರಕೆ ಕಂಡನು ಧರ್ಮಪುತ್ರನ
ಚರಣಕೆರಗಿದನಖಿಳ ವಸ್ತುವ ಬೇರೆ ತೋರಿಸಿದ
ಅರಸನುತ್ಸವವನು ವೃಕೋದರ
ನರ ನಕುಲ ಸಹದೇವನಂತಃ
ಪುರದ ಹರುಷದ ಸಿರಿಯನದನೇವಣ್ಣಿಸುವೆನೆಂದ ೯

ಕಳವು ಹುಸಿ ಹಾದರ ವಿರೋಧ
ಸ್ಖಲಿತವಾರಡಿ ಬಂದಿ ದಳದುಳ
ಬೆಳುಗವತೆಯನ್ಯಾಯ ಪರಿಭವ ಠಕ್ಕು ಡೊಳ್ಳಾಸ
ಹಳಿವು ವಂಚನೆ ಜಾತಿ ಸಂಕರ
ಕೊಲೆಯು ಡಾವರ ವಿಕೃತಿ ಮಾಯಾ
ವಳಿಗಳಡಗಿದವೀ ಯುಧಿಷ್ಠಿರ ನೃಪನ ರಾಜ್ಯದಲಿ ೧೦

ನೃಗನ ಭರತನ ದುಂದುಮಾರನ
ಸಗರ ಪುರೂರವ ಸನಾತನ
ಮಗನ ನಹುಷನ ಕಾರ್ತವೀರ್ಯನ ನಳನ ದಶರಥನ
ಹಗಲಿರುಳು ವಲ್ಲಭರ ವಂಶದ
ವಿಗಡರಲಿ ಯಮಸೂನು ಸರಿಯೋ
ಮಿಗಿಲೊ ಬಲ್ಲವನಾರೆನಲು ಸಲಹಿದನು ಭೂತಳವ ೧೧

ದ್ವಾಪರದ ಮರೆ ಜವನಿಕೆಯುಲೀ
ದ್ವಾಪರವೊ ಕೃತಯುಗವೊ ಧರ್ಮದ
ರೂಪು ನಾನಾ ಮುಖದಲವತರಿಸಿತೊ ದಿಗಂತದಲಿ
ಸ್ಥಾಪಿಸಿತು ವರ್ಣಾಶ್ರಮದ ಧ
ರ್ಮೋಪಚಯವೆರಡಂಘ್ರಿ ಮುರಿದು ವಿ
ರೂಪವಾದುದಧರ್ಮವೀ ಧರ್ಮಜನ ರಾಜ್ಯದಲಿ ೧೨

ಬಡಗಲುತ್ತರ ಕುರುಗಳಿತ್ತಲು
ಪಡುವಲುದಧಿ ವಿಭೀಷಣನ ಪುರ
ಗಡಿ ಕೃತಾಂತನ ದೆಸೆಗೆ ಮೂಡಲು ದಿನಪನುದಯಾದ್ರಿ
ಪೊಡವಿಯದರಲಿ ಯಮಜನಾಣೆಗೆ
ನಡುಗುವುದು ರಾಯಂಗೆ ತೆತ್ತುದು
ಗಡ ಸುವಸ್ತುವನೇನಸಾಧ್ಯವು ಕೃಷ್ಣನೊಲಿದರಿಂಗೆ ೧೩

ಕಳನ ಸವೆದರು ಮೂರು ಯೋಜನ
ವಳಯದಲಿ ಪಡಿಯಗಳು ಕೋಟಾ
ವಳಯ ಸುಯ್ಯಾನದಲಿ ಹೊಯ್ದರು ರತ್ನ ಕಾಂಚನವ
ಕೆಲದೊಳೈಗಾವುದದೊಳಿಕ್ಕಿದ
ತಳಿಯ ಮಧ್ಯದೊಳಖಿಳ ವಸ್ತ್ರಾ
ವಳಿಯನೊಟ್ಟಿದರದರ ಕೆಲದಲಿ ರಾಯ ಕೇಳೆಂದ ೧೪

ಹತ್ತು ಯೋಜನ ವಳಯದಲಿ ಮಿಗೆ
ಸುತ್ತು ಬೇಲಿಯ ಮಧ್ಯದಲಿ ಹಯ
ಮತ್ತಗಜ ರಥ ಗೋ ಮಹಿಷ ವರ ಸೈರಿಭದ ಚಯಕೆ
ಉತ್ತಮಾಂಗನೆಯರಿಗೆ ಭವನಗ
ಳಿತ್ತ ಬೇರಿರವಾಯ್ತು ನೃಪ ಯಾ
ಗೋತ್ತಮಕೆ ಪರುಠವಿಸಿದರು ಭೂಪಾಲ ಕೇಳೆಂದ ೧೫

ಬಳಿದ ಸೊದೆಗಳ ಬಾವಿ ನೂರರ
ವಳಯ ತುಂಬಿತು ತೈಲ ಘೃತ ಮಧು
ಗಳಲಿ ವರ ಗುಡ ಶರ್ಕರಾದಿಯ ಕಣಜ ಕೋಟಿಗಳು
ಕಳವೆಯಕ್ಕಿಯ ಗೋಧಿ ಕಡಲೆಯ
ವಿಳಸ ರಾಶಿಯದೇಸು ಯೋಜನ
ದಳತೆಯೆಂದಾರರಿವರೆಂದನು ಮುನಿ ನೃಪಾಲಂಗೆ ೧೬

ನೆರೆದುದರ್ಥವನಂತವವನೀ
ಶ್ವರರು ವಶವಾದರು ಚತುಸ್ಸಾ
ಗರದ ಮಧ್ಯದಲಾಣೆ ಸಂದುದು ಧರ್ಮನಂದನನ
ಕರೆಸು ಬೇಹವರನು ಮಹೀಶಾ
ಧ್ವರಕೆ ಸಮಯವಿದೆಂದು ಪಾರಾ
ಶರಿಯ ಧೌಮ್ಯರು ಮಂತ್ರ ಶಾಲೆಯೊಳೆಂದರವನಿಪಗೆ ೧೭

ಹೋಗು ಫಲುಗುಣ ಕಂಸ ಮಥನನ
ಬೇಗ ಬಿಜಯಂಗೈಸಿ ತಾ ನೃಪ
ಯಾಗವಾತನ ಹೊರೆ ಮದೀಯ ಜಯಾಭಿವೃದ್ಧಿಗಳು
ಆಗ ಹೋಗಾತನದು ತಟ್ಟಿಯ
ವಾಗದೀ ಕ್ಷಣವೆನಲು ಮನದನು
ರಾಗದಲಿ ಕಲಿಪಾರ್ಥ ಬಂದನು ಕಂಡನಚ್ಯುತನ ೧೮

ಬಿನ್ನವಿಸಿದನು ದಿಗ್ವಿಜಯ ಸಂ
ಪನ್ನ ವಸ್ತು ವಿಧಾನವನು ಮೇ
ಲಿನ್ನು ದೇವರು ಬಲ್ಲಿರುತ್ತರ ಕಾರ್ಯ ಸಂಗತಿಯ
ನಿನ್ನ ಕೃಪೆಯಲಿ ರಾಜಮುಖ ನಿ
ಷ್ಪನ್ನವಾದರೆ ಬೊಪ್ಪನಿಂದ್ರನ
ಮನ್ನಣೆಯ ಮೈ ಸೋಂಕಿನನೋಲಗ ಸುಲಭವಹುದೆಂದ ೧೯

ಕರೆಸಿ ಯಾದವ ನಾಯಕರ ಸಂ
ಹರಣೆಯನು ನಿಜಪುರದ ಕಾಹಿಂ
ಗಿರಿಸಿ ಬಲದೇವಂಗೆ ನೇಮಿಸಿ ಸಕಲ ರಕ್ಷಣವ
ತರಿಸಿ ಭಂಡಾರದಲಿ ವಿವಿಧಾ
ಭರಣ ವಸನಾದಿಗಳ ಹೇರಿಸಿ
ಹರಿ ಧನಂಜಯನೊಡನೆ ಬಂದನು ಬಂಧುಜನ ಸಹಿತ ೨೦

ಇದಿರುವಂದನು ಧರ್ಮಸುತ
ಪದ ಪಯೋಜದಲೆರಗಿದನು ನಿನ
ಗಿದು ವಿನೋದವಲೇ ವಿಮುಕ್ತಗೆ ಭಕ್ತ ಸಂಸ್ಮರಣ
ಕುದಿದು ಮರುಗಿದವರಸಿ ನಿನ್ನಯ
ಪದವ ಕಾಣದೆ ಶ್ರುತಿಗಳೆಮ್ಮಯ
ಸದನವಖಿಳಾಮ್ನಾಯ ನಿಕರವನೇಡಿಸುವದೆಂದ ೨೧

ನಗುತ ಸಾಕೇಳೆಂದು ರಾಯನ
ತೆಗೆದು ತಳ್ಕಿಸಿ ಕೈಯ್ಯ ತಳುಕಿನೊ
ಳಗಧರನು ನೃಪಸಭೆಗೆ ಬಿಜಯಂಗೈದನೊಲವಿನಲಿ
ಮುಗಿದ ಕರದಲಿ ವ್ಯಾಸ ಧೌಮ್ಯಾ
ದಿಗಳು ಮೈಯಿಕ್ಕಿದರಖಿಳ ಮಂ
ತ್ರಿಗಳು ಸಚಿವರು ನೆರೆದುದಾಳೋಚನೆಯ ಭವನದಲಿ ೨೨

ಕಳುಹಿದನು ನಾನಾ ನೃಪರ ಮಂ
ಡಲಕೆ ದೂತರನಖಿಳ ಋಷಿ ಸಂ
ಕುಳಕೆ ಶಿಷ್ಯರ ಪರುಠವಿಸಿದನು ಹಸ್ತಿನಾಪುರಿಗೆ
ಕಳುಹಿದನು ನಕುಲನನು ಬಳಿಕಿ
ತ್ತಲು ನೃಪಾಧ್ವರ ಶಾಲೆಗಲ್ಲಿಯ
ನೆಲನ ಶೋಧಿಸೆ ಕರೆಸಿದರು ಬಹುವಿಧದ ಶಿಲ್ಪಿಗರ ೨೩

ಮಯನ ಮತದಲಿ ವಿಶ್ವಕರ್ಮನ
ನಯ ವಿವೇಕದಲಮಲ ಮಖ ಶಾ
ಲೆಯನು ನಿರ್ಮಿಸಿದರು ಸುಲಕ್ಷಣ ಶಾಸ್ತ್ರಸೂತ್ರದಲಿ
ನಿಯತ ಪತ್ನೀಶಾಲೆ ಜನವೇ
ದಿಯ ವರಾಂತರ್ವೇದಿ ಮಖವೇ
ದಿಯ ಬಹಿರ್ವೇದಿಗಳನಳವಡಿಸಿದರು ವಹಿಲದಲಿ ೨೪

ಬಿಗಿದ ಬಿಂಗಾರಿಗಳ ಮೇಲ್ಕ
ಟ್ಟುಗಳ ಮಣಿಮಯ ಸೂಸಕದ ಲೋ
ವೆಗಳ ಮುಖಮಂಟಪದ ಚೌರಿಯ ನವ ಫಲಾವಳಿಯ
ಹೊಗರ ನೀಲದ ಸರಿಯ ನೆಲಗ
ಟ್ಟುಗಳ ಚಪ್ಪರದೆಡೆಯೆಡೆಯ ಚೌ
ಕಿಗೆಯ ಚತುರಂಗದ ವಿಚಿತ್ರದ ರಚನೆ ಚೆಲುವಾಯ್ತು ೨೫

ಪುರದ ಹೊರವಳಯದಲಿ ಯಮುನಾ
ವರನದಿಯ ತೀರದಲಿ ಧರಣೀ
ಶ್ವರರಿಗರಮನೆ ಮಾಡಿದರು ನವ ರತುನಮಯವಾಗಿ
ಸುರಪುರದ ಮಾರಾಂಕ ಭುಜಗೇ
ಶ್ವರನ ಭೋಗಾವತಿಯ ಶಿಲ್ಪದ
ಗರುವೆನಿಸಿತೀ ನಗರ ನಾರಾಯಣನ ಕರುಣದಲಿ ೨೬

## ಏಳನೆಯ ಸಂಧಿ

ಸೂ. ಸಕಲ ಋಷಿ ಮುಖ್ಯರು ಮಹೀ ಪಾ
ಲಕರು ನೆರೆದರು ವಿಶ್ವ ಭೂತ
ಪ್ರಕರ ದಣಿದುದು ಧರ್ಮಪುತ್ರನ ರಾಜಸೂಯದಲಿ

ಕೇಳು ಜನಮೇಜಯ ಧರಿತ್ರೀ
ಪಾಲ ದೂತರು ಹರಿದರವನೀ
ಪಾಲರಿಗೆ ಋಷಿಗಳಿಗೆ ಭೂಸುರ ವೈಶ್ಯ ಶೂದ್ರರಿಗೆ
ಹೇಳಲೇನದುಭುತವನಂಬುಧಿ
ವೇಲೆಯಲಿ ಮಧ್ಯದ ಸಮಸ್ತ ಜ
ನಾಳಿ ನೆರೆದುದು ವಿಲಸದಿಂದ್ರಪ್ರಸ್ಥ ನಗರಿಯಲಿ ೧

ಚೋಳ ಸಿಂಹಳ ಪಾಂಡ್ಯ ಕೇರಳ
ಮಾಳವಾಂಧ್ರ ಕರೂಷ ಬರ್ಬರ
ಗೌಳ ಕೋಸಲ ಮಗಧ ಕೇಕಯ ಹೂಣ ಸೌವೀರ
ಲಾಳ ಜೋನೆಗ ಜೀನ ಕುರು ನೇ
ಪಾಳ ಶಿಖಿ ಕಾಶ್ಮೀರ ಬೋಟ ವ
ರಾಳ ವರ ದೇಶಾಧಿಪತಿಗಳು ಬಂದರೊಗ್ಗಿನಲಿ ೨

ಭೂರಿ ಭೂರಿಶ್ರವನು ಬಾಹ್ಲಿಕ
ಶೂರಸೇನ ಕಳಿಂಗ ಸಲೆ ಗಾಂ
ಧಾರ ಸೌಬಲ ಸೋಮದತ್ತ ಸುಷೇಣ ಭಗದತ್ತ
ವೀರ ಪೌಂಡ್ರಕನೇಕಲವ್ಯ ಸು
ರಾರಿಗಳು ಶಿಶುಪಾಲ ಯವನ ಕು
ಮಾರ ಪೌರವ ದಂತವಕ್ರರು ಬಂದರೊಗ್ಗಿನಲಿ ೩

ಸಕಳ ದಳ ಮೇಳಾಪದಲಿ ಭೀ
ಷ್ಮಕನು ರುಕ್ಮನು ಚಿತ್ರರಥ ಸಾ
ಲ್ವಕನು ರೋಹಿತ ರೋಚಮಾನ ಸಮುದ್ರಸೇನಕರು
ಪ್ರಕಟ ಬಲರುತ್ತರ ದಿಶಾ ಪಾ
ಲಕರು ಕುರು ಪರಿಯಂತ ರಾಜ
ಪ್ರಕರ ನೆರೆದುದು ವಿಳಸದಿಂದ್ರಪ್ರಸ್ಥ ನಗರಿಯಲಿ ೪

ದ್ರುಪದ ಧೃಷ್ಟದ್ಯುಮ್ನ ರಣಲೋ
ಲುಪ ಯುಧಾಮನ್ಯೂತ್ತಮೌಂಜಸ
ರುಪಚಿತರು ಬಂದರು ಸಗಾಢದಲಿವರ ಬಾಂಧವರು
ಕೃಪ ಜಯದ್ರಥ ಭೀಷ್ಮ ಮಾದ್ರಾ
ಧಿಪತಿ ಕರ್ಣ ದ್ರೋಣ ಮೊದಲಾ
ದಪರಿಮಿತ ಬಲ ಸಹಿತ ಕೌರವರಾಯ ನಡೆತಂದ ೫

ಗುರುತನೂಜ ಸುಶರ್ಮ ವಂಗೇ
ಶ್ವರ ಬೃಹದ್ರಥ ಭೀಮರಥ ದು
ರ್ಮರುಷಣರು ವರ ಭಾನುದತ್ತ ವಿಕರ್ಣ ದುಸ್ಸಹರು
ವರ ವಿವಿಂಶತಿ ದೀರ್ಘಭುಜ ದು
ರ್ದರುಶ ದುರ್ಜಯ ಶಂಕು ಕರ್ಣಾ
ದ್ಯರು ಸಹಿತ ದುಶ್ಶಾಸನನು ಹೊರವಂಟನರಮನೆಯ ೬

ಬಂದರೈ ಚತುರಂಗದವನಿಪ
ವೃಂದವವರವರುಚಿತ ಮಿಗಿಲಿದಿ
ರ್ವಂದು ಭೀಷ್ಮ ದ್ರೋಣ ಕೃಪ ಧೃತರಾಷ್ಟ್ರರಿಗೆ ನಮಿಸಿ
ವಂದನೀಯರಿಗೆರಗಿ ಸಮರಿಗೆ
ನಿಂದು ಕುಶಲಕ್ಷೇಮ ಸಂಗತಿ
ಯಿಂದ ಸತ್ಕರಿಸಿದನು ನೃಪ ವಿದುರಾದಿ ಬಾಂಧವರ ೭

ಜನಪ ಕೇಳೀಚೆಯಲಿ ಬಂದುದು
ಮುನಿಗಳಾಂಗಿರ ಕಣ್ವ ಭೃಗು ಜೈ
ಮಿನಿ ಸುಮಂತ ವಸಿಷ್ಠ ಶೌನಕ ಗಾರ್ಗ್ಯ ಬೃಹದಶ್ವ
ಸನಕ ಶುಕ ಜಾಬಾಲಿ ತಿತ್ತಿರಿ
ವಿನುತ ಮಾರ್ಕಂಡೇಯ ಮುದ್ಗಲ
ತನಯ ರೋಮಶ ಕುತ್ಸವತ್ಸರು ಶೈಬ್ಯ ನಾರದರು ೮

ಚ್ಯವನ ಗೌತಮ ವೇಣುಜಂಘ
ಪ್ರವರ ಕೌಶಿಕ ಸತ್ಯತಪ ಭಾ
ರ್ಗವ ಸುಮಾಲಿ ಸುಮಿತ್ರ ಕಾಶ್ಯಪ ಯಾಜ್ಞವಲ್ಕ್ಯ ಋಷಿ
ಪವನ ಭಕ್ಷಕ ದೀರ್ಘ ತಪ ಗಾ
ಲವನು ಶಿತ ಶಾಂಡಿಲ್ಯ ಮಾಂಡ
ವ್ಯ ವರರೆಂಬ ಮಹಾ ಮುನೀಂದ್ರರು ಬಂದರೊಗ್ಗಿನಲಿ ೯

ದೇಶ ದೇಶಾಂತರದ ವಿದ್ಯಾ
ಭ್ಯಾಸಿಗಳು ಮೊದಲಾಗಿ ವರ್ಣ ನಿ
ವಾಸಿಗಳು ಫಲಮೂಲ ದಧಿ ಘೃತ ದುಗ್ಧ ಭಾರದಲಿ
ಆ ಸಮಸ್ತ ಮಹೀತಳದ ಧನ
ರಾಶಿ ಜನ ಸಂತತಿಯನೇಕ ನಿ
ವಾಸದಲಿ ನೆರೆ ಕಾಣಲಾಯಿತು ನೃಪತಿ ಕೇಳೆಂದ ೧೦

ವಿಕಳ ವಾಮನ ಮೂಕ ಬಧಿರಾಂ
ಧಕರು ಮಾಗಧ ಸೂತ ವಂದಿ
ಪ್ರಕರ ಮಲ್ಲ ಮಹೇಂದ್ರಜಾಲಿ ಮಹಾಹಿ ತುಂಡಿತರು
ಸುಕವಿ ತಾರ್ಕಿಕ ವಾಗ್ಮಿ ವೈತಾ
ಳಿಕ ಸುಗಾಯಕ ಕಥಕ ಮಾರ್ದಂ
ಗಿಕರು ನೆರೆದುದು ನಿಖಿಳ ಯಾಚಕ ನಿಕರ ಸಂದಣಿಸಿ ೧೧

ಕರೆಸಿ ಭೀಷ್ಮಂಗೆರಗಿ ನುಡಿದನು
ಧರಣಿಪತಿ ಬಾಲಕರು ನಾವ
ಧ್ವರವಿದಗ್ಧದ ರಾಜಸೂಯ ಮಹಾ ಮಹೀಶ್ವರರು
ನೆರೆದುದಖಿಳ ದ್ವೀಪ ಜನವಾ
ದರಿಸಲರಿಯೆನು ಹೆಚ್ಚು ಕುಂದಿನ
ಕುರುಡನೀಕ್ಷಿಸಲಾಗದೆಂದನು ಮುಗಿದು ಕರಯುಗವ ೧೨

ಚಿಂತೆಯೇಕೈ ಕೃಷ್ಣನಾರೆಂ
ದೆಂತು ಕಂಡೆ ಚತುರ್ದಶಾಂಶದ
ತಂತು ರೂಪನು ತಾನೆಯೆನ್ನದೆ ನಿನಗೆ ಶ್ರುತಿವಚನ
ತಂತುವಿನ ಪಟ ಮೃತ್ತಿಕೆಯ ಘಟ
ದಂತೆ ಜಗವೀತನಲಿ ತೋರ್ಕುಮು
ರಾಂತಕನ ಸುಯ್ಧಾನ ನಿನಗಿರಲಂಜಲೇಕೆಂದ ೧೩

ಕರೆಸು ಧೌಮ್ಯಾದಿಗಳನಿಲ್ಲಿಯ
ಪರುಠವವ ಮಾಡೆಂದು ಭೀಷ್ಮನು
ಗುರುಸಹಿತ ಕೈಕೊಂಡನೆಲ್ಲರ ಮೇಲುನೋಟವನು
ಅರಸ ಕೇಳ್ ಧೃತರಾಷ್ಟ್ರ ಬಾಹ್ಲಿಕ
ವರ ಬೃಹದ್ರಥ ಸೋಮದತ್ತರು
ಪರಮ ಪೂಜ್ಯರು ಮಾನನೀಯರು ಯಜ್ಞವಾಟದಲಿ ೧೪

ಸವನ ಸಾಧನ ಸರ್ವ ಸಂಭಾ
ರವನು ಧೌಮ್ಯನು ತರಿಸಿ ಕೊಡಿಸುವ
ನವನಿಪತಿಗಳ ಪಾರುಪತ್ಯದ ನೋಟ ಸಂಜಯಗೆ
ವಿವಿಧ ಋಷಿ ಯಾಜ್ಞಿಕರು ಮಾಂತ್ರಿಕ
ನಿವಹ ಸಹದೇವಂಗೆ ಭೋಜ್ಯ
ಪ್ರವರದಧಿಕಾರದ ನಿಯೋಗ ಯುಯುತ್ಸುವಿನ ಮೇಲೆ ೧೫

ನೆರೆದ ಭೂಸುರ ತತಿಯ ನೋಟಕೆ
ಕರೆಸಿ ಕುಳ್ಳಿರಿಸುವನು ಸಾತ್ಯಕಿ
ಭರದಿನೆಂಜಲ ತೆಗೆಸಿ ಸಾರಿಸುವುದು ವಿಕರ್ಣಂಗೆ
ಅರಸ ಕೇಳ್ ಭೋಜನದ ಸಮನಂ
ತರದ ವೀಳೆಯ ಗಂಧ ಮಾಲ್ಯಾಂ
ಬರವನೀವಧಿಕಾರ ದುಶ್ಶಾಸನನ ವಶವಾಯ್ತು ೧೬

ವಿತತ ಭೂಸುರ ದಕ್ಷಿಣೆಗೆ ಗುರು
ಸುತ ನಿಯೋಗ ಸಮಸ್ತ ರತ್ನ
ಪ್ರತತಿಗಳನಾರೈದು ತರಿಸುವನಾ ಕೃಪಾಚಾರ್ಯ
ಘೃತವು ದಧಿ ಮಧು ತೈಲ ಕಸ್ತುರಿ
ಸಿತ ಲವಣ ಸಂಭಾರ ಶಾಕೋ
ಚಿತ ಸುವಸ್ತುವ ಕೊಡುವ ಕೊಂಬಾರೈಕೆ ವಿದುರಂಗೆ ೧೭

ಅರಸ ಕೇಳೈ ಪಾಕಶಾಲೆಯ
ಹಿರಿಯ ಹಂತಿಗಳಲಿ ಚತುರ್ದಶ
ಕರಿ ಘಟೆಗಳೆಡೆಯಾಡುವವು ಸಂಭಾರವನು ಹೇರಿ
ಹರಿವ ರಜತ ದ್ರೋಣಿಯಲಿ ಸುರಿ
ಸುರಿದು ಸೇದುವ ರಾಟಳಂಗಳೊ
ಳಿರೆವ ಘೃತ ಮಧು ತೈಲ ಧಾರಾ ರಚನೆ ಚೆಲುವಾಯ್ತು ೧೮

ಧರಣಿಪತಿ ಕೇಳ್ ಶೂದ್ರ ಮೊದಲಾ
ಗಿರೆ ಸಮಸ್ತ ಪ್ರಜೆ ವಿಧಾವಂ
ತರಿಗೆ ಭೋಜನ ಗಂಧ ಮಾಲ್ಯಾಂಬರ ವಿಲೇಪನದ
ಉರು ನಿಯೋಗಿಗಳಿಂದ್ರಸೇನನು
ವರ ವಿಶೋಕನು ರುಗ್ಮನತಿ ಬಂ
ಧುರ ಸಮೀರ ಪತಾಕಸೇನನು ಸೂತರೈವರಿಗೆ ೧೯

ಅರಸ ಕೇಳೈ ಬಳಿಕ ಪೃಥ್ವೀ
ಶರರಿಗಭಿನವ ಗಜ ರಥಾವಳಿ
ತುರಗ ಶಸ್ತ್ರಾಸ್ತ್ರಗಳನೀವ ನಿಯೋಗ ಕರ್ಣನದು
ಕರೆಕರೆದು ಯೋಗ್ಯಾತಿಶಯವರಿ
ವರಿದು ಯೋಷಿಜ್ಜನಕೆ ಮಾದ್ರೇ
ಶ್ವರನು ಕೊಡುವವನಾದನಧಿಕೋತ್ಸವದ ಸಿರಿಮಿಗಿಲು ೨೦

ಸಕಲ ಮಣಿ ಕಾಂಚನ ದುಕೂಲ
ಪ್ರಕರವೀ ದುರಿಯೋಧನ ವಶ
ನಕುಲನವರವರುಚಿತ ವೃತ್ತಿಯ ಮಧುರ ವಚನದಲಿ
ಪ್ರಕಟಿಸುವನವನಿವರ ಸೇನಾ
ನಿಕರದಾರೈಕೆಗಳು ಪಾಂಚಾ
ಲಕನಿಗಾದುದು ರಂಜಿಸಿತು ಪರಿಪಾಟಿಯೊಡ್ಡವಣೆ ೨೧

ಆದುದನುಪಮ ಕುಂಡವಂತ
ರ್ವೇದಿಯ ಸಮೀಪದಲಿ ಹೊರೆಗಳ
ಶೋಧಿಸಿಧ್ಮ ಕುಶಂಗಳಾ ಸ್ಥಂಡಿಲದ ಸೀಮೆಯಲಿ
ಆದರಿಸಿ ಪರಿಚಾರಕರು ಸಂ
ಪಾದಿಸಿದ ಘೃತ ಚರು ಪುರೋಡಾ
ಶಾದಿ ಸಂಭಾರೌಘವನುವಾಯಿತ್ತು ನಿಮಿಷದಲಿ ೨೨

ಕರೆಸಿದರು ಋತ್ವಿಕ್ಕುಗಳನ
ಧ್ವರಿಯುನಾದನು ಯಾಜ್ಞವಲ್ಕ್ಯನು
ವರ ಸುಮಿತ್ರಾಂಗಿರಸರುಗಳುದ್ಗಾತೃ ಹೋತೃಗಳು
ಪರಮ ಜೈಮಿನಿ ಕಠ ತಿ
ತ್ತಿರಿಗಳಾಗ್ನೀಧ್ರಾದಿ ರಾಜಾ
ಧ್ವರ ನಿಯೋಗಿಗಳಾಯ್ತು ವೇದವ್ಯಾಸನಾಜ್ಞೆಯಲಿ ೨೩

ಆ ಸದಸ್ಯತ್ವವನು ವೇದ
ವ್ಯಾಸ ಕೈಕೊಂಡನು ಮುನೀಂದ್ರ ಮ
ಹಾ ಸಮಾಜದ ಬಯಕೆಗಾ ಶಾಂಡಿಲ್ಯ ನಾರದರು
ಭೂಸುರರು ಸಾಮಾಜಿಕರು ಧರ
ಣೀಶ ಯಜ್ಞೋಪಕ್ರಮದ ವಿ
ನ್ಯಾಸನದಲಿ ಬಂದನು ಯುಧಿಷ್ಠಿರನಚ್ಯುತನ ಹೊರೆಗೆ ೨೪

ದೇವ ನಿನ್ನಯ ಕರುಣದಲಿ ಸಕ
ಳಾವನೀಪತಿ ವಿಜಯ ಬಹಳಾ
ರ್ಥಾವಲಂಬನವೀ ಮಖ ಪ್ರಾರಂಭ ವಿಸ್ತಾರ
ಈ ವಿಜಯ ವೈಭವವೆಮಗೆ ಸಂ
ಭಾವಿತವೆ ವರ ರಾಜಸೂಯಕೆ
ದೇವ ದೀಕ್ಷಿತನಾಗು ನೀನೆಂದೆರಗಿದನು ಪದಕೆ ೨೫

ಮಣಿದು ಹಿಡಿದೆತ್ತಿದನು ರಾಯನ
ಹಣೆಯನನುಪಮ ಕರುಣ ನಿಧಿ ಕಡು
ಗುಣಿಯೆ ಬಾಯೆನ್ನಾನೆ ಬಾಯೆಂದಪ್ಪಿ ಮೈದಡವಿ
ಗುಣವಹುದು ನಿನಗಿಂದುಕುಲ ದಿನ
ಮಣಿಯೆ ದೀಕ್ಷಿತನಾಗು ಮದವಾ
ರಣನೆ ದೀಕ್ಷಿತನಾಗೆನುತ ಬೋಳೈಸಿದನು ಹರಸಿ ೨೬

ಎನೆ ಪಸಾದವೆನುತ್ತ ಯಮನಂ
ದನನು ವೈಶಾಖದ ಚತುರ್ದಶಿ
ದಿನದಲುತ್ತರ ಪೂರ್ವವೇದಿ ವರಾಭ್ಯುದೈಕ್ಯದಲಿ
ವಿನುತ ಪುಣ್ಯಾಹದ ಮಹಾವಾ
ಚನೆಯ ನಿಗಮ ಪವಿತ್ರ ಜಲ ಪಾ
ವನನು ಮರುದಿನ ಯಜ್ಞ ದೀಕ್ಷಿತನಾದನೊಲವಿನಲಿ ೨೭

ಹುದಿದು ನವನೀತಾನುಲೇಪದ
ಹೊದೆದ ಕೃಷ್ಣಾಜಿನದ ಹಸ್ತಾ
ಗ್ರದಲೆಸೆವ ಸಾರಂಗ ಶೃಂಗದ ಯಾಜಮಾನ್ಯದಲಿ
ಉದಧಿಗೊರೆಗಟ್ಟುವ ಚತುರ್ವೇ
ದದ ಮಹಾಘೋಷದಲಿ ಮಖ ಕುಂ
ಡದ ತದಂತರ್ವೇದಿಗೈತಂದನು ಮಹೀಪಾಲ ೨೮

ನೆರೆದುದವನೀಪಾಲ ಜನ ಸಾ
ಗರ ಬಹಿರ್ವೇದಿಯ ಮಹಾ ಚ
ಪ್ಪರದೊಳಗೆ ತಂತಮ್ಮ ಸಿಂಹಾಸನ ಸಗಾಢದಲಿ
ಪರಮ ಋಷಿಗಳ ವೇದಘೋಷೋ
ತ್ಕರ ನೃಪಾಧ್ವರ ವಿಷಯ ತರ್ಕ
ಸ್ಫುರಣ ಕೋಳಾಹಳದ ಕಳಕಳ ತುಂಬಿತಂಬರವ ೨೯

ಚರು ತಿಲದ ರಾಶಿಗಳು ಸ್ರುಕ್‌ಸ್ರುವ
ಬರುಹಿಗಳ ಬಲು ಹೊರೆಗಳಾಜ್ಯೋ
ತ್ಕರದ ಪತ್ರಾವಳಿಯ ನಿರ್ಮಳ ಸಾರ ಸಮಿಧೆಗಳ
ಪರಿವಳೆಯದಾಮಿಕ್ಷೆಗಳ ಪರಿ
ಕರದ ವಿವಿಧ ದ್ರವ್ಯಮಯ ಬಂ
ಧುರದಲೆಸೆದುದು ಯಜ್ಞ ವಾಟಿಕೆ ರಾಜಸೂಯದಲಿ ೩೦

ಬಳಸಿದರು ಪರಿಮಧ್ಯಮಾನಾ
ನಳನನಗ್ರದ ಸುಪ್ರಣೀತಾ
ನಳನನಾಹವನೀಯ ಗಾರುಹಪತ್ಯ ದಕ್ಷಿಣದ
ಜ್ವಲಿತವೆನೆ ಮೃಗಚರ್ಮವೀಜನ
ವಳಯದೊಳು. ಪ್ರಾಗ್ವಂಶದಲಿ ಪರಿ
ಮಿಳಿತವಾಯ್ತು ಸದಸ್ಯ ಋತ್ವಿಜ್ಞರ ವಿಧಾನದಲಿ ೩೧

ಏವಮೇವಾಸ್ಮಾತ್ತದಿತಿ ಸಂ
ಭಾವನೀಯಮಿದಂ ಚ ನೈತ
ನ್ನೈವಮಿದಮೇವಂ ಚ ಶ್ರುತಿ ಸಂಸಿದ್ಧಮಿದಮೆನಲು
ಕೋವಿದರ ಕಳಕಳಿಕೆಯನ್ಯೋ
ನ್ಯಾವಮರ್ದದ ರಭಸವೀ ಭೂ
ಪಾವಳಿಗಳುಪಹಾಸ್ಯ ಘೋಷಕೆ ಕವಚವಾಯ್ತೆಂದ ೩೨

ವ್ಯಾಹೃತಿಯ ಶಿಕ್ಷಾಕ್ಷತದ ವಿಮ
ಳಾಹುತಿ ಸ್ವಾಹಾವಷಟ್ಕೃತಿ
ಸೋಹಿ ತಂದುದು ಸುರರ ಸುಹವಿರ್ಭಾಗ ಭೋಗಿಗಳ
ಲೋಹಿತಾಶ್ವನ ರಚನೆಯೊಳು ಹರಿ
ಸಾಹರಿಯೊಳುಬ್ಬೆದ್ದ ವರ್ಚಗ
ಳಾಹ ಸಪ್ತಕವೋ ಸಹಸ್ರಕವೆನಿಸಿ ಪೊಸತಾಯ್ತು ೩೩

ತ್ರಿದಿವವನು ತುಡುಕಿತು ಹವಿರ್ಗಂ
ಧದ ಗಢಾವಣೆ ಧೂತ ಧೂಮನ
ತುದಿ ತಪೋಲೋಕದಲಿ ತಳಿತುದು ಸತ್ಯಲೋಕದಲಿ
ತ್ರಿದಶರುರೆ ಬಾಯಾಡಿಸಿದರ
ಗ್ಗದ ಧ್ರುವಾದಿಗಳನು ಸುತೃಪ್ತಿಯ
ಹೊದರುದೇಗಿನ ಹೊಟ್ಟೆ ನೂಕಿತು ಹರಿ ಹಯಾದಿಗಳ ೩೪

ದಣಿದುದಲ್ಲಿ ಸುರೌಘವೀ ದ
ಕ್ಷಿಣೆಯುಲೂಟದಲಾದರಣೆ ಮ
ನ್ನಣೆಯುಲವನೀಸುರರು ಹಿಗ್ಗಿದರಿಲ್ಲಿ ಪಿರಿದಾಗಿ
ಎಣಿಸಬಹುದೇ ಭೋಜನದ ಸಂ
ದಣಿಯನೀಸ್ಯೆಸೆಂದು ಭಾರಾಂ
ಕಣದ ಭೂರಿಯ ವಿವರವನು ಬಣ್ಣಿಸುವನಾರೆಂದ ೩೫

ವೇದ ವೇದಾಂಗದ ರಹಸ್ಯ ವಿ
ವಾದ ತರ್ಕಸ್ಮೃತಿಗಳಂತ
ರ್ವೇದಿಯಲಿ ಘನಲಹರಿ ಮಸಗಿತು ತಂತ್ರ ಸಂತತಿಯ
ಆದುದತ್ತಲು ಗದ್ಯ ಪದ್ಯ ವಿ
ನೋದ ನರ್ತನ ವಾದ್ಯ ಸಂಗೀ
ತಾದಿ ಸಕಲ ಕಲಾನುರಂಜನೆ ರಾಜವರ್ಗದಲಿ ೩೬

ಆ ಋಷಿಗಳಾ ಕ್ಷತ್ರ ಜನದಾ
ಭೂರಿ ನಿಕರದ ವೇದಶಾಸ್ತ್ರ ವಿ
ಚಾರಣರ ಚಾರಣರ ಸಂಗೀತಾದಿ ಕಳಕಳದ
ಆರುಭಟೆ ಮಥಿತಾಂಬುನಿಧಿಯೊಡ
ನಾರುವವೊಲುಬ್ಬೆದ್ದ ಬಲು ಜ
ರ್ಝರವೆನೆ ಜಡಿದುದು ಯುಧಿಷ್ಠಿರ ರಾಜಸೂಯದಲಿ ೩೭

ಏಳು ದಿನ ಪರಿಯಂತ ಗಳಿಗೆಗೆ
ಮೇಲೆ ಮೇಲಧ್ವರದ ಲಕ್ಷ್ಮಿ ಪ್ರಥ
ಪಾಳಿಸಿತು ಪಾಳಿಸಿ ಚತುರ್ದಶ ಲೋಕ ಚೇತನವ
ಕೇಳಿದೈ ಜನಮೇಜಯ ಕ್ಷಿತಿ
ಪಾಲ ಸುರಲೋಕದಲಿ ಪಾಂಡುವಿ
ನೋಲಗಕೆ ಬಹ ಬಣಗು ಸುರರಿಗೆ ಸಮಯವಿಲ್ಲೆಂದ ೩೮

ಎವಗೆ ತವಗೆಂದೀ ಹವಿರ್ಭಾ
ಗವನು ಮುಕ್ಕಿತು ದೇವತತಿ ಸುರ
ಯುವತಿಯರೊಳೂರ್ವಸಿ ತಿಲೋತ್ತಮೆ ರಂಭೆ ಮೇನಕೆಯು
ದಿವಿಜರೊಳ ಹಸುಗೆಗಳ ಲೆಕ್ಕದ
ಸವಬೆಸನ ಸವಿವಾಯ ತುಷ್ಟಿಸ
ತವಕಿಗರು ಹೊಯ್ದಾಡಿದರು ಸಭೆಯಲಿ ಸುರೇಶ್ವರನ ೩೯

ಈತನಾರೈ ಪಾಂಡುನಂದನ
ನೀತ ಕಾಣಿರೆ ಪಾಂಡುವಿನ ಸುತ
ನೀತನೇ ದಿಟ ಪಾಂಡುವಿನ ಮಗನೀತನೇಯೆನುತ
ಪೂತು ಧರ್ಮಜ ಪೂತು ಧರ್ಮಜ
ಪೂತು ಧರ್ಮಜಯೆನುತ ರಾಜ
ವ್ರಾತ ಹೊಗಳಿತು ನಹುಷ ನಳ ನೃಗ ದಶರಥಾದಿಗಳು ೪೦

ಏನ ಹೇಳುವುದರಸ ಯಜ್ಞಾ ವಿ
ಧಾನದಭಿಷೇಕಾದಿ ಸಮಯೋ
ದ್ಧಾನವಾಯ್ತುರಸಂಗೆ ಸುರ ದುಂದುಭಿಯ ರಭಸದಲಿ
ಆ ನಿರಂತರ ತುಷ್ಟಿಗಳ ವೈ
ಮಾನಿಕರ ಸಂದಣಿ ನವೀನ ವಿ
ತಾನವಾಯಿತು ಭೂರಿ ಭಾರತ ವರುಷದಗಲದಲಿ ೪೧

ವರ ಸದಸ್ಯಾದಿಗಳ ದಕ್ಷಿಣೆ
ಬರಹಕಿಮ್ಮಡಿ ನೂರುಮಡಿ ಸಾ
ವಿರದ ಮಡಿ ವರ ಹೇಮ ವಸ್ತ್ರಾಭರಣ ಗೋವ್ರಜವ
ಅರಸನಿತ್ತನು ಮಖ ನಿಯೋಗೋ
ತ್ಕರರಿಗನುಪಮ ಭೂರಿ ಜನಕಾ
ದರಿಸಿ ಕೊಟ್ಟನು ಹೊತ್ತು ನಡೆದುದು ಸಕಲ ಜನ ಧನವ ೪೨

ತಲೆಹೊರೆಯಲಡಕಿದರು ಹೆಗಲಲಿ
ಕೆಲರು ಶಿಷ್ಯರ ನೆತ್ತಿಯಲಿ ಕೆಲ
ಕೆಲರು ಹೊರಿಸಿತು ದೇಶ ದೇಶದ ಸಕಲ ಭೂಸುರರು
ಲಲಿತ ರತ್ನಾಭರಣ ಗೋ ಸಂ
ಕುಲದ ಸೂರೆಯನೇನನೆಂಬೆನು
ಸಲೆ ದಣಿದುದಾ ಸಕಲ ಜಾತಿ ಜನೇಶ ಯಜ್ಞದಲಿ ೪೩

ಕಳೆದವಗಣಿತ ಕಲ್ಪವಿದರೊಳ
ಗಳಿವನರಿಯದರಿಬ್ಬರೇ ಮುನಿ
ತಿಲಕ ಮಾರ್ಕಂಡೇಯ ರೋಮಶರೀ ಮಹಾಧ್ವರದ
ಸುಳಿವನಾರಲಿ ಕಂಡರವನಿಪ
ರೊಳಗೆನುತ ಮನವುಕ್ಕಿ ನಾರದ
ನೊಲಿದು ನುಡಿದನು ತನ್ನ ಹೇಳಿಕೆ ಸಫಲವಾಯ್ತೆಂದು ೪೪

ಸುರರಿಗಾದುದು ತುಷ್ಟಿ ಧರಣೀ
ಸುರ ಮುನೀಂದ್ರರಿಗಾಯ್ತು ಶೂದ್ರರ
ನೆರವಿಗಾ ಚಂಡಾಲ ಪರಿಯಂತಾಯ್ತು ಸತ್ಕಾರ
ಧರಣಿಪಾಲಕರಿದೆ ಚತುಸ್ಸಾ
ಗರದ ತಡಿ ಪರಿಯಂತ ವಿಶ್ವಂ
ಭರೆಯ ಮಾನ್ಯರ ಮನ್ನಿಸೆಂದನು ಭೂಪತಿಗೆ ಭೀಷ್ಮ ೪೫

ಸ್ನಾತಕ ಪ್ರಿಯ ಋತ್ವಿಗಾಚಾ
ರ್ಯಾತಿಶಯ ಗುರು ನೃಪರು ಸಹಿತೀ
ಭೂತಳದೊಳಿಂತಾರು ಮಾನಿಸರರ್ಘ್ಯಯೋಗ್ಯರಲೆ
ಪ್ರೀತಿಯಲಿ ನೀನರ್ಘ್ಯವನು ವಿ
ಖ್ಯಾತರಿಗೆ ಮಾಡೆನಲು ಮನ್ನಣೆ
ಯಾತನಾರೆನೆ ವೀರನಾರಾಯಣನ ತೋರಿಸಿದ ೪೬

## ಎಂಟನೆಯ ಸಂಧಿ

ಸೂ. ರಾಜಸೂಯದೊಳಗ್ರ ಪೂಜಾ
ರಾಜಿತನ ಶ್ರುತಿ ಮೌಳಿ ಮಣಿಯು ವಿ
ರಾಜಿತನ ಶಿಶುಪಾಲ ಜರೆದನು ಪೂರ್ವವೈರದಲಿ

ಕೇಳು ಜನಮೇಜಯ ಧರಿತ್ರೀ
ಪಾಲ ಮುನಿಮಧ್ಯದಲಿ ನಿಮ್ಮ ನೃ
ಪಾಲ ಭೀಷ್ಮಂಗೆಂದನತಿ ಗಂಭೀರ ನಾದದಲಿ
ಭಾಳ ನೇತ್ರಗೆ ಪಡಿಯೆನಿಪ ಭೂ
ಪಾಲರಿದಲೊಗ್ರ ಪೂಜ್ಯನ
ಹೇಳೆನಲು ಗಾಂಗೇಯ ನುಡಿದನು ವೇದ ಸನುಮತವ ೧

ಆರು ತಾರಾಗ್ರಹದ ಮಧ್ಯದೊ
ಳಾರು ದಿನಕರನುಳಿಯೆ ಬಳಿಕಾ
ರಾರು ಸುರ ನಿಕರದಲಿ ಸೇವ್ಯರು ಶೂಲಧರನುಳಿಯೆ
ಆರು ನಿರ್ಜರ ನಿವಹದಲಿ ಜಂ
ಭಾರಿಯಲ್ಲದೆ ಮಾನನೀಯರ
ದಾರು ಜಗದಲಿ ಕೃಷ್ಣನಲ್ಲದೆ ಪೂಜ್ಯತಮರೆಂದ ೨

ಗಿರಿಗಳಲಿ ಹೇಮಾದ್ರಿ ಘನಸಾ
ಗರದೊಳಗೆ ದುಗ್ಧಾಬ್ಧಿ ದೇವಾ
ಸುರ ನರೋರಗ ನಿಕರದಲಿ ನಾರಾಯಣನೆ ಮಿಗಿಲು
ಅರಸ ಸಂಶಯವೇಕೆ ಕೃಷ್ಣನ
ಚರಣವನು ತೊಳೆ ರಾಜಸೂಯಾ
ಧ್ವರಕೆ ಪೂಜಾಪಾತ್ರನೀ ಹರಿಯೆಂದನಾ ಭೀಷ್ಮ ೩

ವ್ಯಾಸ ನಾರದ ರೋಮಶಾದಿಗ
ಳೀ ಸಮಸ್ತ ಮುನೀಂದ್ರರಿಗೆ ಯಿಾ
ಕೇಶವನು ಪೂಜಾರುಹನೆಯೆಂದಿವರ ಬೆಸಗೊಳ್ಳೆ
ಲೇಸನಾಡಿದೆ ಭೀಷ್ಮ ಬಳಿಕೀ
ನೀ ಸಮಸ್ತ ಚರಾಚರದೊಳೀ
ವಾಸುದೇವನೆ ಪೂಜ್ಯನೆಂದುದು ಸಕಲ ಮುನಿ ನಿಕರ ೪

ತರಿಸಿದನು ನವ ಹೇಮಮಣಿ ಭಾ
ಸುರದ ಮಂಚದ ಮೇಲೆ ಲಲಿತಾ
ಸ್ತರಣದಡಿಕಿಲುವಾಸುಗಳ ನಿರ್ಮಳ ನಿಕಾರಗಳ
ಮೆರೆದುದೆಳ ಬೆಳುದಿಂಗಳಿನ ಮೋ
ಹರದ ಮಾರೊಡ್ಡೆನಿಸಿ ಭೂಮಿಾ
ಶ್ವರ ಸಭಾ ಮಧ್ಯದಲಿ ಧರಣೀಪಾಲ ಕೇಳೆಂದ ೫

ವಿನಯದಲಿ ಸಹದೇವ ಕೈಗೊ
ಟ್ಟನುಪಮನ ತಂದನು ಪಿತಾಮಹ
ಜನಕ ಪಾಯವಧಾರು ಗಂಗಾ ಜನಕನವಧಾರು
ದನುಜ ರಿಪುವವಧಾನವವಧಾ
ನೆನುತ ವಿಮಳ ಮಹಾರ್ಘ್ಯ ಸಿಂಹಾ
ಸನಕೆ ಬಿಜಯಂಗೈಸಿದರು ಕುಳ್ಳಿರ್ದನಸುರಾರಿ ೬

ತಂದು ಮಣಿಮಯ ಪಡಿಗದಲಿ ಗೋ
ವಿಂದನಂಘ್ರಿಯ ತೊಳೆದು ಗಂಗೆಯ
ತಂದೆವೀಗಳೆ ತಾವೆನುತ ತಮ್ಮುತ್ತಮಾಂಗದಲಿ
ವಂದಿಸುತ ವೈದಿಕ ಪರಿವಿಡಿ
ಯಿಂದ ಮಧುಪರ್ಕಾದಿ ಪೂಜೆಗ
ಳಿಂದ ಸತ್ಕರಿಸಿದರು ಸಚರಾಚರ ಜಗತ್ಪತಿಯ ೭

ಆಯೆನುತ ಮನವುಕ್ಕಿ ಮುನಿಗಳು
ಘೋಯೆನಲು ನಿರ್ಜರರ ಭೇರಿ ನ
ವಾಯಿಯಲಿ ಮೊಳಗಿದವು ಸುರಿದವು ಮುಗುಳ ತನಿಮಳೆಯು
ರಾಯನಧ್ವರ ಕರ್ಮ ಸತ್ಕೃತ
ವಾಯಿತೀ ಭೂಪತಿ ಕೃತಾರ್ಥನ
ಲಾಯೆನುತ ಸಭೆ ಹೊಗಳಿತಂದು ಸಮುದ್ರ ಘೋಷದಲಿ ೮

ಈ ಮಹಾಧ್ವರ ಕರ್ಮವೇ ಸು
ತ್ರಾಮನವರಿಗೆ ಹವ್ಯ ಸಿದ್ಧಿ ಮ
ಹಾ ಮಹೀಸುರ ಮುನಿ ನಿಕರದೇಕತ್ರ ಸಮ್ಮಿಳಿತ
ಈ ಮಹೀಶರ ಬರವಿದೆಲ್ಲರೊ
ಳೀ ಮುಕುಂದನ ಪೂಜೆಗಿದುವೆ ಸ
ಭಾ ಮನೋಹರವೆಂದು ಮಾರ್ಕಂಡೇಯ ಮುನಿ ನುಡಿದ ೯

ಅವನಿಯಮರರ ಕಳಕಳವ ಪಾಂ
ಡವರ ಸುಮ್ಮಾನವನು ನೃಪ ಕೌ
ರವರ ಮಾತ್ಸರ್ಯೋಪಲಾಲಿತ ಹರುಷ ವಿಭ್ರಮವ
ಅವನಿಪಾಲರು ಕಂಡರೀಯು
ತ್ಸವವ ಕಂಡಿರೆ ನೀವೆನುತ ತ
ಮ್ಮವರೊಳೊಬ್ಬರನೊಬ್ಬರುರೆ ನೋಡಿದರು ಬೆರಗಾಗಿ ೧೦

ಕೆಲರು ಪಾಂಡವ ಮೈತ್ರಿಯಲಿ ಕೆಲ
ಕೆಲರು ಕೃಷ್ಣನ ಬಲುಮೆಯಲಿ ಕೆಲ
ಕೆಲರು ಧೀರತ್ವದಲಿ ಕೆಲರನುಚಿತದ ಭೀತಿಯಲಿ
ಕೆಲರಿದೇಕವಗೆಂದು ಧರಣೀ
ವಳಯದವನಿಪರಿಪ್ಪ ರವರೊಳು
ಖಳಶಿರೋಮಣಿ ಮಸಗಿದನು ಭೂಪಾಲ ಕೇಳೆಂದ ೧೧

ಹೊತ್ತಿತೆದೆ ಹೇರಾಳ ತಮದಲಿ
ಕೆತ್ತಿದವು ಮಿಾಸೆಗಳು ಕಂಗಳು
ಹೊತ್ತವರುಣಚ್ಛವಿಯನುಬ್ಬರಿಸಿದುದು ಗೋನಾಳಿ
ಕೆತ್ತುದರಿವಿನ ಕದ ಕಟಾಕ್ಷಿಸಿ
ಮಿತ್ತು ವೊಲಿದಳು ರೋಷ ಮಿಗೆ ಹೊಗ
ರೆತ್ತಿತೈ ಶಿಶುಪಾಲವೀರನ ವಚನಮಯ ಖಡುಗ ೧೨

ಏನೆಲವೊ ಸಹದೇವ ವಸುಧೆಯ
ಮಾನನಿಧಿಗಳ ಮುಂದೆ ನಂದನ
ಸೂನುವಿಗೆ ಸಿಂಹಾಸನದ ಮೇಲರ್ಘ್ಯ ಸತ್ಕೃತಿಯೆ
ನೀನರಿಯದವ ನಿಮ್ಮ ಯಾಗಕೆ
ಹಾನಿಯಲ್ಲಾ ನಿಮ್ಮ ಹಿರಿಯರಿ
ದೇನ ನೆಗಳಿದರಕಟ ಖೂಳರು ಪಾಂಡುಸುತರೆಂದ ೧೩

ಯದುಗಳಿವದಿರು ಮುನ್ನ ರಾಜ್ಯಾ
ಸ್ಪದದ ಸಿಂಹಾಸನಕೆ ಬಾಹಿರ
ರದರೊಳೀತನ ಖೋಡಿಯನು ಜಗವೆಲ್ಲ ಬಲ್ಲುದಲೆ
ಇದು ಮಹಾಧ್ವರವಿಲ್ಲಿ ನೆರೆದಿ
ದ್ದುದು ಮಹಾ ಕ್ಷತ್ರಿಯರು ಗೋವರ
ಸದೆಗನಿಲ್ಲಿಗೆ ಶ್ರೇಷ್ಠನೇ ಸಹದೇವ ಕೇಳೆಂದ ೧೪

ತ್ರಿದಶರಿಗೆ ಸರಿತೂಕ ಸಾಮ
ರ್ಥ್ಯದಲಿ ಶುದ್ಧ ಶ್ರೌತ ಸನ್ಮಾ
ರ್ಗದಲಿ ಶಿವಶಿವ ರಾಜ ಋಷಿಗಳಲಾ ಮಹೀತಳಕೆ
ಉದಯದಿನನಂದದಲಿ ನೃಪರಿ
ರ್ದುದು ಸತೇಜವ್ರಜರು ಗೋವರ
ಸದೆಗನಿಲ್ಲಿಗೆ ಶಿಷ್ಟನೇ ಸಹದೇವ ಹೇಳೆಂದ ೧೫

ಬಾಲಕನು ಸಹದೇವನೀತನು
ಹೇಳನಿಲ್ಲಿಯ ಹೆಚ್ಚು ಕುಂದು ನೃ
ಪಾಲ ನಿನ್ನದು ಧರ್ಮ ತತ್ವ ರಹಸ್ಯ ಸಂಗತಿಯು
ಕೇಳುವೆಗಳವು ಬೇರೆ ಚರಿತದ
ಪಾಳಿ ತಾನದು ಬೇರೆಲಾ ಪಶು
ಪಾಲರೀಯಧ್ವರಕೆ ಪೂಜ್ಯರೆ ಶಿವಶಿವಾಯೆಂದ ೧೬

ತರಳರಿವದಿರು ಪಾಂಡುಸುತರುಂ
ತಿರಲಿ ನೀ ಸುಪ್ರೌಢನೆಂದಾ
ದರಿಸಿದೈ ವಸುದೇವ ಸುತನಲಿ ಶಿಷ್ಟಯೋಗ್ಯತೆಯ
ಧರಣಿಪಾಲರ ಮಧ್ಯದಲಿ ಭಾ
ಸ್ಕರನು ಗಡ ತುರು ಪಳ್ಳಿಕಾರರ
ಪುರದ ಭಾಸ್ಕರನೀತನಲ್ಲಾ ಭೀಷ್ಮ ಹೇಳೆಂದ ೧೭

ಶಿವನ ಸರಿ ಮಂಚದಲಿ ಸರಸಿಜ
ಭವನ ಸಮ ಗದ್ದುಗೆಗಳಲಿ ವಾ
ಸವನ ತೊಡೆ ಸೋಂಕಿನಲಿ ಕುಳ್ಳಿಹರೀ ಮಹೀಶ್ವರರು
ಇವರ ಸರಿಸಕೆ ಸಲ್ಲದೀ ಯಾ
ದವನನುದ್ಧದಲಿರಿಸಿ ಬಹುಮಾ
ನವನು ಮಾಡಿದೆ ಭೀಷ್ಮ ಯಜ್ಞವನಳಿದೆ ನೀನೆಂದ ೧೮

ಸಕಲ ಶಾಸ್ತ್ರಶ್ರವಣ ವೇದ
ಪ್ರಕರ ಧರ್ಮ ವಿಚಾರ ಪೌರಾ
ಣಿಕ ಕಥಾ ಪ್ರಾಗಲ್ಭ್ಯವಿನಿತರ ಸಾರ ಸಂಗತಿಯ
ಅಕಟ ನೀರಲಿ ನೆರಹಿ ಪಶು ಪಾ
ಲಕನ ಪೂಜಾ ಸಾಧನಾರ್ಥ
ಪ್ರಕಟನಾದೈ ಭೀಷ್ಮ ಮೂರ್ಖಾಧಮನು ನೀನೆಂದ ೧೯

ಹಿರಿಯನೆಂದೀತನಲಿ ಪೂಜಾ
ವರಣವೇ ವಸುದೇವನೀ ಮುರ
ಹರನ ಪಿತನಿದ್ದಂತೆ ವೇಣೀ ದ್ರುಪದ ಭೂಪತಿಯ
ವರಿಸಿ ನೀವಾಚಾರ್ಯನೆಂದಾ
ದರಿಸುವರೆ ರಾಯರಿಗೆ ಅಸ್ತ್ರದ
ಗುರುವಲಾ ದ್ರೋಣಂಗೆ ಪೂಜೆಯ ಮಾಡಿರೇಕೆಂದ ೨೦

ಈತನಿಲ್ಲಿ ಸದಸ್ಯನೇ ವಿ
ಖ್ಯಾತ ವೇದವ್ಯಾಸನಿರುತ್ತಿ
ಗ್ಭೂತನಾಥಂಗಗ್ರ ಪೂಜೆಯನೇಕೆ ಮಾಡಿಸರಿ
ಈತ ನಿಮಗೆ ಪಿತಾಮಹನೆ ಗಂ
ಗಾತನುಜನೈದನೆ ವಿಶೇಷಕೆ
ಗೌತಮನಲಾ ಕೃಪನ ಮನ್ನಿಸಿರೇಕೆ ನೀವೆಂದ ೨೧

ವೀರರಿಗೆ ಕೊಡಬೇಹುದೇ ರಣ
ಧೀರನಶ್ವತ್ಥಾಮನೈದನೆ
ಸಾರನಲ್ಲಾ ಚಾಪಧರರೊಳಗೇಕಲವ್ಯ ನೃಪ
ಪೌರವೇಯರೊಳಧಿಕ ಬಾಹ್ಲಿಕ
ಗಾರು ಸರಿ ಕೊಡಿರೇಕೆ ಕೃಷ್ಣನಿ
ದರೊಳಗಾರೆಂದಗ್ರಪೂಜೆಯ ಕೊಟ್ಟಿರಕಟೆಂದ ೨೨

ನರನ ಸಖನೀ ಕೃಷ್ಣನೆಂದಾ
ದರಿಸುವರೆ ಗಂಧರ್ವ ನಿಮ್ಮಾ
ನರನ ಸಖನಲ್ಲಾ ವಿರೋಧಿಯೆ ಚಿತ್ರರಥ ನಿಮಗೆ
ಅರಸನಲ್ಲಾ ದ್ರುಮನು ವರ ಕಿಂ
ಪುರುಷ ಮಾನ್ಯನು ನಿಮ್ಮ ಯಜ್ಞದೊ
ಳುರುಳುಂಕರಿಗಲ್ಲದೆ ವಿಶಿಷ್ಟರಿಗಿಲ್ಲ ಗತಿಯೆಂದ ೨೩

ಮಾನ್ಯರಿಗೆ ಮನ್ನಣೆಯಹರೆ ಸಾ
ಮಾನ್ಯನೇ ಭಗದತ್ತ ನಿಮಗೇ
ನನ್ಯನೇ ಸೌಬಲೇಯ ಜಯದ್ರಥನೇಕೆ ಮನ್ನಿಸರಿ
ಶೂನ್ಯ ವಿಭವವೆ ಮಗಧಸೂನು ಸು
ಮಾನ್ಯನಲ್ಲಾ ದಂತವಕ್ರ ವ
ದಾನ್ಯಭಟ್ಟನು ಕೃಷ್ಣನಿಲ್ಲಿಗೆ ಯೋಗ್ಯನಹನೆಂದ ೨೪

ಉರುವ ನೃಪನಲ್ಲಾ ಸುದಕ್ಷಿಣ
ನರಿಯಿರೇ ಮಾಳವನನೀತನ
ಮರೆದಿರೇ ಸಾಲ್ವನನು ಭೀಷ್ಮಕ ರುಗ್ಮ ಭೂಪತಿಯ
ಮೊರೆಯ ಮರೆದಿರೆ ಶಲ್ಯಭೂಪತಿ
ಹೊರಗಲಾ ವರ ರಾಜಸೂಯಕೆ
ಕರುವ ಕಾವವನಲ್ಲದುಳಿದರು ಯೋಗ್ಯರಲ್ಲೆಂದ ೨೫

ಭೂರಿ ಭೂರಿಶ್ರವರು ನಿಮ್ಮೊಳ
ಗಾರ ಹೊಯ್ದರು ಸೋಮದತ್ತ ಮ
ಹೀರಮಣನತಿ ಮಾನ್ಯನಲ್ಲಾ ಅಗ್ರಪೂಜೆಯಲಿ
ಸಾರಧರ್ಮವಿದೆಂದು ಬಂದೆವಿ
ದಾರು ಬಲ್ಲರು ಹಳ್ಳಿಕಾರರ
ನಾರಿಯರ ನೆರೆ ಮಿಂಡನಲ್ಲದೆ ಯೋಗ್ಯನಲ್ಲೆಂದು ೨೬

ಮಿಂಡನನುವಿಂದಾ ಮಹೀಶರು
ಬಂದಿರೈ ಕಾಂಭೋಜ ನೃಪನೈ
ತಂದೆಲಾ ಗಾಂಧಾರ ಶಕುನಿ ಬೃಹದ್ರಥಾದಿಗಳು
ಬಂದರಿಲ್ಲಿಗೆ ಧರ್ಮಸಾಧನ
ವೆಂದು ಬಯಸಿದಿರಿವರ ಯಾಗಕೆ
ನಂದಗೋಪನ ಮಕ್ಕಳಲ್ಲದೆ ಯೋಗ್ಯರಿಲ್ಲೆಂದ ೨೭

ಈ ಋಷಿಗಳೀ ಮಂತ್ರವೀ ಸಂ
ಭಾರವೀ ಪೌರಾಣ ಕಥೆಯಿಾ
ಭೂರಿಭೋಜನವೀ ಮಹಾ ಗೋ ರತ್ನ ಧನಧಾನ್ಯ
ಸಾರತರ ವೇದೋಕ್ತಮಾರ್ಗ ವಿ
ಚಾರವಿದ್ದುದು ಹೊರಗೆ ಗೋಪೀ
ಜಾರ ಸತ್ಕೃತಿಯೊಳಗೆ ವಿಷವಿದನರಿದುದಿಲ್ಲೆಂದ ೨೮

ಸ್ನಾತಕವ್ರತಿಯಲ್ಲ ಋತ್ವಿಜ
ನೀತನಲ್ಲಾಚಾರ್ಯನಲ್ಲ ಮ
ಹೀತಳಾಧಿಪನಲ್ಲ ಗುರುವಲ್ಲಸುರರಿಪು ನಿಮಗೆ
ಈತನೇ ಪ್ರಿಯನೆಂದು ಕೃಷ್ಣಂ
ಗೋತು ಕೊಡುವರೆ ಬೇರೆ ಕೊಡುವುದು
ಭೂತಳೇಶರ ಮುಂದೆ ಮನ್ನಿಪುದುಚಿತವಲ್ಲೆಂದ ೨೯

ರಾಯ ನಿನಗಾವಿಂದು ದಿಟ ಸಿ
ದ್ಧಾಯವನು ನಾವೆತ್ತೆವಲ್ಲದೆ
ವಾಯುಜನ ಫಲುಗುಣನ ಬಿಲ್ಲಿನ ಬಲುಮೆಗಂಜಿದೆವೆ
ರಾಯ ಠಕ್ಕಿನ ನಿಧಿಯ ಠೌಳಿಯ
ಮಾಯಕಾರನ ತಂದು ಮನ್ನಿಸಿ
ರಾಯರಭಿಮಾನವ ವಿಭಾಡಿಸಿಕೊಂಡೆ ನೀನೆಂದ ೩೦

ಧರ್ಮಮಯವೀ ಯಜ್ಞ ನೀನೇ
ಧರ್ಮಸುತನೆಂದಿದ್ದೆವಿಲ್ಲಿ ವಿ
ಕರ್ಮವಾಯಿತಸೂಯವೇ ಶಿವನಾಣೆ ಜಗವರಿಯೆ
ಧರ್ಮವೇ ಅಪ್ರಾಪ್ತ ಕಾರ್ಯವ
ಕರ್ಮವೀ ನೃಪನಿಕರ ಮೆಚ್ಚಲ
ಧರ್ಮಸುತನೆಂದಾಯ್ತು ನಿನ್ನಭಿಧಾನವಿಂದಿನಲಿ ೩೧

ಆಯಿತಿದು ಜಡ ಧರ್ಮಜನು ಗಾಂ
ಗೇಯ ಜಡನೀ ತಾಗುದಟ್ಟಿಸ
ಪಾಯವರಿಯದೆ ನಿನ್ನ ಕರೆದರೆ ಕೃಷ್ಣ ಬೆರತೆಯಲ
ರಾಯ ರತುನದ ನಡುವೆ ನೀನನು
ಗಾಯಕವೊ ನಾಯಕವೊ ಮೇಣುಪ
ನಾಯಕವೊ ನೀನಾವನೆಂದನು ಜರೆದು ಮುರಹರನ ೩೨

ಈ ಋಷಿಗಳೇ ಬಣಗುಗಳು ಬಡ
ಹಾರುವರು ದಕ್ಷಿಣೆ ಸುಭೋಜನ
ಪೂರವಾದರೆ ಸಾಕು ಮಾನ್ಯರ ವಾಸಿವಟ್ಟದಲಿ
ಹೋರುವವರಿವರಲ್ಲ ನೆರೆದೀ
ವೀರ ನೃಪರಭಿಮಾನಿಗಳು ನೆರೆ
ಸೈರಿಸಿದರಿದು ನಿನಗೆ ಸದರವೆ ಕೃಷ್ಣ ಹೇಳೆಂದ ೩೩

ಅರಿಯದವರಾದರಿಸಿದರೆ ನೀ
ನರಿಯ ಬೇಡವೆ ನಿನ್ನ ಕುಂದಿನ
ಕೊರತೆಗಳನಾರರಿಯರೀ ಭೂಪಾಲ ಮಧ್ಯದಲಿ
ಕುರುಬರೂರಲಿ ಗಾಜು ಮಾಣಿಕ
ವರಿಯದವರಿಗೆ ಕೃಷ್ಣ ನೀ ಕಡು
ಬೆರತೆಲಾ ನೆರೆ ಮರೆದೆಲಾ ನಿನ್ನಂತರವನೆಂದ ೩೪

ಕುಲದಲಧಿಕರು ರಾಜ್ಯದಲಿ ವೆ
ಗ್ಗಳರು ಭುಜಸತ್ವದಲಿ ಸೇನಾ
ಬಲದಲುತ್ತಮರಿವರ ಭಂಗಿಸಿ ನಿನಗೆ ಮನ್ನಣೆಯೆ
ಕುಲವು ಯದುಕುಲ ರಾಜ್ಯವೇ ಕಡ
ಲೊಳ ಕುರುವ ನಿನ್ನೋಟಗುಳಿತನ
ದಳವ ಮಾಗಧ ಕಾಲ ಯವನರು ಬಲ್ಲರವರೆಂದ ೩೫

ಬೇವಿನಾರವೆಯೊಳಗೆ ಕಳಹಂ
ಸಾವಳಿಗೆ ರಮ್ಯವೆ ಜಪಾಕುಸು
ಮಾವಳಿಗಳಲಿ ಮಧುಕರನ ಮೋಹರಕೆ ಮನ್ನಣೆಯೆ
ಈ ವಿಕಾರದ ಯಜ್ಞದಲಿ ರಾ
ಜಾವಳಿಗೆ ಮನ್ನಣೆಯೆ ಶಿವಶಿವ
ನೀವು ಗೋಪೀಜಾರರಿಲ್ಲಿಗೆ ಶಿಷ್ಟರಹಿರೆಂದ ೩೬

ಜರಡುಮಖವೀ ಮಖಕೆ ಹೋಲುವ
ಧರಣಿಪತಿಯೀ ಮಖಕೆ ಧರಣೀ
ಶ್ವರಗೆ ಪಾಸಟಿ ಭೀಷ್ಮನೀ ಮಖಭೂಪ ಭೀಷ್ಮರಿಗೆ
ಸರಿಸನಾದನು ಕೃಷ್ಣನೀ ಮಖ
ಧರಣಿಪತಿ ಭೀಷ್ಮಂಗೆ ಕೃಷ್ಣಗೆ
ಸರಿಯ ಕಾಣೆನು ನಿಮ್ಮೊಳೊಬ್ಬರಿಗೊಬ್ಬರೆಣೆಯೆಂದ ೩೭

ಸೀಳಿವನ ಹೆಡತಲೆಯೊಳಗೆ ತೆಗೆ
ನಾಲಗೆಯನೆಲೆ ಕುನ್ನಿಗಳಿರಿದ
ಕೇಳುವರೆ ಪತಿನಿಂದೆಯನು ಪಾತಕಕೆ ಗುರುವಲ್ಲ
ಏಳೆನುತ ಕೃತವರ್ಮ ಸಾಂಬ ನೃ
ಪಾಲ ಮೊದಲಾದಖಿಳ ಯಾದವ
ಜಾಲವೆದ್ದುದು ಬಿಗಿದ ಬಿಲುಗಳ ಸೆಳೆದಡಾಯುಧದಿ ೩೮

ಕದಡಿತಾ ಆಸ್ಥಾನ ಹೋಯೆಂ
ದೊಡರಿ ಋಷಿಗಳ ತಾಳಿಗೆಗಳೊಣ
ಗಿದವು ಹಲ್ಲಣಿಸಿದವು ರಥ ಮಾತಂಗ ವಾಜಿಗಳು
ಕೆದರಿತೀಚೆಯ ದೆಸೆ ಸುನೀತನ
ಸದೆದು ತೆಗೆ ಸುಂಟಿಗೆಯನೆನುತಲಿ
ಯದು ನೃಪಾಲರು ಗಜಬಜಿಸಲೆಡೆವೊಕ್ಕನಾ ಭೀಷ್ಮ ೩೯

ನಿಲಿಸಿದನು ಕಳಕಳವನೀ ಯದು
ಬಲವ ತೆಗೆದನು ಮತ್ತೆ ಮೌನದ
ಜಲಧಿಯಾಯ್ತಾಸ್ಥಾನದಿದಿರಲಿ ನಿಂದು ಸಹದೇವ
ಎಲೆ ಸುನೀತ ವೃಥಾ ವಿರೋಧ
ಸ್ಖಲಿತನಾದೆ ಮುರಾರಿ ಮಾನ್ಯರ
ತಿಲಕನೀತನ ಪೂಜೆ ಯಾಗಕೆ ಕಳಸವಾಯ್ತೆಂದ ೪೦

ಧರಣಿಪತಿಯೋ ಸಕಲ ಧರ್ಮದ
ಪರಮಸೀಮೆ ಮುಕುಂದನೇ ಮಾ
ನ್ಯರಿಗೆ ಗುರು ವಂದ್ಯರಿಗೆ ವಂದ್ಯನು ದೈವಕಧಿದೈವ
ಸುರನದೀನಂದನನು ಸಾಕ್ಷಾ
ತ್ಪರಮಶಿವನೀ ಯಜ್ಞ ಲೋಕೋ
ತ್ತರದ ಮಖವಿದು ನಿನ್ನ ಕುಮತಿಗೆ ಸಾಧ್ಯವಲ್ಲೆಂದ ೪೧

ನಿನ್ನನೆನ್ನನು ಚೈದ್ಯ ಕೃಷ್ಣನ
ಮನ್ನಣೆಗೆ ಸೆಣಸುವರಿಗಿದೆ ತೊಡ
ರೆನ್ನ ಪಾದದಲೆನುತ ಧರಣಿಯ ನೊದೆದನಂಘ್ರಿಯಲಿ
ಇನ್ನು ನೀನು ಸುಲೋಚನಾಂಧಕ
ನಿನ್ನೊಡನೆ ಫಲವೇನು ಕದನಕೆ
ಬನ್ನಿ ಮಿಡುಕುಳ್ಳವರೆನುತ ಗಜರಿದನು ಸಹದೇವ ೪೨

ನುಡಿಯದದು ಮೌನಗ್ರಹದ ಹೆಡ
ಗುಡಿಯಲಿದ್ದುದು ರಾಯ ಕುಲವವ
ಗಡೆಯನೆದ್ದನು ಸಿಂಹ ಪೀಠದಿ ನೋಡಿ ಕೆಲಬಲನ
ಕಡೆಯ ಝಣಝಣ ರವ ಮಸಗಲಿವ
ನೊಡನೆ ಹೊರವಂಟುದು ನೃಪಾಲಕ
ರೊಡಮುರುಚಿದರು ಹಿಡಿವ ಸಚಿವ ಪಸಾಯ್ತ ಮಂತ್ರಿಗಳ ೪೩

ಶಿವಶಿವಾ ತಪ್ಪಾಯ್ತು ನಮ್ಮು
ತ್ಸವಕೆ ಬಂದವನಿಪನ ಗುಣ ದೋ
ಷವನು ನಾವೀಕ್ಷಿಸುವುದನುಚಿತವೆಂದು ವಿನಯದಲಿ
ಅವನಿಪತಿ ಬೆಂಬತ್ತಿ ಗಮನಕೆ
ತವಕಿಸುವ ಶಿಶುಪಾಲಕನ ಹಿಡಿ
ದವುಚಿದನು ಮಧುರೋಕ್ತಿಯಲಿ ನುಡಿಸಿದನು ಬೋಳೈಸಿ ೪೪

ಅರಿಯರೇ ಮುನಿ ಮುಖ್ಯರೀತನ
ನುರುವ ದೈವವಿದೆಂದು ನೀ ಕ
ಟ್ಟರಿತಗಾರನೆ ರಾಯರಿದೆಲಾ ಸಕಲ ಗುಣಯುತರು
ಕುರುಬತನದಲಿ ನೀನಕಟ ತೆರ
ನರಿಯದೆಂಬರೆ ಬಾರೆನುತ ಮುಂ
ಜೆರಗ ಹಿಡಿದೆಳೆದವನ ತಂದನು ಭೂಪ ಜನ ಸಹಿತ ೪೫

ಎಲೆ ಮರುಳೆ ಭೂಪಾಲ ನೊರಜಿನ
ಕಳಕಳಕೆ ಕರಿ ಬೆಚ್ಚುವುದೆ ಮಂ
ಡಳಿಯ ಮರಿ ಮಿಡುಕಿದರೆ ಕಳವಳಿಸುವುದೆ ಕಲಿ ಸಿಂಹ
ಗಿಳಿಯ ಮುರಕಕೆ ಗಿಡಗನುಗಿದ
ವ್ವಳಿಸುವುದೆ ಹರಿಗಿವನು ಗಣ್ಯನೆ
ಗಳಹನಿವನೊಡನಾವುದನುನಯವೆಂದನಾ ಭೀಷ್ಮ ೪೬

ಗರುವ ಗರುವನನಖಿಳ ವಿದ್ಯಾ
ಪರಿಣತನ ಪರಿಣತನು ವೀರನು
ಧುರದ ವೀರನನರಿವನಿಂತಿದು ಲೋಕ ವಿಖ್ಯಾತ
ಗರುವನಲ್ಲ ಸುನೀತ ವಿದ್ಯಾ
ಪರಿಣತನು ತಾನಲ್ಲ ಘನಸಂ
ಗರದೊಳಿವನಾಳಲ್ಲ ಕೃಷ್ಣನನರಿವನೆಂತೆಂದ ೪೭

ಅರಸನರಸನು ಕಾದಿ ಹಿಡಿದಾ
ದರಿಸಿ ಬಿಟ್ಟು ತದೀಯ ರಾಜ್ಯದೊ
ಳಿರಿಸಿದರೆ ಗುರುವಾತನಾತಂಗಿದುವೆ ಶ್ರುತಿಸಿದ್ಧ
ಅರಸುಗಳನನಿಬರನು ಸೋಲಿಸಿ
ಮರಳಿ ರಾಜ್ಯದೊಳಿರಿಸನೇ ಮುರ
ಹರನು ಗುರುವಲ್ಲಾ ಮಹೀಶಂಗೆಂದನಾ ಭೀಷ್ಮ ೪೮

ಮಗಧಸುತನೀ ಸಾಲ್ವ ಹಂಸನ
ಮಗ ನಿಶುಂಭನ ಸೂನು ನರಕನ
ಮಗನು ಪೌಂಡ್ರಕ ದಂತವಕ್ರನ ತನುಜರಿವರೆಲ್ಲ
ಹಗೆಯ ಮಾಡಿ ಮುರಾಂತಕನ ಕಾ
ಳಗದೊಳೆಲ್ಲರನಿಕ್ಕಿ ಪಟ್ಟವ
ಬಿಗಿಸಿಕೊಂಡವರಲ್ಲವೇ ಹೇಳೆಂದನಾ ಭೀಷ್ಮ ೪೯

ಜ್ಞಾನವೃದ್ಧರು ವಿಪ್ರರಲಿ ಸ
ನ್ಮಾನನೀಯರು ಶೌರ್ಯವೃದ್ಧರು
ಮಾನವೇಂದ್ರರೊಳಧಿಕವಿದು ಪೌರಾಣ ಸಿದ್ಧವಲೆ
ಜ್ಞಾನವೃದ್ಧನು ಕೃಷ್ಣನಾಹವ
ದೀನನೆ ಘನ ಶೌರ್ಯನೆಂಬುದ
ತಾನರಿಯನೇ ಚೈದ್ಯ ಭೂಪತಿಯೆಂದನಾ ಭೀಷ್ಮ ೫೦

ಏನ ಹೇಳ್ವುದು ಧರ್ಮತತ್ತ್ವನಿ
ಧಾನದಲಿ ಮುನಿ ಮುಖ್ಯರಿವರ
ಜ್ಞಾನಿಗಳು ಶಿಶುಪಾಲ ತತ್ತ್ವಜ್ಞಾನ ಪಂಡಿತನು
ಆ ನಿಶಾಟರು ಮೆಚ್ಚರಗ್ಗದ
ಭಾನುರಶ್ಮಿಯನಂಧಕಾರ
ಜ್ಞಾನನಿಷ್ಠರು ನಿಪುಣರೈಸಲೆಯೆಂದನಾ ಭೀಷ್ಮ ೫೧

ಈತ ಸಚರಾಚರದ ಗುರು ವಿ
ಖ್ಯಾತ ಋತ್ವಿಜನೀತನಾಚಾ
ರ್ಯಾತಿಶಯನೀತನು ಮಹಾಪ್ರಿಯನೀತ ನೃಪನೀತ
ಸ್ನಾತಕವ್ರತಿಯೀತನೀತನ
ಮಾತು ನಿನಗೆತ್ತಣದು ನವಖ
ದ್ಯೋತಕೆತ್ತಣ ಸೂರ್ಯ ಮಂಡಲವೆಂದನಾ ಭೀಷ್ಮ ೫೨

ಕರುಣಿಸೈ ಗಾಂಗೇಯ ಕೃಷ್ಣನ
ಚರಿತವನು ಶಿಶುಪಾಲ ಭೂಪನ
ಕರಣವೃತ್ತಿಯ ಕದಡು ತಿಳಿಯಲಿ ದೈವ ದೂರನಲೆ
ದುರುಳನಿವನ ದುರುಕ್ತಿಗಳ ಕೇ
ಳ್ದರಿಗೆ ಪ್ರಾಯಶ್ಚಿತ್ತವಿದು ವಿ
ಸ್ತರಿಸ ಬೇಹುದು ಸಕಲ ಜನಮತವೆಂದನಾ ಭೂಪ ೫೩

ಕೇಳು ಧರ್ಮಜ ಸಕಲ ಋಷಿಗಳು
ಕೇಳಿರೈ ನೆರೆದವನಿಪಾಲರು
ಕೇಳಿರೈ ನೆರೆದಖಿಳ ಜನ ಚಿತ್ತಾವಧಾನದಲಿ
ಶ್ರೀಲಲಿತಾಂಗಿಯ ವಲ್ಲಭನ ಸ್ತುತಿ
ಮೌಳಿಮೌಕ್ತಿಕಪಾದಪೀಠನ
ಲೀಲೆಯನು ಚಿತ್ತವಿಸಿ ಗದುಗಿನ ವೀರನರಯಣನ ೫೪

## ಒಂಬತ್ತನೆಯ ಸಂಧಿ

ಸೂ. ದೇವ ದೇವನನುಪನಿಷತ್ಕಾಂ
ತಾವಳಿಯ ಕಮನೀಯನನು ರಾ
ಜೀವಪೀಠನ ಪಿತನನಭಿವರ್ಣಿಸಿದನಾ ಭೀಷ್ಮ

ಕೇಳು ಜನಮೇಜಯ ಧರಿತ್ರೀ
ಪಾಲ ವಿರಚಿತ ಪದಯುಗ ಪ್ರ
ಕ್ಷಾಳನಾಚಮನೀಯ ತತ್ಪರಿಶುದ್ಧ ಭಾವದಲಿ
ಆ ಲಲಿತ ತಲ್ಪದ ಯಶೋದಾ
ಬಾಲಕಂಗಭಿನಮಿಸಿ ನಿಮಿಷ ನಿ
ಮೀಲಿತಾಕ್ಷನು ಕಂದೆರೆದು ಮುನಿಜನಕೆ ಕೈಮುಗಿದು ೧

ವರ ಋಷಿಗಳಾಜ್ಞೆಯಲಿ ವಿಶ್ವಂ
ಭರನ ವಿಷಯೀಕರಿಸಿ ರಾಜಾ
ಧ್ವರ ಸಮರ್ಥನ ಭವ ವಿನಾಶನ ಸುಪ್ರಯೋಜಕನ
ಅರಿವ ತೆರದಿಂದೆನ್ನ ಮತಿ ಗೋ
ಚರಿಸಿದುದ ಹೇಳುವೆನು ಕೃಷ್ಣನ
ಪರಮ ಲೀಲಾ ಲಲಿತ ಚರಿತವನೆಂದನಾ ಭೀಷ್ಮ ೨

ಘನ ರಜೋಗುಣದಲ್ಲಿ ಚತುರಾ
ನನ ತಮೋಗುಣದಲ್ಲಿ ಶಂಕರ
ನೆನಿಸಿ ಸತ್ತ್ವಗುಣಾನುಗತಿಯಲಿ ವಿಷ್ಣುವೆಂದೆನಿಸಿ
ಘನಜಗನ್ಮಯನಾಗಿ ಸರ್ವಾ
ತ್ಮನು ಮಹೇಶ್ವರನೆನಿಪನೀತನ
ನೆನಹನೀತನ ನಿಜವನರಿವ ಮಹಾತ್ಮರಾರೆಂದ ೩

ಈತನವ್ಯಕ್ತನು ವಿಚಾರಿಸ
ಲೀತನಮಲವ್ಯಕ್ತಲಿಂಗನ
ಜಾತನವ್ಯಯನಪ್ರಮೇಯನಗಮ್ಯನದ್ವಿತಯ
ಈತ ಚೈತನ್ಯಾತ್ಮ ನಿರ್ಗುಣ
ನೀತ ಗುಣ ಸಂಯೋಗಿ ಸರ್ವಗ
ನೀತ ಚಿನ್ಮಯನೀತನಾ ಹರಿಯೆಂದನಾ ಭೀಷ್ಮ ೪

ಜಲನಿಧಿಯ ಬುದ್ಬುದ ತರಂಗಾ
ವಳಿಗಳಾ ಜಲಧಿಯಲಿ ತೋರುವ
ವಳಿವವೀ ವೈಕುಂಠ ವಿಮಲಜ್ಞಾನ ಜಲಧಿಯಲಿ
ಹೊಳೆವುದಳಿವುದು ವಿಶ್ವವೀತನ
ಸುಳಿವು ತೋರುವದಿಲ್ಲ ಮಾಯಾ
ಲಲನೆಯಿಕ್ಕಿದ ಮದ್ದು ಜೀವರಿಗೆಂದನಾ ಭೀಷ್ಮ ೫

ಭೂತ ಜನನಸ್ಥಿತಿಗೆ ಕಾರಣ
ನೀತನೀತಂಗಿಲ್ಲ ಕಾರಣ
ನೀತ ಜಾಗ್ರತ್ ಸ್ವಪ್ನ ಸುಪ್ತಿಗಳೆಂಬವಸ್ಥೆಗಳ
ಆ ತುರಿಯ ನಾತುರಿಯ ತುರಿಯಾ
ತೀತ ಲಕ್ಷಣ ನಿತ್ಯನಿರ್ಮಳ
ನೀತನಮಳವ್ಯಕ್ತಿ ಚಿನ್ಮಯನೆಂದನಾ ಭೀಷ್ಮ ೬

ಭ್ರಾಮಕದೊಳೀ ವಿಷಯ ಸೌಖ್ಯದ
ರಾಮಣೀಯಕದೊಳಗೆ ಮುಳುಗಿ ನಿ
ರಾಮಯನು ಪರತತ್ವಮಯನಚ್ಯುತನು ತಾನಾದ
ಈ ಮುಕುಂದನ ಮರೆದು ಕರ್ಮವಿ
ರಾಮದಲಿ ಕುದಿದವರು ಮಾಯಾ
ಕಾಮಿನಿಯ ಕೈ ಮಸಕದಲಿ ಮರುಳಾಗದಿರರೆಂದ ೭

ಇರದೆ ತಿಲದಲಿ ತೈಲ ಕಾಷ್ಠದೊ
ಳಿರವ ತಹರೇ ಹುತವಹನನೇ
ನರಿಯಬಾರದೆ ವಿಷ್ಣು ಚೈತನ್ಯಾತ್ಮನೆಂಬುದನು
ಹೊರಗೊಳಗೆ ಸಂಸ್ಥೂಲ ಸೂಕ್ಷ್ಮೋ
ತ್ಕರದೊಳಗೆ ಹರಿಯುಳಿಯೆ ವಿಶ್ವವ
ಹೊರೆವ ಹೊಂದಿಪರುಂಟೆ ಹೊರಬಿಗರೆಂದನಾ ಭೀಷ್ಮ ೮

ಹೂಹೆಗಳು ಹೊಯ್ದಾಡವೇ ನಿ
ರ್ವಾಹ ಸೂತ್ರದ ಕುಣಿಕೆಗಾರನ
ಗಾಹಿನಲಿ ತಜ್ಜಗದಜೀವದ ಸುಕೃತ ದುಷ್ಕೃತವ
ಓಹರಿಕೆಯಲಿ ತಂದು ಭವದಲಿ
ಸೋಹಿಸುಳಿಸುವನೀ ಚರಾಚರ
ಜೋಹವಿದು ನಿಜಲೀಲೆಯಿಾ ಹರಿಗೆಂದನಾ ಭೀಷ್ಮ ೯

ಈತನಚ್ಯುತನಲ್ಲೆನಿಸಿ ವಿಪ
ರೀತ ಮಿಥ್ಯಾಜ್ಞಾನ ತೋರಿದ
ಡೀತನಲಿ ತಪ್ಪೇನು ನಿಜ ಪರಮಾತ್ಮನೆನಿಸಿದರೆ
ಭೀತನೊಬ್ಬನು ಕನಸಿನಲಿ ತ
ನ್ನಾ ತಲೆಯ ತಾನರಿದು ಪಿಡಿದುದ
ನೇತರಿಂದಲಿ ಕಂಡನೈ ಶಿಶುಪಾಲ ಕೇಳೆಂದ ೧೦

ಭ್ರಮೆಯ್ಲೆ ಭುಜಗನೆ ರಜ್ಜುವೊ ಜಂ
ಗಮವೊ ಕಲ್ಪಿತ ಪುರುಷನಾತ್ಮನೊ
ವಿಮಲ ಸಂವಿದ್ರೂಪನಾತ್ಮನೊ ಜೀವ ಪರಮನಲಿ
ಕಮಲನಾಭನೆ ನಿಜವೊ ವಿಶ್ವ
ಕ್ರಮವೆ ನಿಜವೊ ಚೈದ್ಯ ಭೂಪತಿ
ಕುಮತಿ ಕಪಿಗೇಕಮಲ ಮಾಣಿಕವೆಂದನಾ ಭೀಷ್ಮ ೧೧

ತೋರುವೀ ಮಹದಾದಿ ಭೂತದೊ
ಳೋರು ಗುಡಿಸದೆ ನಿಂದ ಮುವ್ವ
ತ್ತಾರು ತತ್ವದೊಳೀತನೇ ಮಣಿಗಣದ ಗುಣದಂತೆ
ತೋರುವೀ ತೋರಿಕೆಯ ತುಷವನು
ತೂರಿದರೆ ಮೇಣ್ ವಿಶ್ವಮುಖದಲಿ
ತೋರಿ ತೋರದೆ ಮೆರೆವನೀ ಹರಿಯೆಂದನಾ ಭೀಷ್ಮ ೧೨

ಸ್ವೇದಜಾಂಡೋದ್ಭಿಜ ಜರಾಯುಜ
ಭೇದವಾದ ಚತುರ್ವಿಧದ ಭೂ
ತೋದರನ ತದ್ಭೂತಮಯ ತದ್ಭೂತ ಭಾವನನ
ವಾದಗೊಳ್ಳದ ಬಹಳ ವಸ್ತುವ
ನೀ ದುರಾತ್ಮಕನೆತ್ತ ಬಲ್ಲನು
ಬೀದಿಯಲಿ ಬಿದ್ದವನು ಬೊಮ್ಮವಿದೆಂದನಾ ಭೀಷ್ಮ ೧೩

ನೆಳಲು ಜಲದಲಿ ನಡುಗಲಿನ ಮಂ
ಡಲಕೆ ಕಂಪವೆ ಧೂಮಶಿಖಿ ಕು
ಪ್ಪಳಿಸಿದರೆ ಕಂದುವದೆ ನಭ ಕೆಂಧೂಳಿಯೊಡೆಮುರಿದು
ಸುಳಿದರನಿಲನ ತೊಳೆವರೇ ನರ
ರೊಳಗೆ ನರ ರೂಪದಲಿ ಜನಿಸಿದ
ರೊಳಗು ಢಿಳ್ಳವೆ ಪರಮ ಸುಖನಿಧಿಗೆಂದನಾ ಭೀಷ್ಮ ೧೪

ಗುಣಮಯದ ಗರುವಾಯಿಯಲಿ ಝೋ
ವಣೆಗೆಗೊಂಬನು ಭೂತದಿಂದ್ರಿಯ
ಗಣದೊಡನೆ ನಿಜ ಪೌರುಷದಲೊದಗಿದ ಪವಾಡಿಗಳ
ಗುಣವ ಝಾಡಿಸಿದರೆ ಸಮಷ್ಟಿಯು
ಹಣಿತದಲಿ ಮುರಿದಿದಿರನಗಲಕೆ
ಕುಣಿವ ಚೌಪಟ ಬೊಮ್ಮ ಗಜವಿದನರಿವರಾರೆಂದ ೧೫

ಕೊಲೆಯ ಕವತೆಯ ಕನಸಿನಲಿ ಕಳ
ವಳಿಸಿದರೆ ದಿಟವೇ ಮನೋರಥ
ಫಲವನನುಭವಿಸಿದರೆಯನುಭವ ಸಿದ್ಧವೇ ತನಗೆ
ಹೊಳೆವ ಜಗದಲಿ ಹೊಳೆದು ತನ್ನೊಳ
ಗಳಿದು ತಾನಾಗುಳಿದು ಬೊಮ್ಮಕೆ
ಹಳಿವು ಹೊರುವುದೆ ನಿತ್ಯಶುದ್ಧನೊಳೆಂದನಾ ಭೀಷ್ಮ ೧೬

ನೋಟ ಸುತ್ತಲು ಬೇಹುದೇ ಹರಿ
ದಾಟವಗಲಕೆ ಬಳಕೆಯಲಿ ಮಾ
ತಾಟ ಸುಳಿವಿನೊಳಗ್ಗಳವ ಹಿಡಿಬಂಧಿ ಹರಹಿನಲಿ
ಬೇಟದಲಿ ಮೂವಣ್ಣದಾಬೆಯ
ಕೂಟದಲಿ ಕುರುಹಾಗಿ ಮಿಗೆ ನಿ
ರ್ಲೋಟಿಸುವ ನಿಜ ದಿಟ್ಟ ಬೊಮ್ಮವಿದೆಂದನಾ ಭೀಷ್ಮ ೧೭

ಭೂತ ಭವ್ಯ ಭವತ್ಪ್ರಧಾನ
ಖ್ಯಾತ ತತ್ವಪ್ರಕೃತಿ ಪೂರುಷ
ನೀತ ಸಚ್ಚಿನ್ಮಾತ್ರನೀತನು ಪರಶಿವಾತ್ಮಕನು
ಸೋತ ನುಡಿ ಮನದೊಡನೆ ಮರಳಿದ
ಡಾತ ಸತ್ಯಜ್ಞಾನಮಯ ನಿ
ರ್ಧೂತ ಮಾಯಾತೀತನೀ ಹರಿಯೆಂದನಾ ಭೀಷ್ಮ ೧೮

ಯಜ್ಞದಧಿಪತಿಯಿತನೀತನು
ಯಜ್ಞಪುರುಷನು ಸ್ರುಕ್ ಸ್ರುವಾದೀ
ಯಜ್ಞ ಸಾಧನನೀತನೀತನು ಮಂತ್ರ ಕಾಲಾತ್ಮ
ಯಜ್ಞವೀತನು ಕರ್ಮವೀತನು
ಯಜ್ಞದಲಿ ಯಜಮಾನನೀತನು
ಯಜ್ಞಫಲವೀ ದೇವಕೀ ಸುತನೆಂದನಾ ಭೀಷ್ಮ ೧೯

ದೆಸೆ ಪರಿಚ್ಛೇದಿಸದ ನುಡಿ ಹವ
ಣಿಸದ ಕಲ್ಪ ಸಹಸ್ರ ಕೋಟಿಯೊ
ಳಸಮಸೆಯ ಮಾಡದ ಮಹತ್ವದೊಳುರು ಮಹತ್ವದಲಿ
ಎಸೆವನಣುವಿಂಗಣುವೆನಿಸಿ ನಿ
ರ್ಮಿಸಿ ವಿಭಾಡಿಸಿ ಬರವಳಿದು ಹೆ
ಚ್ಚಿಸಿ ಮುರಿದನೀ ಜಗವನೀ ಹರಿಯೆಂದನಾ ಭೀಷ್ಮ ೨೦

ಒಂದೆನಿಸಿ ತೋರುವನು ಎರಡರೊ
ಳೊಂದಿ ಮೆರೆವನು ಮೂರು ನೆಲೆಯಲಿ
ನಿಂದು ನಾಲ್ಕನು ಬಳಸಿ ವಿಭುವಾಗೈದು ಠಾಣದಲಿ
ಹಿಂದೆ ಮುಂದೆಡಬಲದ ಬಹು ವಿಧ
ದಿಂದ ಮಾಯಾ ಗುಪ್ತನಾಗಿ ಮು
ಕುಂದ ತೋರುವನೀತನಂತೆಯನರಿವರಾರೆಂದ ೨೧

ದ್ವಿಜರು ಮುಖದಲಿ ಭೂಪರೀತನ
ಭುಜದಲಾದರು ನಿಖಿಳ ವೈಶ್ಯ
ವ್ರಜ ಘನೋರುಗಳಿಂದ ಶೂದ್ರರು ಪಾದಪದ್ಮದಲಿ
ದ್ವಿಜಪತಿಸ್ವಾಂತದಲಿ ವರವಾ
ರಿಜಸಖನು ಕಣ್ಣಿನಲಿ ವದನಾಂ
ಬುಜಲಿಂದ್ರಾದಿಗಳು ಜನಿಸಿದರೆಂದನಾ ಭೀಷ್ಮ ೨೨

ಗಗನವೀತನ ನಾಭಿ ದಶದಿ
ಕ್ಕುಗಳು ಕಿವಿ ಫಣಿಲೋಕ ವಿಮಳಾಂ
ಘ್ರಿಗಳು ಧ್ರುವನಿಂ ಮೇಲು ಭಾಗ ಮುರಾಂತಕನ ಮುಕುಟ
ಗಗನ ಮಣಿ ಶಂಕರ ವಿರಿಂಚಾ
ದಿಗಳು ದೇವನ ರೋಮ ಕೂಪದೊ
ಳಗಣಿತಾಮರ ನಿಕರವಿಹುದಿದನರಿವರಾರೆಂದ ೨೩

ಪ್ರಳಯದಲಿ ಧರೆ ಕರಗುವುದು ಜಲ
ದೊಳಗೆ ತಜ್ಜಲವಡಗುವುದು ಶಿಖಿ
ಯೊಳಗೆ ತತ್ಪಾವಕನು ಪವನನೊಳಾತನಭ್ರದಲಿ
ಬಳಿಕ ಪಂಸತ್ವದಲಿ ಗಗನವೆ
ನಿಲುಗು ಹಮ್ಮು ಮಹತ್ವದಲಿ ಮಹ
ದಳಿವು ಮಾಯೆಯೊಳಾಕೆಯುಡಗುವಳೀತನಂಘ್ರಿಯಲಿ ೨೪

ಧರಣಿ ತಾನೈವತ್ತು ಕೋಟಿಯು
ಹರಹು ಭೂಮಿಂಗೆ ಹತ್ತು ಮಡಿ ಖ
ರ್ಪರ ಕಟಾಹವದಕ್ಕೆ ದಶಗುಣ ದಶ ಗುಣೋತ್ತರದ
ಪರಿವಿಡಿಯಲುದಕಾಗ್ನಿ ರವಿ ಪು
ಷ್ಕರದ ಹಮ್ಮು ಮಹತ್ವ ಸಪ್ತಾ
ವರಣವೀ ಬ್ರಹ್ಮಾಂಡವೀತನ ರೋಮ ರೋಮದಲಿ ೨೫

ದೇವರಂಗೋಪಾಂಗದಲಿ ವೇ
ದಾವಳಿಗಳಂಚ್ಛ್ವಾಸದಲಿ ತೀ
ರ್ಥಾವಳಿಗಳಂಘ್ರಿ ದ್ವಯಾಂಬುಜ ಮಾಕರಂದದಲಿ
ಪಾವನಕೆ ಪಾವನನು ಜೀವರ
ಜೀವನನು ಮೃತ್ಯುವಿಗೆ ಮೃತ್ಯುವಿ
ದಾವ ಲೆಕ್ಕದೊಳೀತನಹನೆಂದರಿವರಾರೆಂದ ೨೬

ವಿಶ್ವಶಿಲ್ಪದ ಕುಶಲ ಹಸ್ತನು
ವಿಶ್ವರಕ್ಷೆಯ ಮಂತ್ರವಾದಿಯು
ವಿಶ್ವ ಸಮಿಧೆಗಳಗ್ನಿ ಕಾರ್ಯದ ಬ್ರಹ್ಮಚಾರಿ ವಟು
ವಿಶ್ವನಾಟಕ ಸೂತ್ರಧಾರನು
ವಿಶ್ವ ವಿಸ್ಮಯದೈಂದ್ರ ಜಾಲಕ
ವಿಶ್ವದಂತಸ್ಸ್ಯೂತ ಚೇತನನೀತ ನೋಡೆಂದ ೨೭

ಇರಲಿರಲು ಕಲ್ಪಾವಸಾನಕೆ
ಬಿರಿದುದೀ ಬ್ರಹ್ಮಾಂಡ ಬಹಿರಾ
ವರಣ ಜಲವೀ ಜಲದೊಳೊಂದಾಯ್ತೇಕ ರೂಪಾಗಿ
ಹರಿ ವಿನೋದದಲೊಬ್ಬನೇ ಸಂ
ಚರಿಸುತಿದ್ದನು ಬಳಿಕ ಕಾಲಾಂ
ತರದೊಳಗೆ ಮಧು ಕೈಟಭರು ಜನಿಸಿದರು ಕರ್ಣದಲಿ ೨೮

ಲೀಲೆಯಲಿ ಬಳಿಕವದಿರೊಡನೆ ವಿ
ತಾಳಿಸಿತು ಮನ ಕಾದಿದರು ಬಲು
ಕಾಳಗವನವರಿತ್ತ ವರದಲಿ ಹಿಡಿದು ದಾನವರ
ಸೀಳಿ ಬಿಸುಟನು ಖಳರ ಮೇದ
ಸ್ನಾಳಿ ಮುಳುಗಿತು ಜಲದೊಳದರಿಂ
ಮೇಲುವೆಸರಾಯ್ತಿಳೆಗೆ ಮೇದಿನಿಯೆಂಬ ನಾಮದಲಿ ೨೯

ಆ ಮಧುವನಾ ಕೈಟಭನ ಮುರಿ
ದೀ ಮಹಾತ್ಮಕನೊಡನೆ ವಾದಿಸು
ವೀ ಮರುಳನೇನೆಂಬೆನೈ ಶಿಶುಪಾಲ ಬಾಲಕನ
ಕಾಮರಿಪು ಕಲ್ಪಾಂತ ವಹ್ನಿ
ವ್ಯೋಮರೂಪನುದಾರ ಸಗುಣ ಸ
ನಾಮ ಚಿನ್ಮಯನೀತನೀತನನರಿವರಾರೆಂದ ೩೦

ಶ್ರುತಿ ಪುರಾಣ ಸಮಸ್ತ ಶಾಸ್ತ್ರ
ಸ್ಮೃತಿ ವಿಭಾಗಾರ್ಥಕೆ ವಸಿಷ್ಠನ
ಸುತ ಸುತನಲೀ ವಿಮಲ ವೇದವ್ಯಾಸ ನಾಮದಲಿ
ಪ್ರತಿಜನೋತ್ತಮನುದಿಸಿದನು ಯದು
ಪತಿ ಕಣಾ ತಾನೀತನೀ ದು
ರ್ಮತಿಗೆ ಗಮ್ಯವೆ ಗರುವ ದೈವದ ಗಾಢಗತಿಯೆಂದ ೩೧

ಮನುವರಿವನಜ ಬಲ್ಲನೀಶ್ವರ
ನೆನೆವ ನಾರದ ಮುನಿಪ ವರ್ಣಿಪ
ಮನದಿ ಸನಕ ಸನತ್ಸುಜಾತಾದ್ಯರಿಗಿದೇ ವ್ಯಸನ
ಮುನಿಗಳಿಗೆ ಮುಕ್ತರಿಗೆ ಕರ್ಮದ
ಕಣೆಗಳಿಗೆ ಕೋವಿದರಿಗಿದೆ ಜೀ
ವನವಿದೇ ಗತಿ ಪರಮ ವೈಷ್ಣವ ತತ್ವವಿದೆಯೆಂದ ೩೨

ವೇದಕೀಸುಬ್ಬಸ ವಿರಿಂಚಿ ಸು
ರಾದಿಗಳು ಕಿಗ್ಗಡಲಲಿರೆ ಸನ
ಕಾದಿ ಮುನಿಗಳು ತಡಿಯಲಿದ್ದರು ತೆರೆಯ ಹೊಯ್ಲಿನಲಿ
ವಾದಿಗಳ ದುಸ್ತರ್ಕ ನಸಿದುದು
ನಾದದಲಿ ದುಸ್ತರ ಮುರಾರಿ ಮ
ಹೋದಧಿಯನೀ ಬಣಗು ದಾನವ ಭಂಗಿಸುವನೆಂದ ೩೩

ಅಕಟ ನಿರ್ಗುಣ ತತ್ವವಿದೆ ನಾ
ಟಕದ ಬಹುರೂಪಿನಲಿ ವಿಶ್ವಾ
ತ್ಮಕ ಪರಾನಂದೈಕರಸವಿದೆ ಮನೆಯ ಕೇರಿಯಲಿ
ಪ್ರಕಟ ಮಾಯಾ ಗುಪ್ತ ಪರಮಾ
ತ್ಮಕ ಮಹಾನಿಧಿ ಸಭೆಯೊಳಿರುತಿರೆ
ವಿಕಳ ಮತಿಗಳು ವೀಚುಗೆಡುವೆರು ಶಿವ ಶಿವಾಯೆಂದ ೩೪

ನಿರವಯುವ ತತ್ವೈಕ ರಸವಿದೆ
ನರ ಮನೋಹರ ರೂಪಿನಲಿ ವ್ಯವ
ಹರಣ ಸಂಜ್ಞಾರಹಿತವಿದೆ ಕೃಷ್ಣಾಭಿಧಾನದಲಿ
ಭರಿತ ಬಹಳ ಬ್ರಹ್ಮವಿಲ್ಲಿಯೆ
ಧರಣಿಯಲಿ ಸಂಚರಿಸುತಿದೆ ಮುರ
ಹರನ ತತ್ವರಹಸ್ಯ ಮುದ್ರೆಯನರಿವರಾರೆಂದ ೩೫

ಏಕೆ ಕನ್ನಡಿ ಕುರುಡರಿಗೆ ತಾ
ನೇಕೆ ಸಾಳಗ ಶುದ್ಧ ಬಧಿರರಿ
ಗೇಕೆ ಮೂರ್ಖ ಸಮಾಜದಲಿ ಸಾಹಿತ್ಯ ಸನ್ನಾಹ
ಏಕೆ ಖಳರಿಗೆ ನಯ ವಿಧಾನ
ವ್ಯಾಕರಣ ಪಾಂಡಿತ್ಯ ಫಡ ಲೋ
ಕೈಕ ಪಾತಕನೆಂದು ನುಡಿದನು ಜರೆದು ದಾನವನ ೩೬

ಹೊಗಳಿ ದಣಿಯವು ವೇದತತಿ ಕೈ
ಮುಗಿದು ದಣಿಯರು ಕಮಲಭವ ಭವ
ರೊಗುಮಿಗೆಯ ಮಾನಸ ಸಮಾಧಿಯ ಸಾರ ಸತ್ವದಲಿ
ಬಗೆದು ದಣಿಯರು ಯೋಗಿಗಳು ಕೈ
ಮುಗುಚಿ ದಣಿಯರು ಕರ್ಮಿಗಳು ಮೂ
ಜಗವ ದೈವದ ದೈವ ಕೃಷ್ಣನ ಬೈವನಿವನೆಂದ ೩೭

ಈತ ಕಾಣಿರೆ ಘನ ಚರಾಚರ
ಚೇತನತ್ವದಿ ವಿಹಿತ ಬೀಜ
ವ್ರಾತವನು ತುಂಬಿದನು ಪಡಗಿನೊಳೌಕಿ ಬಾಲ್ಯದಲಿ
ಆತ ತಮನೆಂಬಸುರರನನು ಕರ
ಘಾತಿಯಿಂದವೆ ಕೆಡಹಿ ವೇದವ
ನೀತ ತಂದನು ಮತ್ಸ್ಯರೂಪಿನೊಳೆಂದನಾ ಭೀಷ್ಮ ೩೮

ಖೂಳ ನಾಯ್ಗಳು ಬಲ್ಲರೇ ಶಿಶು
ಪಾಲಕಾದಿ ದೊಕಾರರೀ ಗೋ
ಪಾಲ ಕಾಣಿರೆ ಕೂರ್ಮವೇಷವ ಧರಿಸಿ ಮೇದಿನಿಯ
ಸಾಲ ಹೆದೆಯಲಿ ಹೊತ್ತ ಪನ್ನಗ
ಪಾಲಕನನಾ ಮಂದರದ ಕಡ
ಗೋಲನಾಂತ ಮಹಾತ್ಮನೀತನನರಿವರಾರೆಂದ ೩೯

ಇವನ ಪಾಡೇ ಮುನ್ನ ಕೃತಯುಗ
ದವರೊಳಧಿಕ ಹಿರಣ್ಯಲೋಚನ
ನವನಿಯನು ಕೊಂಡೋಡಿ ಹೊಕ್ಕನು ಘನ ರಸಾತಳವ
ಅವನ ಬೆಂಬತ್ತಿದನು ಯಜ್ಞ
ಪ್ರವರ ದೇಹನು ವೇದಮಯ ನಿ
ರ್ಭವ ವಿಮೋಹನ ಘನ ವರಾಹನೆ ಕೃಷ್ಣ ತಾನೆಂದ ೪೦

ತೂಳಿದನು ದಾಡೆಯಲಿ ದೈತ್ಯನ
ಸೀಳಿದನು ದಿಕ್ಕರಿ ಫಣೀಂದ್ರರ
ಮೇಲೆ ಧರಣಿಯ ನಿಲಿಸಿದನು ಸಂತವಿಸಿದನು ಜಗವ
ಫೇಳಲಜ ರುದ್ರಾಮರೇಂದ್ರರ
ತಾಳಿಗೆಗಳೊಣಗಿದವು ಭಂಗಿ ಭ
ಡಾಳಿಸಿತಲಾ ಚೈದ್ಯ ಭೂಪತಿಗೆಂದನಾ ಭೀಷ್ಮ ೪೧

ಆ ಹಿರಣ್ಯಾಕ್ಷನ ಸಹೋದರ
ನೀ ಹರಿಯನವಗಡಿಸಿ ದೈವ
ದ್ರೋಹಿ ಬಹುವಿಧ ವ್ಯಥೆಗಳಲಿ ಬೇಸರಿಸಿದನು ಮಗನ
ಆಹವದಲಚ್ಯುತ ಮುಕುಂದ ಮ
ಹಾಹಿತಲ್ಪ ಮಹೇಂದ್ರ ವಂದ್ಯ
ತ್ರಾಹಿಯೆಂದನವರತ ತುತಿಸಿದನಂದು ಪ್ರಹ್ಲಾದ ೪೨

ಕಾದುದೀತನ ನಾಮವಾ ಪ್ರ
ಹ್ಲಾದನಾಸರು ಬೇಸರನು ಬಳಿ
ಕೀ ದಯಾಂಬುಧಿ ದನುಜಪತಿ ದಿಟ್ಟಿಸಿದ ಕಂಬದಲಿ
ಆದುದಾವಿರ್ಭಾವ ಸಿಡಿಲಿನ
ಸೋದರದ ಕಣ್ಣುಗಳ ಭಾಳದ
ಬೀದಿಗಿಕ್ಕಿನ ರೌದ್ರದಲಿ ನರಸಿಂಹ ರೂಪಾಗಿ ೪೩

ಉಗುರೊಳಸುರನ ಕರುಳ ದಂಡೆಯ
ನುಗಿದು ಕೊರಳಲಿ ಹಾಯ್ಕಿ ದೈತ್ಯನ
ಮಗನ ಪತಿಕರಿಸಿದನು ತತ್ಕ್ರೋಧಾಗ್ನಿ ಪಲ್ಲವಿಸಿ
ಭುಗಿ ಭುಗಿಲ್ ಭುಗಿಲೆಂದು ಕಬ್ಬೊಗೆ
ನೆಗೆಯಲುರಿ ಹೊಡೆದಬುಜಜಾಂಡದ
ಬಗರಗೆಯ ಭೇದಿಸಿತು ಈತನ ಕೆಣಕಬೇಡೆಂದ ೪೪

ತ್ರೇತೆಯಲಿ ಬಲಿರಾಜ್ಯ ಭುವನ
ಖ್ಯಾತವಾಯ್ತು ತದಶ್ವಮೇಧದೊ
ಳೀತ ವಾಮನನಾಗಿ ಯಾಚಿಸಿದನು ಪದತ್ರಯುವ
ಭೂತಳವನಲ್ಲಿಂದ ಬಳಿಕ
ಪ್ರೀತಿಯಲಿ ಕಮಲಜ ಕಟಾಹೋ
ದ್ಘಾತ ಚರಣದೊಳಳೆಯಲಾದುದು ಧರಣಿ ಪದಯುಗಕೆ ೪೫

ನೆರೆಯದೀ ನೆಲ ನೆಗಹಿದಂಘ್ರಿಗೆ
ಮುರಿದುದಬುಜ ಭವಾಂಡ ಖರ್ಪರ
ದೊರತೆ ಬಹಿರಾವರಣ ಜಲ ಗಂಗಾಭಿಧಾನದಲಿ
ಎರಗಿತೀ ಗೋವಿಂದನಾರಂ
ದರಿಯೆಲಾ ಹರಿಯೊಡನೆ ಜಂಬುಕ
ನೊರಲಿದರೆ ನಾನೇನ ಹೇಳುವೆನೆಂದನಾ ಭೀಷ್ಮ ೪೬

ರಾಯ ಕೇಳ್ಳೆ ವಿಮಲ ದತ್ತಾ
ತ್ರೇಯವೆಸರಲಿ ಧರ್ಮವನು ಪ್ರ
ರಾಯದಲಿ ಪಲ್ಲವಿಸಿದನು ಹೈಹಯನ ರಾಜ್ಯದಲಿ
ಬಾಯಿಬಡಿಕರು ಬಗುಳಿದರೆ ಹರಿ
ಯಾಯತಿಕೆ ಪಾಸಟಿಯೆ ನಿಗಮದ
ಬಾಯ ಬೀಯಗವೀ ಮುಕುಂದನನರಿವರಾರೆಂದ ೪೭

ಮಿಡುಕಿದರೆ ರಾವಣನ ಸೆರೆಯಲಿ
ಕೆಡಹಿದನಲಾ ಕಾರ್ತವೀರ್ಯನ
ಕಡುಹನಾನುವ ದಿಟ್ಟರುಂಟೇ ದೇವ ದೈತ್ಯರಲಿ
ತೊಡಕಿದರೆ ಬಳಿಕಾ ನೃಪನ ತೋ
ಳಡವಿಗಡಿದು ಮಹೀಶ ವಂಶವ
ತಡೆಗಡಿದನೀ ಕೊಡಲಿಕಾರನ ತೋಟಿ ಬೇಡೆಂದ ೪೮

ಖರನ ತ್ರಿಶಿರನ ದೂಷಣಾದ್ಯರ
ಶಿರವ ಚೆಂಡಾಡಿದನು ಘನ ಸಾ
ಗರವ ಕಟ್ಟಿದ ಕಟ್ಟೆಯಿದೆಲಾ ಕಾಣದೇ ಲೋಕ
ಹರಿಬವೋ ಮೇಣ್ ಪೌರುಷವೊ ಮ
ತ್ಸರವೊ ಮೇಣ್ ಮಾರಾಂಕವೋ ಹುಲು
ಮೊರಡಿ ಸೆಣಸುವುದೇ ಸುರಾದ್ರಿಯೊಳೆಂದನಾ ಭೀಷ್ಮ ೪೯

ಅವುದಂತರವಿವಗೆ ಹಿಂದಣ
ರಾವಣನೊಳವಗಡಿಸಿಯಾತನ
ಮಾವನನು ಮುರಿದವನ ತಂಗಿಯ ಮೂಗ ಭಂಗಿಸಿದ
ದೇವ ದಲ್ಲಣನಿಂದ್ರವಿಜಯ ಸು
ರಾವಳಿಯ ದೆಸೆಪಟರೆನಿಪ ದೈ
ತ್ಯಾವಳಿಯ ಕಡಿ ಖಂಡದೊಟ್ಟಿಲ ರಾಮ ನೋಡೆಂದ ೫೦

ಹರ ಗಿರಿಯನೊಡಯೆತ್ತಿದುಬ್ಬಟೆ
ಯರಸಲಾ ದಶವದನನಾತನ
ಶಿರದುಪಾರವನಿಟ್ಟು ದಣಿಸನೆ ದೆಸೆಯ ದೇವಿಯರ
ಬರಡನಿವನೀ ದೈವದೊಡನು
ಬ್ಬರಿಸಿದೊಡೆಯಿಖಾ ಇಬ್ಬರಭ್ಯಂ
ತರವನಿವರರಿಯರೆ ಮುನೀಂದ್ರರು ಶಿವ ಶಿವಾಯೆಂದ ೫೧

, ಹಿಂದೆ ಕೃತಯುಗ ಸಮಯದಲಿ ಸುರ
ವೃಂದದೊಡನಸುರರಿಗೆ ಕೊಂಡೆಯ
ದಿಂದ ಮುಸೆಮುಸೆದಂಕವಾಯಿತು ಖಳನ ಕಾಳಗಕೆ
ಬಂದುದಾ ತೆತ್ತೀಸ ಕೋಟಿಗ
ಳೊಂದು ದೆಸೆ ಜಂಭಾದಿ ದಾನವ
ರೊಂದು ದೆಸೆ ಹೊಯ್ಯಾಡಿತೇನೆಂಬೆನು ಮಹಾದ್ಭುತವ ೫೨

ಅವರೊಳಗ್ಗದ ಕಾಲನೇಮಿ
ಪ್ರವರನಮರ ವಿಭಾಡ ವರ ದಾ
ನವ ಶಿರೋಮಣಿ ದಿವಿಜ ನಾಯಕ ಶರಭಭೇರುಂಡ
ಬವರದಲಿ ಶಕ್ರಾಗ್ನಿ ಯಮ ಶಶಿ
ರವಿ ಕುಬೇರ ಸಮೀರಣಾದ್ಯರ
ಸವರಿ ಸಪ್ತಾಂಗವನು ಕೊಂಡನು ಮೇಘ ವಾಹನನ ೫೩

ರಣದೊಳೋಡಿದ ಸುರನಿಕರ ಘ
ಲ್ಲಣೆಯನಿಕ್ಕಿತು ಹರಿಗೆ ಕರೆ ಹ
ಲ್ಲಣಿಸು ಗರುಡನನೆಂದು ಹೊರವಂಟನು ಮುರಧ್ವಂಸಿ
ಕೆಣಕಿದನು ದಾನವನನಾಗಳೆ
ಹಣಿದವನ ಹೊಯ್ದು ಮಳ ಚಕ್ರದ
ಗೊಣೆಯದಲಿ ಮೆರಸಿದನು ತಲೆಯನು ದಿವಿಜ ನಗರಿಯಲಿ ೫೪

ಆ ಮಹಾಸುರ ಕಾಲನೇಮಿ ಸ
ನಾಮನೀ ಕಾಲದಲಿ ಯಾದವ
ಭೂಮಿಯಲಿ ಜನಿಸಿದನಲೇ ಕಂಸಾಭಿಧಾನದಲಿ
ಈ ಮರುಳು ಹವಣೇ ತದೀಯ
ಸ್ತೋಮ ಧೇನುಕ ಕೇಶಿ ವತ್ಸ ತೃ
ಣಾಮಯರು ಹಲರಿಹರು ದುಷ್ಪರಿವಾರ ಕಂಸನಲಿ ೫೫

ಸೇದಿದನು ಪೂತನಿಯಸುವನವ
ಳಾದರಿಸಿ ಮೊಲೆವಾಲನೂಡಿಸೆ
ಪಾದತಳ ಸೋಂಕಿನಲಿ ತೊಟ್ಟಿಲ ಬಂಡಿ ನುಗ್ಗಾಯ್ತು
ಸೇದಿ ಕಟ್ಟಿದ್ದೊರಳನೆಳೆದರೆ
ಬೀದಿಯಲಿ ಮರ ಮುರಿದುದೀ ಕರು
ಗಾದವನ ಕೈಯಿಂದ ಮಡಿದುದು ಕಂಸ ಪರಿವಾರ ೫೬

ಕೇಶಿ ಧೇನುಕ ವತ್ಸ ಲಂಬ ಬ
ಕಾಸುರನು ತೃಣವರ್ತನಘನೆಂ
ಬಾ ಸಮರ್ಥರ ಸೀಳಿ ಬಿಸುಟನು ಬಾಲಕೇಳಿಯಲಿ
ಗಾಸಿಯಾದುದು ದಂತಿ ಮಲ್ಲರ
ದೇಸು ಘನ ಮಾವನನು ಮರ್ದಿಸಿ
ಮಿಾಸಲಳಿಯದ ದಿವಿಜ ಕನ್ನೆಯರೊಡನೆ ಜೋಡಿಸಿದ ೫೭

ಇವನ ಹವಣೇ ತ್ರಿಪುರಹತ ದಾ
ನವರು ಕುಂಭ ನಿಕುಂಭವೆಸರಿಂ
ದವನಿಯಲಿ ಜನಿಸಿದರು ನಭದಲಿ ರಚಿಸಿದರು ಪುರವ
ಅವದಿರುರೆಯಾಳಿದರು ನಿರ್ಜರ
ನಿವಹವನು ಬಳಿಕವರನೊಂದೇ
ಬವರದಲಿ ಕೆಡಹಿದನು ಕೃಷ್ಣನನರಿವರಾರೆಂದ ೫೮

ಮುರನ ನರಕನ ಹಂಸ ಡಿಬಿಕರ
ವರ ಸೃಗಾಲನ ದಂತವಕ್ರನ
ದುರುಳ ಪೌಂಡ್ರಕ ಪಂಚಜನ ಶುಂಭನ ನಿಶುಂಭಕನ
ಅರಿ ಹಯಗ್ರೀವಕನ ಸಾಲ್ವನ
ನೊರಸಿದನಲಾ ನಿನ್ನ ಪಾಡಿನ
ದುರುಳರೇ ದೈತ್ಯೇಂದ್ರರೀತನ ಕೆಣಕಿದವರೆಂದ ೫೯

ತೋಳು ಸಾವಿರವಮರಪತಿ ಕೆರು
ವಾಳಿನೊಕ್ಕಲು ಕಂತುಕದ ವೈ
ಹಾಳಿ ಪಾತಾಳದಲಿ ಸಪ್ತದ್ವೀಪ ಮನೆ ತನಗೆ
ಶೂಲಿ ಬಾಗಿಲ ಕಾಯ್ವನೀಸು ಚ
ಡಾಳಿಸಿದ ಸಿರಿಯಾರಿಗಾತನ
ತೋಳಡವಿಯನು ನಿನ್ನೆ ತರಿದನು ಕೃಷ್ಣ ನೋಡೆಂದ ೬೦

ಆ ಯುಗದಲಾ ಯುಗದಲನಿಬರು
ಬೀಯವಾದರು ದೈತ್ಯ ದಾನವ
ರೀ ಯುಗದಲನಿತಸುರರನಿಬರು ದುಷ್ಟ ದಾನವರು
ರಾಯರನಿಬರು ದಿವಿಜ ರಾಯನ
ಲಾಯದಲಿ ಲಂಬಿಸಿದರಾ ತರು
ವಾಯ ನಿನಗೀಗಳೆ ವಿಘಾತದೊಳೆಂದನಾ ಭೀಷ್ಮ ೬೧

ಇಂಗಿತದಲರಿವುದು ಮಹಾತ್ಮರಿ
ಗಂಗವಿದು ಮಧ್ಯಮರು ಕರ್ಣಾ ಪ
ಥಂಗಳಲಿ ಗೋಚರಿಸಲರಿವುದು ಲೋಕ ವೃತ್ತಿಯಿದು
ಕಂಗಳಲಿ ಕಂಡರಿವರಧಮರು
ಕಂಗಳಲಿ ಕಿವಿಗಳಲಿ ಮೇಣ್ ಹರಿ
ಯಿಂಗಿತವನರಿಯದ ಜಡಾತ್ಮನು ಚೈದ್ಯ ನೃಪನೆಂದ ೬೨

ಎಲೆ ಪಿತಾಮಹ ನೀವು ನಿಗಮ
ಸ್ಥಳ ರಹಸ್ಯವನುಪನಿಷತ್ಸಂ
ಕುಳ ವಚೋಭಿಪ್ರಾಯ ಪೀಯೂಷವನು ಬೀರಿದರೆ
ಖಳರಿಗತಿ ದರ್ಪಜ್ವರ ಪ್ರ
ಜ್ವಲಿತರಿಗೆ ಸೊಗಸುವುದೆ ಬೆಳದಿಂ
ಗಳು ವಿಯೋಗಿಗೆ ವಿಷಮವೆಂದನು ನಗುತ ಸಹದೇವ ೬೩

ಕೇಳಿರೈ ನೆರೆದಖಿಳ ಧರಣೀ
ಪಾಲರಿಗೆ ಕೈ ಮುಗಿದೆವೀ ಗೋ
ಪಾಲನೆಮ್ಮಾಚಾರ್ಯನೆಮ್ಮಯ ತಂದೆ ಗುರುವೆಮಗೆ
ಲಾಲಿಸಿದೆವರ್ಚಿಸಿದೆವೀತನ
ಮೇಲೆ ಮುಳಿಸುಂಟಾದೊಡೆನ್ನೊಡ
ನೇಳಲಾತನ ಗಂಡನೆಂದೊದೆದನು ಮಹೀತಳವ ೬೪

ಚೆಲ್ಲಿದವು ಸಹದೇವ ಶಿರದಲಿ
ಮಲ್ಲಿಗೆಯ ಮೊಗ್ಗೆಗಳ ಮಳೆ ನಭ
ದಲ್ಲಿ ದನಿಯಾಯ್ತಹುದಲೇ ಸಹದೇವ ಲೇಸೆನುತ
ಭುಲ್ಲವಿಸಿದರು ಋಷಿಗಳಪ್ರತಿ
ಮಲ್ಲದೈವದ ನೆಲೆಯನರಿಯದ
ಖುಲ್ಲ ಭೂಪರು ಮಸಗಿದರು ಗುಜುಗುಜಿನ ಗಾಢದಲಿ ೬೫

## ಹತ್ತನೆಯ ಸಂಧಿ

ಸೂ. ಅಗ್ರಪೂಜಾವ್ಯಾಜಮುಖದಲಿ
ವಿಗ್ರಹದ ಶಿಶುಪಾಲಶಿರ ಗಗ
ನಾಗ್ರದಲಿ ಕುಣಿದಾಡಲೆಸೆದನು ವೀರ ನಾರಯಣ

ಕೇಳು ಜನಮೇಜಯ ಧರಿತ್ರೀ
ಪಾಲ ಸಹದೇವನ ವಚೋಗ್ರ
ವ್ಯಾಳ ವಿಷವೆಡೆಯಲ್ಲಿ ಸಿಲುಕಿತು ಮನ ಮಹೀಶ್ವರರ
ಸೂಳು ನೆನಹಿನ ಸುಳಿಮನದ ಸಮ
ಪಾಳಿ ಕೋಪದಲಳಿದ ಮೌನದ
ಮೇಲು ಬುದ್ಧಿಯ ಜೋಡಿ ಬೇರೊಂದಾಯ್ತು ಭಾವದಲಿ ೧

ಕಿವಿವಳೆಯ ಮೋರೆಗಳ ಮುಷ್ಟಿಯ
ಬವರಿಗಳ ಕಡೆಗಣ್ಣ ಸನ್ನೆಯ
ಸವಡಿಗೈಗಳ ನಂಬುಗೆಯ ಮನಮನದ ಬೆಸುಗೆಗಳ
ಅವಸರದ ಮೈತ್ರಿಗಳ ಮಂತ್ರ
ಪ್ರವರ ವಚನೋಪೇಕ್ಷೆಗಳ ರಣ
ದವಕದಲಿ ಕಳವಳಿಸುತಿರ್ದುದು ಕೂಡೆ ನೃಪಕಟಕ ೨

ಪರಿಣತರ ನುಡಿಗಳನು ಕಿವಿಯೋ
ಕರಿಸಿದವು ದುರದುಂಬಿಗಳ ಬಾ
ಹಿರರ ನುಡಿಗಳನಡಿಗಡಿಗೆ ಕುಡಿದು ತೇಗಿದವು
ಕರೆಸಿದರು ಖೂಳರನು ನೀತಿಯ
ಗರುವರನು ನೂಕಿದರು ರಾಯನ
ಪರಮ ಯಾಗವನಳಿಯಲನುವಾಯಿತ್ತು ನೃಪಕಟಕ ೩

ನೀವು ಪರಿಯಂತೇಕೆ ನಿಮ್ಮವ
ರಾವಲೇ ನಿಮ್ಮಾಳು ಕುದುರೆಗೆ
ನಾವಲೇ ದಳಪತಿಗಳಿವದಿರ ಯಜ್ಞಮಂಟಪವ
ಆವ ಬೇಗದಲುರುಹುವೆನು ಚಿ
ತ್ತಾವಧಾನವ ಮಾಡಿಯೆಂದು ನೃ
ಪಾವಳಿಯ ಶಿಶುಪಾಲ ಸಂತೈಸಿದನು ಸಾಮದಲಿ ೪

ಧರಣಿಪರ ಸನ್ನೆಯಲಿ ಬಲ ಸಂ
ವರಿಸಿತಾಚೆಯಲಿತ್ತ ಸಾತ್ಯಕಿ
ನರ ವೃಕೋದರ ನಕುಲ ಧೃಷ್ಟದ್ಯುಮ್ನ ಮೊದಲಾದ
ಕರಿತುರಗ ರಥಪತ್ತಿಗಳ ಸಂ
ವರಣೆ ತಳಿತುದ ಕಂಡು ಮೂಗಿನ
ಬೆರಳ ಬೆರಗಿನಲೊಲೆದು ಭೀಷ್ಮಂಗೆಂದನಾ ಭೂಪ ೫

ಈಸು ಪೌರುಷ ದೈವ ಘಟನೆಯೊ
ಳೀಸು ಪರಿಯಂತಾಯ್ತು ಯಜ್ಞದ
ಮೀಸಲಳಿಯದೆ ನಡೆದುದಿನ್ನೆಗ ನಿಮ್ಮ ಕರುಣದಲಿ
ಈ ಸಮಸ್ತ ನೃಪಾಲಜನ ವಾ
ರಾಸಿ ಮೇರೆಯನೊದೆವುತಿದೆ ನಿಮ
ಗೇಸು ಭಾರವಿದೆಂದು ಬಿನ್ನವಿಸಿದನು ಭೀಷ್ಮಂಗೆ ೬

ಕಾದುವರೆ ನಮ್ಮುತ್ಸವಕೆ ನೆರ
ವಾದವರು ಸ್ವೈರಿಸುವರಗ್ಗದ
ಯಾದವೇಂದ್ರನ ನಿಂದೆ ಮೇಲಧ್ವರ ವಿಸಂಘಟನ
ಈ ದುರಂತದಚಿಂತೆಯಲಿ ಬೇ
ಳಾದುದೆನ್ನಯ ಚಿತ್ತವದ್ದೆನು
ಖೇದ ಪಂಕದೊಳೆನ್ನನುದ್ಧರಿಸೆಂದನಾ ಭೂಪ ೭

ಅಂಜದಿರು ಭಯ ಬೇಡ ನರರಿಗೆ
ನಂಜು ಪಥ್ಯವೆ ಗಿಳಿಯ ಮರಿಗಳು
ಮಂಜರನ ಮೇಲ್ವಾಯ್ದು ಬದುಕುವವೇ ಮಹೀಪತಿಯೆ
ಮಂಜು ಮಧ್ಯಾಹ್ನದ ದಿನೇಶನ
ನೆಂಜಲಿಸುವುದೆ ಕುಪಿತ ಸಿಂಹವ
ನಂಜಿಸುವವೇ ನಾಯ್ಗಳೆಂದನು ಭೂಪತಿಗೆ ಭೀಷ್ಮ ೮

ಬಗುಳುವಿವದಿರು ಹರಿಯ ಬಡಿ ಹೋ
ರಿಗಳಲಾ ಜಗವರಿಯದೇ ಜ
ಳ್ಳುಗಳ ಜೋಡಿಯ ಜಂಜಡಕೆ ನೀ ಜರುಗುವೈ ಭೂಪ
ಉಗಿವನಿನಿಬರ ಜೀವವನು ಜೊ
ತ್ತಗೆಯಲೀ ಶಿಶುಪಾಲ ನಾಯಸು
ತೆಗೆದು ಕಟ್ಟುವನಸುರಮರ್ದನನೆಂದನಾ ಭೀಷ್ಮ ೯

ಜಗವ ಹೂಡುವ ಹೊರೆವ ಬಲುಗೈ
ಯುಗಧರಂಗೀ ನೃಪರ ಕುರಿವಿಂ
ಡುಗಳ ಕುಮ್ಮರಿಗಡಿತಕಾವುದು ಬೇಕು ಭುಜಸತ್ವ
ಬಗೆವುದೇ ಬಲುಗಡಲು ಮಂಜಿನ
ಮುಗಿಲವಳಿಯನು ಚೈದ್ಯ ಭೂಪನ
ಜಗದ ಭಂಡನನೀ ಜನಾರ್ದನ ಗಣಿಸುವನೆಯೆಂದ ೧೦

ಎಲೆ ನಪುಂಸಕ ಭೀಷ್ಮ ಸುಡು ಬೈ
ಗುಳಿನ ಭಂಡನು ನೀನಲಾ ಗೋ
ಕುಲದ ಗರ್ವನ ಗುಣವ ಕಂಡಿತುಗೊಂಡೆ ಬೇಸರದೆ
ಹಳಿವಿನಲಿ ಹೆಮ್ಮೆಯನು ಕುಂದಿನ
ಕುಲದೊಳಗ್ಗಳಿಕೆಯನು ತಮದಲಿ
ಬೆಳಗ ಬಣ್ಣಿಸುತಿಹೆ ನಿರಂತರವೆಂದನಾ ಚೈದ್ಯ ೧೧

ಅವಗುಣದಲುದ್ಭಾವಿಸುವೆ ಗುಣ
ನಿವಹವನು ರಾಜಾಧಮರು ಯಾ
ದವರು ಪೂಜಾರುಹರೆ ಸುಡು ಸುಡು ನಿನ್ನ ನಾಲಗೆಯ
ಸವಿನುಡಿಯ ದುರ್ವ್ಯಸನಿ ತೊಂಡಿನ
ತವರುಮನೆ ಬಾಹಿರರಿಗಾಶ್ರಯ
ಭವನ ಖಳರಧಿದೈವ ಭೀಷ್ಮನ ಕೊಲುವರಿಲ್ಲೆಂದ ೧೨

ಇವನು ಗಡ ಚಿಕ್ಕಂದು ವೊಲೆಗೊ
ಟ್ಟವಳ ಹಿಂಡಿದ ಗಂಡ ಬಂಡಿಯ
ಜವಳಿಗಾಲಲಿ ಮುರಿದನೈ ಮಾಮಾ ಸಮರ್ಥನಲೆ
ಸವಡಿ ಮರ ನೆಗ್ಗಿದವು ಗಡ ಮೈ
ಯವುಚಿದರೆ ಬಲುಗತ್ತೆ ಗೂಳಿಯ
ನಿವ ವಿಭಾಡಿಸಿದನೆ ಮಹಾದ್ಭುತವೆಂದನಾ ಚೈದ್ಯ ೧೩

ಹಕ್ಕಿ ಹರಿಣಿಯ ತರಿದ ಗಡ ಕೈ
ಯಿಕ್ಕಿದರೆ ಕಡುಗುದುರೆಯನು ನೆಲ
ಕಿಕ್ಕಿದನೆ ನೆರೆ ಹೇಳು ಹೇಳಾ ಕೃಷ್ಣನಾಳ್ತನವ
ಹೊಕ್ಕು ಹೆಬ್ಬಾವಿನ ಬಸುರ ಸೀ
ಳಿಕ್ಕಿದನೆ ಯಾದವನ ಪೌರುಷ
ವಕ್ಕಜವಲಾ ಭೀಷ್ಮ ತೂಪಿರಿಯೆಂದನಾ ಚೈದ್ಯ ೧೪

ಗಾಳಿಯನು ಘಲ್ಲಿಸಿದ ಕರುವಿನ
ಕಾಲ ಹಿಡಿದೊಗೆದನುಗಡುರಗನ
ಮೇಲೆ ಕುಣಿದಾಡಿದನು ಗಡ ಹಾವಡಿಗ ವಿದ್ಯೆಯಲಿ
ಖೂಳ ಗೋವರ ಹಳ್ಳಿಯಲಿ ಕ
ಟ್ಟಾಳಲಾ ಬಳಿಕೇನು ಪೃಥ್ವೀ
ಪಾಲರೀತಗೆ ಸರಿಯೆ ದಿಟ ದಿಟವೆಂದನಾ ಚೈದ್ಯ ೧೫

ಏಳು ದಿನ ಪರಿಯಂತ ವೊರಡಿಯ
ಮೇಲುಗೊಡೆಯನು ಹಿಡಿದು ಬಲು ಮಳೆ
ಗಾಲವನು ಮಾಣಿಸಿದ ಗಡ ಹರಹರ ವಿಶೇಷವಲ
ಹೇಳು ಹೇಳಿಂದ್ರಂಗೆ ಮಾಡಿದ
ಕೂಳ ರಾಶಿಯನೊಬ್ಬನೇ ಕೈ
ಮೇಳವಿಸಿದನೆ ಕಂದನಾಣೆ ವಿಚಿತ್ರವಾಯ್ತೆಂದ ೧೬

ಅಸಗನನು ಕೆಡೆ ತಿವಿದು ಕಂಸನ
ವಸನವೆಲ್ಲವ ಸೆಳೆದ ಗಡ ಮಾ
ಣಿಸಿದನೈ ದಿಟ ಘಟ್ಟವಾಳ್ತಿಯ ವೈಯ ಮೂಹೊರಡ
ಮುಸಗಿ ಬೀಸುವ ಕಂಸನಾನೆಯ
ನಸು ಬಡಿದ ಗಡ ಮಲ್ಲರನು ಮ
ರ್ದಿಸಿದನೇ ಡೊಳ್ಳಾಸದಲಿ ಡಾವರಿಗನಹನೆಂದ ೧೭

ಆದರಿವನನು ತುತಿಸುವೊಡೆ ಮೇ
ಲಾದ ಕಷ್ಟವನೇನ ಹೇಳುವೆ
ನೀ ದುರಾತ್ಮಕ ಸಾಕಿದೊಡೆಯನನಿರಿದ ಸಬಳವಲೆ
ಸೋದರಿಯಲಾ ಕೃಷ್ಣನವ್ವೆ ವಿ
ವಾದವೇ ಸಾಕಿದನಲಾ ಕೈ
ಗಾದನೇ ಕಂಸಂಗೆ ಮುನಿವುದಿದಾವ ಘನವೆಂದ ೧೮

ಆದರಿಸಿ ಬಣ್ಣಿಸಿದೆ ನಾಚದೆ
ಯಾದವನ ಕೌಳಿಕ ಪರಾಕ್ರಮ
ವಾದಿಯಾದ ಸಮಸ್ತ ಗುಣ ವಿಸ್ತಾರ ವೈಭವವ
ಆದರಾ ಗೋವಳರ ಹೆಂಡಿರ
ಹಾದರದ ಹೆಕ್ಕಳವ ಬಣ್ಣಿಸ
ದಾದೆ ನಿನಗೇಕಕಟ ನಾಚಿಕೆಯೆಂದನಾ ಚೈದ್ಯ ೧೯

ಓಡಿ ಕೊಲಿಸಿದ ಕಾಲಯವನನು
ಮೂಡಿದವೆ ಹುಲು ಕಲುಗಳಕಟಾ
ವೋಡುಕುಳಿ ಹೋದಲ್ಲಿ ಮಗಧನ ರಾಜಕಾರ್ಯದಲಿ
ಆಡಲರಿಯೆ ವಿಜಾತಿರತ್ನದ
ಖೋಡಿಗಳ ಹಳಿವಾತನೇ ಹರಿ
ತೋಡಿ ಬಯಸುವೆ ಕಿವಿಗರೋಚಕವಾಯ್ತು ತೆಗೆಯೆಂದ ೨೦

ಕಪಟದಲಿ ಭೀಮಾರ್ಜುನರು ಸಹಿ
ತುಪಚಿತ ದ್ವಿಜವೇಷದಲಿ ನಿ
ಷ್ಕಪಟ ಮಗಧನ ಮನೆಯನದ್ವಾರದಲಿ ಹೊಕ್ಕರಲ
ಕೃಪಣರಿವದಿರು ವಿಪ್ರವೇಷದ
ಲಪಸದರು ಕಾದಿದರು ಭೀಷ್ಮಗೆ
ಜಪವಲಾ ಕಂಸಾರಿ ಮಾಡಿದ ಕಪ್ಟ ಕೃತಿಯೆಂದ ೨೧

ಬೆರತನಗ್ಗದ ಮಾಗಧೇಂದ್ರನ
ಮುರಿದ ಮುರುಕಕೆ ಭೀಮನಾತನ
ಸೆರೆಯ ಮನೆಯಲಿ ಸಿಕ್ಕಿದವನೀಪಾಲ ಪಂತಿಗಳ
ಸೆರೆಯನಿವ ಬಿಡಿಸಿದನು ಗಡ ಬೊ
ಬ್ಬಿರಿವ ಪೌರುಷವೇಕೆ ಕಡೆಯಲಿ
ಕರುಬುವವರಾವೈಸಲೇ ನಿಮಗೆಂದನಾ ಚೈದ್ಯ ೨೨

ಕೇಳಿ ಕಿಡಿಗೆದರಿ ತನು ರೋ
ಮಾಳಿ ತಳಿತುದು ರೋಷವಹ್ನಿ
ಜ್ವಾಲೆ ಝಳಪಿಸೆ ಜಡಿದವರುಣಚ್ಛವಿಯಲಕ್ಷಿಗಳು
ಸೂಳುರಿಯ ನಿಡುಸುಯ್ಲು ಕಬ್ಬೊಗೆ
ಜಾಳಿಗೆಯಲೇಕಾವಳಿಯ ಮು
ಕ್ತಾಳಿ ಕಂದಿತು ಖತಿಯ ಮೊನೆಯಲಿ ಮಸಗಿದನು ಭೀಮ ೨೩

ಸೆರಗ ಸಂವರಿಸಿದನು ಮಕುಟವ
ನುರುಗದಂತಿರೆ ಮುರುಹಿ ಸಚಿಪಂ
ಗರುಹಿದನು ಸನ್ನೆಯಲಿ ಸಮರಕೆ ಚಾಪ ಮಾರ್ಗಣವ
ಹೊರಗೆ ಸಂವರಿಸಿರಲಿ ದಳ ಕೈ
ಮರೆಯ ಬೇಡ ಸುನೀತನನು ನಾ
ವ್ಮರುಬಿ ನಿಂದಾಕ್ಷಣದಲೊದಗುವುದೆಂದು ಸೂಚಿಸಿದ ೨೪

ಪವನ ತನಯನ ಖತಿಯ ಝಾಡಿಯ
ಹವಣ ಕಂಡರು ಮಸಗಿದರು ಯಾ
ದವರ ಪಡೆಯಲಿ ಸಾಂಬ ಸಾತ್ಯಕಿ ಕಾಮ ಕೃತವರ್ಮ
ತವ ತವಗೆ ಪಾಂಚಾಲ ಕೇಕಯ
ನಿವಹ ಪಾಂಡವ ಸುತರು ಮೊದಲಾ
ದವಗಡೆಯರನುವಾಗೆ ಗಜಬಜವಾಯ್ತು ನಿಮಿಷದಲಿ ೨೫

ಸೆಳೆದಡಾಯುಧವುತ್ತರೀಯವ
ನಿಳುಹಿ ಮುಂಗೈಯಲಿ ವೃಕೋದರ
ಮೊಳಗುವನುವನು ಕಂಡು ಧಿಮ್ಮನೆ ಭೀಷ್ಮನಡಹಾಯ್ದು
ಸೆಳೆದು ಕೊಂಡನು ಖಡುಗವನು ಭುಜ
ವಳಯದಿಂದವುಚಿದನು ತೋಟಿಯ
ತೊಳಸುಗರ ಹೊಯ್ ಹೊಯ್ಯೆನುತ ಗರ್ಜಿಸಿದನಾ ಭೀಷ್ಮ ೨೬

ನೆರಹಿದಿರಿ ಚತುರಾಬ್ಧಿ ವಳಯದ
ಧರಣಿಪಾಲ ಸಮುದ್ರವನು ಕಾ
ಹುರುವ ಮಾಡಿದರಕಟ ಕೆಡದೇ ರಾಜಸೂಯ ಮಖ
ಧರಧುರದ ದುರ್ವ್ಯಸನಿಗಳ ನಿ
ಟ್ಟೊರಸಿ ತೆಗೆ ನಿನ್ನವರನೆನುತು
ಬ್ಬರವ ಮಾಣಿಸಿ ಹೂಣಿಗರ ಹೊಯ್ಸಿದನು ಕಲಿ ಭೀಷ್ಮ ೨೭

ಬಿಡು ಬಿಡೆಲೆ ಗಾಂಗೇಯ ಭೀಮನ
ಕಡಿದು ಪೂರ್ಣಾಹುತಿಯನಗ್ನಿಗೆ
ಬಡಿಸಿ ಕೊಡುವೆನು ಸ್ವಾಮಿದ್ರೋಹಿಯ ಕರುಳ ದಂಡೆಗಳ
ಮುಡಿಸುವೆನು ಜಯಸಿರಿಗೆ ನೋಡೆ
ನ್ನೊಡನೆ ಮೇಳವೆ ದಕ್ಷಯಜ್ಞದ
ಮೃಡನ ಮರೆಸುವೆನೆನುತ ಮಿಗೆ ಬೊಬ್ಬಿರಿದನಾ ಚೈದ್ಯ ೨೮

ಬಿಡು ಬಿಡಕಟಾ ಭೀಷ್ಮ ದರ್ಪದಿ
ಕಡುಜರೆದ ಕಳವಳದ ಕುನ್ನಿಗೆ
ಕುಡಿಸುವೆನು ದಿವ್ಯಾಸ್ತ್ರವಿಶಿಖ ವಿಶೇಷದೌಷಧಿಯ
ತಡೆದು ತನ್ನನು ರಾಜಕಾರ್ಯವ
ಕೆಡಿಸಿದೆಯಲಾ ದಕ್ಷಯಜ್ಞದ [ಭೀಮ ೨೯
ಮೃಡನ ಮುರುಕವ ಕಾಬೆನೆನುತೊಡೆಮುರುಚಿದನು

ಮತ್ತೆ ಹಿಡಿದನು ಪವನಜನ ಬಾ
ಗೊತ್ತಿದನು ಮರುಳೇ ಸುರೌಘದ
ತುತ್ತು ಗಂಟಲಲಿಳಿವುದೇ ಗಜಬಜವ ಮಾಡಿದರೆ
ತೆತ್ತಿಗನು ಹರಿ ಯಜ್ಞರಿಪುಗಳ
ಮೃತ್ಯುವರಿಯಾ ನೀನು ಮಾರುವ
ದುತ್ತುಮಿಕೆಯಲ್ಲೆನುತ ಮಿಗೆ ತಿಳುಹಿದನು ಗಾಂಗೇಯ ೩೦

ಇವನ ಕೊಲುವನು ಮಿಕ್ಕ ಭೂಪರ
ನಿವಹವನು ಮನ್ನಿಸುವೆನೆನೆ ನೀ
ನಿವನ ಕೊಲುವುದಸಾಧ್ಯವೀತನ ನಿಜವನರಿಯೆಯಲ
ಇವ ಹಿರಣ್ಯಾಕ್ಷಕ ಕಣಾ ಮರು
ಭವದೊಳಗೆ ದಶವದನನಿವ ಸಂ
ಭವಿಸಿದನು ಶಿಶುಪಾಲವೆಸರಲಿ ಭೀಮ ಕೇಳೆಂದ ೩೧

ಜನಿಸಿದಾಗಳೆ ಭಾಳದಲಿ ಲೋ
ಚನ ಚತುರ್ಭುಜನಾದನದ್ಭುತ
ನಿನದದಲಿ ನೆಲ ಬಿರಿಯಲೊದರಿದನಂದು ಬಾಲ್ಯದಲಿ
ತನ ತನಗೆ ಜನ ಬೆದರಿತೀತನ
ಮನೆಗೆ ನಾರದ ಬಂದನೀತನ
ಜನನಿ ಬಿನ್ನಹ ಮಾಡಿದಳು ಶಿಶುಪಾಲ ಸಂಗತಿಯ ೩೨

ಆತನೆಂದನು ತಾಯೆ ಶಿಶು ವಿ
ಖ್ಯಾತನಹ ನೀನಾರ ಹಸ್ತದೊ
ಳೀತನನು ಕೊಟ್ಟಾಗಲಡಗುವವಕ್ಷಿ ಭುಜಯುಗಳ
ಆತನೀತನ ಮೃತ್ಯುವಿದು ಸಂ
ಭೂತ ನಿಶ್ಚಯವೆಂದು ಶಿಶುವಿನ
ಮಾತೆಯನು ಸಂತೈಸಿ ನಾರದನಡರಿದನು ನಭವ ೩೩

ಇವನ ಕಾಣಲು ಬಂದರವನಿಪ
ರವರವರ ಕೈಗಳಲಿ ತಾಯ್ತಂ
ದಿವನನಿತ್ತಳು ಮಾಣವಿವನಧಿಕಾಕ್ಷಿ ಬಾಹುಗಳು
ಇವನ ತಾಯ್ ತಮ್ಮತ್ತೆಯೆಂದು
ತ್ಸವದೊಳೀ ಮುರವೈರಿ ಬರಲಂ
ದಿವನ ತಂದಿವನನ್ನೆ ಕೊಟ್ಟಳು ಹರಿಯ ಹಸ್ತದಲಿ ೩೪

ಆಗಳಿವನಧಿಕಾಕ್ಷ ಬಾಹುವು
ನೀಗಿದೊಡನಿವನಪ್ಪೆ ಕಂಡು
ಬ್ಬೇಗದಲಿ ಕಮಲಾಕ್ಷನಂಘ್ರಿಯಲೆರಗಿ ಕೈ ಮುಗಿದು
ಮೇಗರೆಯ ಮಾತಲ್ಲ ಬಾಲಕ
ನಾಗುಹೋಗಿನ ಕೊರತೆ ನಿನ್ನನು
ತಾಗುವುದು ನೀ ಸೈರಿಸೆಂದಭಯವನು ಬೇಡಿದಳು ೩೫

ಸೈರಿಸುವೆನಪರಾಧ ಶತವ ಕು
ಮಾರಕನ ತಾ ಕೊಲ್ಲೆನೆಂದೀ
ಶೌರಿ ಭಾಷೆಯ ಮಾಡಿ ಹಿಂಗಿದನಿವನ ತಾಯೊಡನೆ
ಆರಿವನ ಮರಣಕ್ಕೆ ಮೊದಲು ಮು
ರಾರಿಯೋ ನೀನೋ ವಿಚಾರಿಸು
ವೀರ ಮಾರುತಿಯೆನಲು ಕೇಳಿದನಂದು ಶಿಶುಪಾಲ ೩೬

ಎಲವೊ ಗೋಪಕುಮಾರನೆನ್ನನು
ಕೊಲುವನೇ ತಾನಿವನ ಕೈಯ್ಯಿಂ
ದಳಿವವನೆ ಶಿವ ಶಿವ ವಿಕಾರಿಯನೇನ ಮಾಡುವೆನು
ಗಳಹ ಭೀಷ್ಮ ವೃಕೋದರನ ಮೈ
ವಳಿಯ ಭಟನೋ ಮೇಣು ನೀ ಗೋ
ವಳರ ಹಳ್ಳಿಯ ಭಟ್ಟನೋ ಹೇಳೆಂದನಾ ಚೈದ್ಯ ೩೭

ಈ ಕುರುಕ್ಷಿತಿಪಾಲರಲಿ ನೀ
ನಾಕೆವಾಳನು ಗಡ ವಯಃಪರಿ
ಪಾಕವುಳ್ಳವನೀಸು ಕಾಲದಲೋದಿದರಿತವಿದೆ
ಕಾಕನುರೆ ಕೊಂಡಾಡಿ ಗೊಲ್ಲರ
ಗೋಕುಲದ ಗೋಪ ಪ್ರಸಂಗ
ವ್ಯಾಕರಣ ಪಾಂಡಿತ್ಯ ಮೆರೆದುದು ಭೀಷ್ಮ ನಿನಗೆಂದ ೩೮

ಇದು ಮಹಾ ಮಖವಿಲ್ಲಿ ಪೂಜ್ಯನು
ಯದುಗಳರಸನು ಭಟ್ಟನಿಲ್ಲಿಗೆ
ನದಿಯ ಮಗನಿಲ್ಲಿಗೆ ಸದಸ್ಯರು ನಾರದಾದಿಗಳು
ಹುದಿದ ಮರುಭೂಮಿಯಲಿ ಮಾನ್ಯನು
ಖದಿರನಲ್ಲಿಗೆ ಗೂಗೆ ಕೋಗಿಲೆ
ಮುದಿ ನರಿಗಳಲ್ಲಿಗೆ ಸಭಾಸದರೆಂದನಾ ಚೈದ್ಯ ೩೯

ನೀನಲಾ ಧರ್ಮಜ್ಞನೆಂದಾ
ಮಾನಿನಿಯರ ವಿವಾಹದಲಿ ನೀ
ನೇನ ಮಾಡಿದೆ ಬೇಸರಿಸಿ ಬಳಲಿಸಿದೆ ಬಾಲಕಿಯ
ಏನ ಹೇಳುವೆನೊಂದು ಹಂಸನು
ಮಾನಸದ ತೀರದಲಿ ಪಕ್ಷಿವಿ
ತಾನದಲಿ ಧರ್ಮಜ್ಞನಾಯ್ತಾ ಹಂಸ ನೀನೆಂದ ೪೦

ನುಡಿಗಳಲಿ ಸದ್ಧರ್ಮ ಸಂಗತಿ
ನಡವಳಿಯಲನ್ಯಾಯವೆಂದೇ
ಕೆಡಹಿದವು ಹಂಸೆಯನು ನಾನಾ ವಿಹಗ ಸಂದೋಹ
ನುಡಿವುದಲ್ಲದೆ ಮೇಣು ನಯದಲಿ
ನಡೆದುದಿಲ್ಲೆಲೆ ಭೀಷ್ಮ ನಿನ್ನನು
ಕಡಿದು ಭೂತಕೆ ಬಡಿಸಿದರೆ ಕೃತಕೃತ್ಯನಹೆನೆಂದ ೪೧

ಕಳೆದ ಕಾಲದ ವೃದ್ಧ ಮೇಲ
ಗ್ಗಳದ ನಿಯಮವ್ರತ ಶ್ರುತಿ ಸ್ಮೃತಿ
ಗಳಲಿ ಪರಿಣತನೆಂಬೆ ಕಡೆಯಲಿ ಗೋಪನಂದನನ
ಬೆಳವಿಗೆಯ ಮಾಡಿದೆ ಮಹೀ ಮಂ
ಡಲದ ರಾಯರನಕಟ ಲಜ್ಜಾ
ಕುಳರ ಮಾಡಿದೆ ಭಂಡ ಘಡ ಹೋಗೆಂದನಾ ಚೈದ್ಯ ೪೨

ಪರಗುಣ ಸ್ತುತಿ ನಿಂದೆಗಳು ಹಿರಿ
ಯರಿಗೆ ಸಾಮ್ಯವೆ ನಿನ್ನ ಜಿಹ್ವೆಗೆ
ವರ ಗುಣಸ್ತವದಿಂದ ಮೇಣ್ಕಂಡೂತಿ ಹರವಹರೆ
ಹಿರಿಯರಿದೆಲಾ ಕಣ್ವ ಪೌಲಾಂ
ಗಿರಸ ಜೈಮಿನಿ ಯಾಜ್ಞವಲ್ಕ್ಯರು
ವರ ಸುಪೈಕದೊಳಧಿಕರಿದೆಲಾ ಭೀಷ್ಮ ಕೇಳೆಂದ ೪೩

ನಾವು ಮೊದಲಲಿ ನಮ್ಮೊಳಗೆ ಕುಂ
ದಾವುದೇತಕೆ ಹೊಗಳೆಯಿವರಲ
ದಾವಕೊರತೆ ಯುಧಿಷ್ಠಿರನ ನೀನೇಕುಪೇಕ್ಷಿಸಿದೆ
ಈ ವೃಕೋದರ ಪಾರ್ಥರನು ಸಹ
ದೇವ ನಕುಲರನೇಕೆ ಹೊಗಳೆಯ
ದಾವ ಗುಣನಿಧಿಯೆಂದು ಕೃಷ್ಣನ ಬಣ್ಣಿಸಿದೆಯೆಂದ ೪೪

ಗರುವನಲ್ಲಾ ಕೌರವೇಶ್ವರ
ನರಸಲಾ ಬಾಹ್ಲಿಕನು ರಾಯರ
ಗುರುವಲಾ ಕೊಂಡಾಡಲಾಗದೆ ಚಾಪ ಧೂರ್ಜಟಿಯ
ಗುರುಸುತನು ಸಾಮಾನ್ಯನೇ ಸಂ
ಗರ ಭಯಂಕರನಲ್ಲವೇ ವಿ
ಸ್ತರಿಸಲಾಗದೆ ನಿನ್ನ ಕೃಷ್ಣನ ಹವಣೆಯಿವರೆಂದ ೪೫

ಕವಚ ಕುಂಡಲ ಸಹಿತ ತಾನುದು
ಭವಿಸನೇ ಶೌರ್ಯಾದಿ ಗುಣದಲಿ
ಭುವನದಲಿ ಭಾರಾಂಕ ವೀರರು ಪಡಿಯೆ ಕರ್ಣಂಗೆ
ಇವನನೇಕಗ್ಗಳಿಸೆ ಭೂರಿ
ಶ್ರವನ ಹೊಗಳೆ ಜಯದ್ರಥನು ನಿ
ನ್ನವನ ಹವಣೇ ಶಲ್ಯ ಮುನಿಯನೆ ನಿನಗೆ ಹೇಳೆಂದ ೪೬

ಕುಲದಧಿಕರು ಶೌರ್ಯದಲಿ ವೆ
ಗ್ಗಳರು ಶೀಲದಲುನ್ನತರು ನಿ
ರ್ಮಲಿನರಾಚಾರದಲಿ ಕೋವಿದರಖಿಳ ಕಳೆಗಳಲಿ
ಇಳೆಯ ವಲ್ಲಭರಿನಿಬರನು ನೀ
ಕಳೆದು ನೊಣ ನೆರೆ ಹೊತ ವನವನು
ಹಳಿದು ಹಗಿನಿಂಗೆರಗುವವೊಲಾಯ್ತೆಂದನಾ ಚೈದ್ಯ ೪೭

ಘನನಲಾ ಭಗದತ್ತ ಕಾಂಭೋ
ಜನು ಪದಸ್ಥನಲಾ ವಿರಾಟನ
ತನುಜನೀ ಪಾಂಚಾಲ ಕೇಕಯರೀ ಮಹೀಭುಜರು
ವಿನುತರಲ್ಲಾ ದಂತವಕ್ರನು
ನಿನಗೆ ಕಿರುಕುಳನೇ ಜರಾಸಂ
ಧನ ಸುತನ ನೀನೇಕೆ ಬಣ್ಣಿಸೆ ಭೀಷ್ಮ ಹೇಳೆಂದ ೪೮

ದ್ರುಮನ ಕಿಂಪುರುಷಾಧಿಪನ ವಿ
ಕ್ರಮವ ಬಣ್ಣಿಸಲಾಗದೇ ಭೂ
ರಮಣರಿವೆಲಾ ಮಾಳವಂಗ ಕಳಿಂಗ ಕೌಸಲರು
ವಿಮಳರಿನಿಬರನುಳಿದು ಕೃಷ್ಣ
ಭ್ರಮೆ ಹಿಡಿದುದ್ದೈ ನಿನಗೆ ನಿನ್ನ
ಕ್ರಮದ ಭಣಿತೆಯ ಕರ್ಮಬೀಜವನರಿಯೆ ನಾನೆಂದ ೪೯

ಕುಮತಿ ಕೇಳ್ ಬೊಬ್ಬುಲಿಯ ಬನದಲಿ
ರಮಿಸುವುದೆ ಕಳಹಂಸ ಮಾಯಾ
ಭ್ರಮಿತರಲಿ ಯಾಚಿಸುವನೇ ವರಯೋಗಿ ನಿಜಪದವ
ಸಮರ ಪಟುಭಟ ದರ್ಪಪಿತ್ತ
ಭ್ರಮ ವಿಸಂಸ್ಥುಲ ಚಪಳಚಿತ್ತ
ಸ್ಥಿಮಿತ ಭೂಪರ ಬಗೆವನೇ ತಾನೆಂದನಾ ಭೀಷ್ಮ ೫೦

ಖತಿಯ ಹಿಡಿದುದು ಸಕಲ ರಾಜ
ಪ್ರತತಿಗಳು ದುರ್ಮಾರ್ಗಮಾನ
ವ್ಯತಿಕರದೊಳುಬ್ಬೆದ್ದರನಿಬರು ಜಲಧಿ ಘೋಷದಲಿ
ಕ್ರತುವ ಜಲದಲಿ ಕದಡು ಗಂಗಾ
ಸುತನ ಹೊಯ್ ಕಟಿಪಾಯ ಕೊಯ್ ನಿ
ಶ್ಚಿತ ಘಟಾಗ್ನಿಯಲಿವನ ಸುಡಿಯೆಂದುದು ನೃಪವ್ರಾತ ೫೧

ಬರಿಯ ಮಾತನೆ ಮೆರೆದು ಕಾರ್ಯದ
ಕೊರತೆಯಾದರೆ ನಾಯ್ಗಳೊರಲಿದ
ತೆರನಹುದಲೇ ತೋರಿರೈ ನೀವ್ನಿಮ್ಮ ಪೌರುಷವ
ಇರಿದು ನೀವ್ಕೊಲಲಾರದಿದ್ದರೆ
ನೆರೆಘಟಾಗ್ನಿಯೊಳುರುಹದಿದ್ದರೆ
ಕೆರಹು ನಿಮ್ಮಯ ಬಾಯಲೆಂದನು ಭೂಪರಿಗೆ ಭೀಷ್ಮ ೫೨

ನೆರೆದ ನರಿಗಳ ಮಧ್ಯದಲಿ ಕೇ
ಸರಿಯ ಮನ್ನಿಸುವಂತೆ ಕೃಷ್ಣನ
ಚರಣವನು ಪೂಜಿಸಿದೆವರ್ಘ್ಯಾರುಹನು ಮುರವೈರಿ
ಜರಡುಗಳು ನೀವೀ ಜನಾರ್ದನ
ನೊರೆಗೆ ಬಹರೇ ಪ್ರೀತಿಯೇನೀ
ಪರಿ ವಿಷಾದವೆ ಹೋಗಿಯೆಂದನು ಭೂಪರಿಗೆ ಭೀಷ್ಮ ೫೩

ಅಣಕಿಸುವರೆನ್ನೊಡನೆ ಹಿರಿಯಂ
ಬ್ಬಣವ ತೆಗೆಯಿರಿ ಈ ಮುರಾರಿಯ
ಕೆಣಕಲಾಪರೆ ಕರೆದು ನೋಡಿ ವೃಥಾಭಿಮಾನದಲಿ
ಹಣುಕಿ ಬಾಯ್ಬಡಿದೇನಹುದು ಕೈ
ಗುಣವ ತೋರಿರೆ ಸಾವಿರೊಳ್ಳಿಗೆ
ಮಣಿವನೇ ವಿಹಗೇಂದ್ರನೆಂದನು ಭೂಪರಿಗೆ ಭೀಷ್ಮ ೫೪

ಶಿವಶಿವಾ ಮುದುಗೂಗೆ ಮೆಚ್ಚದು
ರವಿಯನೆಲವೋ ಭೀಷ್ಮ ನಿಲು ಮಾ
ಧವನ ಮರ್ದಿಸಿ ನಿನಗೆ ಜೋಡಿಸುವೆನು ಮಹಾನಳನ
ಯುವತಿಯರು ಹಾರುವರು ಹುಲು ಪಾಂ
ಡವರು ಪತಿಕರಿಸಿದರೆ ನೀನಿಂ
ದೆವಗೆ ಮಾನ್ಯನೆ ಕೃಷ್ಣ ಸಿಂಹಾಸನವನಿಳಿಯೆಂದ ೫೫

ನಿನಗೆ ಮೊದಲೊಳು ನಿಶಿತ ವಿಶಿಖದ
ಮೊನೆಯೊಳರ್ಚಿಸಿ ಬಳಿಕ ಭೀಷ್ಮನ
ಘನ ಘಟಾನಳಕುಂಡದೊಳ್ಪ್ರಹಾಸ್ತ್ರಧಾರಾಹುತಿಯ
ಅನುಕರಿಸಿ ಬಳಿಕಿನಲಿ ಕುಂತೀ
ತನಯರೈವರ ರಚಿತ ಘೃತದಲಿ
ವಿನುತ ರೋಷಾಧ್ವರವ ರಚಿಸುವೆನೆಂದನಾ ಚೈದ್ಯ ೫೬

ಎಂದು ಚಾಪವ ತರಿಸಿ ಚಪ್ಪರ
ದಿಂದ ಹೊರವಡುತವನಿಪಾಲಕ
ವೃಂದವನು ಕೈವೀಸಿದನು ಕರೆ ಗೋಕುಲೇಶ್ವರನ
ಇಂದಲೇ ರಿಪು ರುಧಿರ ಪಾನಾ
ನಂದಕೃತ ಮದ ಶಾಕಿನೀ ಸ್ವ
ಚ್ಛಂದ ಲೀಲಾ ನೃತ್ಯದರ್ಶನವೆಂದನಾ ಚೈದ್ಯ ೫೭

ದಾವರಿಸಿದುದು ವಿವಿಧ ವಾದ್ಯವಿ
ರಾವಪಟುಜೋದ್ಭವನ ಭವನವ
ನಾ ವಿಗಡ ಭಟ ಕಟಕವಿದ್ದುದು ಬಲಿದ ಬೊಬ್ಬೆಯಲಿ
ಗೋವಳನ ಬರಹೇಳು ಧರೆಯಲಿ
ದೇವ ಗಡ ಬರಹೇಳು ತೋರಾ
ಕಾವವರ ತಾ ಕೊಲುವೆನೆಂದೊದರಿದನು ಕಲಿ ಚೈದ್ಯ ೫೮

ಮಿನುಗುದುಟಿಗಳ ವಿಕಲ ಮಂತ್ರದ
ಬಿನುಗುಗಳ ಕೈಯಾಹುತಿಗೆ ಕರೆ
ದನಿಮಿಷರ ಪಲ್ಲಟದ ವಿಚಲಿತ ಸೂಕ್ತಿಮಯ ನಿನದ
ತನಿ ಭಯದ ತರಳಾಕ್ಷಿಗಳ ದು
ರ್ಮನದ ಮೋಡಿಯ ಮೊಗದ ಬರಿದೇ
ತೊನೆವ ಗಡ್ಡದ ಮುನಿಗಳಿದ್ದರು ಬಲಿದ ಬೆರಗಿನಲಿ ೫೯

ಹಲ್ಲಣಿಸಿದುದು ಯಾದವರ ಪಡೆ
ಘಲ್ಲಣೆಯ ಘರ್ಘರವ ಘೋಷದ
ಭುಲ್ಲಣೆಯ ಗಂಭೀರ ಭೇರಿಯ ಬಹಳ ರಭಸದಲಿ
ನಿಲ್ಲದಿಳೆ ಪದಹತಿಗೆನಲು ಬಲ
ವೆಲ್ಲ ಭೀಮನ ಸನ್ನೆಯಲಿ ರಣ
ಮಲ್ಲರೊಡ್ಡಿತು ಹೊರಗೆ ನೃಪ ಮೋಹರದ ಬಾಹೆಯಲಿ ೬೦

ಮುನಿಗಳಂಜದಿರಂಜದಿರಿ ಪರಿ
ಜನಕೆ ಗಜಬಜ ಬೇಡ ಯಾದವ
ಜನಪರುಬ್ಬಟೆ ನಿಲಲಿ ಸೈರಿಸಿ ಪಾಂಡು ಸುತರೆನುತ
ಮೊನೆ ನಗೆಯ ಸಿರಿಮೊಗದ ನೆಗಹಿದ
ಜನದಭಯ ಹಸ್ತಾಂಬುಜದ ಹರಿ
ವಿನುತ ಸಿಂಹಾಸನವನಿಳಿದಾ ಧುರಕೆ ಹೊರವಂಟ ೬೧

ಅಂದಿನಲಿ ಶಿಶುಪಾಲಕನ ತಾ
ಯ್ಬಂದು ಮಗನಪರಾಧ ಶತದಲಿ
ಕಂದಲಾಗದು ಚಿತ್ತವೆಂದಳು ನಮ್ಮನನುಸರಿಸಿ
ಇಂದು ಖತಿಯಿಲ್ಲೆಮಗೆ ಸೈರಿಸ
ಬಂದುದಿಲ್ಲವಗೆರಡು ತಪ್ಪಿನೊ
ಳೆಂದು ಮುರಹರ ನಗುತ ನುಡಿದನು ನಾರದಾದ್ಯರಿಗೆ ೬೨

ಈ ಮಹಾ ಯಜ್ಞವನು ಕೆಡಿಸುವೆ
ನೀ ಮಹೀಶನ ಮುರಿವೆನೆಂದೇ
ವೈಮನಸ್ಯದಿ ಬಗೆದು ಪೊನೆ ಮಾಡಿದನು ನುಡಿಯೆರಡ
ತಾಮಸನ ತರಿದಖಿಳ ಭೂತ
ಸ್ತೋಮ ತುಷ್ಟಿಯು ಕೀರ್ತಿ ಫಲಿಸಲಿ
ಯಿಾ ಮಹಾಶರಕೆನುತ ಕೊಂಡನು ದಿವ್ಯಕಾರ್ಮುಕವ ೬೩

ಝುಂಕೆ ಮಿಗೆ ಹೊರವಂಟುದೆಡ ಬಲ
ಪಂಕದಲಿ ಯಮಸೇನೆ ಪಾಂಡವ
ರಂಕೆಯಲಿ ದಳ ಜೋಡಿಸಿತು ಝಳಪಿಸುವ ಕೈದುಗಳ
ಮುಂಕುಡಿಯ ಮೋಹರದ ದಳ ನಿ
ಶ್ಶಂಕೆಯಲಿ ಜೋಡಿಸಿತು ಭೂಪರ
ಬಿಂಕ ಬೀತುದು ಭೀತಿ ಹೊತುದು ಹುದುಗಿತಾಟೋಪ ೬೪

ತೊಲಗಿದನು ಕುರುರಾಯ ಪಾಂಡವ
ರೊಳಗೆ ತಪ್ಪಿಲ್ಲೆನುತ ಮಿಗೆ ಕುರು
ತಿಲಕನಾವೆಡೆಯೆನುತ ಬಳಿವಿಡಿದರು ನೃಪಾಲಕರು
ಕಲಿ ಜಯದ್ರಥ ಮಾದ್ರಪತಿ ಸೌ
ಬಲ ಕಳಿಂಗ ಕರೂಷ ನೃಪ ಕೌ
ಸಲರು ತಿರುಗಿತು ಬೇರೆ ಭಗದತ್ತಾದಿಗಳು ಸಹಿತ ೬೫

ಚೆಲ್ಲಿತೀ ನೃಪಯೂಥ ಜಾರಲಿ
ಜಳ್ಳುಗಳು ಜಲಜಾಕ್ಷನ ಪ್ರತಿ
ಮಲ್ಲ ತಾನೇ ಸಾಲದೇ ಹಾರುವೆನೆ ಕೆಲಬಲನ
ಖುಲ್ಲರಾಯರು ನಿಲಲಿ ಗೊಲ್ಲರ
ಹಳ್ಳಿಗಾರನ ಕೂಡೆ ಬಿರುದಿನ
ಕಲ್ಲಿಗಳ ತಮ್ಮೆದೆಯಲೊತ್ತಲಿಯೆಂದನಾ ಚೈದ್ಯ ೬೬

ಎನುತ ಖಳನಿದಿರಾಗಿ ಮಧು ಮ
ರ್ದನನ ಹಳಚಿದನಸುರ ರಿಪುವಿನ
ಮೊನೆಗಣೆಯಲೇ ಮುಳುಗಿದನು ಬಳಿಕಾ ಮುಹೂರ್ತದಲಿ
ದನುಜ ವೈರಿಯ ಮುಸುಕಿದನು ತನ
ತನಗೆ ನೋಟಕವಾಯ್ತು ಭೂಪತಿ
ಜನ ಸುನೀತ ಮುರಾರಿಗಳ ಕೌತೂಹಲಾಹವಕೆ ೬೭

ಬಿಡುವ ತೊಡಚುವ ಸಂಧಿಸುವ ಜೇ
ವಡೆವ ಹೂಡುವ ತಾಗಿಸುವ ಹಿಳು
ಕಿಡುವ ಹರಿಕುವ ಬೆಸುವ ಭೇದಿಸುವ ಸಮ ಚಾಪಳವ
ನುಡಿವ ಕವಿ ಯಾರೈ ಬರಿಯ ಬಾ
ಯ್ಬಡಿಕನೇ ಶಿಶುಪಾಲನೀ ಪರಿ
ನಡೆವುದೇಕೈ ಹರಿಯೊಡನೆ ಸಮಬೆಸನ ಬಿಂಕದಲಿ ೬೮

ಸೋತನೈ ಹರಿಯೆಂದು ಚೈದ್ಯನ
ಬೂತುಗಳು ಬಣ್ಣಿಸಿದರೀ ನಿ
ರ್ಭೀತ ಯಾದವ ಸೈನ್ಯವಿದ್ದುದು ಹರುಷ ಕೇಳಿಯಲಿ
ಈತ ರಾವಣ ಮುನ್ನ ಭುವನ
ಖ್ಯಾತನೆಂದಮರರು ವಿಮಾನ
ವ್ರಾತದಲಿ ನೆರೆ ನೋಡುತಿರ್ದುದು ಸಮರ ಸಂಭ್ರಮವ ೬೯

ಧರಣಿಪತಿ ಕೇಳ್ ಕೃಷ್ಣ ಶಿಶು ಪಾ
ಲರ ಮಹಾ ಸಂಗ್ರಾಮ ಮಧ್ಯದೊ
ಳುರಿದುದಿಳೆ ಹೊಗೆದುದು ದಿಶಾವಳಿ ಧೂಮಕೇತುಗಳು
ತರಣಿ ಮಂಡಲ ಮಾಲೆಗಳು ವಿ
ಸ್ತರಿಸಿತಾಕಾಶದಲಿ ಪರ್ವದ
ಲುರವಣಿಸಿದನು ರಾಹು ಚಂದ್ರಾದಿತ್ಯ ಮಂಡಲವ ೭೦

ನಡುಗಿತವನಿಯಕಾಲದಲಿ ಬರ
ಸಿಡಿಲು ಸುಳಿದುದು ಹಗಲು ತಾರೆಗಳ
ಳಿಡಿದವಭ್ರದಲಿಳೆಗೆ ಸುರಿದುದು ರುಧಿರಮಯ ವರ್ಷ
ಮಿಡುಕಿದವು ಪ್ರತಿಮೆಗಳು ಶಿಖರದಿ
ನುಡಿದು ಬಿದ್ದುದು ಕಳಶ ಹೆಮ್ಮರ
ವಡಿಗಡಿಗೆ ಕಾರಿದವು ರುಧಿರವನರಸ ಕೇಳೆಂದ ೭೧

ನೆಳಲು ಸುತ್ತಲು ಸುಳಿದುದಿನ ಮಂ
ಡಳಕೆ ಕಾಳಿಕೆಯಾಯ್ತು ಫಲದಲಿ
ಫಲದ ಬೆಳವಿಗೆ ಹೂವಿನಲಿ ಹೂವಾಯ್ತು ತರುಗಳಲಿ
ತಳಿತ ಮರನೊಣಗಿದವು ಕಾಷ್ಠಾ
ವಳಿಗಳುರೆ ತಳಿತವು ತಟಾಕದ
ಸಲಿಲವುಕ್ಕಿತು ಪಾಂಡುಪುತ್ರರ ಪುರದ ವಳಯದಲಿ ೭೨

ಬೆದರಿದನು ಯಮಸೂನು ಭಯದಲಿ
ಗದಗದಿಸಿ ನಾರದನ ಕೇಳಿದ
ನಿದನಿದೇನೀ ಪ್ರಕೃತಿ ವಿಕೃತಿಯ ಸಕಳ ಚೇಷ್ಟೆಗಳು
ಇದು ಕಣಾ ಚೈದ್ಯಾದಿಗಳ ವಧೆ
ಗುದುಭವಿಸಿಧುದಲೇ ಮುರಾರಿಯೊ
ಳುದಯಿಸುವವುತ್ಪಾತ ಚೇಷ್ಟೆಗಳೆಂದನಾ ಮುನಿಪ ೭೩

ಈ ನೆಗಳಿದುತ್ಪಾತ ಶಾಂತಿ ವಿ
ಧಾನವೇನೆನೆ ಕೃಷ್ಣ ಚೇಷ್ಟೆಯೆ
ಹಾನಿ ವೃದ್ಧಿ ವಿನಾಶವಭ್ಯುದಯ ಪ್ರಪಂಚದಲಿ
ಮಾನನಿಧಿಯೇ ವೇದಸೂಕ್ತ ವಿ
ಧಾನದಲಿ ಪರಿಹಾರ ವಿಶ್ವ
ಕ್ಷೇನಮಯವೀ ಲೋಕ ಯಾತ್ರೆಗಳೆಂದನಾ ಮುನಿಪ ೭೪

ಆ ಹರಿಯೆ ನಿಮಗಿಂದು ಜೀವ
ಸ್ನೇಹಿತನು ನಿಮಗಾವ ಚಿಂತೆ ವಿ
ಮೋಹ ಚೇಷ್ಟೆಗಳಿವನ ವಧೆಗೋ ಬಲ್ಲರಾರಿದನು
ಊಹಿಸಲು ಬೇಡೆಂದು ಮುನಿಪತಿ
ಗಾಹಿನಲಿ ತಿಳುಹಿದನು ಘನ ಸ
ನ್ನಾಹರೆಚ್ಚಾಡಿದರು ಶಿಶುಪಾಲಕ ಮುರಾಂತಕರು ೭೫

ಕಾದಿದರು ವಿವಿಧಾಸ್ತ್ರ ವಿದ್ಯಾ
ಭೇದದಲಿ ರಥಭಂಗ ಚಾಪ ವಿ
ಭೇದ ಶಸ್ತ್ರಾಸ್ತ್ರೌಘ ಸಂಹರಣ ಪ್ರಪಂಚದಲಿ
ಈ ದುರಾತ್ಮನ ನಿಲಿಸಿ ನಿಮಿಷದೊ
ಳಾ ದಯಾಂಬುಧಿ ತುಡುಕಿದನು ತ್ರೈ
ವೇದಮಯಮೂರ್ತಿತ್ರಯಾತ್ಮಕ ವರ ಸುದರ್ಶನವ ೭೬

ಬೆಸಸಿದನು ಚಕ್ರವನು ಧಾರಾ
ವಿಸರಧೂತ ಪರಿಸ್ಫುಲಿಂಗ
ಪ್ರಸರ ತೇಜಃಕಣ ಪರಿಷ್ಕೃತ ನವ್ಯ ಶತಭಾನು
ದೆಸೆ ದೆಸೆಗೆ ದುಪ್ಪಾಳಿಸುವ ಬೆಳ
ಗೆಸೆಯೆ ಬಂದು ಸುನೀತ ಕಂಠದ
ಬೆಸುಗೆ ಬಿಡಲೆರಗಿದುದು ಹಾಯ್ದುದು ತಲೆ ನಭಸ್ಥಳಕೆ ೭೭

ಹರಿಗೊರಳ ಚೌಧಾರೆಯಲಿ ಧುರು
ಧುರಿಸಿ ನೂಕಿತು ರಕುತವದರೊಳು
ಮಿರುಪ ತೇಜಃಪುಂಜವುಕ್ಕಿತು ಹೊದರ ಹೊಳಹಿನಲಿ
ತುರುಗುವೆಳಗಿನ ಜೋಕೆಯಲಿ ಜಗ
ವರಿಯೆ ಬಂದು ಮುರಾರಿಯಂಘ್ರಿಯೊ
ಳೆರಗಿ ನಿಂದುದು ನಿಜನೆಲೆಗೆ ವಿಜಯಾಭಿಧಾನದಲಿ ೭೮

ತಗ್ಗಿತುರು ಕಳಕಳ ವಿಷಾದದ
ಸುಗ್ಗಿ ಬೀತುದು ರಾಯರೀಚೆಯ
ಮುಗ್ಗುಲಲಿ ಮೇಳೈಸಿ ಮೆರೆದರು ಮತ್ತೆ ಬಾಂಧವರು
ನೆಗ್ಗಿದವು ನೆನಹವನ ಸಖಿಗಳು
ಮುಗ್ಗಿದರು ಹುರುಡಿನ ವಿಘಾತಿಯು
ಲಗ್ಗೆಗರು ಹಣುಗಿದರು ಶಿಶುಪಾಲಾವಸಾನದಲಿ ೭೯

ಈಸು ಹಿರಿದಿಲ್ಲೆಂದು ಕೆಲಬರು
ಲೇಸ ಮಾಡಿದನಸುರ ರಿಪುವಿವ
ನೀಸು ಬಾಹಿರನೆಂದರಿಯೆವಾವೆಂದು ಕೆಲಕೆಲರು
ಐಸಲೇ ಕೃಷ್ಣಂಗೆ ಮುನಿದವ
ರೇಸು ದಿನ ಬದುಕುವರು ಲೇಸಾ
ಯ್ತಾ ಸುನೀತಂಗೆಂದು ನಗುತಿರ್ದುದು ನೃಪಸ್ತೋಮ ೮೦

ಗೋಳಿಡುತ ಬಂದೆರಗಿದರು ಶಿಶು
ಪಾಲ ತನುಜರು ಕೃಷ್ಣನಂಘ್ರಿಗೆ
ಲಾಲಿಸಿದನನಿಬರನು ಸಂತೈಸಿದನು ಕರುಣದಲಿ
ಮೇಲುಪೋಗಿನ ವಿಧಿ ವಿಹಿತ ಕ
ರ್ಮಾಳಿಗಳ ಮಾಳ್ಪವನ ಮಗಗೆ ಕೃ
ಪಾಳು ಪಟ್ಟದ ಸೇಸೆದಳಿದನು ವೀರನಾರಯಣ ೮೧

## ಹನ್ನೊಂದನೆಯ ಸಂಧಿ

ಸೂ. ರಾಜಸೂಯ ಕ್ರತು ಸಮಾಪ್ತಿಯೊ
ಳಾ ಜನಾರ್ದನ ಮುಖ್ಯರನು ಯಮ
ರಾಜಸುತ ಕಳುಹಿದನು ಹೊಕ್ಕರು ತಮ್ಮ ನಗರಿಗಳ

ಕೇಳು ಜನಮೇಜಯ ಧರಿತ್ರೀ
ಪಾಲ ರಣ ಗಜಬಜದ ಗೋಳಾ
ಗೋಳಿ ತಣಿತುದು ಹಂತಿಗಟ್ಟಿತು ಮತ್ತೆ ನೃಪನಿಕರ
ಮೇಲಣಂತರ್ವೇದಿಗಳ ಮುನಿ
ಪಾಳಿ ಮಂತ್ರಾಹುತಿಗೆ ಕವಿವುರಿ
ನಾಲಗೆಯ ಲಾವಣಿಗೆ ತಳಿತುದು ಯಜ್ಞಕುಂಡದಲಿ ೧

ತಳಿತು ತಿವಿದಾಡಿದವು ಮುರಿದೊಡ
ಗಲಸಿದವು ಹೊಗೆ ಸುತ್ತಿ ಸಿಮಿ ಸಿಮಿ
ಮೊಳಗಿ ಹೊದರೆದ್ದವು ಸಗಾಢದಲುಬ್ಬಿ ಭಗು ಭುಗಿಸಿ
ಸುಳಿ ಸುಳಿದು ಭೋರೆಂದು ಬಿಗಿದ
ವ್ವಳಿಸಿದವು ಘೃತ ಧಾರೆಗಳಿಗು
ಜ್ವಳಿಸಿದವು ಹರಹಿನಲಿ ನಾಲಗೆ ಹವ್ಯವಾಹನನ ೨

ಶ್ರುತಿ ವಿಧಾನರ ವಿಮಳ ಪೂರ್ಣಾ
ಹುತಿಯ ಪಾರಾಯಣದ ನಿಗಮ
ಪ್ರತತಿಗಳ ಪರಿಪೂತ ಪರಿಮಳಮಯ ದಿಶಾವಳಿಯ
ಕ್ರತು ಸಮಾಪ್ತಿಯಲವಭೃತದ ಭೂ
ಪತಿಯ ವಿಮಳಸ್ನಾನ ಪುಣ್ಯೋ
ಚಿತದಲೋಕುಳಿಯಾಡಿ ದಣಿದುದು ಲೋಕ ಸುರ ನರರ ೩

ಅರಸ ಚಿತ್ತವಿಸೊಂದು ಲಕ್ಷದ
ಧರಣಿಯುಮರರ ಭೋಜನಾಂತಕೆ
ಮೊರೆವುದೊಂದೇ ಬಾರಿ ಶಂಖಧ್ವನಿ ಛಡಾಳದಲಿ
ಪರುತವಣೆಯಿದು ರಾಜ ಸೂಯಾ
ಧ್ವರದ ಮೊದಲವಸಾನ ಪರಿಯಂ
ತರದೊಳೋರಂತದಲಿ ಹಗಲಿರುಳೂದಿತನವರತ ೪

ಐಸು ಲಕ್ಷವದೇಸು ಕೋಟಿಯ
ದೇಸು ನಿರ್ಬುದವೇಸು ಖರ್ವವ
ದೇಸು ಪದ್ಮದ್ವಿಜರ ಗಣನೆಯನರಿವರಾರದನು
ಐಸು ಭಕ್ಷ್ಯೋದನದ ಪರ್ವತ
ರಾಶಿ ದಧಿ ಘೃತ ದುಗ್ಧ ಮಧು ವಾ
ರಾಸಿಯೊಡ್ಡಣೆ ಮೆರೆದುದಿಂದ್ರಪ್ರಸ್ಥ ನಗರಿಯಲಿ ೫

ಓಗರದ ರಾಶಿಗಳ ಗಿರಿ ಕಂ
ಡಾಗಲಂತಿರೆ ಮರಳಿ ಕಾಣೆನು
ಸಾಗರದವೊಲೆ ದಧಿ ಘೃತಾದಿ ಮಹಾ ಪ್ರವಾಹಚಯ
ಆಗಳಂತಿರೆ ಬತ್ತುವವು ನಿಮಿ
ಷಾಗಮಕೆ ತುಂಬುವವು ಯಮಜನ
ಯಾಗಲಕ್ಷ್ಮಿಯನಲ್ಪಮತಿ ಬಣ್ಣಿಸುವಡರಿದೆಂದ ೬

ಅರಸ ಮೈಯಿಕ್ಕಿದನು ಸನ್ಮುನಿ
ವರ ಸಮಾಜಕೆ ನಿಮ್ಮ ಕೃಪೆಯಲಿ
ಧರಣಿಪಾಧ್ವರ ಸಿದ್ಧಿಯಾಯ್ತು ನಿರಂತರಾಯದಲಿ
ಕರುಣ ನಿಮ್ಮದು ನಿಮ್ಮ ಮಿಗೆ ಸ
ತ್ಕರಿಸಲರಿಯೆನು ಹೆಚ್ಚು ಕುಂದಿನ
ಹುರುಳನೀಕ್ಷಿಸಲಾಗದೆಂದನು ಮುಗಿದು ಕರಯುಗವ ೭

ಮನ್ನಿಸಿದನವರುಗಳನುಡುಗೊರೆ
ಹೊನ್ನ ವಿವಿಧಾಭರಣ ಪಶುಗಳ
ಉನ್ನತಾಶೀರ್ವಾದ ವಚನದೊಳವನಿಪನ ಹರಸಿ
ಸನ್ನುತರು ತಮ್ಮಾಶ್ರಮಕೆ ಸಂ
ಪನ್ನ ಸತ್ಕರು ಮರಳಿದರು ಪ್ರತಿ
ಪನ್ನ ಯಜ್ಞ ವಿಳಾಸನೊಪ್ಪಿದನಿಂದ್ರ ವಿಭವದಲಿ ೮

ರಾಜ ವರ್ಗವನವರವರ ನಿಜ
ತೇಜ ಮಾನ್ಯೋಚಿತದ ಗಜ ರಥ
ವಾಜಿ ವಿವಿಧಾಭರಣ ವಸನ ವಧೂ ಕದಂಬದಲಿ
ಆ ಜಗತ್ಪತಿಯುಳಿಯೆ ಪಾರ್ಥಿವ
ರಾಜಿಯನು ಮನ್ನಿಸಿ ಯುಧಿಷ್ಠಿರ
ರಾಜನನುಜರು ಕೂಡಿ ಕಳುಹಿಸಿದನು ಮಹೀಶ್ವರರ ೯

ಫಲುಗುಣನು ಧೃತರಾಷ್ಟ್ರ ಭೀಷ್ಮರ
ಕಳುಹಿಸಿದನು ಗುರು ಗುರುತನೂಜರ
ಬಳಿಯೊಳನಿಲಜ ಬಂದನಾ ಕೃಪನೊಡನೆ ಸಹದೇವ
ಬಳಿಯಲೈದಿದ ನಕುಲನಾ ಸೌ
ಬಲನ ಸೈಂಧವ ಶಲ್ಯನನು ಕೌ
ಸಲ ವಿರಾಟ ದ್ರುಪದಸುತ ಭಗದತ್ತ ಭೂಪತಿಯ ೧೦

ಅರಸ ಕೇಳೈ ಪಾಂಡ್ಯ ಭೂಮಿಾ
ಶ್ವರ ಕಳಿಂಗ ಪ್ರಮುಖ ತೆಂಕಣ
ಧರಣಿಪರ ಬಳಿಯಲಿ ಘಟೋತ್ಕಚ ಯೋಜನಾಂತರವ
ವರ ಕುಮಾರರು ನಿಖಿಳ ಪೃಥ್ವೀ
ಶ್ವರರನವರವರುಚಿತದಲಿ ಸತು
ಕರಿಸಿ ಮರಳಿದು ಬಂದರಿಂದ್ರಪ್ರಸ್ಥ ಪುರವರಕೆ ೧೧

ಕರೆಸಿದನು ಹರಿ ಪಾಂಡು ಪುತ್ರರ
ನರಸಿ ಸಹಿತೇಕಾಂತ ಭವನದೊ
ಳುರುತರ ಪ್ರೇಮೈಕ ರಸ ಸಂಸಿಕ್ತ ವಚನದಲಿ
ಭರಿತವಾಯಿತೆ ರಾಜಸೂಯಾ
ಧ್ವರ ಸದಾಹುತಿ ತೃಪ್ಯಮಾಣಾ
ಮರ ಮಹೀಶ್ವರ ವಿಭವ ವಿಳಸಿತ ಪಾಂಡು ಪದವೆಂದ ೧೨

ದೇವನಂಘ್ರಿಯ ಮುಸುಕಿದವು ಮುಕು
ಟಾವಳಿಗಳೈವರ ಸತಿಯ ಸಂ
ಭಾಷಣೆಯ ಮಧುರೋಕ್ತಿರಸದಲಿ ನಗುತ ಮನ್ನಿಸಿದ
ಓವಿದನು ಮುರವೈರಿ ಕಾರು
ಣ್ಯಾವಲೋಕನದಿಂದ ನಿನ್ನವ
ರಾವ ಭವದಲಿ ಭಜಿಸಿದರೊ ನಿಷ್ಠೆಯಲಿ ಹರಿಪದವ ೧೩

ದೇವ ನಿಮ್ಮಡಿಯಂಘ್ರಿ ಕಮಲವ
ನಾವ ನೆನೆದನವಂಗೆ ತುಸುವ
ಲ್ಲಾ ವಿರಿಂಚಾದ್ಯಮರ ಪದವಿದು ನಿಗಮ ಸಿದ್ಧವಲೆ
ನಾವು ಸಾಕ್ಷಾದಮಳ ಮೂರ್ತಿ ಸು
ಧಾವಸೇಚನ ಧೂತ ಕಿಲ್ಬಿಷ
ರಾವುದರಿದೈ ಬೊಪ್ಪನವರಿಗೆ ಶಕ್ರಪದವೆಂದ ೧೪

ಮಸಗಿದರೆ ಮಾಗಧನು ಯಜ್ಞಪ
ಮಿಸುಕಲೀವನೆ ಚೈದ್ಯನಿಂದು
ಬ್ಬಸವ ಮಾಡಿದೊಡೆಮ್ಮ ಕೈಯಲಿ ಹರಿವ ಹೆಕ್ಕಳವೆ
ಶಿಸುಪೊರಲಿದರೆ ಕಂಬದಲ್ಲಿ ತೋ
ರಿಸಿದ ಕರುಣಾಜಲಧಿಯೇ ಪಾ
ಲಿಸಿದೆಲಾ ಪಾಂಡವರನೆಂದಳು ಹೊರಳಿ ಚರಣದಲಿ ೧೫

ಏಳೆನುತ ತೆಗೆದಪ್ಪಿದನು ಕರು
ಣಾಳು ಪರಿತೋಷಾಶ್ರುಪೂರ್ಣ ವಿ
ಶಾಲ ಲೋಚನ ನೋಡಿದನು ತನ್ನವರನೊಲವಿನಲಿ
ಬಾಲಕಿಯೆ ಬಾ ತಂಗಿ ಬಾ ನೀ
ಲಾಳಕಿಯೆ ಬಾಯೆನುತ ಮಿಗೆ ಪಾಂ
ಚಾಲೆಯನು ಕರೆದಸುರರಿಪು ಸೂಚಿಸಿದನಂಗನೆಗೆ ೧೬

ನಂಬದಿರು ಸಿರಿಯನು ಪತಿವ್ರತೆ
ಯೆಂಬರಿಗೆ ನೀ ಗುರು ವಿಷಾದ ವಿ
ಡಂಬ ಹರುಷಂಗಳಲಿ ನೀನೀಹುದೇಕ ಚಿತ್ತದಲಿ
ತುಂಬುವುದು ಬತ್ತುವುದು ರಾಜ್ಯದ
ಡೊಂಬು ಹರಿಮೇಖಲೆಯ ವಿದ್ಯಾ
ಡಂಬರವಿದೆಂದಸುರರಿಪು ಸೂಚಿಸಿದನಂಗನೆಗೆ ೧೭

ವಿಷವ ಗೆಲಿದಿರಿ ಹಿಂದೆ ಕಿಚ್ಚಿನ
ದೆಸೆಯಲುಳಿದಿರಿ ದಾಯಗರು ದು
ರ್ವ್ಯಸನಿಗಳು ದುಸ್ಸಹವು ನಿಮ್ಮಭ್ಯುದಯವಹಿತರಿಗೆ
ವಿಷಮವಿವಲೇ ದ್ಯೂತ ಮೃಗಯಾ
ವ್ಯಸನ ಪಾರ್ಥಿವ ಜಾತಿಗಿವು ದು
ರ್ವಿಷಯವಿವರಲಿ ನೆಗ್ಗಿದರು ನಳ ದಶರಥಾದಿಗಳು ೧೮

ಸೋತು ನಡೆವುದು ಹಿರಿಯರಲಿ ಸಂ
ಪ್ರೀತಿಯನು ಸುಜನರಲಿ ನಿರ್ಮಳ
ನೀತಿಯನು ಪರಿವಾರ ಪುರಜನ ನಾಡು ಬೀಡಿನಲಿ
ಖಾತಿಯನು ಧರ್ಮದಲಿ ವೈರಿ
ವ್ರಾತದಲಿ ಪೌರುಷವನಖಿಳ
ಜ್ಞಾತಿಗಳಲೆಚ್ಚರಿಕೆಯೊಳಗಿಹುದೆಂದನಸುರಾರಿ ೧೯

ಎಂದು ಬುದ್ಧಿಯ ಹೇಳಿ ಪಾರ್ಥನ
ನಂದನನ ಕರೆಸಿದನು ತಾಯ್ಸಹಿ
ತೆಂದನವರಿಗೆ ನಯದಲುಚಿತ ಪ್ರೀತಿ ವಚನದಲಿ
ಬಂದು ಕುಂತಿಗೆ ಸಾರನಗೆ ನುಡಿ
ಯಿಂದ ವಿನಯವ ಮಾಡಿ ಪಾಂಡವ
ನಂದನರ ಮನ್ನಿಸಿದನತಿ ಕಾರುಣ್ಯ ಭಾವದಲಿ ೨೦

ಯಾದವರು ಪಾಂಡವರು ತನ್ನವ
ರಾದುದದುವೆ ಕುಟುಂಬವದು ಮಹ
ದಾದಿ ಸೃಷ್ಟಿಗದಾರ ರಕ್ಷೆ ಕುಟುಂಬವಾವನದು
ಆದರಿಸಿದನು ಕೆಲಬರನು ಹೊರ
ಗಾದವರು ಕೆಲರಾಯ್ತು ಹರಿ ಮಾ
ಯಾ ದುರಾಗ್ರಹ ವೃತ್ತಿಯಿಾ ಹದನೆಂದನಾ ಮುನಿಪ ೨೧

ಆ ಶುಭಗ್ರಹಮುದಯದಲಿ ತಿಥಿ
ರಾಶಿ ನಕ್ಷತ್ರಾದಿ ಪ್ರಶಸ್ತೋ
ದ್ಭಾಸಮಾನ ಮುಹೂರ್ತದಲಿ ಸುಸ್ವರ ವಿಳಾಸದಲಿ
ಭೂಸುರಾಶೀರ್ವಾದದಲಿ ಲ
ಕ್ಷ್ಮೀಶ ಪಯಣವ ಮಾಡಿದನು ಕ
ಟ್ಟಾಸುರದಲೊದರಿದವು ಘನ ಗಂಭೀರ ಭೇರಿಗಳು ೨೨

ದೇಶದಲಿ ಕಾಲದಲಿ ದೆಸೆಯಲಿ
ರಾಶಿಯಲಿ ತಾರಾಗ್ರಹಾದಿಗ
ಳೈಸರಲಿ ತಾ ತನ್ನ ಚೇಷ್ಟೆಗಳಿವರ ವರ್ತನಕೆ
ಈಸು ಮಹಿಮೆಯ ಮೆರೆಸಿ ಲೋಕ ವಿ
ಳಾಸ ಚೇಷ್ಟೆಯನನುಸರಿಸಿ ನರ
ವೇಷವನು ನಟಿಸಿದನು ಹರಿ ಹೂಳಿದ ನಿಜೋನ್ನತಿಯ ೨೩

ಕಲಿ ವಿಡೂರಥ ಸಾಂಬ ಸಾತ್ಯಕಿ
ದಳಪತಿ ಪ್ರದ್ಯುಮ್ನ ಯಾದವ
ಕುಲ ಸಚಿವನಕ್ರೂರನುದ್ಧವ ಚಾರು ಕೃತವರ್ಮ
ಬಲು ಪದಾತಿಯ ರಥ ನಿಕರದ
ಗ್ಗಳೆಯ ಗಜ ವಾಜಿಗಳ ಸಂದಣಿ
ಯೊಳಗೆ ನಿಂದರು ಕೃಷ್ಣರಾಯನ ರಥದ ಬಳಸಿನಲಿ ೨೪

ಅನುಜ ತನುಜರು ಸಹಿತ ಕುಂತೀ
ತನಯ ದೂರಕೆ ಕಳುಹಿ ಮರಳಿದು
ಮನೆಗೆ ಬಂದನು ಕೃಷ್ಣವಿರಹ ವಿಶಾಲ ಖೇದದಲಿ
ಮುನಿಪ ವೇದವ್ಯಾಸ ಧೌಮ್ಯರ
ನನುಸರಿಸಿ ದಾಹಿಸುವ ದುಗುಡವ
ನನಿತುವನು ಬಿನ್ನವಿಸಿದನು ಮಿಡಿಮಿಡಿದು ಕಂಬನಿಯ ೨೫

ಅಸುರರಿಪು ಕೃಪೆಯಿಂದ ನಿರ್ವಾ
ಹಿಸಿದನೀ ಯಜ್ಞವನು ಪೂರ್ವದ
ವಸುಮತೀಶರ ಪಾಡಿಗೆಣೆಯೆಂದೆನ್ನ ಪತಿಕರಿಸಿ
ಬಿಸುಟು ಬಿಜಯಂಗೈದನೀಯು
ಬ್ಬಸವನಾರೊಡನುಸುರುವೆನು ಹಿಂ
ದೆಸೆವ ಗೋಕುಲವಾಯ್ತು ಪುರವಿದು ಕೃಷ್ಣವಿರಹದಲಿ ೨೬

ಅರಸ ಕೇಳ್ಳೈ ದೈತ್ಯ ದಾನವ
ರುರವಣೆಯ ಯದು ನಾಯಕರು ನಿ
ಸ್ತರಿಸಲರಿಯರು ಕೃಷ್ಣನಿಲ್ಲದೆ ಭೀತಿ ದ್ವಾರಕೆಗೆ
ಕರುಣ ನಿಮ್ಮಲಿ ಕಿರಿದೆ ನಿಮ್ಮೊಳ
ಗೆರಕವಲ್ಲವೆ ಚಿಂತೆ ಸಾಕಂ
ತಿರಲಿಯೆಂದವನೀಶನನು ಸಂತೈಸಿದನು ಮುನಿಪ ೨೭

ಆ ಮುಕುಂದನ ನೆನಹು ನಮಗೆ ನಿ
ರಾಮಯವು ನೀವಿರಲು ಚಿಂತಾ
ವೈಮನಸ್ಯದ ವೇಧೆ ಮುರಿದುದು ಸಾಕದಂತಿರಲಿ
ಈ ಮಹೋತ್ಪಾತ ಪ್ರಬಂಧ ವಿ
ರಾಮ ಕರ್ಮವ ಬೆಸಸಿಯೆನೆ ನಗು
ತಾ ಮುನೀಶ್ವರ ನುಡಿದನವನೀಪತಿ ಶಿರೋಮಣಿಗೆ ೨೮

ಇದು ಕಣಾ ಕುರುರಾಯ ವಂಶಾ
ಭ್ಯುದಯ ವಿಗ್ರಹಪೂರ್ವ ಸೂಚಕ
ವಿದು ಸುಯೋಧನ ನೃಪನ ಕತಿಪಯ ಕಾಲ ಸುಖಬೀಜ
ಇದು ಸಮಸ್ತ ಕ್ಷತ್ರ ಕುಲ ವಾ
ರಿದಘಟೋಚ್ಚಾಟನ ಸಮೀರಣ
ವಿದರ ಫಲ ನಿಮಗಪಜಯಾವಹವೆಂದನಾ ಮುನಿಪ ೨೯

ಅರಿವಿಹುದು ನೀನಾಪ್ತ ವಚನವ
ಮರೆಯದಿರು ವೇದೋಕ್ತ ಕರ್ಮದ
ಹೊರಿಗೆ ನಿನ್ನದು ನಿನ್ನ ಹೊದ್ದದು ಕಲುಷ ಕಲಿಮಲದ
ಕರುಬರೀ ಕೌರವರು ಮುಖವಿದು
ಮೆರೆದುದದ್ಭುತವಾಗಿ ನಿನ್ನನು
ಮುರಿವರಲ್ಲದೆ ನಿಮ್ಮವರು ಸೈರಿಸುವರಲ್ಲೆಂದ ೩೦

ನುಡಿಯದಿರಸತ್ಯವನು ರಾಜ್ಯವ
ಬಿಡು ವಿಭಾಡಿಸಿ ನಿನ್ನ ವಧುವಿನ
ಮುಡಿಗೆ ಹಾಯ್ದರೆ ನೀನಧರ್ಮದ ತಡಿಯನಡರದಿರು
ಒಡಲುಗೂಡಿ ಸಮಸ್ತ ಧನವಿದು
ಕೆಡುವುದಗ್ಗದ ಮೋಕ್ಷಲಕ್ಷ್ಮಿಯ
ಮುಡಿಗೆ ಹಾಯ್ವೊಡೆ ಸತ್ಯವೊಂದನೆ ನಂಬು ನೀನೆಂದ ೩೧

ಅಜ್ಞರವದಿರು ನೀವು ನೆರೆ ಸ
ರ್ವಜ್ಞರವದಿರಧರ್ಮನಿಷ್ಠರು
ಯಜ್ಞ ದೀಕ್ಷಿತರಿಂದು ನೀವು ಸಮಸ್ತ ಜಗವರಿಯೆ
ಯಜ್ಞರಿಪುಗಳು ನಿಪುಣರಿಗೆ ವರ
ಯಾಜ್ಞಿಕರಿಗಾಚಾರಹೀನರ
ಭಿಜ್ಞಮತವಿದು ತಪ್ಪದೆಂದನು ಮುನಿ ನೃಪಾಲಂಗೆ ೩೨

ಇದುವೆ ರೇಖಾಮಾತ್ರ ಸರ್ವಾಂ
ಗದಲಿ ನಿನ್ನನು ಮರೆಯದಿರು ಕೊಂ
ಕಿದರೆ ಕರುಣಾಜಲಧಿ ಜೈಸಲುವುಂಟು ಹರಿ ನಿನಗೆ
ಬೆದರದಿರು ವಿಗಡಿಸುವ ವಿಷಯಾ
ಸ್ಪದದೊಳೆಂದು ಮುನೀಂದ್ರನೈವರು
ಸುದತಿ ಸಹಿತನಿಬರಿಗೆ ಬುದ್ಧಿಯ ಹೇಳಿ ಹೊರವಂಟ ೩೩

ಮುನಿಪ ಕಳುಹಿಸಿಕೊಂಡು ಬದರೀ
ವನಕೆ ತಿರುಗಿದನತ್ತಲಿತ್ತಲು
ಜನಪ ಬಂದನು ಬಳಿಕ ಮಯನಿರ್ಮಿತ ಮಹಾಸಭೆಗೆ
ಮುನಿಗಳುಳಿದವರನು ಮಹೀಸುರ
ಜನ ಸಹಿತ ಭೂಪಾಲ ಶೇಷವ
ನನುನಯದಿ ಮಿಗೆ ಸತ್ಕರಿಸಿ ಬೀಳ್ಕೊಟ್ಟನುಚಿತದಲಿ ೩೪

ಅರಸ ಕೇಳ್ಳೈ ಕೌರವೇಂದ್ರನ
ಕರೆಸಿದನು ದುಶ್ಶಾಸನಾದಿಕ
ದುರುಳ ಕೌರವ ಶತಕ ಸಹಿತಲೆ ಸಭೆಗೆ ನಡೆತಂದು
ಪರಿಭವಕೆ ಗುರಿಯಾಗಿ ಹಾಸ್ಯದ
ಹರಹಿನಲಿ ಹಳುವಾಗಿ ಪಾಂಡವ
ರರಸನನು ಬೀಳ್ಕೊಂಡು ಹಸ್ತಿನಪುರಕೆ ಹೊರವಂಟ ೩೫

ಭೂಮಿಲಂಬದ ನಿಖಿಳ ಭೂಪ
ಸ್ತೋಮ ಸಹಿತ ಸುಯೋಧನನು ಪ್ರ
ತ್ಯಾಮಸದ ಚಾವಡಿಯ ಝಾಡಿಯ ರೋಷ ಪಾವಕದ
ಧೂಮಮುಬ್ಬೆನೆತಂದು ಗಜಪುರ
ಸೀಮೆಯಲಿ ಪಾಳಯವ ಬಿಡಿಸಿದ
ವೈಮನಸ್ಯದಲಿರುಳು ಹೊಕ್ಕನು ಹಸ್ತಿನಾಪುರವ ೩೭

## ಹನ್ನೆರಡನೆಯ ಸಂಧಿ

ಸೂ. ಕಾಲ ಪಾಶಾಕರುಷದಲಿ ಭೂ
ಪಾಲನಿಂದ್ರಪ್ರಸ್ಥ ನಗರಿಯ
ಬೀಳುಕೊಂಡನು ಬಂದು ಹೊಕ್ಕನು ಹಸ್ತಿನಾಪುರವ

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವ ರಾಯನಿತ್ತಲು
ಮೇಲು ಮುಸುಕಿನ ಹೊತ್ತ ದುಗುಡದ ಹೊಗರ ಹೊಗೆ ಮೊಗದ
ತಾಳಿಗೆಯ ನಿರ್ದ್ರವದ ಮತ್ಸರ
ದೇಳಿಗೆಯಲಿಕ್ಕಡಿಯ ಮನದ ನೃ
ಪಾಲ ಹೊಕ್ಕನು ನಡುವಿರುಳು ನಿಜ ರಾಜಮಂದಿರವ ೧

ಆರತಿಯ ಗಣಿಕೆಯರ ಸುಳಿವು
ಪ್ಪಾರತಿಯ ದಾದಿಯರ ಪಾಯವ
ಧಾರು ಸೂಳಾಯತರ ಮಂಗಳ ವಚನವೈದೆಯರ
ದೂರದಲಿ ನಿಲಿಸಿದನು ಭಂಗದ
ಭಾರಣೆಯ ಬಿಸುಸುಯ್ಲ ಸೂರೆಯ
ಸೈರಣೆಯ ಸೀವಟದ ಸಿರಿ ಮಂಚದಲಿ ಪವಡಿಸಿದ ೨

ಭಾನುಮತಿ ಬರೆ ಮುರಿದ ಮುಸುಕಿನ
ಮೌನಿ ನೂಕಿದನಿರುಳನುದಯದ
ನೂನ ಮಂಗಳ ಪಟಹ ಶಂಖಧ್ವನಿಯ ಮಾಣಿಸಿದ
ಭಾನುವಿಂಗರ್ಘ್ಯಾದಿ ಕೃತ್ಯವ
ನೇನುವನು ಮನ್ನಿಸದೆ ಚಿತ್ತದೊ
ಳೇನ ನೆನೆದನೊ ಭೂಪನಿದ್ದನು ಖತಿಯ ಭಾರದಲಿ ೩

ಬೇಟೆ ನಿಂದುದು ಗಜ ತುರಗದೇ
ರಾಟ ಮಾದುದು ಕೇಳ ಮೇಳದ
ತೋಟಿಯಲ್ಲಿಯದಲ್ಲಿ ಕವಡಿಕೆ ನೆತ್ತ ಮೊದಲಾದ
ನಾಟಕದ ಮೊಗರಂಬವೆನಿಪ ಕ
ವಾಟ ತೆರೆಯದು ಹೊಕ್ಕಸೂಯದ
ಕೋಟಲೆಯ ಕಡುಹೂಟ ಕವರಿತು ನೃಪನ ತನುಮನವ ೪

ದ್ರೋಣ ಭೀಷ್ಮಾದಿಗಳು ಸಮಯವ
ಕಾಣರುಳಿದ ಪಸಾಯ್ತ ಸಚಿವ
ಶ್ರೇಣಿ ಬಾಗಿಲ ಹೊರಗೆ ನಿಂದುದು ಮತ್ತೆ ಮನೆಗಳಲಿ
ಕಾಣೆನೊಳಪೈಕದ ಸುವೇಣಿಯ
ರಾಣಿಯರ ದುರ್ಮನದ ಬೆಳಸಿನ
ಕೇಣಿಯನು ಕೈಕೊಂಡನೊಬ್ಬನೆ ಕೌರವರರಾಯ ೫

ಸಮಯವಿಲ್ಲೋರಂತೆ ಮೌನ
ಭ್ರಮೆಯ ಬಿಗುಹಿನ ಕೇರಿ ಕೇರಿಯ
ಕುಮತಿಗಳ ಗುಜು ಗುಜಿನ ಗುಪ್ತದ ಮುಸುಕುಗೈದುಗಳ
ತಮ ತಮಗೆ ಬಿರುದುಗಳ ಗಣಿಕಾ
ರಮಣ ವೈರದ ಹೆಚ್ಚು ಕುಂದಿನ
ಸಮರ ಭಟರಿರಿದಾಡಿದರು ನಿರ್ನಾಮ ಭಾವದಲಿ ೬

ಸ್ತ್ರೈಣ ಚೇಷ್ಟಿತನೆಂದು ಕೆಲಬರು
ಕಾಣೆವರಸನನೆಂದು ಕೆಲರ
ಕ್ಷೀಣ ರೋಗಿತನೆಂದು ಕೆಲರು ವಿಷ ಪ್ರಯೋಗದಲಿ
ಪ್ರಾಣ ಶೋಷಿತನೆಂದು ಕೆಲಬರು
ಜಾಣನೂಹೆಯ ಜನದ ನೆನಹಿನ
ಸಾಣೆಯಲಿ ಸವೆಯಿತ್ತು ಕೌರವ ನೃಪನ ನಿರ್ದೇಶ ೭

ಅಕಟ ಕೌರವರಾಯ ರಾಜ
ನ್ಯಕ ಶಿರೋಮಣಿಯಿರಲು ಧರೆ ರಾ
ಜಕ ವಿಹೀನ ವಿಡಂಬವಾಯ್ತೇ ಶಿವ ಶಿವಾಯೆನುತ
ಸಕಲ ದಳ ನಾಯಕರು ಮಂತ್ರಿ .
ಪ್ರಕರ ಚಿಂತಾಂಬುಧಿಯೊಳದ್ದಿರೆ
ಶಕುನಿ ಬಂದನು ಕೌರವೇಂದ್ರನ ರಾಜಮಂದಿರಕೆ ೮

ಕರೆದು ಬಾಗಿಲವರಿಗೆ ತನ್ನಯ
ಬರವನರುಹಿಸಲವರು ರಾಯನ
ಹೊರೆಗೆ ಬಂದರು ನುಡಿದರಂಗೈ ತಳದ ಬಾಯ್ಗಳಲಿ
ಅರಸ ಬಿನ್ನಹ ಮಾವದೇವರು
ದರುಶನಾರ್ಥಿಗಳೆನಲು ಮನದಲಿ
ಕುರು ನೃಪತಿ ಚಿಂತಿಸುತ ಬರಹೇಳೆಂದು ನೇಮಿಸಿದ ೯

ಹೊಕ್ಕನೀತನು ಕೌರವೇಂದ್ರನ
ನೆಕ್ಕಟಿಯೊಳಿರೆ ಕಂಡು ನುಡಿಸಿದ
ನಕ್ಕಜದ ರುಜೆಯೇನು ಮಾನಸವೋ ಶರೀರಜವೊ
ಮುಕ್ಕುಳಿಸಿ ಕೊಂಡಿರದಿರಾರಿಗೆ
ಸಿಕ್ಕಿದಿಯೊ ಸೀಮಂತಿನಿಯರಿಗೆ
ಮಕ್ಕಳಾಟಿಕೆ ಬೇಡ ನುಡಿ ಧೃತರಾಷ್ಟ್ರನಾಣೆಂದ ೧೦

ಮಾವ ನೀವ್ ಮರುಳಾದಿರೇ ನನ
ಗಾವ ರುಜೆಯಿಲ್ಲಂಗನೆಯರುಪ
ಜೀವಿಯೇ ನೀವರಿಯಿರೇ ಹಿಂದೀಸು ಕಾಲದಲಿ
ನೋವು ಬೇರಿಲ್ಲೆನಗೆ ನಿಳಯಕೆ
ನೀವು ಬಿಜಯಂಗೈವುದಂತ
ರ್ಭಾವ ವಹ್ನಿಯನೇಕೆ ಬೆದಕುವಿರೆಂದನಾ ಭೂಪ ೧೧

ಏನು ನಿನ್ನಂತಸ್ಥ ಹೃದಯ ಕೃ
ಶಾನು ಸಂಭವವೇಕೆ ನುಡಿ ದು
ಮ್ಮಾನ ಬೇಡೆನ್ನಾಣೆನುತ ಸಂತೈಸಿದನು ನೃಪನ
ಏನು ಭಯ ಬೇಡೆಂದೆನಲು ಯಮ
ಸೂನು ವೈಭವ ವಹ್ನಿದಗ್ಧ ಮ
ನೋನುಭಾವವನೇಕೆ ನುಡಿಸುವಿರೆಂದನಾ ಭೂಪ ೧೨

ಹೇಳು ಹೇಳೇನೇನು ಪಾಂಡು ನೃ
ಪಾಲ ಪುತ್ರರ ವಿಭವ ವಹ್ನಿ
ಜ್ವಾಲೆಯಲಿ ಮನ ಬೆಂದುದೇ ಹರಹರ ವಿಚಿತ್ರವಲ
ಪಾಲಕನು ಧರ್ಮಜನು ಸಲೆ ಕ
ಟ್ವಾಳುಗಳು ಭೀಮಾರ್ಜುನರು ಬೆ
ಳ್ವಾಳ ಹಬ್ಬುಗೆಯ್ಯೆಸಲೇ ಪಾಂಡವರ ಸಿರಿಯೆಂದ ೧೩

ಅವರು ಪಿತ್ರಾರ್ಜಿತದ ರಾಜ್ಯ
ಪ್ರವರ ಪಾತ್ರರು ನಿನ್ನಸೂಯೆಯ
ಕವಲು ಮನದ ಕುಠಾರ ಬುದ್ಧಿಯ ಕಲುಷ ಭಾವನೆಯ
ವಿವರಣೆಯನವರೆತ್ತ ಬಲ್ಲರು
ಶಿವ ಶಿವಾ ಭುವನೈಕ ಮಾನ್ಯರ
ನವಗಡಿಸಲಂಗೈಸಿದೈ ಮಾಣೆಂದನಾ ಶಕುನಿ ೧೪

ಲೇಸು ಬಿಜಯಂಗೈಯಿ ನೀವೆ
ನ್ನಾಸರಾಗ್ನಿಯನೇಕೆ ಕೆಣಕುವಿ
ರಾಸುರವಿದೇಕೆನ್ನೊಡನೆ ಸೈರಿಸುವುದುಪಹತಿಯ
ಈಸು ನುಡಿವರೆ ಮಾವಯೆನುತ ಮು
ಹೀಶ ಕಂಬನಿದುಂಬಿ ನೆನಹಿನ
ಬೇಸರಕೆ ಬಿಸುಸುಯ್ದು ಧೊಪ್ಪನೆ ಕೆಡದನವನಿಯಲಿ ೧೫

ಎತ್ತಿದನು ಕಣ್ಣೆವೆಯ ಕಿರುವನಿ
ಮುತ್ತುಗಳ ಕೇವಣಿಯ ಶಕುನಿ ನೃ
ಪೋತ್ತಮನೆ ಬಾ ಕಂದ ಬಾಯೆಂದಪ್ಪಿ ಕೌರವನ
ಕಿತ್ತು ಬಿಸುಡುವೆನಹಿತರನು ನಿನ
ಗಿತ್ತೆನಿಂದ್ರಪ್ರಸ್ಥಪುರವನು
ಹೆತ್ತ ತಾಯ್ ಗಾಂಧಾರಿ ಸಂತೋಷಿಸಲಿ ಬಳಿಕೆಂದ ೧೬

ಮಾವ ಕೇಳತಿ ಬಲರು ಫಲುಗುಣ
ಪಾವಮಾನಿಗಳೈವರಿಗೆ ತಾ
ಜೀವಸಖ ಗೋವಿಂದನನಿಬರ ಗೆಲವು ಗೋಚರವೆ
ಸಾವುದಲ್ಲದೆ ತನಗೆ ಬೇರಿ
ನ್ನಾವ ಪರಿಯಲಿ ಸಮತೆ ಸೇರದು
ಜೀವಿತವ್ಯವನಮರ ನಿಕರದೊಳರಸಿಕೊಳ್ಳೆಂದ ೧೭

ಗೆಲುವೆ ನಾನಂಜದಿರು ಪಾಂಡವ
ರಳವಳವ ನಾನರಿವೆ ನೃಪನ
ಗ್ಗಳದ ಧರ್ಮಜ್ಞನು ವಿಶೇಷ ದ್ಯೂತಲೋಲುಪನು
ಗೆಲುವ ಮೋಡಿಯನರಿಯನಾತನ
ನೆಲೆಯ ಬಲ್ಲೆನು ಜೂಜುಗಾರರ
ಕುಲ ಶಿರೋಮಣಿ ತಾನೆಯೆಂದನು ಶಕುನಿ ಕೌರವಗೆ ೧೮

ಕಪಟವನು ನೆರೆ ಮಾಡಿ ಜೂಜಿನೊ
ಳುಪರಿಕಾರ್ಯವ ಜೈಸಿ ಕೊಡುವೆನು
ನಿಪುಣರೆನ್ನಂದದಲಿ ಲೋಕದೊಳಿಲ್ಲ ಕೈತವದ
ಅಪದೆಸೆಗೆ ಭಯಗೊಳ್ಳದಿರು ನಿ
ಷ್ಕೃಪೆಯಲಿರು ಗುರು ಭೀಷ್ಮ ವಿದುರಾ
ದ್ಯುಪಸರರ ಕೈಕೊಳ್ಳದಿರು ನೀನೆಂದನಾ ಶಕುನಿ ೧೯

ಎನ್ನ ಬಹುಮಾನಾವಮಾನವು
ನಿನ್ನದೈಸಲೆ ಮಾವ ನೀ ಸಂ
ಪನ್ನ ಕೃತ್ರಿಮ ವಿದ್ಯನಾದರೆ ತೊಡಚು ಸಾಕದನು
ಅನ್ನಿಗರಿಗರುಹದಿರು ನಮ್ಮವ
ರೆನ್ನದಿರು ವಿದುರಾದಿಗಳನುಪ
ಪನ್ನ ಮಂತ್ರವನರುಹು ಬೊಪ್ಪಂಗೆಂದನವನೀಶ ೨೦

ನೀನರುಹು ನಿಮ್ಮಯ್ಯ ಮನಗೊ
ಟ್ಟಾ ನರೇಂದ್ರರ ಕರೆಸಿ ಕೊಟ್ಟರೆ
ಮಾನನಿಧಿಯೇ ಸಕಲ ಧರೆಯನು ಸೇರಿಸುವೆ ನಿನಗೆ
ನೀನೆ ಹೋಗಿಯೆ ನಿನ್ನ ಕಡು ದು
ಮ್ಮಾನವನು ಬೊಪ್ಪಂಗೆ ನುಡಿದರೆ
ತಾನೆ ಕರೆಸುವನರುಹುವೆನು ಜನಕಂಗೆ ನಿಜಮತವ ೨೧

ಅಹುದು ಬಳಿಕೇನೆನುತ ಬಂದನು
ಕುಹಕಮತಿ ಧೃತರಾಷ್ಟ್ರನರಮನೆ
ಗಿಹ ಸಮಯದಲಿ ಹೊಕ್ಕನಂದೇಕಾಂತ ಮಂದಿರವ
ಬಹಳ ಖೇದ ವ್ಯಸನದಲಿ ದು
ಸ್ಸಹ ಮನೋವ್ಯಥೆಯಲಿ ಕುಮಾರಕ
ನಿಹುದನರಿಯಿರೆ ನೀವೆನುತ ಬಿಸುಸುಯ್ದನಾ ಶಕುನಿ ೨೨

ಏನು ಶಕುನಿ ಮಗಂಗೆ ದುಗುಡವ
ದೇನು ಕಾರಣವಾರ ದೆಸೆಯಿಂ
ದೇನಸಾಧ್ಯವದೇನು ಭಯ ಮೇಣಾವುದಭಿಲಾಷೆ
ಏನುವನು ವಂಚಿಸದೆ ಹೇಳೆ
ನ್ನಾನೆಗೇಕೈ ಮರುಕವೆನೆ ನಿಜ
ಸೂನುವನು ನೀ ಕರೆಸಿ ಬೆಸಗೊಳ್ಳೆಂದನಾ ಶಕುನಿ ೨೩

ಕರೆಸಿದನು ದುರಿಯೋಧನನನಾ
ದರಿಸಿ ಕಟ್ಟೇಕಾಂತದಲಿ ಮು
ವ್ವರು ವಿಚಾರಿಸಿದರು ನಿಜಾನ್ವಯ ಮೂಲ ನಾಶನವ
ಭರತಕುಲ ನಿರ್ವಾಹಕನೆ ಬಾ
ಕುರುಕುಲಾನ್ವಯದೀಪ ಬಾ ಎ
ನ್ನರಸ ಬಾ ಎನ್ನಾನೆ ಬಾಯೆಂದಪ್ಪಿದನು ಮಗನ ೨೪

ದುಗುಡವೇಕೈ ಮಗನೆ ಹಿರಿಯೋ
ಲಗವನೀಯೆ ಗಡೇಕೆ ವೈಹಾ
ಳಿಗಳ ಬೇಟೆಗಳವನಿಪಾಲ ವಿನೋದ ಕೇಳಿಗಳ
ಬಗೆಯೆ ಗಡ ಬಾಂಧವರ ಸಚಿವರ
ಹೊಗಿಸೆ ಗಡ ನಿನ್ನರಮನೆಯನೀ
ಹಗಲು ನಿನಗೇಕಾಯ್ತು ಕತ್ತಲೆಯೆಂದನಂಧನೃಪ ೨೫

ಹೇಳಲಮ್ಮೆನು ನೀವು ಧರ್ಮಜ
ಕೂಳಿಯಲಿ ಸಿಲುಕಿದವರೆನ್ನನು
ಖೂಳನೆಂಬಿರಿ ಕಷ್ಟನೆಂಬಿರಸೂಯನೆಂಬಿರಲಿ
ಸಾಲ ಭಂಜಿಕೆಯಾಯ್ತು ತನ್ನಯ
ಬಾಳಿಕೆಯು ಬೇಳಂಬವೇತಕೆ
ಕೇಳುವಿರಿ ನೀವೆಂದು ಸುಯ್ದನು ತುಂಬಿ ಕಂಬನಿಯ ೨೬

ಮುನಿಚರಿತ್ರರು ನೀವು ರಾಜಸ
ತನದ ಮದದಲಿ ಲೋಕಯಾತ್ರೆಯ
ನನುಸರಿಸುವವರಾವು ನೀವೇ ಭೋಗ ನಿಸ್ಪೃಹರು
ಅನುದಿವಸ ರಾಗಿಗಳು ನಾವೆ
ಮ್ಮನುಮತವ ಪಾಲಿಸುವರಾರೆಂ
ದೆನುತ ಸುಯ್ದನು ಮರುಗಿ ಬೈದನು ತನ್ನ ದುಷ್ಕೃತವ ೨೭

ಈಸು ಕಳವಳವೇನು ಚಿತ್ತದ
ಬೈಸಿಕೆಗೆ ದೂಳ್ಯಾಸವೇಕೆ ವಿ
ಳಾಸಕೂಣೆಯವೇನು ಹೇಳಾ ನೆನಹಿನಭಿರುಚಿಯ
ವಾಸಿಗಳ ಪೈಸರವನೆನ್ನಲಿ
ಸೂಸಬಾರದೆ ನಿನ್ನ ಹರುಷಕೆ
ಪೈಸರವದೇನೆಂದು ಬೆಸಗೊಂಡನು ಸುಯೋಧನನ ೨೮

ಏನನೆಂಬೆನು ಬೊಪ್ಪ ಕುಂತೀ
ಸೂನುಗಳ ಸಾಮರ್ಥ್ಯಪಣವನು
ದಾನವಾರಿಯ ಹಾಸು ಹೊಕ್ಕಿನ ಸೌಖ್ಯ ಸಂಗತಿಯ
ತಾ ನಪುಂಸಕನಾದ ಪರಿಯನ
ದೇನ ವಿಸ್ತರಿಸುವೆನು ಲಜ್ಜಾ
ಮಾನಿನಿಗೆ ತನ್ನೊಕ್ಕತನವಿಂದಿಳಿದು ಹೋಯ್ತೆಂದ ೨೯

ನೆಗೆದ ಬುಗುಟಿದೆ ಹಣೆಯಲವರೋ
ಲಗದ ಸಭೆಯಲಿ ನನೆದ ಸೀರೆಯ
ತೆಗೆಸಿ ಕೊಟ್ಟರು ತಮ್ಮ ಮಡಿವರ್ಗದ ನವಾಂಬರವ
ಬೆಗಡುಗೊಳಿಸಿದರೆನ್ನನವರೋ
ಲಗದ ಸೂಳೆಯರವರ ಸೂಳಿನ
ನಗೆಯ ನೆನೆ ನೆನೆದೆನ್ನ ಮನ ಜರ್ಝರಿತವಾಯ್ತೆಂದ ೩೦

ಇದಕೆ ಕಾರಣವೇನು ಹಣೆ ನೊಂ
ದುದಕದೇನು ನಿಮಿತ್ತವೆನಲಾ
ಸದನದಲಿ ಮಯನಿತ್ತ ಸಭೆಯನು ದೇವರರಿಯಿರಲೆ
ಮುದದಿನಾ ಧರ್ಮಜನು ಘನ ಸಂ
ಪದದಲೋಲಗವಿತ್ತನಾ ದ್ರೌ
ಪದಿ ನಿಜಾನುಜ ಮಂತ್ರಿ ಸಚಿವ ಪಸಾಯಿತರು ಸಹಿತ ೩೧

ಆ ಮಹಾಸಭೆ ದೇವ ನಿರ್ಮಿತ
ರಾಮಣೀಯಕ ವಿವಿಧ ರತ್ನ
ಸ್ತೋಮ ತೇಜಃ ಪುಂಜ ಭಂಜಿತ ನಯನ ವೀಥಿಯಲಿ
ಸಾಮದಲಿ ನಮ್ಮನು ಯುಧಿಷ್ಠಿರ
ಭೂಮಿಪತಿ ಕರೆಸಿದನು ತನ್ನು
ದ್ದಾಮ ವಿಭವವನೆನಗೆ ತೋರಲು ತತ್ಸಭಾಸ್ಥಳಕೆ ೩೨

ಹರಹಿನಲಿ ಹಿರಿದಾಯ್ತು ಕೆಂದಾ
ವರೆಯ ವನ ಬೇರೊಂದು ತಾಣದೊ
ಳರವಣಿಸಿ ಬೆಳದಿಂಗಳೌಕಿದುದೊಂದು ತಾಣದಲಿ
ಹರಿವ ಯಮುನಾ ನದಿಯನಲ್ಲಿಗೆ
ತರಸಿದವರಾರೆನ್ನಲು ಮಣಿ ಬಂ
ಧುರದ ಬೆಳಗಿನ ಲಹರಿ ಮುರಿದುದು ತನ್ನ ಜಾಣುಮೆಯ ೩೩

ಹೊಕ್ಕ ಸಾಲಲಿ ಪೊಳೆವ ಮಣಿರುಚಿ
ಮುಕ್ಕುಳಿಸಿದವು ಕಂಗಳನು ನವೆ
ದಿಕ್ಕಿಲನ ನೋಡಿದರೆ ಮುರಿದೊಳಸರಿದವಾಲಿಗಳು
ಉಕ್ಕುವಮಲಚ್ಛವಿಗಳಲಿ ಮನ
ಸಿಕ್ಕಿ ಹೊಲಬಳಿದುದು ವಿವೇಕವ
ಡೊಕ್ಕರಸಿ ಕೆಡಹಿದವು ಬಹುವಿಧ ರತ್ನಕಾಂತಿಗಳು ೩೪

ಹಿಡಿದವೆನ್ನೊಹೆಯನು ಮಣಿ ರುಚಿ
ಯೆಡತರದೊಳಿಕ್ಕಿದವು ಭಿತ್ತಿಯ
ಬಿಡೆಯದಲಿ ಝಳಪಿಸುವ ನೀಲದ ಲಳಿಯ ಲಹರಿಯಲಿ
ತಡಿಯ ಕಾಣೆನು ತಳಿತ ಕಾಂತಿಯ
ಕಡಲ ವಿಮಲ ಸ್ಫಟಿಕ ಜಲದಲಿ
ಮಿಡುಕಲಂಜಿದವಂಘ್ರಿಗಳು ನರನಾಥ ಕೇಳೆಂದ ೩೫

ಸ್ಥಳವೆ ಜಲರೂಪದಲಿ ಜಲವೇ
ಸ್ಥಳದ ಪಾಡಿನಲಿದ್ದುದದು ಕೆಲ
ಬಲನ ಭಿತ್ತಿಯ ಕಂಬ ಕಂಬದ ನಡುವೆ ಭಿತ್ತಿಗಳಂ
ಹೊಳಹನೇ ಕಂಡೆನು ವಿವೇಕದ
ಕಳಿವು ಚಿತ್ತದ ಸೆರೆದುಹಾರದೊ
ಳಿಳಿದವಕ್ಷಿಗಳಿಂತು ಸೋತೆನು ತಂದೆ ಕೇಳೆಂದ ೩೬

ಮುಂದೆ ವಿಮಲ ಸ್ಫಟಿಕ ಭೂಮಿಯ
ದೊಂದು ಠಾವಿನೊಳೀಕ್ಷಿಸುತೆ ಕೊಳ
ನೆಂದು ಬಗೆದೆನು ನಿಂದು ಸಂವರಿಸಿದೆನು ಮುಂಜೆರಗ
ಅಂದು ದ್ರೌಪದಿ ಸಹಿತ ನಾರೀ
ವೃಂದ ಕೈಗಳ ಹೊಯ್ದು ಮಿಗೆ ಗೊ
ಳ್ಳೆಂದು ನಕ್ಕುದು ನೊಂದು ತಲೆವಾಗಿದೆನು ಲಜ್ಜೆಯಲಿ ೩೭

ಊಹೆಯಲಿ ತಡವರಿಸಿ ಹೆಜ್ಜೆಯ
ಗಾಹುಗತಕದೊಳಿಡುತ ಕಾಂತಿಯ
ಸೋಹೆಯರಿಯದೆ ಬೀದಿಯಲಿ ಕಂಡೆನು ಸರೋವರವ
ಆ ಹರಿಬವನು ಮುರಿವೆನೆಂದಿದ
ನೂಹಿಸದೆ ನಾ ಸ್ಫಟಿಕವೆಂದು
ತ್ಸಾಹಿಸಲು ನೀರಾಯ್ತು ನನೆದೆನು ನಾಭಿದಘ್ನದಲಿ ೩೮

ಮತ್ತೆ ಗೊಳ್ಳೆಂದುದು ನೃಪಾಲನ
ಮತ್ತ ಕಾಶಿನಿಯರು ಯುಧಿಷ್ಠಿರ
ನಿತ್ತ ದಿವ್ಯ ದುಕೂಲವನು ತಡಿಗಡರಿ ತೊಡಚಿದೆನು
ಬತ್ತಿತೆನ್ನಭಿಮಾನ ಜಲನಿಧಿ
ಮತ್ತೆ ಮಾರಿಯ ಮುಸಕವನು ನೀ
ಚಿತ್ತವಿಸಿರೇ ಬೊಪ್ಪಯೆಂದನು ಕೌರವರ ರಾಯ ೩೯

ನಂಬಿಸಿದುದೊಂದೆಡೆಯ ಬಾಗಿಲು
ಬಿಂಬಿಸಿತು ಭಿತ್ತಿಯಲಿ ತತ್ಪ್ರತಿ
ಬಿಂಬವೆಂದಾನರಿಯದೊಡೆ ಹಾಯಿದೆನು ಚೌಕಿಗೆಯ
ಎಂಬೆನೇನನು ಹೊರಳಿ ನಗುವ ನಿ
ತಂಬಿನಿಯರನು ಭೀಮ ಪಾರ್ಥರ
ಡಂಬರವ ಕಂಡಸುವ ಹಿಡಿದೆನು ನೋಡಿಕೊಳ್ಳೆಂದ ೪೦

ನೊಂದುದೇ ಹಣೆ ಮನದೊಳಗೆ ಕಡು
ನೊಂದೆನವದಿರ ನಗೆಗೆ ನಡೆದೆನು
ಮುಂದಣೋವರಿ ಬಾಗಿಲನು ಕಂಡೆನ್ನ ಮನದೊಳಗೆ
ಹಿಂದೆ ಹೇರಿದ ಭಂಗವೇ ಸಾ
ಕೆಂದು ಸುಪ್ರೌಢಿಯಲಿ ಬಾಗಿಲ
ನೊಂದು ಠಾವಿನೊಳರಸಿ ತಡವರಿಸಿದೆನು ಭಿತ್ತಿಗಳ ೪೧

ನಗೆಗೆ ನಗೆ ಕುಂಟಣಿ ವಿವೇಕದ
ಹೊಗೆಗೆ ಹೊಗೆ ಸಖಿಯಾದುವಲ್ಲಿಯ
ಹಗರಣೆಗ ನಾನಾದೆನದು ನೋಟಕದು ಜನವಾಯ್ತು
ನಗುವವರ ಜರೆದನೆ ಯುಧಿಷ್ಠಿರ
ನಗೆಯ ಮರೆದನೆ ಬೊಪ್ಪ ನಿಮ್ಮಯ
ಮಗನವಸ್ಥಾರೂಪವಿದು ಚಿತ್ತವಿಸಿ ನೀವೆಂದ ೪೨

ಒಡ್ಡವಿಸಿತೆನ್ನಾಟ ನಗೆಯೊಳ
ಗಡ್ಡ ಬಿದ್ದಳು ಪಾಂಡುಪುತ್ರರ
ಬೊಡ್ಡಿ ಬಿಂಕದಲವರು ಬಿರಿದರು ಭೀಮ ಫಲಗುಣರು
ಖಡ್ಡಿಗರುವೆನ್ನಿಂದ ರೋಷದ
ಗೊಡ್ಡು ನಾನಾದೆನು ವಿಘಾತಿಯ
ಬಡ್ಡಿಗಿನ್ನೆಕ ಬದುಕಿದೆನು ಧೃತರಾಷ್ಟ್ರ ಕೇಳೆಂದ ೪೩

ಸಿಂಗಿಯನು ಬಿತ್ತಿದೆನು ಪಾಂಡವ
ರಂಗದಲಿ ತತ್ಫಲದ ಬೆಳಸಿನ
ಸಿಂಗಿಯಲಿ ತಾ ಸಾವೆನಲ್ಲದೊಡಗ್ನಿ ಕುಂಡದಲಿ
ಭಂಗಿಸುವೆನಾ ಫಲದೊಳೆನ್ನನು
ನುಂಗಬೇಹುದು ವಹ್ನಿ ಮೇಣೀ
ಗಂಗೆಯಲಿ ಬಿದ್ದೊಡಲ ನೀಗುವೆನೆನುತ ಬಿಸುಸುಯ್ದ ೪೪

ಆ ಯುಧಿಷ್ಠಿರ ಸಹಿತ ನೀನೇ
ರಾಯನಾಗಿರು ಮೇಣು ನಮ್ಮೀ
ತಾಯಿ ಸಂತಸಬಡಲಿ ದುಶ್ಶಾಸನನ ಪಟ್ಟದಲಿ
ರಾಯತನವೆಮಗಿಂದ್ರ ಲೋಕದ
ಲಾಯದಲಿ ದಿಟವೆಂದು ನುಡಿವರು
ಜೋಯಿಸರು ಸಾಕವರ ವಚನ ನಿರರ್ಥವಲ್ಲೆಂದ ೪೫

ಪುರದಲೆಂಬತ್ತೆಂಟು ಸಾವಿರ
ಧರಣಿಯಮರರು ನಿತ್ಯ ಪಡೆಯುವ
ರರಸ ಕೇಳ್ ಹತ್ತು ಸಾವಿರ ಹೊನ್ನತಳಿಗೆಯಲಿ
ವರ ಯತೀಶರು ಹತ್ತು ಸಾವಿರ
ವರಮನೆಯಲುಂಬುದು ನೃಪಾಲಾ
ಧ್ವರದ ಸಿರಿಯನು ನೀವೆ ಕಂಡಿರೆಯೆಂದನಾ ಭೂಪ ೪೬

ಕೇಳಿದನು ಬಿಸು ಸುಯ್ದು ನಕಟ ವಿ
ಕಾಳಿಸಿತೆ ಕೌರವನ ಬುದ್ಧಿ ವಿ
ಟಾಳ ಸಂಗತಿಯಾಯ್ತಲಾ ಪಿಸುಣಾರ ಕೆರಳಿಚಿದು
ಕೇಳು ಮಗನೇ ಧರ್ಮಪುತ್ರನ
ಮೇಲೆ ಮುನಿವರೆ ರಾಜಋಷಿ ನರ
ಪಾಲ ಮಾತ್ರವೆ ಶಿವ ಮಹಾದೇವೆಂದನಾ ಭೂಪ ೪೭

ಸತಿಯರಲಿ ನಿಮ್ಮಪ್ಪೆ ಸುಪತಿ
ವ್ರತೆ ಮಹಾಖಿಳ ನೀನು ಬೀಜ
ಸ್ಥಿತಿಯಲೂಣಯವಿಲ್ಲ ನಿನ್ನಯ ಬುದ್ಧಿ ದೋಷವಿದು
ಕೃತಕವೋ ಸಹಜವೋ ನವೀನ
ಸ್ಥಿತಿಯ ಕಂಡೆನು ಶಿವ ಶಿವಾ ದು
ರ್ಮತಿಗಳಾವುದ ನೆನೆಯರೆಂದನು ಸುಯ್ದು ಧೃತರಾಷ್ಟ್ರ ೪೮

ಪಾಂಡುವಿನ ಮಕ್ಕಳುಗಳಾರಾ
ಪಾಂಡುವಿನಲೆನ್ನಲ್ಲಿ ಭೇದವ
ಕಂಡೆಲಾ ನೀನವರಿಗೇನಪ್ರಾಪ್ತವೇ ಧರಣಿ
ಉಂಡು ಬದುಕುವ ಬಹಳ ಭಾಗ್ಯರ
ಕಂಡಸೂಯಂಬಡುವ ಖಿಡ್ಗರ
ಭಂಡರೆನ್ನದೆ ಲೋಕ ನಿನಗಿದು ಸಾಮ್ಯವಲ್ಲೆಂದ ೪೯

ಅಹುದು ಬೊಪ್ಪ ವೃತಾಭಿಮಾನದ
ಕುಹಕಿ ಹೋಗಲಿ ನಿಮ್ಮ ಚಿತ್ತಕೆ
ಬಹ ಕುಮಾರರ ಕೂಡಿ ನಡೆವುದು ಪಾಂಡು ನಂದನರ
ಮಹಿಯ ಹಂಗಿಂಗೋಸುಗವೆ ಬಿ
ನ್ನಹವ ಮಾಡಿದೆನೆನಗೆ ಭಂಡಿಸ
ರಹಣೆ ಬಂದುದು ಸಾಕಲೇ ಸೊಗಸಾಯ್ತು ಲೇಸೆಂದ ೫೦

ತಾಯೆ ನೇಮವಗೊಂಡೆನಯ್ಯಂ
ಗಾ ಯುಧಿಷ್ಠಿರನಾತ್ಮಜನಲೇ
ವಾಯುಸುತ ನರ ನಕುಲ ಸಹದೇವರು ಕುಮಾರರಲೆ
ಈ ಯುಗದಲಿನ್ನವರ ಸಂತತಿ
ದಾಯ ಭಾಗಿಗಳಾಗಿ ಬದುಕಲಿ
ರಾಯರಿಲ್ಲಾ ಮತ್ತೆ ನಮ್ಮನು ರಕ್ಷಿಸುವರೆಂದ ೫೧

ಅರಸ ಧರ್ಮಿಷ್ಠನು ಯುಧಿಷ್ಠಿರ
ಧರಣಿಪತಿಯುತ್ತಮನು ಪವನಜ
ನರರು ವಿನಯಾನ್ವಿತರು ನೀವೇ ಪುತ್ರವತ್ಸಲರು
ಧರಣಿಗಾವಿನ್ನೈಸಲೇ ನೂ
ರ್ವರು ಕುಮಾರರು ಹೊರಗೆ ನಿಮ್ಮಯ
ಕರುಣವೇ ಸಾಮ್ರಾಜ್ಯ ನಮ್ಮನು ಬೀಳುಗೊಡಿರೆಂದ ೫೨

ಆಯ ಛಲವಭಿಮಾನ ಹೋಗಲಿ
ಕಾಯಬೇಕೆಂಬರೆ ನೃಪಾಲರ
ಬಾಯ ತಂಬುಲ ತಿಂದು ಹೊರೆವೆವು ಬೆಂದ ಬಸುರುಗಳ
ಆಯ ಛಲವಾಚಂದ್ರತಾರಕ
ಕಾಯವಧ್ರುವವೆಂಬಡಿದಕೆ ಸ
ಹಾಯವಿದೆಲಾ ಕಾಲಕೂಟ ಕಠೋರ ನದಿಯೆಂದ ೫೩

ಅರಸನಭ್ಯುದಯವನು ಭೀಮನ
ಧರಧುರವನರ್ಜುನನ ಬಿಂಕವ
ನರಸಿಯಾಟೋಪವನು ಮಾದ್ರೀಸುತರ ಸಂಭ್ರಮವ
ಹೊರೆಯ ಧೃಷ್ಟದ್ಯುಮ್ನ ದ್ರುಪದಾ
ದ್ಯರ ವೃಥಾಡಂಬರವ ಕಂಡೆದೆ
ಬಿರಿದುದಳುಕಿದೆನಳುಕಿದೆನು ಸಂತವಿಸಲರಿದೆಂದ ೪೪

ಕರಗಿದಳು ಗಾಂಧಾರಿ ಕಂಬನಿ
ದುರುಗಲಲಿ ಧೃತರಾಷ್ಟ್ರನೆದೆ ಜ
ರ್ಝರಿತವಾದುದು ಮಗನ ಮಾತಿನ ಮುಸಲ ಹತಿಗಳಲಿ
ಸುರಿವ ನಯನಾಂಬುಗಳ ಮೂಗಿನ
ಬೆರಳ ತೂಗುವ ಮಕುಟದವನೀ
ಶ್ವರನು ಮೌನದೊಳಿದ್ದನೊಂದು ವಿಗಳಿಗೆ ಮಾತ್ರದಲಿ ೪೫

ಮಾತು ಸೊಗಸದಲಾ ವೃಥಾ ನೀ
ವೇತಕೆನ್ನನು ಕರೆಸಿದಿರಿ ನಿ
ಮ್ಮಾತಗಳು ಭೀಮಾರ್ಜುನರು ಸಹಿತೀ ಮಹೀತಳವ
ತಾತ ನೀವಾಳುವುದು ತಾಯೆ ಸು
ನೀತನಾ ಧರ್ಮಜನು ಧರ್ಮ ವಿ
ಘಾತಕರು ನಾವೆಮ್ಮ ಕಳುಹುವುದೆನುತ ಹೊರವಂಟ ೪೬

ಎಲೆಗೆ ಕರೆಯಾ ಪಾಪಿ ಕೌರವ
ಕುಲ ಕುಠಾರನ ನಿನ್ನ ಮಗನೊಡ
ನಳಿವೆನೈಸಲೆ ಪಾಂಡುಪುತ್ರರ ವೈರ ಬಂಧದಲಿ
ತಿಳುಹಿ ತಾಯೆನಲಾಕೆ ಶಕುನಿಯ
ಕಳುಹಿ ಕರೆಸಿದಡಾತ ಮರಳಿದ
ನಳಲು ದೊರೆಯಲಿ ಮೂಡಿ ಮುಳುಗಿದನಂದು ಧೃತರಾಷ್ಟ್ರ ೪೭

ಏನ ನೆನೆದೈ ಮಗನೆ ಕುಂತೀ
ಸೂನುಗಳ ರಾಜ್ಯಾಪಹಾರದೊ
ಳೇನು ಬುದ್ಧಿ ವಿಳಾಸವಾವುದು ಕಾರ್ಯಗತಿ ನಿನಗೆ
ದಾನದಲಿ ಮೇಣ್ ಸಾಮದಲಿ ಭೇ
ದಾನುಮತದಲಿ ದಂಡದಲಿ ನೀ
ವೇನ ನಿಶ್ಚೈಸಿದಿರಿ ಹೇಳಿನ್ನಂಜಬೇಡೆಂದ ೪೮

ತಿಂದ ವಿಷವಳ್ಕಿದವು ಮಡುವಿನೊ
ಳಂದು ಬಿಸುಟರೆ ಮುಳುಗಿ ಸುಖದಲಿ
ಮಿಂದು ಹೊರವಂಟರು ಮಹಾಗ್ನಿಯ ಭವನ ಭಂಗದಲಿ
ಒಂದು ಕೂದಲು ಸೀಯದನಿಬರು
ಬಂದರಿವು ಮೊದಲಾದ ಕೃತ್ರಿಮ
ದಿಂದ ಪಾಂಡವರಳಿದುದಿಲ್ಲಿದಕೇನು ಹದನೆಂದ ೪೯

ನೀವು ಚಿತ್ತವಿಸಿದೊಡೆ ನೆತ್ತದೊ
ಳಾವು ಸೋಲಿಸಿ ಕೊಡುವೆವವರನು
ನೀವು ಕರೆಸುವುದಿಲ್ಲಿಗುಚಿತ ಪ್ರೀತಿವಚನದಲಿ
ನಾವು ಜಾಣರು ಜೇಯ ಜೂಜಿನ
ಜೀವ ಕಲೆಯಲಿ ಧರ್ಮ ಸುತನಿದ
ನಾವ ಹವಣೆಂದರಿಯನಾತನ ಜಯಿಸಬಹುದೆಂದ ೫೦

ಅಹುದು ತಪ್ಪೇನಿದುವೆ ಸಾಧನ
ವಹುದು ವಿದುರನ ಬುದ್ಧಿಗಭಿಮತ
ವಹಡೆ ಕರೆಸುವೆವೈಸಲೇ ಬೆಸಸುವೆನು ವಿದುರಂಗೆ
ಕುಹಕಪಾತನಲಿಲ್ಲ ನೋಡುವ
ನಿಹಪರತ್ರದ ಹಿತವನಿದ ನಿ
ರ್ವಹಿಸಿ ಕೊಡುವರೆ ಮಂತ್ರವೆಂದನು ಮಗಗೆ ಧೃತರಾಷ್ಟ್ರ ೫೧

ಖೂಳರಲಿ ಸತ್ಕಳೆಗಳನು ನೆರೆ
ಕೇಳದವರಲಿ ಮಂತ್ರ ಬೀಜವ
ನಾಲಿಯಿಲ್ಲದವಂಗೆ ರೂಪು ವಿಲಾಸ ವಿಭ್ರಮವ
ಹೇಳುವಂತಿರೆ ನಿಮ್ಮ ವಿದುರನ
ಕೇಳಿಸಿದರಾ ಕಾರ್ಯಗತಿಗೆ ವಿ
ತಾಳವಾಗದೆ ಬೊಪ್ಪಯೆಂದನು ನಗುತ ಕುರುರಾಯ ೫೨

ಅರುಹಿದರೆ ವಿದುರಂಗೆ ಕಾರ್ಯವ
ಮುರಿವನಾತನು ಬಳಿಕ ನಿಮ್ಮಯ
ಕಿರಿಯ ತಮ್ಮನ ಮಕ್ಕಳಿಗೆ ಕೊಡಿ ಹಸ್ತಿನಾಪುರವ
ಹರಕುಗಳು ನಾವ್ ನೂರು ಮಕ್ಕಳು
ಹೊರಗೆ ಬದುಕುವೆವೈಸಲೇ ನಿ
ಮ್ಮುರುವ ಮಕ್ಕಳುಗೂಡಿ ಸುಖದಲಿ ರಾಜ್ಯವಾಳೆಂದ ೫೩

ಪಾರಲೌಕಿಕದುಳಿವನೈಹಿಕ
ದೋರೆ ಪೋರೆಯನಿಂದು ಬಲ್ಲವ
ರಾರು ಹೇಳಾ ವಿದುರನಲ್ಲದೆ ನಮ್ಮ ಪೈಕದಲಿ
ಸಾರವಾತನ ಮಾತು ನಯ ವಿ
ಸ್ತಾರ ಸಹಿತಿಹುದಲ್ಲಿ ನಂಬುಗೆ
ದೂರವಿಲ್ಲೆನಗರಿಯೆ ನೀ ನಿಲ್ಲೆಂದನಂಧನೃಪ ೫೪

ತಿಳುಹಿ ವಿದುರನನವರ ಕರೆಯಲು
ಕಳುಹುವೆನು ಯಮಸೂನು ನಿಮ್ಮಯ
ಬಲುಹಿನಲಿ ಬಳುಕುವನೆ ಭೀಮಾರ್ಜನರು ಕಿರುಕುಳರೆ
ತಿಳಿವೊಡೀತನ ಬುದ್ಧಿಯೇ ನಿ
ರ್ಮಲಿನವಹುದು ನಿಧಾನವಿದು ನೀ
ಕಳವಳಿಸದಿದ್ದರೆ ಮನೋರಥ ಸಿದ್ಧಿಯಹುದೆಂದ ೫೫

ನೀ ಕರುಣದಲಿ ನಮ್ಮ ಸಲಹುವ
ಡಾ ಕುಮಾರರ ಕರೆಸಿಕೊಟ್ಟರೆ
ಸಾಕು ಮತ್ತೊಂದಿಹುದಲೇ ಪಾಂಚಾಲ ನಂದನೆಯ
ನೂಕಿ ಮುಂದಲೆವಿಡಿದು ತೊತ್ತಿರೊ
ಳಾಕೆಯನು ಕುಳ್ಳಿರಿಸಿದಂದು ವಿ
ಶೋಕನಹೆನಾ ದಿವಸದಲಿ ಕೃತಕೃತ್ಯ ತಾನೆಂದ ೫೬

ಪೋಗು ನೀನೆಂದವನ ಕಳುಹಿದ
ನಾಗ ಮನದೊಳಗಧಿಕ ಚಿಂತಾ
ಸಾಗರದೊಳೋರಂತೆ ಮುಳುಗಿದನಂದು ಧೃತರಾಷ್ಟ್ರ
ಈಗಳಿನ ಸವಿಗಳುಪಿ ಮೇಲಣ
ತಾಗನರಿಯನು ಕಂದನಿದಕಿ
ನ್ನೇಗುವೆನು ಗಾಂಧಾರಿ ನೀ ಹೇಳೆಂದನಾ ಭೂಪ ೫೭

ಅವರು ಕಪಟವನರಿಯರೀತನ
ಹವಣ ನೀನೇ ಕಂಡೆ ಕರೆಸಿದ
ಡವರು ನಿಲ್ಲರು ಗೋರಿಯಲಿ ಬಳಿಸಂದ ಮೃಗದಂತೆ
ನವಗೆ ಬಹುದಪಕೀರ್ತಿಯೀಗಿ
ನ್ನವನ ಕುಹಕವ ಲೋಕವರಿಯದು
ಶಿವ ಶಿವಾಯೆಂದಳಲಿ ಮರುಗಿದನಂದು ಧೃತರಾಷ್ಟ್ರ ೭೮

ಮುರಿವೆನೇ ಮುನಿದಿವರು ನೂರ್ವರು
ತೊರೆವರೆನ್ನನು ತೊಡಕಿಸುವೆನೇ
ತರಿದು ಬಿಸುಡುವರವರು ಕೌರವ ಶತಕವನು ಬಳಿಕ
ಹೊರಗೊಳಗೆ ಹದನಿದು ನಿಧಾನಿಸ
ಲರಿಯೆನೆನ್ನಸುವಿನ ಹೃದಯದ
ಸೆರೆ ಬಿಡದು ಶಿವ ಶಿವಯೆನುತ ಮರುಗಿದನು ಧೃತರಾಷ್ಟ್ರ ೭೯

ಏಕೆ ನಿಮಗೀ ಚಿಂತೆಯಿಂದೆರ
ಡೌಕಿದವು ದುಷ್ಕಾರ್ಯ ಸಂಧಿ ವಿ
ವೇಕ ನಿಕರದಲೊರೆದು ಮೋಹರಿಸೊಂದು ಬಾಹೆಯಲಿ
ಈ ಕುರುವ್ರಜ ನೂರ ಹಿಡಿ ಕುಂ
ತೀ ಕುಮಾರರ ಬಿಡು ತನೂಜರ
ನೂಕು ಹಿಡಿ ಪಾಂಡವರನೆಂದಳು ಪತಿಗೆ ಗಾಂಧಾರಿ ೮೦

ಐಸಲೇ ತಾನಾದುದಾಗಲಿ
ಲೇಸ ಕಾಣೆನು ನಿನ್ನ ಮಕ್ಕಳ
ವಾಸಿಗಳ ವಿಸ್ತಾರ ಮೆರೆಯಲಿ ಹಲವು ಮಾತೇನು
ಆ ಸಭೆಯ ಸರಿಸದ ಸಭಾ ವಿ
ನ್ಯಾಸ ಶಿಲ್ಪಿಗರಾರೆನುತ ಧರ
ಣೀಶ ಕರೆಸಿದನುರು ಸಭಾ ನಿರ್ಮಾಣ ಕೋವಿದರ ೮೧

ತೆಗೆಸಿ ಭಂಡಾರದಲಿ ಬಹು ವ
ಸ್ತುಗಳನಿತ್ತನು ತರು ಶಿಲಾ ಕೋ
ಟಿಗಳ ತರಿಸಿದನುರು ಸಹಸ್ರಸ್ತಂಭ ಡಂಬರವ
ಝಗ ಝಗಿಪ ಬಹು ಮೌಲ್ಯ ಮುಕ್ತಾ
ಳಿಗಳನುರುತರ ರಶ್ಮಿ ಲಹರಿ
ಸ್ಥಗಿತ ದಿಗು ಭಿತ್ತಿಗಳನನುಪಮ ರತ್ನರಾಶಿಗಳ ೮೨

ಮಾಡಿತಗ್ಗದ ಸಭೆ ಸುಧರ್ಮೆಯ
ನೇಡಿಸುವ ಚೆಲುವಿನಲಿ ಪುರದಲಿ
ರೂಢಿಸಿತು ಬಳಿಕಂಧನೃಪನೇಕಾಂತ ಭವನದಲಿ
ಕೂಡಿಕೊಂಡು ಕುಲಾಪಘಾತದ
ಕೇಡಿಗರ ಕಲ್ಪನೆಯ ಕಲುಷದ
ಜೋಡಿಯನೆ ನಿಶ್ಚೈಸಿ ವಿದುರಂಗರುಹಿದನು ಕರೆಸಿ ೮೩

ವಿದುರ ಕೇಳ್ಳೆ ಪಾಂಡವರ ಸಂ
ಪದಕೆ ಸರಿಯೊ ಮಿಗಿಲೋ ಸಭೆ ತಾ
ನಿದು ವಿಶೇಷವಲಾ ಸಮಸ್ತ ಕ್ಷತ್ರ ವಿಭವದಲಿ
ಇದರೊಳೋಲಗವಿತ್ತು ಹರ್ಷಾ
ಸ್ಪದರು ಕುರು ನೃಪರಲ್ಲಿ ಸುಖ ದ್ಯೂ
ತದಲಿ ರಮಿಸಲಿ ಕರೆದು ತಾ ಕುಂತೀ ಕುಮಾರಕರ ೮೪

ಅವರ ವಿಭವವನವರ ಯಾಗೋ
ತ್ಸವವನಿಂದ್ರಪ್ರಸ್ಥದಲಿ ಕಂ
ಡೆವು ಮನೋಹರವಾಯ್ತು ಬೆಳವಿಗೆ ಪಾಂಡು ನಂದನರ
ಅವರು ಹಸ್ತಿನಪುರಿಗೆ ಬಂದು
ತ್ಸವದಲೀ ಸಭೆಯಲಿ ಸುಖ ದ್ಯೂ
ತವನು ರಮಿಸಲಿ ಸೇರಿ ಬದುಕಲಿ ಪಾಂಡು ಸುತರೆಂದ ೮೫

ಮಾತು ಹೊಲಸಿನ ಗಂಧವಾಗಿದೆ
ಭೀತಿ ರಸದಲಿ ಮನ ಮುಳುಗಿತೀ
ಪ್ರೀತಿ ಮಾರಿಯ ಮುಸುಕನುಗಿವುದನಾರು ಕಲಿಸಿದರು
ಕೈತವದ ಕಣಿ ನಿನ್ನ ಮಗ ನೀ
ಸೋತೆಲಾ ಶಿವಶಿವ ಸುಖಾಂಗ
ದ್ಯೂತವೇ ಹಾ ಹಾಯೆನುತ ತಲೆದೂಗಿದನು ವಿದುರ ೮೬

ಹಾ ಮರುಳೆ ಕೆಣಕುವರೆ ಫಲುಗುಣ
ಭೀಮರನು ಮಿಗೆ ಹೆಚ್ಚಿ ಬೆಳೆದು
ದ್ಧಾಮ ಸಿರಿಯಿದು ಹಸ್ತಿನಾಪುರವಕಟ ಕೆಡಿಸಿದೆಲ
ಕೈ ಮುಗುಚದೇ ವಿಭವವಿದು ನಿ
ರ್ನಾಮರಾರೋ ಬಿತ್ತಿದರು ಕುರು
ಭೂಮಿಯಲಿ ವಿಷ ಬೀಜವನು ಹಾಯೆನುತ ಬಿಸುಸುಯ್ದು ೮೭

ವಿದುರ ಬೆಂಬೀಳದಿರು ಬಿಂಕದ
ಹದನ ಬಲ್ಲೆನು ಭೀಮ ಪಾರ್ಥರ
ಮುದವ ಬಯಸುವೆ ಮುನಿಯಲಾಪೆನೆ ಹೇಳು ತನಯರಿಗೆ
ಇದು ಮಹಾಸಭೆಯಿಲ್ಲಿ ಮೇಳಾ
ಪದಲಿ ಕುರು ಪಾಂಡವರು ಸದ್ಯೂ
ತದಲಿ ರಮಿಸುವರೇನು ಹೊಲ್ಲೆಹವೆಂದನಂಧ ನೃಪ ೮೮

ಮೊದಲಲಿದು ಸುದ್ಯೂತವವಸಾ
ನದಲಿ ವಿಷಮು ದ್ಯೂತದಲಿ ನಿಲು
ವುದು ನಿವಾರಣವುಂಟೆ ಮರ್ಮವನರಿವ ಸಬಳದಲಿ
ತುದಿಗೆ ತಾನಿದಪಥ್ಯ ಕುರುವ
ರ್ಗದಲಿ ವಿನಾಶಕ ಬೀಜವದು ನಿಮ
ಗಿದರೊಳಗೆ ಸೊಗಸಾದುದೇ ಕೈಕೊಂಡೆ ನಾನೆಂದ ೮೯

ಕರೆದು ತಾ ನೀನವರ ತಾನುಪ
ಚರಿಸುವಂದವ ನೋಡು ನಿನ್ನಯು
ಕರಣವೃತ್ತಿಗೆ ಕಠಿಣವಹವೇ ನಮ್ಮ ಮಾತುಗಳು
ದುರುಳರವರಿವರೆಂಬರದನಾ
ದರಿಸದಿರು ನೀ ಹೋಗು ಪಾಂಡವ
ಧರಣಿಪರನೊಡಗೊಂಡು ಬಾಯೆಂದಟ್ಟಿದನು ನೃಪತಿ ೯೦

ಅರುಹಿದನು ಭೀಷ್ಮಂಗೆ ಗುರು ಕೃಪ
ರರಿದರಿಷ್ಟಪಮೃತ್ಯುಪೇನಂ
ದರಿಯದಿನ್ನುತ್ಸಾಹ ಶಕ್ತಿಗೆ ಮನವ ಮಾಡಿತಲ
ಹರಿದುದೇ ಕುರುವಂಶ ಲತೆ ಹೊ
ಕ್ಕಿರಿದನೇ ಧೃತರಾಷ್ಟ್ರ ನೀ ಬೇ
ಸರದಿರವರನು ಕರೆದು ತಾ ಹೋಗೆಂದರವರಂದು ೯೧

ಶುಭಮುಹೂರ್ತ ವಿಳಾಸಲಗ್ನ ದೊ
ಳಿಭಪುರಿಯ ಹೊರವಂಟು ಸುರ ಸ
ನ್ನಿಭನು ಬಂದನು ಹಲವು ಪಯಣದಲಿವರ ಪಟ್ಟಣಕೆ
ರಭಸ ಮಿಗಿಲಿದಿರ್ಗೊಂಡು ತಂದರು
ಸಭೆಗೆ ಮಾನ್ಯ ಯಥೋಪಚಾರ
ಪ್ರಭವ ಸತ್ಕಾರದಲಿ ಕೇಳರು ಕುಶಲ ಸಂಗತಿಯ ೮೨

ಧರಣಿಪತಿ ಗಾಂಗೇಯ ಗೌತಮ
ಗುರುತನುಜ ಗುರು ಕರ್ಣ ಸೌಬಲ
ಕುರು ನೃಪತಿಯನುಜಾತ್ಮಜರು ಗಾಂಧಾರಿ ಭಾನುಮತಿ
ವರಸಚಿವ ಸಾಮಂತ ಪರಿಜನ
ಪುರಜನಂಗಳ ಕುಶಲವನು ವಿ
ಸ್ತರಿಸಿದನು ವಿದುರನು ಮಹೀಪತಿಗಾಪ್ತ ಬಾಂಧವರ ೮೩

ಪಾವುಡಂಗಳನಿತ್ತು ಭೂಪನ
ನೋವಿದನು ನಾನಾ ಕಥಾ ಸಂ
ಭಾವನಾನಂತರದ ಮಜ್ಜನ ಭೋಜನಾದಿಗಳ
ಆ ವಿವಿಧ ಸತ್ಕಾರದಲಿ ದಿವ
ಸಾವಸಾನವ ಕಳೆದು ಬಳಿಕ ಸ
ಭಾ ವಳಯದಲಿ ಪಾಂಡು ಸುತರಿಗೆ ನುಡಿದನಾ ವಿದುರ ೮೪

ಧರಣಿಪತಿ ಬೆಸಸಿದನು ನೀವೈ
ವರು ಕುಮಾರರು ರಾಜಸೂಯಾ
ಧ್ವರ ಮಹಾವ್ರತದೀಕ್ಷ ಭುಕ್ತ್ಯಾದಿಯಲಿ ಬಳಲಿದಿರಿ
ವರ ಸಭೆಯ ರಚಿಸಿದರು ಹಸ್ತಿನ
ಪುರಿಗೆ ಬಿಜಯಂಗೈದು ವಿಭವೋ
ತ್ಕರದ ವಿಮಳ ದ್ಯೂತದಲಿ ರಮಿಸುವುದು ನೀವೆಂದ ೮೫

ನೋಡುವುದು ಬಾಂಧವರ ನಿಮ್ಮಡಿ
ಮಾಡುವುದು ಸೌಖ್ಯವನು ಭಯದಲಿ
ಬಾಡುವುದಲೇ ರಿಪುನೃಪಾಲರ ಸಮರ ಜಯಬೀಜ
ಜೋಡಿಸುವುದಗಲದಲಿ ಕೀರ್ತಿಯ
ರ್ಝಾದಿಯನು ನಿಮ್ಮಭ್ಯುದಯ ಬಳಿ
ಕೇಡಿಸುವುದೆ ಧುಂಧುಮಾರ ದಿಲೀಪ ದಶರಥರ ೮೬

ನಂಬಿಸುವ ನಿಮ್ಮಯ್ಯನಿದ ಬೇ
ಡೆಂಬವರು ಗುರು ಭೀಷ್ಮರುಳಿದವ
ರಂಬಿನೋಪಾದಿಯಲಿ ನಿಲುವರು ಪಲವು ಮಾತೇನು
ಶಂಬರರು ನೃಪ ಕರ್ಣ ಶಕುನಿಗ
ಳೆಂಬವರು ನಿಮ್ಮೊಡನೆ ವಚನಾ
ಡಂಬರವೆ ಬಹುದುಂಟೆ ಬಿಜಯಂಗೈಯಿ ನೀವೆಂದ ೮೭

ಕರೆಸುವನು ಧೃತರಾಷ್ಟ್ರ ಗಡ ನ
ಮ್ಮರಸನಲಿ ಧೃತರಾಷ್ಟ್ರನಲಿ ನಮ
ಗೆರಡು ಮನವೇ ಭಾವ ಭೇದವೆ ಪಾಂಡು ಬೊಪ್ಪನಲಿ
ವರವೆ ದೊರಕಲಿ ಶಾಪವೇ ಮೇಣ್ಬ
ರಲಿ ಭಯವಿಲ್ಲೆಮಗೆ ಬೊಪ್ಪನ
ಕರಣ ಕೃತಿಗೆ ಹಸಾದವೆಂದನು ಧರ್ಮ ನಂದನನು ೮೮

ದ್ಯೂತ ಮೃಗಯಾ ವ್ಯಸನ ಪೌರು
ಷ್ಯಾತಿಶಯ ಮಧುಪಾನ ಕಾಂತಾ
ಪ್ರೀತಿ ದಂಡ ವಿಘಾತಿ ದೂಷಣವರ್ಥ ಸಂಗತಿಯ
ಜಾತ ಸಪ್ತವ್ಯಸನವಿವು ಸಂ
ಪ್ರೀತಿಕರ ಮೊದಲಲಿ ವಿಪಾಕದೊ
ಳಾತು ಕೆಡಿಸುವ ಹದನನರಿದಿಹುದೆಂದನಾ ವಿದುರ ೮೯

ಖಳರು ಕೌರವರಕ್ಷ ಧೂರ್ತರ
ತಿಲಕ ಶಕುನಿ ವಿಕಾರಿಯಾ ದು
ಸ್ಸಳೆಯ ಪತಿ ದೌರ್ಜನ್ಯಮುಖದೀಕ್ಷಿತನು ಕಲಿಕರ್ಣ
ಉಳಿದ ಭೀಷ್ಮ ದ್ರೋಣರೇ ನಿ
ಷ್ಫಲ ವಿಧಾನರು ನಿಮ್ಮ ಬೊಪ್ಪನ
ಬಳಕೆ ಕನ್ನಡಿ ನೋಡಿಕೊಳಿ ನೀವೆಂದನಾ ವಿದುರ ೯೦

ಪ್ರಕಟವದು ಸಲೆ ಕರ್ಣ ಕೌರವ
ಶಕುನಿಗಳ ದುಶ್ಚೇಷ್ಟೆ ಭೀಷ್ಮಾ
ದ್ಯಕುಟಿಲರು ಸಲ್ಲರು ಸುಯೋಧನ ಮಂತ್ರ ಸಂಗತಿಗೆ
ಮುಕುರ ಪಥವೆಮ್ಮಯ್ಯನೆಂಬುದು
ವಿಕಳವಲ್ಲಲೆ ವಿದುರ ಪರಿ ಪಾ
ಲಕನಲೇ ಧೃತರಾಷ್ಟ್ರ ನಾತನ ನಂಬಿ ಬಹೆವೆಂದ ೯೧

ಕರೆಸಿ ನಿಮ್ಮಯ ಮಂತ್ರಿಜನ ಮು
ಖ್ಯರ ಪಸಾಯ್ತರ ಕೇಳುವುದು ಮನ
ದೊರೆಗೆ ತೂಕಕೆ ಬಹರೆ ಭೀಮಾದಿಗಳ ಮತವಿಡಿದು
ಅರಸ ನಿಶ್ಚೈಸುವುದೆನಲು ನೀ
ಮರುಳೆ ವಿದುರ ಭವದ್ವಚೋವಿ
ಸ್ತರಕೆ ಪಡಿಸಣವುಂಟೆ ಶಿವ ಶಿವಾಯೆಂದನಾ ಭೂಪ ೯೨

ಹೋಹುದೇನಭಿಮತವೆ ಧೂರ್ತ
ವ್ಯೂಹವದು ಭೀಷ್ಮಾದಿ ಹಿರಿಯರು
ಸಾಹಸಿಗರಲ್ಲದೆ ರಹಸ್ಯಕೆ ಸಲ್ಲರವರುಗಳು
ಕಾಹುರರು ಕೌರವರು ಸಮರೋ
ತ್ಸಾಹಶಕ್ತಿಗೆ ಠಾವದಲ್ಲ
ವ್ಯಾಹತವೆ ಮತವೆಂದು ಭೀಮಾದಿಗಳ ಬೆಸಗೊಂಡ ೯೩

ಜೀಯ ಬಿನ್ನಹವಿಂದು ದೇಹ
ಚ್ಛಾಯೆಗುಂಟೇ ಬೇರೆ ಚೇಷ್ಟೆ ನ
ವಾಯಿಯೇ ನಮ್ಮಿನಿಬರಿಗೆ ರಾಜಾಭಿಮಾನದಲಿ
ನೋಯೆ ನೋವುದು ನಿಮ್ಮ ದೇಹದ
ಬೀಯದಲಿ ಸಾಣ್ಬೀಯವಹುದೆ
ಮ್ಮಾಯತಂ ಸ್ವಾತಂತ್ರ್ಯವೆಮಗಿಲ್ಲೆಂದನಾ ಭೀಮ ೯೪

ಕರೆಸುವನು ಧೃತರಾಷ್ಟ್ರ ನಿಮ್ಮನು
ಕರೆವ ಮಣಿಹ ಸುಯೋಧನಾದ್ಯರ
ಮರುಳುಗಳ ಮಾತೇನು ಹಿತವರು ನೀವಲಾ ನನಗೆ
ಧರಣಿಯಿದು ಶಾಶ್ವತವೆ ತಂದೆಗೆ
ಹಿರಿಯನಾ ಧೃತರಾಷ್ಟ್ರನಾಜ್ಞೆಯ
ಶಿರದೊಳಾಂತೆನು ಬಹೆನೆನುತ ನಿಶ್ಚೈಸಿದನು ನೃಪತಿ ೯೫

ಇರುಳ ನೂಕಿದರುದಯದಲಿ ಭೂ
ಸುರರ ಕರೆಸಿದರಮಳ ಸಾಂಪ
ತ್ಸರಿಕ ಸುಮುಹೂರ್ತದಲಿ ಹೊಯಿಸಿದರಂದು ಹೊರಗುಡಿಯ
ಪುರದ ಕಾಹನು ಸಚಿವ ಸಾಮಂ
ತರಿಗೆ ನೇಮಿಸಿ ಸಕಲ ದಳ ಮೋ
ಹರದ ದೆಖ್ಖಾಳವನು ಕಂಡನು ಪುರವ ಹೊರವಂಟ ೯೬

ಬಿಗಿದ ರೆಂಚೆಯ ಹೊಮ್ಮಿಣಿಯ ಹೊರ
ಜೆಗಳ ಜೋಡಿಯ ಪಕ್ಕಘಂಟೆಯ
ಝಗೆಯ ಮೊಗರಂಬದ ನವಾಯಿಯ ಮಣಿಯ ಜಲವಟೆಯ
ಬಿಗಿದ ಕೂರಂಕುಶದ ಮಾವಂ
ತಿಗನ ಸನ್ನೆಗೆ ಕುಸಿದ ದಂತಿಯ
ಹೆಗಲ ಹೊಂಗದ್ದುಗೆಗೆ ಬಿಜಯಂಗೈದನಾ ಭೂಪ ೯೭

ತಳಿತವಿನನುದಯದಲಿ ತಾರಾ
ವಳಿಗಳದ್ಭುತವೆನಲು ಮುಕ್ತಾ
ವಳಿಯ ಧವಳಚ್ಛತ್ರದೆಡ ಬಲಕೊಲೆವ ಚೌರಿಗಳ
ಕೆಲಬಲದ ಭೀಮಾರ್ಜುನರ ಗಜ
ದಳದ ಮುಂದೆ ಕುಮಾರ ವರ್ಗದ
ಸುಳಿವುಗಳ ಸೌರಂಭದಲಿ ಹೊರವಂಟನಾ ಭೂಪ ೯೮

ಮುಂದೆ ಮೋಹರ ತೆಗೆದು ನಡೆದುದು
ಸಂದಣಿಸಿ ನಕುಲಾದಿ ಭೂಪರು
ಹಿಂದೆ ಮಣಿ ಕೇವಣದ ದಡ್ಡಿಯ ಬಿಗಿದ ಬೀಯಗದ
ಗೊಂದಣದ ಹೆಮ್ಮಕ್ಕಳಿದ್ದೆಸೆ
ಯಂದಣದ ಸಂದಣಿಗಳಲಿ ನಡೆ
ತಂದವನಿಬರ ರಾಣಿವಾಸದ ದಂಡಿಗೆಗಳಂದು ೯೯

ಉಡಿಗೆಗಳ ದೇಸಿಯ ವಿಳಾಸದ
ತೊಡಿಗೆಗಳ ಮೌಳಿಯ ನವಾಯಿಯ
ಮುಡಿಗಳೆಡ ಬಲದೋರೆನೋಟದ ಬಳ್ಳಿ ಬೆಳಗುಗಳ
ಕಡು ಬೆಮರ ತನು ಪರಿಮಳದೊಳೆಡೆ
ವಿಡದ ಗಗನೋದರದ ಗರುವೆಯ
ರಡಸಿದರು ದ್ರುಪದಾತ್ಮಜೆಯ ದಂಡಿಗೆಯ ಬಳಸಿನಲಿ ೧೦೦

ಭೂರಿ ಭೇರೀ ವಾದ್ಯರವ ಕೈ
ವಾರಿಗಳ ಕಳಕಳದೊಳಡಗಿತು
ನಾರಿಯರ ನೇವುರದ ಮೊಳಗಿನೊಳದ್ದುದಾ ರಭಸ
ಆರು ಹೊಗಳುವರಾ ವಿಭವ ವಿ
ಸ್ತಾರ ಪಣವನು ಪಯಣ ಗತಿಯಲಿ
ಭೂರಮಣನೈತಂದು ಹೊಕ್ಕನು ಹಸ್ತಿನಾಪುರವ ೧೦೧

## ಹದಿಮೂರನೆಯ ಸಂಧಿ

ಸೂ. ವೀತರಾಗದ್ವೇಷಭಯನನ
ಜಾತ ಶತ್ರುವನಕಟ ಕಪಟ
ದ್ಯೂತದಲಿ ಕುರುರಾಯ ಗೆಲಿದನು ಧರ್ಮನಂದನನ

ಕೇಳು ಜನಮೇಜಯ ಧರಿತ್ರೀ
ಪಾಲ ಪಾಂಡವ ನೃಪರನರಮನೆ
ಬೀಳುಗೊಂಡುದು ವಿಳಸದಿಂದ್ರಪ್ರಸ್ಥಪುರ ಸಹಿತ
ಮೇಲೆ ನೆಗಳುವ ದುರ್ನಿಮಿತ್ತವ
ನಾಲಿಸಿದರೇ ದೈವದೋಷ ನಿ
ಮೀಲಿತಾಂತಃಕರಣ ಹತರೈತಂದರಿಭಪುರಿಗೆ ೧

ಹರಡೆ ಕೆದರಿತು ಬಲದಲುದಯದ
ಲುರಿಯಲೊದರಿತು ಹಸುಬನೆಡದಲಿ
ಕರಿಯ ಹಕ್ಕಿಯ ತಾರುಹಂಗನ ಪಾಮದುಡಿಕೆಗಳ
ನರಿಗಳೊದರಿದವಿದಿರಿನಲಿ ಮೋ
ಹರವ ಮೊಲನಡಹಾಯ್ದುವಾನೆಗ
ಳರಚಿ ಕೆಡೆದವು ಮುಗ್ಗಿದವು ರಥವಾಜಿಗಳು ನೃಪರ ೨

ಶಕುನಗತಿ ಸಾಮಾನ್ಯವಿದು ಕಂ
ಟಕದ ನೆಲೆ ಜನ್ಮದಲಿ ಸಪ್ತಾ
ಧಿಕದೊಳಿದ್ದರು ಸೌರಿ ಗುರು ಭೌಮಾಬ್ಜಬಾಂಧವರು
ವಿಕಳದೆಸೆ ನಿಮ್ಮಡಿಗೆ ವೈರಿ
ಪ್ರಕರಕುನ್ನತದೆಸೆ ಮಹೀ ಪಾ
ಲಕ ಶಿರೋಮಣಿ ಪುರಕೆ ಮರಳೆಂದರು ಮಹೀಸುರರು ೩

ಮರಳಲಹುದೈ ದೈವವಿಕ್ಕಿದ
ಕೊರಳುಗಣ್ಣಿಯ ಕುಣಿಕೆಯಾರಲಿ
ಹರಿವುದೈ ಮನ್ನಿಸಿದನೇ ಮೌಹೂರ್ತಕರ ನುಡಿಯ
ಕರೆಸುವನು ಧೃತರಾಷ್ಟ್ರ ನಮಗೀ
ನರಿ ಮೊಲಂಗಳ ಹಕ್ಕಿ ಹರಿಣೆಯ
ಕರಹವೇಗುವವೆಂದು ಜರೆದನು ಶಕುನ ಕೋವಿದರ ೪

ಹರಿದರರಸಾಳುಗಳು ರಾಯನ
ಬರವನರುಹಿದರಂಧ ಭೂಪತಿ
ಪುರದೊಳಗೆ ಗುಡಿಗಟ್ಟಿಸಿದನತ್ಯಧಿಕ ಹರ್ಷದಲಿ
ಸುರನದೀಜ ದ್ರೋಣ ಗೌತಮ
ಗುರುಜ ಕರ್ಣ ಜಯದ್ರಥಾದಿಗ
ಳುರು ವಿಭವದಿಂದಿದಿರುಗೊಂಡರು ಹೊಗಿಸಿದರು ಪುರವ ೫

ಸೇನೆ ಬಿಟ್ಟುದು ಪುರದ ಬಹಿರೋ
ದ್ಯಾನ ವೀಧಿಗಳೊಳಗೆ ಕುಂತೀ
ಸೂನುಗಳು ಸುಮ್ಮಾನ ಮಿಗೆ ನಡೆತಂದರಿಭಪುರಿಗೆ
ಆ ನಗರದೊತ್ತೊತ್ತೆಗಳನಾ
ಮಾನಿನಿಯರುಪ್ಪಾರತಿಯನವ
ರಾನನೇಂದು ಪ್ರಭೆ ವಿಭಾಡಿಸೆ ಬಿಸಿಲ ಬೇಗೆಗಳ ೬

ಪೌರ ನಾರೀಜನದ ತಳಿಗೆಗ
ಳಾರತಿಯ ಸೇಸೆಗಳ ಲಾಜೆಯ
ತೋರ ಮುತ್ತಿನ ಮಳೆಯ ಮಂಗಳರವದ ಕಳಕಳದ
ಓರಣದ ತೋರಣದ ಗುಡಿಗಳ
ಚಾರು ವೀಥಿಗಳೊಳಗೆ ಬಂದರು
ಭೂರಮಣರುತ್ಸಾಹದಲಿ ಧೃತರಾಷ್ಟ್ರನರಮನೆಗೆ ೭

ಇಳಿದರಾನೆಯನಮಳ ರತ್ನಾ
ವಳಿಯ ಕಾಣಿಕೆಗಳನು ಸುರಿದರು
ಖಿಳ ಶಿರೋಮಣಿಗೆರಗಿದರು ಧೃತರಾಷ್ಟ್ರ ಭೂಪತಿಗೆ
ಕುಲತಿಲಕ ಬಾ ಕಂದ ಭರತಾ
ವಳಿ ವನದ ಮಾಕಂದ ಧರ್ಮ
ಸ್ಥಳ ಲತಾವಳಿ ಕಂದ ಬಾಯೆಂದಪ್ಪಿದನು ನೃಪನ ೮

ಬಾ ಮಗನೆ ರಿಪುರಾಯ ಮನ್ಮಥ
ಭೀಮ ಬಾರೈ ಭೀಮ ರಣ ನಿ
ಸ್ಸೀಮ ಫಲುಗುಣ ಬಾ ನಕುಲ ಸಹದೇವ ಬಾಯೆನುತ
ಪ್ರೇಮ ರಸದಲಿ ಬೇರೆ ಬೇರು
ದ್ದಾಮ ಭುಜನಪ್ಪಿದನು ಚಿತ್ತದ
ತಾಮಸದ ತನಿ ಬೀಜ ಮುಸುಕಿತು ಹರ್ಷ ರಚನೆಯಲಿ ೯

ಹರಸಿದನು ಕಾಣಿಕೆಯ ಕೊಂಡೈ
ವರ ಮಹಾ ಸತಿಯನು ಕುಮಾರರ
ನರಸಿಯರನನಿಬರ ವಚೋ ರಚನೆಯಲಿ ಮನ್ನಿಸಿದ
ಅರಸ ಗಾಂಧಾರಿಯನು ವಂದಿಸಿ
ದರುಶನವ ಕೊಡು ಹೋಗೆನಲು ಕಡು
ಹರುಷ ಮಿಗಿಲೈತಂದರಾ ಗಾಂಧಾರಿಯರಮನೆಗೆ ೧೦

ಬಂದು ಕಾಣಕೆ ಕೊಟ್ಟು ವಂದಿಸಿ
ನಿಂದರೈವರು ತನ್ನ ಕೆಳದಿಯ
ರಿಂದ ತರಿಸಿದಳಾರತಿಯನುಪ್ಪಾರತಿಯನೊಲಿದು
ಚಂದ ಮಿಗೆ ಸಾವಿರದ ಸಂಖ್ಯೆಯ
ರಿಂದು ಮುಖಿಯರ ತಳಿಗೆಯಾರತಿ
ಸಂದಣಿಸಿದವು ಜಯ ಸಬುದ ರೋಂಪಿಸಿದುದಂಬರವ ೧೧

ಅರಸಿ ಕಾಣಿಸಿಕೊಂಡಳೀ ನೃಪ
ರರಸಿಯನು ಸುಕುಮಾರಕರನವ
ರರಸಿಯರ ಸಖಿಯರ ವಿಳಾಸಿನಿಯರ ಪಸಾಯ್ತಿಯರ
ತರಿಸಿ ಕೊಟ್ಟನು ಬೇರೆ ಬೇರನಿ
ಬರಿಗೆ ಉಡುಗೊರೆ ಗಂಧ ಮಾಲ್ಯಾ
ಭರಣವನು ರಾಜೋಪಚಾರ ವಿಳಾಸ ವಿಭವದಲಿ ೧೨

ಬೀಳುಕೊಟ್ಟಳು ಬಳಿಕ ಕುರು ನೃಪ
ನಾಲಯಕೆ ಕರೆದೊಯ್ದು ಕುಂತಿಯ
ಕಾಲಿಗೆರಗಿದನಿವರನುಚಿತೋಕ್ತಿಯಲಿ ಮನ್ನಿಸಿದ
ಬಾಲಮೃಗವೊಳಗಾಯ್ತಲಾ ತೊಡು
ಕೋಲನೆಂದರು ನಗುತ ಮನದಲಿ
ಕೌಳಿಕದ ಕುಹಕಿಗಳು ಕೌರವರಾಯ ಶಕುನಿಗಳು ೧೩

ಖಳರ ಹೃದಯದ ಕಾಳ ಕೂಟದ
ಹುಳುಕ ಬಲ್ಲರೆ ಮಾನ್ಯರವದಿರ
ಲಲಿತ ಮಧುರ ವಚೋವಿಳಾಸಕೆ ಮರುಳಗೊಂಡರಲೈ
ಅಳುಪಿದರೆ ಮಧುಕರನ ಮರಿ ಬೊ
ಬ್ಬುಳಿಯ ವನದೊಳಗೇನಹುದು ನೃಪ
ತಿಲಕರಿದ್ದರು ಬೇರೆ ರಚಿಸಿದ.ರಾಜಭವನದಲಿ ೧೪

ಬಂದು ಕಂಡುದು ನಿಖಿಳ ಪುರಜನ
ವಂದು ಕಾಣಿಕೆಗೊಟ್ಟು ಕೌರವ
ನಂದನರು ಸಚಿವರು ಪಸಾಯ್ತರು ನಿಯೋಗಿ ಮಂತ್ರಿಗಳು
ಸಂದಣಿಸಿದುದು ಕವಿ ಗಮಕಿ ನಟ
ವಂದಿ ಮಾಗಧ ಮಲ್ಲ ಗಾಯಕ
ವೃಂದ ದೀನಾನಾಥರೋಲಗಿಸಿದರು ಧರ್ಮಜನ ೧೫

ಆ ದಿವಸವನು ಮಧುರ ಗೇಯ ನಿ
ನಾದದಲಿ ಕವಿ ವಾದಿ ವಾಗ್ಮಿ ವಿ
ನೋದದಲಿ ನೂಕಿದರು ಮಜ್ಜನ ಭೋಜನಾದಿಯಲಿ
ಆದುದುತ್ಸಹವಂದಿನಿರುಳು ದಿ
ನಾದಿಯಲಿ ಕಂಡನು ಕನಸ ಪ್ರಾ
ಸಾದ ಶಿಖರವು ಮುರಿದು ಬಿದ್ದುದನಡವಿ ಮಧ್ಯದಲಿ ೧೬

ಅರಸನುಪ್ಪವಡಿಸಿದನವನೀ
ಶ್ವರ ವಿಹಿತ ಸತ್ಕ್ರಿಯೆಗಳನು ವಿ
ಸ್ತರಿಸಿದನು ದುಃಸ್ವಪ್ನಕುಂತ ವಿಭಿನ್ನಚೇತನನು
ಕರೆಸಿ ಧೌಮ್ಯನಿಗರುಹಲತಿ ದು
ಸ್ತರದ ಕನಸಿದು ಶಾಂತಿ ಕರ್ಮವ ೧೭
ಪುರದೊಳಗೆ ವಿರಚಿಸುವೆನಂಜದಿರೆಂದನಾ ಮುನಿಪ

ಪುರದೊಳೆಲ್ಲಿಯು ಶಾಂತಿ ನಾರದ
ನೊರೆದನುತ್ಪಾತ ಪ್ರಬಂಧದ
ಹೊರಿಗೆಯನು ನಿಮ್ಮೈಶ್ವರಿಯ ವಿಧ್ವಂಸಕರವೆಂದು
ಇರುಳು ನಾನಾ ಸ್ವಪ್ನ ಕಾನನ
ಗಿರಿ ಪರಿಭ್ರಮಣೈಕ ಚಿಂತಾ
ಭರಿತನಾದೆನು ದೈವಕೃತ ಉಪಭೋಗ್ಯವೆನಗೆಂದ ೧೮

ಜನಪ ಕಳುಹಿದ ದೂತರಿವರರ
ಮನೆಗೆ ಬಂದರು ಜೀಯ ಧೃತರಾ
ಷ್ಟ್ರನ ಸಮಯವಾಯಿತ್ತು ನಿಮ್ಮಡಿ ಬಿಜಯ ಮಾಡುವದು
ಎನಲು ತನ್ನ ಕುಮಾರರನು ತ
ನ್ನನುಜರನು ಸಚಿವ ಪ್ರಧಾನರ
ನನಿಬರನು ಕರೆಸಿದನು ನೃಪ ಹೊರವಂಟನರಮನೆಯ ೧೯

ಬಂದು ಧೃತರಾಷ್ಟ್ರನ ಪದಾಬ್ಜಕೆ
ವಂದಿಸಿದೊಡೆನ್ನಾನೆ ಬಾರೈ
ತಂದೆ ಬಾರೆಂದೆಳೆದು ಕುಳ್ಳಿರಿಸಿದನು ಮಂಚದಲಿ
ನಂದನರು ಭೀಮಾರ್ಜುನಾದಿಗ
ಳಂದು ಪರಿವೇಷ್ಟಿಸಿದರಿತ್ತಲು
ಕಂದು ಹೃದಯದ ಕೌರವೇಂದ್ರನ ಹದನ ಕೇಳೆಂದ ೨೦

ಕರೆಸಿದನು ಶಕುನಿಯಂನು ಕರ್ಣಂ
ಗರುಹಿದನು ಸೈಂಧವವನೆಕ್ಕಟಿ
ಗರೆದು ಹೇಳಿದ ಕೃತ್ರಿಮದ ಹಾಸಂಗಿಗಳ ರಚಿಸಿ
ಹರಸಿಕೊಂಡರು ಗಣಪ ಯಕ್ಷೇ
ಶ್ವರಿ ಕಳಾವತಿ ದುರ್ಗಿ ಭುವನೇ
ಶ್ವರಿಗಳಿಗೆ ವಿವಿಧೋಪಚಾರದ ಬಲಿ ವಿಧಾನದಲಿ　೨೧

ದ್ಯೂತ ಸಿದ್ಧಿಯ ಮಂತ್ರ ವರ ವಿ
ದ್ಯಾತಿಶಯ ವಿಚ್ಛೇದ ರಕ್ಷವಿ
ಧೂತ ರಿಪುಮತಿ ಯಂತ್ರ ಪರಸಮ್ಮೋಹನೌಷಧಿಯು
ಈತಗಳು ಮೇಳವಿಸಿದರು ನಿ
ರ್ಭೀತರಿವರಿದನೆತ್ತ ಬಲ್ಲರು
ಕೈತವದ ಕಣಿ ಕೌರವೇಶ್ವರ ಬಂದನರಮನೆಗೆ　೨೨

ಚಿತ್ತವಿಸಿದರೆ ಬೊಪ್ಪ ಮಯನಿವ
ಗಿತ್ತ ಸಭೆಯದು ದೈವ ನಿರ್ಮಿತ
ವೆತ್ತ ಮಾನವ ಕರ್ಮವೆತ್ತಲು ಸರಿಸವಲ್ಲದಕೆ
ಇತ್ತ ನಿಮ್ಮಡಿ ಮಾಡಿಸಿದ ಸಭೆ
ಯೆತ್ತ ಬಿಜಯಂಗೈದು ನೋಡಿದ
ಡುತ್ತಮವಲಾಯೆಂದನಾ ದುರ್ಯೋಧನನು ನಗುತ　೨೩

ಆ ಸಭೆಯ ನೋಡುವೆವು ಶಿಲ್ಪದ
ದೇಸಿಗಾರರ ಕೈಮೆಗಳು ಲೇ
ಸೈಸಲೇ ಬೇರೇನು ಮಾನುಷ ದೈವಕೃತಿಯೆಂದು
ಈಸು ಸಂಪ್ರಿಯ ನಮ್ಮಲುಂಟೇ
ಲೇಸೆನುತ ನೃಪನೆದ್ದು ಕೈಗೊಡ
ಲಾ ಸಭೆಗೆ ಧೃತರಾಷ್ಟ್ರ ಬಂದನು ರಾಜಗಣ ಸಹಿತ　೨೪

ಬಿಗಿದ ನೀಲದ ಸರಿಯ ನೆಲಗ
ಟ್ಟುಗಳ ವೈಡೂರಿಯದ ಮಣಿ ಭಿ
ತ್ತಿಗಳ ವಜ್ರದ ವೇದಿಗಳ ವಿದ್ರುಮದ ಲೋವೆಗಳ
ಝುಗೆಯ ಲಹರಿಯ ಜಾಳಿಗೆಯ ಪ
ಚ್ಚೆಗಳ ಪಾಗಾರದ ಸುರತ್ನಾ
ಳಿಗಳಲೆಸೆದುದು ರಾಜಸಭೆ ತತ್ಕ್ರೋಶ ಮಾತ್ರದಲಿ　೨೫

ಕವಿದವರುಣಾಂಶುಗಳ ಲಹರಿಯ
ಲವಣಿ ಲಾವಣಿಗೆಯಲಿ ನೀಲ
ಚ್ಛವಿಯ ದೀಧಿತಿ ಝಳಪಿಸಿತು ದೆಸೆದೆಸೆಯ ಭಿತ್ತಿಗಳ
ತಿವಿದವೆಳ ಮುತ್ತುಗಳ ಚಂದ್ರಿಕೆ
ಜವಳಿಸಿದವೊಂದೊಂದನೌಕಿದ
ವವಿರಳಿತ ಮಣಿ ಕಿರಣ ವೇಣೀಬಂಧ ಬಂಧುರದಿ　೨೬

ಅಲ್ಲಿ ವಿಮಳೋದ್ಯಾನ ವೀಥಿಗ
ಳಲ್ಲಿ ತಾವರೆಗೊಳದ ರಚನೆಗ
ಳಲ್ಲಿ ಹಂಸ ಮಯೂರ ಮಧುಕರ ಶುಕ ಪಿಕಾನೀಕ
ಅಲ್ಲಿ ಕೇಳೀ ಶೈಲ ಹಿಮ ಗೃಹ
ವಲ್ಲಿ ವಿವಿಧ ವಿಳಾಸ ರಚನೆಗ
ಳಲ್ಲಿ ಹೊಯ್ಕೈಯೆನಿಸಿ ಮೆರೆದುದು ಪಾಂಡವರ ಸಭೆಯ　೨೭

ಸ್ಥಳವನೇ ಜಲವೆಂದು ನಿರ್ಮಳ
ಜಲವನೇ ಸ್ಥಳವೆಂದು ಬಾಗಿಲ
ನೆಳಲ ಭಿತ್ತಿಯ ಹಾಯ್ದು ಬಾಗಿಲ ಭಿತ್ತಿಯೆಂದಿಳಿದು
ಕಳವಳಿಸುವನೆ ಧರ್ಮಸುತನಾ
ಕೊಳನನೇ ಕೊಳನೆಂದು ಬಾಗಿಲ
ನೆಳಲ ಹೊಗಳುತ ಬಂದು ಹೊಕ್ಕನು ಬಹಳ ಚೌಕಿಗೆಯ　೨೮

ಕೆಲಸದಲಿ ಶಿಲ್ಪದಲಿ ರತ್ನಾ
ವಳಿಯ ಘಾಟ ನವಾಯಿಯಲಿ ಸಭೆ
ಯಿಳೆಗಪೂರ್ವವಲಾ ಮಹಾದೇವೆಂತು ರಚಿಸಿದರೊ
ವಿಳಸದಾಯವ್ಯಯದ ವಿಶ್ರುತ
ವಳಯದುನ್ನತ ವಾಸ್ತು ಲಕ್ಷಣ
ದೊಳಗೆ ಸೇರಿದುದೆಂದು ನೃಪ ಕೊಂಡಾಡಿದನು ಸಭೆಯ　೨೯

ಸೂಸಕದ ಮುತ್ತುಗಳು ತಾರಾ
ರಾಶಿಗಳ ಹಬ್ಬುಗೆಯ ನೀಲದ
ಹಾಸರೆಗಳೇ ಹೋಲುತಿದ್ದವು ಗಗನ ಮಂಡಲವ
ಸೂಸಕಂಗಳ ಮುರಿದ ಮುತ್ತಿನ
ದೇಶಿಕಾತಿಯರಾನನೇಂದುಗ
ಳಾ ಸುಧಾಕರವೆನಲು ಗೆಲಿದುದು ಸಭೆ ನಭಸ್ಥಳವ　೩೦

ಗುರು ನದೀಸುತ ಕರ್ಣ ಸೈಂಧವ
ಗುರುತನುಜ ಭಗದತ್ತ ಬಾಹ್ಲಿಕ
ನುರು ಯವನ ಸಂವೀರ ಕೌಸಲ ಚೈದ್ಯ ಮಾಗಧರು
ಅರಸುಗಳು ನಾನಾ ದಿಗಂತದ
ಧರಣಿಪರು ಸಚಿವರು ಪಸಾಯ್ತರು
ನೆರೆದುದಂದಿನ ದಿವಸದೋಲಗದೊಡ್ಡು ಚೆಲುವಾಯ್ತು　೩೧

ಧರಣಿಪತಿ ಕೇಳೊಂದು ಹರಿಯಂ
ತರ ವಿಶಾಲ ಮಹಾಸಭಾ ವಿ
ಸ್ತರಣವದರಲಿ ತೆರಹ ಕಾಣೆನು ತೀವಿತವನಿಪರು
ಹೊರಗೆ ರಥಿಕರು ರಾಹುತರು ಜೋ
ಧರು ಪದಾತಿಗಳಿದ್ದುದಂದಿನ
ಸಿರಿ ಸುರೇಂದ್ರನ ಪಾಡಿಗೈಮಡಿ ಹತ್ತು ಮಡಿಯೆಂದ　೩೨

ಒಂದು ಕಡೆಯಲಿ ಕವಡಿಕೆಯ ಜೂ
ಜೊಂದು ಕಡೆಯಲಿ ಗದ್ಯಪದ್ಯವ
ದೊಂದು ಕಡೆಯಲಿ ವಾರವಧುಗಳ ಸಾರಸಂಗೀತ
ಒಂದು ಕಡೆಯಲಿ ತರ್ಕ ಗೋಷ್ಠಿಯ
ದೊಂದು ಕಡೆಯಲಿ ಕೌರವೇಂದ್ರನ
ಮುಂದೆ ಜಡಿದುದು ರಭಸ ಹಾಸಂಗಿಗಳ ಸಾರಿಗಳ　೩೩

ಆಡಲರಿವನು ಗಡ ಯುಧಿಷ್ಠಿರ
ನಾಡುವರೆ ಬರಹೇಳು ಮೇಣಾ
ನೋಡುತಿರಲಾವಾಡುವೆವು ಸಭೆಯಲಿ ವಿನೋದದಲಿ
ಜೋಡಿಯಿಲ್ಲದ ಸರಸ ನೆತ್ತವ
ನಾಡಲರಿಯದ ನೃಪತಿ ಮೃಗವೆಂ
ದಾಡುತಿಹರರಿದವರು ತಾವಲ್ಲೆಂದನಾ ಶಕುನಿ　೩೪

ಅಹುದು ಹೊಲ್ಲೆಹವಾವುದಾಡಲು
ಬಹುದು ಸುಜನರ ಕೂಡೆ ನೀವೇ
ಕುಹಕ ವಿದ್ಯಾಸಾರ್ವಭೌಮರು ಶಕುನಿ ಕೌರವರು
ಸುಹೃದಯರಿಗತಿ ಕುಟಿಲರಲಿ ನಿ
ಸ್ಪೃಹರಿಗತಿ ರಾಗಿಗಳೊಡನೆ ದು
ಸ್ಸಹ ಕಣಾ ಸಮ್ಮೇಳವೆಂದನು ಧರ್ಮಸುತ ನಗುತ ೩೫

ನೀವು ಸುಹೃದಯರಿಂದು ದುರ್ಜನ
ರಾವು ನೀವ್ನೀರಾಗಿಗಳು ರಾ
ಗಾವಲಂಬರು ನಾವಲೇ ನೀವರಿಯಿರೇ ನಿಜವ
ನೀವು ನಾವೆಂಬೀ ಪೃಥಗ್ಭಾ
ವಾವಲಂಬನವೇಕೆ ನಿಮ್ಮಲಿ
ನಾವು ನಮ್ಮಲಿ ನೀವೆಯೆಂದನು ನಗುತ ಕುರುರಾಯ ೩೬

ಇರಲಿ ಬಾಂಧವರಿದರೊಳಿರಡಿ
ಟ್ಟಿರದೆ ನಿಲಲದು ಲೇಸಲಾ ವಿ
ಸ್ತರಿಸಲೇಕೈ ದ್ಯೂತ ದುರ್ವ್ಯಸನ ಪ್ರಪಂಚವಿದು
ತರುಣ ವಿಟ ಚಾರಣ ಕುಶೀಲಕ
ಭರತ ಗಣಿಕಾಯೋಗ್ಯ ವಿಷಯಕೆ
ಗರುವರೊಲಿವರೆಯೆಂದನಾ ಕುರುಪತಿಗೆ ಯಮಸೂನು ೩೭

ದ್ಯೂತವಿದು ದುರ್ವ್ಯಸನವೆಂಬವ
ನೀತಿವಿದನೇ ಶ್ರೋತ್ರಿಯರಿಗ
ಖ್ಯಾತಿಯದು ಯತಿಗಳಿಗೆ ಮೇಣ್ ರಣಭೀತ ಭೂಪರಿಗೆ
ದ್ಯೂತ ಮೃಗಯಾ ಸ್ತ್ರೀವ್ಯಸನ ನೃಪ
ಜಾತಿಗೋಸುಗರಾದವಿದರ ರ
ಸಾತಿಶಯವರಿಯದವ ನರಮೃಗವೆಂದನಾ ಶಕುನಿ ೩೮

ಅರಸ ಕೇಳ್ ಕಾಳಗಕೆ ಜೂಜಿಗೆ
ಕರೆದಡೋಸರಿಸಿದೊಡೆ ಬಳಿಕವ
ಗರುವನೇ ಕ್ಷತ್ರಿಯರೊಳಗೆ ನೃಪಧರ್ಮ ನೀನರಿಯ
ಕರೆದೆವಾವ್ ಜೂಜಿಂಗೆ ಬೇಕೇ
ಧರಣಿಪತಿ ಬಾ ರಾಜಧರ್ಮವ
ನೊರಸುವರೆ ನಿಲ್ಲೆಂದುಪೇಕ್ಷಿಸಿ ನುಡಿದನಾ ಶಕುನಿ ೩೯

ರಾಜಧರ್ಮವಿದಹುದು ಕಳವಿನ
ಜೂಜು ಧರ್ಮದ ಮಗನೊ ಮೊಮ್ಮನೊ
ಬೀಜವಾವುದು ನಿಮ್ಮ ಕಪಟದ್ಯೂತ ನಿರ್ಣಯಕೆ
ರಾಜ ಪರಿಪಾಟಿಗಳ ಪಂಥದ
ಜೂಜ ಬಲ್ಲರೆ ಕರೆಯಿ ಬಾರದ
ಡಾ ಜನಾರ್ದನನಾಣೆಯೆಂದನು ಧರ್ಮನಂದನನು ೪೦

ಭೂರಮಣ ಕೇಳಖಿಳ ನೃಪ ಸಂ
ಹಾರಬೀಜದ ಕರ್ಮಫಲ ಸಂ
ಸ್ಕಾರವಳ್ಳಿಯನಿರಿದು ನೂಕಿತು ಧರ್ಮನಂದನನ
ಧೀರನಲ್ಲಾ ಧರ್ಮಶಾಸ್ತ್ರ ವಿ
ಚಾರ ಸಾರಜ್ಞಾನ ನಿಷ್ಠೆಯೊ
ಳೋರೆಯುಂಟೇ ದ್ಯೂತಕೇಳಿಗೆ ಮಾಡಿದನು ಮನವ ೪೧

ಇಂದುವದನೆಗೆ ದಕ್ಷಿಣಾಕ್ಷಿ
ಸ್ಪಂದವಾಯಿತು ಭೀಮ ಪಾರ್ಥರಿ
ಗಂದು ಕೆತ್ತಿತು ಹೃದಯ ವಾಮ ಭುಜಾಕ್ಷಿಗಳು ಸಹಿತ
ಕಂದಿದುವು ಮೋರೆಗಳು ಗಂಗಾ
ನಂದನ ದ್ರೋಣಾದಿ ಸುಜನರಿ
ಗಂದವೇರಿತು ಮುಸುಡು ಶಕುನಿ ಸುಯೋಧನಾದಿಗಳ ೪೨

ಕುರುಪತಿಯ ಕೃತಪುಣ್ಯಬೀಜಾಂ
ಕುರದ ಕಾಲ ದಿಗಂತದವನೀ
ಶ್ವರ ಸಮೂಹ ಚಮೂನಿಬರ್ಹಣ ಸೂಚನಾ ಸಮಯ
ಅರಸ ಕೇಳ್ ಕುಂತೀಕುಮಾರರ
ಸಿರಿಯ ದುಗುಡದ ಹೊತ್ತು ಮಿಗೆ ಗ
ಬ್ಬರಿಸಿತೈ ಧರ್ಮಜನ ಗಾಢದ ಬುದ್ಧಿಪರ್ವತವ ೪೩

ವ್ಯಸನತೃಷ್ಣೆಯು ಕೀಳು ಚಿತ್ತದ
ಮಿಸುನಿಯೊಳು ಬೆರೆಸಿತು ಸುಬುದ್ಧಿಯ
ರಸವು ಹಾರಿತು ಹದಿದ ರಾಗದ್ವೇಷ ವಹ್ನಿಯಲಿ
ಮುಸುಡ ತಿರುಹಿತು ತಿಳಿವು ಲಜ್ಜೆಯ
ದೆಸೆಗೆ ದುರ್ಘಟವಾಯ್ತು ಪರಿಭವ
ದೊಸಗೆಯನು ಸೂಚಿಸಿತು ಲಕ್ಷ್ಮಿಗೆ ಧರ್ಮಜನ ಹೃದಯ ೪೪

ಹಲವು ಮಾತಿನಲೇನು ಭೂಪತಿ
ಕೆಲಕೆ ಸಿಲುಕಿದನವದಿರೊಡ್ಡಿದ
ಬಲೆಗೆ ಬಂದನು ನೆತ್ತ ಸಾರಿಯ ಗುರಿಯ ಗದ್ದುಗೆಗೆ
ಕೆಲದಲನುಜರು ವಾಮದಲಿ ಮಣಿ
ವಳಯ ಮಂಚದಲಂಧನೃಪನಿದಿ
ರಲಿ ಸುಯೋಧನ ಕರ್ಣ ಶಕುನಿ ಜಯದ್ರಥಾದಿಗಳು ೪೫

ಹಲಗೆಯಿಕ್ಕಿತು ಹೊನ್ನ ಸಾರಿಗ
ಳಿಳುಹಿದವು ಹೇಳೊಡ್ಡವನು ಕಳ
ಕಳವ ನಿಲ ಹೇಳೆನುತ ಹಾಸಂಗಿಗಳ ಹೊಸೆ ಹೊಸೆದು
ನೆಲಕೆ ಹಾಯ್ಕಿದನಡಿಗಡಿಗೆ ಮಂ
ಡಳಿಸಿ ಸಾರಿಯ ಹೂಡಿ ಕುರುಪತಿ
ಗೆಲಿದ ಹೋಗೆಂದೊದರುತಿದ್ದನು ತೊಡೆಯನಪ್ಪಳಿಸಿ ೪೬

ಆಟವಾರಂಭಿಸದು ಬರಿ ಬೊ
ಬ್ಬಾಟವೇತಕೆ ವಿಜಯಸಿರಿ ವಾ
ಚಾಟರಿಗೆ ಮೆಚ್ಚುವಳೆ ತೋರಾ ದ್ಯೂತ ಕೌಶಲವ
ತೋಟಿ ಬೇಕೇ ಕೈಯ ಹೊಯ್
ಬೂತಾಟವೇತಕೆ ಧರ್ಮನಂದನ
ನಾಟವೊಳ್ಳಿತು ಬಲ್ಲೆನೆಂದನು ಶಕುನಿ ನಸುನಗುತ ೪೭

ಎನ್ನ ಲೆಕ್ಕಕೆ ಶಕುನಿ ಭೂಪತಿ
ನಿನ್ನೊಡನೆ ಕೈಹೊಯ್ದುನೊಡ್ಡವ
ನೆನ್ನೊಡನೆ ಹೇಳೆಂದು ನುಡಿದನು ಕೌರವರರಾಯ
ನಿನ್ನೊಳಾಗಲಿ ನಿನ್ನ ಮಾವನೆ
ಮುನ್ನ ಬರಲಿದಕೇನೆನುತ ಸಂ
ಪನ್ನ ಶತರೊಡನಳವಿಗೊಟ್ಟವನೀಶನಿಂತೆಂದ ೪೮

ಹೇಮ ಭಾರದ ವಿಮುಲ ರತುನ
ಸ್ತೋಮವಿದೆ ಪಣವೆನಲು ಕೌರವ
ಭೂಮಿಪತಿಯೊಡ್ಡಿದನು ಧರ್ಮಜ ಹೆಸರಿಸಿದ ಧನವ
ಆ ಮಹಿಪ ಶಕುನಿಗಳು ಸಾರಿ
ಗ್ರಾಮವನು ಕೆದರಿದರು ದ್ಯೂತದ
ತಾಮಸದಲುಬ್ಬೆದ್ದು ದಿಬ್ಬರ ಕರಣವೃತ್ತಿಗಳು ೪೯

ದುಗನ ಹಾಯಿಕು ತನಗೆ ಹಾಯ್ಕಿ
ತ್ರಿಗನವೆಂಬಬ್ಬರದ ಹಾಸಂ
ಗಿಗಳ ಬೊಬ್ಬೆಯ ಸಾರಿಗಳ ಮಣಿ ಖಟಿಲ ನಿಸ್ವನವ
ಉಗಿವ ಸೆರೆಗಳ ಬಳಿ ದುಹಾರದ
ಬಿಗುಹುಗಳ ಬೀದಿಗಳ ತಳಿ ಸಾ
ರಿಗಳ ಧಾಳಾಧೂಳಿ ಮಸಗಿತು ಭೂಪ ಕೇಳೆಂದ ೫೦

ರಾಯ ಸೋತನು ಶಕುನಿ ಬೇಡಿದ
ದಾಯ ತಹ ಹಮ್ಮಿಗೆಯಲೊದಗಿದ
ವಾಯತದ ಕೃತ್ರಿಮವಲೇ ಕೌರವರ ಸಂಕೇತ
ಆಯಿತೀ ಹಲಗೆಯಸು ಕೌರವ
ರಾಯ ಗೆಲಿದನು ಮತ್ತೆ ಪಣವೇ
ನಾಯಿತೆಂದನು ಶಕುನಿ ಯಮನಂದನನನೀಕ್ಷಿಸುತ ೫೧

ಕನಕಮಯ ರಥವೆರಡು ಸಾವಿರ
ಮೊನೆಗೆ ಹೂಡಿದವೆಂಟು ಸಾವಿರ
ವಿನುತ ವಾಜಿಗಳೊಡ್ಡವೆಂದನು ಧರ್ಮನಂದನನು
ಜನಪತಿಗೆ ತಾನ್ಯೆಸಲೇ ಹಾ
ಯ್ಕೆನುತ ಸಾರಿಯ ಕೆದರಿದನು ದು
ರ್ಜನರಿಗೊಲಿದುದು ದೈವಗತಿ ಬೊಬ್ಬಿರಿದನಾ ಶಕುನಿ ೫೨

ಸೋತೆಯರಸಾ ನಿನಗೆ ಜೂಜಿನ
ಭೀತಿಯುಂಟೇ ಮಾಣು ಮೇಣ್ ನಿ
ರ್ಭೀತನೇ ನುಡಿ ಮೇಲಣೊಡ್ಡವ ಹಲವು ಮಾತೇನು
ಕಾತರಿಸಬೇಡೆನಲು ಘಡ ಪಣ
ಭೀತನೇ ತಾನಕಟೆನುತ ಕುಂ
ತೀತನುಜನೊಡ್ಡಿದನು ಸಾವಿರ ಮತ್ತಗಜ ಘಟೆಯ ೫೩

ಆದವೆಮಗಿವು ಗಜ ಘಟೆಗಳೆಂ
ದಾ ದುರಾತ್ಮಕನಾಡಿದನು ದು
ರ್ಭೇದವಿವದಿರ ಕಪಟ ಮಂತ್ರವನಾವನರಿವವನು
ಆದುದರಸಗೆ ಸೋಲವಿನ್ನೇ
ನಾದುದೈ ಭೂಪತಿಯೆ ಗಜಘಟೆ
ಹೋದವೇ ಮೇಲೇನು ಪಣವುಂಟೆಂದನಾ ಶಕುನಿ ೫೪

ಘಡ ದರಿದ್ರನೆ ತಾನು ತನ್ನಯ
ಮಡದಿಯರ ಕೆಳದಿಯರು ಸಾವಿರ
ಮಡಿ ಸುಯೋಧನ ರಾಜಭವನದ ವಾರನಾರಿಯರ
ನುಡಿಯಬೇಕೇ ಧರ್ಮಸುತ ನಿ
ಮ್ಮಡಿಗಳೊಡ್ಡಿದ ಬಳಿಕ ಗೆಲಿದವ
ರೊಡವೆಯೈಸಲೆ ಹಾಯ್ಕು ಹಾಯ್ಕೆಂದೊದರಿದನು ಶಕುನಿ ೫೫

ಏನನಾಡಿದಡೇನು ಫಲ ದೈ
ವಾನುಕೂಲ್ಯದ ಕುಣಿಕೆ ಬೇರಹು
ದಾ ನರೇಂದ್ರನ ಸಾರಿ ಸೋತುದು ನಿಮಿಷ ಮಾತ್ರದಲಿ
ಆ ನಿರೂಢಿಯ ಹತ್ತು ಸಾವಿರ
ಮಾನಿನಿಯರನು ಮತ್ತೆ ಸೋತನು
ಮಾನನಿಧಿಯೇ ಮತ್ತೆ ಪಣವೇನೆಂದನಾ ಶಕುನಿ ೫೬

ಅರಸಿಯರ ವೈಗಾಹುಗಳ ಕಿಂ
ಕರರು ಸಾವಿರವಿದೆ ಪಣ ನಿ
ಮ್ಮರಸನಲಿ ಪಣವೇನೆನಲು ನೀವೇನನೊಡ್ಡಿದಿರಿ
ಮರಳಿ ಬೆಸಗೊಳಬೇಡ ನಮ್ಮಲಿ
ಬರಹವದು ಹಾಯ್ಕೆನುತ ಸಾರಿಯ
ಬೆರಸಿ ತಿವಿದಾಡಿದನು ಹೆಕ್ಕಳವಿಕ್ಕಿದನು ಶಕುನಿ ೫೭

ಅರಸ ಸೋತ್ತೈ ಸಾರಿಯರ ಜಯ
ಮರಳಿತಿತ್ತಲು ಮನಕೆ ಭೀತಿಯ
ಬೆರಕೆಯುಳ್ಳಡೆ ಬಿಟ್ಟುಕಳೆ ಪೈಸರಕೆ ಸಮಯವಿದು
ಅರಸು ಪಂಥದ ವಾಸಿ ಮನಕು
ಬ್ಬರಿಸುವೊಡೆ ಪಣವೇನು ಹೇಳೈ
ಧರಣಿಪಾಲಯೆನುತ್ತ ರಿಂಗಣಗುಣಿದನಾ ಶಕುನಿ ೫೮

ಎಲವೊ ಸೌಬಲ ಪಾಂಡುವಿನ ಮ
ಕ್ಕಳು ಕಣಾ ಚತುರಂಬುನಿಧಿ ಮೇ
ಖಲೆಯ ಉತ್ತರ ಕುರು ನರೇಂದ್ರರ ಸೀಮೆಪರಿಯಂತ
ನೆಲವಿದೆಮ್ಮದು ನೃಪರೊಳಗೆ ನಾ
ವಳಿಯೆ ಧರಣಿಪರಾರು ರಥ ಸಂ
ಕುಳವನೊಡ್ಡುವೆನೊಂದು ಬಾರಿಗೆ ಹತ್ತು ಸಾವಿರವ ೫೯

ಈ ರಥಕೆ ನಾಲ್ವತ್ತು ಸಾವಿರ
ವಾರುವಂಗಳ ಕೂಟವಾ ಪರಿ
ವಾರವಿದೆಲಾ ರಪಣವೆಂದನು ಸುಬಲತನಯಂಗೆ
ವೀರನಹೆಯೈ ಧರಣಿಪತಿ ತೆಗೆ
ಸಾರಿಗಳ ಬಿಡು ಸೆರೆಯ ಬಿಗಿದು ದು
ಹಾರದಲಿ ನೀ ಸೋತೆ ಹೋಗೆಂದೊದರಿದನು ಶಕುನಿ ೬೦

ಆವ ಕೌಳಿಕ ಮಂತ್ರತಂತ್ರದ
ಡಾವರದ ಡೊಳ್ಳಾಸವಿಕ್ಕಿದ
ದೀವಸದ ಬೇಳುವೆಯನೇನೆಂಬೆನು ಮಹೀಪತಿಯ
ಆವ ವಸ್ತುವನರಸನೊಡ್ಡುವ
ನಾವ ಮಹಿಲದಲಾತ ಸೋಲಿಸಿ
ಕೈವಳಿಸಿದನೊ ಬಲ್ಲನಾವವನೆಂದನಾ ಮುನಿಪ ೬೧

ಅರಸ ನೀಗಿದೆ ಹತ್ತು ಸಾವಿರ
ವರ ರಥವನಿನ್ನೇನು ಸಾಕೀ
ಸರಲಿ ನಿಲುವದು ವಿತ್ತವುಂಟೇ ಮತ್ತೆ ಹೇಳೆನಲು
ಮರುಳೆ ಸೌಬಲ ಚಿತ್ರರಥನೀ
ನರಗೆ ಕೊಟ್ಟನು ತೇಜಿಗಳ ತಿ
ತ್ತಿರಿಯ ಬಣ್ಣದ ಹತ್ತು ಸಾವಿರ ತುರಗವಿವೆಯೆಂದ ೬೨

ಆಡಿದನು ನೃಪನಾ ಕ್ಷಣಕೆ ಹೋ
ಗಾಡಿದನು ಖೇಚರರ ಖಾಡಾ
ಖಾಡಿಯಲಿ ರಘಾಡಿಸಿದ ಹಯವನು ಹತ್ತು ಸಾವಿರವ
ಹೂಡಿದನು ಸಾರಿಗಳ ಮರಳಿ
ನ್ನಾಡುವರೆ ಪಣವಾವುದೈ ಮಾ
ತಾಡಿಯೆನೆ ಮನದಲಿ ಮಹೀಪತಿ ಧನವ ಚಿಂತಿಸಿದ ೬೩

ಅಗಣಿತದ ಧನವುಂಟು ಹಾಸಂ
ಗಿಗಳ ಹಾಯಿಕು ಸೋತ ವಸ್ತುವ
ತೆಗೆವೆನೀಗಳೆ ಶಕುನಿ ನೋಡಾ ತನ್ನ ಕೌಶಲವ
ದುಗುಣ ಹಲಗೆಗೆ ಹತ್ತು ಮಡಿ ರೇ
ಖೆಗೆ ಗಜಾಶ್ವನಿಕಾಯ ರಥ ವಾ
ಜಿಗಳು ಸಹಿತಿದೆ ಸಕಲ ಸೈನಿಕವೆಂದನಾ ಭೂಪ ೬೪

ಆಯಿತಿದು ಪಣವಹುದಲೇ ನೃಪ
ಹಾಯಿಕಾ ಹಾಸಂಗಿಗಳ ಸಾ
ಹಾಯ ಕುರುಪತಿಗಿಲ್ಲ ಕೃಷ್ಣಾದಿಗಳು ನಿನ್ನವರು
ದಾಯ ಕಂದೆರೆವರೆ ಸುಯೋಧನ
ರಾಯನುಪಚಿತಪುಣ್ಯವಕಟಾ
ದಾಯವೇ ಬಾಯೆಂದು ಮಿಗೆ ಬೊಬ್ಬಿರಿದನಾ ಶಕುನಿ ೬೫

ಮತ್ತೆ ಹೇಳುವುದೇನ ಸೋಲವ
ಬಿತ್ತಿ ಬೆಳೆದನು ಭೂಪನವರಿಗೆ
ತೆತ್ತನೈ ಸರ್ವಸ್ವ ಧನವನು ಸಕಲ ಸೈನಿಕನ
ಮತ್ತೆ ಪಣವೇನೆನಲು ಬಳಿಕರು
ವತ್ತು ಸಾವಿರ ಕರಿಕಳಭವೆಂ
ಬತ್ತು ಸಾವಿರ ತುರಗ ಶಿಶುಗಳನೊಡ್ಡಿದನು ಭೂಪ ೬೬

ಅರಸ ಕೇಳೀ ತುರಗವೀ ರಥ
ಕರಿ ನಿಕರವೀ ಸೈನ್ಯ ಹಸ್ತಿನ
ಪುರಿಗೆ ಬಂದುದು ತಮ್ಮ ಕೂಡೆ ವಿನೋದಕೇಳಿಯಲಿ
ಕುರುಪತಿಯ ವಶವಾಯ್ತು ಬಳಿಕಿನ
ಮರಿಗುದುರೆ ಮರಿಯಾನೆಗಳನು
ಚ್ಚರಿಸಿ ಸಾರಿಯ ಸೋಕಿದಾಗಲೆ ಸೋತನಾ ಭೂಪ ೬೭

ಅಕಟ ಸಾಲದೆ ಜೂಜು ನಿರ್ಬಂ
ಧಕವೆ ಶಿವಶಿವ ತಾನಿದೆತ್ತಣ
ಶಕುನಿಯೆತ್ತಣ ಭರತಕುಲದ ಮಹಾ ಮಹೀಶ್ವರರು
ವಿಕಳ ಚೇಷ್ಟೆಯದೇನು ವೃದ್ಧ
ಪ್ರಕರಕಿದು ವಿಳಸವೆ ವಿಘಾತಿಗೆ
ಸಕಲಜನ ಸಮ್ಮತವೆಯೆಂದನು ಖಾತಿಯಲಿ ವಿದುರ ೬೮

ವರ ಪುರೂರವ ನಹುಷನವನೀ
ಶ್ವರತಿಲಕ ದುಷ್ಯಂತ ಕುರು ಸಂ
ವರಣನಮಲ ಯಯಾತಿಯಾದಿ ಪರಂಪರಾಗತದ
ಭರತ ಕುಲವಿದರೊಳಗೆ ವಂಶೋ
ದ್ಧರರಿಳೆಯ ಬೆಳಗಿದರು ನೀನವ
ತರಿಸಿ ತಂದೈ ತೊಡಕನೆಂದನು ಖಾತಿಯಲಿ ವಿದುರ ೬೯

ಸೋಲ ಮಚ್ಚಿದುದಿವರನೊಡ್ಡದ
ಮೇಲೆ ಹೇರಿದುದೊಡ್ಡವೀಗಳು
ಮೇಲುಗೈ ನೀನಾದೆ ಕುಸಿದರು ಪಾಂಡು ನಂದನರು
ಸೋಲವಿದು ಕಾಲಾಂತಕನ ಮೈ
ಸಾಲ ಸಾರಿದೆನಕಟ ಸಾಕಿ
ನ್ನೇಳು ಕೌರವ ನೃಪತಿಯೆಂದನು ಖಾತಿಯಲಿ ವಿದುರ ೭೦

ಗೆಲಿದ ಧನವಕ್ಕುವುದೆ ಸೋತವ
ರಳುಕಿದವರೇ ಪಾಂಡುಪುತ್ರರ
ಬಲುಹ ಬೆಸಗೊಳ್ಳಾ ತದೀಯ ಶ್ರವಣ ದೃಷ್ಟಿಗಳ
ಎಲೆ ಸುಯೋಧನ ವಿಷದ ಮಧುರವು
ಕೊಲುವುದೋ ಮನ್ನಿಸುವುದೋ ಕ
ಕ್ಕುಲಿತೆಗಿದು ಕಡೆಹಾರವಾಗಲಿ ಸಾಕು ತೆಗೆಯೆಂದ ೭೧

ಗೆಲಿದ ದರ್ಪದ ದಡ್ಡಿ ತೆಗೆ ಸಾ
ಬಲನ ಬೀಳ್ಕೊಡು ನಿಖಿಲ ಬಾಂಧವ
ಕುಲಸಹಿತ ನೀ ಮಧುರ ವಚನದಲಿವರ ಸಂತೈಸು
ನೆಲನನೇಕಚ್ಛತ್ರದಲಿ ಹದ
ಗೊಳಿಸು ಬದುಕುವರಿದು ನಿಜಾನ್ವಯ
ದುಳಿವು ಬೆಸಗೊಳು ಬೇಹ ಹಿರಿಯರನೆಂದನಾ ವಿದುರ ೭೨

ಖೂಳನೆಂಬೆನೆ ಸಕಲ ಕಲೆಗಳ
ಬಾಳುಮನೆ ಗಡ ನಿನ್ನ ಬುದ್ಧಿ ವಿ
ಶಾಲಮತಿ ನೀನೆಂಬೆನೇ ಜಗದಜ್ಞರಧಿದೈವ
ಕೇಳಿದೊಡೆ ಮೇಣಹಿತ ಹಿತವನು
ಹೇಳುವದು ಪಾಂಡಿತ್ಯ ನಿನ್ನನು
ಕೇಳಿದವರಾರೆಂದು ಜರೆದನು ಕೌರವರಾಯ ೭೩

ಹಿತವ ನೀನವರಿಗೆ ಕುಟುಂಬ
ಸ್ಥಿತಿ ವಿಡಂಬಕೆ ನಾವು ಕುಂತೀ
ಸುತರೊಡನೆ ಸಮ್ಮೇಳವೆಮ್ಮೊಳು ವೈಮನಸ್ಯಗತಿ
ಕೃತಕ ಮಾರ್ಗದ ಮೋಡಿಯಲಿ ಪರಿ
ಚಿತನು ನೀನಲ್ಲಕ್ಷ ವಿಮಲ
ಕ್ರತು ವಿಧಾನವನಕ್ಷ ದೀಕ್ಷಿತರರಿವರಿದನೆಂದ ೭೪

ನೀ ಹಿತವನೈ ಶಕುನಿ ರಾಜ
ದ್ರೋಹಿಯೈ ಹುಸಿಯಲ್ಲ ನೀನೇ
ಹೋಹುದೈ ನಿನಗಾವುದಭಿಮತವಾ ದಿಗಂತರಕೆ
ಐಹಿಕಾಮುಷ್ಮಿಕದ ವಿಭವೋ
ತ್ಸಾಹ ನಿಸ್ಪೃಹರಾವಲೇ ಸಂ
ದೇಹವೇ ನೀವರಿವಿರೆಂದನು ತೂಗಿ ತುದಿವೆರಳ ೭೫

ಗುರುಗಳುಸುರರು ಭೀಷ್ಮರೆಮ್ಮನು
ಕೆರಳಿಚರು ಕೃಪ ನುಡಿಯನಯ್ಯನ
ಕೊರಳು ಕೊಂಕದು ಬಾಹ್ಲಿಕನ ಮನ ನೋಯದಿನ್ನೆಬರ
ಹಿರಿಯರಿವರೇನಜ್ಞರೇ ನೀ
ಪರಮತತ್ವಜ್ಞಾನಿಯೋ ಕಾ
ತರಿಸದಿರು ನೀನೆಂದು ಟಕ್ಕರಿಗಳೆದನಾ ಭೂಪ ೭೬

ಇವರ ಜನಪಾಧ್ವರವನಡ ಹಾ
ಯ್ದು ವನವಾಗಳೆ ದೇವಕೀಸುತ
ಸವರಿದನು ನವಿಷ್ಮಾ ವಿನೋದದ್ಯೂತ ಸಂಪದದ
ಸವನ ವಿಘ್ನವಿಕಾರಿಯನು ಪರಿ
ಭವಿಸುವವರನು ಕಾಣೆ ಶಿವಯೆಂ
ದವನಿಪತಿ ನಿಜ ಹುಬ್ಬಿನಲಿ ಹೊಳಿದನು ಪರಿಚರರ ೭೭

ಮಣಿಯೆ ನೀನೀಕ್ಷ್ಲೀಯಮನರ್ಘವ
ಕುಣಿಕೆಗೊಳಿಸಿದ ನೀ ಸಹಿತ ನಿ
ನ್ನೆಣೆಗಳಹ ಸೈಂಧವನನೀ ರಾಧೇಯ ಶಕುನಿಗಳ
ರಣದೊಳಗೆ ಭೀಮಾರ್ಜುನರ ಮಾ
ರ್ಗಣದ ಧಾರೆಗೆ ವೀರನಾರಾ
ಯಣನೆ ಸೇರಿಸಿಕೊಡುವನರಿದಿರುಯೆಂದನಾ ವಿದುರ ೭೮

## ಹದಿನಾಲ್ಕನೆಯ ಸಂಧಿ

ಸೂ. ರಾಯ ಪಾಂಡವರರಸಿ ಕಮಲ ದ
ಳಾಯತಾಕ್ಷಿಯ ಪರಿಭವವನೆರೆ
ಕಾಯಿದುದೆಲಾ ವೀರ ನಾರಾಯಣನ ಸಿರಿನಾಮ

ಕೇಳು ಜನಮೇಜಯ ಧರಿತ್ರೀ
ಪಾಲ ವಿದುರನ ಮಾತ ಮುರಿದು ನೃ
ಪಾಲನೆಚ್ಚರಿಸಿದನು ಕಣುಸನ್ನೆಯಲಿ ಸೌಬಲನ
ಏಳು ಧರ್ಮಜ ಸೋತೆಲಾ ನಿ
ನ್ನಾಳು ಕುದುರೆಯನಿನ್ನು ಸಾಕು ದ
ಯಾಳುವಲ್ಲ ಸುಯೋಧನನು ಧನವಿಲ್ಲ ನಿನಗೆಂದ ೧

ತೆಗೆವೆನೇ ಸಾರಿಗಳ ನಿನ್ನೀ
ನಗೆಮೊಗದ ಸಿರಿ ಸೀದು ಕರಿಯಾ
ಯ್ತುಗುಳುತಿದೆ ನಿನ್ನನುಜರಿಂಗಿತ ರೋಷಪಾವಕನ
ಸೊಗಸು ಬೀಯದು ರಪಣವಿಲ್ಲದ
ಬೆಗಡು ನೋಯದು ಕ್ಷತ್ರಧರ್ಮದ
ತಗಹು ಸಾಯದು ನಿನಗೆನುತ ಗಹಗಹಿಸಿದನು ಶಕುನಿ ೨

ಎಲವೊ ಸೌಬಲ ವಿತ್ತವೀಸರ
ಲಳಿದುದೇ ನೀ ನಗುವವೊಲ್ಲ
ಮ್ಮೊಳಗು ದಿಳ್ಳವೆ ರಪಣವಿದೆಲಾ ಬಹಳ ಭಂಡಾರ
ಸುಳಿಸು ಹಾಸಂಗಿಗಳ ಮೋಹರ
ಗೊಳಿಸು ಸಾರಿಯನೊಂದು ರೇಖೆಯ
ಬಳಿಯಲೊಂದೇ ಕೋಟಿ ಧನವೆಂದೊದರಿದನು ಭೂಪ ೩

ದುಗುಣಕಿಕ್ಕಿದನರಸನಾಚೆಗೆ
ತೆಗೆದನವ ಮೂರೆಂದು ನಾಲ್ಕ
ಕ್ಕುಗಿದನವನಿಪನೈದ ಕಳೆದನು ಬಹಳವನು ಶಕುನಿ
ತೆಗೆದ ನಿಮ್ಮಡಿಗರಸನವನಾ
ತ್ರಿಗುಣ ಪಂಚಕ ಸಪ್ತ ನವಮ
ಪ್ರಗುಣವೆಂದನು ಶಕುನಿ ಸೋಲಿಸಿದನು ಮಹೀಪತಿಯ ೪

ಎಣಿಸಿದನು ರೇಖೆಗಳ ನಿಮ್ಮಡ
ಗಣಿತ ಸಂಖ್ಯಾ ಸಿದ್ಧವಸ್ತುವ
ನೆಣಿಸಲರ್ಬುದ ಸಂಖ್ಯೆಯಾಯಿತು ಹಲಗೆಯೊಂದರಲಿ
ಗುಣನಿಧಿಯೆ ಮಗುಳೊಡ್ಡಲಾಪರೆ
ಪಣವ ಸಬುದಿಸು ಕೇಳ್ವೆನೆನೆ ನೃಪ
ಗುಣಶಿರೋಮಣಿ ಧರ್ಮಸುತ ನಸು ನಗುತಲಿಂತೆಂದ ೫

ಹೂಡು ಸಾರಿಯ ರೇಖೆ ರೇಖೆಗೆ
ಮಾಡಿದರ್ಬುದ ಧನ ಸುಯೋಧನ
ನಾಡಿ ನೋಡಲಿ ಹಾಯ್ಕು ಹಾಸಂಗಿಗಳ ಹಾಯ್ಕೆನುತ
ಆಡಿದನು ಯಮಸೂನು ಖಾಡಾ
ಖಾಡಿಯಲಿ ಸಾರಿಗಳೊಡನೆ ಹೋ
ಗಾಡಿದನು ಭಂಡಾರವನು ಭೂಪಾಲ ಕೇಳೆಂದ ೬

ಸಾರಿ ಸೋತವು ಸೋಲು ನಿನಗನು
ಸಾರಿ ನೀವೈವರು ವನಾಂತಕೆ
ಸಾರಿ ಸಾಕಿನ್ನೊಡ್ಡಲಾಪರೆ ಮತ್ತೆ ನುಡಿ ಧನವ
ಭೂರಮಣ ಹೇಳೆನಲು ರೇಖೆಯ
ಭಾರಿಯೊಪ್ಪಕೆ ಪದ್ಮ ಸಂಖ್ಯೆಯ
ಭೂರಿ ಧನವಿದೆ ರಪಣವೆಂದನು ನಗುತ ಯಮಸೂನು ೭

ಬರಹಕಿಮ್ಮಡಿ ನೂರು ಮಡಿ ಸಾ
ವಿರದ ಮಡಿ ಪರಿಯಂತವಿಕ್ಕಿತು
ಹರುಷ ನನೆ ಕೊನೆಯಾಯ್ತು ಹೆಚ್ಚಿತು ಕಲಿಮಲಾವೇಶ
ಸ್ಥಿರವೆ ಹಿಂಗಿತು ವಾಸಿ ಪಾಡಿನ
ದುರುಳತನವುಬ್ಬೆದ್ದು ದಡಿಗಡಿ
ಗರಸನೊಡ್ಡಿದ ಮೇಲೆ ಮೇಲೊಡ್ಡವನು ವಿರಚಿಸಿದ ೮

ತೀರಿತಿಂದ್ರಪ್ರಸ್ಥದುರು ಭಂ
ಡಾರ ತನ್ನರಮನೆಯ ಪೈಕದ
ವಾರಕದ ಭಂಗಾರವೊಡ್ಡಿತು ಕೋಟಿ ಸಂಖ್ಯೆಯಲಿ
ಸೇರಿತದು ಕುರುಪತಿಗೆ ರಾಯನ
ನಾರಿಯರ ವಿವಿಧಾಭರಣ ಸಿಂ
ಗಾರವೊಡ್ಡಿತು ಕೊಂಡು ಮುಳುಗಿತು ಖಿಡ್ಡತನ ನೃಪನ ೯

ನಕುಲ ಸಹದೇವಾರ್ಜುನರ ಮಣಿ
ಮಕುಟ ಕರ್ಣಾಭರಣ ಪದಕಾ
ದಿಕ ಸಮಸ್ತಾಭರಣವೊಡ್ಡಿತು ಹಲಗೆಯೊಂದರಲಿ
ವಿಕಟ ಮಾಯಾ ವಿಷಮ ಕರ್ಮವ
ನಕಟ ಬಲ್ಲನೆ ಸಾಧುಜನ ಸೇ
ವಕನು ಸೋತನು ಸಾಧ್ಯವಹುದೇ ವಿಧಿಯ ಮುಳಿಸಿನಲಿ ೧೦

ಸೋತೆಲಾ ಕೌಂತೇಯ ನಿಮಿಷಕೆ
ಬೀತುದೇ ನಿನ್ನಖಿಳ ಸಿರಿ ವಿ
ಖ್ಯಾತಿ ಬರತುದೆ ಪೇಡೆಗೆದರಿತೆ ಮನದ ಪಾಸಿಗಳ
ಪ್ರೀತಿಯುಂಟೇ ನಿಮಗೆ ಮತ್ತೀ
ದ್ಯೂತದಲಿ ಧನವಿಲ್ಲಲಾ ಗ
ರ್ವಾತಿರೇಕವ ಬೀಳುಗೊಂಡಿರೆಯೆಂದನಾ ಶಕುನಿ ೧೧

ಖಿನ್ನನಾದನು ರಾಜ್ಯಲಕ್ಷ್ಮಿಯ
ಬೆನ್ನ ಕಂಡನು ಬಳಚಿ ಹೋದ ನಿ
ಜೋನ್ನತಿಯುಲಪನೀಶನಿದ್ದನು ಮುರಿದ ಮಹಿಮೆಯಲಿ
ಇನ್ನು ಪಣವೇನೋ ವಿರೋಧಿಗ
ಳಿನ್ನ ಭಂಗಿಸಿ ನುಡಿದರಿದಕಿ
ನ್ನೆನ್ನನಿಕ್ಕಿ ದ್ಯೂತವಿಜಯವ ಸಾಧಿಸುವೆನೆಂದ ೧೨

ಎಲವೊ ಫಡ ಫಡ ಶಕುನಿ ಗರ್ವದ
ತಳಿ ಮುರಿವುದೇ ನಿನ್ನ ದುರ್ಮತಿ
ಗಳಿಗೆ ಹೂಡಿದ ದುರ್ಗವಿದೆ ತನ್ನಂತರಂಗದಲಿ
ಉಳಿದ ಧನವೇಗುವುದು ಜೀವ
ಸ್ಥಳವಿದೇ ಮೇಲೊಡ್ಡವೊಂದೇ
ಹಲಗೆಗೊಡ್ಡಿದೆನೆನ್ನ ನಕುಲನನೆಂದನಾ ಭೂಪ ೧೩

ವಾಸಿಗನುಜನನೊಡ್ಡಿದರೆ ನಮ
ಗೀಸರಲಿ ಭಯವೇನು ನೋಡುವೆ
ವೈಸಲೇ ನೃಪ ಹಾಯ್ಕು ಹಾಸಂಗಿಗಳ ಹಾಯ್ಕೆನುತ
ಆ ಶಕುನಿ ಪೂರ್ವಾರ್ಜಿತದ ದೊ
ಳ್ಳಾಸದಲಿ ಡಾವರಿಸಿ ಧರ್ಮವಿ
ನಾಶಿ ನಕುಲನ ಗೆಲಿದು ಬೊಬ್ಬಿರಿದನವನಿಪನ ಜರೆದ ೧೪

ಅರಸ ಸೋತ್ತೆ ನಕುಲನನು ಹೇ
ವರಿಸದಿರು ಹೇಳೊಡ್ಡವನು ವಿ
ಸ್ತರಿಸಲೊಂದೇ ಹಲಗೆ ಸೋಲ್ವುದು ಹೇಳು ಹೇಳೆನಲು
ವರಿಸಿದೆನು ಸಹದೇವನನು ನೆರೆ
ಮರಳಿಚುವೆನೆನ್ನಖಿಳ ವಸ್ತೂ
ತ್ಕರವನೆಂದನು ಧರ್ಮನಂದನನರಸ ಕೇಳೆಂದ ೧೫

ಹರಿಬದಲಿ ತನ್ನಖಿಳ ವಸ್ತೂ
ತ್ಕರವ ಮರಳಿಚುವನು ಮಹೀಪತಿ
ಕಿರಿಯ ತಮ್ಮನವೊಡ್ಡಿದನು ಮಾದ್ರೀ ಕುಮಾರಕನ
ಅರಸ ದಾಯವೆ ಬಾ ಜಯಾಂಗವ
ಸಿರಿಯೆ ಬಾ ಕುರುರಾಯ ರಾಜ್ಯೋ
ತ್ಕರುಷ ಸಿದ್ಧಿಯೆ ಬಾಯೆನುತ ಗರ್ಜಿಸಿದನಾ ಶಕುನಿ ೧೬

ಏನ ಬಣ್ಣಿಸುವೆನು ವಿಕಾರಿಗ
ಳೇನ ನೆನೆಯರು ಕಪಟ ವಿಧದಲಿ
ಮಾನನಿಧಿ ತಾ ಸೋತನನುಜದ್ವಯ ಮಹಾಧನವ
ಗ್ಲಾನಿಚಿತ್ತದೊಳಿಲ್ಲಲೇ ಸುಮ
ನೋನುರಾಗವೆ ಭೀಮ ಪಾರ್ಥರು
ತಾನಿದೊಮ್ಮಿಗೆ ಬದುಕಿದರು ನಿಮಗೆಂದನಾ ಶಕುನಿ ೧೭

ಭೇದ ಮಂತ್ರವ ಮಾಡಿ ನಮ್ಮನು
ಭೇದಿಸುವ ಗಡ ಸುಬಲ ಸುತನಕ
ಟೀ ದುರಾತ್ಮನ ನೋಡಿರೈ ಸಭ್ಯರು ಶಿವಾಯೆನುತ
ಆ ದುರಾಗ್ರಹಿ ಲೋಕಜನ ಪರಿ
ವಾದಪದನಿರ್ಭೀತನಕ್ಷ ವಿ
ನೋದ ಕರ್ದಮ ಮಗ್ನನೊಡ್ಡಿದನಾ ಧನಂಜಯನ ೧೮

ಎಲೆ ಧನಂಜಯ ನಿನ್ನನೊಡ್ಡಿದ
ಛಲಿ ಯುಧಿಷ್ಠಿರನಿಲ್ಲಿ ಸೋತರೆ
ಬಳಿಕ ನಿನ್ನನು ಮಾರಿದನಲಾ ಕೌರವೇಶ್ವರಗೆ
ತಿಳಿದು ಭೀಮಾರ್ಜುನರು ನೀವ್ ನಿ
ಮ್ಮೊಳಗೆ ಬಲಿದಿಹುದೆನಲು ಖತಿಯಲಿ
ಮುಳಿದು ಬೈದರು ಭೀಮ ಪಾರ್ಥರು ಸುಬಲ ನಂದನನ ೧೯

ದೇಹಿಗೆರವೇ ದೇಹವೆಲವೋ
ದೇಹಿ ಭೂಪತಿ ಧರ್ಮಪುತ್ರನ
ದೇಹವಾವಿದರೊಳಗೆ ನಿನ್ನ ಕುಮಂತ್ರ ಭಾವಿತದ
ಊಹೆಗೊಂಬುದೆ ಕಪಟದಿಂದವ
ಗಾಹಿಸುವೆ ಸಾಕಿನ್ನು ಮೇಲಣ
ಗಾಹುಗತಕಗಳೆಮ್ಮೊಳೆಂದರು ಜರೆದು ಸೌಬಲನ ೨೦

ಮೇಲೆ ಹೇಳುವುದೇನು ಸಾರಿಯ
ಸಾಲು ಮುರಿದುದು ಸೆರೆಯ ಕಳವಿನ
ಕಾಲು ಕೀಲ್ಗಳನಾರು ಬಲ್ಲರು ಕುಟಿಲ ಕೋವಿದರ
ಹೇಳುವದರಿಮ್ಮುನ್ನ ಶಕುನಿಗೆ
ಬೀಳುವುದು ಬೇಕಾದ ದಾಯವು
ಕೌಳಿಕದ ವಿಧಿಪಾಶ ತೊಡಕಿತು ನೀಗಿತರ್ಜುನನ ೨೧

ಸೋತಿರರಸರೆ ಮತ್ತೆ ಹೇಳೀ
ದ್ಯೂತ ಶಿಖಿಗಾಹುತಿಯನೆನೆ ಕುಂ
ತೀತನುಜನೊಡ್ಡಿದನು ವಿಗಡ ಬಕಾಸುರಾಂತಕನ
ಆತುದೊಂದರೆಗಳಿಗೆ ಸೌಬಲ
ಸೋತ ಧರ್ಮಜ ಗೆಲಿದ ಧರ್ಮಜ
ಸೋತ ಸೌಬಲ ಗೆಲಿದನೆಂಬವೊಲಾಯ್ತು ಘನ ರಭಸ ೨೨

ಆ ಹಲಗೆ ಸೋತುದು ಯುಧಿಷ್ಠಿರ
ನೂಹೆ ಮುರಿದುದು ಮುಂದುಗೆಟ್ಟನು
ರಾಹು ಹಿಡಿದ ಹಿಮಾಂಶು ಮಂಡಲದುಳಿದ ಕಳೆಯಂತೆ
ತೋಹಿನಲಿ ತೊಟ್ಟಿಸಿದ ಮೃಗದವೊ
ಲೂಹೆಯುಳಿದುದು ಯಂತ್ರಸೂತ್ರದ
ಹೂಹೆಯಂತಿರೆ ನೃಪ ತೆತ್ತನು ಹಗೆಗೆ ತನುಧನವ ೨೩

ಜನಪ ಮಾರಿದೆ ಭೀಮಸೇನಾ
ರ್ಜುನರು ಸಹಿತೊಡಹುಟ್ಟಿದರ ನಿ
ರ್ಧನಿಕನಾಗಿಯು ಮತ್ತೆ ಬಿಡದೇ ದ್ಯೂತದುರ್ವ್ಯಸನ
ಎನಲು ಶಕುನಿಯ ಜರೆದು ತಾನೇ
ಧನವಲಾ ಸಾಕೊಂದು ಹಲಗೆಯೊ
ಳೆನಗೆ ಜಯವೀ ದಾಯವೆಂದೊಡ್ಡಿದನು ಜನನಾಥ ೨೪

ಹೇಳಲೇನದನವರು ರಚಿಸಿದ
ಬೇಳುವೆಯನಾ ಶಕುನಿಯೊಡ್ಡಿದ
ಕಾಲು ಕುಣಿಕೆಯೊಳಾರು ಬೀಳರು ನೃಪತಿ ನಿಮಿಷದಲಿ
ಬೀಳುಗೊಟ್ಟನು ತನ್ನನಾ ಜನ
ಜಾಲವಿದ್ದುದು ಬಿಗಿದ ಬೆರಗಿನೊ
ಳಾಲಿಸುವಿರೇ ಜೀಯ ಪಣವೇನೆಂದನಾ ಶಕುನಿ ೨೬

ಎಲವೊ ಸೌಬಲ ಸಾಕಿದೊಂದೇ
ಹಲಗೆ ಸರ್ವಸ್ವಾಪಹಾರವ
ನಿಳುಹುವೆನು ನೀಲಾಳಕಿಯನೊಡ್ಡುವೆನು ಬಾಲಕಿಯ
ಉಳಿದ ಧನವೆಮ್ಮೈವರಿಗೆ ನಿ
ಷ್ಖಲಿತವಿದು ಹೂಡೆನಲು ಹರುಷದ
ಲಳಿಯ ಚೌಪಟಮಲ್ಲ ಸಾರಿಯ ಸಾಲ ಜೋಡಿಸಿದ ೨೭

ಆಡಿದನು ಯಮಸೂನು ಮಿಗೆ ಹೋ
ಗಾಡಿದನು ಮನುಮಥನ ಖಾಷಾ
ಖಾಡಿ ಖಾತಿಯನಕಟ ಮದನನ ಮಂತ್ರದೇವತೆಯ
ಕೂಡೆ ತಿವಿದನು ಕಟ್ಟಿದನು ಕಳಿ
ದೋಡಿಸಿದ ಸಾರಿಗಳ ಸೋಲದ
ಖೋಡಿಯನು ಚಿತ್ರಿಸಿದನರಸನ ಚಿತ್ತಭಿತ್ತಿಯಲಿ ೨೮

ಬೆರಗು ಬೆಳೆದುದು ಮನದ ಮಿಡುಕಿನ
ಮರುಕ ಮುಂದಲೆಗೊಟ್ಟುದರಿವಿನ
ಸೆರಗು ಹಾರಿತು ಲಜ್ಜೆ ಬೆಳಗಿತು ಬಿಟ್ಟ ಬೀದಿಯಲಿ
ಉರುಬಿತಪದೆಸೆ ರಾಜ್ಯಲಕ್ಷ್ಮಿಯ
ತುರುಬು ಕೈದೊಳಸಾಯ್ತು ಹಗೆಗಾ
ನರಿಯೆನರಸನ ವಿರಸ ಚೇತೋಭಾವ ಭಂಗಿಗಳ ೨೯

ಮೊಳೆನಗೆಯ ಕಟಕಿಗಳ ಹದಿರಿನ
ಹಳಿವುಗಳ ಸನ್ನೆಗಳ ಸವಿ ಬೈ
ಗುಳಿನ ಜಾಣಿನ ನೋಟಗಳ ಜೊತ್ತಿನ ನವಾಯಿಗಳ
ಒಳದೆಗಹಿನುಬ್ಬುಗಳ ಮಿಸೆಯೊ
ಳಿಳಿವ ಬೆರಳ್ಗಳ ಕರ್ಣ ಸೈಂಧವ
ಖಳತಿಲಕ ದುಶ್ಶಾಸನಾದಿಗಳಿದ್ದರೀಚೆಯಲಿ ೩೦

ಕಳಕಳದ ಕಂದೆರವೆಗಳ ಕುರು
ಕುಲದ ನಿರ್ಮೂಲನದ ನಿಶ್ಚಯ
ದೊಳಗುಪರಿದಾಲೋಚನೆಯ ನಿರ್ದ್ರವದ ತಾಳಿಗೆಯ
ತಳಿತ ಮೋನದ ಬೀತ ಹರುಷದ
ಜಲದ ನಯನದಲಿದ್ದರಾ ವಿ
ಹ್ವಲರು ಭೀಷ್ಮ ವಿಕರ್ಣ ವಿದುರ ದ್ರೋಣ ಗೌತಮರು ३೦

ಇಟ್ಟ ಮೂಗಿನ ಬೆರಳ ನೆಲದಲಿ
ನಟ್ಟ ದೃಷ್ಟಿಯ ಕಳವು ಜೂಜಿನ
ದಿಟ್ಟರಾಟಕೆ ಬಲಿದ ಬೆರಗಿನ ಬಿಗಿದ ಖಾತಿಗಳ
ತಟ್ಟುಸುವ ರಿಪುವರ್ಗ ಶಿಖಿಯಲಿ
ಸುಟ್ಟ ಕರಣ ಚತುಷ್ಟಯದ ಜಗ
ಜಟ್ಟಿಗಳು ಭೀಮಾರ್ಜುನಾದಿಗಳಿರ್ದರೀಚೆಯಲಿ ३೧

ಹಾಸ ಗರ್ವದ ಮೋನದಲಿ ಸಂ
ತೋಷ ಗರ್ವದ ದುಗುಡದಲಿ ಸುವಿ
ಳಾಸ ಗರ್ವದ ಖೇದದಲಿ ಮದಗರ್ವ ಚಿಂತೆಯಲಿ
ವೈಸಿಕದ ಕಣಿ ಕುಟಿಲ ಮಂತ್ರದ
ವಿಸಾಸಲಳಿಯದ ಕುಹಕ ವಿದ್ಯಾ
ವಾಸಗೃಹ ಧೃತರಾಷ್ಟ್ರಸಿದ್ಧನು ವಿಕೃತ ಭಾವದಲಿ ३೨

ಜನಪತಿಯ ಜಾಡ್ಯವನು ಭೀಮಾ
ರ್ಜುನರ ಸ್ಥೈರಣೆಗಳನು ದುರ್ಯೋ
ಧನನ ದುಶ್ಚೇಷ್ಟೆಯನು ಶಕುನಿಯ ಸಾರ ಕೃತ್ರಿಮವ
ತನತನಗೆ ಕಂಡರು ಮಹೀಸುರ
ಜನಪ ವೈಶ್ಯ ಚತುರ್ಥರುಕ್ಕಿದ
ಮನದಳಲಿನಲಿ ಬೈದರಚ್ಯುತ ಹರ ಚತುರ್ಮುಖರ ३३

ನ್ಯಾಯವೆಮ್ಮದು ಮುನ್ನ ಸೋತಿರಿ
ಜೀಯ ನಿಮ್ಮೊಡ ಹುಟ್ಟಿದರು ಸಹಿ
ತಾಯತಾಕ್ಷಿಯ ಬಳಿಕ ಸೋತಿರಿ ಬಲುಹ ಮಾಡೆವೆಲೆ
ರಾಯನೊಲಿದುದ ಮಾಡಲಾಪ
ನ್ಯಾಯವರ್ತಿಗಳಲ್ಲಲೇ ಬೆಸ
ಸಾ ಯುಧಿಷ್ಠಿರಯೆನುತ ಕೈಗಳ ಮುಗಿದನಾ ಶಕುನಿ ३४

ಗೆಲಿದು ಕೊಟ್ಟೆನು ಸಕಲ ಚಾತು
ರ್ಬಲವನಾ ಭಂಡಾರ ಸಹಿತ
ಗ್ಗಳೆಯರೈವರ ಕಮಲಮುಖಿಯನು ರಾಜ್ಯ ಸಿರಿಸಹಿತ
ಕಲಶವಿಟ್ಟೆನು ಕೊಟ್ಟ ಭಾಷೆಗೆ
ಎಲೆ ಸುಯೋಧನಯೆಂದು ನಯನಾಂ
ಗುಲಿಯ ಸಂಕೇತದಲಿ ಸನ್ನೆಯ ಮಾಡಿದನು ಶಕುನಿ ३೫

ವಿದುರ ಬಾ ನಮ್ಮಾಕೆಯಾ ದ್ರೌ
ಪದಿಯ ಕರೆ ಬೆಸಗೊಂಬೆ ತೊತ್ತಿರ
ಸದನದಿಚ್ಛೆಯೊ ರಾಣಿವಾಸದ ಮನೆಯುಪೇಕ್ಷಿತವೊ
ಬೆದರಬೇಡೆನ್ನ ಬುಜಮುಖಿಗಾ
ವುದು ಮನೋರಥವೆಮ್ಮೊಳುಂಟೆಂ
ಬುದು ಲತಾಂಗಿಯ ಕರೆವುದೆಂದನು ಕೌರವರರಾಯ ३೬

ಸಿಡಿಲ ಪೊಟ್ಟಣಗಟ್ಟಿ ಸೇಕವ
ಕೊಡುವರೇ ಹರನೇತ್ರ ವಹ್ನಿಯೊ
ಳಡಬಳವ ಸುಡಬಗೆದೆಲಾ ಮರುಳೆ ಮಹೀಪತಿಯೆ
ಹೆಡತಲೆಯ ತುರಿಸುವರೆ ಹಾವಿನ
ಹೆಡೆಯನಕಟಾ ಪಾಂಡುಪುತ್ರರ
ಮಡದಿ ತೊತ್ತಹಳೇ ಶಿವಾ ಎಂದಳಲಿದನು ವಿದುರ ३೭

ಕಾಳಕೂಟದ ತೊರೆಗಳಲಿ ಜಲ
ಕೇಳಿಯೇ ಕಾಲಾಂತಕನ ದಂ
ಷ್ಟ್ರಾಳಿಯಲಿ ನವಿಲುಯ್ಯಲೆಯ ನೀವಾಡಲಾಪಿರಲೆ
ಕಾಲರುದ್ರನ ಲಳಿಯ ನಾಟ್ಯದ
ಕೇಳಿಕೆಗೆ ನೀವರ್ತಿಕಾರರೆ
ಹೋಲದೋ ಶಿವಯೆನುತ ಕಂಬನಿದುಂಬಿದನು ವಿದುರ ३೮

ಬಡಗಲುತ್ತರ ಕುರು ನರೇಂದ್ರರ
ನಡುಗಿಸಿದರುದಯಾದ್ರಿ ತನಕವೆ
ನಡೆದು ಮುರಿದರು ಮೂಡಣರಸುಗಳತುಳ ಭುಜಬಲರ
ಪಡುವಲಗಣಿತ ಯವನ ತೆಂಕಲು
ಗಡೆ ವಿಭೀಷಣನೀ ಮಹೀಶರ
ಬಡಿದ ಪಾಂಡವರರಸಿ ತೊತ್ತಹಳೇ ಶಿವಾಯೆಂದ ೩೯

ತಿರುವ ಕೊರಳಲಿ ತೊಡಿಸಲಾರದೆ
ತೆರಳಿದರು ಚತುರಂಗ ಪೃಥ್ವೀ
ಶ್ವರರು ಮಾಗಧ ಚೈದ್ಯ ಮೊದಲಾದತುಲ ಭುಜಬಲರು
ತಿರುವನೇರಿಸಿ ಧನುವನುಗಿದ
ಬ್ಬರಿಸಿ ಗಗನದ ಯಂತ್ರಮತ್ಸ್ಯವ
ಮುರಿದ ಪಾಂಡವರರಸಿ ತೊತ್ತಹಳೇ ಶಿವಾಯೆಂದ ೪೦

ಬಕನ ಮುರಿದರು ವನದಲಿ ಹಿಡಿಂ
ಬಕನ ಹಣಿದರು ಮಾಗಧನ ಸು
ಪ್ರಕಟ ಬಲನಂಬುಜದ ನಾಳವನಾನೆ ಕೀಳ್ವಂತೆ
ಸಕಲಜನ ನೃಪರರಿಯೆ ಸೀಳಿದ
ರಕಟ ಮಾರಿಯ ಬೇಟವೇ ಪಾ
ತಕವಲಾ ಪಾಂಚಾಲೆ ತೊತ್ತಹಳೆ ಶಿವಾಯೆಂದ ೪೧

ಸೋಲಿಸಿದೆ ನೀನೀಗಲೀ ನರ
ಪಾಲರನು ಜೂಜಿನಲಿ ಮೇಲಣ
ಕಾಳಗದ ಕಳನೊಳಗೆ ಕವಿತಹ ಕೋಲ ತೋಹಿನಲಿ
ಸೋಲವೊಂದಕೆ ನೂರು ನೂರರ
ಮೇಲೆ ಸಾವಿರ ಸಾವಿರದ ಮೈ
ಸಾಲ ಲಕ್ಷವನಂತವಾಗಿಯೆ ತೆಗೆವರವರೆಂದ ೪೨

ಎಳೆದು ತರಿಸಾ ದ್ರೌಪದಿಯ ನೀ
ಕಳಕಳಕೆ ಕೈಗೊಟ್ಟವೋಲ
ಸ್ಖಲಿತರಿಹರಕ್ಷಮತೆಯಲಿ ತತ್ಸಮಯ ಪರಿಯಂತ
ಬಳಿಕ ನೂರ್ವರ ಸತಿಯರಕ್ಕೆಯ
ಕಳವಳದ ಬಿಡುಮುಡಿಯ ಬಸುರಿನ
ತಳದ ಬಿರುಪೊಯ್ಲುಗಳ ಭಂಗವ ಕಾಂಬರಿವರೆಂದ ೪೩

ಇವನವರ ಬಹಿರಂಗ ಜೀವ
ವ್ಯವಹರಣೆಯಾತನು ವೃಥಾ ತಾ
ನಿವನ ಕೆಣಕಿದೆನಕಟ ಬೋಧಭ್ರಾಂತಿ ಬಾಹಿರನ
ಇವನಿರಲಿ ಬಾ ಪ್ರಾತಿಕಾಮಿಕ
ಯುವತಿಯನು ಕರೆ ಹೋಗು ನೀನೆನ
ಲವ ಹಸಾದವ ಹಾಯ್ಕಿ ಬಂದನು ದೇವಿಯರಮನೆಗೆ ೪೪

ಬಂದು ಬಾಗಿಲ ಕಾಹಿಗಳ ಕರೆ
ದೆಂದನರಸಿಗೆ ಬಿನ್ನವಿಸಿ ತಾ
ಬಂದ ಹದನನು ಕಾರ್ಯವುಂಟೆನೆ ಹಲವು ಬಾಗಿಲಲಿ
ಬಂದುದಲ್ಲಿಯದಲ್ಲಿಗರುಹಿಸ
ಲಿಂದುಮುಖಿ ಕೇಳಿದಳು ಬರ ಹೇ
ಳೆಂದರಾತನ ಹೊಗಿಸಿದರು ಹೊಕ್ಕನು ಸತೀಸಭೆಯ ೪೫

ಹೊಳೆವ ಕಂಗಳ ಕಾಂತಿಗಳ ಥಳ
ಥಳಿಪ ವದನಪ್ರಭೆಯ ರತ್ನಾ
ವಳಿಯ ಬಹುವಿಧ ರಶ್ಮಿಗಳ ಲಾವಣ್ಯ ಲಹರಿಗಳ
ಎಳೆನಗೆಯ ಸುಲಿಪಲ್ಲ ಮುಕ್ತಾ
ವಳಿಯ ನಖ ದೀಧಿತಿಯ ಬೆಳಗಿನ
ಬಳಗವೆನೆ ಬಾಲಕಿಯರಿಪ್ಪರು ಸತಿಯ ಬಳಸಿನಲಿ ೪೬

ಗಿಳಿಯ ಮೆಲು ನುಡಿಗಳ ವಿನೋದದಿ
ಕೆಲರು ವೀಣಾಧ್ವನಿಯ ರಹಿಯಲಿ
ಕೆಲರು ಸರಸ ಸುಗಂಧ ಸಂಗೀತದ ಸಮಾಧಿಯಲಿ
ಕೆಲರು ನೇತ್ರದಲಮಳ ಮುಕ್ತಾ
ವಳಿಯ ಚಿಲುವಿನ ಚದುರೆಯರು ಕಂ
ಗೊಳಿಸಿತಬಲೆಯ ಮಣಿಯ ಮಂಚದ ಸುತ್ತುವಳೆಯದಲಿ ೪೭

ಸಕಲ ಶಕ್ತಿಪರೀತ ವಿಮಳಾಂ
ಬಿಕೆಯವೋಲ್ ವರಮಂತ್ರ ದೇವೀ
ನಿಕರ ಮಧ್ಯದಿ ಶೋಭಿಸುವ ಸಾವಿತ್ರಿಯಂದದಲಿ
ವಿಕಟ ರಶ್ಮಿ ನಿಬದ್ಧ ರತ್ನ
ಪ್ರಕರ ಮಧ್ಯದ ಕೌಸ್ತುಭದವೋಲ್
ಚಕಿತ ಬಾಲಮೃಗಾಕ್ಷಿ ಮೆರೆದಳು ಯುವತಿ ಮಧ್ಯದಲಿ ೪೮

ಸುತ್ತಲೆಸೆಯೆ ವಿಳಾಸಿನೀಜನ
ಹತ್ತು ಸಾವಿರ ನಡುವೆ ಕಂಡನು
ಮತ್ತ ಕಾಶಿನಿಯನು ಪತಿವ್ರತೆಯರ ಶಿರೋಮಣಿಯ
ಹತ್ತಿರೈತರಲಂಜಿದನು ತ
ನ್ನುತ್ತಮಾಂಗಕೆ ಕರಯುಗವ ಚಾ
ಚುತ್ತ ಬಿನ್ನಹ ಮಾಡಿದನು ಪಾಂಚಾಲ ನಂದನೆಗೆ ೪೯

ತಾಯೆ ಬಿನ್ನಹವಿಂದು ನಿಮ್ಮಯ
ರಾಯ ಸೋತನು ಜೂಜಿನಲಿ ಕುರು
ರಾಯ ಗೆಲಿದನು ಕೋಶವನು ಗಜತುರಗ ರಥಸಹಿತ
ನೋಯಲಾಗದು ಹಲವು ಮಾತೇ
ನಾ ಯುಧಿಷ್ಠಿರ ನೃಪತಿ ಸೋತನು
ತಾಯೆ ಭೀಮಾರ್ಜುನ ನಕುಲ ಸಹದೇವ ನೀವ್ಸಹಿತ ೫೦

ಅರಳಿದಂಬುಜ ವನಕೆ ಮಂಜಿನ
ಸರಿಯು ಸುರಿವಂದದಲಿ ಸುಗ್ಗಿಯ
ಸಿರಿಯ ಹೊಸ ಬೆಳುದಿಂಗಳನು ಬಲುಮುಗಿಲು ಕವಿವಂತೆ
ಚರನ ಬಿನ್ನಹಕರಸಿ ಮೊದಲಾ
ಗಿರೆ ಸಮಸ್ತ ಸಖೀಜನದ ಮುಖ
ಸರಸಿರುಹ ಬಾಡಿದವು ಮುಸುಕಿತು ಮೌನಮಯಜಲಧಿ ೫೧

ದೂತ ಹೇಳೈ ತಂದೆ ಜೂಜನ
ಜಾತರಿಪುವಾಡಿದನೆ ಸೋತನೆ
ಕೈತವದ ಬಲೆಗಾರರವದಿರು ಶಕುನಿ ಕೌರವರು
ದ್ಯೂತದಲಿ ಮುನ್ನೇನನೊಡ್ಡಿದ
ಸೋತನೇನನು ಶಿವ ಶಿವಾ ನಿ
ರ್ಧೂತಕಿಲ್ಬಿಷನರಸನೆಂದಳು ದ್ರೌಪದಾದೇವಿ ೫೨

ತಾಗಿದುದಲಾ ನಾರದಾದ್ಯರ
ನಾಗತವನರುಹಿದರು ಹಿಂದೆ ವಿ
ಯೋಗವಾಯಿತೆ ಲಕ್ಷ್ಮಿಗಿಂದ್ರ ಪ್ರಸ್ಥಪುರವರದ
ಹೋಗಲದು ಮುನ್ನೇನನೊಡ್ಡಿದ
ನೀಗಿದನು ಗಡ ತನ್ನನೆಂತಿದ
ರಾಗು ಹೋಗೇನೆಂದು ನುಡಿದಳು ಪ್ರಾತಿಕಾಮಿಕನ ೫೩

ಮೊದಲಲರ್ಥವ ಹೆಸರುಗೊಂಡೊ
ಡ್ಡಿದನು ಸೋತನು ಮರಳಿ ಮಗುಳೊ
ಡ್ಡಿದನು ಹೇರಾಳದಲಿ ಧನವನು ಕರಿಘಟಾವಳಿಯ
ಕುದುರೆ ರಥ ನಿಮ್ಮಡಿಯ ಮೇಳದ
ಸುದತಿಯರನೊಡ್ಡಿದನು ಸೋತನು
ತುದಿಯಲನುಜರನೊಡ್ಡಿ ಸೋತನು ತಾಯೆ ಕೇಳೆಂದ ೫೪

ಬಳಿಕ ತನ್ನನೆ ಸೋತನಲ್ಲಿಂ
ಬಳಿಕ ನಿಮ್ಮಡಿಗಳಿಗೆ ಬಂದುದು
ಖಳರು ಶಕುನಿ ಸುಯೋಧನರು ನೀವಾಗಳೆಂದಿರಲೆ
ಅಳುಕಬೇಡಿನ್ನೇನು ಭೂಪತಿ
ತಿಲಕ ತನ್ನನು ಮುನ್ನ ಸೋಲಿದು
ಬಳಿಕ ತನ್ನನು ಸೋತನೇ ಹೇಳೆಂದಳಿಂದುಮುಖಿ ೫೫

ಅಹುದು ತನ್ನನು ಮುನ್ನ ಸೋತನು
ಮಹಿಳೆಗೊಡ್ಡಿದೆನೆಂದು ನಿಮ್ಮನು
ಮಹಿಪ ಸೋತನು ತಾಯೆ ಬಿಜಯಂಗೈಯ್ಯಬೇಹುದೆನೆ
ವಿಹಿತವಿದು ಮಾನುಷವೆ ದೈವದ
ಕುಹಕವೈಸಲೆ ಮಗನೆ ತಾನೇ
ಬಹೆನು ನೀ ಹೋಗೊಮ್ಮೆ ಹೇಳೀ ಮಾತನಾ ಸಭೆಗೆ ೫೬

ಮುನ್ನ ತನ್ನನು ಸೋತ ಬಳಿಕಿನೊ
ಳೆನ್ನ ಸೋತರೆ ಸಲುವುದೇ ಸಂ
ಪನ್ನ ವಿಮಲಜ್ಞಾನರರಿದೀ ಪ್ರಶ್ನೆಗುತ್ತರವ
ಎನ್ನ ಮೆಚ್ಚಿಸಿಕೊಡಲಿ ತಾ ಬಹೆ
ನೆನ್ನು ಹೋಗೆನಲವನು ಭಯದಲಿ
ತನ್ನೊಳಗೆ ನಡುಗುತ್ತ ಬಂದನು ಕೌರವನ ಸಭೆಗೆ ೫೭

ಜೀಯ ದೇವಿಯರೆಂದ ಮಾತಿದು
ರಾಯ ಮುನ್ನವೆ ತನ್ನ ಸೋತಬು
ಜಾಯತಾಕ್ಷಿಯ ಬಳಿಕ ಸೋತರೆ ಧರ್ಮಸೂಕ್ಷ್ಮದಲಿ
ರಾಯಸಭೆಯಲಿ ಹಿರಿಯರರಿದದ
ರಾಯತವನರುಹಿದರೆ ಬಹೆನೆಂ
ದಾ ಯುವತಿ ಬಿನ್ನಹ ಮಾಡಿದಳೆಂದು ಕೈಮುಗಿದ ೫೮

ರಾಯ ಸೋತನು ತನ್ನ ನಾವ
ನ್ಯಾಯದಲಿ ತಪುದಿಲ್ಲ ತೊತ್ತಿರ
ಲಾಯದಲಿ ಕೂಡುವೆವು ಕರೆಯೆನಲಿವನು ಗರ ಹೊಡೆದು
ವಾಯುಸುತನಂಜಿಸುವನೆಂದೀ
ನಾಯಿ ಬೆದರಿದನಕಟ ದೂತನ
ಬಾಯ ನೋಡಾಯೆನುತ ಮಿಗೆ ಗರ್ಜಿಸಿದ ಕುರುರಾಯ ೫೯

ತಮ್ಮ ಬಾರ್ಕೆ ಹೋಗು ದಿಟ ನೀ
ನಮ್ಮವರೆ ಓಡಿದೆಳೆದು ತಾ ನೃಪ
ರೆಮ್ಮ ಕಿಂಕರರೈವರಿದ್ದೇನ ಮಾಡುವರು
ತಮ್ಮ ಕರ್ಮವಿಪಾಕ ಗತಿ ನೆರೆ
ತಮ್ಮನೇ ಕೆಡಿಸುವುದು ಧರ್ಮ ವಿ
ದೆಮ್ಮ ಕಾರಣವಲ್ಲ ನೀ ಹೋಗೆಂದನಾ ಭೂಪ ೬೦

ಗಾಳಿಯಳಿಯನಿರಿಯಲಗ್ನಿ
ಜ್ವಾಲೆಯಲಿ ತಟ್ಟುಯವೆ ಕಡುಹಿನ
ಕಾಳಕೂಟದ ನದಿಗೆ ನಂಜಿನ ಹೊನಲು ಬೆರೆಸಿದರೆ
ವಾಳೆಯವೆ ದುಶ್ಶಾಸನನು ಜಗ
ದೂಳಿಗದ ದುರುದುಂಬಿ ಕುರುಪತಿ
ಮೇಲೆ ನೇಮಿಸಲುಚಿತಗೈವನೆ ಭೂಪ ಕೇಳೆಂದ ೬೧

ಹರಿದನವ ಬೀದಿಯಲಿ ಬಿಡುಂದಲೆ
ವೆರೆಸಿ ಸತಿಯರಮನೆಯ ಬಾಗಿಲ
ಚರರು ತಡೆದರೆ ಮೆಟ್ಟಿದನು ತಿವಿದನು ಕಠಾರಿಯಲಿ
ತರುಣಿಯರು ಕಂಡಂಜಿ ಹೊಕ್ಕರು
ಸರಸಿಜಾಕ್ಷಿಯ ಮರೆಯನೀ ಖಳ
ನುರವಣಿಸಿದನು ರಾಹು ತಾರಾಧಿಪನ ತಗುಳ್ವಂತೆ ೬೨

ಬಂದನಿವನಬುಜಾಕ್ಷಿಯಿದಿರಲಿ
ನಿಂದನೆಲೆಗೇ ಗರುವತನವಿದು
ಹಿಂದೆ ಸಲುವುದು ಸಲ್ಲದಿದು ಕುರುರಾಜ ಭವನದಲಿ
ಇಂದು ಮರೆ ನಡೆ ನಮ್ಮ ತೊತ್ತಿರ
ಮುಂದೆ ಮೆರೆ ನಡೆ ಮಂಚದಿಂದಿಳಿ
ಯೆಂದು ಜರೆದನು ಕೌರವಾನುಜನಾ ಮಹಾಸತಿಯ ೬೩

ಜನಪನನುಜನು ನೀನೆನಗೆ ಮೈ
ದುನನಲೇ ತಪ್ಪೇನು ಯಮ ನಂ
ದನನು ಸೋಲಲಿ ನನ್ನ ಪ್ರಶ್ನೆಗೆ ಕೊಡಲಿ ಮರುಮಾತ
ಅನುಜ ಕೇಳ್ವೈ ಪುಷ್ಪವತಿ ತಾ
ನೆನಗೆ ರಾಜಸಭಾ ಪ್ರವೇಶವ
ದನುಚಿತವಲೇ ಹೇಳೆನಲು ಖಳರಾಯ ಖತಿಗೊಂಡ ೬೪

ಎಲ್ಲಿಯದು ದುಷ್ಪ್ರಶ್ನೆ ಮರು ಮಾ
ತೆಲ್ಲಿಯದು ನೀ ಪುಷ್ಪವತಿಯಾ
ಗಲ್ಲಿ ಫಲವತಿಯಾಗು ನಡೆ ಕುರುರಾಯ ಭವನದಲಿ
ಖುಲ್ಲರೈವರು ತಮ್ಮ ಸೋತರು
ಬಲ್ಲವಿಕೆಯುಚಿತವನು ಮೌಳಿಯ
ನಲ್ಲಿ ತೋರಾಯೆನುತ ತಪ್ಪಿದನಹಹ ಸಿರಿಮುಡಿಗೆ ೬೫

ಆ ಮಹೀಶಕ್ರತುವರದೊಳು
ದ್ದಾಮ ಮುನಿಜನರಚಿತ ಮಂತ್ರ
ಸ್ತೋಮ ಪುಷ್ಕಲ ಪೂತ ಪುಣ್ಯಜಲಾಭಿಷೇಚನದ
ಶ್ರೀಮುಡಿಗೆ ಕೈಯಿಕ್ಕಿದನು ವರ
ಕಾಮಿನೀ ನಿಕುರುಂಬವಕಟಕ
ಟಾ ಮಹಾಸತಿ ಶಿವ ಶಿವಾಯೆಂದೊದರಿತಲ್ಲಲ್ಲಿ ೬೬

ಕೆದರಿದವು ಸೂಸಕದ ಮುತ್ತುಗ
ಳುದುರಿದವು ಸೀಮಂತ ಮಣಿಗಳ
ಹೊದರು ಮುರಿದವು ಕರ್ಣಪೂರದ ರತ್ನದೋಲೆಗಳು
ಸುದತಿಯರು ಗೋಳಿಡುತ ಬರೆ ಮು
ಟ್ಟಿದನು ತಿವಿದನು ಕಾಲಲಡಬಿ
ದ್ದುದು ಸಖೀಜನವೆಳೆದು ಝಾಡಿಸಿ ಜರೆದು ಝೋಂಪಿಸಿದ ೬೭

ಮಣಿದ ತನುವಿನ ವೇಗಗತಿಯಲಿ
ಝಣಝಣೆಪ ನೂಪುರದ ರವ ಕಂ
ಕಣದ ದನಿ ಕೇವಣದ ಹೊಂಗಿರುಗೆಜ್ಜೆಗಳ ರಭಸ
ಗಣಿಕೆಯರ ಕೆಳದಿಯರ ಹಾಹಾ
ರಣಿತಕಿವು ನೆರವಾದವಾ ಪ
ಟ್ಟಣವ ತುಂಬಿತು ಶೋಕವದನೇನೆಂಬೆನದ್ಭುತವ ೬೮

ಹಡಪಗಿತಿಯರು ಸೀಗುರಿಯ ಕ
ನ್ನಡಿಯವರು ಮೇಳದ ವಿನೋದದ
ನುಡಿನಗೆಯ ಸಖಿಯರು ಪಸಾಯ್ತೆಯರಾಪ್ತ ದಾಸಿಯರು
ಒಡನೆ ಬಂದರು ಕಂಬನಿಯ ಬಿಡು
ಮುಡಿಯ ಹಾಹಾರವದ ರಭಸದ
ನಡೆಯಲಖಿಳ ವಿಲಾಸಿನಿಯರು ಸಹಸ್ರ ಸಂಖ್ಯೆಯಲಿ ೬೯

ನಗೆಮೊಗವನೊಮ್ಮೆಯು ಪಯೋಧರ
ಯುಗಳ ನೋಡುವ ಸಖ್ಯದಲಿ ದೃಗು
ಯುಗಳ ಜಲಬಿಂದುಗಳಿಗಾ ಜಲಬಿಂದು ಸುರಿವಂತೆ
ಒಗುವ ಖಂಡಿತ ಹಾರ ಮುಕ್ತಾ
ಳಿಗಳು ಮೆರೆದವು ಮಾನಿನಿಯರು
ಬ್ಬೆಗದ ರೋದನ ರೌರವದೊಳ್ಳೆತಂದಳಿಂದುಮುಖಿ ೭೦

ಬೆವರುಗಂಗಳ ಬಿಟ್ಟ ಮಂಡೆಯ
ಹುದಿದ ಹಾಹಾರವದ ತೊಡಕಿದ
ಪದಯುಗದ ಮೇಲುದಿನ ಬೀದಿಯ ಧೂಳಿ ಧೂಸರದ
ವದನಕಮಲದ ಖಳನ ವಾಮಾಂ
ಗದಲಿ ಬಾಗಿದ ತನುಲತೆಯ ವರ
ಸುದತಿ ಬಂದಳು ರಾಜಸಭೆಗೆ ನೃಪಾಲ ಕೇಳೆಂದ ೭೧

ಅಹಹ ಪಾಂಡವ ರಾಯ ಪಟ್ಟದ
ಮಹಿಳೆಗೀ ವಿಧಿಯೇ ಮಹಾಕ್ರತು
ವಿಹಿತ ಮಂತ್ರ ಜಲಾಭಿಷಿಕ್ತ ಕಚಾಗ್ರಕಿದು ವಿಧಿಯೆ
ಮಿಹಿರ ಬಿಂಬವ ಕಾಣದೀ ನೃಪ
ಮಹಿಳೆಗಿದು ವಿಧಿಯೇ ವಿಧಾತನ
ಕುಹಕವೈಸಲೆ ಶಿವ ಶಿವಾಯೆಂದರು ಸಭಾಜನರು ೭೨

ತುಳುಕಿದವು ಕಂಬನಿಗಳಾ ಸಭೆ
ಯೊಳಗೆ ದುಶ್ಶಾಸನ ಸುಯೋಧನ
ಖಳ ಶಿರೋಮಣಿ ಶಕುನಿ ಕರ್ಣ ಜಯದ್ರಥಾದ್ಯರಿಗೆ
ತಳಿತುದದ್ಭುತಹರ್ಷ ಮುಖ ಮಂ
ಡಲಕೆ ಸೀರೆಯನವುಚಿ ನಯನೋ
ದ್ಗಳಿತ ಜಲಧಾರೆಯಲಿ ನೆನೆದುದು ಸಭೆ ವಿಷಾದದಲಿ ೭೩

ವ್ಯಾಕುಲವನಿದ ಕಾಂಬ ಕಣ್ಣುಗ
ಳೇಕೆ ರಾಜ ಕುಮಾರಿಯೇಕೆಯು
ಶೋಕ ರಸವನು ಕುಡಿವ ಕರ್ಣದ್ವಯವಿದೇಕೆಮಗೆ
ಏಕೆ ವಿಧಿ ನಿರ್ಮಿಸಿದನೋ ನಾ
ವೇಕೆ ಸಪ್ರಾಣರೊ ಶಿವಾಯೆಂ
ದಾ ಕುಠಾರರ ಬೈದುದಾ ಸಭೆಯಲಿ ಬುಧವ್ರಾತ ೭೪

ವನಜಮುಖಿಯಕ್ಕೆಯನು ದುಶ್ಶಾ
ಸನನ ದುರ್ನೀತಿಯನು ದುರ್ಯೋ
ಧನನ ದುಶ್ಚೇಷ್ಟೆಯನು ಕಂಡೀ ಭೀಮ ಫಲುಗುಣರು
ಮನದೊಳಗೆ ಕೌರವನ ಕರುಳನು
ತನಿ ರಕುತದಲಿ ಕುದಿಸಿದರು ವಾ
ಜನಿಕ ಕರ್ಮಕ್ರಿಯೆಗೆ ನೆನೆವುದನರಿದನಾ ಭೂಪ ೭೫

ಹುಬ್ಬಿನಲಿ ನಿಲಿಸಿದನು ಪವನಜ
ನುಬ್ಬಟೆಯನರ್ಜುನನ ವಿಕೃತಿಯ
ನಿಬ್ಬರಾಲಾಪವನು ಧರ್ಮರಹಸ್ಯ ನಿಷ್ಠೆಯಲಿ
ಹಬ್ಬಿದುದು ಭೀಷ್ಮಂಗೆ ಶೋಕದ
ಮಬ್ಬು ಗುರು ಗೌತಮರು ವಿದುರನು
ಸರ್ಬ ಖೇದಾಂಬುಧಿಯೊಳದ್ದರು ಭೂಪ ಕೇಳೆಂದ ೭೬

ಅರಸ ಕೇಳೈ ಬಳಿಕ ಹಸ್ತಿನ
ಪುರದೊಳಾಯ್ತಾ ವಾರ್ತೆ ಬಳಿಕೀ
ಪುರದ ಬಹಿರೋದ್ಯಾನ ವೀಥಿಗಳೊಳಗೆ ಹರಹಿನಲಿ
ಅರಸಿಯರು ಸೌಭದ್ರನವರ್ಕೈ
ವರ ಕುಮಾರರು ಮಂತ್ರಿಗಳು ಮು
ಖ್ಯರು ಪಸಾಯ್ತರು ಕೇಳಿದರು ಪಾಂಡವ ಪರಾಜಯವ ೭೭

ಬಂದರಿದಿರೊಳು ಕೌರವರ ಕಡೆ
ನಂದನರ ಕಡೆ ಯಾವುದೆನೆ ಸಾ
ವಂದದಲಿ ಹೊಯ್ದಾಡಿ ಹಿಡಿವೆವು ಸುರರ ಸೂಳೆಯರ
ಎಂದು ತಮ್ಮೊಳು ನೆರೆದು ಸೇನಾ
ವೃಂದ ಸಜ್ಜೋಡಿನಲಿ ಕಾಳಗ
ಕಂದು ಮೋಹರಿಸಿದರು ಹಸ್ತಿನಪುರದ ಬಾಹೆಯಲಿ ೭೮

ಇತ್ತಲಬಲೆಯ ವಿಧಿಯ ಕೇಳತಿ
ಮತ್ತನೈ ಧೃತರಾಷ್ಟ್ರ ಸುತನೀ
ಮತ್ತ ಗಜಗಾಮಿನಿಯ ಬಿಡಿಸಿದನವನ ಕೈಯಿಂದ
ನೆತ್ತ ಸೋತುದು ನಿನ್ನನೊಡ್ಡಿ ನೃ
ಪೋತ್ತಮನು ಸಲೆ ಮಾರ ಮಾರಿದ
ನತ್ತದೇನಹುದೆಲೆಗೆ ತೊತ್ತಿರ ಹಿಂಡ ಹೊಗುಯೆಂದ ೭೯

ಲಲಿತ ಬುದ್ಧಿಗಳೀಗ ನೋಡಿರಿ
ಲಲನೆಯನು ಸತಿ ದಿಟ್ಟೆಯೆನ್ನದಿ
ರೆಲೆ ಸುಯೋಧನ ರಾಜಸಭೆಯಿದು ದೋಷರಹಿತವಲೆ
ಗೆಲವಿದೆಂತುಟೊ ತನ್ನ ಸೋಲಿದು
ಬಳಿಕ ಸೋತರೆ ಧರ್ಮಗತಿಯನು
ತಿಳಿದು ಹೇಳಲಿ ತತ್ಸಭಾಸದರೆಂದಳಿಂದುಮುಖಿ ೮೦

ಹಿರಿಯರಿಲ್ಲದ ಸಭೆ ಮನುಷ್ಯರ
ನೆರವಿಯದು ಸಭೆಯಲ್ಲ ಮೂರ್ಖರು
ಹಿರಿಯರಲ್ಲ ಯಥಾರ್ಥ ಭಾಷಣ ಭೀತಚೇತನರು
ಹಿರಿಯರಿದೆ ಸಾಮಾಜಿಕರು ಸ
ಚ್ಚರಿತರಿದೆಲಾ ಸ್ತ್ರೀಮಂತವನು
ತ್ತರಿಸಲಾಗದೆ ಧರ್ಮಶಾಸ್ತ್ರದೊಳೆಂದಳಿಂದುಮುಖಿ ೮೧

ಚಪಳೆ ಘಡ ಹೋಗಿವಳು ಹಲಬರ
ನುಪಚರಿಸುವುದನರಿಯಲಾದುದು
ದ್ರುಪದನಂದನೆ ನಡೆ ವಿಳಾಸಿನಿಯರ ವಿಧಾನದಲಿ
ಕೃಪಣನೇ ಕುರುರಾಯ ನಿನಗಿ
ನ್ನಪದೆಸೆಯು ಹೊಲೆ ಹೋಯ್ತು ರಾಯನ
ವಿಪುಳ ವಿಭವವನನುಭವಿಸು ನಡೆಯೆಂದನಾ ಕರ್ಣ ೮೨

ಅಹುದಲೇ ಬಳಿಕೇನು ದಾಸ್ಯಕೆ
ವಿಹಿತವಾಯಿತು ನಿನ್ನ ತನುವಿನ
ಲಹ ಮನೋವ್ಯಥೆಯೇಕೆ ರಾಣೀವಾಸವೀಧಿಯಲಿ
ಮಹಿಳೆಯರ ಸಖ್ಯದಲಿ ಸೌಖ್ಯದ
ರಹಣಿಗೊಡಬಡು ವಾರಕದಲತಿ
ಬಹಳ ಭೂಷಣ ಭಾರದಲಿ ಮೆರೆಯೆಂದನಾ ಶಕುನಿ ೮೩

ವಾರಕದ ವಿವಿಧಾಭರಣ ಶೃಂ
ಗಾರವಂತಿರಲೀಕೆಯಾಡಿದ
ಸಾರ ಭಾಷೆಗೆ ನೆನೆಯರೇ ನಿರ್ವಾಹ ಸಂಗತಿಯ
ಓರೆಪೋರೆಯೊಳಾಡಿ ಧರ್ಮದ
ಧಾರಣೆಯ ಧಟ್ಟಿಸುವದಿದು ಗಂ
ಭೀರರಿಗೆ ಗರುವಾಯಿಯೇ ಸುಡಲೆಂದನಾ ಭೀಷ್ಮ ೮೪

ತುಟ್ಟಿಸಲಿ ಧನ ಮಾನಗರ್ವದ
ಬೆಟ್ಟ ಮುರಿಯಲಿ ಜೀವವೊಡಲನು
ಬಿಟ್ಟು ಹಿಂಗಲಿ ಬಿಡೆನು ಸತ್ಯವನೆಂದು ಯಮಸೂನು
ನೆಟ್ಟನೇ ನಿಶ್ಚೈಸಿದುದನೊಡ
ಹುಟ್ಟಿದರು ಮನ್ನಿಸಿದರಲ್ಲದೆ
ಹುಟ್ಟಿ ಹೊಂದಲು ಗತಿಯಹುದೆ ನಿನಗೆಂದನಾ ಭೀಷ್ಮ ೮೫

ಅಳಿಯದಂತಿರೆ ಸತ್ಯಧರ್ಮದ
ನೆಳಲು ನೆಗ್ಗದೆ ಕೀರ್ತಿವಧುವಿನ
ಸುಳಿವು ನೋಯದೆ ತಳಿರು ಬಾಡದೆ ಧೈರ್ಯ ಸುರಕುಜದ
ಹಳಿವಿಗಳುಕದೆ ವೈರಿವರ್ಗದ
ಕಳಕಳಕೆ ಮೈಗೊಡದೆ ನೃಪ ನಿ
ರ್ಮಳದಲಿದ್ದರೆ ನಿನಗೆ ಸದರವೆಯೆಂದನಾ ಭೀಷ್ಮ ೮೬

ಸೋತಬಳಿಕಿವರೆಮ್ಮ ವಶವ
ಖ್ಯಾತಿಯಲಿ ನಾವ್ ನಡೆವರಲ್ಲ ವ್ಯ
ಘಾತಿರೇಕದಿ ನೀವು ಘೂರ್ಮಿಸಲಂಜುವೆನೆ ನಿಮಗೆ
ಈ ತಳೋದರಿ ತೊತ್ತಿರಲಿ ಸಂ
ಘಾತವಾಗಲಿ ಸಾಕು ನಿಮ್ಮಯ
ಮಾತೆನುತ ಕುರುರಾಯ ಜರೆದನು ಭೀಷ್ಮ ಗುರು ಕೃಪರ ೮೭

ನೊಂದನೀ ಮಾತಿನಲಿ ಮಾರುತ
ನಂದನನು ಸಹದೇವನನು ಕರೆ
ದೆಂದನಗ್ನಿಯ ತಾ ಯುಧಿಷ್ಠಿರನೃಪನ ತೋಳುಗಳ
ಮಂದಿ ನೋಡಲು ಸುಡುವೆನೇಳೇ
ಳೆಂದು ಜರೆದರೆ ಹಿಡಿದು ಮಾದ್ರೀ
ನಂದನನ ನಿಲಿಸಿದನು ಫಲುಗುಣ ನುಡಿದನನಿಲಜನ ೮೮

ಏನಿದೇನೈ ಭೀಮ ನಿಲು ಯಮ
ಸೂನು ಶಿವ ಶಿವ ಗುರುವಲಾ ನಮ
ಗೀ ನಿತಂಬಿನಿಯಾದಿಯಾದ ಸಮಸ್ತ ವಸ್ತುಗಳು
ಈ ನರೇಂದ್ರಗೆ ಸರಿಯೆ ಕುಂತೀ
ಸೂನುವೇ ಪ್ರಾಣಾರ್ಥದಿಂದ ಸ
ಘಾನನೈ ನಮಗೀತನೇ ಗತಿಯೆಂದನಾ ಪಾರ್ಥ ೮೯

ಹಿಂಗಿ ಹೋಗಲಿ ತನುಮನಸು ಸ
ಪ್ತಾಂಗ ಬೇಯಲಿ ಖೋಡಿ ಮನದಲಿ
ಹಿಂಗುವದೆ ಹರಹರ ಧನಂಜಯ ಕಾಕ ಬಳಸಿದೆಲ
ಅಂಗನೆಯ ಮೇಲೊಡ್ಡವೇ ಲಲಿ
ತಾಂಗಿಗೀ ವಿಧಿಯೇಕೆ ನವಗೀ
ಭಂಗ ಸಾಲದೆ ಸುಡುವೆನಾದೊಡೆ ತನ್ನ ತೋಳುಗಳ ೯೦

ಈಯವಸ್ಥೆಗೆ ತಂದ ಕೌರವ
ನಾಯಿಗಳ ನಿಟ್ಟೆಲುವ ಮುರಿದು ನ
ವಾಯಿಯಲಿ ಘಟ್ಟಿಸದೆ ಕೊಬ್ಬಿದ ತನ್ನ ತೋಳುಗಳ
ವಾಯುಸಖನಲಿ ಸುಡುವೆನೀಗಳೆ
ಬೀಯವಾಗಲಿ ದೇಹವಾಚಂ
ದ್ರಾಯತವೆ ಎಂದೊಡನೊಡನೆ ಮಿಡುಕಿದನು ಕಲಿಭೀಮ ೯೧

ಅಕಟ ಧರ್ಮಜ ಭೀಮ ಫಲುಗುಣ
ನಕುಲ ಸಹದೇವಾದ್ಯರಿರ ಬಾ
ಲಕಿಯನೊಪ್ಪಿಸಿ ಕೊಟ್ಟರೇ ಮೃತ್ಯುವಿನ ತಾಳಿಗೆಗೆ
ವಿಕಳರಾದಿರೆ ನಿಲ್ಲಿ ನೀವೀ
ಗಕುಟಿಲರಲಾ ಭೀಷ್ಮ ಗುರು ಬಾ
ಹ್ಲಿಕ ಕೃಪಾದಿಗಳುತ್ತರವ ಕೊಡಿಯೆಂದಳಬುಜಾಕ್ಷಿ ೯೨

ಕಂಗಳಿಂದನುಯೋಗ ನಿಜ ಹ
ಸ್ತಾಂಗುಲಿಯೊಳುತ್ತರ ಲಸದ್ಭ್ರೂ
ಭಂಗದಲಿ ಸಂದೇಹ ಮುಖ ವಿಕೃತಿಯಲಿ ದುರ್ನೀತಿ
ಇಂಗಿತದಲಾಂಗಿಕದ ಭಾವಾ
ಭಂಗ ಪರಿಯನು ಯೋಗಯುಕ್ತ ನ
ಯಂಗಳಲಿ ತಿಳಿದುಸುರದಿರ್ದುದು ಸಭೆ ಸುಭೀತಿಯಲಿ ೯೩

ಅರಿದು ಮೌನವೊ ಮೇಣು ಮಾನಿನಿ
ಯೊರಲುತಿರಲೆಂದಾದುಪೇಕ್ಷೆಯೊ
ಮುರಿದು ನುಡಿವುದಸಾಧ್ಯವೋ ಮೇಣಾವುದಿದರೊಳಗೆ
ಅರಿಯಿರೇ ಸಮವರ್ತಿ ದೂತನ
ಮುರುಕವನು ನೀವೇಕೆ ನಿಮ್ಮನು
ಮರೆದಿರೆಂದು ವಿಕರ್ಣ ಜರೆದನು ತತ್ಸಭಾಸದರ ೯೪

ಹುಸಿವಚನ ಪೌರುಷ್ಯ ಲಲನಾ
ವಿಷಯ ಮೃಗತೃಷ್ಣಾ ಪಿಪಾಸಾ
ವ್ಯಸನಿ ಬಲ್ಲನೆ ಧರ್ಮತತ್ತ್ವರಹಸ್ಯನಿಶ್ಚಯವ
ಉಸುರಲಮ್ಮರೆ ವೈದಿಕದ ತನಿ
ರಸದ ಸವಿ ನಿಮಗಲ್ಲದಾರಿಗೆ
ಬಸಿದು ಬೀಳ್ವುದು ಭೀಷ್ಮಯೆಂದು ವಿಕರ್ಣ ಗರ್ಜಿಸಿದ ೯೫

ತನ್ನ ಸೋತಾಗಲೆ ಮಹೀಪತಿ
ಯನ್ಯನಾದನು ಸತಿಗೆ ತನ್ನಿಂ
ಮುನ್ನ ಸೋತರೆ ತನ್ನ ಧನವೈಸಲೆ ವಿಚಾರಿಸಲು
ಅನ್ಯನನ್ಯಳ ಸೋತ ಗಡ ತಾ
ತನ್ನ ಧನವೆಂದರಸ ಶಕುನಿಯ
ಬಿನ್ನಣಕೆ ಬೆಳ್ಳಾದನೆಂದು ವಿಕರ್ಣ ಖತಿಗೊಂಡ ೯೬

ಘಡ ವಿಕಾರವೆ ನಮ್ಮೊಡನೆ ಬಾ
ಯ್ಬಡಿಕತನವೇ ಕುರು ಮಹೀಪತಿ
ಯೊಡನೆ ಹುಟ್ಟಿದೆಯಾದ ಕಾರಣ ಬಿಟ್ಟೆವೀಸರಲಿ
ನುಡಿವರೇ ಭೀಷ್ಮಾದಿಗಳು ನೀ
ನೊಡಬಡಿಸಲೆಂತರಿವೆ ಧರ್ಮದ
ಕಡೆ ಮೊದಲ ಕೈವಾರ ನಿನಗೇಕೆಂದನಾ ಕರ್ಣ ೯೭

ಏಕಪತಿ ಬಹುಸತಿಯರೆಂಬುದು
ಲೋಕ ಪದ್ಧತಿಯಾದುದದು ತಾ
ನೇಕಸತಿ ಬಹುಪತಿಗಳಿದು ವೈದಿಕ ವಿರುದ್ಧವಲೆ
ಲೌಕಿಕವ್ಯವಹಿತದ ಕರ್ಮವ
ನೀ ಕುಮಾರ್ಗಿಗಳಲ್ಲಿ ಕಂಡೆವು
ನೀ ಕುರುವ್ರಜದೊಳಗೆ ಜನಿಸೆ ವಿಕರ್ಣ ಹೋಗೆಂದ ೯೮

ಅಹುದು ಕರ್ಣನ ನುಡಿ ವಿಕರ್ಣನು
ಬಹುವಚನ ಪಂಡಿತನು ಬಾಹಿರ
ನಹುದಲೇ ಕುರುರಾಜ ವಂಶದೊಳುದಿಸಿ ಫಲವೇನು
ಅಹಿತಹಿತ ವಿಜ್ಞಾನಿಯಲ್ಲದ
ಬೃಹದುದರ ಕಿಂಕರನ ನುಡಿ ಕಿಂ
ಗಹನವೇ ಕಲಿಕರ್ಣಯೆಂದನು ನಗುತ ಕುರುರಾಯ ೯೯

ಹಾರ ಪದಕ ಕಿರೀಟ ಮಣಿ ಕೇ
ಯೂರ ಕರ್ಣಾಭರಣವೆಂಬಿವು
ಭಾರವಲ್ಲಾ ತೆಗೆಯ ಹೇಳ್ ದಾಕ್ಷಿಣ್ಯವೇನಿದಕೆ
ನಾರಿಗೀ ವಸ್ತ್ರಾಭರಣ ಶೃಂ
ಗಾರವೇಕಿನ್ನಿವನು ತೆಗೆ ಕೈ
ವಾರವಿದಕೇಕೆಂದು ದುಶ್ಶಾಸನಗೆ ನೇಮಿಸಿದ ೧೦೦

ತೆಗೆದು ಬಿಸುಟರು ಹಾರ ಪದಕಾ
ದಿಗಳನವರೈವರು ದುಕೂಲವ
ನುಗಿದು ಹಾಯ್ಕಿದರಿದ್ದರಿವರೊಂದೊಂದು ವಸ್ತ್ರದಲಿ
ಹೊಗೆಮೊಗದ ಕಿಡಿಗಣ್ಣ ಕೆಮ್ಮೀ
ಸೆಗಳ ಗುಜುರಿನ ಜುಂಜು ಗೇಶದ
ವಿಗಡನೆಪ್ಪನು ಬಂದು ಹಿಡಿದನು ದ್ರೌಪದಿಯ ಸೆರಗ ೧೦೧

ಮರುಹಿದರು ಮುಸುಡುಗಳ ಮಿಗೆ ನೀ
ರೊರೆವ ಕಂಗಳಲಕಟಕಟ ನಿ
ಷ್ಠುರವಿವೇಕಪಕೀರ್ತಿಯೇಕನುಚಿತವಿದೇಕೆನುತ
ಕರಗಿದರು ಕಂದಿದರು ಮಮ್ಮಲ
ಮರುಗಿದರು ಭೀಷ್ಮಾದಿಗಳು ಜ
ರ್ಝರಿತರಾದರು ತಡೆಯಲಾರದೆ ಖಳನ ದುಷ್ಕೃತವ ೧೦೨

ಅಳುಕಿದನೆ ಸುಡಲವನ ಮೇಲುದ
ಸೆಳೆದುನುನ್ನತ ಕುಚವ ನಳಿತೋ
ಳ್ಗಳಲಿ ಮುಚ್ಚಿದಳಬಲೆ ಬೆಚ್ಚಿದಳವನ ನಿಷ್ಠುರಕೆ
ಕಳವಳಿಸಿದಳು ಬೆರಲಿನಲಿ ದೃಗು
ಜಲವ ಬಿದುರುತ ನೋಡಿದಳು ನೃಪ
ತಿಲಕನನು ಭೀಮಾರ್ಜುನರ ಮಾದ್ರೀಕುಮಾರಕರ ೧೦೩

ಮುರಿದವನಿಬರ ಮೋರೆ ಮಹಿಪನ
ಕೊರಲ ಕೊಂಕಿನಲಿದ್ದರಾ ಸೋ
ದರರು ಸಾರವನಲ್ಲಿ ಕಾಣದೆ ಭೀಷ್ಮ ಗುರು ಕೃಪರ
ಮರಳಿ ನೋಡಿದಳಕಟ ಗಂಗಾ
ವರಕುಮಾರ ದ್ರೋಣ ಕೃಪರೀ
ಸೆರಗ ಬಿಡಿಸಿರೆ ತಂದೆಗಳಿರೆಂದೊರಲಿದಳು ತರಳೆ ೧೦೪

ಕ್ರೂರನಿವ ದುಶ್ಶಾಸನನು ಗಾಂ
ಧಾರಿ ಬಿಡಿಸೌ ಸೆರಗ ಸೊಸೆಯ
ಲ್ಲಾರು ಹೇಳೌ ತಂಗಿಯಲ್ಲಾ ನಿಮಗೆ ಭಾನುಮತಿ
ವೀರ ಸೈಂಧವನರಸಿ ರಾಜ ಕು
ಮಾರಿ ನೀ ನಾದಿನಿಯಲಾ ಖಳ
ಕೌರವದೊಳದ್ದುವನು ಬಿಡಿಸೆಂದೊರಲಿದಳು ತರಳೆ ೧೦೫

ಎಲೆ ವಿಲಾಸಿನಿಯರಿರ ಭೂಪನ
ತಿಳಿಹಿರೌ ತಾಯ್ಗಳಿರ ನೀವಿಂ
ದೆಲೆ ಪಸಾಯ್ತೆಯರಿರ ಸಹೋದರಿಯೆಂದು ಕೌರವನ
ತಿಳುಹಿರೌ ಶರಣಾಗತರ ತಾ
ನುಳುಹಿ ಕೊಂಬುದು ಧರ್ಮವಕಟಾ
ಕಲುಹೃದಯರೌ ನೀವೆನುತ ಹಲುಬಿದಳು ತರಳಾಕ್ಷಿ ೧೦೬

ಧಾರುಣೀಪತಿಗಳಿರ ರಾಜ ಕು
ಮಾರರಿರ ಮಂತ್ರಿಗಳಿರಾ ಪರಿ
ವಾರಕಿದು ಪಂಥವೆ ವಿಚಾರಿಸಿ ನಿರಪರಾಧಿಯನು
ನಾರಿಯೊಬ್ಬಳನಕಟ ಸಭೆಯಲಿ
ಸೀರೆಯುಡಿಯುರ್ಚುವರು ಕೆಟ್ಟೆನು
ಕಾರಣಿಕರಿಲ್ಲಾ ಶಿವಾಯೆಂದೊರಲಿದಳು ತರಳೆ ೧೦೭

ಪತಿಗಳೆನ್ನನು ಮಾರಿ ಧರ್ಮ
ಸ್ಥಿತಿಯ ಕೊಂಡರು ಭೀಷ್ಮ ಮೊದಲಾ
ದತಿರಥರು ಪರಹಿತವ ಬಿಸುಟರು ವ್ಯರ್ಥಭೀತಿಯಲಿ
ಸುತನ ಸಿರಿ ಕಡುಸೊಗಸಲಾ ಭೂ
ಪತಿಗೆ ಗಾಂಧಾರಿಗೆ ಅನಾಥೆಗೆ
ಗತಿಯ ಕಾಣೆನು ಶಿವ ಶಿವಾಯೆಂದೊರಲಿದಳು ತರಳೆ ೧೦೮

ಮೈದೆಗೆದವೀ ಪ್ರಾಣವಾಯುಗ
ಳೈದು ಬಳಿಕೆನಗಾರು ಮರುಗುವ
ರೈದೆತನವೊಂದುಳಿಯಲುಳಿವುದು ಮಿಕ್ಕ ಮಹಿಮೆಗಳು
ಬೈದು ಫಲವೇನಿನ್ನು ನಿನ್ನಯ
ಮೈದುನರ ಮರುಳಾಟಕೆನ್ನನು
ಕಾಯ್ದುಕೊಳ್ಳೈ ಕೃಷ್ಣಯೊಂದೊರಲಿದಳು ಲಲಿತಾಂಗಿ ೧೦೯

ಸುಲಿವರೂರೊಳಗುಟ್ಟ ಸೀರೆಯ
ನೆಲೆ ಮುರಾಂತಕ ರಕ್ಷಿಸೈ ಶಶಿ
ಕಳೆಗೆ ಸದರವೆ ರಾಹು ರಚಿಸಿದ ತುಟಿಯ ತೋಟಿಯದು
ಸೆಳೆವರಸುವನು ಖಳರು ಸೀರೆಯ
ಸುಲಿದರುಳಿಯೆನು ಕೃಷ್ಣ ಕರುಣಾ
ಜಲಧಿಯೇ ಕೈಗಾಯಬೇಕೆಂದೊರಲಿದಳು ತರಳೆ ೧೧೦

ಗತಿವಿಹೀನರಿಗಕಟ ನೀನೇ
ಗತಿಯಲ್ಲೈ ಗೋವಿಂದ ರಿಪು ಬಾ
ಧಿತರಿಗಬಲರಿಗಾರ್ತರಿಗೆ ನೀ ಪರಮ ಬಂಧುವಲ
ಸತಿ ಪಶು ದ್ವಿಜ ಬಾಧೆಯಲಿ ಜೀ
ವಿತವ ತೊರೆವರು ಗರುವರದು ಹಿಂ
ಗಿತೆ ಸುಯೋಧನ ಸಭೆಯೊಳೆಂದೊರಲಿದಳು ಲಲಿತಾಂಗಿ ೧೧೧

ಕಾಯಿದೈ ಕರುಣದಲಿ ದಿವಿಜರ
ತಾಯ ಪರಿಭವವನು ಪಯೋಧಿಯ
ಹಾಯಿದಮರಾರಿಗಳ ಖಂಡಿಸಿ ತಲೆಯ ಚೆಂಡಾಡಿ
ಕಾಯಿದೈ ಜಾನಕಿಯನೆನ್ನನು
ಕಾಯಬೇಹುದು ಹೆಣ್ಣ ಹರಿಬಕೆ
ನೋಯಬಲ್ಲರೆ ಕೆಲಬರೆಂದೊರಲಿದಳು ತರಳಾಕ್ಷಿ ೧೧೨

ವೇದವಧುಗಳ ಕಾಯ್ದೆಲಾ ತಮ
ಬಾಧೆಯಲಿ ಖಳನಿಂದ ಧರಣಿ ಮ
ಹೋದಧಿಯಲಕ್ಕಾಡಿದರೆ ದಾಡೆಯಲಿ ದಾನವನ
ಕೋದು ಹಾಕೀ ಭೂತ ಧಾತ್ರಿಯ
ಕಾದೆಲಾ ಕಾರುಣ್ಯಸಿಂಧುವೆ
ಮೇದಿನೀಪತಿ ಮನ್ನಿಸೆಂದೊರಲಿದಳು ತರಳಾಕ್ಷಿ ೧೧೩

ರಕ್ಷಿಸಿದೆ ಯೋಗಿಣಿಗೆ ಬೆದರುವ
ದಕ್ಷಸುತೆಯನು ಕೋಪಶಿಖಿ ತಿಮಿ
ರಾಕ್ಷನಾ ಜಮದಗ್ನಿ ಮುನಿಪನ ನುಡಿಯನನುಕರಿಸಿ
ರಕ್ಷಿಸಿದೆ ರೇಣುಕೆಯನೆನ್ನನು
ಪೇಕ್ಷಿಸದಿರೈ ಕರುಣದಲಿ ಕಮ
ಲಾಕ್ಷ ಬಿಡಿಸಾ ಸೆರಗನೆಂದೊರಲಿದಳು ಹರಿಣಾಕ್ಷಿ ೧೧೪

ದೇವಕೀದೇವಿಯರ ಸೆರೆಯನು
ದೇವ ಕೃಪೆಯಲಿ ಬಿಡಿಸಿದೈ ಕರು
ಣಾವಲಂಬದಿ ಕಳಚಿದೈ ಹದಿನಾರು ಸಾವಿರದ
ದೇವಕನ್ಯಾ ಬಂಧನವನಭಿ
ಭಾವಕರ ಕೌರವರ ಭಂಗಿಸಿ
ದೇವ ಬಿಡಿಸೈ ಸೆರಗನೆಂದೊರಲಿದಳು ಪಾಂಚಾಲೆ ೧೧೫

ಶಿಶುವಧೆಗೆ ಸೀವರಿಸದಸುರನ
ಬಸುರ ಹೂಮಾಲೆಯನು ನೀ ತುರು
ಬಿಸಿದೆಲಾ ನಖರಾಜಿಗಬಲನ ಕಾಯ್ದೆ ಕರುಣದಲಿ
ಶಿಶುವನಯ್ಯಂಗಿತ್ತು ಜಲಧಿಯ
ಮುಸುಕನುಗಿದತಿ ಕರುಣೆಯೋ ಹೆಂ
ಗುಸಿನ ಹರಿಬಕೆ ಕೃಪೆಯ ಮಾಡೆಂದೊರಲಿದಳು ತರಳೆ ೧೧೬

ತುರುವ ನುಂಗಿದ ಫಣಿಯ ಗಂಟಲ
ಮುರಿದು ಕಾಯ್ದೈ ಗೋವುಗಳ ಗಿರಿ
ಮರೆಯಲಿಂದ್ರನ ಖಾತಿಗಳುಕದೆ ಕಾಯ್ದೆ ಗೋಕುಲವ
ಮೆರೆದೆಲಾ ಕೃಪೆಯಲಿ ಗಜೇಂದ್ರನ
ಮುರಿಯಲೀಯದೆ ಖಳನು ಸೋಕಿದ
ಸೆರಗ ಬಿಡಿಸೈ ಕೃಷ್ಣಯೆಂದಳು ಪಾಂಡವರ ರಾಣಿ ೧೧೭

ಒದೆದೊಡೊಲಿದವರುಂಟೆ ಬೈದೊಡೆ
ಪದವನಿತ್ತವರುಂಟೆ ಕರುಣಾ
ಸ್ಪದರನಾ ಕೇಳ್ದರಿಯೆನೇ ಕಮಲಾಸನಾದ್ಯರಲಿ
ಪದವ ಸೋಂಕಿದ ಮೂಹೊರಡು ತಿ
ದ್ದಿದುದು ಗಡ ಹೆಂಗುಸಿನ ಹೇರಾ
ಳದ ಕೃಪಾಳುವೆ ಕೃಷ್ಣ ಸಲಹೆಂದೊರಲಿದಳು ತರಳೆ ೧೧೮

ಸೊಕ್ಕಿದಂತಕ ದೂತರನು ಸದೆ
ದೊಕ್ಕಲಿಕ್ಕಿಯಜಾಮಿಳನ ಹಿಂ
ದಿಕ್ಕಿಕೊಂಡೆಯಲೈ ದುರಾತ್ಮಕ್ಷತ್ರ ಬಂಧದಲಿ
ಸೊಕ್ಕಿದರು ಕೌರವರು ಖಳರಿಗೆ
ಸಿಕ್ಕಿದೆನು ನಿನಗಲ್ಲದಾರಿಗೆ
ಕಕ್ಕುಲಿತೆಬಡುವೆನು ಮುರಾಂತಕಯೆಂದಳಿಂದುಮುಖಿ ೧೧೯

ಚರಣ ಭಜಕರ ಮಾನ ಹಾನಿಯ
ಹರಿಬವಾರದು ಕೃಷ್ಣ ನಾಮ
ಸ್ಮರಣ ಧನಿಕರಿಗುಂಟೆ ಫಲ್ಲಣೆ ಘೋರ ಪಾತಕದ
ಪರಮ ಭಕ್ತಕುಟುಂಬಕನು ನೀ
ಕರುಣೆಯಲ್ಲದೊಡೀ ಕುಟುಂಬಿಕೆ
ಶರಣದಾರೈ ಕೃಷ್ಣ ಸಲಹೆಂದೊರಲಿದಳು ತರಳೆ ೧೨೦

ನಾಥರಿಲ್ಲದ ಶಿಶುಗಳಿಗೆ ನೀ
ನಾಥನೈ ಗೋವಿಂದ ಸಲಹೈ
ಯೂಥಪತಿಗಳು ಬಿಸುಟ ತರುಣಿಗೆ ಕೃಪೆಯ ನೀ ಮಾಡೈ
ನಾಥರಿಲ್ಲೆನಗಿಂದು ದೀನಾ
ನಾಥಬಾಂಧವ ನೀನಲೈ ವರ
ಮೈಥಿಲೀಪತಿ ಮನ್ನಿಸೆಂದೊರಲಿದಳು ಮೃಗನಯನೆ ೧೨೧

ಹೊಲಬುದಪ್ಪಿದ ಹುಲ್ಲೆ ಬೇಡನ
ಬಲೆಗೆ ಬಿದ್ದಂತಾದೆನೈ ಬಲು
ಹಳುವದಲಿ ತಾಯ್ಬಿಸುಟ ಶಿಶು ತಾನಾದೆನೆಲೆ ಹರಿಯೆ
ಕೊಲುವವೈ ಕಾಗೆಗಳಕಟ ಕೋ
ಗಿಲೆಯ ಮರಿಯನು ಕೃಷ್ಣ ಕರುಣಾ
ಜಲಧಿಯೇ ಕೈಗಾಯಬೇಕೆಂದೊರಲಿದಳು ತರಳೆ ೧೨೨

ಅಕಟ ಹಂಸೆಯು ಮರಿಯು ಪೋದುವ
ಬಕನ ತೆಗೆಸೈ ಗಿಡುಗನೆರಗುವ
ಶುಕನ ಶೋಕವ ಮಾಣಿಸೈ ಪಾಣಿಯುವೆ ಭಕುತರಲಿ
ಪ್ರಕಟಭೂತಗ್ರಹದ ಬಾಧೆಗೆ
ವಿಕಳೆ ನಿನ್ನಯ ಬಿರುದ ತಡೆದೆನು
ಭಕುತವತ್ಸಲನಹರೆ ಸಲಹೆಂದೊರಲಿದಳು ತರಳೆ ೧೨೩

ಅರಿಗೊರಲುವೆನ್ನೈ ಖಳಾಪ
ಸ್ಮಾರವಿದೆ ಸೆರೆವಿಡಿದು ತನ್ನಸು
ಪಾರಿಗೆಯು ವೈರಾಗ್ಯ ಗಡ ಮತ್ರಾಣ ವಿಭುಗಳಿಗೆ
ಘೋರತರ ಭವದುರಿತ ತರುವಿನ
ಬೇರ ಸುಡುವೀ ನಿನ್ನ ನಾಮಕೆ
ನಾರಿಯಕ್ಕೆಯು ನಿಲಿಸಲೇನರಿದೆಂದಳಿಂದುಮುಖಿ ೧೨೪

ಕರುಣಿ ನೀ ಕಾರುಣ್ಯ ಪಾತ್ರದ
ತರಳೆ ತಾ ದೀನಾರ್ತಿ ದುಃಖೋ
ತ್ತರಣ ನೀ ದೀನಾರ್ತ ದುಃಖಿತೆಯಾನು ಜಗವರಿಯೆ
ಪರಮ ಪಾಲಕ ನೀನೆ ಗತ್ಯಂ
ತರದ ವಿಹ್ವಲೆ ತಾನಲಾ ನಿ
ಷ್ಠುರವಿದೇನೈ ಕೃಷ್ಣಯೆಂದೊರಲಿದಳು ತರಳಾಕ್ಷಿ ೧೨೫

ಮರೆದೆನಭ್ಯುದಯದಲಿ ನೀನೆಂ
ದರಿವೆನಾಪತ್ತಿನಲಿ ಮದದಲಿ
ಮುರುಕಿಸುವೆನುಬ್ಬಿನಲಿ ಕಳವಳಿಸುವೆನು ಖೋಡಿಯಲಿ
ಅರಿಯದಜ್ಞರ ಗುಣವ ದೋಷವ
ನರಸುವರೆ ನಿನ್ನಡಿಯ ಕೃಪೆಯನು
ಮರೆಯಲಾಗದೆ ಕೃಷ್ಣಯೆಂದೊರಲಿದಳು ನಳಿನಾಕ್ಷಿ ೧೨೬

ಋಷಿಗಳತಿ ತಾರ್ಕಿಕರು ಕರ್ಮ
ವ್ಯಸನಿಗಳು ಕೋವಿದರು ಮಿಕ್ಕಿನ
ವಿಷಯದೆರೆ ಮೀನುಗಳು ಮೂಢ ಮನುಷ್ಯರೆಂಬವರು
ಒಸೆದು ನಿನ್ನವರೆಂದು ಬಗೆವರೆ
ಬಸಿದು ಬೀಳುವ ಕೃಪೆಯು ನೀ ತೋ
ರಿಸೆಯಿದೇನೈ ಕೃಷ್ಣಯೆಂದೊರಲಿದಳು ನಳಿನಾಕ್ಷಿ ೧೨೭

ತುಸು ಮೊದಲು ಚತುರಾಸ್ಯ ಪರಿಯಂ
ತೆಸೆವುದೇ ಭುವನದಲಿ ಜೀವ
ಪ್ರಸರವಿದ್ದುದು ದುಃಖಸೌಖ್ಯದ ತಾರತಮ್ಯತೆಯಲಿ
ಉಸುರು ಪಸರಣವಿಲ್ಲದೆನ್ನು
ಬ್ಬಸದ ಭೀತಿಯು ಬೇಗೆ ಮಿಗೆ ದಾ
ಹಿಸುವುದೈ ಕಾರುಣ್ಯನಿಧಿಯೆಂದೊರಲಿದಳು ತರಳೆ ೧೨೮

ನಂದಗೋಪ ಕುಮಾರ ಗೋಪೀ
ವೃಂದ ವಲ್ಲಭ ದೈತ್ಯಮಥನ ಮು
ಕುಂದ ಮುರಹರ ಭಕ್ತವತ್ಸಲ ಘನ ಕೃಪಾಜಲಧೆ
ನೊಂದೆನೈ ನುಗ್ಗಾದೆನೈ ಗೋ
ವಿಂದ ಕೃಪೆ ಮಾಡೆಕಟೆನುತ ಪೂ
ರ್ಣೇಂದುಮುಖಿ ಹಲುಬಿದಳು ಬಲು ತೆರದಿಂದಲಚು ತನ ೧೨೯

ಇತ್ತ ದ್ವಾರಾವತಿಯೊಳಗೆ ದೇ
ವೋತ್ತಮನು ಭಕುತರಿಗೆ ತನ್ನನು
ತೆತ್ತು ಬದುಕುವನೆಂಬ ಪರಮ ವ್ರತದ ನಿಷ್ಠೆಯನು
ಚಿತ್ತದಲಿ ನೆಲೆಗೊಳಿಸಿ ರುಕ್ಮಿಣಿ
ಸತ್ಯಭಾಮೆಯರೊಳು ಸಮ್ಮೇಳದ
ನೆತ್ತ ಸಾರಿಯ ಹರಹಿ ಹಾಸಂಗಿಯನು ದಾಳಿಸುತ ೧೩೦

ಕೇಳಿದನು ಮುರವೈರಿ ತನ್ನಯ
ಮೇಳದೈವರ ಸತಿಯ ಹುಯ್ಯಲ
ನಾಳಿನೊಂದಪಮಾನವಾಳ್ವಂಗೆಂಬ ನುಡಿಯಿಂದ
ಕೋಳುಹೋದುವೆ ಪಾಂಡುಪುತ್ರರ
ಬಾಳುವೆಗಳಕಟೆನುತ ಲಕ್ಷ್ಮೀ
ಲೋಲ ಚಿಂತಿಸಿ ನುಡಿದ ರುಕ್ಮಿಣಿದೇವಿಗೀ ಹದನ ೧೩೧

ಕ್ರೂರ ದುರ್ಯೋಧನನು ದ್ರುಪದ ಕು
ಮಾರಿ ಪಾಂಚಾಲೆಯನು ಸಭೆಯಲಿ
ಸೀರೆಯನು ಸುಲಿಯಲ್ಕೆ ಕಾಯ್ದೈ ಕೃಷ್ಣಯೆಂದೆನುತ
ನಾರಿಯೊರಲುತ್ತಿಹಳು ವೃಟ್ಟಾ
ಸೀರೆ ಸೆಳೆಯಲು ಬಳಿಕಲಕ್ಷಯ
ಸೀರೆಯಾಗಲಿಯೆಂದ ಗದುಗಿನ ವೀರ ನಾರಯಣ ೧೩೨

## ಹದಿನೈದನೆಯ ಸಂಧಿ

ಸೂ. ಸೋಲದಲಿ ಮನನೊಂದ ಧರಣೀ
ಪಾಲರನು ಸಂತೈಸಿಯಂಧ ನೃ
ಪಾಲ ಕಳುಹಿದರಿವರು ಹೊರವಂಟರು ಪುರಾಂತರವ

ನಿಯತಮತಿ ಚಿತ್ತವಿಸು ಜನಮೇ
ಜಯ ಮಹೀಪತಿ ದೇವತಾ ಭ
ಕ್ತಿಯಲದೇನಾಶ್ಚರ್ಯವೊ ಶಿವಶಿವಾ ಮಹಾದೇವ
ಜಯ ಜಯೆಂದುದು ನಿಖಿಳಜನ ಝಾ
ಡಿಯಲಿ ಝೋಂಪಿಸಿ ಸೆಳೆವ ಸೀರೆಗೆ
ಲಯವ ಕಾಣೆನು ಕರುಣವೆಂತುಟೋ ದೇವಕೀಸುತನ ೧

ಉಗಿದು ಹಾಯ್ಕುವ ಖಳನ ನಿಡುದೋ
ಳುಗಳು ಬಳಲಿದವಳ್ಳೆ ಹೊಯ್ದವು
ಧಗೆಯ ಡಾವರವಾಯ್ತು ಬಹಳ ಸ್ವೇದಜಲ ಜಡಿಯೆ
ತೆಗೆದು ನಿಂದನು ಸೀರೆಯೊಟ್ಟಿಲು
ಗಗನವನು ಗಾಹಿಸಿತು ಗರುವೆಯ
ಬಗೆಗೆ ಬೀಸರವಿಲ್ಲ ಬೆರಗಾದುದು ಮಹಾಸ್ಥಾನ ೨

ಆ ಮಹಾಸತಿ ಶಿವ ಶಿವಾ ಲ
ಜ್ಜಾಮಹೋದಧಿ ಬತ್ತುವುದೆ ನಿ
ರ್ನಾಮರೇ ಕುಂತೀಸುತರು ಪಥ್ಯರೆ ಪರಾಭವಕೆ
ಆ ಮುಕುಂದನ ದಿವ್ಯನಾಮ
ಪ್ರೇಮರಸಕಿದು ಸಿದ್ಧಿಯೆಂದೆನ
ಲಾ ಮಹಾಸ್ಥಾನದಲಿ ಬೆಳೆದುದು ಬೆರಗು ಬಿಂಕದಲಿ ೩

ಅಹಹ ದೈವಪ್ರೇಮವಿದೆಲಾ
ಮಹಿಳೆಯಲಿ ಮಾನವರ ಕೃತಿ ಗೆಲ
ಬಹುದೆ ಗರುವೆಯ ಗಾಹಿಸಿತು ಗೋವಿಂದನಭಿಧಾನ
ಅಹಿತವಹ ಕುರುರಾಜಕುಲ ಘನ
ಗಹನ ಭೀಮ ಧನಂಜಯಾದ್ಯರ
ವಿಹರಣದಲಿ ವಿನಾಶವಹುದೆಂದುದು ಬುಧಸ್ತೋಮ ೪

ಬೆಗಡಿನಲಿ ಮುಂದಖೇದ ನಯನಾಂ
ಬುಗಳೊಳಾನಂದಾಶ್ರು ಶೋಕದ
ಬಗೆಯೊಳುಬ್ಬಿದ ನಗೆಯಲಾ ಸ್ವೇದದಲಿ ರೋಮಾಂಚ
ದುಗುಡದಲಿ ಪರಿತೋಷ ಕಂದಿದ
ಮೊಗದಲುಜ್ವಲವೃತ್ತಿ ಭೀಷ್ಮಾ
ದಿಗಳೊಳಗೆ ಪಲ್ಲಟಿಸುತಿರ್ದುದು ಪಡಿಮುಹೂರ್ತದಲಿ ೫

ನೆನೆದೆ ನೀನನುಚಿತವನೀ ಹೊ
ತ್ತಿನಲಿ ದ್ರುಪದಾತ್ಮಜೆಯ ದೈವದ
ನೆನಹಿನಲಿ ದೂರಡಗಿತರೆಬೆಳೆಸಾದುದಪಕೀರ್ತಿ
ವನಿತೆಯನು ಬಿಡು ಪಾಂಡು ನೃಪ ನಂ
ದನರ ನೀನೊಲಿದಂತೆ ಮಾಡುವು
ದನುನಯವು ನಿನಗೆಂದು ನುಡಿದನು ವಿದುರ ಕುರುಪತಿಗೆ ೬

ದೈವವೀ ದ್ರೌಪದಿಗೆ ಸೀರೆಯ
ನೀವುದಲ್ಲದೆ ಬಿಡಿಸಲಾಪುದೆ
ದೈವತೊತ್ತಿರ ಹುರುಡುಗೆಲಸದ ಹಿಂಡುಗೂಟದಲಿ
ದೈವವಿವಳಿಗೆ ತಾನಲೇ ತ
ನ್ನೈವರಿಕ್ಕಿದ ಮಾತು ರಿಪುಗಳ
ಮೈವಳಿಯ ನುಡಿಗಾರ ನೀ ಸಾರೆಂದನಾ ಭೂಪ ೭

ನೀತಿ ಮರುಳನು ವಿದುರನೀತನ
ಮಾತಿನಲಿ ಫಲವೇನು ತೊತ್ತಿರೊ
ಳೀ ತಳೋದರಿ ಬೆರೆಸಿ ಬದುಕಲಿ ಕರ್ಣ ಕಳುಹಿವಳ
ಈ ತತುಕ್ಷಣ ದೃಷ್ಟಿಬಂಧನ
ವೇತರಲಿ ಮಾಡಿದಳೊ ಲಜ್ಜಾ
ಜಾತವುಳಿದುದು ಬೆಳೆದ ಸೀರೆಯ ಕಟ್ಟಿ ಹೊರಿಸೆಂದ ೮

ಇವಳಲೇ ನಮ್ಮಿನಿಬರಭಿಮಾ
ನವನು ಸೆಳೆದಳಲಾ ಸ್ವಯಂವರ
ಭವನದಲಿ ಭಂಗಿಸಿದಳೆಮ್ಮನು ಸಭೆಯೊಳೆಡಹಿದರೆ
ಇವಳು ಬಹುವಿಧ ಪುಣ್ಯಶಕ್ತಿಯೊ
ಳಿವಗೆ ಸಿಲುಕಿದಳಿಂದು ತೊತ್ತಿರ
ಸವಡಿವೇಟದ ಸವಿಯ ಸುರಿಯಲಿ ಭಂಡ ಮಿಂಡರಲಿ ೯

ಬೂತುಗೆಡೆವನೊಳೆಂಬೆನೇ ಮರು
ಮಾತನೆಲೆ ಗಾಂಗೇಯ ತಮ್ಮದು
ನೀತಿಯೇ ತಾನಿವರ ಧನವೇ ಧರ್ಮಮಾರ್ಗದಲಿ
ಸೋತನರಸನು ತನ್ನನೆನ್ನನು
ಸೋತುದನುಚಿತವೆಂಬ ಬೆಡಗಿನ
ಮಾತನರಿಯದ ಮೂಢರನು ಸುಡಲೆಂದಳಿಂದುಮುಖಿ ೧೦

ಸೋತುದಿಲ್ಲಾ ನಿನ್ನ ಸೋತುದ
ನೀತಿಯೆಂಬುದು ವಿಹಿತವೇ ತಾ
ನೀತ ನುಡಿಯಲಿ ಧರ್ಮಪುತ್ರನು ಸತ್ಯಸಂಧನಲೆ
ನೀ ತಳೋದರಿ ತರಿಚುಗೆಡದೀ
ಮಾತಿನಲಿ ತಾ ಬಿಡುವೆನೇ ನಿ
ನ್ನಾತಗಳ ನುಡಿಸೆಂದು ಖಳ ಧಟ್ಟಿಸಿದನಂಗನೆಯ ೧೧

ಜೀಯ ಮಾತೇನಿವಳೊಡನೆ ರಿಪು
ರಾಯರಿಗೆ ದಾಸತ್ವವಾಗಲು
ಬಾಯಬಡಿಕೆಯದಾರೊಡವೆ ತದ್ದಾಸ ಧನವಲ್ಲ
ಆಯತಾಕ್ಷಿಯನಿನ್ನು ನಿಮ್ಮ ಪ
ಸಾಯಿತೆಯರಲಿ ಕೂಡು ತೊತ್ತಿರ
ಲಾಯಬೇಡುಪಕಾರವೆಂದೆರಗಿದನು ಕಲಿಕರ್ಣ ೧೨

ಎಲೆಗೆ ಭಜಿಸಾ ಕೌರವಾನ್ವಯ
ತಿಲಕನನು ನಿನ್ನವರ ಮರೆ ನಿ
ನ್ನುಳಿವ ನೆನೆಯಿಾ ಸಮಯದಲಿ ಕಾಲೋಚಿತ ಕ್ರಮವ
ಬಳಸು ನೀನೆನೆ ಗಜರಿದಳು ಕುರು
ತಿಲಕನನು ತರಿದೊಟ್ಟಿ ರಣದಲಿ
ತಿಳಿರಕುತದಲಿ ದಣಿವನನಿಲಜನೆಂದಳಿಂದುಮುಖಿ ೧೩

ಏಕೆ ಕೆಣಕಿದೆ ಕರ್ಣ ಬೂತಿನ
ಬೀಕಲಿನ ಬದಗಿಯನು ಸಮರದೊ
ಳೀಕೆಯನಿಲಜ ಮುರಿವನೆನುತಪೆ ತನ್ನ ಮುಂಜೆರಗ
ನೂಕಿ ತೊಡೆಗಳ ತೋರಿಸುತ ಲೋ
ಕೈಕ ವೀರನನೇಡಿಸಿದರ
ವ್ಯಾಕುಲನ ಮನ ಖಂಡಿಯೋದುದು ಖತಿಯ ಹೊಯ್ಲಿನಲಿ ೧೪

ನೋಡಿದನು ಪರಿಘವನು ಕಡೆಗ
ಣ್ಣಾಡಿತಿವದಿರ ಮೇಲೆ ಮೈಯಲಿ
ಝಾಡಿಗೆದರಿತು ರೋಮ ಝಳಪಿಸಿತರುಣಮಯ ನಯನ
ಮೂಡಿತುರಿ ಸುಯ್ಲಿನಲಿ ರೋಷದ
ಬೀಡು ಭೀಮನ ಕಂಡು ಧರ್ಮಜ
ಬೇಡಿಕೊಂಡನು ತನ್ನ ಕೊರಳಿನ ಬೆರಳ ಸನ್ನೆಯಲಿ ೧೫

ಸೈರಿಸಕಟಾ ಭೀಮ ರೋಷ ವಿ
ಕಾರಕಿದು ಹೊತ್ತಲ್ಲ ಸರ್ವ ವಿ
ಕಾರದಲಿ ಕೌರವರು ಮೆರೆಯಲಿ ಕಾಲವವರದಲ
ಧಾರುಣೀಶನ ಧರ್ಮತತ್ವದ
ಸಾರವುಳಿದರೆ ಸಾಕು ಮಿಕ್ಕಿನ
ನಾರಿ ಧನವಭಿಮಾನ ಬೇಯಲಿಯೆಂದನಾ ಪಾರ್ಥ ೧೬

ಕ್ಷಮೆಯೆ ಧನವೆಂದಿದ್ದೆ ವಿವಳಲಿ
ಮಮತೆಯನು ಮಾಡಿದೆವೆ ನಾವು
ಘುಮಿಸುವರೆ ದೇವೇಂದ್ರ ತೃಣವಿವನಾವ ಪಾಡೆವಗೆ
ರಮಣಿಯಾಡಿದ ಧರ್ಮಪದವಿದು
ಕುಮತಿಗಳ ಮತವಲ್ಲದಿದ್ದರೆ
ತಮಗೆ ದಾಸಿಯೆ ದ್ರುಪದನಂದನೆಯೆಂದನಾ ಪಾರ್ಥ ೧೭

ಶ್ರುತಿ ತದರ್ಥ ಸ್ಮೃತಿಗಳಲಿ ಪಂ
ಡಿತರು ಪರಿಣತರುಂಟು ಪಾರ್ಥ
ಸ್ಮೃತಿಯ ಬಳಿಕಾದರಿಸುವೆವು ನಿವಗಾದ ದಾಸ್ಯದಲಿ
ಕೃತಕವಿಲ್ಲದೆ ನಡೆದು ತೋರಾ
ಸತಿಯ ಸೆರೆಯನು ಬಿಡಿಸಲಿವರಿಮ್ಮಾ
ಕ್ಷಿತಿಯೊಳಾರುಂಟೆಂದು ಕೌರವರಾಯ ಗರ್ಜಿಸಿದ ೧೮

ಭಾಷೆಯೇಕಿವನೊಡನೆ ದ್ರೌಪದಿ
ದಾಸಿಯಲ್ಲೆಂಬವನ ದಿವಸವ
ದೇಸು ಬಲ ಹೋ ಪೂತು ಮಝು ತಾನಿಂದ್ರಸುತನೆಂಬ
ಐಸರಲಿ ದೇವೇಂದ್ರ ತೃಣ ಗಡ
ವೈಸಲೇ ನೀ ಮುನಿದಡೇ ನುಡಿ
ದಾಸಭಾವದ ಬಣಗುಗಳಿಗೇಕೆಂದನಾ ಕರ್ಣ ೧೯

ನೂಕಿಸಾ ತೊತ್ತಿರ ಮನೆಗೆ ತಡ
ವೇಕೆ ತರುಣಿಯನಿನ್ನು ನೀನು ವಿ
ವೇಕದಲಿ ನಿನ್ನಂತೆ ತೆಗೆ ಸಾಕಿವರ ಮಾತೇನು
ಈ ಕುಠಾರರ ಕಳುಹಿ ಕಳೆ ತಾ
ವೇಕೆ ನೃಪಸಭೆಯಲಿ ವರಾಸನ
ವೇಕೆನುತ ಕುರುಪತಿಗೆ ನುಡಿದನು ಕರ್ಣ ಖಾತಿಯಲಿ ೨೦

ಅಹುದಲೇ ಬಳಿಕೇನು ನೀನತಿ
ಬಹಳ ಮತಿಯೈ ಕರ್ಣ ನೀನೇ
ಕುಹಕ ಕೋಟಿಯನೆತ್ತ ಬಲ್ಲೆ ವೃಥಾಭಿಮಾನಿಗಳ
ರಹಣಿ ಸಾಕಂತಿರಲಿ ತೊತ್ತಿರ
ಸಹಚರರ ಸೂಳಾಯಿತರ ಕರೆ
ಮಹಿಳೆಯನು ನೂಕೆಂದು ದುಶ್ಶಾಸನಗೆ ನೇಮಿಸಿದ ೨೧

ಸುಳಿವ ಹುಲ್ಲೆಯ ಸೋಹಿನಲಿ ಕು
ಕ್ಕುಳಿಸಿದರೆ ಕುಕ್ಕುರನ ಕೈಯಲಿ
ತಳುವಹುದೆ ಜನಮೇಜಯ ಕ್ಷಿತಿಪಾಲ ನಿನ್ನವರ
ಬಳಲಿಕೆಯನೇನೆಂಬೆನೈ ಹಿಡಿ
ದೆಳೆಯೆ ಹಲುಬಿದಳಕಟ ರಾಯನ
ಲಲನೆಗೀ ವಿಧಿಯೇ ಮಹಾದೇವೆಂದುದಖಿಳಜನ ೨೨

ಮಾಣಿಸೈ ಗಾಂಗೇಯ ಗುರು ನಿ
ಮ್ಮಾಣೆಯಡಿ ಕೃಪ ಕೃಪೆಯ ಮಾಡೈ
ರಾಣಿವಾಸಂಗಳಿರ ನಿಲಿಸಿರೆ ನಿಮ್ಮ ಮೈದುನನ
ಪ್ರಾಣವಿದ ಕೊಳ ಹೇಳಿರೌ ಸಾ
ಕೂಣೆಯವ ಹೊರಲಾರೆನೆನುತಾ
ರಾಣಿ ಹಲುಬಿದಳೊಡೆಮುರುಚಿ ಹೆಣಗಿದಳು ಖಳನೊಡನೆ ೨೩

ಮಾವ ನಿಮ್ಮಯ ನೇತ್ರವಂತ
ರ್ಭಾವದಲಿ ಬೆರಸಿದೊಡೆ ವಿಜ್ಞಾ
ನಾವಲಂಬನ ದಿಟ್ಟಿ ಬೆಂದುದೆ ನಿಮ್ಮ ಹೃದಯದಲಿ
ದೇವಿಯರಿಗಿದು ಸೊಗಸಲಾ ಸ
ಖ್ಯಾವಳಿಗೆ ಸೇರುವುದಲಾ ನಿ
ರ್ಜೀವರಾದಿರೆ ನೀವೆನುತ ಹಲುಬಿದಳು ಲಲಿತಾಂಗಿ ೨೪

ಕ್ಷಿತಿಯೆ ಬಿಡಿಸಾ ಸೆರಗನೆಲೆ ಪಾ
ರ್ವತಿಯೆ ತನ್ನದು ಧರ್ಮವಾದೊಡೆ
ಗತಿ ತನಗೆ ನೀವಾಗಿರೌ ಕಮಲಾದಿಶಕ್ತಿಗಳೆ
ಸತಿಯಹಲ್ಯಾದಿತಿ ವರಾರುಂ
ಧತಿ ಮಹಾ ಮಾಯಾದಿ ದೇವ
ಪ್ರತತಿ ಬಿಡಿಸಿರೆ ಸೆರಗನೆಂದೊರಲಿದಳು ಪಾಂಚಾಲೆ ೨೫

ಅಂಧನೊಬ್ಬನೆ ಮಾವ ನೀವೇ
ನಂಧರಾದಿರೆ ಪಾಂಡು ಕರುಣಾ
ಸಿಂಧು ನೀ ಸೈರಿಸುವುದೇ ತನ್ನೀ ವಿಪತ್ತಿನಲಿ
ಅಂಧಕಾಸುರಮಥನ ನೀನೇ
ಬಂಧಿಸಿದೆಲಾ ಪೂರ್ವ ವರ ಸಂ
ಬಂಧವನು ನೀ ಸೆರಗ ಬಿಡಿಸೆಂದೊರಲಿದಳು ತರಳೆ ೨೬

ಸೊಸೆಯಲಾ ದೇವೇಂದ್ರಯೆನ್ನಯ
ಘಸಣಿ ಯಾರದು ಹಿರಿಯ ಮಾವನ
ವಶವಲಾ ತ್ರೈಜಗದ ಜೀವರ ಜೀವ ವಿಭ್ರಮಣ
ಉಸುರು ನಿನ್ನಾಧೀನವೀ ದು
ರ್ವ್ಯಸನಿಗಳ ಕೊಂಡಾಡುವರೆ ಕರು
ಣಿಸು ಸಮೀರಣಯೆಂದು ಹಲುಬಿದಳಾಶ್ವಿನೇಯರಿಗೆ ೨೭

ಮಾವದಿರು ಮೊದಲಾದ ದಿಕ್ಪಾ
ಲಾವಳಿಗೆ ನಮಿಸಿದೆನು ನೈದಿಲ
ತಾವರೆಯ ಮಿತ್ರರಿಗೆ ಮುಂದೆಯೊಳಿಟ್ಟೆನಂಜುಳಿಯ
ಕಾವುದೆನ್ನನು ಹೆಂಗುಸಲ್ಲಾ
ಹಾವು ಹಲಬರ ನಡುವೆ ಸಾಯದು
ದೇವರಿಗೆ ದೂರೈದಲೆಂದೊರಲಿದಳು ಲಲಿತಾಂಗಿ ೨೮

ಬಾಯ ಬಿಡಲೇಕಕಟ ಬಳಲಿದೆ
ತಾಯೆ ಕೈದೋರಿಸರು ನಿನ್ನಯ
ರಾಯರೈವರು ಕೆಲಬಲದ ಜನರೇನು ಮಾಡುವರು
ನ್ಯಾಯ ನಿನ್ನದು ದೈವದೊಲುಮೆಯ
ದಾಯ ತಪ್ಪಿತು ಬರಿದೆ ಧೈರ್ಯದ
ಬೀಯ ಮಾಡದಿರೆಂದು ನುಡಿದನು ವಿದುರನಂಗನೆಗೆ ೨೯

ಎಲೆಗೆ ನಿನ್ನವರೇನ ಮಾಡುವ
ರೊಲೆಯೊಳಡಗಿದ ಕೆಂಡವಿವರ
ಗ್ಗಳಿಕೆ ನಂದಿದುದೆನುತ ಮುಂಜೆರಗೆತ್ತಿ ಮಾನಿನಿಗೆ
ಖಳನು ತೊಡೆಗಳ ತೋರಿಸಿದೊಡತಿ
ಮುಳಿದು ಕೊಟ್ಟಳು ಶಾಪವನು ನಿ
ನ್ನಳಿವು ತೊಡೆಯಲಿ ಮುಗಿವುದೆಂದಳು ಮುಗುದೆ ಖಾತಿಯಲಿ ೩೦

ಕಡಲ ತೆರೆಗಳ ತರುಬಿ ತುಡುಕುವ
ವಡಬನಂದದಿ ಮೇಘಪಟಲವ
ನೊಡೆದು ಸೂಸುವ ಸಿಡಿಲಿನಂದದಿ ಸಭೆಯೊಳಡಹಾಯ್ದು
ಕುಡಿ ಕುಠಾರನ ರಕುತವನು ತಡೆ
ಗಡಿ ಸುಯೋಧನನೂರುಗಳನಿ
ಮ್ಮಡಿಸಿ ಮುನಿಯಲಿ ಧರ್ಮಸುತನೆನುತೆದ್ದನಾ ಭೀಮ　೩೧

ಹೆದರು ಹೊಕ್ಕುದು ಸಭೆಗೆ ಕೌರವ
ನೆದೆ ಬಿರಿದುದಾಸ್ಥಾನ ಜಲನಿಧಿ
ಕದಡಿತುಕ್ಕಿದ ಬೆರಗಿನಲಿ ಬೆಳ್ಳಾದನವನೀಶ
ಹದನಹುದು ಹಾಯೆನುತಲಿದ್ದರು
ವಿದುರ ಭೀಷ್ಮ ದ್ರೋಣರಿತ್ತಲು
ಕೆದರುಗೇಶದ ಕಾಂತೆ ಹುದಿದಳು ಹರುಷ ಪುಳಕದಲಿ　೩೨

ಒಡೆಯನೈತರಲಿಕ್ಷುದೋಟದ
ಬಡ ನರಿಗಳೋಡುವವೊಲೀಕೆಯ
ಹಿಡಿದೆಳೆವ ಖಳ ಹಾಯ್ದನಾ ಕೌರವನ ಹೊರೆಗಾಗಿ
ನುಡಿ ತರುಣಿ ತನ್ನಾಣೆ ಭೀತಿಯ
ಬಿಡಿಸಿದೆನಲಾ ರಾಯನಾಜ್ಞೆಯ
ತಡಿಕೆವಲೆ ನುಗ್ಗಾಯ್ತು ಹೋಗಿನ್ನೆಂದನಾ ಭೀಮ　೩೩

ಉರಿವ ಕೋಪಾಗ್ನಿಯಲಿ ಕರ್ಣನ
ಶಿರದ ಭಾಂಡದಲಿವನ ನೊರೆ ನೆ
ತ್ತರಿನಲಿವನಗ್ರಜನ ಕೊಬ್ಬಿದ ನೆಣನ ಕೊಯ್ಕೊಯ್ದು
ದುರುಳ ಶಕುನಿಯ ಕಾಳಿಜದೊಳೊಡೆ
ವೆರೆಸಿ ಕುದಿಸಿ ಮಹೋಗ್ರಭೂತದ
ನೆರವಿಗುಣಲಿಕ್ಕುವೆನು ಸತಿ ಕೇಳೆಂದನಾ ಭೀಮ　೩೪

ಕೊಂಬೆನೇ ಧರ್ಮಜನ ಧರ್ಮದ
ಡೊಂಬನೀ ಮುದುಗುರುಡನಿಕ್ಕಿದ
ನಂಬುಗೆಯ ವಿಷವ್ಯಸಲೇ ತಲೆಗೇರಿತಗ್ರಜನ
ಡೊಂಬಿಗರ ಡಾವರಿಗರಿವದಿರ
ತಿಂಬೆನೀಗಳೆ ತರುಣಿ ಕೇಳೆನು
ತಂಬುಜಾಕ್ಷಿಯ ಸಂತವಿಟ್ಟನು ಕುರುಳ ನೇರಿಸುತ　೩೫

ಇಳಿದನರ್ಜುನನಾ ಸಭಾಮಂ
ಡಲದ ವೇದಿಯನಹಹ ಧರ್ಮಜ
ನುಳಿವನೇ ನುಡಿಯೆಡಹಿದರೆ ಸಿಗುರೇಳ್ಗು ಸದ್ಗುಣಕೆ
ಕಳವಳದ ಕಾಹುರದ ಕಾಲುವೆ
ಗೊಳಗು ಕೊಡದಿರು ಭೀಮ ರಿಪುಗಳ
ಹಿಳಿವಡಿದು ಹೊತ್ತಲ್ಲೆನುತ ಹಿಡಿದನು ವೃಕೋದರನ　೩೬

ಮಾಣಲದು ಕೌರವರ ನೂರ್ವರ
ಗೋಣ ಬನ ಕಾಳಗದೊಳೆನ್ನಯ
ಕೇಣಿ ತನ್ನಯ ಗದೆಗೆ ದುರಿಯೋಧನನ ತೊಡೆಗಳಿಗೆ
ವಾಣಿಯವು ದುಶ್ಯಾಸನನ ತನಿ
ಶೋಣಿತವ ತಾ ಕುಡಿಯದಿರೆ ನಿ
ಸ್ಸಾಣೆ ಸೈರಣೆಗಿದುವೆ ಫಲವೆಂದೊದರಿದನು ಭೀಮ　೩೭

ಧರಣಿ ಜಲ ಪಾವಕ ಸಮೀರಾ
ದ್ಯರುಗಳರಿತಿರಿ ಶಕ್ರ ನೈಋತ
ವರುಣ ವಾಯು ಕುಬೇರ ಯಮರೆಂಬಖಿಳ ದಿಗಧಿಪರು
ಬರೆದುಕೊಂಡಿರಿ ಭಾಷೆಯನು ಸುರ
ನರ ಫಣಿವ್ರಜವೆಂಬ ಭೀಮನ
ಧರಧುರದ ಧಟ್ಟಣೆಗೆ ಧೃತಿಗೆಟ್ಟುದು ಕುರುಸ್ತೋಮ　೩೮

ಬರಸಿರೈ ಭಾಷೆಯನು ದೇವಾ
ಸುರರ ಸಾಕ್ಷಿಯಲಾಯ್ತು ಕರ್ಣನ
ಕೊರಳಿಗೆನ್ನಯ ಬಾಣಕುಂಗುರವುಡಿಕೆಯಿಂದಿನಲಿ
ಸುರ ನರೋರಗರರಿದಿರೆಂದ
ಬ್ಬರಿಸಿದನು ಕಲಿಪಾರ್ಥ ಶಕುನಿಯ
ಶಿರಕೆ ಕೊಟ್ಟೆನು ಸಂಚಕಾರವನೆಂದ ಸಹದೇವ　೩೯

ಅರಸ ಕೇಳಾಶ್ಚರ್ಯವನು ಗಜ
ಪುರದೊಳಗೆ ನೆಲ ಬಾಯ ಬಿಟ್ಟುದು
ಸುರಿದುದರುಣಾಂಬುವಿನ ಮಳೆ ತತ್ಪುರದ ಮಧ್ಯದಲಿ
ನರಿಗಳವನಿಪನಗ್ನಿ ಹೋತ್ರದೊ
ಳೊರಲಿದವು ಸಸ್ವೇದದಲಿ ಹೂಂ
ಕರಿಸುತಿರ್ದವು ದೇವತಾ ಪ್ರತಿಮೆಗಳು ನಗರಿಯಲಿ　೪೦

ಉಗುಳಿದವು ಕುಳುಗಿಡಿಗಳನು ಕೈ
ದುಗಳು ವಾರುವ ಪಟ್ಟದಾನೆಗ
ಳೊಗುಮಿಗೆಯ ಕಂಬನಿಗಳಭ್ರದಿ ಧೂಮಕೇತುಗಳು
ನೆಗಳಿದವು ಬಿರುಗಾಳಿ ಗಿರಿಗಳ
ಮಗುಚಿ ಮುರಿದವು ದೇವತಾ ಭವ
ನಗಳ ಶಿಖರವನಂತವದ್ಭುತವಾಯ್ತು ನಿಮಿಷದಲಿ　೪೧

ಬಾರಿಸಿತು ದೆಸೆದೆಸೆಗಳಲಿ ಹಾ
ಹಾ ರವಾವಿರ್ಭಾವ ತೊಳಗಿರೆ
ತಾರಕೆಗಳಿನ ಬಿಂಬವನು ರ್ಝೊಂಪಿಸಿದನಾ ರಾಹು
ತೋರಣದಲುರಿ ತಳಿತು ರಾಜ
ದ್ವಾರ ಹೊಗೆದುದು ದೆಸೆಗಳಂಬರ
ಧಾರುಣಿಯೊಳುತ್ಪಾತ ಬಿಗಿದುದು ಮೊಗೆದುದದ್ಭುತವ　೪೨

ನಡುಗಿತಿಳೆ ನಡು ಹಗಲುಗತ್ತಲೆ
ಯಡಸಿತಾಕಾಶದಲಿ ಹೆಮ್ಮರ
ನುಡಿದು ಬಿದ್ದುವು ಸಲಿಲವುಕ್ಕಿತು ಕೂಡೆ ಕೆರೆತೊರೆಯ
ಉಡಿದವವದಿರ ಕೈಯ್ಯ ಕೈದುಗ
ಳೊಡನೊಡನೆ ಸಿಡಿಲೆರಗಿತಾ ಸಭೆ
ಸೆಡೆದುದಲ್ಲಿಯದಲ್ಲಿ ಹುದುಗಿತು ಭೀತಿಗರ ಹೊಡೆದು　೪೩

ಅಹಹ ಭೂತಕ್ಷೋಭವಿದು ನಿ
ರ್ದಹಿಸುವುದು ಕುರುಕುಲವನಕಟೀ
ಮಹಿಳೆಯೊರಲಿದಳಮರ ನಿಕರಕೆ ದೈವಕೃತವಿದಲೆ
ಕುಹಕಿ ಮಕ್ಕಳನಿಕ್ಕಿ ಮೌನದೊ
ಳಿಹರೆ ಬಾ ಧೃತರಾಷ್ಟ್ರ ಪಾಂಡವ
ಮಹಿಳೆಯನು ಸಂತೈಸು ನಡೆ ನಡೆಯೆಂದನಾ ಭೀಷ್ಮ　೪೪

ಇದಕೆ ನಿಸ್ಸಂದೇಹವೇ ವರ
ಸುದತಿಯನು ನೀ ಬೇಡಿಕೊಳು ಯು
ಜ್ಞದಲಿ ಪಾವಕಗುದಿಸಿದಳು ಪಾಂಚಾಲೆ ಮಾನಿನಿಯೆ
ಇದು ಭವತ್ಸಂತಾನ ವಿಲಯಾ
ಸ್ಪದ ಕಣಾ ನಡೆ ಪಾಪಿಯೆಂದಾ
ವಿದುರ ಗುರು ಕೃಪರೌಕಿದರು ಧೃತರಾಷ್ಟ್ರ ಭೂಪತಿಯ ೪೫

ಖೇದ ಮಿಗೆ ನಡೆತಂದು ನೃಪತಿ ತ
ಳೋದರಿಯ ನುಡಿಸಿದನು ಮಗಳೆ ವಿ
ಷಾದವನು ಬಿಡು ಮಾತ ಮನ್ನಿಸು ಮಾವ ನಾ ನಿನಗೆ
ಈ ದುರಾತ್ಮರ ಮಾತು ಬೇಡ ವಿ
ಭೇದವೇ ದುಸ್ಸಳೆಗೆ ನಿನಗೆಂ
ದಾದರಿಸಿ ನುಡಿದನು ವಿಪತ್ತಿನಲಾ ಮಹಾಸತಿಯ ೪೬

ಮಗಳಹೆನು ಸೊಸೆಯಹೆನು ನಿಮ್ಮಯ
ಮಗನ ಕಣ್ಣಿಗೆ ಕಾಳಕೂಟದ
ಮಗಳೊ ಸೊಸೆಯೋ ನಾದಿನಿಯೊ ಬೆಸಗೊಳ್ಳಿ ನಿಮ್ಮವನ
ಅಗಡು ಮಾಡಿದ ನಿಮ್ಮ ಮಕ್ಕಳ
ವಿಗಡತನಕಂಜಿದರೊ ದುರಿತದ
ಸೊಗಡಿಗಂಜಿದರೋ ಪೃಥಾ ಸುತರೆಂದಳಿಂದುಮುಖಿ ೪೭

ಧರ್ಮ ನಿಮ್ಮದು ತಾಯೆ ಕಿಲ್ಬಿಷ
ಕರ್ಮವೆಮ್ಮದು ಲೋಕವರಿಯಲು
ನಿರ್ಮಲರು ನೀವ್ ಪಾಪ ಪಂಕಿಲ ಹೃದಯರಾವ್ ಜಗಕೆ
ದುರ್ಮತಿಗಳಿವದಿರ ಕುಚೇಷ್ಟೆಯ
ನೆಮ್ಮನೀಕ್ಷಿಸಿ ಮರೆ ಮಗಳೆ ಸ
ದ್ಧರ್ಮಮತಿಗಳು ನೀವೆನುತ ತಿಳುಹಿದನು ದ್ರೌಪದಿಯ ೪೮

ದುರುಳರೆನ್ನವದಿರು ದುರಂತಃ
ಕರಣರಾವ್ ದುಶ್ಚೇಷ್ಟೆಯೆಮ್ಮದು
ದುರಭಿಮತ ದುಷ್ಪೂರ್ವರೆನ್ನ ಕುಮಾರರಭಿಧಾನ
ಕರುಣೆಗಳು ಕಮನೀಯ ಗುಣ ಬಂ
ಧುರರು ಶೌರ್ಯಬಲ ಪ್ರಭಾವೋ
ತ್ತರರು ನಿನ್ನವರೆಂದು ನಯದಲಿ ತಿಳುಹಿದನು ಸತಿಯ ೪೯

ತಾಯೆ ಬೇಡೌ ವರವ ತಾನ
ನ್ಯಾಯದಲಿ ನಿಮ್ಮನು ನಿರರ್ಥಕ
ನೋಯಿಸಿದೆನದ ನೆನೆಯದಿರಿ ಸರ್ವಾಪರಾಧವನು
ದಾಯಗೆಡೆ ನಿನ್ನವರು ಕೊಲುವರೆ
ಕಾಯಲಾಪವರುಂಟೆ ವರ ಸ
ತ್ಯಾಯುಧರಲೇ ನೀವೆನುತ ತಿಳುಹಿದನು ಧೃತರಾಷ್ಟ್ರ ೫೦

ವರನನಿತ್ತಿರೆ ಮಾವ ಭೂಮೀ
ಶ್ವರರ ದಾಸ್ಯವ ಬಿಟ್ಟು ಕಳೆ ಮ
ತ್ತೆರಡನೆಯ ವರವೇನು ವಚನಿಸು ಕೊಟ್ಟೆ ನಾ ನಿನಗೆ
ವರ ವೃಕೋದರ ನಕುಲ ಸಹದೇ
ವರಿಗೆ ಕೊಡಿ ಶಸ್ತ್ರಾಸ್ತ್ರ ಗಜರಥ
ತುರಗ ನಿಕರವನೆಂದಡೆಂದನು ಮತ್ತೆ ಧೃತರಾಷ್ಟ್ರ ೫೧

ವರವೆರಡು ಸಂದವು ಮನೋರಥ
ಭರಿತವಾಗಲಿ ಮತ್ತೆ ಹೇಳೆನೆ
ತರುಣಿಯೆಂದಳು ಧರ್ಮಶಾಸ್ತ್ರ ಪ್ರಕಟ ಪದ್ಧತಿಯ
ವರವು ವೈಶ್ಯರಿಗೊಂದು ನೃಪಸತಿ
ಗೆರಡು ನೃಪರಿಗೆ ಮೂರು ಭೂದೇ
ವರಿಗೆ ನೂರಧಿಕಾರವೆಂದಳು ನಗುತ ಪಾಂಚಾಲೆ ೫೨

ಹಾರಲತಿಶಯ ತೃಷ್ಣೆ ನಾಶಕೆ
ಕಾರಣವಲೇ ಮಾವ ವರವಿದು
ಭಾರಿಯಾದರೆ ಬೇಡ ಲಘುವನು ಕರುಣಿಸುವುದೆನಲು
ಭಾರವಾವುದು ಮಗಳೆ ಕೊಟ್ಟೆನು
ಧಾರುಣೀಪತಿ ಬಿಜಯಮಾಡಲಿ
ವೈರಬಂಧದ ಕಂದು ಕಲೆಯನು ಮರೆದು ಕಳೆಯೆಂದ ೫೩

ಪೂತುರೇ ಪಾಂಚಾಲೆ ಭುವನ
ಖ್ಯಾತೆಯಾದೆಗೆ ಜಾಗು ನಿನ್ನಯ
ಚೈತಲೆಯ ಮಣಿ ಮಾರುವೋದುದ ಮತ್ತೆ ಬಿಡಿಸಿದಲೆ
ಬೀತ ಮರ ಫಲವಾಯ್ತಲಾ ನಿ
ನ್ನಾತಗಳ ಬಹುಖೇದ ಜಲಧಿಗೆ
ಸೇತುವಾದೆಗೆ ನೀನೆನುತ ತಲೆದೂಗಿದನು ಕರ್ಣ ೫೪

ಹೊಕ್ಕಗೂಡಿನ ಹುಲಿಗಳನು ಹೊರ
ಗಿಕ್ಕಿದೆಯಲಾ ಇರುಬಿನಲಿ ಬಿ
ದ್ದಕ್ಕಲಂಗಳ ನೋಯಲೀಯದೆ ಕೆಲಕೆ ತೆಗೆದೆಯಲ
ಸೊಕ್ಕಿದುರು ಮೀನುಗಳ ಗಂಟಲೊ
ಳಿಕ್ಕಿದವಲಾ ಗಾಣ ಗಂಟಲ
ಸಿಕ್ಕ ಬಿಡಿಸಿದೆ ಗರುವೆ ನೀನೆಂದುಲಿದನಾ ಕರ್ಣ ೫೫

ಘುಡುಘುಡಿಸಿದನು ರೋಷವಹ್ನಿಯ
ತಡಿಯ ಹೊಕ್ಕನು ಬಿಗಿದ ಹುಬ್ಬಿನ
ಬಿಡೆಯ ಬವರಿಯ ಉಳಿಯ ಲವಣಿಯ ಲೋಚನ ದ್ವಯದ
ಕಡು ಮುಳಿಸಿನುಬ್ಬಟೆಯ ಮಾರುತಿ
ಕಡುಹಿನಲಿ ಭುಗುಭುಗಿಪ ಭಾರಿಯ
ಕಿಡಿಗೆದರಿ ನೋಡಿದನು ಬಾಗಿಲ ಲಾಳವಿಂಡಿಗೆಯ ೫೬

ಹಗೆಗಳೇ ಕೌರವರು ತೆಗೆ ಬಲು
ವಗೆ ಕಣಾ ಕಾಮಾದಿ ರಿಪುಗಳು
ಸೆಗಳಿಕೆಯ ಸಸಿಯಾಗವೇ ನಿಜ ಸತ್ಯ ಭಾಷೆಗಳು
ಉಗುಳುಗುಳು ರೋಷವನು ರಾಧೆಯ
ಮಗ ವಿಕಾರಿ ಕಣಾ ವೃಕೋದರ
ಬೆಗಡುಗೊಳಿಸದಿರೆಮ್ಮನೆಂದನು ಧರ್ಮನಂದನನು ೫೭

ಬಾ ವೃಕೋದರ ನಕುಲ ಬಾ ಸಹ
ದೇವ ಬಾರೈ ತಮ್ಮ ಫಲುಗುಣ
ದೇವಿಯರು ನೀವ್ ಬನ್ನಿಯೆನಲವನೀಶನೈತಂದು
ಅವುದೈ ಕರ್ತವ್ಯ ನೀವೇ
ದೈವ ಗುರುಪಿತರೆಂದು ಮಿಗೆ ಸಂ
ಭಾವನೋಕ್ತಿಯನಾಡಿದನು ಧೃತರಾಷ್ಟ್ರ ಭೂಪತಿಗೆ ೫೮

ಮಕ್ಕಳೆನಗಲ್ಲವರು ನೀವೇ
ಮಕ್ಕಳೈವರು ಮಗನೆ ನಮ್ಮದು
ಮಕ್ಕಳಾಟಿಕೆಯಾಯ್ತಲಾ ಸೌಬಲನ ದೆಸೆಯಿಂದ
ಮಿಕ್ಕು ನೀ ಸೈರಿಸುವುದೆಮ್ಮದು
ಬಕ್ಕುಡಿಯ ಬೇಳಂಬ ನಿಮ್ಮಲಿ
ಕಕ್ಕುಲಿತೆಯಿಲ್ಲೆಂದು ತೆಗೆದಪ್ಪಿದನು ಧರ್ಮಜನ ೫೯

ಎನ್ನನೀಕ್ಷಿಸಿ ಮಗನೆ ಮರೆ ನಿನ
ಗನ್ಯಳೇ ಗಾಂಧಾರಿ ಪಿತನೆಂ
ದೆನ್ನ ಕಾಬಿರಿ ವೃದ್ಧನೆಂದು ಗತಾಕ್ಷ ತಾನೆಂದು
ಮನ್ನಿಸುವಿರೆಲೆ ಮಕ್ಕಳಿರ ಸಂ
ಪನ್ನಸತ್ಯರು ನೀವು ಕರ್ಮಿಗ
ಳೆನ್ನವರು ದೋಷಾಭಿಸಂಧಿಯ ಮರೆದು ಕಳೆಯೆಂದ ೬೦

ರೂಢಿಗಗ್ಗದ ರಾಜಸೂಯದ
ಲೂಡಿ ನಿರ್ಜರ ಕಟಕವನು ಖಯ
ಖೋಡಿಯಿಲ್ಲದೆ ನಿಲಿಸಿದೈ ತ್ರಿದಿವದಲಿ ಪಾಂಡುವನು
ಮಾಡುವೆಯಲಾ ಮಗನೆಯೆನ್ನೀ
ಗೂಡ ಬಿಸುಟರೆ ಸುರರ ಸಂಗಡ
ವಾಡುವಂತಿರೆ ತನಗೆ ಗತಿ ನೀನಲ್ಲದಾರೆಂದ ೬೧

ಪಾಲಿಸವನಿಯನೆನ್ನ ಮಕ್ಕಳ
ಖೂಳತನವನು ಮನಕೆ ತಾರದಿ
ರಾಲಿಸದಿರಪರಾಧಿ ವಾಚಾಳರ ವಚೋತ್ತರವ
ಕಾಲ ದೇಶಾಗಮದ ನಿಗಮದ
ಡಾಳವರಿದೈಹಿಕ ಪರತ್ರ ವಿ
ಟಾಳಿಸದೆ ನಡೆ ಕಂದಯೆಂದನು ಮರಳಿ ತೆಗೆದಪ್ಪಿ ೬೨

ತರಿಸಿದನು ಮಡಿ ವರ್ಗದಮಲಾಂ
ಬರವನಂಬುಜಮುಖಿಗೆ ರತ್ನಾ
ಭರಣವನು ವಿವಿಧಾನುಲೇಪನ ಚಿತ್ರಸಂಪುಟವ
ಅರಸನಿತ್ತನು ವೀಳಯವ ಕ
ರ್ಪುರದ ತವಲಾಯಿಗಳನಭ್ಯಂ
ತರಕಿವರ ಕಳುಹಿದನು ಗಾಂಧಾರಿಯನು ಕಾಣಿಸಿದ ೬೩

ನೋಡಲಾಗದು ಮಕ್ಕಳಿರ ಕುಲ
ಗೇಡಿಗರ ಕಪಟವನು ನಮ್ಮನು
ನೋಡಿ ಮರೆವುದು ಪಾಂಡುವೆಂದಿಹುದಂಧ ಭೂಪತಿಯ
ನಾಡೆ ನೊಂದೌ ತಾಯೆ ಬಾ ಮಗ
ಮಾಡಿದನುಚಿತ ಕರ್ಮವೆಲ್ಲವ
ಮಾಡಿದೆನು ತಾನೆಂದಳಾ ದ್ರೌಪದಿಗೆ ಗಾಂಧಾರಿ ೬೪

ಮರೆದೆನಾಗಳೆ ವಿಗಡ ವಿಧಿಯೆ
ಚ್ಚರಿಸಿದರೆ ಹರಿಭಕ್ತಿ ಮುಖದಲಿ
ಮುರಿದುದೆಮ್ಮಯ ಪೂರ್ವ ದುಷ್ಪ್ರಾರಬ್ಧ ಕರ್ಮಫಲ
ಹೆರರನೆಂಬುದು ಖೂಳತನವೇ
ನರಿಯದವರೇ ಪಾಂಡುಸುತರೆಂ
ದುರುಬೆಯಲಿ ಬಿನ್ನವಿಸಿದಳು ಗಾಂಧಾರಿಗಬುಜಾಕ್ಷಿ ೬೫

ಸಾಕು ನೇಮವ ಕೊಡಿಯೆನುತ ಕುಂ
ತೀ ಕುಮಾರರು ಬೀಳುಕೊಂಡರು
ನೂಕಿ ಹೊಕ್ಕುದು ದಾರವಟ್ಟದಲಿವರ ಪರಿವಾರ
ತೋಕಿದವು ಸೀಗುರಿಗಳೆಡ ಬಲ
ದಾಕೆಯಲಿ ಪಾಂಡವ ಕುಮಾರಾ
ನೀಕ ಬೆರಸಿತು ಗಜತುರಗ ರಥ ಪಾಯದಳ ಸಹಿತ ೬೬

ಕಳೆದೆವೇ ಖಳರೊಡ್ಡಿದಿರುಬಿನ
ಕುಳಿಗಳನು ಕೈತಪ್ಪ ಮಾಡದೆ
ಸಲಹಿದೆವೆ ಸತ್ಯವನು ಸುಜನರ ಕಲೆಗೆ ಸಂದೆವಲೆ
ಕಳವಳದ ಕಡುಗಡಲೊಳಾಳದೆ
ಸುಳಿದೆವಿತ್ತಲು ಶಿವ ಶಿವಾ ಯದು
ತಿಲಕ ಗದುಗಿನ ವೀರ ನಾರಾಯಣನ ಕರುಣದಲಿ ೬೭

## ಹದಿನಾರನೆಯ ಸಂಧಿ

ಸೂ. ದ್ಯೂತಮುಖದಲಿ ನಿಖಿಳ ರಾಜ್ಯವ
ಸೋತು ತನ್ನನುಜಾತ ಮುನಿ ಸಂ
ಘಾತ ಸಹಿತವನೀಶ ವನವಾಸಕ್ಕೆ ಹೊರವಂಟ ॥

ಕೇಳು ಜನಮೇಜಯ ಧರಿತ್ರೀ
ಪಾಲ ಕುಂತಿಯ ನಂದನರು ತ
ಮ್ಮಾಳೊಡನೆ ಹೇಳಿದರು ಸೌಭದ್ರಾದಿ ತನಯರಿಗೆ
ಬಾಲಕಿಯ ಬೇಳಂಬವನು ಜೂ
ಜಾಳಿಗಳ ಜಜ್ಝಾರತನವನು
ಕೇಳಿ ಬೈದುದು ಸೇನೆ ಖತಿಯಲಿ ಖಳಚತುಷ್ಟಯವ ೧

ಎತ್ತಿತೀ ಪಾಳಯವು ನಿಜಪುರ
ದತ್ತ ತಿರುಗಿತು ಜನಜನಿತ ರಾ
ಜೋತ್ತಮನ ಕಡೆಯಾಯ್ತು ಸತ್ಯಕ್ಷಮೆ ಪರಾಕ್ರಮಕೆ
ಇತ್ತಲಡುಪಾಯ್ಬೀಗೆ ಬಿಸುಗುದಿ
ಕಿತ್ತಡವು ಕಾರ್ಪಣ್ಯ ಕಪಟ ಖ
ಳೋತ್ತಮರ ಹೃದಯದಲಿ ಹುದುಗಿತು ನೃಪತಿ ಕೇಳೆಂದ ೨

ರವಿಯುದಯದಲಿ ಕೌರವೇಂದ್ರನ
ಭವನಕೈತಂದನು ಕುಠಾರರ
ಜವಳಿಯನು ಕರೆಸಿದನು ರಾಧಾಸುತನ ಸೌಬಲನ
ಅವನಿಪತಿ ಗಾಂಧಾರಿಯರು ಪಾಂ
ಡವರ ಮನ್ನಿಸಿ ಕಳುಹಿದರು ತ
ಮ್ಮವನಿಗೈದಿದರೆಂದನಾ ದುಶ್ಶಾಸನನು ನಗುತ ೩

ಮುರಿಮುರಿದು ಪಟ್ಟಣವ ನೋಡುತ
ನರ ವೃಕೋದರರೌಡುಗಚ್ಚುತ
ತಿರುಗಿದರು ಗಡ ಗಾಢ ಬದ್ಧ ಭ್ರುಕುಟಿ ಭೀಷಣರು
ಕರಿಯ ಸೊಗಡಿನ ಮೃಗಪತಿಗೆ ಮೈ
ಪರಿವ ಹಂದಿಗೆ ನೊಂದ ಹಾವಿಂ
ಗರಸ ಮೈ ಚಾಚಿದೆಯಲಾ ನೀನೆಂದನಾ ಶಕುನಿ ೪

ಅವರ ಹೆಂಡಿರ ಮುಂದಲೆಯ ಹಿಡಿ
ದವಗಡವ ಮಾಡಿಸಿದೆ ಪಟ್ಟದ
ಯುವತಿಯಾಕೆಯ ಭಂಗಬಡಿಸಿದೆ ನಿನ್ನಲಾಪನಿತ
ಅವಳ ದೈವೋದಯವದೈಸಲೆ
ಸವಡಿ ಸೀರೆಯ ಸುತ್ತು ಸಡಿಲದು
ನಿವಗದಾಗಳೆ ಮರೆದು ಹಿಂಗಿದುದೆಂದನಾ ಕರ್ಣ ೫

ಬೊಪ್ಪನಿತ್ತನು ವರವನೆವಗದು
ತಪ್ಪಿಸಲು ತೀರುವುದೆ ಭೀಮನ
ದರ್ಪಕರ್ಜುನನುಬ್ಬಟೆಗೆ ಮಾಡಿದೆವು ಮದ್ದುಗಳ
ತಪ್ಪಿಸಿತಲೇ ದೈವಗತಿ ನ
ಮ್ಮಪ್ಪನೇ ಕೆಡಿಸಿದನು ನವಗಿ
ನ್ನಪ್ಪುದಾಗಲಿಯೆಂದು ಸುಯ್ದನು ಕೌರವರರಾಯ ೬

ಜಯವಹುದೆ ನಿರ್ವೇದದಲಿ ನಿ
ರ್ಭಯವಹುದೆ ಬಿಸುಸುಯ್ಲಿನಲಿ ನಿ
ರ್ನಯವಹುದೆ ರಿಪು ನೃಪರಿಗಿದು ತಾ ನೀತಿ ಮಾರ್ಗದಲಿ
ನಿಯತವಿದು ನಿಶ್ಶೇಷ ನಿಮ್ಮ
ನ್ವಯಕೆ ನಿರ್ವಾಹವನು ಗಾಂಧಾ
ರಿಯಲಿ ನಿಮ್ಮಯ್ಯನಲಿ ಬೆಸಗೊಳ್ಳೆಂದನಾ ಶಕುನಿ ೭

ಅರಸ ಕೇಳ್ ಧೃತರಾಷ್ಟ್ರ ಭೂಪತಿ
ಯರಮನೆಗೆ ನಡೆತಂದರೀ ನಾ
ಲ್ವರು ವಿಷಾದ ವಿಡಂಬ ವಿಹ್ವಲಕರಣವೃತ್ತಿಯಲಿ
ಪರಿವಿಡಿತದಿ ಕುಳ್ಳಿರಿಸಿದರು ಸಹ
ಚರರ ಶೋಧಿಸಿ ಕಡು ರಹಸ್ಯದೊ
ಳರಸಿಯನು ಬರಹೇಳಿದರು ಗಾಂಧಾರಿ ದೇವಿಯನು ೮

ಅವರ ದಾಸ್ಯವ ಬಿಡಿಸಿ ನೀ ರಾ
ಜ್ಯವನು ಕರುಣಿಸಿ ನೀತಿಯಲಿ ನಿ
ಮ್ಮವರ ಕಳುಹಿದಿರೆಂದು ಕೇಳಿದೆವಾಯ್ತು ಪರಿತೋಷ
ಅವರು ನಿವಗತಿ ಭಕ್ತರೈ ಬಾಂ
ಧವರಲೇ ತಪ್ಪೇನು ಧರ್ಮ
ಪ್ರವರರಿಗೆ ನೀವೊಲಿದಿರೆಂದನು ಕೌರವರರಾಯ ೯

ನಾವಲೇ ಹೊರಗವರ ಹೆಂಡಿರ
ಹೇವಗೆಡಿಸಿದೆವವರ ಸೋಲಿಸಿ
ಜೀವ ಮಾತ್ರವನುಳುಹಿ ಸೆಳೆದೆವು ಸಕಲ ವಸ್ತುಗಳ
ನೀವು ಕರುಣಿಸಿದಿರಿ ಕೃಪಾರಸ
ಭಾವ ಹಿರಿಯರಲುಂಟಲೇ ತ
ಪ್ಪಾವುದೈ ತಪ್ಪಾವುದೆನುತಲ್ಲಾಡಿದನು ಶಿರವ ೧೦

ತಾಯೆ ನೇಮವೆ ಹಗೆಯ ಕೈಯಲಿ
ಸಾಯಲಾರೆವು ಸಾಗರಾಂತದ
ರಾಯರಿಲ್ಲಾ ಹೊರೆಯಲಾಪೆವು ಬೆಂದ ಬಸುರುಗಳ
ಕಾಯಿದನು ಕರುಣದಲಿ ತಂದೆ ಸ
ಹಾಯವಹ ಪಾಂಡವರ ಕೂಡಿಯೆ
ರಾಯ ಬದುಕಿರಲೆಮ್ಮ ಕಳುಹೆಂದೆರಗಿದನು ಪದಕೆ ೧೧

ಏಕೆ ಬೆಸಗೊಳ್ಳಬಲೆ ಸುತರವಿ
ವೇಕ ವಿಷಮಗ್ರಹ ವಿಕಾರ
ವ್ಯಾಕರಣ ದುರ್ಲಲಿತ ದುಷ್ಕೃತವೀಪ್ರಳಾಪವಿದು
ಈ ಕುಲಪನೀ ಪುರವನೀ ಲ
ಕ್ಷ್ಮೀಕರವನೀ ಜಗವನೀ ವಿಭ
ವಾಕೃತಿಯನಂಬುಧಿಯೊಳದ್ದುವ ನಿನ್ನ ಮಗನೆಂದ ೧೨

ಸರಿಹಸುಗೆಯಿಂದರ್ಧ ರಾಜ್ಯದ
ಸಿರಿಗೆ ಯೋಗ್ಯರು ಬಾಹುಸತ್ವಕೆ
ಸುರರು ಸರಿಯಲ್ಲಿವರ ಪಾಡೇ ಮನುಜ ಜಂತುಗಳು
ಚರಿತವೆಂಬರೆ ಋಷಿಗಳಿಗೆ ಗೋ
ಚರಿಸದವರಾಚರಣೆ ನಿನಗೆಂ
ತರಿ ವಿನಾಶನ ಸಿದ್ಧಿಯೆಂದನು ಮಗಗೆ ಧೃತರಾಷ್ಟ್ರ ೧೩

ಬೇಹವರು ಸರಿರಾಜ್ಯಕದು ಸಂ
ದೇಹವೇ ಮೇಲವರು ಸತ್ವದ
ಸಾಹಸದ ಸತ್ಯದ ಸದಾಚಾರದ ನಿವಾಸರಲೆ
ಸ್ನೇಹಿತರು ನಿನಗವರ ಮೇಗವ
ಗಾಹಿಸಿದೆವನ್ಯಾಯದಲಿ ಸ
ದ್ರೋಹರಾವಿನ್ನೆಮಗೆ ನೇಮವೆಯೆನುತ ಹೊರವಂಟ ೧೪

ಕಲಕಿತರಸನ ಕರಣ ಕಂಗಳ
ಕುಳಿಗಳಲಿ ನೀರೊರೆತವಕಟಕ
ಟೆಲೆಗೆ ಕರೆಯಾ ಪಾಪಿ ಮಗನನು ಕುರುಕುಲಾಂತಕನ
ಸೆಳೆದು ತಂದರು ಕರ್ಣ ಶಕುನಿಗ
ಳಳಲಿಗನ ತೆಗೆದಪ್ಪಿದನು ಕುರು
ತಿಲಕ ನಿನ್ನುಳಿದೊಡಲ ಹಿಡಿವೆನೆಯೆಂದನಂಧ ನೃಪ ೧೫

ಏನು ಮಾಡುವೆವವರ ಕೆಡಿಸುವ
ಡೇನು ಹದನನು ಕಂಡೆ ದೈವಾ
ಧೀನ ನಿಷ್ಠುರ ಮುರಿವುದರಿದನ್ಯಾಯ ತಂತ್ರದಲಿ
ಏನು ನಿನ್ನಭಿಮತವು ನಿನ್ನೊಳ
ಗಾನು ಹೊರಗೇ ಕಂದ ನುಡಿ ದು
ಮ್ಮಾನ ಬೇಡೆನ್ನಾಣೆನುತ ಸಂತೈಸಿದನು ಮಗನ ೧೬

ನೊಂದರವರಗ್ಗಳಿಸಿ ಹೃದಯದೊ
ಳೊಂದಿ ಬೆರಸರು ಮರಹು ತೆರಹಿನೊ
ಳಂದಗೆಡಿಸುವರಲ್ಲದುಳುಹರು ನಿನ್ನ ಸಂತತಿಯ
ಒಂದು ಸತ್ತಿಗೆ ನಮ್ಮದಿಲ್ಲಿಗೆ
ನಿಂದುದೆನಿಸಲಿ ನಾವು ನಿಲಲವ
ರೊಂದು ಸತ್ತಿಗೆಯಾಗಿ ಸಲಹಲಿ ಸಕಳ ಭೂತಳವ ೧೭

ಪರಿಜನದೊಳವರವರ ಮುಖ್ಯರ
ಕರೆಸಿದನು ದುಶ್ಶಾಸನನು ನಿಮು
ಗರಸು ನೃಪ ನೀತಿಯಲಿ ಪಾಲಿಸುವನು ಮಹೀತಳವ
ಧರೆಯುನಾತಂಗಿತ್ತೆವೆಮಗೀ
ಸುರನದೀ ತೀರದಲಿ ಕಾಶೀ
ಶ್ವರನ ಸನ್ನಿಧಿಯಿರವು ಘಟಿಸಿದುದೆಂದನಾ ಭೂಪ ೬೨

ರಾಯನೀ ಪರಿ ನುಡಿದು ಜನ ಸಮು
ದಾಯವನು ಕಳುಹಿದನು ಸುಮನೋ
ಭೂಯ ಸಾಪೇಕ್ಷೆಯ ಸಮಾಧಿಯೊಳಿರಲು ರಾತ್ರಿಯಲಿ
ದಾಯವಿದು ತಮಗೆಂದು ದೈತ್ಯ ನಿ
ಕಾಯ ಬಂದು ರಸಾತಳಕೆ ಕುರು
ರಾಯನನು ಕೊಂಡೊಯ್ದು ತಿಳುಹಿದರವರು ಸಾಮದಲಿ ೬೩

ಅರಸ ನೀ ಪ್ರಾಯೋಪವೇಶದಿ
ಮರಣ ದೀಕ್ಷಿತನಾದೆ ಗಡ ನಿ
ಮ್ಮರಸು ಕುಲಕನುಚಿತವ ನೆನೆದೈ ಕಾಕ ಬಳಸಿದೆಲ
ಸುರರು ಪಾಂಡು ಕುಮಾರರಾಗವ
ತರಿಸಿದರು ನೆಲವವರಿಗೈ ನಾ
ವಿರಲು ಸುಡಲೀ ದೈತ್ಯ ಜನ್ಮವನೆಂದರಾ ಖಳರು ೬೪

ಸಾಯದಿರು ನಿನಗಿಂದು ಮೊದಲು ಸ
ಹಾಯರಾವಾಹವಕೆ ರಿಪು ಕೌಂ
ತೇಯರಿಗೆ ಕೊಡಬೇಡವಿನ್ನು ತಿಲಾಂಶ ಭೂತಳವ
ಲಾಯ ಸಹಿತೀ ಗಜ ರಥಾಶ್ವ ನಿ
ಕಾಯ ನಿನ್ನದು ದೈತ್ಯ ಸಚಿವ ಪ
ಸಾಯತರು ನಿನ್ನವರು ಸಾವೆವು ನಿಮ್ಮ ಸಮರದಲಿ ೬೫

ಮಾನವನು ನಾನಿನ್ನು ನೀವೋ
ದಾನವರು ಗಂಧರ್ವರಿಂದಭಿ
ಮಾನವೆನಗಕ್ಕಾಡಿ ಹೋಯಿತು ಹೇಳಲೇನದನು
ಮಾನಿನಿಯ ಮೂದಲೆಯನಾ ಪವ
ಮಾನಸುತನ ಸಗರ್ವ ವಚನವ
ನೇನ ಹೇಳುವೆನೆನುತ ಸುಯ್ದನು ಕೌರವರ ರಾಯ ೬೬

ನರರು ನೀವ್ ದಾನವರು ನಾವೆಂ
ದಿರದಿರೊಡಹುಟ್ಟಿದರು ನಿಮಗಿ
ನ್ನರಸ ವೇಳಾಯಿತರು ವೆಗ್ಗಳ ದೈತ್ಯ ಭಟರೆಲ್ಲ
ಸುರಪುರದ ಸೂಳೆಯರ ಪಡಿಗವ
ನಿರಿಸುವರು ಗಂಧರ್ವರವದಿರ
ಕರುಳ ತಿಂಬೆವು ನಾವೆನುತ ಗರ್ಜಿಸಿತು ಖಳನಿಕರ ೬೭

ಎಂದ ಭೂಪನ ತಿಳುಹಿ ಕಳುಹಲು
ಬಂದು ಮರಳಿ ಮಹೀತಳಕೆ ತ
ನ್ನಿಂದುವದನೆಯ ಮಾತಿನಲಿ ನಿಂದವನು ತಾನಾಗಿ
ಬಂದನರಮನೆಗಖಿಳ ಜನವಾ
ನಂದ ರಸದಲಿ ಮುಳುಗೆ ಪುರದಲಿ
ಸಂದಣಿಸಿದವು ಗುಡಿಗಳೊಸಗೆಯ ಲಳಿಯ ಲಗ್ಗೆಗಳ ೬೮

ಮತ್ತೆ ನೆಗ್ಗಿತು ನಯವಧರ್ಮದ
ಕುತ್ತುದಲೆ ನೆಗಹಿದುದು ಸತ್ಯದ
ಬಿತ್ತು ಹುರಿದುದು ಪಟ್ಟಗಟ್ಟಿದುದಾ ಕೃತಘ್ನತೆಗೆ
ನೆತ್ತಿಕಣ್ಣಾಯ್ತಧಮತೆಗೆ ನಗೆ
ಯೊತ್ತಿದಾರಡಿ ಸುಜನ ಮಾರ್ಗವ
ಕೆತ್ತುದಟವಂಟವೀ ಸುಯೋಧನ ಸೌಮನಸ್ಯದಲಿ ೬೯

ಮರೆದು ಕಳೆದನು ಬಂದ ಲಜ್ಜೆಯ
ಬರನ ದಿನವನು ಮುಂದಣುಪಹತಿ
ಗುರುವ ದೈತ್ಯರ ಮೈತ್ರಿಯನು ನೆನೆನೆನೆದು ಹಿಗ್ಗಿದನು
ಮುರಿದುದಿನ್ನೇನಹಿತ ದರ್ಪದ
ಹೊರಿಗೆಯೆಂದುತ್ಸವದಲವನಿಪ
ಮೆರೆದನಧ್ವರ ಶಾಲೆಯಲಿ ಮಾಡಿದ ಮಹಾಕ್ರತುವ ೭೦

ಕೇಳಿದರು ಪಾಂಡವರು ಕುರು ಭೂ
ಪಾಲಕನ ಸಂಕಲ್ಪವನು ಪಾ
ತಾಳದಲಿ ಸುರವೈರಿ ವರ್ಗದ ಸಖ್ಯ ಸಂಗತಿಯ
ಮೇಲಣಧ್ವರ ಕರ್ಮವನು ನಗು
ತಾಲಿಸಿದರಡಿಗಡಿಗೆ ಲಕ್ಷ್ಮೀ
ಲೋಲನಂಘ್ರಿಯ ನೆನೆವುತಿದ್ದರು ವೀರ ನರಯಣನ ೭೧

## ಇಪ್ಪತ್ತೆರಡನೆಯ ಸಂಧಿ

ಸೂ. ರಾಯನರಸಿಯ ಹಿಡಿದೆಳೆವ ರಿಪು
ರಾಯ ದಳವನು ಮುರಿದು ಫಲುಗುಣ
ವಾಯುಜರು ಪರಿಭವಿಸಿ ಬಿಟ್ಟರು ಕಲಿ ಜಯದ್ರಥನ

ಕೇಳು ಜನಮೇಜಯ ಧರಿತ್ರೀ
ಪಾಲ ಲೆಕ್ಕಕೆ ಸಂದುದಟವೀ
ಪಾಳಿ ಪರಿಯಟಣ ಪ್ರಬಂಧಕೆ ವರುಷ ಹನ್ನೊಂದು
ಮೇಲೆ ಮೇಲೌಕುವ ವಿಪತ್ಕ
ಲ್ಲೋಲ ಕೋಳಾಹಲಿತ ಕಲುಷ ಕ
ರಾಳ ಕಾಲಾಂಬುಧಿಯನೀಸಾಡಿವರು ಬೇಸರದೆ ೧

ಸಿಂಧು ದೇಶಕೆ ಬಂದನವನಿಪ
ಬಂಧ ಕೃತಿಯಲಿ ಬಳಿಕ ಬಿಡುಗಡೆ
ಯಂಥಭೂಪತಿಯುಳಿಯ ಕೇಳಿದನಾ ಜಯದ್ರಥನು
ಅಂಥತೆಯನೇನೆಂಬೆನ್ನೈ ಪ್ರತಿ
ಬಂಧಕರು ಬೇಡೆನಲು ನಯದಭಿ
ಸಂಧಿಯಲಿ ಸೀವರಿಸಿ ಸಂವರಿಸಿದನು ಸೈನಿಕವ ೨

ನೆರಹಿದನು ಹದಿನಾರು ಸಾವಿರ
ಕರಿಘಟೆಯನೈವತ್ತು ಸಾವಿರ
ತುರಗವನು ಹದಿನಾಲ್ಕು ಸಾವಿರ ಕನಕಮಯ ರಥವ
ಚರಣ ಚೌಪಟರೈದು ಲಕ್ಷವ
ಬರಿಸಿದನು ಬಹುವಾದ್ಯ ರವ ದಿ
ಕ್ಕಿರವೊಡೆಯೆ ಸೂಳೈಸೆ ಪೇಳೈಸಿದನು ಪೋಪರವ ೩

ಜೀಯ ಭಾಸ್ಕರ ಭೌಮರಶುಭ
ಸ್ಥಾಯಿಗಳು ಗುರು ಮಂದರಭಿಭವ
ದಾಯಿಗಳು ವಿಪರೀತ ದೆಸೆ ಬುಧ ಶುಕ್ರ ರಾಹುಗಳ
ಯಾಯಿಗಳಿಗಪಜಯ ನಿವಾಸ
ಸ್ಥಾಯಿಗೊಳ್ಳಿತು ಚಿತ್ತವಿಸಿಯೆನೆ
ಜೋಯಿಸರ ಜವಿವಲೆಗೆ ಸಿಲುಕೆನೆನುತ್ತ ಹೊರವಂಟ ೪

ಉರಿ ಹೊಗೆಯ ದಿಕ್ಕಿನಲಿ ಹಕ್ಕಿಗ
ಳೊರಳಿದವು ಗೋಮಾಯು ರವವ
ಬ್ಬರಿಸಿದುದು ದೆಸೆ ದೆಸೆಗಳಲಿ ಸೂಚಿಸಿತು ರಣಭಯವ
ದುರುಳನದ ಕೈಕೊಂಬನೇ ಕುರು
ನರಪತಿಯ ತತ್ಸಂಪ್ರದಾಯದ
ಗರುಡಿಕಾರನಲಾ ಚತುಷ್ಟಯ ದುಷ್ಟಮಂತ್ರಿಗಳ ೫

ಭರದ ಪಯಣದ ಮೇಲೆ ಪಯಣದ
ಲುರವಣಿಸಿ ನಡೆತಂದು ಪಾಂಡವ
ರರಸನಿಹ ವಿಮಲಾಶ್ರಮದ ವಿಪಿನೋಪಕಂಠದಲಿ
ಹರಹಿದವು ಗುಡಿ ಗಜ ಹಯದ ಮಂ
ದಿರ ರಚನೆ ರಹಿಯಾಯ್ತು ಬಿಟ್ಟನು
ಕುರುನೃಪಾಲನ ಮೈದುನನು ಭೂಪಾಲ ಕೇಳೆಂದ ೬

ಏನ ನೆನೆದನೊ ದುಷ್ಟಮಂತ್ರಿ ವಿ
ತಾನ ದೀಕ್ಷಿತ ಕಳುಹಿದನು ಮದ
ನಾನುರಾಗದಲಾಭರಣವನು ಲೇಪನಾದಿಗಳ
ಸಾನುನಯದಲಿ ಪಾಂಡುಪುತ್ರರ
ಮಾನಿನಿಗೆ ಕೊಡಿ ನಿರ್ಜನದೊಳಬು
ಜಾನನೆಯ ಸೇರಿಸುವುದೆಮಗೆಂದಟ್ಟಿದನು ಚರರ ೭

ಬನದೊಳಡಗಿದರವರು ಕುಂತೀ
ತನುಜರೈವರು ಬೇಂಟೆಯಾಡಲು
ನೆನೆದು ಧೌಮ್ಯನನಬುಜಮುಖಿಯಾಶ್ರಮದ ಕಾಹಿನಲಿ
ಮುನಿಜನಂಗಳ ನಿಲಿಸಿ ಕೊಂಡರು
ಧನುವ ಬೆಂಬತ್ತಳಿಕೆಗಳ ನೃಪ
ಜನ ಲಲಾಮರು ಬನಬನದೊಳರಸಿದರು ಮೃಗಕುಲವ ೮

ಹೋದರವರತ್ತಲು ವಿಕಾರ ವಿ
ನೋದ ಶೀಲನ ಶಿಷ್ಟರುಬ್ಬಟೆ
ಬೀದಿವರಿದುದು ಪರ್ಣಶಾಲೆಗೆ ಬಂದರಂಗನೆಯ
ಆದರಿಸಿ ಮುನಿಜನವನೊಯ್ಯನೆ
ಕೈದುಗಳ ಹೊರಗಿರಿಸಿ ದೂರದ
ಲಾ ದುರಾತ್ಮರು ಕಂಡು ಮೈಯಿಕ್ಕಿದರು ಮಾನಿನಿಗೆ ೯

ದೇವಿ ಚಿತ್ತೈಸುವುದು ನಿಮ್ಮಾಯ
ಭಾವ ಕೌರವನೃಪನ ಮೈದುನ
ಭಾವಿಸಲು ದುಸ್ಸಳೆಯ ರಮಣನು ಕಲಿ ಜಯದ್ರಥನು
ಈ ವಿವಿಧ ರತ್ನಾಭರಣ ಪ
ಟ್ಟಾವಳಿಯನನುಲೇಪನಾದಿಯ
ಪಾವುಡವನವಧರಿಸ ಬೇಕೆಂದಿಳುಹಿದರು ಮುಂದೆ ೧೦

ಏಸವಳೇ ದುಸ್ಸಳೆ ಜಯದ್ರಥ
ಕುಶಲನೇ ಪಾವುಡವ ನೀವೊ
ಪ್ಪಿಸುವುದೊಡೆಯರ ಮುಂದೆ ಬಿಜಯಂಗೈವರೀ ಕ್ಷಣಕೆ
ಶಿಶುಗಳಾವೆಮಗೀ ಸ್ವತಂತ್ರತೆ
ಯೆಸಕವೆಲ್ಲಿಯದಕಟ ವಸ್ತು
ಪ್ರಸರವೆಮಗೇಕೆನುತ ನುಡಿದಳು ನಗುತ ನಳಿನಾಕ್ಷಿ ೧೧

ನಾರ ಸೀರೆಯನುಡುವೆವೆಮಗಾ
ಹಾರವೇ ಫಲ ಮೂಲತತಿ ಶೃಂ
ಗಾರವೆಮಗೆ ಪತಿವ್ರತಾ ಗುಣವಲ್ಲದಿತರರಲಿ
ಸೇರುವುದೆ ಮನವಿದನು ಪಾಂಡು ಕು
ಮಾರರಿಗೆ ತೋರಿಸುವುದೈ ಬೀ
ಡಾರವನು ಬಿಡಿ ಬೇರೆ ವನದೊಳಗೆಂದಳಿಂದುಮುಖಿ ೧೨

ತಾಯೆ ನೀವಿವನೊಪ್ಪುಗೊಂಬುದು
ರಾಯ ಬಡವನೆ ಮತ್ತೆ ಪಾಂಡವ
ರಾಯರಿಗೆ ಪಾವುಡವನಟ್ಟುವನಿದನುಪೇಕ್ಷಿಸದೆ
ಆಯತಾಂಬಕಿ ತೆಗೆಸಿಯೆನೆ ನುಡಿ
ರಾಯಸವಿದೇಕೆನುತ ದೂತರ
ನಾ ಯುವತಿ ಜರಿದೊಳಗೆ ಹೊಕ್ಕಳು ತಳಿರ ಮಂಟಪವ ೧೩

ಮುಸುಳಿತಿವದಿರ ಮೋರೆ ಕಾರ್ಯದ
ಬೆಸುಗೆ ಹತ್ತದೆ ಸತಿಯ ನುಡಿಯಲಿ
ರಸವ ಕಾಣದೆ ಭೀತಿಯಲಿ ಮರಳಿದರು ಪಾಳಯಕೆ
ಉಸುರಲಮ್ಮೆವು ಜೀಯ ಸೋಲಳು
ಶಶಿವದನೆ ಗುಣ ಸಾಮದಲಿ ಸಾ
ಧಿಸುವುದರಿದೆನೆ ತಾನೆ ನೋಡುವೆನೆನುತ ಹೊರವಂಟ ೧೪

ಹೆಗಲ ಹಿರಿಯುಬ್ಬಣ ಕಠಾರಿಯ
ಬಿಗಿದುಡಿಗೆ ರತ್ನಾಭರಣ ಝುಗ
ಝುಗಿಸೆ ಝಣಝಣ ರವದ ರಭಸದ ಖಡಿಯ ತತಿ ಮೆರೆಯೆ
ಒಗುವ ಸಾಧು ಜವಾಜಿ ಕಸ್ತುರಿ
ಯಗರು ಪರಿಮಳದಂಗವಟ್ಟದ
ವಿಗಡ ಹೊಕ್ಕನು ವನವನಾ ಪಾಂಚಾಲಿಯಾಶ್ರಮವ ೧೫

ತೊಲಗಿದುದು ಮುನಿ ನಿಕರವೀತನ
ಸುಳಿವು ಕಂಡು ಸುತೇಜದಲಿ ಖಳ
ತಿಲಕ ಬಂದನು ಪರ್ಣಶಾಲೆಯ ಮುಖದ ಮಂಟಪಕೆ
ಲಲನೆಯೊಳಹೊಗಲೊಡನೆ ಹೊಕ್ಕನು
ನಳಿನ ಮುಖಿ ಬಂದವ ಜಯದ್ರಥ
ನಳುಕಲೇಕೌ ದ್ರೌಪದಿಯೆ ನೀನೆನುತ ಮಂಡಿಸಿದ ೧೬

ಬೆದರಲೇತಕೆ ನಮ್ಮ ನಾದನಿ
ಮದವಳಿಗ ನೀನಾದರೊಡಹು
ಟ್ಟಿದನು ನೀನಹೆಯೆನಗೆ ನಿನ್ನಲಿ ಬೇರೆ ಭಯವೇನು
ಸದನವಿದು ಪತಿಶೂನ್ಯ ತಾನೆಂ
ಬುದು ಪತಿವ್ರತೆಯಲ್ಲಿಯನುಚಿತ
ವಿದು ವಿಚಾರವ ಬಲ್ಲೆ ನೀನೆಂದಳು ಸರೋಜಮುಖಿ ೧೭

ಅಹಹ ಪಾತಿವ್ರತ್ಯವತಿ ಸ
ನ್ನಿಹಿತವಲ್ಲಾ ನಿನಗೆ ಹಲಬರ
ಮಹಿಳೆ ಸತಿಯೆನಿಸುವರೆ ಸೂಳೆಯರೇಕ ಪುರುಷರಲಿ
ವಿಹರಿಸುವರೇ ಲೋಕಧರ್ಮದ
ರಹಣಿ ರಹಿಸುವುದೈಸಲೇ ನಮ
ಗಿಹುದು ಮತವಲ್ಲದೊಡೆ ಮಾಣಲೆನುತ್ತ ಮುರಿದೆದ್ದ ೧೮

ತರಳೆ ಮಿಗೆ ತಲ್ಲಣಿಸಿ ತಳಿತೋ
ವರಿಯ ಹೊಗುತಿರಲಟ್ಟಿ ಮೇಲುದ
ಬರಸೆಳೆದು ತುರುಬಿಂಗೆ ಹಾಯ್ದನು ಹಿಡಿದು ಕುಸುಬಿದನು
ಒರಲಿದಳು ಹಾ ಭೀಮ ಹಾ ನೃಪ
ವರ ಧನಂಜಯ ಹಾಯೆನುತ ಕಾ
ತರಿಸೆ ಕಮಲಾನನೆಯ ಕಂತವನೌಚಿ ಹೊರವಂಟ ೧೯

ರಾಣಿವಾಸವಲಾ ಯುಧಿಷ್ಠಿರ
ನಾಣೆ ಬಿಡು ಬಿಡೆನುತ್ತ ಸುಜನ
ಶ್ರೇಣಿಯಡ್ಡೈಸಿದೊಡೆ ಬೀಸಿದನವನು ಖಂಡೆಯವ
ರಾಣಿ ನಡೆ ನಡೆ ನಮಗೆ ಪಾಂಡವ
ರಾಣೆಯಿಟ್ಟರು ಮುನಿಗಳಿಲ್ಲಿಹ
ಜಾಣು ತಪ್ಪುವುದೆನುತ ಹೊರವಂಡಿಸಿದನಾಶ್ರಮವ ೨೦

ಒಡನೆ ಬಂದನು ಧೌಮ್ಯಮುನಿಯಡಿ
ಯಿಡುತ ಘನ ರಕ್ಷೋಘ್ನ ಸೂಕ್ತವ
ನಡಿಗಡಿಗೆ ಜಪಿಸುತ ಜಯದ್ರಥ ಬೇಡ ಬೇಡೆನುತ
ಮಿಡುಕದೈತರಲಾಕಿ ಹೊಕ್ಕನು
ಪಡೆಯ ಮಧ್ಯದ ರಥವನೇರಿಸಿ
ನಡೆದನವ ಸೂಟಿಯಲಿ ತಾಟಿಸಿ ರಥದ ವಾಜಿಗಳ ೨೧

ಚೆಲ್ಲಿತೀ ಮುನಿಯೂಥ ದೆಸೆದೆಸೆ
ಗೆಲ್ಲ ಹರಿದುದು ಬಾಯ ಮೊರೆಗಳ
ಪಲ್ಲವದ ಪಾಣಿಗಳ ಸೂಸುವ ಸಮಿಧೆ ಬರ್ಹಿಗಳ
ತಲ್ಲಣದ ತೋಪಿನ ವಿಷಾದದ
ವಲ್ಲರಿಯ ಹೂದೊಡಬೆಗಳ ಹೊ
ಯ್ವಳಿಗಳ ಮುನಿಜನವ ಕಂಡರು ಪಾಂಡುನಂದನರು ೨೨

ಏನು ಗಜಬಜ ಋಷಿ ಜನಂಗಳಿ
ಗೇನಪಾಯವೊ ನಮ್ಮ ಬನದಲಿ
ದಾನವರ ದುರ್ಘಟದ ದುರ್ನಯವಲ್ಲಲಾಯೆನುತ
ಆ ನರೇಂದ್ರ ಮನೋಹರದ ಮೃಗ
ಯಾ ನಿರೂಢಿಯ ಬಿಸುಟು ಬಂದನಿ
ದೇನಿದೇನೊಳಿಗವೆನುತ ಬೆಸಗೊಂಡನವರುಗಳ ೨೩

ಹೇಳಲಮ್ಮೆವು ಜೀಯ ಸಿಂಧು ನೃ
ಪಾಲ ದಶಮುಖನಾದನಾ ಪಾಂ
ಚಾಲೆ ಜಾನಕಿಯಾದಳಿಂದಿನ ರಾಜಕಾರ್ಯವಿದು
ಮೇಲೆ ರಾಘವತನದ ತೋಟಿಯ
ತೋಳ ಬಿಂಕವು ನಿಮ್ಮದೆನೆ ನರ
ಪಾಲನಾಜ್ಞೆಯಲಂದು ಹರಿದರು ಭೀಮ ಫಲುಗುಣರು ೨೪

ಐದುವರೆ ರಿಪು ಮರಣ ಸಿದ್ಧಿಯ
ಕೈದು ಮನೆಯಲ್ಲಿಹುದು ಬೇಂಟೆಯ
ಕೈದು ಕೈಯಲಿ ಸಮಯವಿಲ್ಲ ಮಹಾಸ್ತ್ರಕರ್ಷಣಕೆ
ಮೈದುನನ ಮೈಸರಸಕೀ ಹುಲು
ಗೈದು ಸಾಲದೆ ತಂಗಿ ದುಸ್ಸಳೆ
ಯೈದೆತನ ಬಯಲಾಯ್ತೆನುತ ಬೆಂಬತ್ತಿದರು ಖಳನ ೨೫

ಕಂಡರಡವಿಯಲವನನೆಲವೋ
ಭಂಡ ಫಡ ಹೋಗದಿರೆನುತ ಕೈ
ಕೊಂಡು ಸುರಿದರು ಸರಳನಾ ಪಿಂಗಳಿಯ ಸೇನೆಯಲಿ
ಭಂಡರಿವದಿರು ತಾವು ಕಡುಹಿನ
ಖಂಡೆಯದ ಸಿರಿವಂತರಿವರು
ದ್ದಂಡ ಭಟರೆನುತಾ ಜಯದ್ರಥ ನಿಲಿಸಿದನು ಬಲವ ೨೬

ಸೆರೆ ಸಹಿತ ತಾನೈದುವೆನು ನಿಜ
ಪುರವ ನೀವಾನುವುದು ಭೀಮನ
ನಿರಿವುದರ್ಜುನನೊಡನೆ ನಿಮಗುಗ್ಗಡದ ಸಮರವಿದು
ಇರಿತಕಂಜದ ಸ್ವಾಮಿಕಾರ್ಯದ
ಹೊರಿಗೆಯುಳ್ಳ ನವಾಯ ಬಿರುದಿನ
ಮುರುಕವುಳ್ಳ ಭಟಾಳಿ ನಿಲುವುದು ತಡೆವುದರಿ ಭಟರ ೨೭

ಎಂದು ವಾಘೆಯ ಕೊಂಡು ರಥವನು
ಮುಂದೆ ದುವ್ವಾಳಿಸಿದನಿತ್ತಲು
ಹಿಂದೆ ನಿಂದುದು ಗಜರಥಾಶ್ವ ಪದಾತಿ ಚತುರಂಗ
ಇಂದುವದನೆಯ ತೇರು ಹಾಯ್ದುದೆ
ಮುಂದೆ ಹೊಳ್ಳುಗರಡ್ಡವಿಸಿದರೆ
ಹಿಂದೆ ಹೊಲ್ಲೆಹವೇನೆನುತ ಹೊಕ್ಕೆಚ್ಚನಾ ಪಾರ್ಥ ೨೮

ಮುರಿದು ಮರನನು ಭೀಮನಹಿತರ
ತುರುಬಿದನು ಮಲೆತಾನೆಗಳ ಹೊ
ಕ್ಕೆರಗಿದನು ತುರುಗಿದನು ಭಟರಭ್ರದವಿಮಾನದಲಿ
ಜುರಿತಡಗಿನಿಂಡೆಗಳ ಮಿದುಳಿನ
ನಿರಿಗರುಳ ನೆಣ ವಸೆಯ ಜಿನಿಯಲಿ
ಮೆರೆದುದಾ ಮರನಲ್ಲಿ ತಳಿತುದು ಹೂತುದೆಂಬಂತೆ ೨೯

ಸಾಯಸಾವತಿ ಬಲರನೆಲ್ಲರ
ಕಾಯಲಿರಿಸಿದ ಭಟರ ತಲೆಗಳು
ಬೀಯವಾದುವು ಮತ್ತೆ ರಪಣವ ತೋರಿಸಾ ರಣಕೆ
ರಾಯರಂಗವನೆತ್ತ ಬಲ್ಲ ನಿ
ಜಾಯುಧವ ಹಿಡಿ ನಿನ್ನ ಬಿರುದಿನ
ಬಾಯಲೆರೆವುದು ಮಧುವನೆನುತುರವಣಿಸಿದನು ಭೀಮ ೩೦

ಧನುವ ಕೊಂಡನು ಸರಳ ಸಾರದ
ಲನಿಲಜನ ಮುಸುಕಿದನು ಪಾರ್ಥನ
ಮೊನೆಗಣೆಯ ತರಿದೊಟ್ಟಿ ಬೊಬ್ಬಿರಿದನು ಜಯದ್ರಥನು
ತನತನಗೆ ಸೈಂಧವನ ಬೆಂಗಾ
ಹಿನ ಭಟರು ಭಾರಣೆಯಲೊದಗಿದ
ರನಿಬರನು ನಿಮಿಷಾರ್ಧದಲಿ ನಿರ್ನೈಸಿದನು ಪಾರ್ಥ ೩೧

ಅಂಜದಿರು ಕಮಳಾಕ್ಷಿ ಧೌಮ್ಯ ನಿ
ರಂಜನನು ನಿನಗಿಂದು ಸುತಿ ಪನಿ
ಪಂಜರವಲಾಯೆನುತ ಹಾಯ್ದನು ಪವನಸುತ ರಥಕೆ
ಕುಂಜರನು ಕೈಯಿಕ್ಕೆ ನಿಲುಕದೆ
ಕಂಜವನವನಿಲಜನ ಜಾಡಿಯು
ಜಂಜಡಕೆ ದಿಟ್ಟನೆ ಜಯದ್ರಥನರಸ ಕೇಳೆಂದ ೩೨

ಸೆಳೆದೊಡಾಯುಧಪಾತನೀತನ
ನಿಲುಕಿ ಹೊಯ್ದನು ದಂಡೆಯಿಂದದ
ಕಳಚಿ ಮಾರಂತಿ ಹೊಕ್ಕಡವ ಚಿಮ್ಮಿದನು ಚೀಲಯುವ
ಖಳನ ಬಾಹುವನೊದೆದು ತುರುಬಿಗೆ
ನಿಲುಕಿ ಕುಸುಬಿದನವನ ಗೋಣಿನ
ಲಲಗ ಹೂಡಲು ಕಂಡನರ್ಜುನನಾ ವೃಕೋದರನ ೩೩

ಭೀಮ ಬಿಡಿಸದಿರವನ ಗಂಟಲ
ನೀ ಮದಾಂಧನನೊಯ್ದು ಕೆಡಹುವ
ಭೂಮಿಪತಿಯಂಘ್ರಿಯಲಿ ಕಾಯಲಿ ಮುನಿದು ಮೇಣ್ಕೊಲಲಿ
ತಾಮಸನ ಬಿಗಿಯೆನಲು ನಗುತ
ದ್ದಾಮನೆಂದನು ಕೊಲುವೆನೆಂದೇ
ಕಾಮಿಸಿದೆನ್ನೈ ಪಾರ್ಥ ಕೆಡದೇಯೆನ್ನ ಸಂಕಲ್ಪ ೩೪

ನೆನೆಯದಿರು ಸಂಕಲ್ಪ ಹಾನಿಯ
ನನುಚಿತಕೆ ಮನ ತಾರದಿರು ಮಾ
ನಿನಿಯಿರಲಿ ರಥದಿಂದ ಕುನ್ನಿಯ ಕೆಡಹು ಧಾರುಣಿಗೆ
ಮುನಿಪನೇರಲಿ ರಥದ ವಾಜಿಯ
ನನುಗೊಳಿಸಿ ಸಾರಥ್ಯದಲಿ ಬರ
ಲೆನುತ ಭೀಮನ ಮನದ ಖತಿಯನು ಬಿಡಿಸಿದನು ಪಾರ್ಥ ೩೫

ವೈರಿ ಬಾಹುದ್ವಯವ ಬದ್ದುಗೆ
ದಾರದಲಿ ಕಟ್ಟಿದನು ನಾರೀ
ಚೋರ ನಡೆ ನಡೆಯೆನುತ ತಿವಿದನು ಬಿಲ್ಲ ಕೊಪ್ಪಿನಲಿ
ಕೌರವೇಂದ್ರನ ಮತವೊ ನಿನ್ನ ವಿ
ಕಾರವೋ ಹೆಂಗಳ್ಳ ವಿದ್ಯೆಯ
ನಾರು ಕಲಿಸಿದರೆನುತ ತಂದರು ಧರ್ಮಜನ ಹೊರೆಗೆ ೩೬

ಸಿಂಧು ಭೂಪನಲಾ ಭುಜಾಗ್ರದ
ಬಂಧನವ ಬಿಡು ಭೀಮ ಶಿವ ಶಿವ
ನೊಂದನ್ನೆ ನಿಷ್ಕರುಣಿಗಳು ನೀವೆಂದನವನೀಶ
ಕೊಂದು ಬಿಸುಡುವ ನೇಮ ಕಂದ
ರ್ಪಾಂಧಕನನುಳುಹುವೊಡೆತನಗಿ
ನ್ನಿಂಧನವ ಮಾಡಿಸುವುದೈಸಲೆಯೆಂದನಾ ಭೀಮ ೩೭

ಹದನಿದೊಳ್ಳಿತು ತಂಗಿ ವೈಧ
ವ್ಯದಲಿ ನವೆಯಳೆ ಸುಬಲ ನಂದನೆ
ಯುದರ ಕುಂತೀದೇವಿಯುದರಕೆ ಭಿನ್ನ ಭಾವನೆಯೆ
ಕದನದಲಿ ಹಿಡಿವಡೆದವರ ಕೊಲು
ವುದು ನರೇಂದ್ರರ ಧರ್ಮವಲ್ಲಿ
ನ್ನಿದರ ಮೇಲಾವರಿಯೆವೆಂದನು ಧರ್ಮನಂದನನು ೩೮

ಈತನಳಿಯದೆ ಮತ್ತ ತಿಜ್ಞಾ
ಖ್ಯಾತಿ ಮಸುಳದೆ ತಿದ್ದುವನುವನು
ಭೂತಳಾಧಿಪ ನೀವು ಬೆಸಸುವುದೆನಲು ಮುನಿಜನವ
ಆತ ನೋಡಿದನಾವುದಿದಕನು
ನೀತಿಯೆನೆ ಧೌಮ್ಯಾದಿ ಸುಜನ
ವ್ರಾತ ನಿಶ್ಚೈಸಿದರು ಮನದಲಿ ಧರ್ಮ ನಿರ್ಣಯವ ೩೯

ಮಾನಧನರಿಗೆ ವಧೆಯೆನಿಪುದಭಿ
ಮಾನಭಂಜನವಿವನು ಕಟ್ಟಭಿ
ಮಾನಿ ಭಂಗಿಸಿ ಬಿಟ್ಟೊಡೀತಂಗಿದುವೆ ಮರಣವಲ
ಈ ನುಡಿಯ ಸಲಿಸಿದೊಡೆ ಇವನಪ
ಮಾನಹತನಿದು ಧರ್ಮ ನಿಶ್ಚಯ
ವೇನು ಸಂಶಯವಿಲ್ಲನುತ ನುಡಿದುದು ಮುನಿಸ್ತೋಮ ೪೦

ಅಹುದೆನುತ ಕಲಿಭೀಮ ಮಾಡಿದ
ರಹವನದನೇನೆಂಬೆನೈ ಕೂ
ರಿಹ ಕಠಾರಿಯ ಹಣಿಗೆಯಲಿ ಬಾಚಿದನು ಸಿರಿಮುಡಿಯ
ಅಹಿತ ಶಿರವಿದಲಾಯೆನುತ ಗೃಹ
ಮಹಿಳೆಯರು ವಿಹಿತಾಂಗುಲಿಯ ಸಂ
ಪ್ರಹರಣದಿ ಪರಿಭವಿಸಿದರು ಘೊಳ್ಳೆನಲು ನಿಖಿಳಜನ ೪೧

ಬಿಟ್ಟರೀತನ ತೋಳ ಹಿಂಗೈ
ಗಟ್ಟುಗಳನೆಲೆ ಕುನ್ನಿ ಹೋಗೆನೆ
ಕೆಟ್ಟ ಕೇಡದನೇನ ಹೇಳುವೆನಾ ಜಯದ್ರಥನ
ಬೆಟ್ಟದಿಂದುರುಳುವೆನೊ ಹಾಸರೆ
ಗಟ್ಟಿ ಹೊಗುವೆನೊ ಮಡುವನೆನುತಡಿ
ಯಿಟ್ಟನಂತಃಕಲುಷ ಚಿತ್ತ ದುರಂತ ಚಿಂತೆಯಲಿ ೪೨

ಚಿಂತಿಸಿದೊಡೇನಹುದು ಹೊಗುವೆನು
ಕಂತುಮಥನನ ಮರೆಯನಿವದಿರಿ
ಗಂತಕನು ತಾನಹೆನು ಗೆಲುವೆನು ಬಳಿಕ ಬವರದಲಿ
ಭ್ರಾಂತಿಯೇ ಬಿಡು ತನ್ನನೆನುತ ಪು
ರಾಂತಕ ಧ್ಯಾನದಲಿ ವಿಮಲ
ಸ್ವಾಂತನೇಕಾಗ್ರದಲಿ ಭಜಿಸಿದನಿಂದುಶೇಖರನ ೪೩

ಇವನ ನಿಷ್ಠೆಗೆ ಮೆಚ್ಚಿ ಗೌರೀ
ಧವನು ಮೈದೋರಿದನು ರಾಜ
ಪ್ರವರ ಕೊಟ್ಟೆನು ಬೇಡು ಸಾಕು ಭವನ್ಮನೋರಥವ
ವಿಭವಿಸೆನೆ ಕಂಡೆರೆದು ಮುಂದಿಹ
ಶಿವನ ಕಂಡನು ಮೈಯ ಚಾಚಿದ
ನವನಿಯಲಿ ಜಯ ಜಯ ಮಹೇಶ ನಮಃಶಿವಾಯೆನುತ ೪೪

ವರದನಾದ್ಯೆ ಶಂಭು ಕರುಣಾ
ಕರ ಪಸಾದವು ಪಾಂಡು ಸುತರ್ಗೆ
ವರನು ದಿನವೊಂದರಲಿ ಗೆಲುವುದು ತನಗಭೀಷ್ಟವಿದು
ಕರುಣಿಸೈ ತನಗೆನಲು ನಕ್ಕನು
ಗಿರಿಸುತೆಯ ಮೊಗ ನೋಡಿ ಭಾರಿಯ
ವರವ ವಿವರಿಸಿದನು ಜಯದ್ರಥನೆಂದನಿಂದುಧರ ೪೫

ಪಾಶುಪತಶರವೆನ್ನ ಸತ್ವ ವಿ
ಳಾಸವದೆ ಫಲುಗುಣನ ಕೈಯಲಿ
ವಾಸವಾಬ್ಜಭವಾದಿ ಬಿರುದರ ಬಗೆಯದಾಹವಕೆ
ಆ ಸುಭಟನೊಬ್ಬನನುಳಿಯೆ ಮಿ
ಕ್ಕೇಸು ಪಾಂಡವರುಗಳನೊಂದೇ
ವಾಸರದಲವಗಡಿಸು ಹೋಗೆಂದನು ಮಖಧ್ವಂಸಿ ೪೬

ಸಾಕು ಜೀಯ ಹಸಾದವೆಂದವಿ
ವೇಕನಿಧಿ ಬೀಳ್ಕೊಂಡನೀಶನ
ನೀ ಕುಮಾರರು ವನದೊಳಿದ್ದರು ಖತಿಯ ಭಾರದಲಿ
ನೂಕು ನೂಕಾಡುವ ವಿಪತ್ತಿನ
ವ್ಯಾಕೃತಿಗೆ ನಾನೊಬ್ಬನೇ ದಿಟ
ವಾಕೆವಾಳನೆ ಶಿವ ಶಿವಾಯೆಂದರಸ ಬಿಸುಸುಯ್ದ ೪೭

ಬಂದ ಮಾರ್ಕಂಡೇಯ ಮುನಿಗಭಿ
ವಂದಿಸಿದನೀ ಬ್ರಹ್ಮ ಸೃಷ್ಟಿಯ
ಲಿಂದು ತಾನಲ್ಲದೆ ಸುಧಾಕರ ಸೂರ್ಯವಂಶದಲಿ
ಹಿಂದೆ ನಡೆದವರಾರು ಪರಿಭವ
ದಿಂದ ನಮ್ಮಂದದಲಿ ವಿಪಿನದೊ
ಳಿಂದುಮುಖಿಯರು ಭಂಗಪಟ್ಟರೆಯೆನುತ ಬಿಸುಸುಯ್ದ ೪೮

ಏನಲು ನಕ್ಕನು ಮುನಿಪನವನಿಪ
ಜನ ಶಿರೋಮಣಿ ಕೇಳು ನಿಮ್ಮಾ
ವನದೊಳಬುಜಾನನೆಯ ಕೊಂಡೋಡಲು ಜಯದ್ರಥನು
ಅನುಜರಾಗಳೆ ಹರಿದು ಮರಳಿಚಿ
ವನಜಮುಖಿಯನು ತಂದರವನನು
ನೆನೆಯಬಾರದ ವಿಧಿಯ ಮಾಡಿದರೆಂದನಾ ಮುನಿಪ ೪೯

ಅರಸ ಮುನಿಯದಿರಾವ ಪಾಡಿನ
ನರಪತಿಗಳ್ಗೆ ನೀವು ವಿಶ್ವಂ
ಭರೆಯ ಘನತೆಯ ಕೇಳಿದರಿಯಾ ಕೈಟಭಾಂತಕನ
ವರ ಮುನಿಯ ಶಾಪವನು ತಾನೇ
ಧರಿಸಿ ನರರೂಪಿನಲಿ ನವೆದುದ
ನರಸ ಬಣ್ಣಿಸಲೆನ್ನ ಹವಣಲ್ಲೆಂದನಾ ಮುನಿಪ ೫೦

ಅಡವಿಯಲಿ ತೊಳಲಿದನು ರಾಮನ
ಮಡದಿಯನು ರಕ್ಕಸನು ಕದ್ದನು
ಕೆಡಿಸಿ ಬಳಿಕರಸಿದನು ರಾಣೀವಾಸವನು ಕೂಡೆ
ಕಡಲ ಮಧ್ಯದ ಖಳನೊಡನೆ ಕೈ
ಹೊಡೆದುದಲ್ಲಿಗೆ ತೆತ್ತಿಗರು ನಾ
ಡಡವಿಗೋಡಗವಾಳು ಕುದುರೆಗಳಸುರ ವಿಗ್ರಹಕೆ ೫೧

ಸಾಗರದ ತೆರೆಗಳಲಿ ಗಿರಿಗಳ
ತೂಗಿ ಸೇನೆಯ ನಡೆಸಿ ದಶಮುಖ
ನಾಗ ಕೆಡಿಸಿದು ರಾಮರಮಣಿಯ ಬಿಡಿಸಿದಾಯಸವ
ಈಗಳೀ ನರರೇನನಾನುವ
ರಾ ಗರುವ ರಘುರಾಯ ವಜ್ರಕೆ
ಬೇಗಡೆಯ ವಿಧಿ ಮಾಡಿತೆಂದನು ಮುನಿ ನೃಪಾಲಂಗೆ ೫೨

ಎಂದು ರಾಮಾಯಣವ ವಿಸ್ತರ
ದಿಂದ ಹೇಳಿದು ಸಂತವಿಟ್ಟನು
ಕಂದು ಕಸರಿಕೆಯಡಗಿತಾ ಧರ್ಮಜನ ಚಿತ್ತದಲಿ
ಸಂದಣಿಸೆ ತನುಪುಳಕ ಪರಮಾ
ನಂದ ರಸಮಯ ನಯನಜಲ ಭರ
ದಿಂದಲೆಸೆದರು ವೀರನಾರಾಯಣನ ಕರುಣದಲಿ ೫೩

## ಇಪ್ಪತ್ತುಮೂರನೆಯ ಸಂಧಿ

ಸೂ. ಧರಣಿಪತಿ ತರದಿತ್ತನಾ ದ್ವಿಜ
ನರಣಿಯನು ಬಳಿಕಮಲ ಧರ್ಮದ
ಸರಣಿಯಿಂದೆತ್ತಿದನು ವನದಲಿ ನಿಜಸಹೋದರರ

ಕೇಳು ಜನಮೇಜಯ ಧರಿತ್ರೀ
ಪಾಲ ರಾಮಾಯಣವನಾ ಮುನಿ
ಹೇಳಿದನು ಹೂಳಿದನು ಭೂಪನ ಮಾನಸವ್ಯಥೆಯ
ಹೇಳಿದನು ಸಾವಿತ್ರಿಯುನ್ನತ
ಶೀಲವನು ಪತಿಭಕ್ತಿಯಿಂದವೆ
ಕಾಲ ನುಂಗಿದ ಪತಿಯ ಮರಳಿಚಿ ತಂದ ಸಂಗತಿಯ ೧

ಪತಿ ಭಕುತಿಯುನ್ನತಿಕೆಯಲಿ ವಿ
ಖ್ಯಾತೆಯಲಾ ಸಾವಿತ್ರಿಯಾಕೆಯ
ನುತ ಚರಿತ್ರದವೋಲು ನಿಮ್ಮ ದ್ರೌಪದಾದೇವಿ
ಹಿತವನಾಚರಿಪವಳು ವಂಶೋ
ನ್ನತಿಯನುದ್ಧರಿಸುವಳು ನಿಮಗುಪ
ಹತಿಯದೆಲ್ಲಿಯದೆಂದು ಮಾರ್ಕಂಡೇಯ ಮುನಿ ನುಡಿದ ೨

ಮಾನನಿಧಿ ಸಾವಿತ್ರಿಯೌಪಾ
ಖ್ಯಾನವನು ಕೇಳಿದನು ಚಿತ್ತ
ಗ್ಲಾನಿಯನು ಬೀಳ್ಕೊಟ್ಟನಮಳೋತ್ಸಾಹ ಭಾವದಲಿ
ಕಾನನಾನುಭವಕ್ಕೆ ಕಡೆಯಿ
ನ್ನೇನು ನಮಗೆನುತತುಳ ಹರುಷಾ
ನೂನ ಕುಂತೀತನಯರಿದ್ದರು ಪರ್ಣಶಾಲೆಯಲಿ ೩

ಹಿಂಗಿದವು ಹನ್ನೊಂದುವರೆ ವರು
ಷಂಗಳಟವೀ ತಟದೊಳಿರಲರು
ದಿಂಗಳೊಳಗೊಂದಾದುದಾಪತ್ತಾ ಮಹೀಶರಿಗೆ
ತುಂಗ ವಿಕ್ರಮನಾ ಮುನೀಶ್ವರ
ಸಂಗತಿಯ ಸೊಗಸಿನಲಿ ಬಹು ದಿವ
ಸಂಗಳನು ನೂಕಿದನು ನೃಪತಿ ಪಲಾಶ ಶಾಲೆಯಲಿ ೪

ವಿಮಲ ವಾನಪ್ರಸ್ಥ ಜನದಾ
ಶ್ರಮದೊಳಗೆ ಸಾರಂಗ ಮೃಗವಿಳೆ
ಯಮರನೌಪಾಸನವ ಸಾಧನದರಣಿಯನು ಕೊಂಡು
ಕಮಲಸಖನುದಯದಲಿ ಸಂಧ್ಯಾ
ರಮಣಿಯಭಿವಂದನೆಗೆ ಸನ್ಮುನಿ
ಸಮಿತಿ ಹಿಂಗಿದ ಹಿಂದೆ ಕೊಂಡೋಡಿತು ವನಾಂತರಕೆ ೫

ಎಲೆಲೆ ಮೃಗವರಣಿಯನು ವಂಚಿಸಿ
ಕಳೆದುದೋ ಕಾಳಾಯ್ತೆನುತ ತ
ಲ್ಲಣಿಸಿದಳು ನಿಜಪತಿಯು ಭಯದಲಿ ಮುನಿಯ ವಧುವಂದು
ಹೊಳೆಯ ಸಂಧ್ಯಾಸಾಧುಗಳು ಕಳ
ವಳಿಸಲಾ ದ್ವಿಜನರಿದು ಪಾರ್ಥಿವ
ರಿಳೆಯ ಬಿಟ್ಟಿರಲಾಯೆನುತ ಹರಿತಂದನಾಶ್ರಮಕೆ ೬

ಎಲೆ ಯುಧಿಷ್ಠಿರ ದೋಷವಿದು ನಿ
ನ್ನಳವಿಗೈದುವುದರಣಿಯನು ಮೃಗ
ವೆಳೆದುಕೊಂಡೀ ಹೊದರ ಹೊಕ್ಕುದು ಬಹಳ ಕಾನನದ
ಅಳಿದುದಸ್ವಾಧಾನವಿತರರ
ಹಳಿವಿಗಾನೊಳಗಾದೆನೆನೆ ಮುನಿ
ತಿಲಕನೌಪದ್ರುವವನರಿದವನೀಶ ಹೊರವಂಟ ೭

ಜಾಳಿಸಿದ ಹದವಿಲ್ಲು ಮುಮ್ಮೊನೆ
ಬೋಳೆಗಳ ನಿಡುಗುಂಡುಗಳ ಬಡಿ
ಕೋಲುಗಳನೆಕ್ಕಡವನುರು ಪಾರಿಯದ ಕುಪ್ಪಸವ
ಮೇಳವಿಸಿ ಹೊರವಂಟನವನೀ
ಪಾಲ ಬೇಂಟೆಗೆ ಮೃಗದ ಹೆಜ್ಜೆಯ
ಮೇಲೆ ಹೆಜ್ಜೆಯ ನಡೆಸುವನು ತನ್ನನುಜರೊಡಗೂಡಿ ೮

ತರಣಿಯನ್ವಯನಂದು ಮಾಯಾ
ಹರಿಣನನು ಬೆಂಬತ್ತಿ ವಿಹ್ವಲ
ಕರಣನಾದಂದದಲಿ ಮಹದಾರಣ್ಯ ವಾಸದಲಿ
ಧರಣಿಪತಿ ಬಳಿಸಲಿಸಿ ಮುನಿಪತಿ
ಯರಣಿಯನು ಕೊಂಡೊಯ್ದ ಹುಲು ಮೃಗ
ಸರಣಿಯಲಿ ಸೈವರಿದರಂದಾಕರ್ಣ ಮಾರ್ಗಣರು ೯

ಇರುಬಿನೊಳಗದೆ ಕುತ್ತು ಹೆಮ್ಮರ
ದುರುಗಳೊಳಗದೆ ತೊಡಚು ಬಾಣವ
ನೆರಗಿ ತಿವಿ ತೋಡಿಟ್ಟೆಯಲಿ ಸಿಡಿವಲೆಯವೊಡ್ಡೆನುತ
ಅರಸಿದರು ನಟ್ಟಡವಿಯಲಿ ಮುಂ
ದುರುಬಿದರು ಬೆಳ್ಮಾರ ಬಲೆಗಳ
ಹರಹಿ ಸೊಪ್ಪಿನ ತೋಹಿನಲಿ ಸಿಲುಕಿಸಿದರಾ ಮೃಗವ ೧೦

ಕೇಳು ಜನಮೇಜಯ ಹಿಮಾಂಶು ವಿ
ಶಾಲ ವಂಶಜರಡವಿಯಲಿ ಮುನಿ
ಪಾಲನರಣಿಯನೊಯ್ದ ಮೃಗವನು ಹಿಡಿವರೊಳಬಿದ್ದು
ಮೇಲೆ ತೋರಿತು ಥಗೆ ಮಹೀಶರ
ತಾಳಿಗೆಗಳೊಣಗಿದವು ಬಳಲಿಕೆ
ಯೇಳಿಗೆಯಲಾಸನ್ನ ಲತೆಯಿರುಬಿನಲಿ ಮಲಗಿದರು ೧೧

ದೂರವಾದುದು ನಿಳಯವೀ ಕಾಂ
ತಾರ ನಿರ್ಜಲವೈದಲಂಘ್ರಿಗೆ
ಭಾರ ಪಥವಿನ್ನೇನು ಹದನೆಂದರಸನಳವಳಿದು
ನೀರ ತಾರೈ ಹೋಗು ನಕುಲ ಸ
ರೋರುಹದ ಪತ್ರದಲಿ ಪೊಟ್ಟಣ
ವಾರಿಯನು ಕಟ್ಟೆಂದು ಕುಂತೀಸೂನು ನೇಮಿಸಿದ ೧೨

ಬಗೆದನೇ ಬಳಲಿಕೆಯನತಿ ಸಹ
ಸಿಗಳ ದೇವನು ಹಿರಿಯನಾಜ್ಞೆಯ
ನುಗುಳಲಮ್ಮದೆ ಧನುವ ಕೊಂಡನು ನಡೆದನತಿ ಪಥವ
ದೃಗುಮನೋ ಮಂಜುಳದ ಕಂಜಾ
ಳಿಗಳ ಕಡು ಪರಿಮಳದ ಪಸರದ
ಸೊಗಸು ತೀವಿತು ವಿಮಳ ಪದ್ಮಾಕರದ ಪವಮಾನ ೧೩

ಹಿತವನೈ ಹಿರಿಯಯ್ಯನೆನಗೆಂ
ದತುಳಬಲ ಪರಿತೋಷದಲಿಮಾ
ರುತನ ಬಳಿವಿಡಿದೈದಿದನು ನಕುಲಾಂಕನಾ ಕೊಳನ
ಹತಿಯಹುದು ನಿನಗೊಮ್ಮೆ ತಪ್ಪದು
ಹಿತವು ಬಳಿಕೆಂಬಂತೆ ಖಗ ಸಂ
ತತಿಗಳುಲಿದೊಪ್ಪಿದವು ಪದ್ಮಾಕರದ ತೀರದಲಿ ೧೪

ಇರವಿನಲಿ ರಚನೆಯಲಿ ಮಧುರೋ
ತ್ತರವ ನೆರೆ ಬೀರುತ್ತಲಂತಃ
ಕರಣದಲಿ ಕತ್ತರಿಸಿ ಕೊಂಡಿಹ ಕುಜನರಂದದಲಿ
ಪರಿಮಳದ ಪಸರದಲಿ ಶೈತ್ಯೋ
ತ್ಕರುಷದಲಿ ಲೇಸೆನಿಸಿ ಕುಡಿದೊಡೆ
ಹರಣವನೆ ಹಿಂಗಿಸುವ ಸರಸಿಯ ವಾರಿ ಚೆಲುವಾಯ್ತು ೧೫

ಖಳನ ಸತ್ಯದವೊಲು ವಂಚಿಸಿ
ಗೆಲಿದುದಾತನ ಮನವ ಮಾಯೆಯ
ಚೆಲುವಿನಂತಿರೆ ಚದುರು ಕೆಡಿಸಿತು ತಿಳಿಯಲರಿದೆನಿಸಿ
ಲಲನೆಯರ ಹೃದಯದವೊಲೀಕ್ಷಿಸೆ
ನೆಲೆಯನೀಯದ ಕೃತಕ ಸರಸಿಯ
ಸುಲಭತೆಗೆ ಸಹದೇವನಣ್ಣನು ಸೋತು ನಡೆತಂದ ೧೬

ಇಳಿದು ಮೊನೆಮುಂಜೆರಗನಗ್ರಕೆ
ಬಲಿದು ಹೊಕ್ಕನು ಜಾನುದಘ್ನ
ಸ್ಥಳವನಂಜುಳಿಯಿಂದ ತೊಳೆದನು ಚರಣ ವದನವನು
ತುಳುಕಿದನು ವಾರಿಯನು ತನ್ನಯ
ಬಳಲಿಕೆಯಪಹರಿಸಿ ಭೂಪತಿ
ಗಳಿಗೆ ಬಳಿಕಾನೊಯ್ವೆನೆಂದನು ತನ್ನ ಮನದೊಳಗೆ ೧೭

ಜಲವನಂಜುಳಿಯಿಂದ ಮೊಗೆದೀಂ
ಟಲು ನೆನೆಯಲಭ್ರದಲಿ ಗುಹ್ಯಕ
ನುಲಿದನೆಲೆ ನಕುಲಾಂಕ ಮಾಣೆನಗುತ್ತರವ ರಚಿಸಿ
ಬಳಿಕ ಸಲಿಲವನೀಂಟು ಮಾತುಗ
ಳೊಳವು ಮರುಳಾಗದಿರೆನಲು ಥಗೆ
ಗಳುಕಿ ಬಳಲಿದು ಮೇಲೆಯಾಲಿಸಿ ಮಿಾರಿದನು ನುಡಿಯ ೧೮

ಜಡಿಯಲೆರಡಳ್ಳೆಗಳು ಕೊರಳಲಿ
ಕುಡಿದನದಕವನಬುಜದೆಲೆಯಲಿ
ಹಿಡಿದನನಿಬರಿಗಮಳ ಜಲವನು ಮರಳಿ ನಿಮಿಷದಲಿ
ತಡಿಯನಡರಿದು ಥೊಪ್ಪನವನಿಗೆ
ಕೆಡೆದು ಪರವಶನಾದನಿತ್ತಲು
ತಡೆದನೇಕೆಂದಟ್ಟಿದನು ಸಹದೇವನನು ನೃಪತಿ ೧೯

ತವಕ ಮಿಗೆ ನಡೆತಂದು ಮೈಮರೆ
ದವನ ಕಂಡನು ಬಹಳ ಥಗೆ ಪರಿ
ಭವಿಸಲುದಕವ ಕುಡಿದು ಬಳಿಕಾರೈವೆನಿದನೆನುತ
ಲವಲವಿಸಿ ತಾಳಿಗೆಯ ತಲ್ಲಣ
ದವನು ಹೊಕ್ಕನು ಕೊಳವನಮಳಾಂ (ಯಾಯ್ತು
ಬುವನು ಮೊಗೆದನು ಮೊಗಕೆ ಮೋಹಲು ಮೇಲೆ ದನಿ ೨೦

ಬಿಡು ಬಿಡೆಲೆ ಸಹದೇವಯೆನ್ನಯ
ನುಡಿಗೆ ಮಾರುತ್ತರವ ಕೊಡು ಮುಂ
ಗೆಡದೆ ಮುಂದಣ ನಿನ್ನವನ ಕಂಡಿಂತು ಮರುಳಹರೆ
ಮಡಿಯಲೆಳಸದಿರೆನಲು ಥಗೆಯವ
ಗಡಿಸೆ ಸೈರಿಸಲರಿಯದುತ್ತರ
ಗೊಡದೆ ಜಲವೀಂಟಿದನು ದಾಂಟಿದುದಸು ಕಳೇಬರವ ೨೧

ಈತನತಿ ಮೈಮೆರೆದನತ್ತಲು
ಕಾತರಿಸಿದನು ಭೂಪನಿಬ್ಬರ
ಮಾತು ಮುಖದಿರುಹಿತ್ತು ಶಿಶುಗಳಿಗಾವ ಹದನಾಯ್ತೊ
ತಾತ ಹೋಗೈ ಪಾರ್ಥ ಬಾಲಕ
ರೇತಕತ್ತಲೆ ತಡೆದರೆಂಬುದ
ನೀ ತಿಳಿದು ತಾ ಜಲವನೆನೆ ಕೈಗೊಂಡು ನಡೆತಂದ ೨೨

ಹಿಮದ ಗಾಳಿಯ ಪಥವಿಡಿದು ಮ
ಧ್ಯಮದ ಪಾಂಡವನೈತರುತ ಮುಂ
ದಮಲ ಸರಸಿಯ ತೀರದಲಿ ಕೀಲಿಸಿದ ಮಗ್ಗುಲಲಿ
ಯಮಳರೊರಗಿರೆ ಕಂಡು ಮನದಲಿ
ತಮವ ಹಿಡಿದನು ನೀರುಗುಡಿದೀ
ಮಮತೆ ಮಿಗಲಾರೈವೆನೆನುತಿಳಿದನು ಸರೋವರವ ೨೩

ಚರಣ ವದನವ ತೊಳೆದು ಥಗೆ ಡಾ
ವರಿಸಲಕ್ಷಮನಾಗಿ ಕರದಲಿ
ತೆರೆಗಳನು ತೆಗೆನೂಕಿ ಮೊಗೆದನು ಗರಳಮಯ ಜಲವ
ಮರುಳೆ ನೀ ಕೌಂತೇಯ ಮಾದ್ರೇ
ಯರನು ನೋಡುವುದಿತ್ತ ನನಗು
ತ್ತರವನಿತ್ತುದಕವನು ಕುಡಿಯೆಂದುದು ನಭೋವಚನ ೨೪

ಮೇಲೆಯಾರೈವನೆ ಸುತೃಷ್ಣಾ
ಲೋಲಚಿತ್ತನು ಕಾಮಿ ಮೃಗಯಾ
ಕೇಳಿ ಲಂಪಟನರ್ಥ ಲಾಭ ದ್ಯೂತಲೋಲುಪನು
ಕೇಳು ಜನಮೇಜಯ ತಟಾಕದ
ಕಾಳಕೂಟವ ಕುಡಿದನರ್ಜುನ
ಕಾಲಿಡುತ ಡೆಂಡಣಿಸಿ ಮೈಮರೆದವರ ಕೂಡಿದನು ೨೫

ತಡೆದರತ್ತಲು ಮೂವರನುಜರು
ಮಡಿದರೇನೋ ಚಿತ್ರವಾಯಿತು
ನಡೆ ಸಮೀರಕುಮಾರ ನೀ ಹೋಗತ್ತ ತಳುವದಿರು
ತಡೆಯದೈತಹುದೆನೆ ಹಸಾದವ
ನುಡಿಯನಾನುತ್ಸೈದಿ ಹೆಜ್ಜೆಯ
ಹಿಡಿದು ಬಳಿ ಸಲಿಸಿದನು ಬರೆ ಬರೆ ಕಂಡನದ್ಭುತವ ೨೬

ದಟ್ಟುಗೆಡೆದಸುಗಳೆದ ತನ್ನೊಡ
ಹುಟ್ಟಿದರನೀಕ್ಷಿಸಿದನುಸುರಿನ
ಬಟ್ಟೆಯನು ನೋಡಿದನು ಮೂಗಿನ ಬಳಿಯ ಬೆರಳಿಟ್ಟು
ಮುಟ್ಟಿತಿವರಿಗೆ ಮರಣವಿನ್ನೇ
ನಟ್ಟಿ ಕೊಲುವೆನು ಜವನ ಮೃತ್ಯುವ
ನಿಟ್ಟೆಲುವನುದುರಿಸುವೆನೆನುತೊದರಿದನು ಕಲಿಭೀಮ ೨೭

ಮನ್ನಣೆಗೆ ಹಿರಿಯಯ್ಯನೆಂದಾ
ನಿನ್ನು ಬಗೆವೆನೆ ಜವನ ಗಂಟಲ
ಮುನ್ನ ತಿರುಹುವೆನೆನುತ ಕಿಡಿಕಿಡಿಯೋದನಾ ಭೀಮ
ಇನ್ನೊದರಿ ಫಲವೇನು ಕಡಿವೆನು
ಮುನ್ನ ಜಲವನು ಬಳಿಕ ನೋಡುವೆ
ನೆನ್ನವರ ಮಾರ್ಗವನೆನುತ ಮೊಗೆದನು ವಿಷೋದಕವ ೨೮

ಮಾಣು ಮಾಣುತ್ತರವ ಕೊಡು ಮುಂ
ಗಾಣಬೇಹುದು ತಂದೆ ತನಗೀ
ಕ್ಷೋಣಿಯಲಿ ಪೂರ್ವದ ಪರಿಗ್ರಹವೀ ಸರೋವರವು
ಜಾಣನಾದೊಡೆ ಜಾರಬಿಡು ಬಿಡು
ಕೇಣವನು ನೀನೆನಲು ಗಗನದ
ವಾಣಿಯನು ಮನ್ನಿಸದೆ ಮಾರುತಿಯೀಂಟಿದನು ಜಲವ ೨೯

ದಡದಡಿಸಿ ಕೊಳನಿಂದ ಹೊರಗಡಿ
ಯಿಡುತ ಬಳಲಿದನನಿಲ ಸುತನವ
ರೊಡನೆ ಮೈಯಿಕ್ಕಿದನು ಕಳಚಿದ ನೀಲ ಗಿರಿಯಂತೆ
ಅಡಿಗೆಡೆದನಾ ಭೀಮನಿತ್ತಲು
ಕಡು ನಿರೋಧವ ಹಿಡಿದು ತಾನೇ
ನಡೆದು ಬಂದನು ಧರ್ಮಸುತನಾ ಕೊಳನ ಪಥವಿಡಿದು ೩೦

ಮೇಲೆ ಮಗುಳ್ದಾಲಿಗಳ ಚಾಚಿದ
ತೋಳ ಮೇಲಿನ ತಲೆಯ ಸುಯ್ಲಿನ
ಲೀಲೆಯಡಗಿದ ಮುಖದ ಮಸುಳಿದ ಕಾಯಕಾಂತಿಗಳ
ಮೇಲು ಮುಸುಕಿನ ಮಗ್ಗುಲಿನಲಿಹ
ನಾಲುವರನೀಕ್ಷಿಸುತ ಭೂಪತಿ (ಚಿತ್ತದಲಿ
ಕೋಲು ಮರುಮೊನೆಗೊಂಡವೋಲ್ ಮರುಗಿದನು ೩೧

ಮುಸುಕನರೆದೆರೆದವರ ಮೊಗ
ದುಸುರುಗಳನಾಲಿಸಿದನಕಟಾ
ಶಿಶುಗಳಿಗೆ ಕಡು ಹಾನಿಯಾಯಿತೆ ಶಿವ ಮಹಾದೇವ
ನಿಶಿತಶಸ್ತ್ರದ ಗಾಯವಿಲ್ಲು
ಬ್ಬಸದ ಸಾವಿನ್ನಾವುದೋ ನಾ
ನಸುಗಳೆಯದೇಕುಳಿದೆನೆಂದಳಲಿದನು ಯಮಸೂನು ೩೨

ಇಂದಿನಲಿ ಕಡೆಯಾಯ್ತಲಾ ವಿಮ
ಳೇಂದುವಂಶಕೆ ಕೌರವನ ಛಲ
ಸಂದುದಿನ್ನಹಿತಾವನೀಶರಿಗಾಯ್ತು ಪರಿತೋಷ
ಕೊಂದರಾರಕಟಕಟನುತ್ತರ
ವಿಂದನಾಭನ ಕೃಪೆಗೆ ಬಾಹಿರ
ನಿಂದು ತಾನಾದೆನೆ ಮಹಾದೇವೆಂದು ಬಿಸುಸುಯ್ದು ೩೩

ಹೋಗಲಿನ್ನೀ ನೀರುಗುಡಿದಿವ
ರಾಗು ಹೋಗರಸುವೆನೆನುತ ಥಗೆ
ತಾಗಿದವನಿಪನಿಳಿದು ಹೊಕ್ಕನು ವಿಷ ಸರೋವರವ
ಬಾಗಿ ಮೊಗೆದನು ಜಲವನಭ್ರದೊ
ಳಾಗಲಾದುದು ರಭಸವೆಲೆ ಸಕ
ಳಾಗಮಜ್ಞ ಮಹೀಶ ಕೇಳೆಂದುದು ನಭೋನಿನದ ೩೪

ಅನುಜರವಿವೇಕಿಗಳು ಪರಿಣತ
ಜನದಲಧಿಕನು ನೀ ನಿಧಾನಿಸಿ
ನನಗೆ ಮಾರುತ್ತರವನಿತ್ತು ನಿರಂತರಾಯದಲಿ
ತನುವಿಗಾಪ್ಯಾಯನವ ಮಾಡುವು
ದೆನಲು ಕೇಳಿದು ಥಗೆಯ ಸೈರಿಸಿ
ಘನ ಪಥದ ನುಡಿ ಯಾರದೆಂದವನೀಶನಾಲಿಸಿದ ೩೫

ಬಿಸುಟನುದಕವನಾ ನುಡಿಯನಾ
ಲಿಸಿದನಾರೈ ನೀನು ನಿನಗಾ
ಗಸದಲಿರವೇನಸುರನೋ ಕಿನ್ನರನೊ ನಿರ್ಜರನೊ
ಉಸುರೆನಲು ತಾ ಯಕ್ಷನೀ ಸಾ
ರಸವು ನನ್ನದು ನಿನ್ನ ತಮ್ಮದಿ
ರಸುವನೆಳೆದವ ನಾನು ಕೇಳೈ ಧರ್ಮಸುತಯೆಂದ ೩೬

ಬಾಲಕರು ನೀವೆನ್ನ ಮಾತನು
ಕೇಳಿ ಉದಕವ ಕುಡಿವುದೆನೆ ಭೂ
ಪಾಲ ನಿನ್ನವರೆನ್ನ ಮಾತನು ಕೇಳಿ ಮನ್ನಿಸದೆ
ಮೇಲುಗಾಣದೆ ನೀರು ಕುಡಿದು ವಿ
ತಾಳಿಸಿದರಿಂದೆನ್ನ ಮಾತನು
ಕೇಳಿ ನೀನುತ್ತರವ ರಚಿಸೆನೆ ನೃಪತಿ ಹೇಳೆಂದ ೩೭

ಜಲನಿಧಿಗೆ ಸರಿ ಸರಸಿ ಯಾವುದು
ನೆಲಕೆ ಹಿತವನದಾರು ಮರ್ತ್ಯಾ
ವಳಿಗೆ ಮಾತೆಯದಾರು ಸೂರ್ಯಪ್ರಭೆಗೆ ಸರಿಯೇನು
ತಿಳುಹು ಧರ್ಮಜ ಸಕಲ ಧರ್ಮಾ
ವಳಿಯ ಸಾರವನೆನಲು ಯಕ್ಷನ
ಬಲುಮೆಗವನೀಪಾಲನತಿ ಪರಿತೋಷದಲಿ ನುಡಿದ ೩೮

ಗಗನವಬುಧಿಗೆ ಸರಿ ಸರೋವರ
ಜಗಕೆ ಹಿತವನು ಶಕ್ರ ಮನುಜಾ
ದಿಗಳ ಮಾತಾರೂಪು ಗೋವುಗಳಿದು ನಿಧಾನ ಮತ
ಬಗೆಯಲಗ್ಗದ ಸತ್ಯವೆಂಬುದು
ಗಗನಮಣಿಗೆಣೆಯೆನಲು ಚಿತ್ತಕೆ
ಸೊಗಸಿ ತಲೆದೂಗಿದನು ಮಗುಳಿಂತೆಂದನಾ ಖಚರ ೩೯

ನಯವಿದನೆ ಕೇಳಾವನೈ ಕ್ಷ
ತ್ರಿಯನು ವಿಪ್ರರೊಳಾವನೈ ಶ್ರೋ
ತ್ರಿಯನು ಸುಜನರೊಳಾವನೈ ಮಹಾಪುರುಷನೆಂಬವನು
ನಿಯತ ಧೀಮನದಾರು ದೇವ
ಪ್ರಿಯನದಾವನು ಕಠಿಣ ಕಷ್ಟಾ
ಶ್ರಯನದಾವನು ಧರ್ಮಸುತ ಹೇಳೆಂದನಾ ಖಚರ ೪೦

ಧೃತಿಯುತ ಕ್ಷತ್ರಿಯನು ವೇದ
ಪ್ರತಿಯುತ ಶ್ರೋತ್ರಿಯನಹಿಂಸಾ
ರತನು ಮಹಪುರುಷನು ಸುಧೀಮನು ಸಾಧುಸೇವಕನು
ಸತತ ಪರರುಪಕಾರಿ ದೇವ
ಪ್ರತತಿ ಪ್ರೀಯನು ಪರರ ಗುಣದು
ನ್ನತಿಯ ಸೈರಿಸದವನು ಕಷ್ಟನು ಯಕ್ಷ ಕೇಳೆಂದ ೪೧

ನಿಂದ್ಯನಾವನು ಲೋಕದೊಳಗಭಿ
ವಂದ್ಯನಾವನು ಜೀವವಿರೆ ಮೃತ
ನೆಂದಡಾವನು ದೇಶ ಕಳಿವಹುದಾರ ದೆಸೆಯಿಂದ
ಸಂದ ಯಜ್ಞವದೆಂತು ಕೆಡುವುದು
ತಂದೆ ಹೇಳೈ ತನಗೆನಲು ಸಾ
ನಂದದಿಂದವ ಕಾಣಿಸಿದನಾ ಖಚರಗುತ್ತರವ ೪೨

ಕೇಳು ಪರನಿಂದಕನೆ ನಿಂದ್ಯನು
ಹೇಳಲೇಂ ಪರಹಿತನೆ ವಂದ್ಯನು
ಹೇಳಿದಿಚ್ಛೆಗೆ ನಡೆವ ನೃಪನಿಂದಳಿವುದಾ ದೇಶ
ಕೇಳು ನಡೆವೆಣನೇ ದರಿದ್ರನು
ಸಾಲದೆನಿಸಿದ ದಕ್ಷಿಣೆಯ ಯ
ಜ್ಞಾಳಿ ನಿಷ್ಫಲವೆಂದು ನುಡಿದನು ರಾಯಕೌಂತೇಯ ೪೩

ನರಕಿ ಯಾವನು ಸುಜನರಲಿ ಬಾ
ಹಿರನದಾವನು ಲೋಕವರಿಯಲು
ಹರಣವಿರೆ ಹೊಂದಿದನದಾವನು ಭೂಮಿಪಾಲರಲಿ
ಮರುಳದಾವನು ಮಾನ ಭಂಗದಿ
ಭರಿತನಾವನು ಹೇಳು ಧರ್ಮಜ
ಸರಸಿಯಲಿ ಬಳಿಕುದಕವನು ಕುಡಿಯೆಂದನಾ ಖಚರ ೪೪

ಎನೆ ಕೃತಘ್ನನೆ ನರಕಿ ವಿದ್ಯಾ
ಧನ ಮದಾಂಧನೆ ಬಾಹಿರನು ಹೊ
ಕ್ಕನುಪರವ ಹಿಂಗುವ ಮಹೀಪತಿ ಜೀವವಿರೆ ಮೃತನು
ವಿನುತ ಗುರುವರಿಯದನೆ ಮರುಳಂ
ಗನೆಯರಲಿ ವಿಶ್ವಾಸಪರನೇ
ಜನವರಿಯಲಭಿಮಾನ ಹೀನನು ಯಕ್ಷ ಕೇಳೆಂದ ೪೫

ಒಲಿದನೊಡಲಸು ಧರ್ಮಸಂಗತಿ
ಗಳ ಸುಸಂವಾದದಲಿ ನಿಜತನು
ಪುಳಕವುಬ್ಬರಿಸಿದುದು ಗಬ್ಬರಿಸಿದುದು ದುಷ್ಕೃತವ
ಎಲೆ ಮಹೀಪತಿ ಮೆಚ್ಚಿದೆನು ಬೇ
ಡೆಳಿದ ತಮ್ಮಂದಿರಲಿವೊಬ್ಬನ
ತಲೆಯ ಬದುಕಿಸಿ ಕೊಡುವೆನೆನೆ ಯಮತನುಜನಿಂತೆಂದ ೪೬

ಅಸುವನಿತ್ತೈ ಖಚರಪತಿ ಜೀ
ವಿಸಲಿ ನಕುಲನು ಧನ್ಯ ನಾನೆನೆ
ನಸುನಗುತ ಚೇತರಿಸಿ ನ್ಮೈ ಮುರಿದೆದ್ದನಾ ನಕುಲ
ನಿಶಿತಮತಿ ಮೆಚ್ಚಿದೆನು ಬೇಡಿ
ನ್ನಸುವನೊಬ್ಬಂಗಿತ್ತೆನೆನೆ ಜೀ
ವಿಸಲಿ ಸಹದೇವಾಂಕನೆಂದನು ಧರ್ಮನಂದನನು ೪೭

ಜನಪ ನಿನ್ನಾಳಾಪವೆನ್ನಯ
ಮನಕೆ ವಿಸ್ಮಯವಾಯ್ತು ಭೀಮಾ
ರ್ಜುನರು ನಿನ್ನೊಡಹುಟ್ಟಿದರು ನೀನವರಿಗತಿ ಹಿತನು
ಅನುಜರವರಿರಲೇಕೆ ಮಾದ್ರೀ
ತನುಜರೆಂಬರ ಬಯಸಿದೈ ಹೇ
ಳೆನಲು ನಸುನಗೆ ಮೊಳೆಯ ನುಡಿದನು ಧರ್ಮನಂದನನು ೪೮

ಸಾವು ಬೊಪ್ಪಂಗಾಗೆ ಮಾದ್ರೀ
ದೇವಿ ತನ್ನನು ಕರೆದು ಶಿಶುಗಳ
ನೋವು ಕೇಡಿದು ನಿನ್ನದಾರೈದಿವರ ಸಲಹುವುದು
ಭಾವ ಭೇದವನಣುವ ಬಗೆಯದೆ
ಕಾವುದೆಲೆ ಮಗನೆಂದು ಬೆಸಸಿದ
ಳಾವ ಪರಿಯಲಿ ಮರೆವೆನೈ ಮಾದ್ರೀಕುಮಾರಕರ ೪೯

ಎನಲು ಮೆಚ್ಚಿದನುಳಿದ ಭೀಮಾ
ರ್ಜುನರ ಹರಣವನಿತ್ತು ನಿಜ ನಂ
ದನನಪ್ಪಿದನೊಲವಿನಲಿ ಯಮರಾಜನೈತಂದು
ತನುಜ ಸಾಕಿನ್ನಾಯ್ತು ನಿಮಗೀ
ವನನಿವಾಸವು ಬೀಳುಗೊಡು ಮುನಿ
ಜನವನಿನ್ನಜ್ಞಾತ ವಾಸಕೆ ಮನವ ಮಾಡೆಂದ ೫೦

ನೀವು ಪಾಂಡವರೆಂದು ನಿಮ್ಮನ
ದಾವ ಮಾನವರರಿಯದಿರಲಿ ಮ
ಹಾ ವಿಭವದಲಿ ಬೆಳಗುವುದು ಬಳಿಕವನಿ ಮಂಡಲವ
ದೈವಬಲ ನಿಮಗುಂಟು ಮೇಣಿ
ನ್ನಾವುದರಿದಲ್ಲೆಂದು ತನುಜನ
ನೋವಿ ಮನ್ನಿಸಿ ಬೀಳುಗೊಟ್ಟನು ಪಾಂಡುನಂದನರ ೫೧

ಅರಣಿಯನು ತಂದಿತ್ತು ಧರಣೀ
ಸುರನ ಮನ್ನಿಸಿ ಮುನಿಗಳನು ಭೂ
ಸುರರ ಸಚಿವರ ಪರಿಕರರ ಧೌಮ್ಯಾದಿ ಮಂತ್ರಿಗಳ
ವರ ಸುಭದ್ರಾದೇವಿ ಪಾಂಚಾ
ಲರನು ಧೃಷ್ಟದ್ಯುಮ್ನ ಮೊದಲಾ
ಗಿರೆ ನಿಜಾಪ್ತರನವರ ಮಂದಿರಕೆ ಕಳುಹಿದನು ೫೨

ಹರಿ ನಮೋ ಜಯ ಭಕ್ತರಘು ಸಂ
ಹರ ನಮೋ ಜಯ ಸಕಲ ಭುವನೇ
ಶ್ವರ ನಮೋ ಜಯ ಕೃಷ್ಣ ಕೇಶವ ವಿಷ್ಣು ವಾಮನನೆ
ಪರಮ ಪುಣ್ಯಶ್ಲೋಕ ಜಯ ಜಗ
ಭರಿತ ನಿರ್ಮಳ ರೂಪ ಜಯ ಜಯ
ಕರುಣಿ ರಕ್ಷಿಸು ರಾಯ ಗದುಗಿನ ವೀರನಾರಯಣ ೫೩

ಇತಿ ಶ್ರೀಮದಚಿಂತ್ಯ ಮಹಿಮ ಗದುಗಿನ ವೀರನಾರಾಯಣ ಚರಣಾರವಿಂದ
ಮಕರಂದ ಮಧುಪಾನ ಪರಿಪುಷ್ಟ ವಚಃ ಪಟ್ಪದೀ ನಿಕಾಯ
ಶ್ರೀಮತ್ಕುಮಾರವ್ಯಾಸ ಯೋಗೀಂದ್ರ ವಿರಚಿತಮಪ್ಪ
ಕರ್ಣಾಟ ಭಾರತ ಕಥಾಮಂಜರಿಯೊಳ್
ಅರಣ್ಯಪರ್ವಂ ಸಮಾಪ್ತಮಾದುದು

# ವಿ ರಾ ಟ ಪ ರ್ವ

## ಮೊದಲನೆಯ ಸಂಧಿ

ಸೂ. ಕಾಯಿದರು ಸತ್ಯವನು ವನವಾ
ಸಾಯತವ ನೆರೆ ಗೆಲಿದು ಪಾಂಡವ
ರಾಯರೋಲೈಸಿದರು ಬಂದು ವಿರಾಟ ನಗರಿಯಲಿ

ಕೇಳು ಜನಮೇಜಯ ಧರಿತ್ರೀ
ಪಾಲ ಮುನಿಜನ ನೃಪಜನಂಗಳ
ಬೀಳುಗೊಟ್ಟನು ಭೂಮಿಪತಿ ಬಲವಂದು ಹುತವಹನ
ಮೇಲು ಶಕುನದ ಚಾರು ನಿನದವ
ನಾಲಿಸುತ ಸೋದರರು ಸಹಿತ ವ
ನಾಲಯವ ಹೊರವಂಟು ಸಾರಿದರೊಂದು ವಟಕುಜವ ೧

ಬಂದು ವಟಕುಜದಡಿಯಲನಿಬರು
ನಿಂದು ದುರುಪದಿ ಸಹಿತ ಬಳಲಿಕೆ
ಯಿಂದ ವಿಶ್ರಮಿಸಿದರು ಚಿಂತಿಸಿ ಧರ್ಮನಂದನನು
ಹಿಂದೆ ಹನ್ನೆರಡಬುದ ಸವೆದವು
ಮುಂದಣನುವಿಂಗೇನು ಗತಿ ಬಳಿ
ಕೊಂದು ವರುಷಜ್ಞಾತವಾಸಕ್ಕಾವ ಠಾವೆಂದ ೨

ಬಡಗಲವರದು ಮೂಡಣರಸುಗ
ಳೊಡೆ ಗೆಣೆಯರಾಗಿಹರು ತೆಂಕಣ
ಕಡೆಯವರು ಕಂಡಿಹರು ಕೆಲ ಬಲದವರು ಕೊಂಡೆಯರು
ಪಡುವಣವರತಿ ಕೃಶರು ನಾವಿ
ನ್ನಡಗಿರಲು ತೆರನಾವುದೆಂದೆನೆ
ನುಡಿದನರ್ಜುನ ದೇವನವನೀಪತಿಗೆ ವಿನಯದಲಿ ೩

ವಳಿತವನು ಹೊಕ್ಕಿರಿದು ಕೌರವ
ರೊಳಗೆ ಹಗೆಯಾಗಿಹನು ಕೀಚಕ
ಬಲ ವಿರಾಟನಿಗವನ ದೆಸೆಯಿಂ ಭಯ ವಿಹೀನವದು
ಮುಳಿದು ಹೇಳಿಕೆಯಾದ ರವಿಸುತ
ಕಲಿ ತ್ರಿಗರ್ತಾದಿಗಳೆನಿಪ ಮಂ
ಡಳಿಕರನು ಕೈಕೊಳ್ಳದಾಳುವರವರು ಪಶ್ಚಿಮವ ೪

ನೃಪತಿ ನಿಶ್ಚೈಸಿದನು ಮತ್ಸ್ಯಾ
ಧಿಪನ ನಗರಿಯೊಳಲ್ಲಿ ಸೈರಿಸಿ
ಕೃಪಣತನದಲಿ ನೂಕಬೇಹುದು ನುಡಿದ ವತ್ಸರವ
ಗುಪಿತವೆಂತಳವಡುವುದಾಶ್ರಯ
ದಪದೆಸೆಯನೆಂತಾನುವಿರಿ ನಿ
ಷ್ಕೃಪೆಯೊಳೆಂತಾನೆಂಬೆನೆಂದನು ಧರ್ಮನಂದನನು ೫

ದೇವ ನಿಮ್ಮಯ ಮತವೆ ಮತವೆಮ
ಗಾವ ವೇಷದ ವಿವರ ನಿಮಗದ
ನೀವು ಬೆಸಸುವುದೆಂದು ಭೀಮಾರ್ಜುನರು ಬಿನ್ನವಿಸೆ
ನಾವು ಭೂಸುರ ವೇಷದಲಿ ಸಂ
ಭಾವಿತರು ಮತ್ತಲ್ಲಿ ಸನ್ಯಾ
ಸಾವಲಂಬನ ಕಂಕನೆಂಬಭಿಧಾನ ತನಗೆಂದ ೬

ವಲಲನೆಂಬಭಿಧಾನದಲಿ ನೃಪ
ನಿಳಯವನು ಸಾರುವೆನು ತಾನೆಂ
ದುಲಿಯೆ ಮಾರುತಿ ನುಡಿದ ವರ ನಾಟ್ಯವಿದ ವೇಷವನು
ಫಲುಗುಣನು ಹಯ ಗೋ ನಿವಾಸ
ಸ್ಥಳ ವಿಳಾಸಿತರೆನಲು ಯಮಳರು
ಲಲನೆ ಬಿನ್ನಹ ಮಾಡಿದಳು ಸೈರಂಧ್ರಿ ವೇಷವನು ೭

ತೊಳಲಿದಿರಿ ಹನ್ನೆರಡು ವರುಷವು
ಹಳುವದಲಿ ಸೊಂಪಡಗಿ ಪರರೊಡ
ನುಳಿಗೆಲಸದೋಲಗವಿದೆಂತೈ ಸಾರ್ವಭೌಮರಿಗೆ
ಬಳಲಿದಿರಿ ಹಿರಿದಾಗಿ ನಿಮ್ಮವ
ನಳಲಿಸಿದೆನೆನ್ನಿಂದ ಪಾಪಿಗ
ಳೊಳರೆ ಭುವನದೊಳೆಂದು ಕುಂತೀಸೂನು ಬಿಸುಸುಯ್ದ ೮

ಒಡಲ ಬಳಿ ನೆಳಲಿಂಗೆ ಗತಿ ಬೇ
ರ್ಪಡಿಸಿಹುದೆ ಸುಖದುಃಖವಿವು ನಿ
ಮ್ಮಡಿಗಳಲಿ ತನು ನಾಲ್ಕರಲಿ ಜೀವಾತ್ಮ ನೀವೆಮಗೆ
ಅಡವಿಯೇ ಸಾಮ್ರಾಜ್ಯ ನಿಮ್ಮಡಿ
ಯೊಡನಿರಲು ನೀವಿಲ್ಲದಾ ಪುರ
ವಡವಿ ನಮಗಹುದೆಂದು ಬಿನ್ನವಿಸಿದರು ಭೂಪತಿಗೆ ೯

ತುಷ್ಟನಾದನು ನೃಪತಿ ಕೃತ ಪರಿ
ಶಿಷ್ಟಪಾಲನು ಜಗದೊಳತ್ಯು
ತ್ಕೃಷ್ಟ ಚರಿತನು ತೆಂಕ ದೆಸೆಗೆ ಸಹೋದರರು ಸಹಿತ
ದುಷ್ಟ ಮೃಗಗಳ ಬೇಂಟೆಯಾಡಿ ವ
ಸಿಷ್ಠ ಮುನಿಯಾಶ್ರಮದ ಸುಜನರ
ರಿಷ್ಟವನು ಪರಿಹರಿಸುತೈತಂದನು ಸರಾಗದಲಿ ೧೦

ಕಾಳಿ ಪರಮ.ಕರಾಳಿ ಸುರಮುನಿ
ಮೌಳಿಮಂಡಿತ ಚರಣೆ ಖಳ ದನು
ಜಾಳಿ ಮರ್ದಿನಿ ಘನ ಕಪರ್ದಿ ಪರಾರ್ಧ ತನುಯುತಳೆ
ಶೂಲ ಪರಶು ಪರಶ್ವಧಾದಿಗ
ಳಾಳುತೊಪ್ಪುವ ಕರಚತುಷ್ಟಯೆ
ಪಾಲಿಸೆಮ್ಮನೆನುತ್ತ ದುರ್ಗೆಯನಂದು ನುತಿಸಿದರು ೧೧

ಬಂದು ಮತ್ಸ್ಯ ಪುರೋಪಕಂಠದ
ನಂದನದ ಕೆಲಕಡೆಯಲನಿಬರು
ನಿಂದು ನಾಲುಕು ದೆಸೆಯನೀಕ್ಷಿಸಿ ನಿಜನಿವಾಸದಲಿ
ತಂದ ಚರ್ಮದಲಖಿಳ ಕೈದುವ
ನೊಂದು ಹೆಣನಾಕಾರದಲಿ ಬಿಗಿ
ದೊಂದು ಬನ್ನಿಯ ಮರನ ತುದಿಯಲಿ ಕಟ್ಟಲೇರಿದರು ೧೨

ತೆಗೆಯದಿರಿ ನೀವೆಂದು ತುರುಗಾ
ಹಿಗಳನಂಜಿಸಿ ಧರ್ಮಸುತ ದೃಗು
ಯುಗವ ಮುಚ್ಚಿ ಸುರೇಂದ್ರ ಯಮ ವರುಣಾದಿಗಳಿಗೆರಗಿ
ವಿಗಡನೀ ಕಲಿಭೀಮನೀ ಕೈ
ದುಗಳನೀತಂಗೀಯದಿರಿ ಕೈ
ಮುಗಿದು ಬೇಡಿದೆನೆಂದು ಸುರರಿಗೆ ನುಡಿದನವನೀಶ ೧೩

ಈವುದಾ ಬೇಡಿದರೆ ಪಾರ್ಥಂ
ಗೀವುದೀಯಜ್ಞಾತ ವಾಸದೊ
ಳೀ ವಿಗಡ ಭೀಮಂಗೆ ಕೊಡದಿರಿಯೆನಲು ಖತಿಗೊಂಡ
ನೀವು ಕುಂತಿಯ ಮಕ್ಕಳಾದಿರಿ
ನಾವು ದುರ್ಯೋಧನನವರು ತ
ಪ್ಪಾವುದಿದಕೆಂದನಿಲಸುತನೌಡೊತ್ತಿ ಗರ್ಜಿಸಿದ ೧೪

ಸುರನಿಕರ ಕಾದಿರಲಿ ಮೇಣೀ
ಧರಣಿ ಕೊಡೆನೆಂದಿರಲಿ ಹಸ್ತಿನ
ಪುರಿಗೆ ಧಾಳಿಯನಿಡುವೆನಮರರ ಮೋರೆಗಳ ತಿವಿದು
ಉರುತರಾಸ್ತ್ರವನೊಯ್ವೆನೆಂದ
ಬ್ಬರಿಸಿ ಮಾರುತಿ ನುಡಿಯೆ ತಮ್ಮನ
ಬರಸೆಳೆದು ಬಿಗಿಯಪ್ಪಿ ಮೈದಡವಿದನು ಭೂಪಾಲ ೧೫

ಅವಧಿಯೊಂದೇ ವರುಷವಿದರೊಳ
ಗೆವಗೆ ಸೈರಣೆಯುಂಟು ನೀ ಮುನಿ
ದವಗಡಿಸಿದೊಡೆ ಬಳಿಕ ಸೈರಿಸಲರಿಯೆ ಮನ ಮುಳಿದು
ಅವನಿಯಲಿ ಹನ್ನೆರಡು ವರುಷವು
ನವೆದುದುಂ ನಿಷ್ಫಲವಲಾ ಕೌ
ರವರಿಗತಿ ಲಾಗಹುದು ನೀನೇ ಬಲ್ಲೆ ಹೋಗೆಂದ ೧೬

ಹದುಳವಿಟ್ಟನು ಭೀಮನನು ನಿ
ರ್ಮದನು ಮತ್ಸ್ಯನ ಪುರಿಗೆ ಯತಿ ವೇ
ಷದಲಿ ಬಂದನು ಹೊನ್ನ ಸಾರಿಯ ಚೀಲ ಕಕ್ಷದಲಿ
ಇದಿರೊಳಾನತರಾಯ್ತು ಕಂಡವ
ರುದಿತ ತೇಜಃಪುಂಜದಲಿ ಸೊಂ
ಪೊದವಿ ಬರಲು ವಿರಾಟ ಕಾಣಿಸಿಕೊಂಡು ಬೆಸಗೊಂಡ ೧೭

ಇತ್ತ ಬಿಜಯಂಗೈಯಿ ಹಿರಿಯರಿ
ದೆತ್ತಣಿಂದೈತಂದಿರೈ ಅ
ತ್ಯುತ್ತಮದ ವೇಷದ ಮಹಾತ್ಮರ ಕಂಡು ಬದುಕಿದೆವು
ಇತ್ತಪೆವು ಬೇಡಿದುದ ನಾವೆನೆ
ಸುತ್ತಬಳಸೆವು ರಾಜಸೇವೆ ನಿ
ಮಿತ್ತ ಬಂದೆವು ಮುನ್ನಿನೋಲಗವಂತರಿಸಿತಾಗಿ ೧೮

ಕೆಟ್ಟುದಿಂದ್ರಪ್ರಸ್ಥ ಪಾಂಡವ
ರುಟ್ಟು ಹೋದರು ನಾರ ಸೀರೆಯ
ನಟ್ಟಡವಿ ಮನೆಯಾಯ್ತು ರಾಜಾನ್ವಯದ ರಾಯರಿಗೆ
ಬಿಟ್ಟರೆಮ್ಮನು ಜಠರ ಭರಣಕೆ
ನೆಟ್ಟನಾಶ್ರಯವಿಲ್ಲದಿರೆ ಕಂ
ಗೆಟ್ಟು ಬಂದೆವು ಕಂಕನೆಂಬಭಿಧಾನ ತನಗೆಂದ ೧೯

ಓಲಗಕೆ ಬಂದಖಿಳ ರಾಯರ
ಮೌಳಿಮೌಕ್ತಿಕಮಣಿ ಮಯೂಖ ನಿ
ವಾಳಿಯಲಿ ನೆರೆ ಮೆರೆವುದಾತನ ಪಾದಪದ್ಮಯುಗ
ಕಾಲಪಾವನನಾವ ಪರಿಯಲಿ
ಕೀಳು ಮಾಡದು ಧರ್ಮ ಪುತ್ರನ
ನಾಳುಗೊಂಡನು ಮತ್ಸ್ಯನೆಲೆ ಜನಮೇಜಯ ಕ್ಷಿತಿಪ ೨೦

ಆದುದೈ ನಿರ್ವಾಹ ಕಂಕಂ
ಗಾದುದಾ ಮತ್ಸ್ಯೇಶನಿಂದ ವಿ
ವಾದವಿಲ್ಲದೆ ಸೇವೆ ನಿಜವಾದಂತೆಯಿರುತಿರಲು
ಹೋದವಿತ್ತಲು ಕೆಲವು ದಿನ ತನ
ಗಾದ ಸಾಹಾಯ್ಯದಲಿ ರಿಪುಬಲ
ಭೇದಿ ಮಾರುತಿ ಬಂದು ಕಂಡನು ಮತ್ಸ್ಯಭೂಪತಿಯ ೨೧

ಏನು ಪರಿಣತೆ ನಿನಗೆ ಬಾಣಸಿ
ಯಾನು ಭೀಮನ ಮನೆಯವನು ಮ
ತ್ತೇನು ಭುಜಬಲವರಿವೆನಗ್ಗದ ಮಲ್ಲವಿದ್ಯೆಯಲಿ
ನೀನಧಿಕನೆಂದಾ ಸಮೀರನ
ಸೂನುವನು ಮನ್ನಿಸಿದನಿತ್ತಲು
ಮಾನನಿಧಿ ಮರುದಿವಸ ಹೊಕ್ಕನು ಪಾರ್ಥನಾ ಪೊಳಲ ೨೨

ಸುರಪನರಸಿಯ ಶಾಪದಲಿ ಸಿತ
ತುರಗನರೆವೆಣ್ಣಾಗಿ ಮತ್ಸ್ಯೇ
ಶ್ವರನ ಮಗಳಿಗೆ ನಾಟ್ಯವಿದ್ಯಾಭ್ಯಾಸ ಸಂಗದಲಿ
ಇರಲು ಯಮಳರು ತುರಗ ಗೋವ್ರಜ
ಭರಣರಾದರು ಬಳಿಕ ಪಾಂಡವ
ರರಸಿ ಸಾರಿದಳೊಲವಿನಲಿ ವೈರಾಟ ಪಟ್ಟಣವ ೨೩

ತರಣಿಗಂಜಿದಡಿಂದು ತಲೆಗಾ
ಯ್ದಿರಿಸಿದನೊ ಮರೆಯಾಗಿ ತಿಮಿರದ
ಹೊರಳಿಗಳನೆನೆ ಮುಡಿಗೆ ಮೋಹಿದ ವೇಣಿವಲ್ಲರಿಯ
ಹಿರಿದು ಸೈರಿಸಲಾರೆನೆಂದೊಡ
ನಿರಿಸಿದನೊ ಕೈರವವನೆನಲೆಂ
ದರರೆ ಕಂಗಳ ಢಾಳವೊಪ್ಪಿರೆ ಬಂದಳಬುಜಮುಖಿ ೨೪

ಮೊಲೆಯ ಮೇಲುದು ಜಾರೆ ಜಾರಿದ
ರಳಿಮನರು ಕಂಗಳಿನ ಮಿಂಚಿನ
ಹೊಳುಕಿನೆಡೆ ನಡೆಗೆಟ್ಟು ನಿಂದರು ಚಿತ್ತವಿಹ್ವಲರು
ತೆಳುವಸುರು ತಲೆದೋರೆ ತೋರಿದು
ದಲಗು ಮರು ಮೊನೆಯೆನುತ ವಿಟರಳ
ವಳಿಯೆ ನಡೆತರುತಿರ್ದಳಂಗನೆ ರಾಜ ವೀಧಿಯಲಿ ೨೫

ಎಲೆಲೆ ಮದನನ ಗಜವು ತೊತ್ತಳ
ದುಳಿದುದೋ ಕಾಮುಕರನೆನೆ ಗಾ
ವಳಿಯೊಳಗೆ ಗಾರಾಯ್ತು ಗರುವಿಕೆ ವಿಟ ವಿದೂಷಕರ
ಅಳುಕಿದರು ಮನುಮಥನ ಗರುಡಿಯ
ಬಲುವೆಗಾರರು ಬಂದಳಗ್ಗದ
ನಳಿನಮುಖಿ ಬಹುಜನದ ಮನಕಚ್ಚರಿಯನೊದವಿಸುತ ೨೬

ಜನದ ಜಾಣಕ್ಕಾಡಲಾ ಮೋ
ಹನ ಮಹಾಂಬುಧಿಯೊಳಗೆ ನೃಪನಂ
ಗನೆಯ ಭವನಕೆ ಬರಲು ಬೆರಗಾಯ್ತಖಿಳ ನಾರಿಯರು
ವನಿತೆ ಮಾನಿಸೆಯಲ್ಲ ಮನುಜರಿ
ಗಿನಿತು ರೂಪೆಲ್ಲಿಯದು ವಿಸ್ಮಯ
ವೆನುತ ಮನದೊಳಗಳುಕಿದರು ಮತ್ಸ್ಯೇಶನರಸಿಯರು ೨೭

ಬರವ ಕಂಡು ಸುದೇಷ್ಣೆ ಮನದಲಿ
ಹರುಷ ಮಿಗೆ ಹೊಂಗಿದಳು ಕರೆ ಕರೆ
ತರುಣಿಯಾರೆಂದಟ್ಟಿದಳು ಕೆಳದಿಯರನನಿಬರನು
ಸರಸಿಜಾಯತದಂದವನು ಮೋ
ಹರಿಸಿ ಮುಂಚುವ ಪರಿಮಳವನಂ
ದರಸಿ ಬೀರುತ ಬಂದು ಹೊಕ್ಕಳು ರಾಜ ಮಂದಿರವ ೨೮

ಕೆಳದಿಯರು ಕಾಣಿಸಿದರರಸನ
ಲಲನೆಯನು ಪರಿಯಂಕ ಪೀಠದ
ಕೆಲಕೆ ಕರೆದಳು ಕಮಲವದನೆಯನುಚಿತ ವಚನದಲಿ
ನಳಿನಮುಖಿ ನೀನಾರು ನಿನಗಾ
ರೊಳರು ರಮಣರು ಮಾಸಿಕೊಂಡಿಹ
ಮಲಿನ ವೃತ್ತಿಯಿದೇಕೆನುತ ಬೆಸಗೊಂಡಳಂಗನೆಯ ೨೯

ಅತುಳಬಲ ಗಂಧರ್ವರೈವರು
ಪತಿಗಳೆನಗುಂಟೆನ್ನ ಚಿತ್ತಕೆ
ಖತಿಯ ಮಾಡಿದರೊಂದು ವರುಷವು ಬಿಡುವೆನವರುಗಳ
ಸತತವಾ ಕುಂತೀಕುಮಾರರ
ಸತಿಯರೋಲೈಸಿದ್ದೆ ಬಳಿಕವ
ರತಿ ಗಹನ ವನನಿಷ್ಕರಾದರು ತನಗೆ ಬರವಾಯ್ತು ೩೦

ಏನ ಮಾಡಲು ಬಲ್ಲೆಯೆಂದರೆ
ಮಾನಿನಿಯ ಸಿರಿಮುಡಿಯ ಕಟ್ಟುವ
ಸೂನ ಮುಡಿಸುವ ವರ ಕಟಾಕ್ಷಕೆ ಕಾಡಿಗೆಯನಿಡುವ
ಏನ ಹೇಳಿದ ಮಾಡಬಲ್ಲೆನು
ಸಾನುರಾಗದೊಳೆಂದೆನಲು ವರ
ಮಾನಿನಿಯ ನಸುನಗುತ ನುಡಿಸಿದಳೆಂದು ವಿನಯದಲಿ ೩೧

ಎನಲು ಮೆಚ್ಚಿದಳಾ ವಿರಾಟನ
ವನಿತೆ ವೀರರ ವಧುವನಾ ಸಖಿ
ಜನದೊಳಗೆ ನೇಮಿಸಿದಳನಿಬರಿಗಾಯ್ತು ನಿರ್ವಾಹ
ಮನದ ಧಗೆಯಡಗಿದವು ಮತ್ಸ್ಯೇ
ಶನ ಪುರಾಂತರದೊಳಗೆ ಮೈ ಮರೆ
ಸನುಪಮಿಂತ ಭುಜಸತ್ವರಿದ್ದರು ಭೂಪ ಕೇಳೆಂದ ೩೨

ಆ ಸುದೇಷ್ಣಾ ದೇವಿಯರ ನಿಡು
ಕೇಶವನು ಹಿಕ್ಕುವಳು ಮುಂದದಲಿ
ಸೂಸು ಮಲ್ಲಿಗೆಯರಳ ದೆಖ್ಖಾಳವನು ಮುಡಿಸುವಳು
ಆ ಸತಿಯ ಮನವೊಲಿದು ನಡೆವಳು
ಲೇಸು ಲೇಸೆಂದೆನಿಸಿ ಬಾಳುವ
ಭಾಷೆಯನು ಸಲಿಸುತ್ತಲಿರ್ದಳು ಪತಿಗಳಾಜ್ಞೆಯಲಿ ೩೩

ಜವನ ಮಗ ಸನ್ಯಾಸಿ ವೇಷದಿ
ಪವನಸುತ ಬಾಣಸಿನ ಮನೆಯಲಿ
ದಿವಿಜ ರಾಯನ ತನಯನಿರ್ದ ಶಿಖಂಡಿ ವೇಷದಲಿ
ಜವಳಿ ಮಕ್ಕಳು ತುರಗ ಗೋವ್ರಜ
ನಿವಹರಾದರು ಕಮಲಮುಖಿ ಕಾ
ಲವನು ಕಳೆದಳು ರಾಯನೊಲುಮೆಯ ಕೆಳದಿಯರ ಕೂಡೆ ೩೪

## ಎರಡನೆಯ ಸಂಧಿ

ಸೂ. ಕುಸುಮಶರನುರವಣೆಯ ಗಾಯದ
ಲೆಸುಗೆವಡೆದನು ಕೀಚಕನು ತ
ನ್ನಸುವಿನಳತೆಯ ನೋಡದೆಯೆ ತುಡುಕಿದನು ದ್ರೌಪದಿಯ

ಕೇಳು ಜನಮೇಜಯ ಧರಿತ್ರೀ
ಪಾಲ ನಿಮ್ಮಯ ಪೂರ್ವ ಪೃಥ್ವೀ
ಪಾಲರಿದ್ದರು ಗುಪುತದಿಂದ ವಿರಾಟ ನಗರಿಯಲಿ
ಕಾಲ ಸವೆದುದು ಹತ್ತು ತಿಂಗಳ
ಮೇಲೆ ಮತ್ತೊಂದತಿಶಯೋಕ್ತಿಯ
ನಾಲಿಸೈ ವಿಸ್ತರದೊಳರುಪುವೆನೆಂದನಾ ಮುನಿಪ ೧

ಆ ವಿರಾಟನ ರಾಜಧಾನಿಯೊ
ಳೀ ವಿಳಾಸದಿ ಮುಸುಕಿ ತಾವ್ ಪರ
ಸೇವೆಯಲಿ ಪಾಂಡವರು ಕಳೆದರು ಹತ್ತು ಮಾಸವನು
ರಾವಣನು ಮುನ್ನೆಂದು ಸೀತಾ
ದೇವಿಗಳುಪಿದ ಕಥೆಯವೋಲ್ ಸಂ
ಭಾವಿಸಿದ ಕೀಚಕ ವಿಡಂಬವ ಕೇಳು ಭೂಪಾಲ ೨

ಒಂದು ದಿವಸ ವಿರಾಟನರಸಿಯ
ಮಂದಿರಕ್ಕೋಲೈಸಲೆಂದೈ
ತಂದನಾಕೆಯ ತಮ್ಮ ಕೀಚಕನತುಳ ಭುಜಬಲನು
ಹಿಂದೆ ಮುಂದಿಕ್ಕೆಲದ ಸತಿಯರ
ಸಂದಣಿಯ ಮಧ್ಯದಲಿ ಮೆರೆವರ
ವಿಂದವದನೆಯ ಕಂಡು ಕಾಣಿಕೆಗೊಟ್ಟು ಪೊಡಮಟ್ಟ ೩

ಅನುಜನನು ತೆಗೆದಪ್ಪಿ ಸಿಂಹಾ
ಸನದ ಕೆಲದಲಿ ಕುಳ್ಳಿರಿಸಿ ಮನ
ದಣಿಯಲಂಗನೆ ಮನ್ನಿಸಿದಳೈ ತತ್ಸಹೋದರನ
ತನುಪುಳಕ ತಲೆದೋರಲವನು
ಬ್ಬಿನಲಿ ಸತ್ಕೃತನಾಗಿ ಕಮಳಾ
ನನೆಯುರನು ಕಂಡನು ಸುದೇಷ್ಣೆಯ ಮೇಳದಬಲೆಯರ ೪

ಅವರ ಮಧ್ಯದಲಮಲ ತಾರಾ
ನಿವಹದಲಿ ರೋಹಿಣಿಯವೋಲ್ ಸುರ
ಯುವತಿಯರಲೂರ್ವಶಿಯವೋಲ್ ನದಿಗಳೊಳು ಜಾಹ್ನವಿಯ
ಅವಯವದ ಪರಿಮಳದ ಪಸರಕೆ
ಕವಿವ ತುಂಬಿಯ ಸಾರ ಸಂಗೀ
ತವನು ಕೇಳುತ ಕಂಡನವ ಪಾಂಚಾಲ ನಂದನೆಯ ೫

ಮೊದಲೊಳವನವಳಂಗವಟ್ಟವ
ನೊದವಿ ನೋಡಿದೊಡಲ್ಲಿಯೇ ಗಾ
ಢದಲಿ ನಟ್ಟವು ಕೀಳಲರಿದಾಯ್ತಾಲಿಗಳನಲುಗಿ
ಮದನ ಮಸೆದೋರಿದನು ಹೂಗಣೆ
ಹೃದಯವನು ತಾಗಿದುದು ಹರ ಹರ
ಹೆದರಿದನು ಹಮ್ಮೈಸಿದನು ಖಳನೊಂದು ನಿಮಿಷದಲಿ ೬

ನಿಂದು ನೋಡಿದ ದ್ರೌಪದಿಯ ಮೊಗ
ದಂದವನು ಕಂಡಾಗ ಕೀಚಕ
ನೊಂದನೆನೆ ಮೊಗ ತೆಗೆಯಲೆಚ್ಚನು ಕಾಮ ಕೈಗೂಡಿ
ಅಂದು ಬೆರಗಾದನು ವಿಲಾಸಿನಿ
ಯಿಂದು ತಳೆದಳು ಮನವನಿವಳಾ
ರೆಂದು ಭಾವಿಸಿ ಚಾಚಿದನು ಕದಪಿನಲಿ ಕರತಳವ ೭

ತಿಳಿಯಿವಳು ಮೂಜಗವ ಮೋಹಿಪ
ತಿಲಕವೋ ಕಾಮಂಗೆ ಕಟ್ಟಿದ
ಕಳನ ಭಾಷೆಗೆ ನಿಂದ ಮಾಸಾಳೋ ಮಹಾದೇವ
ಕೊಲೆಗಡಿಗ ಕಂದರ್ಪಕನ ಕೂ
ರಲಗೊ ಮದನನ ಸೊಕ್ಕಿದಾನೆಯೊ
ನಳಿನಮುಖಿಯಿವಳಾರ ಸತಿಯೆಂದಳುಪಿ ನೋಡಿದನು ೮

ಜಗವ ಕೆಡಹಲು ಜಲಜವಿಶಿಖನು
ಬಿಗಿದ ಬಲೆಯಿವಳಲ್ಲಲೇ ಯೋ
ಗಿಗಳ ಯತಿಗಳನೆಸಲು ಕಾಮನು ಮಸೆದ ಕೂರಲಗು
ಮುಗುದನಾದನು ಕಾಮನಂಬುಗ
ಳುಗಿದವೆದೆಯಲಿ ನಟ್ಟ ದೃಷ್ಟಿಯ
ತೆಗೆಯಲಾರದೆ ಸೋತು ಕೀಚಕ ಪಾತಕವ ನೆನೆದ ೯

ಸೂರೆವೋಯಿತು ಚಿತ್ತ ಕಂಗಳು
ಮಾರುವೋದವು ಖಳನ ಧೈರ್ಯವು
ತೂರಿ ಪೋದುದು ಕರಣದಲಿ ಕಳವಳದ ಬೀಡಾಯ್ತು
ಮೀರಿ ಪೊಗುವಂಗಜನ ಶರದಲಿ
ದೋರುವೋಯಿತು ಹೃದಯ ಕಣ್ಣೆರಿ
ಗಾರೆಯಿವಳಾರೆನುತ ಗಜಬಜಿಸಿದನು ನಿಮಿಷದಲಿ ೧೦

ರತಿಯ ಚೆಲುವಂತಿರಲಿ ಸಿರಿ ಪಾ
ರ್ವತಿಯ ರೂಪಂತಿರಲಿ ಬೊಮ್ಮನ
ಸತಿಯ ಸೊಬಗಂತಿರಲಿಯೀ ಬಾಲಕಿಯ ರೂಹಿಂಗೆ
ಪ್ರತಿಯ ಕಾಣೆನು ಪಾಂಡವರ ಮರು
ಪತಿಯ ರೂಹಿಂಗೈದು ಮಡಿಯೀ
ಸತಿಯ ವಿಭ್ರಮವ್ಯದಿತೆನ್ನಯ ಮನವನೆನುತಿರ್ದ ೧೧

ಅರಿವು ತಲೆಕೆಳಗಾಯ್ತು ಧೈರ್ಯದ
ನಿರಿಗೆ ನಗೆಗೆಡೆಯಾಯ್ತು ಲಜ್ಜೆಯ
ಹೊರಿಗೆ ಬರಿದೊರೆಯಾಯ್ತು ಕರಿಮೊಳೆಯೋಯ್ತು ಭಯ ಬೀಜ
ಮರವೆ ಗರಿಗಟ್ಟಿತು ಮನೋಭವ
ನಿರಿಗೆಲಸ ಬಲುಹಾಯ್ತು ಹೊಗಳುವ
ಡರಿಯೆನಾತನ ತನುವಿನಂತಸ್ತಾಪದೇಳ್ಗೆಯನು ೧೨

ಬೀಳುಗೊಂಡುದು ಲಜ್ಜೆ ಮಹಿಮೆಯ
ಕೀಲು ಕಳಚಿತು ದ್ರುಪದ ತನುಜೆಯ
ನಾಲಿಯಲಿ ನುಂಗಿದನು ಮನದಲಿ ಸತಿಯ ಸೆರೆವಿಡಿದು
ಕೇಳು ಬಿನ್ನಹವಕ್ಕ ನಿಮ್ಮಡಿ
ಯೋಲೆಕಾತಿಯರೊಳಗೆ ಮಿಾಟಿನ
ಮೇಲುಗೈಯಿವಳಾವಳೆಂದಗ್ರಜೆಯ ಬೆಸಗೊಂಡ ೧೩

ಈಕೆ ಗಂಧರ್ವರ ರಮಣಿ ನ
ಮ್ಮಾಕೆಯಾಗಿರೆ ಮಾನ್ಯವೃತ್ತಿಯೊ
ಳೀಕೆಯನು ಸಲಹುವೆವು ಬಲ್ಲಿದರಿವಳ ವಲ್ಲಭರು
ಸಾಕು ಬಿಡಾರಕ್ಕೆ ನೀ ಹೋ
ಗೀಕೆ ನಿನಗಹಳಲ್ಲ ನಿಂದಿರು
ಕಾಕನಾಡದಿರೆನುತ ಬೀಳ್ಕೊಟ್ಟಳು ನಿಜಾನುಜನ ೧೪

ತಾರಿತಂತಃಕರಣ ಕಾಮನ
ಕೂರುಗಣೆ ಕಾಲಿಕ್ಕಿದವು ಮನ
ದೇರು ಮುಚ್ಚಿತು ದುಗುಡ ಬಲಿದುದು ಮುಸುಕು ಮೋರೆಯಲಿ
ಮೀರಿ ನಿಜಮಂದಿರಕೆ ಢಗೆ ಮೈ
ದೋರೆ ಬಂದನು ಮರುದಿವಸ ತಲೆ
ಮಾರಿ ಕಂಡನು ದ್ರೌಪದಿಯನರಮನೆಯ ಬಾಗಿಲಲಿ ೧೫

ಕಳುಹಿದನು ತನ್ನೊಡನೆ ಬಹ
ಗಾವಳಿಯ ಪರಿವಾರವನು ತನ್ನಯ
ಬಳಿಯ ಹಡಪದ ಬಾಲಕನ ಹಿಂದಿಕ್ಕಿ ನಡೆತಂದು
ಒಲಿದು ಸಿಂಹದ ಸತಿಗೆ ನರಿ ಮನ
ವಳುಪುವಂತಿರೆ ಗರುಡನರಸಿಗೆ
ನಲಿದು ಫಣಿ ಬಯಸುವವೊಲೈದಿದ ಬಾಲಕಿಯ ಬಳಿಗೆ ೧೬

ಖಳನ ಮನದಿಂಗಿತವನಾಗಳೆ
ತಿಳಿದು ಕಾಮಿನಿ ಬೆದರಿದಳು ಕಳ
ವಳಿಗ ಸೋತನು ಕೆಟ್ಟೆನೆಂದಳು ತನ್ನ ಮನದೊಳಗೆ
ತೊಲಗಿ ಹಿಂವಡಿಯಿಡಲು ಕೀಚಕ
ನಳುಕದೈತಂದಬುಜವದನೆಯ
ಬಳಿಗೆ ಬಂದನು ನುಡಿಸಲಾಗದೆ ತರಳೆ ನೀನೆಂದ ೧೭

ಎಲೆ ಮರುಳೆ ಬೇಡಳುಪದಿರು ಕೂ
ರಲಗ ಕೊರಳಿಗೆ ಬಯಸದಿರು ಕಳ
ವಳಿಸದಿರು ಕೈಯೊಡನೆ ನಿನ್ನರಮನೆಗೆ ತೆರಳುವುದು
ಸುಲಭೆ ನಾ ನಿನಗಲ್ಲ ನಿನ್ನನು
ಕೆಲರು ನಗುವರು ಪರದ ಸದ್ಗತಿ
ತೊಲಗುವುದು ಬೇಡಕಟಯೆಂದಳು ಪಾಂಡವರ ರಾಣಿ ೧೮

ನಿಲ್ಲೆಲೆಗೆ ಸೈರಂಧ್ರಿ ಕಾಮನ
ಬಲ್ಲೆಹದ ಬಲುಗಾಯ ತಾಗಿತು
ಬಲ್ಲೆ ನೀನೌಷಧಿಯ ರಕ್ಷಿಸಿಕೊಂಬುದೆನ್ನೊಡಲ
ಮೆಲ್ಲನಡಿಯಿಡು ಮಾತ ಮನ್ನಿಸು
ಚೆಲ್ಲೆಗಂಗಳನೆನ್ನ ಮುಖದಲಿ
ಚೆಲ್ಲಿ ಸಪ್ರಾಣಿಸಲು ಬೇಹುದು ವಿಗತಜೀವನವ ೧೯

ಎಲೆಗೆ ಪಾತಕಿ ನಿನ್ನ ಕಣ್ಣಿಂ
ಬಲಗಿನಲಿ ತನ್ನೆದೆಯ ನೋಯಿಸಿ
ತೊಲಗಬಹುದೇ ಕರುಣವಿಲ್ಲವೆ ನಿನ್ನ ಮನದೊಳಗೆ
ಒಲಿದು ಬಂದೆನು ಕಾಮನೂಳಿಗ
ಬಲುಹು ಎನ್ನಯ ಭಯವ ತಗ್ಗಿಸಿ
ತಲೆಯ ಕಾಯಲು ಬೇಕೆನುತ ಕೀಚಕನು ಕೈಮುಗಿದ ೨೦

ಪರರ ಸತಿಗಳುಪಿದೊಡೆ ಪಾತಕ
ದೊರಕುವುದು ನಿಜಲಕ್ಷ್ಮಿ ತೊಲಗುಗು
ಧರೆಯೊಳಗ್ಗದ ಕೀರ್ತಿ ಮಾಸುಗು ಗತಿಗೆ ಕೇಡಹುದು
ಕೊರಳು ಹಲವಾದಸುರನಂತಕ
ಪುರವನೈದಿದ ಕಥೆಯ ನೀ ಕೇ
ಳ್ದರಿಯಲಾ ಕಡುಪಾಪಿ ಹೋಗೆಂದಳು ಸರೋಜಮುಖಿ ೨೧

ಮೇಲೆ ಸದ್ಗತಿ ಬೆಂದು ಹೋಗಲಿ
ಕಾಲನವರೈತರಲಿ ಬಂಧುಗ
ಳೇಳಿಸಲಿ ತನ್ನವರು ತೊಲಗಲಿ ರಾಣಿಯರು ಬಿಡಲಿ
ಬಾಲೆ ನಿನಗಾನೊಲಿದೆ ಕಾಮನ
ಕೋಲು ಎನ್ನನು ಮರಳಲೀಯದು
ಲೋಲಲೋಚನೆ ಬಿರುಬ ನುಡಿಯದೆ ತನ್ನನುಳುಹೆಂದ ೨೨

ಎಳೆನಗೆಯ ಬೆಳುದಿಂಗಳನು ನೀ
ತಳಿತು ತಾಪವ ಕೆಡಿಸು ಮಧುರದ
ಮೆಲುನುಡಿಯ ಸುಧೆಯಿಂದ ತೃಷ್ಣೆಯನಕಟ ಪರಿಹರಿಸು
ಅಳಿಮನದ ಬಡತನವ ನಿನ್ನಯ
ಕಳಶ ಕುಚ ಲಕ್ಷ್ಮಿಯಲಿ ಕಳೆ ಮನ
ದೊಲವನಿತ್ತಲು ತಿದ್ದಬೇಹುದು ಕಾಂತೆ ಕೇಳೆಂದ ೨೩

ಕೇಳಿ ಕಿವಿ ಮುಚ್ಚಿದಳು ತನ್ನಯ
ಮೇಳದೈವರ ನೆನೆದು ಹರ ಹರ
ಶೂಲಪಾಣಿ ಮುಕುಂದಯೆನುತವೆ ರವಿಯನೀಕ್ಷಿಸುತ
ಕಾಳು ಮೂಳನಲಾ ಖಳಾಗ್ರಣಿ
ಮೇಲುಗಾಣನಲಾ ಮದಾಂಧನ
ಸೋಲಿಸುವರಾರುಂಟೆನುತ ತಲೆ ಬಾಗಿದಳು ತರಳೆ ೨೪

ಎಲೆ ದುರಾತ್ಮ ಮಹಾಪರಾಧವ
ಬಳಸುವರೆ ಬಯಲಿಂಗೆ ನಿನ್ನಯ
ಕುಲದ ಬೇರನು ಕೊಯ್ವರೇ ಬಹುದಾವುದಿದರಿಂದ
ಹಳಿವು ಹೊದ್ದದೆ ಹೆತ್ತವರು ಮ
ಕ್ಕಳುಗಳೆಂಬೀ ಬದುಕ ಮಾಣದೆ
ಯೆಳಸಿಕೊಂಬಂತಾಯಿತೆಂದಳು ಪಾಂಡವರ ರಾಣಿ ೨೫

ಕಾತರಿಸದಿರು ಮುಂದಿವಾಳದ
ಮಾತುಗಳು ಸಾಕಕಟ ತೊಲಗ್ಗೆ
ಸೋತಡೇನದು ಮನುಜ ಧರ್ಮದ ಚಿತ್ತಚಪಲವಲ
ಈ ತತುಕ್ಷಣ ಚಾರು ಕೇಳಿದ
ಪಾತಗಳು ಸೈರಿಸರು ದೇವ
ವ್ರಾತವಲಿ ಬಲ್ಲಿದರು ತನ್ನವರೆಂದಳಿಂದುಮುಖಿ ೨೬

ಸಾವು ತಪ್ಪದು ತನಗೆ ಕಾಮನ
ಡಾವರವು ಘನ ನಿನ್ನ ನೆರೆದೇ
ಸಾವೆನಲ್ಲದೆ ಕಾಮನಂಬಿಂಗೊಡಲನೊಪ್ಪಿಸೆನು
ಭಾವೆ ನೂಕದಿರೆನ್ನ ವರ ರಾ
ಜೀವಮುಖಿ ಕೃಪೆ ಮಾಡು ತನ್ನಯ
ಜೀವನವನುಳುಹೆನುತ ಕಮಲಾನನೆಗೆ ಕೈಮುಗಿದ ೨೭

ಮರುಳುತನ ಬೇಡೆಲವೊ ಗಂಧ
ರ್ವರಿಗೆ ಹೆಂಡತಿ ತಾನು ನಿನ್ನಯ
ದುರುಳತನವನು ಸೈರಿಸರು ತನ್ನವರು ಬಲ್ಲಿದರು
ಸೂರಹದಿರು ಅಪಕೀರ್ತಿನಾರಿಯ
ನೆನೆಯದಿರು ನೀ ನಿನ್ನ ನಿಳಯಕೆ
ಮರಳುವುದು ಲೇಸೆಂದು ತೃಣವನು ಪಿಡಿದು ಸಾರಿದಳು ೨೮

ದ್ರೌಪದಿಗೆ ಖಳ ನುಡಿದನೆನ್ನಾ
ಟೋಪವನು ನೀನರಿಯೆ ಬಡವರ
ಕೋಪವೌಡಿಗೆ ಮೃತ್ಯು ನಿನ್ನವರೆನ್ನದೇಗುವರು
ಆಪೆನವರಂತಿರಲಿ ನೀನೆನ
ಗೋಪಳಾದರೆ ಸಾಕು ಮಲೆತಡೆ
ಯಾ ಪಿನಾಕಿಗೆ ತೆರಳುವೆನೆ ಬಳಿಕಲ್ಲಿ ನೋಡೆಂದ ೨೯

ಹುಳುಕನಲ್ಲಾ ತುಂಬಿ ಕೋಗಿಲೆ
ಗಳಹನಲ್ಲಾ ಶಶಿ ವಸಂತನ
ಬಲುಹು ಮಾನ್ಮಥನರಿಯದೇ ತಂಗಾಳಿ ಧಾರ್ಮಿಕನೆ
ಖಳನಲಾ ಮಾಕಂದ ಲೋಕದ
ಕೊಲೆಗಡಿಗನಲ್ಲಾ ಮನೋಭವ
ನಿಳಿಕೆಗೊಂಬರೆ ಪಾಪಿಯೊಲಿಯದೆ ಕೊಲುವರೇಯೆಂದ ೩೦

ಒಲಿದು ನಿನ್ನನು ನಾವು ಕೊಲ್ಲೆವು
ಕೊಲುವ ಸುಭಟರು ಬೇರೆ ಬಯಲಿಗೆ
ಹಲವ ಗಳಹಿದರೇನು ಫಲವಿಲ್ಲಕಟ ಸಾರಿದೆನು
ತಿಳುಹಿದೊಡೆಯೆನ್ನವರು ನಿನ್ನಯ
ತಲೆಯನರಿದೂ ತುಷ್ಟರಾಗರು
ಕಲಕುವರು ನಿನ್ನನ್ವಯಾಬ್ಧಿಯನೆಂದಳಿಂದುಮುಖಿ ೩೧

ಕುಲದೊಳೊಬ್ಬನು ಜನಿಸಿ ವಂಶವ
ನಳಿದನಕಟಕಟೆಂಬ ದುರ್ಯಶ
ವುಳಿವುದಲ್ಲದೆ ಲೇಸಗಾಣೆನು ಬರಿದೆ ಗಳಹದಿರು
ಕೊಲೆಗಡಿಕೆಯೋ ಪಾಪಿ ಹೆಂಗಸು
ಹಲಬರನು ಕೊಲಿಸಿದಳು ಸುಡಲೆಂ
ದಳಲುವರು ನಿನ್ನಖಿಳ ರಾಣಿಯರೆಂದಳಿಂದುಮುಖಿ ೩೨

ಹರಿ ವಿರಿಂಚಿಗಳಾದೊಡೆಯು ಸಂ
ಗರದೊಳೆನಗಿದಿರಿಲ್ಲ ಮರುಳೇ
ತರುಣಿ ನಿನ್ನೊಡನೇನು ತೋರಾ ನಿನ್ನ ವಲ್ಲಭರ
ಪರಸತಿಯ ಸೆರೆಗೈಯೆ ಮುತ್ತಿತು
ನೆರೆದು ಕೋಡಗವಿಂಡು ಸುಭಟನು
ಸರಿಪನಂತಕ ನಗರಿಗರಿಯಾಯ್ತೆಂದಳಿಂದುಮುಖಿ ೩೩

ನೀರೆ ನೂಕದಿರೆನ್ನ ಮನ ಮು
ಮ್ಮಾರುವೋದುದು ನೀನು ಚಿತ್ತವ
ಸೂರೆಗೊಂಡೀ ಮದನನಂಬಿಂಗೊಡಲ ಹೂಣಿಸುವೆ
ಜಾರದಿರುಯೆನ್ನೆದೆಗೆ ತಾಪವ
ಬೀರದಿರು ಕಾರುಣ್ಯವನು ಕೈ
ದೋರೆನಗೆ ಕಮಲಾಕ್ಷಿ ಮರಣವ ಮಾಣಿಸಕಟೆಂದ ೩೪

ಮರುಳೆ ಮನದ ವಿಕಾರ ಮಾರಿಯ
ಸರಸವಾಡುವರುಂಟೆ ಮೃತ್ಯುವ
ನೆರೆವರೇ ಹುಳ್ಳುರಿಯ ಪ್ರತಿಮೆಯನಪ್ಪುವರೆ ಬಯಸಿ
ಸರಳಕಂಗೈಸುವರೆ ಪಾಪಿಯೆ
ಮರಳು ನಿನ್ನರಮನೆಗೆಯೆನ್ನಯ
ಗರುವ ಗಂಡರು ಕಡಿದು ಹರಹುವರೆಂದಳಿಂದುಮುಖಿ ೩೫

ತೋಳ ತೆಕ್ಕೆಯ ತೊಡಿಸಿ ಕಾಮನ
ಕೋಲ ತಪ್ಪಿಸು ಖಳನ ಕಗ್ಗೊಲೆ
ಯೂಳಿಗವ ಕೇಳುಸುರದಿಹರೆ ಸಮರ್ಥರಾದವರು
ಸೋಲಿಸಿದ ಗೆಲವಿಂದ ಬಲು ಮಾ
ತಾಳಿಯಿವನೆನ್ನದಿರು ಹರಣದ
ಮೇಲೆ ಸರಸವೆ ಕಾಯಬೇಹುದು ಕಾಂತೆ ಕೇಳೆಂದ ೩೬

ಉಳಿದ ತನ್ನರಸಿಯರ ನಿನ್ನಯ
ಬಳಿಯ ತೊತ್ತಿರ ಮಾಡುವೆನು ಕೇ
ಳೆಲಗೆ ತನ್ನೊಡಲಿಂಗೆಯೊಡೆತನ ನಿನದಾಗಿರಲಿ
ಲಲನೆ ನಿನ್ನೊಳು ನಟ್ಟ ಲೋಚನ
ತೊಲಗಲಾರದು ತನ್ನ ಕಾಯವ
ಬಳಲಿಸದೆ ಕೃಪೆ ಮಾಡಬೇಹುದೆನುತ್ತ ಕೈಮುಗಿದ ೩೭

ನ್ಯಾಯವನು ಮಿಗೆ ಗೆಲುವುದೀಯ
ನ್ಯಾಯಪಥಮನ ಧರ್ಮ ಮಾರ್ಗ
ಸ್ಥಾಯಿಗಳ ತಿಮಿರಕ್ಕೆ ಭಾಸ್ಕರಗಾವುದಂತರವು
ಕಾಯರೆನ್ನವರವರ ಕೈಗುಣ
ದಾಯತವ ಬಲ್ಲವರೆ ಬಲ್ಲರು
ನಾಯಿ ಸಿಂಹಕ್ಕಿದಿರೆ ಘಡ ಹೋಗೆಂದು ತಿರುಗಿದಳು ೩೮

ಹೂಣೆ ಹೊಕ್ಕುದು ವಿರಹದಾಸೆಯ
ಕಾಣೆನಾಕೆಯ ಮಾತಿನಲಿ ಮುಂ
ಗಾಣಿಕೆಯಲೇ ಸೂರೆ ಹೋದುದು ಮನದ ಸರ್ವಸ್ವ
ತ್ರಾಣ ಸಡಿಲಿತು ಬುದ್ಧಿ ಕದಡಿ ಕೃ
ಪಾಣಪಾಣಿ ವಿರಾಟ ರಾಯನ
ರಾಣಿಯರಮನೆಗೈದಿದನು ಕಂಡನು ನಿಜಾಗ್ರಜೆಯ ೩೯

ಹಣೆಯನಂಘ್ರಿಗೆ ಚಾಚಲೆತ್ತಿದ
ಳಣಕಿಗನ ತೆಗೆದಪ್ಪಿ ಮದವಾ
ರಣನೆ ಕುಳ್ಳಿರೆನುತ್ತ ನೋಡಿದಳಾ ಸಹೋದರನ
ಹೆಣ ಮುಸುಡು ಬಿದ್ದಿದೆ ಲತಾಂಗಿಯ
ಕೆಣಕಿದನೊ ಕಡುಪಾಪಿ ವಂಶವ
ಹಣಿದವಾಡದೆ ಮಾಣನೇಗುವೆನೆನುತ ಮರುಗಿದಳು ೪೦

ಅಳುಕಿತಗ್ಗದ ಮಹಿಮೆ ಮುಸುಡಿನ
ಬೆಳಕು ಕಂದಿತು ಬಹಳ ಚಿಂತಾ
ಜಲಧಿಯೊಳಗದ್ದಂತೆ ಸೊಂಪಡಗಿತು ನಿಜಾಕಾರ
ಕುಲಶಿರೋಮಣಿ ಹೇಳು ಚಿತ್ತದ
ನೆಲೆಯನೆನೆ ನಸುನಾಚಿ ಮದನನ
ಹಿಳುಕು ಸುಮತಿಯ ಸೀಳೆ ಬಳಿಕಿಂತೆಂದನವ ನಗುತ ೪೧

ಬೇರೆ ಬಿನ್ನಹವೇನು ಸತಿಯರ
ನೂರು ಮಡಿ ಚೆಲುವಿನಲಿ ಚಿತ್ತವ
ಸೂರೆಗೊಂಡಿಹಳವಳು ನಿನ್ನೋಲಗದ ಸತಿಯರಲಿ
ಮಾರಿದಳು ಮದನಂಗೆ ಜೀವಿಸ
ಲಾರೆನಾಕೆಯನೊಳಗು ಮಾಡಿಸಿ
ತೋರಿದೊಡೆ ತನ್ನೊಡಲೊಳಸುವಿಂಗಿಹುದು ನಿರ್ವಾಹ ೪೨

ಕೀರ್ತಿಲತೆ ಕುಡಿಯೊಣಗಿತ್ತೈ ಮದ
ನಾರ್ತನಾದೈ ಕುಲಕೆ ಕಾಲನ
ಮೂರ್ತಿ ನೀನವತರಿಸಿದೈ ಸಂಹರಿಸಿದೈ ಕುಲವ
ಸ್ಫೂರ್ತಿಗೆಡೆ ಮನುಜರಿಗೆ ರಾವಣ
ನಾರ್ತಿಯಪ್ಪುದು ಅರಿಯಲಾ ಕಡು
ಧೂರ್ತತನಕಂಜುವೆನೆನುತ ನಡುಗಿದಳು ನಳಿನಾಕ್ಷಿ ೪೩

ಬೇಟವೇ ಪರವಧುವಿನಲಿ ಕೈ
ಮಾಟವೇ ಪರವಿತ್ತದಲಿ ತೆಗೆ
ದೋಟವೇ ಕದನದಲಿ ಗುಣವೇ ರಾಜಪುತ್ರರಿಗೆ
ಆಟವಿಕರೊಡನಾಡಿ ಕಲಿತು ವಿ
ರಾಟನನು ಕೊಲಲೆಣಿಸಿದೈ ನಿ
ನ್ನಾಟಕಂಜುವೆನೆನುತ ಮುಖದಿರುಹಿದಳು ತರಲಾಕ್ಷಿ ೪೪

ಅವಳ ಗಂಡರು ಸುರರು ಸುರರಿಗೆ
ನವಗದಾವಂತರವು ಮುಳಿದೊಡೆ
ದಿವಿಜ ದಳಕಿದಿರಾರು ನಮ್ಮನದಾರು ಕಾವವರು
ಅವಳ ತೊಡಕೇ ಬೇಡ ಸತಿಯರ
ನಿವಹದಲಿ ನೀನಾರ ಬಯಸಿದ
ಡವಳ ನಾ ಮುಂದಿಟ್ಟು ಮದುವೆಯನೊಲಿದು ಮಾಡುವೆನು ೪೫

ಅಕ್ಕ ಮರುಳಾ ಚಿತ್ತವವಳಲಿ
ಸಿಕ್ಕಿ ಬೇರ್ವರಿಯಿತ್ತು ಬರಿದೇ
ಮಿಕ್ಕ ಡಿಂಬಕೆ ಮದುವೆಯುಂಟೇ ಮನವ ಬೇರಿರಿಸಿ
ಮಕ್ಕಳಾಟಿಕೆಯಾದಡಾಗಲಿ
ತಕ್ಕರಲ್ಲೆಂದೆನಲಿ ಸಲಹುವ
ಡಕ್ಕ ಸೈರಂಧ್ರಿಯನು ಸೇರಿಸಬೇಕು ತನಗೆಂದ ೪೬

ಸೊಗಸದಿತರರ ಮಾತು ಕಣ್ಣಿಗ
ಳೊಗಡಿಸವು ಮಿಕ್ಕವರ ರೂಹನು
ಹಗೆಗಳಾಗಿಹವುಳಿದವರ ನಾಮಗಳು ನಾಲಿಗೆಗೆ
ಸೆಗಳಿಕೆಯ ಸಸಿಯಾದೆನೆನ್ನಯ
ಬಗೆಯ ಸಲಿಸೌ ಹರಿದ ಕರುಳಿನ
ಮೃಗದ ಮರಿಯನು ಸಲಹಬೇಕೆಂದೆರಗಿದನು ಪದಕೆ ೪೭

ಆಲಿ ನೀರೇರಿದವು ತಮ್ಮನ
ಮೇಲೆ ತಳಿತುದು ಮೋಹ ಕಾಲನ
ಪಾಳಯಕೆ ಕೈಗೊಟ್ಟಳಂಗನೆ ನೆಗಹಿದಳು ಖಳನ
ಏಳು ಭವನಕೆ ಹೋಗು ತರುಣಿಯ
ನಾಳೆ ನಾ ಕಳುಹುವೆನು ಪರಸತಿ
ಮೇಳ ಲೇಸಲ್ಲೆನುತ ಬೀಳ್ಕೊಟ್ಟಳು ನಿಜಾನುಜನ ೪೮

ಮನದೊಳಗೆ ಗುಡಿಗಟ್ಟಿದನು ಮಾ
ನಿನಿಯ ಕರುಣಾಪಾಂಗ ರಸಭಾ
ಜನವು ಪುಣ್ಯವಲಾಯೆನುತ ಬೀಳ್ಕೊಂಡನಗ್ರಜೆಯ
ಮನದೊಳೊದವಿದ ಮರುಳುತನದು
ಬ್ಬಿನಲಿ ಹೊಕ್ಕನು ಮನೆಯನಿತ್ತಲು
ದಿನಕರಂಗಾಯಿತ್ತು ಬೀಡಸ್ತಾಚಲಾದ್ರಿಯಲಿ ೪೯

ಪರ ದಿಗಂಗನೆಯಿಟ್ಟ ಚಂದನ
ತಿಲಕವೋ ಮನುಮಥನ ರಾಣಿಯ
ಕರದಲಿಹ ಕನ್ನಡಿಯೊ ಮದನನ ಬಿರುದಿನೊಡ್ಡಣವೊ
ಸುರತ ವಿರಹಿಯ ಸುಡುವ ಕೆಂಡದ
ಹೊರಳಿಯೋ ಹೇಳೆನಲು ಮಿಗೆ ಹಿಮ
ಕರನು ಜನಿಸಿದ ರಜನಿ ಮಧ್ಯದೊಳವನಿ ತಳತಳಿಸೆ ೫೦

ಬೆಚ್ಚಿದವು ಚಕ್ರಾಂಕಯುಗ ತಾವ್
ಕಚ್ಚಿದವು ಮರಿದುಂಬಿ ಕುಮುದವ
ಮುಚ್ಚಿದವು ಮುಸುಡುಗಳನಂಬುಜರಾಜಿ ತವತವಗೆ
ಹೆಚ್ಚಿದವು ಸಾಗರದ ತೆರೆಗಳು
ಬೆಚ್ಚಿದರು ಜಾರೆಯರು ಚಂದ್ರಮ
ಕಿಚ್ಚನಿಕ್ಕಿದನಕಟ ಸಕಲ ವಿಯೋಗಿಜನ ಮನಕೆ ೫೧

ಖಳನ ವಿರಹದ ತಾಪದುರಿವೆ
ಗ್ಗಳಿಸೆ ತನ್ನರಮನೆಗೆ ಬಂದನು
ಕಳವಳಿಗ ಹಾಯೆನುತ ಕೆಡೆದನು ತಳಿರ ಹಾಸಿನಲಿ
ನಳಿನವೈರಿಯು ಸುಳಿವು ತನ್ನಯ
ಕೊಲೆಗೆ ಬಂದುದು ಪಾಪಿ ಕಮಲಜ
ಚಲಿತಲೋಚನೆಗೇಕೆ ಮಾಡಿದನಿನಿತು ಚೆಲುವಿಕೆಯ ೫೨

ಹಾಸಿದೆಳೆದಳಿರೊಣಗಿದುವು ಹೊಗೆ
ಸೂಸಿದಾ ಸುಯಿಲಿನಲಿ ಮೆಲ್ಲನೆ
ಬೀಸುತಿಹ ಸುಳಿವಾಳೆಯೆಲೆ ಬಾಡಿದವು ಝಳ ಹೊಯ್ದು
ಆ ಸಸಿಯ ಕೋಗಿಲೆಯ ತುಂಬಿಯ
ನಾ ಸರೋಜವ ಮಲ್ಲಿಗೆಯ ಕೈ
ವೀಸಿದನು ಕುಸುಮಾಸ್ತ್ರ ನೀ ಕೀಚಕನ ಕಗ್ಗೊಲೆಗೆ ೫೩

ಉರಿದುದೊಡಲೊಳು ವೀಳೆಯದ ಕ
ರ್ಪೂರದ ಹಳಕುಗಳಮಳ ಗಂಧದ
ಸರಸ ಕರ್ದಮ ಕರಿಕುವರಿದುದು ಪೂಸಿದಂಗದಲಿ
ಹೊರಳೆ ನೀರಿನ ಪೊಟ್ಟಣವು ದ
ಳ್ಳುರಿಯೊಲಾದುದು ಬಲಿದ ಚಂದ್ರಿಕೆ
ಕರಗಿ ಕಡುಗಿದ ತವರವಾದುದು ಕೀಚಕನ ದೆಸೆಗೆ ೫೪

ಪರಿಮಳದಿ ಸುಳಿವಾಲವಟ್ಟದೊ
ಳಿರದೆ ಪೂಸಿದ ಗಂಧ ಕರ್ಪೂರ
ವರರೆ ಸೀದವು ಕೀಚಕನ ಕಾಮಾಗ್ನಿ ತಾಪದಲಿ
ಪರಮ ಪಾತಿವ್ರತೆಗಳುಪಿ ತಾನ್
ಹರಣದಾಸೆಯ ಮರೆದು ಪಾತಕ
ಹೊರಳುತಿರ್ದನು ಚಂದ್ರಕಾಂತದ ಮೇಲು ಮಚ್ಚಿನಲಿ ೫೫

ಅರೆಗಳಿಗೆ ಯುಗವಾಗಿ ನೂಕಿದ
ನಿರುಳನುದಯಾಚಲದ ಶಿರದಲಿ
ತರಣಿ ತಲೆದೋರಿದನು ತೊಡೆದನು ಭುವನದಂಧತೆಯ
ಪರಿಮಳದ ಪಾವುಡದಿನಳಿಗಳ
ಕರೆಸಿದವು ತಾವರೆಗಳೆನೆ ಕಾ
ತರ ಲತಾಂಗಿಯ ಸುಯ್ಲು ತಾಗಿತು ಕುಮುದಿನೀಪತಿಗೆ ೫೬

## ಮೂರನೆಯ ಸಂಧಿ

ಸೂ. ರಾಯ ಕುರುಬಲ ವಿರಹವನು
ಜಾಯತಾಕ್ಷಿಯು ಸಲಹಿ ಕೀಚಕ
ರಾಯವಂಶಾರಣ್ಯವನು ಸವರಿದನು ಕಲಿಭೀಮ

ಬಯಸಿದಳು ಮೃತ್ಯುವನು ಕಡು ಪಾ
ಪಿಯ ಮನೋಧರ್ಮವನು ಜನಮೇ
ಜಯ ಮಹೀಪತಿ ಕೇಳು ಪಾಂಚಾಲಿಯನು ಕರಸಿದಳು
ನಯವಿಹೀನೆ ಸುದೇಷ್ಣೆ ಬಂದಾ
ಕೆಯನು ಬೆಸಸಿದಳೆಲೆಗೆ ಅನುಜಾ
ಲಯದಲುತ್ತಮ ಮಧುವ ನೀ ಝಡಿತೆಯಲಿ ತಹುದೆಂದು ೧

ಅಮ್ಮನಲ್ಲಿಗೆ ದೇವಿ ನಿಮ್ಮಯ
ತಮ್ಮ ದುರುಳನು ಲೇಸು ಹೊಲ್ಲಹ
ವೆಮ್ಮ ತಾಗುವುದಾತನಳಿವರೆ ಬಳಿಕ ಹಳಿವೆಮಗೆ
ನಿಮ್ಮ ನಾವೊಲ್ಲೈಸಿ ನಿಮಗೆ ವಿ
ಕರ್ಮವನು ಮಾಡುವದು ನಮಗದು
ಧರ್ಮವಲ್ಲುಳಿದವರ ಕಳುಹುವುದೆಂದಳಿಂದುಮುಖಿ ೨

ಎನಲು ಭುಗಿಲೆಂದಳು ಸುದೇತಕೆ
ಮನದ ಗರ್ವವ ನುಡಿವೆ ನಿನ್ನಿಂ
ದೆನಗೆ ಮೇಣೆನ್ನವರಿಗುಂಟೇ ಹಾನಿ ಹರಿಬಗಳು
ಅನುಜನಾರೆಂದರಿಯೆ ಸಾಕಾ
ತನ ಸಮೀಪಕೆ ಹೋಗಿ ಬಾ ನಡೆ
ಯೆನಲು ಕೈಕೊಂಡಬಲೆ ಹೊರವಂಟಳು ನಿಜಾಲಯವ ೩

ದೇವಿ ನೇಮಿಸಲರಿಯೆನೆಂದೊಡಿ
ದಾವ ಧರ್ಮವು ಶಿವ ಶಿವೀ ಹದ
ನಾವನವರಿಗೆ ತಹುದು ಬದ್ಧವಿಘಾತಿಯಿದು ಬಲುಹು
ಸೇವಿಸುವದೇ ಕಷ್ಟವೆಂಬುದು
ಕೋವಿದರ ಮತ ಶಿವ ಶಿವಾ ರಾ
ಜೀವಲೋಚನ ಕೃಷ್ಣ ಬಲ್ಲನೆನುತ್ತ ಗಮಿಸಿದಳು ೪

ಹರಿ ಹರಿ ಶ್ರೀಕಾಂತ ದಾನವ
ಹರ ಮುರಾರಿ ಮುಕುಂದ ಗತಿಶೂ
ನ್ಯರಿಗೆ ನೀನೇ ಗತಿಯೆಲ್ಲೈ ಗರುವಾಯಿಗೆಟ್ಟೆನಲ್ಲೈ
ಕುರುಕುಲಾಗ್ರಣಿ ಸೆಳೆದ ವಸ್ತ್ರಾ
ಕರುಷಣದ ಭಯ ಮತ್ತೆ ಬಂದಿದೆ
ಕರುಣಿ ನೀನೇ ಬಲ್ಲೆಯೆನುತಡಿಯಿಟ್ಟಳಬುಜಾಕ್ಷಿ ೫

ಸುರಪ ಶಿಖಿ ಯಮ ನಿರುತಿ ವರುಣಾ
ದ್ಯರಿಗೆ ವಂದಿಸಿ ಕಣ್ಣಿವೆಯ ಬಿಗಿ
ದರೆಗಳಿಗೆ ನಿಂದಬುಜಮಿತ್ರನ ಭಜಿಸಿ ಕಂದೆರೆಯೆ
ಮುರಿವ ದೈತ್ಯನ ಕಾಹ ಕೊಟ್ಟನು
ತರಣಿ ತರುಣಿಗೆ ಮಂದ ಮಂದೋ
ತ್ತರದ ಗಮನದಲಬಲೆ ಬಂದಳು ಕೀಚಕನ ಮನೆಗೆ ೬

ಚಾರು ನೂಪುರ ಝಣರಝಣದ ಝೇಂ
ಕಾರ ರವದುಬ್ಬಿನಲಿ ಭವನ ಮ
ಯೂರ ಕುಣಿದವು ವರಕಟಾಕ್ಷದ ಮಿಂಚು ಥಳಥಳಿಸೆ
ಆರು ಹೊಗಳುವರಂಗವಟ್ಟದ
ಸೌರಭದ ಭಾರಣೆಗೆ ತುಂಬಿಯ
ಸಾರ ಕಟ್ಟಿತು ಬಂದಳಂಗನೆ ಕೀಚಕಾಲಯಕೆ ೭

ಮನುಮಥನ ಮದದಾನೆ ಕಂದ
ರ್ಪನ ಮಹಾ ಮಂತ್ರಾಧಿದೇವತೆ
ಜನವು ಮರುಳಹ ಮದ್ದು ಸಂಸ್ಕೃತಿಸುಖದ ಸಾಕಾರೆ
ಮನಸಿಜನ ಮಸೆದಲಗು ಮುನಿ ಮೋ
ಹನತಿಲಕ ಲಾವಣ್ಯ ಸಾಗರ
ಜನಿತ ಲಕ್ಷ್ಮಿ ಲತಾಂಗಿ ಬಂದಳು ಕೀಚಕನ ಮನೆಗೆ ೮

ಕುಡಿತೆಗಂಗಳ ಚಪಲೆ ಯಂಗುರ
ವಿಡಿಯ ನಡುವಿನ ನೀರೆ ಹಂಸೆಯ
ನಡೆಯ ಗಮನದ ಮೌಳಿಕಾತಿ ಪಯೋಜ ಪರಿಮಳದ
ಕಡು ಚೆಲುವೆ ಬರಲವನ ತನು ನಡ
ನಡುಗಿ ನಿಂದುದದಾವ ಹೆಂಗಸು
ಪಡೆದಳೀ ಚೆಲುವಿಕೆಯನೆನುತೀಕ್ಷಿಸಿದನಂಗನೆಯ ೯

ಅರಿದು ನೆತ್ತರುಗಾಣದಲಗಿದು
ನೆರೆ ಬಿಗಿಯೆ ಮೈ ಬಾಸುಳೇಳದ
ಹುರಿ ಬಲಿದ ನೇಣ್ನೋಂಕಿದೊಡೆ ಹೊಗೆ ಮಸಗದೆವೆಗಿಚ್ಚು
ಅರರೆ ಕಂಗಳ ಧಾರೆ ಯಾವನ
ಕೊರಳ ಕೊಯ್ಯದದಾವನರಿಕೆಯ
ಹುರುಳುಗೆಡಿಸದಿದಾವ ನಿಲುವನು ಶಿವ ಶಿವಾಯೆಂದ ೧೦

ಆವ ಜನ್ಮದ ಸುಕೃತ ಫಲ ನೆರೆ
ಧೀ ವಧುವ ಸೇರಿದರೊ ಧನ್ಯರು
ತಾವಲಾ ಬಳಿಕೇನು ಪೂರ್ವದ ಸ್ಸುಖದ ಸರ್ವಸ್ವ
ಭಾವಿಸಲು ಸುಕೃತಾವಳಿಗಳಿಂ
ದೀ ವನಿತೆಯಲ್ಲಿಂದ ಮೇಣೆ
ನ್ನಾವುದತಿಶಯವುಂಟೆನುತ ಖಳರಾಯನಿದಿರೆದ್ದ ೧೧

ತರುಣಿ ಬಾ ಕುಳ್ಳಿರು ಮದಂತಃ
ಕರಣದೆಡರಡಗಿತ್ತು ಕಾಮನ
ದುರುಳತನಕಿನ್ನಂಜುವೆನೆ ನೀನೆನಗೆ ಬಲವಾಗೆ
ಬಿರುದ ಕಟ್ಟುವೆನಿಂದುವಿಗೆ ಮಧು
ಕರಗೆ ಕೋಗಿಲೆಗೆಂದು ಖಳನ
ಬ್ಬರಿಸಿ ನುಡಿಯಲು ಖಾತಿಗೊಂಡಿಂತೆಂದಳಿಂದುಮುಖಿ ೧೨

ಬಾಯಿ ಹುಳುವುದು ಬಯಲ ನುಡಿದೊಡೆ
ನಾಯಿತನ ಬೇಡೆಲವೊ ಕೆಡದಿರು
ರಾಯನಂಗನೆ ಕಳುಹೆ ಬಂದೆನು ಮಧುವ ತರಲೆಂದು
ಸಾಯಬೇಕೇ ಹಸಿದ ಶೂಲವ
ಹಾಯಿ ಹೋಗೆನೆ ನಿನ್ನ ಬೈಗಳು
ನೋಯಿಸುವವೇ ತನ್ನನೆನುತವೆ ತುಡುಕಿದನು ಸತಿಯ ೧೩

ಕರವನೊಡೆಮುರುಚಿದಳು ಬಟ್ಟಲ
ಧರೆಯೊಳೀಡಾಡಿದಳು ಸತಿ ಮೊಗ
ದಿರುಹಿ ಬಾಗಿಲ ದಾಂಟಿ ಭಯದಲಿ ನಡುಗಿ ಡೆಂಡಣಿಸಿ
ತರಳೆ ಹಾಯ್ದಳು ಮೊಲೆಯ ಜಘನದ
ಭರದಿ ಬಡನಡು ಮುರಿಯದಿಹುದೇ
ವರ ಸಭಾಗ್ರಕೆತೆಗೆನಲು ರಭಸದೊಳೋಡಿದಳು ಸಭೆಗೆ ೧೪

ಒಡನೆ ಬೆಂಬತ್ತಿದನು ತುರುಬನು
ಹಿಡಿದು ತೊತ್ತಿನ ಮಗಳೆ ಹಾಯ್ದರೆ
ಬಿಡುವೆನೆ ಫಡಯೆನುತ ಹೊಯ್ದನು ಕಾಲಲೊಡೆಮೆಟ್ಟಿ
ಕೆಡೆದು ರಕುತವ ಕಾರಿ ಹುಡಿಯಲಿ
ಮುಡಿ ಹೊರಳಿ ಬಿರುಗಾಳಿಯಲಿ ಸೈ
ಗೆಡೆದ ಕದಳಿಯ ಕಂಬದಂತಿರೆ ಕಾಂತೆಯೊರಳಿದಳು ೧೫

ಕರುಳ ತೆಗೆ ತಿನ್ನಡಗನೆನುತ
ಬ್ಬರಿಸಿ ಸೂರ್ಯನು ಕೊಟ್ಟ ದಾನವ
ನುರವಣಿಸಿ ಕೀಚಕನ ಹೊಯ್ದನು ಹಿಡಿದು ಕುಸುಬಿದನು
ದುರುಳನಡೆಗೆಡೆದೆದ್ದು ನಿಮಿಷದೊ
ಳೊರಲುತೋಡಿದನಾಲಯಕೆ ಬಳಿ
ಕರಸ ಮೊದಲಾದಖಿಳಜನ ನಡುಗಿತ್ತು ಭಯ ಹೊಯ್ದು ೧೬

ಹೊಡೆ ಮರಳಿ ಮುರಿದೆದ್ದು ತುರುಬಿನ
ಹುಡಿಯ ಕೊಡಹುತ ಮೊಲೆಗೆ ಮೇಲುದು
ತೊಡಿಸಿ ಗಲ್ಲದ ರಕುತವನು ಬೆರಲಿಂದ ಮಿಡಿ ಮಿಡಿದು
ನುಡಿಯಲಾಗದೆ ಖಳನು ಹೆಂಗುಸ
ಬಡಿಯೆ ನೋಡುತ್ತಿಹರೆ ಹಿರಿಯರು
ಹಿಡಿದ ಮೌನದ ಹೊತ್ತು ಲೇಸೆಂದಬಲೆ ಹಲುಬಿದಳು ೧೭

ಶಿವ ಶಿವಾ ಪಾಪಿಗಳು ಪತಿಯಾ
ದವರ ತಾಗಲಿ ಸುಯ್ಲುಕಟ ನಾ
ಲುವರ ನಡುವಣ ಹಾವು ಸಾಯದು ನಿರಪರಾಧಿಯನು
ಅವಗಡಿಸಿದನು ಖಳನು ಧರ್ಮದ
ವಿವರ ಸುದ್ದಿಯನಾಡದೀ ಜನ
ನಿವಹ ಘೋರಾರಣ್ಯವಾಯ್ತೆಂದೊರಲಿದಳು ತರಳೆ ೧೮

ಎಲವೊ ದೇಶಿಗ ಕಂಕಭಟ್ಟನೆ
ಹಲವು ಧರ್ಮವ ಬಲ್ಲೆ ಗಡ ನೃಪ
ತಿಲಕಗರುಹುವುದೇನು ಸನ್ಯಾಸಿಗಳಿಗುಚಿತವಿದು
ತಿಳಿಯೆ ದೇಶಿಗರಿಂಗೆ ದೇಶಿಗ
ರೊಲವು ಸಮನಿಸಬೇಕು ಸಭೆಯಲಿ
ಬಲವಿಹೀನರಿಗಾಪ್ತರಿಲ್ಲೆಂದಬಲೆಯೊರಲಿದಳು ೧೯

ಧೈರ್ಯವನೂ ನೆರೆ ಬಲಿದು ಮೇಲಣ
ಕಾರ್ಯಭಾಗವನರಿದು ನೃಪಜನ
ವರ್ಯ ನೋಡದೆ ನುಡಿಸದಿದ್ದನು ಧರ್ಮನಂದನನು
ಶೌರ್ಯಕವಸರವಲ್ಲ ನಮಗೀ
ಯಾರ್ಯನಾಜ್ಞೆಯೆನುತ್ತ ಬಳಿಕಾ
ತುರ್ಯರಿದ್ದರು ಪಾರ್ಥ ಯಮಳರು ಬಲಿದ ದುಗುಡದಲಿ ೨೦

ನೊಂದಳಕಟಾ ಸತಿಯೆನುತ ಮನ
ನೊಂದು ಸೈವೆರಗಾಗಿ ಖತಿಯಲಿ
ಕಂದಿ ನಸು ಮೈ ಬಾಗಿ ರೋಷದೊಳೌಡನೊಡೆಯುವುಚಿ
ಮಂದಿಯರಿಯದವೊಲು ಕುಚೇಷ್ಟೆಯೊ
ಳೊಂದಿ ಮೆಲ್ಲನೆ ಬಾಗಿ ನೋಡಿದ
ನಂದು ರಾಜಾಲಯದ ಮುಂದಣ ಮರನನಾ ಭೀಮ ೨೧

ಒಳಗೆ ನಿಶ್ವೈಸಿದನು ಮೊದಲಲಿ
ಹಿಳಿದು ಹಿಂಡುವೆನಿವಳ ಬಡಿದೀ
ಖಳನನಿವನೊಡಹುಟ್ಟಿದರನಿವನಖಿಳ ಬಾಂಧವರ
ಬಳಿಕ ವಿಗಡ ವಿರಾಟ ರಾಯನ
ಕೊಲುವೆನರಿಯದ ಮುನ್ನ ಕೌರವ
ಕುಲವ ಸವರುವೆನೆಂದು ಕಿಡಿಕಿಡಿಯೋದನಾ ಭೀಮ ೨೨

ಆತನಿಂಗಿತದನುವನರಿತು ಮ
ಹೀತಳಾಧಿಪ ಧರ್ಮಸುತಸತಿ
ಕಾತರಿಸದಿರು ವಲಲ ಸೈರಿಸು ಸೈರಿಸಕಟೆನುತ
ಈ ತರುವ ಮುರಿಯದಿರು ಸುಜನ
ವ್ರಾತಕಾಶ್ರಯವೂರ ಹೊರಗೆ ಮ
ಹಾತಿಶಯ ತರುವುಂಟು ನಿನ್ನಯ ಬಾಣಸಿನ ಮನೆಗೆ ೨೩

ಧರ್ಮವಾಯ ತರುವಿದನು ಮುರಿಯದಿ
ರೆಮ್ಮ ಮಾತನು ಕೇಳೆನಲು ಮಿಗೆ
ಸುಮ್ಮನೋಲಗದಿಂದ ಸರಿದನು ಭೀಮ ದುಗುಡದಲಿ
ಕರ್ಮಫಲವಿದು ನಿನಗೆ ಮಾನಿನಿ
ನಿಮ್ಮ ಭವನಕೆ ಹೋಗು ಶಿಕ್ಷಿಸ
ಲಮ್ಮದೀ ಸಭೆ ಬಗೆಯನಾತನು ಮತ್ಸ್ಯ ಭೂಪತಿಯ ೨೪

ಕೋಪಕವಸರವಲ್ಲ ಪತಿಗಳು
ಕಾಪುರುಷರೇ ನಿನ್ನವರು ಪರಿ
ತಾಪವನು ಬೀಳ್ಕೊಡು ಪತಿವ್ರತೆ ಪುಣ್ಯವಧು ನೀನು
ದೀಪವಲ್ಲಾ ಕ್ಷಮೆಯಖಿಳ ದೋ
ಷಾಪಹಾರವು ಶೌರ್ಯ ಧರ್ಮದ
ರೂಪು ನೆಲೆಯಾ ಕ್ಷಮೆಯೆನಲು ಬಳಿಕೆಂದಳಿಂದುಮುಖಿ ೨೫

ನೀರು ಹೊರಗಿಕ್ಕುವುದು ಮೂರೇ
ಬಾರಿ ಬಳಿಕದು ಪಾಪಿ ಜಾಡಿಸೆ
ಸೈರಿಸದು ಅನ್ಯಾಯ ಬಹುಳತೆಗೇನ ಮಾಡುವೆನು
ಸೈರಣೆಗೆ ತಾನವಧಿಯಿಲ್ಲಾ
ಪೌರುಷವು ಕಡು ಬಂಜೆಯಾಯಿತು
ಆರಯಿಕೆಯಲಿ ಜುಣುಗಿ ಜಾರುವಿರೆಂದಳಿಂದುಮುಖಿ ೨೬

ಅರರೆ ಹೆಂಗಸು ದಿಟ್ಟೆ ಪೋನದೊ
ಳಿರಲಿದಾವಂತರವು ರಾಯನ
ಹೊರೆಯಲೀ ಬಾಯ್ಪಡಿಕತನ ಗರುವಾಯಿಯೇಯೆನಲು
ಕೆರಳಿದಳು ಲಲಿತಾಂಗಿಯಿಲ್ಲಿಯ
ಹಿರಿಯರಲಿ ಮರುಳಿಲ್ಲ ಮಾರುತಿ
ಗರುಹುವೆನು ಬಳಿಕಾದುದಾಗಲಿಯೆನುತ ತಿರುಗಿದಳು ೨೭

ಆ ಸುದೇಷ್ಣೆಯ ಮನೆಗೆ ಬರಲವ
ಳೀ ಸತಿಯ ನುಡಿಸಿದಳು ತಂಗಿ ವಿ
ಳಾಸವಳಿದಿದೆ ಮುಖದ ದುಗುಡವಿದೇನು ಹದನೆನಲು
ಈಸು ಮರವೆಯಿದರಸುತನದ ಮ
ಹಾ ಸಗಾಢಿಕೆಯೆಮ್ಮ ನೀವಪ
ಹಾಸ ಮಾಡುವಿರೆನುತ ದುರುಪದಿ ನುಡಿದಳೊಡತಿಯನು ೨೮

ದುರುಳ ನಿಮ್ಮೊಡಹುಟ್ಟಿದನು ನೀ
ವರಸುಗಳು ತಿರುಕುಳಿಗಳಾವಿ
ನ್ನಿರಲು ಬಾರದು ನೃಪತಿ ತಪ್ಪಿದೊಡಾರು ಕಾವವರು
ಕರೆಸಿ ಬುದ್ಧಿಯ ಹೇಳಿ ಎನ್ನನು
ಹೊರೆಯಲಾಪರೆ ಹೊರೆಯಿರಲ್ಲದ
ಡರಸಿ ಕಳುಹುವುದೆನ್ನನೆನಲಿಂತೆಂದಳಾ ರಾಣಿ ೨೯

ಲಲನೆ ಕೇಳನ್ಯಾಯದವರನು
ಕೊಲಿಸುವೆನು ಭಯಬೇಡ ಪರ ಸತಿ
ಗಳುಪಿದವನೊಡಹುಟ್ಟಿದನೆ ಕಡುಪಾಪಿ ಹಗೆಯೆನಲು
ಕೊಲಿಸುವೊಡೆ ನೀವೇಕೆ ತಪ್ಪಿನ
ಬಳಿಯಲೆನ್ನಾತಗಳು ಕೀಚಕ
ಕುಲವ ಸವರುವರೆನಗೆ ಕಾರಣವಿಲ್ಲ ಸಾರಿದೆನು ೩೦

ಎಂದು ಬೀಳ್ಕೊಂಡಬಲೆ ತನ್ನಯ
ಮಂದಿರಕೆ ಬಂದೊಳಗೊಳಗೆ ಮನ
ನೊಂದು ಸೈವರಗಾಗಿ ಚಿಂತಿಸಿ ನೂಕಿದಳು ಹಗಲ
ಕೊಂದುಕೊಂಬೆನೆ ಆತ್ಮಘಾತಕ
ಹಿಂದೆ ಹತ್ತದೆ ಮಾಣದೇಗುವೆ
ನೆಂದು ದ್ರೌಪದಿ ತನ್ನ ಮನದಲಿ ಹಿರಿದು ಮರುಗಿದಳು ೩೧

ಆರಿಗುಸುರುವೆನಾರ ಸಾರುವೆ
ನಾರಿಗೊರಲುವೆನಾರಿಗರುಹುವೆ
ನಾರ ಬೇಡುವೆನಕಟ ಹೆಂಗಸು ಜನ್ಮವನು ಸುಡಲಿ
ಘೋರ ಪಾತಕಿಯೆನ್ನವೊಲು ಮು
ನ್ನಾರು ನವೆದವರುಂಟು ಮರಣವು
ಬಾರದೆಂದೊರಲಿದಳು ಬಸುರನು ಹೊಯ್ದು ಶಶಿವದನೆ ೩೨

ಯಮಸುತಂಗರುಹುವೆನೆ ಧರ್ಮ
ಕ್ಷಮೆಯ ಗರ ಹೊಡೆದಿಹುದು ಪಾರ್ಥನು
ಮಮತೆಯುಳ್ಳವನೆಂಬೆನೇ ತಮ್ಮಣ್ಣನಾಜ್ಞೆಯಲಿ
ಭ್ರಮಿತನಾಗಿಹನುಳಿದರಿಬ್ಬರು
ರಮಣಿಯರೀ ನಾಯ ಕೊಲಲ
ಕ್ಷಮರು ನಿಸ್ಸಂದೇಹವೆಂದಳು ತನ್ನ ಮನದೊಳಗೆ ೩೩

ಎಲ್ಲರೊಳು ಕಲಿಭೀಮನೇ ಮಿಡು
ಕುಳ್ಳ ಗಂಡನು ಹಾನಿ ಪರಿಬಕೆ
ನಿಲ್ಲದಂಗೈಸುವನು ಕಡು ಹೀಹಾಳಿಯುಳ್ಳವನು
ಖುಲ್ಲನಿವನುಪಟಳವನಾತಂ
ಗೆಲ್ಲವನು ಹೇಳುವೆನು ಬಳಿಕವ
ನಲ್ಲಿ ಮರುಳಿಲ್ಲದೊಡೆ ಕುಡಿವೆನು ಘೋರತರ ವಿಷವ ೩೪

ನಿಳಯವನು ಹೊರವಂಟು ಕಂಗಳ
ಬೆಳಗು ತಿಮಿರವ ಕೆಡಿಸೆ ಕಂಕಣ
ಲಲಿತ ಝೇಂಕೃತಿಯಿಂದ ತೂಗುವ ವಾಮಭುಜಲತೆಯ
ಒಲಿದು ಮೇಲುದ ನೂಕಿ ನಡುಗುವ
ಮೊಲೆಯ ಭರದಲಿಯಡಿಯಿಡುತ ಕಳ
ವಳದ ಕರಣದ ಮುಗುದೆ ಬಂದಳು ಬಾಣಸಿನ ಮನೆಗೆ ೩೫

ಕೆಲದಲೊಟ್ಟಿದ ಪತ್ರ ಶಾಕಾ
ವಳಿಯ ಫಲರಾಶಿಗಳ ಕಳವೆಯ
ಹೊಳೆವುತಿಹ ರಾಜಾನ್ನದಕ್ಕಿಯ ಸಾಲ ಹರಿಯಣದ
ಕೆಲಬಲದ ಸಂಭಾರ ಚೂರ್ಣದ
ಲಲಿತ ಬೋನದ ವಿವಿಧ ಭಕ್ಷ್ಯಾ
ವಳಿಯ ಬಾಣಸದೊಳಗೆ ಬಂದಳು ಮತ್ತಗಜಗಮನೆ ೩೬

ತರಿದ ಕುರಿಗಳ ಹಂದಿಯಡಗಿನ
ಜುರಿತ ರಕುತದ ಮೊಲನ ಖಂಡದ
ತಿರಿದ ಗುಬ್ಬಿಯ ಕೀಸಿ ಸೀಳಿದ ನವಿಲ ಲಾವುಗೆಯ
ತುರುಗಿದೆಲುವಿನ ಸಾಲ ಸುಂಟಿಗೆ
ಮೆರೆವ ಮಾಂಸದ ರಾಸಿಗಳ ಹರ
ದೆರಕೆಗಳ ಕಂಡಬಲೆ ಹೊಗಳಿದಳಡಬಳದ ಮನೆಯ ೩೭

ಆರಲರಿದನೊ ಭೀಮನೀ ಸೂ
ವಾರ ವಿದ್ಯೆಯ ಭಾಪು ವಿಧಿ ಮುನಿ
ದಾರನಾವಂಗದಲಿ ಬರಿಸದು ಶಿವ ಶಿವಾಯೆನುತ
ನಾರಿ ನಸುನಗುತೊಳಗೆ ಹೊಕ್ಕು ಬ
ಕಾರಿ ಮಂಚದೊಳಿರಲು ನಿದ್ರಾ
ಭಾರ ವಿಹ್ವಲಕರಣನನು ಹೊದ್ದಿದಳು ಲಲಿತಾಂಗಿ ೩೮

ಎಬ್ಬಿಸಲು ಭುಗಿಲೆಂಬನೋ ಮೇ
ಣೊಬ್ಬಳೀತಕೆ ಬಂದೆ ಮೋರೆಯ
ಮಬ್ಬಿದೇಕೆಂದೆನ್ನ ಸಂತೈಸುವನೊ ಸಾಮದಲಿ
ತುಬ್ಬುವುದೊ ತಾ ಬಂದ ಬರವಿದು
ನಿಬ್ಬರವಲಾ ಜನದ ಮನಕಿ
ನ್ನೆಬ್ಬಿಸಿಯೆ ನೋಡುವೆನೆನುತ ಸಾರಿದಳು ವಲ್ಲಭನ ೩೯

ಮೆಲ್ಲ ಮೆಲ್ಲನೆ ಮುಸುಕ ಸಡಿಲಿಸಿ
ಗಲ್ಲವನು ಪಿಡಿದೆಲುಗಲಪ್ರತಿ
ಮಲ್ಲನೆದ್ದನು ನೋಡಿದನು ಪಾಂಚಾಲ ನಂದನೆಯ
ವಲ್ಲಭೆಯೆ ಬರವೇನು ಮುಖದಲಿ
ತಲ್ಲಣವೆ ತಲೆದೋರುತಿದೆ ತಳು
ವಿಲ್ಲದುಸುರಿರುಳೇಕೆ ಬಂದೆ ಲತಾಂಗಿ ಹೇಳೆಂದ ೪೦

ಸೈರಿಸರು ಬಾಣಸದ ಭವನದ
ನಾರಿಯರು ದುರ್ಜನರು ಖಿಲ್ಲಕು
ಠಾರರಿವರರಮನೆಯ ನಾಯ್ಗಳು ನಾವು ದೇಶಿಗರು
ಭಾರವಿದು ಕೆಲರರಿಯದಂತಿರೆ
ನಾರಿ ನೀ ಹೇಳೆನುತ ಮುಗುಡವಿ
ದಾರ ದೆಸೆಯಿಂದಾಯಿತೆನಲಿಂತೆಂದಳಿಂದುಮುಖಿ　೪೧

ನಿನ್ನೆ ಹಗಲರೆಯಟ್ಟಿ ಕೀಚಕ
ಕುನ್ನಿಯೊದೆದನು ರಾಜಸಭೆಯಲಿ
ನಿನ್ನ ವಂದಿಗರಿರಲು ಪರಿಭವವುಚಿತವೇ ತನಗೆ
ಎನ್ನನವ ಬೆಂಬಳಿಯ ಬಿಡ ನಾ
ನಿನ್ನು ಬದುಕುವಳಲ್ಲ ಪಾತಕ
ನಿನ್ನ ತಾಗದೆ ಮಾಣದೆನಲಾ ಭೀಮ ಖತಿಗೊಂಡ　೪೨

ಉಸುರಲಾಗದು ನಿನ್ನ ಹರಿಬಕೆ
ಮಿಸುಕುವವರಾವಲ್ಲ ಹೆಂಡಿರ
ಗಸಣಿಗೊಂಬವರಲ್ಲ ಹುದುವಿನ ಗಂಡತನವಿದನು
ಶಶಿವದನೆ ಸುಡು ಕಷ್ಟವೀಯಪ
ದೆಸೆಯವರು ನಾವಲ್ಲ ನಿನ್ನವ
ರಸಮ ಸಾಹಸರುಳಿದ ನಾಲ್ವರಿಗರುಹು ಹೋಗೆಂದ　೪೩

ರಮಣ ಕೇಳುಳಿದವರು ತನ್ನನು
ರಮಿಸುವರು ಮಾನಾರ್ಥವೆನೆ ನಿ
ರ್ಗಮಿಸುವರು ನೀನಲ್ಲದುಳಿದವರುಚಿತ ಬಾಹಿರರು
ಮಮತೆಯಲಿ ನೀ ನೋಡು ಚಿತ್ತದ
ಸಮತೆಯನು ಬೀಳ್ಕೊಡು ಕುಠಾರನ
ಯಮನ ಕಾಣಿಸಿ ಕರುಣಿಸೆಂದಳು ಕಾಂತೆ ಕೈಮುಗಿದು　೪೪

ಕಲಹಕಾದೊಡೆ ನಾವು ರಮಿಸುವ
ರುಳಿದವರು ಬಳಿಕೇನು ಗಾದೆಯು
ಬಳಕೆ ಕೆಲಬರು ಗಳಿಸಿದೊಡೆ ಕೆಲರುಂಡು ಜಾರುವರು
ಅಳುಕಿ ನಡೆವವರಲ್ಲ ನಿನ್ನಯ
ಹಳಿವು ಹರಿಬವ ಹೇಳಿ ಚಿತ್ತವ
ತಿಳುಹಿಕೊಂಬುದು ನಾವು ಭೀತರು ಧರ್ಮಜನ ಹೊರೆಗೆ　೪೫

ಹೆಂಡತಿಯ ಹರಿಬದಲಿಯೊಬ್ಬನೆ
ಗಂಡುಗೂಸೇ ವೈರಿಯನು ಕಡಿ
ಖಂಡವನು ಮಾಡುವನು ಮೇಣ್ ತನ್ನೊಡಲನಿಕ್ಕುವನು
ಗಂಡರೈವರು ಮೂರು ಲೋಕದ
ಗಂಡರೊಬ್ಬಳನಾಳಲಾರಿರಿ
ಗಂಡರೋ ನೀವ್ ಭಂಡರೋ ಹೇಳೆಂದಳಿಂದುಮುಖಿ　೪೬

ಅಂದು ಕೌರವ ನಾಯಿ ಸಭೆಯಲಿ
ತಂದು ತೋರಿದನುನ್ನತಿಯ ಬಳಿ
ಕಿಂದು ಕೀಚಕ ಕುನ್ನಿಯೊದೆದನು ರಾಜಸಭೆಯೊಳಗೆ
ಅಂದು ಮೇಣಿಂದಾದ ಭಂಗಕೆ
ಕುಂದದಾವುದು ನೀವು ಬಲ್ಲಿದ
ರೆಂದು ಹೊಕ್ಕರೆ ಹೆಣ್ಣಿ ಕೊಂದಿರಿಯೆಂದಳಿಂದುಮುಖಿ　೪೭

ದಾನವರು ಮಾನವರೊಳೆನ್ನಭಿ
ಮಾನವನು ಕೊಂಬವನ ಹೆಸರನ
ದೇನನೆಂಬೆನು ನೊಂದು ನುಡಿದೊಡೆ ಖಾತಿಯಿಲ್ಲೆಮಗೆ
ಈ ನಪುಂಸಕರೊಡನೆ ಹುಟ್ಟಿದ
ನಾನು ಮೂಗುಳ್ಳವನೆ ಮಾನಿನಿ
ನೀನು ತೋರಿದ ಪರಿಯಲೆಂಬುದು ಭೀತಿ ಬೇಡೆಂದ　೪೮

ಅಂದು ದುಶ್ಶಾಸನನ ಕರುಳನು
ತಿಂದಡಲ್ಲದೆ ತಣಿವು ದೊರಕೊಳ
ದೆಂದು ಹಾಯ್ದೊಡೆ ಹಲುಗಿರಿದು ಮಾಣಿಸಿದನಾ ವ್ಯಥೆಯ
ಇಂದು ಕೀಚಕ ನಾಯನೆರಗುವೆ
ನೆಂದು ಮರನನು ನೋಡಿದರೆ ಬೇ
ಡೆಂದ ಹದನನು ಕಂಡೆ ನೀನೆನಗುಂಟೆಯಪರಾಧ　೪೯

ಹೆಣ್ಣ ಹರಿಬಕ್ಕೋಸುಗವೆ ತ
ಮ್ಮಣ್ಣನಾಜ್ಞೆಯ ಮೀರಿ ಕುಂತಿಯ
ಚಿಣ್ಣ ಬದುಕಿದನೆಂದು ನುಡಿವರು ಕುಜನರಾದವರು
ಅಣ್ಣನವರಿಗೆ ದೂರುವುದು ನಾ
ವುಣ್ಣದುರಿಯಿವು ರಾಯನಾಜ್ಞೆಯು
ಕಣ್ಣಿಯಲಿ ಬಿಗಿವಡೆದು ಕೆಡೆದೆವು ಕಾಂತೆ ಕೇಳೆಂದ　೫೦

ಹೊದ್ದುವುದು ಫಲುಗುಣನ ಪಾದಕೆ
ಬಿದ್ದು ಯಮನಂದನನ ಮನವನು
ತಿದ್ದುವುದು ಸಹದೇವ ನಕುಲರ ಕೈಯಲೆನಿಸುವುದು
ಗೆದ್ದು ಕೊಡುವರು ನಿನ್ನ ಪಾಲಿಸ
ದಿದ್ದರಾದೊಡೆ ದೋಷವವರನು
ಹೊದ್ದುವುದು ನೀನೆನ್ನ ಬರಿದೇ ಕಾಡ ಬೇಡೆಂದ　೫೧

ಗಂಡ ಗರ್ವವ ನುಡಿಯೆವೆಮ್ಮಯ
ದಂಡಿ ತಾನದು ಬೇರೆ ನಾವೀ
ಭಂಡತನದಲಿ ಬದುಕಲರಿಯೆವು ಧರ್ಮಗಿರ್ಮವನು
ಕೊಂಡು ಕೊನರುವರಲ್ಲ ರಾಯನ
ನಂಡಲೆದು ಕೀಚಕನ ತಲೆಯನು
ಚೆಂಡನಾಡಿಸು ರಮಣಿ ಮೇಣರ್ಜುನಗೆ ಹೇಳೆಂದ　೫೨

ತರುಣಿ ದಿಟ ಕೇಳಿಂದು ಮೊದಲಾ
ಗರಸಿ ನೀ ನಾಲ್ವರಿಗೆ ನಾವೆಡೆ
ಮುರಿದವರು ಬಿಟ್ಟವರು ನಿನ್ನಯ ಸೂಳು ಪಾಳೆಯವ
ಅರಸನನು ಪ್ರಾರ್ಥಿಸುವುದರ್ಜುನ
ವರ ನಕುಲ ಸಹದೇವರಿಗೆ ವಿ
ಸ್ತರಿಸಿ ಹೇಳ್ವುದು ನಮ್ಮೊಡನೆ ಫಲಸಿದ್ಧಿಯಿಲ್ಲೆಂದ　೫೩

ಕೇಳುತಿದ್ದಳು ಕೊರಳ ಸೆರೆ ಗೋ
ನಾಳಿಗೌಕಿತು ಬಿಕ್ಕಿ ಬಿಕ್ಕಿ ವಿ
ಲೋಲಲೋಚನೆಯಕಟ ನೆನೆದಳು ಬಾಷ್ಪವಾರಿಯಲಿ
ಶೂಲ ಮುರುಮೊನೆಗೊಂಡವೊಲು ಸುಳಿ
ವಾಳೆ ಝಳ ತಾಗಿದವೊಲುದರ
ಜ್ವಾಲೆ ನೆತ್ತಿಗೆ ನಿಲುಕೆ ಹಲುಬಿದಳಬಲೆ ಬಿಸುಸುಯ್ದು　೫೪

ಕೆಂದಳದ ಸೆಕೆಯಲಿ ಕಪೋಲವು
ಕಂದಿ ಕಸರಿಕೆಯಾಯ್ತು ನಿಡು ಸುಯಿ
ಲಿಂದ ಶೀಕರಿಯೋದವೇಕಾವಳಿಯ ಮುತ್ತುಗಳು
ಸೂದಣಿಸಿದೆವೆಗಳಲಿ ಬಾಷ್ಪದ
ಬಿಂದು ತಳಿತುದು ನಟ್ಟ ದೃಷ್ಟಿಯೊ
ಳಿಂದುಮುಖಿ ಸೈಗರೆದು ತೂಗಿದಳಡಿಗಡಿಗೆ ಶಿರವ ೫೫

ಆವ ಹೆಂಗುಸನಳಲಿಸಿದೆನಿ
ನ್ನಾವ ಧರ್ಮವನಳಿದೆನೋ ತಾ
ನಾವ ಪಾಪದ ಫಲಕೆ ಪಿಡಿದೆನೊ ಸಂಚಕಾರವನು
ಆವ ಹೆಂಗಸು ನವೆದಳೆನ್ನವೊ
ಲಾವಳಳಲಿದು ಮರುಗಿದಳು ಮ
ತ್ತಾವಳೆನ್ನಂದದಲಿ ಪಡೆದವಳುಂಟೆ ಲೋಕದಲಿ ೫೬

ಇನ್ನು ಹುಟ್ಟದೆಯಿರಲಿ ನಾರಿಯ
ರೆನ್ನವೊಲು ಭಂಗಿತರು ಭುವನದೊ
ಳಿನ್ನು ಜನಿಸಲುಬೇಡ ಗಂಡರು ಭೀಮಸನ್ನಿಭರು
ಎನ್ನವೊಲು ಪಾಂಡವರವೊಲು ಸಂ
ಪನ್ನ ದುಃಖಿಗಳಾರು ನವೆದರು
ಮುನ್ನಿನವರೊಳಗೆಂದು ದ್ರೌಪದಿ ಹಿರಿದು ಹಲುಬಿದಳು ೫೭

ಆವ ಗರಳವ ಕುಡಿವೆನೋ ಮೇ
ಣಾವ ಬೆಟ್ಟವನಡರಿ ಬೀಳ್ವೆನೊ
ಯಾವ ಮಡುವನು ಹೊಗುವೆನೋ ಹಾಸರೆಯ ಗುಂಪಿನಲಿ
ಆವ ಕುಂತವ ಹಾಯ್ವೆನೋ ಮೇ
ಣಾವ ಪಾವಕನೊಳಗೆ ಹೊಗುವೆನೊ
ಸಾವು ಸಮನಿಸದೆನಗೆನುತ ಮರುಗಿದಳು ನಳಿನಾಕ್ಷಿ ೫೮

ಮುಂದೆಗೆಳಸಿದ ಪಾಪಿ ಕೌರವ
ನಂದು ಮುಂದಲೆವಿಡಿದು ಸೈಂಧವ
ಬಂದು ಬಳಿಕಾರಣ್ಯವಾಸದೊಳೆನ್ನನೆಳದೊಯ್ದು
ಇಂದು ಕೀಚಕ ನಾಯ ಕಾಲಲಿ
ನೊಂದೆ ನಾನೀ ಮೂರು ಬಾರಿಯೆ
ಬಂದ ಭಂಗವೆ ಸಾಕೆನುತ ಬಸವಳಿದಳಿಂದುಮುಖಿ ೫೯

ಜನನವೇ ಪಾಂಚಾಲ ರಾಯನ
ಮನೆ ಮನೋವಲ್ಲಭರದಾರೆನೆ
ಮನುಜದನುಜರು ಗಣ್ಯವೇ ಗೀರ್ವಾಣರಿಂ ಮಿಗಿಲು
ಎನಗೆ ಬಂದೆಡರೀ ವಿರಾಟನ
ವನಿತೆಯರುಗಳ ಮುಡಿಯ ಕಟ್ಟುವ
ತನುವ ತಿಗುರುವ ಕಾಲನೊತ್ತುವ ಕೆಲಸದುತ್ಸಾಹ ೬೦

ಹಗೆಗಳಿಗೆ ತೆಂಪಾಗಿ ಬದುಕುವ
ಮುಗುದರಿನ್ನಾರುಂಟು ಭಂಗಕೆ
ಹೆಗಲ ಕೊಟ್ಟಾನುವ ವಿರೋಧಿಗಳುಂಟೆ ಲೋಕದಲಿ
ವಿಗಡ ಬಿರುದನು ಬಿಸುಟು ಬಡಿ ಹೋ
ರಿಗಳು ಪಾಂಡವರಂತೆ ಮೂಗು
ಟಿಗಳದಿನ್ನಾರುಂಟೆನುತ ಮರುಗಿದಳು ನಳಿನಾಕ್ಷಿ ೬೧

ಕಾಲನನು ಕೆರಳಿದೊಡೆ ಮುರಿವೆ
ಚ್ಚಾಳುತನದವರೆನ್ನನೊಬ್ಬಳ
ನಾಳಲಾರಿರಿ ಪಾಪಿಗಳಿರಪಕೀರ್ತಿಗಳುಕಿರಲ
ತೋಳ ಹೊರೆ ನಿಮಗೇಕೆ ಭೂಮೀ
ಪಾಲ ವಂಶದೊಳುದಿಸಲೇತಕೆ
ಕೂಳುಗೇಡಿಂಗೊಡಲ ಹೊರುವಿರಿಯೆಂದಳಿಂದುಮುಖಿ ೬೨

ಧರೆಯ ಭಂಡಾರವನು ಪುರವನು
ಕರಿತುರಗ ರಥ ಪಾಯದಳವನು
ಕುರುಕುಲಾಗ್ರಣಿ ಸೆಳೆದುಕೊಂಡನು ನಿಮ್ಮ ಹೊರವಡಿಸಿ
ದುರುಳ ಕೀಚಕಗೆನ್ನ ಕೊಟ್ಟಿರಿ
ಪರಿಮಿತವಲಿರವಾಯ್ತು ನಿಮ್ಮ
ವರಿಗೆ ಲೇಸಾಯ್ತುಕಟಯೆಂದಬುಜಾಕ್ಷಿ ಹಲುಬಿದಳು ೬೩

ಭಾವ ಭಾಗ್ಯಾಧಿಕನು ಕೌರವ
ದೇವನರಸುಗಳೊಡೆಯತನವನು
ನೀವು ಕೃಷ್ಣನ ಕೂರ್ಮೆ ಧರ್ಮಾದಿ ಪಾಲಿಸಿದಿರೀಗ
ನೀವು ತಟತಟವಾಗಿ ಲೋಗರ
ಸೇವೆಯಲಿ ಬೆಂದೊಡಲ ಹೊರುವಿರಿ
ಸಾವವಳು ನಿಮಗಂಜಲೇಕೆಂದಬಲೆಯೊರಲಿದಳು ೬೪

ಭೀಮ ಕೊಟ್ಟೈ ತನಗೆ ಸಾವಿನ
ನೇಮವನು ನಿಮ್ಮಣ್ಣನಾಜ್ಞೆ ವಿ
ರಾಮವಾಗದೆ ಬದುಕೆ ಧರ್ಮದ ಮೈಸಿರಿಯನರಿದು
ಕಾಮಿನಿಯ ಕೇಳಿಯಲಿ ನೆನೆವುದು
ತಾಮಸದಿ ತಾ ಮೀರಿ ನುಡಿದು
ದ್ದಾಮತೆಯ ಸೈರಿಸುವುದೆಂದೆರಗಿದಳು ಚರಣದಲಿ ೬೫

ಎನಲು ಕಂಬನಿದುಂಬಿದನು ಕಡು
ನೆನೆದುದಂತಃಕರಣ ರೋಷದ
ಘನತೆ ಹೆಚ್ಚಿತು ಹಗೆಗಳನು ಹಿಂಡಿದನು ಮನದೊಳಗೆ
ತನುಪುಳಕವುಬ್ಬರಿಸಿ ಮೆಲ್ಲನೆ
ವನಿತೆಯನು ತೆಗೆದಪ್ಪಿದನು ಕಂ
ಬನಿಯದೊಡೆದನು ಸೆರಗಿನಲಿ ಕಲಿಭೀಮ ಮಾನಿನಿಯ ೬೬

ಕುರುಳ ನೇವರಿಸಿದನು ಗಲ್ಲವ
ನೊರಸಿ ಮುಂಡಾಡಿದನು ಮಂಚದ
ಹೊರೆಯ ಗಿಂಡಿಯ ನೀರಿನಲಿ ತೊಳೆದನು ಮುಖಾಂಬುಜವ
ಅರಸಿ ಬಿಡು ಬಿಡು ಖಾತಿಯನು ವಿ
ಸ್ತರಿಸಲೇಕೆಮ್ಮಣ್ಣನಾಜ್ಞೆಯ
ಗೆರೆಯ ದಾಂಟಿದ ದಾಂಟಿದೆನು ಹೋಗೆಂದನಾ ಭೀಮ ೬೭

ಬಸುರ ಬಗಿವೆನು ಕೀಚಕನ ನಸು
ಮಿಸುಕಿದೊಡೆ ವೈರಾಟ ವಂಶದ
ಹೆಸರ ತೊಡೆವೆನು ನಮ್ಮನರಿದೊಡೆ ಕೌರವವ್ರಜವ
ಕುಸುರಿದರಿವೆನು ಭೀಮ ಕಷ್ಟವ
ನೆಸಗಿದನು ಹಾಯೆಂದರಾದೊಡೆ
ಮುಸುಡನಮರಾದ್ರಿಯಲಿ ತೇವೆನು ದೇವಸಂತತಿಯ ೬೮

ಮುನಿದನಾದೊಡೆಯುಣ್ಣ ತನದಿಂ
ದಿನಲಿ ಹರಿಯಲಿ ಪಾರ್ಥ ನಕುಲರು
ಕನಲಿದೊಡೆ ಕೈದೋರುವೆನು ಸಹದೇವನಿವರುಗಳ
ಅನುಜನೆಂಬೆನೆ ಕೃಷ್ಣ ಹಾಯ್ದರೆ
ಘನ ಮುರಾರಿಯ ಮೀರುವೆನು ಬಳಿ
ಕೆನಗೆ ಸಮಬಲರಾರು ತರಿವೆನು ಕೀಚಕಾನ್ವಯವ ೧೯

ಈಸು ದಿನವೆಮ್ಮಣ್ಣನಾಜ್ಞೆಯ
ಪಾಶದಲಿ ಸಿಕ್ಕಿರ್ದೆ ಸಿಂಹದ
ಕೂಸ ನರಿ ಕೆಣಕುವವೊಲೀ ಕುರು ಕೀಚಕಾದಿಗಳು
ಗಾಸಿಯಾದರು ಕೆಣಕಿ ನಾಯ್ಗಳ
ವೀಸ ಬಡ್ಡಿಯಲಸುವ ಕೊಂಬೆನು
ವಾಸಿ ಧರ್ಮದ ಮೇರೆದಪ್ಪಿತು ಕಾಂತೆ ಕೇಳೆಂದ ೨೦

ತರುಣಿ ಕೀಚಕ ಕೌರವೇಂದ್ರರ
ಹರಣಕಿದ ಕೋ ಸಂಚಕಾರವ
ಕೆರಳಿದೊಡೆಯಿ‍ಾ ಭೀಮ ಬಗೆವನೆ ನೀತಿಗೀತಿಗಳ
ಕೆರಳಿಚಿದೆಯಿನ್ನೇನು ನಿನ್ನಯ
ಹರಿಬವೆನ್ನದು ನಾಯಿ ಜಾರನ
ಕರೆದು ಸಂಕೇತದಲಿ ಸೂಚಿಸು ನಾಟ್ಯಮಂದಿರವ ೨೧

ಅಲ್ಲಿಗಿರುಳೈತಂದು ಮರೆಯಲಿ
ಖುಲ್ಲನುದರವ ಬಗಿದು ರಕಂತವ
ಚೆಲ್ಲುವೆನು ಶಾಕಿನಿಯರಿಗೆ ಸಂದೇಹ ಬೇಡಿದಕೆ
ಅಲ್ಲಿ ಕೆಲಬಲನರಿದುದಾದೊಡೆ
ಬಲ್ಲೆನದಕೌಷಧಿಯ ಕರೆ ಮರೆ
ಯಿಲ್ಲ ಮಾನಿನಿ ಹೋಗೆನುತ ಬೀಳ್ಕೊಟ್ಟನಂಗನೆಯ ೨೨

ಹರುಷದಲಿ ಹೆಚ್ಚಿದಳು ಪುರುಷರ
ಪುರುಷನಲ್ಲಾ ಭೀಮ ತನ್ನಯ
ಪರಮ ಸುಕೃತೋದಯವಲಾ ನೀನೊಬ್ಬನೆಂದೆನುತ
ಅರಸಿ ಕಾಂತನ ಬೀಳುಕೊಂಡಳು
ತಿರುಗಿದಳು ನಿಜಭವನಕಿತ್ತಲು
ತರಣಿ ತೆಗೆದನು ತಾವರೆಯ ಬಾಗಿಲಿನ ಬೀಯಗವ ೨೩

ಆ ದಿವಸವರಮನೆಗೆ ಬರುತ ವೃ
ಕೋದರನ ವಲ್ಲಭೆಯ ಕಂಡನು
ಕೈದುಡುಕಲಂಜಿದನು ಮಾತಾಡಿಸಿದನಂಗನೆಯ
ಹೋದಿರುಳು ಯುಗವಾಗಿ ಸವೆದುದು
ನೀ ದಯಾಂಬುಧಿ ಕುಸುಮಶರ ಯಮ
ನಾದನದ ನೀ ಬಲ್ಲೆಯೆಂದನು ಕೀಚಕನು ನಗುತ ೨೪

ಕುಸುಮಶರ ಯಮನಹನು ಅಮೃತವು
ವಿಷವಹುದು ಬಳಿಕಾಲಿಕಲುಗಳು
ಬಿಸಿಯಹವು ಬಾಂಧವರು ವೈರಿಗಳಹರು ನಿಮಿಷದಲಿ
ಒಸೆದರೊಲ್ಲದರಹರು ಲೋಗರ
ಶಶಿವದನೆಗಳುಚಿದ ದುರಾತ್ಮನ
ವಸುಧೆ ಹೊರದೆಲೆ ಪಾಪಿ ಕೀಚಕಯೆಂದಳಿಂದುಮುಖಿ ೨೫

ಬಳಿಕ ನಿನ್ನ ಪುರಾಣ ಧರ್ಮವ
ತಿಳಿದುಕೊಂಬೆನಿದೊಮ್ಮೆ ನಿನ್ನಯ
ಲಲಿತ ಕರುಣ ಕಟಾಕ್ಷಕವಚವ ತೊಡಿಸಿ ತನ್ನೊಡಲ
ಅಳುಕದೆಸುವ ಮನೋಜನಂಬಿನ
ಹುಳುಕ ಮುರಿ ಡಿಂಗರಿಗನಹೆನೆಂ
ದಳಿಮನದಲಾ ಖೂಳನಬುಜಾನನೆಗೆ ಕೈಮುಗಿದ ೨೬

ಅರಿದರಾದೊಡೆ ನಿನ್ನ ವಂಶವ
ತರಿವರೆನ್ನವರೆಲವೊ ಕೆಲಬಲ
ನರಿಯದಂದದಿ ಬಂದು ನಾಟ್ಯದ ಗರುಡಿಯೊಳಗಿಹುದು
ನೆರೆದುದಾಯುಷ ನಿನಗೆ ಕತ್ತಲೆ
ಮನೆಯೊಳಾನೈತಹೆನುಯೆನ್ನನು
ಮರೆದು ನೀ ಬಿಡೆಯಾದುದಾಗಲಿಯೆಂದಳಿಂದುಮುಖಿ ೨೭

ಖಳ ಹಸಾದವ ಹಾಯ್ಕಿ ತನ್ನಯ
ನಿಳಯಕೈದಿದನಬುಜ ಬಾಂಧವ
ನಿಳಿದನಸ್ತಾಚಲದ ತಪ್ಪಲ ತಾವರೆಯ ಬನಕೆ
ನಳಿನಮುಖಿ ನಲವೇರಿ ಕಗ್ಗ
ತ್ತಲೆಯ ಹಬ್ಬುಗೆಯೊಳಗೆ ಕಂಗಳ
ಬೆಳಗು ಬಟ್ಟೆಯ ತೋರೆ ಬಂದಳು ಬಾಣಸಿನ ಮನೆಗೆ ೨೮

ಭೀಮ ನಿಂದಿರು ನಾಟ್ಯನಿಲಯವ
ನಾ ಮದಾಂಧಗೆ ನುಡಿದು ಬಂದೆನು
ತಾಮಸವ ಮಾಡದಿರು ಹೂಡದಿರಲ್ಪಬುದ್ಧಿಗಳ
ಕಾಮುಕನನಡೆಗೆಡಹಿ ನಿಜ ಸು
ಪ್ರೇಮವನು ತೋರೆನಲು ನಗುತು
ದ್ದಾಮನೆದ್ದನು ಘಳಿಯನುಟ್ಟನು ಮಲ್ಲಗಂಟಿನಲಿ ೨೯

ಖಳನ ಮುರಿಯೆಂದಬಲೆ ನೊಸಲಲಿ
ತಿಲಕವನು ರಚಿಸಿದಳು ಸೇಸೆಯ
ತಳಿದಳೇರಿಸಿ ತಿಗುರ ಗೆಲಿದಳು ಹಿಣಿಲ ಹೊಸ ಪರಿಯ
ಬಲುಭುಜನ ಹರಸಿದಳು ಕಗ್ಗ
ತ್ತಲೆಯ ಹಬ್ಬುಗೆಯೊಳಗೆ ನಾಟ್ಯದ
ನಿಳಯ ಮಧ್ಯದ ಮಣಿಯ ಮಂಚದ ಮೇಲೆ ಪವಡಿಸಿದ ೩೦

ಉರಿವ ಮಾರಿಯ ಬೇಟದಾತನು
ತುರುಗಿದನು ಮಲ್ಲಿಗೆಯ ಮೊಗ್ಗೆಯ
ನಿರಿಕಿ ತಾ ಪೂಸಿದನು ಸಾದು ಜವಾಜಿ ಕಸ್ತುರಿಯ
ಮೆರೆವ ಗಂಡುಡಿಗೆಯನು ರಚಿಸಿದ
ಸೆರಗಿನೊಯ್ಯಾರದಲಿ ಸುರಗಿಯ
ತಿರುಹುತಿರುಳೊಬ್ಬನೆ ನಿಜಾಲಯದಿಂದ ಹೊರವಂಟ ೩೧

ಕಾಲ ಪಾಶದಲೆಳಸಿಕೊಂಬ ಕ
ರಾಳಮತಿ ಸುಡುಗಾಡಲೈತಂ
ದಾಲಯವ ಹೊಕ್ಕನು ಕೃತಾಂತನ ಬಾಯ ಹೊಗುವಂತೆ
ಮೇಲೆ ಮೇಲಪಶಕುನ ಶತಕವ
ನಾಲಿಸದೆ ಸುಮ್ಮಾನದಲಿ ಕೇ
ಡಾಳಿ ಬಂದನು ಮಂಚವಿದ್ದೆಡೆಗಾಗಿ ತಡವರಿಸಿ ೩೨

ಅಕ್ರಮವ ತಿರಿಭುವನ ವಿದ್ಯಾ
ಚಕ್ರವರ್ತಿಗಳೆಂದು ನೀವೀ
ವಿಕ್ರಮದ ಮಾತಿನಲಿ ಮೇಗರೆ ಮೆರೆವ ಭಟರುಗಳೆ
ಶಕ್ರನಳುಕುವ ಬಾಹುಬಲ ರಿಪು
ಚಕ್ರದೊಳಗಿನ್ನಾರಿಗುಂಟದು
ವಕ್ರ ಭಣಿತೆಗೆ ಸಲುವುದಶ್ವತ್ಥಾಮನೆನುತೆಚ್ಚ ೪೧

ಅರ್ಜುನನ ಶರವಿದ್ಯೆ ವಿವರಿಸೆ
ದುರ್ಜಯವಲಾ ಗರುವತನದಲಿ
ಗರ್ಜಿಸಿದೊಡೇನಹುದೆನುತ ಗುರುಸೂನು ಹರುಷದಲಿ
ನಿರ್ಜರರು ಮಝು ಭಾಪುರೆನಲಾ
ವರ್ಜಿಸಿದ ತಿರುವಿನಲಿ ಸಂಗರ
ನಿರ್ಜಿತೇಂದ್ರಿಯನೆಸಲು ಕಣೆಗಳು ಕವಿದವಂಬರಕೆ ೪೨

ಗುರುತನೂಜನಲಾ ವಿಭಾಡಿಸಿ
ಹುರುಳುಗೆಡಿಸಲು ಬಹುದೆ ನೋಡು
ತ್ತರ ಸುಯೋಧನ ಸೈನ್ಯಶರಧಿಯ ಗುಂಪಿನತಿಬಲರ
ಹರನ ಸರಿದೊರೆಯಸ್ತ್ರ ವಿದ್ಯಾ
ಧರರು ಮರ್ತ್ಯರೊಳಾರು ಲೇಸೆಂ
ದುರುಳಿಗಡಿದನು ಪಾರ್ಥನಶ್ವತ್ಥಾಮನಂಬುಗಳ ೪೩

ಗುರುಸುತನ ಶರಜಾಲವನು ಸಂ
ಹರಿಸಿ ಮಗುಳಸ್ತ್ರಾಘವನು ವಿ
ಸ್ತರಿಸಿದನು ಕಲಿಪಾರ್ಥನೀತನ ಸರಳುಗಳ ಸವರಿ
ತರಣಿ ಬಿಂಬವ ನಭವ ಹೊಳ್ದುದು
ಗುರುಸುತನ ಸಾಮರ್ಥ್ಯವಿಂತಿ
ಬ್ಬರಿಗೆ ಸಮಬಲವಾಗಿ ಸಮತಳಿಸಿತ್ತು ರಣಕೇಳಿ ೪೪

ತೀರವರ್ಜುನನಂಬು ರಣದಲಿ
ತೀರಿದವು ಗುರುಸುತನ ಶರ ಕೈ
ವಾರವೇ ಕೈಗುಂದಿ ನಿಂದನು ದ್ರೋಣನಂದನನು
ಮೇರು ಮೊಗದಿರುಹಿತ್ತಲಾ ರಣ
ಧೀರನಶ್ವತ್ಥಾಮ ಸೋತನು
ಸಾರೆನುತ ಕೃಪನುರುಬಿದನು ತರುಬಿದನು ಫಲುಗುಣನ ೪೫

ತಂದೆ ಮಕ್ಕಳು ಸೋತರಿನ್ನೇ
ನೆಂದು ಮುಯ್ಯಾನದಿರು ನಿಲು ನಿ
ಲ್ಲೆಂದು ಕೃಪನಡಹಾಯ್ದು ಪಾರ್ಥನ ರಥವ ತರುಬಿದನು
ಬಂದ ಪರಿ ಲೇಸೆನುತ ಫಲುಗುಣ
ನೊಂದು ಕವಲಂಬಿನಲಿ ಗುರುಗಳಿ
ಗೆಂದು ವಂದಿಸಬೇಕೆನುತ ಕೀಲಿಸಿದನಾ ರಥವ ೪೬

ತರಹರಿಸಿ ಶರವೈದರಲಿ ಸಂ
ಹರಿಸಿಕೊಳ್ಳೆಂದೆಚ್ಚೊಡೀತನ
ತುರಗವನು ತಾಗಿದವು ನೊಂದವು ರಥದ ವಾಜಿಗಳು
ಕೆರಳಿ ಫಲುಗುಣನರ್ಧ ಚಂದ್ರದ
ಸರಳಿನಲಿ ಸಾರಥಿಯ ತುರಗವ
ಕರದ ಬಿಲ್ಲನು ಕಡಿಯೆ ತೊಲಗಿದನಾ ಕೃಪಾಚಾರ್ಯ ೪೭

ಎಲೆಲೆ ಕರ್ಣ ದ್ರೋಣ ಗುರುಸುತ
ರಲಘು ಭುಜಬಲ ಕೃಪನು ಹೊಕ್ಕಿರಿ
ದಳುಕಿದರು ಮಝು ಭಾಪುರೆಂತುಟೊ ಪಾರ್ಥನಗ್ಗಳಿಕೆ
ಗೆಲುವನೊಬ್ಬನೆ ನಮ್ಮ ಬಲದಲಿ
ನಿಲುಕಿ ಹಿಂಗುವ ಸುಭಟರಿನಿಬರು
ಸುಲಭವೆಮಗೀ ಸೋಲವೆಂದುದು ಕೂಡೆ ಕುರುಸೇನೆ ೪೮

ಬಾಯ ಬಿಟ್ಟುದು ಸಕಲ ಕೌರವ
ರಾಯದಳ ವಡಮುಖದಲದಟರು
ಹಾಯಿದರು ತಡವೇನು ತೆರದೆರಸಾಯ್ತು ಕುರುಸೇನೆ
ಕಾಯಬೇಕೆಂದೆನುತ ವರ ಗಾಂ
ಗೇಯ ಚಾಪವ ಮಿಡಿದು ಬೆರಳಲಿ
ಸಾಯಕವ ತೂಗುತ್ತ ತಡೆದನು ಪಾರ್ಥನುರವಣೆಯ ೪೯

ಓಡಿದವರಲ್ಲಲ್ಲಿ ಧೈರ್ಯವ
ಮಾಡಿತಚ್ಚಾಳೊಗ್ಗಿನಲಿ ಹುರಿ
ಗೂಡಿತಬ್ಬರ ಮಗುಳೆ ನಿಬ್ಬರವಾಯ್ತು ನಿಮಿಷದಲಿ
ಕೂಡೆ ಗರಿಗಟ್ಟಿತು ಚತುರ್ಬಲ
ಜೋಡು ಮಾಡಿತು ಕವಿದುದೀತನ
ಕೂಡೆ ಘನ ಗಂಭೀರ ಭೇರಿಯ ಬಹಳ ರಭಸದಲಿ ೫೦

ತೊಲಗು ರಾಯ ಪಿತಾಮಹನ ಖತಿ
ಬಲುಹು ತೆತ್ತಿಗರಹರೆ ರುದ್ರನ
ನಳಿನನಾಭನ ಕರೆಸು ನೀ ಶಿಶು ಸಾರು ಸಾರೆನುತ
ಉಲಿವ ಬಳಿಯ ಮಹಾರಥರ ಕಳ
ಕಳದ ಕಹಳೆಯ ಪಾಠಕರ ಗಾ
ವಳಿಯ ಬಿರುದಿನ ಬಹಳತೆಯಲೈತಂದನಾ ಭೀಷ್ಮ ೫೧

ಪೂತುರೇ ಕಲಿಪಾರ್ಥ ಭುವನ
ಖ್ಯಾತನಾದೈ ಕಂದ ದ್ರೋಣನ
ಸೂತಸುತ ಕೃಪ ಗುರುತನೂಜರ ಗೆಲಿವೆ ಬಳಿಕೇನು
ಬೀತುದೇ ನಿಮ್ಮವಧಿ ಕುರುಕುಲ
ಜಾತವನು ಹರೆಗಡಿದು ನಿಮ್ಮಯ
ಭೂತಳವನಾಳುವಿರೆ ನೀವೆಂದೆಚ್ಚನಾ ಭೀಷ್ಮ ೫೨

ನಿಮ್ಮ ಕಾರುಣ್ಯಾವಲೋಕನ
ವೆಮ್ಮ ಸಿರಿ ಬೇರೆಮಗೆ ಕಾಳಗ
ದಮ್ಮುಗೆಯ ವಿಕ್ರಮದ ವಿವರಣ ವಿದ್ಯೆ ಫಲಿಸುವುದೆ
ಬಿಮ್ಮು ಬೀಸರವಹುದೆ ನಿಮ್ಮಯ
ಸೊಮ್ಮಿನವರಿಗೆ ಬೇರೆ ರಾಜ್ಯದ
ಹೆಮ್ಮೆ ತಾ ನಮಗೇಕೆನುತ ಕೈಯೊಡನೆ ನರನೆಚ್ಚ ೫೩

ಎಸಲು ಪಾರ್ಥನ ಬಾಣವನು ಖಂ
ಡಿಸುತ ಸೂತನನೆರಡರಲಿ ಕೀ
ಲಿಸಿದನೈದಂಬಿನಲಿ ಹನುಮನ ಹಣೆಯನೊಡೆಯೆಚ್ಚ
ನಿಶಿತ ಶರವೆಂಟರಲಿ ಕವಚವ
ಕುಸುರಿದರಿದನು ನರನ ವಕ್ಷದ
ಬೆಸುಗೆ ಬಿಡೆ ಮೂರಂಬಿನಲಿ ಮುರಿಯೆಚ್ಚು ಬೊಬ್ಬಿರಿದ ೫೪

ಅರಿಯ ಶರಪತಿಗುತ್ತರನ ತನು
ಬಿರಿಯೆ ಬಳವಳಿದನು ಕಪೀಶ್ವರ
ನೊರಲಿದನು ರಾವಣನ ಗಾಯವ ನೆನೆದನಡಿಗಡಿಗೆ
ಮರೆದು ಮಲಗಿದ ಸೂತನನು ನಾ
ಲ್ಕೆರಡು ಗಳಿಗೆಯು ಬೀಸಿ ಮೂಗಿನೊ
ಳೆರಲ ಕಂಡನು ಪಾರ್ಥನೆತ್ತಿದನಳುಕಿದುತ್ತರನ ೫೫

ಕವಳವಿದ ಕೋ ಬಾಣ ಶಸ್ತ್ರಾ
ನಿವಹ ಧಾರಾಸ್ತಂಭವಿನ್ನಾ
ಹವದೊಳಂಜದಿರೆನುತೆ ಕೊಡಲುತ್ತರನು ದುಗುಡದಲಿ
ಬವರದಾದಿಯನರಿಯದನ ಕೊಂ
ದವನು ನೀನೋ ಭೀಷ್ಮನೋಯೆನ
ಲವನ ನುಡಿಗರ್ಜುನನು ನಗುತಪರಾಧವುಂಟೆಂದ ೫೬

ಹದುಳಿಸಿನ್ನಂಜದಿರು ಬಾಣೌ
ಘದ ವಿದಾರಣವಿದು ವಿಚಾರಿಸ
ಲೆದೆ ಬಿರಿದು ತಾ ನೊಂದೆನಿದೆ ನೋಡೆನ್ನ ಗಾಯವನು
ಒದೆದು ಕೊಳುತ್ತೈದಾನೆ ಸಿಂಧದ
ತುದಿಯ ಹನುಮನು ವಜ್ರಮಯ ದೇ
ಹದಲಿ ನಟ್ಟವು ಕೋಲು ಮುನಿದೊಡೆ ರುದ್ರನೀ ಭೀಷ್ಮ ೫೭

ಎಂದು ಮೂರಂಬಿನಲಿ ಗಂಗಾ
ನಂದನನ ಮುಸುಕಿದನು ಸಾರಥಿ
ನೊಂದನಾ ಧ್ವಜ ದಂಡವುಡಿದುದು ರಥ ವಿಸಂಚಿಸಿತು
ಮುಂದುಗೆಟ್ಟನು ಭೀಷ್ಮನಹುದೋ
ತಂದೆಯೆನುತಾರಂಬಿನಲಿ ಖತಿ
ಯಿಂದ ಪಾರ್ಥನನೆಸಲು ಥಟ್ಟುಗಿದಂಬು ಹಾರಿದವು ೫೮

ಒರತುದರ್ಜುನನೊಡಲಿನಲಿ ದುರು
ದುರಿಸಿ ಸುರಿದುದು ಅರುಣಮಯ ಜಲ
ನೆರವಣಿಗೆಯಲಿ ನಿಂದು ತೊಟ್ಟನು ನರ ಮಹಾ ಶರವ
ತರಿದನೆಡೆಯಲಿ ಭೀಷ್ಮನುರೆ ಬೊ
ಬ್ಬಿರಿದು ಬಳಿಕಾಗ್ನೇಯ ಬಾಣದ
ಗರಿಯ ಮಂತ್ರಿಸಿ ಹೂಡಿದನು ಕುರುಸೇನೆ ಕಳವಳಿಸೆ ೫೯

ವರುಣ ಬಾಣದಲಸ್ತ್ರವನು ಸಂ
ಹರಿಸಿದನು ಕಲಿ ಭೀಷ್ಮನೊಬ್ಬೊ
ಬ್ಬರು ಪರಾಜಯ ರೋಷಪಾವಕ ವಿಸ್ಫುಲಿಂಗಿತರು
ಹರಿಸಿದರು ಕೌಬೇರ ಮಾರುತ
ನಿರುತಿ ಯಮ ಪುರುಹೂತ ಶಂಕರ
ಪರಿ ಪರಿಯ ಪ್ರತ್ಯಸ್ತ್ರವನು ಗಾಂಗೇಯ ಫಲುಗುಣರು ೬೦

ಮಲೆತು ನಿಲುವೊಡೆ ಭೀಷ್ಮನಲ್ಲದೆ
ಕೆಲರು ಪಾರ್ಥನ ದಿವ್ಯ ಬಾಣಾ
ವಳಿಯ ಗಾರಾಗಾರಿಗಿದಿರೇ ಭೀಷ್ಮನುರವಣೆಗೆ
ಕಲಿಧನಂಜಯನಲ್ಲದಿದಿರಲಿ
ನಿಲುವರುಂಟೇ ಭುಜಗ ಸುರ ನರ
ರೊಳಗೆ ಕೆಲರೆಂದಿಂದ್ರ ನುಡಿದನು ಬೆರಳನೊಲೆದೊಲೆದು ೬೧

ಪೂತು ಪಾಯಕು ಪಾರ್ಥ ಬಿಲು ವಿ
ದ್ಯಾತಿಶಯದಲಿ ಭೀಷ್ಮನೀ ಪುರು
ಹೂತನಮರಾರಿಗಳ ಮಿಕ್ಕರಲಾ ಮಹಾದೇವ
ಈತಗಳು ಜನಿಸಿದೊಡೆ ಹಿಂದೆ ಮ
ಹೀತಳವ ಕದ್ದೊಯ್ವನೇ ಖಳ
ಸೀತೆ ಬನದಲಿ ನವೆವಳೇಯೆನುತಿರ್ದುದಮರಗಣ ೬೨

ಹಿಂದೆ ಕರ್ಣನ ಕೈಮೆಯನು ಗುರು
ನಂದನನ ಬಿಲುಗಾರತನವನು
ಮಂದರೋಪಮ ಧೈರ್ಯವಾಚಾರಿಯನ ಪರಿಣತೆಯ
ಇಂದು ಕೃಪನಗ್ಗಳಿಕೆಯನು ನಲ
ವಿಂದ ಕಂಡೆನಿದಾರ ಪರಿಯ
ಲ್ಲೆಂದನುತ್ತರನರ್ಜುನಗೆ ಗಾಂಗೇಯನುರವಣೆಯು ೬೩

ಎನೆ ಕುಮಾರಕ ಕಾರ್ತವೀರ್ಯಾ
ರ್ಜುನನಾತನ ತೋರ ತೋಳಿನ
ಬನವ ಕಡಿದನು ವೀರಭಾರ್ಗವ ರಾಮನತಿ ಬಲನು
ಮುನಿದು ಮಲೆತೊಡೆ ಭೀಷ್ಮನಾತನ
ಮನಕೆ ಭೀತಿಯನಿತ್ತನೀತನೊ
ಳೆನಗೆ ಸರಿನೂಕುವುದೆ ಕಾಳಗವೆಂದನಾ ಪಾರ್ಥ ೬೪

ಮತ್ತೆ ಗಂಗಾಸೂನು ಪಾರ್ಥನ
ತೆತ್ತಿಸಿದನೈದಂಬಿನಲಿ ರಥ
ಕಿತ್ತು ಮಗುಚಲು ಮೂರು ವಜ್ರಾಸ್ತ್ರದಲಿ ಕೀಲಿಸಿದ
ಹುತ್ತಕುರಗನು ಬಗಿದು ಹೊಗುವವೊ
ಲುತ್ತರಿಸಿದುವು ಸರಳು ಮಿಗೆ ಧೃತಿ
ವೆತ್ತು ಫಲುಗುಣನವರನೆಚ್ಚನು ಹತ್ತು ಬಾಣದಲಿ ೬೫

ನರನ ಶರದಲಿ ಭೀಷ್ಮನೆದೆ ತನು
ಬಿರಿಯೆ ಮೈ ರ್ಘೂಂಪಿಸಿತು ಸಲೆ ತರ
ಹರಿಸಲರಿಯದೆ ಮಲಗಿ ನಿಂದನು ರಥದ ಕಂಬುಗೆಯ
ಅರರೆ ಸೋತನು ಭೀಷ್ಮನಿನ್ನೇ
ನುರಿದುದೋ ಕುರುಸೇನೆ ಯಾವೆಡೆ
ದೊರೆಯೆನುತ ಬಾಯ್ಬಿಡಲು ಕೌರವರಾಯ ಮಾರಾಂತ ೬೬

ಸೀಳು ನಾಯ್ಗಳ ಬಾಯ ಕೆಲಬಲ
ದಾಳ ಹಂಗಿನ ದೊರೆಯೆ ಸುಭಟರ
ಸೋಲವದು ರಾಯರಿಗೆ ಸೋಲವೆ ನೂಕು ನೂಕೆನುತ
ಕೋಲ ಹೊದೆಗಳ ಕೆದರಿ ಸಿಂಧದ
ಮೇಲೆ ಹಾವನು ಹಾಯ್ಕಿ ಸಾರಥಿ
ಮೇಳವಿಸಲವನಿಪ ರಥವನು ನೆರೆದುದತಿ ರಥರು ೬೭

ಕಲಕಿ ಕೆದರಿದ ಬಲಜಲಧಿಯೊ
ಬ್ಬುಳಿಗೆ ಬಂದುದು ತಳಿತ ಸತ್ತಿಗೆ
ಗಳ ವಿಡಾಯಿಯಲಳ್ಳಿರಿವ ನಿಸ್ಸಾಳ ಕೋಟಿಗಳ
ಉಲಿವ ಕಹಳೆಯ ಬೈಗುಳೆಡಗ್ಗೆ
ತಳದ ಬಾಯ್ಬಲಗ್ಗೆಯನೊಲವುತ
ಬಳಿಕ ಭಟ್ಟರು ಹೊಗಳಿದರು ಕೌರವನ ಬಿರುದುಗಳ ೬೮

ಒಗ್ಗು ಮುರಿಯದೆ ಸೇನೆ ಮೊಳಗುವ
ಲಗ್ಗೆವರೆಯಲಿ ಹೆಣನ ತುಳಿದೊಡೆ
ಮುಗ್ಗಿ ಕವಿದುದು ಕೌರವೇಂದ್ರನ ಮೊಗದ ಸನ್ನೆಯಲಿ
ಹುಗ್ಗಿಗರ ಬಲುಹುರಿಯ ನಿಗುಚುವೆ
ನಿಗ್ಗವೆನು ನಿಲ್ಲೆನುತ ಸೇನೆಯ
ನಗ್ಗಡಲೊಳಿಕ್ಕಿದನು ಫಲುಗುಣನಗಣಿತಾಸ್ತ್ರದಲಿ ೧೯

ವೀರರಿದಿರಹ ಹೊತ್ತು ರಣ ಮೈ
ಲಾರರಾದರು ಮರಳಿ ತೆಗೆವುತ
ಭೈರವನ ಸಾರೂಪ್ಯವಾದರು ಫೂತು ಮಝುರೆನುತ
ಕೌರವನು ಕರ್ಣಾದಿಗಳ ನುಡಿ
ಯೋರೆ ಹದರಿನೊಳವಗಡಿಸಿ ಹೊಂ
ದೇರ ದುವ್ವಾಳಿಸುತ ಮೂದಲಿಸಿದನು ಫಲುಗುಣನ ೨೦

ಬಾಲ ವೃದ್ಧರ ವಿಪ್ರರನು ನೀ
ಕಾಳಗದೊಳೋಡಿಸಿದೆನೆಂದೇ
ಮೇಲು ಪೋಗಿನಲಿರಲು ಬೇಡೆಲೆ ಪಾರ್ಥ ಮರುಳಾದೈ
ಆಳಿದಡವಿಯ ರಾಜ್ಯವಲ್ಲದೆ
ಮೇಲೆ ಧರಣಿಯ ಬಯಸಿದೊಡೆ ನಿಮ
ಗಾಳಲೀವೆನೆ ಹೋಗು ಹೋಗಾರಣ್ಯಕೆನುತೆಚ್ಚ ೨೧

ಗಾರುಗೆಡೆಯದಿರೆಲವೊ ಸತ್ಯವ
ಮೀರಲಮ್ಮದೆ ಲೋಕ ನಿನ್ನನು
ದೂರ ಬೇಕೆಂದಡವಿಯೊಕ್ಕೆವು ಹೊಲ್ಲೆಯೇನಿದಕೆ
ಜಾರಿ ಹೋಯಿತ್ತವಧಿಯಿನ್ನೀ
ಮೀರಿ ಗಳಹುವ ನಿನ್ನ ಗಂಟಲ
ನೂರಿ ರಾಜ್ಯವ ತೆಗೆವೆ ಸೈರಿಸೆನುತ್ತ ನರನೆಚ್ಚ ೨೨

ಅರಿಯೆ ನೀನೆಲೆ ಮರುಳೆ ಗರುಡನ
ತರವಳಿಕೆಯಲಿ ಹಾವು ಕನ್ನವ
ಕೊರೆದು ಬದುಕುವುದೇ ವೃಥಾ ಕಕ್ಕುಲಿತೆ ನಿನಗೇಕೆ
ತರಿದು ತಿರಿಕಲ್ಲಾಡುವೆನು ನಿ
ಮ್ಮೊರುವರೈವರ ಶಿರವನರ್ಜುನ
ಬರಿದೆ ಗಳಹದಿರೆನುತ ಕೌರವ ರಾಯ ತೆಗೆದೆಚ್ಚ ೨೩

ಗರುಡ ನೀನಹೆ ನಿನ್ನ ಪಕ್ಕವ
ಮುರಿದು ಹೆಡತಲೆಗಡರಿ ಬೆನ್ನಲು
ಮುರಿಯೆ ದುವ್ವಾಳಿಸುವ ಮುರರಿಪುವೆನ್ನ ನೀನರಿಯ
ತರಹರಿಸಿ ಕಲಿಯಾಗುಯೆಂದ
ಬ್ಬರಿಸಿ ಕೌರವನೆದೆಯನುಗುಳಿದ
ನೆರಡು ಬಾಣದೊಳರುಣ ಜಲದೊರತೆಗಳ ಕಾಣಿಸಿದ ೨೪

ನವ ನಿಕಾರಿಯ ವಲ್ಲಿ ಹೀರೆಗ
ಳವಯವದ ರಕುತದಲಿ ತೋದವು
ಜವವಳಿದು ಸಾರಥಿಗೆ ಸೂಚಿಸೆ ರಥವ ಮರಳಿಚಿದ
ಕವಿದನರ್ಜುನನೋಡದಿರು ಕೌ
ರವ ಪಲಾಯನವಕಟಕಟ ಪಾ
ರ್ಥಿವರ ಪಂಥವೆ ಮರಳಿ ನಿಂದಿರು ಕೊಲುವುದಿಲ್ಲೆಂದ ೨೫

ಮಾತು ಹಳಸದ ಮುನ್ನ ಕೈಗಳು
ಸೋತು ತೆಗೆದವೆ ಹೊಳ್ಳುಪಾತಿದು
ನೀತಿಯೇ ನರಪತಿಗಳಿಗೆ ಬಹು ಭಂಗವನ್ವಯಕೆ
ಭೀತನಲ್ಲದೆ ಕಾದಿ ಮಡಿದನ
ಮಾತುಗಳಲಾ ಪುಣ್ಯಕಥನವು
ಭೂತಳಾಧಿಪ ಮರಳಿ ನೋಡೆನ್ನಾಣೆ ನೀನೆಂದ ೨೬

ಹುರುಳುಗೆಟ್ಟುದು ಗರುವತನವೆಂ
ದರಸ ನಾಚಿದನಧಿಕ ಶೌರ್ಯೋ
ತ್ಕರುಷೆಯಲಿ ಕಲಿಯಾಗಿ ನಿಂದನು ಮತ್ತೆ ಕಾಳಗಕೆ
ದೊರೆಯ ದುಗುಡವ ಕಂಡು ತಮ ತಮ
ಗುರವಣಿಸಿದರು ಸಕಲ ಸುಭಟರು
ಹೊರಳಿಗಟ್ಟಿತು ಸೇನೆ ನಿಚ್ಚಟರಳಿವ ನಿಶ್ಚಯಿಸಿ ೨೭

ನೊಂದನವನಿಪ ನಿಂದು ಪಾರ್ಥನ
ಕೊಂದು ತೋರುವೆನೆಂದು ರವಿಸುತ
ನೊಂದು ಕಡೆಯಲಿ ಮೊಳಗಿದನು ಬಲು ಬಿಲ್ಲ ಜೇವಡೆದು
ಒಂದು ಕಡೆಯಲಿ ಮುಸಗಿದರು ಗುರು
ನಂದನನು ವೃಷಸೇನ ಸೈಂಧವ
ರೊಂದು ಕಡೆಯಲಿ ಭೀಷ್ಮ ಕೃಪ ದುಶ್ಶಾಸನಾದಿಗಳು ೨೮

ಗುರು ಚಪಾಳಿಸಿ ಹೊಕ್ಕನೊಮ್ಮಿಂ
ಗುರವಣಿಸಿದನು ಬಾಹ್ಲಿಕನು ಭಾ
ಸುರ ಕಳಿಂಗ ಸುಕೇತು ಭೂರಿಶ್ರವನು ದುಸ್ಸಹನು
ನರನ ಮುತ್ತಿದರೊಂದು ಕಡೆಯಲಿ
ತೆರಳಿಕೆಯ ತೇರಿನಲಿ ಬಲ ಮೋ
ಹರಿಸಿ ಕವಿದುದು ಸುತ್ತ ಮುತ್ತಿತು ಕಲಿ ಧನಂಜಯನ ೨೯

ಅಂಗವಿಸಿತರಿ ಸೇನೆ ಲೋಕವ
ನುಂಗಿ ಕುಣಿಯಲು ಬಗೆವ ಭರ್ಗನ
ರಂಗ ಭೂಮಿಯ ತೊಳೆವ ಜಲಧಿಯ ಜೋಕೆಯಂದದಲಿ
ಭಂಗಿತರ ಮರುವಲಗೆಯಲಿ ಸ
ರ್ವಾಂಗಬಲ ಜೋಡಿಸಿತು ನಮ್ಮೊಳಿ
ನಿಂಗೆ ಹದನೇನೆನುತ ಮತ್ಸ್ಯನ ಸೂನು ಚಿಂತಿಸಿದ ೩೦

ನೆರೆದ ತಿಮಿರದ ಥಟ್ಟು ಸೂರ್ಯನ
ತೆರಳಿಚುವವೊಲ್ ಮೇಘ ಘಟೆಗಳು
ಮುರಿದು ಮೋಹರವೌಕಿ ಪವನನ ಸೆರಗ ಹಿಡಿವಂತೆ
ತೆರಳೊದತ್ತಂದಬರಿಸಿ ಕುರುಬಲ
ವೊರಲಿ ಹೆಣನನು ತುಳಿದು ಮೇಲ
ಬ್ಬರಿಸಿ ಬರೆ ಸಮ್ಮೋಹನಾಸ್ತ್ರವ ಹೂಡಿದನು ಪಾರ್ಥ ೩೧

ಎಸಲು ಸಮ್ಮೋಹನದ ಶರ ಪಸ
ರಿಸಿತು ಬಲದಲಿ ಬಹಳ ನಿದ್ರಾ
ವ್ಯಸನ ವಿಹ್ವಲಿತಾಂತರಂಗರು ಮೈಯ್ಯನೊಲೆದೊಲೆದು
ಉಸುರ ಸಂಚದ ನಾಡಿಯುವಗಾ
ಹಿಸಲು ಕೊರೆದರು ಗುರುಕಿಡುತ ತಲೆ
ಮುಸುಕಿನಲಿ ನೆರೆ ತೆಕ್ಕೆಗೆಡೆದುದು ನಿಖಿಳ ಕುರುಸೇನೆ ೩೨

ತನುವನೊಲೆದವು ದಡದಡಿಸಿ ಕಿವಿ
ಗೊನೆಯ ಜೋಲಿಸಲಲ್ಲಿ ಮಡಿಗಾ
ಲಿನಲಿ ಕುಸಿದವು ಕೊರಳ ಮರಳಿಚಿ ಕೈಯ್ಯನೊಳಗಿಟ್ಟು
ತೊನೆದು ಕೆಡೆದವು ಜೋಧರಾಗಳು
ಕನಲಿ ಕೆಡೆದರು ಗುರು ನದೀಜರ
ಘನ ಬಲಂಗಳೊಳಯುತ ಕೋಟಿ ಗಜಂಗಳುರುಳಿದವು ೮೩

ದೃಗುಯುಗಳವರೆದೆರೆಯೆ ರೋಮಾ
ಳಿಗಳು ತೆಕ್ಕೆಯ ಸಾರೆ ಕೊರಳರೆ
ಮುಗುಳೆ ಹಿಂಗಾಲ್ಹೊಂಡು ಖುರವನು ತೂಗಿಯೊಲೆದೊಲೆದು
ಬಿಗುಹು ಸಹಿತವೆ ಹೊನ್ನ ಮರಗೋ
ಡುಗಳ ಮೇಲಡಗೆಡೆದು ನಿದ್ರಾ
ಮುಗುದರಾದರು ರಾವುತರು ತೂಕಡಿಸಿದವು ತುರಗ ೮೪

ಬಿಲು ಸೆಳೆಯೆ ಕೈದುಗಳು ಕೈಯಿಂ
ಚಲಿಸಲೊಬ್ಬರನೊಬ್ಬರತ್ತಲು
ಮಲಗಿ ಬೆಂಬತ್ತಳಿಕೆ ಬದಿಯೊಳಗಡಸಿ ತೋಳುಗಳ
ತಲೆಯೊಳಾನಿಸಿ ಗುರುಗುರಿಸಿ ರಥ
ದೊಳಗೆ ಸಾರಥಿವೆರಸಿ ನಿದ್ರಾ
ಕುಳರು ಜೊಮ್ಮಿನ ಮೇಲೆ ಮೈಮರೆದಿರ್ದರತಿರಥರು ೮೫

ಸರಳ ಸೊಕ್ಕವಗಡಿಸಿ ಸಲೆ ಮೈ
ಮರೆದನಿತ್ತಲು ದ್ರೋಣ ರಥದಲಿ
ಪರಮ ನಿದ್ರಾಗುಪ್ತನಾದನು ತನ್ನ ಮಗ ಸಹಿತ
ಕರದ ಬಿಲು ಶರ ಸರಿಯೆ ಕಂಗಳು
ಮುರಿಯೆ ಕರ್ಣನು ಕೆನ್ನೆಗೆದೆಯೊಳು
ದುರುಳ ದುರ್ಯೋಧನ ಸಹಿತ ಮೈಮರೆದುದರಿಸೇನೆ ೮೬

ಸೇನೆ ಮೈಮರೆದೊರಗಿದದಟ ನಿ
ಧಾನವೊಗೆದರುಹಿತ್ತು ನಿದ್ರಾ
ಮಾನ ವಿಭ್ರಮಿಸಿತ್ತು ಬಲು ಸಂಸಾರದಂದದಲಿ
ಏನ ಹೇಳುವೆನದನು ಕದನದ
ಕಾನನದೊಳತಿರಥರು ವಿಜಯ ವಿ
ಹೀನ ಬಲ ಸಮ್ಮೋಹನಾಸ್ತ್ರದ ಬಾಧೆಗೊಳಗಾಯ್ತು ೮೭

ಕನಸು ಮೇಣೆಚ್ಚರು ಸುಷುಪ್ತಿಗ
ಳೆನಿಪವಸ್ಥಾ ತ್ರಿತಯದಲಿ ಜೀ
ವನು ವಿಸಂಚಿಸಿ ಬೀಳ್ವನಲ್ಲದೆ ಶರಕೆ ಸಿಲುಕುವನೆ

ಇನಿತು ಬಲ ತೂಕಡಿಸಿ ರ್ಘೊಂಪಿಸಿ
ತನಿಗೆಡೆಯೆ ಭಾಗೀರಥೀ ನಂ
ದನನು ನಿರ್ಮಲನಾಗಿ ತೊಳ ತೊಳಗಿದನು ರಥದೊಳಗೆ ೮೮

ಎಣಿಸುವರೆ ಏಕಾದಶಾಕ್ಷೋ
ಹಿಣಿಯ ಬಲವನು ಪಾರ್ಥನೊಬ್ಬನೆ
ರಣದೊಳಡಗೆಡಹಿದನು ಮೋಹನ ಮಂತ್ರಬಾಣದಲಿ
ಕುಣಿದು ಕುಸುಮದ ಸರಿವುಗಳ ಸಂ
ದಣಿಯನಮರರು ಸೂಸಿದರು ಫಲು
ಗುಣನು ರಥವನು ನೂಕಿದನು ನಿಜ ಮಹಿಪರಿದ್ದೆಡೆಗೆ ೮೯

ಇಳಿದು ದ್ರೋಣನ ಚರಣ ಕಮಲಂ
ಗಳಿಗೆ ತನ್ನಯ ನೊಸಲ ಚಾಚಿದ
ನಳವಿಯಲಿ ಭೀಷ್ಮಂಗೆ ಮೈಯಿಕ್ಕಿದನು ರಥದೊಳಗೆ
ಸುಲಿದು ಕರ್ಣನ ಮಕುಟ ಪಟ್ಟೆಯ
ಸೆಳೆದು ದುರ್ಯೋಧನನ ವಸ್ತ್ರವ
ಸುಲಲಿತಾಭರಣವನು ನೀ ತೆಗೆಯೆಂದನುತ್ತರಗೆ ೯೦

ಧರಣಿಪಾಲರ ಮಕುಟವನು ಕ
ತ್ತರಿಸಿ ದುಶ್ಶಾಸನನ ಘನ ಶಿರ
ವರದ ರತ್ನವನುಡಿದು ಭೂರಿಶ್ರವ ಜಯದ್ರಥರ
ಹೊರಳಿಚಿದನು ವಿಶೋಕ ಕುವರರ
ಹುರುಳುಗೆಡಿಸಿದನಖಿಳ ರಾಯರ
ಶಿರಕೆ ಭಂಗವ ಹೊರಿಸಿ ಫಲುಗುಣನಡರಿದನು ರಥವ ೯೧

ಫಲುಗುಣನ ನೇಮದಲಿ ರಥದಿಂ
ದಿಳಿದನುತ್ತರನವನಿಪನ ಕೋ
ಮಲ ಸುವಸ್ತ್ರಾಭರಣ ಕರ್ಣನ ಕೃಪನ ಗುರುಸುತನ
ಸುಲಲಿತಾಂಬರ ರತ್ನಭೂಷಣ
ಗಳನು ಕೊಂಡಡರಿದನು ರಥವನು
ಬಿಲುದುಡುಕಿ ಗಾಂಗೇಯನಡ ಹಾಯ್ದನು ಧನಂಜಯನ ೯೨

ಎರಡು ಶರದಲಿ ಚಾಪವನು ಕ
ತ್ತರಿಸಿ ಭೀಷ್ಮನ ನಿಲಿಸಿ ಕೌರವ
ಧರಣಿಪಾಲನ ಮಕುಟವನು ಮೂರಂಬಿನಲಿ ಕಡಿದು
ತಿರುಗಿದನು ಕಲಿಪಾರ್ಥ ನಗುತು
ತ್ತರ ಸಹಿತ ಬನ್ನಿಯಲಿ ಕೈದುವ
ನಿರಿಸಿ ಮುನ್ನಿನ ಹುಲುರಥದಿ ನಿಜನಗರಿಗೈತಂದ ೯೩

## ಒಂಬತ್ತನೆಯ ಸಂಧಿ

ಸೂ. ರಾಯ ಕೌರವ ಸೈನ್ಯ ಕದಳೀ
ವಾಯುಪುತ್ರರ ಸಹಿತ ನಿಜಪುರ
ರಾಯ ನಂದನ ಬಂದು ಹೊಕ್ಕನು ಮತ್ಸ್ಯಪುರವರವ

ಕೇಳು ಜನಮೇಜಯ ಧರಿತ್ರೀ
ಪಾಲ ಭಂಗದಲಖಿಳ ಕೌರವ
ಜಾಲ ತಿರುಗಿತು ದುಗುಡದಲಿ ಗಜಪುರಕೆ ನಡೆತಂದು
ಮೇಲು ಮುಸುಕಿನ ಮೊಗದ ವಾದ್ಯದ
ಮೇಳ ಮೋನದಲಖಿಳ ನೃಪರು ನಿ
ಜಾಲಯಂಗಳ ಬಂದು ಹೊಕ್ಕರು ಹೊತ್ತ ದುಗುಡದಲಿ ೧

ಬಳಿಕ ಫಲುಗುಣನತ್ತಲಾ ಮರ
ದೊಳಗೆ ಕೈದುವನಿರಿಸಿ ಮುನ್ನಿನ
ಹುಲು ರಥವ ಮೇಳೈಸಿ ಸಾರಥಿತನವನಳವಡಿಸೆ
ಇಳಿದು ಪಾರ್ಥನ ಮೈದಡವಿ ಕಪಿ
ಕುಲಲಲಾಮನು ವನಕೆ ಹಾಯ್ದನು
ಹೊಳಲ ಹೊರೆಯಲಿ ನಿಂದು ನಗುತುತ್ತರನೊಳಿಂತೆಂದ ೨

ಕರೆದು ದೂತರಿಗರುಹು ನೀನೇ
ಧುರವ ಜಯಿಸಿದೆನೆನ್ನು ನಾವಿ
ದ್ದಿರವನರುಹದಿರಿಂದು ಪಸರಿಸು ನಿನ್ನ ವಿಕ್ರಮವ
ಅರಸ ನಿನ್ನನೆ ಮನ್ನಿಸಲಿ ಪುರ
ಪರಿಜನಂಗಳು ನಿನ್ನ ವಿಜಯದ
ಹರುಷದಲಿ ಹೆಚ್ಚಿರಲಿ ನೇಮಿಸಿದಂತೆ ಮಾಡೆಂದ ೩

ಎನಲು ನೀನೇ ಬಲ್ಲೆ ಕರ ಲೇ
ಸೆನುತ ದೂತರ ಕರೆದು ಮತ್ಸ್ಯನ
ತನಯು ಕೌರವ ಬಲವ ಜಯಿಸಿದನೆಂದು ಪೇಳುವುದು
ಜನಕನಲ್ಲಿಗೆ ಪೋಗಿಯೆಂದಾ
ತನು ನಿಯಾಮಿಸುತಿರ್ದನತ್ತಲು
ಜನಪ ಕುಂತೀಸುತನು ಸಹಿತೈತಂದನರಮನೆಗೆ ೪

ಅರಮನೆಯ ಹೊಕ್ಕವನಿಪತಿಯು
ತ್ತರನ ಕಾಣದೆ ಕಂದನೆತ್ತಲು
ಸರಿದನೆನೆ ರಾಣಿಯರು ಬಿನ್ನವಿಸಿದರು ಭೂಪತಿಗೆ
ಕುರು ಬಲವನಂಗೈಸೆ ಮಿಗೆಯು
ತ್ತರೆಯ ಗುರು ಸಾರಥಿತನವನನು
ಕರಿಸಿದನು ಕೆಲಬಲನ ಹಾರದೆ ಕದನಕೈದಿದನು ೫

ಎಂದರೊಡಲೊಳು ಕೂರಲಗು ಮುರಿ
ದಂದದಲಿ ಕಳವಳಿಸಿದನು ಮನ
ನೊಂದನಕಟ ಕುಮಾರನೆತ್ತಲು ರಾಯ ದಳವೆತ್ತ
ಬಂದವರು ಭೀಷ್ಮಾದಿಗಳು ತಾ
ನಿಂದು ತರಹರಿಸುವೊಡೆ ತಾನೇ
ನಿಂದುಥರನೇ ಮರುಳಲಾ ಮಗನೆನುತ ಚಿಂತಿಸಿದ ೬

ಮಗಗೆ ಪಡಿಬಲವಾಗಿ ಬಲು ಮಂ
ತ್ರಿಗಳನವನಿಪ ಬೀಳುಗೊಟ್ಟನು
ದುಗುಡದಿಂದಿರೆ ಹೊಳಲ ಕೈಸೂರೆಗಳ ಕಳಕಳದ
ಮೊಗದ ಹರುಷದಲಖಿಳ ದೂತಾ
ಳಿಗಳು ಬಂದುದು ಗುಡಿಯ ಕಟ್ಟಿಸು
ನಗರಿಯಲಿ ಕಳುಹಿದಿರುಗೊಳಿಸು ಕುಮಾರಕನನೆನುತ ೭

ರಾಯ ಕುವರ ಪಿತಾಮಹನು ರಿಪು
ರಾಯ ಕುವರ ಕುಠಾರ ಕೌರವ
ರಾಯ ಘಟ್ಟು ವಿಭಾಡ ಕುರುಕುಲ ಗಜಕೆ ಪಂಚಾಸ್ಯ
ಜೀಯ ಬಿನ್ನಹ ಕರ್ಣ ಗುರು ಗಾಂ
ಗೇಯ ಮೊದಲಾದಖಿಳ ಕೌರವ
ರಾಯ ದಳವನು ಗೆಲಿದು ಉತ್ತರ ತುರುವ ಮರಳಿಚಿದ ೮

ಕೇಳಿ ಮಿಗೆ ಹಿಗ್ಗಿದನು ತನು ಪುಳ
ಕಾಳಿ ತಳಿತುದು ಬಹಳ ಹರುಷದ
ದಾಳಿಯಲಿ ಮನ ಮುಂದುಗೆಟ್ಟುದು ಕಂಗಳರಳಿದವು
ಲಾಲಿಸುತ ಸರ್ವಾಂಗ ಹರುಷದೊ
ಳಾಳೆ ಜನಪ ಪಸಾಯಿತವ ದೂ
ತಾಳಿಗಿತ್ತನು ಸುಲಿದರವದಿರು ರಾಯನೋಲಗವ ೯

ಇದಿರುಗೊಳ ಹೇಳೆನಲು ಸರ್ವಾಂ
ಗದಲಿ ಮಣಿ ಮೌಕ್ತಿಕದ ಸಿಂಗಾ
ರದ ಸುರೇಖೆಯ ಲಲಿತ ಚಿತ್ರಾವಳಿಯ ಮುಸುಕುಗಳ
ಸುದತಿಯರು ಹೊರವಂಟರೊಗ್ಗಿನ
ಮೃದು ಮೃದಂಗದ ಕಹಳೆಗಳು ಸಂ
ಪದದ ಸೊಂಪಿನಲೆಸೆಯೆ ರಾಜಾಂಗನೆಯುರನುವಾಯ್ತು ೧೦

ಕವಿದು ನೂಕುವ ಹರುಷವನು ಸಂ
ತವಿಸಲರಿಯೆನು ಕಂಕ ನಿನ್ನೊಡ
ನೆವಗೆ ವಿಮಳ ದ್ಯೂತಕೇಳಿಗೆ ಚಿತ್ತವಾಯ್ತೆನಲು
ಅವನಿಪತಿ ಕೇಳ್ ಜೂಜಿನಲಿ ಪಾಂ
ಡವರು ಸಿಲುಕಿದರವರ ವಿಧಿಯನು
ಭುವನದಲಿ ಬಲ್ಲವರದಾರೆಂದನು ವಿರಾಟಂಗೆ ೧೧

ಅವರು ರಾಜ್ಯವನೊಡ್ಡಿ ಸೋತವೊ
ಲೆವಗೆ ಪಣ ಬೇರಿಲ್ಲ ಹರ್ಷೋ
ತ್ಸವ ಕುಮಾರಾಭ್ಯುದಯ ವಿಜಯಶ್ರವಣ ಸುಖ ಮಿಗಲು
ಎವಗೆ ಮನವಾಯ್ತೊಡ್ಡು ಸಾರಿಯ
ನಿವಹವನು ಹೂಡೆನಲು ಹೂಡಿದ
ನವನಿಪತಿ ನಸುನಗುತ ಹಾಸಂಗಿಯನು ಹಾಯ್ಕಿದನು ೧೨

ಕೇಳಿ ಸಮತಳಿಸಿತ್ತು ಮತ್ಸ್ಯ ನೃ
ಪಾಲನೆಂದನು ಕಂಕ ನೋಡೈ
ಕಾಳಗವನುತ್ತರನು ಗೆಲಿದನು ರಾಯ ಘಟ್ಟಿನಲಿ
ಶೂಲಪಾಣಿಗೆ ಸೆಡೆಯದಹಿತ ಭ
ಟಾಳಿ ಸೋತುದು ದಿವಿಜ ನರರೊಳು
ಹೋಲುವವರುಂಟೇ ಕುಮಾರನನೇನ ಹೇಳೆಂಪ ೧೩

ಸೋತುದುಂಟರಿ ಸೇನೆ ಸುರಭಿ
ವ್ರಾತ ಮರಳಿದುದುಂಟು ಗೆಲವಿದು
ಕೌತುಕವಲೇ ಬಗೆಯಲದ್ಭುತವೆಮ್ಮ ಚಿತ್ತದಲಿ
ಮಾತು ಹೋಲುವೆಯಹುದು ಜಗ ವಿ
ಖ್ಯಾತ ಸಾರಥಿಯಿರೆ ಕುಮಾರಗೆ
ಭೀತಿ ಬಳಿಕೆಲ್ಲಿಯದು ತಪ್ಪೇನೆಂದನಾ ಕಂಕ ೧೪

ಎಲೆ ಮರುಳೆ ಸನ್ಯಾಸಿ ಮತ್ಸರ
ದೊಳಗೆ ಮುಳುಗಿದ ಚಿತ್ತ ನಿನ್ನದು
ಗೆಲವಿನಲಿ ಸಂದೇಹವೇ ಹೇಳಾವುದದ್ಭುತವು
ಅಳುಕುವನೆ ಸುಕುಮಾರ ಸಾರಥಿ
ಬಲುಹನುಳ್ಳವನೇ ನಪುಂಸಕ
ನಲಿ ನಿರಂತರ ಪಕ್ಷವೆಂದು ವಿರಾಟ ಖತಿಗೊಂಡ ೧೫

ನಾರಿಯರ ಮೈಗುರುಹು ಪುರುಷರ
ಚಾರು ಚಿಹ್ನವ ಕೂಡಿಕೊಂಡಿಹ
ಸಾರಥಿಯ ದೆಸೆಯಿಂದ ಕುವರನು ಗೆಲಿದನೆಂಬುದನು
ಸೈರಿಸಿದೆ ನಾನಿನ್ನವರೆ ಮ
ತ್ತಾರೊಡನೆ ಮಾತಾಡದಿರು ನಿ
ಸ್ಸಾರ ಹೃದಯನು ಕಂಕ ನೀ ದುಷ್ಟಾತ್ಮ ಹೋಗೆಂದ ೧೬

ಖತಿಯು ಹಿಡಿಯದಿರರಸ ದಿಟ ನೀ
ನತಿಶಯವ ಬಯಸುವರೆ ಜನ ಸ
ಮ್ಮತವು ಸಾರಥಿ ಗೆಲಿದನೆಂದೇ ಹೊಯಿಸು ಡಂಗುರವ
ಸುತನು ಸಾರಥಿಯೆಂದು ಸಾರಿಸು
ವಿತಥವಲ್ಲಿದು ಪಕ್ಷಪಾತ
ಸ್ಥಿತಿಯನಾಡೆವು ಕವಲು ನಾಲಗೆಯಿಲ್ಲ ತನಗೆಂದ ೧೭

ನಿನ್ನ ಮೋಹದ ಕಂಗಳಿಗೆ ಮಗ
ನುನ್ನತೋನ್ನತ ಸತ್ವನೆಂದೇ
ಮುನ್ನ ತೋರಿತು ಹೊಲ್ಲೆಹವೆ ಸಂಸಾರಕ ಭ್ರಮೆಗೆ
ಇನ್ನು ಗೆಲಿದವನಾ ಬೃಹನ್ನಳೆ
ನಿನ್ನ ಮಗಗಳುಕುವರೆ ಭೀಷ್ಮನು
ಕರ್ಣ ಕೃಪ ಗುರು ಗುರುತನೂಭವರೆಂದನಾ ಕಂಕ ೧೮

ಎನಲು ಖತಿ ಬಿಗುಹೇರಿ ಹಲು ಹಲು
ದಿನುತೆ ಕಂಗಳಲುರಿಯನುಗುಳುತ
ಕನಲಿ ಬಿಗಿದೌಡೊತ್ತಿ ಕನಕದ ಸಾರಿಯನು ನೆಗಹಿ
ಜನಪತಿಯು ಹಣೆಯೊಡೆಯಲಿಡೆ ಜಾ
ಜಿನ ಗಿರಿಯ ನಿರ್ಜರದವೊಲು ಭೋಂ
ಕೆನಲು ರುಧಿರದ ಧಾರೆ ಸಿಡಿದುದು ಶಿರದ ಸೆಲೆಯೊಡೆದು ೧೯

ಸೈರಿಸುತ ಕೈಯೊಡ್ಡಿ ರಕುತದ
ಧಾರೆಯನು ಕೈತುಂಬ ಹಿಡಿದತಿ
ಧೀರನೋರೆಯ ನೋಟದಲಿ ಸೈರಂಧ್ರಿಯನು ಕರೆಯೆ
ನಾರಿ ಹರಿತಂದಕಟ ನೊಂದನು
ಕಾರುಣಿಕ ಸನ್ಯಾಸಿಯೆನುತ ವಿ
ಕಾರಿಸದೆ ಸೆರಗಿನಲಿ ತೋದಳು ಬಹಳ ಶೋಣಿತವ ೨೦

ಮಡದಿ ಕರಪಲ್ಲವದಲೊರೆಸಿದ
ಳಡಿಗಡಿಗೆ ಹಣೆಯನು ಕಪೋಲವ
ತೊಡೆದು ತೊಳೆದಳು ಮುಖವನದನವ ಕಂಡು ಬೆರಗಾಗಿ
ಹಿಡಿದೆ ರಕುತವನೇಕೆ ಕಾಮಿನಿ
ನುಡಿ ನಿಧಾನವನಿವರು ನೊಂದರೆ
ಮಿಡುಕಲೇತಕೆ ನೀನೆನುತ ಮರುಪದಿಯ ಬೆಸಗೊಂಡ ೨೧

ಉರಿದು ಹೋಹುದು ನಿನ್ನ ರಾಜ್ಯದ
ಸಿರಿಯ ಬದುಕಿದೆಯೊಂದು ಕಣೆಯಕೆ
ಪರಮ ಯತಿ ಕಾಯಿದನು ಕೈಯಲಿ ತುಂಬಿ ಶೋಣಿತವ
ಅರಸ ಕೇಳೀ ಮುನಿಯ ನೆತ್ತರು
ಧರೆಯೊಳೊಕ್ಕೊಡೆಯಾ ಪ್ರದೇಶವ
ನೊರಸಿ ಕಳೆವುದು ದಿಟ ಬೃಹನ್ನಳೆಗೇರಿಸಿದ ಬಿರುದು ೨೨

ಈಕೆ ಯಾರಿವರಾರು ನಾಟ್ಯ
ವ್ಯಾಕರಣ ಪಂಡಿತ ಬೃಹನ್ನಳೆ
ಯಿಕೆಗೇನಹನರಿಯ ಬಾರದು ಕಾಲು ಕೀಲುಗಳ
ಏಕೆ ನನಗದರರಿತವೆಂದವಿ
ವೇಕಿಯಿರೆ ಬಳಿಕಿತ್ತ ಪುರದಲಿ
ನೂಕು ನೂಕಾಯಿತ್ತು ನೋಡುವ ನೆರವಿಯುತ್ತರನ ೨೩

ಇದಿರು ಬಂದರು ಮಂತ್ರಿಗಳು ವರ
ಸುದತಿಯರು ಸೂಸಿದರು ಸೇಸೆಯ
ನುದಿತ ಮಂಗಳ ಘೋಷ ವಾದ್ಯ ವಿತಾನ ರಭಸದಲಿ
ವದನವಿದೆ ಕಳೆಗುಂದಿ ಜಯದ
ಭ್ಯುದಯ ತಾನೆಂತೆನುತ ವರ ಕೋ
ವಿದರು ತಮ್ಮೊಳಗಾಡುತಿರ್ದರು ಕೂಡೆ ಗುಜುಂಗುಜಿಸಿ ೨೪

ಎಂದಿನವನುತ್ತರನು ಗಂಗಾ
ನಂದನನೀ ಹೂಹೆ ಗೆಲಿದನು
ಸಂದ ಸುಭಟ ದ್ರೋಣ ಕರ್ಣಾದಿಗಳನೋಡಿಸಿದ
ಎಂದು ಕೆಲಬರು ಕೆಲಬರಿವ ಗೆಲಿ
ದಂದವಾಗಿರದೀ ಬೃಹನ್ನಳೆ
ಯಿಂದ ಸಂಭಾವಿಸುವುದೆಂದುದು ಮಂದಿ ತಮತಮಗೆ ೨೫

ಲೀಲೆ ಮಿಗಲುತ್ತರನು ಪುರಜನ
ಜಾಲ ಜೀಯೆನಲಿದಿರು ಬಂದ ನಿ
ವಾಳಿಗಳ ನೂಕಿದನು ಕೈವಾರಿಗಳ ಕೋಪಿಸುತ
ಆಲಿಯುವನಿಯ ಬರೆಯೆ ಮುಸುಕಿನ
ಮೇಲು ದುಗುಡದ ಭಾರದಲಿ ರಾ
ಜಾಲಯಕೆ ಬರಲಿದಿರು ಬಂದಪ್ಪಿದನು ನಂದನನ ೨೬

ಬಾ ಮಗನೆ ವಸುಕುಲದ ನೃಪ ಚಿಂ
ತಾಮಣಿಯೆ ಕುರುರಾಯ ಮೋಹರ
ಧೂಮಕೇತುವೆ ಕಂದ ಬಾಯೆಂದಪ್ಪಿ ಕುಳ್ಳಿರಿಸೆ
ಕಾಮಿನಿಯರುಪ್ಪಾರತಿಗಳಭಿ
ರಾಮ ವಸ್ತ್ರ ನಿವಾಳಿ ರತ್ನ
ಸ್ತೋಮ ಬಣ್ಣದ ಸೊಡರು ಸುಳಿದವು ಹರುಷದೊಗ್ಗಿನಲಿ ೨೭

ಬೊಪ್ಪ ಸಾಕೀ ಬಯಲ ಡೊಂಬಿನ
ಗೊಪ್ಪುವುದೆ ವೀರೋಪಚಾರವಿ
ದೊಪ್ಪುವರಿಗೊಪ್ಪುವುದು ತೆಗೆಸೆನಲರಸ ನಸುನಗುತ
ದರ್ಪವುಳ್ಳಂಗೀಸು ಮಂಗಳ
ವೊಪ್ಪದೇನೈ ಜಗದೊಳಾವಂ
ಗಪ್ಪುದೀ ಬಲವೀ ನಿಗರ್ವಿತೆಯೆಂದನಾ ಮತ್ಸ್ಯ ೨೮

ಮಗನೆ ಕರ್ಣ ದ್ರೋಣ ಭೀಷ್ಮಾ
ದಿಗಳನೊಬ್ಬನೆ ಗೆಲಿದೆಯಾ ಕಾ
ಳಗದ ಕಡುಗಲಿತನಗಳುಂಟೇ ಪೂರ್ವ ಪುರುಷರಲಿ
ದುಗುಡವೇಕೆನ್ನಾಣೆ ಹೆತ್ತರ
ಮೊಗಕೆ ಹರುಷವ ತಂದೆಲಾ ಹಂ
ಗಿಗನೆ ನೀ ತಲೆ ಗುತ್ತಲೇಕೆಂದೆತ್ತಿದನು ಮುಖವ ೨೯

ಕಾದಿ ಗೆಲಿದವ ಬೇರೆ ಸಾರಥಿ
ಯಾದ ತನಗೀಸೇಕೆ ನಿಮ್ಮಡಿ
ಯಾದರಿಸಲೊಡೆಮುರಿಚ ಬಲ್ಲನೆ ನಾಚಿಸದಿರೆನಲು
ಕಾದಿದಾತನು ನೀನು ಸಾರಥಿ
ಯಾದವನು ತಂಗಿಯ ಬೃಹನ್ನಳೆ
ವಾದ ಬೇಡಲೆ ಮಗನೆ ಬಲ್ಲೆನು ನಿನ್ನ ವಿಕ್ರಮವ ೩೦

ಆದಟುತನವೆನಗುಂಟೆ ಬೆಂದುದ
ಬೆದಕಿ ನೋಯಿಸಬೇಡ ಹಗಲಿನ
ಕದನವನು ಗೆಲಿದಾತ ಬೇರಿಹ ಬೊಪ್ಪ ನುಡಿಯದಿರು
ಉದಯದಲಿ ಗೆಲಿದಾತನನು ನಿ
ಮ್ಮದಿರಿನಲಿ ತೋರುವೆನು ಬೀಳ್ಕೊಡಿ
ಸದನಕೆಂದು ಕುಮಾರ ಕಳುಹಿಸಿಕೊಂಡನರಮನೆಗೆ ೩೧

ಇತ್ತಲರ್ಜುನ ದೇವ ಸಾರಿದ
ನುತ್ತರೆಯ ಭವನವನು ತಾ ತಂ
ದುತ್ತಮಾಂಬರ ವಿವಿಧ ರತ್ನಾಭರಣ ವಸ್ತುಗಳ
ಇತ್ತನಾ ಕನ್ನಿಕೆಗೆ ಮುದ ವಿಂಗ
ಲುತ್ತರೆಯ ಮನೆಯಿಂದ ಶಶಿಕುಲ
ಮತ್ತವಾರಣ ಬಂದನಾ ಭೀಮಾಗ್ರಜನ ಹೊರೆಗೆ ೩೨

ಬಳಿಕ ಸಂಕೇತದಲಿ ಭೂಪನ
ನಿಳಯವನು ಕಲಿಭೀಮ ಹೊಕ್ಕನು
ನಳಿನಮುಖಿ ಸಹದೇವ ನಕುಲರು ಬಂದರಾ ಕ್ಷಣಕೆ
ಫಲುಗುಣನು ಹೊಡವಂಟನಿಬ್ಬರಿ
ಗುಳಿದವರು ಪಾರ್ಥಂಗೆ ವಂದಿಸ
ಲೊಲಿದು ಬಿಗಿಯಪ್ಪಿದನು ಪರಿತೋಷದಲಿ ಸಮಬಲರ ೩೩

ಉಳಿದ ನಾಲ್ವರು ಕಲಿ ತ್ರಿಗರ್ತರ
ಗೆಲಿದ ಪರಿಯನು ಪಾರ್ಥ ಕೌರವ
ಬಲವ ಭಂಗಕೆ ತಂದ ಪರಿಯನು ಹೇಳುತಿರುತಿರಲು
ನಿಲುಕಿ ರಾಯನ ಹಣೆಯ ಗಾಯವ
ಬಳಿಕ ಕಂಡನಿದೇನು ನೊಸಲಿಂ
ದಿಳಿವುತಿದೆ ನಸು ರಕ್ತಬಿಂದುಗಳೆಂದನಾ ಪಾರ್ಥ ೩೪

ಅನವಧಾನದೊಳಾಯ್ತು ಸಾಕದ
ನೆನೆಯಲೇತಕೆ ಮಾಣೆನಲು ವಿಂಗೆ
ಕನಲುತರ್ಜುನನರಿದನಾ ದ್ರೌಪದಿಯ ಸೂರುಳಿಸಿ
ಮನದಲುರಿದೆದ್ದನು ವಿರಾಟನ
ತನುವ ಹೊಳ್ಳಿಸಿ ರಕುತವನು ಶಾ
ಕಿನಿಯರಿಗೆ ಹೊಯಿಸುವೆನು ಹೊಲ್ಲೆಹವೇನು ಹೇಳೆಂದ ೩೫

ಕಳುಹಬೇಕೇ ಕೀಚಕೇಂದ್ರನ
ಬಳಗವಿದ್ದಲ್ಲಿಗೆ ವಿರಾಟನ
ತಲೆಯ ಋಣ ಸಾಲಿಗನಲೇ ಶಿವ ಶಿವ ಮಹಾದೇವ
ನೆಲದೊಳೊಕ್ಕುದೆ ರಕ್ತವವದಿರ
ಕುಲವ ಸವರುವೆನಿವನ ಸೀಳಿದು
ಬಲಿಯ ಕೊಡುವೆನು ಭೂತಗಣಕೆನುತೆದ್ದನಾ ಭೀಮ ೩೬

ಕಾಕ ಬಳಸಲು ಬೇಡ ಹೋ ಹೋ
ಸಾಕು ಸಾಕೈ ತಮ್ಮ ಮಾಣು
ದ್ರೇಕವನು ನೆಲ ರಕ್ತ ಕಂಡರೆ ನನ್ನ ಮೇಲಾಣೆ
ಈ ಕಮಲಲೋಚನೆಯ ಸೆರಗಿಗೆ
ಸೇಕವಾಯಿತು ರಕುತವತಿ ಸ
ವ್ಯಾಕುಲತೆ ಬೇಡೆಂದು ಗಲ್ಲವ ಹಿಡಿದನನಿಲಜನ ೩೭

ಕೊಂಬೆನಾತನ ಜೀವವನು ಪತಿ
ಯೆಂಬ ಗರ್ವವನವನ ನೆತ್ತಿಯ
ತುಂಬಿ ಬಿಡಲೆರಗುವೆನು ತರಿವೆನು ಮತ್ಸ್ಯಸಂತತಿಯ
ಅಂಬುಜಾಕ್ಷಿಯ ಕೀಚಕನ ಬೇ
ಳಂಬವೀತನ ಕೂಟ ಭೂತ ಕ
ದಂಬ ತುಷ್ಟಿಯ ಮಾಡಬೇಹುದು ಸೆರಗ ಬಿಡಿಯೆಂದ ೩೮

ಇವನ ನಾವೋಲೈಸಿ ಕೈಯೊಡ
ನಿವಗೆ ಮುನಿದೊಡೆಯೇನನೆಂಬುದು
ಭುವನ ಜನವು ಭ್ರಮಿಸದಿರು ಸೈರಣೆಗೆ ಮನ ಮಾಡು
ಎವಗೆ ನೋವಿನ ಹೊತ್ತು ದುಷ್ಕೃತ
ವಿವರಣದ ಫಲವಿದಕೆ ಲೋಗರ
ನವಗಡಿಸಿದೊಡೆ ಹಾನಿಯೆಮಗೆನೆ ಭೀಮನಿಂತೆಂದ ೩೯

ಬರಿಯ ಧರ್ಮದ ಜಾಡ್ಯದಲಿ ಮೈ
ಮರೆದು ವನದಲಿ ಬೇವು ಬಿಕ್ಕೆಯ
ನರಸಿ ತೊಳಲಿದು ಸಾಲದೇ ಹದಿಮೂರು ವತ್ಸರದಿ
ಉರುಕುಗೊಂಡೊಡೆ ರಾಜ ತೇಜವ
ಮೆರೆವ ದಿನವೆಂದಿಹುದು ನೀವಿ
ನ್ನರಿಯಿರೆಮ್ಮನು ಹರಿಯ ಬಿಡಿ ಸಾಕೆಂದನಾ ಭೀಮ ೪೦

ಉದಯದಲಿ ನಾವಿನಿಬರಾತನ
ಸದನದಲಿ ನೃಪಪೀಠವನು ಗ
ರ್ವದಲಿ ನೆಮ್ಮುವೆವಾತ ನಮ್ಮಲಿ ಖೋಡಿಯನು ಹಿಡಿಯೆ
ಮದಮುಖನನೊರಸುವೆವು ಹರುಷದ
ಲಿದಿರುಗೊಂಡೊಡೆ ಮನ್ನಿಸುವ ಮಾ
ತಿದುವೆ ಸನ್ಮತವೆಂದು ಸಂತೈಸಿದನು ಪವನಜನ ೪೧

## ಹತ್ತನೆಯ ಸಂಧಿ

ಸೂ. ರಾಯ ಪಾಂಡವ ಜೀವ ಭಕ್ತನಿ
ಕಾಯ ಲಂಪಟನಮಲ ಯಾದವ
ರಾಯ ಬಿಜಯಂಗೈದನಭಿಮನ್ಯುವಿನ ಪರಿಣಯಕೆ

ಕೇಳು ಜನಮೇಜಯ ಧರಿತ್ರೀ
ಪಾಲ ಚರಿತಜ್ಞಾತವಾಸವ
ಬೀಳುಕೊಟ್ಟರು ಬಹಳ ಹರುಷದಲಿರುಳ ನೂಕಿದರು
ಮೇಲಣವರಭ್ಯುದಯವನು ಕೈ
ಮೇಳವಿಸಿ ಕೊಡುವಂತೆ ಮೂಡಣ
ಶೈಲ ಮುಖದಲಿ ಕೆಂಪು ಸುಳಿದುದು ಭಾನುಮಂಡಲದ ೧

ಏಳು ಕುದುರೆಯ ಖುರಪುಟದ ಕೆಂ
ದೂಳಿಯೋ ಕುಂತೀ ಕುಮಾರಕ
ರೇಳಿಗೆಯ ತನಿರಾಗರಸವುಬ್ಬರಿಸಿ ಪಸರಿಸಿತೊ
ಹೇಳಲೇನು ಮಹೇಂದ್ರ ವರ ದಿ
ಗ್ಬಾಲಕಿಯ ಬೈತಲೆಯ ಕುಂಕುಮ
ಜಾಲವೋ ಹೇಳೆನಲು ದಿನಪನ ಚೂಣಿ ರಂಜಿಸಿತು ೨

ಸರಸಿಜದ ಪರಿಮಳಕೆ ತುಂಬಿಯ
ಬರವ ಕೊಟ್ಟನು ಚಂದ್ರಕಾಂತಕೆ
ಬೆರಗನಿತ್ತನು ಜಕ್ಕವಕ್ಕಿಯ ಸೆರೆಯ ಬಿಡಿಸಿದನು
ಕೆರಳಿ ನೈದಿಲ ಸಿರಿಯ ಸೂರೆಯ
ತರಿಸಿದನು ರಿಪುರಾಯ ರಾಜ್ಯವ
ನೊರಸಿದನು ರವಿ ಮೂಡಣಾದ್ರಿಯೊಳಿತ್ತನೋಲಗವ ೩

ಹರ ಹರ ಶ್ರೀಕಾಂತನೆನುತ್ತೆ
ವರು ಕುಮಾರಕರುಪ್ಪವಡಿಸಿದ
ರರಿ ವಿದಾರರು ಮಾಡಿದರು ಮಾಂಗಲ್ಯ ಮಜ್ಜನವ
ವರ ವಿಭೂಷಣ ಗಂಧ ಮಾಲ್ಯಾಂ
ಬರದಿ ಪರಿವೃತರಾದರವನೀ
ಸುರರಿಗಿತ್ತರು ಧೇನು ಮಣಿ ಕನಕಾದಿ ವಸ್ತುಗಳ ೪

ತಮದ ಗಂಟಲನೊಡೆದ ಹರುಷ
ದ್ಯುಮಣಿ ಮಂಡಲದಂತೆ ಜೀವ
ಭ್ರಮೆಯ ಕವಚವ ಕಳೆದು ಹೊಳೆ ಹೊಳೆವಾತ್ಮನಂದದಲಿ
ವಿಮಲ ಬಹಳ ಕ್ಷತ್ರ ರಶ್ಮಿಗ
ಳಮರಿ ದೆಸೆಗಳ ಬೆಳಗೆ ರಾಜೋ
ತ್ತಮ ಯುಧಿಷ್ಠಿರ ದೇವನೆಸೆದನು ರಾಜ ತೇಜದಲಿ ೫

ಪರಮ ಸತ್ಯವ್ರತ ಮಹಾಕ್ರತು
ವರದಲವಭೃತ ಮಜ್ಜನವ ವಿ
ಸ್ತರಿಸಿ ಭೀಮಾದಿಗಳು ಸಹಿತ ವಿರಾಟನರಮನೆಗೆ
ಅರಸ ಬಂದನು ಮಣಿಖಚಿತ ಕೇ
ಸರಿಯ ಪೀಠವನಡರಿದನು ನಿಜ
ಚರಣ ಸೇವೆಯಲೆಸೆದರೊಡ ಹುಟ್ಟಿದರು ಪರುಟವಿಸಿ ೬

ಅವನಿಪನ ಸಿಂಹಾಸನವನೇ
ರುವ ಸಗರ್ವಿತರಾರು ನೋಡಿದ
ಡೆವೆಗಳುರಿವುದು ಹಾಯೆನುತ ಕಂಚುಕಿಗಳೈತಂದು
ಇವರನೀಕ್ಷಿಸಿ ಕ್ಷಾತ್ರ ತೇಜವ
ನವಗಡಿಸಲಂಜಿದರು ಹರಿ ತಂ
ದವದಿರೆಬ್ಬಿಸಿ ಬಿನ್ನವಿಸಿದರು ಮತ್ಸ್ಯಭೂಪತಿಗೆ ೭

ಜೀಯ ಸಿಂಹಾಸನಕೆ ದಿವಿಜರ
ರಾಯನೋ ಶಂಕರನೊ ಮೇಣ್ ನಾ
ರಾಯಣನೊ ನರರಲ್ಲ ದೇವರು ಬಂದು ನೋಡುವುದು
ಕಾಯಲಸದಳವೆಮಗೆನಲು ನಿ
ರ್ದಾಯದಲಿ ನೆಲೆಗೊಂಡ ನಿರ್ಜರ
ರಾಯನಾರೆಂದೆನುತಲಾಗ ವಿರಾಟ ಚಿಂತಿಸಿದ ೮

ಕರೆಸಿಕೊಂಡು ಪುರೋಹಿತನನು
ತ್ತರನನಖಿಳ ಮಹಾಪ್ರಧಾನರ
ನರಮನೆಯ ಹೊರವಂಟು ವೋಲಗಶಾಲೆಗೈತರುತ
ಕರಗಿ ಸೂಸಿದ ಚಂದ್ರ ಬಿಂಬದ
ಕಿರಣ ಲಹರಿಗಳೆನಲು ವಿವಿಧಾ
ಭರಣ ಮುಕ್ತಾ ಪ್ರಭೆಯ ಕಂಡನು ನೃಪತಿ ದೂರದಲಿ ೯

ಹರನ ನಾಲುಕು ಮುಖದ ಮಧ್ಯ
ಸ್ಫುರಿತದೀಶಾನನದೊಲಿರೆ ಸೋ
ದರ ಚತುಷ್ಟಯ ಮಧ್ಯದಲಿ ಕಂಡನು ಯುಧಿಷ್ಠಿರನ
ಅರಸಿಯನು ವಾಮದಲಿ ವಿವಿಧಾ
ಭರಣ ಮಣಿ ರಶ್ಮಿಗಳ ಹೊದರಿನ
ಹೊರಳಿಯಲಿ ಕಣ್ಣಾಲಿ ಕೋರೈಸಿದವು ನಿಮಿಷದಲಿ ೧೦

ಮೇಳವೇ ಘಡ ಮನದ ಮತ್ಸರ
ಕಾಲಿಡಲು ತೆರಹಿಲ್ಲ ಮನುಜರ
ಹೋಲುವೆಯ ನಾಟಕದ ನಿರ್ಜರ ಮಂಡಲೇಶ್ವರರು
ಆಲಿಗಳು ಮೇಲಿಕ್ಕಲಮ್ಮವು
ಶೂಲಪಾಣಿಯ ಪರಮ ತೇಜದ
ಜೂಳಿಯೋ ಶಿವ ಶಿವ ಎನುತ್ತ ವಿರಾಟ ಬೆರಗಾದ ೧೧

ವಲಲ ಕಂಕ ಬೃಹನ್ನಳೆಯ ಮೈ
ಸುಳಿವ ಹೋಲುವರೆಂದು ಕೆಲಬರು
ಕೆಲರಿದೆತ್ತಣ ನರರು ತೆಗೆ ಸುರಲೋಕ ಪಾಲಕರು
ತಿಳಿಯಲರಿದೆಮಗೆಂದು ಕೆಲಬರು
ತಳವೆಳಗುಗೊಳುತಿರಲು ಮುಂದಿಯ
ಕೆಲಕೆ ನೋಕಿಯೆ ತಂದೆಗುತ್ತರ ನಗುತ ಕೈಮುಗಿದ ೧೨

ತಾತ ಬಿನ್ನಹ ನಿನ್ನೆ ವೈರಿ
ವ್ರಾತವನು ಗೆಲಿದಾತನೀ ತೋ
ರ್ಪಾತನೀತನ ಮುಂದೆ ಮೆರೆವವ ಕೀಚಕಾಂತಕನು
ಈತ ನಕುಲನು ವಾಮದಲಿ ನಿಂ
ದಾತ ಸಹದೇವಾಂಕನನಿಬರಿ
ಗೀತ ಹಿರಿಯನು ಧರ್ಮನಂದನನೆಂದು ತೋರಿಸಿದ ೧೩

ರಮಣಿಯೈವರಿಗೀಕೆ ಕೆಲದಲಿ
ಕಮಲಮುಖಿಯನು ನೋಡು ತಾವಿವ
ರಮಳ ಗುಣ ಗಂಭೀರ ರಾಯರು ಪಾಂಡು ನಂದನರು
ನಮಗೆ ಭಾರಿಯ ಭಾಗ್ಯಲಕ್ಷ್ಮಿಯ
ಮಮತೆಯಾಯ್ತಿನ್ನೇನು ನೃಪಪದ
ಕಮಲದಲಿ ಬೀಳುವೆವು ನಡೆ ನಡೆ ಧನ್ಯರಹೆವೆಂದ ೧೪

ಈತನೇ ಧರ್ಮಜನು ದಿಟ ತಾ
ನೀತನೇ ಪವನಜನು ನಿಶ್ಚಯ
ವೀತನೇ ಫಲುಗುಣನು ಮಾದ್ರೀತನುಜರೇ ಇವರು
ಈ ತಳೋದರಿ ದ್ರುಪದ ಸುತೆಯೇ
ಕೌತುಕವಲೇ ಭುವನಜನ ವಿ
ಖ್ಯಾತರೆಲ್ಲಿಂದೆಲ್ಲಿ ಮೂಡಿದರೆನುತ ಬೆರಗಾದ ೧೫

ವರುಷವೊಂದಜ್ಞಾತ ವಾಸವ
ನಿರದೆ ನೂಕಿದರಿಲ್ಲಿ ಬಳಿಕಿಯ
ಹೊರೆಯ ಹೆಸರವು ಬೇರೆ ನಡವಳಿಯಂಗವದು ಬೇರೆ
ಮರುಳನಂತಿರೆ ಜಗಕೆ ತೋರನೆ
ಪರಮ ತತ್ವಜ್ಞಾನಿ ನಮ್ಮಾ
ಯರಸುತನ ಫಲವಾಯ್ತು ನಡೆಯೆಂದನು ಕುಮಾರಕನು ೧೬

ದರುಶನಕೆ ಮಣಿ ರತುನ ಕನಕವ
ತರಿಸಿ ಮುದದಲಿ ಮುಳುಗಿ ನಿಜ ಪರಿ
ಕರ ಸಹಿತ ಮೈಯಿಕ್ಕಿದನು ಕಾಣಿಕೆಯನೊಪ್ಪಿಸಿದ
ವರ ನೃಪಾಲ ತ್ರಾಹಿ ಭುವನೇ
ಶ್ವರ ಪರಿತ್ರಾಯಸ್ವ ಕರುಣಿಸು
ಕರುಣೆಸೆಂದಂಘ್ರಿಗಳ ಹಿಡಿದನು ಮತ್ಸ್ಯ ಭೂಪಾಲ ೧೭

ಬಗೆದೆನಪರಾಧವನು ಕರುಣಾ
ಳುಗಳ ಬಲ್ಲಹ ನೀನು ನಿನ್ನಂ
ಘ್ರಿಗಳಿಗೀ ತಲೆ ಬಂಟ ನೀನಿದ ಕಾಯಬೇಕೆನುತ
ವಿಗೆ ಭಕುತಿ ಭಾವದಲಿ ನಿಜ ಮಂ
ತ್ರಿಗಳು ಮಕ್ಕಳು ಸಹಿತ ಮನ ನಂ
ಬುಗೆಯ ಮರೆದನು ಮತ್ಸ್ಯ ಭೂಪ ಮಹೀಶರಿದಿರಿನಲಿ ೧೮

ಆ ಸುದೇಷ್ಣೆ ಕುಮಾರಿಯೊಡನೆ ವಿ
ಳಾಸಿನೀಜನ ಸಹಿತ ರಾಣೀ
ವಾಸದಲ್ಲಿಗೆ ಬಂದು ಕಾಣಿಕೆ ಕೊಟ್ಟು ಪೊಡವಂಟು
ಆ ಸಕಲ ಪರಿವಾರ ಪುರಜನ
ದೇಶಜನ ಕಾಣಿಕೆಯನಿತ್ತು ಮ
ಹೀಶನಿಗೆ ಮೈಯಿಕ್ಕಿ ಕಂಡುದು ಬಹಳ ಹರುಷದಲಿ ೧೯

ಮುಗುಳು ನಗೆಯಲಿ ಭೀಮ ಪಾರ್ಥರ
ಮೊಗವ ನೋಡಿದನವನಿಪತಿ ಕೈ ಮು
ಗಿಮುತಲೆವಾಗಿದರು ತಮ್ಮಂದಿರು ಮಹಿಪತಿಗೆ
ತೆಗೆಸಿದರು ಕಾಣಿಕೆಯನಾ ಮಂ
ತ್ರಿಗಳನಾ ಪರಿವಾರವನು ದೃಗು
ಯುಗದ ಕರುಣಾ ರಸದಲನಿಬರ ಹೊರೆದು ಮನ್ನಿಸಿದ ೨೦

ಶಿರವನೆತ್ತಿ ವಿರಾಟ ಭೂಪನ
ಕರೆದು ಹತ್ತಿರ ಪೀಠದಲಿ ಕು
ಳ್ಳಿರಿಸಲೊಡೆ ಮುರಿಚಿದನು ಕೆಲದಲಿ ಗದ್ದುಗೆಯ ಸರಿದು
ಪರಮ ಸುಕೃತವಲಾ ಧರಾಧೀ
ಶ್ವರನ ದರುಶನವಾಯ್ತು ಧನ್ಯರು
ಧರೆಯೊಳೆಮಗಿನ್ನಾರು ಸರಿಯೆಂದನು ವಿರಾಟ ನೃಪ ೨೧

ದೇಶ ನಿಮ್ಮದು ನಗರ ಹೆಚ್ಚಿದ
ಕೋಶ ನಿಮ್ಮದು ನನ್ನ ಜೀವ ವಿ
ಳಾಸ ನಿಮ್ಮದು ಸಲಹಬೇಹುದು ಬಿನ್ನಹವ ಹದನ
ಈ ಸಮಂಜಸ ದಿವಸದಲಿ ಸಿಂ
ಹಾಸನದಲಭಿಷೇಕವನು ಭೂ
ಮೀಶ ವಿಸ್ತರಿಸುವೆನು ಚಿತ್ತೈಸೆಂದನಾ ಭೂಪ ೨೨

ಎನಲು ನಗುತೆಂದನು ಮಹೀಪತಿ
ವಿನಯ ಮಧುರ ರಸಾಭಿಷೇಕವ
ನೆನಗೆ ಮಾಡಿದೆ ಸಾಕು ಪುನರುಕ್ತಾಭಿಷೇಕವದು
ಜನವಿದೆಮ್ಮದು ನೀನು ನಮ್ಮಾ
ತನು ಧರಿತ್ರಿಯಿದೆಮ್ಮದೆಂಬೀ
ನೆನಹು ತಾನುಪಚಾರ ನಮಗೇಕೆಂದನಾ ಭೂಪ ೨೩

ನೊಂದವರು ಭೀಮಾರ್ಜುನರು ಹಗೆ
ಯಿಂದ ಹಳುವವ ಹೊಕ್ಕು ಮನಸಿನ
ಕಂದು ಕಸರಿಕೆ ಹೋಗವಾ ದುರ್ಯೋಧನಾದಿಗಳ
ಕೊಂದು ಕಳದಲಿ ಮತ್ತೆ ಗಜ ಪುರಿ
ಗೆಂದು ಗಮಿಸುವೆವೆಂಬ ತವಕಿಗ
ರಿಂದು ತಾನೇ ಬಲ್ಲರೆಂದನು ಧರ್ಮನಂದನನು ೨೪

ಎಂದನುತ್ತರನರಸನಂಘ್ರಿಯೊ
ಳಂದು ಮಕುಟವ ಚಾಚಿ ಬಿನ್ನಹ
ವಿಂದು ನೇಮವ ಕೊಡಿ ಕುಮಾರಿಯನೀವೆನರ್ಜುನಗೆ
ಎಂದಡೇಳೇಳೆಂದು ನಸು ನಗೆ
ಯಿಂದ ಪಾರ್ಥನ ನೋಡೆ ಕೈ ಮುಗಿ
ದೆಂದನಾತನು ಮನದ ನಿಶ್ಚಯವನು ಯುಧಿಷ್ಠಿರಗೆ ೨೫

ವರುಷವಿವಳಲಿ ನಾಟ್ಯ ವಿದ್ಯೆಯ
ಪರುಟವಿಸಿದೆನು ತಂದೆಯಂತೀ
ತರುಣಿ ಭಜಿಸಿದಳಾ ಪ್ರಕಾರ ರಹಸ್ಯ ದೇಶದಲಿ
ಗುರುತನದ ಗರುವಾಯಿಯೆತ್ತಲು
ಅರಸಿಯೆಂಬುದಿದಾವ ಮತವೀ
ವರ ಕುಮಾರಿಯನೀವಡಭಿಮನ್ಯುವಿಗೆ ಕೊಡಲೆಂದ ೨೬

ಎವಗೆ ನೀವೇನಾತನೇನು
ತ್ಸವದೊಳಾಗಲಿಯೆನೆ ವಿರಾಟನ
ನವನಿಪತಿ ಮನ್ನಿಸಿದನಿತ್ತನು ನಗುತ ವೀಳೆಯವ
ಯವಗೆ ಪರಮಸ್ವಾಮಿಯೆಮ್ಮು
ತ್ಸವದ ನೆಲೆಯೆಮ್ಮವರಸು ಯಾ
ದವ ಶಿರೋಮಣಿ ಕೃಷ್ಣನಭಿಮತವೆಮ್ಮ ಮತವೆಂದ ೨೭

ಪೊಡವಿಯೊಡೆತನವೆಮಗೆ ಕ
ಟ್ಟೊಡೆಯ ಕೃಷ್ಣನು ಕೃಷ್ಣನೊಡಬ
ಟ್ಟೊಡೆ ವಿವಾಹ ನಿರಂತರಾಯವು ಚಿಂತೆ ಬೇಡೆನಲು
ಒಡಬಡಲಿ ಮೇಣಿರಲಿ ಗುರು ನಿ
ಮ್ಮಡಿ ಮುರಾರಿಯ ತೋರಿಸುವಿರಾ
ದೊಡೆ ಕೃತಾರ್ಥನು ತಾನೆನುತ ಹಿಗ್ಗಿದನು ಮತ್ಸ್ಯ ನೃಪ ೨೮

ಪರಿಪರಿಯ ಪಾವುಡವ ಕಟ್ಟಿಸಿ
ಹರುಷದಲಿ ಬಿನ್ನಹದ ವೋಲೆಯ
ಬರೆಸಿದನು ವೇಗಾಯ್ಲ ದೂತರನಟ್ಟಿದನು ಭೂಪ
ಚರರು ಪಯಣದ ಮೇಲೆ ಪಯಣದ
ಭರದಿ ಬಂದರು ಕೃಷ್ಣರಾಯನ
ಪುರಕೆ ಪರಿತೋಷದಲಿ ಹೊಕ್ಕರು ರಾಜ ಮಂದಿರವ ೨೯

ಬರವ ಬಿನ್ನಹ ಮಾಡೆ ಪಡಿಹಾ
ರರು ಮುರಾರಿಯ ನೇಮದಲಿ ಚಾ
ರರನು ಹೊಗಿಸಲು ಬಂದು ಹೊಕ್ಕರು ಕೃಷ್ಣನೋಲಗವ
ದರುಶನವ ಮಾಡುತ್ತ ಚರಣಾಂ
ಬುರುಹದಲಿ ಮೈಯಿಕ್ಕಿ ದೇವನ
ಹೊರೆಯಲಿಳುಹಿದರಿವರು ಕಳುಹಿದ ಬಿನ್ನವತ್ತಳೆಯ ೩೦

ನಸುನಗುತ ಮುರವೈರಿ ಮಿಗೆ ಮ
ನ್ನಿಸಿದನವರನು ಪಾಂಡು ತನಯರ
ಕುಶಲವನು ದುರುಪದಿಯ ಸುಕ್ಷೇಮವನು ಬೆಸಗೊಳಲು
ಕುಶಲರನಿಬರು ಜೀಯ ಭಕ್ತ
ವ್ಯಸನ ಭಾರವು ನಿಮ್ಮಲಿರೆ ಜೀ
ವಿಸುವುದರಿದೇ ಪಾಂಡು ನಂದನರೆಂದರಾ ಚರರು ೩೧

ಕಳುಹಿದುಡುಗೊರೆ ಜೀಯ ನಿಮ್ಮಡಿ
ಗಳಿಗೆ ರಾಣೀವಾಸ ವರ್ಗಕೆ
ಬಲಗೆ ವಸುದೇವರಿಗೆ ದೇವಕಿಯುಗ್ರಸೇನರಿಗೆ
ಕುಲ ಗುರುಗಳಕ್ರೂರನುದ್ಧವ
ಬಲುಭುಜನು ಕೃತವರ್ಮ ಸಾತ್ಯಕಿ
ಲಲಿತ ಸಾಂಬ ಕುಮಾರ ಕಂದರ್ಪಾನಿರುದ್ಧರಿಗೆ ೩೨

ಎನಲು ನಸುನಗೆಯಿಂದ ಕುಂತಿಯ
ತನುಜರಟ್ಟಿದ ಪಾವುಡಂಗಳ
ನನಿತುವನು ತೆಗೆಸಿದನು ಕೆಲದಲಿ ಸಂಧಿ ವಿಗ್ರಹಿಯ
ದನುಜಹರನೀಕ್ಷಿಸಲು ಲಿಖಿತವ
ನನುನಯದೊಳಳವಡಿಸಿ ಬಿನ್ನಹ
ವೆನುತ ನೇಮವ ಕೊಂಡು ಕಳಕಳವಡಗೆ ವಾಚಿಸಿದ ೩೩

ಸ್ವಸ್ತಿ ದಾನವ ರಾಯ ಕುಂಜರ
ಮಸ್ತಕಾಂಕುಶ ಖೇಲನಾ ಪರಿ
ಯಸ್ತ ಯದುಕುಲ ಸಿಂಹಸಂಹೃತ ಜನ್ಮದುರಿತಭಯ
ಹಸ್ತಕಲಿತ ಸುದರುಶನೋರ್ಧ್ವಗ
ಭಸ್ತಿಲವಶಮಿತಾರ್ಕ ಪರಿವೃಢ
ವಿಸ್ತರಣ ಚಿತ್ತೈಸು ಕುಂತಿಯ ಸುತರ ಬಿನ್ನಪವ ೩೪

ದೇವ ನಿಮ್ಮಡಿಗಳ ಕೃಪಾ ಸಂ
ಜೀವನಿಯಲೆಮ್ಮಸುಗಳೊಡಲಿನ
ಠಾವ ಮೆಚ್ಚಿದವೊದೆದು ಹಾಯ್ದವು ವಿಪಿನ ಮಂದಿರವ
ಈ ವರುಷದಜ್ಞಾತವಾಸ ಗ
ತಾವಶೇಷಣವಾಯ್ತು ಕಂಗಳಿ
ಗೀವುದವಯವ ದರುಶನಾಮೃತಪಾನ ಸಂಪದವ ೩೫

ದಾಟಿದೆವು ನುಡಿದವಧಿಯನು ವೈ
ರಾಟ ಪುರದಲಿ ತುರುವಿಡಿದು ಮೈ
ನೋಟಕೋಸುಗ ಬಂದು ನುಗ್ಗಾಯಿತ್ತು ಕುರುಸೇನೆ
ತೋಟಿ ಜಯಿಸಿದೊಡೆಮ್ಮನರಿದು ವಿ
ರಾಟ ಮನ್ನಿಸಿ ತನ್ನ ಮಗಳ ಕಿ
ರೀಟಿ ತನಯಂಗೀವ ಭರವಿದೆ ದೇವರವಧರಿಸಿ ೩೬

ಮದುವೆಯೆಂಬುದು ನೆವ ನಿಜ ಶ್ರೀ
ಪದವ ತೋರಿಸಬೇಕು ವನ ವಾ
ಸದ ಪರಿಕ್ಲೇಶಾನು ಸಂತಾಪವನು ಬೀಳ್ಕೊಡಿಸಿ
ಕದಡು ಹೋಗಲು ಕಾಣಬೇಹುದು
ಹದುಳವಿಟ್ಟೆಮಗುಚಿತ ವಚನದ
ಹದವಳೆಯಲುತ್ಸಾಹಸಸಿಯನು ದೇವ ಸಲಹುವುದು ೩೭

ಕರುಣಿ ಬಿಜಯಂಗೈದು ಭಕ್ತರ
ಹೊರೆಯ ಬೇಹುದು ಬೇಡಿಕೊಂಬೆನು
ಅರಸಲೇಕೆಳೆಗಂದಿ ತಾಯ್ತಾನರಸುವಂದದಲಿ
ಚರಣಭಜಕ ಕುಟುಂಬನೆಂಬೀ
ಬಿರುದ ಪಾಲಿಸಿ ಬಿನ್ನಹವನವ
ಧರಿಸಿ ಕಾಣಿಸಿ ಕೊಡುವುದೆಮಗೆ ಮಹಾ ಪ್ರಸಾದವನು ೩೮

ಕೇಳಿ ಹರುಷಿತನಾಗಿ ಕಡು ಕರು
ಣಾಳು ಹೊಂಪುಳಿಯೋಗಿ ಭಕ್ತರ
ಮೇಲಣೊಲವಿನ ಬಹಳ ಪರಮ ಸ್ನೇಹ ಪಸರಿಸಿತು
ಕೇಳಿದೆವೆ ಹರ ಹರ ಯುಧಿಷ್ಠಿರ
ನೇಳಿಗೆಯನಾ ಕೌರವೇಶ್ವರ
ನೂಳಿಗವನೆನುತಸುರರಿಪು ನೋಡಿದನು ಕೆಲಬಲನ ೩೯

ಚಿಂತೆ ಬೀತುದು ಪಾಂಡು ಮಾವನ
ಸಂತತಿಗಳಜ್ಞಾತ ವಾಸವ
ನೆಂತು ಪಂಥದ ಮೇಲೆ ಕಳೆದರೊ ನಮ್ಮ ಪುಣ್ಯವಿದು
ಕುಂತಿ ದೇವಿಯರುಮ್ಮಳಿಸೆ ನಾ
ವೆಂತು ಬದುಕುವೆವಕಟೆನುತ್ತ ನಿ
ರಂತರವು ಮರುಗುವನು ಬೊಪ್ಪನು ಶಿವ ಶಿವಾಯೆಂದ ೪೦

ಭವಣೆಗೆಯು ಬಂದಡವಿಯಲಿ ಪಾಂ
ಡವರು ನವೆದರು ರಾಜ್ಯವನು ಯಾ
ದವರು ನಾವನುಭವಿಸುತಿದ್ದೆವು ನವೆದರಿನ್ನಬರ
ಅವರ ಸೊಗಸೇ ನಮ್ಮ ಸೊಗಸುಗ
ಳವರ ದುಗುಡವೆ ನಮ್ಮದದರಿಂ
ದವರ ವಿಮಳಾಭ್ಯುದಯ ನಮಗೆಂದಸುರರಿಪು ನುಡಿದ ೪೧

ಕಾಲ ಕೈಗೂಡ ವೊಡೆ ಲೇಸಿನ
ಮೇಲೆ ಲೇಸುಗಳೊದಗುವವು ಭೂ
ಪಾಲ ಕುಂತಿಯ ಸುತರ ಬೆಳವಿಗೆ ಮೊದಲ ಮಂಗಳವು
ಮೇಲೆ ತಂಗಿಯ ಮಗನ ಮದುವೆ ವಿ
ಶಾಲ ಸುಖವದು ನಿಖಿಳ ಯಾದವ
ಜಾಲ ಪಯಣವ ಮಾಡಲೆಂದಸುರಾರಿ ನೇಮಿಸಿದ ೪೨

ಚರರಿಗುಡುಗೊರೆ ಗಂಧ ನಿಖಿಲಾ
ಭರಣ ಕತ್ತುರಿ ಕರ್ಪುರವನಿ
ತ್ತರಿದಿಶಾಪಟ ಬೀಳುಗೊಟ್ಟನು ರಾಯುಸವ ಬರೆಸಿ
ಮರಳಿ ದೂತರು ಬಂದು ಮತ್ಸ್ಯನ
ಪುರವ ಹೊಕ್ಕರು ಕೃಷ್ಣರಾಯನ
ಕರುಣದಳತೆಯ ಬಿನ್ನವಿಸಿದರು ಪಾಂಡು ತನಯರಿಗೆ ೪೩

ಬಳಿಕ ಸುಮುಹೂರ್ತದಲಿ ಮತ್ಸ್ಯನ
ಪೊಳಲ ಹೊರವಂಟುತ್ತರ ದಿಶಾ
ವಳಯದಲಿ ರಚಿಸಿದರುಪಪ್ಲವ್ಯಾಖ್ಯಪುರವರವ
ನೆಲನಗಲದಲಿ ಕಟ್ಟಿ ಕೇರಿಯ
ನಳವಡಿಸಿದರು ನಿಖಿಳ ನೃಪರಿಗೆ
ಬಳಿಯನಟ್ಟಿದನುತ್ತರೋತ್ತರವಾದುದಿವರುದಯ ೪೪

ಜೋಳಿ ಹರಿದವು ನಿಖಿಳ ರಾಯರಿ
ಗೋಲೆಯುಡುಗೊರೆಯಿಕ್ಕಿದವು ಪಾಂ
ಚಾಲಪತಿ ಹೊರವಂಟ ಮೂರಕ್ಷೋಣಿ ಬಲ ಸಹಿತ
ನೀಲನು ಯುಧಾಮನ್ಯು ಸಮರ ಕ
ರಾಳ ಧೃಷ್ಟದ್ಯುಮ್ನ ಕೀರ್ತಿ ವಿ
ಶಾಲ ಧೀರ ಶಿಖಂಡಿ ಸಹಿತಾ ದ್ರುಪದನೈತಂದ ೪೫

ಇದಿರುಗೊಂಡರು ಹರುಷದಲಿ ದುರು
ಪದಿಯ ಬಾಂಧವ ಪೈಕವನು ಮಿಗೆ
ಮುದದಿ ಕಾಣಿಸಿಕೊಂಡರಖಿಳ ಮಹಾ ಮಹೀಶ್ವರರ
ಒದಗಿತಕ್ಷೋಹಿಣಿ ಬಲ ಸಂ
ಪದವನುನ್ನತ ವಸ್ತುಗಳ ಸೊಂ
ಪೊದವಿದವು ಕೈಗೈದು ಮದುವೆಯ ಮಂಗಳಾಭ್ಯುದಯ ೪೬

ದೇವನೀ ಬಹನೆಂದು ಬಂದರು
ದಾವಣಿಯ ಹವಣರಿದು ಬಳಿಕ ಮ
ಹಾ ವಿಳಾಸದಳೊಪ್ಪವಿಟ್ಟರು ತಮ್ಮ ನಗರಿಗಳ
ಹೂವಲಿಯ ವೀಥಿಗಳ ನವ ರ
ತ್ನಾವಳಿಯ ಸೂಸಕದ ಭದ್ರದ
ಲೋವೆಗಳ ಲಂಬಳದಲೆಸೆದವು ಕೇರಿ ಕೇರಿಗಳು ೪೭

ಚಾರುತರ ಕತ್ತುರಿಯ ಸಾದಿನ
ಸಾರಣೆಯ ಕುಂಕುಮದ ರಸಗಳ
ಕಾರಣೆಯ ನವಚಿತ್ರಪತ್ರದ ಬಹಳ ಭಿತ್ತಿಗಳ
ಓರಣದ ಬೀದಿಗಳ ತಳಿಗೆಯ
ತೋರಣದ ಹೊಂಜಗುಲಿಗಳ ಪ
ನ್ನೀರ ಚಳೆಯದ ರಚನೆಯಲಿ ಮನೆ ಮನೆಗಳೊಪ್ಪಿದವು ೪೮

ಕಟ್ಟಿದವು ಗುಡಿ ಮನೆಗಳಲಿ ಮೇ
ಲ್ಕಟ್ಟು ಬಿಗಿದವು ಪುರದ ನಾರಿಯ
ರುಟ್ಟು ತೊಟ್ಟರು ಕಳಶ ಕನ್ನಡಿ ಸಹಿತ ದೇಶಿಯಲಿ
ಇಟ್ಟಣಿಸಿ ಗಜ ವಾಜಿ ರಥ ಸಾ
ಲಿಟ್ಟು ತೋರುವ ದನುಜರಾಯ ಘ
ರಟ್ಟನನು ನಡೆದಿದಿರುಗೊಂಡರು ಪಾಂಡು ನಂದನರು ೪೯

ಕಳಶ ಕನ್ನಡಿ ವಾದ್ಯರವ ಮಂ
ಗಳ ಮಹಾಂಬುಧಿ ಮಸಗಿದವೊಲು
ಜ್ವಲ ಪತಾಕಾವಳಿಯ ವಿಮಳಚ್ಛತ್ರ ಚಾಮರದ
ಹೊಳೆವ ಕಂಗಳ ಮುಖದ ಕಾಂತಿಯ
ಮೊಲೆಗಳೊಡ್ಡಿನ ಮಂದ ಗಮನದ
ತಳಿದ ಮುಸುಕಿನ ಮೌಳಿಕಾತಿಯರೈದಿತೊಗ್ಗಿನಲಿ ೫೦

ಹೊಳಹು ಮಿಗೆ ದೂರದಲಿ ಗರುಡನ
ಹಳವಿಗೆಯ ಕಂಡಂದಣಂಗಳ
ನಿಳಿದು ಮೈಯಿಕ್ಕಿದರು ದ್ರುಪದ ವಿರಾಟ ಪಾಂಡವರು
ಬಳಿಕ ಭೂಪರು ಕಾಲು ನಡೆಯಲಿ
ನಲಿದು ಬರುತಿರಲಾನೆಯಿಂದಿಳಿ
ಗಿಳಿದು ಬಿಜಯಂಗೈದನಸುರಾರಾತಿ ಕರುಣದಲಿ ೫೧

ಇತ್ತನವರಿಗೆ ಸಮಯವನು ದೇ
ವೋತ್ತಮನು ನಿಗಮೌಘವರಸಿದ
ಡತ್ತಲಿತ್ತಲು ಸರಿವ ಮುನಿಗಳ ಮನಕೆ ಮೈಗೊಡದ
ಹೆತ್ತ ಮಕ್ಕಳು ನಿಲಲಿ ಭಕ್ತರ
ನಿತ್ತ ಕರೆ ನೆನೆವರಿಗೆ ತನ್ನನು
ತೆತ್ತು ಬದುಕುವೆನೆಂಬ ಬೋಳೆಯರರಸ ನಡೆತಂದ ೫೨

ಬಲದ ಪದಘಟ್ಟಣೆಯ ರಜದಿಂ
ಬೆಳುಪಡಗಿದಂಬರದ ಮಾರ್ಗದ
ಝಳದ ಕಿರುಬೆಮರಂಗಳ ಲಲಿತ ಕಪೋಲ ಮಂಡಲವ
ಕೆಲದ ಪಾಯವಧಾರಂಗಳ ಕಳ
ಕಳದ ಕರುಣಾರಸವ ಸೂಸುವ
ಮೆಲುನಗೆಯ ಸಿರಿಮೊಗದ ಕೃಷ್ಣನ ಕಂಡುದಾ ಸೇನೆ ೫೩

ಬಾಗಿದವು ಬಿರಿಕೈಗಳನು ಹಣೆ
ಗಾಗಿ ಮುರುಹಿದವಾನೆಗಳು ತಲೆ
ವಾಗಿ ಗುಡಿಗಟ್ಟಿದವು ಹೇಷಾರವದ ತೇಜಿಗಳು
ತೂಗಿ ತನುವನು ಪುಳಕದಲಿ ಮನ
ಲಾಗು ಮಿಗೆ ಮೈಮರೆದು ಹರುಷದ
ಸಾಗರದಲೋಲಾಡುತಿರ್ದುದು ಕೂಡೆ ತಳತಂತ್ರ ೫೪

ಅಂಗನೆಯರರವಿಂದನಾಭನ
ಮಂಗಳ ಶ್ರೀಮೂರ್ತಿ ಸುಧೆಯನು
ಕಂಗಳಲಿ ಕುಡಿಕುಡಿದು ಪಡೆಯರು ಮತ್ತೆ ದಣಿವುಗಳ
ಅಂಗಜನ ಪೆತ್ತಯ್ಯ ನೀ ರೂ
ಹಿಂಗೆ ಬಡವನೆಯೆನುತ ಮುರಹರ
ನಂಗ ಶೋಭೆಯ ಬಂದಿಯುಲಿ ಸಿಲುಕಿತ್ತು ಸತಿನಿವಹ ೫೫

ಎರಡು ಸೇರೆಯ ತುಂಬಿ ರತ್ನವ
ಸುರಿದು ಮೈಯಿಕ್ಕಿದನು ಭೂಪತಿ
ಚರಣದಲಿ ಚತುರಾಸ್ಯಜನಕನ ವಿಮಳಭಕ್ತಿಯಲಿ
ನರ ವೃಕೋದರ ನಕುಲ ಸಹದೇ
ವರು ವಿರಾಟ ದ್ರುಪದ ಮೊದಲಾ
ಗಿರೆ ಸಮಸ್ತ ನೃಪಾಲಕರು ಮೈಯಿಕ್ಕಿತೊಗ್ಗಿನಲಿ ೫೬

ಶಿರವ ನೆಗಹಿ ಯುಧಿಷ್ಠಿರನ ಮೈ
ಮುರಿಯಲೀಯದೆ ಕೃಷ್ಣನಪ್ಪಿದ
ನುರುತರ ಪ್ರೇಮದಲಿ ಭೀಮಾರ್ಜುನರ ಯಮಳರನು
ಹರುಷದಲಿ ತೆಗೆದಪ್ಪಿ ಭೂಮೀ
ಶ್ವರರ ಮನ್ನಿಸಿದನು ವಿಳಾಸಿನಿ
ಯರ ವಿಡಾಯಿಯಲರಸಿ ಕಂಡಳು ಬಂದು ಮುರಹರನ ೫೭

ಕಾಣಿಕೆಯ ಕೈಕೊಂಡು ರಾಯನ
ರಾಣಿಯನು ಮನ್ನಿಸಿದ ತನ್ನಯ
ರಾಣಿವಾಸದ ಹೊರಗೆ ನೇಮವ ಕೊಟ್ಟು ಕಳುಹಿದನು
ರಾಣಿ ರುಕುಮಿಣಿಯಾದಿಯಾದ
ಕ್ಷೋಣಿಧರನರಸಿಯರನನಿಬರ
ಕಾಣಿಕೆಯ ಕೊಟ್ಟೆರಗಿ ದುರುಪದಿ ಕಂಡಳೊಲವಿನಲಿ ೫೮

ದರುಶನವನೊಲಿದಿತ್ತು ವಸುದೇ
ವರನು ದೇವಕಿ ದೇವಕಿಯರ ಸಂ
ಕರುಷಣನ ಮಹದುಗ್ರಸೇನನ ಕಂಡನವನೀಶ
ವರ ಸುಭದ್ರಾದೇವಿ ಭಾವಂ
ದಿರಿಗೆ ವಂದಿಸಿದಳು ಕುಮಾರನು
ಹರುಷದಲಿ ಬಿಗಿಯಪ್ಪಿದನು ಅಭಿಮನ್ಯು ಪಾಂಡವರ ೫೯

ಕೈದಣಿಯೆ ವಸುದೇವನಳಿಯನ
ಮೈದಡವಿದನು ಮಗನೆ ಬನದೊಳ
ಗೊಯ್ದು ವಿಧಿ ಬಂಧಿಸಿತಲಾ ಸಾಕಿನ್ನು ದೈವವನು
ಬೈದು ಮಾಡುವುದೇನು ದುರುಪದಿ
ಯೈದೆತನವುಂಟಾಗಿ ದುರಿತವ
ಕೊಯ್ದು ನರಲೋಕಕ್ಕೆ ಬಂದಿರಿ ನಮ್ಮ ಪುಣ್ಯದಲಿ ೬೦

ಅರಸಿಯೈದೆತನಕ್ಕೆ ನಮ್ಮ
ವರ ನಿಜಾಯುಷ್ಯಕ್ಕೆ ರಾಜ್ಯದ
ಸಿರಿಯ ಸೊಂಪಿಗೆ ನಿಮ್ಮ ಮಗನೀ ಕೃಷ್ಣ ಹೊಣೆ ನಮಗೆ
ಸುರರು ಸರಿಯಿಲ್ಲೆಮಗೆ ಮಿಕ್ಕಿನ
ನರರು ಗಣ್ಯವೆ ಮಾವ ಕೇಳೆಂ
ದರಸ ವಸುದೇವನನು ಮಧುರೋಕ್ತಿಯಲಿ ಮನ್ನಿಸಿದ ೬೧

ತಂದೆ ಬೇಡೆಮಗವ್ವೆ ಬೇಡೆಮ
ಗಿಂದುಮುಖಿಯರಸೊಲ್ಲೆವಾವ್ ಮನ
ಸಂದು ಮೆಚ್ಚಿಹೆವೆಮ್ಮ ಭಕ್ತರಿಗೆಂಬನನವರತ
ನೊಂದೆನೆಂಬನು ತನ್ನವರು ಮನ
ನೊಂದರಾಡೊಡೆ ತನ್ನವರ ಸುಖ
ವಿಂದು ತನ್ನದದೆಂಬುದೇ ಸಿರಿಕೃಷ್ಣ ಮತವೆಂದ ೬೨

ಅರಸಿಯರ ಬಗೆಗೊಳ್ಳ ಮಕ್ಕಳ
ಸರಕು ಮಾಡನು ದೇಶ ಕೋಶದ
ಸಿರಿಯ ಗಣಿಸನು ಖಡ್ಡಿಗೊಳ್ಳನು ಸಂಪದವ
ಹರಿ ಪರಾಯಣರೆಂದೊಡವರಿಗೆ
ಹರಹಿಕೊಂಬನು ಮಗನ ಶೀಲವು
ನರರ ಪರಿಯಲ್ಲೆಂದನಾ ವಸುದೇವನಳಿಯಂಗೆ ೬೩

ಲೋಗರೇ ನೀವೆಮಗೆ ನಿವಗರ
ಗಾಗಿ ಕರಗುವನದು ನಿಲಲಿ ತನ
ಗಾಗದವರಿಗೆ ತನ್ನ ತೆರುವನು ಕೊಲುವ ಹಗೆಗೊಲಿವ
ಲೋಗರೆನ್ನವರೆಂದು ಲೋಗರಿ
ಗಾಗಿ ಬದುಕುವೆನೆಂಬ ಬಲುಗೈ
ಬಾಗಿ ಕೃಷ್ಣನನೇನ ಹೇಳುವೆನೆಂದನರಸಂಗೆ ೬೪

ಬೊಪ್ಪನವರೇಯೆಮ್ಮ ದೂರದೆ
ಯಿಪ್ಪವರು ತಾವಲ್ಲ ಸಾಕಿ
ನ್ನೊಪ್ಪದಲಿ ಬಾಯೆಂದು ಮುರರಿಪು ಕರೆದನವನಿಪನ
ಚಪ್ಪರಿಸಿ ಕೌರವರು ತುರುಗಳ
ತಪ್ಪಿಸಿದುದೇನಾಯ್ತು ಪಾರ್ಥನ
ದರ್ಪದನುವೆಂತೆಂದು ಬೆಸಗೊಂಡನು ಮುರಧ್ವಂಸಿ ೬೫

ಹೂಹೆಗೆಲ್ಲಿಯ ದರ್ಪ ಮನುಜನ
ಸಾಹಸವು ಬೇರೇನು ಯಂತ್ರದ
ಹಾಹೆ ಯಂತ್ರವನುಳಿದು ಜೀವಿಸಲರಿವುದೇ ಬೇರೆ
ದೇಹಿ ನೀ ನಾವೆಲ್ಲ ನಿನ್ನಯ
ದೇಹವಿದರೊಳಗೆಮಗೆ ಗರ್ವದ
ಗಾಹಿದೆಲ್ಲಿಯದೆಂದು ಬಿನ್ನವಿಸಿದನು ಯಮಸೂನು ೬೬

ಎಸಳು ಮೊನೆಯೊಂದಾಗಿ ತಾವರೆ
ಮುಸುಕುತಿದೆ ನೈದಿಲೆಯ ನೆತ್ತಿಯ
ಬೆಸುಗೆ ಬಿಡುತಿದೆ ಜಕ್ಕವಕ್ಕಿಯ ತೆಕ್ಕೆ ಸಡಿಲುತಿದೆ
ದೆಸೆದೆಸೆಯ ತಾಣಾಂತರದ ಹೊಂ
ಬಿಸಿಲು ಬೀತುದು ಜೀಯ ಬಿನ್ನಹ
ವಸುಧೆ ತಂಪೇರಿತ್ತು ಸಂಧ್ಯಾ ಸಮಯವಾಯ್ತೆಂದ ೬೭

ನಗುತ ಹರಿ ನಿಂದಿರಲು ಕೈ ದಂ
ಡಿಗೆಯವರು ಹೊದ್ದಿದರು ರೂವಾ
ರಿಗೆಗೆ ಬಿಜಯಂಗೈದನುಘೇಯೆಂದುದು ಸುರಸ್ತೋಮ
ಬಿಗಿದ ದಡ್ಡಿಯ ಬದ್ದರದ ಬೀ
ಯಗದ ರಾಣೀವಾಸದಂದಣ
ತೆಗೆದು ನಡೆದುದು ಮುಂದೆ ಸಂತೋಷದಲಿ ಯದುಸೇನೆ ೭೮

ಹೊಕ್ಕನಸುರಾರಾತಿ ಪಾಂಡವ
ರಿಕ್ಕೆಲದಿ ಬರೆ ನಗರಜನ ಮೈ
ಯಿಕ್ಕಿ ಬೀದಿಯ ಧೂಳು ಕವಿದುದು ಮುಂದೆ ಸಂದಣಿಸಿ
ಹೊಕ್ಕು ಹೊಗಳುವ ಸುತಿಗಳಿಗೆ ಕೈ
ಮಿಕ್ಕ ಕಳ್ಳನು ಪಾಂಡು ಸುತರಿಗೆ
ಸಿಕ್ಕಿದನು ಶಿವಯೆನುತಲಿರ್ದುದು ಸೂರಿ ಸಂದೋಹ ೭೯

ಮೇಲೆ ಬೀಳುವ ಮಂದಿಯನು ಕೈ
ಗೋಲಿನವರಪ್ಪಳಿಸೆ ಲಕ್ಷ್ಮೀ
ಲೋಲನವದಿರ ಜರೆದು ಕಾಣಿಸಿಕೊಳುತ ಪುರಜನವ
ಮೇಲು ನೆಲೆಯುಪ್ಪರಿಗೆಗಳ ವರ
ಬಾಲೆಯರ ಕಡೆಗಂಗಳೆಸೆವ ನಿ
ವಾಳಿಗಳ ಕೈಕೊಳುತ ಹೊಕ್ಕನು ರಾಜಮಂದಿರವ ೮೦

ಹಿಡಿದರಾರತಿಗಳನು ಬಣ್ಣದ
ಸೊಡರು ಸುಳಿದವು ಮುಂದೆ ನೆಲನು
ಗ್ಗಡಿಪ ಭೀಮಾರ್ಜುನರ ಮೇಳಾಪದಲಿ ಹರುಷದಲಿ
ಹಿಡಿದ ಕೈದೀವಿಗೆಗಳನು ಕೈ
ದುಡುಕಿ ತಿವಿದಾಡುತ್ತ ಕಾಂತಿಯ
ಕಡಲ ಮಣಿಮಯ ಪೀಠದಲಿ ಮಂಡಿಸಿದನಸುರಾರಿ ೮೧

ಬೀಳುಗೊಟ್ಟನು ಸಕಲ ಭೂಮಿಾ
ಪಾಲರನು ಕುಂತಿಯ ಕುಮಾರರ
ಮೇಳದಲಿ ಪರಿಮಿತದಲಸುರಾರಾತಿ ನಸು ನಗುತ
ಸೋಲದಲಿ ಮೈದಣಿದು ಕುರು ಭೂ
ಪಾಲನುಚಿತವ ಮಾಡಿ ರಾಜ್ಯವ
ನಾಳಿಸುವ ಹದನುಂಟೆ ನಿಮ್ಮಾಳಾಪವೇನೆಂದ ೮೨

ಮರಳಿದವು ತುರುವಿತ್ತಲಹಿತರು
ಸರಿದರತ್ತಲು ಮತ್ಸ್ಯನೆಮ್ಮ
ವರನು ನಾವೆಂದರಿದು ಕೊಂಡಾಡಿದನು ವಿನಯದಲಿ
ವರ ಸುಭದ್ರಾ ನಂದನಂಗು
ತ್ತರೆಯನೀವರ್ಥಿಯಲಿಯಿರಲಾ
ಕರೆಯಲಟ್ಟಿದೆವೆಂದು ಬಿನ್ನವಿಸಿದನು ಭೂಪಾಲ ೮೩

ಕೊಳುಗೊಡೆಗೆ ಸೇರುವರೆ ಮದುವೆಯ
ನೊಲಿದು ದೇವರು ಮಾಡುವುದು ಮೇ
ಲಿಳೆಯ ಕಾರ್ಯವ ಬುದ್ಧಿಗಲಿಸುವದೆಮ್ಮನುದ್ಧರಿಸಿ
ಬಳಿಕ ಬಿಜಯಂಗೈವುದಿದು ಹದ
ನೆಲೆ ದಯಾಂಬುಧಿ ಕೇಳೆನಲು ನೃಪ
ತಿಲಕನುಚಿತದ ಬಿನ್ನಹಕೆ ಮನವೊಲಿದು ಹರಿ ನುಡಿದ ೮೪

ಕೊಳುಗೊಡೆಗೆ ತಪ್ಪೇನು ವಸುವಿನ
ಕುಲ ವಿರಾಟನು ಇಂದು ವಂಶಾ
ವಳಿಯವರು ನೀವಾಭಿಜಾತ್ಯದೊಳಿಲ್ಲ ಹಳಿವುಗಳು
ಒಳುನುಡಿಗಳಲಿ ದೈವ ಶಕುನಾ
ವಳಿಗಳಾದೊಡೆ ಹರುಷದಲಿ ಮಂ
ಗಳ ಮುಹೂರ್ತವ ಮಾಡಿಯೆಂದನು ಕೃಷ್ಣ ನಸುನಗುತ ೮೫

ಒಸಗೆಯಲಿ ನಿಸ್ಸಾಳ ತತಿ ಗ
ರ್ಜಿಸಿದವಖಿಳ ಜನಂಗಳುತ್ಸಾ
ಹಿಸಿತು ಕನ್ಯಾವರಣವಾಯಿತು ವೈದಿಕೋಕ್ತಿಯಲಿ
ಎಸೆಯಲಭಿಮನ್ಯುವನು ಸಿಂಗಾ
ರಿಸಿತು ಯದು ಪಾಂಚಾಲ ಮತ್ಸ್ಯ
ಪ್ರಸರದಲಿ ಮೆಟ್ಟಕ್ಕಿ ಜೀರಿಗೆ ಬೆಲ್ಲವನುವಾಯ್ತು ೮೬

ವರ ಮುಹೂರ್ತದ ಘಳಿಗೆವಟ್ಟಲ
ಭರಿತದೊಳು ಪುಣ್ಯಾಹವದ ವಿ
ಸ್ತರದಲಕ್ಷತೆ ತಳಿದು ತಂದರು ವಿಮಲ ಮಂಟಪಕೆ
ಪರಮ ಋಷಿಗಳ ಹೋಮದಲಿ ಶಿಖಿ
ವರನ ಬಲಗೊಂಡರು ಕುಮಾರಿಯ
ವರಿಸೆ ವೈದಿಕದಿಂದ ಬಂದಳು ವರನ ವಾಮದಲಿ ೮೭

ವಿಭವವೈವಡಿಯಾಗೆ ಸದ್ವಿಜ
ಸಭೆಯನಾರಾಧಿಸಿದನವನೀ
ವಿಭುಗಳಿತ್ತರು ಮುಯ್ಯ ಳುಡುಗೊರೆ ರತ್ನ ಭೂಷಣವ
ಅಭವ ಸನ್ನಿಭ ವೀರನಾಗೆಂ
ದಿಭಗಮನೆಯರು ಕೃಷ್ಣನರಸಿಯ
ರಭಿಜನಾಮಲ ತಿಲಕನನು ಹರಸಿದರು ಹರುಷದಲಿ ೮೮

ಇದು ಶುಭೌಘದ ಗರುಡಿ ಬಹು ಸಂ
ಪದದ ನೆಲೆಮನೆ ಸೊಂಪಿನಾಗರ
ವಿದು ಪರಾನಂದ ಪ್ರವಾಹದ ಜನ್ಮಭೂಮಿಯಿದು
ಮುದದ ಕೇಳೀಸ್ಥಾನ ವಿಮಲಾ
ಭ್ಯುದಯದೋಲಗಶಾಲೆ ಲಕ್ಷ್ಮೀ
ಸದನವೆನೆ ರಂಜಿಸಿದುದಭಿಮನ್ಯುವಿನ ವೈವಾಹ ೮೯

ಯಾದವರು ಪಾಂಚಾಲ ಮತ್ಸ್ಯರು
ಮೇದಿನೀಪತಿ ಪಾಂಡು ಸೋಮಕ
ರಾದಿಯಾದನ್ವಯವನಗಣಿತ ಬಂಧು ಬಳಗವನು
ಆದರಿಸಿದನು ವಿನಯದಲಿ ವಿ
ತ್ತಾದಿ ಸತ್ಕಾರದಲಿ ದಣಿದುದು
ಮೇದಿನೀಜನವವನಿಪನ ಸನ್ಮಾನ ದಾನದಲಿ ೯೦

ವರ ಚತುರ್ಥಿಯೊಳಿರುಳು ಮೆರೆದರು
ಪುರದಲುತ್ಸಾಹದಲಿ ದಂಪತಿ
ವರರು ಭೂಮಿಾಚಾರ ಚಮರದ ಚಾತುರಂಗದಲಿ
ಮರುದಿವಸವವಭೃತವ ನೆರೆ ವಿ
ಸ್ತರಿಸಿದರು ಪನ್ನೀರ ಹೊಂಗೊ
ಪ್ಪರಿಗೆಗಳ ಕುಂಕುಮದ ಘಟವಾಸಕದ ರಚನೆಯಲಿ ೯೧

ಕನಕ ಮಣಿಗಳ ತೊಟ್ಟು ಚಾಜಿಯು
ನನೆಯ ಆದಳಿಕೆಯಲಿ ಮದನನ
ಮೊನೆಯ ಖಾಡಾಖಾಡಿ ಖಾತಿಯರೈದೆ ಹೊಯ್ ಹೊಯ್ದು
ದನುಜಹರನರಸಿಯರು ಕುಂತಿಯ
ತನಯರರಸಿಯರೊಡನೆ ಮತ್ಸ್ಯನ
ವನಿತೆಯರು ಪಾಂಚಾಲಿನಿಯರೋಕುಳಿಯನಾಡಿದರು ೮೨

ಧರಣಿ ನೆನೆದುದು ಗಂಧ ರಸ ಕ
ಸ್ತುರಿಯ ಪನ್ನೀರುಗಳ ಹೊನಲೊಡೆ
ವೆರಸಿ ದೆಸೆ ಕಂಪಿಟ್ಟುದಂಬುಧಿ ನವ ತುಷಾರದಲಿ
ತರಣಿ ಪರಿಮಳಿಸಿದನು ಪವನನ
ಸುರಭಿತನವಚ್ಚರಿಯೆ ಗಗನದ
ಪರಮ ಸೌರಭಕಲಸಿ ಕೊಂಡುದು ಸಕಲ ಸುರಕುಲವ ೮೩

ಬಳುವಳಿಯ ನಿಖಿಳಾವನೀ ಮಂ
ಡಲವನನುಪಮ ಕೋಶ ವರ್ಗದ
ಲಲನೆಯರ ಗಜ ವಾಜಿ ರಥ ಪಾದಾತಿ ಗೋವ್ರಜವ
ಅಳಿಯಗಿತ್ತು ವಿರಾಟ ನೃಪ ಯದು
ಕುಲವನಾ ಪಾಂಚಾಲ ಚೈದ್ಯಾ
ವಳಿಯನುತ್ತಮ ವಸ್ತು ವಾಹನದಿಂದ ಮನ್ನಿಸಿದ ೮೪

ಆದುದಭಿಮನ್ಯುವಿನ ಮದುವೆ ಮಂ
ಹಾ ದಯಾಂಬುಧಿ ಕೃಷ್ಣ ರಾಯನ
ಪಾದ ದರುಶವಾಗಲಿಮ್ಮಡಿಸಿತ್ತು ಸಮ್ಮುದಯು
ಮೇದಿನಿಯ ನಾವೊತ್ತೆಯಿಟ್ಟೆವು
ಕಾದುಕೊಂಡೆವು ಸತ್ಯವನು ಮೇ
ಲಾದುದನು ನೀ ಕರುಣಿಸೆಂದರು ವೀರ ನರಯಣನ ೮೫

ಇತಿ ಶ್ರೀಮದಚಿಂತ್ಯ ಮಹಿಮ ಗದುಗಿನ ವೀರನಾರಾಯಣ ಚರಣಾರವಿಂದ
ಮಕರಂದ ಮಧುಪಾನ ಪರಿಪುಷ್ಟ ವಚಃ ಷಟ್ಪದೀ ನಿಕಾಯ
ಶ್ರೀಮತ್ಕುಮಾರವ್ಯಾಸ ಯೋಗೀಂದ್ರ ವಿರಚಿತಮಪ್ಪ
ಕರ್ಣಾಟ ಭಾರತ ಕಥಾಮಂಜರಿಯೊಳ್
ವಿರಾಟಪರ್ವಂ ಸಮಾಪ್ತಮಾದುದು.

# ಉದ್ಯೋಗ ಪರ್ವ

## ಮೊದಲನೆಯ ಸಂಧಿ

ಸೂ. ನಂಬಿದವರಿಗೆ ತನ್ನ ತೆತ್ತಿಹ
ನೆಂಬ ಬಿರುದನು ಮೆರೆದು ಭಕ್ತಕು
ಟುಂಬಿ ಸಾರಥಿಯಾದನೊಲಿದರ್ಜುನಗೆ ಮುರವೈರಿ

ಕೇಳು ಜನಮೇಜಯ ಧರಿತ್ರೀ
ಪಾಲ ಕುಂತೀ ತನಯರುನ್ನತ
ದೇಳಿಗೆಯನೇನೆಂಬೆನೈ ಕಾರುಣ್ಯ ಸಿಂಧುವಲ
ಶ್ರೀಲತಾಂಗಿಯ ರಮಣನಿನಿಬರೊ
ಳಾಳೊಡೆಯನೆಂದೆಂಬ ಭೇದವ
ಬೀಳುಕೊಟ್ಟೇ ನಡೆಸುತಿರ್ದನು ತನ್ನ ಮೈದುನರ ೧

ಹೋಲಿಕೆಗೆ ಬಾಯ್ಬಿಡುವ ವೇದದ
ತಾಳಿಗೆಗಳೊಣಗಿದವು ಘನತೆಯ
ಮೇಲೆ ತನ್ನದು ಘನತೆಯೆಂಬುದನತ್ತ ಬೇರಿರಿಸಿ
ಕಾಲಿಗೆರಗುವನಾ ಯುಧಿಷ್ಠಿರ
ನೇಳಲೊಡನೇಳುವನು ಕೃಷ್ಣನ
ಲೀಲೆಯನುಪಮವೆಂದು ವೈಶಂಪಾಯ ಮುನಿ ನುಡಿದ ೨

ಒಂದು ದಿನ ವೊಡ್ಡೋಲಗಕ್ಕೈ
ತಂದನಖಿಳಾವನಿಯ ರಾಯರ
ಮಂದಿಯಲಿ ಮುರವೈರಿ ನುಡಿದನು ರಾಜಮಂತ್ರವನು
ಹಿಂದೆ ಜೂಜಿನ ವಿಲಗದಲಿ ಮನ
ನೊಂದರಿವರಡವಿಯಲಿ ಧರೆಗಿ
ನ್ನೆಂದು ಸೇರುವರೇನು ಹದನೀ ಪಾಂಡು ತನಯರಿಗೆ ೩

ದೇವ ನೀನೇ ಬಲ್ಲೆ ನಿಮ್ಮಯ
ಭಾವನೀ ಧರ್ಮಜನ ಬಹುಮಾ
ನಾವಮಾನದ ಹೊರಿಗೆ ನಿನ್ನದು ಹರಣ ಭರಣವನು
ನೀವು ಬಲ್ಲಿರಿ ಕಾಲಲೊದೆದುದ
ನೋವಿ ತಲೆಯಲಿ ಹೊತ್ತು ನಡೆಸುವ
ಡಾವು ಬಲ್ಲೆವು ಜೀಯಯೆಂದನು ದ್ರುಪದ ಭೂಪಾಲ ೪

ಕಳುಹುವುದು ಶಿಷ್ಟರನು ಧರಣೀ
ತಳವ ಬೇಡಿಸುವಲ್ಲಿ ಸಾಮವ
ಬಳಸುವುದು ಭೀಷ್ಮಾದಿಗಳ ಕಟ್ಟುವುದು ವಿನಯದಲಿ
ತಿಳಿವುದಾತನ ನೆಲೆಯನಲ್ಲಿಂ
ಬಳಿಕ ನಯವಿಲ್ಲೆಂದಡಾಹವ
ದೊಳಗೆ ಕೈದೋರುವುದು ಮತವೆಂದನು ಮುರಧ್ವಂಸಿ ೫

ಎಲೆ ಮರುಳೆ ಮುರವೈರಿ ಕೌರವ
ರೊಲಿಯರೀ ಹದನನು ಯುಧಿಷ್ಠಿರ
ನಿಳೆಯ ಸೋತನು ಜೂಜುಗಾರರ ಮೇರೆ ಮಾರ್ಗದಲಿ
ನೆಲನನೊಡ್ಡಲಿ ಮತ್ತೆ ಗೆಲಿದೇ
ಕೊಳಲಿ ಮೇಣ್ ಕಾದಲಿ ಸುಯೋಧನ
ನೊಳಗೆ ತಪ್ಪಿಲ್ಲೆಂದು ನುಡಿದನು ನಗುತ ಬಲರಾಮ ೬

ಲೇಸನಾಡಿದೆ ರಾಮ ಬಳಿಕೀ
ನಾ ಸುಯೋಧನನಧಮನೇ ನೀ
ನೀಸನೇರಿಸಿಕೊಂಡು ನುಡಿವಾ ಮತ್ತೆ ಕೆಲಬರಲಿ
ಆಸುರದ ಕತ್ತಲೆಯ ಬೀಡು ಮ
ಹಾ ಸಹಾಯವು ಗೂಗೆಗಳಿಗುಪ
ಹಾಸವೇ ದಿಟವೆಂದು ಸಾತ್ಯಕಿ ನಗುತ ಖಚಿತಿಗೊಂಡ ೭

ಬಲನ ಮಾತೇನಿವರ ಭಾಗ್ಯದ
ನೆಲೆಯೆ ಘಡ ಕೌರವರ ಶತಕದ
ತಲೆಗೆ ತಾ ವೀಳೆಯವನೆಲೆ ಕುಂತೀ ಕುಮಾರಕನೆ
ನೆಲನನಲಗಿನ ಮೊನೆಯಲಲ್ಲದೆ
ಮೆಲುನುಡಿಯ ಸಾಮದಲಿ ಗೀಮದ
ಲಿಳೆಯ ಕೊಂಬರೆ ಧರೆಯೊಳಧಿಕ ಕ್ಷತ್ರಿಯಾತ್ಮಜರು ೮

ಕಾದಿ ಸಾವುದು ಮೇಣು ರಿಪು ಭಟ
ನಾದವನ ನೆತ್ತಿಯಲಿ ಸಬಳವ
ಕೋದು ಕೊಂಬುದು ನೆಲನನಿದು ಕ್ಷತ್ರಿಯರ ಮಕ್ಕಳಿಗೆ
ಮೇದಿನಿಯ ಬೇಡುವೊಡೆ ಮಟ್ಟೆಯ
ತೇದು ಹಣೆಯಲಿ ಬಡಿದು ದರ್ಭೆಯ
ಕೋದು ಸ್ವಸ್ತಿಯ ಹಾಕುವುದು ಹಾರುವರ ಮಕ್ಕಳಿಗೆ ೯

ಎನಲು ನಕ್ಕನು ದ್ರುಪದನಿದು ನ
ಮ್ಮನುಮತವು ಕಾಳಗದೊಳಲಗಿನ
ಮೊನೆಯೊಳಲ್ಲದೆ ಮಹಿಯ ಕೊಡುವರೆ ಕೌರವೇಶ್ವರರು
ವಿನುತ ಸಾತ್ಯಕಿ ಕೇಳು ನೆಲೆಯಿದು
ಜನಪರನ್ನಿಬರೊಬ್ಬ ದೂತನ
ವಿನಯದಲಿ ಕಳುಹುವುದು ಸಾಮವ ಬೆಳೆಸಿ ನೋಡುವುದು ೧೦

ವಿಹಿತವಿದು ಪಾಂಚಾಲಕನ ಮತ
ವಹುದು ರಾಯರಿಗಟ್ಟುವುದು ವಿ
ಗ್ರಹವ ಸೂಚಿಸಿ ಕರೆದುಕೊಂಬುದು ಬೇಹ ಭೂಭುಜರ
ಬಹಳ ಸಂವರಣೆಯಲಿ ರಣ ಸ
ನ್ನಿಹಿತವಾಗಿಹುದಿತ್ತಲತ್ತಲು
ಮಹಿಯ ಬೇಡಿಸ ಕಳುಹುವುದು ತೆರನೆಂದನಸುರಾರಿ ೧೧

ಮದುವೆಗೋಸುಗ ಬಂದೆವಾವಿ
ನ್ನಿದರ ಮೇಲಣ ರಾಜಕಾರ್ಯದ
ಹದನನಟ್ಟುವುದರುಹುವುದು ಬಹೆವಾವು ಕರೆಸಿದೊಡೆ
ಹದುಳವಿಹುದೆಂದಸುರರಿಪು ಕರು
ಣದಲಿ ಕುಂತೀಸುತರನಾ ದ್ರೌ
ಪದಿಯನಭಿಮನ್ಯುವ ಸುಭದ್ರೆಯ ಹರಸಿ ಬೀಳ್ಕೊಂಡ ೧೨

ಕೂಡಿಕೊಂಡಿಹುದಿವರ ಮಕ್ಕಳ
ನೋಡಲಾಗದು ಹೆಚ್ಚು ಕುಂದನು
ನಾಡ ಬೇಡಲು ಬುದ್ಧಿವಂತರನಲ್ಲಿಗಟ್ಟುವುದು
ಕೂಡೆ ಶೋಧಿಸಿ ಸೆಜ್ಜೆಯಲಿ ಮೈ
ಗೂಡಿಯಾರೋಗಣೆಗಳಲಿ ಕೈ
ಮಾಡಿ ಬೆರೆಸಿಹುದೆಂದು ದ್ರುಪದ ವಿರಾಟರಿಗೆ ನುಡಿದ ೧೩

ಎಂದು ಕಳುಹಿಸಿಕೊಂಡು ನಾರೀ
ವೃಂದ ಯದುಕುಲ ಸಹಿತ ದೇವ ಮು
ಕುಂದ ಬಿಜಯಂಗೈದು ಹೊಕ್ಕನು ದ್ವಾರಕಾಪುರವ
ಒಂದು ದಿನದಾಲೋಚನೆಯ ನೆಲೆ
ಯಿಂದ ಕರೆದು ಪುರೋಹಿತನ ನಲ
ವಿಂದ ಕಳುಹಿದ ದ್ರುಪದನಾ ಕೌರವನ ಪಟ್ಟಣಕೆ ೧೪

ಓಲೆಯುಡುಗೊರೆ ಸಹಿತ ಧರಣೀ
ಪಾಲರಿಗೆ ಪಾಂಡವರು ಶಿಷ್ಟರು
ಕಾಳಗಕೆ ನೆರವಾಗಲೋಸುಗ ಕರೆದರಲ್ಲಲ್ಲಿ
ಆಳು ಕುದುರೆಯ ಕೂಡಿ ದೆಸೆಗಳ
ಮೂಲೆಯರಸುಗಳೆಲ್ಲ ಕುರು ಭೂ
ಪಾಲನಲ್ಲಿಗೆ ಕೆಲರು ಕೆಲಬರು ಪಾಂಡು ತನಯರಿಗೆ ೧೫

ಧರಣಿಯೆಡೆಗೆಡೆ ರಾಯ ಮೋಹರ
ತೆರಳಿತಿಬ್ಬರು ರಾಯರಿಗೆ ಕೈ
ನೆರವುದೋರಲು ಕವಿದು ಬಂದುದು ಕಾಣೆನಳತೆಗಳ
ಅರಿಗಳತಿ ಹೆಚ್ಚಿದರು ಮೈಮರೆ
ದಿರಲು ಧರಣಿಗಮಾನ್ಯವಹುದಿ
ನ್ನುರವಣಿಸಬೇಕೆಂದು ದುರ್ಯೋಧನನು ಚಿಂತಿಸಿದ ೧೬

ಹದನನಾಪ್ತರಿಗರುಹಿದನು ಗು
ಪ್ತದಲಿ ಕೃಷ್ಣನನೊಳಗು ಮಾಡುವ
ಮುದದಿ ಬಂದನು ಕೌರವೇಂದ್ರನು ದ್ವಾರಕಾಪುರಿಗೆ
ಇದನು ಭೇದಿಸಿ ಬೇಹಿನವರರು
ಹಿದರು ಕುಂತೀ ಸುತರಿಗತಿ ವೇ
ಗದಲಿ ಧರ್ಮಜನಳುಕಿ ಕಳುಹಿದನಿಂದ್ರನಂದನನ ೧೭

ಬೀಳುಕೊಂಡರ್ಜುನನು ಲಕ್ಷ್ಮೀ
ಲೋಲನಲ್ಲಿಗೆ ಬರುತ ಕಂಡನು
ಲೀಲೆಯಲಿ ನರ್ತಿಸುವ ನವಿಲನು ಬನದೊಳಡ ಹಾಯ್ದು
ಮೇಲೆ ಹಂಗನ ಬಲನ ಹರಿಣೀ
ಜಾಲದೆಡನನು ತಿದ್ದುವಳಿಯ ವಿ
ಶಾಲ ಶಕುನವನಾಲಿಸುತ ಹರುಷದಲಿ ನಡೆತಂದ ೧೮

ಮೊರೆದು ವಿಂಗೆ ತಲೆಯೊತ್ತಿ ತೆರೆ ಮೈ
ಮುರಿದು ಘುಳುಘುಳು ಘುಳಿತ ಘನ ನಿ
ಷ್ಠುರ ನಿನಾದದ ಗಜರು ಗಾಢಿಸಿ ಬಹಳ ಲಹರಿಯಲಿ
ತೆರೆ ತೆರೆಯ ತಿವಿದೆದ್ದು ಗಗನವ
ನಿರದೊದೆದು ವಿತಳಕ್ಕೆ ಸುಳಿ ಭೋಂ
ಕರಿಸಿ ಸಾಗರನುಬ್ಬುಗವಳವ ಕೊಂಡವೊಲು ಕುಣಿದ ೧೯

ಪೂತು ಮಝು ಸಾಗರನ ಬಿಗುಹು ಮ
ಹಾತಿಶಯವಷ್ಟೆ ಯಿವನನಂಜಿಸ
ಲಾತಗಳು ಮರ್ಮಿಗಳು ಬೆಟ್ಟವನೊಟ್ಟಿ ನೆತ್ತಿಯಲಿ
ಈತ ನಮಗಂಜುವನೆಯೆನುತ ವಿ
ಧೂತರಿಪು ಬಲ ಮುಂದೆ ಕಂಡನು
ಪಾತಕದ ಹೆಡತಲೆಯ ದಡಿಯನು ದ್ವಾರಕಾಪುರವ ೨೦

ಅಟ್ಟಿ ಬಳಲಿದ ಶ್ರುತಿಗೆ ಹರಿ ಮೈ
ಗೊಟ್ಟ ಠಾವಿದು ತಾಪಸರು ಜಪ
ಗುಟ್ಟಿ ಜಿನುಗಿದಡವರನುಜ್ಜೀವಿಸಿದ ಠಾವಿದಲ
ಹುಟ್ಟು ಸಾವಿನ ವಿಲಗ ಜೀವರ
ಬಿಟ್ಟ ಠಾವಿದು ಕಾಲ ಕರ್ಮದ
ಘಟ್ಟು ಮುರಿವಡೆದೋಡಿದೆಡೆಯಿದು ಶಿವ ಶಿವಾಯೆಂದ ೨೧

ಪರಮ ನಾರಾಯಣ ಪರಾಯಣ
ನಿರವೆ ಪರತರವೆಂದು ಮುರಹರ
ಬರೆದ ಠಾವಿದು ಮುಕುತಿಯಿದರೊಳು ಕರತಳಾಮಲಕ
ಭರಿತ ಬೊಮ್ಮದ ಸುತ್ತುಗೊಳಸನು
ಸರಿದ ಠಾವೀ ತರ್ಕ ತಂತ್ರದ
ತರದ ಯುಕುತಿಗೆ ತೊಳಸುಗೊಳ್ಳದ ಠಾವಲಾಯೆಂದ ೨೨

ಹೊಗಳುತರ್ಜುನನಸುರರಿಪುವಿನ
ನಗರಿಗೈತಂದರಮನೆಯ ಹೊಗ
ಲಗಧರನು ಮಂಚದಲಿ ನಿದ್ರಾಂಗನೆಯ ಕೇಳಿಯಲಿ
ಸೊಗಸು ವಿಂಗಲರೆದೆರೆದ ಲೋಚನ
ಯುಗಳ ಸಮತಳಿಸಿದ ಸುಷುಪ್ತಿಯ
ಬಿಗುಹಿನಲಿ ಪರಮಾತ್ಮನೆಸೆದನು ಭ್ರಾಂತಿಯೋಗದಲಿ ೨೩

ಮುಕುಳಕರಪುಟನಾಗಿ ಭಯಭರ
ಭಕುತಿಯಲಿ ಕಲಿಪಾರ್ಥನಬುಜಾಂ
ಬಕನನೆಬ್ಬಿಸಲಮ್ಮದೊಯ್ಯನೆ ಚರಣ ಸೀಮೆಯಲಿ
ಅಕುಟಿಲನು ಸಾರಿದನು ಬಳಿಕೀ
ವಿಕಳ ದುರ್ಯೋಧನನು ನಿಗಮ
ಪ್ರಕರ ಮೌಳಿಯ ಮೌಳಿಯತ್ತಲು ಸಾರ್ದು ಮಂಡಿಸಿದ ೨೪

ಇರಲು ನಿಮಿಷದೊಳಸುರರಿಪು ಮೈ
ಮುರಿದನುಪ್ಪವಡಿಸಿದನಿದಿರಲಿ
ಸುರಪತಿಯ ಸೂನುವನು ಕಂಡನು ನಗೆಯ ಮೊನೆ ಮಿಸುಗೆ
ತಿರುಗಿ ನೋಡುತ ತಲೆಯ ದೆಸೆಯಲಿ
ಕುರುಕುಲೇಶನನತಿ ವಿಕಾರತೆ
ಯಿರವ ಕಂಡನಿದೇನಿದೇನೆಂದಸುರರಿಪು ನುಡಿದ ೨೫

ವೀಳಯವ ತಾ ಕೊಂಡು ಕುರು ಭೂ
ಪಾಲ ಪಾರ್ಥರಿಗಿತ್ತು ಲಕ್ಷ್ಮೀ
ಲೋಲ ನುಡಿದನು ಉಭಯ ರಾಯರಿಗಿತ್ತ ಬರವೇನು
ಹೇಳಿರೈ ಬರವಘಟಿತವಲಾ
ಮೇಳವೇ ಕಡುಮಾನ್ಯರೆವಿಮ್ಮಾ
ಯಾಲಯಕೆ ಬರಲೇನೆನಲು ಕುರು ರಾಯನಿಂತೆಂದ ೨೬

ಯಾದವರು ಕೌರವರೊಳುಂಟೇ
ಭೇದವಾವಯಿತಂದರೆಮ್ಮೊಳ
ಗಾದ ಲಾಘವವೇನು ನಿಮ್ಮವೊಲಾರು ಸಖರೆಮಗೆ
ಸೋದರರ ಮನ ಕದಡಿದವು ದಾ
ಯಾದ ವಿಷಯದಲಿನ್ನು ಧರಣಿಗೆ
ಕಾದುವೆವು ನಮ್ಮಿಬ್ಬರಿಗೆ ಬಲವಾಗಬೇಕೆಂದ ೨೭

ಕೌರವೇಶ್ವರ ಕೇಳು ಧರಣೀ
ನಾರಿಯನಿಬರಿಗೊಕ್ಕತನವಿ
ದ್ದಾರ ಮೆಚ್ಚಿದಳಾರ ಸಂಗಡ ವುರಿಯ ಹಾಯಿದಳು
ಭೂರಿ ಮಮಕಾರದಲಿ ನೃಪರು ವಿ
ಚಾರಿಸದೆ ಧರೆಯೆಮ್ಮದೆಂದೇ
ನಾರಕದ ಸಾಮ್ರಾಜ್ಯಕೈದುವರೆಂದು ಹರಿ ನುಡಿದ ೨೮

ನಾಡಿಗೋಸುಗ ಸೋದರರು ಹೊ
ಯ್ದಾಡಿ ಹರಿಹಂಚಾದರೆಂಬುದ
ನಾಡದಿಹುದೇ ಲೋಕ ಕಮಲಜನುಸಿರಿಹನ್ನೆಬರ
ಬೇಡಕಟ ನಿಮ್ಮೊಳಗೆ ನೀವ್ ಕೈ
ಗೂಡಿ ಬದುಕುವುದೊಳ್ಳಿತಾವ್ ನೆರೆ
ನೋಡಿ ಸಂತಸಬಡುವೆವೆಂದನು ರುಕ್ಮಿಣೀರಮಣ ೨೯

ತಗರೆರಡ ಖತಿಗೊಳಿಸಿ ಬಲುಗಾ
ಳಗವ ನೋಡುವರಂತೆ ನಿಮ್ಮನು
ತೆಗೆತೆಗೆದು ಕಲಿಮಾಡಿ ಬಿಡುವರು ಖುಲ್ಲರಾದವರು
ನಗುತ ಹೆರೆ ಹಿಂಗುವರು ಪಿಸುಣರು
ಬಗುಳಿದವದಿರು ಬಳಿಕ ಕಡೆಯಲಿ
ಹೊಗುವಿರೈ ನೀವಿಬ್ಬರಪಕೀರಿತಿಯ ಹಾದರಕೆ ೩೦

ಅವಧರಿಸು ಮುರವೈರಿ ಧರ್ಮ
ಶ್ರವಣಕೋಸುಗ ಬಾರೆವಾವ್ ಪಾ
ರ್ಥಿವರ ಪಂಥದ ಕದನ ವಿದ್ಯಾಕಾಮುವೆಮಗಾಯ್ತು
ನಿವಗೆ ನಾವಿತ್ತಂಡ ಸರಿ ಪಾಂ
ಡವರಿಗೆಯು ಮನದೊಲವಿನಲಿ ಕೌ
ರವರಿಗೆಯು ಬಲವಾಗಬೇಕೆಂದನು ಸುಯೋಧನನು ೩೧

ಎನಲು ತಂಬುಲ ಸೂಸೆ ನಗುತ
ರ್ಜುನನ ನೋಡಿದನಸುರರಿಪು ನಿ
ನ್ನನುವ ಹೇಳೈ ಪಾರ್ಥಯೆನೆ ತಲೆವಾಗಿ ಕೈಮುಗಿದು
ಎನಗೆ ಮತ ಬೇರೇನು ದುರಿಯೋ
ಧನನ ಮತವೇ ನನ್ನ ಮತ ನಿ
ಮ್ಮನುನಯವೆ ನಯುವೆಮ್ಮೊಳೀ ಸ್ವಾತಂತ್ರ್ಯವಿಲ್ಲೆಂದ ೩೨

ಆದಡಾವಿಹೆವೊಂದು ಕಡೆಯಲಿ
ಕಾದುವವರಾವಲ್ಲ ಬಲನೊಳು
ಯಾದವರು ಕೃತವರ್ಮ ನಾರಾಯಣ ಮಹಾಸೇನೆ
ಕಾದುವವರಿವರೊಂದು ದೆಸೆಯೆರ
ಡಾದುದಿವರೊಳು ಮೆಚ್ಚಿದುದ ನೀ
ನಾದರಿಸಿ ವರಿಸೆಂದು ಪಾರ್ಥಂಗಸುರರಿಪು ನುಡಿದ ೩೩

ಮುರಮಥನ ಚಿತ್ತೈಸು ಕೌರವ
ರರಸನತಿ ಸಿರಿವಂತನಿದ ಸಂ
ತರಿಸಲಾಪನು ಬಹಳ ಯಾದವ ಸೈನ್ಯ ಸಾಗರವ
ಧರೆಯ ಸಂಪದವಿಲ್ಲದಡವಿಯ
ತಿರುಕರಾವಿನಿಬರನು ಸಲೆ ಸಂ
ತರಿಸಲಾಪೆವೆ ಕೃಷ್ಣ ನೀನೇ ಸಾಕು ನಮಗೆಂದ ೩೪

ನಾವು ಬಡವರು ಬಡವರಿಗೆ ದಿಟ
ನೀವೆ ಬೆಂಬಲವೆಂಬ ಬಿರುದನು
ದೇವ ಕೇಳಿದು ಬಲ್ಲೆವೆಂದನು ಪಾರ್ಥ ಕೈಮುಗಿದು
ನೀವು ಸುಖದಲಿ ಪಾಂಡವರನು
ಜ್ಜೀವಿಸುವುದೆಮಗುಳಿದ ಯದು ಭೂ
ಪಾವಳಿಯ ಕೃಪೆ ಮಾಡಬೇಕೆಂದನು ಸುಯೋಧನನು ೩೫

ಮರೆಯ ಮಾತುಗಳೇಕೆ ಪಾಂಡವ
ರೆರಕ ನಿಮ್ಮಲಿ ಹಿರಿದು ಪಾರ್ಥಗೆ
ಮರುಗುವಿರಿ ಹಿರಿದಾಗಿ ಮನಮೆಚ್ಚುಂಟು ನಿಮ್ಮೊಳಗೆ
ಉರುವ ಕಾರ್ಯಕೆ ಕಡೆಯಲಾವೇ
ಹೊರಗು ಸಾಕಂತಿರಲಿ ನೀ ಹೊ
ಕ್ಕಿರಿಯಲಾಗದು ಕೃಷ್ಣಯೆಂದನು ಕೌರವರ ರಾಯ ೩೬

ಮೊಲೆಯನುಂಬಂದೊಬ್ಬ ದನುಜೆಯ
ಹಿಳಿದೆವೊದೆದೆವು ಶಕಟನನು ತನು
ಗಳೆದೆ ಧೇನುಕ ವತ್ಸ ನಗ ಹಯ ವೃಷಭ ಭುಜಗರನು
ಬಲುಗಜವ ಮಲ್ಲರನು ಮಾವನ
ನೆಳೆದು ಮಾಗಧ ಬಲವ ಬರಿ ಕೈ
ದಳಿಸಿದೆವು ದಾನವರ ಹಿಂಡಿದೆವಾಹವಾಗ್ರದಲಿ ೩೭

ಕಾಲಯವನನ ದಂತವಕ್ತ್ರನ
ಸೀಳಿದೆವು ಮುರ ನರಕ ಕುಂಭನ
ಸಾಲುವನ ಪೌಂಡ್ರಕನ ಡಿಬಿಕನ ಹಂಸ ಮೋಹರವ
ಕಾಳಗದೊಳಿಟ್ಟೊರಸಿ ಬಾಣನ
ತೋಳ ತರಿವಂದಾಯ್ತು ಧಾಳಾ
ಧೂಳಿಯಾಹವವಿಂದುಮೌಳಿಯೊಳೆಮಗೆ ಮುಳಿಸಿನಲಿ ೩೮

ಹಸುಳೆತನ ಮೊದಲಾಗಿ ಬಲು ರ
ಕ್ಕಸರೊಡನೆ ತಲೆಯೊತ್ತಿ ರಣದಾ
ಯಸವ ಸೈರಿಸಿ ಹೊಯ್ದು ಕೊಂದೆವು ಕೋಟಿ ದಾನವರ
ಮಿಸುಕಲಾರೆವು ಚಕ್ರ ಭಂಡಾ
ರಿಸಿತು ಮುನ್ನಿನ ಜವ್ವನದ ಬಲ
ಮಸುಳಿತಾವುಂಡಾಡಿ ಭಟ್ಟರು ನೃಪತಿ ಕೇಳೆಂದ ೩೯

ಎನಲು ಕರ ಲೇಸೆಂದು ದುರಿಯೋ
ಧನನು ಕಳುಹಿಸಿಕೊಂಡು ಬಲರಾ
ಮನನು ಕೃತವರ್ಮನನು ಕಂಡನು ನಿಖಿಳ ಯಾದವರ
ವಿನುತಬಲ ಸಹಿತೊಲವಿನಲಿ ಹ
ಸ್ತಿನಪುರಿಗೆ ಹಾಯಿದನು ಬಳಿಕೀ
ದನುಜರಿಪು ನಸು ನಗುತಲಿಂತೆಂದನು ಧನಂಜಯಗೆ ೪೦

ಸುರಗಿಯನು ಬಿಸುಟೊರೆಯನಂಗೀ
ಕರಿಸಿದಂದದಲಾಹವದ ಧುರ
ಭರದ ಯಾದವ ಬಲವನೊಲ್ಲದೆ ಮಂದ ಮತಿಯಾಗಿ
ಮರುಳೆ ಕಾದದ ಕಟ್ಟದೆಮ್ಮನು
ಬರಿದೆ ಬಯಸಿದೆಯಿದನು ಕೇಳ್ದೊಡೆ
ಮರುಳುಗುಟ್ಟದೆ ಮಾಣ್ಬರೇ ನಿಮ್ಮಣ್ಣ ತಮ್ಮದಿರು. ೪೧

ಎನಲು ಗಹಗಹಿಸಿದನಿದಾರಿಗೆ
ಮನವ ಕದ್ದಾಡುವಿರಿ ನಿಜ ಶಿ
ಷ್ಯನಲಿ ನಾಟಕದಿಂದ್ರಜಾಲವೆ ನಿಮ್ಮ ಗರುಡಿಯಲಿ
ಎನಗೆ ಶ್ರಮವುಂಟದು ನಿಲಲಿ ಯೆ
ನ್ನನುಜರಗ್ರಜರರಿಯರೇ ನಿ
ಮ್ಮನುಪಮಿತ ಮಹಿಮಾಪಲಂಬವನೆಂದನಾ ಪಾರ್ಥ ೪೨

ನಾವು ಬರಿಗೈಯವರು ಬರಲೆಮ
ಗಾವುದಲ್ಲಿಯ ಕೆಲಸ ಉಂಡುಂ
ಡಾವು ಕುಳ್ಳಿಹರಲ್ಲ ಹಂಗಾಗಿರೆವು ಕದನದಲಿ
ದೇವನೆಂದೇ ನೀವು ಬಗೆವಿರಿ
ದೇವತನ ನಮ್ಮಲ್ಲಿ ಲವವಿ
ಲ್ಲಾವು ಬಲ್ಲೆವು ಬಂದು ಮಾಡುವದೇನು ಹೇಳೆಂದ ೪೩

ದೇವ ಮಾತ್ರವೆ ನೀವು ದೇವರ
ದೇವರೊಡೆಯರು ಹೊಗಳುವರೆ ವೇ
ದಾವಳಿಗಳಳವಲ್ಲ ಸಾಕಾ ಮಾತದಂತಿರಲಿ
ನಾವು ಭಕುತರು ಭಕುತ ಭೃತ್ಯರು
ನೀವು ಸಾರಥಿಯಾಗಿ ಭೃತ್ಯನ
ಕಾವುದೆಂದರ್ಜುನನು ಹಣೆ ಚಾಚಿದನು ಹರಿಪದಕೆ ೪೪

ಎನಲು ನಗುತೆತ್ತಿದನು ಸಾರಥಿ
ತನವ ಕೈಕೊಂಡನು ಕೃಪಾಳುವಿ
ನನುನಯವ ನಾನೆತ್ತ ಬಲ್ಲೆನು ಭೃತ್ಯವರ್ಗದಲಿ
ತನಗಹಂಕೃತಿಯಿಲ್ಲ ವೈರೋ
ಚನಿಯ ಪಡಿಹಾರಿಕೆ ಕಿರೀಟಿಯ
ಮನೆಯ ಬಂಡಿಯ ಬೋವನಾವನು ವೀರನಾರಯಣ ೪೫

## ಎರಡನೆಯ ಸಂಧಿ

ಸೂ. ಬಂದು ಕಂಡನು ಸಂಜಯನು ಯಮ
ನಂದನನನಲ್ಲಿಂದ ಮರಳಿದು
ಬಂದು ಕೌರವ ನೃಪತಿಗರುಹಿದನವರ ಮಾತುಗಳ

ಎಲೆ ಪರೀಕ್ಷಿತ ತನಯ ಕೇಳು
ಮ್ಮಳಿಸಿದನು ಯಮಸೂನು ಮುರರಿಪು
ಫಲುಗುಣಗೆ ಮೈಗೊಡುವನೋ ಕೌರವರಿಗೊಳಗಹನೊ
ತಿಳಿಯಲರಿದೆನುತಿರಲು ಬಲಗ
ಣ್ಣಲುಗಿತಿದಿರೊಳು ಕೈಯ ಗುಡಿಯಲಿ
ಸುಳಿದನೊಬ್ಬನು ಬಹಳ ಮಾರ್ಗಶ್ರಮದ ಭಾರದಲಿ ೧

ಇದಿರುಗೊಳ್ಳೇಳರಸ ಕಟ್ಟಿಸು
ಮುದದಿ ಗುಡಿಯನು ರಣದೊಳಹಿತರ
ಸದೆದೆ ಹೋಗಿನ್ನೇನು ಸರಿಯೇ ಸುರರು ಗಿರರುಗಳು
ಪದವನರಸಿದರಾಳಿಗೊಂಡನು
ಸದಮಲಶ್ರುತಿ ತತಿಯನೆಂಬ
ಗ್ಗದ ಮಹಾ ಪರದೈವ ಬಿಜಯಂಗೈವುತಿದೆಯೆಂದ ೨

ಕಥೆಯೆ ನಿನ್ನೊಡ ಹುಟ್ಟಿದನ ಸಾ
ರಥಿತನವ ಕೈಕೊಂಡನಿನ್ನೀ
ಪೃಥಿವಿ ನಿನ್ನಯ ರಾಣಿವಾಸವು ಚಿಂತೆ ಬೇಡಿದಕೆ
ವ್ಯಥಿತವಾಯಿತು ವೈರಿಬಲ ಸಂ
ಪ್ರಥಿತ ಸಾಹಸನಾದೆ ನೀನೆನೆ
ಶಿಥಿಲ ಸಂಶಯನಂಗಚಿತ್ತವನಿತ್ತನಾತಂಗೆ ೩

ಉಕ್ಕಿ ವಿಸಟಂಬರಿವ ಹರುಷದ
ತೆಕ್ಕೆಯಲಿ ಕೈಗೊಡುವ ನೃಪತಿಗ
ಳಿಕ್ಕಲಿಸೆ ಹೊರವಂಟನರಸನು ಸಕಲದಳ ಸಹಿತ
ಮಿಕ್ಕು ಬರೆ ಬರೆ ಕೃಷ್ಣನನು ಕಂ
ಡೊಕ್ಕನೊಡಲನು ಚರಣದಲಿ ಸಾ
ಕಕ್ಕಜವಿದೇನೆನುತ ನೆಗಹಿದನಂದು ಧರ್ಮಜನ ೪

ಪರಕೆ ಪರತರ ವಸ್ತುವನು ಗೋ
ಚರಿಸಿದೆವಲೈ ಮುನಿಜನಂಗಳ
ವರ ಸಮಾಧಿಗೆ ಸಮಯವಿಲ್ಲದ ದೇವ ನಮಗೊಲಿದೈ
ಕರುಣಿ ಬಿಜಯಂಗೈದೆಯೆನೆ ಮುರ
ಹರನು ನಗುತಿಂತೆಂದ ನಾವೀ
ನರನ ಸಾರಥಿಯಲ್ಲದೆಲ್ಲಿಯ ವಸ್ತು ತಾನೆಂದ ೫

ಬಯಲಿಗೆಮ್ಮನು ನಾಚಿಸದೆ ಪಾ
ಳೆಯಕೆ ನಡೆತಂದಸುರರಿಪು ಸೇ
ನೆಯನು ಕೈವೀಸಿದನು ಬಂದನು ರಾಜಮಂದಿರಕೆ
ನಿಯತವಿತ್ತಲು ಕೇಳು ಜನಮೇ
ಜಯ ಮಹೀಪತಿ ಧರ್ಮಸುತನೋ
ಲೆಯ ಹದನನರಿದಂತೆ ಶಲ್ಯ ನೃಪಾಲ ಹೊರವಂಟ ೬

ಮೇಳವಿಸಿ ಹೊರವಂಟನಗಣಿತ
ದಾಳು ಕುದುರೆಯ ಕೂಡಿ ಬರುತಿರೆ
ಕೇಳಿದನು ಕುರುರಾಯನಾ ಮಾದ್ರಾಧಿಪನ ಬರವ
ಆಳೊಳಗ್ಗಳನದಟ ಶಲ್ಯ ನೃ
ಪಾಲಕನ ತಿರುಹಿದೊಡೆ ಗೆಲುವುದು
ಕಾಳಗವು ನಮಗೆಂದು ನಿಶ್ಚೈಸಿದನು ಮಂತ್ರದಲಿ ೭

ಎಂದಖಿಳ ವಸ್ತುಗಳ ಜೋಡಿಸಿ
ಮುಂದೆ ಪಾಳೆಯ ಬಿಡುವ ಠಾವಿನೊ
ಳಂದು ಮಿಗೆ ಮಾಡಿದನು ಗುಡಿ ಗೂಡಾರ ಚೌಕಿಗೆಯ
ಒಂದು ಯೋಜನದಗಲದಲಿ ಹಯ
ವೃಂದ ಗಜಶಾಲೆಗಳ ಪರುಠವ
ದಿಂದ ರಚಿಸಿದ ಕೂಳು ಖಾಣವನಖಿಳ ಮೋಹರಕೆ ೮

ಬಂದು ಬಿಡುವನ್ನೆಬರ ಮುನ್ನಿನ
ಮಂದಿರವ ಹೊಗುವಂತೆ ಶಲ್ಯನ
ಮಂದಿ ಸಂತೋಷದ ಸಮುದ್ರದಿ ಮೂಡಿ ಮುಳುಗಾಡಿ
ಮುಂದೆ ನಡೆಯಲು ಮತ್ತೆ ಮುನ್ನಿನ
ಚಂದದಿಂ ಮನೆ ಮನೆಗಳನು ಸುಖ
ದಿಂದಿರಲು ರಚಿಸಿದನು ಕುರುಪತಿ ಪಯಣ ಪಯಣದಲಿ ೯

ಆರು ನಯದಲಿ ನಮ್ಮಖಿಳ ದಳ
ಭಾರವನು ಸಲೆ ತಡೆದವನು ಕುರು
ವೀರನೋ ಯಮನಂದನನೊ ಮಿಗಿಲಾಗಿ ಮೆಚ್ಚಿದೆನು
ಆರುಮಾಡಲಿಯವರು ಬಂದರೆ
ಹಾರಲೇಕೆನ್ನೊಡಲ ತೆರುವೆನು
ವೀರ ಮೈದೋರಲಿಯೆನುತ ಹೊಯಿಸಿದನು ಡಂಗುರವ ೧೦

ನಗುತ ಕೌರವ ರಾಯನಿವರೋ
ಲಗಕೆ ಬರಲಿದಿರೆದ್ದು ಮುದದಲಿ
ತೆಗೆದು ಬಿಗಿಯಪ್ಪಿದನು ಕುಶಲವನ್ನೆಯ್ದೆ ಬೆಸಗೊಂಡ
ಮಗನೆ ನೀನೇ ರಚಿಸಿದಾತನು
ಬಗೆ ದಣಿಯೆ ಬೇಡುವುದು ತಾ ಹಂ
ಗಿಗನು ನಿನಗೆನೆ ಮಾವ ಬಿನ್ನಹ ಮರಳಿ ನೀವೆಂದ ೧೧

ಎನಗೆ ಬೆಂಬಲವಾಗಿ ಕುಂತೀ
ತನಯರನು ಬಿಡಿ ಮರಳಿ ನೀವ್ ಹ
ಸ್ತಿನಪುರಿಗೆ ತನಗಿತ್ತ ವರವನೆ ಶಲ್ಯ ಮನವಳುಕಿ
ತನಯು ಕೈಕೊಂಡೆನು ಯುಧಿಷ್ಠಿರ
ಜನಪನಳಿಯನು ನೀನು ಲೋಗನೆ
ಯೆನಗೆ ನೀವಿತ್ತಂಡ ಸರಿ ನಿಮ್ಮತ್ತ ಬಹೆನೆಂದ ೧೨

ಅಗಲಿದೆನು ಹಲಕಾಲವೈವರ
ಮೊಗವನೀಕ್ಷಿಸಿ ಮರಳುವೆನು ಬಂ
ಧುಗಳ ದರುಶನ ಫಲವಲಾ ಸಂಸಾರ ತರುವಿಂಗೆ
ಮಗನೆ ಸೇನೆಯ ಕೊಂಡು ವಾರಣ
ನಗರಿಗೈದುವುದೆಂದು ಭೂಪನ
ಮಗುಳಿಚಿದನಾ ಶಲ್ಯ ಬಂದನು ಪಾಂಡವರ ಹೊರೆಗೆ ೧೩

ಇದಿರುಗೊಂಡರು ಕಾಣಿಕೆಯನಿ
ಕ್ಕಿದರು ತೆಗೆದಪ್ಪಿದರು ಹಲ ಕಾ
ಲದಲಿ ಹೂಳಿದ ಹರುಷವನು ಕೈಗೊಳಗು ಮಾಡಿವರು
ಮುದದಿನೆಲ್ಲರ ಕುಶಲವನು ಕೇ
ಳಿದನು ದುರಿಯೋಧನಗೆ ಸಿಲುಕಿದ
ಹದನನೆಲ್ಲವ ಹೇಳಿದನು ನಿರ್ವಿಣ್ಣ ಮನನಾಗಿ ೧೪

ಆವದೇನೆಲೆ ಕಂದ ತಪ್ಪದು
ಮೇದಿನಿಯು ಸಿರಿ ನಿನಗೆ ಸತ್ಯವ
ಕಾದು ಹದಿಮೂರಬುದ ನವೆದಿರಿ ಮುಂದೆ ಲೇಸಹುದು
ಕಾದಿ ವೃತ್ರಾಸುರನ ಮುರಿದಪ
ವಾದದಲಿ ಸಿರಿ ಹೋಗಿ ದುಃಖಿತ
ನಾದನಿಂದ್ರನು ಮತ್ತೆ ಬದುಕಿದ ಶಚಿಯ ದೆಸೆಯಿಂದ ೧೫

ನಹುಷನನು ಕೆಡೆನೂಕಿ ಋಷಿಗಳ
ಮಹಿಮೆಯಲಿ ಸಾಮ್ರಾಜ್ಯದಲಿ ಸ
ನ್ನಿಹಿತನಾದನು ಮತ್ತೆ ದಿವಿಜರ ರಾಯನೊಳಗಾಗಿ
ಅಹಿತರವಗಡಿಸಿದೊಡೆ ಕುಸಿದನು
ಬಹಳ ಲೇಸನು ಬಳಿಕ ಕಂಡನು
ಮಹಿ ನಿನಗೆ ಬೆಸಕೈದು ಬದುಕುವಿರೆಂದನಾ ಶಲ್ಯ ೧೬

ಆದೊಡಾ ಕರ್ಣಂಗೆ ಸಾರಥಿ
ಯಾದಿರಾದೊಡೆ ಸಮರ ಮುಖದಲಿ
ವಾದ ತೇಜೋವಧೆಯ ಮಾಡುವುದವನನವಗಡಿಸಿ
ಕಾದಿ ಕೊಡುವುದು ನಾವು ಗೆಲುವವೊ
ಲಾದರಿಸುವುದು ನಮ್ಮನೆಂದಾ
ಮೇದಿನೀಪತಿ ಶಲ್ಯನನು ಸತ್ಕರಿಸಿ ಕಳುಹಿದನು ೧೭

ಬೀಳುಗೊಂಡನು ಶಲ್ಯನಿತ್ತಲು
ಹೇಳುವರ ಮತಿ ಮುರಿಯೆ ನೋಟಕ
ರಾಲಿ ಝೊಮ್ಮಿಡೆ ಕಾದುವರ ಮನ ಮೂರು ಕವಲಾಗೆ
ಜಾಳಿಗೆಯ ಹೊಗರಲಗಿನುರಿಯ ಚ
ಡಾಳ ನಭದಲಿ ಝಗಝಗಿಸೆ ಹೇ
ರಾಳ ದೊಡ್ಡವಣೆಯಲಿ ಬರುತಿರ್ದುದು ನೃಪವ್ರಾತ ೧೮

ದೆಸೆಗಳೆಂಟರ ಮೂಲೆ ಬಿರಿಯಲು
ಪಸರಿಸಿತು ಹಳೆ ಬೊಮ್ಮಗಹುದೇ
ಹೊಸ ವಿಧಾತ್ರನ ಸೃಷ್ಟಿಯಿದು ಹೆಸರೇನು ಹೊಗಳುವರೆ
ಕುಸಿಯನೇ ಕೂರುಮನು ಭಾರಕೆ
ನಸಿಯನೇ ನಾಗೇಂದ್ರನಾನೆಗ
ಳುಸುರು ಹದುಳವೆ ನೋಡೆನಲು ಬಂದುದು ನೃಪವ್ರಾತ ೧೯

ಚೋಳ ಪಾಂಡ್ಯರು ಕೇರಳರು ಶಿಶು
ಪಾಲ ನಂದನ ಧೃಷ್ಟಕೇತು ಕ
ರಾಳ ಮಾಗಧ ಚೀನ ಘೋಟಕ ಕರ್ಪರಾದಿಗಳು
ಮೇಲೆ ಮೇಲೈತಂದು ಭೀಮಂ
ಗಾಳುವೋರಿದರಿತ್ತ ಕುರು ಭೂ
ಪಾಲಕನ ಕೂಡಿದರು ಭಗದತ್ತಾದಿ ಭೂಭುಜರು ೨೦

ದ್ರುಪದ ರಾಜ ಪುರೋಹಿತನು ಕುರು
ನೃಪನನಿತ್ತಲು ಬಂದು ಕಂಡನು
ವಿಪುಳಮತಿ ಮಾತಾಡಿದನು ನಿಜ ರಾಜಕಾರಿಯವ
ಕೃಪಣತನದಲಿ ಕೌರವನು ಗುರು
ಕೃಪನ ಭೀಷ್ಮನ ಮತವನೊಲ್ಲದೆ
ಚಪಳ ಕರ್ಣನ ಕೂಡಿ ನಿಶ್ಚೈಸಿದನು ಕಾಳಗವ ೨೧

ನೆನೆದ ಮತವನು ತನ್ನ ತಂದೆಯು
ಮನದ ಮಚ್ಚರದೊಳೊರೆದು ಕರ್ಣನ
ನೆನಹಿನಲಿ ಪುಟವಿಟ್ಟು ಶಕುನಿಯ ನೀತಿಯಲಿ ನಿಗುಚಿ
ಅನುಜಮತದಲಿ ವಿಸ್ತರಿಸಿ ಮೈ
ದುನನ ನುಡಿಯಲಿ ಬಣ್ಣವಿಟ್ಟನು
ಜನಪನಪಕೀರ್ತ್ಯಂಗನೆಗೆ ತೊಡಿಸಿದನು ಭೂಷಣವ ೨೨

ಹರುಷದಲಿ ಸಂಜಯನನಾಗಳೆ
ಕರೆಸಿ ಕುರುಪತಿ ಬುದ್ಧಿಗಲಿಸಿದ
ನರಿನೃಪರ ಪಾಳಯಕೆ ಹೋಹುದು ನುಡಿವುದುರವಣಿಸಿ
ಧರೆಯ ಬೇಡಿಸಿ ಕಳುಹಿದಿರಿ ಸಂ
ಗರದೊಳಸಿ ಧಾರೆಯಲಿ ಕೊಡುವೆವು
ಬರಿದೆ ಕೊಟ್ಟೊಡಧರ್ಮವೆಂಬುದು ಧರ್ಮಪುತ್ರಂಗೆ ೨೩

ಬೀಳುಕೊಂಡನು ಮಂತ್ರಿ ಪಯಣದ
ಮೇಲೆ ಪಯಣವನೆಯ್ದಿ ಪಾಂಡು ನೃ
ಪಾಲಕರ ಪಾಳೆಯಕೆ ಬಂದನು ರಾಯಗರುಹಿಸಲು
ಕೇಳಿ ಬೀಡಾರವನು ಬೀಯುವ
ಹೇಳಿಸಿದನಾ ಮರುದಿವಸದೊ
ಡ್ಡೋಲಗವ ರಚಿಸಿದನು ಕುಂತೀಸುತನು ಲೀವಿಯಲಿ ೨೪

ಹರಿ ವಿರಾಟ ದ್ರುಪದ ಕೈಕೆಯ
ರಿರವು ಬಲವಂಕದಲಿ ವಾಮದ
ಲಿರೆ ವೃಕೋದರ ಫಲುಗುಣಾದಿಗಳಖಿಳ ಮಂತ್ರಿಗಳು
ತರುಣಿಯರು ಪರಿಮಳದ ಜಂಗಮ
ಭರಣಿಯರು ಮನುಮಥ ವಿರಿಂಚನ
ತರುಣಿಯರು ಕುಳ್ಳಿರ್ದರರಸನ ಹಿಂದೆ ಮೋಹರಿಸಿ ೨೫

ಕರಣಿಕರು ಮಾಂತ್ರಿಕರು ವೈದ್ಯರು
ಸರಸ ಕವಿಗಳು ತಾರ್ಕಿಕರು ವರ
ಭರತ ನಿಪುಣರು ಗಾಯಕರು ಪಾಠಕರು ವಾಗ್ಮಿಗಳು
ಕರಿತುರಗ ಶಿಕ್ಷಕರು ಲಕ್ಷಣ
ಪರಿಣತರು ಕೋವಿದರು ಸಾವಂ
ತರರು ಪರಿಹಾಸಕರು ವೈತಾಳಿಕರು ರಂಜಿಸಿತು ೨೬

ಮಾವುತರು ಚಿತ್ರಕರು ಮಲ್ಲರು
ರಾವುತರು ಶಿಲ್ಪಿಗರು ಮಾಯಾ
ಕೋವಿದರು ಕರ್ಣಾಂಘ್ರಿವಿಕಳರು ಮೂಕ ವಾಮನರು
ದ್ರಾವಕರು ಜೂಜಾಳಿಗಳು ವರ
ದಾವಣಿಯರು ವಿದೇಶಿಗಳು ಮೃಗ
ಜೀವಿಗಳು ಶಾಕುನಿಕರೆಸೆದರು ರಾಜ ಸಭೆಯೊಳಗೆ ೨೭

ಸಾಲ ಮಕುಟದ ರತ್ನರಶ್ಮಿಯ
ದಾಳಿಗೊಂಡುದು ತಮವನಿನ್ನಾ
ಮೇಲುಪೋಗಿನ ಕಿತ್ತ ಖಡ್ಗಕೆ ಪ್ರಭೆಯು ಹಂಗೇಕೆ
ಮೇಲೆ ಕೈದೀವಿಗೆಗಳಧಿಕ
ಜ್ವಾಲೆಯದು ಪುನರುಕ್ತವೆನೆ ಭೂ
ಪಾಲನೋಲಗವೆಸೆದುದಿಂದ್ರನ ಸಭೆಗೆ ವೆಗ್ಗಳಿಸಿ ೨೮

ಕಳಕಳವೆ ಫಡ ಮಾಣು ಮಾಹೆಂ
ದುಲಿಯೆ ಕಂಚುಕಿ ನಿಕರವಂಗೈ
ತಳದ ಬಾಯಲಿ ರಾಯರಿರ್ದರು ಪುಣಿದು ಮಕುಟದಲಿ
ನಳಿನನಾಭನು ನಗುತ ಪರ ಮಂ
ಡಲದ ಶಿಷ್ಟನು ಬರಲಿಯೆನೆ ಬಾ
ಗಿಲಲಿ ಕೈದುವ ಕೊಂಡು ಹೊಗಿಸಿದರಂದು ಸಂಜಯನ ೨೯

ಬಂದು ಕಾಣಿಕೆಗೊಟ್ಟು ಹರುಷದ
ಲಂದು ಮೈಯಿಕ್ಕಿದನು ಭಯದಲಿ
ನಿಂದು ನೋಡಿದನೆಡಬಲದ ಮಹಾ ಮಹೀಶ್ವರರ
ಸಂದ ಯಮನೋ ನಿರುತಿಯೋ ಪೌ
ರಂದರನೊ ಪಾವಕನೊ ವರುಣನೊ
ಮುಂದಿಯಿದು ಮಾನಸರೆ ಮಾವಾಯೆನುತ ಬೆರಗಾದ ೩೦

ಸುಳಿದಲೆಯ ಕವಿಷ್ಮಾಸೆಗಳ ಮಿಗೆ
ಬೆಳೆದ ಮುಡುಹುಗಳೊಡ್ಡಿದುರದು
ಚ್ಚಳಿತ ರೋಮದ ನೊಸಲ ಡೋರಿಯ ತಲೆಯ ಕಲಿಮುಖದ
ಬಲಿದ ಹುಬ್ಬಿನ ತೋರ ತೋಳಿನ
ಹೊಳೆವಡಾಯುಧ ಮೊಗದ ಹೊಗರಿನ
ಕಲಿಮನದ ಕದನಪ್ರಚಂಡರ ಕಂಡು ಬೆರಗಾದ ೩೧

ಹಳುವದಲಿ ಹನ್ನೆರಡು ವರುಷವು
ತೊಳಲಿದರು ಸಿರಿ ಹೋಗಿ ನಿಮಿಷಕೆ
ನೆಲದ ರಾಯರು ನೆರೆದು ಜೀಯೆನುತಿದೆ ಮಹಾದೇವ
ನಳಿನನಾಭನ ಕರುಣದಳತೆಗೆ
ನಿಲುಕದಿಹುದೇನುಂಟು ಮುರರಿಪು
ಮುನಿದೊಡಾವನ ಮುರಿಯನೆಂದನು ತನ್ನ ಮನದೊಳಗೆ ೩೨

ಇಳುಹಿದನು ಮಹಿಯಲಿ ಮಹೀಪತಿ
ಕಳುಹಿದುಡುಗೊರೆಗಳನು ಭೂಪತಿ
ತಿಲಕ ಧರ್ಮಜನೊಪ್ಪುಗೊಂಡನು ನೃಪನ ಪಾವುಡವ
ಒಲವು ಜೊಪ್ಪನಲುಂಟಲಾ ಮ
ಕ್ಕಳನು ಮರೆಯನು ಲೇಸು ಸಂಜಯ
ತಿಳುಹು ತಾತನ ಕುಶಲವನು ಗಾಂಧಾರಿದೇವಿಯರ ೩೩

ಗುರು ಪಿತಾಮಹ ಗೌತಮರ ಸ
ಚ್ಚರಣಕಮಲಂಗಳಿಗೆ ಕುಶಲವೆ
ಗುರುಸುತನು ಸುಕ್ಷೇಮಿಯೇ ಕುರುರಾಯನಿರವೆಂತು
ಕುರುಪತಿಯ ಸೋದರರು ಮಕ್ಕಳು
ಸರಸಿಜಾನನೆ ಭಾನುಮತಿ ವಿ
ಕ್ಕರಸಿಯರು ಕರ್ಣಾದಿಗಳು ನಿರ್ವೃತರೆ ಹೇಳೆಂದ ೩೪

ಸುಖಿಗಳಿನಿಬರು ಜೀಯ ನಿಮ್ಮಯ
ನಿಖಿಳ ಬಾಂಧವರನು ಸಹೋದರ
ಸಖ ಸುತಾದಿಗಳನು ಪುರೋಹಿತ ಪೌರ ಪುರಜನದ
ಮುಖ ಸಮುದ್ಭವೆ ಮೊದಲು ಪಂಕಜ
ಮುಖಿಯರನು ಬೆಸಗೊಂಡು ಕಳುಹಿದ
ರಖಿಳ ಕುರು ನಂದನರು ಭೀಷ್ಮ ದ್ರೋಣ ಕೃಪರೆಂದ ೩೫

ಮುನ್ನ ಭೀಷ್ಮ ದ್ರೋಣ ಗೌತಮ
ರುನ್ನತದ ಕಾರುಣ್ಯದಲಿ ಸಂ
ಪನ್ನ ಸಾಹಸರಾದೆವಾಚರಿಸಿದೆವು ಧರ್ಮವನು
ಇನ್ನು ಧೃತರಾಷ್ಟ್ರಾವನೀಶನು
ತನ್ನ ಮಕ್ಕಳ ಬಾಂಧವ ಪ್ರತಿ
ಪನ್ನತೆಯ ನೆರೆ ಕಾಬನೆಂದನು ಧರ್ಮಸುತ ನಗುತ ೩೬

ಏನು ಬಂದಿಹ ಹದನು ನಿಮ್ಮವ
ರೇನನೆಂದರು ಕುರುಕುಲೇಶ್ವರ
ನೇನನಕ್ಕಟಿ ಬುದ್ಧಿಗಲಿಸಿದನವರ ಮಾತುಗಳ
ಏನುವನು ನೀನುಳುಹದಿರು ವಿನ
ಯಾನುಗತವಾಗಿರಲಿ ಮೇಣ್ ಶೌ
ರ್ಯಾನುಗತವಾಗಿರಲಿ ಬಿನ್ನವಿಸೆಂದನಸುರಾರಿ ೩೭

ನಾಡ ಬೇಡುವರೆಮ್ಮೊಡನೆ ಹೊ
ಯ್ದಾಡುವದು ಸಂಪ್ರತಿಗೆ ಚಿತ್ತವ
ಮಾಡಲಾಗದು ಸಂಧಿ ವೀರ ಕ್ಷತ್ರಿಯರ ಮತವೆ
ಬೇಡುವರೆ ಪಾರ್ಥಿವರು ತಾವದ
ನಾಡಬಾರದು ತಮ್ಮ ಜನನವ
ನೋಡಿ ನುಡಿವರು ಪಾಂಡುಸುತರಲ್ಲೆಂದು ಹೇಳೆಂದ ೩೮

ಮೊದಲಲಮಳ ಬ್ರಹ್ಮಚರ್ಯವು
ಮದುವೆಯಾದುದು ಬಳಿಕ ವನ ವಾ
ಸದಲಿ ವಾನಪ್ರಸ್ಥವೆಂಬಾಶ್ರಮವನಳವಡಿಸಿ
ತುದಿಗೆ ತಾ ಸನ್ಯಾಸವನು ಮಾ
ಡಿದನು ಮಗುಳಳುಪಿದೊಡೆ ರಾಜ್ಯದ
ಪದವಿಗನುಚಿತವಾಯ್ತು ಯಮಜಂಗೆಂದು ಹೇಳೆಂದ ೩೯

ತಳಿತ ಜವ್ವನದುಬ್ಬುಗಳ ಕಳ
ವಳಿಗರರ್ಜುನ ಭೀಮರೆಂಬವ
ರೊಳಗೆ ವೈರವ ಬಿತ್ತಿ ಬೆಳಸುವ ಕೃಷ್ಣ ಹಗೆ ತಮಗೆ
ಉಳಿದ ದ್ರುಪದ ವಿರಾಟರೆಂಬೀ
ಹುಳುಗಳವರಂತೋರೆಗೆಡೆದರು
ತಿಳಿಯೆ ತಾನೇ ಕಡೆಗೆ ಕೆಡದಿರನೆಂದು ಹೇಳೆಂದ ೪೦

ಸಾಕು ಕೌರವ ನಾಯ ಮಾತನ
ದೇಕೆ ಚಿತ್ತೈಸುವಿರಿ ದೂತನ
ನೂಕು ನೂಕು ಕುಠಾರ ದುರ್ಯೋಧನನನೊಡೆ ಹೊಯಿದು
ಶಾಕಿನಿಯರನು ರಕುತ ವಾರಿಯೊ
ಳೋಕುಳಿಯನಾಡಿಸುವೆ ನಿಲು ತಡ
ವೇಕೆನುತ ಘುಡುಘುಡಿಸಿ ಕಿಡಿಕಿಡಿಯಾದನಾ ಭೀಮ ೪೧

ಬೆಸಸುವುದು ಹಿಂದಾದ ಜೂಜಿನೊ
ಳೆಸೆವ ಜಾಡ್ಯವೆ ಸಾಕು ಧರ್ಮದ
ದೆಸೆಗೆ ನೀವಿನ್ನುತ್ತರಾಯಿ ಸುಯೋಧನನ ಕುಲವ
ದೆಸೆದೆಸೆಯ ದೈವಂಗಳಿಗೆ ಹೆಸ
ರಿಸುವರೆಮ್ಮನು ಕಳುಹೆನುತ ಗ
ರ್ಜಿಸಿದರಂದಭಿಮನ್ಯು ಸಾತ್ಯಕಿ ಭೀಮ ನಂದನರು ೪೨

ಕದಡಿತಾಯಾಸ್ಥಾನ ಕಲ್ಪಾಂ
ತದ ಮಹಾ ಸಿಡಿಲಂತೆ ವೀರರು
ಕೆದರಿ ತಮತಮಗೆದ್ದು ನುಡಿದರು ಕಂಡೆಯುವ ಜಡಿದು
ಉದಿರ ಹೊಯ್ವೆವು ಹಲುಗಳನು ಕಿ
ಬ್ಬದಿಯಲುಗಿವೆವು ಕರುಳನಹಿತರ
ತಿದಿಯ ಸುಲಿವೆವು ಬೆಸಸು ನೇಮವನೆಂದರತಿರಥರು ೪೩

ಆತನಿಂದೇನಹುದು ಹೊಲ್ಲೆಹ
ವಾತನಿಂದೇನಹುದು ಲೇಸುಗ
ಳಾತನಿಂದೇ ಬರಲಿ ಹಿಂದಣ ಕಾನನಾಯುಸದ
ಯಾತನೆಯ ಸೈರಿಸಿದ ನಮಗಿ
ನ್ನಾತನುಡಿದೊಡೆ ಹಾನಿಯೇ ನೀವ್
ಕಾತರಿಸದಿರಿಯೆಂದು ಸಂತೈಸಿದನು ಯಮಸೂನು ೪೪

ಕಳುಹಿದನು ಬೀಡಾರಕವನಿಪ
ತಿಲಕನಾ ಸಂಜಯನನಲ್ಲಿಂ
ಬಳಿಕ ಮರುದಿನ ಕೃಷ್ಣ ಪಾರ್ಥರು ಸಂಜಯನ ಕರೆಸಿ
ಬಲುಹು ಮೆಲುಹಿನ ನುಡಿಗಳಿಂದವೆ
ತಿಳುಹಿದರು ಬಳಿಕಿತ್ತಲೋಲಗ
ದೊಳಗೆ ದೂತನ ಕರೆಸಿ ಬೀಳ್ಕೊಟ್ಟನು ಯುಧಿಷ್ಠಿರನು ೪೫

ಜನಕನನು ಗಾಂಧಾರಿ ದುರಿಯೋ
ಧನನನವರೊಡ ಹುಟ್ಟಿದರನಂ
ಗನೆಯರನು ದುಸ್ಸಳೆಯ ಸೈಂಧವ ಕರ್ಣ ಶಕುನಿಗಳ
ವಿನುತ ಬಾಹ್ಲಿಕ ಶಲ್ಯ ಭಗದ
ತ್ತನ ನದೀಸುತ ಗುರು ಕೃಪರ ಗುರು
ತನುಜರನು ವಂದಿಸಿದರುಚಿತದಲೆಂದು ಹೇಳೆಂದ ೪೬

ವರ ಪುರೋಹಿತರನು ಸುಸಾವಂ
ತರನು ವೈದ್ಯರ ವಿದುರನನು ಮ
ತ್ತರಮನೆಯ ವಿಶ್ವಾಸಿಗಳನೋಲಗದ ಗಣಿಕೆಯರ
ಕರಿ ಹಯಾಧ್ಯಕ್ಷರನು ಪಡಿಹಾ
ರರನು ಬಾಹತ್ತರ ನಿಯೋಗದ
ಪರಿಜನದ ಕುಶಲವನು ಕೇಳಿದನೆಂದು ಹೇಳೆಂದ ೪೭

ಹೊನ್ನಿನಲಿ ಮಧುರೋಕ್ತಿಯಲಿ ವಿವಿ
ಧಾನ್ನವುಡುಗೊರೆಗಳಲಿ ದೂತನ
ಮನ್ನಿಸಿದನವನೀಶನುಚಿತದಲವನ ಬೀಳ್ಕೊಟ್ಟು
ಪನ್ನಗನ ಸಿರಿಮಂಚದಾತನು
ಚೆನ್ನಲಿರಲೀ ಪಾಂಡುತನಯರಿ
ಗಿನ್ನು ಮಂಗಳವೆನುತ ಸಂಜಯ ಬಂದನಿಭಪುರಿಗೆ ೪೮

## ಮೂರನೆಯ ಸಂಧಿ

ಸೂ. ತಿಳುಹಿದನು ವಿದುರನು ಮಹೀಪತಿ
ತಿಲಕನನು ನಯನೀತಿ ಧರ್ಮಂ
ಗಳ ಸುಸಂಗತಿಯಿಂದ ನೂಕಿದರಿವರು ಯಾಮಿನಿಯ

ಬಂದನಾ ಧೃತರಾಷ್ಟ್ರ ರಾಯನ
ಮಂದಿರಕೆ ಕಂಡನು ಮಹೀಶನ
ನೊಂದೆರಡು ಮಾತಿನಲಿ ಸೂಚಿಸಿ ಮರಳಿದನು ಮನೆಗೆ
ಅಂದಿನಿರುಳೊಳು ನಿದ್ರೆ ಬಾರದೆ
ನೊಂದು ವಿದುರನ ಕರೆದು ರಾಯನ
ತಂದೆ ಬಿಸುಸುಯ್ಯುತ್ತ ನುಡಿದನು ವಿದುರದೇವಂಗೆ ೧

ನಾಳೆ ಸಭೆಯಲಿ ಬಂದ ಹದನನು
ಹೇಳುವನು ಸಂಜಯನು ಸಂಧಿಯೊ
ಕಾಳಗವೊ ಮುಂದರಿಯಬಾರದು ದುಗುಡವಾಯ್ತೆನಗೆ
ಹೇಳು ನಿರುತವನಿಂದಿರುಳನು
ಬೀಳುಕೊಟ್ಟುದು ನಿದ್ರೆಯೆನೆ ಭೂ
ಪಾಲಕನ ಸಂತೈಸಿ ಮತ್ತಿಂತೆಂದನಾ ವಿದುರ ೨

ಬಲವಿಹೀನನು ಬಲ್ಲಿದನ ಕೂ
ಡೊಲಿದು ತೊಡಕಿದವಂಗೆ ಕಾಮದ
ಕಳವಳದಲಿರ್ದಂಗೆ ಧನದಳಲಿಂದ ಮರುಗುವಗೆ
ಕಳವಿನಲಿ ಕುದಿವಂಗೆ ದೈವದ
ನೆಲೆಯನರಿಯದವಂಗೆ ದಿಟವಿದು
ತಿಳಿಪೆ ಬಾರದು ನಿದ್ರೆಯೆಂದನು ಭೂಪತಿಗೆ ವಿದುರ ೩

ಒಂದರಿಂದೆರಡಹುದನರಿ ಮೂ
ರಂದವನು ತಿಳಿ ನಾಲ್ಕರಲಿ ಮನ
ಗುಂದದಿರದೈದರಲಿ ವರ್ಜಿಪುದಾರನೇಳರಲಿ
ಒಂದಿಸದಿರೆಂಟನು ವಿಚಾರಿಸಿ
ಮುಂದುವರಿವೊಂಬತ್ತರಲಿ ಮನ
ಗುಂದಿಸದಿರೀರೈದರಲಿ ಭೂಪಾಲ ಕೇಳೆಂದ ೪

ತನ್ನ ಚಿಂತೆಯದೊಂದು ದೈವದ
ಗನ್ನಗತಕವದೆರಡು ಭಾವದ
ಬನ್ನಣೆಯ ಬಗೆ ಮೂರು ದೈವದ ಭಿನ್ನಮುಖ ನಾಲ್ಕು
ತನ್ನ ನೆನಹಿನವೋಲು ಕಾರ್ಯವು
ಚೆನ್ನಹಡೆ ಲೋಕಕ್ಕೆ ತಾ ಬೇ
ರಿನ್ನು ದೈವವದೇಕೆ ತಾನೇ ದೈವರೂಪೆಂದ ೫

ಒಂದು ವರ್ಣವನರುಹಿದವ ಗುರು
ವೊಂದಪಾಯದಲುಳಿಹಿದವ ಗುರು
ಬಂದ ವಿಗ್ರಹದೊಳಗೆ ರಕ್ಷಿಸಿದಾತ ಪರಮಗುರು
ಒಂದೆರಡು ಮೂರೈಸಲೇ ತಾ
ನೆಂದು ಗರ್ವಿಕರಿಸಿದವರುಗ
ಳೊಂದುವರು ಚಾಂಡಾಲ ಯೋನಿಯೊಳರಸ ಕೇಳೆಂದ ೬

ತನ್ನ ಕಾರಿಯ ಕಾರಣವನುಳಿ
ದನ್ಯಥಾ ಚಿಂತೆಯನು ಮಾಡುವ
ದುನ್ನತಿಕೆ ತಾನಲ್ಲ ನೀತಿಜ್ಞರಿಗೆ ಭಾವಿಸಲು
ಮನ್ನಿಸುವುದಾತ್ಮನನು ವಿಕ್ರ್ಯದ
ನನ್ಯರಿಗೆ ಮಾಡುವುದದಲ್ಲದೆ
ತನ್ನ ತಾ ಮರೆದಿಹುದು ಮತವಲ್ಲೆಂದನಾ ವಿದುರ ೭

ಹಾವು ಹಲವನು ಹಡೆದು ಲೋಕಕೆ
ಸಾವ ತಹವೊಲು ನೂರು ಮಕ್ಕಳ
ನಾವ ಪರಿಯಲಿ ಹಡೆದು ಕೆಡಿಸಿದೆ ಭೂಮಿ ಭಾರಕರ
ಭಾವಿಸಲು ಸರ್ವಜ್ಞ ಸರ್ವಗು
ಣಾವಲಂಬನನೊಬ್ಬನರ್ಜುನ
ದೇವ ಸಾಲದೆ ನಾಡ ನಾಯಿಗಳೇನು ಫಲವೆಂದ ೮

ದೀಪ ದೀಪವ ತೊಳಲಿ ಕರ್ಮಕ
ಳಾಪದಲಿ ಕುದಿಕುದಿದು ನಾನಾ
ರೂಪಿನಿಂದಾರ್ಜಿಸುವ ಧರ್ಮದ ಗೊಡವೆ ತಾನೇಕೆ
ಭೂಪ ಕೇಳೈ ಸತ್ಯವೊಂದೇ
ಸೋಪನವು ಸಗ್ಗಕ್ಕೆ ಜನ್ಮದ
ಕೂಪರಕ್ಕಿದು ನಾವೆಯಾಗಿಹುದೆಂದನಾ ವಿದುರ ೯

ಪಾಪದಿಂದಾರ್ಜಿಸಿದೊಡರ್ಥವ
ನಾ ಫಲವನುಂಬವರಿಗಿಲ್ಲಾ
ಪಾಪವೊಬ್ಬಂಗಪ್ಪುದಾರ್ಜಿಸಿದುರಗನಂದದಲಿ
ಕಾಪಥವನಾಶ್ರಯಿಸಿ ಕೋಪಾ
ಟೋಪದಿಂದುತ್ತಮರ ಸರ್ವ
ಸ್ವಾಪಹಾರವ ಮಾಡಿ ಬದುಕುವುದಾವ ಗುಣವೆಂದ ೧೦

ಬವರ ಮುಖದಲಿ ವೈರಿರಾಯರ
ನವಗಡಿಸಿ ತಂದಾ ಧನವ ಭೂ
ದಿವಿಜ ಸಂತತಿಗಿತ್ತ ಫಲವಿನಿತೆಂದು ಗಣಿಸುವಡೆ
ದಿವಿಜಪತಿಗಾಗದು ಕಣಾ ಮಾ
ನವಪತಿಗೆ ಸದ್ಧರ್ಮವಿದು ನಿ
ನ್ನವನು ನೀತಿಯನರಿಯನೈ ಧೃತರಾಷ್ಟ್ರ ಕೇಳೆಂದ ೧೧

ಧರಣಿಯಮರರ ಧನದಿ ಸಲಹಿದ
ಕರಿತುರಗ ಮೊದಲಾದ ದಳವು
ಬ್ಬರದಿ ಹೆಚ್ಚಿಹುದರಿನೃಪಾಲರ ಯುದ್ಧ ಪರಿಯಂತ
ಜರಿದು ನಸಿವುದು ವಾಹಿನಿಗೆ ಮಳೆ
ತುರು ಮಳಲ ಕಟ್ಟೆಯವೊಲಿದನರಿ
ದರಸುಗಳು ವರ್ಣೋತ್ತಮರ ದೆಸೆಗಂಜಬೇಕೆಂದ ೧೨

ಉರಗನೌಡಿದೊಡದರ ವಕ್ರದೊ
ಳಿರದೆ ಮೇಣಾ ದಷ್ಟ ದೇಹದೊ
ಳಿರದೆ ರುಧಿರವು ಪೋಪವೊಲು ದುಷ್ಟಾಧಿಕಾರಿಗಳ
ಒರಸೊರಸಿನಿಂ ಜನಪದದ ಧನ
ಹರಿವುದರಸಂಗಲಸಿದಾ ಪ್ರಜೆ
ಗಿರದುಭಯ ಹಿಂಗುವುದನರಿ ಭೂಪಾಲ ಕೇಳೆಂದ ೧೩

ಉರಗನಗಿದೊಡೆ ಮೇಣು ಶಸ್ತ್ರದ
ಲಿರಿದಡೊಬ್ಬನೆ ಸಾವನದರಿಂ
ದರಸು ನೆಗಳಿದ ಮಂತ್ರ ಭೇದಿಸಲರಿನೃಪಾಲಕರ
ಧರೆ ಸಹಿತ ತತ್ಸಕಲ ಬಲ ಸಂ
ಹರಣವಹುದಿದನರಿದು ಭೂಪೋ
ತ್ತರ ರಹಸ್ಯದ ಮಂತ್ರವುಂಟೇ ರಾಯ ನಿನಗೆಂದ ೧೪

ಏಸು ಧರ್ಮದಲಾರ್ಜಿಸಿದ ಧನ
ವೈಸು ಸಿರಿ ವರ್ಧಿಸುವುದದರಿಂ
ದೇಶ ಮಂಗಳ ಪುತ್ರ ಮಿತ್ರ ಕಳತ್ರವರಿವಿಜಯ
ಪೈಸರಿಸುವುದು ಬಂದ ಬಳಿವಿಡಿ
ದಾಸುರದ ಪಥವಿದನರಿದು ಭೂ
ಮೀಶ ಧರ್ಮವ ಹಿಡಿಯಧರ್ಮವ ಬಿಟ್ಟು ಕಳೆಯೆಂದ ೧೫

ಹರಿವ ನದಿ ತನ್ನಿಚ್ಛೆಯಲಿ ದಡ
ವೆರಡ ಕೆಡಿಸುವವೋಲು ನಾರಿಯ
ರುರವಣೆಗೆ ಕೈಗೊಟ್ಟು ನಡೆಸಿದಡುಭಯ ವಂಶವನು
ನೆರಹುವಳು ನೀರೊಳಗೆ ಮೇರೆಯ
ಮುರಿಯಲೀಯದೆ ಮಾರ್ಗದಲಿ ಮ
ತ್ಸರಿಸದಾಳುವುದನುನಯವು ಭೂಪಾಲ ಕೇಳೆಂದ ೧೬

ಧರೆಯೊಳಗೆ ಕಡು ಮೂರ್ಖರಿವರಿ
ಬ್ಬರು ಕಣಾ ದುರಿಯೋಧನನು ದಶ
ಶಿರನು ಗೋಗ್ರಹಣದಲಿ ವನ ಭಂಗದಲಿ ಮುಂಕೊಂಡು
ಅರಿನೃಪರ ಸತ್ವಾತಿಶಯದು
ಬ್ಬರದ ಬಲುಹನು ಕಂಡು ಕಂಡೆ
ಚ್ಚರದೆ ಮರುಳಹುದುಚಿತವೇ ಭೂಪಾಲ ಕೇಳೆಂದ ೧೭

ಕರಣಿಕನ ಹಗೆಗೊಂಡವಂಗೈ
ಶ್ವರಿಯ ಹಾನಿ ಚಿಕಿತ್ಸಕನನಾ
ದರಿಸದಾತಂಗಾಗದಾಯುಷ್ಯಾಭಿವೃದ್ಧಿಗಳು
ಅರಸ ಕೇಳಾಯುಷ್ಯ ಭಾಗ್ಯಗ
ಳಿರದು ಕೆಡುವವು ತಪ್ಪದವನೀ
ಸುರರ ಬದ್ಧದ್ವೇಷ ಲೇಸಲ್ಲೆಂದನಾ ವಿದುರ ೧೮

ಧರೆಯೊಳಗೆ ರವಿ ಮಂಡಲವನೊದೆ
ದುರವಣಿಸಿ ಹಾಯ್ವರು ತಾವಿ
ಬ್ಬರು ಕಣಾ ಸನ್ಯಾಸಿಯಾಗಿಯೆ ಯೋಗ ಮಾರ್ಗದಲಿ
ಹರಣವನು ಬಿಟ್ಟವರುಗಳು ಸಂ
ಗರದೊಳಭಿಮುಖರಾಗಿ ಮರಣಾಂ
ತರವನೆಯ್ದುವರವರು ಅವನೀಪಾಲ ಕೇಳೆಂದ ೧೯

ಮಾತೃ ಪಿತೃಗಳು ಶತ್ರು ಭಾವವ
ನಾಂತು ನಿಜ ಸಂತಾನದಲಿ ಸಂ
ಪ್ರೀತಿಯನು ನೆಲೆಗೊಳಿಸಿ ಸರ್ವಜ್ಞಾಧಿಕಾರದಲಿ
ಖ್ಯಾತರನು ಮಾಡದಡೆ ಹಂಸ
ವ್ರಾತ ಮಧ್ಯದ ಬಕನವೊಲು ವಿ
ಖ್ಯಾತ ಸಭೆಯೊಳು ಯೋಗ್ಯರಹರೇ ಭೂಪ ಕೇಳೆಂದ ೨೦

ಸುರರ ಮೇಳದಲಾಡುವವರಿ
ಬ್ಬರು ಕಣಾ ಪ್ರಭುವಾಗಿಯು ಕ್ಷಮೆ
ವೆರಸಿದವನು ದರಿದ್ರನಾಗಿಯು ದಾನಿಯೆನಿಸುವನು
ಅರಿದೆನಿಸದತಿಬಲನ ಧರ್ಮೋ
ತ್ಕರುಷ ದುರ್ಬಲಯುತನ ಸೈರಣೆ
ಸರಿಸವೆನಿಸದು ರಾಯ ಚಿತ್ತೈಸೆಂದನಾ ವಿದುರ ೨೧

ಧರಣಿ ನುಂಗುವಳಿಬ್ಬರನು ಸಂ
ಗರವ ಜಯಿಸದ ನೃಪನ ದೇಶಾಂ
ತರವ ಚರಿಸದ ಪಂಡಿತನನಿದು ಶಾಸ್ತ್ರಸಿದ್ಧವಲೆ
ಅರಸು ಕುಲದಲಿ ಹುಟ್ಟಿ ಸಾಪ
ತ್ನರುಗಳಿರೆ ದೇಹಾಭಿಲಾಷೆಯ
ಲುರಗನಂತೊಳಗಿಹುದು ಧರ್ಮವೆಯೆಂದನಾ ವಿದುರ ೨೨

ನರ ಜನುಮವತ್ಯಧಿಕವದರೊಳು
ಗುರು ಹಿರಿಯರಿವರೆಂದು ದಾನ
ಕ್ಕರುಹರಿವರಲ್ಲೆಂದು ನೋಡದೆ ಮೂಢ ಮಾರ್ಗದಲಿ
ಕರೆದಪಾತ್ರಂಗಿತ್ತು ಪಾತ್ರನ
ಪರಿಹರಿಸಲೀ ಎರಡರಿಂ ಸಂ
ಹರಣವೈದುವುದಾರ್ಜಿಸಿದ ಧನವರಸ ಕೇಳೆಂದ ೨೩

ತಂದೆ ತಾಯಿಗಳಿಬ್ಬರಾತ್ಮಜ
ವೃಂದವನು ಮಿಗೆ ಸಲಹಿ ತತ್ಸುತ
ರಿಂದ ಲೇಸನು ಪಡೆವವೊಲು ತಜ್ಜನಪದದ ಧನವ
ಕುಂದಿಸದೆ ನೃಪ ಮಂತ್ರಿಗಳು ಸಾ
ನಂದದಲಿ ರಕ್ಷಿಸಲು ಬಳಿಕವ
ರಿಂದ ಸಕಲೈಶ್ವರ್ಯ ಪದವಹುದರಸ ಕೇಳೆಂದ ೨೪

ಕಾಮಿನಿಯರುಗಳಾರು ಕೆಲಬರು
ಕಾಮಿತವ ಕಾಮಿಸುವರಲ್ಲದೆ
ತಾಮಸದಿನಾ ಮೂರುಕರು ಪೂಜಿಸಿದ ಪೂಜೆಗಳ
ಪ್ರೇಮದಿಂದೊಡಬಡುವರಲ್ಲದೆ
ಸೀಮೆವಿಡಿದಿಹುದಾಗದೆಂಬುದ
ನಾ ಮದಾಂಧರು ಬಲ್ಲರೇ ಧೃತರಾಷ್ಟ್ರ ಕೇಳೆಂದ ೨೫

ತನ್ನ ಸುಖ ದುಃಖಂಗಳಿಗೆ ನಿ
ರ್ಭಿನ್ನರಹ ಬಾಂಧವರ ವರ್ಜಿಸಿ
ಗನ್ನಗತಕದಲುಂಡು ಜಾರುವ ಗಾವಿಲರ ಕೂಡಿ
ಅನ್ಯರನು ಪತಿಕರಿಸಿ ಬಹುಮಾ
ನೋನ್ನತಿಕೆಯನು ವಿರಚಿಸುವುದಿದು
ತನ್ನ ತಾನೇ ಕೊಂದುಕೊಂಬುದು ಭೂಪ ಕೇಳೆಂದ ೨೬

ಪಿತನಿರಲು ದಾತಾರನಿರೆ ನಿಜ
ಪತಿಯಿರಲು ಸುತ ದಾಸ ಸತಿಯೀ
ತ್ರಿತಯರುಂ ಸ್ವಾತಂತ್ರ್ಯದವರಲ್ಲಾವ ಕಾಲದಲಿ
ಕ್ಷಿತಿಯೊಳುತ್ತಮ ಮಧ್ಯಮಾಧಮ
ಗತಿಯ ಪುರುಷ ತ್ರಯವನವರಿಂ
ಗಿತವನವರಾಯತವನರಿವೈ ಭೂಪ ಕೇಳೆಂದ ೨೭

ಬೆಳಸು ಘನ ತೃಣವಧಿಕ ಜಲ ನಿ
ರ್ಮಳವೆನಿಪ ಕಾಲದಲಿ ಪರ ಮಂ
ಡಲಕೆ ನಡೆವುದು ಘೃಷ್ಟಪುಷ್ಟ ವಿಹಾರನೆಂದೆನಿಸಿ
ಬಲುಹಹುದು ನಿಜಬಲಕೆ ಬಲವಾ
ನೆಲನ ಮೆಟ್ಟಲು ವೈರಿ ಸೇನಾ
ವಳಿಗೆ ಹೀನತೆ ದೊರಕುವುದು ಧೃತರಾಷ್ಟ್ರ ಕೇಳೆಂದ ೨೮

ಮಾಲೆಗಾರ ಸಿಳೀಮುಖನ ಪಶು
ಪಾಲಕನವೋಲ್ ಪ್ರಜೆಯ ರಕ್ಷಿಸಿ
ಮೇಲೆ ತೆಗೆವೈ ಧನವನುಳಿದಂಗಾರಕಾರಕನ
ವೋಲು ಕಡುದುರು ವ್ಯಾಘ್ರನಂತೆ ವಿ
ತಾಳಿಸಲು ಪ್ರಜೆ ನಸಿಯಲರಸಿನ
ಬಾಳಿಕೆಗೆ ಸಂದೇಹವರಿಯಾ ರಾಯ ಕೇಳೆಂದ ೨೯

ಎಲ್ಲಿಹುದು ಋಣಭಯವು ಮನುಜರೊ
ಳಲ್ಲಿಹುದು ದೇವಾಂಶ ನಿಜವಾ
ಗೆಲ್ಲಿಹುದು ಸನ್ಮಾರ್ಗ ಬಳಿಕಲ್ಲಿಹುದು ಬ್ರಾಹ್ಮಣ್ಯ
ಎಲ್ಲಿಹುದು ಪರಸತಿಯರಂಜಿಕೆ
ಯಲ್ಲಿಹುದು ವಿಜ್ಞಾನವಿದನರಿ
ದಲ್ಲದಿಹಪರವಿಲ್ಲ ಚಿತ್ತೈಸೆಂದನಾ ವಿದುರ ೩೦

ರಕ್ಷಿಸಿದ ಧನದಿಂ ಪುರಂಧ್ರಿಯ
ರಕ್ಷಿಸುವುದು ಪುರಂಧ್ರಿಯಿಂದವೆ
ರಕ್ಷಿಸುವುದಾತ್ಮನನು ಧನವಿಡಿದಾವ ಕಾಲದಲಿ
ಲಕ್ಷ ಭೇದವನರಿದು ನಡೆದು ವಿ
ಲಕ್ಷವನು ಮುರಿದಾತ್ಮ ರಕ್ಷೆಯ
ನೀಕ್ಷಿಸುವುದನುನಯವಲ್ಲೈ ಭೂಪಾಲ ಕೇಳೆಂದ ೩೧

ತಿಳಿದು ನಾಲ್ವರೊಳೊರೆದ ಕಾರ್ಯವ
ನುಳಿವುದಿಬ್ಬರನಿಬ್ಬರೊಳು ಮ
ತ್ತುಳಿವುದೊಬ್ಬನನೊಬ್ಬನಿಂ ನಿಶ್ಚಯಿಸಿ ಬಳಿಕವನ
ಕಳೆದು ತಾನೇ ತನ್ನೊಳಗೆ ಬಗೆ
ಗೊಳೆ ವಿಚಾರಿಸಿ ಮಾಳ್ಪ ಕಾರ್ಯಕೆ
ಹಳಿವು ಹೊರುವುದೆ ರಾಯ ಚಿತ್ತೈಸೆಂದನಾ ವಿದುರ ೩೨

ನಿವಡಿಸಿದ ವಿದ್ಯಕ್ಕೆ ಸಮಂ ಬಂ
ಧುವನು ರೋಗಾವಳಿಗೆ ಸಮ ಶ
ತ್ರುವನು ಸಂತಾನಕ್ಕೆ ಸಮ ಸಂತೋಷದುದಯವನಂ
ರವಿಗೆ ಸಮವಹ ತೇಜವನು ವಾ
ಸವನ ಸಮ ಭೋಗವನು ಬಲದಲಿ
ಶಿವನ ಬಲದಿಂದಧಿಕ ಬಲವನು ಕಾಣೆ ನಾನೆಂದ ೩೩

ಹಿರಿದು ಮಾನೋನ್ನತಿಕೆಯನು ಬಂ
ಧುರದ ಧನವನು ಗಾರುಹಸ್ಥ್ಯದ
ಪರಮಧರ್ಮವನಾವ ಬಯಸುವನವನ ಭವನದಲಿ
ನಿರುತ ವೃದ್ಧ ಜ್ಞಾನಿ ವಂಶೋ
ತ್ತರ ದರಿದ್ರ ಪ್ರಿಯನಪತ್ಯಾಂ
ತರ ಭಗಿನಿಯೀ ನಾಲ್ವರಿರಬೇಕೆಂದನಾ ವಿದುರ ೩೪

ಧರಣಿಪತಿ ಚಿತ್ತವಿಸು ಸ್ವರ್ಗದ
ಲೊರೆದನಿಂದ್ರಂಗಮರ ಗುರು ದೇ
ವರಲಿ ಸಂಕಲ್ಪವನು ಕೃತವಿದ್ಯರಲಿ ವಿನಯವನು
ಹಿರಿಯರಲಿ ಸಂಭಾವನೆಯ ಸಂ
ಹರಣ ಪದವನು ಪಾಪ ಕಾರ್ಯದೊ
ಳಿರದೆ ಮಾಡುವುದೆಂಬ ನಾಲ್ಕನು ರಾಯ ಕೇಳೆಂದ ೩೫

ಆವುದೀ ಲೋಕಕ್ಕೆ ಹಿತವದ
ನೋವಿ ನಡೆವ ಜನಕ್ಕೆ ನಿಂದೆಯ
ದಾವುದದನಾಚರಿಸದಿಹ ನಾಸ್ತಿಕರ ನಂಬುಗೆಯ
ಠಾವುಗಾಣದ ತತ್ವ ವಿಜ್ಞಾ
ನಾವಲಂಬನನೆನಿಪನಾತನು
ಭೂವಲಯದೊಳಗುತ್ತಮನು ಭೂಪಾಲ ಕೇಳೆಂದ ೩೬

ಪಿತನು ಗುರು ಶಿಖಿಯಾತ್ಮ ತಾಯೆಂ
ಬತುಳ ಪಂಚಾಗ್ನಿಯನು ಕ್ರಮದಿಂ
ಪ್ರತಿದಿನಂ ಪರಿಚರಿಯ ಮಾಳ್ಪುದು ಲೇಸ ಬಯಸುವರೆ
ಪಿತೃಗಳನು ದೇವರನು ವೃದ್ಧರ
ನತಿಥಿಗಳ ಪೂಜಿಸಿದವನಾವವ
ಪಿತನ ಕೀರ್ತಿಯ ಧರ್ಮವನು ಪಡೆವವನೆ ಸುತನೆಂದ ೩೭

ಸಿರಿಯನುಳ್ಳವನವನೆ ಕುಲಜನು
ಸಿರಿಯನುಳ್ಳವನೇ ವಿದಗ್ಧನು
ಸಿರಿಯನುಳ್ಳವನೇ ಮಹಾತ್ಮನು ಸಕಲಗುಣಯುತನು
ಸಿರಿಯನುಳ್ಳವನೇ ಸುಶೀಲನು
ಸಿರಿರಹಿತ ಶಿವನಾದೊಡಾಗಲಿ
ಸರಕು ಮಾಡದು ಲೋಕವವನೀಪಾಲ ಕೇಳೆಂದ ೩೮

ಸಿರಿ ನೆಲೆಯೆ ಜವ್ವನ ನೆಲೆಯೆ ಮೈ
ಸಿರಿ ನೆಲೆಯೆ ತನು ನೆಲೆಯೆ ಖಂಡೆಯ
ಸಿರಿ ನೆಲೆಯೆ ನಿನಗರಸುತನವುಳ್ಳನ್ನ ನೀತಿಯಲಿ
ಧರೆಯ ರಕ್ಷಿಸು ಬಂಧುಗಳನು
ದ್ಧರಿಸು ಧರ್ಮವ ಸಾಧಿಸಿಂತಿದು
ನರಪತಿಗಳಿಗೆ ನೀತಿ ಚಿತ್ತೈಸೆಂದನಾ ವಿದುರ ೩೯

ವರುಷವೈದರೊಳರಸೆನಿಸಿ ದಶ
ವರುಷ ದಾಸತ್ವವನು ಭಾವಿಸಿ
ವರುಷ ಹದಿನಾರರಲಿ ಪುತ್ರನ ಮಿತ್ರನೆಂದೆನಿಸಿ
ಪರಿವಿಡಿಗಳಲಿ ನಡೆಸಿ ಮದ ಮ
ತ್ಸರವ ಮಾಣಿಸಿ ನೆರೆದ ಮಕ್ಕಳ
ನರಮೃಗವ ಮಾಡುವರೆ ಭೂವಿಭಾಪಾಲ ಕೇಳೆಂದ ೪೦

ಧನಮದದಿ ಕುಲಮದದಿ ವಿದ್ಯಾ
ಘನದಿ ಯವ್ವನ ಮದದಿ ದ್ವಿಜ ಗುರು
ವನು ವಿಭಾಡಿಸಿ ನೀನು ತಾನೆಂದೆನುತ ಹೂಂಕರಿಸಿ
ಮುನಿಸಿನಲಿ ಸಾತ್ವಿಕರೊಳೊಬ್ಬರ
ನನುಗಡಿಸಿ ಗರ್ಜಿಸಲು ನರಕದಿ
ಮುಣುಗಿದಲ್ಲದೆ ಬೇರೆ ಗತಿಯಿಲ್ಲೆಂದನಾ ವಿದುರ ೪೧

ಸಲಹಿದೊಡೆಯನ ದಿವ್ಯಮಂತ್ರವ
ಕಲಿಸಿದಾಚಾರ್ಯನನು ಅನುವರ
ದೊಳಗೆ ತಲೆಗಾಯಿದನ ದುರ್ಭಿಕ್ಷದಲಿ ಸಲಹಿದನ
ಜಲದೊಳಾಳ್ದನನೆತ್ತಿದನನುರಿ
ಯೊಳಗೆ ಪರಿಹರಿಸಿದನ ಮರೆದವ
ನಿಳಿವನೈ ಕುಲಕೋಟಿ ಸಹಿತ ಮಹಾಂಧ ನರಕದಲಿ ೪೨

ಒಲಿದವಳ ಬಿಸುಟೊಲ್ಲದವಳಿಗೆ
ಹಲುಬುವವನಹಿತರಲಿ ಸಖ್ಯಾ
ವಳಿಯುನೆಸಗುವನರಿಯದುದ ತಾ ಬಲ್ಲೆನೆಂಬವನು
ಒಲಿದು ಕೇಳದೆ ಹೇಳುವವ ಕೈ
ನಿಲುಕಲರಿಯದ ಕಾರ್ಯದಲಿ ಹಂ
ಬಲಿಸಿ ಮರುಗುವನವನೆ ಮೂಢನು ರಾಯ ಕೇಳೆಂದ ೪೩

ಹರುಷ ದರ್ಪ ಕ್ರೋಧ ಲಜ್ಜಾ
ತುರತೆ ಮಾನ ವಿಮಾನವಿವರಲಿ
ನಿರುತ ಸಮನೆಂದೆನಿಸಿ ಕೃತ್ಯಾಕೃತ್ಯ ಕೌಶಲವ
ವಿರಚಿಸುವ ಕಾಲದಲಿ ಶೀತೋ
ತ್ಕರದಿ ಭಯವೊಡ್ಡೈಸಲದರಿಂ
ಪರಿಹರಿಸದಾ ಕಾರ್ಯವೆಸಗುವನವನೆ ಪಂಡಿತನು ೪೪

ಕರೆಕರೆದು ಮೃಷ್ಟಾನ್ನವನು ಭೂ
ಸುರರಿಗೀವ ಸದಾಗ್ನಿ ಹೋತ್ರಾ
ಚರಿತನಹ ವೇದಾಂತ ವೇದಿಯನಾ ಪತಿವ್ರತೆಯ
ಉರುತರದ ಮಾಸೋಪವಾಸಿಯ
ನಿರದೆ ಮಾಸ ಸಹಸ್ರ ಜೀವಿಯ
ನರಸ ಕೇಳಭಿವಂದಿಸುವರೈ ಮೂರು ಮೂರ್ತಿಗಳು ೪೫

ಬಿಸುಟು ಕಳೆವುದು ನೀತಿ ಶಾಸ್ತ್ರವ
ನುಸುರದಾಚಾರಿಯನ ವೇದ
ಪ್ರಸರವಿಲ್ಲದ ಋಷಿಜನವ ರಕ್ಷಿಸದ ಭೂಭುಜನ
ಒಸೆಯದಬಲೆಯನೂರೊಳಾಡುವ
ಪಶುವ ಕಾಯ್ದನನಡವಿಗುರಿಯುಹ
ನುಸಿಯನಾ ಪಿತನಿಂತವರುವರನು ರಾಯ ಕೇಳೆಂದ ೪೬

ವ್ಯಸನವೇಳರ ಕಾಲುಕಣ್ಣಿಯ
ಹಸರದೊಳಗಳವಳಿದು ಹೆಚ್ಚಿದ
ವಿಷಮದಿರುಬಿನೊಳದ್ದು ಮಾಯಾಮಯದ ತೋಹಿನಲಿ
ಬಸವಳಿದು ಷಡುವರ್ಗ ವೇಧೆಯ
ನುಸುಳುಗಂಡಿಯನೀಕ್ಷಿಸದೆ ತಾ
ಮುಸದೊಳಿತಿರುಹುದುಚಿತವೇ ಹೇಳೆಂದನಾ ವಿದುರ ೪೭

ಅತಿಬಲನ ಹಗೆಗೊಳುವನಿಹಪರ
ಗತಿ ವಿಚಾರವ ಮರೆವ ಲೋಕ
ಸ್ಥಿತಿಯನುಲ್ಲಂಘಿಸುವ ಮರ್ಮಜ್ಞರ ವಿರೋಧಿಸುವ
ವಿತತ ಭಾಷಿತನಪ್ಪ ತನ್ನಿಂ
ಗಿತವನವರಾಯತವನರಿಯದ
ಕ್ಷಿತಿಪನವ ಮೂಢಾತ್ಮನೈ ಭೂಪಾಲ ಕೇಳೆಂದ ೪೮

ಬಲುಹರಿದು ಕೋಪಿಸುವ ಬದುಕಿನ
ಬಳಿಯರಿದು ಕೊಡುವಾತ್ಮ ಹಿತವನು
ತಿಳಿದು ನಿರ್ಮಲವೆನಿಪ ಮೇಲಣ ತಾಗು ಬಾಗುಗಳ
ಹೊಲಬರಿದು ಸುಖ ದುಃಖದಲಿ ಸಂ
ಚಲಿಸದಿಹ ಗಂಗಾ ಮಡುವಿನಂ
ತೊಳಗುದೋರದೆ ನಡೆವವನು ಪಂಡಿತನು ಕೇಳೆಂದ ೪೯

ದಾನವಿಲ್ಲದ ವಿತ್ತ ಬುಧ ಸ
ನ್ಮಾನವಿಲ್ಲದ ರಾಜ್ಯ ಬಲು ಸುಯಿ
ಧಾನವಿಲ್ಲದ ಸುದತಿ ಧೀಮಾನಿಲ್ಲದಾಸ್ಥಾನ
ಜ್ಞಾನವಿಲ್ಲದ ತಪವು ವೇದ ವಿ
ಧಾನವಿಲ್ಲದ ವಿಪ್ರ ಶರಸಂ
ಧಾನವಿಲ್ಲದ ಸಮರ ಮೆರೆಯದು ರಾಯ ಕೇಳೆಂದ ೫೦

ದಿನವ ಬಂಜೆಯ ಮಾಡದಿಹಪರ
ವಿನಯನಹ ವರ ದೈವ ಗುರು ಪೂ
ಜನೆಯ ಬುಧ ಸೇವನೆಯ ಕಾಲೋಚಿತದ ವಿವರಣವ
ಮನನದಿಂದಾ ಶ್ರವಣ ವಿದ್ಯಾ
ಸನದಿನಿವನನುಗೊಳಿಪನಾವನು
ಮನುಜರೊಳಗುತ್ತಮನೆಲೆ ಭೂಪಾಲ ಕೇಳೆಂದ ೫೧

ಸಲುವೆನೆಂದಂತಃಪುರಕೆ ಸಂ
ಚಲಿಸುವವನಾಪ್ತರನು ಬಿಸುಟ
ಗ್ಗಳಿಸುವವನಹಿತರಲಿ ಧರ್ಮವನುಳಿದಧರ್ಮವನು
ಬಳಸುವವನೇಕಾಂತದಲ್ಲಿಗೆ
ಸುಳಿವವನು ಹಸಿವಿಲ್ಲದುಂಬುವ
ನಿಳೆಯೊಳಗೆ ಮೂಢಾತ್ಮನೈ ಧೃತರಾಷ್ಟ್ರ ಕೇಳೆಂದ ೫೨

ಬುಧರೊಳಗೆ ಹಗೆಗೊಳುವ ಬುಧರಂ
ನಿಧನಗೆಯ್ದಿಪ ಬುಧರನೇಳಿಪ
ಬುಧರ ಜರೆದೊಡೆ ನಲಿವ ಬುಧರಂ ಪೊಗಳ್ವರಂ ಪಳಿವ
ಬುಧರನಧಮರ ಮಾಳ್ಪ ಬುಧರಂ
ವಿಧಿಗೊಳಿಪ ಬುಧರ್ಗೀವರಂ ಕವ
ರ್ವಧಮ ಭೂಪರಿಗಂಟದಿಹುದೆ ವಿನಾಶಕರವೆಂದ ೫೩

ಕುಸುಮ ಫಲ ತಾಂಬೂಲ ಗಂಧ
ಪ್ರಸರ ಭೋಜನ ಗಮನ ನೆನಹಿಂ
ದೆಸೆವ ಕಾರ್ಯದೊಳಿನಿಬರೊರಗಿದಡೊಬ್ಬನೆಚ್ಚರಿಕೆ
ಎಸೆಯಲನಿತುವನೊಬ್ಬನೇ ಭೋ
ಗಿಸುವಡವನೀಪಾಲರಿಗೆ ತಾ
ಸಸಿನವೆನಿಸದು ರಾಯ ಚಿತ್ತೈಸೆಂದನಾ ವಿದುರ ೫೪

ಕಳಿದ ತರಣಿಯ ಕಿರಣದಲಿ ನಿ
ರ್ಮಲಿನ ಜಲದಲಿ ದುಗ್ಧ ಪಾನಂ
ಗಳಲಿ ವರ ಯುವತಿಯರ ಸಂಭೋಗಾಂತರಂಗದಲಿ
ತಳಿತ ಹೋಮದ ಹೊಗೆಗಳಲಿ ದಿನ
ಬಲದೊಳಾಯುಷ್ಯಾಭಿವೃದ್ಧಿಯ
ಬೆಳವಿಗೆಗಳಹವರಸ ಚಿತ್ತೈಸೆಂದನಾ ವಿದುರ ೫೫

ಎಳೆಯ ರವಿ ರಶ್ಮಿಯಲಿ ಪ್ರೇತಾಂ
ಗಳದ ಧೂಮ ಜ್ವಾಲೆಯಲಿ ಗಾ
ವಿಲ ವಯೋವೃದ್ಧೆಯರ ಸಂಭೋಗಾಂತರಂಗಳಲಿ
ಕೊಳಚೆ ನೀರಿನ ಬಳಕೆಯಲಿ ಕ
ತ್ತಲೆಯ ದಧ್ಯೋದನದಲಾಯುಷ
ವಿಳಿದು ಹೋಗದೆ ದಿನ ದಿನದೊಳವನೀಶ ಕೇಳೆಂದ ೫೬

ಮಸುಳಿಸಿದ್ದ ದುಕೂಲ ರದನದೊ
ಳೆಸೆವ ಹಾವಸೆ ಭಕ್ತದುನ್ನತ
ದೆಸಕ ನಿಷ್ಠುರ ವಾಕ್ಯವುದಯಾಸ್ತಮಯ ಕಾಲದಲಿ
ಎಸೆವ ನಿದ್ರಾಂಗನೆಯೊಳೊಂದಿರೆ
ಬಿಸಜಲೋಚನನಾದೊಡೆಯು ವ
ರ್ಜಿಸುವಳವರನು ಭಾಗ್ಯಸಿರಿ ಭೂಪಾಲ ಕೇಳೆಂದ ೫೭

ಒಂದು ಮೊದಲಾರಂತ್ಯವಾದಾ
ಸಂದ ಪೂಗ ಫಲ ಕ್ರಮಂಗಳ
ಚಂದವನು ಚಿತ್ತೈಸು ಲಾಭಾಲಾಭ ಸುಖದುಃಖ
ಕುಂದದಿಹುದಾಯುಷ್ಯ ಮರಣವಿ
ದೆಂದು ತತ್ಕಾಲದಲಿ ಭೋಗಿಸು
ವಂದವನು ಚಿತ್ತೈಸುವುದು ತಾಂಬೂಲಧಾರಕರು ೫೮

ನಾಗವಲ್ಲಿಯ ಹಿಂದು ಮುಂದನು
ನೀಗಿ ಕಳೆಯದೆ ಚೂರ್ಣಪರ್ಣ
ತ್ಯಾಗವಿಲ್ಲದೆ ದಂತ ಧಾವನ ಪರ್ಣವನು ಸವಿದು
ಭೋಗಿಸುವೊಡಮರೇಂದ್ರನಾಗಲಿ
ನಾಗಭೂಷಣನಾದೊಡವನನು
ನೀಗಿ ಕಳೆವಳು ಭಾಗ್ಯವಧು ಭೂಪಾಲ ಕೇಳೆಂದ ೫೯

ಸ್ನಾನ ಪಂಚಕದಿಂದ್ರಿಯದ ಸಂ
ಸ್ಥಾನದಲಿ ನಿದ್ರಾಂಗನೆಯ ಸ
ನ್ಮಾನಿಸುವೊಡಾ ಸಾಧನದ ಪಂಚಕದ ಪರಿವಿಡಿಯ
ಸ್ಥಾನವರಿದಾರೋಗಣೆಯ ಸಂ
ಧಾನದಲಿ ಚಿತ್ತೈಸುವುದು ರಾ
ಜಾನುಮತವಿದು ಸಕಲ ಸುಖಕರವೆಂದನಾ ವಿದುರ ೬೦

ಜನಜನಿತ ಮಲ ಮೂತ್ರ ಮೂರಾ
ರೆನಿಸುವುದು ರತಿಯೊಂದು ನಿಜ ಭೋ
ಜನವೆರಡು ಸುಯಿಲೊಂದು ವರ ತಾಂಬೂಲ ಹದಿನೈದು
ಇನಿತುವನು ತಪ್ಪದೆ ನಡೆಸಲಾ
ಜನಪನಾರೋಗಣೆಗೆ ಸುಖ ಸಂ
ಜನಿಸುವುದು ದಿನಚರಿಯದಿಂದವನೀಶ ಕೇಳೆಂದ ೬೧

ನೆರೆದ ಸಚರಾಚರವಿದೆಲ್ಲವು
ನರರ ನಿಜಭೋಜನಕೆ ಜನಿಸಿದ
ವರಸ ಕೇಳಿದರೊಳಗೆ ಭೋಜ್ಯಾಭೋಜ್ಯವನು ತಿಳಿದು
ಪರಿಹರಿಸಬಲ್ಲವರುಗಳು ಘನ
ತರದ ಸುಕೃತವನೈದುವವರು ಭೂ
ವರರೊಳಗೆ ಸಂದೇಹವೇ ಭೂಪಾಲ ಕೇಳೆಂದ ೬೨

ತುರಗ ಹೃದಯ ಧ್ವನಿಯ ಸಿಡಿಲಿನ
ಧರಧುರದ ಗರ್ಜನೆಯ ನಾರಿಯ
ರಿರವ ಪುರುಷನ ಭಾಗ್ಯದೇವತೆಯೊಲಿವ ಕಾಲವನು
ವರುಷದುದಯುವ ಬರನ ಬರವನು
ವಿರಚಿಸುವೊಡೆ ವಿಧಾತೃಗಳವ
ಲ್ಲರಸ ಕೇಳ್ ಮಾನವರಿಗಿದು ಗೋಚರಿಸಲರಿದೆಂದ ೬೩

ಬಡತನಗಳಡಸಿದೊಡೆ ಬಂಧುಗ
ಳೆಡಹಿ ಕಾಣರು ಭಂಟ ತಾನಾ
ದೊಡೆಯು ಬಂದಾಪತ್ತಿನೊಳಗೆ ಪರಾಙ್ಮುಖನೆಯಾಗಿ
ನುಡಿಸದವನೇ ಹಗೆ ಶರೀರದೊ
ಳಡಸಿದಾ ರುಜೆ ಬಾಧೆಗಡವಿಯ
ಗಿಡ ಮರಂಗಳು ರಕ್ಷಿಸವೆ ಹೇಳೆಂದನಾ ವಿದುರ ೬೪

ಕಾಲದೊಳಗೆ ವಸಂತ ವಿದ್ಯಾ
ಜಾಲದೊಳಗೆ ಕವಿತ್ವ ಗಜ ವೈ
ಹಾಳಿಯಲಿ ದೇವೇಂದ್ರ ಮಿತ್ರಶ್ರೇಣಿಯೊಳು ವಾಣಿ
ಭಾಳನೇತ್ರನು ದೈವದಲಿ ಬಿ
ಲ್ಲಾಳಿನಲಿ ಮನ್ಮಥನು ಧನದಲಿ
ಹೇಳಲೇನಭಿಮಾನವೇ ಧನವೆಂದನಾ ವಿದುರ ೬೫

ಮುಂದೆ ಗುರುವನು ಬಂಧು ಜನವನು
ಹಿಂದೆ ಕರ್ಮಾಂತ್ಯದಲಿ ಸೇವಕ
ವೃಂದವನು ಕೊಂಡಾಡುವುದು ಸಾಹಿತ್ಯ ಭಾವವಿದು
ಹಿಂದು ಮುಂದಾವಾಗ ನಿನ್ನಯ
ನಂದನರ ನಾರಿಯರ ಹೊಗಳುವು
ದಂದವೇ ಭೂಪಾಲ ಚಿತ್ತೈಸೆಂದನಾ ವಿದುರ ೬೬

ತುರಗದೆಡಬಲ ಗಜದ ಸಮ್ಮುಖ
ತರುಣಿಯರುಗಳ ಸರ್ವತೋಮುಖ
ಹಿರಿದು ದುರ್ಜನನಿದ್ದ ದೇಶವದೆಯ್ದೆ ವ್ಯಾಘ್ರಮುಖ
ಭರದಿನಾ ದೇಶವನು ಬಿಟ್ಟರ
ವರಿಸದನ್ಯಗ್ರಾಮಗಳ ವನಾಂ
ತರವನೈದುವುದಲ್ಲದಲ್ಲಿಹುದುಚಿತವಲ್ಲೆಂದ ೬೭

ಎತ್ತಲೆತ್ತಲು ಪೋಪ ಮನುಜಂ
ಗತ್ತಲತ್ತಲೆ ದೈವ ಕೂಡೆ ಬ
ರುತ್ತಿಹುದು ಬೆಂಬಿಡದೆ ನಾನಾ ದೇಶ ದೇಶದಲಿ
ಮಿತ್ರನುರು ಮಧ್ಯಸ್ಥ ಪುರುಷನ
ಮಿತ್ರನೌದಾಸೀನನೊಬ್ಬನು
ಕೃತ್ರಿಮನು ಸಹಜೇವಿಯಿಂತಿವರರಸ ಕೇಳೆಂದ ೧೮

ಗುರು ವಿರೋಧ ಮಹೀಬುಧರ ಮ
ತ್ಸರವು ದೈವದ್ರೋಹ ಗುಣ ಸಾ
ಗರನ ಬಂಧು ದ್ವೇಷವತ್ಯಾಲೀಢ ದೀನತನ
ಶರಣಜನ ಪಾಂಡಿತ್ಯವೆಂಬಿವ
ನರವರಿಸದಂಗೈಸೆ ಭೂಪನ
ಸಿರಿಗೆ ಮೊಳೆಯದೆ ಕೇಡು ಚಿತ್ತೈಸೆಂದನಾ ವಿದುರ ೧೯

ಬಲು ಪ್ರಧಾನನ ವೈರ ಹಿತವಹ
ಲಲನೆಯರ ಮನದಳಲು ಹಗೆಯುಲಿ
ಬಳಸುವಂತಸ್ಥತೆಯನಾಮಿಕರೊಡನೆ ಕೆಳೆಗೋಷ್ಠಿ
ಬಲದೊಡನೆ ನಿರ್ಬಂಧ ಧರ್ಮದ
ನೆಲೆಯನರಿಯದ ದಾನಿಗಳ ಸಿರಿ
ಸುಳಿವ ಗಾಳಿಗೆ ಮಲೆವ ದೀಪವು ಕೇಳು ಧೃತರಾಷ್ಟ್ರ ೨೦

ಹುಸಿ ಪರದ್ರೋಹವು ಪರ ಸ್ತ್ರೀ
ವ್ಯಸನಪೇಯವಸೂಯೆ ಮಾನ್ಯ
ದ್ವಿಷತೆ ಪತಿತ ಸಮೇತವಾತ್ಮಸ್ತುತಿಯೆನಿಪ್ಪಿವನು
ಬಿಸುಟು ತದ್ವಿಪರೀತದಲಿ ವ
ರ್ತಿಸುವನವನೇ ರಾಯನಾತಗೆ
ವಸುಧೆಯೊಳಗೆಣೆಯಾವನೈ ಭೂಪಾಲ ಕೇಳೆಂದ ೨೧

ಇದು ಸಮಾಹಿತವಿದು ಶುಭೋದಯ
ವಿದು ಸಕಲ ಪುರುಷಾರ್ಥ ಸಾಧನ
ವಿದು ಸುಜನ ಸನ್ಮಾನವಿದು ಸಂಸಾರ ಸೌಖ್ಯಫಲ
ಇದು ಸುಬಲವಿದಬಲವಿದಾಮ್ನಾ
ಯದ ಸುನಿಶ್ಚಯ ನೀತಿ ಕಾರ್ಯದ
ಹದನನರಿದಾಚರಿಸಬಲ್ಲವನವನೆ ಪಂಡಿತನು ೨೨

ಶತ್ರುಕಾಲ ಸುದೇಶ ವರ್ಗ ಸು
ಮಿತ್ರರುದಯೋಪಾಯಕರಣ ಸು
ಪಾತ್ರವೆಂಬಿವು ಮೂರು ತೆರನಾಗಿಪ್ಪವಿದರೊಳಗೆ
ಕ್ಷತ್ರಧರ್ಮ ವಿವೇಕವೆಂಬಿವ
ನೊತ್ತುಗೊಳಿಪನೆ ರಾಯನವಗೆ ಧ
ರಿತ್ರಿಯೊಳಗೆಣೆಯಾವನೈ ಭೂಪಾಲ ಕೇಳೆಂದ ೨೩

ಎಲ್ಲಿ ಸುಲಲಿತ ವಿದ್ಯೆ ಬಹು ಗುಣ
ವೆಲ್ಲಿ ಗಣಿಕಾ ನಿಕರ ಮಣಿ ಗಣ
ವೆಲ್ಲಿ ಗಜ ಜಾತ್ಯಶ್ವವೆಲ್ಲಿ ವರೂಥ ಸಂದೋಹ
ಎಲ್ಲಿ ಸುಭಟ ನಿಕಾಯ ನೆರೆದಿಹು
ದಲ್ಲಿ ತನ್ನಾಧೀನ ಮಾಡಲು
ಬಲ್ಲವನೆ ನೃಪನಾತಗಿದಿರಾರೈ ಧರಿತ್ರಿಯಲಿ ೨೪

ದ್ವಾರವೊಂಬತ್ತಿಂದ್ರಿಯದವಹಂ
ಕಾರಕರಣ ಚತುಷ್ಟಯಂಗಳ
ಸಾರ ಭೂತಾಧಿಕದ ಸುಳಿವಿನ ಪಂಚ ವಾಯುಗಳ
ಹೋರಟೆಗಳಲಿ ಬಳಲಿ ಜೀವನ
ಧೀರನಹವೊಲು ಪಾಂಡುಪುತ್ರರ
ಕೌರವರ ಬೇಳಂಬದಲಿ ಬೆಂಡಾದೆ ನೀನೆಂದ ೨೫

ಮತ್ತನತಿಶ್ರಾಂತನು ಪ್ರಮದೋ
ನ್ಮತ್ತನತಿ ಕುಪಿತಾನನನು ಚಲ
ಚಿತ್ತನತಿ ಕಾಮುಕನು ಲುಬ್ಧನು ಶೂರನೆಂಬವನು
ಕ್ಷುತ್ತು ಘನವಾಗುಳ್ಳನಿಂತೀ
ಹತ್ತು ಜನವಾವಾಗ ಧರ್ಮದ
ತತ್ತ್ವವಣೆಗಳನರಿಯರೈ ಭೂಪಾಲ ಕೇಳೆಂದ ೨೬

ದಾನವಿಷ್ಟಾಪೂರ್ತ ವಿನಯ ಸ
ಮಾನ ದೇವಾರ್ಚನೆ ಮಹೀಸುರ
ಧೇನು ಸಂತರ್ಪಣ ಮಹಾತಿಥಿ ಪೂಜೆ ಗುರುಭಕ್ತಿ
ಧ್ಯಾನ ದೀನಾನಾಥಬಂಧು ವಿ
ತಾನ ಶರಣಾಗತ ಸುರಕ್ಷಾ
ಸ್ನಾನತೀರ್ಥಂಗಳನು ಮಾಡಲು ಬೇಹುದವನಿಪರು ೨೭

ಧರೆಯೊಳೀ ಹೊತ್ತಿನಲಿ ನಿನಗೈ
ಶ್ವರಿಯದಲಿ ಮಕ್ಕಳಲಿ ಖಂಡೆಯ
ಸಿರಿಯಲೊಡಹುಟ್ಟಿದರು ಸಪ್ತಾಂಗದಲಿ ಸತಿಯರಲಿ
ಗುರು ಪಿತಾಮಹ ಬಂಧುಜನ ಮಿ
ತ್ರರಲದಾವುದು ಕೊರತೆ ಕೌಂತೇ
ಯರ ನೆರವಿಗರ ಮಾಡುವರೆ ಧೃತರಾಷ್ಟ್ರ ಕೇಳೆಂದ ೨೮

ಉಭಯಕುಲಶುದ್ಧಿಯಲಿ ಹೆಚ್ಚಿದ
ವಿಭವದಲಿ ವಿಗ್ರಹದಲಧಿಕ
ಪ್ರಭೆಗಳಲಿ ಸತ್ಯದಲಿ ಸಾಹಿತ್ಯದಲಿ ವಿನಯದಲಿ
ಅಭವನಂಘ್ರಿಯ ಸೇವೆಯಲಿ ಹರಿ
ನಿಭನೆನಿಸಿ ಬದುಕುವನು ರಾಜ್ಯಕೆ
ವಿಭುವೆನಿಸುವನು ರಾಯ ಚಿತ್ತೈಸೆಂದನಾ ವಿದುರ ೨೯

ವೇಸಿಯಹ ಪರಿಯಂಕದಲಿ ನಿಜ
ದಾಸಿಯಹ ಶುಶ್ರೂಷೆಯಲಿ ನಿ
ರ್ದೋಷಿಯಹ ಪತಿಭಕ್ತಿಯಲಿ ಮೋಹದಲಿ ತಾಯೆನಿಸಿ
ವಿಸು ಕಾರ್ಯಕೆ ಮಂತ್ರಿಯೆನಿಸುವ
ಮೈಸಿರಿಯನುಳ್ಳವಳು ರಾಣೀ
ವಾಸವೆಂದೆನಿಸುವಳೆಲೈ ಭೂಪಾಲ ಕೇಳೆಂದ ೩೦

ತಂದೆ ತಾಯಿಗಳಾಜ್ಞೆಯನು ಸಾ
ನಂದದಲಿ ಪಾಲಿಸುತ ಮದವನು
ಮುಂದುಗೆಡಿಸಿ ಸುಧರ್ಮದಲಿ ರಾಜ್ಯವನು ಪಾಲಿಸುತ
ಬಂಧು ಬಳಗವ ಸಲಹಿ ಭೂಸುರ
ವೃಂದವನು ನೆರೆ ಹೊರೆವಡೆವ ಸುತ
ವಂದ್ಯನೈ ಲೋಕಕ್ಕೆ ಚಿತ್ತೈಸೆಂದನಾ ವಿದುರ ೩೧

ಇಹಪರದ ಸುಖ ಸಂಗತಿಯ ಸಂ
ಗ್ರಹಿಸಿ ವೇದಾಚಾರದಲಿ ಸ
ನ್ನಿಹಿತನಾಗಿ ಸಮಸ್ತ ಕಳೆಯಲಭಿಜ್ಞನೆಂದೆನಿಸಿ
ಅಹಿತ ಕುಲವನು ಸಮರದಲಿ ನಿ
ರ್ವಹಿಸಿ ಶರಣಾಗತರ ಪಾಲಿಸು
ತಿಹಡವನು ಮಗನೆನಿಸುವನು ಭೂಪಾಲ ಕೇಳೆಂದ ೮೨

ಇಂದ್ರಿಯವನೊಡೆತುಳಿದು ಕರ್ಮದ
ಬಂದಿಯನು ತಲೆಬಳಚಿ ವಿಷಯದ
ದಂದುಗವನೀಡಾಡಿ ಮಾಯಾ ಪಾಶವನು ಹರಿದು
ದ್ವಂದ್ವವಿರಹಿತನಾಗಿ ವಿಶ್ವದ
ಲೊಂದಿ ಮೆರೆಯಲು ಬಲ್ಲವನು ಗುರು
ವೆಂದೆನಿಸುವನು ರಾಯ ಚಿತ್ತೈಸೆಂದನಾ ವಿದುರ ೮೩

ಒಡಲೊಡವೆ ಮೊದಲಾದುವೆಲ್ಲವ
ತಡೆಯದೊಪ್ಪಿಸಿ ಗುರುವಿನಂಘ್ರಿಯ
ಹಿಡಿದು ಭಜಿಸುತ ಕೊಟ್ಟ ಕೆಲಸಂಗಳೊಳಗನಿತುವನು
ಬಿಡದೆ ಪ್ರಾರುತ್ತರವನವರಿಗೆ
ಕೊಡದೆ ಭಯ ಭಕ್ತಿಯಲಿ ತಪ್ಪದೆ
ನಡೆಯ ಬಲ್ಲವನವನೆ ಶಿಷ್ಯನು ರಾಯ ಕೇಳೆಂದ ೮೪

ಯುಕುತಿವಿದರುಗಳಾಗಿ ವಿದ್ಯಾ
ಧಿಕರೆನಿಸಿ ಸಮಬುದ್ಧಿಗಳ ನಾ
ಟಕವ ನಟಿಸುತ ಪರಮ ತತ್ವಜ್ಞಾನಪರರಾಗಿ
ಸಕಲ ಕಳೆಯಲಭಿಜ್ಞರಹ ಧಾ
ರ್ಮಿಕರು ಪರಪುರುಷಾರ್ಥಿಗಳು ವೈ
ದಿಕರಲೇ ವಿದ್ವಾಂಸರೆನಿಸುವರರಸ ಕೇಳೆಂದ ೮೫

ದಂಡ ನೀತಿ ಸ್ಮಾರ್ತ ಶೌಚೋ
ದ್ದಂಡ ವೇದಾಧ್ಯಯನ ನಿಪುಣನ
ಪಂಡಿತಪ್ರಿಯ ಶಾಂತಿ ಪೌಷ್ಟಿಕ ಕರ್ಮ ದೀಧಿತನ
ಚಂಡ ದೈವಜ್ಞನನಧಿಕ ಗುಣ
ಮಂಡನನ ಬಹು ಶಾಸ್ತ್ರ ಪಠಣನ
ಪಂಡಿತನ ಪೌರೋಹಿತನ ಮಾಡುವುದರಸ ಕೇಳೆಂದ ೮೬

ಸ್ಥೂಲ ಸೂಕ್ಷ್ಮ ಕೃತಜ್ಞನುತ್ಸವ
ಶೀಲನಕ್ರೋಧಿಯನ ದೀರ್ಘ ವಿ
ಶಾಲ ಸೂತ್ರಿಯ ವೃದ್ಧಸೇವಕ ಸತ್ಯ ವಾಕ್ಯಾಚಿಯ
ಕಾಲವೇದಿ ವಿನೀತನವ್ಯಸ
ನಾಳಿ ಸೂರಿ ರಹಸ್ಯ ಸತ್ಕೃತಿ
ಪಾಲನಾನ್ವಿತ ಮಂತ್ರಿಯುಂಟೇ ರಾಯ ನಿನಗೆಂದ ೮೭

ತುರಗ ಗಜ ಭಟರಳವರಿವ ಸಂ
ಗರ ಮಹೋತ್ಸಾಹನ ಜಿತ ಶ್ರಮ
ನರಿಕಟಕ ಭೇದಕನ ನಾನಾಯುಧ ವಿಶಾರದನ
ಭರಿತ ಧೈರ್ಯನ ಪತಿಹಿತನ ಸಂ
ಗರಸದಾರನನೂರ್ಧ್ವರೋಮನ
ನಿರದೆ ಸೇನಾಪತಿಯ ಮಾಡುವುದರಸ ಕೇಳೆಂದ ೮೮

ತಿಳಿದವನ ಮತಿವಿದನ ಭಾಷಾ
ವಳಿ ಲಿಪಿಜ್ಞನ ಸಾಕ್ಷರನ ಮಂ
ಡಳಿಕ ಸಾವಂತರ ವಿಶೇಷದಲವಸರವನರಿದು
ಸಲೆ ಕರೆವ ಕಳುಹಿಸುವ ನಿಲಿಸುವ
ಬಲುಹನುಳ್ಳನ ಸುಕರ ದುಷ್ಕರ
ತಿಳಿವ ಹೃದಯನ ಸಂಧಿವಿಗ್ರಹರೆನಿಸಬೇಕೆಂದ ೮೯

ಮಿಸುಪ ಮಣಿಗಣ ಲೋಹ ಕಾಂಚನ
ವಿಸರ ಭೇದವನರಿವ ಕೊಟ್ಟುದ
ನಸಿಯಲೀಯದೆ ತಾನು ಭಕ್ಷಿಸದಹಿ ನಿಧಾನವನು
ಒಸೆದು ಕಾದಿಪ್ಪಂತೆ ಕಾದಿಹ
ಹುಸಿಯದಾಪ್ತನ ಬಹು ಕುಟುಂಬ
ವ್ಯಸನವುಳ್ಳನ ಮಾಳ್ಪುದೈ ಭಂಡಾರ ರಕ್ಷಕನ ೯೦

ಮನ ವಚನ ಕಾಯದಲಿ ದಾತಾ
ರನ ಹಿತವನುಳ್ಳನ ವಿನೀತನ
ವಿನುತ ವನಿತಾ ನತಮುಖನ ನಿಷ್ಕಳಿತ ರೋಷಕನ
ಮುನಿವವರ ಬುದ್ಧಿಯಲಿ ಸಿಲುಕದ
ವನ ವಿಶೇಷ ಕಳಾ ಪ್ರವೀಣನ
ಜನಪ ಚಿತ್ತೈಸುವುದೆಲೈ ತಾಂಬೂಲಧಾರಕನ ೯೧

ಪಿತೃ ಪಿತಾಮಹ ಸೂಪ ಶಾಸ್ತ್ರಾ
ಯುತನ ಕೈಕರಣೆಗಳಲಧಿಕನ
ನತಿ ಶುಚಿಯ ಸಾಧಕನನಕ್ರೋಧಿಯನನಾಲಸನ
ಪತಿಹಿತನ ಷಡುರಸ ವಿಶೇಷಾ
ನ್ವಿತನನಿತರಾಲಯ ವಿದೂರನ
ಪತಿಕರಿಸುವುದು ಸೂಪಕಾರತೆಗರಸ ಕೇಳೆಂದ ೯೨

ನಿಶಿತ ಪರಿಮಳ ಮೋದದಿಂ ಮೋ
ದಿಸುವ ಗಂಧದ್ರವ್ಯದಲಿ ಪಂ
ರಿಸಿದ ಜೀವನ ಜೀವ ತನ್ನಯ ಜೀವನವೆಯೆಂದು
ವಸುಮತೀಶರಿಗಿತ್ತು ತಾ ಭೋ
ಗಿಸದೆ ಬಳಸದೆ ರಾಜನನೋಲ
ಗಿಸುವವನೆ ಪಾನೀಯಧಾರಕನರಸ ಕೇಳೆಂದ ೯೩

ಉನ್ನತನ ರೂಪಾಧಿಕನ ಸಂ
ಪೂರ್ಣದಕ್ಷನನನ್ಯರೆನ್ನವ
ರೆನ್ನದನ ಪರರಿಂಗಿತಾಕಾರ ಪ್ರಭೇದಕನ
ಮನ್ನಣೆಗೆ ಬೆರೆಯದನನಾಪ್ತನ
ನನ್ಯ ಕಾರ್ಯೋಚಿತ ಸಮಪ್ರತಿ
ಪನ್ನ ಪಡಿಹಾರಕನ ಮಾಡುವುದರಸ ಕೇಳೆಂದ ೯೪

ಗ್ರಾಮ ಮೂರರ ಸಂಚರಣೆಗಳ
ಸೀಮೆಯಲಿ ಸರಿಗಮಪದನಿಗಳ
ನೇಮ ತಪ್ಪದೆ ಹರಣಭರಣದ ಹೆಂಪು ತಿರುಪುಗಳ
ಕೋಮಲಿತ ಶಾರೀರ ಹೃದಯದ
ರಾಮಣೀಯಕ ರಚನೆಯಲ್ಲಿ ಸ
ನಾಮನೆನಿಸುವನವನೆ ಗಾಯಕನರಸ ಕೇಳೆಂದ ೯೫

ತಾಳಲಯ ಬೊಂಬಾಳ ಮಿಶ್ರದ
ಹೇಳಿಕೆಯನಾ ತಾಯ ಶುದ್ಧದ
ಸಾಳಗದ ಸಂಕೀರ್ಣ ದೇಸಿಯ ವಿವಿಧ ರಚನೆಗಳ
ಮೇಳವರಿವುತ ವಾದ್ಯ ಸಾಧನ
ದೇಳಿಗೆಯ ಸಂಪೂರ್ಣ ಮಾರ್ಗದ
ಸೂಳುಗಳು ಲಯಮಾನವರಿದವನವನೆ ಗಾಯಕನು ೯೬

ಗಾಯದಲಿ ಮೇಣ್ ಚೊಕ್ಕೆಯದಲಡು
ವಾಯಿಗಳಲುಪಕಾಯದೊಳಗೆ ನ
ವಾಯಿಗಳ ಬಿನ್ನಾಣದಲಿ ಬಳಿಸಂದು ಬೇಸರದೆ
ಸ್ಥಾಯಿಯಲಿ ಸಂಚಾರದಲಿ ಸಮ
ಗೈಯೆನಿಸಿ ನಾನಾ ವಿನೋದದ
ದಾಯವರಿವವನವನೆ ಮಲ್ಲನು ಕೇಳು ಧೃತರಾಷ್ಟ್ರ ೯೭

ಎಡಬಲನನಾರೈವುತೊಬ್ಬನ
ಬಿಡದೆ ನೋಡುತ ಮಕ್ಷಿಕಂಗಳ
ಗಡಣವನು ಕೆದರಿಸುತ ಕಿಗ್ಗಣ್ಣಿಕ್ಕಿ ಕೆಲಬಲನ
ಜಡಿದು ನೂಕುವ ಸ್ವಾಮಿ ಕಾರ್ಯದ
ಕಡೆಯೆನಿಸುತಾವಾಗ ಸೇವೆಗೆ
ಸೆಡೆಯದವನೇ ಚಮರಧಾರಕನರಸ ಕೇಳೆಂದ ೯೮

ಗುಳಿ ತೆವರನೀಕ್ಷಿಸುತ ಬಟ್ಟೆಯ
ಮೆಳೆ ಮರಂಗಳ ಹೊಯ್ಲ ತಪ್ಪಿಸಿ
ನೆಳಲನರಸುತ ವೇಗಗತಿ ಸಾಮಾನ್ಯ ಗತಿಗಳಲಿ
ಬಳಿವಿಡಿದು ಭೂಭುಜರ ಯಾನಂ
ಗಳೊಳಗಳುಕದೆ ಡಗೆಯ ಸೈರಿಸಿ
ಬಳಸುವವನೇ ಛತ್ರಧಾರಕನರಸ ಕೇಳೆಂದ ೯೯

ಹರುಷದಲಿ ನಿಜಜನನಿ ಗರ್ಭವ
ಧರಿಸಿಕೊಂಡಾಡುವವೊಲುತ್ತಮ
ಪುರುಷರಂತರ್ಯಾಮಿಯನು ತಾಳ್ವಂತೆ ಭೂಭುಜರ
ಧರಿಸಿ ಸುಖ ಸಂಗತಿಗಳಲಿ ಸಂ
ಚರಿಸುತಾಳ್ದನ ಹಾನಿ ವೃದ್ಧಿಯ
ಲಿರಲು ಬೆಸದವರೆನಿಸುವರು ಭೂಪಾಲ ಕೇಳೆಂದ ೧೦೦

ಹಿಂದೆ ಮಾಡಿದ ಸುಕೃತ ಫಲವೈ
ತಂದು ಸಾರುವವೋಲು ನಾನಾ
ಚಂದದಾಪತ್ತಿನಲಿ ಹರಿ ನಿಜಭಕ್ತ ಸಂತತಿಯ
ಮುಂದೆ ನಿಲುವವೊಲವನಿ ಪಾಲರ
ದಂದುಗದ ಹೊತ್ತಿನಲಿ ಗಜ ಹಯ
ವೃಂದವನೆ ಚಾಚುವನು ವಾಹಕನರಸ ಕೇಳೆಂದ ೧೦೧

ಪರ್ಬತವನೊಡೆದುಳಿಸಿ ಭೂಮಿಯ
ನಿಬ್ಬಗೆಯ ಮಾಡಿಸುತ ರಥ ಗಜ
ದೊಬ್ಬುಳಿಯ ಹರೆಗಡಿಸಿ ಕಾದಿಸುತಾನೆಗಳ ಮೇಲೆ
ಬೊಬ್ಬಿರಿದು ಶರವಳೆಯ ಸುರಿಸುರಿ
ದುಬ್ಬರದ ಬವರದೊಳಗಹಿತರಿ
ಗುಬ್ಬಸವನೆಸಗುವನೆ ಜೋಧನು ರಾಯ ಕೇಳೆಂದ ೧೦೨

ಕುದುರೆಗಳನಾರೈದು ರಥವನು
ಹದುಳಿಸುತ ಸಾರಥಿಯನೊಲವು
ತ್ತಿದಿರ ಮುರಿವುತ ತನ್ನ ಕಾಯಿದುಕೊಳುತ ಕೆಲಬಲನ
ಸದೆದು ಮುರಳುವ ಲಾಗು ವೇಗದ
ಕದನ ಕಾಲಾನಲನವನು ತಾ
ಮೊದಲಿಗನಲೇ ರಥಿಕರಿಗೆ ಧೃತರಾಷ್ಟ್ರ ಕೇಳೆಂದ ೧೦೩

ಬಿಟ್ಟಿ ಸೂಟಿಯಲರಿ ನೃಪಾಲರ
ಮುಟ್ಟಿ ಮೂದಲಿಸುತ್ತ ಮೋಹಿದ
ಥಟ್ಟನೊಡೆಹಾಯ್ದಹಿತ ಬಲದೊಳಗಾನೆವರಿವರಿದು
ಹಿಟ್ಟುಗುಟ್ಟುತ ಹೆಣನ ವಟ್ಟಾ
ವಟ್ಟಿ ಮುಸಗಲು ಕಳನ ಚೌಕದ
ಲಟ್ಟಿಯಾಡಿಸಬಲ್ಲಡವ ರಾವುತನು ಕೇಳೆಂದ ೧೦೪

ಬೇಸರದೆ ಕಾಳೋರಗನನ
ಡ್ಡೈಸಿ ಕಟ್ಟಿರುವೆಗಳು ಖಂಡವ
ಸೂಸಿ ಕಡಿಕಡಿದೊಟ್ಟಿದಂದದಲಹಿತ ಬಲದೊಳಗೆ
ಓಸರಿಸದೊಳಹೊಕ್ಕು ಸಮರ ವಿ
ಳಾಸವನು ನೆರೆ ಮೆರೆದು ಕೇಶಾ
ಕೇಶಿಗೊದಗುವನವನೆ ಕಾಲಾಳರಸ ಕೇಳೆಂದ ೧೦೫

ಬರಲು ಕಂಡಡೆ ವಂದಿಸುತಲಂ
ತರಿಸಿ ಮಿಗೆ ಹತ್ತಿರವೆನಿಸದತಿ
ತರದ ದೂರವ ಸಾರದೀಪರಿ ಮಧ್ಯಗತನೆನಿಸಿ
ಪರಿವಿಡಿಯಲೋಲಗಿಸುತರಸನ
ಸಿರಿಮೊಗವನೀಕ್ಷಿಸುತ ಬೆಸಸಿದ
ನರವರಿಸದಾಕ್ಷಣಕೆ ಮಾಡುವನವನೆ ಸೇವಕನು ೧೦೬

ಕನಖಿ ಕುಷ್ಠ ಕುಶೀಲಕನು ಕು
ಬ್ಜನನು ವಿಧವಾಲಿಂಗಿ ದಾಸಿಯ
ತನು ವಿಕಾರಿಯನಂಗ ಹೀನನ ಪಂಗುಳಾಂಧಕನ
ಘನ ರುಜಾಂಗನ ಬಿಡುದಲೆಯ ರೋ
ಧಿನಿಯನುಪ್ಪವಡಿಸುವ ಸಮಯದೊ
ಳಿನಿಬರನು ಕಾಣ್ಬುದು ಮಹೀಶರಿಗಂಗವಲ್ಲೆಂದ ೧೦೭

ಕಲಶ ಕನ್ನಡಿ ಕರಿತುರಗ ಗೋ
ಕುಲ ವೃಷಭ ಬುಧನಿಚಯ ಗಿರಿ ಸಂ
ಕುಳ ಸುವಾಸಿನಿ ಮಾತೃಪಿತೃ ವರ ವಾಹಿನೀನಿಚಯ
ಜಲಧಿವಸನಚ್ಛತ್ರ ಉರ್ವೀ
ಲಲನೆಯರನೀಕ್ಷಿಸುವುದವನಿಪ
ತಿಲಕರುಪ್ಪವಡಿಸುವ ಸಮಯದೊಳರಸ ಕೇಳೆಂದ ೧೦೮

ಶ್ವಾನ ಕುಕ್ಕುಟ ಕಾಕ ಬಕ ಪವ
ಮಾನ ಖಗಪತಿ ದಿವಿಜ ರಜನಿ ಕೃ
ಶಾನುವಿನ ಗಾರ್ದಭನ ವೃಷಭನ ಶಿಂಶುಮಾರಕನ
ವಾನರನ ಹಯ ಕುಂಜರನ ಪಂ
ಚಾನನನ ಮೃಗಪೋತಕನ ಗುಣ
ವಾ ನರೇಂದ್ರನೊಳಿರಲು ಬೇಹುದು ಭೂಪ ಕೇಳೆಂದ ೧೦೯

ಪರಿಪರಿಯ ದಾನಂಗಳನು ಕರೆ
ಕರೆದು ಲೋಗರಿಗಿತ್ತು ಪರರನು
ಹೊರೆದು ತನ್ನಾಶ್ರಿತರನತಿಗಳೆದಾಪ್ತ ಬಾಂಧವರ
ಸರಕು ಮಾಡದೆ ಗರ್ವದಿಂದು
ಬ್ಬರಿಸುತಿಹ ಪಾತಕರ ಪದವಿಯ
ನರಸ ಬಣ್ಣಿಸಲಾರು ಬಲ್ಲರು ಯಮನ ನಗರಿಯಲಿ ೧೧೦

ಮೂರು ಕೋಟಿಯು ಕೋಟಿಧರ್ಮವ
ಮೀರದಿಹ ರೋಮಾಳಿ ಸಂಖ್ಯೆಯೊ
ಳಾರೆನೆನ್ನದೆ ನಿಜಪತಿಯ ಸಹಗಮನದಲಿ ತನುವ
ಮಾರಿದಬಲೆಯರುಗಳ ದೆಸೆಯಿಂ
ದಾರುಮಡಿ ಸ್ವರ್ಗಾದಿ ಭೋಗವ
ಸೂರೆಗೊಂಬುದು ತಪ್ಪದವನೀಪಾಲ ಕೇಳೆಂದ ೧೧೧

ಆವನೊಬ್ಬನು ಸತ್ಯಕೋಸುಗ
ಭಾವಶುದ್ಧಿಯಲೊರಡಿಚುವ ಶಪ
ಥಾವಸಾನದಲವನಧರ್ಮದಲರ್ಥವನು ಯಮನು
ಓವನನ್ಯಾಯದಲಿ ಸೂರುಳ
ನೋವಿ ರಚಿಸಿದವಂಗೆ ಗತಿಯಿ
ನ್ನಾವುದೆಂಬುದನಾರು ಬಲ್ಲರು ಭೂಪ ಕೇಳೆಂದ ೧೧೨

ಕೋಪವೆಂಬುದನರ್ಥ ಸಾಧನ
ಕೋಪವೇ ಸಂಸಾರ ಬಂಧನ
ಕೋಪದಿಂದಿಹಪರದ ಸುಕೃತವು ಲಯವನೈದುವುದು
ಕೋಪವನು ವರ್ಜಿಸಲು ಬೇಹುದು
ಕೋಪವುಳ್ಳವನಾವನಾಗಲಿ
ಕಾಪುರುಷನಿಹಪರಕೆ ಚಿತ್ತೈಸೆಂದನಾ ವಿದುರ ೧೧೩

ವೈದ್ಯನಲಿ ಮಾಂಸದಲಿ ದ್ವಿಜನಲಿ
ನಿದ್ರೆಯಲಿ ತರುವಿನಲಿ ವನದಲಿ
ವಿದ್ಯೆಯಲಿ ಪದವಿಯಲಿ ಸಂಖ್ಯಾಸಂಖ್ಯವೆಸರುಗಳ
ತದ್ವಿಷಯಕೆ ಮಹಾ ಸಬುದವನು
ಹೊದ್ದಿಸುವುದತಿಕಷ್ಟವವರಿಗೆ
ಸದ್ಯಫಲವದು ತಪ್ಪದವನೀಪಾಲ ಕೇಳೆಂದ ೧೧೪

ಗರುವ ಮಾನ್ಯನು ಮನಿತ ದೈವಾ
ಪರನು ಕಡುಸುಖಿ ಭೋಗಿ ರೂಪೋ
ತ್ಕರನು ಧನಿಕನು ರಾಜಪೂಜ್ಯನು ಕೀರ್ತಿವಲ್ಲಭನು
ಗುರುಜನಕೆ ಬಹು ವಿದ್ಯವುಳ್ಳವ
ನರಸ ಕೇಳೈ ವಿದ್ಯೆಯಿಲ್ಲದ
ನರನು ನರಪಶುವವನ ಜನ್ಮ ನಿರರ್ಥಕರವೆಂದ ೧೧೫

ವಿದ್ಯೆ ಸತ್ಕುಲ ಬಹು ವಿವೇಕವು
ಬುದ್ಧಿ ಜಾಣ್ಮೆಯು ನುಡಿಯ ಸಡಗರ
ಶುದ್ಧಚಿತ್ತ ಸುಶೀಲ ಭುಜಬಲ ಭದ್ರನೆಂದೆನಿಸಿ
ಉದ್ಯೋಗವು ಮೊದಲಾದ ಗುಣಗಳಿ
ವಿದ್ದು ಫಲವೇನೀ ಜಗದ ತೊರೆ
ಮದ್ದು ಹೊದ್ದದ ನರಗೆ ದಾರಿದ್ರಾಂಗನಾವರಗೆ ೧೧೬

ಧರೆಯೊಳಗೆ ಶುಚಿಯುಹನು ವೈಶ್ವಾ
ನರನು ಕಾಂತಾದರ್ಶಿಯುಹ ಕವಿ
ವರನು ಸುವ್ರತ ಕಾಮನೆನಿಸುವ ಬ್ರಾಹ್ಮಣೋತ್ತಮನು
ಹರಿಪರಾತ್ಮಕ ನಾಮ ಕೀರ್ತನ
ವೆರಸಿ ಬದುಕುವನೊಬ್ಬನೀ ನಾ
ಲ್ವರುಗಳಲ್ಲದೆ ಭುವನದೊಳಗನ್ಯತ್ರವಿಲ್ಲೆಂದ ೧೧೭

ಹರಿಭಕುತಿ ಲೋಲುಪನೆನಿಸಿ ಶಂ
ಕರನ ಬದ್ಧ ದ್ವೇಷಿಯುಹ ಶಂ
ಕರನ ಭಕ್ತಿಯೊಳಧಿಕವಾಗಿಯು ವೈಷ್ಣವರ ಮೇಲೆ
ಎರಕವಿಲ್ಲದ ಕರ್ಮ ಚಾಂಡಾ
ಲರುಗಳೆಪ್ಪತ್ತೈದು ಕೋಟಿಯ
ನರಕದೊಳಗೋಲಾಡುತಿಹರೆಲೆ ರಾಯ ಕೇಳೆಂದ ೧೧೮

ಯತಿ ಕೆಡುಗು ದುಸ್ಸಂಗದಲಿ ಭೂ
ಪತಿ ಕೆಡುಗು ದುರ್ಮಂತ್ರಿಯಲಿ ವರ
ಸುತ ಕೆಡುಗು ಲಾಲನೆಗಳಲಿ ಕೃಷಿ ಕೆಡುಗುಪೇಕ್ಷೆಯಲಿ
ಮತಿ ಕೆಡುಗು ಮಧುಪಾನದಲಿ ಸ
ದ್ಗತಿ ಕೆಡುಗು ದುಶ್ಚರಿತದಲಿ ನಿಜ
ಸತಿ ಕೆಡುಗು ದುರ್ವ್ಯಸನದಲಿ ಭೂಪಾಲ ಕೇಳೆಂದ ೧೧೯

ಉಂಡು ತೀರಿಸಬೇಕು ತಾ ಮುಂ
ಕೊಂಡು ಮಾಡಿದ ಪುಣ್ಯ ಪಾಪದ
ತಂಡವನು ತರಹರಣವಿಲ್ಲದೆ ಭವ ಭವಂಗಳಲಿ
ಹಿಂಡಿ ಹಿಳಿವುದು ಬೆಂಬಿಡದೆ ಸಮ
ದಂಡಿಯಲಿ ಹಗೆ ಕೆಳೆಗಳೆನ್ನದೆ
ಗಂಡುಗೆಡಿಸದೆ ಬಿಡುವುದೇ ವಿಧಿಯೆಂದನಾ ವಿದುರ ೧೨೦

ಸ್ನೇಹಪೂರ್ವಕದಿಂದ ಮನದೊಳ
ಗಾಹಿಸಲು ಲಕ್ಷ್ಮೀಶನವರಿಗೆ
ದೇಹ ಪುರುಷಾರ್ಥಂಗಳಹವೆಲ್ಲಿದ್ದರಲ್ಲಲ್ಲಿ
ಈ ಹದನು ತಪ್ಪುವುದೆ ಕೂರ್ಮನ
ಮೋಹದಲಿ ತತ್ಸಂತತಿಗೆ ನಿ
ರ್ವಾಹವಹವೋಲರಸ ಚಿತ್ತೈಸೆಂದನಾ ವಿದುರ ೧೨೧

ಕೂಡಿದೆಡೆಯಲಕೃತ್ಯ ಶತವನು
ಜೋಡಿಸಿದವರು ಮಿತ್ರರುಗಳಿಗೆ
ಕೇಡ ಚಿಂತಿಸಿದವರುಗಳು ಪುರುಷಾರ್ಥವನು ತಮಗೆ
ಮಾಡಿದವರುಗಳಿಗೆ ವಿಘಾತಿಯ
ಹೂಡಿದವದಿರು ನರಕದೊಳಗೋ
ಲಾಡದಿಹರೇ ರಾಯ ಚಿತ್ತೈಸೆಂದನಾ ವಿದುರ ೧೨೨

ಕುಲಜನಾಗಲಕುಲಜನಾಗಲಿ
ಜಲರುಹಾಕ್ಷನ ನಾಮ ಕೀರ್ತನ
ದೊಳಗೆ ಬದುಕುವನಾವನಾತನೆ ಸುಕೃತಿಯೆಂಬವನು
ಉಳಿದ ಜಪ ತಪ ನಿಯಮ ಹೋಮಂ
ಗಳಲಿ ಸಂಸಾರಾರ್ಣವವನು
ಚ್ಚಳಿಸಬಹುದೇ ರಾಯ ಚಿತ್ತೈಸೆಂದನಾ ವಿದುರ ೧೨೩

ಜಾತರೂಪದಲೇಸು ಹೊಲ್ಲೆಹ
ವೀತಿಹೋತ್ರನ ದೇಹಕಾರಣ
ಭೂತವಾಗಿಹುದವಗೆ ಸದಸತ್ತುಗಳ ಭೇದವನು
ನೀತಿ ಮುಖದಿಂದರಿವುದುತ್ತಮ
ನೀತ ಮಧ್ಯಮನೀತ ಕನಿಯಸ
ನೀತವೆಂಬುದನರಸ ಚಿತ್ತೈಸೆಂದನಾ ವಿದುರ ೧೨೪

ಅವನಿಯಲಿ ಜನಜನಿತ ಧನ ಧಾ
ನ್ಯವನು ಕಳಹಲಗೈದು ಸಂತೋ
ಷವನು ಮಾಡುವ ಕಡೆಯಲೊಂದಕೆ ನೂರು ಮಡಿಯಾಗಿ
ಲವಲವಿಕೆ ಮಿಗಲಿತ್ತು ಸಪ್ತಾಂ
ಗವನು ಸಲಹುತ್ತಿರಲುಬೇಹುದು
ರವಿಯುಪೊಲು ಸಾವಿರ ಮುಖದೊಳವನೀಶ ಕೇಳೆಂದ ೧೨೫

ಇನನುದಯಿಸಲು ಪಶ್ಚಿಮಾದ್ರಿಯೊ
ಳನಲನೊಮ್ಮೆ ಹಿಮಾಂಶುವಾಗಲಿ
ಕನಕಗಿರಿಗಲ್ಲಾಟವಾಗಲಿ ಪರ್ವತಾಗ್ರದಲಿ
ವನಜ ವಿಕಸಿತವಾದೊಡೆಯು ಸ
ಜ್ಜನರುಗಳು ನುಡಿದೆರಡನಾಡರು
ಮನ ವಚನ ಕಾಯದಲಿ ಚಿತ್ತೈಸೆಂದನಾ ವಿದುರ ೧೨೬

ಹರನ ಕೊರಳಿಂಗಾಭರಣವಾ
ದುರಗ ಪವನಾಶನವೆನಿಸುವಂ
ತರಸ ನಿನ್ನಯ ಬಸುರ ಬಂದೆನಹರು ಪಾಂಡವರು
ನರಪಶುಗಳಾದರು ಕರ್ಣಾ ನೀ
ನರಲು ವನವಾಸದಲಿ ಸೊಪ್ಪನ
ವರತ ಮೆಲುವುದೆ ರಾಯ ಚಿತ್ತೈಸೆಂದನಾ ವಿದುರ ೧೨೭

ದೇವತಾಸ್ಥಾನದಲಿ ವಿಪ್ರ ಸ
ಭಾವಳಯದಲಿ ರಾಜಪುರುಷರ
ಸೇವೆಯಲಿ ರವಿ ಶಶಿಗಳುದಯಾಸ್ತಮಯ ಕಾಲದಲಿ
ಗೋವುಗಳ ನೆರವಿಯಲಿ ವರ ವೃಂ
ದಾವನದೊಳುಪಹತಿಯ ಮಾಡುವು
ದಾವ ಗುಣ ಗರುವರಿಗೆ ಚಿತ್ತೈಸೆಂದನಾ ವಿದುರ ೧೨೮

ನಾಯ ನಡುಬೋನವನು ನೆಚ್ಚಿ ನ್ಯ
ಥಾಯ ಕೆಡಬೇಡಾ ಯುಧಿಷ್ಠಿರ
ರಾಯನನು ಕರೆಸುವುದು ಭೀಷ್ಮಾದಿಗಳ ಮುಂದಿಟ್ಟು
ನ್ಯಾಯಮುಖದಲಿ ಸಕಲ ರಾಜ್ಯ
ಶ್ರೀಯನರ್ಧವನಿತ್ತು ಬದುಕುವು
ದಾಯತಿಕೆಯೊಳಗಹುದು ಚಿತ್ತೈಸೆಂದನಾ ವಿದುರ ೧೨೯

ಚಕ್ರವರ್ತಿಗಳಾರಲೇ ಭೂ
ಚಕ್ರದೊಳಗವರಿಗೆ ಮುರಾರಿಯ
ಚಕ್ರವೇ ಬೆಸಗೆಯ್ವುದಲ್ಲದೆ ಪಾಂಡುತನಯರಿಗೆ
ಚಕ್ರಿ ತಾ ಬಂದವರ ಸೇವಾ
ಚಕ್ರದೊಳಗಿಹನಾ ಯುಧಿಷ್ಠಿರ
ಚಕ್ರವರ್ತಿಗದಾವನೈ ಸರಿಯೆಂದನಾ ವಿದುರ ೧೩೦

ನಳನೃಪತಿ ದಮಯಂತಿ ಸೀತಾ
ಲಲನೆ ರಾಘವದೇವ ದ್ರೌಪದಿ
ಕಲಿ ಯುಧಿಷ್ಠಿರದೇವನಿವರಿಂತಾರು ಮಾನಿಸರು
ಇಳೆಯೊಳುತ್ತಮ ಕೀರ್ತಿಗಳು ಜಾ
ವಳದ ಪುರುಷರೆ ಧರ್ಮಪುತ್ರನ
ಗೆಲುವ ಪರಿಯೆಂತೈ ಮಹಾದೇವೆಂದನಾ ವಿದುರ ೧೩೧

ಜನಪ ಕೇಳೈ ಸ್ಕಂದನನು ರಾ
ಮನನು ಹನುಮನ ಭೀಮಸೇನನ
ವಿನತೆಯಾತ್ಮಜನಿಂತಿದೈವರ ಭಾವಶುದ್ಧಿಯಲಿ
ನೆನೆದವರ ದುರಿತಂಗಳೋಡುವ
ವೆನಲು ನೀವೀ ಪವನಪುತ್ರನ
ನನುವರದೊಳೆಂತಕಟ ಜಯಿಸುವಿರೆಂದನಾ ವಿದುರ ೧೩೨

ಹರಿಹಯನು ಗುಹ ರಾಮ ಬಾಣಾ
ಸುರನು ದಶಶಿರ ಭೀಮಸೇನಾ
ದ್ಯರು ಕರ್ಣಾ ಗಿರಿಜಾಧಿನಾಥನ ಡಿಂಗರಿಗರಿವರು
ಸರಸವೇ ಮೃತ್ಯುಂಜಯನ ಕೂ
ಡರಸ ನಿನ್ನಳವರಿಯದೇ ಹರಿ
ಸುರರೊಡನೆ ಹಗೆಗೊಂಬನೇ ಧೃತರಾಷ್ಟ್ರ ಕೇಳೆಂದ ೧೩೩

ಬಲಿ ವಿಭೀಷಣ ಭೀಷ್ಮ ನಾರದ
ಫಲುಗುಣನು ಪ್ರಹ್ಲಾದದೇವನು
ಜಲರುಹಾಕ್ಷನ ನಚ್ಚು ಮೆಚ್ಚಿನ ಭಕುತರಿವರುಗಳು
ಸುಲಭವೇ ನಿನಗವರ ಕೂಡಣ
ಕಲಹ ಬೀಭತ್ಸುವಿನ ಕೈ ಮನ
ದಳವನರಿಯಾ ಕಂಡು ಕಾಣುತ ಮರುಳಹರೆಯೆಂದ ೧೩೪

ಎಲ್ಲಿ ಯೋಗಾಧಿಪತಿ ಮುರಹರ
ನೆಲ್ಲಿಯರ್ಜುನದೇವನಿಹನ
ಲ್ಲಲ್ಲಿ ಜಯಸಿರಿಯಲ್ಲದೇ ಬೇರಿಲ್ಲ ಕೇಳಿದನು
ಬಲ್ಲವರು ಬಲ್ಲರು ಕರ್ಣಾ ನೀ
ನಿಲ್ಲಿ ಪಾಂಡು ಕುಮಾರರಿಗೆ ಸರಿ
ಯಿಲ್ಲ ಬಲ್ಲೈ ಹಿಂದೆ ಬಂದ ವಿಪತ್ಪರಂಪರೆಯ ೧೩೫

ಹಿಂದೆ ಗೋಗ್ರಹಣದಲಿ ದ್ರುಪದನ
ನಂದನೆಯ ವೈವಾಹದಲಿ ಬಳಿ
ಸಂದ ಗಂಧರ್ವಕನ ದೆಸೆಯಲಿ ಘೋಷಯಾತ್ರೆಯಲಿ
ಬಂದ ಭಂಗವ ಕಂಡು ಕಂಡೇ
ನೆಂದು ಪಾಂಡು ಕುಮಾರರೊಡನನು
ಸಂಧಿಸುವೆ ಕಲಹವನು ಚಿತ್ತೈಸೆಂದನಾ ವಿದುರ ೧೩೬

ಸಕಲ ನೀತಿ ರಹಸ್ಯವನು ಸು
ವ್ಯಕಂತವೆನಲರುಹಿದೆನು ತತ್ವಕೆ
ಯುಕುತಿಯಾದರೆ ನೆನೆವುದಿನ್ನು ಸನಸ್ಸುಜಾತನನು
ಮುಕುತಿಗಮುಳಬ್ರಹ್ಮವಿದ್ಯಾ
ಪ್ರಕಟವನು ನೆರೆ ಮಾಡಿ ಚಿತ್ತದ
ವಿಕಳತೆಯನೊಡೆಮೆಟ್ಟಿ ಸಲಹುವನೆಂದು ಬೋಧಿಸಿದ ೧೩೭

## ನಾಲ್ಕನೆಯ ಸಂಧಿ

ಸೂ. ಮುನಿವರನ ಕರುಣದಲಿ ಕೌರವ
ಜನಪನಮಳಬ್ರಹ್ಮ ವಿದ್ಯೆಯ
ನನುಕರಿಸಿ ಚರಿತಾರ್ಥಭಾವದಲಿರುಳ ನೂಕಿದನು

ಕೇಳು ಜನಮೇಜಯ ಧರಿತ್ರೀ
ಪಾಲ ವಿದುರನ ಬೋಧೆಗಂಧನೃ
ಪಾಲನಂತಃಕರಣ ಶುದ್ಧಿಯನೆಯ್ದಿದನು ಬಳಿಕ
ಹೇಳು ಹೇಳಿನ್ನಾತ್ಮವಿದ್ಯೆಯ
ಮೂಲ ಮಂತ್ರಾಕ್ಷರದ ಬೀಜವ
ನಾಲಿಸುವೆನೆನೆ ನಗುತ ಕೈಮುಗಿದೆಂದನಾ ವಿದುರ ೧

ಅವಧರಿಸು ಪರತತ್ತ್ವ ವಿದ್ಯಾ
ವಿವರ ಭೇದವನನ್ಯ ಜಾತಿಗ
ಳಿವಗೆ ಸಲುವುದೆ ಮುನಿವರನ ಕರುಣೋದಯದಲಹುದು
ಅವರಿವರುಗಳ ಮುಖದಲಿದು ಸಂ
ಭವಿಸುವುದೆ ಬ್ರಹ್ಮೋಪದೇಶದ
ಹವಣ ಬಲ್ಲವನಾವನೈ ಧೃತರಾಷ್ಟ್ರ ಕೇಳೆಂದ ೨

ಒಬ್ಬನೇ ಬಲ್ಲವನು ಲೋಕದೊ
ಳಿಬ್ಬರಿಲ್ಲ ಸನತ್ಸುಜಾತನು
ಸರ್ವ ಗುಣ ಸಂಪೂರ್ಣನಾತನ ಭಜಿಸಿದೊಡೆ ನೀನು
ಸಬ್ಬನಹೆಯೆನಲಾ ಮುನಿಯ ಕ
ರ್ತವ್ಯ ಭಾವದೊಳರಸನಿರಲಾ
ವಿರ್ಭವಿಸಿದನು ವಿಪ್ರ ಕುಲ ಕಮಲಾರ್ಕನಾ ಕ್ಷಣಕೆ ೩

ನೆನೆಯಲೊಡನೆ ಸನತ್ಸುಜಾತನು
ಮನೆಗೆ ಬರಲಿದಿರೆದ್ದು ಕೌರವ
ಜನಕ ವೈಯಿಕ್ಕಿದನೆನಗೆ ಬ್ರಹ್ಮೋಪದೇಶವನು
ಮುನಿಪ ನೀ ಕೃಪೆ ಮಾಡಬೇಕೆನ
ಲನುನಯದೊಳವನೀಪತಿಗೆ ಜನ
ಜನಿತವಹುದೆನಲರುಹಿದನು ಪರಲೋಕ ಸಾಧನವ ೪

ಚಿತ್ತವಿಸು ಧೃತರಾಷ್ಟ್ರನೃಪ ಪರ
ತತ್ತ್ವ ವಿದ್ಯಾ ವಿಷಯ ಭೇದವ
ಬಿತ್ತರಿಸುವೆನು ಸಕಲ ಸಚರಾಚರದೊಳಗೆ ನೀನು
ಉತ್ತಮಾಧಮವೆನ್ನದೇ ಕಾ
ಣುತ್ತ ಹರುಷ ವಿಷಾದದಲಿ ಮುಳು
ಗುತ್ತಿರದೆ ಸಮರಸದೊಳಿಹುದುಪದೇಶ ನಿನಗೆಂದ ೫

ಅವನಿಪತಿ ಕೇಳಾತ್ಮನಿಂ ಸಂ
ಭವಿಸಿತಂಬರವಂಬರದಲಾ
ಪವನ ಪವನನಲಗ್ನಿ ಅಗ್ನಿಯಲಾದುದಾ ಭುವನ
ಭುವನದಿಂ ಧರೆ ಧರಣಿಯಿಂದು
ದ್ಭವಿಸಿತೋಷಧಿ ಓಷಧಿಗಳಿಂ
ದವತರಿಸಿತಾನಾದಿ ಪುರುಷ ಪ್ರಕೃತಿ ವಿಕೃತಿಗಳು ೬

ನೇತ್ರ ನಾಸಿಕ ಪಾದ ಪಾಣಿ
ಶೋತ್ರವೆಂಬಿವು ತಮ್ಮೊಳೊಂದೇ
ಸೂತ್ರದಲಿ ಸಂಸ್ಪೃಷ್ಟವಾಗಿ ಸಮಾನಬುದ್ಧಿಯಲಿ
ಗಾತ್ರವಿಡಿದಿಹವೋಲು ವಿಶ್ವದ
ಮೈತ್ರಿಯಲಿ ಮನಸಂದು ಪಾತ್ರಾ
ಪಾತ್ರವೆನ್ನದೆ ಬೆರಸಿಬದುಕುವುದಧಿಕಗುಣವೆಂದ ೭

ಸೃಷ್ಟಿ ಸಂಹಾರದಲಿ ಭೂತದ
ಕಟ್ಟಳೆಗಳ ಗತಾಗತಿಗಳಲಿ
ಮುಟ್ಟಿಸಿದ ವಿದ್ಯೆಯಲವಿದ್ಯೆಯಲಪ್ರತಿಮನೆನಿಸಿ
ನಷ್ಟಿಯಲಿ ತುಷ್ಟಿಯಲಿ ಮನವನು
ಬಿಟ್ಟು ಹಿಡಿಯದೆ ಕಾಲಕರ್ಮವ
ಮೆಟ್ಟಿ ನಿಲೆ ಭಗವಂತನೆನಿಸುವೆ ರಾಯ ಕೇಳೆಂದ ೮

ಅಣುವಿನಲಿ ಲಘುವಿನಲಿ ಗುರುವಿನ
ಯೆಣಿಕೆಯಲಿ ಮಹಿಮೆಯಲಿ ಪ್ರಾಪ್ತಿಯ
ಭಣಿತೆಯಲಿ ಶೀಲತ್ವದಲಿ ಪ್ರಕಟಿತದ ಪರಿವಿಡಿಯ
ಕುಣಿಕೆಗಳಲಿ ವಶಿತ್ವದಲಿ ವೆಂ
ಟಣಿಸಿ ರೇಚಕ ಪೂರಕದ ರಿಂ
ಗಣವನರಿವುದು ಯೋಗ ಸಿದ್ಧಿಗೆ ಲಕ್ಷಣವನೆಂದ ೯

ತ್ಯಜಿಸುವುದು ದುಸ್ಸಂಗವನು ನೀ
ಸೃಜಿಸುವುದು ಸತ್ಸಂಗವನು ಗಜ
ಬಜಿಸದಿರಹೋ ರಾತ್ರಿಯಲಿ ಧರ್ಮವನೆ ಸಂಗ್ರಹಿಸು
ಭಜಿಸು ನಿತ್ಯಾನಿತ್ಯ ವಸ್ತುವ
ವಿಜಯನಹೆ ಇಹಪರಕೆ ತತ್ತ್ವದ
ನಿಜವಿದೆಲೆ ಧೃತರಾಷ್ಟ್ರ ಚಿತ್ತೈಸೆಂದನಾ ಮುನಿಪ ೧೦

ಕಾಯವಿದು ನೆಲೆಯಲ್ಲ ಸಿರಿ ತಾ
ಮಾಯರೂಪಿನ ಮೃತ್ಯುದೇವತೆ
ಬಾಯ ಬಿಡುತಿಹಳಾವುದೀತನ ಕಾಲಗತಿಯೆಂದು
ದಾಯವರಿದು ಮಹಾತ್ಮರಿದಕೆ ಸ
ಹಾಯ ಧರ್ಮವ ರಚಿಸುವುದು ನಿ
ರ್ದಾಯದಲಿ ಕೈಸೂರೆಗೊಂಬುದು ಮುಕುತಿ ರಾಜ್ಯವನು ೧೧

ಕೆಟ್ಟ ಮಾರ್ಗದಲಿಂದ್ರಿಯಂಗಳ
ಚಿಟ್ಟುಮುರಿಯಾಟದಲಿ ಮನ ಸಂ
ದಷ್ಟವಾಗಿಯನಿತ್ಯ ಸಂಸಾರದ ಸುಖಕ್ಕೆಳಸಿ
ಹುಟ್ಟು ಸಾವಿನ ವಿಲಗದಲಿ ಕಂ
ಗೆಟ್ಟು ನಾನಾ ಯೋನಿಯಲಿ ತಟ
ಗುಟ್ಟಿ ಬಳಲುವುದುಚಿತವೇ ಭೂಪಾಲ ಕೇಳೆಂದ ೧೨

ಹಲವು ವರ್ಣದೊಳೆಸೆವ ಗೋ ಸಂ
ಕುಲದೊಳೊಂದೇ ವರ್ಣದಲಿ ಕಂ
ಗೊಳಿಸುವೀ ಕ್ಷೀರಾಮೃತವು ಮೈಗೊಂಡು ತೋರ್ಪಂತೆ
ಪೊಲಬುಗೆಟ್ಟ ಚರಾಚರಂಗಳ
ಸುಳಿವಿನಲಿ ಸುಳಿದಡಗಿ ಕಡೆಯಲಿ
ನಿಲುವ ನಿಜವೊಂದಲ್ಲದೆರಡಿಲ್ಲೆಂದನಾ ಮುನಿಪ ೧೩

ಅತಿಶಯದ ಸಂಸ್ಕೃತವನು ವಿರಚಿಸಿ
ಗತಿವಡೆದು ಸ್ವರ್ಗಾದಿ ಭೋಗೋ
ನ್ನತಿಕೆಯನು ಭೋಗಿಸಿದ ಸಮನಂತರದೊಳವನಿಯಲಿ
ಪತನ ತಪ್ಪದು ಮರಳಿ ಬಾರದ
ಗತಿಯನರಿದು ಮಹಾನುಭಾವರ
ಮತವಿಡಿದು ನಡೆವುದು ನಯವು ಕೇಳೆಂದನಾ ಮುನಿಪ ೧೪

ಸಕಲ ಧರ್ಮದ ಸಾರವನು ಮತಿ
ವಿಕಳನಾಗದೆ ಚಿತ್ತವಿಸು ಬಾ
ಧಕವದಾವುದು ನಿನಗದನು ನೀನಸ್ಮರುಗಳಲ್ಲಿ
ಯುಕುತಿಯಿಂದದ ಮಾಡದಿರು ನಿ
ರ್ಮುಕುತನಹೆ ಸಂಸಾರದಲಿ ಸಾ
ಧಕವಿದೊಂದೇ ಸಕಲ ಜನಮತವೆಂದನಾ ಮುನಿಪ ೧೫

ಒಂದು ವಸ್ತುವನೆರಡು ಮಾಡುವೆ
ನೆಂದು ಬುದ್ಧಿಭ್ರಾಂತಿಯಲಿ ಮನ
ಸಂದು ಸಮ್ಯಗ್ಜ್ಞಾನದುದಯದ ನೆಲೆಯ ಕಾಣಿಸದೆ
ದಂದುಗಂಬಡುತಿಹುದು ತತ್ವದ
ಹಿಂದು ಮುಂದರಿಯದೆ ಮಹಾತ್ಮರು
ಬಂದ ಪಥದಲಿ ಬಾರದೇ ಕೆಡುತಿಹುದು ಜಗವೆಂದ ೧೬

ಪ್ರಣವದೊಂದಾ ವರ್ಣ ಮೂರರ
ಗುಣವಿಡಿದು ತೋರುವ ಚರಾಚರ
ವೆಣಿಸಬಾರದು ವಿಶ್ವದಲಿ ನಿಸ್ಯೂತವಾಗಿಹುದು
ಹಣಿದು ಬೀಳಲು ಹೊಳೆವ ಜ್ಯೋತಿ
ರ್ಗಣದವೊಲು ತೊಳತೊಳಗಿ ಬೆಳಗುವ
ಗುಣರಹಿತನ ನಿಜಸ್ವರೂಪವಿದೆಂದನಾ ಮುನಿಪ ೧೭

ನಳಿನಮಿತ್ರನು ಪಶ್ಚಿಮಾಂಬುಧಿ
ಗಿಳಿಯೆ ನಾನಾ ಪಕ್ಷಿಜಾತಿಗ
ಳುಲಿವುತೈತಂದೊಂದು ವೃಕ್ಷವನೇರಿ ರಾತ್ರಿಯನು
ಕಳೆದು ನಾನಾ ದೆಸೆಗೆ ಹರಿವವೊ
ಲಿಳೆಯ ಭೋಗದ ವೃಷ್ಟಿ ತೀರಿದ
ಬಳಿಕ ಲೋಕಾಂತರವನೆಯ್ದುವರೆಂದನಾ ಮುನಿಪ ೧೮

ಪೊಡವಿಯೊಳಗುದಯಿಸಿದ ದುಷ್ಕೃತ
ಬಿಡದು ಭೂಪರನದು ಪುರೋಹಿತ
ರೆಡೆಗೆ ಬಳಿಕಾ ಮೂರ್ಖ ಶಿಷ್ಯನ ದೋಷ ಗುರುವಿನದು
ಮಡದಿ ಮಾಡಿದ ಪಾತಕವು ಪತಿ
ಗೊಡಲಹುದು ಪರಮಾರ್ಥವಿದು ಪರಿ
ವಿಡಿಯನರಿಯದೆ ಕೆಡುವುದೀ ಜಗವೆಂದನಾ ಮುನಿಪ ೧೯

ದುರ್ಜನರಿಗಂಜುವುದು ಲೋಕವು
ಸಜ್ಜನರ ಲೆಕ್ಕಿಸದು ತಾರ್ಕ್ಷ್ಯನ
ಸೆಜ್ಜೆಯೊಳಗಿಹ ದಂದಶೂಕನನರ್ಚಿಸುವರೊಲಿದು
ಉಜ್ವಲಿತ ಭಕ್ತಿಯಲಿ ಬಹಳ ವಿ
ತರ್ಜೆಯಲಿ ಮೂಢಾತ್ಮರಿಕ್ಕಿದ
ಹಜ್ಜೆಯಿದು ಲೋಕಕ್ಕೆ ಕೇಳ್ ನೀನೆಂದನಾ ಮುನಿಪ ೨೦

ತಳಪಟದೊಳಾಯುಷ್ಯ ರಾಶಿಯ
ನಳೆವ ಕೊಳಗವು ಸೂರ್ಯನೆಂಬುದ
ತಿಳಿದಹೋರಾತ್ರಿಯಲಿ ಸಂಖ್ಯೆಯ ಸಲುಗೆಯಂಕಿಸದೆ
ಬಳಸುವುದು ಸನ್ಮಾರ್ಗದಲಿ ಮುಂ
ಕೊಳಿಸುವುದು ಸದ್ಧರ್ಮದಲಿ ಕಳ
ವಳಿಸದಿರು ಷಡುವರ್ಗದಲಿ ಕೇಳೆಂದನಾ ಮುನಿಪ ೨೧

ನಷ್ಟಿಯಿದು ಸಂಸಾರದೊಳಗು
ತ್ಕೃಷ್ಟವಿದು ಮನ್ವಾದಿ ಮಾರ್ಗದ
ದೃಷ್ಟವಿದು ಲೋಕಾಂತರದ ಸುಖ ದುಃಖದೇಳಿಗೆಯ
ಹುಟ್ಟುಮೆಟ್ಟಿನ ಕಾಲಕರ್ಮದ
ಕಟ್ಟಳೆಯಿದೆಂದರಿದು ನಡೆವಂ
ಗಿಟ್ಟಣಿಸುವುದದಾವುದೈ ಹೇಳೆಂದನಾ ಮುನಿಪ ೨೨

ಶಿಲೆಯ ರೂಹನು ಮೂಢರುಗಳ
ಗ್ಗಳಿಯ ಪಾವಕನನು ಮಹೀಸುರ
ರಿಳೆಯೊಳಗೆ ಪರಮಾತ್ಮನೇ ಪರದೈವ ತಾನೆಂದು
ಒಲಿದು ಪೂಜಿಸುತಿಹರು ಹೃದಯಾಂ
ಗಳದೊಳಗೆ ವರಯೋಗಿಗಳು ಕೈ
ವಳಸುವುದು ಜನವೀ ಪ್ರಕಾರದೊಳರಸ ಕೇಳೆಂದ ೨೩

ಜ್ಞಾನಿಗಳನೊಡಬಡಿಸಬಹುದ
ಜ್ಞಾನಿಗಳನಹುದೆನಿಸಬಹುದು
ಜ್ಞಾನ ಲವವನು ಕೂಡಿಕೊಂಡಿಹ ದುರ್ವಿದಗ್ಧರನು
ಏನ ತಿಳುಹಲುಬಹುದು ವಿಪ್ರ
ಕ್ಷೋಣಿಗಳವಲ್ಲರಸ ಮಿಕ್ಕಿನ
ಮಾನವರ ಪಾಡಾವುದೆಂದನು ಮುನಿ ನೃಪಾಲಂಗೆ ೨೪

ದಾನವೊಂದಾ ಪಾಲನೆಯ ಫಲ
ದಾನವೊಂದೇ ಉಭಯವಿದರೊಳು
ದಾನದಿಂದಹುದಿಹಪರಂಗಳ ಸೌಖ್ಯ ಸಂಪದವು
ದಾನವೇ ಸಂಸಾರ ಸಾಧನ
ದಾನದಿಂ ಪಾಲನೆಯ ಫಲಕಿ
ನ್ನೇನನೆಂಬೆನು ಕಡೆಯೊಳಚ್ಯುತ ಪದವಿ ಫಲವೆಂದ ೨೫

ಅರಸನೊಡೆಯನು ದಂಡನಾಥನು
ಗುರು ಹಿರಿಯನುತ್ತಮನು ದೈವಾ
ಪರನು ಸಾಹಿತ್ಯನು ಸದಸ್ಯನು ಸತ್ಪುರುಷನೆಂದು
ಪರಿಪರಿಯ ನಾಮಂಗಳಲಹಂ
ಕರಿಸುವರು ಜೀವಾತ್ಮ ತೊಲಗಿದ
ಮರುದಿವಸ ಹೆಣನೆನ್ನರೇ ಹೇಳೆಂದನಾ ಮುನಿಪ ೨೬

ವರುಷ ಮೂರೊಳು ಮಾಸ ಮೂರರೊ
ಳಿರದೆ ಪಕ್ಷತ್ರಯದೊಳಗೆ ಬಂ
ದರುಹುವುದು ದಿನ ಮೂರರಲಿ ಸಂದೇಹ ಬೇಡಿದಕೆ
ಧರೆಯೊಳುತ್ಕಟ ಪುಣ್ಯ ಪಾಪೋ
ತ್ಕರದ ಫಲವಿದು ತಪ್ಪಬಾರದು
ಮರಳುವುದು ಪರಲೋಕದೆಸೆಗವನೀಶ ಕೇಳೆಂದ ೨೭

ಒಂದು ಭೂಪಿಂಡದಲಿ ನಾನಾ
ಚಂದದಿಂ ಪ್ರಾಣಿಗಳು ಜನಿಸುವ
ವೊಂದು ಜ್ಯೋತಿಸ್ಸಿನಲಿ ನಾನಾ ಜ್ಯೋತಿಯುದಿಸುವುವು
ಒಂದು ಪರವಸ್ತುವಿನ ಬಳಿಯಲಿ
ಬಂದುದಬುಜಭವಾಂಡ ಕೋಟಿಗ
ಳೆಂದೊಡವು ಬೇರಿಲ್ಲ ಸರ್ವವು ವಿಷ್ಣುಮಯವೆಂದ ೨೮

ತಾನಿದಿರು ಹಗೆ ಕೆಳೆ ವಿವೇಕ
ಜ್ಞಾನವಜ್ಞಾನಂಗಳಿಹಪರ
ಹಾನಿ ವೃದ್ಧಿಯ ಮಾರ್ಗದಲಿ ತಾನೇಕ ಚಿತ್ತದಲಿ
ದಾನ ಧರ್ಮ ಪರೋಪಕಾರ ವಿ
ಧಾನ ದೀಕ್ಷಾಕರ್ಮನಿಷ್ಠರು
ಮಾನನೀಯರಲೇ ಮಹೀಪತಿ ಕೇಳು ನೀನೆಂದ ೨೯

ಕರಣ ಗುಣ ಸಂಹರಣ ಸಂಧ್ಯಾಂ
ತರದವಸ್ಥಾಂತರದ ಲೋಕೋ
ತ್ಕರದ ತಾಪತ್ರಯದ ಲಕ್ಷಣ ಲಕ್ಷಿತವನರಿದು
ಪರಿವಿಡಿಯ ಮೂರ್ತಿತ್ರಯಂಗಳ
ಗುರು ಲಘುವನಾರೈದು ನಡೆವಂ
ಗರಿದೆನಿಸುವುದದಾವುದೈ ಹೇಳೆಂದನಾ ಮುನಿಪ ೩೦

ವೇದ ನಾಲ್ಕಾಶ್ರಮವು ತಾ ನಾ
ಲ್ಕಾದಿಮೂರುತಿ ನಾಲ್ಕು ವರ್ಣ ವಿ
ಭೇದ ನಾಲ್ಕು ಕರಣ ನಾಲುಕುಪಾಯ ನಾಲ್ಕರಲಿ
ಭೇದಿಸಲು ಪುರುಷಾರ್ಥ ನಾಲ್ಕರ
ಹಾದಿಯರಿದು ವಿಮುಕ್ತ ನಾಲುಕ
ನೈದುವನು ಸಂದೇಹವೇ ಹೇಳೆಂದನಾ ಮುನಿಪ ೩೧

ಭೂತ ವರ್ಣಸ್ಥಾನ ಸರ್ಗ ನಿ
ಪಾತವದರೊಳು ಕೃತ್ಯಗಳ ಸಂ
ಜಾತಮುಖವಾವರಣ ಶರ ಸಂಗತಿಯ ಸೋಹೆಗಳ
ಧಾತು ಮೂಲಾದಿಗಳನರಿವುದು
ಪ್ರೀತಿಯಿಂದಿಹಪರವ ಗೆಲುವುದು
ಭೂತಳದೊಳುತ್ತಮವಲೇ ಭೂಪಾಲ ಕೇಳೆಂದ ೩೨

ಆರು ಗುಣ ಋತುವರ್ಣ ವರ್ಗವ
ದಾರು ದರ್ಶನ ಪಾತ್ರವಂಗವ
ದಾರು ಭೇದದ ಬಗೆಯನರಿವುದು ಶಿಷ್ಟಮಾರ್ಗದಲಿ
ತೋರುವೀ ಮಾಯಾ ಪ್ರಪಂಚವ
ಮೀರಿ ಕೇಡಿಲ್ಲದ ಪದವ ಕೈ
ಸೂರೆಗೊಂಬುದು ಪರಮ ಮಂತ್ರವಿದೆಂದನಾ ಮುನಿಪ ೩೩

ಜಲಧಿ ಮಾತೃಕೆ ವಾರ ಕುಲಗಿರಿ
ಗಳು ವಿಭಕ್ತಿ ದ್ವೀಪ ಸರ್ಪಾ
ವಳಿ ಮುನೀಶ್ವರರುಗಳ ಧಾತು ಗಡಣದ ವೇದಿಗಳ
ತಿಳಿದು ಕಾಲದ ಗತಿಯ ಗಮಕಂ
ಗಳನರಿದು ನಡೆವವರುಗಳು ನಿ
ರ್ಮಳದಲೆಡಹದೆ ಬೆಲೆಸಿಕೊಂಬರು ಮುಕ್ತಿ ರಾಜ್ಯವನು ೩೪

ಕಾಯ ದಿಗ್ಬಂಧ ಪ್ರಣಾಮ ವಿ
ಧೇಯವರ್ಜನೆ ಯೋಗಸಿದ್ಧಿ ನಿ
ಕಾಯ ನಾಲ್ಕರ ಇಂದ್ರಿಯಸ್ಥಿತಿ ಗತಿಯನಾರೈದು
ಆಯವನು ವಿವರಿಸುತ ಮೇಲಣ
ಬೀಯವಿದು ತನಗೆಂಬುದನು ನಿ
ರ್ದ್ದಾಯದಲಿ ನಿಶ್ಚಯಿಸಬೇಹುದು ರಾಯ ಕೇಳೆಂದ ೩೫

ನವ ನವ ವ್ಯೂಹಂಗಳಬುಜೋ
ದ್ಭವನ ಪಾಳಿ ವಿಖಂಡ ನವರಸ
ನವವಿಧಗ್ರಹ ನಾಟಕಂಗಳ ಲಕ್ಷಣವನರಿದು
ನವವಿಧಾಮಳ ಭಕ್ತಿರಸವನು
ಸವಿದು ನಿತ್ಯಾನಿತ್ಯ ವಸ್ತುವ
ನವರಸವನಾರೈದು ನಡೆವುದು ಭೂಪ ಕೇಳೆಂದ ೩೬

ಹತ್ತು ಮುಖದಲಿ ಲೋಕದೊಳಗು
ತ್ಪತ್ತಿಯಾದ ಚರಾಚರಂಗಳ
ಉತ್ತಮಾಧಮರೆನ್ನದೇ ಹರಿ ಸರ್ವಗತನಾಗಿ
ಸುತ್ತುವನು ನಾನಾ ತೆರದಲಿ ವಿ
ಚಿತ್ರಚರಿತನು ಕಪಟ ನಾಟಕ
ಸೂತ್ರಧಾರಕನೆಂದರಿದು ಸುಖಿಯಾಗು ನೀನೆಂದ ೩೭

ಲೇಸು ಮಾಡಿದಿರೆನ್ನ ಚಿತ್ತದ
ಬೇಸರಿಕೆ ಬಯಲಾಯ್ತು ನಿಮ್ಮುಪ
ದೇಶದಿಂದ ಕೃತಾರ್ಥನಾದೆನು ಗೆಲಿದೆನಿಹಪರವ
ಗಾಸಿಯಾದುದು ರಾಗ ಲೋಭದ
ಮೀಸಲಳಿದುದು ನಿಮ್ಮ ದೆಸೆಯಿಂ
ದೇಸು ಧನ್ಯರೊ ನಾವು ಚಿತ್ತೈಸೆಂದನಾ ಭೂಪ ೩೮

ಸ್ವರ್ಗವಾವುದು ನರಕವಾವುದು
ವಿಗ್ರಹದಲಹ ಸಿದ್ಧಿ ಯಾವುದ
ನುಗ್ರಹಿಸಲೇನಹುದು ಪಾತ್ರಾ ಪಾತ್ರವೆಂದೇನು
ಉಗ್ರವಾವುದು ದೈವದೊಳಗೆ ಸ
ಮಗ್ರವಾವುದು ಧರ್ಮದೊಳಗ
ವ್ಯಗ್ರದಿಂದುಪದೇಶಿಸಲು ಬೇಕೆಂದನಾ ಭೂಪ ೩೯

ಸುಲಭನತಿ ಸಾಹಿತ್ಯ ಮಂಗಳ
ನಿಳಯನಗಣಿತ ಮಹಿಮನನ್ವಯ
ತಿಲಕನನುಪಮಚರಿತ ದ್ವೈಪಾಯನನು ಪುಣ್ಯನಿಧಿ
ಕುಲಯುತನು ಕೋವಿದನು ಕರುಣಾ
ಜಲಧಿ ಕೌತುಕ ಯುಕ್ತಿವಿದನೆಂ
ದಿಳೆ ಹೊಗಳುತಿರಲದುವೆ ಕೇಳೈ ಸ್ವರ್ಗ ತಾನೆಂದ ೪೦

ಪಾತಕನು ಪತಿತನು ಕೃತಘ್ನನು
ಘಾತಕನು ಮರ್ಮನು ದುರಾತ್ಮನ
ಭೀತಕನು ದೂಷಕನು ದುರ್ಜನನಪ್ರಯೋಜಕನು
ನೀತಿಹೀನನು ಜಾತಿಧರ್ಮ ಸ
ಮೇತ ದೈವ ದ್ರೋಹಿಯೆಂಬುದು
ಭೂತಳದೊಳೀ ನರಕ ಚಿತ್ತೈಸೆಂದನಾ ಮುನಿಪ ೪೧

ದೇಹವಿಡಿದಿಹ ಧರ್ಮವದು ನಿ
ರ್ದೇಹದಲಿ ದೊರಕುವುದೆ ಮಾನವ
ದೇಹವೇ ಸಾಧನ ಸಕಲ ಪುರುಷಾರ್ಥಶೀಲರಿಗೆ
ಐಹಿಕಾಮುಷ್ಮಿಕದ ಗತಿ ಸಂ
ಮೋಹಿಸುವುದು ಶರೀರದಲಿ ಸಂ
ದೇಹವೇ ಧೃತರಾಷ್ಟ್ರ ಚಿತ್ತೈಸೆಂದನಾ ಮುನಿಪ ೪೨

ಗರುಡ ಪಂಚಾಕ್ಷರಿಯೊಳಲ್ಲದೆ
ಗರಳ ಭಯವಡಗುವುದೆ ವಿಷ್ಣು
ಸ್ಮರಣೆಯಿಂದಲ್ಲದೆ ಮಹಾ ಪಾತಕಕೆ ಕಡೆಯಹುದೆ
ಹಿರಿದು ಸಂಸಾರಾಂಬುಧಿಯನು
ತ್ತರಿಸುವೊಡೆ ಗುರುಮುಖದೊಳಲ್ಲದೆ
ನಿರತಿಶಯವಿನ್ನಾವುದೈ ಹೇಳೆಂದನಾ ಮುನಿಪ ೪೩

ತನ್ನ ಮನೆಯಲಿ ಮೂರ್ಖನತಿ ಸಂ
ಪನ್ನ ಪೂಜ್ಯನು ಭೂಮಿಪಾಲನು
ತನ್ನ ದೇಶದೊಳಧಿಕ ಸ್ವಗ್ರಾಮದಲಿ ಪ್ರಭು ಪೂಜ್ಯ
ಭಿನ್ನವಿಲ್ಲದೆ ಹೋದ ಠಾವಿನೊ
ಳನ್ಯವೆನಿಸದೆ ವಿಶ್ವದೊಳು ಸಂ
ಪನ್ನ ಪೂಜಾಪಾತ್ರರೈ ವಿದ್ವಾಂಸರುಗಳೆಂದ ೪೪

ಒಬ್ಬನಹನೈ ಶೂರ ನೂರರೊ
ಳೊಬ್ಬನಹ ಸಾವಿರಕೆ ಪಂಡಿತ
ನೊಬ್ಬನಹನೈ ವಕ್ತ ಶತ ಸಾವಿರಕೆ ಲೋಕದಲಿ
ಒಬ್ಬ ದಾನಿಯ ಕಾಣೆ ನಾನಿ
ನ್ನೊಬ್ಬರೊಬ್ಬರಿಗೊಂದು ಗುಣವದು
ಸರ್ಬಗುಣ ಸಂಪನ್ನರೈ ವಿದ್ವಾಂಸರುಗಳೆಂದ ೪೫

ಸತಿಯರಿಗೆ ಗತಿ ಯಾವುದೈ ನಿಜ
ಪತಿಗಳಲ್ಲದೆ ವಿಪ್ರಜಾತಿಗೆ
ಹುತವಹನು ವರ್ಣತ್ರಯಕೆ ಭೂದೇವರುಗಳಿರಲು
ಕ್ಷಿತಿಯೊಳತಿಶಯವಾವುದೈ ಭೂ
ಪತಿಯೆ ಕೇಳಿಹಪರಕೆ ಸುಖ ಸಂ
ಗತಿಯನೊಲುವೊಡೆ ಪೂಜಿಸುವುದೈ ಬ್ರಾಹ್ಮಣೋತ್ತಮರ ೪೬

ಚೋರನನು ಕಂಟಕನ ಪಿಸುಣನ
ಜಾರನನು ಷಂಡನನು ಸಮಯ ವಿ
ಕಾರ ಭೇದಿಯನಿಂತರುವರನು ಕಂಡು ಮನ್ನಿಸದೆ
ದೂರದಲಿ ವರ್ಜಿಸುವುದು ಬಹಿ
ಷ್ಕಾರಿಗಳು ಸರ್ವಕ್ಕಿವರುಗಳು
ಸಾರಿದುದು ಸರ್ವೇಶ್ವರನ ಮತವರಸ ಕೇಳೆಂದ ೪೭

ಮೊದಲಲಾ ಮಾಹಿಷಿಕನನು ಮ
ಧ್ಯದಲಿ ವೃಷಲೀ ವಲ್ಲಭನನಂ
ತ್ಯದಲಿ ವಾಗ್ದೋಷಕನ ಕಂಡವರುಗಳ ಭಾಗ್ಯನಿಧಿ
ಕದಡಿ ಹರಿವುದು ಕಂಡ ಮುಖದಲಿ
ಸದಮಳಿತ ಶಾಸ್ತ್ರಾರ್ಥ ನಿಶ್ಚಯ
ವಿದನರಿದು ನಡೆವುದು ನಯವು ಭೂಪಾಲ ಕೇಳೆಂದ ೪೮

ಕುಲಮಹಿಷಿ ದುರ್ಮಾರ್ಗ ಮುಖದಲಿ
ಗಳಿಸಿದರ್ಥವನುಂಡು ಕಾಲವ
ಕಳೆವ ನಿರ್ಭಾಗ್ಯರು ಕಣಾ ಮಾಹಿಷಿಕರೆಂಬವರು
ಇಳೆಯೊಳವರೊಡನಾಡಿದವದಿರು
ಗಳಿಗೆ ನರಕಾರ್ಣವದೊಳಾಳುತ
ಮುಳುಗುತಿರುತಿಹುದಲ್ಲದೇ ಗತಿಯಿಲ್ಲ ಕೇಳೆಂದ ೪೯

ದೈವದಾಧೀನದಲಿ ಜಗವಾ
ದೈವ ಮಂತ್ರಾಧೀನ ಮಂತ್ರವು
ಭೂಮಿಬುಧರಾಧೀನವಾಗಿಹುದಾಗಿ ಲೋಕದಲಿ
ದೈವವೇ ಬ್ರಾಹ್ಮಣನದಲ್ಲದೆ
ಭಾವಿಸಲು ಬುಧರಿಂದಧಿಕವಹ
ದೈವವೆಂಬುದದಾವುದೈ ಹೇಳೆಂದನಾ ಮುನಿಪ ೫೦

ಕೆಲಸ ಗತಿಯಲಿ ಕಡೆದ ಶಿಲೆಯನು
ಕಲುಕುಟಿಕನಿಳುಹುವನದಲ್ಲದೆ
ಹಲವು ಪರಿಯಿಂದದನು ಲೋಕಕೆ ದೈವವನು ಮಾಡಿ
ಸಲಿಸುವವರುಂಟೇ ಸುರಾಸುರ
ರೊಳಗೆ ವಿಪ್ರೋತ್ತಮರುಳಿಯೆ ಜಗ
ದೊಳಗೆ ದೈವವದಾವುದೈ ಹೇಳೆಂದನಾ ಮುನಿಪ ೫೧

ಎಣಿಸಬಹುದೂರ್ವರೆಯ ಸೈಕತ
ಮಣೆಯನೊಯ್ಯಾರದಲಿ ಗಗನಾಂ
ಗಣದೊಳೈತಹ ವೃಷ್ಟಿಬಿಂದುವ ಲೆಕ್ಕಗೊಳಬಹುದು
ಎಣಿಸಬಾರದದೊಂದು ದಿವಿಜರ
ಗಣಕೆಗೋಚರವಾಗಿ ಸದ್ಬ್ರಾ
ಹ್ಮಣನೊಳೊಬ್ಬನ ರಕ್ಷಿಸಿದ ಫಲವರಸ ಕೇಳೆಂದ ೫೨

ಜಾತಿಧರ್ಮವನನುಸರಿಸಿ ವರ
ಮಾತೃಪಿತೃ ಪರಿಚರಿಯದಲಿ ಸಂ
ಪ್ರೀತಿವಡೆಯುತೆ ಪರಗುಣಸ್ತುತಿ ನಿಂದೆಗಳನುಳಿದು
ಭೂತನಾಥನ ಭಕುತಿಯಲಿ ವಿ
ಖ್ಯಾತವಹ ಗುರುದೈವದಲಿ ಭಯ
ಭೀತಿ ಹರಿದಿರಲದುವೆ ಕೇಳ್ ಸುಕೃತಕ್ಕೆ ಕಡೆಯೆಂದ ೫೩

ಅರ್ಥದಿಂದಹ ಸಿದ್ಧಿ ಯಾವುದ
ನರ್ಥವೆಂಬುದದೇನು ತನಗೆ
ಸ್ವಾರ್ಥವಾರು ಪರಾರ್ಥದಿಂದಹುದಾವುದವನಿಯಲಿ
ತೀರ್ಥವಾವುದು ವಿಪ್ರರೊಳಗೆ ಸ
ಮರ್ಥರಾರು ಸುಧಾತ್ರಿಯೊಳಗೆಯು
ವ್ಯರ್ಥಜೀವಿಗಳಾರು ಚಿತ್ತೈಸೆಂದನಾ ಮುನಿಪ ೫೪

ಧನವನುಳ್ಳ ಮಹಾತ್ಮನಾವುದ
ನೆನೆದೊಡದು ಕೈ ಸಾರುವುದು ನಿ
ರ್ಧನಿಕ ಬಯಸಿದ ಬಯಕೆ ಬಯಲಹುದಲ್ಲದೇ ಬೇರೆ
ಧನಿಕನಂತೆ ಸಮಸ್ತ ಸುಖ ಸಂ
ಜನಿಸುವುದೆ ಸರ್ವಕ್ಕೆ ಸಾಧನ
ಧನವದಲ್ಲದೆ ಭುವನದೊಳಗನ್ಯತ್ರವಿಲ್ಲೆಂದ ೫೫

ವ್ಯರ್ಥರುಗಳೊಡನಾಟ ತಮ್ಮ
ಸ್ವಾರ್ಥವಿಲ್ಲದರುಗಳ ಕೂಟ ಪ
ರಾರ್ಥದಿಂದುಜ್ಜೀವಿಸಿದವನ ಬದುಕು ಲೋಕದಲಿ
ಅರ್ಥವಿಲ್ಲದ ಸಿರಿಯ ಸಡಗರ
ಆರ್ಥಿಯಿಲ್ಲದ ಬಾಳುವೆಗಳಿವ
ನರ್ಥ ಪಾರಂಪರೆಯಲೇ ಕೇಳೆಂದನಾ ಮುನಿಪ ೫೬

ಮಾಡುವುದು ಧರ್ಮವನು ಸುಜನರ
ಕೂಡುವುದು ಪರಪೀಡೆಯೆಂಬುದ
ಮಾಡಲಾಗದು ಕರಣ ಮೂರರೊಳಲ್ಲದಾಟವನು
ಆಡಲಾಗದು ದಸ್ಯುಜನವನು
ಕೂಡಲಾಗದಿದೆಂಬ ಮಾರ್ಗವ
ನೋಡಿ ನಡೆವುದು ತನಗೆ ಪರಮ ಸ್ವಾರ್ಥಕರವೆಂದ ೫೭

ಕರಿತುರಗ ಮೊದಲಾದ ವಸ್ತುಗ
ಳರಮನೆಗಳಲಿ ಪುತ್ರ ಮಿತ್ರರು
ತರುಣಿಯರು ಸಹಭವರು ಗೋತ್ರಜರಡವಿಯೊಳಗಿಕ್ಕಿ
ತಿರುಗುವರು ನಿಜಸುಕೃತ ದುಷ್ಕೃತ
ವೆರಡು ಬೆಂಬಿಡವಲ್ಲದುಳಿದುದ
ನರಸ ಬಲ್ಲವರಾರು ಧರ್ಮರಹಸ್ಯ ವಿಸ್ತರವ ೫೮

ಧರ್ಮದಾಧಾರದಲಿಹುದು ಜಗ
ಧರ್ಮವುಳ್ಳನನಾಶ್ರಯಿಸುವುದು
ಧರ್ಮವೇ ನೂಕುವುದು ಜನ್ಮಾಂತರದ ಪಾತಕವ
ಧರ್ಮವೇ ಸರ್ವ ಪ್ರತಿಷ್ಠಿತ
ಧರ್ಮವೆಂಬುದು ಪರಮಪದವಾ
ಧರ್ಮವನು ಬಿಟ್ಟಿಹುದು ಬದುಕಲ್ಲರಸ ಕೇಳೆಂದ ೫೯

ಪರಿಪರಿಯ ಯಜ್ಞವನು ವಿರಚಿಸಿ
ಸುರಪತಿಯ ಸಂತುಷ್ಟಿಬಡಿಸಲು
ಸುರಿವನವ ಸಂಪೂರ್ಣವಾಗಿ ಸುವೃಷ್ಟಿಯನು ಜಗಕೆ
ಹರಿಹಯನು ಸಸ್ಯಾಧಿಕಂಗಳ
ಹೊರೆಯಲೋಸುಗ ಮೈಗೆ ಮೈಯಾ
ಗಿರುತಿಹನು ಭುವನದ್ವಯದೊಳವನೀಶ ಕೇಳೆಂದ ೬೦

ಎತ್ತಲಾನು ಸುತೀರ್ಥವೆಂಬುದ
ಚಿತ್ತವಿಸುವೊಡೆ ಸರ್ವ ತೀರ್ಥದ
ಸತ್ವವನು ಸನ್ನಿಹಿತವಾಗವಧರಿಸು ನೀನದನು
ವಿಸ್ತರಿಸುವೆನು ವಿಪ್ರಪಾದ ವಿ
ಮುಕ್ತ ವಿಮಲೋದಕವನಾವನು
ನೆತ್ತಿಯಲಿ ಧರಿಸಿದವನವನು ಕೃತಾರ್ಥನಹನೆಂದ ೬೧

ಶರಧಿಯೊಳು ಹರಿ ಯೋಗನಿದ್ರೆಯೊ
ಳಿರಲು ಭೃಗುವೈತಂದು ಲಕ್ಷ್ಮೀ
ಧರನ ವಕ್ಷಸ್ಥಳವನೊದೆಯಲು ಮುನಿಯ ಚರಣವನು
ಸಿರಿಯುದರದೊಳಗೊತ್ತಿ ಧರಣೀ
ಸುರರ ಮೆರೆದನು ತೀರ್ಥಪಾದವ
ಧರೆಯೊಳಗೆ ಬುಧರಿಂದಧಿಕವಹ ತೀರ್ಥವಿಲ್ಲೆಂದ ೬೨

ಮಾಡುತಿಹ ಯಜ್ಞವನು ಪರರಿಗೆ
ಮಾಡಿಸುವ ವೇದಾಧ್ಯಯನವನು
ಮಾಡುತಿಹ ತದ್ವಿಷಯದಲಿ ಯೋಗ್ಯರನು ಮಾಡಿಸುವ
ಮಾಡುತಿಹ ದಾನವನು ಲೋಗರು
ನೀಡುತಿರಲೊಳಕೊಂಬ ಗುಣವನು
ಕೂಡಿಕೊಂಡಿಹನೇ ಸಮರ್ಥನು ವಿಪ್ರರೊಳಗೆಂದ ೬೩

ವೇದಪುರುಷನ ವಿಗ್ರಹದಲಿ ವಿ
ಭೇದವಿಲ್ಲದೆ ಬಿಸಜ ಸಂಭವ
ನಾದಿಯಾದ ಸಮಸ್ತದೇವರು ನೆಲೆಪನೆಗಳಾಗಿ
ನೀದುಕೊಂಡಿಹರಂತು ಕಾರಣ
ವಾದಿಸದೆ ವಿಪ್ರೋತ್ತಮರನಭಿ
ವಾದಿಸುವುದುತ್ತಮವಲೇ ಕೇಳೆಂದನಾ ಮುನಿಪ ೬೪

ಯುವತಿಯರು ಗಾಯಕರು ಕವಿಗಳು
ತವತವಗೆ ಕೈವಾರಿಸುವರಾ
ವವನವನೆ ಯಾವಗಲು ದೂಷಕನಿಹಪರಂಗಳಿಗೆ
ಇವರು ಮೂವರು ನಿಂದಿಸುವರಾ
ವವನವನು ಸರ್ವಜ್ಞನೆನಿಸುವ
ನವನಿಪತಿ ಚಿತ್ತೈಸು ಧರ್ಮರಹಸ್ಯವಿಸ್ತರವ ೬೫

ಜ್ಞಾತವಾವುದಜ್ಞಾತವಾವುದು
ನೀತಿ ಯಾವುದನೀತಿ ಯಾವುದು
ದ್ವೈತವಾವುದದ್ವೈತವಾವುದು ವೈದಿಕಾಂಗದಲಿ
ಖ್ಯಾತಿಯಾವುದಖ್ಯಾತಿ ಯಾವುದು
ಜಾತಿಯಾವುದಜಾತಿ ಯಾವುದು
ಭೂತಳದೊಳವನೀಶ ಚಿತ್ತೈಸೆಂದನಾ ಮುನಿಪ ೬೬

ಧರಣಿಯಮರರ ಸೇವೆಯನು ವಿ
ಸ್ತರಿಸಿ ಸತ್ಕಾರದಲವರನಾ
ದರಿಸಿ ಬಹುಮಾನವನು ವಿರಚಿಸಿದಾ ಮಹಾತ್ಮರಿಗೆ
ಎರವಹುದೆ ಸ್ವರ್ಗಾಪವರ್ಗದ
ಸಿರಿಯದೆಂಬುದನರಿದು ನಡೆವಂ
ಗರಿದೆನಿಸುವದದಾವುದೈ ಹೇಳೆಂದನಾ ಮುನಿಪ ೬೭

ಯೋನಿಮುಖವೆಂಬತ್ತುನಾಲ್ಕು ನ
ವೀನ ಜನ್ಮಂಗಳೊಳಗುದಯಿಸಿ
ಹಾನಿ ವೃದ್ಧಿಗಳಿರಿದು ಜ್ಞಾನದ ಕಡೆಯು ಕಡೆಯುದಲಿ
ಮಾನವರ ಬಸುರಿನಲಿ ಬಂದ
ಜ್ಞಾನತರರಾಗಳಿವುದಿದು ಕ
ರ್ಮಾನುಗತವಾಗಿಹುದಲೇ ಭೂಪಾಲ ಕೇಳೆಂದ ೬೮

ಪಾನದಿಂ ಸೂಕರನು ಬುಧರವ
ಮಾನದಿಂ ಕ್ಷಯರೋಗಿ ಗುರುಜನ
ಹಾನಿಯಿಂದವೆ ಕುಷ್ಠಿ ಗರ್ವದಿ ಕುಕ್ಕುಟಾಖ್ಯಯನು
ಹೀನಗತಿಯಿಂದುರಗ ನಾನಾ
ಯೋನಿಗಳಲಿ ಚರಾಚರವು ಕ
ರ್ಮಾನುಗತವಾಗುದಯಿಸುವುದನವನೀಶ ಕೇಳೆಂದ ೬೯

ಪರರ ಪಟುತನವಾದದಲಿ ಮೂ
ಗರವೊಲಿಹ ಪರ ವಚನದುತ್ಕಟ
ವೊರೆಗೆ ಬಧಿರತ್ವವನು ಪರಗುಣ ದೋಷ ದರುಶನವು
ದೊರಕಿದೊಡೆ ಜಾತ್ಯಂಧನೆನಿಸುವ
ಪುರುಷನಾವವನವನು ಸಾಕ್ಷಾ
ತ್ಪರಮಪುರುಷೋತ್ತಮನಲೇ ಭೂಪಾಲ ಕೇಳೆಂದ ೭೦

ಇಷ್ಟ ಸಂತರ್ಪಣವ ಮಾಡಿ ವಿ
ಶಿಷ್ಟಪೂಜಾಪಾತ್ರರನು ಸಂ
ತುಷ್ಟಿಬಡಿಸಿ ಸಧರ್ಮದಲಿ ರಾಜ್ಯವನು ರಕ್ಷಿಸುತ
ಕೊಟ್ಟವರ ಕೊಂಡವರ ಮತ್ತೊಡ
ಬಟ್ಟವರನನುಜಾತ್ಮಜರನೊಳ
ಗಿಟ್ಟುಕೊಂಡಿಹುದುಚಿತವದು ಭೂಪಾಲ ಕೇಳೆಂದ ೭೧

ನುಡಿದುದನು ಪೂರೈಸಿ ಕಾಲದ
ಕಡೆಯ ಕಾಣಿಸಿ ಹೋಹವರ ಬೀ
ಳ್ಕೊಡುತ ಹಳೆಯರನಾಪ್ತರನು ಮನ್ನಿಸುತ ತನ್ನುವನು
ಹಿಡಿದು ಸೇವೆಯ ಮಾಡುವವರನು
ಬಿಡದೆ ನಾನಾ ತೆರದ ಪದವಿಯ
ಕೊಡುತಲಿಹುದಿದು ನೀತಿ ಚಿತ್ತೈಸೆಂದನಾ ಮುನಿಪ ೭೨

ವಿಲಗ ಸಾಗರನಾಗಿ ದೇಶವ
ಹಿಳಿದು ಹಿಂಡುತ ದಾನ ಧರ್ಮವ
ನುಳಿದು ದೇವ ಬ್ರಾಹ್ಮರೆನ್ನದೆ ಕಂಡವರನೆಳೆದು
ಗಳಿಗೆ ಸಂಖ್ಯೆಗೆ ದಂಡ ದೋಷವ
ಕೊಳುತ ಕಡೆಯಲಧೋಗತಿಗಳೊಳ
ಗಿಳಿದು ಹೋಹುದನೀತಿ ಚಿತ್ತೈಸೆಂದನಾ ಮುನಿಪ ೭೩

ಯೋನಿಯಲ್ಲದ ಠಾವುಗಳಲಿ ವಿ
ಯೋನಿಯುಹ ವಿಷಯಂಗಳಲಿ ಪಶು
ಯೋನಿಯುಲಿ ಸಂಭೋಗಿಸುವ ಪಾತಕರ ಪರಿವಿಡಿಯ
ಏನ ಹೇಳಲು ಬಹುದು ನರಕ ವಿ
ತಾನದೊಳಗೋಲಾಡಿ ಬಳಿಕಾ
ಶ್ವಾನ ಯೋನಿಯೊಳವರು ಜನಿಸುವರೆಂದನಾ ಮುನಿಪ ೭೪

ಜೀವ ಪರಮಂನಭೇದವನು ಸಂ
ಭಾವಿಸದೆ ವೇದಾಂತ ಶಾಸ್ತ್ರವಿ
ದಾವ ಮುಖವೆಂದರಿಯದೆಯೆ ದಾಸೋಹವೆಂದೆನುತ
ಕೋವಿದರ ಸಂಗವನುಳಿದು ಮಾ
ಯಾ ವಿಲಾಸದ ನೆಲೆಯ ನೋಡದೆ
ಸಾವುತಿಹುದೇ ದ್ವೈತ ಚಿತ್ತೈಸೆಂದನಾ ಮುನಿಪ ೭೫

ಉತ್ತಮರ ಸಂಗದೊಳಗೋಲಾ
ಡುತ್ತ ದುರ್ವಿಷಯಂಗಳನು ಮುರಿ
ಯೊತ್ತಿ ಸಕಲ ಚರಾಚರದ ಸುಖ ದುಃಖವನು ತಾನು
ಹೊತ್ತು ನಡೆವುತ ಪುಣ್ಯ ಪಾಪವಿ
ದೆತ್ತಣದು ತನಗೆಂಬ ಕಾಣಿಕೆ
ಯುತ್ತರೋತ್ತರ ಸಿದ್ಧಿ ಚಿತ್ತೈಸೆಂದನಾ ಮುನಿಪ ೭೬

ಪೊಡವಿಯೊಳಗೆ ಪುರೋಹಿತರನವ
ಗಡಿಸಿ ಧರ್ಮದ ಬಲದಿ ನಾಕಕೆ
ನಡೆವ ರಾಯರ ಹೊಯಿದಿಳಿಯಲಿಕ್ಕುವರಧೋಗತಿಗೆ
ಕೆಡಿಸುವರು ರಾಷ್ಟ್ರವನು ಕ್ಷಾತ್ರವ
ತಡೆಗಡಿಸಿ ಚತುರಂಗ ಬಲವನು
ಹುಡಿಹುಡಿಯ ಮಾಡುವರು ನಿರ್ಜರರರಸ ಕೇಳೆಂದ ೭೭

ಬಲಿಯ ರಾಜ್ಯ ವಿಭೀಷಣನ ಸಿರಿ
ಜಲನಿಧಿಯ ಗಾಂಭೀರ್ಯ ಬಾಣನ
ಬಲುಹು ಹನುಮಾನುವಿನ ಭುಜಬಲ ವೀರ ರಾಘವನ
ಛಲ ದಧೀಚಿಯ ದಾನ ಪಾರ್ಥನ
ಕೆಳೆ ಯುಧಿಷ್ಠಿರ ನೃಪನ ಸ್ಮರಣೆ
ಗಳವಡುವ ಬದುಕುಳ್ಳಡದು ವಿಖ್ಯಾತಿ ಕೇಳೆಂದ ೭೮

ಇರುಳು ಹಗಲನವರತ ಪತಿ ಪರಿ
ಚರಿಯವನು ಮಾಡುತ್ತ ಪರ ಪುರು
ಷರನು ನೆನೆಯದೆ ಹಲವು ಸಂತತಿಗಳಿಗೆ ತಾಯಾಗಿ
ಇರುತ ದೇವ ಬ್ರಾಹ್ಮರನು ತಾ
ನಿರುತ ಸತ್ಕರಿಸುತ್ತಲಂತಃ
ಪುರದಲೆಸೆಯೆ ಗೃಹಸ್ಥೆಯೆನಿಸುವಳರಸ ಕೇಳೆಂದ ೭೯

ಮಡದಿ ನಿಜನಿಳಯವನು ಬಿಟ್ಟಡಿ
ಗಡಿಗೆ ಪರಗೃಹದೊಳಗೆ ಬಾಯನು
ಬಡಿದು ಮನೆಮನೆವಾರ್ತೆಯೆನ್ನದೆ ಬೀದಿಗಲಹವನು
ಒಡರಿಚುವ ಪತಿಯೊಬ್ಬನುಂಟೆಂ
ದೆಡಹಿ ಕಾಣದ ದಿಟ್ಟೆ ಹತ್ತನು
ಹಡೆದೊಡೆಯು ವರ್ಜಿಸುವುದುತ್ತಮ ಪುರುಷರುಗಳೆಂದ ೮೦

ಮುಡಿಯನೋಸರಿಸುತ್ತ ಮೇಲುದ
ನಡಿಗಡಿಗೆ ಸರಿವುತ್ತ ಮೌನವ
ಹಿಡಿದಧೋಮುಖಿಯಾಗಿ ಕಿಗ್ಗಣ್ಣಿಕ್ಕಿ ಕೆಲಬಲನ
ಬಿಡದೆ ನೋಡುತ ಮುಂಗುಳು ನಗೆಯಲಿ
ಜಡಿದು ಜಾರುವ ಜಾರವನಿತೆಯ
ಗೊಡವೆಗೊಳಗಾಗದವರುತ್ತಮ ಪುರುಷರುಗಳೆಂದ ೮೧

ಗುರುವಿನಲಿ ತಂದೆಯಲಿ ತಾಯಲಿ
ಹಿರಿಯರಲಿ ದೈವದಲಿ ಪಾಪದ
ಇರುಬಿನಲಿ ಗೋವಿನಲಿ ತೀರ್ಥದಲಿ ಮಿಗೆ ತನ್ನುವನು
ಹೊರೆವ ದಾತಾರನಲಿ ಮಂತ್ರದ
ಪರಮ ಸೇವೆಗಳಲ್ಲಿ ಧರಣೀ
ಸುರರೊಳಂಜಿಕೆ ಹಿರಿದಿರಲು ಬೇಕೆಂದನಾ ಮುನಿಪ ೮೨

ನೀತಿವಿದನಲ್ಲದ ಕುಮಂತ್ರಿ ವಿ
ನೀತಿಪರನಲ್ಲದ ಪುರೋಹಿತ
ನೇತಕವರಿಂದಾವ ಪುರುಷಾರ್ಥಂಗಳೆಯ್ದುವುವು
ಕಾತರಿಸಿ ಸಮರಾಂಗಣಕೆ ಭಯ
ಭೀತನಹ ಭೂಭುಜನ ದೆಸೆಯಿಂ
ಬೀತು ಹೋಗದೆ ಸಕಲ ಸಂಪದವರಸ ಕೇಳೆಂದ ೮೩

ಧರ್ಮವಾವುದು ಮೇಣು ಜಗದೊಳ
ಧರ್ಮವಾವುದು ರಾಜ ಮಂತ್ರದ
ಧರ್ಮವಾವುದು ಮಾರ್ಗವಾವುದಮಾರ್ಗವೆಂದೇನು
ಕರ್ಮವಾವುದು ವಿಧಿವಿಹಿತ ದು
ಷ್ಕರ್ಮವಾವುದದೆಂಬ ಭೇದವ
ನಿರ್ಮಿಸಾ ಸಾಕೆಂದು ಬಿನ್ನಹ ಮಾಡಿದನು ಭೂಪ ೮೪

ಸತಿಸಹಿತ ವಿರಚಿಸಿದ ಧರ್ಮ
ಸ್ಥಿತಿ ಸಮೃದ್ಧಿಕವಾಗಿ ಸಲುವುದು
ಪತಿಗಳಲ್ಲದೆ ತನ್ನ ಸ್ವಾತಂತ್ರ್ಯದಲಿ ಮಾಡಿದುದು
ಅತಿಶಯವನೆಯ್ದದು ಕಣಾ ಭೂ
ಪತಿಯೆ ಕೇಳಿಹಪರದ ಗತಿ ನಿಜ
ಸತಿಯ ದೆಸೆಯಿಂದಲ್ಲದೇ ಫಲಿಸುವುದು ಹುಸಿಯೆಂದ ೮೫

ಅತಿಥಿ ಪೂಜೆಯನುಳಿದ ಜೀವ
ಸ್ಥಿತರ ಧರ್ಮಸ್ಥಿತಿಯನಪಹರಿ
ಸುತ ಬಲದಲಿಯುವನಿಯಲಿ ನಿರಿಯಣದ ಕಾಲದಲಿ
ಗತಿಗೆಡಿಸಿ ಕೊಂಡೊಯ್ದು ವೈವ
ಸ್ವತನು ನಾಯಕ ನರಕದೊಳಗ
ದ್ದುತ ಬಹನು ಕುಲಕೋಟಿ ಸಹಿತವನೀಶ ಕೇಳೆಂದ ೮೬

ತಮ್ಮ ಕಾರ್ಯ ನಿಮಿತ್ತ ಗರ್ವವ
ನೆಮ್ಮಿದರೆ ತದ್ಗರ್ವದಿಂದುರೆ
ದಿಮ್ಮಿತಹುದಾ ಕಾರ್ಯ ಮರ್ತ್ಯ ಚರಾಚರಂಗಳಲಿ
ನಿರ್ಮಮತೆಯಲಿ ನಡೆದುಪಶ್ರುತಿ
ಗುಮ್ಮಹವನೈದುವವೊಲೌಕುವ
ಮರ್ಮಿಗಳನೊಳಹೊಯ್ದು ಕೊಂಬುದು ಭೂಪ ಕೇಳೆಂದ ೮೭

ಅರಸ ಕೇಳೈ ಮಾರ್ಗ ಮೂರಾ
ಗಿರುತಿಹವು ಸಂಪೂರ್ಣ ಧನ ಗುರು
ಪರಿಚರಿಯ ಪರಿವರ್ತನೆಗಳೆಂಬಿನಿತನತಿಗಳೆದು
ತಿರುಗಿ ಬಂದೊಡೆ ನಾಲ್ಕನೆಯ ಮತ
ದೊರಕಲರಿವುದೆ ಕಲೆಗಳನು ಸಂ
ವರಿಸುವ ನರೋತ್ತಮರಿಗವನೀಪಾಲ ಕೇಳೆಂದ ೮೮

ಕಾದುದಕದಾಸ್ನಾನ ಸಿದ್ಧಿಯ
ವೈದಿಕಾಂಗದ ಮಂತ್ರ ಸಾಧನ
ವೇದ ಹೀನರಿಗಿತ್ತ ಫಲವಾ ಶ್ರಾದ್ಧ ಕರ್ಮದಲಿ
ಐದದಿಹ ದಕ್ಷಿಣೆಗಳೆಂಬಿವು
ಬೂದಿಯಲಿ ಬೇಳಿದ ಹವಿಸ್ಸಿನ
ಹಾದಿಯಲ್ಲಧೆ ಫಲವನೀಯವು ಭೂಪ ಕೇಳೆಂದ ೮೯

ಇಹಪರದ ಗತಿ ದಾನ ಧರ್ಮದ
ಬಹುಳತೆಗಳನು ತತ್ಸ್ವಭಾವದ
ವಿಹಿತ ಪುಣ್ಯದ ಬೆಳವಿಗೆಯು ಫಲವೊಂದು ನೂರಾಗಿ
ಬಹುದು ಸದ್ವಂಶದಲಿ ಜನಿಸಿಹ
ಮಹಿಮನಿರೆ ಲೋಕಾಂತರದ ಸುಖ
ವಹುದು ಸಂತಾನಾಭಿವೃದ್ಧಿಯು ನೃಪತಿ ಕೇಳೆಂದ ೯೦

ಚೋರನನು ಕಾಣುತ್ತ ಮರಳಿದು
ಚೋರನೆಂದೊಡೆ ಪತಿತನನು ನಿ
ಷ್ಠೂರತನದಿಂ ಪತಿತನೆಂದೊಡೆ ಸಾಮ್ಯ ದೋಷವದು
ಸಾರುವುದು ಮಿಥ್ಯೋತ್ತರದಲಿ ವಿ
ಚಾರಿಸದೆ ನುಡಿದವರಿಗಿಮ್ಮಡಿ
ನಾರಕದ ಫಲ ತಪ್ಪದವನೀಪಾಲ ಕೇಳೆಂದ ೯೧

ವಿನುತ ಮಧುಕೈಟಭರ ಮೇಧ
ಸಿ ನಲಿ ಮೇದಿನಿಯಾದುದಿದ ನೀ
ನನುಭವಿಸುವೊಡೆ ಪುಣ್ಯಕೀರುತಿಯೆಂಬ ಪರಿಮಳದ
ಹೊನಲಿನಲಿ ತರವಿಡಿದು ಲೇಸಾ
ಗನುಭವಿಸುವುದದಲ್ಲದಿದ್ದೊಡೆ
ಮನುಜ ಮಾಂಸವ ಭಕ್ಷಿಸಿದ ಫಲವರಸ ಕೇಳೆಂದ ೯೨

ತನ್ನ ದಾನವನಪಹರಿಸಿ ಕೊಂ
ಡನ್ಯರಿತ್ತುದಕಪ್ಪ ಬೀಳುವ
ಧನ್ಯರುಗಳರವತ್ತು ಸಾವಿರ ವರುಷ ಪರಿಯಂತ
ಖಿನ್ನವಹ ವಿಷ್ಠೆಯೊಳು ಕ್ರಿಮಿಗಳ
ಜನ್ಮದಲ್ಲಿಹರಿದನರಿದು ನೀ
ನಿನ್ನು ಕೊಟ್ಟುದನುಳುಹಿಕೊಂಬುದು ಧರ್ಮವಲ್ಲೆಂದ ೯೩

ಕರಣ ಮೂರರೊಳಿತ್ತ ವಸ್ತುವ
ನಿರಿಸಿಕೊಂಡರೆ ಮಾಸ ಮಾಸಾಂ
ತರದೊಳೊಂದಕೆ ನೂರು ಗುಣದಲಿ ಕೋಟಿ ಪರಿಯಂತ
ಹಿರಿದಹುದು ದಾನ ಪ್ರಶಂಸೆಯ
ನಿರಿಸಿಕೊಂಡಿಹ ದಾನ ನರಕವ
ನೆರವಕೊಂಡೇ ದಾನ ಕಾರಣವೆಂದನಾ ಮುನಿಪ ೯೪

ದ್ಯೂತದಲಿ ಮದ್ಯದಲಿ ಘನ ಕಂ
ಡೂತಿಯಲಿ ನಿದ್ರೆಯಲಿ ಕಲಹ ವಿ
ಘಾತಿಯಲಿ ಮೈಥುನದಲಾಹಾರದಲಿ ಬಳಿಸಂದು
ಕೈತವದ ಉದ್ಯೋಗದಲಿ ದು
ರ್ನೀತಿಯಲಿ ಪರಸತಿಯರಲಿ ಸಂ
ಪ್ರೀತಿ ಬಲಿವುದು ಬೆದಕ ಬೆದಕಲು ಭೂಪ ಕೇಳೆಂದ ೯೫

ದುಷ್ಕೃತವನೆಸಗುವರು ಫಲದಲಿ
ಕಕ್ಕುಲಿಸುವರು ಸುಕೃತವೆಂಬುದ
ಲೆಕ್ಕಿಸರು ತತ್ಫಲವನೇ ಬಯಸುವರು ಮಾನವರು
ಇಕ್ಕದರೆಯದೆ ಬಿತ್ತಿ ಬೆಳೆಯದೆ
ಪುಕ್ಕಟೆಯು ಸ್ವರ್ಗಾದಿ ಭೋಗವು
ಸಿಕ್ಕಲರಿವುದೆ ರಾಯ ಚಿತ್ತೈಸೆಂದನಾ ಮುನಿಪ ೯೬

ವರ ಶ್ರುತಿಸ್ಮೃತಿಗಳು ಕಣಾ ಭೂ
ಸುರರ ದೃಷ್ಟಿಗಳಿವರೊಳೊಂದಕೆ
ಕೊರತೆಯಾಗಲು ಕಾಣನೆನಿಸುವನೆರಡನರಿಯದಿರೆ
ನಿರುತವಿದು ಜಾತ್ಯಂಧನೆನಿಸುವ
ನರಸ ಕೇಳೀ ಮಾಂಸ ದೃಷ್ಟಿಗ
ಳಿರವಲೇ ಸರ್ವತ್ರ ಸಾಧಾರಣವು ಲೋಕದಲಿ ೯೭

ವಾಚಿಸದೆ ವೇದಾರ್ಥ ನಿಚಯುವ
ನಾಚರಿಸದಾಲಸ್ಯದಿಂದು
ತ್ಕೋಚನಾಗಿ ಪರಾನ್ನಪೂರಿತ ತಪ್ತ ತನುವಾದ
ನೀಚನಹ ಭೂಸುರನ ಕರುಳನು
ತೋಚುವಳಲ್ಲೆ ಮೃತ್ಯುವವನು ನಿ
ಶಾಚರನು ದ್ವಿಜನಲ್ಲ ಚಿತ್ತೈಸೆಂದನಾ ಮುನಿಪ ೯೮

ಸರಸಿಜಾಕ್ಷನ ವಿಷ್ಣು ನಾಮ
ಸ್ಮರಣೆಯಲಿ ಶ್ರುತಿ ಮೂಲ ವಾಕ್ಯೋ
ತ್ಕರುಷೆಯಲಿ ಭೂತಕ್ಕೆ ಹಿತವಹ ನಡವಳಿಯನರಿದು
ಪರವಚನವನು ತ್ರಿಕರಣದೊಳು
ಚ್ಚರಿಸಲಾಗದು ಸರ್ವಥಾ ಸ
ತ್ಪುರುಷರಭಿಮತವಿದು ಚಿತ್ತೈಸೆಂದನಾ ಮುನಿಪ ೯೯

ಲೋಕ ಸಮ್ಮತವಾಪುದದನು ನಿ
ರಾಕರಿಸುವವರುಗಳು ತಾವೇ
ನಾಕವಾಳರೆ ಜಗಕೆ ತಮ್ಮನದಾರು ಬಲ್ಲವರು
ಬೇಕು ಬೇಡೆಂಬುದಕೆ ತಾವವಿ
ವೇಕಿಗಳು ಮೊದಲಿಂಗೆ ಪ್ರಾಮಾ
ಣೀಕರುಗಳವರಲ್ಲ ಚಿತ್ತೈಸೆಂದನಾ ಮುನಿಪ ೧೦೦

ಉತ್ತಮರುಗಳ ನಿಂದಿಸುತ ದು
ರ್ವೃತ್ತನಾಗಿಯಧರ್ಮ ಕೋಟಿಯ
ನಿತ್ಯವಿಧಿ ತನಗಾಗಿ ಧರ್ಮದ ತಾರತಮ್ಯವನು
ಎತ್ತಲೆಂದರಿಯದೆ ಜಗಕ್ಕೆ ಜ
ಡಾತ್ಮರಾಗಿಹ ವೇದಬಾಹ್ಯರ
ಮೃತ್ಯು ದೇವತೆ ಮುರಿದು ಮೋದದೆ ಬಿಡುವಳೇಯೆಂದ ೧೦೧

ಲೋಕದೊಳಗಣ ಪುಣ್ಯ ಪಾಪಾ
ನೀಕವನು ಯಮರಾಜನಾಲಯ
ದಾಕೆವಾಳಂಗರುಹುವರು ಹದಿನಾಲ್ಕು ಮುಖವಾಗಿ
ನಾಲ್ಕು ಕಡೆಯಲಿ ಕವಿದು ಬರಿಸುವ
ರಾಕಿ ದಿನದಿನದಲ್ಲಿ ಗರ್ವೋ
ದ್ರೇಕದಲಿ ಮೈಮರೆದು ಕೆಡಬೇಡೆಂದನಾ ಮುನಿಪ ೧೦೨

ಚಕ್ರಿಯೊಬ್ಬಗೆ ಹತ್ತು ಕಡಿಕರ
ಲೆಕ್ಕವಂತಾ ಚಕ್ರಿ ಹತ್ತರ
ಲೆಕ್ಕದೊಳಗಾ ಧ್ವಜಿ ಕಣಾ ಧ್ವಜಿ ಹತ್ತರ ಸಮಾನ
ಮಿಕ್ಕ ವೇಸಿಗೆ ವೇಸಿ ಹತ್ತರ
ಲೆಕ್ಕವೊಬ್ಬರಸಂಗೆ ಪಾತಕ
ವೊಕ್ಕಲಿಕ್ಕುವುದರಸುತನ ಸಾಮಾನ್ಯವಲ್ಲೆಂದ ೧೦೩

ಬಲುಕರಿಸಿ ಭೂಮಿಯೊಳಗೊಂದಂ
ಗುಲವನೊತ್ತಿದವಂಗೆ ಪಶು ಸಂ
ಕುಲದಲೊಂದೇ ಗೋವನಪಹರಿಸಿದ ದುರಾತ್ಮಂಗೆ
ಅಳುಪಿ ಕನ್ಯಾರತ್ನದೊಳಗೊ
ಬ್ಬಳನು ಭೋಗಿಸಿದಂಗೆ ನರಕದೊ
ಳಿಳಿವುದಲ್ಲದೆ ಬೇರೆ ಗತಿಯಿಲ್ಲೆಂದನಾ ಮುನಿಪ ೧೦೪

ದಾನ ವಿರಹಿತರಾಗಿ ಜನಿಸಿದ
ಮಾನವರು ದಾರಿದ್ರ್ಯದರಿಂ
ಹೀನಸುಕೃತಿಗಳಾಗಿಯದರಿಂ ಘೋರತರ ನರಕ
ಆ ನರಕದಿಂ ಮರಳಿ ಪಾತಕ
ಯೋನಿ ಮರಳಿ ದರಿದ್ರವದು ತಾ
ನೇನ ಮಾಡಿಯು ಬೆನ್ನಬಿಡದವನೀಶ ಕೇಳೆಂದ ೧೦೫

ಪಾಕಶಾಸನನೈದಿ ವೃತ್ರನ
ಥಾಕುಗೆಡಿಸಿ ದಧೀಚಿಯಸ್ಥಿಯ
ಲೌಕಿ ಹೊಯ್ಯಲು ದಾನವನ ತನು ನೀರೊಳಡಗೆಡೆಯೆ
ತೂಕ ಕುಂದಿ ಜಲಾಧಿ ದೇವತೆ
ಯಾ ಕಪರ್ದಿಯ ಕರುಣದಲಿ ದ
ರ್ಭಾಕೃತಿಯ ಕೈಕೊಂಡುದವನೀಶ ಕೇಳೆಂದ ೧೦೬

ಆದಿಯಲಿ ಕಮಲಾಸನನು ಮಧು
ಸೂದನನು ಮಧ್ಯದಲಿ ಮೇಲಣ
ಹಾದಿಯಲಿ ಗಿರಿಜೇಶನಿರೆ ತ್ರೈಮೂರ್ತಿಮಯವಾಗಿ
ಕಾದುಕೊಂಡಿಹರಖಿಳ ಲೋಕವ
ನೈದೆ ದರ್ಭಾಂಕುರದ ಮಹಿಮೆಯ
ಭೇದವನು ಬಣ್ಣಿಸುವನಾವನು ಭೂಪ ಕೇಳೆಂದ ೧೦೭

ಬೆರಳ ಮೊದಲಲಿ ಭೂಸುರರು ನಡು
ವೆರಳೆಡೆಗಳಲಿ ಪಾರ್ಥಿವರು ತುದಿ
ವೆರಳೊಳಗೆ ವೈಶ್ಯರುಗಳೀ ಕ್ರಮದಲಿ ಪವಿತ್ರವಿದು
ಧರಿಸಬೇಹುದು ದಕ್ಷಿಣ ಕರಾಂ
ಬುರುಹದಲಿ ದಿನದಿನದ ಸಂಧ್ಯಾಂ
ತರದ ಸಮಯದಲರಸ ಚಿತ್ತೈಸೆಂದನಾ ಮುನಿಪ ೧೦೮

ಮೇರೆದಪ್ಪಿದ ಜಪ ಸುಕಲ್ಪಿತ
ಧಾರೆಯುಡುಗಿದ ದಾನ ದರ್ಭಾ
ಕಾರ ವಿರಹಿತವಾದ ಸಂಧ್ಯಾವಂದನಾದಿಗಳು
ಪಾರವೆಯ್ದದ ಶೌಚ ವಿನಯ ವಿ
ಹಾರವಿಲ್ಲದ ಪೂಜನೆಗಳುಪ
ಕಾರವಹುದೇ ರಾಯ ಚಿತ್ತೈಸೆಂದನಾ ಮುನಿಪ ೧೦೯

ದೇವತಾಸ್ಥಾನದಲಿ ವಿಪ್ರಸ
ಭಾವಳಯದಲಿ ರಾಜಪುರುಷರ
ಸೇವೆಯಲಿ ಗುರುಸದನದಲಿ ನದಿಯಲಿ ತಟಾಕದಲಿ
ಗೋವುಗಳ ನೆರವಿಯಲಿ ವರ ವೃಂ
ದಾವನದೊಳುಪಹತಿಯ ಮಾಡುವು
ದಾವ ಗುಣ ಗರುವರಿಗೆ ಚಿತ್ತೈಸೆಂದನಾ ಮುನಿಪ ೧೧೦

ದೆಸೆಗಳೇ ವಾಸಸ್ಸು ರಾಜ್ಯ
ಪ್ರಸರಣವು ನಿರ್ಲಜ್ಜೆ ಜಟೆ ರಂ
ಜಿಸುವ ಧೂಳೀ ದೂಸರವ ಗಂಗಾಧರನವೋಲು
ಎಸೆವ ಸುತರುಗಳಿಲ್ಲದಿರೆ ಶೋ
ಭಿಸುವುದೇ ಸಂಸಾರವೆಂಬುದು
ವಸುಧೆಯೊಳು ಪುಣ್ಯಾಧಿಕರುಗಳಲ್ಲದಿಲ್ಲೆಂದ ೧೧೧

ಗುರುಸುತನವೋಲಾಯು ನೀಲಾಂ
ಬರನವೊಲು ಬಲ ದಶರಥನವೋಲ್
ಸಿರಿ ನದೀಜನವೋಲು ಶೌರ್ಯವು ರಘುಪತಿಯವೋಲು
ಅರಿವಿನಾಶನ ನಹುಷನವೊಲೈ
ಶ್ವರಿಯ ಮಾರುತಿಯವೊಲು ಗತಿ ಸಂ
ವರಿಸುವುದು ಶಿವನೊಲಿದವರುಗಳಿಗಲ್ಲದಿಲ್ಲೆಂದ ೧೧೨

ಕ್ಷಿತಿಯವೊಲು ಪಾವನತೆ ಕುರು ಭೂ
ಪತಿಯವೋಲಭಿಮಾನ ಲಕ್ಷ್ಮೀ
ಪತಿಯವೊಲುಸತ್ಕೀರ್ತಿ ವಿದುರನವೋಲು ವಿಜ್ಞಾನ
ಕ್ಷಿತಿಯವೊಲು ಸ್ಥೈರಣೆ ಸುಹೃತ್ಸಂ
ತತಿಯವೊಲು ಪರಿಣಾಮ ಕುಂತೀ
ಸುತರವೊಲು ಸತ್ವಾಧಿಕರು ಲೋಕದೊಳಗಿಲ್ಲೆಂದ ೧೧೩

ಗಗನದಗಲದಿನುಗುವ ವೃಷ್ಟಿಯೊ
ಳೊಗೆದ ಕೀಲಾಲವು ಸಮುದ್ರವ
ಹೊಗುವ ನದಿ ನಾನಾ ಪ್ರಕಾರದ ರೂಪುಗಳಲೆಸೆವ
ಒಗುಮಿಗೆಯ ದೈವದ ಪದಾಂಬುಜ
ಯುಗಳದರ್ಚನೆ ಪೂಜನೆಗಳಿವು
ಜಗಮುದರನನು ಮುಟ್ಟವೇ ಭೂಪಾಲ ಕೇಳೆಂದ ೧೧೪

ಜಲದೊಳಗೆ ವಾರಾಹ ವಿಷ್ಣು
ಸ್ಥಳದೊಳಗೆ ವಾಮನನು ವನ ಸಂ
ಕುಳದೊಳಗೆ ನರಸಿಂಹನಾಗಿಯೆ ಭಕ್ತನಿಕರವನು
ಸಲಹುತಿಹನೊಮ್ಮೆಯು ಜಗತ್ರಯ
ದೊಳಗು ಹೊರಗೆಂದೆನ್ನದನುದಿನ
ಜಲರುಹಾಕ್ಷನು ಕೃಷ್ಣ ಕೇಶವನಲ್ಲದಿಲ್ಲೆಂದ ೧೧೫

ಕತ್ತಲೆಯ ಕಾಲಾಟ ಸೂರ್ಯನ
ನೊತ್ತುವುದೆ ದುಷ್ಕರ್ಮ ಕೋಟಿಗ
ಳೆತ್ತ ಮುಟ್ಟುವುವೈ ಮಹಾಪುರುಷರನು ಖಗಪತಿಯ
ತತ್ತುದೇ ವಿಷ ಕೃಷ್ಣರಾಯನ
ಭಕ್ತರುಗಳನುಭವಿಸುವುದು ತಾ
ಪತ್ಯವೇ ಜಡಜೀವರಿಗೆ ಹೇಳೆಂದನಾ ಮುನಿಪ ೧೧೬

ಅರುಹಬಾರದು ಮುಂದೆ ಬಹ ದಿನ
ಬಿರಿಸು ನೀನೆಚ್ಚೆತ್ತು ನಡೆ ಮೈ
ಮರೆಯದಿರು ನಿನ್ನಾತ್ಮಜರ ವೈರಾನುಬಂಧದಲಿ
ಬರಿದಹುದು ಬ್ರಹ್ಮಾಂಡ ನೀನದ
ನರಿಯೆ ಮೇಲಣ ತಾಗು ಬಾಗಿನ
ಹೊರಿಗೆ ದೈವಾಧೀನವಾಗಿಹುದೆಂದನಾ ಮುನಿಪ ೧೧೭

ತೆರಹುಗುಡದೆ ಧರಿತ್ರಿಯೊಳಗೀ
ಡಿರಿದ ದೈತ್ಯ ಸಹಸ್ರ ಕೋಟಿಯ
ನಿರಿದು ಭೂಭಾರವನಿಳುಹಿ ನಿರ್ಜರರ ದುಗುಡವನು
ಹರಿದು ಹಾಯಿಕಿ ಭಕ್ತರನು ನೆರೆ
ಮೆರೆಯಲೋಸುಗ ಜನಿಸಿಪನು ಹರಿ
ಯರಿಯಲಾ ಶ್ರೀಕೃಷ್ಣರಾಯನು ಮನುಜನಲ್ಲೆಂದ ೧೧೮

ಆತನಾ ಪಾಂಡವರ ಹರಿಬವ
ನಾತು ಪಾರ್ಥನ ರಥಕೆ ತಾನೇ
ಸೂತನಾದನು ನಿಮಗೆ ಜಯವೆಲ್ಲಿಯದು ಭೂಪತಿಯೆ
ಭೂತಳವನೊಪ್ಪಿಸುವುದಸುರಾ
ರಾತಿಯನು ಮರೆಹೊಕ್ಕು ಬದುಕುವು
ದೀ ತತುಕ್ಷಣವಲ್ಲದಿರ್ದೊಡೆ ಕೆಡುವಿರಕಟೆಂದ ೧೧೯

ಜಲಧಿಯೊಳು ದುಗ್ಧಾಬ್ಧಿ ತೀರ್ಥಾ
ವಳಿಗಳೊಳು ಸುರನದಿ ಮುನೀಶ್ವರ
ರೊಳಗೆ ವೇದವ್ಯಾಸನಾ ವ್ರತಿಗಳೊಳು ಹನುಮಂತ
ಜಲರುಹಾಕ್ಷನೆ ದೈವದೊಳು ಕೇ
ಳುಳಿದ ಧರಣೀಪಾಲರೊಳಗ
ಗ್ಗಳೆಯನೈ ಧರ್ಮಜನು ಚಿತ್ತೈಸೆಂದನಾ ಮುನಿಪ ೧೨೦

ಈ ಪರಿಯ ಬೋಧೆಯಲಿ ನೃಪನನು
ತಾಪವನು ಮಾಣಿಸಿ ಕುಬುದ್ಧಿ
ವ್ಯಾಪಕನು ಧೃತರಾಷ್ಟ್ರನೆಂಬಪಕೀರ್ತಿಯನು ಬಿಡಿಸಿ
ಕಾಪಥಂಗಳ ನಿಲಿಸಿ ತತ್ವಕ
ಳಾಪ ವಿಮಲ ಜ್ಞಾನದುದಯದ
ರೂಪು ತಾನೆಂಬಂತೆ ಸೂರ್ಯೋದಯವ ಕಾಣಿಸಿದ ೧೨೧

ಧರಣಿಪನ ಸಂತೈಸಿದನು ಮುನಿ
ವರನು ತನ್ನಾಶ್ರಮಕೆ ತಿರುಗಿದ
ನುರುತರ ಪ್ರೇಮದಲಿ ಧೃತರಾಷ್ಟ್ರಾವನೀಶ್ವರನು
ಹರಿಯದಮಳಾನಂದ ರಸದಲಿ
ಹೊರೆದು ಹೊಂಪುಳಿಯೋಗಿ ಲಕ್ಷ್ಮೀ
ಧರನ ನೆನೆದನು ರಾಯ ಗದುಗಿನ ವೀರ ನರಯಣನ ೧೨೨

## ಐದನೆಯ ಸಂಧಿ

ಸೂ. ವೀರ ಪಾಂಡವರದಟನಾ ದನು
ಜಾರಿ ಹೇಳಿದ ವಚನರಚನೆಯ
ಕೌರವಗೆ ಬಂದರುಹೆ ಕೋಪಿಸಿ ಸಂಜಯನ ಜರೆದ

ಬೀಳುಕೊಂಡುದು ರಜನಿ ಕುರು ಭೂ
ಪಾಲನುಪ್ಪವಡಿಸಿದನೋಲಗ
ಶಾಲೆಯಲಿ ನೆರಹಿದನು ಸಭ್ಯರನಾಪ್ತ ಮಂತ್ರಿಗಳ
ಕೇಳುವೆವು ಕರೆ ಸಂಜಯನನವ
ರೋಲಗದ ವ್ಯಾಸಿರಿಯನೆಂದು ನೃ
ಪಾಲನಟ್ಟಿದ ದೂತರೊಡನೈತಂದನೋಲಗಕೆ ೧

ಬಂದು ಮೈಯಿಕ್ಕಿದನು ಕುರು ನೃಪ
ವೃಂದವನು ಗಾಂಧಾರಿಯನು ಯಮ
ನಂದನನು ಬೆಸಗೊಂಡು ಕಳುಹಿದನುಚಿತ ವಚನದಲಿ
ಎಂದು ಬಳಿಕಿನ ರಾಜ ಕಾರ್ಯವ
ನಂದು ಬಿನ್ನೈಸಿದನು ಚಿತ್ತೈ
ಸೆಂದು ಧೃತರಾಷ್ಟ್ರಂಗೆ ದುರ್ಯೋಧನಗೆ ಕೈಮುಗಿದು ೨

ಜೀಯ ಬಿನ್ನಹವೆಂದು ಪಾಂಡವ
ರಾಯನೈಶ್ವರ್ಯವನು ಸಾವಿರ
ಬಾಯ ಸರ್ಪನು ಹೊಗಳಲಳವಲ್ಲೆನ್ನ ಪಾಡೇನು
ನಾಯಕರ ಕಡುಹುಗಳನವರವ
ರಾಯತವನನಿಬರಿಗೆ ಕಮಲದ
ಳಾಯತಾಕ್ಷನ ಕರುಣದಳತೆ ವಿಚಿತ್ರತರವೆಂದ ೩

ಓಲಗದೊಳುಬ್ಬೆದ್ದು ನುಡಿಯಲಿ
ಹೂಳಿ ತಮತಮಗೆನ್ನ ಜರೆದರು
ಕಾಳಗಕೆ ಕೈಗಟ್ಟಿ ಹಿಂಡೆದ್ದೊದರಿತವನಿಪರು
ಮೇಲೆ ಸಂತೈಸಿದನು ಧರ್ಮ ನೃ
ಪಾಲನಲ್ಲಿಂ ಬಳಿಕ ಮುರಹರ
ನಾಲಯಕೆ ಪರಿಮಿತದೊಳರ್ಜುನನೆನ್ನ ಕರೆಸಿದನು ೪

ದೇವನಿದ್ದನು ಸತ್ಯಭಾಮಾ
ದೇವಿಯರ ನಸುಮಲಗಿಯರ್ಜುನ
ದೇವನಂಕದ ಮೇಲೆ ಸಿರಿಪದಪಂಕಜವ ನೀಡಿ
ನಾವು ಬರಲೆಮಗುಚಿತದಲಿ ಸಂ
ಭಾವನೆಯ ಮಾಡಿದರು ನಮಗಿ
ನ್ನಾವುದನು ನೇಮಿಸಿದಿರೆನಲಿಂತೆಂದನಸುರಾರಿ ೫

ಎಮಗೆ ಸರಿಯಿತ್ತಂಡದಲ್ಲಿಯ
ಮಮತೆ ಬೇರೊಬ್ಬರಲಿ ಪಕ್ಷ
ಭ್ರಮೆಯ ಮಾಡೆವು ಹಿತವ ಬಯಸುವೆವೆರಡು ಸಂತತಿಗೆ
ಕಮಲಮುಖಿ ಸುಲಿವಡೆದು ಲಕ್ಷ್ಮೀ
ರಮಣ ಲಕ್ಷ್ಮೀರಮಣ ಲಕ್ಷ್ಮೀ
ರಮಣಯೆಂದೊರಲಿದೊಡೆ ಸಂಜಯ ನೊಂದೆ ನಾನೆಂದ ೬

ಕಾವುದೈ ಗೋವಿಂದ ಸಲಹೈ
ದೇವಕೀಸುತ ಗಂಡರೈವರ
ಭಾವ ಬೆಟ್ಟಿತು ನೀನಲ್ಲೈ ದೇಸಿಗರ ದೈವವಲ್ಲೈ
ದೇವ ಕೆಟ್ಟೆನು ಕೆಟ್ಟೆನೈ ಕರು
ಣಾವಲಂಬನದಿಂದ ತಡೆಯೈ
ಜೀವನವನೆಂದೊರಲಿದಳು ಹಂಗಿಗನು ತಾನೆಂದ ೭

ಭಂಟನಹೆ ಬಕುತರಿಗೆ ನೆನೆವರು
ನಂಟರೆಮಗೊಲಿದಂತೆ ಹೊಗಳಿದ
ರೆಂಟು ಮಡಿ ಹಿಗ್ಗುವೆವು ಮೆಚ್ಚೆವು ತರ್ಕ ಸಾಧಕರ
ಉಂಟು ಪಾಂಡವರೈವರಲಿ ಬಲು
ನಂಟತನ ಮರೆಯೇತಕ್ಕೆವರ
ಕಂಟಕರು ನಮಗಾದ ಕಂಟಕರೆಂದು ಹರಿ ನುಡಿದ ೮

ನೆನೆವುದೆಂದನು ಪಾರ್ಥನಾ ಕಾ
ನನದೊಳಗೆ ಗಂಧರ್ವರಲಿ ಬಂ
ಧನವನೀ ಗೋಗ್ರಹಣದಲಿ ಮಾಡಿದ ಪಲಾಯನವ
ವನಜವದನೆಯ ಬಯಸಿದೊಡೆ ಬಿ
ಲ್ಲಿನಲಿ ಬಲಿವಡೆದುದನು ಕೌರವ
ಜನಪ ಮರೆದಿರಲಾಗದೆಂದರಸಂಗೆ ಹೇಳೆಂದ ೯

ಧೀರ ಭೀಮನ ಗದೆಯ ಹೊಯ್ಲಿನ
ಭಾರಣೆಯ ನಮ್ಮತುಳ ಚಾಪದ
ಸಾರ ಶಸ್ತ್ರಾವಳಿಯ ಮಳೆಗಾಲದ ಮಹಾದ್ಭುತವ
ವೀರ ನಕುಲನ ಸಾತ್ಯಕಿಯ ಬಲು
ಕೂರಸಿಯ ಸಹದೇವ ಮತ್ಸ್ಯರು
ದಾರತೆಯ ನಿಮ್ಮರಸ ನೆನೆದಿಹುದೆಂದನಾ ಪಾರ್ಥ ೧೦

ಹಿಂದೆ ಜೂಜಿನ ಸಭೆಯೊಳಗೆ ನಾ
ವೆಂದ ಮಾತುಗಳುಂಟು ತಾವದ
ಮುಂದೆ ನೋಡಲಿ ಕರ್ಣ ಶಕುನಿ ಸುಯೋಧನಾದಿಗಳು
ಇಂದು ನೆನೆವುದು ದೇಶ ಕಾಲವ
ಹಿಂದುಗಳೆಯದೆ ಬೇಗ ಮಾಡುವು
ದೆಂದು ಬಿನ್ನಹ ಮಾಡಹೇಳಿದನರ್ಜುನನು ನಿಮಗೆ ೧೧

ತೊಡೆಗಳಿಗೆ ಸುಕ್ಷೇಮವೇ ನಿ
ನ್ನೊಡೆಯನವನೊಡಹುಟ್ಟಿದನ ಮೈ
ಜಡಿದುದೇ ಪಾಲಿಸಿದಡನಿಬರಿಗಹುದು ರಕ್ತಜಲ
ಒಡನೆ ಹುಟ್ಟಿದ ನೂರುವರು ಮೈ
ಗೆಡರಲೇ ಬೆಸಗೊಂಬುದಂಜದಿ
ರೊಡೆಯರಿಗೆ ಹೊಣೆಗೊಂಡೆ ಹೇಳೆಂದಟ್ಟಿದನು ಭೀಮ ೧೨

ಸಾಕು ಸಂಜಯ ಗಳಹದಿರು ಘಡ
ನೂಕಿವನನಾರಲ್ಲಿಗಟ್ಟಿದ
ರಾ ಕುಠಾರರ ಬಯಲ ಗೃಹ ಗರ್ಜನೆಯ ಗರ ಹೊಡೆದು
ತೇಕಿ ತಲೆಕೆಳಕಾದನೀಯವಿ
ವೇಕಸಾಗರನೆಲೆ ನೃಪತಿ ಜಗ
ದೇಕ ವೀರನು ಕರ್ಣ ತಾನಿರೆ ಸಂಧಿಯೇಕೆಂದ ೧೩

ಮಂದಿಯಲಿ ಮೈಮರೆದು ಬಾಹಿರ
ನೆಂದ ಮಾತನು ರಾಜಸಭೆಯಲಿ
ತಂದು ಹರಹುವನಿವನು ಶಿಷ್ಟನೆ ಜಗದ ಭಂಡನಲ
ಇಂದುಮೌಳಿಯನೊಂದು ಬಾರಿಗೆ
ಹಿಂದು ಮುಂದನು ಮಾಡುವೆನು ತಾ
ಮಂದಿ ಕುಂತೀ ಮಕ್ಕಳಿದಿರೇ ತನಗೆ ಹೇಳೆಂದ ೧೪

ಭಂಡನೇ ಸಂಜಯನು ಲೋಕದ
ಭಂಡ ನೀನೆಲೆ ಕರ್ಣ ನಿನಗಾ
ಪಾಂಡವರ ಪರಿಯಂತವೇ ನಿನಗವರ ಸೇನೆಯಲಿ
ಗಂಡನೊಬ್ಬನು ಸಾಕು ಕೆದರುವೆ
ಗಂಡು ಗರ್ವದ ಮಾತ ನಿನ್ನನು
ದಿಂಡುದರಿವನು ಮುನಿದಡರ್ಜುನನೆಂದನಾ ಭೀಷ್ಮ ೧೫

ಖುಲ್ಲನಿವನೀ ಕರ್ಣನವರಲಿ
ಬಲ್ಲಿದನು ತಾನೆಂದು ದಿಟವಿವ
ನಲ್ಲಿ ನಂಬುಗೆ ಮಾಡದಿರು ಮರುಳೇ ಮಹೀಪತಿಯೆ
ಇಲ್ಲ ನೋಡರ್ಜುನಗೆ ಪಡಿ ನರ
ರಲ್ಲಿ ನಿರ್ಜರರಲ್ಲಿ ಪನ್ನಗ
ರಲ್ಲಿ ಕೈವಾರಿಗಳೆ ನಾವಿನ್ನೆಂದನಾ ಭೀಷ್ಮ ೧೬

ಮುರಿಯದಿರು ಗಾಂಗೇಯನೆಂದುದೆ
ಪರಮ ಮಂತ್ರವು ಪಾರ್ಥನನು ಸಂ
ಗರದೊಳಾನುವರಿಲ್ಲ ಕೇಳಮರಾಸುರಾಳಿಯಲಿ
ದುರುಳರಾಡುವ ಹೊಳ್ಳುನುಡಿಗಳು
ಗರುವರಭಿಮತವಲ್ಲ ಸಂಧಿಗೆ
ಕೊರಳುಗೊಳಿಸುವುದುಚಿತವೆಂದನು ದ್ರೋಣನರಸಂಗೆ ೧೭

ಹುರುಳುಗೆಡಿಸುವಿರಾವು ನುಡಿದೊಡೆ
ಕರಗಿ ಕುಂತೀ ಮಕ್ಕಳೆಂದೊಡೆ
ಹರಹಿ ಕೊಂಬರಿ ಡಿಂಬವೆಮ್ಮಲಿ ಜೀವವವದಿರಲಿ
ಭರತ ಸಂತತಿಯಲ್ಲಿ ಕೆಲಬರು
ಸುರರು ಕೆಲಬರು ನರರೆ ಸಾಕಂ
ತಿರಲಿ ಸಮರದೊಳೆಮ್ಮ ನೋಡೆಂದನು ಸುಯೋಧನನು ೧೮

ಬೇಡ ಮಗನೇ ಕೃಷ್ಣರಾಯನು
ರೂಢಿಸಿದ ಕಟ್ಟಾಳು ಕೆಲ ಕೆಲ
ರಾಡುವರು ಸಾಕ್ಷಾತು ಲಕ್ಷ್ಮೀಕಾಂತ ಹರಿಯೆಂದು
ಕೂಡಿಕೊಂಡಿಹನವರನಾತನು
ಕೇಡನವರಿಗೆ ಹೊದ್ದಲೀಯನು
ನಾಡನೊಪ್ಪಿಸು ಮಗನೆಯೆಂದನು ಬೆದರಿ ಧೃತರಾಷ್ಟ್ರ ೧೯

ಮರುಳುಗಳಲಾ ಬೊಪ್ಪನವರೀ
ಮುರಹರನು ಹರಿಯೆಂದು ಮುನ್ನದ
ನರಿದಿಹೆನು ನೀವಂಜದಿರಿ ನಿಮಗಾಗದವಸಾನ
ಗುರು ನದೀಸುತ ಮುಖ್ಯರಿರಲೀ
ಕುರುಕುಲಕೆ ಕೇಡಹುದೆ ಕೊಲುವೊಡೆ
ಸುರಪತಿಯ ಸುತನಳವೆಯೆಂದನು ಕೌರವರರಾಯ ೨೦

ಭಾರ ಹೆಚ್ಚಿದಡೊರಲಿ ಭೂಮಿ ಮಾ
ನಾರಿ ಬಿನ್ನಹ ಮಾಡಿದೊಡೆ ದೈ
ತ್ಯಾರಿ ಬಿಜಯಂಗೈದನವನಿಗೆ ಮನುಜ ವೇಷದಲಿ
ಭೂರಿ ದನುಜರನೊರಸಿದನು ಕೈ
ಯಾರ ಬಳಿಕರ್ಜುನನ ಕೈಯಲಿ
ಕೌರವರ ಕೊಲಿಸುವನು ನಾವಿನ್ನಂಜಲೇಕೆಂದ ೨೧

ಕಾವನಾತನೆ ಕೊಲುವನಾತನೆ
ಸಾವೆನಾತನ ಕೈಯ ಬಾಯಲಿ
ನೀವು ಪಾಂಡವರೊಡನೆ ಸುಖದಲಿ ರಾಜ್ಯವಾಳುವುದು
ಸಾವ ನಾನಂಜದೊಡೆ ಬದುಕುವ
ನೀವು ಚಿಂತಿಸಲೇಕೆ ನಿಮ್ಮನು
ಕಾವನೈ ಕರುಣದಲಿ ಗದುಗಿನ ವೀರನಾರಯಣ ೨೨

## ಆರನೆಯ ಸಂಧಿ

ಸೂ. ಸಮರದನುಸಂಧಾನದಲಿ ಸಂ
ಭ್ರಮಿಸಿ ಶೌರಿ ಸಮೀರಸುತನಲಿ
ಸಮತೆಯನು ಸೇರಿಸಿದನಂದು ಸಮಗ್ರ ಸೂಕ್ತಿಯಲಿ

ಕೇಳು ಜನಮೇಜಯ ಧರಿತ್ರೀ
ಪಾಲ ಧರ್ಮಜನಹಿತ ಮಂತ್ರಿಯ
ಬೀಳುಕೊಟ್ಟನು ಬಂದನಸುರಾರಾತಿಯಿದ್ದೆಡೆಗೆ
ಮೇಲಣನುವಿನ್ನೇನು ಲಕ್ಷ್ಮೀ
ಲೋಲ ಕರುಣಿಸು ಕೌರವ ಕ್ಷಿತಿ
ಪಾಲಕರಲೆಮಗೇನು ಘಟಿಸುವುದೆಂದು ನೃಪ ನುಡಿದ ೧

ಕ್ಷಮೆಗೆ ಸೇರುವರಲ್ಲ ಮೂರ್ಖರು
ಕುಮತಿಗಳು ಮುಂದರಿಯದವರ
ಕ್ರಮವ ನೆಗಳಿದಡಳಿವುದನ್ವಯದಮಳ ಕೀರ್ತಿಗಳು
ನಮಗೆ ಹದನೇನಿನ್ನು ಸಂಧಿಯೊ
ಸಮರವೋ ಚಿತ್ತೈಸಬೇಹುದು
ಕಮಲಲೋಚನಯೆಂದು ಬಿನ್ನೈಸಿದನು ಯಮಸೂನು ೨

ಏನು ನಿನ್ನಭಿಮತವು ವರ ಸಂ
ಧಾನವೋ ಸಂಗ್ರಾಮವೋ ನಯ
ವೇನು ಮನದೊಳವರಿಯೊಳಿರಿಸದೆ ಹೇಳು ನಿಶ್ಚಯವ
ನೀನೊಲಿದ ಹದನಾವುದದನೊಲಿ
ದಾನು ಘಟಿಸುವೆನೆಂದು ಕುಂತೀ
ಸೂನುವನು ಬೆಸಗೊಂಡನಸುರ ವಿರೋಧಿ ನಸುನಗುತ ೩

ಅಳಿವವೊಡಲಿದು ಅವನಿ ಸಾಗರ
ವಳಿಯಲುಳಿವುದು ಕೀರ್ತಿ ಸೋದರ
ರೊಳಗೊಳಗೆ ಹೊಯ್ದಾಡಿ ಕೆಟ್ಟರುಯೆಂಬ ದುರಿಯಶದ
ಹಳಿವು ಹೊರುವುದು ದೇವ ಸುಡಲಾ
ನೆಲಸನಾ ಕೌರವನ ಕೈಯಲಿ
ಕೆಲವು ನಗರಿಯ ಕೊಡಿಸಿ ನಮ್ಮನು ಸಂತವಿಡಿಯೆಂದ ೪

ವರ ಕುಶಸ್ಥಳವನು ವೃಕ ಸ್ಥಳ
ಪುರವನಾವಂತಿಯನು ಕೌರವ
ಧರಣಿಪಾಲನಲೀಸಿ ಕೊಡುವುದು ವಾರಣಾವತವ
ಶರಧಿ ಮೇರೆಯೊಳೈದನೆಯ ಪುರ
ವರವನೊಲಿದುದ ಕೊಡಲಿ ಮನ ಮ
ತ್ಸರವ ಮರೆದೋಲೈಸುವೆವು ಧೃತರಾಷ್ಟ್ರನಂಘ್ರಿಗಳ ೫

ನೀವು ಬಿಜಯಂಗೈದು ಸಂಧಿಯ
ನಾವ ಪರಿಯಲಿ ಘಟಿಸಿ ಕುರು ಭೂ
ಪಾವಳಿಯೊಳೆಮ್ಮಿರವು ಸಂಭವಿಸುವವೊಲೆಸಗುವುದು
ಲಾವಕರ ನುಡಿಗಳಲಿ ಕೆಡುವುದು
ಕೋವಿದರ ಮತವವರಮೇಲೆಮ
ಗಾವ ಮನಮುನಿಸಿಲ್ಲ ಸಂಧಿಯ ಘಟಿಸಿ ಸಾಕೆಂದ ೬

ಎನೆ ಮುರಾಂತಕನಳುಕಿ ಯಮನಂ
ದನನ ನುಡಿ ಸಂಧಾನದಲಿ ಸಂ
ಜನಿಸಿತಾದೊಡೆ ಕಾಣೆನವನಿಯ ಹೊರೆಗೆ ಹರಿವುಗಳ
ಮನದೊಳನುಸಂಧಾನವಂತಕ
ತನುಜನಲಿ ತೊಳಸಾಯ್ತು ತೋಟಿಯ
ನೆನಹು ತಾನೇನೆನುತ ಚಿಂತಿಸುತಿರ್ದನಸುರಾರಿ ೭

ಎಲೆ ಕೃತಾಂತಜ ವೈರಿ ಭೂಮಿಪ
ಕುಲ ಕೃತಾಂತ ಸರಾಗನಹೆ ನಿ
ರ್ಮಳಿನ ಧರ್ಮದಲಾ ಸುಯೋಧನನಧಿಕ ಕಲ್ಮಷನು
ನೆಲವ ಕೊಡಲರಿಯನು ವೃಥಾ ಕ
ಕ್ಕುಲಿತೆಯಲ್ಲದೆ ಕಾಣೆನಿದರಲಿ
ಫಲವೆನುತಸುರಾರಿ ನುಡಿದನು ಧರ್ಮತನುಜಂಗೆ ೮

ಅರಸನಭಿಮತವಿಂದು ಸಂಧಿಗೆ
ಮರಳಿತಲೆ ಪವಮಾನಸುತ ನಿ
ನ್ನರಿತವಾವುದು ಮನವ ವಂಚಿಸಬೇಡ ಹೇಳೆನಲು
ಧರಣಿಪತಿ ತಪ್ಪುವನೆ ಕರ್ಕಶ
ಭರದ ಕದನದಲೇನು ಫಲ ಸೋ
ದರರ ವಧೆಗೊಡಬಡುವನಲ್ಲಸುರಾರಿ ಕೇಳೆಂದ ೯

ಹಗೆಯೊಳೆಮ್ಮವರೊಳಗೆ ಎದೆಗಿ
ಚ್ಚುಗಳ ಖುಲ್ಲಕುಠಾರರಪನಂ
ಬುಗೆಯ ಬಳಸಿದರದು ಪುರಾಕೃತ ಕರ್ಮದವಶೇಷ
ಬಗೆಯೆನವಮಾನವನು ಕೌರವ
ರಗಡು ಮಾಡಿದರೆಂಬ ಚಿತ್ತದ
ದುಗುಡವಿಂದೆಮಗಿಲ್ಲ ಸಂಧಿಯ ರಚಿಸಿ ಸಾಕೆಂದ ೧೦

ಎಲೆ ಮಹಾದೇವಾಯ್ತು ಹಾಲಾ
ಹಲ ಸುಧಾರಸ ಉಕ್ಕಿದುರಿಯ
ಗ್ಗಳದ ಶೀತಳವಾಯ್ತು ಸಿಡಿಲಾಟೋಪ ಸಯವಾಯ್ತು
ಕೊಳುಗುಳಕೆ ಪವಮಾನನಂದನ
ನಳುಕಿದನು ಮಝು ಮಾಯೆ ಕುಂತೀ
ಲಲನೆ ಹೆತ್ತಳು ಸುತರನೆಂದನು ಶೌರಿ ನಸುನಗುತ ೧೧

ಈತನಭಿಮತವಿದು ಜಗದ್ವಿ
ಖ್ಯಾತ ಸಾಹಸಿ ಪಾರ್ಥ ಹೇಳೈ
ಮಾತಿನಾಳಾಪವನು ಕೇಳುವೆ ಶ್ರುತಿರಸಾಯನವ
ಭೀತಿ ಬೇಡಿನ್ನೆನಲು ಬೇರೆಮ
ಗೇತರಭಿಮತವೇನ ಬೆಸಸಿದ
ಡಾತುಕೊಂಬೆನು ಶಿರದಲೆಂದನು ಪಾರ್ಥ ವಿನಯದಲಿ ೧೨

ನಕುಲ ನೀ ಹೇಳನುಮತವ ನಿ
ನ್ನಕುತಿ ಸಮರವೊ ಸಾಮವೋ ಮೇಣ್
ಸುಕರ ಮಂತ್ರವನರುಹು ನೀನಿನ್ನಂಜಬೇಡೆನಲು
ಯುಕುತಿ ನಮಗಿನ್ನೇನುಭಯ ರಾ
ಜಕವ ಸಂತೈಸುವುದು ಬೇರೆ
ಮ್ಮಕುತಿಯೆಲ್ಲಿಯದೆಂದನಾ ಮಾದ್ರೇಯನೊಲವಿನಲಿ ೧೩

ಆವುದಭಿಮತವೇನು ಹದ ಸಹ
ದೇವ ನೀ ಹೇಳೆನಲು ಬಿನ್ನಹ
ದೇವ ಸೇರದು ಸಂಧಿ ಸಂಗರವೆಮಗೆ ಸೇರುವುದು
ಆವ ವಿಧದಲಿ ಸಮರವನೆ ಸಂ
ಭಾವಿಸುವುದೆನೆ ನಗುತ ವರ ರಾ
ಜೀವನಾಭನು ಕಳುಹಿದನು ದ್ರೌಪದಿಯೆಡೆಗೆ ಚರರ ೧೪

ದೇವಿ ಚಿತ್ತೈಸುವುದು ವರ ವಸು
ದೇವಸುತನಟ್ಟಿದನು ಸಂ
ಭಾವಿಸುವುದರಿರಾಯರಲಿ ಸಂಧಾನ ಸೌರಂಭ
ನೀವು ಬಿಜಯಂಗೈದು ಚಿತ್ತದೊ
ಳಾವ ಹದನಾ ಹದನನಾ ರಾ
ಜೀವನಾಭಾದಿಗಳಿಗರುಹುವುದೆಂದರಾ ಚರರು ೧೫

ಏನು ಹದನೇನೆಲವೊ ವರ ಸಂ
ಧಾನವೇ ಕೌರವರೊಳದು ಸು
ಮ್ಮಾನವೇ ಪತಿಗಳಿಗೆ ಪಾಪಿಗಳಿರಿದರೋ ಸತಿಯ
ದಾನವಾಂತಕನೆಸಗುವನೆ ತ
ಪ್ಪೇನು ತಪ್ಪೇನೆನುತ ನಸು ಮುಸು
ಕ್ಯಾನನಾಂಬುಜವದನೆ ಬಂದಳು ಕೃಷ್ಣನೋಲಗಕೆ ೧೬

ಭ್ರೂಲತೆಯ ಸುರಚಾಪದುರು ಕೇ
ಶಾಳಿಗಳ ಕಾರ್ಮುಗಿಲಪಾಂಗದ
ಸಾಲ ಕುಡಿಮಿಂಚುಗಳ ನೂಪುರ ರವದ ಮೊಳಗುಗಳ
ಆ ಲತಾಂಗಿಯ ಗಮನವೇ ಮಳೆ
ಗಾಲದಂತಿರೆ ಧಾರ್ತರಾಷ್ಟ್ರ ಕು
ಲಾಳಿ ನಿಲುವುದೆ ಪವನಜನ ಸಂಪ್ರತಿಯ ಸೇರುವೆಗೆ　೧೭

ಕವಿದ ಚಿತ್ರಾವಳಿಯ ದಡ್ಡಿಯ
ವಿವಿಧ ಭಟರುಗ್ಗಡಣೆಯಲಿ ವರ
ಯುವತಿ ಬಂದಳು ಸಖಿಯರೊಯ್ಯಾರದಲಿ ನೃಪಸಭೆಗೆ
ನವ ಬಳಾಹಕದೊಳಗೆ ಮಿಂಚಿನ
ಗವಿಸಹಿತ ಮರಿ ಮೇಘವಾವಿ
ರ್ಭವಿಸಿತೆನೆ ದಂಡಿಗೆಯನಿಳಿದಳು ಹೊಕ್ಕಳೋಲಗವ　೧೮

ಎಲೆ ಸಮೀರಕುಮಾರ ಸಂಪ್ರತಿ
ಗೆಳಸಿದ್ಯೆ ಕಲಿತನವ ನೀರೊಳು
ಕಲಕಿದ್ಯೆ ಕೈವಾರವಾದುದೆ ಕೌರವೇಂದ್ರನಲಿ
ಕಲಿಸಿದ್ಯೆ ಕೃಷ್ಣಂಗೆ ನೀತಿಯ
ಬಳಸಿದ್ಯೆ ಬಹುಮತವ ನರಕದೊ
ಳಿಳಿಸಿದ್ಯೆ ಶಶಿಕುಲವನೆಂದನಿಲಜನ ನೋಡಿದಳು　೧೯

ಬೇಡಲಟ್ಟುವನೇ ಮಹೀಪತಿ
ನಾಡೊಳೈದೂರುಗಳನವರಲಿ
ಮಾಡುವಾತನು ಕೃಷ್ಣನೇ ಸಂಧಾನವನು ನಿಮಗೆ
ಕೇಡಿಗನು ಕೌರವ ನೃಪಾಲನ
ಕೂಡಿ ಬದುಕುವ ಭೀಮಸೇನನೆ
ರೂಢಿಸಿತಲಾ ನಿಮ್ಮ ಸಿರಿ ಸೋದರರ ಸೇರುವೆಗೆ　೨೦

ಯತಿಗಳಾದಿರಿ ನೀವು ರೋಷ
ಚ್ಯುತರಲೇ ಬಳಿಕೇನು ಧರ್ಮ
ಜ್ಞತೆಯ ನೆಲೆಗಳನರಿದ ಮನವೆರಗುವುದೆ ಕಾಳಗಕೆ
ಕ್ಷಿತಿಯ ಪಾಲಿಸುವುದು ವಿರೋಧಿ
ವ್ಯತಿಕರವ ಬಿಡಿಸುವುದು ಕುಂತೀ
ಸುತರು ಕೌರವರೊಡನೆ ಸುಖದಲಿ ರಾಜ್ಯವಾಳುವುದು　೨೧

ಸೋಲ ಗೆಲವೇ ಕೌರವರ ಸಮ
ಪಾಳಿಯೊಳು ಸೋದರರು ನೀವ್ ಪಾಂ
ಚಾಲರಾವೇ ಹೊರಗು ನಿಮ್ಮೊಳು ಸಲುಗೆಯೇಕೆಮಗೆ
ಮೇಳವೇ ಸಿರಿ ಗಳಿಸಲರಿದು ಜ
ನಾಳಿ ಹೆಂಡಿರಪೂರ್ವವೇ ಕ್ಷಿತಿ
ಪಾಲಕರು ನೀವಾಗಲೆಮಗದು ಪರಮ ಪರಿಣಾಮ　೨೨

ಭೀಮ ಬಲವದರಾತಿ ಸೇನಾ
ಭೀಮ ಕುರುಕುಲ ಕುಸುಮಮಾರ್ಗಣ
ಭೀಮ ಮರೆದ್ಯೆ ಮಾನಿನಿಯ ಮಾನಾಪಹಾನಿಗಳ
ರಾಮನಬಲೆಗೆ ಕುದಿದ ಘನ ಸಂ
ಗ್ರಾಮವನು ನೀ ಕೇಳಿದರಿಯಾ
ಪ್ರೇಮದಲಿ ನೋಡೆನ್ನನೆಂದಳು ದ್ರೌಪದೀದೇವಿ　೨೩

ಧರೆಗೆ ಕಟ್ಟಭಿಮಾನ ಹೆಂಡಿರ
ಹರಿಬವಾ ಹರಿಬದಲಿ ಕೆಡುಹುವು
ದರಿಯನವಗಡಿಸಿದೊಡೆ ಸಾವರು ಪಂಥವುಳ್ಳವರು
ಸುರ ನರೋರಗರೊಳಗೆ ನಿಮ್ಮೈ
ವರಿಗೆ ಸರಿಯಿಲ್ಲಬಲೆಯೊಬ್ಬಳ
ಹರಿಬದಲಿ ಹಂಗಾದಿರೆಂಬಪದೆಸೆಗೆ ನೋಸುವರೆ　೨೪

ಮುಂದಲೆಯ ಹಿಡಿದೆಳೆದು ಸಭೆಯಲಿ
ತಂದು ಸೀರೆಯ ಸುಲಿದಡವದಿರ
ಮುಂದೆ ಮೌನದೊಳಿದ್ದರಲ್ಲದೆ ಪತಿಗಳುಸುರಿದರೆ
ಅಂದು ನೀ ಹಿಂದಿಕ್ಕಿ ಕೊಂಡುದ
ನಿಂದು ಮರೆದ್ಯೆ ಸಂಧಿಗೋಸುಗ
ಮುಂದುವರಿದ್ಯೆ ಕೃಷ್ಣಯೆಂದಳು ದ್ರೌಪದೀದೇವಿ　೨೫

ತನಯರೈವರು ವೀರ ಸಹದೇ
ವನು ಘಟೋತ್ಕಚನೀ ಸುಭದ್ರಾ
ತನಯನೆಮ್ಮಯ ತಂದೆ ಮೂರಕ್ಷೋಹಿಣಿಯ ಸೇನೆ
ಇನಿಬರೇ ಕಾದುವರು ದುಶ್ಶಾ
ಸನನ ರಕುತವ ಕುಡಿದು ಕುರುಕುಲ
ವನವ ಸುಡುವರು ನಿಮ್ಮ ಹಂಗೇಕೆಂದಳಿಂದುಮುಖಿ　೨೬

ವರಸತಿಯ ಬಿಸುಸುಯ್ಲ ಗಾಳಿಯೊ
ಳುರಿ ಚಡಾಳಿಸೆ ರೋಷಮಯದು
ಬ್ಬರದೊಳೌಡೊತ್ತಿದನು ಹಿಡಿದನು ಖತಿಯನಹಿತರೊಳು
ತರುಣಿ ಸೈರಿಸು ಸೈರಿಸಿನ್ನೀ
ಸುರಿವ ಕಂಬನಿಗಳಿಗೆ ಶತ ಸಾ
ವಿರ ಮಡಿಯ ಕಂಬನಿಯ ಸುರಿಸುವೆ ಹಗೆಯ ಹೆಂಡಿರಲಿ　೨೭

ಉರಿ ಹೊಗುವ ಮೀಸೆಗಳ ಬೆರಳಲಿ
ಮುರುಹಿ ವಾಮದ ಕರದಿ ತರುಣಿಯ
ಕುರುಳ ಸಂತೈಸಿದನು ಕಿಡಿಕಿಡಿಯೋಗಿ ಖಾತಿಯಲಿ
ನರಕಮರ್ದನ ಕೇಳು ಕೌರವ
ನರಿಗಳಿದಿರೇ ಕೀಳುವೆನು ಕುಲ
ಗಿರಿಗಳನು ತೊಡೆವೆನು ಕೃತಾಂತನ ಭಾಳದಕ್ಕರವ　೨೮

ಯಮಸುತನ ಹರುವೆಂತುಟೆಂದಾ
ಕ್ರಮಕೆ ಮೊಗದಿರುಹಿದೆನು ಬಳಿಕೀ
ಕಮಲವದನೆಯ ಹರಿಬವೆನ್ನದು ಪತಿಗಳಿನಿಬರಲಿ
ಎಮಗೆ ಸಂಪ್ರತಿಗಿಲ್ಲ ಮನ ಘನ
ಸಮರವೇ ಸರ್ವಾರ್ಥ ಕೋಪ
ಶ್ರಮಕೆ ರಿಪುರುಧಿರಾಂಬು ಪಾನವೆ ವಿಪುಳ ಫಲವೆಂದ　೨೯

ಕೆಡಹಿ ರಿಪುವನು ಕರುಳ ದಂಡೆಯ
ಮುಡಿಸುವೆನು ಮಾನಿನಿಗೆ ರಕುತವ
ಕುಡಿಯಲೆರೆವೆನು ಶಾಕಿನಿಯರಿಗೆ ತತ್ಸಹೋದರರ
ನಡೆದು ಸಂಧಿಯ ಮಾಡಿ ಮುರರಿಪು
ಕೊಡಿಸು ಸಾಕೈದೂರನಿವರಿಗೆ
ತಡೆಯದಾನೆರಡೂರ ಕೊಂಬೆನು ಕೌರವೇಂದ್ರನಲಿ　೩೦

## ಏಳನೆಯ ಸಂಧಿ

ಸೂ. ದುರಿತವಿಪಿನಕೃಶಾನು ಯದುಕುಲ
ವರಕುಶೇಶಯ ಭಾನು ನಿಜಪದ
ಶರಣಜನ ಸುರಧೇನು ಹೊಕ್ಕನು ಹಸ್ತಿನಾಪುರವ

ದೇವ ಸಂಧಿಯನೊಲಿದು ಮಾಡುವು
ದಾವು ಮುಖದಿರುಹಿದೆವುಯಿಾ ಸಹ
ದೇವನೀ ಸಾತ್ಯಕಿ ಯುಧಾಮನ್ಯುತ್ತಮೌಜಸರ
ಭಾವವೆಮ್ಮದು ಬಳಿಕಲರ್ಜುನ
ದೇವ ಧರ್ಮಜ ನಕುಲರೆಂಬುವ
ನಾವು ಮಿಸುಕುವರಲ್ಲ ಚಿತ್ತೈಸೆಂದನಾ ಭೀಮ ೧

ಕೆಲರು ಸಂಪ್ರತಿಗೊಲಿವರಿತ್ತಲು
ಕೆಲರು ವಿಗ್ರಹಕೆಳಸುವವರಿದ
ರೊಳಗೆ ನಿಶ್ಚಯವಿಲ್ಲದಿರೆ ನೃಪ ಕಾರ್ಯವೆಂತಹುದು
ತಿಳಿಯ ಹೇಳವನೀಶ ಪರಮಂ
ಡಲಕೆ ಪಯಣವ ಮಾಡುವೆವು ನಾ
ವಳುಕಿದವರಲ್ಲೆನಲು ಕೃಷ್ಣಂಗರಸನಿಂತೆಂದ ೨

ವಿದಿತವೈದೂರುಗಳ ಕೊಟ್ಟೊಡೆ
ಹದುಳವಿಡುವುದು ಮುನಿದರಾದೊಡೆ
ಕದನವನೆ ಕೈಕೊಳುವುದುಚಿತಾನುಚಿತದನುವರಿದು
ಹದನ ನೀನೇ ಬಲ್ಲೆ ಸಾಕಿ
ನ್ನಿದು ನಿಧಾನವು ಬಗೆಯಲೆಮ್ಮ
ಭ್ಯುದಯ ನಿಮ್ಮಾಧೀನವೆಂದನು ಧರ್ಮನಂದನನು ೩

ಪಯಣವನು ನಿಶ್ಚೈಸಿ ದನುಜಾ
ರಿಯನು ಬೀಳ್ಕೊಂಡವನಿಪತಿ ಪಾ
ಳಯದೊಳಗೆ ಸಾರಿಸಿದನಗ್ಗದ ಮಂಡಲೀಕರಿಗೆ
ನಯದೊಳಾ ಮರುದಿವಸ ಮಂಗಳ
ಮಯ ಮುಹೂರ್ತದ ಜೋಯಿಸರ ಜೋ
ಕೆಯ ನಿರ್ಗಮ ನಿರತನಾದನು ಕೃಷ್ಣನೊಲವಿನಲಿ ೪

ಮೊರೆಯೆ ದುಂದುಭಿ ಶಂಖ ಕಹಳಾ
ವರ ಮೃದಂಗಾದಿಗಳು ಭೂಸುರ
ಸುರಭಿಗಳ ಬಲವಂದು ದಧಿ ದೂರ್ವಾಕ್ಷತಾವಳಿಯ
ಧರಿಸಿ ಧರಣೀ ದೇವರನು ಸ
ತ್ಕರಿಸಿ ಕರತಳದಿಂದ ನಾಸಿಕ
ದೆರಲ ಚಂದ್ರೋದಯವನೀಕ್ಷಿಸಿ ದೇವ ಹೊರವಂಟ ೫

ಘನ ಬಳಾಹಕ ಸೈನ್ಯ ಸುಗ್ರೀ
ವನನು ನಿರ್ಮಳ ಮೇಘಪುಷ್ಪನ
ನನುವಿನಲಿ ಹೂಡಿದನು ದಾರುಕ ಹೇಮಮಯ ರಥವ
ಧನುವ ಶಸ್ತ್ರಾಸ್ತ್ರವ ಸುದರ್ಶನ
ಕನಕ ಕವಚ ಕೃಪಾಣವನು ಸ್ಯಂ
ದನದೊಳಿಳುಹಿದನಸುರರಿಪು ಸಾತ್ಯಕಿಗೆ ನೇಮಿಸಿದ ೬

ಇವರಿಗವದಿರು ನೆಟ್ಟನೇ ಮುನಿ
ವವರು ನಾವಿವರವರು ಮತ್ತಂ
ತಿವರಿಗವನಿಯನೀಸಿ ಕೊಡುವುದು ನಮ್ಮ ಭರವಸಿಕೆ
ಅವಗಡಿಸಿದೊಡೆ ಕಾದುವುದು ಕೌ
ರವರು ಖುಲ್ಲರು ರಥದೊಳಗೆ ಕೈ
ದುವನು ತುಂಬೆಂದಸುರರಿಪು ಸಾತ್ಯಕಿಗೆ ನೇಮಿಸಿದ ೭

ಕಲಿತ ಸನ್ನಾಹದಲಿ ಸಾರಥಿ
ಸುಳಿಸಿದನು ಹೊಂದೇರನಪ್ರಕೆ
ತಳಿತವಮಳಚ್ಛತ್ರ ಚಾಮರ ಸಿತಪತಾಕೆಗಳು
ಅಳುಕೆ ನೆಲನಕ್ಷೋಣಿ ಬಲವಿ
ಟ್ಟಳಿಸಿ ನಡೆದುದು ರಥಕೆ ದಾನವ
ಕುಲದಿಶಾಪಟ ಕೃಷ್ಣ ಬಿಜಯಂಗೈದನೊಲವಿನಲಿ ೮

ಕಳುಹುತೈತಂದಖಿಳ ಪಾಂಡವ
ಬಲಕೆ ನೇಮವ ಕೊಟ್ಟು ಧರ್ಮಜ
ಫಲುಗುಣರ ನಿಲಿಸಿದನು ಸಹದೇವನನು ನಕುಲನನು
ಕಳುಹಿಸಿದನು ನೀ ಮರಳೆನಲು ಬೆಂ
ಬಳಿಯಲನಿಲಜನೈದಿ ಹಗೆಯಲಿ
ಕಲಹವನು ಮಸೆಯೆಂದು ನಂಗಬುಗೆಗೊಂಡು ಮರಳಿದನು ೯

ದೇವಿಯರು ನೀವ್ ಮರಳಿಯೆನೆ ರಾ
ಜೀವನಾಭನ ಹೊರೆಗೆ ದ್ರೌಪದಿ
ದೇವಿ ಬಂದಳು ನೊಸಲ ಚಾಚಿದಳಂಘ್ರಿ ಕಮಲದಲಿ
ಸ್ಥಾವರಕೆ ಜಂಗಮಕೆ ನೀನೇ
ಜೀವಚೇಷ್ಟಕನವದಿರಂತ
ರ್ಭಾವವನು ನೆರೆ ಬಲಿಯಲಾಗದು ಸಂಧಿ ಕಾರ್ಯದಲಿ ೧೦

ಖಳರು ತಮ್ಮನ್ನತಿಯ ಕೀಲನು
ಕಳಚಿ ಕಳೆದರು ಮರಳಿ ಮಾಡುವ
ಡಳುಕಿದರು ತನ್ನವರು ಪತಿಗಳೆ ಪರಮವೈರಿಗಳು
ಹಳಿವ ನೀನೇ ಬಲ್ಲೆಯಿನ್ನೆ
ನ್ನುಳಿವ ನೀನೇ ಬಲ್ಲೆ ಹಿರಿದಾ
ಗಳಲಿದೆನು ಸಲಹೆಂದು ಕಂಬನಿದುಂಬಿದಳು ತರಳೆ ೧೧

ಏಳು ತಾಯೆ ಸರೋಜಮುಖಿ ವಿಪಿ
ನಾಲಯದೊಳತಿ ನವೆದೆ ನಿನ್ನವ
ರಾಳಿಗೊಂಡಂದವನು ಬಲ್ಲೆನು ನಿನ್ನ ಪರಿಬವದಲಿ
ಕಾಳಗವನೇ ಬಲಿದು ತಹೆನಿವ
ರೇಳಿಲವ ಮಾಡಿದೊಡೆ ರಿಪುಗಳ
ಸೀಳಿ ಕರುಳನು ಮುಡಿಸದಿಹೆನೇ ನಿನ್ನ ಕಬರಿಯಲಿ ೧೨

ದೇವಕಿಯ ಮೇಲಾಣೆ ವರ ವಸು
ದೇವನಂಘ್ರಿಗಳಾಣೆ ಮನುಮಥ
ದೇವನಾಣೆ ನಿಧಾನವನು ಕೇಳಬಲೆ ನಿನ್ನಾಣೆ
ನಾವು ಸಂಧಿಯ ನೆವದಲವದಿರ
ಭಾವವನು ಕಲಿಮಾಡಿ ಕೋಪವ
ತೀವಿ ಸಂಧಿಯ ಮುರಿದು ಬಹೆವಿದ ನಂಬು ನೀನೆಂದ ೧೩

ಮರಳಿದಳು ತರಳಾಕ್ಷಿ ಮುರರಿಪು
ಬರುತಲಾ ಬಟ್ಟೆಯಲಿ ಕಂಡನು
ವರ ಭರದ್ವಾಜಾಖ್ಯ ಗೌತಮ ಕಣ್ವಮುನಿವರರ
ಉರಗಮಾಲಿ ಮತಂಗ ಗಾರ್ಗ್ಯಾಂ
ಗಿರಸ ನಾರದ ಶುಕ ಪರಾಶರ
ಪರಶುರಾಮ ಶ್ವೇತಕೇತು ಪ್ರಮುಖ ಮುನಿವರರ ೧೪

ಮುನಿವರರನುಪಚರಿಸಿದನು ಹ
ಸ್ತಿನಪುರಿಗೆ ಸಂಗಾತ ಬಹೆವೆಂ
ದೆನಲು ಬರಹೇಳಿದನು ಸಕಲ ಮಹಾ ತಪೋಧನರ
ಘನ ಕುಶಸ್ಥಳಪುರದಲೆಡೆಗೈ
ದನು ಸುಯೋಧನನಲ್ಲಿಗಟ್ಟಿದ
ವಿನುತ ದೂತರು ಬಿನ್ನವಿಸಿದರು ಮುರಹರನ ಬರವ ೧೫

ಕೇಳಿದನು ಧೃತರಾಷ್ಟ್ರನಾಗ ಕೃ
ಪಾಳುವಿನ ಗಮನವನು ಚಿತ್ತವ
ಹೂಳಿ ಹೆಚ್ಚಿದ ಹರುಷದಲಿ ಉಬ್ಬೆದ್ದನಡಿಗಡಿಗೆ
ಹೇಳಿದನು ವಿದುರಂಗೆ ಭಂಡಾ
ರಾಲಯದೊಳುಳ್ಳಮಳ ಮೌಕ್ತಿಕ
ಜಾಳಿಗೆಯ ಪೆಟ್ಟಿಗೆಯೊಳಾಯಿಸು ವರ ಸುರತ್ನಗಳ ೧೬

ಎಲೆ ವಿದುರ ಕೇಳ್ಳೆ ಸುಯೋಧನ
ನುಳಿಯೆ ಸಕಲ ಮಹಾ ಪ್ರಧಾನರು
ನಳಿನನಾಭನನಿದಿರುಗೊಳಲಿ ಕೃತಾರ್ಥರಾದವರು
ಹೊಳಲು ಗುಡಿ ತೋರಣದಲೆಸೆಯಲಿ
ಕಳಸ ಕನ್ನಡಿ ಸಹಿತ ನಡೆಯಲಿ
ನಳಿನವದನೆಯರೆಂದು ನೇಮಿಸಿದನು ಮಹೀಪಾಲ ೧೭

ತೆಗೆ ಸುವಸ್ತುವನೀಯದಿರು ಹರಿ
ಹಗೆ ಕಣಾ ಕುಂತೀಕುಮಾರರು
ಹಗೆಗಳೇ ಮನ್ನಿಸಿದರೆಂದುಳುಹುವನೆ ಮುರವೈರಿ
ನಗರಿಗಾತನು ಬರಲಿ ಯಾದವ
ನಗಡುತನಕೌಷಧಿಯ ಬಲ್ಲೆನು
ಬಿಗಿದು ಕೆಡಹುವೆನೆಂದು ನುಡಿದನು ಕೌರವರ ರಾಯ ೧೮

ಖಾತಿಗೊಂಡನು ಭೀಷ್ಮನೆಲೆ ಕಡು
ಪಾತಕನೆ ನೀ ಕೃಷ್ಣನನು ಬಿಗಿ
ವಾತನೇ ಬಳಿಕೇನು ಬಲ್ಲೆನು ನಿನ್ನ ಸಾಹಸವ
ಈತ ನುಡಿದೀ ಮಾತ ಕೇಳಲು
ಪಾತಕವು ಬಹುದೆಂದು ಗಂಗಾ
ಜಾತನೋಲಗದಿಂದ ಸರಿದನು ತನ್ನ ಮಂದಿರಕೆ ೧೯

ಪುರವ ರಚಿಸಿದರುದಯದಲಿ ಬಿ
ತ್ತರ ಮಿಗಲು ಗಾಂಗೇಯ ಗೌತಮ
ಗುರು ವಿದುರ ಶಲ್ಯಾದಿ ಸುಜನರು ಬಂದರಿದಿರಾಗಿ
ತರುಣಿಯರು ಕೆಂದಳಿರ ಕಲಶವ
ಕರತಳದ ಗರುವಾಯಿಯಲಿ ಪಂ
ಕರುಹನಾಭನನಿದಿರುಗೊಂಡರು ವಿವಿಧ ವಿಭವದಲಿ ೨೦

ಹೊಳಹು ಮಿಗೆ ದೂರದಲಿ ಗರುಡನ
ಹಳವಿಗೆಯ ಕಂಡಖಿಳ ಜನವಂ
ಜುಳಿಯನಿಟ್ಟುದು ಭಾಳದಲಿ ಪರಿಶುದ್ಧಭಾವದಲಿ
ನಳಿನನಾಭನ ದಿವ್ಯಮೂರ್ತಿಯ
ಲಲಿತ ಕಾಂತಿಯ ಕಡಲೊಳಗೆ ನೆರೆ
ಮುಳುಗಿದುದು ಪುರಜನದ ಕಣುಮನವೊಂದು ನಿಮಿಷದಲಿ ೨೧

ಮಂದಿ ಮೈಯಿಕ್ಕಿತು ಮುರಾಂತಕ
ನಿಂದು ಮನದೊಲವಿನಲಿ ಗಂಗಾ
ನಂದನ ದ್ರೋಣಾದಿಗಳನೆತ್ತಿದನು ಕರುಣದಲಿ
ಮಂದಿರದ ಸುಕ್ಷೇಮ ಕುಶಲವ
ನಂದು ಕೇಳಿದು ವೀಳಯವನಾ
ಮಂದಿಗಿತ್ತನು ದೇವ ಬಂದನು ಹಸ್ತಿನಾಪುರಿಗೆ ೨೨

ಗಿಳಿಯ ತುಂಬಿಯ ಹಂಸೆಗಳ ಕೋ
ಗಿಲೆಯ ಕೊಳರ್ವಕ್ಕಿಗಳ ಕೊಂಚೆಯ
ಕೊಳಲುವಕ್ಕಿಯ ಜಕ್ಕವಕ್ಕಿಯ ನವಿಲು ಪಾರಿವದ
ಕಲರುಚಿಯ ಕರ್ಣಾಮೃತದ ತನಿ
ವಳೆಯ ಕರೆದುದು ಯಾದವೇಂದ್ರನ
ಬಲದ ಕಿವಿಗಳಲಿಭಪುರಿಯ ಹೊರವಳಯದುದ್ಯಾನ ೨೩

ನಸು ಬಿರಿದ ಪರಿಪಕ್ವ ದಾಡಿಮ
ವಸರದೊಳಗರವಟ್ಟಿಗೆಯ ದರ
ಹಸಿತ ಪಂಕಜಗಳಿತ ಮಕರಂದದ ತಟಾಕದಲಿ
ರಸಭರಿತ ಖರ್ಜೂರ ಫಲ ಸಂ
ಪ್ರಸರ ಛತ್ರವನೆಸಗಿಯುಪವನ
ವೆಸೆದುದೈ ಧಾರ್ಮಿಕನವೊಲು ಯದುರಾಯನಿದಿರಿನಲಿ ೨೪

ಎಳಲತೆಯನೆರಗಿಸುತ ಮಲೆತರೆ
ತಳಿರುಗಳನಲ್ಲಾಡಿ ವರ ಪರಿ
ಮಳದ ಕಪ್ಪವ ಕೊಂಡು ಮುರಿದುಂಬಿಗಳ ಗೀತವನು
ಸಲೆ ಸೊಗಸಿ ಮಕರಂದ ನದಿಯಲಿ
ತಳಿತು ಬೀಡನು ಬಿಡುಂತ ಜನದಲಿ
ಸುಳಿದುದೈ ತಂಗಾಳಿ ಭೂಮಿಪಾಲನಂಗದಲಿ ೨೫

ಮಘಮಘಿಪ ಹೊಂಬಾಳೆಗಳ ರಸ
ವೊಗುವ ಮಧುರದ್ರಾಕ್ಷೆಗಳ ನಿಡು
ಮುಗಿಲ ತುಡುಕುವ ತೆಂಗುಗಳ ನೆರೆ ಕಾತ ಪನಸುಗಳ
ಬಿಗಿದ ಪಣ್ಗೊನೆವಾಳೆಗಳ ಸೊಂ
ಪೊಗುವ ಕರ್ಪೂರ ದ್ರುಮೌಘದ
ಸೊಗಸು ಸೆಳೆದುದು ಮನವನಾ ಗಜನಗರದುಪವನದ ೨೬

ಲಲಿತ ಶುಕಚಯ ಚಂಚು ಪುಟದಿಂ
ದಳಿತ ಜಂಬೂ ಪಕ್ವಫಲ ರಸ
ಲುಳಿತ ನವಮಕರಂದ ಮಧುರೋರ್ಝರ ನಿಪಾತದಲಿ
ತಳಿತ ಕಿನ್ನರ ಮಿಥುನ ಸುಖ ಪರಿ
ಮಿಳಿತ ಗೀತಶ್ರವಣ ಸನ್ನುತ
ಪುಳಿನಸುಪ್ತ ಮರಾಳವೆಸೆದುದು ಗಜಪುರೋದ್ಯಾನ ೨೭

ಅರರೆ ಪಾತಾಳದ ವಿಳಾಸಿನಿ
ಯರಿಗೆ ಚೌಕಿಗೆಯೋ ಸುದುರ್ಗದ
ಹಿರಿಯಗಳೊ ಬಲುಗೋಟೆಯೋ ನಿಚ್ಚಣಿಕೆಯೋ ದಿವದ
ಮುರಿಮುರಿದ ಹುಲಿಮುಖದ ಹೇಮದ
ತರದ ತೆನೆಗಳ ವಜ್ರಮಯ ಬಂ
ಧುರ ಕವಾಟಸ್ಫುಟದಲೆಸೆದುದು ಹಸ್ತಿನಾನಗರ ೨೮

ಹೊಗಳುತ್ತೈತಂದಸುರರಿಪು ಗಜ
ನಗರವನು ಹೊಕ್ಕನು ಸುಯೋಧನ
ನಗಣಿತೈಶ್ವರ್ಯವ ಮಹಾದೇವನುತ ನಲವಿನಲಿ
ಬಿಗಿದ ಬೀದಿಯ ನಯದ ನೆಲೆಗ
ಟ್ಟುಗಳ ಮಣಿಮಯ ಹೇಮದುಪ್ಪರಿ
ಗೆಗಳ ಕೇರಿಗಳೊಳಗೆ ಬರುತಿರ್ದನು ಮುರಧ್ವಂಸಿ ೨೯

ಮಂದದಲಿ ಸುಳಿವಾನೆ ಕುದುರೆಯ
ಸಂದಣಿಯ ಕೆಲಿಸಿದ ಭೂಮಿಪ
ರಂದಣದ ಸಾಲುಗಳ ತೆಕ್ಕೆಯ ಹಳಿಯದಾಳುಗಳ
ಮಂದಿಯಲಿ ಹೊಗಲನಿಲಗುಬ್ಬಸ
ವೆಂದರುಳಿದವರಳವೆಯೆನಲರ
ವಿಂದನಾಭನು ಬಂದನಾ ಧೃತರಾಷ್ಟ್ರನರಮನೆಗೆ ೩೦

ಇದಿರುಗೊಂಡನು ಕಾಣಿಕೆಯನಿ
ಕ್ಕಿದನು ಕುಶಲ ಕ್ಷೇಮವನು ಕೇ
ಳಿದನು ಬಕುತಿಯಲೆರಗಿದನು ಚರಣದಲಿ ಧೃತರಾಷ್ಟ್ರ
ಸದನವನು ಹೊಕ್ಕಂತೆ ನಿಮಿಷಾ
ರ್ಧದಲಿ ಕುಳ್ಳಿರ್ದನಿಬರನು ಕಳು
ಹಿದನು ಕಾರುಣ್ಯದಲಿ ಗದುಗಿನ ವೀರ ನಾರಯಣ ೩೧

## ಎಂಟನೆಯ ಸಂಧಿ

ಸೂ. ಶರಣದೇಹಿಕ ದೇವನೆಂಬೀ
ಬಿರುದ ಮೆರೆಯಲು ರಾಯಭಾರವ
ಧರಿಸಿ ಕೌರವನರಮನೆಗೆ ನಡೆತಂದನಸುರಾರಿ

ಕೇಳು ಜನಮೇಜಯ ಧರಿತ್ರೀ
ಪಾಲ ಮುರಹರ ಗುರು ನದೀಜರ
ಬೀಳುಕೊಟ್ಟನು ಕೃಪನ ಮನ್ನಿಸಿ ಮನೆಗೆ ಕಳುಹಿದನು
ಆಲಯಂಕೆ ವಿದುರಂಗೆ ಕೊಟ್ಟನು
ವೀಳಯವನೊಡನೆಯ್ದಿ ಬಂದ ನೃ
ಪಾಲಕರ ಮೊಗಸನ್ನೆಯಲಿ ಕಳುಹಿದನು ಮನೆಗಳಿಗೆ ೧

ಶೌರಿ ಕಾಣಿಸಿಕೊಂಡನಾ ಗಾಂ
ಧಾರಿಯನು ಸುಕ್ಷೇಮ ಕುಶಲವ
ನಾರಯಿದು ಕಾಣಿಕೆಯ ಕೊಂಡನು ಕೊಟ್ಟನುಡುಗೊರೆಯ
ಕೌರವನು ತನ್ನರಮನೆಗೆ ಹರಿ
ಬಾರದಿರನೆಂದಖಿಳ ವಿಧದಲಿ
ಸಾರ ವಸ್ತುವ ತರಿಸಿಯಾರೋಗಣೆಗೆ ಮಾಡಿಸಿದ ೨

ನಡುವೆ ಮಣಿಮಂಚದಲಿ ಮೇಲ್ವಾ
ಸಡಕಿಲನು ಹಚ್ಚಡಿಸಿದರು ಮೇ
ಲಡರಿದವು ಮಣಿಖಚಿತ ಚಿತ್ರದ ಮೇಲುಕಟ್ಟುಗಳು
ಉಡುಗೊರೆಯ ತರಿಸಿದನು ರಾಯನ
ಮಡದಿಯರು ಹೊಂಗಳಸ ಜಲವನು
ಪಡಿಗವನು ಹಿಡಿದಸುರರಿಪುವಿನ ಬರವ ಹಾರಿದರು ೩

ತವತವಗೆ ಗಾಂಗೇಯ ಗುರು ಕೃಪ
ರವಿಸುತಾದಿಗಳಸುರರಿಪು ನಿಜ
ಭವನಕೈತಹನೆಂದು ಸವೆದರು ಸಾರವಸ್ತುಗಳ
ಅವನಿಪನ ಬೀಳ್ಕೊಟ್ಟು ಕೌರವ
ಭವನವನು ಹೊರವಂಟು ವರ ಭಾ
ಗವತಮಸ್ತಕರತ್ನ ವಿದುರನ ಮನೆಗೆ ನಡೆತಂದ ೪

ತೊಲಗಿದವು ಜನಮನದ ಬಲುಗ
ತ್ತಲೆಗಳಿದಿರಲಿ ಕಂಡ ಜೀವರ
ಹಲವು ಜನ್ಮಾಂತರದ ದುರಿತಾಂಬೋಧಿ ಬತ್ತಿದವು
ಬಳಿಕ ಮುನಿಗಳು ಸಹಿತ ಕರುಣಾ
ಜಲಧಿ ತಾನಾ ಕೌರವೇಂದ್ರನ
ಹೊಳಲೊಳಗೆ ನಿಜ ಶರಣನಿಹ ಮನೆಗಾಗಿ ಬರುತಿರ್ದ ೫

ಕರಣ ನಿರ್ಮಳವಾಯ್ತು ಮನವು
ಬ್ಬರಿಸಿತತಿ ಪರಿತೋಷದೇಳಿಗೆ
ಪರಮ ಸುಖದಲಿ ತನುವ ಮರೆದನು ನಯನಜಲವೊಗಲು
ಎರಡುದೋರದ ಗಾಢಭಕ್ತಿಯ
ಭರದ ಲವಲವಿಕೆಯಲಿ ನಿಜ ಮಂ
ದಿರವ ಹೊರವಂಡುತ್ತ ಕಂಡನು ವಿದುರನಚ್ಯುತನ ೬

ಸಿರಿಮೊಗದ ಕಿರುಬೆಮರ ತೇಜಿಯಂ
ಖುರಪುಟದ ಕೆಂದೂಳಿ ಸೋಂಕಿದ
ಸಿರಿಮುಡಿಯ ಕುಡಿಮೀಸೆಯಲಿ ಕೆಂಪಡರ್ದ ರೇಣುಗಳ
ಖರ ಮರೀಚಿಯ ಝಳಕೆ ಬಾಡಿದ
ತರುಣ ತುಲಸಿಯ ದಂಡೆಯೊಪ್ಪುವ
ಗರುವ ದೇವನ ಬರವ ಕಂಡನು ಬಾಗಿಲಲಿ ವಿದುರ ೭

ತನುವ ಮರೆದನು ಪುಳಕಜಲದಲಿ
ನೆನೆದು ನಾರಾಯಣನ ಪದ ದರು
ಶನದ ಹರುಷಾರಣ್ಯದಲಿ ಮನ ಹೊಲಬುದಪ್ಪಿದನು
ನೆನೆವ ಸನಕಾದಿಗಳಿಗೊಮ್ಮೆಯು
ಮನಗೊಡದ ಮಹಿಮಾವಲಂಬನು
ಮನೆಗೆ ಬಹ ಕರುಣಾಳುತನ ಹೊಸತೆಂದು ಹೊಂಗಿದನು ೮

ವೇದದರಿಕೆಗಳಡಗದುಪನಿಷ
ದಾದಿ ದಿವ್ಯಸ್ತುತಿಯ ಗದಣೆಗೆ
ಹೋದ ಹೊಲಬಳಿವಡದ ಮುನಿಗಳ ಮುಖಕೆ ಮನಗುಡದ
ಕಾದಿ ಕಡಗುವ ತಾರ್ಕಿಕರು ಬೆಂ
ಡಾದರಲ್ಲದೆ ನಿಜವನರಿಯದ
ನಾದಿ ಸಿದ್ಧನ ಬರವ ಕಂಡನು ಬಾಗಿಲಲಿ ವಿದುರ ೯

ತೊಳಲುವುಪನಿಷದರಿಕೆಯಿವು ಶ್ರುತಿ
ಗಳ ಸರಾಗದ ಬಳಕೆಯಿವು ಮುನಿ
ಗಳ ಸಮಾಧಿಗಳಾದಿಯಿವು ಯೋಗಿಗಳ ಬಗೆಗಳಿವು
ಎಲೆಲೆ ಬಕುತರ ಭಾಗ್ಯಶಾಲಿಯ
ಬೆಳೆಗಳಿವೆಲಾ ಶಿವಯೆನುತ ಪದ
ನಳಿನಯುಗಳದಲೊಡಲನೀಡಾಡಿದನು ಹರುಷದಲಿ ೧೦

ನೋಡಿದನು ಮನದಣಿಯೆ ಮಿಗೆ ಕೊಂ
ಡಾಡಿದನು ಬೀದಿಯಲಿ ಹರಿದೆಡೆ
ಯಾಡಿದನು ಭ್ರಮೆಯಾಯ್ತು ವಿದುರಂಗೆಂಬ ಗಾವಳಿಯ
ಕೂಡೆ ಕುಣಿದನು ಮನೆಯ ಮುರಿದೀ
ಡಾಡಿದನು ಮೈಮರೆದ ಹರುಷದ
ಗಾಡಿಕೆಯಲಪ್ರತಿಮನೆಸೆದನು ಬಕುತಿ ಕೇಳಿಯಲಿ ೧೧

ಹಸಿದು ನಾವೈತಂದರೀ ಪರಿ
ಮುಸಗಿ ಕುಣಿದಾಡಿದೊಡೆ ಮೇಣೀ
ವಸತಿಯನು ಸುಗಿದೆತ್ತಿ ಬಿಸುಟರೆ ತನಗೆ ತಣಿವಹುದೆ
ವಸುಮತಿಯ ವಲ್ಲಭರು ಮಿಗೆ ಪ್ರಾ
ರ್ಥಿಸಿದೊಡೊಲ್ಲದೆ ಬಂದೆವೈ ನಾ
ಚಿಸದಿರೈ ಬಾ ವಿದುರಯೆನುತೊಳಹೊಕ್ಕನಸುರಾರಿ ೧೨

ನೆರೆಯೆ ಕೃತ್ಯಾಕೃತ್ಯ ಭಾವವ
ಮರೆದು ಕಳೆದನು ಮನ ಮುರಾರಿಯ
ನಿರುಕಿಕೊಂಡುದು ಕಂಗಳೊಡವೆಚ್ಚುವು ಪದಾಬ್ಜದಲಿ
ಅರಿವು ಮಯಣಾಮಯದ ಭಕ್ತಿಯೊ
ಳೆರಗಿಸಿದ ಪುತ್ಥಳಿಯವೊಲು ಕಡು
ಬೆರಗ ಕೇಣಿಯ ಕೊಂಡು ಮೌನದೊಳಿದ್ದನಾ ವಿದುರ ೧೩

ಒಲವರವೆ ಕೌತುಕವು ಪಾಲ್ಗಡ
ಲೊಳಗೆ ಮಲಗುವ ವಿಷ್ಣು ವಿದುರನ
ನಿಳಯದೊಳಗೊಕ್ಕುಡಿತೆ ಹಾಲಲಿ ಹಸಿವ ನೂಕಿದನು
ಹೊಲಬುಗೆಡಿಸಿದನಖಿಳ ನಿಗಮಂ
ಗಳನು ತನ್ನರಿಕೆಯಲಿ ಭಜಕಂ
ಗೊಲಿದು ತಾನೈತರಲು ಕರುಣದ ಘನತೆಯೆನೆ ಲೋಕ ೧೪

ಪರಿಯ ಪದಕಮಲಾಭಿಷೇಕದ
ವರ ಪಯೋಬಿಂದುಗಳು ಕೌರವ
ನರಮನೆಯನೊಳಕೊಂಬವೊಲ್ ಕಡಲಾಗಿ ಕೈಗೊಳಲು
ಅರರೆ ಮುರಹರನೊಡನೆ ಹಾಲಿನ
ಶರಧಿ ಮೇರೆಯನೊಡೆದುದಿಳೆಗ
ಚ್ಚರಿಯೆನುತ ಭೀಷ್ಮಾದಿಗಳು ಹೊಗಳಿದರು ಮುರಹರನ ೧೫

ತೊಲಗಿದಸು ಬಂದಂತೆ ತರಣಿಯು
ಹೊಳಹು ಸೋಂಕಿದ ಚಕ್ರವಕ್ಕಿಯು
ಬಳಗದಂತಿರೆ ಕೃಷ್ಣರಾಯನ ಬರವ ತಾ ಕೇಳ್ದು
ಪುಳಕ ಪಸರಿಸಿ ಪರಮಹರುಷವ
ತಳೆದು ದೇವನ ಕಾಣಿಕೆಯ ಕಂ
ಗಳಿಗೆ ಕಹುಲೋಲುಪತೆ ಮಿಗೆ ಹರಿತಂದಳಾ ಕುಂತಿ ೧೬

ಬರಲು ಕಂಡಸುರಾರಿ ಮುಂಚಿದೊ
ಳಿರದೆ ಧಿಮ್ಮನೆ ನಿಂದು ನರರಾ
ಚರಣೆಗಳ ನಾಟಕವ ತಾನೇ ನಟಿಸಿ ತೋರಿದನು
ಹಿರಿಯರಿಗೆ ತಾ ಹಿರಿಯನೆಂಬೀ
ಗರುವತನವನು ಬಿಸುಟು ಕುಂತಿಗೆ
ಕರವ ಮುಗಿದೆರಗಿದನು ಮುನಿಜನನಿಕರ ಥೇಯೆನಲು ೧೭

ಅಮಿತ ಕರುಣಾಸಿಂಧುವಿನ ಪದ
ಕಮಲದಲಿ ಬಂದೆರಗಿ ಪುಳಕೋ
ದ್ಗಮದ ತನಿ ಸುಖಪಾನರಸ ಸೌರಂಭದಲಿ ಮುಳುಗಿ
ಗಮಿಸಲರಿಯವು ಗರುವ ವೇದ
ಪ್ರಮಿತಿಗಳು ನೀವೆಂತು ನಡೆತಂ
ದೆಮಗೆ ಗೋಚರವಾದಿರೆನುತವೆ ಹೊಗಳಿದಳು ಕುಂತಿ ೧೮

ದೇವಕಿಯ ವಸುದೇವನನು ಬಲ
ದೇವ ಸೌಭದ್ರಾದಿ ಯದು ಭೂ
ಪಾವಳಿಯ ಸುಕ್ಷೇಮ ಕುಶಲವ ಕುಂತಿ ಬೆಸಗೊಳಲು
ದೇವ ನಗೆಮೊಗದಿಂದ ವರ ವಸು
ದೇವ ದೇವಕಿಯಾದಿ ಯಾದವ
ರಾ ವಿಳಾಸ ಮಹೀಶರಿರವನು ಕುಂತಿಗರುಹಿದನು ೧೯

ಯಮತನುಜನಧಿಕನು ಹಿಡಿಂಬಾ
ರಮಣನತಿ ಬಲ್ಲಿದನು ಪಾರ್ಥನ
ವಿಮಳ ವಿಗ್ರಹ ಲೇಸು ಸಕಲ ಮಹೀಶ ಪರಿವೃತರು
ಯಮಳರಿರವತಿ ಚೆಲುವು ನೇಹದ
ರಮಣಿಯಾಕೆಯು ಸುತರು ಮಹದು
ದ್ಯಮರು ಕೇಳೆಂದಸುರರಿಪು ಕುಂತಿಗೆ ನಿರೂಪಿಸಿದ ೨೦

ನರನ ಮಗನಭಿಮನ್ಯು ಕುಶಲನು
ವರ ಸುಭದ್ರಾದೇವಿ ಮೊದಲಾ
ಗಿರಲು ಬಾಂಧವರೆಲ್ಲ ಜೀವಂತರು ನಿಧಾನಿಸಲು
ಪರಮ ಮಿತ್ರರು ತಮ್ಮೊಳೊಂದಾ
ದರು ದ್ರುಪದನಕ್ಷೋಣಿ ಸೇನೆಯ
ನೆರವು ಬಂದುದು ರಾಜಕಾರ್ಯದ ಬಳಕೆ ಲೇಸೆಂದ ೨೧

ಅದಿತಿ ಮಕ್ಕಳ ಹಡೆದುದೇ ಲೋ
ಕದಲಿ ಫಲ ಕೌಸಲೆ ಕುಮಾರರ
ಪಡೆದು ಹಡೆದುದೆ ಸಫಲ ವಿನತೆಗೆ ಮಕ್ಕಳಾಯ್ತು ಫಲ
ಮುಂದದಿ ನೀನೇ ಮಕ್ಕಳನು ಪಡೆ
ದದುವೆ ಫಲ ಕೇಳೆಂದು ಪರಿತೋ
ಷದಲಿ ಕುಂತಿಯ ಹೊಗಳಿದನು ಮುರವೈರಿಯುಚಿತದಲಿ ೨೨

ಲೋಕ ಮೆಚ್ಚಲು ನಿನ್ನ ಸುತರು ದೃ
ಢೈಕಸತ್ಯರು ನುಡಿದ ಕಾಲವ
ನೂಕಿದರು ರಾಜ್ಯಾಭಿಲಾಷೆಗೆ ನೆರಹಿದರು ಬಲವ
ಆ ಕುಮಾರರಿಗರ್ಧ ರಾಜ್ಯವ
ನೀ ಕುಠಾರರಲೀಸಿಕೊಡುವ ವಿ
ವೇಕದಲಿ ತಾ ಬಂದೆನೆಂದನು ಕುಂತಿಗಸುರಾರಿ ೨೩

ಪರಮ ಪರಿತೋಷದಲಿ ಕೃಷ್ಣನ
ವರಸುಧಾಮಯ ವಚನವನು ಪಂ
ಕರುಹಮುಖಿ ಕೇಳುತ್ತೆ ನನೆದಳು ನಯನವಾರಿಯಲಿ
ಮುರಮಥನನಾ ಕುಂತಿಗೆಲ್ಲವ
ನೊರೆದು ವಿದುರನ ಕರೆದು ಕೌರವ
ನರಮನೆಯ ಸಮಯವನು ನೋಡಿದು ತಮಗೆ ಹೇಳೆಂದ ೨೪

ಹೋಗು ನೀನಾತಂಗೆ ಪಾಂಡವ
ರಾಗಸಮುದಯ ಬಂದನೆಂಬುದ
ನೀಗಳರುಹುವುದಾತ ಮಾಡಿದ ಗುಣದ ಬೆಳವಿಗೆಯ
ತಾಗು ಬಾಗಿನ ಹವಣನಾತನ
ಲಾಗ ನೋಡುವೆವೆನಲು ಕುರುಕುಲ
ಸಾಗರಾಗ್ನಿಯ ಮನೆಗೆ ಬಂದನು ವಿದುರ ಹರಿ ಬೆಸಸೆ ೨೫

ಓಲಗದೊಳಿರ್ದಖಿಳ ಮೂರ್ಖರ
ಮೌಳಿಯನು ಕಂಡವಧರಿಸು ಸಿರಿ
ಲೋಲ ಬಿಜಯಂಗೈಯಲವಸರವುಂಟೆ ಹೇಳೆನಲು
ನಾಳೆ ಕಾಣಿಸಿ ಕೊಂಬೆವಿನ್ನೇ
ನಾಳಿಕಾರನ ಬರವು ಹಗೆವರ
ಪಾಲಿಸುವ ಭರ ಸಂಧಿಕಾರ್ಯಕೆ ಬಾರದಿರನೆಂದ ೨೬

ನೋಡಿರೈ ಪಾಂಡವರು ಪಾತಕ
ರಾಡಿದಾಟವನಾಡಿದೊಡೆ ಯಿಾ
ನಾಡೊಳಗಹುದು ಸಲುವುದವನಿಯೊಳಧಿಕ ಲೇಸೆನಿಸಿ
ರೂಢಿಯೊಳಗಾಚಾರವಡಗಿತು
ಜೋಡೆಯಲಿ ಜನಿಸಿದರನೀ ಬೀ
ಡಾಡಿ ಕೂಡಿದನೆಂದು ಹೊಯಿದನು ರವಿಸುತನ ಕರವ ೨೭

ನಾಳೆ ಬರಹೇಳೆಂದು ವಿದುರನ
ಬೀಳುಕೊಟ್ಟನು ಬೇಹ ಭಟರಿಗೆ
ವೀಳೆಯವ ನೀಡಿದನು ಹರಿದುದು ರಾಯನಾಸ್ಥಾನ
ಜಾಳಿಸಿತು ತಮ ಮೂಡಣಾದ್ರಿಯ
ಮೇಲೆ ತಲೆದೋರಿದನು ರವಿ ಭೂ
ಪಾಲ ಕೌರವನಂದಿನೊಡ್ಡೋಲಗವ ರಚಿಸಿದನು ೨೮

ಕರೆಸಿದನು ಮಣಿಮಕುಟ ಕಿರಣದ
ಗರುವರನು ಗಾಢಪ್ರತಾಪರ
ಬರಿಸಿದನು ತೂಕದ ಮಹಾ ಮಂಡಳಿಕ ಮನ್ನೆಯರ
ಧುರವಿಜಯ ಸಿದ್ಧರನು ಚಾಮಿಾ
ಕರದ ಗದ್ದುಗೆಯಖಿಳ ಸಾಮಂ
ತರನು ಪೃಥ್ವೀಪಾಲರನು ನೆರಹಿದನು ಭೂಪಾಲ ೨೯

ಬಲದ ಗದ್ದುಗೆಗಳಲಿ ಭಟರ
ಗ್ಗಳೆಯ ರವಿಸುತ ನದಿಯ ಮಗ ನೃಪ
ತಿಲಕ ದುಶ್ಶಾಸನ ಕೃಪ ದ್ರೋಣಾದಿ ನಾಯಕರು
ಹೊಳೆವ ರತುನದ ಸಾಲ ಮಕುಟದ
ಚೆಲುವಿಕೆಯ ಸೌರಂಭದಲಿ ಗಜ
ಗಲಿಸಿದರು ಮಾಣಿಕ್ಯಮಯ ಭೂಷಣ ವಿಳಾಸದಲಿ ೩೦

ಸತಿಸಹಿತ ಧೃತರಾಷ್ಟ್ರ ಭೂಪತಿ
ಸುತನ ಬಲವಂಕದಲಿ ಕನಕೋ
ಚಿತದ ಪೀಠದಲೆಸೆದನಾತನ ಬಲದ ಭಾಗದಲಿ
ಚತುರ ಚತುರಾನನರು ತರ್ಕ
ಶ್ರುತಿ ಸಮಸ್ತ ಕಳಾಸ್ವತಂತ್ರರು
ನುತಗುಣರು ನೃಪನ ಸಭೆಯೊಳೆಸೆದರು ಭೂರಿ ಸಂದೋಹ ೩೧

ಮದವದತಿಬಲ ಶಕುನಿ ಸೈಂಧವ
ನದಟ ನೃಪ ಕಾಂಭೋಜ ರಥ ಸಂ
ಪದನು ಭೂರಿಶ್ರವ ಸುಲೋಚನ ವೀರ ವೃಷಸೇನ
ಕದನಕಾಲಾನಳರು ವರ ಹೇ
ಮದ ಮಕುಟ ರಚನೆಗಳಲೆಡವಂ
ಕದಲಿ ಕುಳ್ಳಿರ್ದರು ಮಹಾಯಾಸ್ಥಾನ ರಚನೆಯಲಿ ೩೨

ತರುಣ ಶೃಂಗಾರದ ಮಹಾ ಬಂ
ಧುರದ ನೂರ್ವರು ಕೌರವೇಂದ್ರನ
ವರ ಕುಮಾರರು ಮುಂದೆ ಮೆರೆದರು ಲಕ್ಷಣಾದಿಗಳು
ವರ ಕಿರೀಟದ ಕಾಲ ತೊಡರಿನ
ಕೊರಳ ಪದಕದ ಕೈಯ ಸುರಗಿಯ
ಲರಸನನುಜರು ನೂರ್ವರೆಡವಂಕದಲಿ ರಂಜಿಸಿತು ೩೩

ಮಿಸುಪ ತಮ್ಮ ಮುಖೇಂದುವನು ಸೈ
ರಿಸದ ಚಂದ್ರನ ಕಿತ್ತು ನಭದಲಿ
ಬಿಸುಟು ಬೇರ್ಗಳ ಹಿಡಿದರೋ ಹೇಳೆನಲು ಸಭೆಯೊಳಗೆ
ಶಶಿವದನೆಯರ ಕೈಯ ಸೀಗುರಿ
ವೆಸೆದವಿಕ್ಕೆಲದಲಿ ಸುಯೋಧನ
ವಸುಮತೀಶನ ವೈಭವದಲಾಸ್ಥಾನ ಚೆಲುವಾಯ್ತು ೩೪

ಕಲಹವಿಲ್ಲದೆ ನೂಲಿನೆಳೆಯಲಿ
ತಲೆಯನರಿವ ವಿರೋಧಿ ರಾಯರ
ನಳುಕಿಸುವ ಸಾಮದಲಿ ನಿಲಿಸುವ ನಿಖಿಳ ಭೂಭುಜರ
ಒಲಿದರೊಳಲಂಚದಲಿ ಛಿದ್ರಿಸಿ
ಕೊಲುವ ಮುನಿದೊಡೆ ಮಂತ್ರಶಕ್ತಿಯೊ
ಳಳುಕಿಸುವ ಮಂತ್ರಿಗಳು ಮೆರೆದರು ವಾಮಭಾಗದಲಿ ೩೫

ನಿಗಮ ತರ್ಕ ಪುರಾಣ ಕಾವ್ಯಾ
ದಿಗಳ ವಿಸಟಂಬರಿಗಳೊತ್ತೊ
ತ್ತುಗಳೊಳಿಟ್ಟೆಡೆಯಾಗಿ ಹಿಗ್ಗಿದ ಜಠರದಗ್ರಿಯರು
ಬಗೆಯುಪನ್ಯಾಸದ ಸುಶಾಖಾ
ಳಿಗಳ ಬೀಳಲು ಬೆಳೆದ ಗಡ್ಡದ
ವಿಗಡ ಭೂಯೋಪಾಧ್ಯರಿದ್ದುದು ರಾಜಸಭೆಯೊಳಗೆ ೩೬

ಸಲೆ ಸಮಸ್ಯದನಂತ ಪದ್ಯವ
ಘಳಿಲನನ್ವೈಸುವ ಸುಕಾಂತಿಯ
ಲಲಿತ ಮಧುರ ಸಮಾಧಿ ಸುಕುಮಾರಾದಿ ರಚನೆಯಲಿ
ಹಲವುಪಮೆ ಉತ್ಪ್ರೇಕ್ಷೆ ರೂಪಕ
ಸುಲಲಿತಾಲಂಕೃತಿ ಚಮತ್ಕೃತಿ
ಗಳ ಚತುರ್ಭಾಷಾ ವಿಶಾರದ ಕವಿಗಳೊಪ್ಪಿದರು ೩೭

ಸುಡಿದು ತಲೆದೂಗಿಸುವ ಮರೆಗ
ನ್ನಡಕೆ ಹಾ ಹಾಯೆನಿಸಿ ಮೆಚ್ಚನು
ಪಡೆದ ವಾಗ್ಮಿಗಳೋದಿ ಹೊಗಳಿಸಿಕೊಂಬ ಗಮಕಿಗಳು
ಕೊಡುವ ಪದ್ಯಕೆ ಸುಪ್ರಮೇಯದ
ಗಡಣಕಬುಜಭವಾದಿ ವಿಭುಗಳು
ಬಿಡಿಸಲರಿದೆನಿಪತುಳ ತಾರ್ಕಿಕ ಜನಗಳೊಪ್ಪಿದರು ೩೮

ನುತ ಶುಭೋದಯ ಜೀಯ ಶತ್ರು
ಪ್ರತತಿ ಸಂಹಾರಕ ಸಮಸ್ತ
ಕ್ಷಿತಿಪತಿ ಬ್ರಹ್ಮಾಯುರಸ್ತುವೆನುತ್ತ ಕೈ ನೆಗಹಿ
ನುತಗುಣನ ಬಿರುದಾವಳಿಯ ಸಂ
ಗತಿಯನಭಿವರ್ಣಿಸುವ ಸಮಯೋ
ಚಿತದ ಮನ್ನಣೆವಡೆದು ಮೆರೆದುದು ಭಟ್ಟ ಸಂದೋಹ ೩೯

ಬರೆದ ಬಳಿಕದು ವಿಧಿಯ ಸೀಮೆಯ
ಬರಹ ನಿಜಕಾರ್ಯಾರ್ಥ ಲಾಭವು
ದೊರಕಿದೊಡೆ ಪತಿಯರ್ಥ ನೀರಲಿ ಬರೆದ ಲಿಪಿಯಂತೆ
ಕರಗುಪಿತ ಲೋಲುಪರು ಲಂಚದ
ಪರಮಜೀವನ ಜಾಣರಾ ಸಿರಿ
ಕರಣದವರೊಪ್ಪಿದರು ಭೂಪಾಲಕನ ಸಭೆಯೊಳಗೆ ೪೦

ನಳನ ನಹುಷನ ಶಾಲಿಹೋತ್ರನ
ಬಲುಮೆಗಳು ಕಿರಿದೆಂಬ ವಿದ್ಯಾ
ನಿಳಯ ವರ ರೇವಂತನೇರಾಟವನು ನಸುನಗುತ
ಬಲಿದ ದೃಢ ವಾಘೆಗಳು ದೃಷ್ಟಾ
ವಳಿಯ ಹಯ ಪ್ರೌಢ ಪ್ರತಾಪರು
ಹೊಳೆವ ಮಕುಟದ ಸಾಲುಗಳಲೊಪ್ಪಿದರು ರಾವುತರು ೪೧

ಅತಿಮದದಿ ತನು ಸೊಕ್ಕಿದೈರಾ
ವತವ ಕಿವಿವಿಡಿದೆಳೆವ ದಿಗ್ಗಜ
ತತಿಯುನಮುಳಾಂಕುಶದಲಂಜಿಸಿ ಕೆಲಬಲಕೆ ಬಿಡುವ
ನುತ ಗಜಾರೋಹಕರು ಕುರುಭೂ
ಪತಿಯ ಹೊರೆಯಲಿ ಮೆರೆದರಮರಾ
ವತಿಯ ರಾಯನ ಸಭೆಯೊಲೆಸೆದುದು ಕೌರವಾಸ್ಥಾನ ೪೨

ನಡೆದು ಪರಮಂಡಲದ ರಾಯರ
ಜಡಿದು ಕಪ್ಪವ ತಪ್ಪ ಶಿಷ್ಟರ
ಗಡಣವೆಸೆದುದು ಪವನ ವೇಗದ ರಾಯಭಾರಿಗಳು
ಕಡುಗಿದರೆ ಕಾಲಂಗೆ ಬಿರುದಿನ
ತೊಡರನಿಕ್ಕುವ ಜವನ ದಾಡೆಯ
ತುಡುಕುವಗ್ಗದ ವೀರರೆಸೆದುದು ದಿಟ್ಟವಾರೆಯಲಿ ೪೩

ಎಳೆಯ ಮಿಂಚಿನ ಕುಡಿಯ ಸೂಸುವ
ನಳಿನದೃಶೆಯರು ಶಶಿಯ ಬಿಂಬವ
ಹಳಿವ ಹುರುಡಿಸುವಬುಜಮುಖಿಯರು ಕೋಮಲಾಂಗಿಯರು
ಸೆಳೆನಡುವಿನಗ್ಗಳೆಯರೊಪ್ಪುವ
ಕಳಶಕುಚೆಯರು ಜಘನ ಚಳ
ದಳಕಿಯರು ಕುರುರಾಯನೆಡವಂಕದಲಿ ಮೋಹಿದರು ೪೪

ಮುರಿದು ನೋಡಿದರಖಿಳ ರಾಯರು
ಶಿರವ ಬಾಗಲು ಲಾಳ ಮಾಳವ
ತುರುಕ ಕೊಂಕಣ ಗೌಳ ಗೂರ್ಜರ ವಂಗ ಹಮ್ಮೀರ
ವರತ್ರಿಗರ್ತರು ನೆರೆದು ಜೀಯೆನು
ತಿರಲು ಕೋಮಲಿಕೆಯರು ಸಿತ ಚಾ
ಮರವ ಚಿಮ್ಮಲು ಭೂಪ ಮೆರೆದನು ಸಿಂಹಪೀಠದಲಿ ೪೫

ಆವ ದೇಸಿಯಿದಾವ ವಿಸ್ತರ
ವಾವ ದೇಶದ ಸಿರಿಯ ಸಡಗರ
ವಾವ ಪರಿಯ ವಿಳಾಸವಾವ ವಿಡಾಯಿ ತಾನೆನಲು
ಹಾವು ಹಳವಿಗೆಯಾದ ರಾಯನು
ರಾವಣಾರಿಯ ಕಾಣಿಕೆಗೆ ಬಲು
ಠೀವಿಯನು ತೋರಿದನು ಸಾರುವ ಭಟ್ಟರೋಳಿಯಲಿ ೪೬

ಬರಲಿ ಕರೆ ಕೈತವದ ಶಿಕ್ಷಾ
ಗುರುವನೆನುತವನೀಶ ದೂತರ
ಹರಿಯ ಬಿಟ್ಟನು ಹರಿಯ ನಿಳಯಕೆ ಹರಿಯ ವೇಗದಲಿ
ಚರರು ಹರಿತಂದಸುರ ರಿಪುವಿನ
ಚರಣದಲಿ ಮೈಯಿಕ್ಕಿ ನೊಸಲಲಿ
ಕರಪುಟಾಂಜಲಿ ಮೆರೆವುತಿರೆ ಬಿನ್ನಹವ ಮಾಡಿದರು ೪೭

ದೇವ ದೇವರ ಸಮಯವೆನೆ ರಾ
ಜೀವನಾಭನು ಮುಗುಳುನಗೆಯಲಿ
ಭಾವನವರಟ್ಟಿದರೆ ಹರ ಹರ ಬಹೆವು ನಡೆಯೆನುತ
ರಾವಣನ ಪರಿ ನೆಲೆಸಿತಿವನಲಿ
ಸಾವಿಗಂಜುವನಲ್ಲ ಖಳನು ನ
ಯಾವಿಳನು ನಮ್ಮುಕುತಿ ಕೊಳ್ಳದು ವಿದುರ ಕೇಳೆಂದ ೪೮

ಎನುತ ಮಂಚವನಿಳಿದು ವರ ಕಾಂ
ಚನ ವರೂಥಕೆ ಕೈಗೊಡುವ ಯದು
ಜನಪರುಗ್ಗಡಣೆಯಲಿ ಬಿಜಯಂಗೈದನಸುರಾರಿ
ಮುನಿ ನಿಕರ ಸಂದಣಿಸಿತಭ್ರದೊ
ಳನಿಮಿಷಾವಳಿ ನೆರೆದುದಿಭಪುರ
ಜನವೊಡನೆ ನಡೆತರಲು ಹರಿ ಬರುತಿರ್ದನೋಲಗಕೆ ೪೯

ಕಲಿಮಲದಿ ಹೊಲೆಗಲಸಿದಿಭಪುರಿ
ಯೊಳಗೆ ನಿರ್ಮಳವಾಯ್ತು ಕೃಷ್ಣನ
ಚೆಲುವ ದರುಶನದಿಂದ ಬೆಂದವು ಭವದ ಭಯಬೀಜ
ಲಲನೆಯರು ತಮತಮ್ಮ ನಯನಂ
ಗಳಿಗೆ ದೇವನ ತೆಗೆದು ಸನುಮತ
ಪುಳಕರಾದರು ಕೇಳು ಜನಮೇಜಯ ಮಹೀಪಾಲ ೫೦

ಕಂಜಸಂಭವ ಪಿತನು ಬಂದನು
ನಂಜಿನಲಿ ಪವಡಿಸುವ ಬಂದನು
ಕುಂಜರನ ಮೊರೆಗೇಳಿ ಸಲಹಿದ ದೇವನಿದೆ ಬಂದ
ಅಂಜನಾಸುತನೊಡೆಯ ಬಂದನು
ಅಂಜಿದಸುರನಿಗಭಯವಿತ್ತವ
ಭಂಜನೆಗೆ ಬಲುದೈವ ಬಂದನು ನೃಪತಿಯರಮನೆಗೆ ೫೧

ದೇವ ಬಂದನು ತನ್ನ ನೆನೆವರ
ಕಾವ ಬಂದನು ದೈತ್ಯಕುಲ ವನ
ದಾವ ಬಂದನು ಭಾಗವತಜನಲೋಲುಪನು ಬಂದ
ಭಾವಿಸುವಡಘಹಾರಿ ಬಂದನು
ಓವಿ ಬಂದರೆ ತನ್ನ ಬೀರುವ
ದೇವ ಬಂದನು ವೀರ ನರಯಣ ಬಂದನರಮನೆಗೆ ೫೨

ಅರಸ ಬಂದನು ಭಾಗವತಜನ
ಪರುಷ ಬಂದನು ಭಕ್ತ ವತ್ಸಲ
ಕರುಣಿ ಬಂದನು ತನ್ನ ನೆನೆದರೆ ಪರಮಪದವೀವ
ಪರಮಪುರುಷೋತ್ತಮನು ಬಂದನು
ದುರಿತದುರ್ಗ ವಿಭಾಡ ಬಂದನು
ಸುರರ ಸಲಹುವ ದೇವ ಬಂದನು ನೃಪತಿಯರಮನೆಗೆ ೫೩

ಕ್ಷೀರವಾರಿಧಿಶಯನ ಬಂದನು
ವಾರಿಜೋದರ ಕೃಷ್ಣ ಬಂದನು
ಧಾರುಣಿಯ ಹೊರೆಯಿಳಿಯಲೋಸುಗ ಮನುಜ ವೇಷದಲಿ
ಭೂರಿ ದನುಜರನೊರೆಸಿ ಕೌರವ
ವಾರಿಧಿಯ ಮುಕ್ಕುಳಿಸಲೋಸುಗ
ಭೋರನೈತರುತಿರ್ದನಂಥ ನೃಪಾಲನರಮನೆಗೆ ೫೪

ಬರಲು ಮುರಹರನಿದಿರುವಂದರು
ಗುರುನದೀಜ ದ್ರೋಣ ಗೌತಮ
ಗುರುಸುತಾದಿ ಸಮಸ್ತ ಭೂಪ ಚಮೂಹ ಸಂದೋಹ
ಚರಣದಲಿ ಚಾಚಿದರು ಭೂಮೀ
ಶ್ವರರು ಮಕುಟವನಂತತಾರಾ
ಪರಿವೃತೇಂದುವಿನಂತೆ ಮೆರೆದುದು ಹರಿಯ ಪದನಖವು ೫೫

ಅರಿದಲೈ ಮುರವೈರಿ ಸನಕಾ
ದ್ಯರ ಸಮಾಧಿಗೆ ಸುಳಿಯದಂಘ್ರಿಯ
ದರುಶನದ ಫಲಭೋಗ ಸಾರಿದುದಸ್ಮದಾದ್ಯರಿಗೆ
ಸುರನರೋರಗರೊಳು ಕೃತಾರ್ಥರು
ನಿರುತ ತಾವಲ್ಲದೊಡೆ ನಿಮ್ಮಯ
ಸರಸಿಜಾಂಘ್ರಿಯ ಸೇವೆ ದೊರಕುವುದಾವ ಮುನಿಗಳಿಗೆ ೫೬

ಎಂದು ಗಂಗಾನಂದನನು ನಲ
ವಿಂದ ಕೈಗೊಡೆ ಸುರಗಿರಿಯ ತುದಿ
ಯಿಂದ ಮರಿಮಿಂಚುಗಳ ಮುಗಿಲಿಳಿವಂತೆ ಭೂತಳಕೆ
ಅಂದು ನೀಲಾಚಲ ನಿಕಾಯದ
ಸೌಂದರಾಂಗದ ಕೌಸ್ತುಭ ಪ್ರಭೆ
ಯಿಂದ ಕಾಂಚನ ರಥವನಿಳಿದನು ದಾನವಾರಾತಿ ೫೭

ಸಮರ ಸರ್ವಜ್ಞರುಗಳಂಘ್ರಿಗೆ
ನಮಿಸಿದರು ಬಹಳೋಲಗದ ಸಂ
ಭ್ರಮದ ಸಿರಿ ತಲೆವಾಗುತಿರ್ದುದು ನೊಸಲ ಕೈಗಳಲಿ
ಕಮಲನಯನದ ದೇವನೇ ಸಾ
ಕೆಮಗೆ ಮಾಡುವುದೇನೆನುತ ತ
ತ್ಕುಮತಿ ಕೌರವನಿಳಿಯದಿರ್ದನು ಸಿಂಹವಿಷ್ಟರವ ೫೮

ಸೆಣಸು ಸೇರದ ದೇವನಿದಿರಲಿ
ಮಣಿಯದಾತನ ಕಾಣುತವೆ ಧಾ
ರುಣಿಯನೊತ್ತಿದನಂಗುಟದ ತುದಿಯಿಂದ ನಸುನಗುತ
ಮಣಿಖಚಿತ ಕಾಂಚನದ ಪೀಠದ
ಗೊಣಸು ಮುರಿದುದು ಮೇಲೆ ಸುರ ಸಂ
ದಣಿಗಳಾ ಎನೆ ಕವಿದು ಬಿದ್ದನು ಹರಿಯ ಚರಣದಲಿ ೫೯

ಧರಣಿಪತಿ ಸಿಂಹಾಸನದ ಮೇ
ಲಿರದೆ ಬಹರೇ ನಾವು ಬಂದೇ
ಹರಸುವೆವು ತಪ್ಪಾವುದೆನುತೆತ್ತಿದನು ಮಸ್ತಕವ
ಸುರನದೀಸುತ ಕೈಗುಡಲು ಕೇ
ಸರಿಯ ಪೀಠಕೆ ದೇವ ಬಂದನು
ಕುರುಕುಲಾಗ್ರಣಿಗಳ ಸುಸನ್ಮಾನವನು ಕೈಕೊಳುತ ೬೦

ಹರಿಯ ಹರಿವಿಷ್ಟರದ ಬಲದಲಿ
ಧರಣಿಪತಿ ಕುಳ್ಳಿರ್ದನಾತನ
ಹಿರಿಯ ಮಗನೆಡವಂಕದಲಿ ಕರ್ಣಾದಿಗಳು ಸಹಿತ
ಹರಿಯ ನೇಮವ ಕೊಂಡು ಸನ್ಮುನಿ
ವರರು ಕುಳ್ಳಿರ್ದರು ನದೀಸುತ
ತರಿಸಿದನು ಪಡಿಗವನು ಹೊಂಗಳಸದ ಸುವಾರಿಗಳ ೬೧

ಚರಣಯುಗಳವ ತೊಳೆದು ತೀರ್ಥವ
ಶಿರದೊಳಿಟ್ಟು ಮಹಾನುಭಾವನ
ದರುಶನದಿ ಮಜ್ಜನ್ಮ ಸಫಲವೆನುತ್ತ ಕೈಮುಗಿದು
ಪರಶುರಾಮಾದಿಗಳ ಮಿಗೆ ಸ
ತ್ಕರಿಸಿ ಗಂಧಾಕ್ಷತೆಗಳಿಂದುಪ
ಚರಿಸಿ ಹೊಂಬಟ್ಟಲಲಿ ವೀಳೆಯವಯವಿತ್ತನನಿಬರಿಗೆ ೬೨

ಕುಶಲವೇ ಕುರುರಾಯ ಬಾರೈ
ಮುಸುಡ ದುಗುಡವಿದೇಕೆ ಬಾಯೆಂ
ದಸುರರಿಪು ಕೌರವನ ಕರೆದನು ತನ್ನ ಸಮ್ಮುಖಕೆ
ಉಸುರಲಮ್ಮೆನು ಭಾವತನದೊಂ
ದೆಸಕ ಸಲುಗೆಯ ನೇಮವಾದೊಡೆ
ಬಿಸಜಲೋಚನ ಬಿನ್ನಹವನವಧರಿಸಬೇಕೆಂದ ೬೩

ನೀವು ಬಿಜಯಂಗೈವಿರೆಂದು ಮ
ಹಾ ವಿಳಾಸದೊಳೆಳವಡಿಸಿ ನಾ
ನಾ ವಿಧದ ಷಡುರಸವ ಗರುಡಿಯಲಿಂದು ಸವೆಸಿದೆನು
ದೇವ ನಮ್ಮರಮನೆಗೆ ಬಾರದೆ
ನೀವು ವಿದುರನ ಮನೆಯಲುಂಡಿರಿ
ಗೋವಳಿಗತನ ನಿಮ್ಮ ಮೈ ಸಿರಿ ತಪ್ಪದಾಯ್ತೆಂದ ೬೪

ಈ ಕೃಪನನೀ ದ್ರೋಣನೀ ಗಂ
ಗಾ ಕುಮಾರನ ಮನೆಯ ಹೊಗದವಿ
ವೇಕಿ ತೊತ್ತಿನ ಮಗನ ಮನೆಯಲಿ ಹಸಿವನೂಕಿದಿರಿ
ಸಾಕಿದಾತನು ನಂದಗೋಪನು
ಕಾಕ ಬಳಸಲು ಸಲ್ಲದೇ ನಿಮ
ಗೇಕೆ ರಾಯರ ನೀತಿಯೆಂದನು ನಗುತ ಕುರುರಾಯ ೬೫

ಕುರುಪತಿಯ ಬಿರುನುಡಿಯ ಕೇಳಿದು
ಕರಣದಲಿ ಕೋಪಾಗ್ನಿಯುಕ್ಕಲು
ಕೆರಳಿ ನಿರ್ಭೀತಿಯಲಿ ನುಡಿದನು ವಿದುರನರಸಂಗೆ
ದುರುಳ ನೀನಾಡಿದ ನುಡಿಗೆ ಉ
ತ್ತರವನೀಯಲದೇಕೆ ನಿನ್ನಯ
ವರ ಜನನಿಗಾದಿಯಲಿ ಗಂಡರದಾರು ಹೇಳೆಂದ ೬೬

ಕಡು ಮುಳಿಸಿನಲಿ ಭೀಮ ನಿನ್ನಯ
ತೊಡೆಗಳನು ಕಡಿವಾ ಸಮಯದೊಳು
ತಡೆದು ನಿನ್ನನು ಕಾಯಬೇಕೆಂದುಳುಹಿದೆನು ಧನುವ
ಕೆಡೆನುಡಿಸಿಕೊಂಡಿನ್ನು ಕಾವೆನೆ
ನುಡಿದು ಫಲವೇನೆನುತ ವಿದುರನು
ಹಿಡಿದ ಬಿಲ್ಲನು ಮುರಿದನಾ ಕುರುರಾಯ ಬೆರಗಾಗೆ ೬೭

ಧನು ಮುರಿಯೆ ಗಾಂಧಾರಿ ಗತ ಲೋ
ಚನರು ಮಮ್ಮಲ ಮರುಗಿದರು ಭೂ
ಪನ ದುಗುಡ ಮಿಗಿಲಾಯ್ತು ಭೀಷ್ಮ ದ್ರೋಣರಳಲಿದರು
ಮನದ ಹರುಷದಿ ನಗುತ ಮಧುಸೂ
ದನನು ನುಡಿದನು ಮರುಳು ಕೌರವ
ಜನಪ ಕೇಳೈ ಮತ್ತೆ ನಮ್ಮಯ ಶೀಲ ಬೇರೆಂದ ೬೮

ಪ್ರಿಯುದಲುಂಬುದು ಮೇಣು ವಿಬುಧಾ
ಶ್ರಯದಲುಂಬುದು ಮಾನವರಿಗಿದು
ನಿಯತವಿಂತಲ್ಲದೊಡೆ ಕೇಳೈ ಕೌರವ ರಾಯ
ಪ್ರಿಯನು ನೀನಲ್ಲೆಮಗೆ ವಿಬುಧಾ
ಶ್ರಯವು ತಾ ಮುನ್ನಿಲ್ಲ ನಿನ್ನಾ
ಲಯದೆಲೆಮಗೆಂತೂಟ ಸಂಭವಿಸುವುದು ಹೇಳೆಂದ ೬೯

ಹಗೆಯನೊಳಗಿಡಲಾಗದದು ವೈ
ರಿಗಳ ನಿಳಯದಲನ್ನ ಪಾನಾ
ದಿನಗಳನುಣಲಾಗದು ನಿಧಾನಿಸೆ ರಾಜನೀತಿಯಿದು
ಬಗೆಯೆ ನೀ ಪಾಂಡವರಿಗಹಿತನು
ವಿಗಡ ಪಾಂಡವರೆನ್ನ ಜೀವನ
ಹಗೆಯ ನಂಬುವೆನೆಂತು ಹೇಳೈ ಕೌರವರ ರಾಯ ೭೦

ಸೇರುವನು ಸಕಳಂಕ ಚಂದ್ರನು
ವಾರಿಧಿಗೆ ನೀನಖಿಳ ಗೋಪೀ
ಜಾರ ಜಾರೆಯ ಮಕ್ಕಳಿಗೆ ನೀ ಜೀವ ತಪ್ಪೇನು
ಆರು ತಮ್ಮಂದದ ಮಹಾತ್ಮರ
ಸೇರುವರಲ್ಲೆ ಪಾಂಡುಪುತ್ರರ
ಕೂರುಮೆಗೆ ನಾನೆನ್ನೆ ನೀ ಬಂದನುವ ಹೇಳೆಂದ ೭೧

ಕುಲದವನ ಹೃದಯಾಂಧಕಾರವ
ಕಳಚಲೆಂದು ಹಿಮಾಂಶು ಹರಹಿದ
ನೆಳೆಯಬೆಳುದಿಂಗಳನೆನಲು ಸುರರಿಪುಕುಲಾಂತಕನು
ತೊಳಪ ದಶನಮಯೂಖ ತತಿ ಹೊಳೆ
ಹೊಳೆಯೆ ನುಡಿದನು ತತ್ಸಭಾ ಮಂ
ಡಲ ಮಹಾಂಬುಧಿ ನುಡಿದೆರೆಯ ತನಿಗಡಣವಡಗಿರಲು ೭೨

## ಒಂಬತ್ತನೆಯ ಸಂಧಿ

ಸೂ. ಬಿಡು ನೆಲನ ಕೇಡುಗರ ಮಾತಿಂ
ಗೊಡಬಡದಿರಂತಕನ ನಗರಿಗೆ
ನಡೆಯಬೇಡೆಂದಸುರರಿಪು ಕೌರವನನುರೆ ಜರೆದ

ಅವಧಿ ಸವೆದುದು ಪಾಂಡವರು ನಿ
ನ್ನವರು ವನವಾಸ ಪ್ರವಾಸದೊ
ಳವರು ನವೆದರು ಕೂಡಿಕೊಂಡಿಹುದಧಿಕ ಗುಣ ನಿನಗೆ
ಅವನಿಯರ್ಧವನೀವುದೀಯ
ಧ್ರುವದ ಬಾಳಿಕೆಯೊಳಗೆ ಪುರುಷಾ
ರ್ಥವನು ಸಂಚಿಸೆ ಕಲಿಯಬೇಹುದು ಭೂಪ ಕೇಳೆಂದ ೧

ಅರಸುತನ ತನಗಧಿಕವಾಗುತ
ಬರಬರಲು ಕಣ್ಣಾಲಿಗಳು ತರ
ಹರಿಸಿ ಕಾಣವು ವರ್ತಮಾನದ ನೃಪರ ಬಳಕೆಯಿದು
ಸಿರಿಯ ಮದವೆಂಬಧಿಕ ತಾಮಸ
ದೊರಕಿದಕ್ಷಿಗೆ ನೀತಿಕಾರರ
ಪರಮವಚನಾಂಜನದಿ ಪ್ರಜ್ವಲಿಸುವುದು ನಯವೆಂದ ೨

ಕೋಶ ಬಲ ತಳತಂತ್ರ ಹೆಚ್ಚಿದ
ದೇಶ ದುರ್ಗವಮಾತ್ಯ ಮಿತ್ರ ಮ
ಹೀಶ ಜನವೆಂಬುದು ಕಣಾ ಸಪ್ತಾಂಗ ಸನ್ನಾಹ
ಈಸು ನಿನಗುಂಟಿಲ್ಲಿ ಮಿತ್ರಮ
ಹೀಶರೆಂಬುದ ತೊರೆವೆ ಪಾಂಡವ
ರಾ ಸಹಾಯವು ಬರಲು ನಿನಗಿದಿರಿಲ್ಲ ಕೇಳೆಂದ ೩

ಹೇಳಿದೀ ಸಪ್ತಾಂಗದೊಳಗೊಂ
ದೇಳಿ ದಿಟವಾಗಿರ್ದ ನೃಪತಿಯ
ಬಾಳಿಕೆಗೆ ಸಂದೇಹವರಿಯಾ ರಾಜನೀತಿಗಳ
ಹೇಳಲಮ್ಮುವರಿಲ್ಲ ಹಿರಿಯರು
ಹೇಳಿದೊಡೆ ನೀ ಕೇಳೆ ಕುರುಕುಲ
ಮೌಳಿ ನಯದಲಿ ನಡೆಯಕಟಯೆಂದಸುರರಿಪು ನುಡಿದ ೪

ಸಾಮವೆಂಬುದು ರಾಜನೀತಿಗೆ
ತಾ ಮನೋಹರ ರೂಪು ಬದುಕುವ
ಭೂಮಿಪಾಲರನಂತ ವಿಭವಕೆ ಬೀಜ ಮಂತ್ರವಿದು
ಸಾಮ ತಪ್ಪಿದ ಬಳಿಕ ನೀತಿ ವಿ
ರಾಮವಾಗದೆ ಬಿಡದು ದಂಡದ
ಸೀಮೆಯೆಂಬುದುಪಾಯದಲಿ ಸಾಮಾನ್ಯ ತರವೆಂದ ೫

ಮಾಡಿದಪರಾಧಂಗಳನು ಮರೆ
ದಾದರಿಸಿ ಮೋಹದಲಿ ದಿಟ ನೀ
ಗೂಡಿ ಬದುಕುವ ನುಡಿಯ ನುಡಿವರು ನಮ್ಮ ಮನ ಮೆಚ್ಚಿ
ಕಾಡಿನೊಳಗಾಡಿದರು ದುಃಖವ
ತೋಡಿದರು ನೀನವರಿಗುಚಿತವ
ಮಾಡಿ ನಾಡನು ಕೊಡುವುದೆಂದನು ದಾನವಧ್ವಂಸಿ ೬

ವಿದುರನುತ್ಸವ ಕೃಪನ ಸಮ್ಮದ
ನದಿಯ ಮಗನೊಲವಂಧ ನೃಪನ
ಭ್ಯುದಯ ಕೇಳೆಂದಸುರರಿಪು ನಯನುಡಿಯ ಗಡಣಿಸಲು
ಮದದ ಮೈಗಾಣಿಕೆಯ ಮನ ಲೇ
ಪದ ಮಹಾ ಖಳನಷ್ಟ ಮೊಗವಿಡ
ಲುದಧಿಯೊಳಗದ್ದಂತೆಯಿರ್ದುದು ರಾಯನಾಸ್ಥಾನ ೭

ಅವರಿಗಿಂದ್ರಪ್ರಸ್ಥದಲಿ ರಾ
ಜ್ಯವನು ಕುಳಸಹಿತಿತ್ತು ನೀ ಪಾಂ
ಡವ ಪ್ರತಿಷ್ಠಾಚಾರ್ಯನೆಂಬೀ ಬಿರುದ ಸಲಿಸಿದೊಡೆ
ಅವನಿಯಲಿ ನಿನ್ನೊಡನೆ ತಲೆಯೆ
ತ್ತುವ ನೃಪಾಲಕರಿಲ್ಲ ನುಡಿಗಳು
ಕಿವಿಗೆ ಕರ್ಕಶವೀಗಲಾದೊಡೆ ಮುಂದೆ ಲೇಸೆಂದ ೮

ಕಳಕಳಿಕೆ ತಗ್ಗಿದ ಸಭಾ ಸ್ಥಳ
ದೊಳಗೆ ಸಿಂಹಧ್ವನಿಯಲವನಿಪ
ಕುಲಕುಠಾರನು ಪರಶುರಾಮನು ನುಡಿದನರಸಂಗೆ
ಎಲೆ ಸುಯೋಧನ ಕೃಷ್ಣರಾಯನ
ಅಳಲಿಸುವರೇ ಲೋಭವೀ ವೆ
ಗ್ಗಳದ ನಿರ್ಬಂಧನವು ಪ್ರಾಜ್ಞರಿಗುಚಿತವಲ್ಲೆಂದ ೯

ದಿವಿಜರಿದಿರಲ್ಲೆಂದು ದಂಭೋ
ದ್ಭವನು ನರ ನಾರಾಯಣಾಖ್ಯರ
ನವಗಡಿಸಿ ಮುರಿವಡೆದು ಕೆಟ್ಟನು ಗಾಢಗರ್ವದಲಿ
ಅವರೊಳರ್ಜುನ ನರನು ಯದು ಸಂ
ಭವನು ನಾರಾಯಣನು ಬಿಡು ಪಾಂ
ಡವರ ವೈರವನೆಂದು ಭಾರ್ಗವ ನುಡಿದನರಸಂಗೆ ೧೦

ತಪ್ಪಿ ನುಡಿಯನು ಪರಶುರಾಮನು
ದರ್ಪವಿದು ಲೇಸಲ್ಲ ಕಪಟಂ
ಗೊಪ್ಪಿಸುವುದರ್ಥಾವನೀತಳವನು ಸರಾಗದಲಿ
ತಪ್ಪಿ ನುಡಿದೊಡೆ ಗರುಡ ದೇವನ
ದರ್ಪವನು ಹರಿ ಸೆಳೆದು ಬಿಸುಟನು
ಒಪ್ಪಿ ತಾಗದಿರೆಂದು ನುಡಿದನು ಕಣ್ವಮುನಿ ನಗುತ ೧೧

ಅಹುದು ಕಣ್ವನ ಮಾತು ಕೃಷ್ಣನ
ಮಹಿಮೆ ಘನವಿದನರಿದು ಗರ್ವ
ಗ್ರಹ ಹಿಡಿದು ಮರುಳಾಗದಿರು ಮುನ್ನೊಬ್ಬ ಗಾವಿಲನು
ಬಹಳ ಗುರುದಕ್ಷಿಣೆಗೆ ತೊಳಲಿದು
ಮಹಿಯೊಳೆಲ್ಲಿಯು ಗಳಿಸದಿರಲವ
ನಹವ ಮುರಿದನು ಬಳಿಕ ವಿಶ್ವಾಮಿತ್ರ ಮುನಿ ಬಂದು ೧೨

ನಿಮ್ಮ ಪೂರ್ವ ಯಯಾತಿ ನಾಕದೊ
ಳೆಮ್ಮವೋಲಾರುಂಟು ಜಗದಲಿ
ಧರ್ಮಪರನೆನೆ ಸುರರು ಹರಿದಿಕ್ಕಿದರು ಹೆಡತಲೆಗೆ
ಧರ್ಮಪಥ ಹುಲುವಟ್ಟೆಯೆನಿಸಿದ
ಹಮ್ಮಿನಲಿ ಕೆಡಬೇಡ ನೀತಿಯ
ನೆಮ್ಮಿದನು ಕೆಡನೆಂದು ನಾರದ ನುಡಿದನರಸಂಗೆ ೧೩

ಅವನಿಪತಿ ಕೇಳಾವು ಪಾಂಡವ
ರವರು ಬನದಲಿ ಕಂದ ಮೂಲವ
ಸವಿದು ಕೊಂಬರು ಋಷಿಗಳಿಗೆ ಹಂಗೇಕೆ ಭೂಮಿಪರ
ಇವರದಾವನ ಪಕ್ಷಪಾತ
ವ್ಯವಹರಣೆಯವರಲ್ಲ ಕೇಳಿ
ನ್ನಿವರ ನುಡಿಗಳನೆಂದು ನುಡಿದನು ಮತ್ತೆ ಮುರವೈರಿ ೧೪

ಬೆರಳ ಮೀಸೆಯೊಳಿಡುತ ಕಿರು ನಗೆ
ವೆರಸಿ ಕರ್ಣಾದಿಗಳ ವದನವ
ತಿರುಗಿ ನೋಡುತ ಹರಿಯ ನುಡಿಗಳ ಕಿವುಡುಗೇಳುತ್ತ
ಮರುಳತನದಾಳಾಪವೇತಕೆ
ಮುರಹರನೆ ಪಾಂಡವರ ಹಂಬಲ
ಮರೆದು ಕಳೆ ಕರಣಕ್ಕೆ ಖಾತಿಯ ಬಳಸಬೇಡೆಂದ ೧೫

ಅವರು ನಮ್ಮೊಳು ಸರಸವಾಡುವ
ಹವಣದಲ್ಲದೆ ರಾಜ ಕಾರ್ಯವ
ನವಗೆ ಯೋಚಿಸಿ ಕಳುಹಿದುದವ ಮೆಚ್ಚೆ ನಾನಿದನು
ಬವರ ಬೇಕೇ ಬೇಡಿ ಕೊಂಬುದು
ಅವನಿಗಿವನಿಯ ಮಾತ ನೀನಾ
ಡುವರೆ ಪಾಂಡವರೇಕೆ ನೀವೇಕೆಂದು ಖಳ ನುಡಿದ ೧೬

ಮಾವ ಮೊದಲು ಸಹಾಯ ಮಧ್ಯದೊ
ಳಾ ವಿರಾಟನ ಸಖ್ಯ ಕಡೆಯಲಿ
ನೀವು ಮಮ ಪ್ರಾಣಾಹಿಯೆಂಬಿರಿ ನಿಮ್ಮ ಪಾಂಡವರ
ನಾವು ಕಡೆಯಲಿ ಹೊರಗು ನಮಗಿ
ನ್ನಾವ ಭೂಪರ ಸಖ್ಯವಿದ್ದುದು
ದೇವ ನಾಚಿಸಬೇಡ ಸಂಧಿಯ ಮಾತ ಮರೆಯೆಂದ ೧೭

ಮಾಡು ಸಂಧಿಯನೆಮ್ಮ ವಚನಕೆ
ಕೋಡದಿರು ಸವಿಮಾತುಗಳ ನಿನ
ಗಾಡುವವರಿಗೆ ಚಿತ್ತಗೊಡದಿರು ಪಿಸುಣ ಹೊಗಿಸದಿರು
ನಾಡನಾಲಗೆ ಗೆಲೆಯರೆಂಬುದ
ಮಾಡದಿರು ಪಾಂಡವ ನೃಪಾಲರ
ಕೂಡುವಾಳಿಕೆ ಪಥ್ಯ ಕೇಳೆಂದಸುರರಿಪು ನುಡಿದ ೧೮

ನೀತಿಗಾಲಯ ನಿಮ್ಮ ಕುಲ ವಿ
ಖ್ಯಾತವದು ನೆಲೆ ಸಕಲ ಸೌಖ್ಯ
ವ್ರಾತಕಿದು ಸದ್ಬೀಜವೆನಿಸಿತು ಕೌರವಾನ್ವಯವು
ಭೂತಳದ ಲೋಲುಪತೆಯೊಳು ಕುಲ
ಘಾತಕನು ನೀನೆಂಬ ಕೀರ್ತಿಗೆ
ಯೋತು ನೆಲೆಯಾಗದಿರು ಬೇಡಿದೆವೆಂದು ಹರಿ ನುಡಿದ ೧೯

ಧರೆಯ ನೃಪರಿಗೆ ಹಸ್ತಿನಾಪುರ
ದರಮನೆಯ ಬಾಗಿಲಲಿ ಸಮಯವು
ದೊರಕಲಂತದು ಪುಣ್ಯವೆಂಬೀ ಸಾರ್ವಭೌಮತೆಯ
ಸಿರಿಗೆ ಪಾಂಡವರನ್ಯರಾದೊಡೆ
ಮೆರೆಯಲರಿವುದೆ ನಿಮ್ಮ ಸಿರಿ ಕಾ
ತರಿಗತನವನು ಮಾಣು ಕೇಳೆಂದಸುರರಿಪು ನುಡಿದ ೨೦

ಯಮಜ ನಿನಗೊಳ್ಳಿದನು ಪಾರ್ಥನ
ಮಮತೆ ನಿನ್ನಲಿ ಹಿರಿದು ಭೀಮನ
ತಮದ ನುಡಿ ಹಿಂಗಿದವು ನಕುಲನು ನಿನ್ನೊಳೆರಡರಿಯ
ತಮತಮಗೆ ತಮ್ಮೈವರೂ ನಿ
ನ್ನಮಲ ವಚನವ ಹಾರಿಹರು ಉ
ಭ್ರಮಿತತನವನು ಮಾಡದಿರು ಸೋದರರ ಸಲಹೆಂದ ೨೧

ಧರ್ಮಜನ ಕಡು ಮೋಹವೆಂಬುದು
ನಿಮ್ಮ ಚಿತ್ತದೊಳಿರಲಿ ಭೀಮನ
ಹಮ್ಮು ತಮ್ಮೊಳಗಿರಲಿ ಫಲುಗುಣನೊಲವದಂತಿರಲಿ
ನಮ್ಮ ಭೂಮಿಯೊಳರೆಯ ಬೇಡುವ
ರೆಮ್ಮ ಬಂಧುಗಳಲ್ಲ ಸಂಧಿಗೆ
ತಮ್ಮನೊಡಬಡನೆಂದು ದುಶ್ಶಾಸನನ ನೋಡಿದನು ೨೨

ಬಂಧುಕೃತ್ಯದ ಮಾತು ಸೂರ್ಯಂ
ಗಂಧಕಾರವು ಸೇರುವುದೆ ನಿ
ರ್ಬಂಧದಲಿ ನೀವೇಕೆ ನುಡಿವಿರಿ ರಾಜ ಕಾರಿಯವ
ಸಂಧಿಯಾಗದು ಪಾಂಡವರ ಸಂ
ಬಂಧ ನಮಗೇಕೆನುತ ಕರುಣಾ
ಸಿಂಧುವಿನ ಮೊಗ ನೋಡಿ ದುಶ್ಶಾಸನನು ಗರ್ಜಿಸಿದ ೨೩

ಕೆಡಿಸದಿರು ಧೃತರಾಷ್ಟ್ರ ಕುಲದಲಿ
ಕೊಡಲಿಯನು ನೀ ಹಡೆದು ವಂಶವ
ಕೆಡಿಸಿ ಕಳೆದೊಡೆ ಹಾನಿ ವೃದ್ಧಿಗಳೆಲ್ಲ ನಿನಗಹುದು
ನುಡಿಗೆ ಸನುಮತರಾಗಿ ತಾ ಕುಲ
ಗಡಿಯನಿವ ಮುಂದರಿಯ ನೀವಿಂ
ತೊಡಬಡಿಸಿ ಪಾಂಡವರ ಸ್ವಾಮ್ಯವನೀಸಿ ಕೊಡಿಯೆಂದ ೨೪

ಈ ಹರಿಯ ನುಡಿಗೇಳು ದೈವದ
ಮೋಹ ತಪ್ಪಿದ ಬಳಿಕ ಸುಭಟರ
ಸಾಹಸಿಕೆ ಹುರುಳಿಲ್ಲ ನಂಬದಿರೆಮ್ಮ ಬಲುಹುಗಳ
ಬಾಹಿರವ ನೀನಾಡದಿರು ವೈ
ದೇಹಿಯನು ಸೆರೆವೊಯ್ದು ಸ್ವಾಮಿ
ದ್ರೋಹಿಯನು ಹೋಲದಿರು ಕೌರವಯೆಂದನಾ ಭೀಷ್ಮ ೨೫

ನೆಲನ ಬೇಡುವ ಪಾಂಡವರ ಭುಜ
ಬಲದೊಳಗೆ ಕುಂದಿಲ್ಲ ನೀತಿಯ
ತಿಳುಹಲೈತಂದಸುರರಿಪು ಸಾಮಾನ್ಯ ಬಳಸಲ್ಲ
ಇಳೆಯೊಳರ್ಧವನೊಪ್ಪಗೊಡು ಯದು
ಕುಲ ಲಲಾಮನ ನೇಮವನು ನೀ
ಸಲಿಸು ಕೆಡಿಸದಿರೀ ವಿಳಾಸವನೆಂದನಾ ದ್ರೋಣ ೨೬

ಹಲವು ಹೊಲ್ಲೆಹಗಳನು ಪಾಂಡವ
ರೊಳಗೆ ನೆನೆದೆನು ಮುಚ್ಚು ಮರೆಯೇ
ನಿಳೆಯ ಲೋಭದ ಬಗೆಗೆ ನೆಗಳಿದೆ ರಾಜಕಾರಿಯವ
ನೆಲನ ಕೊಂಡೆನು ಜೂಜುಗಾರರ
ವಿಲಗದಲಿ ಪಾಂಡವರ್ಗೆ ಪುನರಪಿ
ಹಳುವವೇ ಶರಣಲ್ಲದಿಲ್ಲೆಲೆ ಕೃಷ್ಣ ಕೇಳೆಂದ ೨೭

ತಾಗುವಪಕೀರತಿಗೆ ಹೇಸುವ
ರಾಗಿ ಸತ್ಯವನುಳುಹಿ ಹಳುವವ
ಭೋಗಿಸಿದೊಡದು ಕುಲಕೆ ಕುಂದೇ ಪಾಂಡು ತನಯರಿಗೆ
ನೀಗಿದರು ವನವಾಸವನು ಸರಿ
ಭಾಗದವನಿಯ ಕೊಂಬ ಛಲವನು
ಹೋಗ ಬಿಡುವನೆ ಭೀಮನೆಂದನು ನಗುತ ಮುರವೈರಿ ೨೮

ಕೊಡು ವೃಕಸ್ಥಳವನು ಕುಶಸ್ಥಳ
ಪೊಡವಿಯಾವಂತಿಯನು ಕುಳವನು
ಕೊಡಿಸಿ ಕಳೆ ಸಿರಿಕರಣದವರಲಿ ವಾರಣಾವತವ
ಕೊಡು ನಿನಗೆ ಮನ ಬಂದುದೊಂದನು
ನಡೆಸಿ ಕೊಡುವೆನು ಪಾಂಡವರನವ
ಗಡೆಯತನ ಬೇಡಿನ್ನು ಕೇಳೆಂದಸುರರಿಪು ನುಡಿದ ೨೯

ಪರಮಪುರುಷನು ಕೃಷ್ಣರಾಯನು
ಕುರುಕುಲದ ಹಿರಿಯನು ನದೀಸುತ
ಪರಮಧನಸಮಚಾಪವಿದ್ಯನು ದ್ರೋಣನವರಿಂದ
ಧರಣಿಪತಿ ಬಲುಹುಳ್ಳವರು ನಿ
ನ್ನರಮನೆಯಲುಂಟೇ ವಿಚಾರಿಸು
ಮರುಳತನ ಬೇಡಿವರ ನುಡಿಗೇಳೆಂದನಾ ವಿದುರ ೩೦

ಬೇಡಿದೊಂದೊಂದೂರು ನಮ್ಮಯ
ನಾಡ ತಲೆಮಂಡೆಗಳು ರಾಜ್ಯದ
ರೂಢಿ ಐದೂರುಗಳ ಬಳವಿಗೆ ಹಸ್ತಿನಾ ನಗರ
ಬೇಡಲರಿವನು ಮಾನನಿಧಿ ಕೊಂ
ಡಾಡಲೇತಕೆ ಧರೆಯನೀರಡಿ
ಮಾಡಿಕೊಂಡ ಮಹಾತ್ಮ ನಿನಗಂಜುವೆನು ನಾನೆಂದ ೩೧

ಕರೆದು ಮೂರಡಿ ನೆಲನ ಧಾರೆಯ
ನೆರೆದ ಬಲಿ ತಳಕಿಳಿದನೆನ್ನೀ
ಧರೆಯೊಳೈದೂರುಗಳನಿತ್ತೆನಗಾವ ಪದವಪುದು
ಪರಮಪುರುಷನು ನೀನು ನಿನಗಾ
ಶರಣು ಹೊಕ್ಕೆನು ಬಂದ ಪಥದಲಿ
ಮರಳಿ ಬಿಜಯಂಗೈವುದೆಂದನು ನಗುತ ಕುರುರಾಯ ೩೨

ಸಲಲಿ ನೀ ಪಾಂಡವರೊಳೆತ್ತಿದ
ಛಲದ ಬಳವಿಗೆಯಕಟ ನಿಮ್ಮಯ
ಬಳಗ ಬದುಕಲಿ ಮತ್ತೆ ನವೆಯಲಿ ಧರ್ಮನಂದನನು
ಜಲಧಿ ಮೇರೆಯ ಮಹಿಯುಳೊಂದೇ
ಸ್ಥಳವನೈವರಿಗೀವುದೆನೆ ಕಳ
ವಳಿಗನವಗಡಿಸಿದನು ಜಡಿದನು ದನುಜವೈರಿಯನು ೩೩

ನೆಲದೊಳರ್ಧವನೀವುದಿಲ್ಲಾ
ಸ್ಥಳವನೈದನು ಮುನ್ನ ಕೊಡೆನೆ
ನ್ನಿಳೆಯ ಭಾಗವನೀಸಕೊಟ್ಟಡೆ ನಿನ್ನ ಮೇಲಾಣೆ
ನೆಲನ ಕಡೆಯಲಿ ಮುಳ್ಳುಮೊನೆಯು
ಚ್ಚಳಿಪ ಧರಣಿಯನಿತ್ತೆನಾದೊಡೆ
ಬಳಿಕ ನೀ ನಗು ಹೋಗು ಕದನವ ಕೊಂಡು ಬಾಯೆಂದ ೩೪

ದನವ ಕಾದುದು ತೀರ್ದುದೇ ಬನ
ಬನಕೆ ತೊಳಲ್ವುದು ಕಡೆಯನೈದಿತೆ
ಮುನಿಗಳೊಳು ಬೊಗಳುಗಳನೆರಗಿಸಿ ಕೊಂಬುದದ ಬಿಸುಟು
ವನನಿಧಿಯನೆಡೆಗೊಂಡು ನಡು ಹಾ
ವಿನಲಿ ಹಕ್ಕೆಯ ಬಿಸುಟು ನಮ್ಮೊಳು
ಮನಕತವ ನೀ ತಿಳುಹಲೋಸುಗ ಬಹರೆ ಹೇಳೆಂದ ೩೫

ಖತಿಯ ಹಿಡಿದನು ಶೌರಿ ಮಣಿಯದ
ಮತಗುಡದ ಫಣಿಕೇತನನ ಕಂ
ಡತುಲಬಲ ಗುರು ಸಿಂಧುತನಯಾದಿಗಳ ಮೊಗ ನೋಡಿ
ವ್ಯತಿಕರವನಿವ ಬಯಸಿ ಬಿಗೆ ಬೇ
ಡುತಿರೆ ಕದನವ ನೆನೆಯೆ ಭೂಪನ
ಸತಿಯ ಕಿವಿಯೊಳಗೋಲೆಯಸ್ಥಿರವರಿವೆ ತಾನೆಂದ ೩೬

ಕಡೆಗೆ ಧೃತರಾಷ್ಟ್ರಾವನೀಶನು
ಮಡದಿ ಸಹಿತಲನಾಥನಾಗಿಯೆ
ಕೆಡುವನೆಂಬುದ ಬಲ್ಲೆನಾ ಪಾಂಡವರ ರಾಜ್ಯದಲಿ
ಪಡಿಗೆ ಪವಮಾನಜನ ಸಮಯವ
ಹಡೆಯದಿಹ ತರುವಾಯಲೀತನು
ನಡೆಸಿ ಕೊಡುವನು ತಪ್ಪದಕಟೆಂದನಾ ವಿದುರ ೩೭

ಮನದ ಸಂಕೇತದಲಿ ದುರಿಯೋ
ಧನನ ಕಟ್ಟಲು ವಿದುರ ಗಂಗಾ
ತನಯ ಧೃತರಾಷ್ಟ್ರಾವನಿಪರಾಲೋಚಿಸಿದ ಹದನ
ಮನದೊಳರಿದನು ಬಳಿಕ ದುಶ್ಶಾ
ಸನನು ದುರಿಯೋಧನಗೆಯಿನಿಬರ
ನೆನಹ ಬಿನ್ನಹ ಮಾಡಿದನು ಖಾತಿಯಲಿ ಕಳವಳಿಸಿ ೩೮

ಹೆತ್ತವರು ಮರುಳಹರೆ ನಾವಿ
ನ್ನೆತ್ತ ತಿರುಗುವೆವಣ್ಣ ದೇವರೆ
ಚಿತ್ತವಿಸಿದಿರೆ ರಾಜಕಾರ್ಯದ ಹದ ವಿಸಂಚಿಸಿತು
ಮುತ್ತಯನ ಕಿರಿಯಯ್ಯನಯ್ಯನ
ಚಿತ್ತ ಕೊಂಕಿತು ಸಾಕು ನಿಂದೆಗೆ
ನುತ್ತಲಗ್ರಜ ಸಹಿತಲೋಲಗದಿಂದ ಹೊರವಂಟ ೩೯

ಮುನಿದು ದುರಿಯೋಧನನು ದುಶ್ಶಾ
ಸನನು ಕೆಲದರಮನೆಯೊಳಾಳೋ
ಚನೆಯ ಮಾಡಿದರಂದು ಸೌಬಲ ಕರ್ಣರೊಡಗೂಡಿ
ದನುಜವೈರಿ ಕುಮಂತ್ರದಲಿ ಬೊ
ಪ್ಪನೊಳು ಖಾತಿಯನಿಕ್ಕಿದನು ಕೈ
ಮನದ ಕಲಿಗಳು ಕಟ್ಟಿ ಕೃಷ್ಣನನೆಂದು ಗಜಬಜಿಸೆ ೪೦

ಎರಡು ಬಲವನು ಮಸೆದು ಕೊಲಿಸುವ
ಭರವೆ ಯಾದವನದು ನಿಧಾನಿಸ
ಲರಿ ನಮಗೆ ಮುರವೈರಿಯಲ್ಲದೆ ಪಾಂಡು ನಂದನರೆ
ತರಿಸಿ ಹುರಿ ನೇಣುಗಳನೀತನ
ಕರವೆರಡನೊಡೆಬಿಗಿವಡವದಿರು
ಕೆರಳಿ ಮಾಡುವುದಾವುದೆಂದನು ಕೌರವರ ರಾಯ ೪೧

ಗಾಳಿಯುಪಶಮಿಸಿದೊಡೆ ವಹ್ನಿ
ಜ್ವಾಲೆ ತಾನೇ ನಿಲುವುದೀತನ
ತೋಳ ಬಿಗಿದೊಡೆ ಬಳಿಕ ಮನಗುಂದುವರು ಪಾಂಡವರು
ಮೇಳವಿಸಿ ನೇಣುಗಳನೆನುತ ನೃ
ಪಾಲನವದಿರು ಗಜಬಜಿಸುವುದ
ನಾಲಿಸುತ ಸಾತ್ಯಕಿಯೊಡನೆ ಕೃತವರ್ಮನರುಹಿದನು ೪೨

ಆಳು ಕುದುರೆಯ ಬಾಗಿಲಿಗೆ ಬರ
ಹೇಳು ಕೈದುವ ಕೊಂಡು ವೀರ ಭ
ಟಾಳಿ ಹತ್ತಿರೆ ನಿಲಲಿ ಕೈವೀಸಿದರೆ ಕವಿಕವಿದು
ಬೀಳ ಬಡಿವುದು ಹೊಕ್ಕು ದಂಡಿನ
ಮೇಲೆ ದಂಡನು ಕಡಿದು ಕುರು ಭೂ
ಪಾಲಕನ ನೊರೆ ನೆತ್ತರಲಿ ನಾದುವುದು ಮೇದಿನಿಯ ೪೩

ಎಂದು ಸುಭಟರಿಗರುಹಿ ಸಾತ್ಯಕಿ
ಬಂದು ಕೃಷ್ಣನ ಕಿವಿಯ ಹತ್ತಿರೆ
ನಿಂದು ವದನವ ಚಾಚಿ ಬಿನ್ನಹ ಮಾಡಿದನು ನಗುತ
ಮಂದಮತಿಗಳು ತಪ್ಪಿದರು ಮನ
ಗುಂದಲಾಗದು ಜೀಯ ಚಿತ್ತೈ
ಸೆಂದಡಸುರಾರಾತಿ ನಗುತವೆ ಭೀಷ್ಮಗಿಂತೆಂದ ೪೪

ಪರಿಣತ ಪ್ರೌಢಿಗಳಿಗಂತಃ
ಕರಣ ನವೆವುದು ಸುಜನರಿಗೆ ನಿ
ಷ್ಠುರತೆಗಲ್ಲದೆ ಮನವನೀಯದು ಮಹಿಯ ಮೂಢಜನ
ಕರಗುವುದು ಶಶಿಕಾಂತ ಚಂದ್ರನ
ಕಿರಣ ತಾಗಲು ವಜ್ರಹತಿ ಗ
ಬ್ಬರಿಸದಲ್ಲದೆ ಗಿರಿಗಳೊಡೆಯುವು ಭೀಷ್ಮ ಕೇಳೆಂದ ೪೫

ದೂತರನು ಕಟ್ಟುವುದು ರಾಯರಿ
ಗೇತರುಚಿತವು ನಮ್ಮ ಕಟ್ಟಲು
ಕಾತರಿಸುತಿದೆ ನಿಮ್ಮ ಮೊಮ್ಮಂದಿರನು ನೀ ಕರೆಸಿ
ಮಾತನಾಡಿಸಿ ನೋಡು ನಮಗೀ
ಭೀತಿ ತಾನಿಲ್ಲೆನಲು ಗಂಗಾ
ಜಾತ ಧೃತರಾಷ್ಟ್ರಂಗೆ ನುಡಿದನು ಕೌರವನ ಹದನ ೪೬

ಅವನಿಪತಿ ಕೇಳಿದನು ಕನಲಿದನು
ಶಿವ ಶಿವೆಂದನು ವಿದುರ ಕರೆ ಕೌ
ರವನು ಮಗನೇ ಮೃತ್ಯುವಲ್ಲಾ ಭರತ ಸಂತತಿಗೆ
ಅವಳ ಬರಹೇಳಿತ್ತ ಮಗನಾ
ಟವನು ನೋಡಲಿ ಹೆತ್ತ ಮೋಹದ
ಹವಣುಗಳ ಬೆಸಗೊಂಬ ಗಾಂಧಾರಿಯನು ಕರೆಯೆಂದ ೪೭

ಜನಪನಾಜ್ಞೆಯ ಮೇಲೆ ದುರಿಯೋ
ಧನನ ತಂದರು ಸಭೆಗೆ ಮತ್ತೀ
ವನಜಮುಖಿಗಿದನೆಂದೊಡಾ ಗಾಂಧಾರಿ ನಡೆತಂದು
ದನುಜವೈರಿಯ ಕಟ್ಟುವೈ ಕೃ
ಷ್ಣನನು ಬಿಗಿವೈ ದಿಟ ಮಗನೆ ಹೆ
ತ್ತನಗೆ ಹರುಷವನಿತ್ತೆಯೆಂದಳು ಮುಳಿದು ಗಾಂಧಾರಿ ೪೮

ನೆಟ್ಟನೆಲೆ ಧೃತರಾಷ್ಟ್ರ ನೃಪ ನೀ
ನಿಟ್ಟ ಕಿಚ್ಚಿದು ಪಾಪಿ ಮಗನನು
ಹುಟ್ಟಿದಂದೇ ಬಿಸುಡದಾದೆವು ಬಾಳುಗೇಡಿಯನು
ಕಟ್ಟುವನು ಗಡ ಕೃಷ್ಣನನು ಮೈ
ಮುಟ್ಟುವನು ಗಡ ಗಗನವನು ಬಲು
ದಿಟ್ಟತನ ತಾನೇನು ಹೇಳುವೆನೆಂದಳಿಂದುಮುಖಿ ೪೯

ದುರುಳ ಮಗನೇ ಕೃಷ್ಣರಾಯನ
ಕೆರಳಿಚುವರೇ ಯಾದವರು ನಮ
ಗೆರವಿಗರೆ ವಸುದೇವನಲಿ ತಾ ಭೇದವೇ ನಿನಗೆ
ದುರುಳತನವಿದು ಬೇಡ ಖುಲ್ಲರ
ನೆರವಿಯೊಳಗಾಡಿದೊಡೆ ತಪ್ಪದು
ನರಕವೆಂದನು ಕುರುಪತಿಗೆ ಧೃತರಾಷ್ಟ್ರ ಭೂಪಾಲ ೫೦

ಎಲೆ ಮರುಳೆ ಧೃತರಾಷ್ಟ್ರ ನಂಜಿನ
ಬಳಗವೀತನ ಬಂಧುಕೃತ್ಯದ
ಬಳಕೆಯಲಿ ನೀ ನಿನ್ನ ಕಂದನ ಬೇಡಿಕೊಳಲೇಕೈ
ಮುಳಿದು ಬಗುಳುವ ನಾಯ್ಗೆ ಚಂದ್ರಮ
ನಳುಕುವನೆ ನರಿಯೊರಲಿದೊಡೆ ಕಳ
ವಳವಹುದೆ ಸಿಂಹಕ್ಕೆಯೆಂದನು ಖಾತಿಯಲಿ ವಿದುರ ೫೧

ನೊರಜು ಹೊಕ್ಕೊಡೆ ಕಲಕುವುದೆ ಸಾ
ಗರದ ಜಲ ನೊಣವೆರಗಿದೊಡೆ ಕುಲ
ಗಿರಿಗಳಲ್ಲಾಡುವವೆ ಕೇಳ್ ಧೃತರಾಷ್ಟ್ರ ಭೂಪತಿಯೆ
ತೆರಳಲರಿವನೆ ಕೊಬ್ಬಿದೊಳ್ಳೆಯ
ಮರಿಗೆ ಗರುಡನು ನಿನ್ನ ಮಕ್ಕಳ
ದುರುಳತನಕಂಜುವನೆ ಮುರರಿಪುವೆಂದನಾ ವಿದುರ ೫೨

ಲೋಕ ಮೈ ಮರೆವಂದು ಜಲಧಿಗ
ಳೌಕಿ ಹಳಚುವ ಹೊತ್ತು ತಾನಿಹ
ನೇಕಮೇವಾದ್ವಿತಿಯ ಪರಮೇಕೈಕಹಂಯೆಂದು
ಏಕಮಾತ್ಮಾಯೆಂದು ವೇದಾ
ನೀಕ ಕೈವಾರಿಸಲು ಮೆರೆವ ನಿ
ರಾಕೃತಿಯ ಪರಬೊಮ್ಮ ರೂಪಿನ ತಾತ ನೋಡೀತ ೫೩

ಈತನಾ ಮಧು ಕೈಟಭನ ಮುರಿ
ದಾತ ಜಲಧಿಯೊಳಿಳಿದು ವೇದವ
ನೀತ ತಂದನು ಜಯನ ವಿಜಯನ ದೈತ್ಯಜನ್ಮವನು
ಈತನೊದೆದನು ಪೌಂಡ್ರಕನನಂ
ದೀತ ಕೊಂದನು ಹಂಸ ಡಿಬಿಕರ
ನೀತನೊರಸಿದನರಸ ಚಿತ್ತೈಸೆಂದನಾ ವಿದುರ ೫೪

ಸಲಿಲಮಯವಾದಖಿಳ ಭುವನಾ
ವಳಿಗಳೊಳಗೆ ವಿರಿಂಚಿಯಾಳುತ
ಮುಳುಗುತೈತಂದಾಲದೆಲೆ ಮಂಚದಲಿ ಪವಡಿಸಿದ
ಹೊಳವು ನೀನಾರೆಂದು ಜಠರದೊ
ಳಿಳಿಯಲಾ ಬ್ರಹ್ಮಾಂಡ ಶತದಲಿ
ಹೊಲಬುಗೆಡೆ ಹೊಕ್ಕುಳಲಿ ಬ್ರಹ್ಮನನೀತನುಗುಳಿದನು ೫೫

ಸೂಚಿಸುವ ಶ್ರುತಿನಿಚಯ ಬರಬರ
ನಾಚಿದವು ವೇದಾಂತನಿಚಯದ
ವಾಚನೆಗಳಳವಳಿದು ನಿಂದುವು ನಿಜವ ಕಾಣಿಸದೆ
ಆಚರಿಸಲಳವಲ್ಲ ಮುನಿಗಳ
ಗೋಚರಕೆ ಮನಗುಡದ ಹರಿಯನು
ನೀಚರರಿಯದೆ ಬಿಗಿಯಲಳವಡಿಸಿದರು ನೇಣುಗಳ ೫೬

ವಿದುರನಿಂತೆನುತಿರಲು ಮಿಂಚಿನ
ಹೊದರು ಹುರಿಗೊಂಡಂತೆ ರವಿಶತ
ಉದುರಿದವು ಮೈಮುರಿದು ನಿಂದಡೆ ದೇವರಂಗದಲಿ
ಸದೆದುದಾಸ್ಥಾನವನು ಘನ ತೇ
ಜದ ಲಹರಿ ಲೀಲೆಯಲಿ ಹರಿ ತೋ
ರಿದನು ನಿರುಪಮ ವಿಶ್ವರೂಪವನಾ ಮಹಾಸಭೆಗೆ ೫೭

ಚರಣದುಂಗುಟದಲ್ಲಿ ದೇವರು
ತುರುಗಿದರು ನೊಸಲಿನಲಿ ಕಮಲಜ
ನುರದಲಗ್ಗದ ರುದ್ರನಾಸ್ಯದೊಳಗ್ನಿ ವಾಯುಗಳು
ಬೆರಳಲಿಂದ್ರಾದಿಗಳು ನಯನಾಂ
ಬುರುಹದಲಿ ರವಿ ನಾಭಿಯಲಭವ
ವರ ಭುಜಾಗ್ರದೊಳಖಿಳ ದಿಗುಪಾಲಕರು ರಂಜಿಸಿತು ೫೮

ಸುರರು ಖಚರರು ಕಿನ್ನರರು ಕಿಂ
ಪುರುಷರನುಪಮ ಸಿದ್ಧ ವಿದ್ಯಾ
ಧರರು ವಸುಗಳು ಮನುಗಳಾದಿತ್ಯರು ಭುಜಂಗಮರು
ಗರುಡ ಗಂಧರ್ವಾಶ್ವಿನೀ ದೇ
ವರು ಸುವಿಶ್ವೇ ದೇವರಖಿಳಾ
ಪ್ಸರೆಯರೆಸೆದರು ರೋಮ ರೋಮದ ಕುಳಿಯ ಚೌಕದಲಿ ೫೯

ಬಲದ ಭುಜದಲಿ ಪಾರ್ಥನೆಡದಲಿ
ಹಲಧರನು ಚರಣದಲಿ ಧರ್ಮಜ
ಕಲಿ ವೃಕೋದರ ನಕುಲ ಸಹದೇವಾದಿ ಯಾದವರು
ಲಲಿತ ಕಾಂತಿಯೊಳಖಿಳ ತಾರಾ
ವಳಿಗಳಮಲಗ್ರಹವಿರಲು ತೊಳ
ತೊಳಗಿ ಮೆರೆದನು ವಿಶ್ವರೂಪ ವಿಹಾರಿ ಮುರವೈರಿ ೬೦

ಕಿವಿಗಳಲಿ ಕಂಗಳಲಿ ನಾಸಾ
ವಿವರದಲಿ ಹೊಗೆ ಮುಸಗಿ ದಳ್ಳುರಿ
ಕಿವಿದುದಾಕಾಶವನು ಕವಿದುದು ಕಾಂತಿ ದೆಸೆದೆಸೆಗೆ
ರವಿಯ ತಗಡೆನೆ ತಳಿತವಾಯುಧ
ನಿವಹ ಸಾಸಿರಭುಜದ ಬಹುಳತೆ
ಯುವಗಡಿಸಿ ವೈಕುಂಠನೆಸೆದನು ವಿಶ್ವರೂಪವಲಿ ೬೧

ಅರಳಮಳೆ ಸೂಸಿದುವು ದುಂದುಭಿ
ಮೊರೆದುಕಾಶದಲಿ ಮುದದಲಿ
ಧರಣಿ ಬಿದಿರಿತು ತನುವನುಕ್ಕಿದುದಬುಧಿ ದೆಸೆದೆಸೆಗೆ
ಕರಿ ಕಮಠರುಬ್ಬಾಳುತನ ಮಿ
ಕ್ಕಿರೆ ಮಹಾದ್ಭುತವಾಯ್ತು ಕಂಡುದು
ಹರಿಯ ರೂಪವನೊಬ್ಬ ಕೌರವನಲ್ಲದುಳಿದವರು ೬೨

ತಳುಕನುಗಿದೀಡಾಡಿ ಪರಿಣತ
ಪುಳಕದಲಿ ನನೆನನೆದು ಹರುಷದ
ಜಲಧಿಯಲಿ ಮನ ಮುಳುಗಿ ಭಕುತಿಯ ಭಾರದಲಿ ಕುಸಿದು
ಅಳುಕಿ ತಮತಮಗೆದ್ದು ಮುನಿ ಸಂ
ಕುಲ ಸಹಿತ ಗಾಂಗೇಯ ಕೃಪ ನಿ
ರ್ಮಲ ವಿದುರ ಗುರು ಸಂಜಯಾದಿಗಳೆರಗಿದರು ಪದಕೆ ೬೩

ಒಳಗೆ ಹೊಳೆದನು ಬಾಹ್ಯದಲಿ ಪ್ರ
ಜ್ವಲಿಸಿದನು ತಾನಲ್ಲದನ್ಯರ
ಬಳಕೆ ಬೇರೊಂದಿಲ್ಲದಂತಿರೆ ಕೂಡೆ ತೋರಿದನು
ಒಳಗೆ ಬಿಗಿವೆವೊ ಹೊರಗೆ ಕೃಷ್ಣನ
ಸಿಲುಕಿಸುವೆವೋ ತಿಳಿಯೆ ಕೃಷ್ಣರು
ಹಲಬರಿಹರಾರಾರ ಕಟ್ಟುವೆವೆಂದರಾ ಖಳರು ೬೪

ಅನುಪಮಾದ್ವಯದಲ್ಲಿ ಮುಳ್ಳಿನ
ಮೊನೆಗೆ ಮೋಹುವರಿಲ್ಲ ತೆರಹಂ
ಬಿನಿತು ಪರಿಪೂರ್ಣದಲಿ ಸಭೆಯಣುಮಾತ್ರ ರೂಪದಲಿ
ಮನದ.ಬಗೆ ಮುಟ್ಟದ ಮಹಾ ಮಹಿ
ಮನನು ಕಟ್ಟುವೆವೆಂತೆನುತ ತನ
ತನಗೆ ಕರ್ಣಾದಿಗಳು ಕೈಗಳ ಕದಪ ತೂಗಿದರು ೬೫

ವಿಮಳ ಕರುಣಾಸಿಂಧು ನೀನನು
ಪಮ ಚರಿತ್ರನು ನಿಮ್ಮಡಿಯ ಪದ
ಕಮಲ ದರುಶನದಿಂದ ಹಿಂಗಿದವಘದ ರಾಶಿಗಳು
ಸಮತೆಯಲಿ ನೀ ನೋಡು ಶರಣರ
ಮಮತೆ ಬೇಹುದು ಜೀಯ ಲಕ್ಷ್ಮೀ
ರಮಣ ಕೃಪೆ ಮಾಡೆನುತ ಮೈಯಿಕ್ಕಿದಳು ಗಾಂಧಾರಿ ೬೬

ಮಾನ ನಿನ್ನದು ಭಕುತ ಜನದಪ
ಮಾನ ನಿನ್ನದು ನಿನ್ನ ಶರಣರ
ಹಾನಿ ವೃದ್ಧಿಗಳೆಲ್ಲ ನಿನ್ನದು ಬೇರೆ ಗತಿಯುಂಟೆ
ಆನತರ ತೇಜೋಭಿಮಾನವ
ನೀನೊಲಿದು ಸಲಹೆಂದು ಮುದದಲಿ
ಭಾನುಮತಿ ಮೈಯಿಕ್ಕಿದಳು ಮುರಹರನ ಚರಣದಲಿ ೬೭

ಕಂಗಳನು ಕರುಣಿಸಿದನಂಧ ನೃ
ಪಂಗೆ ಬಳಿಕೀ ಕೃಷ್ಣರಾಯನ
ಮಂಗಳ ಶ್ರೀಮೂರ್ತಿಯನು ಮನದಣಿಯೆ ತಾ ನೋಡಿ
ಕಂಗಳಡಗಲಿ ದೇವ ನಿಮ್ಮಾ
ಯಂಗವಟ್ಟವ ಕಂಡು ಬಳಿಕೀ
ಕಂಗಳಿತರವ ಕಾಣಲಾಗದು ಕೃಪೆಯ ಮಾಡೆಂದ ೬೮

ತಾತ ಹೆದರದಿರೀ ಮುಕುಂದನ
ಕೈತವಕೆ ಬೆಚ್ಚದಿರು ಸಂಧಿಯ
ಮಾತು ತಾನಿದು ಹೃದಯವೇ ಬೆಸಗೊಳ್ಳಿ ಮುರಹರನ
ಈತನಂತರ್ಯಾಮಿ ಜೀವ
ವ್ರಾತದಲಿ ಜನಜನಿತವಿದು ಜಗ
ವೀತನಾಜ್ಞೆಯೊಳೊಲವುದೆಂದನು ಕೌರವರ ರಾಯ ೬೯

ಸಂಗಿಯೆನಿಸನು ಜಗವ ಹುಟ್ಟಿಸಿ
ನುಂಗಿದೊಡೆ ನಿಷ್ಕರುಣಿಯೆನಿಸನು
ಅಂಗರಕ್ಷೆಯ ಮಾಡಿ ಮೋಹಿತನಲ್ಲ ಮೂಜಗಕೆ
ಜಂಗಮ ಸ್ಥಾವರಕೆ ಚೈತ
ನ್ಯಾಂಗರಕ್ಷನು ಘನಕೆ ಘನ ಅಣು
ವಿಂಗೆ ತಾನಣುವೆನಿಪ ಪರತರವಸ್ತು ನೋಡೀತ ೭೦

ಎನ್ನ ಹೃದಯದೊಳಿರ್ದು ಮುರಿವನು
ಗನ್ನದಲಿ ಸಂಧಿಯನು ರಿಪುಗಳೊ
ಳಿನ್ನು ತನ್ನವರವರೊಳಿರ್ದಾ ನುಡಿವನೀ ಹದನ
ಭಿನ್ನನಂತಿರೆ ತೋರಿ ಭಿನ್ನಾ
ಭಿನ್ನನೆನಿಸಿಯೆ ಮೆರೆವ ತಿಳಿಯಲ
ಭಿನ್ನನೈ ಮುರವೈರಿ ನಾವಿನ್ನಂಜಲೇಕೆಂದ ೭೧

ಹಳಚುವುವು ಹಾಹೆಗಳು ಸೂತ್ರವ
ನಲುಗಿದೊಡೆ ತತ್ಪುಣ್ಯ ಪಾಪಾ
ವಳಿಗಳಾ ಹಾಹೆಗಳಿಗುಂಟೇ ಸೂತ್ರಧರನಿರಲು
ಕೊಲುವನನ್ಯರನನ್ಯರಿಂದವೆ
ಕೊಲಿಸುವನು ಕಮಲಾಕ್ಷನಲ್ಲದೆ
ಉಳಿದ ಜೀವವ್ರಾತಕೀ ಸ್ವಾತಂತ್ರ್ಯವಿಲ್ಲೆಂದ ೭೨

ಇಳಿದನವನಿಗೆ ಧಾರುಣಿಯ ಹೊರೆ
ಗಳೆಯಲೋಸುಗವಿಲ್ಲಿ ನಮ್ಮೊಳ
ಗೊಳಗೆ ವೈರವ ಬಿತ್ತಿ ಬರಿಕೈವನು ಮಹಾಬಲವ
ಥಳಕೆ ಮಣಿಯದೆ ರಾವಣಾದಿಗ
ಳಳಿದರಿದಲಾ ಕೀರ್ತಿಕಾಯ ವಿ
ದಳಿವುದಗ್ಗದ ಕೀರ್ತಿಯುಳಿವುದು ಅಂಜಲೇಕೆಂದ ೭೩

ನಾವು ಸಂಧಿಯನೊಲಿವೆವೆಮ್ಮಯ
ಭಾವದಲಿ ಹುಳುಕಿಲ್ಲ ಸಂಪ್ರತಿ
ದೇವನಭಿಮತವಲ್ಲ ಬಲ್ಲೆನು ಮುರಹರನ ಬರವ
ನೀವು ಮೇಗರೆಯರಿತದವರೀ
ರಾವಣಾರಿಯ ಬಗೆಯ ಬಲ್ಲೆನು
ಸಾವನೀತನ ಕೈಯ ಬಾಯಲಿ ಭೀತಿ ಬೇಡೆಂದ ೭೪

ಮಣಿದು ಬದುಕುವನಲ್ಲ ಹಗೆಯಲಿ
ಸೆಣಸಿ ಬಿಡುವವನಲ್ಲ ದಿಟ ಧಾ
ರುಣಿಯ ಸಿರಿಗಳುಪುವವನಲ್ಲಳುಕಿಲ್ಲ ಕಾಯದಲಿ
ರಣ ಮಹೋತ್ಸವವೆಮ್ಮ ಮತ ಕೈ
ದಣಿಯ ಹೊಯ್ವಾಡುವೆನು ಕೃಷ್ಣನ
ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲೆಂದ ೭೫

ಎನಲು ನಸುನಗುತಸುರರಿಪು ಮು
ನ್ನಿನ ಮನುಷ್ಯಾಕಾರವನು ಮಗು
ಳನುಕರಿಸಿ ಧೃತರಾಷ್ಟ್ರ ಭೀಷ್ಮರಿಗೆಂದನೀ ಹದನ
ಘನ ಸುಯೋಧನ ಪಾಂಡುವಿನ ನಂ
ದನರೊಳಾದ ವಿವಾದ ನಮಗೇ
ಕೆನುತ ರಾಜಾಲಯವನಸುರಧ್ವಂಸಿ ಹೊರವಂಟ ೭೬

ಬಂದು ವಿದುರನ ಮನೆಗೆ ದೇವ ಮು
ಕುಂದ ಕುಂತಿಯ ಕರೆದು ನಿನ್ನಯ
ಕಂದರೈವರ ಮೇಲೆ ಕೌರವ ನೃಪನ ಖತಿ ಹಿರಿದು
ಇಂದು ಮುರಿದುದು ಸಂಧಿ ನಿನ್ನಯ
ಕಂದ ಕರ್ಣನ ಬೇಡಿಕೊಳು ನೀ
ನೆಂದು ನೇಮಿಸಿ ಮರಳಿದನು ಮುರವೈರಿ ಹರುಷದಲಿ ೭೭

ವಿದುರ ಭಾರದ್ವಾಜ ಗೌತಮ
ನದಿಯ ಮಗ ಧೃತರಾಷ್ಟ್ರನಾತನ
ಸುದತಿ ಕರ್ಣ ವಿಕರ್ಣ ಶಲ್ಯ ಸುಬಾಹು ಗುರುಸುತರು
ವದನದುತ್ಸವವಡಗಿ ಕೃಷ್ಣನ
ಪದವನೋಲೈಸುತ್ತ ಬರೆ ಕರು
ಣದಲಿ ಮುರಹರನವರನುಚಿತೋಕ್ತಿಯಲಿ ಬೀಳ್ಕೊಟ್ಟ ೭೮

ನಯದೊಳೇಕಾಂತದಲಿ ಸಲೆ ತೋ
ರಿಯೆ ನುಡಿವುದವನಾಶೆಯನು ನೀವ್
ಬಯಸಲಾಗದು ಹಿತವನೇ ಮಾಡುವುದು ಕುರುಕುಲಕೆ
ನಿಯತವಿದು ಪಾಂಡವರೊಡನೆ ಸಂ
ಧಿಯೆ ಸರಸ ಸಮರಾಂಗವೀಯ
ನ್ವಯಕೆ ನಿರ್ಣಯವೆಂದು ನೀವಾತಂಗೆ ಹೇಳುವುದು ೭೯

ಎಂದು ಗಾಂಗೇಯಾದಿಗಳನರ
ವಿಂದನಾಭನು ಬೀಳುಕೊಟ್ಟನು
ನಿಂದು ತಾ ರವಿಸುತನ ಕರೆದನು ರಥದ ಹೊರೆಗಾಗಿ
ಬಂದು ಕಿರಿದೆಡೆಗಾಗಿ ಕಳುಹುವು
ದೆಂದು ನೇಮಿಸಿ ಬಳಿಕ ತಾಪಸ
ವೃಂದವನು ಕಾರುಣ್ಯನಿಧಿ ಕಳುಹಿದ ತಪೋವನಕೆ ೮೦

## ಹತ್ತನೆಯ ಸಂಧಿ

ಸೂ. ಸೆಣಸುವದಟರ ಗಂಡ ಸಮರಾಂ
ಗಣ ಕಮಲ ಭೇರುಂಡನಾ ದಿನ
ಮಣಿಯ ಮಗನುದ್ದಂಡ ಕರ್ಣನ ಕಂಡಳಾ ಕುಂತಿ

ಒಲಿದವರನುಜ್ಜೀವಿಸುವ ಬಗೆ
ಬಲುಹು ಮುರಮಥನಂಗೆ ಮುನಿದೊಡೆ
ತಲೆಯ ಬರೆಹವ ತೊಡೆವನಲ್ಲದೆ ಬಳಿಕ ಸೈರಿಸನು
ನಳಿನನಾಭನು ಭಜಕರಿಗೆ ಬೆಂ
ಬಳಿಯ ಬಿರುದನು ಭೇದದಲಿ ಕುರು
ಕುಲವ ಕೊಂದನು ಕೇಳು ಜನಮೇಜಯ ಮಹೀಪಾಲ ೧

ಇನತನೂಜನ ಕೂಡೆ ಮೈದುನ
ತನದ ಸರಸವನೆಸಗಿ ರಥದೊಳು
ದನುಜರಿಪು ಬರಸೆಳೆದು ಕುಳ್ಳಿರಿಸಿದನು ಪೀಠದಲಿ
ಎನಗೆ ನಿಮ್ಮಡಿಗಳಲಿ ಸಮಸೇ
ವನೆಯೆ ದೇವ ಮುರಾರಿಯಂಜುವೆ
ನೆನಲು ತೊಡೆ ಸೋಂಕಿನಲಿ ಸಾರಿದು ಶೌರಿಯಿಂತೆಂದ ೨

ಭೇದವಿಲ್ಲೆಲೆ ಕರ್ಣ ನಿಮ್ಮೊಳು
ಯಾದವರು ಕೌರವರೊಳಗೆ ಸಂ
ವಾದಿಸುವಡನ್ವಯದ ಮೊದಲೆರಡಿಲ್ಲ ನಿನ್ನಾಣೆ
ಮೇದಿನೀಪತಿ ನೀನು ಚಿತ್ತದೊ
ಳಾದುದರಿವಿಲ್ಲೆನುತ ದಾನವ
ಸೂದನನು ರವಿಸುತನ ಕಿವಿಯಲಿ ಬಿತ್ತಿದನು ಭಯವ ೩

ದಾನವಾಂತಕ ಬೆಸಸು ವಂಶ ವಿ
ಹೀನನನು ನಿಮ್ಮಡಿಗಳೊಡನೆ ಸ
ಮಾನಿಸುವರೇ ಸಾಕೆನುತ ರವಿಸೂನು ಕೈಮುಗಿಯೆ
ಮಾನನಿಧಿ ನಿನ್ನಾಣೆ ಬಾರೈ
ನೀನು ನಮ್ಮೆಲ್ಲರ ಹವಣೆ ವರ
ಭಾನುವಂಶಲಲಾಮ ನೀ ರಾಮಂಗೆ ಸರಿಯೆಂದ ೪

ಕಳೆದು ಕೊಂಡನು ವೀಳೆಯವನಂ
ಜುಳಿಯಲಾತಂಗಿತ್ತು ಕರ್ಣನ
ಕೆಲಕೆ ಬರಸೆಳೆದವನ ಕರದೊಳು ಕರತಳವನಿಕ್ಕಿ
ಎಲೆ ದಿವಾಕರತನಯ ನಿನ್ನಯ
ಕುಲವನರಿಯೆಯಲಾ ಸುಯೋಧನ
ನಲಿ ವೃಥಾ ಸೇವಕತನದಲಿಹುದುಚಿತವಲ್ಲೆಂದ ೫

ಲಲನೆ ಪಡೆದೀಯೈದು ಮಂತ್ರಂ
ಗಳಲಿ ಮೊದಲಿಗ ನೀನು ನಿನ್ನಯ
ಬಳಿ ಯುಧಿಷ್ಠಿರದೇವ ಮೂರನೆಯಾತ ಕಲಿಭೀಮ
ಫಲುಗುಣನು ನಾಲ್ಕನೆಯಲೈದನೆ
ಯಲಿ ನಕುಲ ಸಹದೇವರಾದರು
ಬಳಿಕ ಮಾದ್ರಿಯಲೊಂದು ಮಂತ್ರದೊಳಿಬ್ಬರುದಿಸಿದರು ೬

ಆದರಿನಾ ಪಾಂಡವರಲೈವರ
ಮೊದಲಿಗನು ನೀನಿರಲು ಧರಣಿಯ
ಕದನವಿತ್ತಂಡಕ್ಕೆ ಕಾಮಿತವಲ್ಲ ಭಾವಿಸಲು
ಇದು ನಿಧಾನವು ಕರ್ಣ ನಿನ್ನ
ಭ್ಯುದಯವನೆ ಬಯಸುವೆನು ನಿನ್ನಯ
ಪದಕೆ ಕೆಡಹುವೆನೈವರನು ನಡೆ ತನ್ನ ಸಂಗಾತ ೭

ನಿನಗೆ ಹಸ್ತಿನಪುರದ ರಾಜ್ಯದ
ಘನತೆಯನು ಮಾಡುವೆನು ಪಾಂಡವ
ಜನಪ ಕೌರವ ಜನಪರೋಲೈಸುವರು ಗದ್ದುಗೆಯ
ನಿನಗೆ ಕಿಂಕರವೆರಡು ಸಂತತಿ
ಯೆನಿಸಲೊಲ್ಲದೆ ನೀನು ದುರಿಯೋ
ಧನನ ಬಾಯ್ದಂಬುಲಕೆ ಕೈಯಾನುವರೆ ಹೇಳೆಂದ ೮

ಎಡದ ಮೈಯಲಿ ಕೌರವೇಂದ್ರರ
ಗಡಣ ಬಲದಲಿ ಪಾಂಡು ತನಯರ
ಗಡಣವಿದಿರಲಿ ಮಾದ್ರ ಮಾಗಧ ಯಾದವಾದಿಗಳು
ನಡುವೆ ನೀನೊಲಗದೊಳೊಪ್ಪುವ
ಕಡು ವಿಲಾಸವ ಬಿಸುಟು ಕುರುಪತಿ
ನುಡಿಸೆ ಜೀಯ ಹಸಾದವೆಂಬುದು ಕಷ್ಟ ನಿನಗೆಂದ ೯

ಶೌರಿಯದಲಿದಿರಿಲ್ಲ ಕುಲದಲಿ
ಸೂರಿಯನ ಮಗನೊಡನೆ ಹುಟ್ಟಿದ
ವೀರರೈವರು ಪಾಂಡುತನಯರು ನಿನ್ನ ವೈಭವಕೆ
ಆರು ಸರಿಯೈ ಕರ್ಣ ನಡೆ ನಡೆ
ಧಾರುಣೀಪತಿಯಾಗು ನೀನಿರೆ
ವೈರವಿತ್ತಂಡಕ್ಕೆ ಬಳಿಕಿಲ್ಲೆಂದನಸುರಾರಿ ೧೦

ಕೊರಳ ಸೆರೆ ಹಿಗ್ಗಿದವು ದೃಗುಜಲ
ಉರವಣಿಸಿ ಕಡು ನೊಂದನಕಟಾ
ಕುರುಪತಿಗೆ ಕೇಡಾದುದೆಂದನು ಮನದೊಳಗೆ
ಹರಿಯ ಹಗೆ ಹೊಗೆದೋರದುರುಹದೆ
ಬರಿದೆ ಹೋಹುದೆ ತನ್ನ ವಂಶವ
ನರುಹಿ ಕೊಂದನು ಹಲವು ಮಾತೇನೆಂದು ಚಿಂತಿಸಿದ ೧೧

ಕಾದಿ ಕೊಲುವೊಡೆ ಪಾಂಡುಸುತರು ಸ
ಹೋದರರು ಕೊಲಲಿಲ್ಲ ಕೊಲ್ಲದೆ
ಕಾದೆನಾದೊಡೆ ಕೌರವಂಗವನಿಯಲಿ ಹೊಗಲಿಲ್ಲ
ಭೇದದಲಿ ಹೊಕ್ಕಿರಿದನೋ ಮಧು
ಸೂದನಕಟಕಟೆನುತ ಘನ ಚಿಂ
ತೋದಧಿಯುಲವ್ವಪೊಲು ಮೌನದೊಳಿದ್ದನಾ ಕರ್ಣ ೧೨

ಏನು ಹೇಳೈ ಕರ್ಣ ಚಿತ್ತ
ಗ್ಲಾನಿ ಯಾವುದು ಮನಕೆ ಕುಂತೀ
ಸೂನುಗಳ ಬೆಸಕೈಸಿ ಕೊಂಬುದು ಸೇರದೇ ನಿನಗೆ
ಹಾನಿಯಿಲ್ಲನ್ನಾಣೆ ನುಡಿ ನುಡಿ
ಮೌನವೇತಕೆ ಮರುಳುತನ ಬೇ
ಡಾನು ನಿನ್ನಪದೆಸೆಯ ಬಯಸುವನಲ್ಲ ಕೇಳೆಂದ ೧೩

ಮರುಳು ಮಾಧವ ಮಹಿಯ ರಾಜ್ಯದ
ಸಿರಿಗೆ ಸೋಲುವನಲ್ಲ ಕೌಂತೇ
ಯರು ಸುಯೋಧನರೆನಗೆ ಬೆಸಕೈವಲ್ಲಿ ಮನವಿಲ್ಲ
ಹೊರೆದ ದಾತಾರಂಗೆ ಹಗೆವರ
ಶಿರವನರಿದೊಪ್ಪಿಸುವೆನೆಂಬೀ
ಭರದೊಳಿರ್ದೆನು ಕೌರವೇಂದ್ರನ ಕೊಂದೆ ನೀನೆಂದ ೧೪

ಒಡನೆ ಹುಟ್ಟಿದೆವೆಂಬ ಕಥನವ
ನೆಡೆಗುಡದೆ ಬಣ್ಣಿಸಿದೆ ವಿಜಯನ
ಗಡುಬಾಣಕೆ ಬಲಿಯನಿಕ್ಕುವ ಹದನ ಮಾಣಿಸಿದೆ
ನುಡಿದು ಫಲವೇನಿನ್ನು ಕೇಳೆ
ನ್ನೊಡೆಯನಾದಂತಹೆನು ಬಾರೆನು
ಪೊಡವಿಯಲಿ ನೀ ಹರಹಿಕೊಳು ನಿನ್ನವರ ನಿಲಿಸೆಂದ ೧೫

ವೀರ ಕೌರವರಾಯನೇ ದಾ
ತಾರನಾತನ ಹಗೆಯ ಹಗೆ ಕೈ
ವಾರವೇ ಕೈವಾರವಾದಂತಹೆನು ಕುರುನೃಪತಿ
ಶೌರಿ ಕೇಳೈ ನಾಳೆ ಸಮರದ
ಸಾರದಲಿ ತೋರುವೆನು ನಿಜ ಭುಜ
ಶೌರಿಯದ ಸಂಪನ್ನತನವನು ಪಾಂಡುತನಯರಲಿ ೧೬

ಹಲವು ಮಾತೇನಖಿಳ ಜನಕೆ
ನ್ನುಳಿವು ಸೊಗಸದು ಕೌರವೇಶ್ವರ
ನೊಲುಮೆ ತಪ್ಪಿಸಿ ಭುವನದೊಳಗೆನಗಾಪ್ತ ಜನವಿಲ್ಲ
ಸಲಹಿದನು ಮನ್ನಣೆಯಲೆನಗ
ಗ್ಗಳಿಕೆಯಲ್ಲದೆ ಹೀನ ವೃತ್ತಿಯ
ಬಳಸಿ ನಡೆಸನು ಕೌರವೇಂದ್ರನನೆಂತು ಮರೆದಪೆನು ೧೭

ನೋಡಿ ದಣಿಯನು ಬಿರುದ ಹೊಗಳಿಸಿ
ಹಾಡಿ ದಣಿಯನು ನಿಚ್ಚಲುಚಿತವ
ಮಾಡಿ ತಣಿಯನು ಮಾನನಿಧಿಯನದೆಂತು ಮರೆದಪೆನು
ಕಾಡಲಾಗದು ಕೃಷ್ಣ ಖಾತಿಯ
ಮಾಡಲಾಗದು ಬಂದೆನಾದೊಡೆ
ರೂಢಿ ಮೆಚ್ಚದು ಕೌರವನ ಹಗೆ ಹರಿಬ ತನಗೆಂದ ೧೮

ಅರುಣಜಲದಾಜ್ಯದಲಿ ಬಂಬಲು
ಗರುಳ ಚರುವಿನಲೆಲುವಿನೊಟ್ಟಿಲ
ಬೆರಳ ಸಮಿಧೆಯಲಡಗಿನಖಿಳಾಹುತಿಯ ರಚನೆಯಲಿ
ನರಕಪಾಲದ ಪಾತ್ರೆಗಳ ತಿಲ
ದೊರಳೆಗಳ ಕೇಶೌಘ ದರ್ಭಾಂ
ಕುರಹದಲಾಹವ ಯಜ್ಞ ದೀಕ್ಷಿತನಹೆನು ತಾನೆಂದ ೧೯

ಮಾರಿಗೌತಣವಾಯ್ತು ನಾಳಿನ
ಭಾರತವು ಚತುರಂಗ ಬಲದಲಿ
ಕೌರವನ ಋಣ ಹಿಂಗೆ ರಣದಲಿ ಸುಭಟ ಕೋಟಿಯನು
ತೀರಿಸಿಯೆ ಪತಿಯವಸರಕ್ಕೆ ಶ
ರೀರವನು ನೂಕುವೆನು ನಿನ್ನಯ
ವೀರರೈವರ ನೋಯಿಸೆನು ರಾಜೀವಸಖನಾಣೆ ೨೦

ಎನಲು ಕರ್ಣನ ದೃಢವ ಕಂಡನು
ಮನದೊಳುತ್ಸಾಹಿಸಿದನಾದೊಡೆ
ತನಯರೈವರ ಹದನು ನಿನ್ನದು ಬಲುಹ ಮಾಡುವೊಡೆ
ಮನಕೆ ಖತಿಯಹುದರುಹದಿರ್ದೊಡೆ
ತನಗೆ ಗುಣವಲ್ಲೆಂಬ ಕಾರಣ
ವಿನಿತನೊಡ್ಡೈಸಿದೆನು ನೀ ಸುಖಿಯಾಗು ಹೋಗೆಂದ ೨೧

ಬಂದರೊಳ್ಳಿತು ಬಾರದಿದ್ದೊಡೆ
ಕಂದ ಕೇಳ್ಮ ಮಧುರ ವಚನದಿ
ಮಂದಮತಿಯನು ತಿಳುಹಿ ತಮ್ಮಂದಿರಿಗೆ ರಾಜ್ಯವನು
ಇಂದು ಕೊಡಿಸುವುದುಚಿತ ಸಂಪ್ರತಿ
ಗಿಂದು ಸೇರಿಸು ನಿನ್ನ ಮಾತನು
ಹಿಂದುಗಳೆಯಂನು ಕೌರವೇಶ್ವರನೆಂದನಸುರಾರಿ ೨೨

ಮಸೆದುದಿತ್ತಂಡಕ್ಕೆ ಮತ್ಸರ
ವಸಮ ಸಂಗರವೀಗ ನೀತಿಯ
ನುಸುರಿದರೆ ಮನಗಾಣನೇ ಕೌರವ ಮಹೀಶ್ವರನು
ವಿಸಸನದ ಕಟ್ಟಾಳು ಮಂತ್ರವ
ನೆಸಗಲಾಗದು ತನ್ನ ವೀರಕೆ
ಮಸುಳಹದು ಮುರವೈರಿ ಸಂಧಿಯನರಿಯೆ ನಾನೆಂದ ೨೩

ಕಳುಹಬೇಹುದು ದೇವ ದಿನಪತಿ
ಇಳಿದನಪರಾಂಬುಧಿಗೆ ಸಂಪ್ರತಿ
ಯುಳಿದ ಹೊತ್ತಿಂದೀಗ ನೆಟ್ಟನೆ ನೀವು ಪಾಂಡವರು
ಹುಲುಸರವಿ ಹಾವಹುದು ಹುತ್ತಿನ
ತಲೆಯುಲಿರಲಜ್ಞರಿಗೆ ಹಿಸುಣರ
ಬಳಿಕೆ ಹೊಗುವುದು ಕಳುಹಬೇಕೆಂದೆರಗಿದನು ಕರ್ಣ ೨೪

ಬೀಳುಕೊಂಡನು ಮನೆಗೆ ಬಂದು ವಿ
ಶಾಲಮತಿ ಚಿಂತಿಸಿದನಾ ಸಿರಿ
ಲೋಲ ಮಾಡಿದ ತಂತ್ರ ಮನದಲಿ ನಟ್ಟು ಬೇರೂರಿ
ಕಾಳುಮಾಡಿದನಕಟ ಕೌರವ
ಬಾಳಲರಿಯದೆ ಕೆಟ್ಟನೀ ಗೋ
ಪಾಲ ಬರಿದೇ ಬಿಡನು ಜೀವವ ಕೊಳ್ಳದಿರನೆಂದ ೨೫

ವೀರ ರವಿಸುತನೊಂದು ದಿನ ರವಿ
ವಾರದಲಿ ಪರಿತೋಷ ಮಿಗೆ ಭಾ
ಗೀರಥೀ ತೀರದಲಿ ತಾತಂಗರ್ಘ್ಯವನು ಕೊಡುತ
ಸಾರ ಮಂತ್ರವ ಜಪಿಸುತಿರಲೌ
ದಾರಿಯದ ಸುರತರುವ ಕುಂತೀ
ನಾರಿ ಕಾಣಲು ಬಂದಳಾತ್ಮಜನಿದ್ದ ನದಿಗಾಗಿ ೨೬

ಬರಲು ತಾಯ್ತಿದಿರಾಗಿ ರವಿಸುತ
ನಿರದೆ ಬಂದನು ದಂಡದಂತಿರೆ
ಚರಣದಲಿ ಮೈಯಿಕ್ಕಲಾತನ ನೊಸಲ ನೆಗಹಿದಳು
ಬರಸೆಳೆದು ಬಿಗಿದಪ್ಪಿದಳು ನೀ
ರುರವಣಿಸಿದವು ನಯನದಲಿ ಸೆರೆ
ಕೊರಳಿಗೌಕಿ ತಾನಳಲಿನಬುಧಿಯೊಳಾಳ್ದಳಾ ಕುಂತಿ ೨೭

ಆ ಸಮಯದಲಿ ಗಂಗೆ ನಾರೀ
ವೇಷದಲಿ ನಡೆತಂದಳೆಲೆ ಕುಂ
ತೀ ಸತಿಯೆ ಕೈಯೆಡೆಯ ಕಂದನನೊಪ್ಪುಗೊಳು ನೀನು
ಈಸು ದಿನವಿವನಾಗುಹೋಗಿನ
ಗಾಸಿಯನು ತಲೆಗಾಯ್ದೆ ನಿನ್ನಯ
ಭಾಷೆ ಸಂದುದೆನುತ್ತ ತಾಯಿಗೆ ಕೊಟ್ಟಳಾತ್ಮಜನ ೨೮

ಇರಲಿರಲು ರವಿ ಬಂದನೆಕ್ಕಟಿ
ಕರೆದನೀತನ ಕಿವಿಯೊಳೆಲ್ಲವ
ನೊರೆದ ನಿನಗೆಲೆ ಮಗನೆ ಕುಂತೀದೇವಿ ತಾಯಹುದು
ಮುರಹರನ ಮತದಿಂದ ನಿನ್ನಯ
ಸರಳ ಬೇಡಲು ಬಂದಳಂದಿನ
ಹರಿಗೆ ಕವಚವನಿತ್ತವೊಲು ಮರುಳಾಗಬೇಡೆಂದ ೨೯

ಬೆಸಸಿದುದಕೆ ಹಸಾದವೆಂದನು
ಬಿಸಜಬಂಧುವ ಕಳುಹಿದನು ಮ
ನ್ನಿಸಿದನಿತ್ತಲು ಮಾತೆಯನು ಭಯಭರಿತ ಭಕ್ತಿಯಲಿ
ಒಸೆದು ಬಿಜಯಂಗೈದ ಹದನನು
ವುಸುರ ಬೇಹುದು ತಾಯೆಯೆನೆ ಶೋ
ಕಿಸುತ ನುಡಿದಳು ಕುಂತಿ ಕರ್ಣನ ತೆಗೆದು ಬಿಗಿಯಪ್ಪಿ ೩೦

ಮಗನೆ ತಮ್ಮಂದಿರನು ಪಾಲಿಸು
ವಿಗಡತನವನು ಮಾಣು ನೀನೋ
ಲಗಿಸುವರೆ ಕುರುಪತಿಯ ನಿನಗವರಿದಿರೆಯಿತ್ತಂಡ
ಸೊಗಸು ತಾನೆಂದುದನು ಹಿಸುಣರ
ಬಗೆಯ ನೀ ಕೇಳದಿರು ನೀ ಮನ
ಬಿಗಿಸದಿರು ಸಲಿಸೆನ್ನ ವಚನವನೆಂದಳಾ ಕುಂತಿ ೩೧

ತಾಯಹುದು ತಾ ಬಲ್ಲೆನದು ಸಂ
ಜಾಯತವು ಪಾಂಡವರು ತಮ್ಮಂದಿ
ರೀಯುಭಯ ರಾಯರಲಿ ಪಟ್ಟದ ಹಿರಿಯ ತಾನಹುದು
ರಾಯನೆನ್ನನು ನೆಚ್ಚಿ ಹೊರೆದನು
ಸಾಯಲಳುಕುವನೇ ಸುಡೇತರ
ದೀಯಿಳೆಯ ಬಾಳಿಕೆ ಕೃತಘ್ನತೆಗೆಲ್ಲಿ ಗತಿಯೆಂದ ೩೨

ಮಕ್ಕಳೈವರಿಗಾ ಹಿರಿಯನದು
ತಕ್ಕ ಮಾತಲೆ ತಾಯೆ ಸಂದೇ
ಹಕ್ಕೆ ನೆಲೆಯಿಲ್ಲದು ನಿಲಲಿ ಧಾರುಣಿಯ ಬಯಸುವರೆ
ತಕ್ಕುದೇ ದಾತಾರನರಸಿಯೊ
ಳೊಕ್ಕತನವಿರಲಾರು ಮೆಚ್ಚುವ
ರಕ್ಕ ಹೇಳೌ ಹೇಸಳೇ ಜಯಲಕ್ಷ್ಮಿ ತನಗೆಂದ ೩೩

ಇಂದು ನೀವರುಪಿದ ಬಳಿಕ ರವಿ
ನಂದನನುಯೆಂದರಿದೆನಲ್ಲದೆ
ಹಿಂದೆ ದುರಿಯೋಧನನದಾವುದ ನೋಡಿ ಸಲಹಿದನು
ಬಂದು ಪಾಂಡವರೊಡನೆ ಕೂಡಿದ
ರಿಂದು ನಗದೇ ಲೋಕವಂತಿರ
ಲಿಂದು ನಿಮ್ಮಡಿ ಬಂದ ಕಾರ್ಯವ ಬೆಸಸಿ ನೀವೆಂದ ೩೪

ಆದೊಡೈವರ ಮಕ್ಕಳನು ತಲೆ
ಗಾಯ್ದು ತೋರ್ಪೆ ಕಂದ ನಿನಗಿ
ನ್ನೀ ದುರಾಗ್ರಹವೊಪ್ಪುವುದೆ ಕೌರವನ ಸೇವೆಯಲಿ
ಹೋದ ಬಾಣವ ಮರಳಿ ತೊಡದಿರು
ಮಾದು ಕಳೆ ವೈರವನೆನಲ್ಕೆ ಹ
ಸಾದವೆಂದನು ಬೀಳುಕೊಟ್ಟನು ಬಂದನರಮನೆಗೆ ೩೫

## ಹನ್ನೊಂದನೆಯ ಸಂಧಿ

ಸೂ. ಅವನಿಯದಿರಿತು ಗಗನ ತಾರಾ
ನಿವಹವನು ಬಿದಿರಿತ್ತು ವರ ಪಾಂ
ಡವರು ಕಣನೊಳು ವೆಂಠಣಿಸಿದರು ಕಮಠ ಟೆಂಠಣಿಸೆ

ಕೇಳು ಜನಮೇಜಯ ಧರಿತ್ರೀ
ಪಾಲ ಸಂಧಿಯ ಮುರಿದು ಲಕ್ಷ್ಮೀ
ಲೋಲನೈತರುತಿವರ ಹೊರೆಗಟ್ಟಿದನು ಸಾತ್ಯಕಿಯ
ಕೇಳಿದನು ಮುರಹರನ ಬರವನು
ಮೌಳಿಮಸ್ತಕದಖಿಳ ಧರಣೀ
ಪಾಲರೊಡನಿದಿರಾಗಿ ಬಂದನು ಧರ್ಮನಂದನನು ೧

ದೂರದಲಿ ದುಮ್ಮಾನಿಸಿದ ವದ
ನಾರವಿಂದವ ಕಂಡು ಸಂಧಿಗೆ
ಸೇರರವದಿರು ಬಲಿದುದಾಹವವೀತನಂಗದಲಿ
ಶೌರಿಗಾಯ್ತುವಮಾನವಿದೆಲೇ
ಮಾರಿಗುತ್ಸವವೆನುತ ಬಂದನು
ಮಾರುತನ ಮಗನಸುರಮರ್ದನನಿಂಗಿತವನರಿದು ೨

ದರುಶನವ ನೀಡಿದರು ಕೃಷ್ಣನ
ಚರಣದಲಿ ಮೈಯಿಕ್ಕಿದರು ಮಿ
ಕ್ಕರಸುಗಳು ದ್ರುಪದಾದಿ ನಾಯಕರೆರಗಿದರು ಪದಕೆ
ಪರಮ ಬಾಂಧವರೆಲ್ಲ ಜೀವಂ
ತರೆ ನದೀಸುತ ವಿದುರ ಗುರು ನೃಪ
ಗುರುತನುಜ ಧೃತರಾಷ್ಟ್ರಯೆಂದನು ಧರ್ಮನಂದನನು ೩

ಭೂಮಿಪತಿ ನಿಜಬಾಂಧವರು ಸು
ಕ್ಷೇಮಿಗಳು ತಾವೆಲ್ಲ ನಿಮ್ಮಾ
ಕ್ಷೇಮ ಕುಶಲವ ಕೇಳಿದರು ಕಳುಹಿದರು ಹರಕೆಗಳ
ಆ ಮಹಾ ಸಂಗ್ರಾಮ ಮುಖದಲಿ
ತೋಮರದ ಕಾಣಿಕೆಗಳಲಿ ಸು
ಪ್ರೇಮವನು ಬೆಸಸುವುದು ದುರಿಯೋಧನನ ಮತವೆಂದ ೪

ಭೂಮಿಯೊಳಗರ್ಧವನು ಬೇಡಿದೊ
ಡಾ ಮಹೀಪತಿಯೈವರಿಗೆ ಸಂ
ಗ್ರಾಮ ಭೂಮಿಯನೈದೆ ಕೊಟ್ಟನು ನಿಮ್ಮೊಳಪ್ರಿಯನು
ಸಾಮದಲಿ ಸೊಗಸಿಲ್ಲ ನೀವ್ ನಿ
ಸ್ಸೀಮರಾದೊಡೆ ಜೋಡಿಸುವುದು
ದ್ದಾಮ ಕುರು ಭೂಮಿಯಲಿ ಕುಳವರಿದವರ ಪತಿಕರಿಸಿ ೫

ಮುನಿದೊಡೆಯು ನಿಮ್ಮೊಳಗೆ ನೀವೇ
ಮನಕತವ ಮಾಡುವಿರಿಯಗ್ರಜ
ರನುಜರಲಿ ಕದಡಾದೊಡುಪಶಮಿಸುವಿರಿ ನಿಮ್ಮೊಳಗೆ
ಎನಗೆ ನಿಮ್ಮಯ ದೂಸರಿಂದಾ
ಯ್ತಿನಿತು ಸಭೆಯಲಿ ಮಾನ ಹಾನಿಗ
ಳೆನಲು ನೊಂದನು ಧರ್ಮಸುತನಿಂತೆಂದ ನಸುನಗುತ ೬

ಮುಳಿದು ಸುರಗಿಯನುಗಿದು ಗಗನಕೆ
ನಿಲುಕಿ ಮಾಡುವದೇನು ನಿಮ್ಮಡಿ
ಗಳಿಗೆ ತಪ್ಪಿದ ತರಳರಖಿಳ ವ್ಯಾಪ್ತಿಗೇಗುವರು
ಖಳರು ಮಾಡಿದ ಖತಿಯನೆನ್ನೊಳು
ತಿಳಿದು ಮರೆಯಲುಬೇಕು ಕರುಣಾ
ಜಲಧಿ ನೀನೆಂದಂಘ್ರಿಗಳ ಹಿಡಿದನು ಯುಧಿಷ್ಠಿರನು ೭

ಬರಿದೆ ಕಾಡದಿರೇಳು ಮನದಲಿ
ಮರೆದೆವಾಗಳೆ ಕೌರವನು ಮುಂ
ದರಿಯದವಗಡಿಸಿದನು ಹೋಗಲಿ ನಿಮ್ಮ ದೂರೇಕೆ
ನೆರವಣಿಗೆಯುಂಟಾದಡಿಂದಿನ
ಮರುದಿವಸ ಸಂಗ್ರಾಮ ಸ್ಥೈರಿಸ
ಲರಿಯರವದಿರು ನಡೆ ಕುರುಕ್ಷೇತ್ರಕ್ಕೆ ಬೇಗದಲಿ ೮

ಹಾನಿಯನು ನೀ ಹೊತ್ತು ಭೃತ್ಯರ
ಮಾನವನು ಪತಿಕರಿಸಬೇಹುದು
ತಾನೊಡೆಯನಾದಂಗೆ ಗುಣವೆಪ್ಮೊಡೆಯ ನೀನಾಗಿ
ಮಾನ ಭಂಗವ ಧರಿಸಿಯೆಮ್ಮಭಿ
ಮಾನವನು ನೀನುಳುಹಿದೈ ಸಂ
ಧಾನವನು ಸೇರಿಸದೆ ಸಲಹಿದೆಯೆಂದನಾ ಭೀಮ ೯

ಮಾರಿಯರಕೆಗಳಡಗದಂತಕ
ನೂರು ತುಂಬದೆ ಶಾಕಿನಿಯರೊಡ
ಲೋರೆ ನನೆಯದೆ ಡಾಕಿನಿಯರಿಗೆ ಡೊಳ್ಳು ಸಾಲಿಡದೆ
ಕೌರವನ ತನಿಗರುಳ ದಂಡೆಯ
ತೋರಣದ ಬಾಗಿಲಿನ ವಿಭವದಿ
ವಾರಣಾಹ್ವಯನಗರಿಯನು ಹೊಗದಿಹೆನೆ ಹೇಳೆಂದ ೧೦

ತೋರು ನಡೆ ಗಜಬಜಿಸಲೇಕಿ
ನ್ನಾರು ತಿಂಗಳೆ ನಾಳೆ ಪಯಣಕೆ
ಸಾರಿಸೇಳೆಂದವರುಪಪ್ಲವ್ಯಕ್ಕೆ ನಡೆತಂದು
ಬೇರೆ ಬೇರವನೀಶರಿಗೆ ಪಡಿ
ಹಾರವನು ಕಳುಹಿದರು ಕೃಷ್ಣನ
ದೂರು ಬರಲಳವಡಿಸಿದರು ಸಂಗ್ರಾಮ ಸಾಧನವ ೧೧

ಗುಡಿಯ ಮಂಡವಿಗೆಗಳ ಹೊರಿಗೆಗ
ಳೊಡನೊಡನೆ ಸಂಭ್ರಮಿಸಿದವು ಬರ
ಸಿಡಿಲು ಬೊಬ್ಬಿಡುವಂತೆ ಮಸೆದವು ಕೂಡೆ ಕೈದುಗಳು
ದಡಿಯ ಬಲಿಸುವ ಗುಳವ ರೆಂಚೆಯ
ಗಡಣಿಸುವ ಬಲುಗೀಲಗಾಲಿಯ
ತೊಡಿಸುವುತ್ಸಹವಾಯ್ತುವರ ಪಾಂಡವರ ಬೀಡಿನಲಿ ೧೨

ಹಿಳುಕ ತಿದ್ದುವ ಬಿಲ್ಲ ಬಾಗಿನ
ಹೊಳಹನೊಯ್ಯಾರಿಸುವ ಮಾರ್ತಿರು
ಗಳನು ಜೋಡಿಸುವಖಿಳ ಕೈದುವ ಮಸೆವ ಮಂಡಲಿಯ
ಕಳಕಳಿಕೆ ಬಲುಹಾಯ್ತು ರಾವುತ
ರಲಿ ಗಜಾರೋಹಕರ ರಥಿಕಾ
ವಳಿಯುಲವರವರಂಗದಲಿ ಸಂವರಣೆಯೊಪ್ಪಿದವು ೧೩

ಜೋಳಿ ಹರಿದುದು ದೆಸೆದೆಸೆಗೆ ಭೂ
ಪಾಲರಿಗೆ ರಾಯಸದ ಹದನನು
ಕೇಳಿದಾಗಳೆ ಕವಿದು ಬಂದರು ತಮ್ಮ ದಳಸಹಿತ
ಸೂಳವಿಸಿದವು ಸನ್ನೆಯಲಿ ನಿ
ಸ್ಸಾಳವಂದಿನ ಮರುದಿವಸ ವೈ
ಹಾಳಿಯನು ಹೊರವಂಟರನಿಬರು ದೈತ್ಯರಿಪು ಸಹಿತ ೧೪

ಎಲೆಲೆ ನೆಲ ಬೆಸಲಾದುದೋ ಬಲು
ದಳದ ತೆರಳಿಕೆ ತೀವಿತವನಿಯ
ತಳಪಟದ ಹಬ್ಬುಗೆಯೊಳಬ್ಬರಿಸಿದವು ಬೊಬ್ಬೆಗಳು
ತಲೆವೊರೆಯ ತೂಕದಲಿ ಫಣಿಪತಿ
ಬಳುಕ ತೊಡಗಿದ ತರಣಿ ಸೇನೋ
ಜ್ವಲಿತ ಧೂಳಿಯ ಝುಗೆಯಲದ್ಭುತವಾಯ್ತು ದೆಖ್ಖಾಳ ೧೫

ಹಿಣಿಲ ಹಾಹೆಯ ಬಿರುದುಗಳ ಡಾ
ವಣೆಯ ನಾಯಕವಾಡಿಗಳ ಸಂ
ದಣಿಯ ಸುಕರದ ಕೈದುಗಳ ವರ ವೀರ ನೂಪುರದ
ಕುಣಿವ ಸುರಗಿಯ ಪಳಹರದ ಡೊಂ
ಕಣಿಯ ಭೇದಿಪ ಖಡ್ಗ ಬಿಲು ಬಲು
ಗಣೆಯಸಂಖ್ಯೆಯ ಕೈದುಗಳ ಕಾಲಾಳ ನೋಡಿದರು ೧೬

ಥಳಥಳಿಪ ಸೂನಿಗೆಯ ಮುಮ್ಮೊನೆ
ಗಳ ರಥಾಂಗದ ಮೇಲು ಪಸರದ
ಪಳಹರದ ಖುರಗತಿಯ ಜೋಡ ಜವಾಯ್ಲ ಕುದುರೆಗಳ
ಬಲದ ಬದ್ಧರದೊಟ್ಟೆದಂಬಿನ
ಹೊಳೆವ ಹೊದೆಗಳ ಸೂತರುರವಣೆ
ಗಳ ಸುರೇಖೆಯ ಗತಿಯ ವಾಜಿಯ ರಥವ ನೋಡಿದರು ೧೭

ಅಳವಿಗೊಟ್ಟೊಡೆ ರವಿಯ ತುರಗವ
ನುಳುಹಿ ಮುಂಚುವ ಗತಿಯ ನೊಸಲಲಿ
ಹೊಳೆವ ಕನ್ನಡಿಗಳ ಖುರಾಂತದ ಜೋಡು ಚೆಲುವುಗಳ
ಬಿಳಿಯ ಚೌರಿಯ ಝಲ್ಲರಿಯ ಹ
ತ್ತುಳದ ರಾವ್ತರ ಸರಿಸದಲಿ ನೆಲ
ನಲುಗೆ ನಿಗುರುವ ನಿಲುವ ನಿರುತದ ಹಯವ ನೋಡಿದರು ೧೮

ಶೈಲದೆಡಬಲದೊರತೆಯೆನೆ ಸುಕ
ಪೋಲದಲಿ ದಾರಿಡುವ ಮದಜಲ
ಧಾರೆಗಳ ಬರಿಕ್ಕೆಯ ಲೌಡಿಯ ವಜ್ರ ಮುಷ್ಟಿಗಳ
ನಾಳಿವಿಲುಗಳ ರಾಯ ಜೋಧರ
ಮೇಳವಣೆಗಳ ಚಿತ್ರಗತಿ ಶುಂ
ಡಾಲವನು ನೋಡಿದರು ಗಜಸೇನಾ ಸಮುದ್ರದಲಿ ೧೯

ಅವನಿಪಾಲರ ಮಕುಟ ಮಣಿಗಣ
ನಿವಹವೆತ್ತಿದ ಖಡ್ಗ ಪರಶುಗ
ಳವಿರಳದ ತೆರೆಗಳ ಪತಾಕಾವಳಿಯ ಬೆಳುನೊರೆಯ
ವಿವಿಧ ಗಜ ಹಯ ಜಲಚರೌಘದ
ಪವನಜನ ಕೈಸನ್ನೆಗಳ ಘನ
ಪವನ ಹತಿಯಲಿ ಲಹರಿ ಮಸಗಿತು ಬಹಳ ಬಲಜಲಧಿ ೨೦

ಹರಿ ಯುಧಿಷ್ಠಿರರೊಂದು ಗಜ ಕಂ
ಧರದೊಳಿರ್ದರು ನಿಖಿಳ ಸೇನೆಯ
ತೆರಳಿಕೆಯ ತೋರಿಸುತ ಬಂದರು ಭೀಮ ಫಲುಗುಣರು
ಬಿರುದ ಧೃಷ್ಟದ್ಯುಮ್ನ ಮೊದಲಾ
ಗಿರೆ ಶಿಖಂಡಿಯು ಸಹಿತ ದ್ರುಪದನು
ಭರ ಮಿಗಿಲು ತೋರಿದನು ಮೂರಕ್ಷೋಣಿ ಸೇನೆಯನು ೨೧

ವರ ಯುಧಾಮನ್ಯುತ್ತಮೌಂಜಸ
ನುರು ಶಿಖಂಡಿ ಸುಚೇಕಿತಾನರು
ಧುರಧುರಂಧರ ವೀರ ಪಾಂಚಾಲ ಕ್ಷಿತೀಶ್ವರರು
ತುರುಕರನು ಸಾಹಣ ಸಮುದ್ರರ
ಮರುಯವನ ಖುರಸಾಣ ಕಾಶೀ
ಶ್ವರರ ಥಟ್ಟನು ತೋರಿದನು ಪಾಂಚಾಲ ಭೂಪಾಲ ೨೨

ವರ ವಿರಾಟನು ಶಂಖ ನೃಪನು
ತ್ತರ ಶತದ್ಯುಮ್ನಕನು ಶತಚಂ
ದ್ರರು ಶತಾನೀಕರು ಶತಾಯುಧರೆನಿಪ ನೃಪವರರು
ತುರಗ ಗಜರಥ ಪಾಯದಳ ಸಾ
ಗರದ ಸೌರಂಭದಲಿ ನಿಜ ಸಂ
ವರಣೆಯನು ತೋರಿದರು ತಮ್ಮಕ್ಷೋಹಿಣೀ ದಳವ ೨೩

ಜಯಸಮರ ಸಾಮಗ್ರ ಬಲ ಕೈ
ಕೆಯ ನೃಪಾಲರು ತಮ್ಮೊಳಕ್ಷೋ
ಣಿಯನು ತೋರಿದರೈವರಿಭಕಂದರದ ಭೂಪತಿಗೆ
ಭಯವಿಹೀನನು ಪಾಂಡ್ಯ ನೃಪ ಸೃಂ
ಜಯರು ಸೋಮಕ ಭೂಪರಕ್ಷೋ
ಣಿಯನು ತೋರಿದರವನಿ ಕುಸಿದುದು ದಳದ ಪದಹತಿಗೆ ೨೪

ಚೈದ್ಯ ದೇಶದ ಧೃಷ್ಟಕೇತು ಬ
ಲೋದಧಿಯನಕ್ಷೋಣಿಯ ಮೊದ
ಲಾದುದೆನೆ ತೋರಿದನು ಕುಂತೀಭೋಜನಕ್ಷೋಣಿ
ಆದವೇಳಕ್ಷೋಹಿಣಿ ಬಲ ಬೇ
ರಾದ ನಾಯಕವಾಡಿಯಲಿ ಹಿರಿ
ದಾದುದಾಹವ ಸೇನೆ ಗೋಚರವಲ್ಲ ಗಣನೆಯಲಿ ೨೫

ಕ್ಷತ್ರಧರ್ಮನು ನೀಲನು ಬೃಹ
ತ್ಕ್ಷತ್ರ ಶೌರಿಯ ತನುಜ ವತ್ಸಜ
ಚಿತ್ರವರ್ಮ ಹಿರಣ್ಯವರ್ಮನು ಚಾರು ಚೇಷ್ಟಕನು
ಶತ್ರುಮಥನನು ವಿಂಧ್ಯಗಿರಿಯ ಸು
ಹೋತ್ರರನ್ವಯದವರು ಪಾಂಡವ
ಮಿತ್ರರೊದಗಿತು ಕೇಳು ಜನಮೇಜಯ ಮಹೀಪಾಲ ೨೬

ವೀರ ಪಾರ್ಥನಿಗಿರುಳು ಸೋತಂ
ಗಾರವರ್ಮನು ಗಗನಚರ ಪರಿ
ವಾರ ಬಹಳದಿ ಬಂದು ಕಂಡನು ಕಲಿಯುಧಿಷ್ಠಿರನ
ಕೌರವೇಂದ್ರನ ನೋಯಿಸಿದ ಧುರ
ಧೀರ ಸಾಹಸ ಚಿತ್ರಸೇನನು
ದಾರ ಗುಣನಿಧಿ ಬಂದು ಕಂಡನು ಮಿತ್ರಭಾವದಲಿ ೨೭

ಕಾರಿರುಳ ಪಟ್ಟಣಕೆ ಚಂದ್ರನ
ತೋರಣವ ಬಿಗಿದಂತೆ ದಾಡೆಗ
ಳೋರಣದ ಹೊಳಹುಗಳ ಹೊಗರಿಡುವೊಡಲ ಕಪ್ಪುಗಳ
ಭಾರಿ ದೇಹನು ಭಟಭಯಂಕರ
ತೋರಹತ್ತನು ದೈತ್ಯಕುಲ ಪರಿ
ವಾರ ಬಹಳದಿ ಬಂದು ಕಂಡನು ಕಲಿಘಟೋತ್ಕಚನು ೨೮

ಬಲದ ದೆಖ್ಖಾಳವನು ನೋಡಿದ
ರೊಲವಿನಲಿ ನಿಜಸೇನೆ ಸಹಿತತಿ
ಬಲರುಪಪ್ಲವ್ಯಕ್ಕೆ ಬಂದರು ಹೊಕ್ಕರಾಲಯವ
ಬಳಿಕ ಸುಮುಹೂರ್ತದಲಿ ಹೊರಗುಡಿ
ಗಳನು ಹಾಯ್ಕಿದರಂದು ಯದುಕುಲ
ತಿಲಕ ಗದುಗಿನ ವೀರ ನಾರಾಯಣನ ನೇಮದಲಿ ೨೯

ಪರಿಮಿತಕೆ ತನ್ನಾಪ್ತ ಸಚಿವರ
ಕರೆಸಿಕೊಂಡನು ಕೃಷ್ಣರಾಯಂ
ಗರಸ ಬಿನ್ನಹ ಮಾಡಿದನು ನೃಪಕಾರ್ಯ ಸಂಗತಿಯ
ಧುರಕೆ ಸೇನಾನಾಥರಿಲ್ಲದೆ
ನೆರೆದ ಬಲ ಸಾಲಿರುಹೆ ಮುರಿದೊಡೆ
ಹರೆವವೊಲು ಹುರುಳಿಲ್ಲ ದಳಪತಿ ಯಾವನಹನೆಂದ ೩೦

ದ್ರುಪದನಾಗಲಿಯೆಂದು ಕೆಲಬರು
ವಿಪುಳ ಬಲದ ವಿರಾಟನಾಗಲಿ
ನೃಪ ಶಿಖಂಡಿಯೆಯೆಂದು ಕೆಲಬರು ಭೀಮಸುತನೆಂದು
ಅಪರಿಮಿತಮತವಾಗೆ ಸಮರ
ವ್ಯಪಗತಾರಿ ಸುರೇಂದ್ರಸುತನೀ
ದ್ರುಪದಸುತ ಸೇನಾಧಿಪತಿಯಹುದೆಮ್ಮ ಮತವೆಂದ ೩೧

ಬಿಂಬವನು ಬೇರಿರಿಸಿ ಬಹುಮತ
ವೆಂಬ ಬಿಸಿಲಲಿ ರಾಜ ಸಮಯವೆಂ
ದೆಂಬ ನೈದಿಲು ನಲವುಗೆಟ್ಟುದು ಕೃಷ್ಣ ಹೇಳೆನಲು
ಎಂಬುದೇನಿನ್ನಿಲ್ಲಿ ಸುಭಟ ಕ
ದಂಬದಧಿಪತಿತನಕೆ ಫಲುಗುಣ
ನೆಂಬ ಮಾತೆಮ್ಮಭಿಮತವು ಭೂಪಾಲ ಕೇಳೆಂದ ೩೨

ಕರೆಸಿ ಧೃಷ್ಟದ್ಯುಮ್ನನನು ಸಂ
ಗರದ ಸೇನಾಪತ್ಯವನು ವಿ
ಸ್ತರಿಸಲಳವಡಿಸಿದರು ಸುಮುಹೂರ್ತದ ಸರಾಗದಲಿ
ಪುರದೊಳಗೆ ಗುಡಿ ನೆಗಹಿದವು ಭೂ
ಸುರರ ವಿಮಳಾಮ್ನಾಯ ರವ ವಿ
ಸ್ತರಿಸಲಳವಡಿಸಿದರು ಮಂಗಳ ವಿಹಿತ ವಸ್ತುಗಳ ೩೩

ಸೂಳವಿಸಿದವು ಕಟಕದಲಿ ನಿ
ಸ್ಸಾಳ ಕೋಟಿಗಳಳ್ಳಿರಿಯೆ ಹೆ
ಗ್ಗಾಳೆಗಳು ಸಾರಿದವು ಭಟರುಬ್ಬಟೆಯ ಬಿರುದುಗಳ
ಲೋಲನಯನೆಯರಾರತಿಯ ಸಮ
ಸಾಲು ಸಂದಣಿಸಿದವು ವರ ಪಾಂ
ಚಾಲತನಯಂಗೆಸಗಿದರು ಮೂರ್ಧಾಭಿಷೇಚನವ ೩೪

ದರುಶನವನಿತ್ತಖಿಳ ಧರಣೀ
ಶ್ವರರು ಕಂಡರು ಸೂತ ಮಾಗಧ
ವರ ವಿಬುಧ ವೈತಾಳಿಕರ ಕಾರ್ಪಣ್ಯವಡಗಿದವು
ಧುರಕೆ ಧೃಷ್ಟದ್ಯುಮ್ನನಾಜ್ಞೆಯೊ
ಳಿರವು ನಿಮಗೆಂದೈದೆ ಭೂಪಾ
ಲರ ನಿವಾಸಂಗಳಲಿ ಹೊಯಿದರು ಚರರು ಡಂಗುರವ ೩೫

ರೂಢಿಸಿದ ಸುಮುಹೂರ್ತದಲಿ ಹೊರ
ಬೀಡಬಿಟ್ಟರು ರಣಕೆ ಪಯಣವ
ಮಾಡಲೋಸುಗ ಸಾರಿದರು ನೃಪ ಪಾಳೆಯಂಗಳಲಿ
ಕೂಡಿತಾಹವ ಸೈನ್ಯ ಸಾಗರ
ವೀಡಿರಿದು ನಡೆಗೊಂಡುದಭ್ರದ
ರೂಢಿಗಳ ಜೋಡಿಗಳ ಜೋಕೆಯ ಘನ ತರಂಗದಲಿ ೩೬

ಹರಿಯ ಚರಣಕ್ಕೆರಗಿ ವಿಜಯದ
ಹರಕೆಗಳ ಕೈಕೊಂಡು ರಥವನು
ತುರಗ ಗಜವನು ಗಡಣ ಮಿಗಲಡರಿದರು ಪಾಂಡವರು
ಗರುಡ ಸಿಂಧವ ನೆಗಹಿ ದಾರುಕ
ನಿರದೆ ರಥವನು ಸುಳಿಸೆ ಘನ ಮೋ
ಹರದ ಮಧ್ಯದೊಳಸುರಧೂಳೀಪಟನು ಹೊರವಂಟ ೩೭

ಮುಂದೆ ಹರಿರಥ ನಡೆಯಲಾತನ
ಹಿಂದೆ ಧರ್ಮಜನೆಡ ಬಲದಲಾ
ನಂದನರು ಕೆಲಬಲದಲಾ ಭೀಮಾರ್ಜುನಾದಿಗಳು
ಸಂದಣಿಸಿದುದು ಸೇನೆ ಸೈರಿಸಿ
ನಿಂದನಾದೊಡೆ ಫಣಿಗೆ ಸರಿಯಿ
ಲ್ಲೆಂದು ಸುರಕುಲ ವುಲಿಯೆ ನಡೆದುದು ಪಾಂಡುಸುತ ಸೇನೆ ೩೮

ಸಿಡಿಲು ಸಿಗುರೆದ್ದಂತೆ ಭಾರಿಸಿ
ಜಡಿದ ಕೈದುಗಳುಗಿದವಬುಧಿಯ
ಕೆಡುದೆರೆಯ ಲಹರಿಯವೊಲುರವಣಿಸಿದವು ಬೊಬ್ಬೆಗಳು
ನಡುಗಿತವನಿಯಜಾಂಡ ಖರ್ಪರ
ವೊಡೆಯಲವನಿಯ ಲಗ್ಗೆ ಸೂಳಿನ
ಹೊಡೆಗುಳಿನೊಳಬ್ಬರಿಸಿದವು ನಿಸ್ಸಾಳ ಕೋಟಿಗಳು　೩೯

ಪ್ರಳಯ ಜಲನಿಧಿಯಂತೆ ದಳ ಬರ
ಲಿಳೆ ಕುಸಿಯೆ ಕಮಠಂಗೆ ಮೇಲುಸು
ರುಲಿಯೆ ದಿಗುದಂತಿಗಳು ಮೊಣಕಾಲೂರಿ ಮನಗುಂದೆ
ಬಲಮಹಾಂಬುಧಿ ಬಲುಗಡಲ ಮು
ಕ್ಕುಳಿಸಿ ನಡೆದುದು ಕಡು ಭರದ ಕಾ
ಲ್ದುಳಿಯ ಕದನಾಳಾಪಕರ ಕಾಹುರತೆ ಹೊಸತಾಯ್ತು　೪೦

ಗಜದ ಬೃಂಹಿತ ರವದ ವಾಜಿ
ವ್ರಜದ ಹೇಷಧ್ವನಿಯ ತೇರಿನ
ವಿಜಯ ಚೀತ್ಕೃತಿ ರವದ ಬಿಲು ಟಂಕಾರ ಕಳಕಳದ
ಗಜಬಜಿಕೆ ಗಾಢಿಸಿತು ಬೊಬ್ಬೆಯ
ಗಜರುಗಳ ಗರ್ಜನೆಗೆ ನಡುಗಿತು
ತ್ರಿಜಗವೆನಲೈದಿದರು ಪಯಣದ ಮೇಲೆ ಪಯಣದಲಿ　೪೧

ಅರರೆ ನಡೆದುದು ರಾಯ ಕಟಕದ
ತೆರಳಿಕೆಯ ಸೌರಂಭವಿಳೆಗ
ಚ್ಚರಿಯ ಬೀರಿತು ವರ ಕುರುಕ್ಷೇತ್ರಕ್ಕೆ ಗಮಿಸಿದರು
ಅರಿವಿಜಯಿಗಳು ನೆಲನ ಗೆಲಿದರು
ಹರಿಯ ನೇಮದಲೆಡೆಯರಿದು ಬಲ
ಶರಧಿ ಬಿಟ್ಟುದು ಕಳನ ಪಶ್ಚಿಮ ದೆಸೆಯ ಪಸರದಲಿ　೪೨

ಸೂಳವಿಸಿದವು ಸನ್ನೆಯಲಿ ನಿ
ಸ್ಸಾಳ ಲಗ್ಗೆಗಳಡಗಿದವು ಕಿರು
ಗಾಳೆ ಸನ್ನೆಯಲೂದಿದವು ಮಾಣಿಸಿದವಬ್ಬರವ
ಕೇಳು ಜನಮೇಜಯ ಧರಿತ್ರೀ
ಪಾಲ ಮಾರ್ಗಶ್ರಮದ ಸೇನಾ
ಜಾಲ ಸೈವೆರಗಾಗಿ ನಿಂದುದು ಕಳನ ಮಧ್ಯದಲಿ　೪೩

ಮೇಲು ಗುಡಿಗಳ ಭದ್ರದುಪ್ಪರ
ಶಾಲೆಗಳ ಮಂಡವಿಗೆಗಳ ಬ
ಲ್ಲಾಳದಡ್ಡಿಯ ಚಂಪೆಯದ ಗೂಡಾರದೋವರಿಯ
ಸಾಲು ಕಳಸದ ಮೇಲುಗಟ್ಟಿನ
ಕೀಲಣದ ಹೊಂಗೆಲಸದಲಿ ರಾ
ಜಾಲಯವನನುಕರಿಸಿದರು ಕುಂತೀ ಕುಮಾರರಿಗೆ　೪೪

ಅರಮನೆಯ ಕೆಲದಲಿ ಮುರಾಂತಕ
ನರಮನೆಗಳಾ ಕೆಲದೊಳರ್ಜುನ
ನಿರವು ಹಿಂದಣ ಭಾಗದಲಿ ನಕುಲಂಗೆ ಗೂಡಾರ
ಅರಿಭಯಂಕರ ಭೀಮಸೇನನ
ನಿರುಪಮಾಲಯವೆಡದ ಕಡೆಯಲಿ
ಸರಿಸದಲಿ ಸೂತ್ರಿಸಿತು ಸಹದೇವಂಗೆ ನೃಪಭವನ　೪೫

ವೀರ ಪಾಂಡವರೈವರರಸು ಕು
ಮಾರ ವರ್ಗದ ಮಂಡವಿಗೆ ಗೂ
ಡಾರಗಳನೊಳಕೊಂಡು ಬಿಗಿದವು ತಳಿಯ ಕಟ್ಟುಗಳು
ವಾರಣದ ಸಾಲುಗಳ ಸುತ್ತಲು
ಭಾರಿಸಿತು ಪಾಂಚಾಲ ಮತ್ಸ್ಯರ
ಭೂರಿ ಬಲಬಿಟ್ಟುದು ಮಹೀಶನ ಗುಡಿಯ ಬಳಸಿನಲಿ　೪೬

ಕೇಳು ಜನಮೇಜಯ ಧರಿತ್ರೀ
ಪಾಲ ಬೀಡಿನ ತೆಕ್ಕೆ ಬಿಗಿದುದು
ಪಾಳೆಯದ ಬಲುಹೊದಕೆ ಹೊರವಳಯದಲಿ ಕಲುಗೋಟೆ
ಮೇಲೆ ಪಡಿಯಗಳಾಶ್ರಯಿಕೆ ಮುಳು
ವೇಲಿ ದೀಹದ ಸಿಂಹ ಶರಭ
ವ್ಯಾಳ ಶಾರ್ದೂಲಾವಳಿಯ ಸುಯಿಧಾನವೊಪ್ಪಿದವು　೪೭

ಎರಡು ಬಾಗಿಲ ಸೂತ್ರದಲಿ ವಿ
ಸ್ತರಿಸಿದಂಗಡಿ ಸೋಮವೀಧಿಯ
ತರಣಿವೀಧಿಯಲವರವರ ಪಾಳೆಯಕೆ ಮುಂರಿವುಗಳ
ಸುರರು ಸೃಷ್ಟಿಸಬಾರದಿನ್ನೀ
ನರರುಗಳ ಪಾಡೇನು ಕೌಂತೇ
ಯರ ಸಮಗ್ರದ ಬೀಡು ಕುರುಭೂಮಿಯಲಿ ರಂಜಿಸಿತು　೪೮

ಬಲದ ಮುಂಗುಡಿ ಭೀಮನದು ಪಿಂ
ಗಳಿಯಲಾತನ ಕಾಹು ಬೀಡಿನ
ವಳಯದಾರೈಕೆಗಳು ಸಾತ್ಯಕಿ ಪಾರ್ಥ ನಕುಲರಿಗೆ
ಬಲಮಹಾಂಬುಧಿಯೊಳಗಿರುಳ ತರ
ವಳಿಕೆ ಹೈಡಿಂಬಂಗೆ ಪಾಂಡವ
ರುಳಿವು ಗದುಗಿನ ವೀರನಾರಾಯಣನ ಸುಯಿದಾನ　೪೯

ಇತಿ ಶ್ರೀಮದಚಿಂತ್ಯಮಹಿಮ ಗದುಗು ವೀರನಾರಾಯಣ ಚರಣಾರವಿಂದ
ಮಕರಂದ ಮಧುಪಾನಪರಿಪುಷ್ಟ ವಚಃಷಟ್ಪದೀ ನಿಕಾಯ
ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತಮಪ್ಪ
ಕರ್ಣಾಟ ಭಾರತ ಕಥಾಮಂಜರಿಯೊಳ್
ಉದ್ಯೋಗಪರ್ವ ಸಮಾಪ್ತಮಾದುದು.

---

# ಭೀಷ್ಮ ಪರ್ವ

## ಮೊದಲನೆಯ ಸಂಧಿ

ಸೂ. ವೈರಿ ಭಟಕುಲ ವಿಲಯ ರುದ್ರನು
ಪಾರತೇಜೋಭದ್ರನಾ ಭಾ
ಗೀರಥೀಸುತ ಧರಿಸಿದನು ಕುರುಸೇನೆಯೊಡೆತನವ

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವರಾಯನಲ್ಲಿಗೆ
ಕಾಳೆಗದ ಕಾತರಿಗರಿಪುರಟ್ಟಿದರು ಭಟ್ಟರನು
ಕೇಳಿದನು ಕುರುಭೂಮಿಯಲಿ ರಿಪು
ಜಾಲದುದಯವನಂದು ಕುರುಕುಲ
ಮೌಳಿ ಕರೆಸಿದನಾಪ್ತರನು ಪರಿಮಿತಕೆ ಮಂತ್ರಿಗಳ ೧

ರವಿಜ ಗುರುಸುತ ಶಲ್ಯ ಕಲಶೋ
ದ್ಭವರು ಸೌಬಲರಾದಿಯಾದವ
ರವನಿಪಾಲನ ಕಂಡರಂದೇಕಾಂತ ಭವನದಲಿ
ಅವನಿಪತಿ ಹದನೇನು ರಿಪುಪಾಂ
ಡವರ ಬೀಡಿನ ಗುಪ್ತದನುಮಾ
ನವನು ಚಿತ್ತಯಿಸಿದರೆ ಬೆಸಸುವುದೆನಲು ನೃಪ ನುಡಿದ ೨

ಸಂದಣಿಸಿ ಕುರುಭೂಮಿಯಲಿ ತಾ
ಮಂದಿ ಬಿಟ್ಟುದು ನಾಡ ಗಾವಳಿ
ಬಂದುದಲ್ಲಿಗೆ ಕಳುಹಿದರು ದೂತರನು ದುರ್ಜನರು
ನಂದಗೋಪನ ಮಗನ ಕೊಂಡೆಯ
ದಿಂದ ಕಲಿಯೇರಿದರು ಕೃಪಣರ
ಕೊಂದಡಹುದಪಕೀರ್ತಿಯಿದಕಿನ್ನೇನು ಹದನೆಂದ ೩

ಭೂರಿ ನೆರೆದುದು ನಾಡ ಗಾವಳಿ
ಭಾರ ಧೃಷ್ಟದ್ಯುಮ್ನನದು ಗಡ
ಚಾರದೇವನ ಜೋಕೆ ಮಂದಿಯ ಕಾಹು ಕಟ್ಟು ಗಡ
ಧಾರುಣಿಯ ಲಂಪಟರು ಕದನವ
ಹಾರಿ ಬಂದರು ಗಡ ಕೃತಾಂತನ
ಭೂರಿ ಭೂತದ ಧಾತುವಾಯಿತು ಲೇಸು ಲೇಸೆಂದ ೪

ನಾಡ ಮನ್ನೆಯ ಗಿನ್ನೆಯರುಗಳ
ಕೂಡಿಕೊಂಡೆಮ್ಮೊಡನೆ ಕಲಹವ
ಬೇಡಿ ಮಹಿಪಾಲನೆಯ ಪಟ್ಟಕೆ ನೊಸಲನೊಡ್ಡುವರು
ನೋಡಿರೈ ನಿರುಪಮವಲಾ ಕಾ
ಡಾಡಿಗಳ ಕಲಿತನವನೆನೆ ಮಾ
ತಾಡಿದನು ಕಲಿಕರ್ಣನಾತನ ಮನದ ಮೈಸಿರಿಯ ೫

ನೆರೆದ ದೊದ್ದೆಯನೊರಸಬಹುದೇ
ನರಿದು ಜೀಯ ವಿರೋಧಿರಾಯರ
ನೆರವಿ ತಾನೇಗುವುದು ಗಹನವೆ ನಿನ್ನ ವೀರರಿಗೆ
ಕರಿಗಳಿಗೆ ಪ್ರತ್ಯೇಕವಿವೆ ಕೇ
ಸರಿಗಳೆಮ್ಮನು ಕಳುಹು ನಿಮ್ಮಡಿ
ಪರಿಮಿತಕೆ ಬರಲಾವ ಭಾರವಿದೆಂದನಾ ಕರ್ಣ ೬

ಕಲಕುವೆನು ಪಾಂಡವರ ಸೇನಾ
ಜಲಧಿಯನು ತೇರಿನಲಿ ತಲೆಗಳ
ಕಳುಹುವೆನು ಕದನದಲಿ ಕೈದೋರಿದ ಕುಠಾರಕರ
ಹೊಳಲ ಹೊರಶೂಲದಲಿ ರಿಪುಗಳ
ಸೆಳಸುವೆನು ತಾ ವೀಳೆಯವನೆಂ
ದಲಘುಭುಜಬಲ ಕರ್ಣ ನುಡಿದನು ಕೌರವೇಂದ್ರಂಗೆ ೭

ಕುಲಿಶ ಪರಿಯಂತೇಕೆ ನೇಗಿಲ
ಬಳಿಯ ಹುಲುವೆಟ್ಟಕೆ ವಿರೋಧಿಗ
ಳಳಿಬಲಕೆ ಕಲಿಕರ್ಣ ನೀ ಪರಿಯಂತ ಸಂಗರವೆ
ಹೊಳಲ ಪರಿವಾರಕ್ಕೆ ಸಾರಿಸು
ಕೆಲಬಲದ ರಾಯರಿಗೆ ದೂತರ
ಕಳುಹಿ ನೆರಹಿಸು ಕಾದಿಸೆಂದನು ಕೌರವರ ರಾಯ ೮

ಮೂಗಿನಲಿ ಬೆರಳಿಟ್ಟು ಮಕುಟವ
ತೂಗಿದನು ಚತುರಂಗಬಲವನು
ಬೇಗದಲಿ ಕೊಳುಗುಳಕೆ ಕಳುಹಿಸು ಗೆಲಿಸು ಕಾಳೆಗವ
ತಾಗಿ ಬಾಗದ ಮರುಳುತನದು
ದ್ಯೋಗವಿದಕೇನೆಂಬೆನಕಟಕ
ಟೀಗಲದ್ದುದು ಕೌರವಾನ್ವಯವೆಂದನಾ ದ್ರೋಣ ೯

ಹಿಂದೆ ಗಳಹುವನಿವನು ಬಾಯಿಗೆ
ಬಂದ ಪರಿಯಲಿ ಪಾಂಡುತನಯರ
ಕೊಂದನಾಗಳೆ ಕರ್ಣನಿನ್ನಾರೊಡನೆ ಸಂಗ್ರಾಮ
ಹಿಂದೆ ಹಮ್ಮಿದ ಸಮರದೊಳು ನಡೆ
ತಂದು ಖೇಚರನಡಸಿ ಕಟ್ಟಿದ
ಡಂದು ನಿನ್ನನು ಬಿಡಿಸಿದವನರ್ಜುನನೊ ರವಿಸುತನೊ ೧೦

ಸಾಹಸಿಗಳಿಲ್ಲಿಲ್ಲ ಹರಿ ತುರು
ಗಾಹಿ ಪಾಂಡವರೈವರಡವಿಯ
ಮೇಹುಗಾರರು ಬಂದ ಭೂಭುಜರೆಲ್ಲ ತಾ ನೆರವಿ
ಆಹವಕೆ ನಿನ್ನೂರ ತಳವರ
ಗಾಹಿನವರನು ಕಳುಹುವುದು ಸಂ
ದೇಹವೇ ನೀನಿಲ್ಲಿ ಸುಖದಲಿ ರಾಜ್ಯ ಮಾಡೆಂದ ೧೧

ಎಲೆ ಸುಯೋಧನ ಕಾಳುಗೆಡೆದರೆ
ಫಲವನಿದರಲಿ ಕಾಣೆನಹಿತರ
ಬಲದ ಭಾರಣೆ ಬಿಗುಹು ಭೀಮಾರ್ಜುನರು ಬಲ್ಲಿದರು
ನಳಿನನಾಭನ ಮಂತ್ರಶಕ್ತಿಯ
ಬಲುಹು ನೀವ್ ನಿರ್ದೈವರವರ
ಗ್ಗಳ ಸದ್ದೈವರು ಕೆಟ್ಟಿರಿನ್ನೇನೆಂದನಾ ದ್ರೋಣ ೧೨

ಅಸುರರಿಪುವಿನ ಮಾತ ನೀ ಮ
ನ್ನಿಸದೆ ಕೌರವಕುಲವನದ್ದಿದೆ
ನುಸಿಗಳಿವದಿರು ಮುನಿದು ಪಾರ್ಥನನೇನ ಮಾಡುವರು
ಅಸುರರಲಿ ಸುರರಲಿ ಭುಜಂಗ
ಪ್ರಸರದಲಿ ಭೀಮಾರ್ಜುನರ ಸೈ
ರಿಸುವರುಂಟೇ ಕೆಟ್ಟಿರಿನ್ನೇನೆಂದನಾ ದ್ರೋಣ ೧೩

ಅವರಿಗಸುರಾಂತಕ ಸಹಾಯನು
ನಿವಗೆ ಗಂಗಾಸುತನ ಬಲವಾ
ಹವವನೀತನ ನೇಮದಲಿ ನೆಗಳುವುದು ನೀತಿಯಿದು
ಅವರಿವರ ಮಾತಿನಲಿ ಫಲವಿ
ಲ್ಲವನಿಪತಿ ಕೇಳೆನಲು ಕಲಶೋ
ದ್ಭವನ ಮತದಲಿ ಬಳಿಕ ಮಣಿದನು ಕೌರವರ ರಾಯ ೧೪

ಮತವಹುದು ತಪ್ಪಲ್ಲ ಗಂಗಾ
ಸುತನ ತಿಳುಹುವ ವೀರಪಟ್ಟವ
ನತುಳ ಬಲ ಭೀಷ್ಮಂಗೆ ಕಟ್ಟುವೆನೆನುತ ಕುರುರಾಯ
ಮತದ ನಿಶ್ಚಯದಿಂದ ಗುರು ಗುರು
ಸುತನ ಕಳುಹಿದನಿತ್ತಲಬುಜ
ಪ್ರತತಿಯುತ್ಸಹವಡಗೆ ಪಡುವಣ ಕಡಲೊಳಿನನಿಳಿದ ೧೫

ವಿನುತ ಸಂಧ್ಯಾದೇವಿಗಭಿವಂ
ದನ ಜಪಾದಿ ಸಮಸ್ತ ದೇವಾ
ರ್ಚನೆಯ ಮಾಡಿಯೆ ರವಿತನೂಜನ ಕರಸಿ ಪಂತಿಯಲಿ
ಜನಪನಾರೋಗಿಸಿದನಾಪ್ತಾ
ವನಿಪ ಸಚಿವರು ಸಹಿತ ಭೀಷ್ಮನ
ಮನೆಗೆ ಬಂದನು ಕೌರವೇಶ್ವರನಂದಿನಿರುಳಿನಲಿ ೧೬

ಮುಂದೆ ಪರಿದರು ಕೈಯ ಕಂಬಿಯ
ಸಂದಣಿಯ ಪಡೆವಳರು ಗಂಗಾ
ನಂದನಂಗೀ ಹದನನರುಹಲು ಬಂದನಿದಿರಾಗಿ
ಕಂದುಮೋರೆಯ ರಾಯನನು ತೆಗೆ
ದಂದಣದೊಳಾಲಿಂಗಿಸುತ ನಲ
ವಿಂದ ಮನ್ನಿಸಿ ತಂದನರಮನೆಗುಚಿತವಚನದಲಿ ೧೭

ಏನಿರುಳು ನೀ ಬಂದ ಹದನೆಲೆ
ಮಾನನಿಧಿ ಬೇಕಾದರೆಮ್ಮನು
ನೀನು ಕರೆಸುವುದರುಪುವುದು ನಿಜಕಾರ್ಯ ಸಂಗತಿಯ
ಏನ ಹೇಳುವೆ ನಗೆಯುನನುಸಂ
ಧಾನದಲಿ ಪಾಂಡವರು ಕುರುಭೂ
ಮಿನಿವಾಸಕೆ ಬಂದು ಬಿಟ್ಟರು ಕಿರಿದು ದಳಸಹಿತ ೧೮

ಹರಿಯ ಹಿಸುಣಿಕೆಯವರ ಚಿತ್ತವ
ಬೆರಸಿ ವೈರವ ಬೆಳಸಿ ಬಂದರು
ಧರೆಯ ಭಾಗವ ಬೇಡಿ ಕದನವ ಮಸೆದರೆಮ್ಮೊಡನೆ
ಹರನ ಸಮದಂಡಿಗಳು ನೀವೆಮ
ಗಿರಲು ಜಯಿಸುವ ವೀರನಾವನು
ಮರುಳುತನವನು ಧರ್ಮಪುತ್ರನೊಳರಿಯಲಾಯ್ತೆಂದ ೧೯

ಬಂದರೇ ಪಾಂಡವರು ಸುದ್ದಿಯ
ತಂದರೇ ನಿನ್ನವರು ನಿನಗೇ
ನೆಂದು ಭಾಷೆಯ ಕೊಟ್ಟರೀ ಕರ್ಣಾದಿ ನಾಯಕರು
ಇಂದು ಸಂತತಿ ಗುರುವರಲ್ಲಾ
ಬಂದರೇನಪರಾಧವೇ ಇ
ನ್ನೆಂದು ಪರಿಯಂತವರು ನವೆವರು ಎಂದನಾ ಭೀಷ್ಮ ೨೦

ಜಗದ ಗುರುವಲ್ಲಾ ಮುರಾಂತಕ
ನಗಣಿತೋಪಮಮಹಿಮನಲ್ಲಾ
ಸಗುಣ ನಿರ್ಗುಣನಾ ಮಹಾತ್ಮನನಂತ ರೂಪವನು
ವಿಗಡಿಸಲು ಜಯವಹುದೆ ಜಾಣರ
ಬಗೆಗೆ ಬಹುದೇ ನಿನ್ನ ಮತವೆಲೆ
ಮಗನೆ ಮರುಳಾದೈ ಮದಾಂಧರ ಮಾತುಗಳ ಕೇಳಿ ೨೧

ಮಿಕ್ಕ ಮಾತೇಕಿನ್ನು ನೀ ಹಿಂ
ದಿಕ್ಕಿ ಕೊಂಬರೆ ಕೊಲುವನಾವನು
ಮಕ್ಕಳಾವೆನಬೇಡ ಬಲ್ಲೆವು ನಿನ್ನ ವಿಕ್ರಮವ
ಹೊಕ್ಕು ಹಗೆಗಳ ಹೊಯ್ದು ದಿಗುಬಲಿ
ಯಿಕ್ಕಿ ನನ್ನಯ ಹರುಷಜಲಧಿಯ
ನುಕ್ಕಿಸಲು ಬೇಕೆನಲು ಕೇಳಿದು ಭೀಷ್ಮನಿಂತೆಂದ ೨೨

ದೈವಬಲವವರಲ್ಲಿ ನೀವೇ
ದೈವಹೀನರು ಧರ್ಮಪರರವ
ರೈವರೂ ಸತ್ಪುರುಷಶೀಲರು ನೀವಧಾರ್ಮಿಕರು
ಮುಯ್ವನಾನುವುದವರ್ಗೆ ಭುವನವು
ಬೈವುದೈ ನಿಮ್ಮನಿಬರನು ನಿಮ
ಗೈವಡಿಯ ಸಹಸಿಗಳವರು ದುರ್ಬಲರು ನೀವೆಂದ ೨೩

ದಯವನತ್ತಲು ತಿದ್ದಿ ನಮ್ಮನು
ಭಯಮಹಾಬ್ಧಿಯೊಳದ್ದಿ ಸಮರದ
ಜಯವನವರಿಗೆ ಮಾಡಿ ನಮ್ಮಭಿಮತವ ನೀಗಾಡಿ
ನಯವ ನೀವ್ನೊಡ್ಡುವರೆ ನಿಮ್ಮನು
ನಿಯಮಿಸುವರಾರುಂಟು ಭಾಗ್ಯೋ
ದಯವಿಹೀನನು ತಾನೆನುತ ಕುರುರಾಯ ಬಿಸುಸುಯ್ದ ೨೪

ಉಚಿತವನು ನಾನರಿಯೆ ಪಾರ್ಥಕ
ರಚಿತ ನಿಜವನು ನುಡಿಯೆ ನಿನಗವು
ರುಚಿಸವೇ ಮಾಣಲಿಯದಂತಿರಲೀ ಕುಮಂತ್ರಿಗಳ
ವಚನವತಿಗಾಢದಲಿ ನಟ್ಟುದು
ಸಚಿವ ನಯವಿನ್ನೇಕೆ ಸೇನಾ
ನಿಚಯಕೆಮ್ಮನು ಮೊದಲಿಗನ ಮಾಡರಸ ಹೋಗೆಂದ ೨೫

ಖಳನ ಕಳುಹಿದನತಿಬಳನು ತ
ನ್ನೊಳಗೆ ನೆನೆದನು ಪಾಂಡುನಂದನ
ರುಳಿವು ತನ್ನದು ಮಿಾರಿ ಕಾದುವಡಸುರರಿಪುವಿಹನು
ಅಳುಕಿ ಕಾದುವಡಿತ್ತ ಹಾವಿನ
ಹಳವಿಗೆಯು ಕಡಮೂರ್ಖನಿಗೆ ಬೆಂ
ಬಲವ ಕಾಣೆನು ತನಗೆ ಹದನೇನೆನುತ ಚಿಂತಿಸಿದ ೨೬

ಆದಡೇನಿದಿರಾದ ರಿಪುಬಲ
ವಾದುದನು ಸಂಹರಿಸಿ ಮಕ್ಕಳ
ಕಾದು ಬಿಸುಡುವೆನೊಡಲನಾ ಸಂಗ್ರಾಮಭೂಮಿಯಲಿ
ಆದುದಾಗಲಿ ಬಳಿಕ ಮಾಡುವ
ಭೇದ ಬೇರಿಲ್ಲೆನುತ ಪ್ರತ್ಸಂ
ವಾದವನು ಬೀಳ್ಕೊಟ್ಟು ಗಂಗಾಸೂನು ಪವಡಿಸಿದ ೨೭

ಮಗನೊಡನೆ ಮೂದಲಿಸಿ ಭೀಷ್ಮನು
ಹೊಗುವ ಗಡ ಪರಸೇನೆಯನು ಕಾ
ಳೆಗವ ನೋಡುವೆನೆಂಬವೊಲು ತಲೆದೋರಿದನು ದಿನಪ
ನಗೆಯುಡುಗಿ ನಾಚಿದವು ಕುಮುದಾ
ಳಿಗಳು ಮುಂಗಾಣಿಕೆಯ ಹರುಷದೊ
ಳಗಿದು ವಿರಹವ ಬೀಳುಕೊಟ್ಟುವು ಜಕ್ಕವಕ್ಕಿಗಳು ೨೮

ಅರಸನುಪ್ಪವಡಿಸಿದನವನೀ
ಶ್ವರವಿಹಿತಸತ್ಕರ್ಮವನು ವಿ
ಸ್ತರಿಸಿದನು ಚಾವಡಿಗೆ ಬಂದನು ಹರುಷದುಬ್ಬಿನಲಿ
ಚರರನಟ್ಟಿದನಖಿಳಧರಣೀ
ಶ್ವರ ನಿಕಾಯಕೆ ಸಕಲ ಸುಭಟರ
ಬರಿಸಿದನು ತರಿಸಿದನು ಪಟ್ಟಕೆ ಬೇಹ ವಸ್ತುಗಳ ೨೯

ಗುರುತನುಜ ರವಿಸೂನು ಮಾದ್ರೇ
ಶ್ವರ ಕೃಪದ್ರೋಣಾದಿಗಳು ಬಂ
ದರಮನೆಗೆ ಹೊಕ್ಕರು ನದೀನಂದನನ ಬಳಿವಿಡಿದು
ನೆರೆದರವನೀ ನಿರ್ಜರರು ಕೇ
ಸರಿಯ ಪೀಠವ ರಚಿಸಿ ವೈದಿಕ
ಪರಿಣತರ ಮತದಿಂದ ವಿಸ್ತರಿಸಿದರು ಮಂಗಳವ ೩೦

ಕಮಲಜನ ಹೋಲುವೆಯ ಧಾರುಣಿ
ಯಮರಕರದಲಿ ನಿಗಮ ಪೂತೋ
ತ್ತಮ ಸುವಾರಿಗಳಿಳಿದವಜಸನ್ನಿಭನ ಮಸ್ತಕಕೆ
ಕಮಲಜನ ಕರದಿಂದ ಗಂಗಾ
ವಿಮಲನದಿಯಿಳಿತಂದು ಸಾರ್ದುದೊ
ಹಿಮಗಿರಿಯನೆಂಬಂತಿರಿಳಿದುದು ಪಟ್ಟದಭಿಷೇಕ ೩೧

ಆರತಿಯನೆತ್ತಿದರು ತಂದು
ಪ್ಪಾರತಿಯ ಸೂಸಿದರು ನೃಪಪರಿ
ವಾರವೆಲ್ಲವು ಬಂದು ಕಂಡುದು ಕಾಣಿಕೆಯ ನೀಡಿ
ಕೌರವೇಂದ್ರನ ಮೋಹರದ ಗುರು
ಭಾರ ಭೀಷ್ಮಂಗಾಯ್ತು ಸಮರದ
ವೀರಪಟ್ಟವನಾಂತನಾಚಾರ್ಯಾದಿಗಳು ನಲಿಯೆ ೩೨

ಈ ನದೀನಂದನನ ಬಲದಲಿ
ಸೇನೆ ಶಿವಗಂಜುವುದೆ ಕುಂತೀ
ಸೂನುಗಳಿಗಾರಣ್ಯಜಪವಿನ್ನವರಿಗಿಳೆಯೇಕೆ
ಮಾನನಿಧಿ ಭೀಷ್ಮಂಗೆ ಸಮರ ಸ
ಮಾನಭಟನಿನ್ನಾವನೆಂದು ಮು
ನ್ನೋನುರಾಗದ ಮೇಲೆ ಕೌರವರಾಯ ಬಣ್ಣಿಸಿದ ೩೩

ಎಲೆ ಮರುಳೆ ಭೂಪಾಲ ಕೌರವ
ಕುಲಪಿತಾಮಹನಹನು ಧರ್ಮಂ
ಗಳಲಿ ಪರಿಣತನಹನು ಕಾಳೆಗವೆತ್ತಲಿವರೆತ್ತ
ಗಳದ ಗರಳನ ದೊರೆಯ ಭಟಮಂ
ಡಲಿಯೊಳಗೆ ಮನ್ನಣೆಯೆ ಹೇಳೈ
ಕಳಿದ ಹರೆಯಂಗೆಂದು ಗಹಗಹಿಸಿದನು ಕಲಿಕರ್ಣ ೩೪

ತೊಗಲು ಸಡಿಲಿದ ಗಲ್ಲ ಬತ್ತಿದ
ಹೆಗಲು ನರುಕಿದ ನರೆತ ಮಿಾಸೆಯ
ಜಗುಳ್ದ ಹಲುಗಳ ಹಾಯಿದೆಲುಗಳ ನೆಗ್ಗಿದವಯವದ
ಅಗಿಯಲಲುಗುವ ತಲೆಯ ಮುಪ್ಪಿನ
ಮುಗುದನೀತನ ಕಾದಹೇಳಿದು
ನಗೆಯ ಸುರಿವೈ ರಾಯ ಕಟಕದೊಳೆಂದನಾ ಕರ್ಣ ೩೫

ಇಲ್ಲಿ ಭೀಷ್ಮನು ರಾಘವನ ಬಲ
ದಲ್ಲಿ ಜಾಂಬವನುಭಯವೀರರು
ಬಲ್ಲಿದರು ಬಳಿಕುಳಿದ ಸುಭಟರ ಶೌರ್ಯವೊಪ್ಪುವುದೆ
ನಿಲ್ಲು ನೀ ಕೊಲಲೆಳಸುವರೆ ಹಗೆ
ಯಲ್ಲಿಗೊಪ್ಪಿಸಿ ಕೊಲಿಸಲೇತಕೆ
ಬಿಲ್ಲಿನಲಿ ಬಡಿದಡ್ಡಗೆಡಹುವೆನೆಂದನಾ ಕರ್ಣ ೩೬

ಹಾ ನುಡಿಯದಿರು ನಿನ್ನ ಹವಣೆನ
ಮಾನಿಸನೆ ಸುರಸಿಂಧುಜನು ತಾ
ನೀನು ಮಿಗೆ ಮೇಲರಿಯೆ ಜವ್ವನದುಬ್ಬುಗೊಬ್ಬಿನಲಿ
ನೀನು ಸರಿಯೇ ರಾಮಕಟಕದ
ಹಾನಿಯನು ತಲೆಗಾಯ್ದ ಜಾಂಬವ
ಗೇನು ಕೊರತೆಯೆನುತ್ತ ಜರೆದನು ಗರುಡಿಯಾಚಾರ್ಯ ೩೭

ರಣದೊಳೊಡ್ಡಿದರಾತಿಗಳನೀ
ಹಣೆಯ ಪಟ್ಟದ ವೀರ ಜಯಿಸಲು
ಹಣವಿಗಾನೋಲೈಸೆ ಮಾಡುವೆನಡವಿಯಲಿ ತಪವ
ರಣದೊಳಿವನಡಗೆಡೆದನಾದರೆ
ಮಣೆಯುದಿರಿದಪೆನೆನ್ನೆಬರ ಮಾ
ರ್ಗಣೆಯನಾಹವದೊಳಗೆ ಸಂಧಿಸೆನೆಂದನಾ ಕರ್ಣ ೩೮

ಗಳಹದಿರು ರಾಧೇಯ ನಿನ್ನಯ
ಕುಲವ ನೋಡದೆ ಮೇರೆವಪ್ಪುವ
ಸಲುಗೆಯಿದಲೇ ಸ್ವಾಮಿಸಂಪತ್ತಿನ ಸಗಾಢತನ
ಕಲಿಗಳುಳಿದಂತೆನ್ನ ಸರಿಸಕೆ
ನಿಲುವನಾವನು ದೇವದಾನವ
ರೊಳಗೆ ನಿನ್ನೊಡನೊರಲಿ ಫಲವೇನೆಂದನಾ ಭೀಷ್ಮ ೩೯

ಕೇಳು ನೃಪ ಕೇಳೈ ಜಯದ್ರಥ
ಕೇಳು ಗುರುಸುತ ಶಲ್ಯ ಕುಂಭಜ
ಕೇಳು ದುಶ್ಶಾಸನ ವಿಕರ್ಣ ಸುಲೋಚನಾದಿಗಳು
ಕಾಳೆಗದೊಳರಿ ದಶಸಹಸ್ರ ನೃ
ಪಾಲಕರ ಮಣಿಖಚಿತನಿರ್ಮಲ
ಮೌಳಿಗಳ ದಿಗುಬಲಿಯ ಕೊಡುವೆನು ದಿವಸ ದಿವಸದಲಿ ೪೦

ಹರಿಯ ಚಕ್ರವ ತುಡುಕಿಸುವೆ ವಾ
ನರಪತಾಕನ ರಥವ ಹಿಂದಕೆ
ಮುರಿಯಲಿಸುವೆನು ಮಹಿಮರಿಬ್ಬರ ನಡೆವಳಿಯ ಕೆಡಿಸಿ
ಸುರನರೋರಗರೊಳಗೆ ಮೀಟಾ
ದರಿಗೆ ಕಟ್ಟಿದ ತೊಡರು ಇವನು
ಬ್ಬರಿಸಿ ಸುಡಿದರೆ ನೊರಜ ಕೊಲುವರೆ ಕೈದುವೇಕೆಂದ ೪೧

ಜಲಧಿಯುಬ್ಬಿದವೊಲು ಸಭಾಮಂ
ಡಲಿಯ ಸೌಹೃದವಾಗ್ವಿವಾದದ
ಕಳಕಳಿಕೆ ದಿಗುತಟವ ಗಬ್ಬರಿಸಿದುದು ಗಾಢದಲಿ
ಕೆಲರು ಭೀಷ್ಮನನಿನತನೂಜನ
ಕೆಲರು ಕೊಂಡಾಡಿದರು ಕೌರವ
ನಳುಕಿ ಭೀಷ್ಮನ ಬೇಡಿಕೊಂಡನು ವಿನಯಪರನಾಗಿ ೪೨

ಬೀಳುಕೊಂಡುದು ರಜನಿ ಮರುದಿನ
ವಾಳು ಕುದುರೆಯ ನೆರಹಿ ಧರಣೀ
ಪಾಲ ಸುಮುಹೂರ್ತದಲಿ ಹೊಯ್ಸಿದನಂದು ಹೊರಗುಡಿಯ
ಸೂಳವಿಸಿದವು ಲಗ್ಗೆಯಲಿ ನಿ
ಸ್ಸಾಳಕೋಟಿಗಳುರುಚತುರ್ಬಲ
ಮೇಳವಿಸಿ ನಡೆದುದು ಸಮಸ್ತ ಮಹಾಮಹೀಶ್ವರರು ೪೩

ವೀರ ಧೃತರಾಷ್ಟ್ರಂಗೆ ವರ ಗಾಂ
ಧಾರಿಗೆರಗಿದನವರ ಹರಕೆಯ
ಭೂರಿಗಳ ಕೈಕೊಂಡನವನೀಸುರರಿಗಭಿನಮಿಸಿ
ಚಾರುಚಮರದ ನಿಕರದವರೊ
ಯ್ಯಾರಿಸಲು ಜಯರವದ ರಭಸದು
ದಾರ ಮೆರೆಯಲು ಬೀಳುಕೊಂಡನು ರಾಜಮಂದಿರವ ೪೪

ಒಡನೊಡನೆ ಕರಿತುರಗವೇರಿದ
ರೊಡನೆ ಹುಟ್ಟಿದ ಶತಕುಮಾರರು
ಗಡಣದಾಪ್ತರು ಕರ್ಣ ಶಕುನಿ ಜಯದ್ರಥಾದಿಗಳು
ಅಡಸಿದವು ಸೀಗುರಿಗಳಭ್ರವ
ತುಡುಕಿದವು ಝಲ್ಲರಿಗಳಂತ್ಯದ
ಕಡಲವೊಲು ಪಡೆ ನಡೆಯೆ ಹಸ್ತಿನಪುರವ ಹೊರವಂಟ ೪೫

ಭುಗುಗುಗಿಪ ಚಂಬಕನ ಗಜ ಕೋ
ಟಿಗಳ ಮುಂದಣ ಡೌಡೆಗಳ ಭೂ
ಗಗನವೊಡನೊಡನೊದರೆ ಮೊರೆವ ಗಭೀರಭೇರಿಗಳ
ಅಗಿವ ಪಟಹ ಮೃದಂಗ ಕಹಳಾ
ದಿಗಳ ಕಳಕಳ ರಭಸ ದಶದಿ
ಕ್ಕುಗಳ ಮಾತಾಡಿಸೆ ಮಹಾಬಲ ತೆರಳಿತಿಭಪುರಿಯ ೪೬

ಅಗಿವ ವಜ್ರದ ಹೊಳೆಕೆಗಳೊ ದಿಟ
ಹಗಲ ತಗಡೋ ಮೇಣು ಮಿಂಚಿನ
ಬಗೆಯ ಸೆಕ್ಕೆಯೊ ಸೂರ್ಯಕಾಂತಚ್ಛವಿಯ ತೆಕ್ಕೆಗಳೊ
ಜಗುಳಿದೊರೆಗಳ ಜಾಳಿಗೆಯ ಹೊಗ
ರೊಗಲು ಝಳಪಿಸೆ ಹೊಳೆಹೊಳೆವ ಕೈ
ದುಗಳ ಹಬ್ಬುಗೆವೆಳಗು ಗಬ್ಬರಿಸಿದುದು ದಿಗುತಟವ ೪೭

ಜಲಧಿಗಳ ಕುಡಿದುದು ನಭೋಮಂ
ಡಲವ ಸೆಳೆದುದು ಸುರನದಿಯ ಮು
ಕ್ಕುಳಿಸಿತಖಿಲಾದ್ರಿಗಳ ನುಂಗಿತು ದಿವವನಳುಕಿಸಿತು
ನೆಲನ ಸವೆಸಿತು ನೇಸರಿನ ಕಂ
ಗಳನು ಕದುಕಿತು ನೆನೆಯ ಬಾರದು
ನಳಿನಭವ ಹರನಾದನೆನಲುಚ್ಚಳಿಸೆ ಪದಧೂಳಿ ೪೮

ಸುರಿವ ಗಜಮದಧಾರೆಯಲಿ ಹೊಸ
ಶರಧಿಗಳು ಸಂಭವಿಸಿದವು ನೃಪ
ವರರ ಮಕುಟದ ಮಣಿಯೊಳಾದರು ಚಂದ್ರಸೂರಿಯರು
ಗಿರಿಗಳಾದುವು ದಂತಿಯಲಿ ಪಡಿ
ಧರಣಿಯಾದವು ಛತ್ರ ಚಮರದ
ಲರರೆ ನೂತನ ಸೃಷ್ಟಿಯಾಯ್ತು ವಿರಿಂಚಸೃಷ್ಟಿಯಲಿ ೪೯

ಅರರೆ ನಡೆದುದು ಸೇನೆ ಕುಲಗಿರಿ
ಯೆರಡು ಕೂರುಮ ಫಣಿಪರಿಬ್ಬ
ಬ್ಬರ ದಿಶಾಮಾತಂಗಗಳ ಹದಿನಾರನಳವಡಿಸಿ
ಸರಸಿಜೋದ್ಭವ ಸೃಜಿಸದಿರ್ದರೆ
ಧರಿಸಲಾಪುದೆ ಧರಣಿಯೆನೆ ಕುರು
ಧರೆಗೆ ಬಂದುದು ಸೇನೆ ಪಯಣದ ಮೇಲೆ ಪಯಣದಲಿ ೫೦

ನಡೆದು ಬಂದುದು ಕೌರವೇಂದ್ರನ
ಪಡೆ ಕುರುಕ್ಷೇತ್ರಕ್ಕೆ ಮೂಡಣ
ಕಡೆಯಲಳವಡಿಸಿದರು ಬೀಡಾಯಿತ್ತು ವಹಿಲದಲಿ
ಗುಡಿಗಳನು ಬಿಡಿಸಿದರು ಲೋಹದ
ತಡಿಕೆಗಳನಳವಡಿಸಿ ಬೀಡಿನ
ನಡುವೆ ರಚಿಸಿದರವನಿಪಾಲನ ರಾಜಮಂದಿರವ ೫೧

ಆಳವಿ ನಾಲ್ವತ್ತೆಂಟರೊಳಗಿ
ಟ್ಟಳಿಸಿ ಬಿಟ್ಟುದು ಸೇನೆ ಕೋಟಾ
ವಳಯವಗಳಲ್ಲಲ್ಲಿ ತಳಿ ಮುಳುವೇಲಿ ಪಡಿಯುಗಳು
ಕೆಲದೊಳೊಪ್ಪುವ ಭೋಗವತಿ ನಿ
ರ್ಮಲ ಗಭೀರೋದಕದ ನದಿ ಕುರು
ಬಲದ ಪಾಳಯದಂಗವಿದು ಕೇಳೈ ಮಹೀಪಾಲ ೫೨

ಪಡೆಯ ಮುಂಗುಡಿ ಭೀಷ್ಮನದು ಬಲ
ನೆಡನು ಹಿಂಗುಡಿಯಾತನದು ನೃಪ
ಗಡಣಬೀಡಿನ ಕಾಹು ಗಂಗಾಸುತನ ಗುರುಭಾರ
ನಡೆವಡಾತನ ನೇಮ ಮರಳಿದು
ಬಿಡುವಡಾತನ ಮಾತು ಕೌರವ
ಪಡೆಗೆ ಭಾರಿಯ ವಜ್ರ ಪಂಜರವಾದನಾ ಭೀಷ್ಮ ೫೩

ಕೇಳು ಜನಮೇಜಯ ಧರಿತ್ರೀ
ಪಾಲ ಧೃತರಾಷ್ಟ್ರಂಗೆ ಮಕ್ಕಳ
ಮೇಲೆ ನೆನೆಹಾಯ್ತಧಿಕಶೋಕೋದ್ರೇಕ ಪಲ್ಲವಿಸೆ
ಕಾಳೆಗದೊಳೇನಾದರೋ ಭೂ
ಪಾಲತಿಲಕರು ದೃಗುವಿಹೀನರ
ಬಾಳಿಕೆಯ ಸುಡಲೆನುತ ತನ್ನೊಳು ಹಿರಿದು ಚಿಂತಿಸಿದ ೫೪

ಆ ಸಮಯದಲಿ ರಾಯ ವೇದ
ವ್ಯಾಸಮುನಿ ನಡೆತಂದು ಗತಪರಿ
ತೋಷವನು ಸಂತೈಸಿ ಕರೆಸಿದನಂದು ಸಂಜಯನ
ಆ ಸಮರವೃತ್ತಾಂತ ನಿನಗೆ ಸ
ಮಾಸ ವಿಸ್ತರವಾಗಿರಲಿ ಭೂ
ಮೀಶತಿಲಕಂಗರುಹುವುದು ನೀನೆಂದು ನೇಮಿಸಿದ ೫೫

ಪರಮ ವೇದವ್ಯಾಸ ಮುನಿಪನ
ಕರುಣವಾಗಲು ಕಂಗಳಿಗೆ ಗೋ
ಚರಿಸಿತೀ ಭಾರತ ಮಹಾಸಂಗ್ರಾಮ ಸೌರಂಭ
ಧುರದ ವೃತ್ತಾಂತವನು ಚಿತ್ತೈ
ಸರಸ ತಿಳುಹುವೆನೆಂದು ಸಲೆ ವಿ
ಸ್ತರಿಸ ಬಗೆದನು ಸಂಜಯನು ಧೃತರಾಷ್ಟ್ರ ಭೂಪತಿಗೆ ೫೬

ಅವಧರಿಸು ಧೃತರಾಷ್ಟ್ರ ಗಂಗಾ
ಭವನ ನೇಮದಲಂದು ಮಹದಾ
ಹವಕೆ ನಡೆದುದು ಕಟಕವಲ್ಲಿಯುಲೂಕನೆಂಬುವನು
ಇವರು ಕಳುಹಿದೊಡವರು ರಿಪು ಪಾಂ
ಡವರ ಹೊರಗೈತಂದನಿನ್ನಾ
ಹವಕೆ ನಿಂದರು ಧರ್ಮಪುತ್ರ ವಿಳಂಬವೇಕೆಂದ ೫೭

ಅಗ್ಗಳೆಯನೆಮ್ಮರಸ ಸಂಪ್ರತಿ
ನೆಗ್ಗಿ ಕೆಟ್ಟರಿ ನೀವು ನಿಮಗೀ
ಹುಗ್ಗಿಗರು ಹುರಿಗೂಡಿ ಗೆಲಿದಿನ್ನಿಳೆಯ ಕೊಡಿಸುವರೆ
ಅಗ್ಗಿ ತಾ ಮಾತೇಕೆ ರಣದಲಿ
ನುಗ್ಗುನುಗ್ಗಾಗದೆ ಸಹೋದರ
ರೊಗ್ಗು ಮುರಿಯದೆ ಮಾಣದರೆಗೇಡಾಯ್ತು ನಿಮಗೆಂದ ೫೮

ಬೆಂಬಲಕೆ ತಾನೆಂದು ಬಯಲ ವಿ
ಡಂಬದಲಿ ಕಾಳೆಗವ ಮಸೆದರೆ
ನಂಬಿ ಕೆಟ್ಟರಿ ಕೃಷ್ಣನನು ನೀವೇನ ಮಾಡುವಿರಿ
ಇಂಬುಗೆಟ್ಟುದು ರೀತಿ ರಣಕೆ ತ್ರಿ
ಯಂಬಕನನಮರಾಧಿಪನ ಕೈ
ಕೊಂಬನೇ ಕೌರವನೆನಲು ಖತಿಗೊಂಡನಾ ಭೀಮ ೫೯

ಸೀಳು ಕುನ್ನಿಯ ಬಾಯನೆಲವೋ
ತೋಳ ತೀಟೆಯನವನ ನೆತ್ತಿಯ
ಮೇಲೆ ಕಳೆವೆನು ಕಲಕುವೆನು ಕೌರವ ಬಲಾಂಬುಧಿಯ
ಹೇಳು ಹೋಗೀ ನಾಯನಾಡಿಸಿ
ಕೇಳುತಿರಲೇಕಹಿತ ಕುರುಕುಲ
ಕಾಲಭೈರವನೆಂದು ನಿನ್ನೊಡೆಯಂಗೆ ಹೇಳೆಂದ ೬೦

ಮಾಡಲಿದ್ದುದು ಬಹಳ ಪೌರುಷ
ವಾಡಿ ಕೆಡಿಸಲದೇಕೆ ಕೌರವ
ರಾಡಿ ಕೆಡಿಸಲಿ ಮಾಡಿ ಕೆಡಿಸಲಿ ಚಿಂತೆ ನಮಗೇಕೆ
ಮಾಡಿದೆವು ಗುರುಭಾರವನು ಮುರ
ಗೇಡಿಯಲಿ ರಣಪಾರಪತ್ಯವ
ಮಾಡುವಾತನು ಕೃಷ್ಣನೆಂದನು ಧರ್ಮಸುತ ನಗುತ ೬೧

ವೈರಿದೂತನ ಕಳುಹಿದನು ಕೈ
ವಾರಿಗಳು ಜಯಜಯಯೆನಲು ಹೊಂ
ದೇರ ತರಸಿದನಬುಜನಾಭನ ಪದಯುಗಕೆ ನಮಿಸಿ
ವಾರುವದ ಖುರನಾಲ್ಕರಲಿ ಮಣಿ
ಚಾರು ಕನಕವ ಸುರಿದು ಧರ್ಮಜ
ತೇರನೇರಿದನೊದರಿದವು ನಿಸ್ಸಾಳ ಕೋಟಿಗಳು ೬೨

ಹರಿಯ ಬಲವಂದಣ್ಣನಂಘ್ರಿಗೆ
ಶಿರವ ಚಾಚಿ ನಿಜಾಯುಧವ ವಿ
ಸ್ತರಿಸಿ ಪವನಜ ಪಾರ್ಥಮಾದ್ರೀಸುತರು ರಥವೇರಿ
ಧುರಕೆ ನಡೆದರು ದ್ರುಪದ ಸಾತ್ಯಕಿ
ವರ ವಿರಾಟಾದಿಗಳು ಚೂಣಿಯೊ
ಳುರವಣಿಸಿದರು ಸೇನೆ ನಡೆದುದು ಮುಂದೆ ಸಂದಣಿಸಿ ೬೩

ಬಳಿಕ ಧೃಷ್ಟದ್ಯುಮ್ನನಾಜ್ಞೆಯೊ
ಳಳವಿಗೊಟ್ಟುದು ಸೇನೆ ಮೂಡಣ
ಜಲಧಿಗಾಂತುದು ಪಶ್ಚಿಮೋದಧಿಯೆಂಬ ರಭಸದಲಿ
ಪಳಹರದ ತೋಮರದ ಕುಂತಾ
ವಳಿಯ ಚಮರಚ್ಛತ್ರಮಯ ಸಂ
ಕುಳದಿನಾದುದು ಭೂತ ನಾಲ್ಕಾಕಾಶಗತವಾಗಿ ೬೪

## ಎರಡನೆಯ ಸಂಧಿ

ಸೂ. ಸಾಮದಲಿ ಪರಬಲದ ಸುಭಟ
ಸ್ತೋಮವನು ತನ್ನೊಳಗು ಮಾಡಿಯೆ
ಭೂಮಿಪತಿ ಯಮನಂದನನು ಸಂಗ್ರಾಮಕನುವಾದ

ಕೇಳು ಜನಮೇಜಯ ಧರಿತ್ರೀ
ಪಾಲ ಧೃಷ್ಟದ್ಯುಮ್ನ ಭೀಷ್ಮರ
ಪಾಳಯದೊಳಂದಮಮ ಕೈಗೈದಿಳೆಗೆ ಹೊಸತೆನಿಸಿ
ಕಾಳೆಗಕ್ಕನುವಾಗಿ ರಥತುರ
ಗಾಳಿ ಕರಿ ಕಾಲಾಳು ದೊರೆಗಳ
ಮೇಲುಗೈಚಮರಿಗಳನೀಕ್ಷಿಸುತಿದ್ದುದುಭಯಬಲ ೧

ಮಡದ ಸೋಂಕಿಂ ಮುನ್ನ ಗಗನವ
ತುಡುಕ ಬಗೆದವು ತೇಜಿಗಳು ನಸು
ಸಡಿಲಬಿಡೆ ವಾಘೆಯಲಿ ಚಿಗಿದುವು ರಥದ ವಾಜಿಗಳು
ತುಡುಕುವಂಕುಶದಿಂದ ಮುನ್ನಿಳೆ
ಯೊಡೆಯೆ ಗಜ ಗಾಢಿಸಿದವರಸರ
ಬಿಡುಹು ತಡೆದೆಡಗಲಸಬಗೆದುವು ವಿಗಡ ಪಾಯದಳ ೨

ಗಜದ ಬಲುಗರ್ಜನೆಯ ವಾಜಿ
ವ್ರಜದ ಹೇಷಿತರವದ ತೇರಿನ
ಗಜಬಜದ ಕಾಲಾಳು ಕಡುಹಿನ ಬೊಬ್ಬೆಯುಬ್ಬರದ
ಗಜರುವಗ್ಗದ ಬೊಗ್ಗುಗಳ ದಿ
ಗ್ವ್ರಜವ ನುಡಿಸುವ ರಾಯಗಿಡಿಗನ
ವಿಜಯಬಲ ತೊಡರಿಕ್ಕಿತೈ ಕಲ್ಪಾಂತ ಸಾಗರಕೆ ೩

ತಿಗಡಲೊದರುವ ಹರಿಗೆಗಳ ಗೌ
ರಗಿವ ಹೆಗ್ಗಹಳೆಗಳ ಹೊನ್ನಾ
ಯುಗದ ಖಡುಗದ ಗಜರು ಡೊಂಕಣಿಗಳ ಝಣತ್ಕೃತಿಯ
ಬಿಗಿದ ಬಿಲು ಬೊಬ್ಬೆಗಳ ಬಿರುದರ
ವಿಗಡ ಮೂದಲೆಗಳ ಮಹಾಧ್ವನಿ
ಬಿಗಿದುದೈ ತಾವರೆಯ ತನಯನ ಕರ್ಣ ಕೋಟರವ ೪

ಕುಣಿವ ಕುದುರೆಯ ಮದದ ಬಲುಭಾ
ರಣೆಯಲೊಲೆವಾನೆಗಳ ತುರಗವ
ಕೆಣಕಿ ಸರಳಿಸಿ ಹಿಡಿವ ತೇರಿನ ಸೂತರೋಜೆಗಳ
ಅಣೆವ ಹರಿಗೆಯನೊಬ್ಬನೊಬ್ಬರ
ನಣಸಿನಲಿ ತಿವಿದಗಿವ ಭಟರೊ
ಡ್ಡಣೆ ಸಘಾಡಿಸಿತೆರಡುಬಲದಲಿ ಭೂಪ ಕೇಳೆಂದ ೫

ಝಳಪದಲಿ ಬೊಬ್ಬಿಡುವಡಾಯುಧ
ಹೊಳವುಗಳ ಡೊಂಕಣಿಯ ತಳಪದ
ಬೆಳಗುಗಳ ಬಟ್ಟೇರ ಧಾರೆಯ ಬಳ್ಳಿಮಿಂಚುಗಳ
ಅಲಗಿನುಬ್ಬರಗಿಡಿಯ ಹಬ್ಬುಗೆ
ಥಳಥಳಿಸಿ ಸೈಗರೆದುದೈ ಹೆ
ಬ್ಬಲ ದಿವಾಕರಶತವನೆನೆ ಹೆಸರಿಡುವನಾರೆಂದ ೬

ಕೇಳು ಜನಮೇಜಯ ಧರಿತ್ರೀ
ಪಾಲ ಭೀಷ್ಮನ ಹೊರೆಗೆ ಕುರುಭೂ
ಪಾಲ ಬಂದನು ಬಿನ್ನವಿಸಿದನು ಮುಕುಳಕರನಾಗಿ
ಮೇಳದಲಿ ಮಂಡಳಿಸಿದರಿನ್ನಪ
ಜಾಲದಲಿ ಯಮಸೂನುವಾವನು
ಮೇಲೆ ಭೀಮಾರ್ಜುನರ ವಿವರಿಸಿ ತೋರಬೇಕೆಂದ ೭

ನಸುನಗೆಯ ಚೂಣಿಯಲಿ ವದನದ
ರಸುಮೆ ಝಳಪಿಸೆ ಕೌರವೇಂದ್ರಂ
ಗುಸುರಿದನು ಕಲಿಭೀಷ್ಮನವಧರಿಸೈ ಮಹೀಪತಿಯೆ
ಪಸರಿಸಿದ ಮುಗಿಲೊಡ್ಡಿನಲಿ ಮಿಂ
ಚೆಸೆವವೊಲು ಗಜದಳದ ಮಧ್ಯದೊ
ಳೆಸೆವನಾತನು ವೀರಧೃಷ್ಟದ್ಯುಮ್ನ ನೋಡೆಂದ ೮

ಇವ ಕಣಾ ಪಾಂಡವರ ಸೇನಾ
ರ್ಣವಕೆ ನಾಯಕನಿವನ ಕೆಲಬಲ
ದವರು ತೆಕ್ಕೆಯ ತೇರ ತೇಜಿಯ ಥಟ್ಟಿನುನ್ನತಿಯ
ಬವರಿಗರು ಪಾಂಚಾಲಕುಲ ಸಂ
ಭವರು ದ್ರುಪದ ಸಹೋದರರು ಮ
ತ್ತಿವರು ಸೃಂಜಯ ವರ ಯುಧಾಮನ್ಯೂತ್ತಮೌಂಜಸರು ೯

ಡೊಂಕಣಿಯ ಹೊದರುಗಳಲೆಡಬಲ
ವಂಕದಾನೆಯ ಥಟ್ಟುಗಳ ನಿ
ಶ್ಶಂಕಮಲ್ಲನು ದ್ರುಪದನೀತ ವಿರಾಟನೃಪನೀತ
ಮುಂಕುಡಿಯ ನಾಯಕರಿವರು ಪತಿ
ಯಂಕಕಾರರು ಇವರ ಬಳಿಯಲಿ
ಬಿಂಕದೆರಡಕ್ಷೋಣಿ ಬಲವದೆ ರಾಯ ನೋಡೆಂದ ೧೦

ಅವರ ಮೋಹರದಾಚೆಯಲಿ ನಿಂ
ತವರು ಕೊಂತೀಭೋಜ ಕೇಕಯ
ರವರ ಬಳಿಯಲಿ ತಳಿತುದೆರಡಕ್ಷೋಹಿಣೀ ಸೇನೆ
ಅವರ ಹತ್ತಿರೆ ಮೋಹರಿಸಿ ನಿಂ
ದವರು ಪಾಂಡ್ಯ ಶಿಖಂಡಿ ಸೋಮಕ
ರವರ ಮೋಹರದೊಳಗೆ ನೋಡಕ್ಷೋಹಿಣೀ ಸೇನೆ ೧೧

ಅರೆನೆಲೆಯ ದಳದತ್ತ ದೃಷ್ಟಿಯ
ಹರಿಯಬಿಡು ನೋಡಲ್ಲಿ ಕೌಂತೇ
ಯರ ಕುಮಾರರನಮಲ ಪಂಚ ದ್ರೌಪದೀಸುತರ
ಉರಿಯ ಕರುವಿಟ್ಟಂತೆ ವಿಲಯದ
ಹರನ ಖತಿ ಹೊಗೆವಂತೆ ಸಿಡಿಲಿನ
ಹೊರಳಿ ಹೊದರೆದ್ದಂತೆ ನಿಂದವನವ ಘಟೋತ್ಕಚನು ೧೨

ಭೀಮಸೇನನ ಮಗನವನು ಸಂ
ಗ್ರಾಮ ಚಾಪಟನವನ ಬಳಿಯಲಿ
ತಾಮಸದ ಬಲುಮೊಗದ ಹೊಗರಿನ ಹೊಳೆವ ದಾಡೆಗಳ
ಕಾಮರೂಪಿಗಳೊಂದು ಕೋಟಿ ಸ
ನಾಮದೈತ್ಯರು ಕುಂಭಕರ್ಣ
ಸ್ತೋಮವವನಲದೆ ಲಯಕೃತಾಂತನ ಕ್ರೂರ ಪರಿವಾರ ೧೩

ಅವರ ಹೊರೆಯಲಿ ಫಲುಗುಣಗೆ ಮಲೆ
ವವರ ಗಂಡನು ರಿಪುಕುಮಾರಕ
ನಿವಹ ಕಾಳಾನಳನು ನೋಡಭಿಮನ್ಯುವರ್ಜುನನ
ಕುವರನಿವ ಮಗುವಲ್ಲ ಬಲುಗೆ
ಯ್ಯವನ ಮೋಹರದೊತ್ತಿನಲಿ ನಿಂ
ದವರು ಸಾತ್ಯಕಿ ಚೇಕಿತಾನ ಪ್ರಮುಖ ನಾಯಕರು ೧೪

ಅವರೊಳೊಂದಕ್ಷೋಹಿಣಿಯದು ಮಾ
ಧವನ ಮನೆಯದು ಧೃಷ್ಟಕೇತು
ಪ್ರವರನಾತನು ಚೈದ್ಯನಂದನನವರ ಕಂಡಿಹನು
ಅವರ ಹೊರೆಯಲಿ ವೀರ ಸೇನಾ
ನಿವಹದೊಳು ಸಹದೇವನಾತನ
ಸವಹರೆಯ ನಕುಲಾಂಕನಿವರಾಹವ ಧುರಂಧರರು ೧೫

ಇತ್ತಲಿದು ಕಲ್ಪಾಂತರುದ್ರನ
ಮೊತ್ತ ಕಾಳೋರಗನ ಜಂಗುಳಿ
ಮೃತ್ಯುವಿನ ಮೋಹರ ಕೃತಾಂತನ ಥಟ್ಟು ಭೈರವನ
ತೆತ್ತಿಗರ ಧಾವಣಿಯೊಳಣ್ಣನ
ಮತ್ತವಾರಣ ಭೀಮಸೇನನ
ನಿತ್ತ ನೋಡೈ ಮಗನೆ ಕುರುಕುಲ ಕೇಣಿಕಾರನನು ೧೬

ಕೆಲದಲಾ ತರುವಾಯಲಾಹವ
ದಳಲಿಗರ ಮೇಳದಲಿ ಮಕುಟದ
ಲಲಿತರತ್ನಪ್ರಭೆಯ ಲಹರಿಯ ಲಾವಣಿಗೆ ಮಿಗಲು
ಚಲತುರಂಗದ ಭಾರಿಯಾನೆಯ
ದಳದ ರಥದ ಪದಾತಿಮಧ್ಯದ
ಹೊಳಹಿನಲಿ ನಿಂದಾತನಾತ ಮಹೀಶ ಧರ್ಮಜನು ೧೭

ಆತನೆಡವಂಕದಲಿ ಹನುಮನ
ಕೇತನದ ಗರುವಾಯಿಯಲಿ ನವ
ಶಾತಕುಂಭವರೂಥದಲಿ ನೆರೆ ಶೀವಿದಸ್ತ್ರದಲಿ
ನೂತನಾಶ್ವ ನಿಕಾಯ ಖುರಪುಟ
ಧೂತಧೂಳೀಪಟಲವಿಹಿತ ನಿ
ಶಾತಘನ ಜಯಯುವತಿವಿಟನರ್ಜುನನ ನೋಡೆಂದ ೧೮

ತಿಳಿಯಲೊಬ್ಬನ ರೋಮರೋಮದ
ಕುಳಿಯೊಳಗೆ ಬ್ರಹ್ಮಾಂಡಕೋಟಿಯು
ಸುಳಿವವು ಗಡ ಶ್ರುತಿನಿಕರವೊರಲಿದರೊಳಗುದೋರ ಗಡ
ಹಲವು ಮಾತೇನಾತನೀತನ
ಬಳಿಯ ಬಂಡಿಯ ಬೋವನಾಗಿಯೆ
ಸುಳಿವನಾತನ ನೋಡು ಮಗನೇ ವೀರನರಯಣನ ೧೯

ಅದೆ ದುರಂತದ ದುರುಳ ದೊಪ್ದೆಯ
ಹದನ ಬಣ್ಣಿಸಲೆನಗೆ ನೂಕದು
ತುದಿಯಲರಿವೆನು ದಳದ ಮನ್ನೆಯ ಮಂಡಲೀಕರಲಿ
ಕದನವಿದು ಭಾರಂಕವಾರ
ಭ್ಯುದಯ ತಲೆದೋರುವುದೊ ನಮಗೇ
ಕಿದರ ಚಿಂತೆ ಮುರಾರಿ ಬಲ್ಲನು ಕಂದ ಕೇಳೆಂದ ೨೦

ಅವರೊಳೇಳಕ್ಷೋಣಿಬಲ ನ
ಮ್ಮವರೊಳಗೆ ಹನ್ನೊಂದು ಮತ್ತವ
ರಿವರ ಸಖ್ಯಕೆ ನೆರೆದುದೇಕಾದಶಶತಕ್ಷೋಣಿ
ತವಿಸುವರೆ ನನಗೊಂದು ದಿನ ಮೂ
ದಿವಸದಲಿ ಗುರುವೈದು ದಿವಸಕೆ
ರವಿಜ ನಿಮಿಷಕೆ ದ್ರೌಣಿ ನಿಮಿಷಾರ್ಧಕೆ ಧನಂಜಯನು ೨೧

ಎನಲು ಗುರುತನಯನ ಸಘಾಟಕೆ
ಕೊನರಿತಾತನ ಮನವಜಾಂಡಕೆ
ತನುಪುಲಕದುಬ್ಬಿನಲಿ ಪಾರ್ಥನ ಪಟುಪರಾಕ್ರಮಕೆ
ಮೊನೆಗಣೆಯ ನುಡಿ ಸೋಂಕೆ ಕರ್ಣವ
ನಿನಿತು ಕುಸಿದ ರಸಾತಳಕೆ ಕುರು
ಜನಪನ ನಿಬದ್ಧಪ್ರಲಾಪವ ಬಿಡಿಸಿದನು ಭೀಷ್ಮ ೨೨

ತಾಗಲನುಗೈದುಭಯಬಲ ಕೈ
ಲಾಗನೀಕ್ಷಿಸುತಿರಲು ರಿಪುಬಲ
ಸಾಗರದ ಸೌರಂಭವನು ಮಿಗೆ ನೋಡಿ ಧರ್ಮಜನು
ತೂಗಿದನು ಶಿರವನು ಮಹಾಹವ
ವೀಗಲಾಗದ ಮುನ್ನ ಭೇದದ
ಲಾಗಿನಲಿ ಭೀಷ್ಮಾದಿಗಳ ಮನವೊಲಿಸಬೇಕೆಂದ ೨೩

ಬಂದು ಭೀಷ್ಮನ ಚರಣ ಕಮಲ
ದ್ವಂದ್ವದಲಿ ಚಾಚಿದನು ಮಕುಟವ
ನಿಂದಿನಾಹವದೊಳಗೆ ನಮಗಿನ್ನೇನು ನಿರ್ವಾಹ
ನಿಂದು ನೀವ್ ಕಾದುವರೆ ನಮಗಿ
ನ್ನೆಂದು ಹರಿವುದು ಬವರವೆಮಗೇ
ನೆಂದು ಬೆಸಸಿದಿರೆನುತ ಕರುಣವ ತೋರಿದನು ಭೂಪ ೨೪

ನೀವರಿಯಲಾವುತ್ತರಾಯಿಗ
ಳಾವ ಪರಿಯಲು ಕೌರವರು ಬಹ
ಳಾವಮಾನವನೆಮಗೆ ನೆಗಳಿದರೆಮ್ಮ ಸತ್ಯವನು
ನೀವು ಮೆಚ್ಚಲು ನಡಸಿದೆವು ತಲೆ
ಗಾವುದುಂಟೇ ಕರುಣಿಸಲ್ಲದ
ಡಾವ ಹದನೆಂದೆವಗೆ ನೇಮವ ಕೊಟ್ಟು ಕಳುಹೆಂದ ೨೫

ಏಳು ಮಗನೇ ನಮ್ಮ ಮತಿಯನು
ಕೇಳೆನುತ ಭೂಪಾಲ ತಿಲಕನ
ಮೌಳಿಯನು ನೆಗಹಿದನು ಗಂಗಾಸೂನು ನಸುನಗುತ
ಆಳುಗೊಂಡನು ಕೌರವನು ಪರ
ರಾಳುತನವೆಮಗಾಯ್ತು ಪರಸೇ
ವಾ ಲಘುಸ್ಥಿತರೆಮ್ಮನೇತಕೆ ನುಡಿಸಿದಪೆಯೆಂದ ೨೬

ಹಿರಿಯನಾಗಲಿ ಸುಜನನಾಗಲಿ
ಗರುವನಾಗಲಿ ಅರ್ಥವುಳ್ಳನ
ಚರಣಸೇವಾಪರರು ಜಗದಲಿ ವರ್ತಮಾನವಿದು
ಪರರ ಭಜಕರೊಳಾವಗುಣವಾ
ವಿರವದಾವಗ್ಗಳಿಕೆ ಯಾವುದು
ಗರುವತನವೈ ತಂದೆ ಪುರುಷಾಧಮನು ತಾನೆಂದ ೨೭

ಕೌರವನ ಧನವೆಂಬ ಘನಸಂ
ಸಾರಗುಣದೊಳು ಬದ್ಧನಾದೆನು
ಧೀರ ನಾನೇಗೈವೆನೆನೆ ಯಮಸೂನು ಕೈಮುಗಿದು
ವೈರವೃತ್ತಿಯ ರಣದೊಳೆಮಗಿ
ನ್ನಾರು ಗತಿ ನೀನುಭಯನೃಪರಿಗೆ
ಕಾರಣಿಕ ನೀ ಮುನಿದಡೆಮಗಿನ್ನಾಸೆಯಿಲ್ಲೆಂದ ೨೮

ಮಾನನಿಧಿ ಕೇಳ್ ಕೌರವಂಗಾ
ಧೀನವೆನ್ನಯ ತನು ವಿಧಾತ್ರಾ
ಧೀನವೆನ್ನಯ ಜೀವವದು ಕಾರಣದಿನಾವಹಕೆ
ನೀನು ಚಿಂತಿಸಬೇಡ ನನ್ನವ
ಸಾನಕಾಲಕೆ ಮತ್ತೆ ಬರಲು ನಿ
ದಾನವನು ನೆರೆ ಬುದ್ಧಿಗಲಿಸುವೆನೀಗ ಮರಳೆಂದ ೨೯

ಎನೆ ಹಸಾದವೆನುತ್ತ ಯಮನಂ
ದನನು ಕಳುಹಿಕೊಂಡು ಗಂಗಾ
ತನುಜಚಿತೋಕ್ತಿಗಳ ನೆನೆದಡಿಗಡಿಗೆ ಪುಳಕಿಸುತ
ವಿನುತಮತಿ ನಡೆತರಲು ಸುಭಟರು
ತನತನಗೆ ತೊಲಗಿದರು ಪಾಂಡವ
ಜನಪ ಮೈಯಿಕ್ಕಿದನು ದ್ರೋಣನ ಚರಣ ಕಮಲದಲಿ ೩೦

ಅರಸ ಬಂದನಪೂರ್ವವಾಯಿತು
ದರುಶನವು ತನಗೆನುತ ಗರುಡಿಯ
ಗುರು ಮಹೀಪಾಲಕನ ಮಕುಟವನೆತ್ತಿದನು ಬಳಿಕ
ಬರಸೆಳೆದು ಬಿಗಿಯಪ್ಪಿದನು ಸಂ
ಗರದ ಸಮಯದಲೇಕೆ ಬಂದಿರಿ
ಭರವಸದ ಬಗೆಯೇನು ಬಿನ್ನಹ ಮಾಡು ಸಾಕೆಂದ ೩೧

ಎವಗೆ ದೈವವು ನೀನು ಗುರು ನೀ
ನೆವಗೆ ತಾತನು ನೀನು ಮಹದಾ
ಹವದೊಳಗೆ ಪತಿಕರಿಸಿ ರಕ್ಷಿಸಲೊಡೆಯ ನೀನೆಮಗೆ
ಅವನಿಯಭಿಲಾಷೆಯಲಿ ತೆತ್ತುದು
ಬವರವೆಮಗಿನ್ನೇನು ಗತಿ ಕೌ
ರವ ಜಯೋಪಾಯಕ್ಕೆ ಹದನೇನೆಂದು ನೃಪ ನುಡಿದ ೩೨

ಅರಸ ಕೇಳರ್ಥಕ್ಕೆ ಧರಣೀ
ಶ್ವರರ ಕಿಂಕರರರ್ಥ ತಾ ಕಿಂ
ಕರತೆಯನು ಮಾಡುವುದು ಜಗದಲಿ ವರ್ತಮಾನವಿದು
ನಿರುತ ಕೌರವನರ್ಥದಲಿ ಕಿಂ
ಕರತೆಮಗಾಯಿತ್ತು ರಾಜ್ಯೈ
ಶ್ವರಿಯ ಸೇವಾಪರರಿಗೀ ಸ್ವಾತಂತ್ರ್ಯವಿಲ್ಲೆಂದ ೩೩

ಆದರೆಮಗಿನ್ನೇನು ಗತಿ ರಣ
ವಾದಸಿದ್ಧಿಯದೆಂತು ಜಯಸಂ
ಪಾದಕರು ನಮಗಾರೆನಲು ಗುರು ಕೇಳಿ ನಸುನಗುತ
ಕಾದುವಾ ಸುಮಯದೊಳಗಪ್ರಿಯ
ವಾದ ನುಡಿಗಳ ಕೇಳಿದಾಕ್ಷಣ
ಮೇದಿನಿಯೊಳಾವಿರೆವು ಚಿಂತಿಸಬೇಡ ಹೋಗೆಂದ ೩೪

ಎನಲು ಪರಿತೋಷದಲಿ ಯಮನಂದ
ನನು ಕಳುಹಿಸಿಕೊಂಡು ನಡೆತಂ
ದನು ಮಹಾಹವರಂಗಮಧ್ಯದ ಕೃಪನ ಹೊರೆಗಾಗಿ
ವಿನಯದಲಿ ಬಿನ್ನಯಿಸೆ ಕೃಪನೆಂ
ದನು ನಿಧಾನಿಸಲಾವವಧ್ಯರು
ಜನಪ ನಿನ್ನನು ನಾವು ಕೊಲ್ಲೆವು ಮರಳು ನೀನೆಂದ ೩೫

ಕೃಪನ ಬೀಳ್ಕೊಂಡತುಳಜಯಲೋ
ಲುಪನು ಶಲ್ಯನ ಬಂದು ಕಂಡನು
ವಿಪುಳಮತಿ ಮಾತಾಡಿದನು ನಿಜರಾಜಕಾರಿಯವ
ಕೃಪೆಯ ಮಾಡುವುದೆವಗೆ ರಣದಲಿ
ತಪನತನಯನ ತೇಜವನು ನಿ
ಷ್ಕೃಪೆಯೊಳವಗಡಿಸೆಂದು ಶಲ್ಯನೊಳಭಯವನು ಪಡೆದ ೩೬

ಬಲದೊಳಗೆ ಬೇಹವರ ನಾಲ್ವರ
ನೊಳಗುಮಾಡಿ ಧರಾಧಿಪನು ಮನ
ಗೆಲವಿನಲಿ ಮರಳಿದನು ಕೌರವ ಮೋಹರವನುಳಿದು
ತಿಳಿದು ತನ್ನೊಳು ಭೀಮಸೇನನ
ಬಲು ಗದಾಘಾತದಲಿ ಕುರುಕುಲ
ವಳಿವುದೆಂದು ಯುಯುತ್ಸು ರಥದಿಂದಿಳಿದು ನಡೆತಂದ ೩೭

ಎರಡು ಬಲ ಬೆರಗಾಗಿ ನೋಡು
ತ್ತಿರೆ ಯುಯುತ್ಸು ಮಹೀಶನಂಘ್ರಿಗೆ
ಕರವ ಮುಗಿದೆರಗಿದರೆ ಹಿಡಿದೆತ್ತಿದನು ಕರುಣದಲಿ
ಧರಣಿಪತಿ ನೀನಾರೆನಲು ಕೇ
ಳರಸ ಕೌರವನನುಜ ನಿಮ್ಮನು
ಶರಣುವೊಗಲೈತಂದೆಯಭಯವನಿತ್ತು ಸಲಹೆಂದ ೩೮

ಹಿಂದೆ ರಾವಣನನುಜನಿರದೈ
ತಂದು ಶರಣಾಗತರ ರಕ್ಷಿಪ
ನೆಂದು ರಾಘವನಂಘ್ರಿ ಕಮಲವ ಕಂಡು ಬದುಕಿದನು
ಇಂದು ನಿಮ್ಮಂಘ್ರಿಗಳ ಮರೆವೊಗ
ಬಂದೆನೆನ್ನನು ಪತಿಕರಿಸಬೇ
ಕೆಂದು ಕೌರವನನುಜ ಬಿನ್ನಯಿಸಿದನು ಭೂಪತಿಗೆ ೩೯

ಎನಗೆ ಭೀಮಾರ್ಜುನರವೊಲು ನೀ
ನನುಜನಲ್ಲದೆ ಬೇರೆ ನಿನ್ನಲಿ
ಮನವಿಭೇದವ ಬಲ್ಲೆನೇ ಬಾಯೆನುತ ಕೈವಿಡಿದು
ಜನಪನಭಯವನಿತ್ತು ಕೌರವ
ನನುಜನನುಕೊಂಡೊಯ್ದು ನಾಹವ
ದನುಕರಣೆಯಲಿ ಸೇನೆ ಗಜಬಜಿಸಿತ್ತು ಬೊಬ್ಬೆಯಲಿ ೪೦

## ಮೂರನೆಯ ಸಂಧಿ

ಸೂ. ರಾಯದನುಜಘರಟ್ಟ ಪಾಂಡವ
ರಾಯ ಜಂಗಮಜೀವ ನಿರ್ಜಿತ
ಮಾಯ ನಿಜವನು ತೋರಿ ಪಾರ್ಥನನೊಲಿದು ಬೋಧಿಸಿದ

ಹಳಚಲನುವಾಯ್ತುಭಯಸೇನಾ
ಜಲಧಿ ಕಳಕಳ ಮಿಗಲು ಮಾರುತಿ
ಮೊಳಗಿದನು ಪೌಂಡ್ರಕವ ಭೂಪನನಂತವಿಜಯವನು
ಇಳೆ ಹಿಳಿಯೆ ಮಣಿಪುಷ್ಪಕದ ನಿ
ರ್ಮಲ ಸುಘೋಷದೊಳಮಮ ಕೋಳಾ
ಹಳಿಸಿದುದು ಸಹದೇವ ನಕುಲರು ಸಮರಕನುವಾಯ್ತು ೧

ಕೇಳು ಜನಮೇಜಯ ಧರಿತ್ರೀ
ಪಾಳ ಹಿಮಕರ ಕುಲಲಲಾಮರು
ಕಾಳಗಕೆ ಕೈದಟ್ಟಿ ಹರಿದುದು ಕಳನ ಚೌಕದಲಿ
ಆಳು ಗಜಬಜಿಸಿತ್ತು ರಾವುತ
ರೋಳಿ ಸೇರಿತು ಸರಸದಲಿ ದೆ
ಖ್ಖಾಳಿಸಿದುದಿಭರಥನಿಕಾಯದ ಬೆರಳ ಬೊಬ್ಬೆಯಲಿ ೨

ಹಿಂಡೊಡೆದು ಮುಂಗುಡಿಯ ತಾ ಕಯಿ
ಕೊಂಡು ದೂವಾಳಿಯಲಿ ರಥವನು
ಮಂಡಳಿಸಿ ಕೆಲ್ಲಯಿಸಿ ಉಳಿಯಲಿ ಲಲಿತಪೇರಯವ
ಚಂಡಗತಿಚಾಳನೆಯಲುಬ್ಬಟೆ
ಗೊಂಡಿಸದೆ ವೇಡೆಯವ ಕೊಳ್ಳದೆ
ಗಾಂಡಿವಿಯ ಕೈಮನದ ಲಾಗನು ಪಡೆದನಸುರಾರಿ ೩

ಮುರವಿಜಯ ನಿಜಪಾಂಚಜನ್ಯವ
ನಿರದೆ ಫಲುಗುಣ ದೇವದತ್ತ
ಸ್ಫುರಿತರವವನು ರಚಿಸಿದನು ಮೂಲೋಕ ಮೈಮರೆಯೆ
ತುರಗವನು ಬೋಳಯಿಸಿ ವಾಘೆಯ
ತಿರುಹಿ ಚಮ್ಮಟಿಗೆಯಲಿ ತೇಜಿಯ
ಬರಿಯ ಬೆದರಿಸಿ ಕೃಷ್ಣ ಪಾರ್ಥನ ರಥವ ಉಳಿವಡೆದ ೪

ಚಟುಳ ಹಯಖುರ ಖಂಡಿತೋರ್ವೀ
ನಿಟಿಲ ನಿರ್ಗತ ಬಹಳ ಧೂಳೀ
ಪಟಲ ಧೂಸರ ಸಕಲ ಜಗದಸುರಾರಿ ನಲವಿನಲಿ
ಪಟುಗತಿಯ ಗರುವಾಯಿಯಲಿ ಸಂ
ಘಟಿಸಿ ಹಯವನು ಸುಳಿಸಿದನು ಚೌ
ಪಟದೊಳೊಯ್ಯಾರಿಸುತ ಬೋಳಯಿಸಿದನು ಕಂಧರವ ೫

ಗತಿಗೆ ಕುಣಿದವು ನಾಸಿಕದ ಹೂಂ
ಕೃತಿಯ ಫೇನೋನ್ನತಿಯ ಬಳಿಯುವ
ಗತಿಯ ಕಬ್ಬಿಯ ಕೊಂಡಿಗಳ ಘಣಘಣಿತ ನಿಸ್ವನದ
ವಿತತ ಸೃಕ್ವದ ಲೋಳಿಗಳ ಸಂ
ಸ್ರುತ ಜಠರಜ ಸ್ವೇದಜಲ ಲಾ
ಲಿತ ಹಯಾವಳಿ ಕಳನ ಗೆಲಿದವು ಹರಿಯ ನೇಮದಲಿ ೬

ನಿಲಿಸಿದನು ಫಲುಗುಣನ ರಥವನು
ತಳಪಟದೊಳೇನೈ ಮಹಾರಥ
ರಳವಿಗೊಡ್ಡಿದೆ ನಿನ್ನೊಳುಂಟೇ ಕೈಮನದ ಕಡುಹು
ಉಳಿಯ ಬಿಲುವಿದ್ಯಾಚಮತ್ಕೃತಿ
ಯಳವು ಗರುಡಿಯೊಳಲ್ಲದೀ ರಿಪು
ಬಲಕೆ ತೋರಿಸಬಹುದೆ ಹೇಳೆಂದರ್ಜುನನ ಜರೆದ ೭

ಸಹಸವೇನದು ಜೀಯ ನೆರೆದಿ
ರ್ದಹಿತಬಲವೆನಗಾವ ಘನ ಬಿ
ನ್ನಹವ ಕೇಳೈ ಕೃಷ್ಣ ಕೌರವರಾಯರೊಡ್ಡಿನಲಿ
ಬಹಳ ಬಲರಿವರಾರು ಸೇನಾನಿ
ವಹದಲಿ ನಾಯಕರ ವಿವರಿಸ
ಬಹರೆ ಬೆಸಸೆನೆ ನುಡಿದನು ನಗೆಯ ಮೊಳೆ ಮಿನುಗೆ ೮

ಆದಡರ್ಜುನ ನೋಡು ಸೈನ್ಯ ಮ
ಹೋದಧಿಯ ಮಧ್ಯದಲಿ ಮೆರೆವವ
ನಾ ದುರಂತ ಪರಾಕ್ರಮನು ಗಂಗಾಕುಮಾರಕನು
ಕಾದಲರಿದಪನಖಿಲಬಲ ವಿಭು
ವಾದನಿವನತಿಬಲನು ಕಾಲನ
ಸಾಧಿಸಿದ ಛಲದಂಕಮಲ್ಲನು ಭೀಷ್ಮ ನೋಡೆಂದ ೯

ಮಿಸುಪ ತುದಿವೆರಳಂಬುಗೊಲೆಗೇ
ರಿಸಿದ ಬಿಲು ಮಣಿಮಯದ ಗದ್ದುಗೆ
ರಸುಮೆಗಳ ಜೋಡಿನಲಿ ಹೊಂದೇರಿನ ವಿಡಾಯಿಯಲಿ
ಮುಸೆಗಣೆಯ ಬತ್ತಳಿಕೆ ತಿಗುರೇ
ರಿಸಿದ ಮೈ ಕತ್ತುರಿಯ ತಿಲಕದ
ನೊಸಲಿನಾತನ ನೋಡು ಗರುಡಿಯ ಜಾಣ ದ್ರೋಣನನು ೧೦

ರಾಯನಾತನ ಬಳಿಯಲಾ ಕ
ರ್ಣಾಯುತಾಸ್ತ್ರರು ಕಾರ್ಮುಕದ ಸ್ವಾ
ಧ್ಯಾಯಸಿದ್ಧರು ಹತ್ತುಸಾವಿರ ಮಕುಟವರ್ಧನರು
ಸಾಯಲಂಜದ ಸಿತಗರದೆ ತ
ನ್ನಾಯತದೊಳಪ್ರತಿಮ ರೌದ್ರದ
ನಾಯಕರ ನೆರವಿಯೊಳು ಶಲ್ಯನೃಪಾಲ ನೋಡೆಂದ ೧೧

ಗಣನೆಗೈದದ ಹೆಗಲ ಹಿರಿಯು
ಬ್ಬಣದ ಕನಕದ ಝಗೆಯ ತಲೆಗ
ಪ್ಪಣೆಯ ನೇಣಿನ ಹೊಗರ ಮೋರೆಯ ಕೆಂಪಿನಾಲಿಗಳ
ಮಣಿಮಯದ ತೇರುಗಳಲಾ ಸಂ
ದಣಿಯವರು ಮಾದ್ರೇಶನದು ಫಲು
ಗುಣ ನಿರೀಕ್ಷಿಪುದಿತ್ತಲೊಂದಕ್ಷೋಹಿಣೀ ಬಲವ ೧೨

ಕಳಶ ಸಿಂಧದ ಘಟ್ಟು ಸಮ್ಮುಖ
ದಳವಿಯಲಿ ವಿಕ್ರಮು ದವಾಗ್ನಿಯ
ಝಳದೊಳುರೆ ಕಾಹೇರಿದಾಲಿಯ ಬಿಗಿದ ಹುಬ್ಬುಗಳ
ಹಿಳುಕನವುಕಿದ ತುದಿವೆರಳ ನಡು
ಗಳದ ಕಪ್ಪಿನ ನೊಸಲ ನಯನದ
ಬಲುಭುಜನ ನೋಡಾತನಶ್ವತ್ಥಾಮ ನಿಸ್ಸೀಮ ೧೩

ಈತನೊಡ್ಡಿನ ಸಾರೆ ಸಂಗರ
ಕಾತು ಕೊಂಡದೆ ಕೃಪನ ದಳಸಂ
ಘಾತವೊಂದಕ್ಷೋಣಿ ಸುಭಟರ ಸಾಲ ಮಧ್ಯದಲಿ
ಆತ ಗೌತಮನವನ ಬಳಿಯಲ
ಭೀತ ಬಾಹ್ಲಿಕ ವಿಂಧ್ಯರದೆ ವಿ
ಖ್ಯಾತರೊಂದಕ್ಷೋಣಿ ಕೌರವ ಸೈನ್ಯಶರಧಿಯಲಿ ೧೪

ಈತ ಮಾಳವನೀತ ಕೊಂಕಣ
ನೀತ ಗುರ್ಜರನೀತ ಬರ್ಬರ
ನೀತ ಕೋಸಲನೀತ ಖೇಟಕನೀತ ಹಮ್ಮೀರ
ಈತ ಕೇರಳನೀತ ಸಿಂಹಳ
ನೀತ ಬೋಟಕನೀತ ಚೀನಕ
ನೀತ ಮಾಗಧನೀತ ದ್ರಾವಿಡನೀತ ಗೌಳನೃಪ ೧೫

ಆಳುಗೆಲಸಕೆ ಕೆಲಬರರಸನ
ಖೇಳಮೇಳಕೆ ಕೆಲರು ಕೆಲಬರು
ಬಾಲೆಯರ ಕೊಳುಕೊಡೆಯ ಬಳಗದ ಬಂಧುಕೃತ್ಯದಲಿ
ತೋಳ ಬಲುಹೊರೆಗಲಸಿ ಕೆಲಬರು
ಮೇಲೆ ನಮ್ಮಯ ಹಗೆಗೆ ಕೆಲಬರು
ಕಾಳಗದ ಕಾರ್ಮುಕ ನೃಪಾಲರ ನೆರವಿಯದೆಯೆಂದ ೧೬

ತಳಿತ ಪಲ್ಲವ ಸತ್ತಿಗೆಯ ಹೊಳ
ಹೊಳೆವ ಮೌಳಿಯ ರತುನ ಲಹರಿಯ
ಚಲಿಸಿ ಚಿಮ್ಮುವ ಚಮರಿ ಸೀಗುರಿಗಳ ವಿಡಾಯಿಯಲಿ
ಹಲಗೆಯಲಿ ತೆತ್ತಿಸಿದ ಹಾವಿನ
ಹಳವಿಗೆಯ ಹೊಂದೇರ ನೃಪಮಂ
ಡಳಿಯ ಮಧ್ಯದೊಳಾತ ದುರ್ಯೋಧನ ಮಹೀಪಾಲ ೧೭

ಆಳಲಿದುರಗನ ನೆರವಿ ಟೊಪ್ಪಿಗೆ
ಗಳೆದ ಸಾಳ್ವನ ಹಿಂಡು ಹಸಿದ
ವ್ವಳಿಪ ಸಿಂಹದ ಹಂತಿ ಕುಪಿತ ಕೃತಾಂತನೊಡ್ಡವಣೆ
ಕೊಲೆಗೆಲಸಕುಬ್ಬೆದ್ದ ರುದ್ರನ
ಬಲವಿದೆನೆ ಹರಹರ ಮಹಾರಥ
ರಳವಿಗೊಟ್ಟಿದೆ ನೋಡು ದುರ್ಯೋಧನ ಸಹೋದರರ ೧೮

ಉಳಿಯ ಮಿಂಚಿನ ಮಂದೆ ಸುಗತಿಯ
ಝಳಕದನಿಲನ ಘಟ್ಟು ಬೀದಿಯ
ಬಳಿಗೆ ಪುರುಷಾಮೃಗದ ಗಾವಳಿಯೆನೆ ವಿಲಾಸದಲಿ
ಹೊಳೆವ ಚಮರಿಯ ಸುತ್ತು ಝಲ್ಲಿಯ
ನೆಲಕುಗಿವ ಜೋಡುಗಳ ತೇಜಿಯ
ದಳವ ನೋಡೈ ಪಾರ್ಥ ಬಳಸಿದೆ ಕಲಿಜಯದ್ರಥನ ೧೯

ತೋರದಲಿ ಕುಲಗಿರಿಯ ಸತ್ವದ
ಸಾರದಲಿ ವಜ್ರವನು ದನಿಯಲಿ
ಕಾರ ಬರಸಿಡಿಲಂದವಿದನುಗಿದೊಂದುಮಾಡಿದನು
ವಾರಿಜೋದ್ಭವನೆನಲು ಝಾಡಿಯ
ಭಾರಿ ರೆಂಚೆಯ ಕೈಯ ಖಡ್ಗದ
ವಾರಣದ ಮಧ್ಯದಲಿಹನು ಭಗದತ್ತ ನೋಡೆಂದ ೨೦

ಹೊಗರೊಗುವ ಸೂನಿಗೆಯ ಸುಪತಾ
ಕೆಗಳ ಸಿಂಧದ ಹೊಳೆವ ಹೊಂಗಂ
ಬುಗೆಯ ಹೂಡಿದ ಹಯದ ಸೂತರ ಗಳದ ಗರ್ಜನೆಯ
ಅಗಿವ ಚೀತ್ಕಾರದ ಛಡಾಳದ
ವಿಗಡ ರಥಿಕರ ರಹಿಯ ರಥವಾ
ಜಿಗಳ ನೋಡೈ ಪಾರ್ಥ ಭೂರಿಶ್ರವನ ಸೈನ್ಯವಿದು ೨೧

ಹಲಗೆ ಕಡಿತಲೆ ಹರಿಗೆ ಖಂಡೆಯ
ಹೊಳೆವ ಮಡ್ಡು ಕಠಾರಿ ಡೊಂಕಣಿ
ಬಿಲು ಸರಳು ತೋಡಿಟ್ಟಿ ಮುದ್ಗರ ಪಿಂಡಿವಾಳ ಚಯ
ತಲೆಯ ನೇಣಿನ ಕೈಯ ಚೌರಿಯ
ಉಳಿಯ ಜೋಡಿನ ಕಟಿಯ ಗಂಟೆಯ
ದಳವನೀಕ್ಷಿಸು ಪಾರ್ಥ ದುಶ್ಶಾಸನನ ಪಯದಳವ ೨೨

ವೀರನಭಿಮನ್ಯುವಿನವೊಲು ರಣ
ಧೀರನಾತನ ನೋಡು ಕರ್ಣ ಕು
ಮಾರಕರು ವೃಷಸೇನನಗ್ಗದ ಚಿತ್ರಸೇನಕರು
ಚಾರುಲಕ್ಷ್ಮಣರವರು ನೂರು ಕು
ಮಾರರದೆ ದುರ್ಯೋಧನಾತ್ಮಜ
ರಾರುವನು ಕೈಕೊಳ್ಳರವದಿರು ಸುಬಲ ನಂದನರು ೨೩

ರಾಯನಣುಗರ ಗಂಡ ಕೌರವ
ರಾಯದಳ ಶೃಂಗಾರ ಮಲೆವರಿ
ರಾಯಮರ್ದನನೆಂಬ ಬಿರುದಿನಲುಲಿವ ಕಹಳೆಗಳ
ಜೀಯ ಜಯಜಯಯೆಂಬ ಪಂಡಿತ
ಗಾಯಕರ ಮಧ್ಯದಲಿ ಬೆರಳಲಿ
ಸಾಯಕವ ತಿರುಹುವನು ತಾ ಕಲಿಕರ್ಣ ನೋಡೆಂದ ೨೪

ಕರಿಘಟೆಯ ಕುರುವದಲಿ ಹಯವೋ
ಹರದ ತೆರೆಮಾಲೆಯಲಿ ಬಲುರುಝು
ಲ್ಲರಿಯ ಬುದ್ಬುದ ತತಿಯಲಸ್ತ್ರದ ಕಿಡಿಯ ವಡಬನಲಿ
ಬಿರುದರಾಯರ ರತುನರಾಜಿಯ
ಲರಿಬಲಾರ್ಣವ ಗಜರು ಮಿಗಿಲ
ಳ್ಳಿರಿಯುತದೆ ಬಹುವಿಧದ ವಾದ್ಯವಿಡಾಯ ರಭಸದಲಿ ೨೫

ಆಳ ಮಯವಖಿಳೋರ್ವಿ ಪದಹತ
ಧೂಳಿಮಯವಾಕಾಶ ರಥತುರ
ಗಾಳಿಮಯ ದಿಗುಜಾಲವೇನೆಂಬೆನು ಮಹಾದ್ಭುತವ
ಕಾಳೆಗಕೆ ನೀನಲ್ಲದವನಿಯೊ
ಳಾಳ ಕಾಣೆನು ಪಾರ್ಥ ಸಾಕೆ
ನ್ನೇಳು ಬಾಣವ ತೂಗು ಮಾತಾಡಿಸು ಮಹಾಧನುವ ೨೬

ಎಲೆ ಧನಂಜಯ ಹಗೆಯ ಹೆಚ್ಚಿದ
ಹಳುವವಿದೆಲಾ ವಜ್ರಿಸುತ ನಿ
ನ್ನಳವಿಯಲಿ ತರುಬಿದೆ ಸುಯೋಧನ ಸೈನ್ಯ ಗಿರಿನಿಕರ
ಎಲೆ ಸಮೀರಜನನುಜ ರಿಪುಬಲ
ವಿಲಯ ಮೇಘ ನಿಕಾಯವಿದೆ ಭುಜ
ಬಲವ ತೋರೈ ತಂದೆ ನೋಡುವೆನೆಂದನಸುರಾರಿ ೨೭

ಮೆಟ್ಟಿ ನೋಡಿದನಹಿತ ರಾಯರ
ಥಟ್ಟುಗಳ ತೆರಳಿಕೆಯನುತ್ಸಹ
ಗೆಟ್ಟು ಫಲುಗುಣ ಸೆಡೆದು ಮನದಲಿ ನೊಂದು ತಲೆವಾಗಿ
ಕೆಟ್ಟ ಕಾಯದ ಸುಖಕಳುಪಿ ಒಡ
ಹುಟ್ಟಿದರ ಕೈಯಾರ ಕೊಂದರೆ
ಮುಟ್ಟದೇ ಕಡುಪಾಪ ಘನಪರಿತಾಪ ತನಗೆಂದ ೨೮

ಕೆಲರೊಡಹುಟ್ಟಿದರು ಗುರುಗಳು
ಕೆಲರು ಕೆಲಬರು ಮಾವ ಮೈದುನ
ನಳಿಯ ಮಗ ಹಿರಿಯಯ್ಯ ಮುತ್ತಯ ಮೊಮ್ಮನೆನಿಸುವರು
ಕಳದೊಳಿನಿಬರ ಕೊಂದು ಶಿವಶಿವ
ಕೆಲವು ದಿವಸದ ಸಿರಿಗೆ ಸೋಲಿದು
ಮುಳುಗುವೆನೆ ಭವಸಿಂಧುವಿನೊಳಾನೆನುತ ಮನಮುರಿದ ೨೯

ಇದಿರುಗಾಣದೆ ಕೊಲೆಗೆ ನಿರ್ಬಂ
ಧದಲಿ ಬೆಸಸುವ ಕೃಷ್ಣನಕಟಾ
ಮದಮುಖನೊ ದುರ್ಬೋಧಕನೊ ವಂಚಕನೊ ಘಾತಕನೊ
ಯದುಗಳನ್ವಯದೊಳಗೆ ಕರುಣಾ
ಸ್ಪದರು ಜನಿಸರಲಾ ಮುರಾರಿಯ
ಹೃದಯ ಬೆಟ್ಟಿತೆನುತ್ತ ಫಲುಗುಣ ತೂಗಿದನು ಶಿರವ ೩೦

ನರಕಕರ್ಮವ ಮಾಡಿ ಇಹದೊಳು
ದುರಿತ ಭಾಜನನಾಗಿ ಕಡೆಯಲಿ
ಪರಕೆ ಬಾಹಿರನಾಗಿ ನಾನಾಯೋನಿಯೊಳು ಸುಳಿದು
ಹೊರಳುವನುವನು ಕೃಷ್ಣದೇವನು
ಕರುಣಿಸಿದನೇ ಹಿತವನೇ ಹರ
ಹರ ಮಹಾದೇವೊಂದು ಬೋಳಕೆ ಬದುಕಿದೆನುಯೆಂದ ೩೧

ಮುಳಿಯಲಾಗದು ಕೃಷ್ಣ ನಿಮ್ಮನು
ತಿಳುಹಲಾನು ಸಮರ್ಥನೇ ಕುಲ
.ಕೊಲೆಗೆ ಕೊಕ್ಕರಿಸಿದೆನು ನನೆದೆನು ಕರುಣ ವಾರಿಯಲಿ
ಬಲುಹನೀ ಮುಖದಲ್ಲಿ ತೋರುವ
ಡಳುಕಿದೆನು ಸಾಮ್ರಾಜ್ಯ ಸಂಪ
ತ್ತಿಳೆಯ ಸಂಕಲಭ್ರಾಂತಿ ಬೀತುದು ದೇವ ಕೇಳೆಂದ ೩೨

ಎಡಹಿದರೆ ರುಜೆಯಾಗಿಯಾಪ
ತ್ತಡಸಿದರೆ ಮೇಣಾವ ತೆರದಿಂ
ದೊಡಲುವಿಡಿದರೆ ಮರಣ ತಪ್ಪದು ಸುರರಿಗೊಳಗಾಗಿ
ಕೆಡುವ ಕಾಯುವ ನಚ್ಚಿ ಬಂಧುಗ
ಳೊಡನೆ ವೈರವ ಮಸೆದು ನರಕಕೆ
ಕೆಡೆವನೇ ತಾನೆನುತ ರಥದೊಳು ಬಿಲ್ಲನಿಳುಹಿದನು ೩೩

ಕರಗಲಂತಃಕರಣ ಚಿಂತಾ
ತುರನು ಸಂಗ್ರಾಮದ ವಿರಕ್ತಿಯೊ
ಳಿರಲು ಕಂಡನು ಕಮಲನಾಭನು ನಗುತ ಮನದೊಳಗೆ
ತರಳನಿವನದ್ವೈತಕಲೆಯಲಿ
ಪರಿಣತನು ತಾನಲ್ಲ ನೆವದಿಂ
ನರನ ಬೋಧಿಸಬೇಕೆನುತ ನುಡಿಸಿದನು ಫಲುಗುಣನ ೩೪

ಏನು ಫಲುಗುಣ ಸಮರದಲಿ ದು
ಮ್ಮಾನವಾವುದು ಹದನು ಶೌರ್ಯಕೆ
ಹಾನಿಯಲ್ಲಾ ತ್ರಿಜಗಚೌಪಟಮಲ್ಲ ನೀನೆನಿಪ
ಮಾನಗರ್ವವು ಮುರಿಯದೇ ರಿಪು
ಸೇನೆ ನಗದೇ ತೆತ್ತ ಸಮರವ
ನೀನುಪೇಕ್ಷಿಸಿ ನೋಡಲಹುದೇ ಬಿಲ್ಲ ಹಿಡಿಯೆಂದ ೩೫

ಆವ ನಿನ್ನಯ ಕ್ಷತ್ರಧರ್ಮವ
ಭಾವಿಸಿದೆ ಮೇಣಾವ ಶಶಿವಂ
ಶಾವಳಿಯ ನೆಮ್ಮುಗೆಯ ನೆಗಳಿದೆ ತೆತ್ತ ಕಾಳೆಗಕೆ
ಅವ ನಿನ್ನಗ್ಗಳಿಕೆಗುಚಿತವ
ತೀವಿ ಬಯಸಿದೆ ಕದನಮುಖದಲಿ
ಹೇವ ವೀರರೊಳಿಲ್ಲಲಾ ವಿಸ್ಮಯವಿದಕಟೆಂದ ೩೬

ಅಲಗಿನೊರಸೊರಸಿಲ್ಲ ಕೈಮೈ
ಗಳಲಿ ಮುಳುಗಿದ ಬಾಣವಿಲ್ಲ
ಗ್ಗಳಿಸಿ ನೊಸಲಲಿ ಮುರಿದ ಭಲ್ಲೆಯವಿಲ್ಲ ನೋಡುವರೆ
ಕಲಹದಲಿ ಪಡಿಮುಖದ ಘಾಯದ
ಚಲರಕುತದೊರವಿಲ್ಲ ನೀ ಮು
ನ್ನಳುಕಿ ಕೈದುವ ಹಾಯ್ಕಿದೈ ಸರಿಯಲ್ಲ ನಿನಗೆಂದ ೩೭

ತರುಣಿಯರ ಮುಂದಸ್ತ್ರಶಸ್ತ್ರವ
ತಿರುಹಬಹುದುಬ್ಬೇಳಬಹುದ
ಬ್ಬರಿಸಬಹುದೆನಗಾರು ಸರಿ ನಾ ಧೀರನೆನಬಹುದು
ಕರಿತುರಗ ಬಹಳಶಸ್ತ್ರೋ
ತ್ಕರ ಕೃಪಾಣದ ಹರಹಿನಲಿ ಮೊಗ
ದಿರುಹದಿಹ ಕಲಿಯಾರು ಕುಂತೀಸೂನು ಕೇಳೆಂದ ೩೮

ಬಂಧುಹನನಕೆ ಮನದರಲು ಭವ
ವಿಂಧ್ಯದಲಿ ಬೆಳ್ಳಾಗಿ ರೌರವ
ಸಿಂಧುವಿನೊಳೋಲಾಡದಿಹನೇ ಪರಮಪಾತಕನು
ಸಂಧಿಯಲಿ ನಮ್ಮವನಿ ಋಣಸಂ
ಬಂಧವುಂಟೇ ಬರಲಿ ರಣದಭಿ
ಸಂಧಿ ಸಾಕಿನ್ನೆನುತ ಫಲುಗುಣ ಶಿರವ ಬಾಗಿದನು ೩೯

ಎಲವೊ ಫಲುಗುಣ ನುಡಿದ ಭಾಷೆಯ
ಸಲಿಸಿ ಕಾನನದೊಳಗೆ ತೊಟ್ಟನೆ
ತೊಳಲಿ ಹದಿಮೂರಬುದ ಬಂದಾಪತ್ತನನುಭವಿಸಿ
ನೆಲನ ಭಾಗವ ಬೇಡಿ ಸಂಧಿಗೆ
ಕಳುಹಿದ್ಧರೆ ಕೌರವನು ನೂಕಿಸಿ
ಕಳೆದ ನಿಮಗಿನ್ನಾವ ಹೊಲ್ಲೆಹವೆಂದನಸುರಾರಿ ೪೦

ಎವಗೆ ನೀನುತ್ತರನ ಕಥೆವೇ
ಳುವೆ ನಗುವೆಯಾತನಿಗೆ ನೀನೀ
ಬವರದೊಳು ಗುರುವಾದೆ ಲೋಗರ ನಿಂದೆ ತನಗಹುದು
ಲವಲವಿಕೆಯಲಿ ಕಾದಬೇಕೆ
ಮ್ಮವನಿಯನು ಕೈಕೊಳಲುಬೇಕೆಂ
ಬವಗಡೆಯತನವೆತ್ತಲಡಗಿತು ಪಾರ್ಥ ಹೇಳೆಂದ ೪೧

ಬಲುಹ ನೀ ನೋಡುವರೆ ಪರಮಂ
ಡಳಿಕರನು ತಂದೊಡ್ಡು ಬಳಿಕೆ
ನ್ನಳವನೀಕ್ಷಿಸು ಸೆಡೆದೆನಾದಡೆ ನಿಮ್ಮ ಮೈದುನನೆ
ಕೊಲುವೆನೆಂತೈ ಭೀಷ್ಮರನು ಮನ
ವಳುಕದೆಂತೈ ತಪ್ಪುವೆನು ಗುರು
ಗಳಿಗೆ ಕೃಪಗುರುಸುತರನಿರಿವುದಿದಾವ ನಯವೆಂದ ೪೨

ಹೊಳೆದು ಹೋಹೈಶ್ವರ್ಯಕೋಸುಗ
ತಲೆಯ ಮಾರಿಯಧರ್ಮ ಕೋಟಿಯ
ಫಳಿಸಿ ಬಳಿಕಾ ಫಲವನಲಸದೆ ಭವಭವಂಗಳಲಿ
ತೊಳಲಿ ಬಳಲುವ ಜೀವಭಾವದೊ
ಳುಳಿವುದಾವುದು ಲಾಗು ಮೂಢರ
ಬಳಕೆಗಾವಂಜುವೆವು ಸಮರಕೆ ಶರಣು ಶರಣೆಂದ ೪೩

ಲಾಲಿಸದೆ ಕುಲಛಲವ ನೀತಿಯ
ಪಾಲಿಸದೆ ಕೊಲೆಗಡುಕತನದೊಳು
ಮೇಲುಗಾಣದೆ ಬಂಧುಗಳ ಗುರುಗಳ ಸಹೋದರರ
ಕೋಲ ಮೊನೆಯಲಿ ಕೊಂದು ನೆತ್ತರ
ಗೂಳನುಂಬವೊಲಖಿಳ ರಾಜ್ಯದ
ಮೇಲೆ ಸೊಗಸುವ ಸಿರಿಯನೊಲ್ಲೆನು ಕೊಲುವನಲ್ಲೆಂದ ೪೪

ಆರನೈ ನೀ ಕೊಲುವೆ ನಿನ್ನಿಂ
ದಾರು ಸಾವರು ದೇಹವನೊ ನಿಜ
ಧೀರನಾತ್ಮನ ಕೊಲುವೆಯೊ ದಿಟ ನಿನ್ನ ಬಗೆಯೇನು
ಚಾರುದೇಹಕೆ ಭೂತ ನಿಕರಕೆ
ವೈರವಿಲ್ಲುಳಿದಂತೆ ವಿಗತವಿ
ಕಾರನಚಲನಗಮ್ಯನದ್ವಯನಾತ್ಮ ನೋಡೆಂದ ೪೫

ತನುವಳಿದ ಬಳಿಕಿನಲಿ ತನು ಸಂ
ಜನಿಸುಗೆಂಬುದು ಭವವ ಬಳಸುವ
ತನುವಿನಲಿ ಕೌಮಾರ ಯೌವನ ವಾರ್ಧಿಕಂಗಳಲಿ
ತನು ವಿಕಾರಿಸುವದು ಸುಕರ್ಮದ
ವಿನುತ ದುಷ್ಕೃತವೆನಿಪ ಹುಸಿ ಕ
ಲ್ಪನೆ ಶರೀರಕ್ಕಲ್ಲದಾತ್ಮಂಗಿಲ್ಲ ಕೇಳೆಂದ ೪೬

ಅಳಿವನಲ್ಲುದಯಿಸುವನಲ್ಲ
ಗ್ಗಳಿಸುವವನಲ್ಲಡಗುವವನ
ಲ್ಲಳಿವ ದೇಹದ ಬಗೆಗೆ ಹೊಣೆಯೇ ಸಚ್ಚಿದಾತ್ಮಕನು
ಕಳಚಿದಡೆ ಕಳಚುವುದು ಕಾಯವಿ
ದುಳಿದಡುಳಿವುದು ಚಿನುಮಯಂಗೀ
ಕಳಕಳದ ಕಾಲಾಟ ಕೊಳ್ಳದು ಪಾರ್ಥ ಕೇಳೆಂದ ೪೭

ನಿನಗೆ ಸಾವವನಲ್ಲ ನಿನ್ನಿಂ
ದಿನಲಿ ನೋವವನಲ್ಲ ದಿಟ ನೀ
ಮುನಿದು ಗಗನಕ್ಕಲಗನುಗಿವಡೆ ಗಗನವಳುಕುವುದೇ
ತನುವಿನೀ ಗುಣಧರ್ಮ ಕರ್ಮದ
ಹೊಸಲು ಹೊಗುವುದೆ ನಿತ್ಯನಿರ್ಮಲ
ಚಿನುಮಯಾತ್ಮನನೆಲೆ ವೃಥಾಹಂಕಾರವೇಕೆಂದ ೪೮

ಆದಡೆಲೆ ಮುರವೈರಿ ಕೇಳಿದಿ
ರಾದ ಬಾಂಧವರನಿಬರನು
ಕಾದಿ ಕೊಂದನು ಪಾರ್ಥ ಪಾತಕನೆನ್ನದೇ ಲೋಕ
ಈ ದುರಂತಕ್ಕೇನುಗತಿಯುಪ
ವಾದವಾವಂಗಾದುದಾತನ
ವೈದಿಕನು ಇಹಪರಕೆ ಬಾಹಿರನೆಂದನಾ ಪಾರ್ಥ ೪೯

ಮರುಳೆ ಫಲುಗುಣ ಕೇಳು ಸೂರ್ಯನ
ಕಿರಣ ಹೊಲೆಯನ ಚರಿಸಿದರೆ ಹೊಲೆ
ಹೊರುವುದೇ ಸ್ನಾನದಲಿ ವಿಧಿಸಲು ಬಹುದೆ ನೋಡಿದವ
ಪರಮತತ್ವಜ್ಞಾನ ನಿಷ್ಠನ
ಚರಿತವೇ ಸುಚರಿತ್ರವಾತಂ
ಗಿರದು ಕೇಳು ಸುಕರ್ಮದುಷ್ಕಾರ್ಮ್ಯಾದಿ ಗುಣಲೇಪ ೫೦

ಕೊಂದೆ ನಾನೆನಗಾಯ್ತು ಪಾತಕ
ವೆಂದು ಮನದಲಿ ಮರುಗುವಾತನ
ಬಂದಿಯಲಿ ಹೊಣೆಗೊಂಬವಾಹಂಕಾರ ಮಮಕಾರ
ಕಂದು ಕಲೆ ತನಗೆತ್ತಣದು ನಿ
ರ್ದ್ವಂದ್ವಕನು ಮೃತ ಜಾತ ತಾನ
ಲ್ಲೆಂದು ಕಂಡರವಂಗೆ ಪಾಪವಿಲೇಪವಿಲ್ಲೆಂದ ೫೧

ಹರಿಯೆ ಚಿತ್ತಯಿಸೈಯಹಿಂಸಾ
ಪರಮಧರ್ಮವು ಎಂಬ ವಾಕ್ಯದ
ಸರಣಿ ಸಾರೋದ್ಧಾರವಲ್ಲಾ ಸಕಲದರುಶನಕೆ
ನೆರವಿಯಿನಿಬರ ತನ್ನವರ ಕೊರ
ಳರಿತದಲಿ ಕೊಕ್ಕರಿಸದಿರ್ದಡೆ
ನರಕದೊಳು ನೂರೊಂದು ಕುಲ ಮುಳುಗಾಡದಿರದೆಂದ ೫೨

ನಿರುತವರ್ಜುನ ಕೇಳಹಿಂಸಾ
ಪರಮಧರ್ಮದ ತತ್ಸ್ವರೂಪವ
ನೊರೆವೆನಾಲಿಸು ಸಚ್ಚಿದಾನಂದೈಕಘನವೆನಿಪ
ನಿರುಪಮಾತ್ಮನ ನಿಲವನರಿಯದೆ
ನರಕಿ ಜಡನಾ ಜೀವವೆಂಬೀ ೫೩
ತರಳತನವೇ ಹಿಂಸೆಯರಿವಡಹಿಂಸೆ ಕೇಳೆಂದ

ನೆರವಿ ಬೇರೊಂದಿಲ್ಲ ಭೂತದ
ಹರಹು ಕರಣೇಂದ್ರಿಯದ ಸಂದಣಿ
ಮರುತ ಪಂಚಕ ಬುದ್ಧಿ ಕರ್ಮೇಂದ್ರಿಯದ ಕಾಲೆಣಿಕೆ
ನೆರೆಯಲೊಂದಾಗಿಹುದು ಕಲ್ಪನೆ
ಹರೆದು ಜೀವಭ್ರಾಂತಿ ಬೀತಡೆ
ಪರಮ ತಾನಿಹನಲ್ಲಿ ಕೊಲುವರೆ ಸಾವನಲ್ಲೆಂದ ೫೪

ಕರ್ಮವೇ ಹೂಡುವುದು ತನುವನು
ಕರ್ಮವೇ ಸಲಹುವುದು ಕಡೆಯಲಿ
ಕರ್ಮವೇ ಕಳಚುವುದು ಜೀವಭ್ರಮೆಯ ಬಾಹಿರರ
ಕರ್ಮ ತಾನೇನಾದಡಾಗಲಿ
ನಿರ್ಮಮತೆಯಲಿ ಮಾಡಿ ನಮ್ಮಲಿ
ನಿರ್ಮಿಸಲು ಕಲಿಪಾರ್ಥ ನೀ ನಿರ್ಲೇಪನಹೆಯೆಂದ ೫೫

ಅಸುರರಿಪು ಕೇಳಾದಿಯಲಿ ಬಂ
ಚಿಸಿದ ಕರ್ಮವು ಜೀವರನು ಬಂ
ಧಿಸಲು ತದ್ಗುಣದೋಷ ಕರ್ತೃಫವೇಕೆ ತಾಗುವುದು
ಪಸರಿಸಿತಲಾ ಸ್ಮಾರ್ತ ಮಾರ್ಗ
ಪ್ರಸರ ಕೊಂದಡೆ ಪಾಪ ಪಾವನ
ವೆಸಗೆ ಪುಣ್ಯವೆನಿಪ್ಪ ವಿವರಕ್ಕೇನು ನೆಲೆಯೆಂದ ೫೬

ಸುಕೃತ ದುಷ್ಕೃತವೆಂಬವೇ ಬಾ
ಧಕವು ಜೀವರಿಗೀಯಹಂಕೃತಿ
ವಿಕಳತೆಗೆ ತಾ ಬೀಜ ಜನ್ಮದ ಚುಟ್ಟುಮುರಿಗಳಿಗೆ
ಸಕಲಕರ್ತೃತ್ವಾದಿ ಭೋಕ್ತೃ
ತ್ವಕವಿದಾತ್ಮಂಗಿಲ್ಲ ಪಿತ್ತಾ
ಧಿಕನು ತಿರುಗುತ ಲೋಕ ತಿರುಗುವುದೆಂಬ ತೆರನಂತೆ ೫೭

ಮರುಳೆ ಫಲುಗುಣ ಕೇಳು ಸಚರಾ
ಚರವೆನಿಪ ಜಗವೆನ್ನ ಲೀಲಾ
ಚರಿತದಲಿ ತೋರುವುದು ಹರೆವುದು ನನ್ನ ನೇಮದಲಿ
ನಿರುತ ನೀ ಕೇಳುವರೆ ತಿರ್ಯಙ್
ನರಸುರಾದಿಗಳೆಂಬ ಸಚರಾ
ಚರವಿದಾನಲ್ಲದೆ ವಿಚಾರಿಸಲನ್ಯವಿಲ್ಲೆಂದ ೫೮

ಜಗದೊಳಾನೇ ಚರಿಸುವೆನು ತ
ಜ್ಜಗವಿದೆಲ್ಲವು ನನ್ನ ಮಾಯೆಯೊ
ಳೊಗೆದು ತೋರಿಸಿ ಸುಳಿಸೆ ಸುಳಿವುದು ಹಿಡಿಯಲಡಗುವುದು
ಮಗುವುತನದೊಳು ಕೂಡಿ ಮೆರೆವುದು
ಜಗವದಲ್ಲದೆ ನಿಜವ ಬೆರಸುವ
ವಿಗಡರಿಗೆ ಪರತತ್ವ ಚಿನುಮಯರೂಪ ತಾನೆಂದ ೫೯

ಬೀಸಿದರೆ ಸಿಲುಕುವರು ಮಾಯಾ
ಪಾಶದೊಳಹಂಕಾರಿಗಳು ತ
ದ್ದೇಶಕಾಲಕ್ರಿಯೆಗಳಲಿ ನಿರ್ವಾಹವನು ಬೆದಕಿ
ಬೇಸರುವರಂತಿರಲಿ ಮಾಯಾ
ವ್ಯಸಿಕದ ಸಮ್ಮೋಹನದ ಕಾ
ಳಾಸವರಿವವರೆನ್ನನರಿವರು ಪಾರ್ಥ ಕೇಳೆಂದ ೬೦

ಏಕನಾತ್ಮನನಂತನಚಲನ
ಶೋಕನದ್ವಯನಮಲನಭವನ
ಲೋಕನಿಸ್ಪೃಹನಮಿತನಕ್ರಿಯನಹತನಪ್ರಮನು
ಲೋಕಗತಿ ಮಾಯಾವಿಲಾಸ ವಿ
ವೇಕಿಗಳಿಗಿದು ಬಯಲು ಫಲುಗುಣ
ಸಾಕು ಗರ್ವವ ಬೀಳುಕೊಡು ಸೆಳೆ ಶರವ ಹಿಡಿ ಧನುವ ೬೧

ಜಡನಲಾ ನರನೇಸ ತಿಳುಹಲು
ಬಿಡ ವಿಕಾರವನೆಂದು ಖಾತಿಯ
ಹಿಡಿಯಲಾಗದು ಸಲುಗೆಗಂಜಿಕೆಯೇಕೆ ಬಿನ್ನಹವು
ಬಿಡು ಜಗೌಘಾನೀಕ ನಿಮ್ಮಡಿ
ಯೊಡಲೊಳಗಣಿತವಿಹವು ಗಡ ಮಿಗೆ
ನುಡಿಯಲಮ್ಮೆನು ತತ್ಸ್ವರೂಪವ ತೋರಬೇಕೆಂದ ೬೨

ಈ ದಿವಿಜರೀ ಚಂದ್ರ ಸೂರಿಯ
ರೀ ದಿಶಾವಳಿಯಿಾ ಗಗನವೀ
ಮೇದಿನೀತಳವೀ ಸಮೀರಣನೀ ಜಲಾನಲರು
ಈ ದನುಜರೀ ಮನುಜರೀ ನೀ
ನಾದಿಯಾಗಿಹ ಹರಹು ನಿನ್ನ ವಿ
ನೋದರೂಪಿನ ನಿರುಗೆಯನು ನೀ ತೋರಬೇಕೆಂದ ೬೩

ಹರೆದು ಮೋಹಿಸುವೀ ಚರಾಚರ
ನೆರೆದು ನಿಮ್ಮಯ ರೋಮಕೂಪದ
ಹೊರೆಯೊಳಗೆ ಹೊಳೆದಾಡುತಿಹುದೆಂಬಗ್ಗಳಿಕೆಗಳಿಗೆ
ಹುರುಳೆನಿಪ ಹೇರಾಳದಂಗದ
ಸಿರಿಯ ತೋರೈ ಕೃಷ್ಣ ನಿರ್ಮಲ
ಪರಮತತ್ವವನೊಲ್ಲೆ ನಿಮ್ಮಯ ಭಕ್ತಿ ಸಾಕೆಂದ ೬೪

ದಾಸನಾನೆನಗಮಲಮೂರ್ತಿ ವಿ
ಲಾಸವನು ತೋರುವುದು ಸಲಹುವು
ದೈಸರವನೈ ತಾನು ಸಮ್ಯಗ್ಜ್ಞಾನಭಾಜನಕೆ
ಮಿಾಸಲಳಿಯದ ಮಿಕ್ಕ ಬಯಕೆಯ
ಪಾಶ ತಾಗದ ನಿನ್ನ ಲೀಲೆಯ
ಭಾಸುರ ಶ್ರೀಮೂರ್ತಿಯನು ಮೈದೋರಬೇಕೆಂದ ೬೫

ಆದಡರ್ಜುನ ನೋಡೆನುತ ಕಮ
ಲೋದರನು ಕೈಕೊಂಡನಗ್ಗದ
ನಾದಿಪುರುಷ ಶ್ರೀನಿಜವ ವಿಶ್ವಾತ್ಮಕಾಕೃತಿಯ
ವಾದಿಸುವ ಷಟ್ತರ್ಕಗಿರ್ಕದ
ಭೇದ ಕೊಳ್ಳದ ಸಕಲ ಲೋಕದ
ಬೀದಿ ವಿಸಟಂಬರಿವ ವಿಮಲ ವಿರಾಟ ರೂಪವನು ೬೬

ಬಿಳಿದು ಕರಿದೆಂಬಾರು ವರ್ಣದ
ಹೊಲಬು ಹೊದ್ದದ ಸೂರ್ಯಕೋಟಿಯ
ಹೊಳಹು ನಖದೀಧಿತಿಯ ಹೋಲದ ನಿಜದ ಹೊಸಪರಿಯ
ಅಳವಿನಳತೆಯ ಜಗದ ವಾರ್ತೆಯ
ಸುಳಿವು ಸೋಂಕದ ಸಕಲ ಲೋಕ
ಪ್ರಳಯ ಕಾರಣ ತೆಗೆದನಗ್ಗದ ವಿಶ್ವರೂಪವನು ೬೭

ಕಾಣರುಳಿದವರೀತನೊಬ್ಬನ
ಕಾಣಿಕೆಗೆ ಕೌತುಕವ ಕರೆದನು
ಶೋಣಿತಾಮಲಬಹಳತೇಜದ ಹೊದರ ಹೊಯಿಲಿನಲಿ
ಕಾಣಲರಿಯವನಂತವೇದ
ಶ್ರೇಣಿ ಶಿವಶಿವ ರಾಯ ಪಾರ್ಥನ
ಜಾಣತನವೆಂತುಟೊ ವಿರೂಪನ ರೂಪ ಸೆರೆವಿಡಿದ ೬೮

ಉಬ್ಬಿದನು ಹರುಷದಲಿ ಕಂಗಳ
ಗಬ್ಬ ಮುರಿದುದು ಮದದ ನಿಗುರಿನ
ಹಬ್ಬುಗೆಯ ಹೊಲಬಳಿಯೆ ನಾಲಗೆಯುಡುಗೆ ಹೆಡತಲೆಗೆ
ಸಬ್ಬಗತನೈ ಶಿವಶಿವಾ ಬಲು
ಮಬ್ಬಿನಲಿ ಮುಂದರಿಯದೆನ್ನಯ
ಕೊಬ್ಬನೇವಣ್ಣಿಸುವೆನೆನುತಡಿಗಡಿಗೆ ಬೆರಗಾದ ೧೯

ಇದೆ ನಿರಂಜನತತ್ವ ಸಾಮ್ರಾ
ಜ್ಯದ ಸಫಾಟಿಕೆ ನಾವು ಕಡು ಮೂ
ರ್ಖದಲಿ ಮೈಮರೆದೆವು ಶರೀರದ ಬಂಧುಕೃತ್ಯದಲಿ
ಯದುಗಳನ್ವಯದಾತ ನಮಗೊ
ಳ್ಳಿದನು ಸೋದರಭಾವನೆಂದೇ
ಮದಮುಖದಿ ಕಡುಗೇಡ ಕೆಟ್ಟೆನು ಶಿವಶಿವಾಯೆಂದ ೨೦

ಪರುಷ ಕಲ್ಲೆಂದಳುಕಿ ಸುರತರು
ಮರನು ತೆಗೆಯೆಂದಮರಧೇನುವ
ಪರರ ಮನೆಯಲಿ ಮಾರಿ ಚಿಂತಾಮಣಿಗೆ ಕೈದುಡುಕಿ
ಹರಳು ತೆಕ್ಕೆಯಿದೆಂಬ ಪಾಪಿಗೆ
ಪರಮಗುರು ನಾನಾದೆನೈ ಮುರ
ಹರನ ಮೈದುನನೆಂದು ಗರ್ವಿಸಿ ಕೆಟ್ಟೆನಕಟೆಂದ ೨೧

ನೊರಜು ತಾನೆತ್ತಲು ಮಹತ್ವದ
ಗಿರಿಯದೆತ್ತಲು ಮಿಂಚು ಬುಳುವಿನ
ಕಿರಣವೆತ್ತಲು ಹೊಳಹಿದೆತ್ತಲು ಕೋಟಿ ಸೂರಿಯರ
ನರಮೃಗಾಧಮನೆತ್ತಲುನ್ನತ
ಪರಮತತ್ವವಿದೆತ್ತಲಕಟಾ
ಮರುಳು ನನ್ನವಗುಣವದಾವುದ ಕಡೆಗೆ ಹಲುಬುವೆನು ೨೨

ಮೇಳ ಗಡ ನಮಗೀತನಲಿ ಭೂ
ಪಾಲಕರು ಗಡ ನಾವು ಸಾರಥಿ
ಯಾಳು ಗಡ ಹರಿ ನಾವು ವೀರರು ಗಡ ವಿಚಿತ್ರವಲ
ಮೇಲುಗಾಣದ ಪಾರ್ಥನೆಂಬೀ
ಕಾಳುಮೂಳನ ವಿಧಿಯನೇಪರಿ
ವೇಳುವೆನು ಹರಯೆನುತ ಕಂಗಳನೆವೆಗಳಲಿ ಬಿಗಿದ ೨೩

ಅಡಿಗಡಿಗೆ ಕಣ್ದೆರೆದು ಮುಚ್ಚುವ
ನಡಿಗಡಿಗೆ ಮೈಬೆದರಿ ಬೆರಗಹ
ನಡಿಗಡಿಗೆ ಮೆಯ್ಯೊಲೆವನುಬ್ಬಿದ ರೋಮ ಪುಳಕದಲಿ
ಅಡಿಗಡಿಗೆ ಮನನಲಿದು ಹೊಂಗುವ
ನಡಿಗಡಿಗೆ ಭಯಗೊಂಡು ಕರಗುವ
ನೊಡಲನವನಿಗೆ ಹರಹಿ ನಿಡುದೋಳುಗಳ ನೀಡಿದನು ೨೪

ಮುರಹರ ತಾಯಸ್ವ ಕರುಣಾ
ಕರ ಪರಿತ್ರಾಯಸ್ವ ಲಕ್ಷ್ಮೀ
ವರ ಪರಿತ್ರಾಯಸ್ವ ದನುಜಾಂತಕ ಪರಿತ್ರಾಹಿ
ಚರಣಭಜಕ ಕುಟುಂಬಕನೆ ಘನ
ದುರಿತ ವಿಪಿನ ಕೃಶಾನುವೇ ಭವ
ಹರ ನಿರೀಕ್ಷಿಸು ರಕ್ಷಿಸೆನ್ನನೆನುತ್ತ ಹೊರಳಿದನು ೨೫

ದೇವ ಭಕ್ತಜನಾರ್ತಪಾಲಕ
ದೇವ ಬಹಳ ಕೃಪಾಮಹಾರ್ಣವ
ದೇವ ಸರ್ವೇಶ್ವರ ಸದಾತ್ಮಕ ಸಕಲ ನಿಷ್ಕಳನೆ
ಸೇವಕರಲಾರೈವರೇ ಸುಗು
ಣಾವಗುಣವನು ನಿಮ್ಮ ಭೃತ್ಯನ
ಭಾವ ಬೆಚ್ಚಿತು ವಿಶ್ವರೂಪವ ಬೀಳುಕೊಡಿಯೆಂದ ೨೬

ಲೋಕವರಿಯಲನಂತವೇದವು
ಮೂಕನಾದವು ಜೀಯ ಜಡನವಿ
ವೇಕಿ ಮಾನವ ಮಶಕವಿದು ನಿಮ್ಮಳತೆಗೈದುವುದೇ
ಸಾಕ್ಷಿಕೊಳ್ಳೈ ಕೃಷ್ಣ ನೋಡಲು
ನೂಕದೆನ್ನೆವೆ ಸೀವುತಿವೆ ಕರು
ಣಾಕರನೆ ಕೈಗಾವುದೈ ಕೃಪೆ ಮಾಡಬೇಕೆಂದ ೨೭

ಎಳನಗೆಯ ಸಿರಿಮೊಗದ ಚೆಲುವಿನ
ಹೊಳೆಹೊಳೆವ ನಿಟ್ಟೆಸಳುಗಂಗಳ
ತೊಳಪ ಕದಪಿನ ಮಿಸುಪ ಕಾಂತಿಯ ಮಕರಕುಂಡಲದ
ಲಲಿತಕಂಠದ ಕೌಸ್ತುಭೋರ
ಸ್ಥಳದ ನಿಡುದೋಳುಗಳ ಕೋಮಲ
ತಳಿತ ಪೀತಾಂಬರದ ಮುನ್ನಿನ ರೂಪ ತೋರೆಂದ ೨೮

ಅಳಕ ನಿಚಯದ ಕುಂಭಿನೊಸಲಿನ
ತಳಿತೆವೆಯ ನಿಡುಹುಬ್ಬುಗಳ ಕೋ
ಮಲ ಸುಮುಕ್ತಾಫಲಕೆ ಸೆಣಸುವ ದಂತಪಂಕ್ತಿಗಳ
ಲಲಿತಚುಬುಕದ ಚಾರುತರ ಕೆಂ
ದಳದ ಸುಳಿನಾಭಿಯ ಸವರ್ತುಳ
ವಿಳಸಿತೋರುದ್ವಯದ ಮುನ್ನಿನ ರೂಪ ತೋರೆಂದ ೨೯

ಪರಮ ಚಿನುಮಯ ನೀನು ಕರ್ಮದ
ಸರಣಿಯೆನ್ನದು ನೀ ಚರಾಚರ
ಭರಿತ ಭಾರಿಯ ವಿಶ್ವಮಯುನವ್ಯಕ್ತನದ್ವಯನು
ನರನ ಮತಿಯಿದು ಮಂದಮತಿ ಗೋ
ಚರಿಸಲರಿವುದೆ ದೇವ ಕರುಣಿಸು
ಕರುಣಿಸೈ ಮೈದೋರು ತನ್ನೊಡನಾಡಿತನದನುವ ೩೦

ನಳಿನನಾಭ ಮುಕುಂದ ಮಂಗಳ
ನಿಳಯ ಭಕ್ತವ್ಯಸನಿ ದೈತ್ಯ
ಪ್ರಳಯ ಪಾವಕ ಭಕ್ತವತ್ಸಲ ಭಕ್ತ ಸುರಧೇನು
ಲಲಿತಮೇಘಶ್ಯಾಮ ಸೇವಕ
ಸುಲಭ ಶೌರಿ ಮುರಾರಿ ಭಕ್ತಾ
ವಳಿ ಕುಟುಂಬಕ ಕೃಷ್ಣ ಕೇಶವ ಕರುಣಿಸೆನಗೆಂದ ೩೧

ಪರಮಪುಣ್ಯಶ್ಲೋಕ ಪಾವನ
ಚರಿತ ಚಾರುವಿಲಾಸ ನಿರ್ಮಲ
ವರ ಕಥನ ಲೀಲಾ ಪ್ರಯುಕ್ತ ಪ್ರಕಟ ಭುವನಶತ
ನಿರವಯವ ನಿರ್ದ್ವಂದ್ವ ನಿಸ್ಪೃಹ
ನಿರುಪಮಿತ ನಿರ್ಮಾಯ ಕರುಣಾ
ಕರ ಮಹಾತ್ಮ ಮನೋಜವಿಗ್ರಹ ಕರುಣಿಸೆನಗೆಂದ ೩೨

ದೇವ ಲಕ್ಷ್ಮೀಕಾಂತ ವರರಾ
ಜೀವಲೋಚನ ಭೂತಭಾವನ
ರಾವಣಾಂತಕ ಗೋಪವೇಷ ವಿಲಾಸ ಜಯವಾಸ
ದೇವಕೀನಂದನ ಯಶೋದಾ
ದೇವಿಯುನ್ನತಪುಣ್ಯಫಲ ತಲೆ
ಗಾವುದೈ ತರುವಲಿಗೆ ತೋರೈ ಮುನ್ನಿನಾಕೃತಿಯ ೮೩

ನಿಗಮನಿಕರವ ಸೆಳೆವ ತಿರುಗುವ
ನಗಕೆ ಬೆನ್ನನು ಕೊಡುವ ಜಲನಿಧಿ
ಮಗುಚಿ ಮಹಿಯನು ಮೊಗೆವ ಮಗುವಿನ ನುಡಿಗೆ ಮೈಗೊಡುವ
ಗಗನಕಂಘ್ರಿಯನಿಡುವ ತಾಯ
ಕೈಗಳಿಗಕ್ಕೆಯ ತೋರ್ಪ ರಾಣಿಯ
ಸೊಗಸ ಸಲಿಸುವ ಕೃಪೆಯನೆನ್ನಲಿ ತೋರಬೇಕೆಂದ ೮೪

ಮರೆದು ನಾಲಗೆಗೊನೆಗೆ ನಾಮದ
ನಿರುಗೆ ನೆಲೆಗೊಳೆ ನಿನ್ನನೇ ಸಲೆ
ತೆರುವ ಬಿರುದನು ಬಲ್ಲೆನೊರಲಿದು ನಿನ್ನ ಹಲುಬಿದರೆ
ಉರುವ ಹೆಂಗುಸಿನುನ್ನತಿಕೆಯಲಿ
ಸೆರಗು ಬೆಳೆದುದ ಕಂಡೆನೈ ಸೈ
ಗರೆವುದೈ ಕಾರುಣ್ಯವರುಷವನೆನ್ನ ಮೇಲೆಂದ ೮೫

ಹಸುಳೆಗಮರಾಚಲದ ಹೊರೆ ಸೈ
ರಿಸುವುದೇ ಮರಿಹುಲ್ಲೆ ಸಿಂಹದ
ಮಸಕಕಿದಿರೇ ಲತೆಯ ಎಳಗುಡಿ ಮಾಳಿಗೆಗೆ ತೊಲೆಯೆ
ಸಸಿದರಳೆ ಸಿಡಿಲೆರಗಿದರೆ ಜೀ
ವಿಸುವುದೇ ನಿಮ್ಮಡಿಯ ವಿಶ್ವ
ಪ್ರಸರರೂಪಿಂಗಾನು ಲಕ್ಷ್ಯವೆ ಸಲಹಬೇಕೆಂದ ೮೬

ಅಣಲೊಳಷ್ಟಾದಶ ಮಹಾಕ್ಷೋ
ಹಿಣಿಗಳಡಗಿದವೆಂಬುದಿದು ಭೂ
ಷಣವೆ ಜೀಯ ಮುರಾರಿ ನಿನ್ನಯ ರೋಮಕೂಪದಲಿ
ಗಣನೆಗೆಟ್ಟಜರುದ್ರಸುರಸಂ
ದಣಿಗಳಿವೆ ಜಠರದ ಜಗಂಗಳ
ನೆಣಿಸಬಲ್ಲವರಾರು ಸಾಕಿನ್ನೆನ್ನ ಸಲಹೆಂದ ೮೭

ವಿಶ್ವ ನಿನ್ನಯ ಮಾಯೆ ನಿರ್ಮಲ
ವಿಶ್ವರೂಪನು ನೀನು ಬಗೆವಡೆ
ವಿಶ್ವ ನಿನ್ನೊಳು ಸುಳಿವುದಳಿವುದು ಲಲಿತಲೀಲೆಯಲಿ
ವಿಶ್ವವಲ್ಲಭ ನೀನು ನಿನ್ನದು
ವಿಶ್ವಪಾಲನೆ ವಿಶ್ವಚೇಷ್ಟಕ
ವಿಶ್ವದಾಧಾರನೆ ಜಡಾತ್ಮನ ಸಲಹಬೇಕೆಂದ ೮೮

ವೀರ ದೈತ್ಯಕುಠಾರ ಗಳಿತವಿ
ಕಾರ ಗೋಪೀಚಾರ ಲಲಿತವಿ
ಹಾರ ನಿಗಮವಿದೂರ ಸುಖಸಾಕಾರ ಗತಪಾರ
ಧೀರ ಜಗದಾಧಾರ ಲಸದಾ
ಚಾರ ಕಮಲಾಗಾರ ಭುವನಾ
ಧಾರ ನಿರ್ಜಿತಮಾರ ಮುರಹರ ಸಲಹಬೇಕೆಂದ ೮೯

ಭಯದ ಬಿಗುಹಿನ ಭಾರ ಭಕುತಿಯ
ನಯದ ಬಿನ್ನಹದೋಜೆಯನು ಚಿನು
ಮಯನು ಕೇಳಿದು ಮೆಚ್ಚಿ ಡಿಂಗರಿಗಂಗೆ ನಗುತೆಂದ
ನಿಯತವೇ ನೀನಲ್ಲಲೇ ಸ್ನೇ
ಹಯನು ಕೊಲುವನು ಕಾವವನು ನಿ
ಶ್ಚಯವ ನಿನ್ನೊಳು ತಿಳಿದು ಬಿನ್ನಹ ಮಾಡು ಸಾಕೆಂದ ೯೦

ಎನಿತು ಜಗವಡಗಿದವು ಕೌರವ
ರನಿಬರಡಗಿತು ನೋಡು ಧರ್ಮನ
ತನಯ ಭೀಮಾರ್ಜುನರು ಭೀಷ್ಮದ್ರೋಣ ಮೊದಲಾದ
ಎನಿಬರಡಗಿತು ಬಾಂಧವ
ಹನನ ನಿನಗುಂಟಾದಡೀಗಳೆ
ನೆನೆದು ಬಿನ್ನಹ ಮಾಡೆನುತ ಪಾರ್ಥಂಗೆ ಹರಿ ನುಡಿದ ೯೧

ಗುರುಗಳಿಗೆ ನಾ ತಪ್ಪೆನೆಂದೇ
ಮುರಿದಡೆನಗದು ಖಾತಿ ಭೀಷ್ಮನು
ವರಪಿತಾಮಹನೆಂದು ಹೊಳೆದರೆ ಬಳಿಕಸತಹ್ಯವದು
ಅರಿಬಲವು ಮುನ್ನರಿವುದೋ ನೀ
ನರಿವೆಯೋ ಲೇಸಾಗಿ ಎನ್ನೊಳು
ನರ ನಿರೀಕ್ಷಿಸೆನುತ್ತ ನುಡಿದನು ದಾನವಧ್ವಂಸಿ ೯೨

ನೆನೆದಡಜಕೋಟಿಗಳು ನಿಮ್ಮಯ
ಮನದೊಳಗೆ ಜನಿಸುವರುಪೇಕ್ಷೆಯೊ
ಳನಿತು ಕಮಲಜರಳಿವರೆಂದರೆ ನಿಮ್ಮ ಮಹಿಮೆಯನು
ನೆನೆಯಲಳವೇ ಜೀಯ ಸಾಕಿ
ನ್ನನುವರದೊಳೆನಗೇನ ಬೆಸಸಿದ
ರನಿತ ತಾ ಮುಖದಿರುಹಿದರೆ ಡಿಂಗರಿಗನಲ್ಲೆಂದ ೯೩

ಮರಳಿ ಮುನ್ನಿನ ರೂಪನಂಗೀ
ಕರಿಸಿ ವಾಘೆಯ ಕೊಂಡು ತುರಗವ
ತಿರುಹಿ ಲುಳಿವಡೆಸುತ್ತ ಪಾರ್ಥಗೆ ಮಾಯೆಯನು ಬೀಸಿ
ಶರ ಧನುವ ಕೊಳ್ಳೇಳು ಕೈಕೋ
ಪರಬಲದ ತೋಟಿಯನು ತೋರೈ
ಬಿರುದ ಘಾತಕತನವನೆಂದನು ನಗುತ ಮುರವೈರಿ ೯೪

ಮೋಹ ಮಿಗೆ ಪಾಂಡವ ಮಮ ಪ್ರಾ
ಣಾಹಿಯೆಂಬೀ ಬಿರುದ ಸಲಿಸಲು
ಗಾಹಿನಲಿ ಮೇದಿನಿಯ ತಿಣ್ಣವನಿಳುಹಲೋಸುಗರ
ಆಹವದೊಳರ್ಜುನನ ರಥದೊಳು
ವಾಹಕನು ತಾನಾಗಿ ಶರಣ
ಸ್ನೇಹ ಸಂಸಾರಾನುರಾಗನು ಸುಳಿಸಿದನು ರಥವ ೯೫

## ನಾಲ್ಕನೆಯ ಸಂಧಿ

ಸೂ. ಕವಿದು ಹಳಚಿದುದುಭಯಬಲ ಶಿವ
ಶಿವ ಮಹಾದೇವಮಮ ಪದರಜ
ರವಿಯ ತಿವಿದುದು ದಿನವನಳಿದುದು ನಳಿದನಹಿರಾಯ

ಅವಧರಿಸು ಧೃತರಾಷ್ಟ್ರ ಗಂಗಾ
ಭವನ ಸುಯಿಧಾನದಲಿ ಕುರುಬಲ
ನಿವಹ ಧೃಷ್ಟದ್ಯುಮ್ನನಾರೈಕೆಯಲಿ ರಿಪುಸೇನೆ
ತವಕ ಮಿಗೆ ಮೋಹರಿಸಿ ಕೈವೀ
ಸುವ ಮಹೀಶರನೀಕ್ಷಿಸುತಲಾ
ಹವ ಮಹೋದ್ಯೋಗಕ್ಕೆ ಬೆರಗಾಯಿತ್ತು ಸುರಕಟಕ ೧

ಎರಡು ಬಲ ಕೈಲಾಗನೀಕ್ಷಿಸು
ತಿರೆ ಕೃತಾಂತಾಲಯಕೆ ವಾಹಿನಿ
ಸರಿವುದೆಂಬಂದದಲಿ ಕೈವೀಸಿದರು ಭೂಭುಜರು
ಅರರೆ ಮೂಡಣ ಶರಧಿ ಪಡುವಣ
ಶರಧಿಗಾಂತುದೊ ರಣಚಮತ್ಕೃತಿ
ಸುರರ ನಯನಾಂಗಣಕೆ ಕವಿಸಿತು ಕೌತುಕಾಂಬುಧಿಯ ೨

ಎಲೆಲೆ ಕವಿಕವಿ ಬೆರಸುಬೆರಸಿ
ಟ್ಟಳಿಸು ತಿವಿತಿವಿ ಭಲರೆ ಭಲರತಿ
ಬಲರೆ ಹಿಂಚದಿರಿಸ್ನು ಹೊಯ್ ಹೊಯ್ ಜೂಣೆಗರನೆನುತ
ಬಲಜಲಧಿ ಮುಕ್ಕುಳಿಸಿ ಮಿಗೆ ಹೆ
ಕ್ಕಳಿಸಿ ಕವಿದುದು ಗಿರಿ ಬೆಸುಗೆಯು
ಕಳಚಿತಹಿಪನ ಕೊರಳು ಕುಸಿದವು ಕಮಠನೆದೆ ಬಿರಿದ ೩

ಒದರಿ ಬಲನೊಡನೊಡನೆ ಹಳಚಿದೊ
ಡದಿರೆ ನೆಲನವ್ವಳಿಸಿ ದಿಕ್ಕರಿ
ಮದವಡಗಿದವು ಕುಣಿದು ಮೆಟ್ಟಿದರಹಿಪನೊಡಲೊಳಗೆ
ಹೊದರುದಲೆ ಹೊಕ್ಕಾಳೆ ಬೆರಳಿನ
ತುದಿಯ ತುಟಿಯಲಿ ಬೊಬ್ಬಿರಿದಡಿನ
ನದಿರೆ ದಳವುಳಿಸಿದುದು ಕೌರವಪಾಂಡವರ ಸೇನೆ ೪

ರಣದೊಳಾದುದು ಬೋನವಾರೋ
ಗಣೆಗೆ ಬಿಜಯಂಗೈವುದನುಚರ
ಗಣಸಹಿತವೆಂದತಿಬಲರು ಕಾಲಂಗೆ ದೂತರನು
ಅಣಿಯೊಳಟ್ಟಿದರೆನಲು ಪಡೆಯುರ
ವಣೆಯ ಪದಹತಧೂಳಿ ಗಗನಾಂ
ಗಣಕೆ ಕವಿದುದು ಬಳಿಕಲಬುಜಭವಾಂಡಮಂಡಲವ ೫

ಚಲನದಿಂದುದಯಿಸಿದ ಶೂದ್ರತೆ
ಗಲಸಿ ಸುರಗಂಗೆಯಲಿ ಮಿಂದು
ಚ್ಚಳಿಸಿ ರಜತಾದ್ರಿಯಲಿ ಶೂಲಿಯ ಪದಯುಗವ ಭಜಿಸಿ
ಬಳಿಕ ನಾಕವನೈದಿ ಸುಮನೋ
ಲಲನೆಯರ ಕುಂತಳಕೆ ಹಾಯ್ದುದು
ಬಲದ ಪದಹತಧೂಳಿ ಗೆಲಿದುದು ವಾಜಪೇಯಿಗಳ ೬

ಹರಿಗೆ ಕೆಂಪಿನ ಝುಗೆ ಸುರಾಂಗನೆ
ಯರಿಗೆ ಸುಭಟವ್ರಜಕೆ ಕುಂಟಣಿ
ವರ ದಿಗಂಗನೆಯರಿಗೆ ಬೈತಲೆಗೆಸೆವ ಸಿಂಧೂರ
ಸುರಪನನಿಮಿಷತನಕೆ ರಿಪುವೆನ
ಲುರವಣಿಸಿ ಕೆಂದೂಳಿ ನಭಕು
ಪ್ಪರಿಸೆ ಹೊಯ್ದಾಡಿದರುಭಯ ಚತುರಂಗಬಲ ಹಳಚಿ ೭

ಝಡಿವ ಕೈದುಗಳುರಿಯ ಕೆಚ್ಚು ವ
ನಡಸಿ ಕಾರಿದವಲಗು ಖಣಿಖಟಿ
ವಿಡುವ ದನಿ ಮಿಗೆ ತುಂಬಿತಂಬುಜಬಂಧುವಾಲಯವ
ಕಡುಗಿ ಹೊಯಿದಾಡಿದರು ಡಾವಣೆ
ವಿಡಿದು ಜೋಲುವ ಕರುಳ ಹಿಣಿಲೊಳು
ತೊಡಕಿ ತೋಟಿಯ ಭಟರು ತಱುಬಿದರಂತಕನ ಪುರಿಗೆ ೮

ಬಿಡದೆ ಕಡಿದಾಡಿದರು ಸೇನಾ
ಗಡಲು ರಕುತದ ಕಡಲನುಗುಳಿತು
ಬಿಡದೆ ಸುಂಟರಗಾಳಿ ವಿಲಯದ ಮಳೆಯ ಪಡೆದಂತೆ
ಒಡೆದು ನಾನಾ ಘಟ್ಟುಗಳ ಮೈ
ವಿಡಿದು ವಾರಿಡುವರುಣಜಲದಲಿ
ಕಡಿಕುಗಳು ಬೆಂಡೇಳೆ ದಂತಿಗಳಟ್ಟೆ ಕೊಡೆನೆಗೆಯೆ ೯

ಲಗ್ಗೆ ಮಸಗಿತು ಸೂಳುವೊಯಿಲಿನ
ಬೊಗ್ಗಿನಲಿ ಮುಂಕೊಂಡು ಮೋಹರ
ವೊಗ್ಗೊಡೆದು ಹೆಣಗಿದುದು ಕೇಶಾಕೇಶಿ ಯುದ್ಧದಲಿ
ಮೊಗ್ಗರವ ಕೆದರಿದರು ಹೊಯ್ದುರೆ
ಮುಗ್ಗಿದರು ಕಡಲಿಡುವ ರಕುತದ
ಸುಗ್ಗಿ ಶಾಕಿನಿಯರಿಗೆ ಸೇರಿತು ಭೂಪ ಕೇಳೆಂದ ೧೦

ತೆಗೆದುದುಬ್ಬಿದ ಧೂಳಿ ಹೆಣಸಾ
ಲುಗಳು ಹರೆದವು ರಕುತದರೆವೊನ
ಲುಗಳು ಹರಿದವು ಹೊರೆದನಂತಕನುರುಪರಿಗ್ರಹವ
ಅಗಿದು ಮುಗ್ಗಿತು ಜೂಣಿ ಬಲುಕಾ
ಳಗವನೊಯ್ಯಾರಿಸುತ ರಾಯರು
ತೆಗೆಸಿದರು ಸೇನೆಯನು ನೂಕಿದರಂದು ಬಿಲ್ಲವರ ೧೧

ಪುಲಿದೊಗಲ ಸೀಸಕದ ಕಿಗ್ಗ
ಟ್ಟೊಲೆವ ಸುರಗಿಯ ಕಾಂಚದೊಳರೆ
ಬಲಿದ ಬಿಲ್ಲಿಂ ಬಿಗಿದ ತಿರುವಿನ ಬೆರಳ ಕೋಲುಗಳ
ಬಲಿದ ಮುಂಗೈಹೊದೆಯ ಬಿರುದಿನೊ
ಳುಲಿವ ಘಂಟೆಯ ಬೆನ್ನಲವ ಬ
ತ್ತಳಿಕೆಗಳಲೈದಿತ್ತು ಬಿಲ್ಲಾಳುಭಯಸೇನೆಯಲಿ ೧೨

ಬೊಬ್ಬಿರಿದು ಮೊಳಕಾಲನೂರಿದ
ರುಬ್ಬಟೆಯಲಿದಿರಾಂತು ಕಾಲನ
ಹೆಬ್ಬಳಸು ಹುಲಿಸಾಯ್ತು ಬರಹೇಳೆಂಬವೋಲೊದರಿ
ಹಬ್ಬುಗೆಯ ಜೇವೊಡೆಯ ಝಾಡಿಯ
ತೆಬ್ಬುಗಳ ತೆಗೆವೆರಳುಗೋಲಿನ
ಕೊಬ್ಬಿನಾಳೆಚ್ಚಾಡಿತಿಕ್ಕಿದ ಮಂಡಿ ಚಂಡಿಸದೆ ೧೩

ಬೆರಳ ಶರಸಂಧಾನ ದೃಷ್ಟಿಯ
ಮುರಿವ ಮುಷ್ಟಿಯ ಕುಂಡಲಿತ ಕಿವಿ
ವರೆಯ ತೆಗೆಹಿನ ತೋಳ ವೀರರು ತೂಳಿದರು ಕಣೆಯ
ಅರರೆ ಕವಿಕವಿದಂಬು ಕಡಿದವು
ಕೊರಳನುಗಿದವು ಜೋಡನೊಡಲೊಳು
ಹೊರಳಿದವು ಹೊಡೆಗೆಡಹಿದವು ಹೊಕ್ಕೆಸೆವ ಹೂಣಿಗರ ೧೪

ಕಣೆ ಕಣೆಯ ಹಳಚಿದವು ಮಾರ್ಗಣೆ
ಕಣೆಯ ಕಡಿದವು ಕವಿಯ ಕಣೆ ಕಿರು
ಗಣೆಯ ಮುಕ್ಕುಳಿಸಿದವು ಹೆಕ್ಕಳಿಸಿದವು ಹಂದೆಗರ
ಖಣಿಖಟಿಲು ನಿರಿನಿಳಿಲು ಘುರಿಘುರಿ
ಘಣಿಲು ದೊಪ್ಪನೆ ಕೊಯ್ವ ಸೀಳುವ
ಹೆಣಗೆಡಹುವಬ್ಬರಕೆ ಮಿಗಿಲೊದಗಿದರು ಬಿಲ್ಲವರು ೧೫

ಉರಗಬಲದುರವಣೆಯೊ ವಾರಿದ
ತರುಗಳುಪಶಾಖೆಗಳೊ ಕಾಲನ
ಹರವರಿಯೊ ಹೆಬ್ಬೆಳಸ ಮುತ್ತುವ ವಿಹಗಸಂತತಿಯೊ
ತರಣಿ ತಲ್ಲಣಿಸಿದನು ಹೊಗರಲ
ಗುರವಣಿಸಿ ಹೊದರೆದ್ದು ಹಿಳುಕ
ಬ್ಬರಿಸಿ ಗಬ್ಬರಿಸಿದುವು ದಿಗುತಟವನು ಶರವ್ರಾತ ೧೬

ಹೆಣಗಿ ಹಿಣಿಲಿರಿದಭ್ರದಲಿ ಸಂ
ದಣಿಸಿ ಕಣೆ ಕೈಕೊಂಡವಂಬರ
ಮಣಿಗೆ ನಡೆದುದೊ ತಿಮಿರರಾಜನ ದಂಡು ಮಂಡಳಿಸಿ
ಮಣಿಮಕುಟದಿಳೆಗೊಯ್ಲು ನೆಲದಾ
ವಣಿಯೊ ಗಗನಾರ್ಣವದ ವಾಡಬ
ಗಣವೊ ಕೌತುಕವೆನಿಸಲೆಚ್ಚಾಡಿದರು ಬಿಲ್ಲವರು ೧೭

ರೇಣು ಹತ್ತಿದ ರವಿಯ ಮಸೆಯಲು
ಸಾಣೆಗಿಕ್ಕಿತೊ ಭಗಣರತ್ನವ
ನಾಣೆಗಳೆಯಲು ಕಮಲಭವ ಸೃಜಿಸಿದ ಸಲಾಕೆಗಳೊ
ಕಾಣೆನಭ್ರವನಮುಮ ದಿಕ್ಕುಗ
ಳೇಣು ಮುರಿಯಲು ಹೊಕ್ಕೆಸುವ ಬಿಲು
ಜಾಣರುರವಣೆ ಲಜ್ಜಿಸಿತು ಲೋಕದ ಧನುರ್ಧರರ ೧೮

ವೀರ ಧಣುಧಣು ಪೂತುರೇ ಬಿಲು
ಗಾರ ಮಝುರೇ ಚಾಪತಂತ್ರವಿ
ಶಾರದಾ ಎನುತೊಬ್ಬರೊಬ್ಬರ ಬಿರುದ ಮೂದಲಿಸಿ
ಓರಣದ ಕಣೆಗಳಲಿ ತಲೆಗಳ
ತೋರಣವ ಕಟ್ಟಿದರು ಸೇನಾ
ಮಾರಣಾಧ್ವರವೆಸೆದುದರುಣಜಲಾಜ್ಯಧಾರೆಯಲಿ ೧೯

ಪ್ರಳಯದಿವಸದ ಪಟುಪವನನೀ
ಹಿಳುಕುಗಾಳಿಯೊಳುದಿಸಿದುದೊ ಮಿಗೆ
ಮೊಳಗಿ ಮೋದುವ ಸಿಡಿಲ್ಗಳಂಬಿನ ಮೊನೆಯೊಳುದಿಸಿದುದೊ
ಜಲಧಿಯಲಿ ಜಂಗುಳಿಸಿ ಕುಧರಕೆ
ಕುಲಿಶಭೀತಿಯ ಬೀರಿ ಕಣೆ ಬಳಿ
ಸಲಿಸಿ ಹರಿದಾಡಿದವು ಸುಭಟರ ಗೋಣ ಗುರಿಮಾಡಿ ೨೦

ಕುಣಿದೆಸುವ ಕುಕಿಲಿರಿವ ಬಿರುದರ
ನಣಕಿಸುವ ಬಲುಬಿಲ್ಲನೊದರಿಸಿ
ಹಣುಗಿ ಕಣು ನಟ್ಟಾಲಿಗೊಳೆ ತಳಮಂಡಿ ಮರನಾಗೆ
ಹೊಣಕಿಗರು ರಣದವಕಿಗರು ಬಿರು
ಗಣೆ ಸವೆಯಲೆಚ್ಚಾಡಿದರು ಮಿಗೆ
ಮಣಿಯದದಟರು ಸುರಗಿಗಳನುಗಿದೊಡನೆ ಹಳಚಿದರು ೨೧

ಅಹಿಯ ನಾಲಗೆ ಮೃತ್ಯುವಿನ ಹಲು
ಗುಹೆಗಳನು ಕಳೆದಂತೆ ಸಿಡಿಲಿನ
ಬಹಳ ಧೃತಿಗೆಡೆದಂತೆ ಕುಲಿಶದ ತಿರುಳ ಮಸೆದಂತೆ
ಮಹಿಯದಿರಲಿದಿರಾಂತು ಸುರಗಿಯೊ
ಳಹಮಿನದಟರು ಬಿರುದುಗೆದರು
ತ್ತಹಿತರಿರಿದಾಡಿದರು ಪಡೆದರು ರೌದ್ರರಂಜನೆಯ ೨೨

ಮಿಾರಿ ತಳಸಂಚದೊಳು ಮೊನೆಯನು
ತೋರಿ ತಿರುಪಿನೊಳಣೆದು ಕಳಚುವ
ರೇರುಗಾಣದೆ ಮಧ್ಯಸಂಚಕೆ ಸಿಲುಕಿ ಕೈಮಾಡಿ
ಜಾರಿ ಸುರಗಿಯೊಳಣೆವರಳುಕದೆ
ಮಿಾರಿದುಪ್ಪರಸಂಚದಲಿ ಕೈ
ದೋರಿ ದಂಡೆಯನೆತ್ತಿ ಕಾದಿತು ಸುರಗಿಯತಿಬಲರು ೨೩

ಅಣೆದರಾಕುವ ಸೋಂಕಿ ತಿವಿದರೆ
ಹೆಣನ ತೋರುವ ಹಜ್ಜೆದೆಗೆದರೆ
ಜುಣಗಲೀಯದೆ ಮೇಲೆ ಕವಿಸುವ ಮಿಾರಿ ಕೈಮಾಡಿ
ಕೆಣಕಿದರೆ ಝುಂಕಿಸುವ ನಿಟ್ಟಿಸಿ
ಹಣುಗಿ ಮೊನೆಗೊಡೆ ದಂಡೆಯೊಳು ಖಣಿ
ಖಣಿಲು ರವವೆಸೆಯಲ್ಕೆ ಕಾದಿತು ಸುರಗಿಯತಿಬಲರು ೨೪

ಬೀಯವಾದರು ಬಿಲ್ಲವರು ಖ
ಡ್ಗಾಯುಧರು ಕೈಕೊಳಲಿ ದಿವಿಜ
ಶ್ರೀಯು ತಪ್ಪದು ಸಮರಮುಖದಲಿ ಮಡಿದ ವೀರರಿಗೆ
ರಾಯ ಮೆಚ್ಚಲು ರಣದೊಳೊದಗುವ
ರಾಯತಿಕೆಯಂತೆನುತ ಸೇನಾ
ನಾಯಕರು ನೂಕಿದರು ಖಂಡೆಯಕಾರ ಮೋಹರವ ೨೫

ತಾಟಿಸಿದರೊಡನೊಡನೆ ಕುಲಗಿರಿ
ದೂಟಿ ಬಿದ್ದವು ಚಿತ್ರದಲಿ ನಡೆ
ಗೋಟೆಯೆನೆ ಮಂಡಳಿಸಿ ಬಲಿದರು ತೆಕ್ಕೆವರಿಗೆಗಳ
ನೋಟದಮರರ ನಯನಗಳಿಗ
ಲ್ಲಾಟವೆನೆ ಪಯಚಕ್ರಗತಿಗಳ
ತೋಟಿಕಾರರು ಹೊಕ್ಕು ತಾಗಿದರುಭಯ ಸೇನೆಯಲಿ ೨೬

ಬಲಸಮುದ್ರದ ಬುದ್ಬುದಂಗಳೊ
ತಿಳಿಯಲರಿದೆನೆ ಹರಿಗೆ ಮುಸುಕಿತು
ಬಿಳಿಯ ಚೌರಿಗಳುಲಿವ ಘಂಟೆಯ ಬಿರುದಿನುಬ್ಬಟೆಯು
ತಲಪಟದೊಳೌಕಿದರು ತೊಡೆ ಸಂ
ಕಲೆಯ ತೊಲಗದ ಕಂಭದಪ್ರತಿ
ಬಲರು ಹಾಣಾಹಾಣಿಯಲಿ ಹೊಯಿದಾಡಿದರು ಕಡುಗಿ ೨೭

ಸಿಡಿಲ ಹೆತ್ತುದೊ ಜಡಿವ ನಿಸ್ವನ
ಕಡುಹೊಗರು ಬೆಸಲಾಯ್ತೊ ನಭವನು
ಹೊಡೆಗೊಳಿಸಲುಚ್ಚಳಿಪ ಕಿಡಿ ವಡಬಂಗೆ ಪಿತನೆನಲು
ಕುಡಿಮೊನೆಯೊಳಹಿಪತಿಯ ನಾಲಗೆ
ಗಡಣವುದಿಸಿದವೆನೆ ಕೃಪಾಣದ
ಕಡುಹು ಕೌತಕವಾಯ್ತು ಖಂಡೆಯಕಾರ ಮೋಹರದ ೨೮

ಕರೆಕರೆದು ಮೂದಲಿಸಿ ಕಡುಹಿನ
ದುರುಳರುಬ್ಬಿನ ಮೇಲೆ ಹೊಕ್ಕ
ಬ್ಬರಿಸಿ ಹೊಯಿದರು ಕಾದಿ ಕೊಂಡರು ಕಾಲನರಮನೆಯ
ಕರುಳುಗಿಯೆ ತಲೆ ಸಿಡಿಯೆ ನಿಟ್ಟೆಲು
ಮುರಿಯೆ ಮೂಳೆಗಳುದಿರೆ ಶೋಣಿತ
ಸುರಿಯೆ ಕಾಳಿಜ ಕೆದರೆ ತುಂಡಿಸಿ ಖಂಡ ಬೆಂಡೇಳೆ ೨೯

ಅಡಸಿ ಕಿಡಿಗಳ ಕಾರೆ ಲೋಹದ
ಕಡಿಕು ಸಿಡಿಲುಗ್ಗಡದಲಡ್ಡಣ
ವೊಡೆದು ಕೈಬಂದಿಗೆಯನೆತ್ತಿದಡಿಕ್ಕಲಿಸಿ ಬೀಳೆ
ಘಡ ಸುಖಾಯವ ಬಿಡದಿರಿವ್ಮೊನೆ
ಗೊಡದಿರುಪ್ಪರದಲ್ಲಿ ಕೈಯನು
ಕೊಡದಿರಾ ಮಿಡುಕದಿರು ಮುಂಡಿಯನೆನುತ ಹಳಚಿದರು ೩೦

ಕಾಲು ಖಂಡಿಸಿ ಬೀಳೆ ಕರುಳಿನ
ಮಾಲೆಯೊಳು ತೊಡಕಿದುವು ಹಣಿದದ
ಬಾಳೆಯಂದದೊಳುಡಿಯೆ ತೊಡೆ ನಡು ಮುರಿಯೆ ಕಟಿ ಕೆದರೆ
ತೋಳ ಕೊರೆದರು ನೆಲಕೆ ತಲೆಯನು
ಬೀಳಿಕಿದರೆರಡಾಗಿ ತನುವನು
ಸೀಳುಹೊಯಿದರು ಬೈದು ತಾಗಿತು ಹರಿಗೆಯತಿಬಲರು ೩೧

ನಿಲುಕಲಿಟ್ಟೆಡೆಯಾದ ಹೆಣನನು
ತುಳಿದು ರಣದಲಿ ಕುಣಿವ ಮುಂಡವ
ನೆಳದು ರುಧಿರದೊಳೌಕಿ ಮೆಟ್ಟುವ ಮುಂದೆ ನಡೆನಡೆದು
ತಲೆಮಿದುಳ ಜೊಂಡಿನಲಿ ಜಾರುವ
ಕಲಹಕಾತರರಿಪುಭಟರನ
ಪ್ಪಳಿಸಿ ಘಾಯಂಬಡೆದು ಮಗ್ಗಿದರುಭಯಸೇನೆಯಲಿ ೩೨

ಉರುಳಿ ಬೀಳುವ ತಮ್ಮ ತಲೆಗಳ
ತಿರುಹಿ ರಿಪುಗಳನಿಡುವ ಸಡಿಲಿದ
ಶಿರವನರಿಯದೆ ಮುಂಡದಿದಿರಲಿ ಬೀದಿವರಿವರಿವ
ಹರಿಗೆ ಹೊಳ್ಳಿಸೆ ಖಡುಗ ಖಂಡಿಸೆ
ಕೊರಳರಿಯೆ ದೆಸೆದೆಸೆಯ ಸೇನೆಯೊ
ಳುರವಣಿಸಿ ತಿವಿದರು ಕಬಂಧದೊಳತುಳಭುಜಬಲರು ೩೩

ನೆಲಕೆ ನಿಗುರುವ ಗಂಗೆವಾಳದ
ಬಿಳಿಯ ಚೌರಿಗಳುಲಿವ ಗಂಟೆಯ
ತೊಳಪ ಬದ್ದುಗೆ ದಾರ ಕಾಂಚನಮಯದ ಗೊಂಡೆಯದ
ಉಲಿವ ಗೆಜ್ಜೆಯ ಚೆಲ್ಲಣದ ಹೊಂ
ಬಳಿದ ಹರಿಗೆಯ ಹೊಳೆವ ಕಡಿತಲೆ
ಗಳ ವಿಲಾಸದೊಳಂದು ಹೊಕ್ಕುದು ತುಳುವ ಪಡೆ ಕಡುಗಿ ೩೪

ಉರುಬಿದರೆ ವಡಬಾನಲನ ಮುಖ
ದಿರವು ಮೊನೆದೋರಿದರೆ ಭುಜಗನ
ಬಿರುಬು ಸಾಲಗೆ ಹಲಗೆಯಣೆದರೆ ಸಿಡಿಲ ಸಡಗರಣೆ
ಮೆರೆವ ಹಜ್ಜೆಯ ದಂಡೆವಲಗೆಯ
ಮರೆಯ ಕೈದಂಡೆಗಳ ಜುಣುಗಿಸಿ
ತರುಬಿ ನಿಂದರು ಸಂದ ಕಡಿತಲೆಗಾರರುಭಯದಲಿ ೩೫

ಹಳಚಿದರು ತಗರಂತೆ ಗಜದವೊ
ಲೊಲೆದು ನಿಂದರು ಹಾವಿನಂತಿರೆ
ನಿಲುಕಿದರು ಸೂಕರನವೊಲು ಕೋಡೆತ್ತಿ ಹಾಯ್ಕಿದರು
ಬಲಿದ ಚರಣಾಯುಧದವೊಲು ಪರ
ರಳವನೀಕ್ಷಿಸಿ ಕಪಿಯವೊಲು ಮೈ
ವಳಿಯ ಹತ್ತಿದರಂದು ಕಡಿತಲೆಗಾರರುಭಯದಲಿ ೩೬

ಕಡಿತಲೆಯ ಮಿಂಚುಗಳ ಹೊಯ್ಲಿನ
ಸಿಡಿಲುಗಳ ರಕ್ತಪ್ರವಾಹದ
ಕಡುವಳೆಯ ನೃತ್ಯತ್ಕಬಂಧದ ಸೋಗೆನವಿಲುಗಳ
ಬಿಡುಮಿದುಳ ಹೊರಳಿಗಳ ಹಂಸೆಯ
ನಡಹುಗಳ ನವಖಂಡದೊಳು ಹೆಣ
ನಡವಿ ತಳಿತಿರೆ ಮೆರೆದುದೈ ಸಂಗ್ರಾಮಕಾರ್ಗಾಲ ೩೭

ಪಡಿತಳವ ಬೀಸಿದರೆ ಕಾಲಿ
ಕ್ಕಡಿ ನಡುವ ತಾಗಿದರೆ ಮಂಡಲ
ವುಡಿದು ಬಿದ್ದುದು ನಿಲುಕಿನುಪ್ಪರ ಶಿರವ ಮನ್ನಿಸದು
ಮಡವ ಮಿರುವ ಕಚ್ಚಿ ಮುಂಡಿಯ
ಪಡಿದೊಡೆಯ ತಲೆಮರೆಯ ಹರಿಗೆಯ
ಕಡಿತಲೆಯ ಕಲಿತುಳುವಪಡೆ ಹೊಯ್ದಾಡಿತಿಳೆ ಹಿಳಿಯೆ ೩೮

ಖಡುಗ ತೋಮರ ಪರಶುಗಳ ಕ
ಕ್ಕಡೆಯ ಕುಂತದ ಪಿಂಡಿವಾಳದ
ಕಡುಗಲಿಗಳುರೆ ಮಗ್ಗಿದರು ತಗ್ಗಿದುದು ಯಮಲೋಕ
ಬಿಡದೆ ನಾಯಕವಾಡಿ ಚೂಣಿಯ
ಹಿಡಿದು ಕಾದಿತ್ತುಭಯರಾಯರು
ದಡಿಯಕೈಯವರಿಂದ ಕವಿಸಿದರಂದು ಸಬಳಿಗರ ೩೯

ಕುಣಿವ ತೊಡರಿನ ಪೆಂಡೆಯದ ಡೊಂ
ಕಣೆಯ ಬಿರುದರ ನೂಕುನೂಕೆನೆ
ಹಿಣಿಲ ಬಾವುಲಿಗಾರರಾವೆಡೆ ಭಾಷೆಯತಿಬಳರು
ಹೊಣಕೆಯಿದಲೇ ಹಿಂದ ಹಾರದಿ
ರಣಕಿಸುವ ಮಾತಿಲ್ಲ ದಿವಿಜರ
ಗಣಿಕೆಯರು ಬಯಸುವರು ನೂಕುವದೆಂದು ಸಾರಿದರು ೪೦

ತಲೆಯ ಖಡ್ಗಣಿಗೆಯು ಸುರಂಗದ
ಪಳಿಯ ಸೀರೆಯ ಭಾಳಭೂತಿಯ
ಬಿಳಿಯ ಚೌರಿಯ ಝುಗೆಯ ಸಬಳದ ಕಾಲ ತೊಡರುಗಳ
ಉಲಿವ ಬಿರುದಿನ ಕಹಳೆಗಳ ಕಳ
ಕಳಿಕೆ ಮಿಗೆ ನಿಶ್ಶಂಕಮಲ್ಲರು
ಕಳನೊಳಗೆ ತಲೆದೋರಿದರು ಡೊಂಕಣಿಯ ಪಟುಭಟರು ೪೧

ನಡೆವಡವಿಯೋ ಬಲುಭುಜರ ಪಂ
ಗಡವೊ ಸಬಳವೊ ನಭದ ಕಾಲ್ಗಿಚ್ಚೊ
ಬಡಬವಹ್ನಿಜ್ವಾಲೆಯೋ ಸೇನಾಮಹಾಂಬುಧಿಯೊ
ಪಡೆಯ ಪದಹತಧೂಳಿ ಸವೆಯಲು
ಪೊಡವಿಪಾತಾಳದ ಫಣಿವ್ರಜ
ವಡರಿದವೊ ರವಿಬಿಂಬಕೆನಲಾದುದು ಕುತೂಹಲಿಕೆ ೪೨

ಮಿಕ್ಕು ಚೂರಿಸಲಹಿಯ ನಾಲಗೆ
ಜಕ್ಕುಲಿಸಿದಂತಾಯ್ತು ಮೊನೆಗಳ
ತೆಕ್ಕೆಯಲಿ ಕುದಿಗೊಂಡು ಸುರಿದವು ರಕ್ತಧಾರೆಗಳು
ಹೊಕ್ಕವರು ಹೆಣಗಿದರೆ ನಿರಿಗರು
ಟೊಕ್ಕವಡಗುದಿರಿದವು ಮೋಹರ
ಹಕ್ಕಲಾಗಲು ಹರಿದು ಸಬಳಿಗರಿರಿದು ತೋರಿದರು ೪೩

ನೆಲನ ಗೆಲಿದಬ್ಬರಿಸಿ ಚಾಚಿದ
ತಲೆವರಿಗೆ ತೆರಳದೆ ಸುಘಾಯದ
ಬಲದ ಬೆಳೆಸಿರಿವಂತರನು ಕರೆಕರೆದು ಮೂದಲಿಸಿ
ಥಳಿಥಳಿಲು ಛಟಛಟಿಲು ಖಣಿಕಟಿ
ಲುಲುಹು ಮಿಗೆ ದನಿ ಮರೆಯೆ ರಿಪುಗಳ
ಗೆಲುವೆವೆಂದುರವಣಿಸಿ ಹೊಯ್ದಾಡಿದರು ರಣದೊಳಗೆ ೪೪

ಹಲಗೆ ಸೀಸಕ ಸಹಿತಲಿಬ್ಬಡಿ
ಗಳೆದರೊಡಲುಪ್ಪರದ ಘಾಯವ
ಕಳಚಿ ಕೈಮಾಡಿದರು ಕೊಂದು ಮುಂದುವರಿವರಿದು
ಹೊಳೆದು ಹೊಯ್ದರು ಮಿಂಚಿನಂತಿರೆ
ಬಲುಹು ಮಿಗೆ ಜವನಂತೆ ಬವರಿಯ
ಲುಳಿಯ ಚೌಪಟ ಮಲ್ಲರೊದಗಿದರುಭಯಸೇನೆಯಲಿ ೪೫

ಬವರಿಯಲಿ ಪೈಸರಿಸಿ ಪರಘಾ
ಯವನು ವಂಚಿಸಿ ಭಟರ ಕೊರೆದೆ
ತ್ತುವರು ಕೈಮಾಡಿದರೆ ಕಿವಿವರು ಕೋಡಕೈಯವರು
ಕವಿಯಲೌಕುವರೌಕಿದರೆ ತ
ಗ್ಗುವರು ತಗ್ಗಿದರೊಡನೊಡನೆ ಜಾ
ರುವರು ಜುಣುಗುವರ್ಕೈದೆ ಕಿವಿದಾಡಿದರು ಸಬಳಿಗರು ೪೬

ಹೆಣನ ಹೋಳಿನ ಸಿಡಿದಡಗು ಡೊಂ
ಕಣಿಯೊಳಿಸೆದುವು ಕಾಲನಾರೋ
ಗಣೆಗೆ ಮಿಗೆ ಪಡಿಸಣವ ನೋಡದೆ ಮಾಣವೆಂಬಂತೆ
ಕುಣಿವ ಕುಂತಾಗ್ರದಲಿ ಜೋಲುವ
ಕಿಣಿಲುಗರುಳೊಪ್ಪಿದವು ಜವನೀ
ರಣಕೆ ಬರೆ ಕಟ್ಟಿದವು ಗುಡಿ ತೋರಣವನೆಂಬಂತೆ ೪೭

ದೆಸೆದೆಸೆಗೆ ಹರಿಹರಿದು ಮಾಮಸ
ಮಸಗಿ ಬಾದಣಗೊರೆದು ಕೆಡಹುವ
ವಿಷಮವೀರರು ಘಾಡಿಸಿತು ಡೊಂಕಣಿಯ ತುದಿಗಳಲಿ
ಬಸಿವ ಹೊಸ ರುಧಿರಕ್ಕೆ ಜೋಲುವ
ಕುಸುರಿಗರುಳಿಂದುದಿರುವಡಗಿನ
ಬಸೆಗೆ ಬಂದೆರಗಿದವುಲೂಕಧ್ವಾಂಕ್ಷ ಸಂದೋಹ ೪೮

ಧುರದೊಳಗೆ ಬಿಲುಗಾರರೊಗ್ಗಿನ
ಹರಿಗೆಕಾರರು ಹಲಗೆಯವರು
ಬ್ಬರದ ಡೊಂಕಣಿಕಾರರಾಂತು ಕೃತಾಂತನಾಲಯವ
ಥರಥರದಿ ತೀವಿದರು ರುಧಿರದ
ಹರಹು ಹೇರಾಳಿಸಿತು ಚೂಣಿಯೊ
ಳೆರಡು ಬಲದ ಪದಾತಿ ಸವೆದುದು ಕೇಳು ಧೃತರಾಷ್ಟ್ರ ೪೯

ಧುರವನವ ಸಾಗಿಸದಿರೇರಲಿ
ತುರಗವಾವೆಡೆ ಪಟ್ಟಸಹಣದ
ಹಿರಿಯ ಸಹಣದ ವಿಮಲಸಹಣಿಗಳವರ ಕರೆಯೆನುತ
ಧುರಧುರಂಧರರೊರಲಿದರು ಮೋ
ಹರಮಹಾಂಭೋನಿಧಿಯ ತೆರೆಯವೊ
ಲುರವಣಿಸಿದವು ಕುದುರೆ ತಾರೆಗಳುದಿರೆ ನೆಲನದಿರೆ ೫೦

ಬರಿಗಡಗ ಕೀಳ್ಕಂಬಿ ದುಕ್ಕುಡಿ
ಯುರುಗುಗಡಿಯಣ ಮೊಗವಡಂಗಳು
ತುರಗ ವದನದಲೊಪ್ಪಿರಲು ತಾ ಪಣೆಯನಳವಡಿಸಿ
ಕೊರಳ ಕೊಡಕೆಯ ಪಾರ್ಶ್ವಪೇಚಕ
ದೆರಡು ಕಡೆಯಲಿ ಸುತ್ತು ಝುಲ್ಲಿಯ
ಪರಿಪರಿಯ ಹಕ್ಕರಿಕೆಯಲಿ ಬೀಸಿದರು ಚೌರಿಗಳ ೫೧

ಹಳದಿ ಪಾರಿಯ ಪಚ್ಚೆ ಜೋನೆಗ
ಪಳಿ ಸುವರ್ಣಾವಳಿಯ ಸಂಧ್ಯಾ
ವಳಿಯುದಯರಾಗದಲಿ ರಚಿಸಿದ ಹಕ್ಕರಿಕ್ಕೆಗಳ
ಕೆಲಬಲದ ಕುಣಿಕೆಗಳ ರಚಿಸಿದ
ರುಲಿವ ಘಂಟೆಯ ಮೊಗದ ಕನ್ನಡಿ
ಗಳ ವಿಲಾಸದಲಂದಲಂಕರಿಸಿದರು ತೇಜಿಗಳ ೫೨

ಸವಗ ಮೊಚ್ಚೆಯ ಬಾಹುರಕ್ಕೆಯ
ವಿವಿಧ ವಜ್ರಾಂಗಿಗಳ ಸೀಸಕ
ಕವಚಗಳ ತೊಟ್ಟತುಳಬಲರೇರಿದರು ತೇಜಿಗಳ
ಹವಣಿಸಿದ ವಾಘೆಗಳ ರಾಘೆಯ
ಸವಸರಿಯ ಭಾರಾಂಕಲವುಡಿಯ
ಗವಿಯ ಗರುವರು ನೂಕಿದರು ತೇಜಿಗಳನೋಜೆಯಲಿ ೫೩

ತರುಣಿಯರ ನೊಸಲಂತೆ ತಿಲಕದ
ಸರಿಸವದು ವೈವಾಹಗೇಹದ
ಸಿರಿಯವೊಲು ಮಂಗಳಮಯವು ಮಲೆಯಾಳ ಜನಪದದ
ಅರಸಿನಂತಿರೆ ಚೇರಮಯವೆನ
ಲುರವಣಿಸಿ ನೂಕಿದರು ನಿಡುವ
ಕ್ಕರಿಕೆಗಳ ಗುರವಾಯಿಗಳ ಘನಮದದ ತೇಜಿಗಳ ೫೪

ನಿಲುಕಿ ಹೊಳೆದವು ನೇಣ ಸಡಿಲಿಸೆ
ಕುಲಗಿರಿಯ ಹೆಡತಲೆಯನಡರಿದ
ವಳುಕಿ ಪಯಸನ್ನೆಗಳೊಳಭ್ರದ ಕುಡಿಯನಡರಿಸುತ
ದಳವುಳಿಸಿದವು ತಾಟಿಸಿದರೊಡೆ
ದುಳಿದವಖಿಳಾವನಿಯನೆನೆ ಮೈ
ಲುಳಿಯ ಮನವೇಗಾಯ್ಲ ವಾಜಿಯ ಥಟ್ಟ ನೂಕಿದರು ೫೫

ಖುರಪುಟದ ಕೆಂಧೂಳಿ ಬಂಧಿಸೆ
ತರಣಿಯನು ಪವಮಾನಮಾರ್ಗವ
ನರರೆ ಕಟ್ಟಿತು ತುಳಿದುದಿಂದ್ರನ ಸಾವಿರಾಲಿಗಳ
ಹರಿಸಬುದ ತನ್ನಗಿಲ್ಲದಿನ್ನೀ
ತರಣಿವಾಯುಸುರೇಂದ್ರರಿಗೆ ಸಂ
ಚರಿಸಲೇಕೆಂಬಂತೆ ನಡೆದವು ಘೋಟಕವ್ರಾತ ೫೬

ಖುರದ ಹೊಯಿಲಲಿ ನಡುಗಿತಿಳೆ ಫಣಿ
ವರನ ಹೆಡೆಗಳು ನೊಂದವಂಬುಧಿ
ಹೊರಳಿದವು ಹೋಗಾಡಿದವು ಕುಲಗಿರಿಗಳಚಲತೆಯ
ಅರರೆ ಸೂಟಿಯೊಳಟ್ಟಿದರೆ ದಿ
ಕ್ಕರಿಯ ಸೊಕ್ಕಡಗಿದವು ನಿಗುರುವ
ತುರಗದಳವೊಡವೆರಸಿದವು ಕುರುಪಾಂಡು ಸೈನ್ಯದಲಿ ೫೭

ಹಿಡಿಯೆ ಜವನಿಕೆ ಸಮರ ಮೋನದ
ಬಿಡುದಲೆಯ ಬಿರುದಾವಳಿಯಲು
ಗ್ಗಡಣೆಗಳ ಸೋಲಿಸುತ ತಮ್ಮನ್ವಯವ ಪಾಲಿಸುತ
ಝಡಿವ ದೂಹತ್ತಿಗಳ ಹಾಯಿಕಿ
ಹಿಡಿದ ಲೌಡಿಯ ಹತ್ತಳದ ತನಿ
ಗಡಣೆಗರು ಮೂದಲಿಸಿ ಕವಿದುದು ರಾಯರಾವುತರು ೫೮

ನೂಲ ಹರಿಗೆಯ ಹೆಗಲ ಬಾರಿಯ
ತೋಳ ತೋರಿಯ ಲೌಡಿಗಳ ಕರ
ವಾಳತಳಪದ ಮಿಂಚುಗಳ ತನುಮನದ ಕೆಚ್ಚುಗಳ
ಸಾಲದಾವಣಿದಲೆಯ ಗಂಟಲ
ಗಾಳಗತ್ತರಿಗರಗಸದ ಬಿರು
ದಾಳಿಗಳ ಛಲದಂಕರಾವುತರೊತ್ತಿ ನೂಕಿದರು ೫೯

ಹೊಡೆದು ಚಮ್ಮಟಿಗೆಯೊಳು ದೊರೆಗಳ
ಹಿಡಿವ ಸಮ್ಮುಖದಲಿ ಕಠಾರಿಯ
ನಡಸಿ ತಿವಿವ ಕೃಪಾಣದಲಿ ಕಡಿನಾಲ್ಕ ತೋರಿಸುವ
ಅಡತರದಲವನಿಪರ ಹಯಮುಂ
ಗುಡಿಯ ಮುರಿದು ವಿಘಾತಿಯಲಿ ಥ
ಟ್ಟೊಡೆದು ಹಾಯ್ವತಿಭಾಷೆಗಳ ಬಿರುದಂಕರೇರಿದರು ೬೦

ಉಲಿವ ಕೈವಾರಿಗಳ ಲಗ್ಗೆಯ
ಬಲಿವ ತಂಬಟ ಕೋಟಿಗಳ ಭುಜ
ಬಲದ ಬಿರುದರ ಹೊಯ್ಲುಗಳ ನಿಸ್ಸಾಳ ನಿಸ್ವನದ
ಘುಳುಘುಳಿಪ ಬೊಗ್ಗುಗಳ ರಿಪುಗಳ
ಮುಳಿಯಿಸುವ ಕಹಳೆಗಳ ತುರಗಾ
ವಳಿಯ ಗಜರಬ್ಬರಣೆ ಮಿಗೆ ಕೈಕೊಂಡರತಿಬಳರು ೬೧

ಹೊಡೆವ ದೂಹತ್ತಿಗಳ ಘಾಯದ
ಲೊಡೆದು ಸಿಡಿದವು ಲೋಹ ಸೀಸಕ
ವಡಸಿ ಬಲ್ಲೆಹ ಬಗಿದು ನಟ್ಟುದು ಸರಪಣಿಯ ಝಗೆಯ
ಹೊಡೆವ ಲೌಡಿಗಳೊತ್ತಿ ನೆತ್ತಿಯ
ಬಿಡು ಮಿದುಳ ಕೆದರಿದವು ರಕುತದ
ಕಡಲು ಕಡಲನು ಕೂಡೆ ಹೊಯ್ದಾಡಿದರು ರಾವುತರು ೬೨

ಜರೆದು ಸರಿಸದಲೇರಿದರೆ ಸಿಡಿ
ಲುರುಬಿದಂತಾಯಿತ್ತು ಘಾಯವ
ನರುಹಿದರೆ ದೂಹತ್ತಿ ರಾವ್ತರ ಮಸ್ತಕದೊಳಿಳಿದು
ಕೊರೆದುದಿಳೆಯನು ಹಯವ ನೂಕಿದ
ಡೊರಲಿದರು ತಳಕಮಠನೆನೆ ತ
ತ್ತರದರಿದು ಹೊಯ್ದಾಡಿದರು ಗುಜ್ಜರದ ರಾವುತರು ೬೩

ಎಡನ ಹೊಯಿದರು ಬಲದವರನಡ
ಗೆಡಹಿದರು ಸಮ್ಮುಖದ ನೃಪರನು
ಸಿಡಿಲ ಹರೆಯವೊಲೆರಗಿದರು ಸೂಟಿಯಲಿ ಸೈವರಿದು
ಅಡುಗುದುಳಿದರು ಮೋಹರವನೊ
ಗ್ಗೊಡೆದು ಚೂಣಿಯ ಗೋಣ ಬನದಲಿ
ಖಡುಗ ನರ್ತಿಸಲೊದಗಿದರು ಮಾಳವದ ರಾವುತರು ೬೪

ಬೀಸುನೇಣಿನ ಸೆಳೆವ ನೇಗಿಲ
ಸೂಸುಗಣೆಗಳ ಕಡಿವ ಕೊಡಲಿಯ
ಕೈಸುರಗಿ ಸೂನಗೆಯ ನಾನಾಯುಧದ ಗಡಣೆಗಳ
ಓಸರಣೆಗೊಡದತಿಬಳರು ದಿವ
ದಾಸೆಗಾರರು ವೈರಿಬಲವನು
ಘಾಸಿಮಾಡಿದರೊಗ್ಗಿನಲಿ ಹಮ್ಮೀರರಾವುತರು ೬೫

ಅರರೆ ಕವಿದರು ಕದಳಿಯನು ಮದ
ಕರಿಯ ತೊತ್ತಳದುಳಿದವೊಲು ದಿಂ
ಡುರುಳಿಚಿದರಗಕೋಟಿಯನು ಶತಮನ್ಯುವಂದದಲಿ
ಶಿರವೊಡೆಯೆ ತೊಡೆಯುಡಿಯೆ ಕೈ ಕ
ತ್ತರಿಸೆ ಕೋಳಾಹಳ ಮಹಾಸಂ
ಗರದೊಳಗೆ ಹೊಯ್ದಾಡಿದರು ಕಾಶ್ಮೀರರಾವುತರು ೬೬

ಕವಿದು ಮುಂದಲೆವಿಡಿದು ರಾವ್ತರ
ತಿವಿದು ಜೀವವ ಕಳಚಿ ಕೆಲಬಲ
ದವರ ಕೆಡೆಹೊಯ್ದಹಿತಘಾಯವ ನೋಟದೊಡೆಹೊಯ್ದು
ಸವಗ ತುಂಡಿಸೆ ಜೋಡು ಖಂಡಿಸೆ
ನವರುಧಿರದೊರವೇಳೆ ಮಹದಾ
ಹವದೊಳೋರಂತೊದಗಿದರು ಗೌಳವದ ರಾವುತರು ೬೭

ಅಳವನರಿಯದೆ ಕೆಣಕಿತಹ ಮುಂ
ಕೊಳಿಸಿ ಕದನವ ಕೋಡ ಕೈಯವ
ರಳವಿಗೊಟ್ಟರೆ ನೋಡಿ ಸಿಡಿಮಿಡಿಗೊಂಡು ಕೆಲಸಿಡಿವ
ಗೆಲಿದರುತ್ಸಾಹಿಸುವ ಸಿಲುಕಿದ
ರಳುವ ಕೆಟ್ಟೋಡಿದರೆ ಪುರದಲಿ
ನಿಲುವ ನಿರುಪಮವೀರರೊದಗಿತು ತಿಗುಳರಾವುತರು ೬೮

ಬವರ ಸವೆಯದೆ ತೇಜಿಗಳ ಬಲು
ಜವವು ಜಾರದೆ ಬಿಡುವ ತಿವಿದರೆ
ಸವಗವುಚ್ಚಳಿಸುವವು ಕವಿದರೆ ಕಾಲಯಮನಂತೆ
ಕವಿವರವಗಡಿಸಿದರೆ ಹಿಮ್ಮೆ
ಟ್ಟುವರು ಭೂಮಾನದೊಳುಪಾಯದ
ಬವರದೋಜೆಯಲೊದಗಿದರು ಕರ್ಣಾಟರಾವುತರು ೧೯

ಉರುಬಿ ಹೊಯಿದರು ಕೈದಣಿಯೆ ಹೊ
ಕ್ಕೆರಗಿದರು ನಿಪ್ಪಸರದಲಿ ಮು
ಕ್ಕುರಿಕಿದರು ತಲೆಮಿದುಳ ಜೊಂಡಿನ ಜುರಿತ ಜೋಡುಗಳ
ತರಿದು ಬಿಸುಟರು ಖಗನಿಕರಕಾ
ರ್ದಿರಿದು ಕಾಲನ ಬನಕೆ ರಕುತದ
ಕೆರೆಯ ತೋಟಿಸ್ತಿದರು ಸೇವಣ ರಾಯ ರಾವುತರು ೨೦

ರಾವುತೋ ಮಝು ಭಾಪು ರಾವುತು
ದೇವು ರಾವುತು ಭಲರೆ ರಾವುತು
ರಾವುತೋ ನಿಶ್ಶಂಕರಾವುತು ರಾವುತೆಂದೆನುತ
ರಾವು ರಾವುತು ಪೂತುರಾವುತು
ಭಾಪು ರಾವುತು ರಾವುತೋ ಎಂ
ದೋವಿ ಹೊಯಿದಾಡಿದರು ರಣದಲಿ ಲಾಳ ರಾವುತರು ೨೧

ಗಾಳ ಕೊಂಕ ಕಳಿಂಗ ವರ ನೇ
ಪಾಳಕದ ರಾವುತರು ರಣಭೇ
ತಾಳರಣಲೊಳಗಡಗಿದರು ಕುರುಪಾಂಡು ಸೈನ್ಯದೊಳು
ಹೇಳಲಳವಲ್ಲುಭಯದಲಿ ಹೇ
ರಾಳ ಕಾಳಿಗ ಹಿರಿದು ಕಿರಿದೆನೆ
ಹೇಳುವೆನು ಬವರಕ್ಕೆ ಬಂದುದು ಮತ್ತಗಜಸೇನೆ ೨೨

ಕನಕಗಿರಿಯಲಿ ವಿಂಧ್ಯಗಿರಿಯಂ
ಜನಗಿರಿಯ ಮಲಯಾದ್ರಿಯಲಿ ಸಂ
ಜನಿಸಿದಾನೆಯ ಸೇನೆಯಲಿ ಬೀಸಿದರು ಚೌರಿಗಳ
ಕನಕಘಂಟೆಗಳುಲಿಯೆ ಹೊರಜೆಯ
ತನತನಗೆ ಹಿಡಿದಡರಿ ಪೂರ್ವಾ
ಸನವ ವೆಂಠಣಿಸಿದರು ರಾಜಾರೋಹಕವ್ರಾತ ೨೩

ಬಾರ ಸಂಕಲೆ ಪಕ್ಕ ಘಂಟೆಯ
ಚಾರು ಚಮರದ ಕೊಡತಿಗಳ ಕೈ
ಹಾರೆ ಕೂರಂಕುಶದ ಬಿರುದರು ಹೊದ್ದಿದರು ಗಜವ
ಬಾರ ದೂಹತ್ತಿಗಳ ಗುಂಡನು
ತೋರ ಲೌಡಿಯ ತೊಟ್ಟು ಕೈಯಲಿ
ವಾರಣದ ದೋಹರವ ನೂಕಿದರುಭಯಸೇನೆಯಲಿ ೨೪

ಕಾಲನುಬ್ಬೆಗೆ ಶೀತಳಂಗೊಡು
ವಾಲವಟ್ಟವೊ ವಿಲಯಕಾಲದ
ಗಾಳಿಯೋ ಮೇಣ್ ಕರ್ಣತಾಳವೊ ಕಿವಿಗೆ ಕೌತುಕವೊ
ಕಾಲುವೆರಸಿದ ನೀಲಗಿರಿಗಳ
ಧಾಳಿಯೋ ಮೇಣಂಜನಾದ್ರಿಯ
ಬೀಳಲೋ ಬರಿಕೈಗಳೋ ನಾವರಿಯೆವಿದನೆಂದ ೨೫

ಪಡೆಯೊ ಹೀನೇಂದುವಿನಿರುಳ ಮುಂ
ಗುಡಿಯೊ ಮುಗಿಲೋ ಮದದ ತುಂಬಿಯೊ
ಬಿಡುಮುದದ ಪಾರಿಗಳೊ ಹೊಸ ಪಾರಾಶಿಯೋ ಮೇಣು
ಅಡಸಿ ಪದಹತಧೂಳಿ ಮದವನು
ಕುಡಿದುದಾ ಮದಧಾರೆ ರೇಣುವ
ನಡಗಿಸಲು ಮದಧೂಳಿಗಳು ಹೆಣಗಿದುವು ತಮ್ಮೊಳಗೆ ೨೬

ಕುಲಗಿರಿಗಳಗ್ರದೊಳು ಕೈಗಳ
ನಿಳುಹಿದನೊ ರವಿಯೆನಲು ಮಿಗೆ ಹೊಳೆ
ಹೊಳೆವ ಕೂರಂಕುಶವನಿಕ್ಕಿದರಿಭದ ಮಸ್ತಕಕೆ
ಉಲಿದವಿದಿರೊಳು ಡೌಡೆ ಬಿರುದಾ
ವಳಿಯ ಕಹಳೆಗಳೊದಿದವು ನೆಲ
ವೊಳಗಿದಂತಿರಲೊದರಿದವು ನಿಸ್ಸಾಳಕೋಟಿಗಳು ೨೭

ಹೊಕ್ಕವಾನೆಗಳೆರಡು ಸೇನೆಯೊ
ಳೊಕ್ಕಲಿಕ್ಕಿದವೆಸುವ ಜೋದರ
ತೆಕ್ಕೆಗೋಲಿನ ಮಾಲೆ ಮುಕ್ಕುಳಿಸಿದವು ದಿಗುತಟವ
ಉಕ್ಕಿನುರುಳಿಯೊಳಿಡುವ ಖಂಡೆಯ
ದಿಕ್ಕಡಿಯ ಘಾಯಗಳ ಪಟ್ಟೆಯ
ದಕ್ಕಜದ ಹೊಯಿಲೆಸೆಯೆ ಕಾದಿದವಾನೆಯಾನೆಯೊಳು ೨೮

ತಿವಿಯೆ ಕಳಚುವ ಕಳಚಲೊತ್ತುವ
ಕವಿದಡಾನುವ ನಿಂದಡೆತ್ತುವ
ಸವೆಯೆ ತುಡುಕುವ ತುಡುಕಿ ಮಿಗೆ ಕೈಕೈಯ ಜೋಡಿಸುವ
ಭುವನ ಭಯಗೊಳಲೊದರುತುರವಣೆ
ಸುವ ವಿಘಾತಿಸಿ ತುಳಿವ ಸೀಳುವ
ನವಮದೇಭದ ಸಮರ ಸೋಲಿಸಿತಮರರಾಲಿಗಳ ೨೯

ತಿರುಹಿ ಬಿಸುಟುವು ಕಾಲುಗಾಹಿನ
ತುರಗವನು ಮುಂಬಾರೆಕಾರರ
ಶಿರವನ್ನೆದಾರೇಳನಡಸಿದವಣಲ ಹೊಳಲಿನೊಳು
ಅರರೆ ಪಟ್ಟೆಯ ಲೌಡಿ ಖಂಡೆಯ
ದುರವಣೆಯ ಹೊಯಿಲಿನೊಳು ರಿಪುಗಜ
ಪುರುಳಿದವು ತೆರಳಿದವು ಜೋದರ ಜೀವವಂಬರಕೆ ೩೦

ಮೆಟ್ಟಿ ಸೀಳಿದು ಹಾಯ್ಕಿ ದಾಡೆಯ
ಕೊಟ್ಟು ಮೋರೆಯನೊಲೆದು ಹರಿದರೆ
ಯಟ್ಟಿ ಹಿಡಿದಪ್ಪಳಿಸಿ ಜೋದರನಂಘ್ರಿಯಿಂದರೆದು
ಇಟ್ಟು ಕೆಡಹಲು ಹೆಣನ ಲೊಟ್ಟಾ
ಲೊಟ್ಟೆ ಮಸಗಿತು ತುರಗ ನರ ರಥ
ವಿಟ್ಟಣಿಸೆ ಸವರಿದವು ದಂತಿವ್ರಾತವುಭಯದೊಳು ೩೧

ಕುತ್ತಿ ಹಿಂಗುವ ಭಟರ ದಾಡೆಯೊ
ಳೊತ್ತಿ ನೆಗಹಿದಡೊಗುವ ರಕುತಕೆ
ಮುತ್ತಿ ಬಾಯ್ದುಳನೊಡ್ಡಿ ಕುಡಿದುದು ಶಾಕಿನೀನಿವಹ
ಮಿತ್ತುವಿನ ಗಣವಿಭವ ದಾಡೆಯ
ಸುತ್ತಿ ಜೋಲುವ ಕರುಳ ಹಿಣಿಲನು
ಕುತ್ತಿದವು ತಮ್ಮೊಳಗೆ ಹೆಣಗಿದವಸಮಸಮರದಲಿ ೩೨

ಅರರೆ ಮತ್ತ್ಯವಿನರಕೆಗೌಷಧ
ವರೆವವೊಲು ರಿಪುಬಲವನಸಿಯಿ
ಟ್ಟರೆದವಿಭ ಬರಿಕೈಯ ಭಾರಿಯ ಲಾಳವುಂಡಿಗೆಯ
ಸರಿಸಗುಂಡಿನೊಳೊಂದನೊಂದಿ
ಟ್ಟೊರಸಿದವು ಕೊಡಹಿದವು ಸೀಳಿದು
ಹೊರಳಿಚಿದವೆರಗಿದವು ನಾನಾ ವಿಧದ ಕೊಲೆಗಳಲಿ ೮೩

ವ್ರಣದ ಬಂಧದ ಜಗಿಯ ದಾಡೆಗೆ
ಕುಣಿದು ಕವಿವ ವಿಹಂಗ ತತಿಗಳಿ
ನಣಲೊಳಡಸಿದ ತಲೆಗೆ ಕೈಗುತ್ತುವ ನಿಶಾಟರಲಿ
ಹೆಣನ ಬೀಸುವ ಕೈಗಳಲಿ ಸಂ
ದಣಿಸುವಸುರರಿಸುರು ಕಪಾಲವ
ಕೆಣಕುವಳಿಯಿಂ ಚಂಡಿಯಾಡುವು ಸೊಕ್ಕಿದಾನೆಗಳು ೮೪

ಅಡಸಿ ತಲೆಗಳ ಕಿತ್ತು ಸೇನೆಯ
ನಿಡುವ ಬಸುರನು ಬಗಿದು ಕರುಳನು
ಕೊಡಹಿ ಸೂಸುವ ಮಿದುಳ ಮೊಗೆದೆಣ್ದೆಸೆಗೆ ಸಾಲಿಡುವ
ಅಡಗನಾಯಿದು ಕೆದರಿ ರಕುತವ
ತುಡುಕಿ ಚೆಲ್ಲುವ ಕಿರಿಯ ಬರಿಕೈ
ಬಿಡಿಸಿದವು ಹುಟ್ಟಾಗಿ ಯಮರಾಜನ ಪರಿಗ್ರಹಕೆ ೮೫

ಕಾಲುಗಳಲೊಡೆತುಳಿವ ಮೋರೆಯ
ತೋಳಿನೊಳು ಬೀಸಿಡುವ ರದನದಿ
ಹೋಳಿಸುವ ಖಾತಿಯಲಿ ನಾನಾ ವಿಧದ ಕೊಲೆಗಳಲಿ
ಕಾಲನೊಗಡಿಸೆ ಕೊಲುವ ಮದಗಜ
ಜಾಲಗಳೊಳಾರೋಹಕರು ಕೆಂ
ಗೋಲ ಮಳೆಗರೆದಾರಿದರು ನೃಪಸೇನೆಯೆರಡರಲಿ ೮೬

ನೀಲಗಿರಿಗಳ ನೆಮ್ಮಿ ಘನ ಮೇ
ಘಾಳಿ ಸುರಿದವೊ ಮಳೆಯನೆನೆ ಬಿರು
ಗೋಲ ಸೈವಳೆಗರೆದರುಭಯದ ಜೋದರವಗಡಿಸಿ
ಮೇಲೆ ತೊಳಲುವ ಖಚರ ನಿಚಯುಗ
ಳಾಲಿಯೊಲೆದವು ಧರೆಗೆ ಗಗನಕೆ
ಕಾಳಿಕೆಯ ಪಸರಿಸಿತು ಜೋದರ ಕೋದ ಶರಜಾಲ ೮೭

ಎಲೆಲೆ ವಿಂಧ್ಯಾಚಲದ ಹರಿಬಕೆ
ಕಳನ ಹೊಕ್ಕವೊ ಕಣೆಗಳೆನುತಾ
ನಳಿನಸಖನಂಜಿದನು ಕೋಪಾಟೋಪಕಭ್ರದಲಿ
ಅಲಗುಗಣೆಗಳೊ ಮೇಘತರುವಿನ
ತಳಿತ ತುದಿಗೊಂಬುಗಳೊ ಬೀಳುವ
ತಲೆಗಳೋ ತತ್ಫಲಸಮೂಹವೊ ಚಿತ್ರವಾಯ್ತೆಂದ ೮೮

ಸರಳ ಸರಳೊಳು ಕಡಿವ ಕರಿಗಳ
ಕೊರಳ ಮುರಿಯೆಸುವೋರಣದ ವೊಗ
ವರಿಗೆಗಳ ಖಂಡಿಸುವ ಮೋರೆಯ ಕರವ ತುಂಡಿಸುವ
ಸರಳು ವದನವ ತಾಗಿ ಪೇಚಕ
ಕುರವಣಿಸೆ ತೆಗೆದೆಸುವ ಜೋದರ
ಧುರಚಮತ್ಕೃತಿ ಬೆರಗನಿತ್ತುದು ದೇವಸಂತತಿಗೆ ೮೯

ಶೂರ ಜೋದರ ಮೇಲುವಾಯಿದು
ವೀರಸಿರಿ ಬಿಗಿಯುಪ್ಪೆ ಮುತ್ತಿನ
ಹಾರ ಹರಿಯಲು ಕೆದರಿದವು ದೆಸೆದೆಸೆಗೆ ಮುತ್ತುಗಳು
ವಾರಣದ ಕುಂಭಸ್ಥಳಂಗಳ
ಚಾರುಮೌಕ್ತಿಕನಿಕರವೋ ಮೇಣ್
ಭಾರತಾಹವ ಕೌತುಕೋದಯರಸಕೆ ನೆಲೆಯಾಯ್ತೊ ೯೦

ಅರರೆ ಶರಸಾಗರದ ಜೋದರ
ಸರಳಹತಿಯಲಿ ಮಂದರಾಚಲ
ಕರಿಯ ಮಸ್ತಕವೊಡೆದು ಕೆದರಿತು ಮೌಕ್ತಿಕವ್ರಾತ
ಹರೆದು ತಾರಗೆಯಾದವಭ್ರದೊ
ಳುರುಳೆ ರತ್ನಾಕರನೆನಿಪ್ಪಾ
ಬಿರುದು ಸಂದುದು ಶರನಿಧಿಗೆ ಭೂಪಾಲ ಕೇಳೆಂದ ೯೧

ಧುರದ ಜಯಸಿರಿ ವೀರಭಟರಿಗೆ
ಸುರಿವ ಲಾಜಾವರುಷದಂತಿರೆ
ಸುರಿದ ಮುತ್ತುಗಳೆಸೆದವಭ್ರವಿಮಾನ ಭಾಗದಲಿ
ಕರಿಶಿರದ ಮುಕ್ತಾಳಿಯೊಪ್ಪಿದ
ವರ ವಿಜಯರೊಡಗೂಡಿ ಜಯವಧು
ವಿರದೆ ಪುಳಕಿತೆಯಾದಳೆನೆ ಚೆಲುವಾಯ್ತು ನಿಮಿಷದಲಿ ೯೨

ವಿಗ್ರಹದೊಳಿದಿರಾಂತ ಕರಿಗಳ
ವಿಗ್ರಹಂಗಳು ಕೆಡೆಯೆ ಕಾದಿ ಸ
ಮಗ್ರಬಲ ಜೋದಾಳಿ ಕೊಂಡುದು ಸುರರ ಕೋಟೆಗಳ
ಉಗ್ರದಾಹವಭೂತಗಣಕೆ ಸ
ಮಗ್ರ ಭೋಜನವಾಯ್ತು ಸಂಗರ
ದಗ್ರಿಯರು ಕೈವೀಸಿದರು ತೇರುಗಳ ತಿಂತಿಣಿಯ ೯೩

ನೊಗನ ಬಿಗುಹಿನ ಕಂಧುದುರು ವಾ
ಜಿಗಳು ಕುಣಿದವು ಪಲ್ಲವದ ಸೆರ
ಗಗಿಯೆ ಟೆಕ್ಕೆಯವೆತ್ತಿದವು ಮುಮ್ಮೊನೆಯ ಸೂನಗೆಯ
ಹೊಗರುಗಳ ತೀಡಿದರು ಕೀಲ
ಚ್ಚುಗಳ ಮೇಳೈಸಿದರು ಬಲು ನಂ
ಬುಗೆಯ ಬದ್ಧರದೊಳಗೆ ತುಂಬಿದರಸ್ತ್ರ ಶಸ್ತ್ರಗಳ ೯೪

ಹಯನಿಕರ ಖುರಕಡಿಯ ವಜ್ರಾಂ
ಗಿಯನು ಹೊತ್ತುವು ಝುಡಿವ ಹೊಂ ಗಂ
ಟೆಯ ವಿಡಾಯ ವರೂಥವನು ಕರೆಸಿದವು ಚೀತ್ಕೃತಿಯ
ಜಯನಿನದವಳ್ಳಿರಿಯೆ ಸೂತಾ
ಶ್ರಯದಲತಿರಥನಿಕರ ರಥ ಸಂ
ಚಯವ ವೆಂಠಣಿಸಿದರು ತುಳುಕಿದರತುಳ ತೋಮರವ ೯೫

ಪೂತು ಸಾರಥಿ ಭಾಪು ಮಝರೇ
ಸೂತ ಧಿರುಧಿರು ಎನುತ ರಥಿಕ
ವ್ರಾತ ಮಿಗೆ ಬೋಳೈಸಿ ಕೊಂಡರು ಹಯದ ವಾಘೆಗಳ
ಆ ತುರಂಗದ ಖುರಪುಟದ ನವ
ಶಾತಕುಂಭದ ಗಾಲಿಯುರುಬೆಯ
ನಾ ತತುಕ್ಷಣವಾಂಪರಾರೆನೆ ಕವಿದುದುಭಯದೊಳು ೯೬

ಹರಿವ ರಥದುರವಣೆಗೆ ನೆರೆಯದು
ಧರಣಿಯೆಂದಂಭೋಜಭವನೀ
ಧರೆಯನಿಮ್ಮಡಿಸಿದನೊ ಎನಲಾ ಬಹಳ ಸಮರದೊಳು
ಹರಿವ ರಥಪದಧೂಳಿ ಮಕರಾ
ಕರವ ಕುಡಿದುದು ಚೀತ್ಕೃತಿಯ ಚ
ಪ್ಪರಣೆ ಮಿಗಲುರುಬಿದರು ರಥಿಕರು ಸರಿಸ ವಾಘೆಯಲಿ ೯೭

ಘನರಥದ ಚೀತ್ಕಾರ ಗಜರುವ
ಧನುವಿನಬ್ಬರ ಹಯದ ಹೇಷಾ
ನಿನದ ರಥಿಕರ ಬೊಬ್ಬೆ ಸೂತರ ಬಹಳ ಚಪ್ಪರಣೆ
ಅನುವರದೊಳೊದಗಿತ್ತು ವಿಲಯದ
ವಿನುತ ಮೇಘಧ್ವಾನವನು ಸಂ
ಜನಿಸಿತೆನೆ ಹಳಚಿದವು ರಥರಥವೆರಡು ಸೇನೆಯಲಿ ೯೮

ತೆಗೆತೆಗೆದು ತಲೆಮಟ್ಟು ಕರೆದರು
ಬಿಗಿದ ಬಿಲುಗಳಲತಿರಥರು ಕಂ
ಬುಗೆಯ ಮುರಿದರು ಹಯವ ತರಿದರು ಸಾರಥಿಯ ಕೆಡಹಿ
ಹಗಲ ಹೂಳಿದರಮಮ ಬಾಣಾ
ಳಿಗಳಲಸಮ ಮಹಾರಥರು ಕಾ
ಳಗದೊಳಹುದೆನಿಸಿದರು ರಣದೊಳು ಸುಳಿವ ಯಮನವರ ೯೯

ತಿರುಗೆ ತಿರುಗಿದರೆಚ್ಚರೆಚ್ಚರು
ಮರಳಿ ಮರಳಿದರೌಕಲೌಕಿದ
ರುರವಣಿಸಲುರವಣಿಸಿದರು ಮಾರ್ತಾಗೆ ತಾಗಿದರು
ಸರಳಿಗಂಬನು ಸೂತ ವಾಜಿಯ
ಶಿರಕೆ ಶಿರವನು ರಥಕೆ ರಥವನು
ಸರಿಗಡಿದು ಕಾದಿದರು ಸಮರಥರಾಹವಾಗ್ರದಲಿ ೧೦೦

ರಥವದೊಂದೆಸೆ ಹಯವದೊಂದೆಸೆ
ರಥಿಕರೊಂದೆಸೆ ಚಾಪ ಶರ ಸಾ
ರಥಿಗಳೊಂದೆಸೆಯಾಗೆ ಕೊಂದರು ಬಲದೊಳತಿರಥರು
ರಥಿಕರುರವಣೆಯುಭಯ ಬಲದಲಿ
ಕಥೆಯ ಕಡೆಯಾಯಿತ್ತು ಬಳಿಕತಿ
ರಥರು ಹೊಕ್ಕರು ಕೇಳು ಧೃತರಾಷ್ಟ್ರಾವನೀಪಾಲ ೧೦೧

## ಐದನೆಯ ಸಂಧಿ

ಸೂ. ಉಭಯಬಲದತಿರಥ ಮಹಾರಥ
ವಿಭುಗಳುರೆ ಹಳಚಿದರು ರಣದಲಿ
ತ್ರಿಭುವನವು ರಂಜಿಸಿತು ಸವೆದುದು ಸಕಲ ಸನ್ನಾಹ

ಅಳಿದುದೆರಡರ ಚೂಣಿ ಮುಂಗುಡಿ
ಯೊಳಗೆ ಕಡಲಾಯ್ತುರುಣ ಜಲದೊ
ಬ್ಬುಳಿಯ ಖಂಡದ ದೊಂಡೆಗಳು ಕೆಸರಿಡುವ ಮಿದುಳುಗಳ
ಕಳದ ಹೆಣನೊಟ್ಟಿಲಲಿ ಮೊಗಸುವೊ
ಡಳುಕಿದರು ಮನ್ನೆಯರು ಬಳಿಕರೆ
ನೆಲೆಗಳಲಿ ಸೂಳೈಸಿದವು ನಿಸ್ಸಾಳ ಕೋಟಿಗಳು ೧

ನರನ ರಥ ಕುಣಿದುದು ಯುಧಿಷ್ಠಿರ
ನುರು ವರೂಥ ಸಗಾಢದೊಳು ಚೀ
ತ್ಕರಿಸಿತನಿಲಾತ್ಮಜನ ಸ್ಯಂದನ ಮುಂದುವರಿಯುತಿರೆ
ಭರದಿ ಮಾದ್ರೀಸುತರ ತೇರುಗ
ಳುರವಣಿಸಲಭಿಮನ್ಯು ಸಾತ್ಯಕಿ
ಯಿರದೆ ಕೈಕೊಳಲಾಯಿತಿತ್ತಲು ಕದನಕುದ್ಯೋಗ ೨

ವಿನುತ ಭೀಷ್ಮನು ಗಜರೆ ದುರಿಯೋ
ಧನನು ಬಿಲುಗೊಳಲಾತನನುಜರು
ಧನುವ ತುಡುಕೆ ಸುಶರ್ಮ ಶಲ್ಯರು ಸರಳ ಹೊದೆಗೆದರೆ
ಮೊನೆಗಣೆಯನಳವಡಿಸೆ ಗುರು ಗುರು
ತನುಜನಸ್ತ್ರವ ತಿರುಹೆ ಸೇನಾ
ವನಧಿ ಗರ್ಜಿಸಲಾಯ್ತು ಸಂಕುಲಸಮರ ಸೌರಂಭ ೩

ಶಕುನಿ ಸಹದೇವನೊಳು ಶಲ್ಯನು
ನಕುಲನೊಳು ದುಶ್ಶಾಸನನು ಸಾ
ತ್ಯಕಿಯೊಡನೆ ಸೈಂಧವನು ಕುಂತೀಭೋಜ ಭೂಪನೊಳು
ಸಕಲ ನಾಯಕರಂದು ಯುದ್ಧೋ
ದ್ಯುಕುತರಾದರು ಕೇಳು ನೃಪ ತಾ
ವಕರ ಕೌಂತೇಯರ ಸಮಗ್ರಾಹವದ ವಿಸ್ತರವ ೪

ಕಣೆಗೆದರಿ ದ್ರುಪದಾಂಕ ಗುರುವನು
ಕೆಣಕಿದನು ತತ್ತನುಜ ಭೀಷ್ಮನ
ಸೆಣಸಿದನು ಮೂದಲಿಸಿದನು ಲಕ್ಷಣನನಭಿಮನ್ಯು
ರಣಕೆ ಕರೆದನು ಕೌರವಾನುಜ
ಗಣವನನಿಲತನೂಜನಿತ್ತಲು
ಹೆಣಗಿದರು ಭಗದತ್ತ ಭೀಮಕುಮಾರರವಗಡಿಸಿ ೫

ಕಲಹದೊಳು ಕರಿಘಟೆಯ ಹೊಯ್ ಹೊ
ಯ್ದಲಸಿ ಕೌರವನನುಜನನು ಮುಂ
ಕೊಳಿಸಿ ಕೊಳ್ಳದೆ ಕಳುಹಿ ಬೇಸರುತನಿಲಸುತ ಮಸಗಿ
ನೆಲನ ಲೋಭಿಯ ಬುದ್ಧಿ ಮರಣಕೆ
ಫಲಿಸಬೇಹುದು ಕರೆ ಸುಯೋಧನ
ನಿಲಲಿ ಬವರಕ್ಕೆನುತ ಗದೆಯನು ತೂಗಿದನು ಭೀಮ ೬

ಭುಜವನೊದರಿಸಿ ಸಿಂಹರವದಲಿ
ಗಜರಿ ಗದೆಯನು ತಿರುಹಿ ರಿಪು ಭೂ
ಭುಜರನರಸಿದನಳವಿಗಾಂತರೆ ಕೊಂದನತಿಬಳರ
ತ್ರಿಜಗ ಮರುಳು ಭಾಪೆನಲು ಪವಮಾ
ನಜನು ತಿರುಗಿಟ್ಟಣಿಸೆ ಸೇನಾಂ
ಬುಜಕೆ ಕುಂಜರನಾದೆದನ್ನೈ ಜನಮೇಜಯ ಕ್ಷಿತಿಪ ೭

ನಡೆದರಾಹವಕನಿಲ ನಂದನ
ನೊಡನೆ ಸಾತ್ಯಕಿ ನಕುಲ ದ್ರುಪದರು
ತುಡುಕಿದರು ಬಿಲುಗೋಲನೈದಿತು ಪವನಜನ ಚೂಣಿ
ಗಡಣಿಸುವ ಮುಂಮೊಗದ ಕೌರವ
ಪಡೆಯ ಹೇರಡವಿಯನು ಸವರಲು
ಕಡಿತಕಾರರು ಮುಂದೆ ಹೊಕ್ಕುದು ನಕುಲ ಪಾರ್ಥಜರು ೮

ಕಡಿವರರಿಭಟಪಾದಪವನಡ
ಗೆಡಹಿದರು ಗಜಗಿರಿಗಳನು ರಥ
ದೆಡೆದೆವರ ಕೊಚ್ಚಿದರು ತುರಗವ್ರಜದ ಬಲುಮೆಳೆಯ
ಕಡಿದು ಹರಹಿದರನಿಲಸುತ ಕಾ
ಲಿಡಲು ತೆರಹಾಯ್ತಹಿತವಿಪಿನದ
ಕಡಿತ ತೀರಿತು ಹೊಕ್ಕನರೆನೆಲೆಗಾಗಿ ಕಲಿಭೀಮ ೯

ಎಲೆಲೆ ವಿಲಯಕೃತಾಂತನೋ ನ
ಮ್ಮಳವು ಕೊಳ್ಳದು ಬೆಂಗೊಡಲಿ ಮುಂ
ಕೊಳಿಸದಿರಿ ಮದುಳಾಗದಿರಿ ಹುರುಳಾಗಿ ಹೆಂಡಿರಿಗೆ
ಕೊಲೆಗಡಿಗನೋ ಭೀಮನೋ ರಿಪು
ಬಲಜಲಧಿಬಡಬಾನಲನೊ ತೊಲ
ತೊಲಗೆನುತ ತೆಗೆದೋಡಿತರೆನೆಲೆ ಕೌರವನ ಹೊರೆಗೆ ೧೦

ಅದಟನಡ್ಡೈಸಿದನು ದುರುಳನ
ಮದವನಳಿವೆನು ಬಾಯ ಹೊಯ್ ಹೊಯ್
ಕದನದಲಿ ನಡುಗಿಸುವ ನಾಯಕವಾಡಿಗಳನೆನುತ
ಬದಗಿನಿದಿರಾದನು ಜಯಶ್ರೀ
ಮದನಕಾಯನು ಕಪಟದಾಯನು
ವಿದಿತಮಾಯನು ರಣದಜೇಯನು ಕೌರವರ ರಾಯ ೧೧

ಎಲವೊ ಮಾರುತಿ ನಿಮ್ಮೊಳಗೆ ಕೋ
ಮಳೆಯ ಹುದುವನು ಮೆಚ್ಚಿ ನಮ್ಮೊಳ
ಗಿಳೆಯ ಹಂದುವನು ಬಯಸಿದೈ ಛಲದಂಕನೆಂದರಿಯ
ನೆಲನ ಬೇಟವ ಬಿಸುಟು ಜೀವದ
ಲುಳಿದು ತೊಲಗೆನೆ ಪವನಸುತ ಕಳ
ಕಳಸಿ ನಗುತವೆ ಕೌರವೇಂದ್ರುಂಗೆಂದನುತ್ತರವ ೧೨

ಕೆಡಹಿ ದುಶ್ಶಾಸನನ ರಕುತವ
ಕುಡಿದು ನಿನ್ನೂರುಗಳನೀಕ್ಷಣ
ವುಡಿದು ಕೊಂಬೆನು ಧರೆಯನಲ್ಲದೆ ಹುದುವ ಬಯಸುವೆನೆ
ಪೊಡವಿ ದ್ರುಪದಕುಮಾರಿಯೆಮ್ಮಯ
ಮಡದಿಗನ್ಯರು ಮನವಿಡಲು ಬಳಿ
ಕಡಗುದರಿವೆನೆನುತ್ತ ಹೊಕ್ಕನು ಭೀಮನವಗಡಿಸಿ ೧೩

ಗಾಳಿಯುರುಬೆಗೆ ಮಲೆತ ಮೇಘದ
ತೋಳುವಲ ನಗೆಗೆಡೆಯಲಾ ಕುರು
ಪಾಲನೆತ್ತಲು ಭೀಮನೆತ್ತಲು ಶಿವಶಿವಾ ಎನುತ
ಮೇಲಣಮರರ ಮಂದಿ ನಗೆ ನೃಪ
ಮೌಳಿ ಜವಗೆಡೆ ಖಾತಿಯೊಳು ಕ
ಟ್ಟಾಳು ಹೊಕ್ಕುದು ಭೀಮಸೇನನ ರಥವ ಮುರಿಯೆಸುತ ೧೪

ಬಿಲುದುಡುಂಕಿ ಕೈಕೊಂಡ ರಥಿಕಾ
ವಳಿಯ ಗೋಣಡವಿಯಲಿ ಭೀಮಾ
ನಲನ ವಿಲಸತ್ಕೇಳಿ ಕಾಣಿಸಲಾಯ್ತು ನಿಮಿಷದಲಿ
ಇಳೆಯೊಳೀ ಪವಮಾನ ನಂದನ
ನುಳಿಯೆ ಯಮರಾಜಂಗೆ ಬೆಸಕೈ
ವಳವಿ ಹಲಬರಿಗಾಗದೆಂದುದು ಸಮರ ಭೂತಗಣ ೧೫

ಪವನಜನ ಕೈಘಾಸಿಗಾನದ
ಬವರಿಗರನೀಕ್ಷಿಸುತ ರಥವನು
ಕವಿಸಿದನು ಕೈನೆಗಹಿ ಮೋಹರಕಭಯವನು ಕೊಡುತ
ಹವಣಿಸೈ ಹೇರಾಳದಾಟೋ
ಪವನು ಹಾರೈ ಜಯದ ರಣದಲಿ
ತವಕಿಸೈ ತೆಗೆದೋಟಕೆನುತುರವಣಿಸಿದನು ಭೀಷ್ಮ ೧೬

ಎಲೆ ಪಿತಾಮಹ ನೀವು ಕರುಣಿಸಿ
ದಳವ ನಿಮಗೊಪ್ಪಿಸುವೆ ಜಯವೆಮ
ಗುಳಿವು ಬೇರೆಂತೆನುತ ಕೊಂಡನು ಪವನಸುತ ಧನುವ
ಚಳಕದಲಿ ತೆಗೆದೆಚ್ಚಡಹಿತನ
ಹಿಳುಕ ಸೀಳಿದು ಬಿಸುಟು ಭೀಮನ
ಗೆಲಿದನೆಂಟಂಬಿನಲಿ ಗಂಗಾಸೂನು ಸಮರದಲಿ ೧೭

ಮೇಲೆ ಹೇಳಿಕೆಯಾಯ್ತು ವರ ಪಾಂ
ಚಾಲರಿಗೆ ಚೈದ್ಯರಿಗೆ ಮತ್ಸ್ಯನೃ
ಪಾಲ ಸೃಂಜಯರಾದಿಯಾದಕ್ಷೋಹಿಣೀ ದಳಕೆ
ಸೂಳು ಮಿಗೆ ಗರ್ಜಿಸುವ ಘನ ನಿ
ಸ್ಸಾಳ ಕೋಟಿಯ ಗಡಣದೊಳು ಕೆಂ
ಗೋಲ ಮಳೆಗರೆಯುತ್ತ ಗಂಗಾಸುತನ ಕೆಣಕಿದರು ೧೮

ಪೂತು ಮಝುರೇ ಪಾಂಡುಸೈನ್ಯ
ವ್ರಾತ ಕವಿದುದು ಕೇಳಿರೈ ಮು
ಯ್ಯಾಂತುದೇ ಬರಹೇಳಿ ವೈವಸ್ವತನ ಪರಿಜನವ
ಘಾತಿಸುವೆನದನೆನುತ ತೊಡಚಿದ
ನೂತನಾಸ್ತ್ರಂಗಳಲಿ ರಿಪು ಸಂ
ಘಾತವನು ಕೆಡೆಯೆಚ್ಚು ಪಲ್ಲಟಿಸಿದನು ಕಡಿಕಡಿಯ ೧೯

ಕಾಳೆಗಕ್ಕಿದಿರೊಡ್ಡಿ ಭೀಷ್ಮನ
ಕೋಲ ಹತಿಯಲಿ ಮಡಿದ ರಿಪು ಭೂ
ಪಾಳಿ ಹರಿದುದು ಸುರರ ಹೆಂಡಿರ ಮುರಿದ ಮುಂದಲೆಯ
ಮೇಲೆ ಮೇಲೈತಪ್ಪ ವೀರ ಭ
ಟಾಳಿಯೊಡನಲ್ಲಿಂದ ಸುಭಟರು
ಸೂಳೆಬಂಟಿಕೆಯಿಂದ ಹೊಯ್ದಾಡಿದರು ನಾಕದಲಿ ೨೦

ಮುಡುಹುಗಳೊಳೊಡೆಹೊಯ್ದು ಕಾಲಲಿ
ಮಿಡಿಯ ಮೆಟ್ಟುವ ತಂಬುಲವ ತೆಗೆ
ದಿಡುವ ಕರೆಕರೆದೊರೆಯನುರ್ಚುವ ನಾಯ ಹೆಸರಿಡುವ
ತೊಡರುಗಟ್ಟುವ ಬೈವ ಭಟ್ಟರ
ಬಿಡುವ ಕಾದುವ ವೀರ ಭಟರಿಂ
ದಿಡಿದುದಮರಾವತಿಯ ಸೊಂಪಿನ ಸೂಳೆಗೇರಿಗಳು ೨೧

ಸುರರಿಗತ್ಯಣ ಗಜಬಜವ ಪರಿ
ಹರಿಸಲರಿಯವೆ ವೀರ ಭೀಷ್ಮನ
ಧುರವನೀಕ್ಷಿಸಲಿತ್ತಲಳವಡದೇನನುಸುರುವೆನು
ಅರರೆ ಅಂಬರಸರಸಿ ರಿಪುಭಟ
ವರರ ಮುಖಪಂಕರುಹವನ ವಿ
ಸ್ಮರಣವಾದುದೆನಲ್ಕೆ ಗಂಗಾಸೂನು ಕೈಕೊಂಡ ೨೨

ಕಡುಮನದ ಕೈಸೂರೆಗಾರರ
ನಡಗೆಡಹಿದನು ಧುರದ ಗೆಲವಿಗೆ
ಮಿಡುಕುವರನಸಿಯರೆದು ನೆಗ್ಗಿದನೇನನುಸುರುವೆನು
ಗಡಣಿಗರನೊಂದೊಂದು ಶರದಲಿ
ತಡೆಗಡಿವ ಸಂರಂಭ ಭೀಷ್ಮನ
ಬಿಡುಧನುವಿನುಬ್ಬಟೆಗೆ ತೆರಳಿತು ಮಕುಟವರ್ಧನರು ೨೩

ಬಳಸಿ ತಾರೆಗಳೆಸೆಯೆ ಚಂದ್ರರು
ಹಲಬರಾದರೊ ನಭದೊಳೆನೆ ಹೊಳೆ
ಹೊಳೆವ ಮಣಿ ಮೌಳಿಗಳು ಸಂದಣಿಸಿದವು ಗಗನದೊಳು
ಗೆಲಿದನಹಿತಾನೀಕವನು ರಿಪು
ಬಲ ದಿಶಾಪಟ ಭೀಷ್ಮನಿತ್ತಲು
ಕಲಿ ಯುಧಿಷ್ಠಿರ ನೃಪನ ವಿರಥನ ಮಾಡಿದನು ಶಲ್ಯ ೨೪

ಅರಸನನು ಹಿಂದಿಕ್ಕಿ ನಡೆದು
ತ್ತರನು ಶಲ್ಯನೊಳಾಂತು ನಿಂದನು
ಸರಳ ಸರಿವಳೆಗರೆಯೆ ಕಡಿದನು ಶಲ್ಯಭೂಪಾಲ
ಧುರವಿಶಾರದನಹೆ ವಿರಾಟನ
ಹಿರಿಯ ಮಗ ನೀನೆಂದು ಗೋಕುಲ
ಹರಣದಲಿ ಕಲಿಯಾಗಿ ಕಾದಿದೆಯೆನುತ ತೆಗೆದೆಚ್ಚ ೨೫

ಎಸಲು ಶಲ್ಯನ ಸರಳ ಖಂಡಿಸಿ
ನಿಶಿತ ಬಾಣವಲುತ್ತರನು ತೆಗೆ
ದೆಸಲು ಖತಿಯಲಿ ಶಲ್ಯನಭಿಮಂತ್ರಿಸಿ ಮಹಾಶರವ
ಅಸಮಬಲನಾಕರ್ಣಪೂರದಿ
ನೆಸೆ ವಿರಾಟಕುಮಾರನಸು ಲಂ
ಘಿಸಿತು ಕಾಯವನೊದೆದು ಖಚರೀಜನದ ಕುಚಯುಗಕೆ ೨೬

ವೀರ ಶಲ್ಯ ದ್ರೋಣ ಕೃಪ ಭಾ
ಗೀರಥಿಯ ನಂದನರು ಪಾಂಡು ಕು
ಮಾರಕರ ಸೇನೆಯೊಳು ಗೆಲಿದಳು ಮುರಿದರತಿಬಲರ
ಧೀರ ಸುಭಟರ ರಕ್ತಧಾರಾ
ಸಾರ ಲೋಹಿತ ಬಿಂಬವನು ಘನ
ವಾರಿಯಲಿ ತೊಳೆದಂತೆ ಪಶ್ಚಿಮಜಲಧಿಗಿನನಿಳಿದ ೨೭

ಸೂಳವಿಸಿದವು ಸನ್ನೆಯಲಿ ನಿ
ಸ್ಸಾಳ ಸೇನೆಯ ತೆಗೆಸಿದವು ಹೆ
ಗ್ಗಾಳೆ ಮೊಳಗಿದವಾನೆವರೆ ಗಜರಿದವು ಡೌಡೆಗಳು
ಪಾಳಯಕೆ ತಿರುಗಿದರಖಿಲ ಭೂ
ಪಾಲಕರು ಗಂಗಾಸುತನ ಪಾಂ
ಚಾಲಕನ ನೇಮದಲಿ ಕೌರವ ಪಾಂಡುನಂದನರು ೨೮

ಇತ್ತಲೀ ಸಂಗ್ರಾಮ ಮಹಿಯೊಳು
ಮೃತ್ಯುವಿನ ಭಾಗ್ಯೋದಯವು ಕೈ
ವರ್ತಿಸಿತು ವೈವಸ್ವತಾಭಿಪ್ರಾಯ ಸಿದ್ಧಿಸಿತು
ಮುತ್ತಿಗೆಯ ಜಂಬುಕ ಖಗಾಳಿಯ
ಚಿತ್ತ ನಿಶ್ಚಲವಾಯ್ತು ಸಲೆ ಮನ
ವುತ್ತರೋತ್ತರವಾಯ್ತು ಶಾಕಿನಿ ಡಾಕಿನೀ ಜನದ ೨೯

ಹೆಗಲ ಪಕ್ಕಲೆಗಳಲಿ ಕವಿದುದು
ವಿಗಡ ಪೂತನಿವೃಂದ ಜೀರ್ಕೊಳ
ವಿಗಳ ಕೈರಾಟಳದೊಳೈದಿತು ಶಾಕಿನೀ ನಿಕರ
ತೊಗಲ ಕುನಿಕಿಲ ಬಂಡಿಗಳಲಾ
ರ್ದಗಿದು ಹೊಕ್ಕರು ರಕ್ಕಸರು ಬಾ
ಯ್ಬಿಗೆದು ಬಂದುದುಲೂಕ ಜಂಬುಕ ಕಾಕ ಸಂದೋಹ ೩೦

ತಳಿತ ತಲೆಯೋಡಿನೊಳು ಶೋಣಿತ
ಜಲವ ಕಾಸಿದರೆಳೆಯ ಕರುಳನು
ಹಿಳಿದು ಹಿಂಡಿದರಿಕ್ಕಿದರು ಕುಸುರಿಗಳ ಮೂಳೆಗಳ
ತೆಳುದೊಗಲ ಚಕ್ಕಳದ ಕೈ ಚ
ಪ್ಪಳೆಯವರು ಹಂತಿಯಲಿ ಕುಡಿದರು
ಕೆಳೆಯರಿಗೆ ಸವಿದೋರಿ ಪೂತನಿನಿಕರ ಗಡಣದಲಿ ೩೧

ಕರುಳನಣಲೊಳಗಡಸಿ ನಲಿದುದು
ಮರುಳ ಬಳಗ ಕಪಾಲ ಪಾತ್ರೆಯ
ನರೆನೆಗಹಿ ಕೊಂಕಿನಲಿ ಕುಡಿದರು ಮುಕ್ತಕೇಶಿಯರು
ಮೊರೆವೆಣನನೊಡೆ ಮೆಲುತ ಹಾಡಿತು
ದುರುಳ ದಾನವನಿಕರ ಪಾಂಡವ
ಕುರುನೃಪರ ಹರಸಿದುದು ಕೈಪರೆಗುಟ್ಟಿ ಭೂತಗಣ ೩೨

ಸಿಡಿದ ಕಣ್ಣಾಲಿಗಳನಾಯಿದು
ಕುಡುಕುಗೊಂಡವು ಕಾಗೆಗಳು ಹಿ
ಮ್ಮಡಿಯ ಹೊರಳಿಯ ನರವ ಸೆಳೆದವು ಜಂಬುಕಾದಿಗಳು
ಅಡಗ ಕದುಕಿರಿದೊರಲಿ ಕರೆದವು
ಗಡಣವನು ಗೂಗೆಗಳು ರಕುತದ
ಕಡಲಲೋಕುಳಿಯಾಡಿದವು ಭೇತಾಳ ಕಾಳಿಯರು ೩೩

ತೆಳುದೊಗಲ ನಿಡುಸೋಗೆಯುಡುಗೆಯ
ನೆಳಗರುಳ ಸಿಂಗಾರದುರುಬಿನ
ಕೆಳದಿಯರ ಕೈನೇಣ ಕಿರಿದೊಟ್ಟಿಲಿನ ಬೊಂಬೆಗಳ
ಎಳವಿದುಳ ಕಜ್ಜಾಯ ಮೂಳೆಯ
ಹಳುಕು ಕಾಳಿಜದಟ್ಟುಗುಳಿಗಳ
ಕೆಳೆಗಳೊಳು ಕೊಡಗೂಸು ಪೂತನಿ ನಿಕರವೊಪ್ಪಿದವು ೩೪

ತೂಳ ಬರೆ ಕುಣಿದುದು ಕಬಂಧದ
ಜಾಲದೊಡನೆ ಪಿಶಾಚಗಣ ಭೇ
ತಾಳಗಣ ಕೈಪರೆಯ ಬಡಿದುದು ಶಾಕಿನೀನಿವಹ
ಸಾಲು ವಿಗೆ ಸೊಗಸಿದುದು ರಣ ಭೂ
ತಾಳಿಯಲಿ ಮತ್ತಿತ್ತ ಕೇಳ್ವುದು
ಪಾಳಯಂಗಳೊಳೆರಡರಲಿ ಸಂಗರ ಮಹೋತ್ಸಾಹ ೩೫

ಹಿಳಿದ ಲೋಹದ ಸೀಸಕಂಗಳ
ಬಲಿಸಿದರು ಹೋಳಾದ ಕವಚವ
ಹೊಲಿಸಿದರು ಬಾಹುರಕೆ ಸವಗದ ಬಿರುಕ ಬೆಸಸಿದರು
ಕಳಚಿದಾಯುಧದಾಯತದ ಕೀ
ಲ್ಗೊಳಿಸಿದರು ಖಡ್ಗಕ್ಕೆ ಕುಂತವ
ಕಳೆದು ಕಾವನು ತೊಡಿಸುತಿರ್ದುದು ಸೇನೆಯೆರಡರಲಿ ೩೬

ತಡಿಯ ಬಲಿಸುವ ಗುಳನ ರೆಂಚೆಯ
ಗಡಣಿಸುವ ಹಕ್ಕರಿಕೆಗಳನಾ
ಯ್ದಡಿಸಿ ಹೊಲಿಸುವ ಕಬ್ಬಿಗಳ ಮಿಗೆ ಬಲಿವ
ಒಡೆದ ದೂಹತ್ತಿಗೆಗೆ ಕೀಲ್ಗಳ
ನಡಸಿ ಬೆಟ್ಟಿದ ಗಾಲಿಗಚ್ಚನು
ತೊಡಿಸುತಿರಲಾಯ್ತೆರಡು ಬಲದೊಳು ನಿದ್ರೆಗವಮಾನ ೩೭

ಅಸಿಯ ಮಸೆಸುವ ಮುರಿದ ಲೌಡಿಯ
ಬೆಸುವ ಕುಂತದ ಧಾರೆಗಳ ಥಾ
ಳಿಸುವ ನೆರೆಸೊಪ್ಪಾದ ಹಿಳುಕಿನ ಗರಿಯ ಕೀಲಿಸುವ
ಹೊಸ ತಿರುವ ಕಟ್ಟುವ ಕಠಾರಿಯ
ಮಸೆವ ಹಲಗೆಯ ಬಲಿವ ಸುರಗಿಯ
ಬಸೆಯ ಬೆಳಸುವ ವೀರ ಭಟರೊಪ್ಪಿದರು ಕಟಕದಲಿ ೩೮

ಹರಿದ ಕೊರಳನು ಬಿಗಿವ ಉರದೊಳು
ಮುರಿದ ಬಾಣವ ಕೀಳ್ವ ಹೊಟ್ಟೆಯ
ನಿರಿಗರುಳನೊಳಗಿಕ್ಕಿ ಹೊಲಿಸುವ ಮದ್ದುಗಳನಿಡಿವ
ಉರಿವ ಸೇಕದ ನಸ್ಯದೊಳು ಹದ
ನರಿವ ತುರಗದ ವೈದ್ಯ ತತಿಯೆ
ಚ್ಚರಿಕೆಯಲಿ ಸಂತೈಸಿದರು ವಾಜಿಗಳ ವೇದನೆಯ ೩೯

ಒಡಲಿನೊಳು ಮುರಿದಿದ್ದ ಸಬಳವ
ನುಡಿಯಲೀಯದೆ ಕೀಳ್ವ ಮದ್ದನು
ಗಿಡಿವ ಚೇವಣಿಗೆಯೊಳು ಸಪ್ರಾಣಿಸುವ ದುರ್ವ್ರಣವ
ತೊಡೆದು ಕಟ್ಟುವ ಹಸ್ತಿವೈದ್ಯರ
ಗಡಣವುಭಯದೊಳೆಸೆದವಂತ್ಯದ
ಕಡಲ ರಭಸಕೆ ತೊಡಕನಿಕ್ಕಿತು ಬಹಳ ಬಲಜಲಧಿ ೪೦

ಬಾದಣಿಸಿದೇರುಗಳ ಬಾಯೊಳು
ಕಾದ ಬಾರಂಗಿಗಳನಳತೆಗೆ
ಕೋದು ವಾಮದೊಳೆಯ್ದೆ ಹಿಡಿದರು ತೈಲಧಾರೆಗಳ
ಆದ ಮೈಗಂಡಿಯೊಳು ರಕುತವ
ಶೋಧಿಸುತ ಹಳದುಪ್ಪವನು ತೊಡೆ
ದಾದರಿಸಿದುದು ವೈದ್ಯಸಂತತಿ ವೀರ ಭಟರುಗಳ ೪೧

ಖಡುಗದಡವೊಯ್ಲುಗಳಲಡುಮು
ದ್ದಡಸಿದರು ಸೂಕರನ ತುಪ್ಪವ
ತೊಡೆದರರಿದೇರಿನೊಳು ಬಿಟ್ಟರು ತೈಲಧಾರೆಗಳ
ಕುಡಿಸಿದರು ಮಂತ್ರೋದಕವನೊಳ
ಗಡಸಿ ಕರುಳನು ಮುಚ್ಚಿ ಮಂತ್ರಿಸಿ
ತೊಡೆದರಖಿಳೌಷಧಿಗಳನು ನೃಪಸೇನೆಯೆರಡರಲಿ ೪೨

## ಆರನೆಯ ಸಂಧಿ

ಸೂ. ರಾಯದನುಜ ಘಟೋತ್ಕಚನುಭೋ
ಜಾಯತಾಕ್ಷನ ಖಾತಿಯನು ಗಾಂ
ಗೇಯ ಭಯಭಕ್ತಿಯಲಿ ಗೆಲಿದನು ವರ ಸುದರ್ಶನವ

ಕೇಳು ಜನಮೇಜಯ ಧರಿತ್ರೀ
ಪಾಲ ದಿನಕರನುದಯದಲಿ ಮುಂ
ಗಾಳೆಗದ ಗಾಢಾಭಿಲಾಷರು ಬಂದು ಕಣನೊಳಗೆ
ಮೇಲುನೆಲನರಿದಖಿಲ ಕುರು ಭೂ
ಪಾಲನವರೊಡ್ಡಿದರು ಲಕ್ಷ್ಮೀ
ಲೋಲನಾಜ್ಞೆಯಲಿವರು ಬಲಿದರು ತಮ್ಮ ಮೋಹರವ ೧

ದಳವೆರಡು ದಳಪತಿಗಳಿಬ್ಬರ
ತಳಿತ ಸನ್ನೆಯ ಚೌರಿಯಲಿ ಬಿಡೆ
ಹಳಚಿದುದು ಹೊಯ್ದಾಡಿ ಬಿದ್ದುದು ಪಾಯದಳವಂದು
ತುಳಿದು ಹೊಕ್ಕವು ದಂತಿಘಟೆ ದಳ
ವುಳಿಸಿ ಹರಿದವು ತೇರುಗಳು ತೋಳ್
ಬಳಲೆ ಹೊಯ್ದಾಡಿದರು ರಾವುತರಸಮ ಸಮರದಲಿ ೨

ಏನ ಹೇಳುವೆನುಭಯ ಬಲದಲಿ
ಲೂನ ನಿವಹದ ಹಯವನಡೆಗೆಡೆ
ವಾನೆಗಳ ಹೊದರೆದ್ದು ಮುಗ್ಗಿದ ರಥದ ವಾಜಿಗಳ
ಮಾನವರ ಕಡಿಖಂಡ ದೊಂಡೆಯ
ನೇನನೆಂಬೆನು ಹರಿವ ರುಧಿರಾಂ
ಭೋನಿಧಿಯ ಹರಹುಗಳ ಪೂರದ ವಿಗಡ ವಿಗ್ರಹವ ೩

ಆಳಿದುದೆರಡರ ಚೂಣಿ ದೊರೆಗಳ
ಬಲಕೆ ಹೇಳಿಕೆಯಾಯ್ತು ಘನ ಸಂ
ಕುಲ ಸುವಿಗ್ರಹ ಸಾಧನರು ಕೈಮಾಡಿ ಕಡಿವಡೆಯೆ
ದಳವುಳಿಸಿದನು ಭೀಮ ಕೌರವ
ದಳವ ತರುಬಿದನಷ್ಟಬಿದ್ದರಿ
ಬಲದ ಸುಭಟರಿಗಿತ್ತನಮರಾವತಿಯ ಸಂಪದವ ೪

ಮುರಿದು ಬಹ ನಿಜಸೇನೆಗಭಯದ
ಸೆರಗ ಬೀಸುತ ಭೀಮಸೇನನ
ತರುಬಿ ನಿಂದನು ಭೀಷ್ಮ ಬಿಗಿದನು ಸರಳಲಂಬರವ
ತೆರಹುಗೊಡವಂಬುಗಳು ಭೀಮಂಗೆ
ಬೆರಗು ಬಲಿದುದು ಹೊಕ್ಕು ಸಾತ್ಯಕಿ
ಯಿರಿದು ಭೀಷ್ಮನ ಬಲದಲೂಡಿದನಖಿಳ ಖಗಕುಲವ ೫

ಬಳಿಕ ಸಾತ್ಯಕಿ ಭೀಷ್ಮರಿಗೆ ಬಲು
ಗಲಹ ಬಲಿದುದು ವಿಲಯ ರುದ್ರನ
ನಿಲವನೊಚ್ಚತಗೊಂಡ ಪರಬಲದೊಳಗೆ ಗಾಂಗೇಯ
ತಳಪಟವ ಮಾಡಿದನು ಭಾಷೆಯ
ಬಳಿಗೆ ಕೊಂದನು ಹತ್ತು ಸಾವಿರ
ನೆಲನ ವಲ್ಲಭರನು ಯುಧಿಷ್ಠಿರರಾಯ ಸೇನೆಯಲಿ ೬

ಬೀಳಲವನೀಪತಿಗಳತಿ ಹೀ
ಹಾಳಿಯಲಿ ಸಾತ್ಯಕಿ ಮುಳಿದು ಬಲು
ಗೋಲಿನಲಿ ಗಂಗಾಕುಮಾರನ ಸಾರಥಿಯನೆಸಲು
ಮೇಲುಗಾಳೆಗದವರ ಸೇರಿತು
ಸೋಲು ಕುರುಪತಿಗಾಯ್ತು ಕಿರಣದ
ಗೂಳಯವು ಪಡುವಣ ಸಮುದ್ರಕೆ ತೆಗೆಯಲಿನನಿಳಿದ ೭

ದಿನವೆರಡು ಹಿಂದಾದುದಿದು ಮೂ
ರನೆಯ ದಿವಸದ ಬಹಳ ವಿಗ್ರಹ
ದನುವನಾಲಿಸು ರಾಯ ಜನಮೇಜಯ ಮಹೀಪಾಲ
ದಿನಪನುದಯಾಚಲದ ಚಾವಡಿ
ವನೆಗೆ ಬರೆ ಬಲವೆರಡು ಗಳ ಗ
ರ್ಜನದಿ ಬಂದೊಡ್ಡಿದುವು ಕಳನೊಳು ಖತಿಯ ಪಡಪಿನಲಿ ೮

ಸೂಳು ಮಿಗಲಳ್ಳಿರಿವ ನಿಸ್ಸಾ
ಳೋಳಿಗಳ ತಂಬಟದ ಕೊಂಬಿನ
ಗಾಳುಗಜರಿನ ಕಹಳೆಗಳ ಕಳಕಳದ ಬೊಗ್ಗುಗಳ
ಮೇಳವಣೆ ಭುಗಿಲಿಡಲು ಬೊಬ್ಬೆಯ
ಘೋಳ ಘೋಷದ ರಭಸ ದೆಸೆಗಳ
ಸೀಳೆ ಸಿಡಿಲೆದ್ದೆರಡು ಬಲ ಹೊಯ್ದಾಡಿತೊಡಗಲಸಿ ೯

ಜೋಳವಾಳಿಯೊಳುಂಡು ಮಾಡಿದ
ಸಾಲವನು ತಲೆಗಳಲಿ ತಿದ್ದಿದ
ರಾಳ ತರುಬುವ ಪತಿಗೆ ಹರುಷವ ಮಾಡಿ ತಮತಮಗೆ
ಕಾಲನೂರ್ಧ್ವದದು ಸುರಸ್ತ್ರೀ
ಜಾಲ ನೆರೆಯದು ಗಗನ ಸುಭಟರ
ಸಾಲೊಳಡಗಿತು ಚಿತ್ರವೆನೆ ಹೊಯ್ದಾಡಿತುಭಯಬಲ ೧೦

ಬರಲಿ ಸಮರಕೆ ಸಾತ್ಯಕಿಯು ನೀ
ಕರೆಯೆನುತ ಬಿಲುದುಡುಕಿ ರಥದಲಿ
ಸರಿಸತಾಳಧ್ವಜವನೆತ್ತಿಸಿ ಸಮರಥರ ನೆರಹಿ
ಸರಳ ತೂಗುತ ಮಾರುಬಲವನು
ತರುಬಿ ನಿಂದನು ಭೀಷ್ಮನಗ್ಗದ
ಬಿರುದ ಸಂಭಾವಿಸುತ ಪಾತಕಕೋಟಿ ಗಡಬಡಿಸಿ ೧೧

ಕಾಲಯಮನೋ ಭೀಷ್ಮನೋ ಘಡ
ಮೇಳವೇ ಮಝು ಭಾಪು ಮಾರಿಯ
ತಾಳಿಗೆಗೆ ತುತ್ತಾದವೇ ತಡವೇಕೆ ತೆಗೆಯೆನುತ
ಆಳು ಮುರಿದುದು ಮೋಹರದ ಭೂ
ಪಾಲಕರು ಹುರಿಯೊಡೆದು ದೊರೆಗಳ
ಮೇಲೆ ಬಿಸುಟರು ವೀರ ಗಂಗಾತನುಜನುಪಟಳವ ೧೨

ಸೋಲ ಮಿಗಲೊಳಸರಿವ ಬಿರುದರ
ಬೀಳಗೆಡಹಿಸಿ ಕಪಿಯ ಹಳವಿಗೆ
ಗೋಲನೆತ್ತಿಸಿ ಕೆಲಬಲದ ಮನ್ನೆಯರ ಕೈವೀಸಿ
ಆಲಿಯಲಿ ಕಿಡಿಸೂಸೆ ಮಿಾಸೆಯ
ಮೇಲುದಿರುಹುತಲೌಡುಗಚ್ಚಿ ಕ
ರಾಳರೋಷ ಮಹೋಗ್ರವೀರನು ಪಾರ್ಥನಿದಿರಾದ ೧೩

ತೊಲತೊಲಗು ಕಲಿ ಭೀಷ್ಮ ವೃದ್ಧರಿ
ಗೆಳಭಟರ ಕೂಡಾವುದಂತರ
ವಳಿಬಲರ ಹೆದರಿಸಿದ ಹೆಕ್ಕಳವೇಕೆ ಸಾರೆನುತ
ತುಳುಕಿದನು ಕೆಂಗೋಲ ಜಲಧಿಯ
ನೆಲನದಾವುದು ದಿಕ್ಕದಾವುದು
ಸಲೆ ನಭೋಮಂಡಲವದಾವುದೆನಲ್ಕೆ ಕಲಿ ಪಾರ್ಥ ೧೪

ಪೂತುರೇ ಕಲಿ ಪಾರ್ಥ ವಿಶಿಖ
ವ್ರಾತಮಯವಾಯ್ತುವನಿ ಕಾರ್ಮುಕ
ಭೂತನಾಥನ ಗರುಡಿಯಲ್ಲಾ ಕಲಿತ ಮನೆ ನಿನಗೆ
ಆತುಕೊಳ್ಳಾದಡೆಯೆನುತ ಕಪಿ
ಕೇತನನ ಶರಹತಿಯನಾಂತಾ
ಮಾತು ಹಿಂಚಿತು ಕಡಿದು ಬಿಸುಟನು ಕೃಷ್ಣ ಬೆರಗಾಗೆ ೧೫

ಆ ಸಮಯದೊಳು ರಣದೊಳೌಕಿದ
ರಾ ಸುಯೋಧನ ಶಲ್ಯ ಸಲೆ ದು
ಶ್ಶಾಸನನು ಕೃಪ ಶಕುನಿ ಗುರುಸುತರಾದಿ ಯಾದವರು
ಸೂಸಿದರು ಸರಳುಗಳನರ್ಜುನ
ಘಾಸಿಯಾದನು ವಿಲಯ ಮೇಘದ
ಮಿಾಸಲಿವ ಮಳೆಗಾಲವೆನೆ ಮೋಹಿದುದು ಶರಜಾಲ ೧೬

ಕುದುರೆ ಕಂಗೆಟ್ಟವು ಮುರಾರಿಯ
ಹೃದಯ ಸಂಚಲವಾಯ್ತು ಗಾಲಿಗ
ಳದುರಿದವು ಗರುವಾಯಿಗೆಟ್ಟನು ಮೇಲೆ ಹನುಮಂತ
ಹೆದರಿದರು ನಾಯಕರು ಪಾಂಡವ
ರದಟು ಮುರಿದುದು ಸುರರು ಚಿಂತಿಸಿ
ಕುದಿದರರ್ಜುನಪಕ್ಷಪಾತ ವ್ಯರ್ಥವಾಯ್ತೆಂದು ೧೭

ತೆರಳುವನೆ ಬಿಲುಗಾರರಿಗೆ ವರ
ಗುರುವಲಾ ಕಲಿ ಪಾರ್ಥನನಿಬರ
ಸರಳ ಕಡಿದನು ಕೃಪನನೆಚ್ಚನು ಗುರುಸುತನ ರಥವ
ಉರುಳಿಗೆಡಿದನು ಶಲ್ಯನನು ಹೇ
ವರಿಸಲೆಚ್ಚನು ಕೌರವನ ಹೇ
ರುರದಲಂಬನು ಹೂಳಿದನು ಸೀಳಿದನು ಸಮರಥರ ೧೮

ಏರುವಡೆದನು ಶಲ್ಯ ರಕುತವ
ಕಾರಿದನು ದುಶ್ಶಾಸನನು ಕೈ
ಮಿಾರಿ ಕೈಕೊಂಡೆಚ್ಚು ನೊಂದನು ಮತ್ತೆ ಗುರುಸೂನು
ಹೇರಿದರು ಹಿಳುಕುಗಳ ಮೈಯಲಿ
ಜೋರು ಮಸಗಲು ಭೀಷ್ಮ ಕಡುಗಾ
ಹೇರಿದನು ರೋಷಾಗ್ನಿವಿಕಟಜ್ವಾಲೆಮುಖನಾದ ೧೯

ಮೊಗದ ಹೊಗರವಗಡಿಸೆ ಸುಯಿಲಲಿ
ಹೊಗೆಯ ಹೊದರಂಕುರಿಸೆ ಬಿಡುಗ
ಣ್ಣುಗಳೊಳಕ್ಕುದು ಕೆಂಪು ಸೊಂಪಡಗಿತು ಮುಖಸ್ನೇಹ
ತೆಗೆವೆನರ್ಜುನನಸುವನೆನುತಾ
ಳುಗಳ ದೇವನು ಭೀಷ್ಮನಡಿಗಡಿ
ಗೊಗುಮಿಗೆಯ ಕೋಪದಲಿ ಕೋದನು ಸರಳಿನಲಿ ನರನ　೨೦

ನೊಂದು ಸೈರಿಸಿ ಮತ್ತೆ ಸರಳಿನ
ಸಂದಣಿಯ ಸೈಗರೆದನರ್ಜುನ
ನಿಂದುಧರ ಮಝ ಭಾಪುರೆನೆ ಪಸರಿಸಿದವಂಬುಗಳು
ಮುಂದೆ ನಿಲಲರಿಯದೆ ವಿತಾಳಿಸಿ
ಮಂದಗತಿಯೊಳು ಕೆಲಸಿಡಿದು ಹರಿ
ನಂದನನ ಬಿಡದೆಸುತ ಬಂದನು ಭೀಷ್ಮ ಮುಳಿಸಿನಲಿ　೨೧

ಎತ್ತಲೊಲೆದನದೆತ್ತ ಸರಿದನ
ದೆತ್ತ ಜಾರಿದನೆತ್ತ ತಿರುಗಿದ
ನೆತ್ತ ಹಿಂಗಿದನೆತ್ತಲೌಕಿದನೆತ್ತಲುರುಬಿದನು
ಅತ್ತಲತ್ತಲು ರಥ ಹಯವ ಬಿಡ
ದೊತ್ತಿ ಬೀದಿಗೆ ನೂಕಿ ಪಾರ್ಥನ
ಮುತ್ತಯನ ಸಂಮುಖಕೆ ಬಿಡದೌಕಿದನು ಮುರವೈರಿ　೨೨

ಕೆರಳಿದನು ಕಲಿ ಭೀಷ್ಮನರ್ಜುನ
ನುರವಣೆಯ ಗೆಲುವರೆ ಮುರಾರಿಯ
ಭರವಸವ ತಗ್ಗಿಸಿದಡಲ್ಲದೆ ಕಾದಲರಿದೆನುತ
ಹರಿಯ ಸಿರಿಯೊಡಲಿನಲಿ ಸರಳಿನ
ಸರಿವಳೆಯ ಸೈಗರೆಯೆ ಜೋಡಿನ
ಸರಪಳಿಯಲಕ್ಕಾಡಿದವು ಕಲಿ ಭೀಷ್ಮನಂಬುಗಳು　೨೩

ಮತ್ತೆ ರಥವನು ಹರಿಸಿ ಭೀಷ್ಮನ
ಹತ್ತೆ ಬರೆ ಕಟ್ಟಳವಿಯಲಿ ಹಾ
ಮುತ್ತಯನು ಸಿಲುಕಿದನು ಶಿವಶಿವಯೆನುತ ಬಲ ಬೆದರೆ
ಹತ್ತು ಶರದಲಿ ಕೃಷ್ಣರಾಯನ
ಮತ್ತೆ ಮುಸುಕಿದ ಬಹಳ ಭಾರ್ಗವ
ದತ್ತ ಬಾಣವ ತೊಡಚಿ ದೇವನ ನೊಸಲ ಕೀಲಿಸಿದ　೨೪

ಕೆಂಗರಿಯ ಮರಿದುಂಬಿ ತಾವರೆ
ಗಂಗವಿಸುವವೊಲಸುರರಿಪುವಿನ
ಮಂಗಳಾನನಕಮಲದಲಿ ಶರವಾಳೆ ಗರಿಗಡಿಯೆ
ತುಂಗವಿಕ್ರಮನಂಬ ಕಿತ್ತು ನಿ ತ
ದಂಗರಕ್ತವಿಷೇಕ ರೌದ್ರಾ
ಲಿಂಗಿತನು ಬಲುಖತಿಯ ಹಿಡಿದನು ಭೀಷ್ಮನುಪಟಳಕೆ　೨೫

ಕೆಂಪ ಕಾರಿದವಾಲಿಗಳು ವೈ
ಕಂಪಿಸಿದುದಡಿಗಡಿಗೆ ರೋಷದ
ಬಿಂಪಿನೊಳು ತಗ್ಗಿದನು ಗಂಟಿಕ್ಕಿದನು ಹುಬ್ಬುಗಳ
ಸೊಂಪುಗೆಟ್ಟುದು ಸಿರಿವದನ ಮನ
ದಿಂಪು ಬೀತುದು ಭಕ್ತ ಮೋಹದ
ಲಂಪು ಮಸುಳಿತು ಬಿಸುಟು ಕಳೆದನು ಹಯದ ವಾಘೆಗಳ　೨೬

ಕೆಂಡವಾಗಲಿ ಲೋಕ ದಿವಿಜರ
ಹೆಂಡಿರೋಲೆಯು ಕಳೆದು ಹೋಗಲಿ
ದಿಂಡುಗೆಡೆಯಲಿ ಮೇರು ಮೇದಿನಿ ನಿಲಲಿ ವಿತಳದಲಿ
ಗಂಡುಗೆಡಿಸಿದರಿಲ್ಲ ದಾನವ
ದಿಂಡೆಯರು ಹಲರೆಮ್ಮೊಡನೆ ಮಾ
ರ್ಕೊಂಡವರು ಮಾಮಾಪ್ರತಿಜ್ಞೆಯ ತೊಡಕು ಬೇಡೆಂದ　೨೭

ಸಕಲ ಜಗದಳಿವಿಲಿನಲಿ ರುದ್ರಾ
ತ್ಮಕನು ವಿಷ್ಣುವೆ ಎಂಬ ನುಡಿ ಸು
ವ್ಯಕುತವಾಗಲು ತೋರಿದನು ಘನರೋಷ ತಾಮಸವ
ಚಕಿತವದನದ ಕೆಂಪಿನಬುಜಾಂ
ಬಕಯುಗಳನೊಲೆದೊಲೆದು ರೋಷ
ಪ್ರಕಟಪಾವಕ ವಿಸ್ಫುಲಿಂಗಿತನಾದನಡಿಗಡಿಗೆ　೨೮

ಎಲೆಲಿದೆತ್ತಣ ಧರಣಿಯೆತ್ತಣ
ಕುಲಗಿರಿಗಳೆತ್ತಣ ದಿಶಾಗಜ
ಕುಲವಿದೆತ್ತಣ ಸುರರಿದೆತ್ತಣ ಹರ ಚತುರ್ಮುಖರು
ಸಲಹುವೈಯನು ಮುಳಿದು ಲೋಕದ
ಕೊಲೆಗೆಲಸಕಂಗೈಸಿದನೆ ಹಾ
ಪ್ರಳಯವಾದುದಕಾಲದಲಿಯೆಂದಮರರೆದೆಯಾರೆ　೨೯

ನಳಿನಪತ್ರೋದಕದವೊಲು ಮಾ
ರೊಲೆದುದಬುಜಭವಾಂಡವಂಬುಧಿ
ಯಿಳಿದು ಗುಲ್ಫದ್ವಯಸವಾದುದು ಕಮಠನೆದೆಯೊಡೆಯೆ
ನೆಲನನಿದ ಹಿಂದಿಕ್ಕಿಕೊಂಬ
ಗ್ಗಳೆಯರಾರೊ ಶಿವಶಿವಾ ಜಗ
ದಳಿವು ಜೋಡಿಸಿತೆನುತ ನಡುಗಿದನಬುಜಭವನಂದು　೩೦

ಮುರಮಥನ ಕೆಲ್ಲೈಸಿ ನೋಡಿದ
ನುರು ಭಯಂಕರ ಚಕ್ರವನು ದು
ರ್ಧರುಷಧಾರಾ ಲೂಯಮಾನ ನಿಶಾತಚಕ್ರವನು
ತರಳ ತರಣೀ ಚಕ್ರವನು ಸಂ
ಗರ ವಿನಿರ್ಜಿತ ಚಕ್ರವನು ಭಯ
ಭರ ವಿವರ್ಜಿತ ಚಕ್ರವನು ಕಡುಗೋಪ ಕುಡಿಯಿಡಲು　೩೧

ನಿಶಿತ ಧಾರೆಯ ಹೊಳಹು ಸೂರ್ಯನ
ಮುಸುಕಿದುದು ಪರಿಲೂನದೈತ್ಯ
ಪ್ರಸರಗಳ ನಾಳೀವಿನಿಸ್ಸೃತ ರುಧಿರ ಬಂಧಗಳ
ಮಿಸುಪ ಮೊಳೆಗಳ ಮುರಿವುಗಳ ನೆಣ
ವಸೆಯ ತೊರಳೆಯ ತೊಂಗಲಿನೊಳಂ
ದೆಸೆವ ಚಕ್ರವ ನೋಡಿದನು ದೈತ್ಯಾರಿ ಕೋಪದಲಿ　೩೨

ಹರಿದು ಹಬ್ಬುವ ಬಳ್ಳಿವೆಳಗಿನ
ಮುರಿವು ಮಂಡಳಿಸಿದುದು ಶತ ಸಾ
ವಿರ ದಿವಾಕರ ಬಿಂಬವೆಸೆದುದು ಝಳದ ಹೊಯಿಲಿನಲಿ
ಸುರ ನರೋರಗ ಜಗದ ಕಂಗಳ
ತೆರಹು ಕೆತ್ತವು ಬತ್ತಿದುದಧಿಯೊ
ಳುರಿಮಣಲು ಮಾಣಿಕವ ಹುರಿದುದು ಚಕ್ರದೂಷ್ಮೆಯಲಿ　೩೩

ನರನ ತೇರಿನ ಕುದುರೆಗಳು ಡಾ
ವರಿಸಿದವು ಡಗೆ ಹೊಯ್ದು ಮಿಗೆ ದ
ಳ್ಳುರಿಯ ಸಸಿಯಂತಾದನರ್ಜುನದೇವ ನಿಮಿಷದಲಿ
ಕರಗಿ ಕೊರಗಿತು ಲೋಕ ಕೌರವ
ಧರಣಿಪಾಲರಿದೆತ್ತಣುರಿಯೋ
ಹರನ ಕಣ್ಗಿಚ್ಚಲ್ಲಲೇ ಹಾಯೆನುತ ಹಲುಬಿದರು ೩೪

ತುಡುಕಿದನು ಚಕ್ರವನು ರಥದಿಂ
ಪೊಡವಿಯೊಳು ದುಮ್ಮಿಕ್ಕಿದನು ಹ
ತ್ತಡವ ಹಾಯಿಕಿ ಹರಿದನೊಡಬಿದ್ದವರನೊಡೆ ತುಳಿದು
ಸುಡುವೆನಹಿತಾನ್ವಯವ ಭೀಷ್ಮನ
ಕಡಿದು ಭೂತಗಣಕ್ಕೆ ಬೋನವ
ಬಡಿಸುವೆನು ನೋಡಿಲ್ಲಿ ಮೇಳವಯೆನುತ ಸೈವರಿದ ೩೫

ಶಿವಶಿವೆಂದುದು ನಿಖಿಳ ಜಗ ಕೌ
ರವರು ಕಂಪಿಸಿ ಥಟ್ಟುಗೆಡೆದರು
ಭುವನದಲಿ ಭಾರಿಸಿತು ಜಯಜಯ ಜಯಮಹಾಧ್ವಾನ
ತವತವಗೆ ತಳ್ಳಂಕದಲಿ ಪಾಂ
ಡವರು ನಡುಗಿತು ಪಾರ್ಥ ಬಲುಗರ
ವವಚಿದಂತಿರೆ ಮೂಕನಾದನು ಬೆರಳ ಮೂಗಿನಲಿ ೩೬

ಹರಿ ಮುಕುಂದ ಮುಕುಂದ ಲಕ್ಷ್ಮೀ
ವರ ನೃಕೇಸರಿಯೆನುತ ಚಾಪವ
ಶರವನವನಿಗೆ ಬಿಸುಟು ಮೈಯಿಕ್ಕಿದನು ಕಲಿ ಭೀಷ್ಮ
ಕರಯುಗವ ಮುಗಿದೆದ್ದು ಮುರಹರ
ಸರಸಿಜಾಂಬಕ ರಾಮ ರಕ್ಷಿಸು
ತರಳನಲಿ ಗುಣದೋಷದರಕೆಯೆ ದೇವ ಹೇಳೆಂದ ೩೭

ದೇವ ನಿಮ್ಮಯ ಖಾತಿ ಪರಿಯಂ
ತಾವು ಲಕ್ಷ್ಯವೆ ಜೀಯ ನೊರಜಿನ
ದೇವಗಿರಿಯಂತರವೆ ಸಂಭಾವನೆಯೆ ನಮ್ಮೊಡನೆ
ದೇವಮುನಿಗಳ ನಗೆಯ ನೋಡದಿ
ದಾವುದುಚಿತವ ಮಾಡಿದಿರಿ ಮಹಿ
ಮಾವಲಂಬವ ಮರೆದುದಕೆ ನಗೆ ಬಂದುದೆನಗೆಂದ ೩೮

ಅಲಸಿಕೆಯೊಳೈನೂರು ಸಾವಿರ
ನಳಿನಭವರಡೆಗೆಡೆವರೆಂಬ
ಗ್ಗಳಿಕೆಯೆತ್ತಲು ಹುಲುಮನುಜ ನಾನೆತ್ತಲಿದಿರಾಗಿ
ಮುಳಿದು ಹರಿತಹುದೆತ್ತಲಿದು ನಿ
ನ್ನಳತೆಗೈದುವುದಲ್ಲ ಲಜ್ಜೆಗೆ
ನೆಲೆಯ ಮಾಡಿದೆ ಹೂಡಿದೈ ದುರಿಯಶವನೆನಗೆಂದ ೩೯

ರೋಮ ರೋಮದೊಳಖಿಲ ಭುವನ
ಸ್ತೋಮ ನಲಿದಾಡುವುದು ಗಡ ನಿ
ಸ್ಸೀಮತನ ಗಡ ನಾವು ವೈರಿಗಳೆಂದು ಕೋಪಿಸುವ
ಈ ಮರುಳುತನವೆತ್ತಲೀ ರಣ
ತಾಮಸಿಕೆ ತಾನೆತ್ತಣದು ರಘು
ರಾಮ ರಕ್ಷಿಸು ಬಯಲಿನಾಡಂಬರವಿದೇಸೆಂದ ೪೦

ನೀನು ಖತಿಯನು ಹಿಡಿಯೆ ನಿನ್ನ ಸ
ಘಾನತನವನು ಬಲ್ಲೆ ಯೋಗಿಗ
ಳೇನನೆಂಬರು ತಮ್ಮೊಳಗೆ ಕೈಹೊಯ್ದು ಮಿಗೆ ನಗುತ
ಮಾನವರು ಕಡುಮೂರ್ಖರೆಂದೇ
ಮಾನಗರ್ವವ ಕಳೆದ ಸಾಕಿ
ನ್ನೇನ ಹೇಳುವೆ ನಿನ್ನ ಠಕ್ಕನು ಬಲ್ಲೆ ಹೋಗೆಂದ ೪೧

ಶತ ಪಿತಾಮಹರಡಗರೇ ನೀ
ಮತಿ ಮುರಿಯೆ ಮೇಣ್ ಭ್ರೂವಿಲಾಸ
ಸ್ಥಿತಿಯೊಳೇನುತ್ಪತ್ತಿಯಾಗದೆ ಬ್ರಹ್ಮಕೋಟಿಗಳು
ಅತಿಶಯದ ಮಹಿಮಾಸ್ಪದನು ನೀ
ನತಿಗಹನನೆಂಬಗ್ಗಳಿಕೆಗಿದು
ಕೃತಕವಲ್ಲಾ ದೇವ ಹೇಳೆನ್ನಾಣೆ ಹೇಳೆಂದ ೪೨

ದೇವ ನೀ ದಿಟ ಕೊಲುವಡೆಯು ನಾ
ಸಾವೆನೇ ತಾನಾವನೆಂಬುದ
ದೇವರರಿಯಿರಲೈ ವೃಥಾ ಸಂಭಿನ್ನ ರೋಷದಲಿ
ದೇವನಾಮದ ಜೋಡು ನಮ್ಮನು
ಕಾವುದೈ ನೀ ಮುನಿದಡೆಯು ನಿಮ
ಗಾವು ಹೆದರೆವು ನಾಮಧಾರಿಗಳತುಳ ಬಲರೆಂದ ೪೩

ಭಂಗವಲ್ಲಿದು ನಿನ್ನ ಘನತೆಗೆ
ಡಿಂಗರಿಗರೇ ಮಿಗಿಲು ನಿನಗೆಯು
ಡಿಂಗರಿಗರೇ ಬಲ್ಲಿದರು ದಾಕ್ಷಿಣ್ಯವೇನಿದಕೆ
ಮಂಗಳಾತ್ಮಕ ಕೇಳು ನಿನ್ನಯ
ಹಂಗನೊಲ್ಲೆನು ಮುಕುತಿ ಪಥದೊಳ
ಭಂಗಪಂಡೆಯದಾಳಲೈ ನಿಮ್ಮಡಿಯ ಸಿರಿನಾಮ ೪೪

ಕಳುಹಿ ಕಳೆದವು ಖಾತಿಯನು ನೀ
ನುಳುಹಿಕೊಂಬುದು ತೇಜವನು ದಿಟ
ಕೊಲುವ ಮನವೇ ಬಿಸುಡು ಚಕ್ರವನೆನ್ನ ಕಾಯದಲಿ
ಅಳುಕಿ ಕೂದಲು ಹರಿದುದಾದರೆ
ಬಳಿಕ ನಾ ಡಿಂಗರಿಗನಲ್ಲೀ
ಕಳಕಳಕೆ ನಾನಂಜುವವನೇ ದೇವ ಮರಳೆಂದ ೪೫

ನಚ್ಚಿದಾಳಿನ ಬಿನ್ನಹಕೆ ಹರಿ
ಮೆಚ್ಚಿ ಮನದಲಿ ನಾಚಿ ಚಕ್ರವ
ಮುಚ್ಚಿದನು ಮುರಿದನು ಕಿರೀಟಿಯ ರಥದ ಹೊರೆಗಾಗಿ
ಬೆಚ್ಚಿ ಬೆದರುವ ಸೇನೆಗಭಯವ
ಹಚ್ಚಿಕೊಟ್ಟನು ವೀರಭೀಷ್ಮನ
ನಿಚ್ಚಟದ ಭಕ್ತಿಯನು ನೆನೆನೆನೆದೊಲೆದ ಹರಿ ಶಿರವ ೪೬

ಹೋದುದೊಂದಪಮೃತ್ಯು ಲೋಕಕೆ
ತೀದುದಿಲ್ಲಾಯುಷ್ಯ ಮಹದಪ
ವಾದ ದೇವಂಗಾಗಿ ತಪ್ಪಿತು ಮುಚ್ಚು ಮರೆಯೇಕೆ
ಕಾದುಕೊಂಡನು ಭೀಷ್ಮನೀ ಕಮ
ಲೋದರನ ಕೆರಳಿಚಿಯು ಭಕುತಿಯ
ಲಾದರಿಸಿದನು ಪುಣ್ಯವೆಂದನು ಕಮಲಭವ ನಗುತ ೪೭

ನಡುಗುವರ್ಜುನದೇವನನು ತೆಗೆ
ದಡಿಗಡಿಗೆ ತಕ್ಕೈಸಿ ಭೀತಿಯ
ಬಿಡಿಸಿ ವಾಘೆಯ ಕೊಂಡು ತುರಗವನೆಡಬಲಕೆ ತಿರುಹಿ
ನಡಸಿದನು ಕಾಳಗಕೆ ಬಳಿಕವ
ಗಡ ಮುರಾಂತಕ ಮರಳಿ ಚಕ್ರವ
ತುಡುಕದಿರನೆಂದಸ್ತಗಿರಿಯನು ಸೂರ್ಯ ಮರೆಗೊಂಡ ೪೮

## ಏಳನೆಯ ಸಂಧಿ

ಸೂ. ರಾಯಕಟಕದೊಳಿರುಳು ಭೀಷ್ಮನ
ಸಾಯಬೇಕೆಂದೊಡಬಡಿಸಿ ಕಮ
ಲಾಯತಾಂಬಕ ಸಹಿತ ಪಾಳಯಕರಸನೈತಂದ

ಕೇಳು ಜನಮೇಜಯ ಧರಿತ್ರೀ
ಪಾಲ ದಿನ ಮೂರಾಯ್ತು ಭೀಷ್ಮನ
ಕಾಳಗದೊಳಲ್ಲಿಂದ ಮೇಲಣ ಕಥನಕೌತುಕವ
ಆಲಿಸುವದೈ ಮೂಡಣದ್ರಿಯ
ಮೇಲೆ ಕೆಂಪೆಸೆಯಿತ್ತು ಘನ ನಿ
ಸ್ಸಾಳವೊದರಿದವೈ ನೃಪಾಲರ ಕಟಕವೆರಡರಲಿ ೧

ಹಲ್ಲಣಿಸಿ ಹರಿತಂದು ಮೋಹರ
ವಲ್ಲಿಗಲ್ಲಿಗೆ ನಿಂದುದೆರಡರ
ಘಲ್ಲಣೆಯ ಘಾಯದ ಘಡಾವಣೆ ಮೀರಿ ಘಾತಿಸಿತು
ಕೆಲ್ಲೆಗೆಡೆದವು ಕರಿಗಳಸುಗಳ
ಚೆಲ್ಲಿದವು ತೇಜಿಗಳು ರಥಕುಳ
ವೆಲ್ಲ ಹುಡಿಹುಡಿ ಪಾಯದಳ ನಿರ್ನಾಮವಾಯ್ತೆಂದ ೨

ಅಳಿದುದಾ ದಿವಸದಲಿ ಪಾಂಡವ
ಬಳದೊಳಗಣಿತ ಸೇನೆ ಭೀಷ್ಮನು
ಫಲುಗುಣನು ಕಾದಿದರು ದಿನಕರನಪರಜಲನಿಧಿಗೆ
ಇಳಿಯೆ ತೆಗೆದವು ಬಲವೆರಡು ಮೂ
ಡಲು ಮುಗುಳೆ ಕೆಂಪೇರೆ ಕದನಕೆ
ಕಳನ ತುಂಬಿತು ಮತ್ತೆ ಕೌರವ ಪಾಂಡವರ ಸೇನೆ ೩

ಬಿದ್ದುದಗಣಿತ ಸೇನೆ ಪಡುವಲು
ಹೊದ್ದಿದನು ರವಿ ಮತ್ತೆ ಮೂಡಣ
ಗದ್ದುಗೆಯ ವೆಂಠಣಿಸಿದನು ಕುಮುದಾಳಿ ಕಂಠಣಿಸೆ
ಎದ್ದುದದ್ಭುತ ರಣ ಕೃತಾಂತಗೆ
ಬಿದ್ದನಿಕ್ಕಿದನದಟನಬುಧಿ
ಇದ್ದ ಸೂರ್ಯನ ಬಿಂಬವೆದ್ದುದು ಮೂಡಣದ್ರಿಯಲಿ ೪

ಏಳನೆಯ ದಿವಸದ ಮಹಾರಥ
ರೂಳಿಗವು ಹಿರಿದಾಯ್ತು ಕುರು ಭೂ
ಪಾಲಕನ ತಮ್ಮಂದಿರಳಿದುದು ದಿವಸವೆಂಟರಲಿ
ಕೋಲ ಮೊನೆಯಲಿ ಕೃಷ್ಣರಾಯನ
ನೋಲಗಿಸಿ ಮೆಚ್ಚಿಸಿದನಾ ಕ
ಟ್ಟಾಳು ಭೀಷ್ಮನ ದಿವಸವೊಂಬತ್ತಾಯ್ತು ಸಮರದಲಿ ೫

ಇರುಳು ಕೃಷ್ಣನ ಹೊರೆಗೆ ಬಂದನು
ಧರಣಿಪತಿ ದುಗುಡದಲಿ ನಿಜ ಸೋ
ದರರು ಸಹಿತ ಮುರಾರಿಯಂಘ್ರಿಗೆ ನಮಿಸಿ ಕೈಮುಗಿದು
ಸುರನದೀಸುತನಖಿಲ ಸೇನೆಯ
ನೊರಸಿದನು ನಮ್ಮಲ್ಲಿ ಖಾತಿಯ
ಧರಿಸಿದನು ಜಯವಧುವ ವರಿಸಿದ ದೇವ ಕೇಳೆಂದ ೬

ನೆರೆವಣಿಗೆಗುಂದಿತ್ತು ಬಲ ಕೈ
ಮರೆದರದಟರು ಬಿರುದ ಭಟರಿಗೆ
ಬೆರಗು ಬಲಿದುದು ಹೂಣೆಗರ ಹೋರಟೆಗಳಳುಕಿದವು
ನೆರೆ ಸುಗಿದ ಹುಲಿಯಂತೆ ಬರಿಕೈ
ಮುರಿದ ಮದಗಜದಂತೆ ಚಿತ್ರದ
ಉರುವ ಕೇಸರಿಯಂತೆ ಮೆರೆದಿದೆ ನಮ್ಮ ಬಲವೆಂದ ೭

ಹಾರಿದವು ಹೆಸರುಗಳು ಭಂಗದ
ಸೂರೆಗಳ ಕಟ್ಟಿದರು ಮಿಗೆ ತಲೆ
ಮಾರಿಗಳು ಮರಳಿದರು ರಣಹೇಡಿಗಳ ಬಗೆಯಂತೆ
ದೂರಲರಿಯೆನು ಸುಭಟರಿಗೆ ಮನ
ಬೇರೆ ನುಡಿ ಬೇರಾಯ್ತು ಸಮರದೊ
ಳೇರತಿಂಗುರಿದಿಂದು ದಣಿದುದು ನಮ್ಮ ಬಲವೆಂದ ೮

ಚಳಶಿಳೀಮುಖರವಕೆ ಪಟು ಭಟ
ರಳುಕಿದರು ವಿರಹಿಗಳವೊಲು ಸ
ಮ್ಮಿಳಿತ ಶಾಸ್ತ್ರಾರ್ಥನಿಗೆ ಸೆಡೆದರು ಮೂರ್ಖರಂದದಲಿ
ಕಲಿತ ಬಲ ಶತಕೋಟಿಗಿದಿರಾ
ಗಳಿದವದ್ರಿಗಳಂತೆ ಹರಿಪದ
ವಳಯ ವಿದಳಿತವಾಯ್ತು ಮೇಘವ್ರಾತದಂದದಲಿ ೯

ರಣ ರಹಸ್ಯ ಜ್ಞಾನಿಗಳು ಮಿಗೆ
ಮಣಿದರಿಂದ್ರಿಯವಶಕೆ ರಿಪುಭಟ
ಗಣವಿದಾರಣ ತರ್ಕ ವಿದ್ಯಾವೀತರಾಗಿಗಳು
ಸೆಣಸಿನಲಿ ಸಮದರ್ಶಿಗಳು ಧಾ
ರಣೆಯ ಪತಿಗಳು ರಾಜಸೇವಾ
ಪ್ರಣಯಮೀಮಾಂಸಾದಿ ಮೂಢರು ನಮ್ಮ ಭಟರೆಂದ ೧೦

ಹರಿದುದಿಂದಿನ ದಿನಕೆ ಶತ ಸಾ
ವಿರ ಮಹೀಶರು ಯಮನ ನಗರಿಗೆ
ಸರಿದುದುಳಿದರ ದಿಟ್ಟತನ ಗಾಂಗೇಯನುಪಟಳಕೆ
ಅರಿಪಯೋನಿಧಿ ಬಡಬನನು ಗೆಲ
ಲರಿದು ಜೀಯ ಮುಕುಂದ ನೀನೇ
ಕರುಣಿಸೈ ವನವಾಸವೋ ನಮಗೇನು ಗತಿಯೆಂದ ೧೧

ಮುಗುಳುನಗೆ ನಸು ಮೊಳೆಯೆ ಭೀಮಾ
ದಿಗಳಿಗೆಂದನು ಕೃಷ್ಣನರಸಗೆ
ಸೊಗಸು ಬನದಲಿ ಬರಿಯು ಮನವೀ ಕದನಕೇಳಿಯಲಿ
ವಿಗಡತನವಂತಿರಲಿ ಭೀಷ್ಮನ
ಬೆಗಡುಗೊಳಿಸಲು ಹರನ ಹವಣ
ಲ್ಲಗಣಿತನ ಸಾಮದಲಿ ಮುರಿಯಲುಬೇಕು ನಾವೆಂದ ೧೨

ದಂಡನಯು ತರುಬಿದರೆ ಗುಣದಲಿ
ಖಂಡಿಸುವುದಿದಿರಾದ ತರುಗಳು
ದಿಂಡುಗೆಡೆವವು ತೊರೆಗೆ ಮಣಿದರೆ ಗೇಕು ಬದುಕುವುದು
ಚಂಡಬಲನೀ ಭೀಷ್ಮ ಮುಳಿದರೆ
ಖಂಡಪರಶುವ ಗಣಿಸನೆನೆ ಖರ
ದಂಡನಾಭನ ಮತಕೆ ನೃಪತಿ ಹಸಾದವೆನುತಿರ್ದ ೧೩

ಇರುಳು ಗುಪಿತದಲವನಿಪತಿ ಸೋ
ದರರು ಮುರರಿಪು ಸಹಿತ ಬಂದನು
ಸುರನದೀನಂದನನ ಮಂದಿರಕಾಗಿ ವಹಿಲದಲಿ
ಕರೆದು ಪಡಿಹಾರರಿಗೆ ಬಂದುದ
ನರುಹಲವದಿರು ಹೊಕ್ಕು ಸಮಯವ
ನರಿದು ಭೀಷ್ಮಂಗೀ ಹದನ ಬಿನ್ನಹವ ಮಾಡಿದರು ೧೪

ಬಂದನೇ ಧರ್ಮಜನು ಮುರರಿಪು
ತಂದನೇ ಕೌರವರನಕಟಾ
ಕೊಂದನೇ ಶಿವಶಿವಯೆನುತ ಮೌನದಲಿ ಮುಳುಗಿರ್ದು
ಮಂದಿಯನು ಹೊರಗಿರಿಸಿ ಬರ ಹೇ
ಳೆಂದರಾಗಲೆ ಕೃಷ್ಣ ಕೊಂತೀ
ನಂದನರು ಬರಲಿದಿರುವಂದನು ಭೀಷ್ಮ ವಿನಯದಲಿ ೧೫

ಅರಸಿ ಹೊಗಲಾಮ್ನಾಯನಿಕರಕೆ
ತೆರಹುಗುಡದ ಪರಸ್ವರೂಪನು
ಕುರುಹುಗೊಂಡರೆ ಮಂದಿವಾಳವೆ ದೇವ ನೀನೊಲಿದು
ಅರಸಿಕೊಂಡೈತರಲು ತಾನೈ
ಸರವನಾಗಲಿ ನಿನ್ನ ಭೃತ್ಯನ
ಹೊರೆವ ಪರಿಯಿದು ಕೃಷ್ಣ ಜಯಜಯಯೆನುತ ನಿಡುಗೆಡೆದ ೧೬

ನಗುತ ಹರಿ ಗಂಗಾಕುಮಾರನ
ನೆಗಹಿದನು ಬಳಿಕವರು ರತುನಾ
ಳಿಗಳ ಕಾಣಿಕೆಯಿತ್ತು ಮೈಯಿಕ್ಕಿದರು ಭಕುತಿಯಲಿ
ತೆಗೆದು ಬಿಗಿಯಪ್ಪಿದನು ಯಮಜಾ
ದಿಗಳ ಮನ್ನಿಸಿ ವೀಳೆಯವನಿ
ತ್ತೊಗುಮಿಗೆಯ ಹರುಷದಲಿ ಹೊಂಪುಳಿಯೋದನಾ ಭೀಷ್ಮ ೧೭

ಅರಿಯ ಬೀಡಿದು ರಾಯನನುಜರು
ದುರುಳರುಚಿತಾನುಚಿತಗೇಡಿಗ
ಳಿರುಳು ದೊರೆಗಳು ನೀವನಾಲೋಚಿತದಲೈತಹರೆ
ಹರಿಯ ಬಲುಹುಂಟಾದಡೆಯು ಧಿ
ಕ್ಕರಿಸಬಾರದು ರಾಜಮಂತ್ರವ
ನರಸ ಸಾಕಿನ್ನೇನು ಬಂದುದು ಹೇಳು ನೀನೆಂದ ೧೮

ಅರಿಯೆನುಚಿತವನೆಮ್ಮ ಭಾರದ
ಹೊರಿಗೆ ನಿಮ್ಮದು ಕೃಷ್ಣನದು ನಾ
ವರಿದರೆಯು ಮೇಣ್ ಮರೆದರೆಯು ರಕ್ಷಕರು ನೀವೆಮಗೆ
ಅರಿಯನೇನುವನೆಂದು ಸಲಹಲು
ಮರೆವಳೇ ಬಾಲಕನ ತಾಯ್ ನೀ
ನುರುವ ವಜ್ರದ ಜೋಡು ನಮಗಿರೆ ಭೀತಿಯೇಕೆಂದ ೧೯

ಎಮಗೆ ಜಯವೆಂತಹುದು ರಾಜ್ಯ
ಭ್ರಮೆಯ ರಾಜಸಬುದ್ಧಿಗಳು ವಿ
ಕ್ರಮವಿಹೀನರು ನಾವು ನೀವ್ ತ್ರೈಲೋಕ್ಯವಿಜಯಿಗಳು
ಸಮರ ಸೋತುದು ನಮ್ಮ ಸುಭಟರು
ಯಮನ ಸೇವಕರಾಯ್ತು ಕೃಪೆಯಿಂ
ದೆಮಗೆ ನಿಮ್ಮಭಿಮತವ ಬೆಸಸುವುದೆಂದನಾ ಭೂಪ ೨೦

ಆಕೆವಾಳರು ಭೀಮ ಪಾರ್ಥರು
ನೂಕದಾಹವವುಳಿದ ಸೇನಾ
ನೀಕವೇ ನಿಮ್ಮಿಂದ ಸವೆದುದು ಹಲವು ಮಾತೇನು
ಸಾಕುವರೆ ಮೇಣ್ ಮುನಿದು ಕೊಲುವರೆ
ಬೇಕು ಬೇಡೆಂಬವರ ಕಾಣೆನು
ಕಾಕನಾಡೆನು ಬೆಸಸಿ ನಿಮ್ಮಭಿಮತವನೆನಗೆಂದ ೨೧

ತೀದುದೆಮ್ಮಯ ಸೇನೆ ನಸು ಸೊ
ಪ್ಪಾದುದಿಲ್ಲರಿಸೇನೆ ನಿಮ್ಮನು
ಕಾದಿ ಗೆಲುವರೆ ಮೊಲೆಯನೂಡಿದ ತಾಯಿ ಜಾಹ್ನವಿಯೆ
ಕಾದಿದೆವು ಕಟ್ಟಿದೆವು ಗೆಲಿದೆವು
ಮೇದಿನಿಯ ನಾವಿನ್ನು ಮುನ್ನಿನ
ತೀದ ವನವಾಸಕ್ಕೆ ನೇಮವ ಕೊಟ್ಟು ಕಳುಹೆಂದ ೨೨

ಮನ್ನಿಸುವಡೀ ಉಭಯರಾಯರು
ನಿನ್ನ ಮೊಮ್ಮಂದಿರುಗಳದರೊಳು
ನಿನ್ನ ಕುಣಿಕೆಯೊಳಿಹುದು ಕುಂತೀಸುತರ ಜೀವನವು
ನಿನ್ನನೇ ನಂಬಿಹರು ನೀನೇ
ಮುನ್ನ ಶಿಶುತನದಲ್ಲಿ ಸಲಹಿದೆ
ಮನ್ನಣೆಯ ನೀ ಬಲ್ಲೆಯೆಂದನು ದಾನವಧ್ವಂಸಿ ೨೩

ಎನಲು ಮೊಮ್ಮಂದಿರುಗಳಳಲಿನ
ಘನತೆಯನು ಕಿವಿಗೊಟ್ಟು ಕೇಳಿದು
ನನೆದುದಂತಃಕರಣ ಕಂಬನಿದುಂಬಿದನು ಭೀಷ್ಮ
ಎನಗೆ ಕಾಲ ಸಮೀಪ ಮಗನೇ
ನಿನಗೆ ಭಯಬೇಡಿನ್ನು ಕುರುಪತಿ
ದನುಜವೈರಿಗೆ ತಪ್ಪಿದಾಗಳೆ ನಿಮಗೆ ಜಯವೆಂದ ೨೪

ಕೊಂದೆನಗಣಿತ ರಾಯರನು ತಾ
ಮಂದಿಯನು ನಿನಗಾನು ಮುನಿಯೆನು
ಬಂದು ಪಾರ್ಥನ ರಥವ ತಡೆದರೆ ನೀವು ಧೃತಿಗೆಡದೆ
ಇಂದಿನುದಯದಲಾ ಶಿಖಂಡಿಯ
ತಂದು ನಿಲಿಸಿದಡೆನ್ನ ತನುವನು
ಹಿಂದುಗಳೆಯದೆ ನಿಮಗೆ ತೆರುವೆನು ಮಗನೆ ಕೇಳೆಂದ ೨೫

ಗಂಡುತನ ತಾ ನೆರವು ನಿಮ್ಮ ಶಿ
ಖಂಡಿಯನು ಮುಂದಿರಿಸಲಾತನ
ಕಂಡು ನಾವ್ ಕಾಳೆಗವ ಮಾಡೆವು ಕೈದುಗಳ ಬಿಸುಟು
ಚಂಡಿತನವನು ಮಾದು ಮಿಗೆ ಕೈ
ಕೊಂಡು ಫಲುಗುಣನೆಸಲಿ ತನುವನು
ದಿಂಡುಗೆಡಹಲಿ ಬಳಿಕ ಗೆಲುವಿರಿ ಕೌರವೇಶ್ವರನ ೨೬

ಎನಲು ಶಿವಶಿವ ಶಿವ ಮಹಾದೇ
ವೆನುತ ಕಿವಿಗಳ ಮುಚ್ಚಿದನು ಕಂ
ಬನಿಯನುಗುರಲಿ ಮಿಡಿದು ನೊಂದನು ಪಾರ್ಥ ಹೃದಯದಲಿ
ಎನಗೆ ಗೆಲವಾಯ್ತುದು ಕೃತಾರ್ಥರು
ಜನದೊಳೆನ್ನವೊಲಾರು ಬಳಿಕೇ
ನೆನಗೆ ನಿಮ್ಮವೊಲಾರು ಹಗೆಗಳು ಜಗದೊಳುಂಟೆಂದ ೨೭

ಕಳಿದನಡವಿಯೊಳಯ್ಯನಲ್ಲಿಂ
ಬಳಿಕ ಭೀಷ್ಮನ ತೋಳ ತೊಟ್ಟಿಲಿ
ನೊಳಗೆ ಬೆಳೆದವು ಸಲಹಿದನು ಧೂಳಾಟ ಮೊದಲಾಗಿ
ಬಲಿಯಲೆರಕೆಗಳೆಮಗೆ ಭಾಗಿಸಿ
ನೆಲನ ಕೊಟ್ಟನು ಭೀಷ್ಮನೀತನ
ಕೊಲೆಗೆ ಬಯಸುವ ಮನವದೆಂತುಟೊ ಕೃಷ್ಣ ಹೇಳೆಂದ ೨೮

ಈತನನು ನಾವ್ ಕೊಲಲು ಭುವನ
ಖ್ಯಾತರಹೆವೈ ಸುಡಲಿ ಬಯಸುವ
ಭೂತಳವನೀ ಬೊಡ್ಡಿಗೋಸುಗ ಸುಟ್ಟು ಸುಕೃತವನು
ಘಾತಕರು ಪಾತಕರು ತೆಗೆ ತೆಗೆ
ಏತರವದಿರು ಪಾಂಡುತನಯರ
ಮಾತನಾಡದಿರೆಂಬ ಕೀರ್ತಿಗೆ ನೋತುದಿಲ್ಲೆಂದ ೨೯

ನಿಲ್ಲು ಫಲುಗುಣ ಕೇಳು ಹೊಲ್ಲೆಹ
ವಲ್ಲ ಸಕಲ ಕ್ಷತ್ರಧರ್ಮವ
ಬಲ್ಲೆ ನೀನೆಮಗಹಿತನೇ ನೃಪನೀತಿಬಾಹಿರನೆ
ಎಲ್ಲಿಯುಪಕೀರ್ತಿಗಳು ಕೀರ್ತಿಗ
ಳೆಲ್ಲ ವಿಧಿಯುವು ನಿನ್ನ ಕಾರಣ
ವಲ್ಲ ನೀ ಕೊಲಲೈಸರವನ್ನೈ ಪಾರ್ಥ ಹೇಳೆಂದ ೩೦

ಯಂತ್ರಿ ಮಿಡಿದರೆ ಕಾದಿ ಬೀಳ್ವವು
ಯಂತ್ರಮಯ ಹಾಹೆಗಳು ವಧೆಯಾ
ಯಂತ್ರಿಗೋ ಹಾಹೆಗಳಿಗೋ ಹೇಳಾರ ನೆಮ್ಮುವದು
ಯಂತ್ರಿ ಕೃಷ್ಣನು ನಾವು ನೀವೀ
ತಂತ್ರವಖಿಲ ಚರಾಚರಂಗಳು
ಯಂತ್ರರೂಪುಗಳೆಲ್ಲ ಕಾರಣವಿಲ್ಲ ನಿನಗೆಂದ ೩೧

ಒಂದು ಮುಖದಲಿ ಜಗವ ಹೂಡುವ
ನೊಂದು ಮುಖದಲಿ ಜಗವ ಸಲಹುವ
ನೊಂದು ಮುಖದಲಿ ಬೇಳುವನು ನಯನಾಗ್ನಿಯಲಿ ಜಗವ
ಕೊಂದು ಹಗೆಯಲ್ಲೀತ ಸಲಹಿದ
ನೆಂದು ಮೋಹಿತನಲ್ಲ ಪರಮಾ
ನಂದಮಯ ಹರಿಯಿದಕೆ ಕಾರಣವಿಲ್ಲ ನಿನಗೆಂದ ೩೨

ಕಾವುದೀತನ ಕರುಣ ಮುನಿದರೆ
ಸಾವನೀತನ ಕಯ್ಯ ಬಾಯಲಿ
ನೀವು ತಾವ್ ನೆರೆ ಮತ್ತೆ ಕೆಲಬರು ಮುನಿದಡಂಜುವೆನು
ನಾವು ಬೆಸಸಿದ ಮಾಡಿ ಸಾಕಿ
ನ್ನಾವಭಯ ನಿಮಗಿಲ್ಲ ಚಿತ್ತದ
ಭಾವಶುದ್ಧಿಯಲೆಮ್ಮ ನಂಬಿರಿ ಹೋಗಿ ನೀವೆಂದ ೩೩

ಹರುಷ ಬಲಿದುದು ಮನದ ಸಂಶಯ
ಹರೆದುದಾಹವ ವಿಜಯವಾರ್ತೆಯ
ಹರಹಿನಲಿ ಹೊರೆಯೇರಿ ಹೋಂಪುಳಿಯೋದರಡಿಗಡಿಗೆ
ಸುರನದೀನಂದನನ ಹರಹಿನ
ಹರಕೆಗಳ ಕೈಕೊಂಡು ಬೀಳ್ಕೊಂ
ಡರಸ ಮುರರಿಪು ಸಹಿತ ಬಂದನು ತನ್ನ ಪಾಳಯಕೆ ೩೪

## ಎಂಟನೆಯ ಸಂಧಿ

ಸೂ. ಬೆಗಡುಗೊಂಡುದು ದ್ರೋಣ ಶಲ್ಯಾ
ದಿಗಳು ಪಾರ್ಥನ ವಿಕ್ರಮಾನಲ
ಮೊಗೆದು ಸುರಿದುದು ಸಕಲ ಕೌರವಸೈನ್ಯ ಸಾಗರವ

ಸೂಳು ಮಿಗಲಳ್ಳಿರಿದವುರು ನಿ
ಸ್ಸಾಳತತಿ ಮುಂಜಾವದಲಿ ಹೆ
ಗ್ಗಾಳೆ ಮೊರೆದವು ಕುಣಿದು ಗಜರಿದವಾನೆ ಕುದುರೆಗಳು
ತೂಳುವರೆಗಳ ಭಟರ ಘೋಳಾ
ಘೋಳಿ ದೆಸೆಗಳ ಬಗಿಯೆ ಮೂಡಣ
ಶೈಲಮಂಚದಲುಪ್ಪವಡಿಸಿದನಬುಜಿನೀರಮಣ ೧

ಹೊಳೆಹೊಳೆದು ಹೊಂದೇರು ಹರಿದವು
ತಳಪಟಕೆ ಹೊದರೆದ್ದು ಗಗನದ
ಹೊಲಿಗೆ ಬಿಡೆ ಬೊಬ್ಬಿರಿದು ಕವಿದುದು ವಿಗಡ ಪಾಯದಳ ೨

ಲಳಿ ಮಸಗಿ ಹನುಮಿಸುತ ಖುರದಲಿ
ನೆಲನ ಕೆರೆದವು ಕುದುರೆ ಬರಿಕೈ
ಯೊಲೆದು ಕಂಭವ ಕೊಂಡು ಮಿಕ್ಕವು ಸೊಕ್ಕಿದಾನೆಗಳು

ಲಲಿತ ಮಂಗಳ ಪಾಠಕರ ಕಳ
ಕಳಿಕೆಗುಪ್ಪವಡಿಸಿದನವನಿಪ
ತಿಲಕನನುಜರು ಸಹಿತ ವೈದಿಕ ಕ್ರಿಯೆಯನನುಕರಿಸಿ
ನಳಿನನಾಭನ ಮಧುರವಾಣೀ
ಲುಳಿತ ಪರಮಾಶೀರ್ವಚನ ಪರಿ
ಕಲಿತ ಕವಚಿತಕಾಯ ಪಾಂಡವರಾಯ ಹೊರವಂಟ ೩

ಗಗನ ಸರಸಿಯ ಪುಂಡರೀಕಾ
ಳಿಗಳೊ ಧವಳಚ್ಛತ್ರ ಪಂಕ್ತಿಯೊ
ಗಗನ ಗಂಗೆಯ ಬಹಳ ಕಾಲುವೆಗಳೊ ಪತಾಕೆಗಳೊ
ಗಗನ ಕುಂಭಿಯ ಗುಳದ ಕೆಲ ಚೌ
ರಿಗಳೊ ಸೀಗುರಿಗಳೊ ಕೃಪಾಣವೊ
ಗಗನ ಪೀವರ ತಾಳಪತ್ರಾವಳಿಯೊ ಹೊಸತಾಯ್ತು ೪

ಉಬ್ಬಿದವು ಬೊಬ್ಬೆಗಳು ಬಿಲುದನಿ
ಗ್ಗಬರಿಸಿದವು ನಭವ ಗಜ ಹಯ
ದಬ್ಬರಣೆ ಗರುವಾಯಿಗೆಡಿಸಿತು ಸಿಡಿಲ ಸಡಗರವ
ಕೊಬ್ಬಿ ಹರಿದುದು ವಿವಿಧ ವಾದ್ಯದ
ನಿಬ್ಬರದ ನಿಡುದನಿಯು ಜಲನಿಧಿ
ಗಬ್ಬವಿಕ್ಕಿತು ಸೈನ್ಯಜಲಧಿಯ ಬಹಳ ಗರ್ಜನೆಗೆ ೫

ಕುಣಿದು ಮುಂಚಿತು ಚೂಣಿ ಸಮರಾಂ
ಗಣದ ಕೇಳೀ ಬಾಲಕರು ಸಂ
ದಣಿಸಿ ಹೊಕ್ಕರು ಜಯವಧೂಟೀವಿರಹ ಕಾತರರು
ಗಣನೆಯಿಲ್ಲದ ಗಜಹಯದ ಭಾ
ರಣೆಯ ಭಾರಿಯ ಭಟರೊಡನೆ ಥ
ಟ್ಟಣೆಯ ಮೇಲೆ ಮಹೀಶ ಹೊಕ್ಕನು ಕಾಳೆಗದ ಕಳನ ೬

ಉದಯವಾಗದ ಮುನ್ನ ಕಳನೊಳು
ಹೊದರುಗಟ್ಟಿದ ವೈರಿಸೇನೆಯ
ಹದನಿವರ ಪಾಳಯಕೆ ಬಂದುದು ದಳದ ಕಳಕಳಿಕೆ
ಸದೆದುದನಿಬರ ಕಿವಿಯೊಡನೆ ತುಂ
ಬಿದವು ನಿಸ್ಸಾಳೌಘ ದಿಕ್ಕಿನ
ತುದಿಯ ತಿವಿದವು ಮೀರಿ ಗಳಹುವ ಗೌರುಗಹಳೆಗಳು ೭

ಅರಸನುಪ್ಪವಡಿಸಿದನವನೀ
ಶ್ವರ ವಿಹಿತ ಸಂಧ್ಯಾಭಿವಂದನ
ವರಮಹೀಸುರವರ್ಗ ಸತ್ಕಾರವನು ನೆರೆ ಮಾಡಿ
ಸುರನದೀಜನ ಮನೆಗೆ ಬರಲಂ
ದಿರುಳ ಕಡೆಯಲಿ ನೃಪತಿಗಾ ವಿ
ಸ್ತರವ ವಿರಚಿಸಿ ಜೋಡ ತೊಟ್ಟನು ರಥದಿ ಮುಂಡಿಸಿದ ೮

ಇಂದಲೇ ಪಾಂಡವರ ಚಿತ್ತಾ
ನಂದಚಿತ್ರಕೆ ಧೂಮದರುಶನ
ವಿಂದಲೇ ಕೌಂತೇಯರಿಗೆ ಸುರಪುರದ ವೈಹಾಳಿ
ಇಂದಲೇ ಪವನಜನ ಪಾರ್ಥನ
ಸಂದ ವಿಕ್ರಮವಿಷಕೆ ಗಾರುಡ
ವೆಂದೆನುತ ಬೊಬ್ಬಿರಿದು ಕವಿದುದು ಸಕಲ ಕುರುಸೇನೆ ೯

ತರುಣ ರವಿಗಳ ತತ್ತಿಗಳ ಸಂ
ವರಿಸದಿರರೆನೆ ಮಾಣಿಕಂಗಳ
ತರತರದ ಕೀಲಣೆಯ ಹೊಂಗೆಲಸದ ಸುರೇಖೆಗಳ
ಕೊರಳ ಹೀರಾವಳಿಯ ರಶ್ಮಿಯ
ಹೊರಳಿಗಳ ಹೊದಕೆಗಳ ಕವಚದ
ಲರಿದಿಶಾಪಟ ಭೀಷ್ಮನೆಸೆದನು ರಥದ ಮಧ್ಯದಲಿ ೧೦

ವೀರ ಸೇನಾಪತಿಯ ಸನ್ನೆಗೆ
ಭೂರಿಬಲ ಹಬ್ಬಿದುದು ದಿಕ್ಕಾಗ
ಳೋರೆ ಹಿಗ್ಗಿದವಮಮ ತಗ್ಗಿದರಹಿಪ ಕೂರುಮರು
ಚಾರು ಚಾಮರ ಸಿಂಧ ಸತ್ತಿಗೆ
ಯೋರಣದ ಕಲ್ಪಾಂತ ಮೇಘದ
ಭಾರಣೆಯನೊಟ್ಟೈಸಿ ಥಟ್ಟಯಿಸಿತ್ತು ಕುರುಸೇನೆ ೧೧

ಭುವನಗರ್ಭಿತವಾದುದಾ ಮಾ
ಧವನ ಜಠರದವೋಲು ವರ ಭಾ
ಗವತನಂತಿರೆ ವಿಷ್ಣುಪದ ಸಂಸಕ್ತ ತನುವಾಯ್ತು
ರವಿಯವೊಲು ಶತಪತ್ರ ಸಂಘಾ
ತವನು ಪಾದದಲಣೆದು ಕೆಂಧೂ
ಳವಗಡಿಸೆ ಕುರುಸೇನೆ ಕೈಕೊಂಡುದು ರಣಾಂಗಣವ ೧೨

ಹೊಗರೊಗುವ ಝಳಪಿಸುವಡಾಯುಧ
ನೆಗಹಿ ತೂಗುವ ಲೌಡಿಗಳ ಮೊನೆ
ಝುಗರ್ಝುಗಿಸಿ ಝಾಡಿಸುವ ಸಬಳದ ತಿರುಹುವಂಕುಶದ
ಬಿಗಿದುಗಿವ ಬಿಲ್ಲುಗಳ ಬೆರಳೊಳ
ಗೊಗೆವ ಕೂರಂಬುಗಳ ಸುಭಟಾ
ಳಿಗಳೊಡನೆ ಗಾಂಗೇಯ ಹೊಕ್ಕನು ಕಾಳೆಗದ ಕಳನ ೧೩

ವಿತತ ವಾಜಿವ್ರಜದ ಘನ ಹೇ
ಷಿತದ ಘಲ್ಲಣೆ ಗಜದಳದ ಬೃಂ
ಹಿತದ ಬಹಳಿಕೆ ರಥಚಯದ ಚೀತ್ಕೃತಿಯ ಚಪ್ಪರಣೆ
ನುತ ಪದಾತಿಯ ಗರ್ಜನೆ ಸಮು
ದ್ಧತ ಧನುಷ್ಟಂಕಾರ ರೌದ್ರಾ
ಯತ ಘಡಾಳಿಸಲೊಡ್ಡಿದರು ಮಂಡಳಿಸಿ ಮೋಹರವ ೧೪

ಚೂಣಿ ತಲೆಯೊತ್ತಿದುದು ಹರಣದ
ವಾಣಿ ಕೇಣಿಯ ಕುಹಕವಿಲ್ಲದೆ
ಗೋಣುಮಾರಿಗಳೋಲಗದ ಹಣರುಣವ ನೀಗಿದರು
ಹೂಣಿಗರು ಹುರಿಬಲಿದು ಹಾಣಾ
ಹಾಣಿಯಲಿ ಹೊಯ್ದಾಡಿದರು ಘನ [೧೫
ಶೋಣಸಲಿಲದ ಹೊನಲು ಹೊಯ್ದುದು ಹೋಗುವ ಬವರಿಗರ

ಕೋಡಕೈಗಳ ಭಟರಲಲಗೆಡೆ
ಯಾಡಿದವು ಹೆಗಲಡ್ಡವರಿಗೆಯ
ನೀಡಿ ಮೈಮಣಿದಾಕ್ಷಿ ತಿವಿದಾಡಿದರು ಸಬಳಿಗರು
ಕೂಡೆ ತಲೆವರಿಗೆಗಳಲುರೆ ಕೈ
ಮಾಡಿದರು ಖಡ್ಗಿಗಳು ಥಟ್ಟಿನ
ಜೋಡು ಜರಿಯಲು ಬೆರಸಿದವಾನೆ ಕುದುರೆಗಳು ೧೬

ಪಿರಿದು ಮೊನೆಗುತ್ತಿನಲಿ ನೆತ್ತರು
ಸುರಿದುದಡಹೊಯ್ಲಿನಲಿ ಖಂಡದ
ಹೊರಳಿ ತಳಿತುದು ಕಾಯಿವಜಿಗಿಜಿಯಾಯ್ತು ಲೌಡಿಯಲಿ
ಸರಳ ಚೌಧಾರೆಯಲಿ ಹಾಯ್ದವು
ಕರುಳು ಕಬ್ಬುನ ಕೋಲಿನಲಿ ಕ
ತ್ತರಿಸಿದವು ಕಾಲುಗಳು ಕೌತುಕವಾಯ್ತು ಚತುರಂಗ ೧೭

ಕಡಿದು ಚಿಮ್ಮಿದ ಬೆರಳುಗಳ ಹಿ
ಮ್ಮಡಿಯ ಘಾಯದ ನಾಳ ಹರಿದರೆ
ಮಡಿದ ಗೋಣಿನ ಬೆಸುಗೆ ಬಿರಿದ ಕಪಾಲದೋಡುಗಳ
ಉಡಿದ ತೊಡೆಗಳ ಹರಿದ ಹೊಟ್ಟೆಯ
ಹೊಡೆ ಮರಳಿದಾಲಿಗಳ ತೋಳಿನ
ಕಡಿಕುಗಳ ರಣಮಹಿ ಭಯಾನಕ ರಸಕೆ ಗುರಿಯಾಯ್ತು ೧೮

ಕೊರಳ ತೆತ್ತುದು ಚೂಣಿದಳ ಮು
ಖ್ಯರಿಗೆ ಹೇಳಿಕೆಯಾಯ್ತು ಮೋಹರ
ವೆರಡರಲಿ ಮೊನೆಯುಳ್ಳ ನಾಯಕವಾಡಿ ನಲವಿನಲಿ
ಕರಿ ತುರಗ ರಥ ಪಾಯದಳದಲಿ
ಹೊರಳಿ ತಗ್ಗಿತು ರಥದ ಲಗ್ಗೆಯ
ಧರಧುರದ ದೆಖ್ಖಾಳ ಮಿಗೆ ನೂಕಿದರು ಸಂಗರಕೆ ೧೯

ತಳಿತ ಸತ್ತಿಗೆಗಳ ಪತಾಕಾ
ವಳಿಯ ಪಡಪಿನ ಬಿರುದಿನುಬ್ಬಟೆ
ಗಳ ವಿಡಾಯಿಯ ಸಿಂಧ ಸೆಳೆ ಸೀಗುರಿಯ ಸುಳಿವುಗಳ
ಕಳಕಳಿಕೆ ಕಡುಹೇರಿ ತಳ ಪಟ
ದೊಳಗೆ ತಲೆದೋರಿದರು ಘಡಘಡ
ಫಲುಗುಣನ ಬರಹೇಳೆನುತ ದ್ರೋಣಾದಿ ನಾಯಕರು ೨೦

ದೊದ್ದೆ ತೆಗೆಯಲಿ ಪಾರ್ಥ ಪವನಜ
ರಿದ್ದರಾದರೆ ಬರಲಿ ಸಮರವ
ಹೊದ್ದಲಾಪರೆ ಹೊಗಲಿ ಹರಿ ತೋರಲಿ ಸಹಾಯತೆಯ
ಇದ್ದರೆಯು ರಣವಿಜಯ ವನಿತೆಗೆ
ಹೊದ್ದಿಗರು ದ್ರುಪದಾದಿ ರಾಯರ
ಹೊದ್ದಿಸಲು ಬೇಡವರಿಗಂಜುವೆವೆನುತ ನೂಕಿದರು ೨೧

ಗುರುತನುಜ ವೃಷಸೇನ ಮಾದ್ರೇ
ಶ್ವರ ಜಯದ್ರಥ ಶಕುನಿ ದುಸ್ಸಹ
ಗುರು ಸುಶರ್ಮ ವಿಕರ್ಣ ಭೂರಿಶ್ರವ ಸುಲೋಚನರು
ಧರಣಿಪತಿ ಭಗದತ್ತ ಯವನೇ
ಶ್ವರ ಕಳಿಂಗ ಸುಕೇತು ದುರ್ಜಯ
ದುರುಳ ದುಶ್ಶಾಸನನಲಂಬುಸರೈದಿದರು ರಣವ ೨೨

ಗೆದ್ದರೆಯು ಗೆಲವಿಲ್ಲ ಹಾರುವ
ರುದ್ದುರುಟುತನಕೇನನೆಂಬೆನು
ಗದ್ದುಗೆಯ ಹೊರೆಗರಸ ಕರೆದರೆ ಭವವ ಮರೆದಿರಲ
ಹದ್ದು ಕಾಗೆಯ ಮನೆಯ ಬಾಣಸ
ವಿದ್ದೆಯೆಮ್ಮದು ಯಮನ ನಿಳಯಕೆ
ಬಿದ್ದಿನರು ನೀವೆಂದೆನುತ ಕಲಿ ಮತ್ಸ್ಯನಿದಿರಾದ ೨೩

ನಕುಲ ಕುಂತೀಭೋಜಸುತ ಸೋ
ಮಕ ಘಟೋತ್ಕಚ ದ್ರುಪದ ಪ್ರತಿವಿಂ
ಧ್ಯಕ ಶತಾನೀಕಾಭಿಮನ್ಯು ಯುಯುತ್ಸು ಸೃಂಜಯರು
ಸಕಲ ಸನ್ನಾಹದಲಿ ಯುದ್ಧೋ
ದ್ಯುಕುತರಾದರು ಚಕಿತಚಾಪರು
ಮುಕುತ ಶಸ್ತ್ರಾವಳಿಯ ಮಳೆಗಾಲವನು ನಿರ್ಮಿಸುತ ೨೪

ಹಿಡಿದನಶ್ವತ್ಥಾಮ ದ್ರುಪದನ
ಪಡೆಯೊಡನೆ ಬವರವನು ಕೃಪ ಮುಂ
ಗುಡಿಯೊಡನೆ ಹೊಕ್ಕಿರಿದು ತಡೆದನು ಸಾತ್ಯಕಿಯ ರಥವ
ಕಡುಹು ಮಿಗೆ ಕೈದೋರಿ ಪವನಜ
ನೊಡನೆ ಗುರು ಕಾದಿದನು ರಾಯನ
ನುಡಿಸಿ ಕೌರವರಾಯ ತಾಗಿದನಾಹವಾಗ್ರದಲಿ ೨೫

ಸೆಣಸು ಮಿಗಲಭಿಮನ್ಯು ಭೀಷ್ಮನ
ಕೆಣಕಿದನು ದುಶ್ಶಾಸನನು ಫಲು
ಗುಣನ ತರುಬಿದನಾ ಘಟೋತ್ಕಚನೊಡನೆ ಭಗದತ್ತ
ಕಣೆಗೆದರಿ ಸಹದೇವ ನಾರಾ
ಯಣಬಲವ ಬೆರಸಿದನು ಮತ್ಸ್ಯನ
ಹೊಣಕೆಯಿಂದ ಸುಶರ್ಮ ತಾಗಿನದರಸ ಕೇಳೆಂದ ೨೬

ಬೆರಸಿ ಹೊಯ್ದರು ತಿವಿದರೆಚ್ಚರು
ಹರೆಗಡಿದರರೆಗಡಿದರೆತ್ತಿದ
ರರೆದರಿಟ್ಟೊರಸಿದರು ತರಿದರು ತುಳುಕಿ ತೂರಿದರು
ಸರಳು ಸರಿಯಲು ಜೋಡು ಜರಿಯಲು
ತುರಗ ಧೂಪಿಸೆ ಸಾರಥಿಯ ಕೈ
ಹರಿಯೆ ಕಾದಿತು ವೀರ ನಾಯಕವಾಡಿ ಧೈರ್ಯದಲಿ ೨೭

ಕೆಲಬರಾಯುಧ ಮುರಿದು ಸಾರಥಿ
ಯಳಿದು ಕೆಲಬರು ರಥ ವಿಸಂಚಿಸಿ
ಕೆಲರು ಕೆಲಬರು ಬಳಲಿದರು ಪೂರಾಯದಲಿ ಘಾಯದಲಿ
ಕೆಲರು ಜುಣುಗಿತು ಕಂಡ ಮುಖದಲಿ
ಕೆಲರು ಹರೆದರು ಕೈಮನದ ಕಡು
ಗಲಿಗಳಚ್ಚಾಳಾಗಿ ನಿಂದರು ಕೆಲರು ಕಾಳೆಗಕೆ ೨೮

ಏರ ಸೂರೆಯ ಕಟ್ಟಿ ಹಿಂಗುವ
ಗಾರುತನ ತಾನೇನು ಸುಡು ಮುಂ
ಮಾರಿಗಳ ಮಾತೆತ್ತಲಡಸಿತು ಬಿರುದ ಸ್ವೈರಿಸುತ
ಆರಿಹೋಯಿತೆ ವೀರರಸ ತಲೆ
ದೋರ ಹೇಳಾ ರಣಕೆನುತ ಕೈ
ಮೀರಿ ಕವಿದರು ದ್ರುಪದ ಕೈಕಯ ಮತ್ಸ್ಯ ಸೃಂಜಯರು ೨೯

ಕಡುಹು ಮುರಿದುದು ಕೌರವೇಂದ್ರನ
ಪಡೆಯ ತರಹರ ದಿಕ್ಕುಗೆಟ್ಟುದು
ಮಡಮುರಿಯಲಂಗೈಸಿದರು ದುಶ್ಶಾಸನಾದಿಗಳು
ಕಡಲು ಮೈದೆಗೆವಂತೆ ಬಹ ಬಹು
ಪಡೆಯ ಕಂಡನು ದ್ರೋಣ ಘಡಘಡ
ಪಡೆಯ ತೆಗೆದರೆ ರಾಯನಾಣೆಯೆನುತ್ತ ಮಾರಾಂತ ೩೦

ಸಾಹಸಿಕರೈ ದ್ರುಪದರಿವದಿರ
ಚೋಹದೋಲೆಯಕಾರತನ ಮನ
ಗಾಹಿನಲಿ ಹೆಮ್ಮಕ್ಕಳಿವದಿರು ಶಿವಶಿವಿವದಿರಿಗೆ
ಆಹವದೊಳೋಸರಿಸಿದರೆ ಭಟ
ಸಾಹಸಕೆ ಕಲೆ ಹೊದ್ದದೇ ಸುಡು
ದೇಹವೇತಕೆ ದೆಸೆಯೆ ಸಾಕೆನುತೈದಿದನು ದ್ರೋಣ ೩೧

ಆವುದಂತರ ವನ ಕಳಭಕೈ
ರಾವತಕೆ ಮಝು ಭಾಪು ದ್ರೋಣನ
ಡಾವರಕೆ ಪಾಂಚಾಲನ್ಯೆಸರವನು ಮಹಾದೇವ
ನಾವು ದ್ರುಪದನ ಕಾಣೆವಾವೆಡೆ
ಗಾ ವಿರಾಟನು ಸರಿದನೆತ್ತಲು
ಶೀವಿದರು ಸೃಂಜಯರು ನೃಪ ನಾವರಿಯೆವಿದನೆಂದ ೩೨

ಒಗ್ಗೊಡೆದು ರಿಪುಸೇನೆ ಸರಿದುದು
ತಗ್ಗಿ ತುಬ್ಬಾಳುಗಳ ನುಡಿ ಮನ
ನೆಗ್ಗಿದವು ಮಂಡಳಿಕರಿಗೆ ತಲೆಮುಸುಕು ಪಸರಿಸಿತು
ಲಗ್ಗೆವರೆಗಳಿಗಮಮ ಮೌನದ
ಸುಗ್ಗಿಯಾಯಿತು ಬಿರುದ ಬೈಚಿಡು
ತಗ್ಗಳೆಯರೊಳಸರಿಯೆ ಕಂಡನು ಪಾರ್ಥ ಖತಿಗೊಂಡ ೩೩

ರಣಕೆ ತವಕಿಸಿ ಬಳಿಕ ತಾಗುವ
ಕಣೆಯ ದಾಳಿಗೆ ತಳ್ಳುವಾರುವ
ಗುಣವಿದೆಂತುಟೊ ಭಂಡರಿವದಿರ ಹೋಗಹೇಳೆನುತ
ಕೆಣಕಿದನು ಬಿಲುದಿರುವನುರು ಮಾ
ರ್ಗಣದ ಹೊದೆಗಳ ಕೆದರಿ ಸಮರಾಂ
ಗಣಕೆ ಸಮ್ಮುಖನಾದನರ್ಜುನ ಸಿಂಹನಾದದಲಿ ೩೪

ಹೋರಬೇಕೇ ದ್ರುಪದನಾನ
ಲ್ಲಾರಯಿದು ಕಾದುವುದು ಚಾಪದ
ಚಾರುವಿದ್ಯೆಯ ನಿಮ್ಮೊಳರಿದುದ ನಿಮಗೆ ತೋರಿಸುವೆ
ಸೈರಿಸುವುದೀ ಬಾಲಭಾಷೆಗೆ
ವೈರಬಂಧವ ಬಿಡುವದೆನುತಾ
ಚಾರಿಯನ ರಥಹಯವ ಹೊದಿಸಿದನಸ್ತ್ರನಿಕರದಲಿ ೩೫

ಕವಿವ ಕಣೆಗಳ ದಡ್ಡಿಗಳನೊಡೆ
ತಿವಿದು ತುಳುಕಿದನಂಬಿನಂಬುಧಿಯ
ನವಿರಳಾಸ್ತ್ರಾನೀಕ ಡಾವರಿಸಿದವು ದಿಗುತಟವ
ಅವನಿಯೋ ದಿಕ್ಕುಗಳೊ ಪಾರ್ಥನೊ
ರವಿಯ ಕಾಣೆನು ಭಾಪು ಕಲಶೋ
ದ್ಭವನ ಕೈಮೈಯೆನುತ ಬೆರಗಿನೊಳಿರ್ದುದಮರಗಣ ೩೬

ಈತನಸ್ತ್ರವ ಕಡಿದು ಬಾಣ
ವ್ರಾತವನು ತೆರಳೆಚಿದನರ್ಜುನ
ಸೇತುವಾದವು ಸರಳು ವೈಹಾಯಸ ಮಹಾರ್ಣವಕೆ
ಕೇತುವಾದವು ರವಿರಥಕೆ ಪುರು
ಹೂತನಾದವು ಗಿರಿಕುಳಕೆ ಕೈ
ಸೋತುವಿವ ತರಿದೊಟ್ಟಿ ಬಳಲಿದು ನಿಂದನಾ ದ್ರೋಣ ೩೭

ತ್ರಾಣ ಕೋಮಲವಾಯ್ತು ತೆಗೆಯಲಿ
ದ್ರೋಣನಾವೆಡೆ ಪಾಯದಳ ಬಿಡು
ಹೂಣೆಗರ ಬರಹೇಳು ಬಾಣದ ಬಂಡಿ ಸಾವಿರವ
ಶೋಣಿತದ ಸಾಗರದಿನವನಿಯ
ಕಾಣೆ ಹೊಳಲಿ ಪಾದರಜದಲಿ
ಕೇಣಗೊಂಡನು ವೈರಿಸೇನೆಯನಮಮ ಕಲಿ ಪಾರ್ಥ ೩೮

ನರನೆ ಹೊಕ್ಕವನಾದಡಯ್ಯನ
ಹರಿಬವೆನ್ನದೆನುತ್ತ ಬಿಲುದಿರು
ಮೊರೆಯ ಮೋಹರಗಡಲ ಕವಿಸಿದನಂದು ಗುರುಸೂನು
ಗುರುಸುತನ ಬಳಿವಿಡಿದು ಕಡುಹಿನ
ಉರವಣಿಸಿದರು ಶಕುನಿ ಯವನೇ
ಶ್ವರ ಕಳಿಂಗ ಸುಕೇತು ಭೂರಿಶ್ರವರು ಬಿಲುದುಡುಕಿ ೩೯

ಸಾಲ ಮಕುಟದ ಮಾಣಿಕದ ಮಣಿ
ಮಾಲಿಕೆಯ ರಶ್ಮಿಗಳು ಸೂರ್ಯನ
ಸೋಲಿಸಲು ಸಮರವನು ಹೊಕ್ಕರು ಕುರುಹಿನತಿಬಳರು
ಕೋಲ ತೆಗಹಿನ ಕಿವಿಗಡಿಯ ಕ
ಣ್ಣಾಲಿಗಳ ಕೆಂಪುಗಳ ಹೊಗರು ಛ
ಡಾಳಿಸಲು ಬಲುಖತಿಯ ಸುಭಟರು ಹಳಚಿತರ್ಜುನನ ೪೦

ಏನ ಹೇಳುವೆನವರ ಶರ ಸಂ
ಧಾನವನು ಕಲಿ ಪಾರ್ಥನನುಸಂ
ಧಾನವನು ಕೈಯೊಡನೆಯನಿಬರ ಕಣೆಯ ಖಂಡಿಸಿದ
ದಾನವಾಮರರೊಳಗೆ ಸುಭಟ ನಿ
ಧಾನವನು ಪಡಿಗಟ್ಟಬಾರದು
ಮಾನವರ ಮಾತೇತಕೆಂದನು ಸಂಜಯನು ನಗುತ ೪೧

ಹಿಳುಕು ಹಿಳುಕುಗಳಡಸಿ ದೆಸೆ ಕ
ತ್ತಲಿಸಿ ಕೈಕೊಂಡವು ಪತತ್ರಾ
ವಳಿಯ ಪವನನ ಹೊಯ್ಲಿನಲಿ ಬಾಯ್ಧಾರೆ ಕಿಡಿಯೇಳೆ
ಬಳಿಸರಳ ಬಿಲ್ಲಾಳ ದಡ್ಡಿಯ
ಬಲುಹು ತರುಬಿತು ಪಡಿಮುಖದ ಮಂ
ಡಳಿಕರೆಸುಗೆಯನಮಮ ಸಮತಳಿಸಿತ್ತು ರಣಕೇಳಿ ೪೨

ಎಸುವನೊಬ್ಬನೆ ಪಾರ್ಥನನಿತುವ
ಕುಸುರಿದರಿವರು ಗುರುಸುತಾದಿಗ
ಳೆಸುವರನಿಬರು ತರಿವನೊಬ್ಬನೆ ಅಮರಪತಿಸೂನು
ಎಸುವರಿವರರ್ಜುನನ ಮೈಯ್ಯಲಿ
ಮಸೆಯ ಕಾಣೆನು ಪಾರ್ಥನನಿಬರ
ವಿಶಿಖವನು ನೆರೆಗಡಿದು ಕೆತ್ತುವನನಿಬರೊಡಲುಗಳ ೪೩

ಕೋಲ ಕೋಳಾಹಳಕೆ ಸೈರಿಸ
ದಾಳ ನಾಯಕವಾಡಿ ಹರಿಗೆಯ
ಹೇಳಿದರು ಚಾಚಿದರು ಬಲುಬದ್ಧರವ ಬಂಡಿಗಳ
ಹೂಳಿ ಬೀಸಿದ ಗುಳದ ಕರಿಗಳ
ಹೇಳಿದರು ಬಲ ಮುರಿದಪಾಕೆಗೆ
ಮೇಲೆ ನಾವಿಹೆವೆಂದು ನಿಂದರು ಗುರುಸುತಾದಿಗಳು ೪೪

ಹರಿಬದಾಹವವೆಂಬರಾವೆಡೆ
ಹರೆದರೇ ರಣಗೇಡಿಗಳು ನುಡಿ
ಯುರಿಯ ಹೊರುವುದು ಛಾಯವತಿಶೀತಳ ಮಹಾದೇವ
ಅರಮನೆಯ ಕಾಲಾಳು ಕರಿ ರಥ
ತುರಗವಳಿದರೆ ತಮಗೆ ನಷ್ಟಿಯೆ
ಗರುವನೈ ಗುರುತನುಜನೆನುತೈದಿದನು ಕಲಿ ಪಾರ್ಥ ೪೫

ಒಗ್ಗಿ ಕವಿತಹ ತುರಗ ಸೇನೆಯ
ನಗ್ಗಡಲೊಳಿಕ್ಕಿದನು ಕರಿಗಳ
ಮೊಗ್ಗರವ ಮೆದೆಗೆಡಹಿದನು ಹುಡಿಮಾಡಿದನು ರಥವ
ಮುಗ್ಗಿ ಬೀಳುವ ಪಾಯದಳವನು
ನುಗ್ಗುನುಸಿ ಮಾಡಿದನು ರಕುತದ
ಸುಗ್ಗಿಯಾದುದು ಶಾಕಿನಿಯರಿಗೆ ಕಳನ ಚೌಕದಲಿ ೪೬

ಜೋಡನೊಡೆಹಾಯ್ದಂಬು ಧರಣಿಯೊ
ಳಾಡಿದವು ಗುಳ ಸರಿದ ಕರಿಗಳ
ತೋಡಿ ನೆಟ್ಟವು ಬದ್ದರಂಗಳ ಬಾದಣವ ಕೊರೆದು
ಈಡಿರಿದವರಿಸುಭಟರೊಡಲಿನ
ಜೋಡುಗಳ ಜರಿಯೊಡೆದು ತಳಪಟ
ಮಾಡಿದವು ಚತುರಂಗಬಲವನು ಪಾರ್ಥನಂಬುಗಳು ೪೭

ತಾರು ಥಟ್ಟಿಗೆ ಕೆಡೆದವಾನೆಗ
ಳಾರು ಸಾವಿರ ತುರಗದಳದಸು
ಸೂರೆ ಹೋದುದು ಸಮರದಲಿ ಹದಿನೆಂಟು ಸಾವಿರವು
ಕಾರಿದರು ಕರುಳನು ಪದಾತಿಗ
ಳಾರು ಲಕ್ಷವು ಮೊದಲ ಲಗ್ಗೆಗೆ
ಮೂರು ಸಾವಿರ ತೇರು ನೆಗ್ಗಿದವೊಂದು ನಿಮಿಷದಲಿ ೪೮

ಹೆಣನ ತುಳಿದೊತ್ತೊತ್ತೆಯಲಿ ಸಂ
ದಣಿಸಿ ಕವಿದುದು ಮತ್ತೆ ದಳ ಭಾ
ರಣೆಯ ಬಿಂಕವನೇನನೆಂಬೆನು ಬಲಿದ ಲಗ್ಗೆಯಲಿ
ಕೆಣಕಿದವು ಕರಿಘಟೆಗಳೊಂದೆಸೆ
ಯಣುಕಿದವು ಹಯರಥವದೊಂದೆಸೆ
ಕಣೆಗೆದರಿ ಕಾಲಾಳದೊಂದೆಸೆ ಮುಸುಕಿತರ್ಜುನನ ೪೯

ಸವೆದು ಸವೆಯದು ಪೂತು ಮರುಳು ಕೌ
ರವನ ಸೇನಾಜಲಧಿ ನಾಯಕ
ನಿವಹವನಿತುವ ನೂಕಿ ಸವೆಯರು ಗುರುಸುತಾದಿಗಳು
ಕವಿಯಲೀ ಬಲ ಮತ್ತೆ ಸಂದಣಿ
ತವಕಿಸಲಿ ತಾವನಿಬರುರೆ ಮಗು
ಳವಗಡಿಸಲಿ ವಿನೋದವೈಸಲೆಯೆನುತ ನರನೆಚ್ಚ ೫೦

ಅಗಲವಲಿ ದಿಗುವಲಯವೀಯಂ
ಬುಗಳನೀದುದೊ ಮೇಣು ಬಾಣದ
ಮುಗಿಲ ಮೂಲೆಯ ಕೊಯಿದರೋ ಜರುಹಿದರೊ ಶರನಿಧಿಯ
ಝುಗರಝುಗಿಸಿ ಹೊಳೆಹೊಳೆವ ಬಾಯ್ಧಾ
ರೆಗಳ ಬೆಳಗಿನ ದಾಳಿ ಧೀಂಕಿಡೆ
ಮೊಗೆದವರ್ಜುನನಂಬು ರಿಪುಚತುರಂಗ ಜೀವನವ ೫೧

ಮತ್ತೆ ಮುರಿದನು ಹತ್ತು ಸಾವಿರ
ಮತ್ತಗಜವನು ರಥಚಯವ ನು
ಗ್ಗೊತ್ತಿದನು ಹನ್ನೆರಡು ಸಾವಿರವನು ರಣಾಗ್ರದಲಿ
ಹೊತ್ತಿತಾತನ ವಿಕ್ರಮಾಗ್ನಿಗೆ
ಹತ್ತು ಕೋಟಿ ಪದಾತಿ ರಾವ್ತರು
ತೆತ್ತರಸುವನು ಲಕ್ಷ ಕೌರವರಾಯ ಸೇನೆಯಲಿ ೫೨

ತೀರಿತಡವಿಯ ಕಡಿತ ಗಿರಿಗಳ
ಹೋರಟೆಗೆ ಹೊಗಬೇಕು ಸೇನೆಗೆ
ಪಾರುಖಾಣೆಯ ಕೊಟ್ಟೆವಾಗಳೆ ಗುರುಸುತಾದಿಗಳ
ಭಾರಣೆಗೆ ಕೊಡಬೇಕು ಸಮಯುವ
ನಾರುಭಟೆಯಲಿ ಮಲೆವುದೈ ಕೈ
ವಾರವೇಕೀ ಕಾಯದಲಿ ಕಕ್ಕುಲಿತೆ ಬೇಡೆಂದ ೫೩

ಜೇನ ಹುಟ್ಟಿನ ಹುಳುವ ಬಡಿವ ಸ
ಗಾನತನ ತಾನೇನು ಚೋಣೆಯು
ಸೇನೆಗೋನೆಯ ಸವರಲಾಯಿತೆ ಶೌರ್ಯಸಿರಿ ನಿನಗೆ
ನಾನದಾರೆಂದರಿಯೆ ಫಡ ಗುರು
ಸೂನುವಲ್ಲಾ ವೈರಿತಿಮಿರಕೆ
ಭಾನು ಬಗೆಯೈಯೆನುತ ಹೊಕ್ಕನು ದ್ರೋಣನಂದನನು ೫೪

ಬಳಿಯಲೊಡಗವಿಯಿತ್ತು ಚಾತು
ರ್ಬಲ ಸಹಿತ ದ್ರೋಣಾದಿಗಳು ತೋ
ರಳವ ಹಿಡಿ ಹಿಡಿ ಧನುವ ಸುರಿ ಸುರಿ ಸರಳ ಸರಿವಳೆಯ
ಗಳಹದಿರು ಮೈದೋರು ದಾನವ
ಕುಲದಿಶಾಪಟ ಸಹಿತ ನೀನೆಸು
ಕಳೆಯದಿರು ಕಾಲವನೆನುತ ಕವಿದೆಚ್ಚರತಿರಥರು ೫೫

ಗುರುಸುತನ ಕೂರಂಬು ದ್ರೋಣನ
ಸರಳಸಾಗರ ಶಲ್ಯನಂಬಿನ
ಹೊರಳಿ ಶಕುನಿಯ ಬಾಣಪಂಜರ ಕೃಪನ ಶರಮೇಘ
ಕುರುಪತಿಯ ನಾರಾಚ ವರ ದು
ರ್ಧರುಷ ಸೈಂಧವ ಶಕುನಿ ಕೃತವ
ರ್ಮರ ಶರಾವಳಿ ಹೂಳಿದವು ದ್ಯಾವಾಮಹೀತಳವ ೫೬

ಉರಿಯ ರಾಜ್ಯವ ಸೂರೆಗೊಳಲೆನು
ತರಗು ಪರಿದವೊಲಾಯ್ತು ಮೇಘದ
ನೆರವಿ ಗಾಳಿಯ ಮನೆಗೆ ಬಿದ್ದಿನ ಬಂದ ತೆರನಾಯ್ತು
ಗಿರಿಯ ಮಕ್ಕಳು ನಗುತ ವಜ್ರದ
ಕರವ ಹೊಯ್ದಂತಾಯ್ತು ಪಾರ್ಥನ
ಸರಳ ಸೀಮೆಯು ಬೆರಸಿದವು ರಿಪುಸುಭಟರಂಬುಗಳು ೫೭

ಸಹಜಕೇತನು ಚಾಪಧರ ಗುರು
ವಹುದು ಗುರುಗಳ ಮಗನೆ ಗುರುವೆಮ
ಗಹುದು ನೋಳ್ಪಡೆ ಶಿವಶಿವಾ ಕಲಿ ಶಲ್ಯ ಮಾವನಲೆ
ಮಹಿಮರಿವರೆಮ್ಮೊಡನೆಯೋದಿದ
ರಹರು ನಾವಿನ್ನಾರ ಕಳೆವೆವು
ಸಹಸ ಲೇಸೆಂದೆಚ್ಚನವರವರಸ್ತ್ರ ರಥಧನುವ ೫೮

ಮತ್ತೆ ಹೊಸ ರಥ ನೂತನಾಸ್ತ್ರದ
ಲುತ್ತಮ ಪ್ರತ್ಯುಗ್ರ ಚಾಪದ
ಲೊತ್ತರಿಸಿ ಕವಿದುದು ಕಿರೀಟಿಯ ರಥವ ಮುರಿಯೆಸುತ
ಮತ್ತೆ ಕಡಿದನು ರಥವ ಚಾಪವ
ಮತ್ತೆ ಹೊಸ ಹೂಟೆಯೊಳು ಹೊಕ್ಕರು
ತೆತ್ತು ಸವೆಯರು ಶೌರ್ಯದಭಿಮಾನವನು ಪಟುಭಟರು ೫೯

ಸರಳ ಕವಿಸಿದರಿವರು ಮತ್ತದ
ಪರಿಹರಿಸಿದನು ಪಾರ್ಥನಾತನ
ಸರಳುಗಳ ಸಂವರಿಸಿ ಮುಸುಕಿದರರ್ಜುನನ ರಥವ
ತೆರಳಿಗಡಿದನು ಮತ್ತೆ ದ್ರೋಣನ
ಗುರುಸುತನ ಸೈಂಧವನ ಮಾದ್ರೇ
ಶ್ವರನ ಚಾಪವ ಕಡಿದು ಹೂಳಿದನೊಡಲೊಳಂಬುಗಳ ೬೦

ಘಾಯವಡೆದರು ಸುರಿವ ಸರಳಿಗೆ
ನಾಯಕರು ಮರಳಿದರು ಪೌರುಷ
ಮಾಯವಾಯಿತು ತನು ನಡುಗಿತಡಿಗಡಿಗೆ ಡೆಂಡಣಿಸಿ
ಕಾಯಗಟ್ಟಿತು ಭೀತಿ ಬಿರುದಿನ
ಬಾಯೆಣಿಕೆ ಬಯಲಾಯ್ತು ಜೀವದ
ಬೀಯಕಿವರಂಜಿದರು ನೆನೆದರು ಮನೆಯ ರಾಣಿಯರ ೬೧

ದಿಟ್ಟತನ ಪೊಳ್ಳಾಯ್ತು ಶೌರ್ಯದ
ಘಟ್ಟಿ ಕರಗಿತು ಸುಭಟಧರ್ಮದ
ಬಟ್ಟೆಯನು ಹೂಳಿದರು ಹಂಗಿಗರಾದರಿಹಪರಕೆ
ಬೆಟ್ಟವಾಯಿತು ಭಂಗ ಭರದಲಿ
ಬಿಟ್ಟು ಹೋಯಿತು ರಾಯದಳ ಜಗ
ಜಟ್ಟಿಗಳು ಭಗದತ್ತ ಸೈಂಧವ ಗುರುಸುತಾದಿಗಳು ೬೨

ಉಲಿವ ಭಟ್ಟರ ಬಾಯ ಹೊಯ್ ರಥ
ದೊಳಗೆ ಕೆಡಹಲಿ ಧ್ವಜದ ಕಂಭವ
ನುಲುಕದಂತಿರೆ ರಥವ ಹರಿಸಲಿ ಸೂತಕುನ್ನಿಗಳು
ತಲೆಮುಸುಕನಿಡಿ ಛತ್ರ ಚಮರವ
ನೆಲಕೆ ಬಿಸುಡಲಿ ಹೆಸರುಗೊಂಡರ
ನುಳುಹಲಾಗದು ಬೀಳಗುತ್ತುವದೆನುತ ತಿರುಗಿದರು ೬೩

ಒಟ್ಟಿದವು ಕೈದುಗಳು ಸತ್ತಿಗೆ
ಬೆಟ್ಟವಾದವು ಸಿಂಘಸೆಳೆಗಳು
ನಟ್ಟಡವಿ ಪವಡಿಸಿದ ತೆರನಾದುದು ರಣಾಗ್ರದಲಿ
ಥಟ್ಟು ಮುರಿದುದು ಕೊಡೆ ತೆರೆ ಸಾ
ಲಿಟ್ಟ ಸಾಗರದಂತೆ ರಾಯ ಘ
ರಟ್ಟ ಕಂಡನು ಕೌರವೇಶ್ವರ ಸಕಲ ಮೋಹರವ ೬೪

ಹೊರಳಿಯೊಡೆದು ಮಹಾಪ್ರಧಾನರು
ಮರಳಿದರಲಾ ಪೂತು ಮಝು ಧರ
ಧುರವ ಮಾಡಿದರೇಕೆ ಕರೆಕರೆ ಬಿರುದ ಬೆಸಗೊಂಬ
ಗುರುತನಯನೋ ಚಾಪವಿದ್ಯಾ
ಧರನೊ ಶಲ್ಯನೊ ಕೃಪನೊ ಶಕುನಿಯೊ
ವರಮಹಾರಥರಿದ್ದರೋಡುವರಲ್ಲ ದಿಟವೆಂದ ೬೫

ಹೊರೆದವನ ಕಾರ್ಯಾರ್ಥಲಾಭವ
ಸರಕುಮಾಡರು ಜಯ ವಧುವನೆ
ದ್ದರಗಿ ನೋಡರು ವಾರ್ತೆಗೆಯ್ಯರು ಮುಕ್ತಿವಧುವಿಂಗೆ
ಧರೆಯ ಪರಮಖ್ಯಾತಿ ಪೂಜೆಯ
ಸರಕು ಗಣಿಸರು ಶಿವಶಿವಾ ಸಂ
ಗರಕೆ ದ್ರೋಣಾದಿಗಳವ್ರೋಲು ವಿರಕ್ತರಾರೆಂದ ೬೬

ಆನೆಗಳು ಮರಳಿದವು ಸುಭಟ ನಿ
ಧಾನರೋಸರಿಸಿದರು ಘಡ ಸುರ
ಧೇನುಗಳಲಾ ಕರೆಯರೇ ಪರಬಲಕ್ಕೆ ವಾಂಛಿತವ
ಈ ನಪುಂಸಕರುಗಳ ನಂಬಿದ
ನಾನು ನೀತಿಜ್ಞನೆ ಮಹಾ ದೇ
ವೇನ ಹೇಳುವೆನೆನುತ ಭೀಷ್ಮನ ಹೊರೆಗೆ ನಡೆತಂದ ೬೭

## ಒಂಬತ್ತನೆಯ ಸಂಧಿ

ಸೂ. ವೀರ ಭಾಗೀರತಿಯ ತನಯನೊ
ಳಾ ರಿಪುವ್ರಜವಿಜಯ ಫಲುಗುಣ
ಹೋರಿದನು ಸರಿಸಮರದಲಿ ತ್ರೈಜಗವು ಕೊಂಡಾಡೆ

ಜೀಯ ಚಿತ್ತೈಸಿದರೆ ಸೇನಾ
ನಾಯಕರ ಮೋರೆಗಳ ಮುಸುಕುಗ
ಳಾಯುತವನೀ ಹೊತ್ತು ಮುನ್ನಿನ ಬಿರುದಿನುಬ್ಬಟೆಯ
ಕಾಯಿದಿರೆ ಧರ್ಮವನು ಜತರಪ
ರಾಯಣರ ಪರಿಣತೆಯಲಾದ ಪ
ಲಾಯನದ ಹೆಬ್ಬೆಳಸ ನೋಡೆನೆ ಭೀಷ್ಮನಿಂತೆಂದ ೧

ಅರಸ ಹೊಲ್ಲಹವೇನು ಪಾರ್ಥನ
ಸರಿಸದಲಿ ನಿಲುವೆದೆಯ ಬಲುಹು
ಳ್ಳರಸು ದೇವಾಸುರರೊಳರಿಯೆನು ಮನುಜರೇನಹರು
ತಿರುಗಬೇಕವಗಡಿಸಿದರೆ ಸಂ
ಗರವ ಹೊಗುವುದು ಸರಿದರಿದಿರುವ
ನರಿದು ಕಾದುವುದಿದರಲಾವುದು ಕೊರತೆ ಹೇಳೆಂದ ೨

ನುಡಿಯೆವಾವು ಸಮರ್ಥರೆಂದುದೆ
ಕಡು ನಿಧಾನವು ಸುಭಟರೋಟವೆ
ಕಡೆಗೆ ಪರವಹ ಧರ್ಮ ಪಾರ್ಥನು ಜಗದೊಳಗ್ಗಳನು
ನಡುಹೊಳೆಯ ಹರಿಗೋಲ ಮೂಲೆಯ
ಕಡಿದಿರಾವರೆ ನಮ್ಮ ಪುಣ್ಯದ
ಬಿಡುಗಡೆಯ ಕಾಲವು ಶಿವಾಯೆಂದರಸ ಬಿಸುಸುಯ್ದು ೩

ಖತಿಯ ಮಾಡಿತೆ ನಮ್ಮ ನುಡಿಯನು
ಚಿತಪರಾಯಣರೆಂದು ನಿನ್ನಯ
ಮತಿಗೆ ತೋರಿತು ಮಾಣಲದು ನೋಡಾದಡಾಹವವ
ಕ್ಷಿತಿಯ ಹೊರೆಕಾರರಿಗೆ ಸೌಖ್ಯ
ಸ್ಥಿತಿಯ ಮಾಡುವೆನಿನ್ನು ಕುರು ಭೂ
ಪತಿ ವಿರೋಧಿಯ ವಿಧಿಯನೀಗಳೆ ತೋರಿಸುವೆನೆಂದ ೪

ತರಿಸಿದನು ಹದಿನೆಂಟು ಸಾವಿರ
ಸರಳ ಹೊದೆಗಳ ಬಂಡಿಗಳ ಹ
ನ್ನೆರಡು ಸಾವಿರ ಧನುವನುರುತರದಖಿಳ ಕೈದುಗಳ
ಕರಸಿದನು ಸೈಂಧವನ ಶಲ್ಯನ
ಗುರುಸುತನ ಕೃತವರ್ಮ ಭಗದ
ತ್ತರ ಶಕುನಿ ದುಶ್ಯಾಸನ ದ್ರೋಣಾದಿ ನಾಯಕರ ೫

ಒತ್ತುಗೊಡುವರೆ ಹಗೆಗೆ ಹಜ್ಜೆಯ
ನಿತ್ತು ತೆಗೆವರೆ ಪಾರ್ಥ ಪರಬಲ
ಮೃತ್ಯುವೇ ಸಾಕಿನ್ನು ಹೋಗಲಿಯೆಂದು ಫಲವೇನು
ಮತ್ತೆ ಕೆಣಕುವುದರ್ಜುನನ ನ
ಮ್ಮತ್ತ ಬಿದದಿರೆ ವೈರಿಸೇನೆಯ
ಕಿತ್ತು ಬಿಸುಡುವೆ ಯಮಪುರಕೆ ಮೋಹರಿಸಿ ನೀವೆಂದ ೬

ವಿಗಡರನಿಬರು ನೆರೆದು ಪಾರ್ಥನ
ತೆಗೆದರತ್ತಲು ಭೀಷ್ಮನಿತ್ತಲು
ಹೊಗೆದನಂತ್ಯದ ರುದ್ರನಗ್ಗದ ಕಣ್ಣ ಶಿಖಿಯಂತೆ
ಬಿಗಿದ ಹೊದೆಗಳ ಹರಿದು ಬಿಲ್ಲಿಂ
ದುಗುಳಿಸಿದನಂಬುಗಳನಳವಿಗೆ
ತೆಗೆದು ಪಾಂಡವ ಬಲವ ಬೆಂಬತ್ತಿದನು ಖಾತಿಯಲಿ ೭

ಕೊಂಡುಬಹ ಬಲುನಾಯಕರ ಖತಿ
ಗೊಂಡು ದಡಿಯಲಿ ಹೊಯ್ಲು ಸೇನೆಯ
ಹಿಂಡೊಡೆಯದೋಜೆಯಲಿ ಹುರಿಯೇರಿಸಿ ಮಹೀಶ್ವರರ
ಗಂಡುಗಲಿಯಭಿಮನ್ಯು ಸಾತ್ಯಕಿ
ಚಂಡಬಲ ಹೈಡಿಂಬರನು ಸಮ
ದಂಡಿಯಲಿ ಮೋಹರಿಸಿ ಸಮರಕೆ ನಡೆದನಾ ಭೀಷ್ಮ ೮

ತಳಿತ ಸೇನಾಜಲಧಿ ಲಗ್ಗೆಯ
ಮೊಳಗಿನಲಿ ಮೊನೆದೋರಿ ಭೀಷ್ಮನ
ಹಳಚಿದರು ಹರಹಿನಲಿ ಕವಿದರು ಕೋಡಕೈಗಳಲಿ
ಎಲೆಲೆ ಪಾಂಡವ ಸೈನ್ಯ ಸಾಗರ
ಮಲೆತುದೋ ಬರಹೇಳು ಮಾರಿಯ
ಬಳಗವನು ಹೆಣದಿನಿಹಿಕಾರರ ಕರೆಯಿ ರಕ್ಕಸರ ೯

ಸೂಸಿದರು ಸರಳುಗಳನಗಲಕೆ
ಹಾಸಿ ಹಬ್ಬಿದವಶ್ವ ನಿಕರವ
ಕೀಸಿದವು ಕೀಲಿಸಿದವಾನೆಗಳುದರದೆಲುವಿನಲಿ
ಬೀಸಿ ಬಿಸುಟವು ಪಾಯ್ದಳವ ರಥ
ರಾಸಿಗಳ ಜರುಹಿದವು ಬಲ ವಾ
ರಾಸಿಯಲಿ ತಾಯ್ಮಳಲ ಮೊಗೆದವು ಭೀಷ್ಮನಂಬುಗಳು ೧೦

ಅಡಸಿ ತುಂಬಿತು ಗಗನ ತಲೆಗಳ
ಗಡಣದಲಿ ದೆಸೆಯೆಲ್ಲ ಬಾಣದ
ಕಡಿಯುಮಯವಾಯಿತ್ತು ಹೆಣಮಯವಾಯ್ತು ರಣಭೂಮಿ
ಕಡುಗಲಿಯ ಕೈ ಚಳಕದಂಬಿಂ
ಗೊಡಲ ತೆತ್ತುದು ವೈರಿಬಲ ಬಿಡೆ
ಜಡಿದುದಂತಕ ನಗರವದ್ಭುತವಾಯ್ತು ಸಂಗ್ರಾಮ ೧೧

ಹೊದೆಗೆಡೆದವಾನೆಗಳು ಥಟ್ಟಿಗೆ
ಕೆಡೆದವಗ್ಗದ ತುರಗದಳ ಮೈ
ಗಡಿತದಲಿ ಮುಂಕೊಂಡು ಹೊರಳಿತು ಕೂಡೆ ಪಾಯದಳ
ಮಡ ಮುರಿದು ನುಗ್ಗಾಯ್ತು ರಥ ಬೆಳು
ಗೊಡೆ ಪತಾಕಾದಂಡ ಚಮರಿಗ
ಳುಡಿದು ಬಿದ್ದವು ಕೇಣವಿಲ್ಲದೆ ತರಿದನರಿಬಲವ ೧೨

ಮುಂಡಿಸಿತು ನೊರೆರಕುತ ಕರುಳಿನ
ಜೊಂಡು ಮುಸಗಿತು ಕಡಿದ ಖಂಡದ
ದಿಂಡು ತಳಿತುದು ತೊಗಲ ಕೊಯ್ಲಿನ ಮುರಿದ ಮೂಳೆಗಳ
ಜೊಂಡೆ ನರವಿನ ಜುರಿತ ಮಿದುಳಿನ
ಹೊಂಡೆಯದ ತೊರಳಿಗಳ ಕೊರಳಿನ
ತುಂಡುಗಳ ಕಾಲಾಂತಕನ ಹೆಬ್ಬೆಳಸು ಹುಲುಸಾಯ್ತು ೧೩

ಆಗ ಹೂಡಿದನಾಗ ಬಾಣವ
ತೂಗಿ ಬರಸೆಳೆದೆಚ್ಚನಹಿತರ
ನಾಗ ತಾಗಿದವಂಬು ಬಲ್ಲವರಾರು ಕೈಲುಳಿಯ
ಬಾಗಿಹುದು ಬಲು ಬಿಲ್ಲು ಕಿವಿವರೆ
ಗಾಗಿ ರಿಪುಬಲ ನಿಮಿಷ ನಿಮಿಷಕೆ
ನೀಗಿಹುದು ನಿಟ್ಟುಸಿರನೆಲೆ ಭೂಪಾಲ ಕೇಳೆಂದ ೧೪

ಬೀಳುತಿರ್ದರು ಭಟರು ಮತ್ತೆ ಥ
ಡಾಳಿಸಿತು ತಲೆವಾರಿಗಳು ಹೆಣ
ಸಾಲನೆಡಹಿದರರುಣವಾರಿಯ ತೊರೆಯನೀಸಿದರು
ಆಳು ಹೊಕ್ಕುದು ದಂತಿಘಟೆಗಳು
ತೂಳಿದವು ಕಡುಹೆದ್ದು ತುರಗದ
ಮೇಲೆ ರಾವುತರಳವಿಗೊಟ್ಟುದು ತೇರ ಬಾಹೆಯಲಿ ೧೫

ಆಳು ಕುದುರೆಯು ಬೀಯವಾಡಿ ನೃ
ಪಾಲ ಮಾಡುವುದೇನು ದೊರೆಗಳು
ಕಾಳೆಗಕೆ ಮೈದೋರಬಾರದೆ ಭೀಮ ಫಲುಗುಣರು
ಚಾಳ ನೂಕಿಸಿ ಹೊತ್ತುಗಳೆವರು
ಹೇಳಿ ಫಲವೇನಿನ್ನು ರಣ ಹೀ
ಹಾಳಿ ತಪುಗಿಲ್ಲೆಂದು ಗಹಗಹಿಸಿದನು ಕಲಿಭೀಷ್ಮ ೧೬

ದಿವಿಜ ನಗರಿಯ ಸೂಳೆಗೇರಿಗೆ
ಕವಿವ ಮನವೇ ಮುಂದು ಹಜ್ಜೆಗೆ
ತವಕಿಸುವರಳುಕುವರೆ ಮೋಹ್ ಕೈತಪ್ಪ ಮಾಡಿಸೆನು
ಕವಿಯಿರೈ ಕಾಲಾಳು ರಾವುತ
ರವಗಡಿಸಿರೈ ಜೋದರೆಸಿರೈ
ನವ ಮಹಾರಥರಂಬು ಕರೆಯಿರೆನುತ್ತ ಕವಿದೆಚ್ಚ ೧೭

ಕಡಿದು ಬಿಸುಟನು ತುರಗ ದಳವನು
ಕೆಡಹಿದನು ಹೇರಾನೆಗಳ ತಡೆ
ಗಡಿದನೊಗ್ಗಿನ ರಥವನುರೆ ಕೊಚ್ಚಿದನು ಕಾಲಾಳ
ಹೊಡಕರಿಸಿ ಹೊದರೆದ್ದು ಮುಂದಕೆ
ನಡೆನಡೆದು ಕೈಮಾಡಿ ಕಾಯದ
ತೊಡಕನಲ್ಲದೆ ತೆಕ್ಕೆಗೆಟ್ಟಿತು ಭಟರು ನಾಕದಲಿ ೧೮

ಆಳು ಮುರಿದವು ಮೇಲೆ ಹೊಕ್ಕ ನೃ
ಪಾಲಕರು ಬೊಬ್ಬಿರಿದು ಭೀಷ್ಮನ
ಕೋಲ ಕೊಳ್ಳದೆ ಕೊಂಡು ಹರಿದರು ರಥದ ಹೊರೆಗಾಗಿ
ಆಳುತನದಂಗವಣೆಯೊಳ್ಳಿತು
ಮೇಳವೇ ಬಳಿಕೇನು ಪೃಥ್ವೀ
ಪಾಲರಲ್ಲಾ ಪೂತು ಮಝು ಎನುತೆಚ್ಚನಾ ಭೀಷ್ಮ ೧೯

ಅಂಗವಿಸಿ ಮರಿಹಂಲ್ಲೆ ಖುರದಲಿ
ಸಿಂಗವನು ಹೊಯ್ವಂತೆ ನೃಪರು
ತ್ತುಂಗ ಸಹಸಿಯ ಮೇಲೆ ಕೈಮಾಡಿದರು ಖಡ್ಗದಲಿ
ಅಂಗವಣೆಯನು ಹೊಗಳುತಾ ದಿವಿ
ಜಾಂಗನಾ ಕಾಮುಕರ ಮಾಡಿಯು
ಭಂಗ ಭೀಷ್ಮನು ಮೆರೆದನುನ್ನತ ಬಾಹುವಿಕ್ರಮವ ೨೦

ಧರಣಿಪತಿಗಳು ಹತ್ತು ಸಾವಿರ
ವುರುಳಿತಾ ದಿವಸದಲಿ ಹಿಂದಣ
ಕೊರತೆಯುಳಿಲೆಕ್ಕಕ್ಕೆ ಕೊಂದನು ಹತ್ತು ಸಾವಿರವ
ಮರಳಿ ಮೂಸಾವಿರವ ಮತ್ತಂ
ತೆರಡು ಸಾವಿರ ಮತ್ತೆ ಐಸಾ
ವಿರವ ಸವರಿದನಹಿತ ಬಲದಲಿ ಭೂಪ ಕೇಳೆಂದ ೨೧

ಭುವನ ನೆರೆ ಹೊಗೆವಂದು ಹೆಚ್ಚಿದ
ಶಿವನ ಖತಿ ಮೈದೋರಿತೆನೆ ರಿಪು
ನಿವಹದಲಿ ನೆಲೆಗೊಂಡುದೀತನ ಖಾತಿ ಕೊಪ್ಪರಿಸಿ
ಜವನ ಪುರಿಗಿಂಬಿಲ್ಲ ಕೊಂಡೊ
ಯ್ವವರು ಕೈಗುಂದಿದರು ಗಂಗಾ
ಭವನು ಕೊಲುವುದ ಬಿಡನಿದೇನೆನುತಿರ್ದುದಮರಗಣ ೨೨

ಬಲವನದ ಹೊದರೆಲ್ಲಿ ಸೇನಾ
ಜಲನಿಧಿಯ ಸುಳಿವೆಲ್ಲಿ ಸುಭಟರ
ಕಳಕಳದ ಕಡುಹೆಲ್ಲಿ ಖರೆಯುದ ರಥಿಕರವರೆಲ್ಲಿ
ಹೊಳೆದು ಮೊಳಗಿದನಲ್ಲಿ ಬಾಣದ
ಬಲೆಯ ಬೀಸಿದನಲ್ಲಿ ರಕುತದ
ಹೊಳೆಯ ಹರಿಸಿದನಲ್ಲಿ ಗಂಗಾಸೂನು ಖಾತಿಯಲಿ ೨೩

ಕಡುಹು ಹಿರಿದೋ ಕಾಲರುದ್ರನ
ಪಡೆಯಲಾಡುವನೀತನೋ ಮೈ
ಗೊಡದಿರೋ ಬಲಹೊರಳಿಯೊಡೆಯಲಿ ಹೋಗಿ ದೆಸೆದೆಸೆಗೆ
ತಪೆಯಲರಿದೋ ತಡವು ಮಾಡದಿ
ರೊಡಲ ಬದುಕಿಸಿಕೊಳ್ಳಿ ನೋಡುವ
ರೊಡೆಯರನು ಬಳಿಕೆನುತ ಮುರಿದುದು ಪಾಂಡುಸುತಸೇನೆ ೨೪

ಜರಿದುದಲ್ಲಿಯದಲ್ಲಿ ಭರದಲಿ
ತೆರಳಿತಲ್ಲಿಯದಲ್ಲಿ ಹಿಂದಕೆ
ಮರಳಿತಲ್ಲಿಯದಲ್ಲಿ ರಾಯರ ಕಣ್ಣ ಸನ್ನೆಯಲಿ
ತಿರುಗಿತಲ್ಲಿಯದಲ್ಲಿ ಭಟರೆದೆ
ಬಿರಿದುದಲ್ಲಿಯದಲ್ಲಿ ಭೀಷ್ಮನ
ಸರಳಗಾಳಿಗೆ ಬೆಸುಗೆಗೊಡೆದುದು ವೈರಿಬಲಮೇಘ ೨೫

ಬಲವ ನಿಲಿಸಲು ನೂಕದನಿಲಜ
ನಳುಕಿದನು ಸಹದೇವ ಹಿಂದಣೆ
ಗೊಲೆದ ಧೃಷ್ಟದ್ಯುಮ್ನ ನಕುಲರು ನೆನೆದರನುಚಿತವ
ಕಲಿ ಘಟೋತ್ಕಚನಧಮ ಧರ್ಮವ
ಬಳಸಿದನು ಪಾಂಚಾಲ ಮತ್ಸ್ಯರು
ಹಲರು ನಡೆದುದೆ ಮಾರ್ಗವೆಂದೇ ಮುರುಹಿದರು ಮುಖವ ೨೬

ಹದುಳವಿಡುವವರಿಲ್ಲ ಸೇನೆಯ
ಮೊದಲಿಗರು ಮುನ್ನೋಟವಿಕ್ಕಿತು
ಕದನದಲಿ ಕೈಸೂರೆಗೊಟ್ಟರು ಜಯವ ತಮತಮಗೆ
ಎದೆಯ ನೀವಿದನಹಿತ ನೃಪನ
ಭ್ಯುದಯವೆರಡೆಲೆಯಾಯ್ತು ಸಾಹಸಿ
ಸದೆದನೋ ಕಲಿ ಭೀಷ್ಮನೆಂದುದು ಮೇಲೆ ಸುರಕಟಕ ೨೭

ಸಕಲ ದೆಸೆಯಲಿ ಮುರಿದು ಬಹ ನಾ
ಯಕರ ಕಂಡನು ಪಾರ್ಥನಸುರಾಂ
ತಕಗೆ ತೋರಿದನಕಟ ನೋಡಿದಿರೆಮ್ಮವರ ವಿಧಿಯ
ನಕುಲನಿಲ್ಲಾ ಭೀಮನೋ ಸಾ
ತ್ಯಕಿಯೊ ಸೇನಾಪತಿಯೊ ಕಟಕಟ
ವಿಕಳರೋಡಿದರೋಡಲಿದಿರಿಗೆ ರಥವ ಹರಿಸೆಂದ ೨೮

ಮಾತು ಹಿಂಚಿತು ತೇರು ಸೇನಾ
ವ್ರಾತವನು ಹಿಂದಿಕ್ಕಿ ಗಂಗಾ
ಜಾತನಿದಿರಲಿ ನಿಂದುದೇನೆಂಬೆನು ಮಹಾದ್ಭುತವ
ಸೋತು ಚೆಲ್ಲಿದ ಸೇನೆ ಹರ್ಷದೊ
ಳಾತು ನಿಂದುದು ಮತ್ತೆ ಭಂಗದ
ಮಾತದೇತಕೆ ಕೇಳು ಜನಮೇಜಯ ಮಹೀಪಾಲ ೨೯

ಬಲವನಾಯಕವೇ ವೃಥಾ ಹುಲು
ದಳದೊಳಗೆ ನಿಮ್ಮಗ್ಗಳಿಕೆ ಕೈ
ಯಳವ ಮನಗಲಿತನದಳವ ಬಿಲುಗಾರತನದಳವ
ಬಲಿಯಿರೇ ನಮ್ಮೊಡನೆ ಮೆಚ್ಚಿಸಿ
ಬಳಿಕ ಹಡೆಯಿರಿ ಬಿರುದನೆನುತವೆ
ಫಲುಗುಣನು ಕೈಯಿಕ್ಕಿದನು ಗಂಗಾಕುಮಾರನಲಿ ೩೦

ನಾವು ವೃದ್ಧರು ಬಿರುದು ಗಿರುದಿನ
ಲಾವಣಿಗೆ ನಮಗೇಕೆ ಹೇಳೈ
ನೀವಲೈ ಜವ್ವನದ ಭಂಟರು ರಣದ ಧುರಭರಕೆ
ನೀವಿರಲು ನಿರ್ನಾಯಕವೆ ಸೇ
ನಾವಳಿ ಮಹಾದೇವ ಮೂದಲೆ
ಗಾವು ಲಕ್ಷ್ಯವೆ ಹೇಳು ಫಲುಗುಣ ಎಂದನಾ ಭೀಷ್ಮ ೩೧

ಕಟಕಿಯೇಕಿದು ಪರಶುರಾಮನ
ಪಟುತನಕೆ ಮದ್ದರೆದೆನೆಂಬೀ
ನಿಟಿಲನೇತ್ರನ ಭುಜಬಲಕೆ ಸಮಜೋಳಿ ಗಡ ನೀವು
ಕುಟಿಲ ಭಣಿತೆಯುನರಿಯೆನಿದರೊಳು
ಭಟರು ನೀವಹುದೆನ್ನ ಶರ ಸಂ
ಘಟನವನು ಚಿತ್ತಯಿಸಿಯೆಂದನು ಪಾರ್ಥ ನಸುನಗುತ ೩೨

ಅವರು ಪೂರ್ವರು ಪರಶುರಾಮ
ಪ್ರವರರನು ಮೆಚ್ಚಿಸಿದೆವೀಗಳಿ
ನವರು ಕಡುಜಾಣಾಯ್ಲರೆಂದು ಸುರೇಖರೆಂದಿಹರು
ಅವರ ಮೆಚ್ಚಿಸಬಹುದು ನೀವಾ
ಹವ ಸುವಿದ್ಯಾ ದುರ್ವಿದಗ್ಧರು
ನಿವಗೆ ನಾವಿದಿರಾಗಬಲ್ಲೆವೆಯೆಂದನಾ ಭೀಷ್ಮ ೩೩

ಬರಿಯ ಮಾತೋ ಚಾಪ ವಿದ್ಯದೊ
ಳರಿತವುಂಟೋ ಹೊತ್ತುಗಳೆಯದೆ
ಹೆರಿಸಿರೇ ನಾರಿಯನು ನಿಮ್ಮಯ ಬಾಣಗರ್ಭಿಣಿಯ
ಅರಿಯಬಹುದೆನಲಹುದಹುದು ಕೈ
ಮರೆಯದಿರು ಕೈಕೊಳ್ಳೆನುತ ಬೊ
ಬ್ಬಿರಿದು ಪಾರ್ಥನನದ್ದಿದನು ಬಾಣಾಂಬುರಾಶಿಯಲಿ ೩೪

ಒಳ್ಳಿತೈ ಕೈ ಚಳಕವಾವನ
ಲಿಲ್ಲ ಹರಹರ ಪರಶುರಾಮನ
ನಲ್ಲಿ ಮೆಚ್ಚಿಸಿದಂದವಿನಿತೋ ಮತ್ತೆ ಬೇರುಂಟೊ
ಒಳ್ಳೆಗರನೋಡಿಸಿದ ಸಹಸವ
ನಿಲ್ಲಿ ತೋರಲು ನೆನೆದಿರೇ ತ
ಪ್ಪಲ್ಲ ತಪ್ಪಲ್ಲೆನುತ ಕಣೆಗಳ ಕಡಿದನಾ ಪಾರ್ಥ ೩೫

ಖೋಡಿ ಮಾಡದಿರೆಲೆ ಕಿರೀಟ ವಿ-
ಭಾಡಿಸುವುದರಿದೇ ದೊಠಾರಿಸಿ
ಯಾಡುವುದು ದೊರೆಗುಚಿತವೇ ಗರುವಾಯಿಗಂಗವಿದೆ
ನೋಡು ನೋಡಾದರೆ ಕಪರ್ದಿಯ
ಕೂಡೆ ನೀ ಹೊಯಿದಾಡಿ ಬಿಲ್ಲ ಸ
ಘಾಡನಹೆ ದಿಟ ಕಾದುಕೊಳ್ಳೆನುತೆಚ್ಚನಾ ಭೀಷ್ಮ ೩೬

ಇದು ಹೊಸತು ಬಾಣಾಬ್ಧಿ ವೇಲೆಯ
ನೊದೆದು ಹಾಯ್ದುದೊ ಭುವನವಳಿವಂ
ದುದಯಿಸಿದ ಮಳೆಗಾಲವೋ ಮಾಮಾ ಶರಾವಳಿಯೊ
ಹೊದರಡಸಿ ಕಿಡಿಯೆದ್ದು ದೆಸೆಗಳ
ಹೊದಿಸಿದವು ಹೊಳೆದರ್ಜುನನ ಮು
ತ್ತಿದವು ಕೆತ್ತಿದವರಿಯ ಸೀಸಕ ಜೋಡು ಮೊಚ್ಚೆಯವ ೩೭

ಹನುಮ ಮುಸೆಗಂಡನು ಮುರಾಂತಕ
ಕನಲಿದನು ಕಡುನೊಂದು ಪಾರ್ಥನ
ತನುವಿನಲಿ ಹೆಬ್ಬಟ್ಟೆಯಾದುದು ಬಾಣಪಥಿಕರಿಗೆ
ಮೊನೆಯಲಗು ಮುಕ್ಕುರುಕೆ ರಥವನು
ತನಿಗೊಡಹಿ ಮುಗ್ಗಿದವು ತೇಜಿಗ
ಳನುವರಕೆ ಮುಖದಿರುಹಿದವು ಕಲಿ ಭೀಷ್ಮನುಪಟಳಕೆ ೩೮

ಬಸಿವ ರಕುತವ ಬಳಿದು ಖಾತಿಯ
ಮುಸಕದಲಿ ಕೈಮರೆದು ಮಿಗೆ ದ
ಳ್ಳಿಸುತ ಹೊಗರಿಡುತೌಡುಗಚ್ಚುತ ಹುಬ್ಬುಗಳ ಬಲಿದು
ಹೊಸ ಮಸೆಯ ಬಾಯ್ಧಾರೆಗಳ ಶರ
ವಿಸರವನು ತೊಡಚಿದನು ಭೀಷ್ಮನ
ಮುಸುಕಿದನು ಮಗುಳೆಚ್ಚು ಪುನರಪಿ ಕರೆದನಂಬುಗಳ ೩೯

ಮುತ್ತಿದವು ನರನಂಬು ಫಣಿಗಳು
ಹುತ್ತು ಹೊಗುವಂದದಲಿ ಕಂಡವ
ಕುತ್ತಿ ಹಾಯ್ದವು ಕೆತ್ತಿ ಹರಿದವು ಕಿಬ್ಬರಿಗಳೆಲುವ
ಮೆತ್ತಿದವು ಕೈ ಮೈಗಳಲಿ ತಲೆ
ಯೊತ್ತಿದವು ವಜ್ರಾಂಗಿಯಲಿ ಭಟ
ನತ್ತಲಿತ್ತಲೆನಲ್ಕೆ ಬಳಸಿದವಾ ನದೀಸುತನ ೪೦

ಜೋಡು ಹರಿದುದು ಹಳವಿಗೆ
ನೀಡಿ ಕೆಡೆದುದು ಸಾರಥಿಗಳಸು
ಹೂಡಿತಂತಕಪುರಿಗೆ ತೇಜಿಗಳಸುವ ಕಾರಿದವು
ಗೂಡುಗೊಂಡುದು ವಿಕ್ರಮಾನಳ
ನಾಡಬಾರದು ಭೀಷ್ಮನನು ಕೈ
ಗೂಡಿ ಕವಿಯಲಿ ದ್ರೋಣ ಗುರುಸುತರೆಂದುದಖಿಲ ಜನ ೪೧

ಸಾರು ಫಡ ಕೆಲಬಲದ ಹಂಗಿನ
ವೀರನೇ ಕಲಿ ಭೀಷ್ಮ ಮುನಿದರೆ
ಹೋರಟೆಗೆ ಬರಹೇಳು ಭರ್ಗನನಿವನ ಪಾಡೇನು
ಮೇರೆಗಿದ್ದೆನು ಮಕ್ಕಳೆಂದೇ
ವೈರಬಂಧವ ಬಿಟ್ಟೆನಕಟ ವಿ
ಕಾರಿತನವೇ ನಮ್ಮೊಡನೆಯೆನುತೆಚ್ಚನಾ ಭೀಷ್ಮ ೪೨

ಎಸಲು ಕಡಿದನು ಪಾರ್ಥನೀತನ
ವಿಶಿಖವನು ತರಿದವನು ಕಿಡಿ ದ
ಳ್ಳಿಸುವ ಧಾರೆಯ ಭೂರಿ ಬಾಣದ ಬಲೆಯ ಬೀಸಿದನು
ಕುಸುರಿದರಿದನು ಮತ್ತೆ ಜೋಡಿಸಿ
ನಿಶಿತ ಶರದಲಿ ಬಳಿಕಲವನಿಗೆ
ಹಸುಗೆ ಮಾಡಿದನಿತ್ತ ಸವೆದವು ಸರಳು ಸಮರದಲಿ ೪೩

ಉರಗ ಬಾಣವನಿವರು ಕರೆದರು
ಗರುಡ ಶರದಲಿ ಪಾರ್ಥ ತವಿಸಿದ
ನುರಿಯ ವಿಶಿಖವನಿವರು ನಂದಿಸಿದರು ಜಲಾಸ್ತ್ರದಲಿ
ಗಿರಿಶಿಲೀಮುಖಕಿವರು ವಜ್ರವ
ಹರಿಸಿದರು ತಿಮಿರಾಸ್ತ್ರವೆದ್ದರೆ
ತರಣಿ ಮಾರ್ಗಣದಿಂದ ತರಿದನು ಭೀಷ್ಮ ವಹಿಲದಲಿ ೪೪

ಆವ ವಿಧದಲಿ ಪಾರ್ಥನೆಸುವನ
ದಾವ ಬೇಗದಿ ಮುರಿವನೀತನ
ದಾವ ಚಾಪ ರಹಸ್ಯ ವಿದ್ಯೆಗಳೊಳಗೆ ಬಳಸಿದನೊ
ಆ ವಿಧದಲಾ ಪರಿಯಲಾ ಸಂ
ಭಾವನೆಯಲಾ ಉಳಿಯಲಾ ನಾ
ನಾ ವಿಧಾನದಲೊದಗಿ ಸರಿ ಮಿಗಿಲೆನಿಸಿದನು ಭೀಷ್ಮ ೪೫

ಎರಡು ಶರದಲಿ ನರನು ಭೀಷ್ಮನ
ಕರದ ಕಾರ್ಮುಕ ದಂಡವನು ಕ
ತ್ತರಿಸಿದನು ಕೈಯೊಡನೆ ಕೊಂಡನು ಭೀಷ್ಮ ಹೊಸ ಧನುವ
ಸರಳ ಸೂಟಿಯು ತೋರಿಸಿದಡ
ಬ್ಬರಿಸಿ ಫಲುಗುಣನೈದು ಬಾಣದ
ಲರಿ ಭಟನ ಚಾಪವನು ಕಡಿ ಮೂರಾಗಿ ಖಂಡಿಸಿದ ೪೬

ಮತ್ತೆ ಹೊಸ ಚಾಪದಲಿ ಭೀಷ್ಮನು
ಮಿತ್ತು ಖತಿಗೊಂಡಂತೆ ಶರದಲಿ
ಕೆತ್ತನಾಕಾಶವನು ಕಡಿದನು ಪಾರ್ಥ ನಿಮಿಷದಲಿ
ಮುತ್ತಯನ ಕರತಳದ ಧನುವನು
ಕತ್ತರಿಸಿದನು ಹಿಡಿಯಲೀಯದೆ
ಹತ್ತು ಸಾವಿರ ಬಿಲ್ಲು ಸವೆದವು ಕುರುಪಿತಾಮಹನ ೪೭

ಉಲಿಯೆ ಕಿರುಘಂಟೆಗಳು ಹೊಳ ಹೊಳ
ಹೊಳೆವ ಶಕ್ತಿಯ ತುಡುಕಿ ಭೀಷ್ಮನು
ಫಲುಗುಣನನಿಡೆ ಕಡಿದು ಬಿಸುಟನು ನೂರು ಬಾಣದಲಿ
ಸೆಳೆದು ಫಲುಗುಣ ತಿರುಹಿ ಭೀಷ್ಮನ
ತಲೆಯ ಲಕ್ಷಿಸಿ ಹೊನ್ನ ಘಂಟೆಗ
ಳುಲಿಯೆ ಬಿಟ್ಟೇರಿಂದಲಿಡೆ ಖಂಡಿಸಿದನಾ ಭೀಷ್ಮ ೪೮

ಆವ ಚಾಪವ ತುಡುಕಿ ಕೆನ್ನೆಗೆ
ತೀವಿ ತೆಗೆಯದ ಮುನ್ನ ಫಲುಗುಣ
ನೋವದೆಸುವನು ಕಡಿದು ಬಿಸುಡುವನಿವರ ಬಿಲ್ಲುಗಳ

ಆವ ದಿವ್ಯಾಸ್ತ್ರವನು ಕುಂತಿಯ
ಮಾವ ತೊಡುವನು ತೊಡದ ಮುನ್ನ ಶ
ರಾವಳಿಯ ಮುಂಕೊಂಡು ಖಂಡಿಸಿ ಪಾರ್ಥನೆಸುತಿರ್ದ ೪೯

ಮೇಲೆ ಹೇಳಿಕೆಯಾಯ್ತು ಕೌರವ
ರಾಳಿನಲಿ ದುಶ್ಶಾಸನಂಗೆ ಕ
ರಾಳ ಭೂರಿಶ್ರವ ಜಯದ್ರಥ ಗುರು ಕೃಪಾದ್ಯರಿಗೆ
ಕೋಲ ಹೊದೆಗಳ ಬಂಡಿಯಲಿ ನಿ
ಸ್ಸಾಳ ಸೂಳಿನ ಲಗ್ಗೆಯಲಿ ಹೇ
ರಾಳದೊಡ್ಡವಣೆಯಲಿ ಪಡಿಬಲ ಕವಿದುದರವಣಿಸಿ ೫೦

ನರನ ಬೆಂಬಲವಾಗಿ ಪಾಂಚಾ
ಲರನು ಮತ್ಸ್ಯನ ಭೀಮಸೇನನ
ವರ ನಕುಲ ಸಹದೇವ ಧೃಷ್ಟದ್ಯುಮ್ನ ಸಾತ ಕಿಯ
ಅರಸನಟ್ಟಿದನಿತ್ತಲಂಬಿನ
ತಿರುಹುವೆರಳಿನ ಮೊರೆವ ಬಿಲ್ಲಿನ
ವರ ರಥದ ದುವ್ವಾಳಿ ಮೆರೆಯೆ ಶಿಖಂಡಿ ನಡೆತಂದ ೫೧

## ಹತ್ತನೆಯ ಸಂಧಿ

ಸೂ. ಕುಲಕಮಲ ಖರಕಿರಣ ಪಾಂಡವ
ಬಲಕೆ ಶರಣಾಗತ ಜಲಧಿ ವರ
ನಿಲಯವೆನೆ ರಂಜಿಸಿತು ಗಂಗಾಸುತನ ಶರಶಯನ

ಕಂಡನರ್ಜುನನೌಕಿ ಕವಿವ ಶಿ
ಖಂಡಿಯನು ಮರುಘ ಪೂತು ಪಾಯಕು
ಗಂಡುಗಲಿಯಹೆ ಚಾಗು ತೊಟ್ಟೆಸು ಭೀಷ್ಮನವಯವವ
ಕೊಂಡು ನಡೆ ನೀನಂಜದಿರು ಕೈ
ಕೊಂಡು ನಿಲುವೆನೆನುತ್ತ ಫಲುಗುಣ
ಮುಂಡಿಸಿದನಾಲಿದನು ಸೆಳೆದನು ಬೋಳೆಯಂಬುಗಳ ೧

ಒದರಿ ಜೇವಡೆಗೈದು ಬಾಣವ
ಕೆದರಿದನು ಘಟ್ಟಿಸಿ ಚಾಪವ
ನೊದೆದು ಹಾಯ್ದವು ಕೋದವಂಬುಗಳರಿಯ ನೆತ್ತಿಯಲಿ
ಇದಿರೊಳುಲಿದು ಶಿಖಂಡಿ ಶರ ಸಂ
ಘದಲಿ ಹೂಳಿದನಾಗ ಭೀಷ್ಮನ
ಹೃದಯದಲಿ ವೈರಾಗ್ಯ ಮನೆಗಟ್ಟಿತ್ತು ನಿಮಿಷದಲಿ ೨

ಎಲೆ ಮಹಾದೇವೀ ನಪುಂಸಕ
ನಲಿ ನಿರಂತರವೆಮಗೆ ಸಮರವೆ
ಗೆಲವಿದೊಳ್ಳಿತೆ ಸುಡು ಶಿಖಂಡಿಯ ಕೂಡೆ ಬಿಲುವಿಡಿದು
ಅಳುಕನೆಚ್ಚನಲಾ ದುರಾತ್ಮನ
ನಿಲವ ತೆಗೆ ತೆಗೆಯೆನುತ ಚಾಪವ
ನಿಳುಹಿದನು ರಥದೊಳಗೆ ಗಂಗಾಸೂನು ವಹಿಲದಲಿ ೩

ನರನ ಸರಳಿಗೆ ಮೈಯ ಕೊಟ್ಟರೆ
ಮುರಿದು ರಥದಲಿ ನಿಂದು ನಿಜ ಮೋ
ಹರವ ನೋಡುತ ಶಲ್ಯ ಗುರು ಕೃಪ ಕೌರವಾನುಜರ

ಕರೆದು ನುಡಿದನು ಪಾರ್ಥನಂಬಿನ
ಹೊರಳಿ ಹೊಳ್ಳಿಸುತಿದೆ ಮದಂತಃ
ಕರಣ ಕುಂದಿತು ಕಾಯಲಾದರೆ ಬನ್ನಿ ನೀವೆಂದ ೪

ಇವು ಶಿಖಂಡಿಯ ಬಾಣವೇ ವಾ
ಸವನ ಮಗನಂಬುಗಳು ವಿಲಯದ
ಶಿವನ ಶೂಲದ ಗಾಯಕಿವು ಮಿಗಿಲೇನನುಸುರುವೆನು
ಇವನು ಸೈರಿಸಲಾರೆನಿಂದ್ರನ
ಪವಿಯ ಹೊಯ್ಲನು ಹೊರುವೆನಂತ್ಯದ
ಜವನ ದಂಡವ ಹತಿಗೆ ಹೆದರೆನು ಕೇಳಿ ನೀವೆಂದ ೫

ಪರಶುರಾಮನ ಕೊಡಲಿ ಕಡಿತವ
ಧರಿಸಲಾಪೆನು ವಿಲಯ ಭೈರವ
ನಿರಿದಡಂಜೆನು ಸಿಡಿಲು ಹೊಡೆದರೆ ರೋಮ ಕಂಪಿಸದು
ಹರನ ಪಾಶುಪತಾಸ್ತ್ರ ಬಾದಣ
ಗೊರೆದರೆಯು ಲೆಕ್ಕಿಸೆನು ಪಾರ್ಥನ
ಸರಳ ಚೂಣಿಗೆ ಸಿಲುಕಿದೆನು ಪರಿಹರಿಸಿ ನೀವೆಂದ ೬

ಹರಿಯ ಕೌಮೋದಕಿಯ ಹೊಯ್ಲನು
ಬೆರಳಲಾನುವೆನಖಿಲ ಕುಲಗಿರಿ
ಜರಿದು ಬೀಳುವಡಾನಲಾಪೆನು ನಖದ ಕೊನೆಗಳಲಿ
ಭರದಲಾದಿ ವರಾಹ ದಾಡೆಯ
ಲಿರಿದಡೆಯು ನರಸಿಂಹ ನಖದಲಿ
ಕೆರೆದಡೆಯು ಸೈರಿಸುವೆನಂಜುವೆನರ್ಜುನನ ಶರಕೆ ೭

ಒಡಲನೊಟ್ಟತಗೊಂಡವಂಬಿನ
ಕುಡಿಗೆ ನೆರೆಯದು ರಕ್ತಜಲ ಬಳಿ
ವಿಡಿದು ಕವಿವಂಬುಗಳು ಬಂಬಲ್ಗರುಳ ಸೇದಿದವು
ಉಡಿವವೆಲು ಬಾಣಂಗಳೆಲುವಾ
ಗಡಸಿದುವು ತನಿರಕುತ ಮಾಂಸವ
ನುಡುಗಿದವು ಶರವಿವು ಶಿಖಂಡಿಯ ಬಾಣವಲ್ಲೆಂದ ೮

ಚೇಳ ಬೆನ್ನಿನೊಳೊಡೆದು ಮೂಡುವ
ಬಾಲ ವೃಶ್ಚಿಕದಂತೆ ಮಸೆದಿಹ
ಬೋಳೆಯಂಬುಗಳೊಡೆದು ಮೊನೆದೋರಿದವು ಬೆನ್ನಿನೊಳು
ಕೋಲು ಪಾರ್ಥನವಿವು ಶಿಖಂಡಿಯ
ಕೋಲುಗಳು ತಾನಲ್ಲ ನಿಂದುದು
ಕಾಳಗವು ನಮಗೆನುತ ಮೆಲ್ಲನೆ ಮಲಗಿದನು ಭೀಷ್ಮ ೯

ವೀರಭಟ ಭಾಳಾಕ್ಷ ಭೀಷ್ಮನು
ಸಾರಿದನು ಧಾರುಣಿಯನಕಟಾ
ಕೌರವನ ಸಿರಿ ಸೂರೆಯೋದುದೆ ಹಗೆಗೆ ಗೆಲವಾಯ್ತೆ
ಆರನಾವಂಗದಲಿ ಬರಿಸದು
ಘೋರವಿಧಿ ಶಿವಶಿವ ಎನುತ್ತಾ
ಸಾರಥಿಯು ಕಡುಖೇದದಲಿ ತುಂಬಿದನು ಕಂಬನಿಯ ೧೦

ಹೂಳಿ ಹೋಯಿತು ಬಾಣದಲಿ ಮೈ
ತೋಳು ತೊಡೆ ಜೊಂಡೆದ್ದು ರಕುತದ
ಸಾಲುಗೊಳಚೆಯ ಕರುಳ ಕುಸುರಿಯಂ ಬಸಿವ ನೆಣವಸೆಯ
ಮೂಳೆಯೊಟ್ಟಿಲ ನೆಲನ ಮುಟ್ಟದ
ಜಾಳಿಗೆಯ ಹೊಗರೊಗುವ ಕೆಂಗರಿ
ಗೋಲ ಮಂಚದ ಮೇಲೆ ರಣದಲಿ ಭೀಷ್ಮ ಪವಡಿಸಿದ ೧೧

ಒರಲಿ ಕೆಡೆದರು ಹಡಪಿಗರು ಸೀ
ಗುರಿಯವರು ಸತ್ತಿಗೆಯವರು ತ
ನ್ನರಮನೆಯ ವಿಶ್ವಾಸಿಗಳು ಬಿಲುಸರಳ ನೀಡುವರು
ಗುರುವಲಾ ಮುತ್ತಯ್ಯ ನಮ್ಮನು
ಹೊರೆದ ತಂದೆಗೆ ತಪ್ಪಿದರು ಕಡು
ನರಕಿಗಳು ಪಾಂಡವರು ಸುಡುಸುಡೆನುತ್ತ ಹೊರಳಿದರು ೧೨

ಬೆದರು ತವನಿಧಿಯಾಯ್ತು ಪಟು ಭಟ
ರೆದೆಗಳಿಬ್ಬಗಿಯಾಯ್ತು ವೀರಾ
ಭ್ಯುದಯ ಕೈಸೆರೆಯೋಯ್ತು ಸುಕ್ಕಿತು ಮನದ ಸುಮ್ಮಾನ
ಹೊದರೊಡೆದು ಕುರುಸೇನೆ ತೆಗೆದೋ
ಡಿದುದು ಭಯಜಲಧಿಯಲಿ ತೇಕಾ
ಡಿದರು ಕೌರವ ಜನಪರೀ ಭೀಷ್ಮಾವಸಾನದಲಿ ೧೩

ಭೀತಿ ಬೀತುದು ಹರುಷವಲ್ಲರಿ
ಹೂತುದವರಿಗೆ ವಿಜಯ ಕಾಮಿನಿ
ದೂತಿಯರ ಕಳುಹಿದನು ತನಿ ಹೊಗರೇರಿತುತ್ಸಾಹ
ಸೋತುದಾಹವ ಚಿಂತೆ ಜರಿದುದು
ಕಾತರತೆ ನುಡಿಗೆಡೆಗುಡದೆ ಭಾ
ವಾತಿಶಯವೊಂದಾಯ್ತು ಪಾಂಡವ ಬಲದ ಸುಭಟರಿಗೆ ೧೪

ಮಲಗಿದನು ಕಲಿಭೀಷ್ಮನೆನೆ ತ
ಲ್ಲಳಿಸಿದನು ಕುರು ರಾಯಸುದರದೊ
ಳಿಳಿದುದಾಯಧಪೆಂಬ ತೆರವಲಿ ತಳ್ಳುವಾರಿದನು
ಬಲಿದುಸುರ ಬಿಸುಸುಯಿಲ ಹಬ್ಬಿದ
ಕಳಕಳದ ಕಂಬನಿಯ ಕಿಬ್ಬೊನ
ಲಿಳಿವ ಕದಪಿನ ಹೊತ್ತ ದುಗುಡದ ಮುಖದೊಳೈತಂದ ೧೫

ಎಡೆ ಮುರಿದುದೈಶ್ವರ್ಯವಿನ್ನೇ
ನೊಡೆಯ ಭಿತ್ತಿಯ ಚಿತ್ರವಾದನು
ಕಡೆಗೆ ಬಂದುದೆ ಕೌರವಾನ್ವಯ ಶಿವಶಿವಾ ಎನುತ
ಹಿಡಿದ ದುಗುಡದ ಕವಿದ ಮುಸುಕಿನ
ಗಡಣದಲಿ ಗುರು ಕೃಪ ಜಯದ್ರಥ
ರೊಡನೊಡನೆ ಬರುತಿರ್ದುದಖಿಲ ಮಹೀಶ ಪರಿವಾರ ೧೬

ಕುದುರೆ ಕಂಬನಿಯಿಕ್ಕಿದವು ಮೈ
ಬಿದಿರಿದವು ವಂತಿಗಳು ಕಾಲಾ
ಳೊದರಿ ಕೆಡೆದವು ಕುಂದಿದವು ಕೈಮನದ ಕಡುಹುಗಳು
ಬೆದರಿ ಬಂದಿಗೆ ಸಿಲುಕಿತವನಿಪ
ನವಟು ವಿಕ್ರಮವಹ್ನಿ ತಂಪೇ
ರಿದುದು ಕಡುದುಮ್ಮಾನ ಕೇಣಿಯ ಹಿಡಿದುದುಭಯಬಲ ೧೭

ಬಂದು ಭೀಷ್ಮನ ಚರಣ ಸೀಮೆಯ
ಲಂದು ಕಾಯವ ಕೆಡಹಿ ವಿಗತಾ
ನಂದ ಭೂಪತಿ ಹೊರಳಿದನು ಹೇರಾಳ ಶೋಕದಲಿ
ಒಂದು ಮಗ್ಗುಲ ಕೆಲದೊಳಿವರೈ
ತಂದು ನಂದರು ಗುರು ಕೃಪಾದಿಗ
ಳೊಂದು ಮಗ್ಗುಲ ಸಾರಿ ನಿಂದರು ಕೃಷ್ಣ ಪಾಂಡವರು ೧೮

ಕವಿದ ಮುಸುಕಿನ ಕಂದಿದಾನನ
ದವನಿಪತಿ ಯಮಸೂನು ಗಂಗಾ
ಭವನ ಮಗ್ಗುಲ ಸಾರಿದನು ಕೈಚಾಚಿ ಕದಪಿನಲಿ
ಪವನಸುತ ಸಹದೇವ ಸಾತ್ಯಕಿ
ದಿವಿಜಪತಿಸುತರಾದಿ ಯಾದವ
ರವಿರಳದ ಶೋಕಾಗ್ನಿ ತಪ್ತರು ಪಂತಿಗಟ್ಟಿದರು ೧೯

ಏನ ನೆನೆದಾವುದನೊಡರ್ಚಿದೆ
ನೇನ ಹೇಳುವೆನೆನ್ನ ಪುಣ್ಯದ
ಹಾನಿಯನು ಕೈತಪ್ಪ ನೆನೆದೆನು ನಿಮ್ಮ ಸಿರಿಪದಕೆ
ನಾನದಾವುದು ಧರ್ಮತತ್ವ ನಿ
ಧಾನವೆಂದರಿಯದೆ ಕೃತಾಂತಂ
ಗಾನು ಹಂಗಿಗನಾದೆನೆಂದೊರಲಿದನು ಯಮಸೂನು ೨೦

ಖೇದವೇಕೆಲೆ ಮಗನೆ ನಿನ್ನೋ
ಪಾದಿಯಲಿ ಸುಚರಿತ್ರನಾವನು
ಮೇದಿನಿಯೊಳಾ ಮಾತು ಸಾಕೈ ಕ್ಷತ್ರಧರ್ಮವನು
ಆದರಿಸುವುದೆ ಧರ್ಮ ನಿನಗಪ
ವಾದ ಪಾತಕವಿಲ್ಲ ಸುಕೃತ
ಕ್ಕೀ ದಯಾಂಬುಧಿ ಕೃಷ್ಣ ಹೊಣೆ ನಿನಗಂಜಲೇಕೆಂದ ೨೧

ಮಗನೆ ಕೇಳ್ಳೈ ಪಾರ್ಥ ಕೂರಂ
ಬುಗಳ ಹಾಸಿಕೆ ಚೆಂದವಾಯಿತು
ಹೊಗರಲಗ ತಲೆಗಿಂಬ ರಚಿಸೆನೆ ಪಾರ್ಥ ಕೈಕೊಂಡು
ಬಿಗಿದ ಬಿಲುಗೊಂಡೆಮ್ಸು ಮಂಡಿಸಿ
ಹೊಗರ ಕವಲಂಬೈದನೆಚ್ಚನು
ನೆಗಹಿದನು ಮಸ್ತಕವನಾ ಗಂಗಾ ಕುಮಾರಕನ ೨೨

ಹೊಳೆವ ಕಣೆಗಳ ಮಂಚ ತಲೆಗಿಂ
ಬಳವಡಿಕೆಯಲಿ ಭೀಷ್ಮ ಸುಖದಲಿ
ಮಲಗಿದನು ಬಹಿರಂಗ ಭುವನವ್ಯಾಪ್ತಿಗಳ ಮರೆದು
ನಳಿನನಾಭನ ದಿವ್ಯರೂಪನು
ಬಲಿದು ಮನದಲಿ ಹಿಡಿದು ನೋವಿನ
ಕಳಕಳಕೆ ಧೃತಿಗೆಡದೆ ಮೆರೆದನು ಬಾಣಶಯನದಲಿ ೨೩

ಒಡಲ ಜಡಿದವು ರೋಮ ರೋಮದೊ
ಳಡಸಿದಂಬುಗಳಂಗ ವೇದನೆ
ತೊಡಕಿತುಬ್ಬರಿಸಿದುದು ಥಗೆ ಗೋನಾಳಿ ನೀರ್ದಗೆಯೆ
ನುಡಿಯಲಾರೆನು ಮಕ್ಕಳಿರ ನೀ
ರಡಸಿದೆನು ಹಿರಿದಾಗಿಯೆನೆ ನಡ
ನಡುಗಿ ದುರ್ಯೋಧನನು ದೂತರ ಕರೆದು ನೇಮಿಸಿದ ೨೪

ತರಿಸಿದನು ಹಿಮರುಚಿಯ ಹಿಂಡಿದ
ಪರಮ ಶೀತೋದಕವೊ ತಾನೆನೆ
ಸುರಭಿ ಪರಿಮಳ ಪಾನವನು ಪರಿಪರಿಯ ಕುಡಿನೀರ
ಸರಸ ಬಹುವಿಧ ಭಕ್ಷ್ಯ ಭೋಜ್ಯವ
ನೆರಹಿದನು ಕುಡಿನೀರ ಗಿಂಡಿಯ
ನರಸ ನೀಡಲು ಕಂಡು ನಕ್ಕನು ಭೀಷ್ಮನಿಂತೆಂದ ೨೫

ವಿರ ನೋವಿನೊಳಾದ ತೃಷ್ಣೆಯ
ನಾರಿಸುವರಿವರಳವೆ ಸಾಕಿವ
ತೋರದಿರು ತೆಗೆ ತೊಲಗು ಮೂಢರ ಪರಮಗುರು ನೀನು
ಆರಿತೈ ಗೋನಾಳಿ ಫಲುಗುಣ
ತೋರು ನಿನ್ನರಿತವನು ಸಲಿಲವ
ಬೀರು ಬೇಗದಿನೆನಲು ಬಿಲುಗೊಂಡೆದ್ದನಾ ಪಾರ್ಥ ೨೬

ಸಲಿಲ ಬಾಣದಲಮಲ ಗಂಗಾ
ಜಲವ ತೆಗೆದನು ತಪ್ತ ಲೋಹವ
ಜಲದವೊಲು ತನಿಹೊಳೆವ ಸಲಿಲದ ಬಹಳ ಧಾರೆಗಳ
ಇಳುಹಿದನು ಸರಳಿಂದ ವದನದ
ಬಳಿಗೆ ಬಿಡೆ ಬಹಳಾರ್ತ ಭೀಷ್ಮನು
ಗೆಲಿದನಂತಸ್ತಾಪವನು ನರನಾಥ ಕೇಳೆಂದ ೨೭

ಸಾಕು ಸಾಕೈ ತಂದೆ ನನ್ನನು
ಸಾಕಿಕೊಂಡೈ ಪಾರ್ಥ ಘನ ತೃ
ಷ್ಣಾಕುಲತೆ ಬೀಳ್ಕೊಂಡುದತಿಶಯ ತೃಪ್ತಿ ನನಗಾಯ್ತು
ಸಾಕೆನುತ ಫಲುಗುಣನ ಪರಮ ವಿ
ವೇಕವನು ಪತಿಕರಿಸಿ ನೆರೆ ಚಿಂ
ತಾಕುಳನ ಮಾಡಿದನು ಕೌರವ ರಾಯನನು ಭೀಷ್ಮ ೨೮

ತಂದೆ ಕಂಡ್ಯೆ ಕೌರವೇಶ ಪು
ರಂದರಾತ್ಮಜನತಿ ಬಳವ ನೀ
ನಿಂದೆ ಕಾಣಲುಬೇಹುದೈ ಹಲವಂಗದಲಿ ನರನ
ಹಿಂದೆ ಬಲ್ಲರು ದ್ರೋಣ ಕೃಪ ಗುರು
ನಂದನಾದಿಗಳೆಲ್ಲ ಕೇಳೈ
ಮಂದಮತಿತನ ಬೇಡವಿನ್ನು ಕೃಪಾಳುವಾಗೆಂದ ೨೯

ಅಳಿದರೊಡಹುಟ್ಟಿದರು ಹಲಬರು
ನೆಲನ ರಾಯರು ಸವೆದರತಿ ಬಲ
ರಳುಕುವರು ನರನೆಂದಡೀ ದ್ರೋಣಾದಿ ನಾಯಕರು
ಅಲಗಿನಂಬಿನ ಹಕ್ಕೆ ನಮಗಾ
ಯ್ತೊಳಜಗಳ ಸಾಕಿನ್ನು ಸೋದರ
ರೊಳಗೆ ಸಂಪ್ರತಿಯಾಗಿ ಬದುಕುವದೆಂದನಾ ಭೀಷ್ಮ ೩೦

ನಿನಗರೋಚಕವೆಮ್ಮ ಮಾತುಗ
ಗಳನಿಬರಿಗೆ ಸೊಗಸುವುದು ಪಾಂಡವ
ರನುಮತವು ಬೇರಿಲ್ಲ ನಮ್ಮನುಮತದೊಳಡಗಿಹರು
ತನುಜ ಕದನದ ಕಷ್ಟತನ ಬೇ
ಡೆನಗಿದುಪಕಾರವು ವೃಥಾ ಕುರು
ವನಕೆ ವಹ್ನಿಯ ಬಿತ್ತಬೇಡಕಟೆಂದನಾ ಭೀಷ್ಮ ೩೧

ಮಾತು ಕಿವಿಯೊಗದಾನು ಸಮರಂ
ಗಾತುರನು ಛಲದಂಕನೆಂಬೀ
ಖ್ಯಾತಿಯನು ಮೆರೆದಾತನಲ್ಲದೆ ರಾಜ್ಯ ಪದವಿಯಲಿ
ಸೋತ ಮನದವನಲ್ಲ ಭುವನ
ಖ್ಯಾತನೆನಿಪೊಂದಾಶೆಯನು ದಿಟ
ನೀತಿಗಳೆದರೆ ಬಳಿಕ ನಿಮ್ಮಯ ಮೊಮ್ಮನಲ್ಲೆಂದ ೩೨

ಮೊದಲಲೆಂದಿರಿ ನೀವು ಬಳಿಕೀ
ಯದುಕುಲಾಧಿಪ ಕೃಷ್ಣ ನೆರೆ ಹೇ
ಳಿದನು ಋಷಿಗಳು ಬೊಪ್ಪನವರೀ ಹದನ ಸಾರಿದರು
ವಿದುರ ಹೇಳಿದನೆಲ್ಲರಿಗೆ ತಾ
ನಿದುವೆ ಮತವೆನಗೊಬ್ಬಗೆಯು ಬಲು
ಗದನವೇ ಮತವೆಂದು ಹೇಳಿದೆ ಹಿಂದು ನಿಮಗೆಂದ ೩೩

ಒಂದು ಮತವೆನಗೊಂದು ನುಡಿ ಮನ
ವೊಂದು ಮತ್ತೊಂದಿಲ್ಲ ಸಾಕಿದ
ನೆಂದು ಫಲವೇನಿನ್ನು ಸಂಧಿಯೆ ಪಾಂಡುತನಯರಲಿ
ಇಂದು ನಿಮಗೀ ಹದನ ನಾನೇ
ತಂದು ಬಳಿಕೆನ್ನೊಡಲ ಸಲಹುವ
ಚೆಂದವೊಳ್ಳಿತು ತಪ್ಪನಾಡದಿರೆಂದನವನೀಶ ೩೪

ಕಾಯದಲಿ ಕಕ್ಕುಲಿತೆ ಯೇಕಿದ
ರಾಯುಸವು ತಾನೇಸು ದಿನ ಕ
ಲ್ಪಾಯುಗಳಿಗೊಳಗಾಗಿ ಕಾಲನ ರಾಜಕಾರಿಯವು
ಹೇಯವೀ ಸಿರಿಯಿದರ ಪ್ರೈ ವಶ
ದಾಯತಿಕೆ ನಮಗಿಲ್ಲ ಪಾಂಡವ
ರಾಯ ಮಸ್ತಕ ಶೂಲನೆಂಬೀ ಬಿರುದ ಬಿಡೆನೆಂದ ೩೫

ಎಲವೊ ಭೀಷ್ಮರ ಮಾತುಗಳ ನೀ
ನೊಲಿವರೆಯು ಸಂಧಾನದಲಿ ನೀ
ನಿಲುವರೆಯು ದೇಹಾಭಿಲಾಷೆಗೆ ಬಲಿವರೆಯು ಮನವ
ಒಲಿದ ಭೀಮನೆ ನಿನ್ನ ಸಂಧಿಯು
ಕಳಚಿ ನಿನ್ನೊಡಹುಟ್ಟಿದೀತನ
ತಿಳಿರಕುತವನು ಸುರಿವನಲ್ಲದೆ ಬಿಡುವನಲ್ಲೆಂದ ೩೬

ಹಾ ನುಡಿಯದಿರು ನಿಲು ಪಿತಾಮಹ
ನೇನ ಬೆಸಸಿದುದಕೆ ಹಸಾದವು
ನೀನು ನಡೆ ಪಾಳಯಕೆ ಬಿಡುಗುರಿತನವ ಮಾಣೆಯಲ
ಮೌನಮುದ್ರೆಯ ಹಿಡಿಯೆನಲು ಪವ
ಮಾನನಂದನ ಖಾತಿಯಲಿ ಯಮ
ಸೂನುವನು ಬಿಡೆ ನೋಡಿ ಮೆಲ್ಲನೆ ಸರಿದನಲ್ಲಿಂದ ೩೭

ಬೀಳುಕೊಡಿರೇ ಸಾಕು ಭೀಮನು
ಬಾಲಭಾಷಿತನಾದನೀ ಭೂ
ಪಾಲ ಕೌರವನೆಂಬೆನೇ ಮೊದಲಿಗನು ಮೂರ್ಖರಿಗೆ
ಕಾಳೆಗದೊಳೊಡೆಹಾಯ್ದು ಸಾಯಲಿ
ಬಾಳಲೊಲಿದಂತಾಗಿ ಹೋಗಲಿ
ಹೇಳಿದಿರಿ ನಿಮ್ಮಿಂದ ತಪ್ಪಿಲ್ಲೆಂದನಸುರಾರಿ ೩೮

ಮುರಹರನ ಮಾತಹುದು ಸಾಕಿ
ನ್ನರಸ ಧರ್ಮಜ ಹೋಗು ದ್ರುಪದಾ
ದ್ಯರಿಗೆ ನೇಮವು ಪಾರ್ಥ ಮರಳೈ ತಂದೆ ಪಾಳಯಕೆ
ಧರೆಯ ಲೋಲುಪ್ತಿಯಲಿ ಸಲೆ ಕಾ
ತರಿಸಿ ತಪ್ಪಿದೆವೆಮ್ಮ ಳೆಂಬೀ
ಧರಧುರವ ನೆನೆಯದಿರಿ ವಿಜಯಿಗಳಾಗಿ ನೀವೆಂದ ೩೯

ಇವರು ಕಳುಹಿಸಿಕೊಂಡರಾ ಮಾ
ಧವನ ಮೆಲ್ಲಡಿಗಳನು ಹೃದಯದೊ
ಳವಚಿ ಕಂಗಳು ತುಂಬಿ ದೇವನ ಮೂರ್ತಿಯನು ಹಿಡಿದು
ಸವೆಯದಮಳಾನಂದ ಬಹಳಾ
ರ್ಣವದೊಳಗೆ ಮುಳುಗಾಡಿ ಲಕ್ಷ್ಮೀ
ಧವನ ಕಳುಹಿದನಿತ್ತ ಬೀಳ್ಕೊಟ್ಟನು ಸುಯೋಧನನ ೪೦

ಬವರದೊಳಗೌಚಿತ್ಯ ಪರಿಪಾ
ಕವನು ಬಲ್ಲಿರಿ ಕೌರವರ ಪಾಂ
ಡವರ ವೃತ್ತಾಂತದ ರಹಸ್ಯದ ನೆಲೆಯನರಿದಿಹಿರಿ
ನಿವಗೆ ಬೇರೊಂದಿಲ್ಲ ನಾವ್ ಹೇ
ಳುವುದು ಕೃಷ್ಣನ ನೇಮವನು ಮಾ
ಡುವುದೆನುತ ದ್ರೋಣಾದಿ ಸುಭಟರ ಕಳುಹಿದನು ಭೀಷ್ಮ ೪೧

ಬೀಳುಕೊಂಡರು ರಾಯರಿಬ್ಬರು
ಪಾಳಯಂಗಳಿಗಿತ್ತ ಪಡುವಣ
ಶೈಲ ವಿಪುಲ ಸ್ತಂಭದೀಪಿಕೆಯಂತೆ ರವಿ ಮೆರೆದ
ಮೇಲುಮುಸುಕಿನ ಮುಖದ ಚಿತ್ತದ
ಕಾಳಿಕೆಯ ದುಮ್ಮಾನಜಲಧಿಯ
ಕಾಲುವೆಗಳೆನೆ ಕೌರವರು ಹೊಕ್ಕರು ನಿಜಾಲಯವ ೪೨

ಇವರು ಭೀಷ್ಮನ ಬೀಳುಕೊಂಡು
ತ್ಸವದ ಹರುಷದಲೊಮ್ಮೆ ಗಂಗಾ
ಭವಗೆ ತಪ್ಪಿದ ದುಗುಡ ಭಾರದಲೊಮ್ಮೆ ಚಿಂತಿಸುತ
ಕವಲು ಮನದಲಿ ಕಂಪಿಸುತ ಶಿಬಿ
ರವನು ಹೊಕ್ಕರು ನಿಖಿಲ ಸೇನಾ
ನಿವಹ ಸಹಿತವೆ ವೀರ ನಾರಾಯಣನ ಕರುಣದಲಿ ೪೩

ಶ್ರೀಮದಚಿಂತ್ಯ ಗದುಗು ವೀರ ನಾರಾಯಣ ಚರಣಾರವಿಂದ
ಮಕರಂದ ಮಧುಪಾನ ಪರಿಪುಷ್ಟ ವಚಃಷಟ್ಪದೀ ನಿಕಾಯ
ಶ್ರೀಮತ್ಕುಮಾರವ್ಯಾಸ ಯೋಗೀಂದ್ರ ವಿರಚಿತಮಪ್ಪ
ಕರ್ಣಾಟ ಭಾರತ ಕಥಾಮಂಜರಿಯೊಳ್
ಭೀಷ್ಮಪರ್ವ ಸಮಾಪ್ತಮಾದುದು

———

# ದ್ರೋಣ ಪರ್ವ

## ಒಂದನೆಯ ಸಂಧಿ

ಸೂ. ರಾಯ ಕಟಕ ಪಿತಾಮಹನ ತರು
ವಾಯಲಭಿಷೇಕವನು ಕೌರವ
ರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನ

ಸೋಲಿಸಿತೆ ಕರ್ಣಾಮೃತದ ಮಳೆ
ಗಾಲ ನಿನ್ನಯ ಕಿವಿಗಳನು ನೆರೆ
ಕೇಳಿದೈ ಕೌರವನ ಕದನದ ಬಾಲಕೇಳಿಗಳ
ಹೇಳುವುದು ತಾನೇನು ಕೆಂಗರಿ
ಗೋಲ ಮಂಚವ ಮಹಿಮನಿರವನು
ಮೇಲು ಪೋಗಿನ ಕಥೆಯನವಧಾನದಲಿ ಕೇಳೆಂದ ೧

ಬತ್ತಿತಂಬುಧಿ ನಿನ್ನ ಮಗ ಹೊಗು
ವತ್ತ ಕಾದುದು ನೆಲನು ನೃಪ ತಲೆ
ಗುತ್ತಿ ಹೊಗಲೊಳಕೊಳ್ಳದಂಬರವೇನನುಸುರುವೆನು
ಮೃತ್ಯು ನಿನಗೊಲಿದಿಹಳು ಬಳಿಕಿ
ನ್ನುತ್ತರೋತ್ತರವೆಲ್ಲಿಯದು ನೆರೆ
ಚಿತ್ತವಿಸುವುದು ಜೀಯ ದ್ರೋಣಂಗಾಯ್ತು ಹರಿವೆಂದ ೨

ಐದು ದಿವಸದೊಳಹಿತ ಬಲವನು
ಹೊಯ್ದು ಹೊಡೆಕುಟ್ಟಾಡಿ ರಿಪುಗಳೊ
ಳೈದೆ ದೊರೆಗಳನಿರಿದು ಮೆರೆದನು ಭುಜಮಹೋನ್ನತಿಯ
ಕೈದುಕಾರರ ಗುರು ಭಡಾಳಿಸಿ
ಮೈದೆಗೆದು ನಿರ್ಜರರ ನಗರಿಗೆ
ಹಾಯ್ದನನಲುರಿ ಜಠರದಲಿ ಮೋಹರಿಸಿತವನಿಪನ ೩

ಶಿವಶಿವಾ ಭೀಷ್ಮಾವಸಾನ
ಶ್ರವಣ ವಿಷವಿದೆ ಮತ್ತೆ ಕಳಶೋ
ದ್ಭವನ ದೇಹವ್ಯಥೆಯ ಕೇಳ್ದೆನೆ ಪೂತು ವಿಧಿಯೆನುತ
ಅವನಿಪತಿ ಮುಗುಡದಲಿ ಮೋರೆಯ
ಲವುಚಿದನು ಕರತಳವ ಚಿತ್ತದ
ಬವಣಿಗೆಯ ಭಾರಣೆಯ ಕಡುಶೋಕದಲಿ ಮೈಮರೆದ ೪

ಶೋಕವೇತಕೆ ಜೀಯ ನೀನವಿ
ವೇಕಿತನದಲಿ ಮಗನ ಹೆಚ್ಚಿಸಿ
ಸಾಕಿ ಕಲಿಸಿದೆ ಕುಟಿಲತನವನು ಕುಹಕ ವಿದ್ಯೆಗಳ
ಆಕೆವಾಳರು ಹೊರಿಗೆಯುಳ್ಳ ವಿ
ವೇಕಿಗಳು ನಿಮ್ಮಲ್ಲಿ ಸಲ್ಲರು
ಸಾಕಿದೇತಕೆ ಸೈರಿಸೆಂದನು ಸಂಜಯನು ನೃಪನ ೫

ಆರು ಕುಹಕಿಗಳಾರು ದುರ್ಜನ
ರಾರು ಖುಲ್ಲರು ನೀತಿ ಬಾಹಿರ
ರಾರು ದುರ್ಬಲರವರು ನಿನ್ನರಮನೆಯ ಮಂತ್ರಿಗಳು
ಆರು ಹಿತವರು ನೀತಿ ಕೋವಿದ
ರಾರು ಸುಜನರು ಬಹು ಪರಾಕ್ರಮ
ರಾರವರ ಹೊರಬೀಸಿ ಕಾಬುದು ನಿನ್ನ ಮತವೆಂದ ೬

ಹರಿದುದೈ ಕುರುಸೇನೆ ಬತ್ತಿದ
ಕೆರೆಯೊಳಗೆ ಬಲೆಯೇಕೆ ಹಗೆ ಹೊ
ಕ್ಕಿರಿವರಿನ್ನಾರಡ್ಡಬೀಳ್ವರು ನಿನ್ನ ಮಕ್ಕಳಿಗೆ
ಬರಿದೆ ಮನ ನೋಯದಿರು ಸಾಕೆ
ಚ್ಚರುವುದೆನೆ ತನ್ನೊಳಗೆ ಹದುಳಿಸಿ
ಸರಿಹೃದಯನೀ ಮಾತನೆಂದನು ಮತ್ತೆ ಸಂಜಯಗೆ ೭

ಘಾಸಿಯಾದೆನು ಮಗನ ಮೇಲಿ
ನ್ನಾಸೆ ಬೀತುದು ಬೆಂದ ಹುಣ್ಣಲಿ
ಸಾಸಿವೆಯ ಬಳಿಯದಿರು ಸಂಜಯ ನಿನಗೆ ದಯವಿಲ್ಲ
ಏಸು ಬಲುಹುಂಟಾದರೆಯು ಹಗೆ
ವಾಸುದೇವನ ಹರಿಬವೆಂದಾ
ನೇಸನೊರಲಿದೆನೇನ ಮಾಡುವೆನೆಂದನಂಧನೃಪ ೮

ಬೇಡ ಮಗನೇ ಪಾಂಡುಸುತರಲಿ
ಮಾಡು ಸಂಧಿಯನಸುರ ರಿಪುವಿನ
ಕೂಡೆ ವಿಗ್ರಹವೊಳ್ಳಿತೇ ಹಗೆ ಹೊಲ್ಲ ದೈವದಲಿ
ಪಾಡು ತಪ್ಪಿದ ಬಳಿಕ ವಿನಯವ
ಮಾಡಿ ಮೆರೆವುದು ಬಂಧುವರ್ಗದ
ಕೂಡೆ ವಾಸಿಗಳೇತಕೆನ್ನೆನೆ ನಿನ್ನ ಮನವರಿಯೆ ೯

ಹೋಗಲಿನ್ನಾ ಮಾತು ಖೂಳರು
ತಾಗಿ ಬಾಗರು ಸುಕೃತ ದುಷ್ಕೃತ
ಭೋಗವದು ಮಾಡಿದವರಿಗಪ್ಪುದು ಖೇದ ನಮಗೇಕೆ
ಈಗಲೀ ಕದನದಲಿ ವಜ್ರಕೆ
ಬೇಗಡೆಯ ಮಾಡಿದನದಾವನು
ತಾಗಿ ದ್ರೋಣನ ಮುರಿದ ಪರಿಯನು ರಚಿಸಿ ಹೇಳೆಂದ ೧೦

ಚಿತ್ತವಿಸು ಧೃತರಾಷ್ಟ್ರ ಮಲಗಿದ
ಮುತ್ತಯನ ಬೀಳ್ಕೊಂಡು ಕೌರವ
ರಿತ್ತ ಸರಿದರು ಪಾಂಡುನಂದನರತ್ತ ತಿರುಗಿದರು
ಹೊತ್ತ ಮೋನದ ವಿವಿಧ ವಾದ್ಯದ
ಕೆತ್ತ ಬಾಯ್ಗುಳ ಪಾಠಕರ ಕೈ
ಹತ್ತುಗೆಯ ಮೋರೆಯ ಮಹೀಪತಿ ಹೊಕ್ಕನರಮನೆಯ ೧೧

ಗಾಹು ಕೊಳ್ಳದು ಭೀಮ ಪಾರ್ಥರ
ಸಾಹಸವನೆಣಿಸುತ ಕಠಾರಿಯ
ಮೋಹಳದ ಮೇಲಿಟ್ಟ ಗಲ್ಲದ ಮಕುಟದೊಲಹುಗಳ
ಊಹೆದೆಗಹಿನ ಕಂಬನಿಯ ತನಿ
ಮೋಹರದ ಘನ ಶೋಕವಹ್ನಿಯ
ಮೋಹುಗಾಡಿನ ಮನದ ಕೌರವನಿತ್ತನೋಲಗವ ೧೨

ಗುರುತನುಜ ವೃಷಸೇನ ಮಾದ್ರೇ
ಶ್ವರ ಕಳಿಂಗ ವಿಕರ್ಣ ದುಸ್ಸಹ
ದುರುಳ ಶಕುನಿ ಸುಕೇತು ಭೂರಿಶ್ರವ ಜಯದ್ರಥರು
ವರ ಸುಲೋಚನ ವಿಂದ್ಯ ಯವನೇ
ಶ್ವರರು ಕೃಪ ಕೃತವರ್ಮ ಭಗದ
ತ್ತರು ಮಹಾ ಮಂತ್ರಿಗಳು ಬಂದರು ರಾಯನೋಲಗಕೆ ೧೩

ತೊಡರ ಝಣಝಣ ರವದ ಹೆಗಲಲಿ
ಜಡಿವ ಹಿರಿಯುಬ್ಬಣದ ಹೆಚ್ಚಿದ
ಮುಡುಹುಗಳ ಮಿಗೆ ಹೊಳೆವ ಹೀರಾವಳಿಯ ಕೊರಳುಗಳ
ಕಡುಮನದ ಕಲಿ ರಾಜಪುತ್ರರ
ನಡುವೆ ಮೈಪರಿಮಳದಿ ದೆಸೆ ಕಂ
ಪಿಡಲು ಭಾರವಣೆಯಲಿ ಬಂದನು ಕರ್ಣನೋಲಗಕೆ ೧೪

ಇತ್ತ ಬಾರೈ ಕರ್ಣ ಕುರುಕುಲ
ಮತ್ತವಾರಣ ಕುಳ್ಳಿರೈ ಬಾ
ಯಿತ್ತ ಬಾ ತನ್ನಾಣೆಯೆನುತವೆ ಸೆರಗ ಹಿಡಿದೆಳೆದು
ಹತ್ತಿರಾತನ ನಿಲಿಸಿ ಬಟ್ಟಲ
ಲಿತ್ತು ವೀಳೆಯವನು ಸುಯೋಧನ
ಕೆತ್ತುಕೊಂಡಿರೆ ನುಡಿಸಿದನು ಕಲಿಕರ್ಣನವನಿಪನ ೧೫

ಜೀಯ ದುಗುಡವಿದೇಕೆ ಬಿಡು ಗಾಂ
ಗೇಯನಳುಕಿದರೇನು ಕಾಣೆಯ
ಬೀಯದಲಿ ಬಡವಹುದೆ ಕನಕಾಚಲ ನಿಧಾನಿಸಲು
ರಾಯ ಜಗಜಟ್ಟಿಗಳು ರಣದೊಳ
ಜೇಯರಿದೆ ಪರಿವಾರವನು ನಿ
ರ್ದಾಯದಲಿ ದಣಿಸುವೆನು ರಿಪುಗಳ ಸಿರಿಯ ಸೂರೆಯಲಿ ೧೬

ಕರ್ಣ ಕರ್ಣಕಠೋರ ಸಾಹಸ
ನಿರ್ಣಯಿಸು ಪರಸೈನ್ಯ ಸುಭಟ ಮ
ಹಾರ್ಣವಕೆ ಬಿಡು ನಿನ್ನ ವಿಕ್ರಮಬಾಡಬಾನಳನ
ಪೂರ್ಣಕಾಮನು ನೀನು ಕುರುಬಲ
ಕರ್ಣಧಾರನು ನೀನು ವಿಶ್ವವಿ
ಕರ್ಣ ನೀನೇ ರಕ್ಷಿಸೆಂದುದು ನಿಖಿಳ ಪರಿವಾರ ೧೭

ಕಾದುವೆನು ರಿಪುಭಟರ ಜೀವವ
ಸೇದುವೆನು ಸಮರಂಗ ಭೂಮಿಯ
ನಾದುವೆನು ನೆಣಗೊಬ್ಬಿನಹಿತರ ಗೋಣ ರಕುತದಲಿ
ಹೋದ ದಿವಸಂಗಳಲಿ ಕಾಳೆಗ
ಮಾದುದಂದಿನ ಭೀಷ್ಮರೊಡನೆ ವಿ
ವಾದ ಕಾರಣ ಬೇಡಿಕೊಳಬೇಹುದು ನದೀಸುತನ ೧೮

ಎಂದು ನೃಪತಿಯ ಬೀಳುಕೊಂಡಿನ
ನಂದನನು ಬೊಂಬಾಳ ದೀಪದ
ಸಂದಣಿಗಳಲಿ ಸೆಳೆದಡಾಯ್ದದ ಭಟರ ಮುತ್ತಿಗೆಯ
ಮುಂದೆ ಪಾಯವಧಾರು ರಿಪುನೃಪ
ಬಂದಿಕಾರವಧಾರು ಧಿರುಪಯ
ವೆಂದು ಕಳಕಳ ಗಜರು ಮಿಗೆ ಕುರು ಭೂಮಿಗೈತಂದ ೧೯

ಹಾಯಿದವು ನರಿ ನಾಯಿಗಳು ಕಟ
ವಾಯಲೆಳಲುವ ಕರುಳಿನಲಿ ಬಸಿ
ವಾಯ ರಕುತದಲೋಡಿದವು ರಣ ಭೂತ ದೆಸೆದೆಸೆಗೆ
ಆಯುಧದ ಹರಹುಗಳ ತಲೆಗಳ
ಡೋಯಿಗೆಯ ಕಡಿ ಖಂಡಮಯದ ಮ
ಹಾಯತದ ರಣದೊಳಗೆ ಬಂದನು ಭೀಷ್ಮನಿದ್ದೆಡೆಗೆ ೨೦

ಸರಳ ಮಂಚವ ಹೊದ್ದಿ ಭೀಷ್ಮನ
ಚರಣಕಮಲವ ಹಿಡಿದು ನೊಸಲಿನೊ
ಳೊರಸಿಕೊಂಡನು ನಾದಿದನು ಕಂಬನಿಯೊಳಂಘ್ರಿಗಳ
ಕರುಣಿಸೈ ಗಾಂಗೇಯ ಕರುಣಾ
ಶರಧಿಯೈ ಖಳತಿಲಕ ಕರ್ಣನ
ದುರುಳತನವನು ಮರೆದು ಮೆರೆವುದು ನಿಮ್ಮ ಸದ್ಗುಣವ ೨೧

ಎನಲು ಹೃದಯಾಂಬುಜದ ಪೀಠದ
ವನಜನಾಭ ಧ್ಯಾನಸುಧೆಯಲಿ
ನನೆದು ಹೊಂಗಿದ ಕರಣ ಹೊರೆಯೇರಿತ್ತು ನಿಮಿಷದಲಿ
ತನುಪುಳಕ ತಲೆದೋರೆ ರೋಮಾಂ
ಚನದ ಬಿಗುಹಡಗಿತ್ತು ಕಂಗಳ
ನನೆಗಳರಳಿದವಾಯ್ತು ಭೀಷ್ಮಂಗಿತ್ತಣವಧಾನ ೨೨

ಅಳಲದಿರು ಬಾ ಮಗನೆ ಕುರುಕುಲ
ತಿಲಕನವಸರದಾನೆ ರಿಪು ಮಂ
ಡಳಿಕಮಸ್ತಕಶೂಲ ಬಾರೈ ಕರ್ಣ ಬಾಯೆನುತ
ತುಳುಕಿದನು ಕಂಬನಿಯ ಕೋಮಳ
ತಳದಿ ಮೈದಡವಿದನು ಕೌರವ
ನುಳಿವು ನಿನ್ನದು ಕಂದ ಕದನವ ಜಯಿಸು ಹೋಗೆಂದ ೨೩

ಗಾರುಗೆಡೆದೆನು ನಿಮ್ಮನೋಲೆಯ
ಕಾರತನದುಬ್ಬಿನಲಿ ತನಿ ಮದ
ವೇರಿ ನಿಮ್ಮಲಿ ಸೆಣಸಿದೆನು ಸೇನಾಧಿಪತ್ಯದಲಿ
ದೂರ ಹೊತ್ತೆನು ರಣದ ಮಿಾಸಲಿ
ನೇರು ತಪ್ಪಿತು ನೀಲಮಣಿ ತಲೆ
ಗೇರಿಸಿದ ತ ಣವದಕೆ ಸರಿಯೇ ಭೀಷ್ಮ ಹೇಳೆಂದ ೨೪

ತನುಜ ತಪ್ಪೇನದಕೆ ಕಾಳಿಗ
ವೆನಗೆ ತನಗೆನಬೇಕು ವೀರರು
ಮನದ ಕಲಿತನದುಬ್ಬುಗೊಬ್ಬಿನಲೆಂಬರಿದಕೇನು
ಮನದೊಳಗೆ ಖತಿಯಿಲ್ಲ ದುರಿಯೋ
ಧನ ನೃಪತಿಯೋಪಾದಿ ನೀ ಬೇ
ರೆನಗೆ ಲೋಗನೆ ಕಂದ ಕದನವ ಜಯಿಸು ಹೋಗೆಂದ ೨೫

ಆಳುತನದ ದೊಠಾರತನ ಸರಿ
ಯಾಳಿನಲಿ ಸೆಣಸಾದೊಡೊಳ್ಳಿತು
ಮೇಳವೇ ಗುರು ದೈವದಲಿ ಕಟ್ಟುವರೆ ಬಿರುದುಗಳ
ಹಾಳಿ ಹಸುಗೆಯನರಿಯದಾ ಹೀ
ಹಾಳಿಗೆಡಿಸಿದೆನೆಂದು ಸಭೆಯಲಿ
ಖೂಳನವಗುಣ ಶತವ ನೋಡದೆ ನಿಮ್ಮ ಮರೆಯೆಂದ ೨೬

ನೋವು ಮನದೊಳಗುಳ್ಳಡಾ ರಾ
ಜೀವಲೋಚನನಾಣೆ ಮಗನೇ
ಜೀವ ಕೌರವನಲ್ಲಿ ಕರಗುವುದೇನ ಹೇಳುವೆನು
ಆವನಾತನ ಬಂಧುವಾತನೆ
ಜೀವವೆನ್ನಯ ದೆಸೆಯ ಭಯ ಬೇ
ಡಾವ ಪರಿಯಿಂದವನನುಳುಹುವ ಹದನ ಮಾಡೆಂದ ೨೭

ಎನ್ನ ಹವಣೇ ಹಗೆಯ ಗೆಲುವಡೆ
ನಿನ್ನ ವಂದಿಗರಿರಲು ನೂಕದು
ತನ್ನ ಸಾಹಸವೆಲ್ಲಿ ಪರಿಯಂತಹುದು ಕದನದಲಿ
ಗನ್ನಕಾರನು ಕೃಷ್ಣನವರಿಗೆ
ತನ್ನನೊಚ್ಚತಗೊಟ್ಟನಹಿತರ
ನಿನ್ನು ಗೆಲುವವರಾರು ಜಯವೆಲ್ಲಿಯದು ನಮಗೆಂದ ೨೮

ಆಲವಟ್ಟದ ಗಾಳಿಯಲಿ ಮೇ
ಘಾಳಿ ಮುರಿವುದೆ ಮಿಂಚುಬುಳುವಿಗೆ
ಸೋಲುವುದೆ ಕತ್ತಲೆಯ ಕಟಕವು ಜೀಯ ಚಿತ್ತೈಸು
ಸೀಳಬಹುದೇ ಸೀಸದುಳಿಯಲಿ
ಶೈಲವನು ಹರಿಯೊಲಿದ ಮನುಜರ
ಮೇಲೆ ಮುನಿದೇಗುವರು ಕೆಲಬರು ಭೀಷ್ಮ ಹೇಳೆಂದ ೨೯

ಲೇಸನಾಡಿದೆ ಕರ್ಣ ದಿಟ ನೀ
ನೀಸು ಸಮ್ಯಜ್ಞಾನಿಯೆಂಬುದ
ನೀಸು ದಿನ ನಾವರಿಯೆವೈ ನೀ ಸತ್ಕುಲೀನನಲ
ಆ ಸುಯೋಧನಗರುಹಿ ಸಂಧಿಯ
ನೀ ಸಮಯದಲಿ ಘಟಿಸು ನೀನೆನ
ಲೈಸ ಮಾರನು ಪಾಂಡವರ ಸಂಪ್ರತಿಯ ಮಾಡೆಂದ ೩೦

ಜೀಯ ಮಂತ್ರದ ಮಾತು ರಾವುತ
ಪಾಯಕರಿಗೊಪ್ಪುವುದೆ ಅವರವ
ರಾಯತದಲೋಲೈಸಬೇಹುದು ಮೇರೆ ಮಾರ್ಗದಲಿ
ರಾಯನೊಲಿದುದ ಹಿಡಿವೆನೊಲ್ಲದ
ದಾಯವನು ಬಿಡುವೆನು ನಿಜಾಭಿ
ಪ್ರಾಯವಿದು ಸಂಪ್ರತಿಯ ನುಡಿ ತನಗಂಗವಲ್ಲೆಂದ ೩೧

ಭಾನುಸನ್ನಿಭ ಮರಳು ಭೂಪನ
ಹಾನಿ ವೃದ್ಧಿಗಳೆಲ್ಲ ನಿನ್ನದು
ನೀನು ಪಂಥದ ಜಾಣನಲ್ಲಾ ವಿಜಯನಾಗೆನಲು
ಆ ನದೀಸುತನಡಿಗೆರಗಿ ರವಿ
ಸೂನು ಕಳುಹಿಸಿಕೊಂಡು ಬಹಳ ಮ
ನೋನುರಾಗದಲೈದಿದನು ಕುರುರಾಯನೋಲಗವ ೩೨

ಭಾನುಸುತ ಕುಳ್ಳಿರು ನದೀಸುತ
ನೇನನೆಂದನು ತನ್ನ ಚಿತ್ತ
ಜ್ಞಾನಿಯನು ಬಿಸುಟೇನ ನುಡಿದನು ಭಾವಶುದ್ಧಿಯಲಿ
ಏನನೆಂಬೆನು ಜೀಯ ಬಹಳ ಕೃ
ಪಾನಿಧಿಯಲಾ ಭೀಷ್ಮನನುಸಂ
ಧಾನವಿಲ್ಲದೆ ಬೆಸಸಿ ಕಳುಹಿದನೆಂದನಾ ಕರ್ಣ ೩೩

ಇನ್ನು ಸೇನಾಪತಿಯದಾರೈ
ನಿನ್ನ ಮತವೇನುದಯವಾಗದ
ಮುನ್ನ ಬವರವ ಹಿಡಿಯಬೇಹುದು ವೈರಿ ರಾಯರಲಿ
ಎನ್ನು ನಿನ್ನಭಿಮತವನೆನೆ ಸಂ
ಪನ್ನಭುಜಬಲ ದ್ರೋಣನಿರಲಾ
ರಿನ್ನು ಸೇನಾಪತಿಗಳೆಂದನು ಭೂಪತಿಗೆ ಕರ್ಣ ೩೪

ಪ್ರಭೆಯ ದಾರಿಗೆ ಸೂರ್ಯನಿದಿರಿನೊ
ಳಭವನಿರೆ ತಾನಾರು ಭುವನಕೆ
ವಿಭುಗಳೈ ವೈಕುಂಠನಿದಿರಿನೊಳಾರು ದೇವತೆಯೈ
ವಿಭವ ನದಿಗಳಿಗುಂಟೆ ಜಲಧಿಯ
ರಭಸದಿದಿರಲಿ ನಮ್ಮ ಬಲದಲಿ
ಸುಭಟರಾರೈ ದ್ರೋಣನಿರುತಿರಲೆಂದನಾ ಕರ್ಣ ೩೫

ಜಾಗು ಜಾಗುರೆ ಕರ್ಣ ಪರರ ಗು
ಣಾಗಮವ ಪತಿಕರಿಸಿ ನುಡಿವವ
ನೀಗಳಿನ ಯುಗದಾತನೇ ಮಝು ಪೂತು ಭಾಪೆನುತ
ತೂಗುವೆರಳಿನ ಮಕುಟದೊಲಹಿನೊ
ಳಾ ಗರುವ ಭಟರುಲಿಯೆ ಲಹರಿಯ
ಸಾಗರದ ಸೌರಂಭದಂತಿರೆ ಮಸಗಿತಾಸ್ಥಾನ ೩೬

ನುಡಿಸು ನಿಸ್ಸಾಳವನು ಕರೆ ಹೊಂ
ಗೊಡನ ಹಿಡಿದೈತರಲಿ ನಾರಿಯ
ರೆಡ ಬಲನು ತೆರಹಾಗಲಿಕ್ಕಲಿ ಸಿಂಹವಿಷ್ಟರವ
ತಡವು ಬೇಡೆನೆ ಕೌರವೇಂದ್ರನ
ನುಡಿಗೆ ಮುನ್ನನುವಾಯ್ತು ವಿಪ್ರರ
ಗಡಣ ಬಂದುದು ರಚಿಸಿದರು ಮೂರ್ಧಾಭಿಷೇಚನವ ೩೭

ಸಕಲ ಸಾವಂತರು ಮಹೀಪಾ
ಲಕರು ಬಂದುದು ಚರಣದಲಿ ಕಾ
ಣಿಕೆಯನಿಕ್ಕಿತು ಕೈಯ ಮುಗಿದುದು ನಿಖಿಳ ಪರಿವಾರ
ಮಕುಟ ರತ್ನದ ಲಹರಿ ಖಡುಗದ
ವಿಕಟ ಧಾರಾರಶ್ಮಿ ದೀಪ
ಪ್ರಕರದಲಿ ಥಳಥಳಿಸೆ ರವಿಯುವೊಲೆಸೆದನಾ ದ್ರೋಣ ೩೮

ಅರಸ ಬೇಡೈ ವರವನೆನ್ನನು
ಕರೆದು ಮಿಗೆ ಪತಿಕರಿಸೆ ಬಳಿಕಾ
ಬರಿದೆ ಹೋಹೆನೆ ಮೆಚ್ಚಿದುದ ನುಡಿ ಖೇದತನವೇಕೆ
ಹೊರೆ ಹೊಗದೆ ಹೇಳೆನಲು ನಗೆ ಮೊಗ
ವರಳಿ ಹೊಂಪುಳಿಯೋಗಿ ಕೌರವ
ರರಸ ನುಡಿದನು ಕಟ್ಟಿಕೊಡಿ ಧರ್ಮಜನ ನನಗೆಂದು　೩೯

ಮರಣ ಮಂತ್ರಾನುಗ್ರಹವನವ
ಧರಿಸಬಹುದೇ ಮಗನೆ ಪಾರ್ಥನ
ಪರಿಯನರಿಯಾ ಹಿಡಿಯಲೀವನೆ ಧರ್ಮನಂದನನ
ಅರಿದ ಬೇಡಿದೆ ತನಗೆ ನೂಕದ
ವರವ ವಚನಿಸಿ ಮಾಡದಿಹ ಬಾ
ಹಿರರು ನಾವಲ್ಲೆನಲು ಕೌರವರಾಯನಿಂತೆಂದ　೪೦

ಕೊಡುವಡಿದು ವರವಲ್ಲದಿದ್ದರೆ
ನುಡಿಗೆ ಮೊಳೆ ಹೊಮ್ಮುವರೆ ನಿಮ್ಮಯ
ತೊಡಕನೊಲುವವನಲ್ಲ ನೀವೇ ಬಲ್ಲಿರೆನೆ ನಗುತ
ಹಿಡಿದು ಬಿಗಿವೆನು ಪಾರ್ಥನನು ಕೆಲ
ಕಡೆಗೆ ತಪ್ಪಿಸಿ ಧರ್ಮಪುತ್ರನ
ಬಿಡೆನು ನಿನ್ನಯ ಪುಣ್ಯದಳತೆಯನರಿಯಬಹುದೆಂದ　೪೧

ಸಾಕಿದೊಳ್ಳಿತು ಚಾಪತಂತ್ರ ಪಿ
ನಾಕಿಯೇರಿಸಿ ನುಡಿದ ನುಡಿಗಳು
ಕಾಕಹುದೆ ಕೈಕೊಂಡೆವೆನುತವನೀಶ ಹರುಷದಲಿ
ಆ ಕೃಪಾದಿ ಮಹಾ ಪ್ರಧಾನಾ
ನೀಕವನು ಕಳುಹಿದನು ಮನೆಗೆ ದಿ
ವಾಕರನು ಹೆಡತಲೆಗೆ ಹಗರಿಕ್ಕಿದನು ಚಂದ್ರಮನ　೪೨

ಜಗವರಾಜಕವಾಯ್ತು ಕುಮುದಾ
ಳಿಗಳ ಬಾಗಿಲು ಹೂಡಿದವು ಸೂ
ರೆಗರು ಕವಿದುದು ತುಂಬಿಗಳು ಸಿರಿವಂತರರಮನೆಯ
ಉಗಿದವಂಬರವನು ಮಯೂಖಾ
ಳಿಗಳು ಭುವನದ ಜನದ ಕಂಗಳ
ತಗಹು ತೆಗೆದುದು ಸೆರೆಯ ಬಿಟ್ಟರು ಜಕ್ಕವಕ್ಕಿಗಳ　೪೩

ಸೂಳವಿಸಿ ಬೊಬ್ಬಿರಿದವುರು ನಿ
ಸ್ಸಾಳಚಯವದ್ರಿಗಳ ಹೆಡತಲೆ
ಸೀಳೆ ಸಿಡಿಲೇಳಿಗೆಯಲೆದ್ದವು ವಿವಿಧ ವಾದ್ಯರವ
ಆಳು ನೆರೆದುದು ನೆಲ ಕುಸಿಯೆ ರಥ
ಜಾಲ ಜಡಿದುದು ಹಣ್ಣಿದಾನೆಯ
ಸಾಲು ಮೆರೆದುವು ಕುಣಿವುತಿದ್ದುವು ಕೂಡೆ ವಾಜಿಗಳು　೪೪

ತಳಿತ ಝುಲ್ಲರಿಗಳಿಗೆ ಗಗನದ
ವಳಯವೈದದು ನೆರೆದ ಸೇನೆಗೆ
ನೆಲನಗಲ ನೆರೆಯದು ನಿರೂಢಿಯ ಭಟರ ವಿಕ್ರಮಕೆ
ಅಳವು ಕಿರಿದರಿರಾಯರಿಗೆ ದಿಗು
ವಳಯವಿಟ್ಟೆಡೆಯಾಗೆ ರಥ ಹಯ
ದಳವುಳಕೆ ಕುರುಸೇನೆ ನಡೆದುದು ದೊರೆಯ ನೇಮದಲಿ　೪೫

ಹರಿಗೆ ಹರಿದವು ಮುಂದೆ ಬಿಲ್ಲಾ
ಳುರವಣಿಸಿದರು ಮೋಹರವ ಮಿ
ಕ್ಕುರುಬಿದರು ಸಬಳಿಗರು ಮುಂಚಿತು ರಣಕೆ ಖಡ್ಗಿಗಳು
ತುರಗ ಕವಿದವು ದಂತಿ ಘಟೆಗಳು
ತುರುಗಿದವು ರಥ ರಾಜಿ ಮುಂಗುಡಿ
ವರಿದುದವನೀಪತಿಯ ಚೂಣಿಯ ನೃಪರ ಜೋಕೆಯಲಿ　೪೬

ಸಿಡಿಲ ಕುಡುಹುಗಳಿಂದ ಕಮಲಜ
ಹೊಡೆಯಲಬುಜಭಾಂಡ ಭೇರಿಯ
ಕಡುದನಿಗಳೆನಲೊದರಿದವು ನಿಸ್ಸಾಳ ಕೋಟಿಗಳು
ತುಡುಕಿದವು ತಂಬಟದ ದನಿ ಜಗ
ದಡಕಿಲನು ಫಡ ಕೌರವೇಂದ್ರನ
ತೊಡಕು ಬೇಡೆಂದೊದರುತಿದ್ದವು ಗೌರುಗಹಳೆಗಳು　೪೭

ಬಿಗಿದ ಝುಲ್ಲರಿ ಮುಗಿಲ ಹೊಸ ಕೈ
ದುಗಳ ಮಿಂಚಿನ ಮಕುಟಮಣಿ ಕಾಂ
ತಿಗಳ ಸುರಧನುವಿನ ಚತುರ್ಬಲ ರವದ ಸಿಡಿಲುಗಳ
ವಿಗಡ ಕುಂಭಜ ಮೇಘ ನಿರುತು ತನಿ
ಹೊಗರಿರಿದು ಪರಬಲವ ಕಡು ವೇ
ಸಗೆಗೆ ಕವಿದುದು ರಾಜಹಂಸ ಪ್ರಕರವೋಸರಿಸೆ　೪೮

ಕಳನ ಗೆಲಿದುದು ಬಂದು ಕೌರವ
ಬಲ ಯುಧಿಷ್ಠಿರರಾಯ ದಳ ಮುಂ
ಕೊಳಿಸಿ ಹೊಕ್ಕುದು ಜಯದ ಸುಮ್ಮಾನದ ಸಘಾಡದಲಿ
ಬಲಿದರೊಡ್ಡನು ಮಂಡಲಾಕೃತಿ
ಗೊಳಿಸಿ ಕೌರವರಿವರು ಥಟ್ಟನು
ನಿಲಿಸಿದರು ಚಂದ್ರಾರ್ಧಸದೃಶದಲಖಿಳ ಮೋಹರವ　೪೯

ಚಾರಿಗಳು ಬಲವೆರಡರೊಳಗೊ
ಯ್ಯಾರದಲಿ ತೂಗಿದವು ಚೂಣಿಯ
ವೀರರುರವಣೆ ಮಿಗಲು ಹೊಯ್ದರು ಹೊಕ್ಕು ಪರಬಲವ
ಮಾರಿ ಮೊಗವಡದೆರೆದವೊಲು ಜ
ಜ್ಝಾರ ಮಾಸಾಳುಗಳು ನಿಜ ದಾ
ತಾರನವಸರಕೊದಗಿ ಹಣವಿನ ಋಣನ ನೀಗಿದರು　೫೦

ಬಿಟ್ಟಸೂರಿಯೊಳೇರಿ ಕುದುರೆಗ
ಳಟ್ಟಿದವು ಕಿವಿಗೌಂಕಿದುಂಗುಟ
ವಿಟ್ಟ ಸನ್ನೆಯೊಳೊಲೆದು ಕವಿದವು ಸೊಕ್ಕಿದಾನೆಗಳು
ನಿಟ್ಟುವರಿಯಲು ಕೂಡೆ ರಥ ಸಾ
ಲಿಟ್ಟು ಹರಿದವು ಬಿಡದೆ ಸುಭಟರು
ಮುಟ್ಟಿ ಮೂದಲಿಸುತ್ತ ಹೊಯ್ದರು ಹೊಕ್ಕು ಪರಬಲವ　೫೧

ಏರುವಡೆದರು ಹೊಕ್ಕವರು ಕೈ
ದೋರಿ ಕಳಕಳಕಾರರಸುಗಳ
ಕಾರಿದರು ಕೈ ಮಾಡಿ ಕೊಂಡರು ಸುರರ ಕೋಟೆಗಳ
ತಾರು ಥಟ್ಟಿನೊಳಟ್ಟಿ ಮೈಮುಸೆ
ಸೂರೆಕಾರರ ಮಿದುಳ ಜೊಂಡಿನ
ಜೋರುಗಳ ಬೀರಿದವು ಬೇತಾಳರಿಗೆ ಭಟನಿಕರ　೫೨

ತೆಗೆಸು ದೊದ್ದೆಯನುರವಣಿಸದಿರಿ
ವಿಗಡ ಸುಭಟರು ಸಾಹಸದ ತನಿ
ಹೊಗರಿನಾತಗಳೆಲ್ಲಿ ಭೀಮಾರ್ಜುನರ ಬರಹೇಳು
ಹೊಗುವ ಬಿನುಗನು ಹೊಯ್ಯದಿರಿ ತೆಗೆ
ತೆಗೆಯೆನುತ ಸಾವಿರ ಮಹಾ ರಥ
ರಗಲದಲಿ ಬರಲುರುಬಿ ಹೊಕ್ಕನು ದ್ರೋಣ ಪರಬಲವ ೫೩

ಸಾರಿರೈ ಸಾಹಸಿಕರಿರ ಕೆಲ
ಸಾರಿರೈ ಪಾಂಚಾಲ ಮತ್ಸ್ಯರು
ವೀರರಹುದಲ್ಲೆಂಬೆವೇ ಶಿವ ಶಿವ ಮಹಾದೇವ
ಸಾರಿರೈ ನಮ್ಮೊಡನೆ ಕೈ ಮನ
ವಾರೆ ಕಾದುವ ಬಳಿಕ ಮೊದಲೊಳು
ದಾರ ಭೀಮಾರ್ಜುನರ ನೋಡುವೆನೆನುತ ಕೈಕೊಂಡ ೫೪

ಬಿನುಗು ಹಾರುವ ನಿನಗೆ ಭೀಮಾ
ರ್ಜುನರ ಪರಿಯಂತೇಕೆಯಂಬಿನ
ಮೊನೆಯಲುಣಲಿಕ್ಕುವೆನು ರಣಭೂತಕ್ಕೆ ನಿನ್ನೊಡಲ
ಎನುತ ಧೃಷ್ಟದ್ಯುಮ್ನನಿದಿರಾ
ದನು ಶರೌಘದ ಸೋನೆಯಲಿ ಮು
ಮ್ಮೊನೆಯ ರಥಿಕರ ಮುರಿದು ದ್ರೋಣನ ರಥಕೆ ಮಾರಾಂತ ೫೫

ಕಡಗಿದೆಡೆ ಕೋದಂಡ ರುದ್ರನ
ತೊಡಕಿ ಬದುಕುವರಾರು ಸಾರೆಂ
ದೊಡನೊಡನೆ ನಾರಾಚ ಜಾಲದಲರಿಭಟನ ಬಿಗಿದು
ಕಡಿದು ಬಿಸುಟನು ದ್ರುಪದತನಯನು
ಹಿಡಿದ ಬಿಲ್ಲನು ಸಾರಥಿಯನಡೆ
ಗೆಡಹಿದನು ಚಂದ್ರಾರ್ಧಶರದಲಿ ನೊಸಲನೊಡೆಯೆಚ್ಚ ೫೬

ಎಸಲು ಧೃಷ್ಟದ್ಯುಮ್ನ ದ್ರೋಣನ
ವಿಶಿಖಹತಿಯಲಿ ನೊಂದು ರಥದಲಿ
ಬಸವಳಿಯೆ ಬಳಿ ಸಲಿಸಿದನು ಪಾಂಚಾಲ ನಾಯಕರು
ಮುಸುಡ ಬಿಗುಹಿನ ಸೆಳೆದಡಾಯುಧ
ಹೊಸ ಪರಿಯ ಬಿರುದುಗಳ ಗಜರಥ
ವಿಸರ ಮಧ್ಯದಲೆಂಟು ಸಾವಿರ ರಥಿಕರೌಂಕಿದರು ೫೭

ರಾಯರೊಳು ಪಾಂಚಾಲರುಬ್ಬಟೆ
ಕಾಯಗಟ್ಟಿತು ಪೂತು ಮಝು ಕುರು
ರಾಯನಾಡಿತು ದಿಟವೆನುತ ಹೊಗರಂಬು ಹೊದೆಗೆದರಿ
ನೋಯಿಸಿದನುರವಣಿಸಿ ಪರಿತಪ
ನಾಯಕರನುಬ್ಬೆದ್ದ ಬಿರುದರ
ಬೀಯ ಮಾಡಿದನಹಿತ ರಥಿಕರನೆಂಟು ಸಾವಿರವ ೫೮

ಆಳುತನವುಳ್ಳವರ ಕರೆ ಪಾಂ
ಚಾಲರೊಳ್ಳೆಗರವದಿರಂಬಿನ
ಕೋಲ ಕಾಣದ ಮುನ್ನ ಹಮ್ಮೈಸುವರು ಹುರಿಯೊಡೆದು
ಖೂಳರಿವರಂತಿರಲಿ ದೊರೆ ಕ
ಟ್ಟಾಳಹನು ಕರೆ ಧರ್ಮಪುತ್ರನ
ತೋಳ ಬಲುಹನು ನೋಡಬೇಕೆಂದುರುಬಿದನು ದ್ರೋಣ ೫೯

ಸವರಿ ಹೊಕ್ಕನು ಕೆಲಬಲದ ಪಾಂ
ಡವ ಮಹಾರಥರನು ವಿಭಾಡಿಸಿ
ಪವನಜನ ಮುರಿಯೆಚ್ಚು ನಕುಲನ ರಥವ ಹುಡಿಮಾಡಿ
ಕವಲುಗೋಲಲಿ ದ್ರುಪದ ಮತ್ಸ್ಯರ
ನವಗಡಿಸಿ ಹೈಡಿಂಬನಭಿಮ
ನ್ಯುವನು ಮಸೆಗಾಣಿಸಿ ಮಹೀಶನ ರಥಕೆ ಮಾರಾಂತ ೬೦

ಅರಸ ಫಡ ಹೋಗದಿರು ಸಾಮದ
ಸರಸ ಕೊಳ್ಳದು ಬಿಲ್ಲ ಹಿಡಿ ಹಿಡಿ
ಹರನ ಮರೆವೊಗು ನಿನ್ನ ಹಿಡಿವೆನು ಹೋಗು ಹೋಗೆನುತ
ಸರಳ ಮುಷ್ಟಿಯ ಕೆನ್ನೆಯೋರೆಯ
ಗುರು ಥಡಾಳಿಸೆ ಧನುವನೊದರಿಸಿ
ಧರಣಿಪತಿ ಹಳಚಿದನು ಹೂಳಿದನಂಬಿನಲಿ ರಥವ ೬೧

ಶಿವಶಿವಾ ಬೆಳುದಿಂಗಳಲಿ ಮೈ
ಬೆವರುವುದೆ ಕಲಿ ಧರ್ಮಪುತ್ರನ
ಬವರದಲಿ ಬೆಂಡಹರೆ ವೀರರು ಕಂಡೆವದುಭುತವ
ನಿವಗಿದೆತ್ತಣ ಕೈಮೆ ಕೋಲ್ಗಳ
ಕವಿಸುವಂದವಿದೊಳ್ಳಿತಿದಲೇ
ನವಗಭೀಷ್ಟವೆನುತ್ತ ಕಟ್ಟಳವಿಯಲಿ ಕೈಕೊಂಡ ೬೨

ಎಲೆಲೆ ದೊರೆ ಸಿಕ್ಕಿದನು ಕರೆ ಪಡಿ
ತಳಿಸ ಹೇಳೋ ಸ್ವಾಮಿದ್ರೋಹರು
ದಳದಲಿದ್ದವರೆತ್ತ ಹೋದರು ನಾಯಕಿತ್ತಿಯರು
ಕಳವಳಿಸಿ ಸಾತ್ಯಕಿ ಘಟೋತ್ಕಚ
ರುಲಿದು ಹರಿತರೆ ಕೇಳಿದಾ ಕ್ಷಣ
ದಲಿ ಮುರಾಂತಕ ಸಹಿತ ವಹಿಲದಿ ಬಂದನಾ ಪಾರ್ಥ ೬೩

ಕಾಳಕೂಟದ ಬಹಳ ದಾಳಿಗೆ
ಶೂಲಿಯೊಡ್ಡೈಸುವವೊಲವನೀ
ಪಾಲಕನ ಹಿಂದಿಕ್ಕಿ ತಡೆದನು ಕಳಶಜನ ರಥವ
ಆಲಿಯಳುಕಿತು ತಿರುಹಿದಂಬಿನ
ಕೋಲ ಝಳಪಿಸಿ ಪೂತು ಮಝು ಮೇ
ಲಾಳು ಬಂದುದೆ ಅಕಟೆನುತ ಹಲುಮೊರೆದನಾ ದ್ರೋಣ ೬೪

ಮಂದಭಾಗ್ಯನು ಕೌರವನು ನಾ
ವೆಂದು ಮಾಡುವುದೇನು ನಿಮಿಷವು
ನಿಂದನಾದರೆ ಹಿಡಿವೆನಾಗಳೆ ಧರ್ಮನಂದನನ
ಬಂದು ಫಲುಗುಣನಡ್ಡವಿಸಲಿ
ನ್ನಿಂದುಧರ ಮುಳಿದೇನ ಮಾಡುವ
ನೆಂದು ಖಾತಿಯ ಹಿಡಿದು ರಥವನು ತಿರುಹಿದನು ದ್ರೋಣ ೬೫

ಎರಡು ಬಲದಲಿ ವೀರ ನೀ ಮಡ
ಮುರಿಯಲಿವನೇಸರವನಂಧಾ
ಸುರನೋ ತಾರಕನೋ ಹಿರಣ್ಯಾಸುರನೊ ಕೈಟಭನೊ
ಗುರುಗಳಿದಿರಲಿ ವೀರವೇ ಸಾ
ಕಿರಲಿ ಮೂದಲೆಯೆನುತಲಾ ಬಿಲು
ದಿರುವ ಮಿಡಿದೈದಿದರು ನಾಸಾವಿರ ಮಹಾರಥರು ೬೬

ಘಡ ಘಡೆಲವ್ರೋ ಪಾರ್ಥ ಭೀಷ್ಮನ
ಕೆಡಹಿದುಬ್ಬಟೆ ನಮ್ಮ ಕೂಡಳ
ಪಡಮ ತೆಗೆ ತೆಗೆಯೆನುತ ತುಳುಕಿದನಂಬಿನಂಬುಧಿಯ
ಗಡಣವೊಳ್ಳಿತು ಗಾಢ ಮಿಗೆ ಬಿಲು
ವಿಡಿಯ ಬಲ್ಲಿರಿ ಸಮರ ಜಯವಳ
ವಡುವುದಳವಡದಿಹುದು ತಪ್ಪೇನೆನುತ ನರನೆಚ್ಚ ೧೭

ಜೋಡು ಜರಿಯದೆ ಹುರುಳುಗೆಡದೆ
ಚ್ಚಾಡಿದರು ಫಲುಗುಣನ ರಥದಲಿ
ಹೂಡಿದರು ಹೊಗರಂಬುಗಳನುಬ್ಬೆದ್ದು ತಮತಮಗೆ
ನೋಡಿದನು ಸಾಕಿವದಿರನು ಕೊಂ
ಡಾಡಲೇಕೆನುತನಿಬರಸುಗಳ
ತೋಡಿದನು ಕೂರಂಬಿನಲಿ ಸಾವಿರ ಮಹಾರಥರ ೧೮

ಮಡಿದು ಕೆಲಬರು ಕೊರಳಲಸುಗಳ
ಹಿಡಿದು ಕೆಲಬರು ಘಾಯವಡೆದೆಲು
ವೊಡೆದು ಕೆಲಬರು ಕೈದು ರಥವನು ಬಿಸುಟು ಕೆಲಕೆಲರು
ಹೊಡೆವ ಬಿರುಗಾಳಿಯಲಿ ಮುಗಿಲೊ
ಡ್ಡೊಡೆದವೊಲು ಮೈಮಾರಿಗಳು ಓ
ಡೊಡೆದುದೈ ಹೇರಾಳದಲಿ ಹೊಕ್ಕೆಚ್ಚನಾ ಪಾರ್ಥ ೧೯

ನಿಮಗೆ ಸದರವೆ ಪಾರ್ಥನೆಲೆ ವಿ
ಕ್ರಮದರಿದ್ರರಿರಾ ವೃಥಾ ಸಂ
ಭ್ರಮಿತರಿರ ಭಂಡಾಟವೇತಕೆ ರಣಕೆ ಹೆರತೆಗೆಯಿ
ಸಮರವಿಜಯತ್ಯಾಗಿಯೇ ತಾ
ನಮರಪತಿ ನಂದನನು ಸಾಕೀ
ಕುಮತಿಗಳ ತಡೆಯದಿರಿ ಹೋಗಲಿ ಎಂದನಾ ದ್ರೋಣ ೨೦

ಸೋಲದಲಿ ಕೌರವನ ಸೇನಾ
ಜಾಲ ಚೆಲ್ಲಿತು ವೀರ ಪಾರ್ಥನ
ಕೋಲು ಕಾಲನ ದಣಿಸಿದವು ಚತುರಂಗ ಸೇನೆಯಲಿ
ಕೋಲು ಧರಿಸಿದವೆರಕೆಗಳನೆನೆ
ಚಾಳಿಸಿತು ಪಡೆ ರವಿಯ ರಶ್ಮಿಯ
ಗೂಳೆಯವು ತೆಗೆಯಿತ್ತು ಪಡುವಣ ಕಡಲೊಳಿನನಿಳಿದ ೨೧

## ಎರಡನೆಯ ಸಂಧಿ

ಸೂ. ಉಭಯ ಕಟಕಾಚಾರ್ಯ ಪಾಂಡವ
ವಿಭುವ ಹಿಡಿತಹೆನೆಂದು ಕೌರವ
ಸಭೆಗೆ ಭಾಷೆಯ ಕೊಟ್ಟು ಸಮರಕೆ ದ್ರೋಣನನುವಾದ

ಕೇಳು ಜನಮೇಜಯ ಧರಿತ್ರೀ
ಪಾಲ ತೆಗೆದವು ಬಲವೆರಡು ನಿಜ
ಪಾಳಯಂಗಳಿಗಿರುಳು ಕೌರವನಿತ್ತನೋಲಗವ
ಹೇಳು ಕರ್ಣ ದ್ರೋಣ ರಿಪು ಭೂ
ಪಾಲಕನನರೆಯಟ್ಟಿದನು ಗಡ
ಕಾಳೆಗದ ಹದನೇನೆನುತ ಕುರುರಾಯ ಬೆಸಗೊಂಡ ೧

ಏನ ಹೇಳಲುಬಹುದು ಜೀಯ ಕೃ
ಶಾನುವಡವಿಯಲಾಡಿದಂದದಿ
ನಾ ನಿರೂಢಿಯ ಭಟರ ಮುರಿದನು ಮುರಿದ ಮಾರ್ಗದಲಿ
ಸೇನೆ ಕಲಕಿತು ಬತ್ತಿದುದಧಿಯ
ಮೀನಿನಂತಿರೆ ಮರುಗಿದನು ಭಟ
ರಾ ನರೇಂದ್ರನನಳವಿಯಲಿ ಬೆಂಬತ್ತಿದನು ದ್ರೋಣ ೨

ಅಳವಿಗೊಟ್ಟನು ನೃಪತಿ ಗುರು ಕೈ
ಚಳಕದಲಿ ತೆಗೆದೆಸುತ ನಡೆದಿ
ಟ್ಟಳಿಸಿ ಹಿಡಿಹಿಂಗೊಳಗುಮಾಡಿ ವಿಘಾತಿಯ ತಡೆಯೆ
ಎಲೆಲೆ ದೊರೆ ಸಿಕ್ಕಿದನು ಸಿಕ್ಕಿದ
ನಳಿದುದೋ ದ್ರೌಪದಿಯ ಸಿರಿಯೆಂ
ಬುಲುಹ ಕೇಳುತ ಪಾರ್ಥ ಬಂದನು ಬಿಟ್ಟ ಸೂಠಿಯಲಿ ೩

ವೀರರಿದ್ದೇಗುವರು ದೈವದ
ಕೂರುಮೆಯ ನೆಲೆ ಬೇರೆ ನಮಗೊಲಿ
ದಾರು ಮಾಡುವುದೇನೆನುತ ಕಲಿಕರ್ಣ ಬಿಸುಸುಯ್ಯೆ
ಭೂರಿ ಭೂಪರುಸ್ವಿಸ್ತರದ ಗಂ
ಭೀರ ಸಾಗರದಂತಿರಲು ರಣ
ಧೀರರೆದ್ದರು ವರ ತ್ರಿಗರ್ತರು ಧಾಸಜಭೆಯೊಳಗೆ ೪

ಕೇಳು ಸೇನಾನಾಥ ಕುರುಪತಿ
ಕೇಳು ಕೇಳೈ ಕರ್ಣ ಸುಭಟರು
ಕೇಳಿರೈ ದೇಶಾಧಿನಾಥರು ವೀರ ಪರಿವಾರ
ನಾಳೆ ಮೊದಲಾಗರ್ಜುನನ ನಾವ್
ಕಾಳೆಗಕೆ ಬರಲೀಯೆವೆಮ್ಮಯ
ಕಾಳೆಗದಲೇ ಸವೆಯಬೇಹುದು ಪಾರ್ಥನಂಬುಗಳು ೫

ಹಿಂದೆ ಹಿಡಿ ನೀ ಮೇಣು ಬಿಡು ಯಮ
ನಂದನನನೊಲಿದಂತೆ ಮಾಡಿ
ಲ್ಲಿಂದ ಮೇಲರ್ಜುನನ ಭಯ ನಿಮಗಿಲ್ಲ ನಂಬುವುದು
ಎಂದು ಶಪಥವ ತಮ್ಮನಿಬರೈ
ತಂದು ವಿಪ್ರರ ಕರಸಿ ವೈದಿಕ
ದಿಂದ ರಚಿಸಿದರಗ್ನಿಯನು ಮಾಡಿದರು ಭಾಷೆಗಳ ೬

ನರನ ಬಿಡಲಾಗದು ಮಹಾ ಸಂ
ಗರದೊಳೊಬ್ಬರನೊಬ್ಬರೊಪ್ಪಿಸಿ
ತೆರಳಲಾಗದು ಮುರಿಯಲಾಗದು ಕೊಂಡ ಹಜ್ಜೆಗಳ
ಹೊರಳಿವೆಣನನು ಮೆಟ್ಟಿ ಮುಂದಣ
ಗುರವಣಿಸುವುದು ತಪ್ಪಿದವರಿಗೆ
ನರಕವೀ ಪಾತಕರ ಗತಿ ನಮಗೆಂದು ಸಾರಿದರು ೭

ನುಡಿದ ನುಡಿಗೇಡುಗನ ವಿಪ್ರರ
ಮಡುಹಿದಾತನನಮಳ ಗುರುವಿನ
ಮಡದಿಯರಿಗಳುಪಿದನ ಸಾಕಿದ ಪತಿಗೆ ತಪ್ಪಿದನ
ಹಿಡಿದ ಶರಣಾಗತರ ಕಾಯದೆ
ಬಿಡುವವನ ನಾಸ್ತಿಕನ ವಿಪ್ರರ
ಜಡಿದು ನುಡಿದನ ಗತಿಗಳಾಗಲಿ ರಣದೊಳೋಡಿದರೆ ೮

ಎಂದು ಸಮಸಪ್ತಕರು ತಮ್ಮೊಳ
ಗಂದು ಶಪಥವ ಮಾಡಿ ವಿಪ್ರರ
ಮಂದಿಗಿತ್ತರು ಗೋ ಹಿರಣ್ಯ ಸಮಸ್ತ ವಸ್ತುಗಳ
ಇಂದು ರವಿ ಜಲ ವಹ್ನಿಯನಿಲ ಪು
ರಂದರಾದಿ ಸುರೌಘ ಸಾಕ್ಷಿಗ
ಳೆಂದು ಸೂಳೈಸಿದರು ಭುಜವನು ಸಿಡಿಲು ತನಿಹೆದರೆ ೯

ಇವರ ಮೊದಲಿಗ ಸತ್ಯರಥನಿಂ
ತಿವನ ಬಳಿ ರಥ ಹತ್ತು ಸಾವಿರ
ವಿವನೊಡನೆ ಸೇರುವೆಯ ರಥ ಮೂವತ್ತು ಸಾವಿರದ
ಭುವನವೀರ ಸುಶರ್ಮ ಮಾಳವ
ಯವನರತಿರಥ ಹತ್ತು ಸಾವಿರ
ಬವರಕಿಂತೈವತ್ತು ಸಾವಿರ ರಥಗಳೊಗ್ಗಾಯ್ತು ೧೦

ಸಭೆ ಬೆದರೆ ಕಲ್ಪಾಂತ ಶರಧಿಯ
ರಭಸವಲ್ಲಿಯೆ ಕೇಳಲಾದುದು
ಸುಭಟರಹುದೋ ಜಾಗು ಜಾಗೆನುತೊಲೆದನಾ ದ್ರೋಣ
ಅಭವನಡಹಾಯ್ದಿರಲಿ ಪಾಂಡವ
ವಿಭುವ ಹಿಡಿವೆನು ಪಾರ್ಥನೊಬ್ಬನ
ಪ್ರಭೆಗೆ ಹೆದರುವೆನುಳಿದ ವೀರರ ಬಗೆವನಲ್ಲೆಂದ ೧೧

ನಯವಿದನು ಹೊಂಬಟ್ಟಲಲಿ ವೀ
ಳೆಯವನನಿಬರಿಗಿತ್ತು ಕುರುಸೇ
ನೆಯಲಿ ಮರುಮಾತೇಕೆ ನೀವೇ ವಿಜಯವುಳ್ಳವರು
ಜಯವನಿನ್ನಾಹವದೊಳಗೆ ನಿ
ರ್ಣಯಿಸಬಹುದೆಮಗೆನುತ ಗುರು ಪಾ
ಳಯಕೆ ನೇಮವ ಕೊಟ್ಟನೋಲಗ ಹರೆದುದಾ ಕ್ಷಣಕೆ ೧೨

ಸಸಿ ಮರಣ ದಿಗುವಧುವನಾಲಿಂ
ಗಿಸಲು ಕುಮುದಿನಿ ಖತಿಯ ಹಿಡಿದಳು
ಮಸುಳಿದವು ತಾರೆಗಳು ರಜನೀನಾರಿ ಹಿಂಗಿದಳು
ಒಸೆದು ಕಮಲಿನಿ ನಗಲು ಮಿಗೆ ಹುರು
ಡಿಸುತ ಪೂರ್ವದಿಶಾನಿತಂಬಿನಿ
ನಿಶಿತ ಕೋಪದ ಕಿಡಿಯನುಗುಳಿದಳೆನಲು ರವಿ ಮೆರೆದ ೧೩

ಜೋಡು ಮಾಡಿತು ನೃಪರು ನಿಮಿಷಕೆ
ಹೂಡಿದವು ತೇರುಗಳು ಹಯತತಿ
ಕೂಡೆ ಹಲ್ಲಣಿಸಿದವು ಗುಳದಲಿ ಜಡಿದವಾನೆಗಳು
ಕೂಡೆ ಘುಮ್ಮಿಡೆ ದೆಸೆದೆಸೆಗಳ
ಲ್ಲಾಡಿದವು ಗಿರಿನಿಕರ ಬಿರುದನಿ
ಮಾಡಿದವು ನಿಸ್ಸಾಳತತಿ ಸೇನಾಸಮುದ್ರದಲಿ ೧೪

ಉದಯವಾಗದ ಮುನ್ನ ಕಳನೊಳು
ಹೊದರುಗಟ್ಟಿದರೀ ತ್ರಿಗರ್ತರು
ಕದನಕೆಮ್ಮೊಳಗಳವಿಗೊಡುವುದು ಬೇಗ ಬಹುದೆಂದು
ಮುದವದರಿಭಟ ಭೈರವಂಗ
ಟ್ಟಿದರು ಭಟ್ಟರನವರು ಬಂದೊದ
ರಿದರು ಪಾರ್ಥನ ಮುಂದೆ ಸಮಸಪ್ತಕರ ಬಿರುದುಗಳ ೧೫

ಏಳು ಫಲುಗುಣ ಕೃಷ್ಣನೇ ಗೋ
ಪಾಲನೇಸರ ಮಾನಿಸನು ಬರ
ಹೇಳಲಾಪರೆ ಕರೆ ಸಹಾಯಕೆ ಭಾಳಲೋಚನನ
ಏಳು ಜಂಜಡವೇನು ಜೊತ್ತಿನ
ಕಾಳಗಕೆ ಕಲಿಯಾಗು ನಡೆಯೆನೆ
ಕೇಳುತರ್ಜುನನಿತ್ತನವರಿಗೆ ನಗುತ ವೀಳೆಯವ ೧೬

ನಡೆಯಿ ನೀವಾಹವಕೆ ಮೆಚ್ಚಿಸಿ
ಕೊಡುವೆನೀ ಬಹೆನೆಂದು ಮುರಹರ
ನೊಡನೆ ಮುದದಲಿ ರಥಕೆ ಬಂದನು ಬಿಲ್ಲನೊದರಿಸುತ
ನುಡಿದನಂತಕಸೂನು ಕಳಶಜ
ಹಿಡಿಯಲೆಂದೇರಿಸಿದ ನುಡಿ ತ
ನ್ನೊಡನೆ ನಿಂದಾವವನು ಕಾದುವ ಪಾರ್ಥ ಹೇಳೆಂದ ೧೭

ಕರಸಿದರೆ ಕಾಳಗದೊಳೆನಗೆಡೆ
ಮುರಿಯಬಾರದು ನಿಮ್ಮ ಕಾಹಿಂ
ಗಿರಲಿ ನೀಲನು ಸತ್ಯಜಿತು ಕೌಶಲ ಶತಾನೀಕ
ವರ ಘಟೋತ್ಕಚ ದ್ರುಪದ ಕೈಕೆಯ
ರಿರಲಿ ಪವನಜ ನಕುಲ ಸಹದೇವ
ವರಿಗೆ ದ್ರೋಣನ ಬವರವಾಗಲಿ ಎಂದನಾ ಪಾರ್ಥ ೧೮

ಎಂದು ಸಮಸಪ್ತಕರ ಮೋಹರ
ಕಂದು ತಿರುಗಿದ ಪಾರ್ಥನಿತ್ತಲು
ಸಂದಣಿಸಿತರಿ ರಾಯದಳ ಜಲರಾಸಿ ಜರಿವಂತೆ
ಮುಂದೆ ತವಕಿಗ ಭಟರ ತೆರಳಿಕೆ
ಯಿಂದ ಮೊರೆವ ಗಭೀರ ಭೇರಿಯ
ಮಂದರದ ಮುರಿಗಡಲ ಗಜರಿನೊಲೊದರಿತರಿಸೇನೆ ೧೯

ಬಳಿಯ ಸುಮಹಾರಥರ ರಾಜಾ
ವಳಿಯ ಚಮರಚ್ಛತ್ರ ಪಾಳಿಯ
ಸೆಳೆದಡಾಯುಧ ಹೆಗಲ ತೆಕ್ಕೆಯ ರಾಯ ರಾವುತರ
ಹೊಳೆವ ಹೇಮದ ರಥಕೆ ಹೂಡಿದ
ತಿಲಕಗುದುರೆಯ ನೆಗಹಿ ನಿಗುರುವ
ಕಳಶ ಸಿಂಧದ ದ್ರೋಣ ಹೊಕ್ಕನು ಕಾಳಗದ ಕಳನ ೨೦

ಗರುಡನಾಕಾರದಲಿ ಬಲವನು
ಸರಿಸ ಮಿಗೆ ಮೋಹಿದನು ವಿಹಗನ
ಶಿರಕೆ ಕೃಪ ಕುರುರಾಯ ದುಶ್ಶಾಸನನ ನಿಲಿಸಿದನು
ಕರೆದು ಭೂರಿಶ್ರವನ ಮಾದ್ರೇ
ಶ್ವರನ ಭಗದತ್ತನ ಸುಬಾಹುವ
ನಿರಿಸಿದನು ಬಲದೆರಕೆಯೊಳಗಕ್ಷೋಹಿಣೀ ಬಲವ ೨೧

ವಿಂದ್ಯನಶ್ವತ್ಥಾಮ ಕರ್ಣನ
ನಂದನರು ಕಾಂಭೋಜ ಕೌಶಲ
ಸಿಂಧು ನೃಪರಕ್ಷೋಹಿಣಿಯು ತಂದೆಡದ ಪಕ್ಕದಲಿ
ನಿಂದುದಲಾ ಮೋಹರದ ಜೋಕೆಯು
ಹಿಂದೆ ಲಕ್ಷ ಕಳಿಂಗ ಘಟೆಗಳು
ಸಂವಣಿಸಿದವು ದ್ರೋಣ ನಿಂದನು ಬಲದ ಕಾಹಿನಲಿ ೨೨

ಅರಿ ಬೊಬ್ಬಿರಿದಖಿಳ ಸೇನೆಯ
ಭೂರಿ ಭಟರಗ್ರದಲಿ ಕಟಕಾ
ಚಾರಿಯನು ಕೈವೀಸಿದನು ಬರಹೇಳು ಪವನಜನ
ವೀರನಾದಡೆ ದೊರೆಯ ಹೊಗ ಹೇ
ಳಾರು ತಡೆದರೆ ತಡೆಯಿ ಹಿಡಿವೆನು
ಧೀರ ಕೌರವನಾಣೆನುತ ಬೊಬ್ಬಿರಿದನಾ ದ್ರೋಣ ೨೩

ಕರಸಿ ಧೃಷ್ಟದ್ಯುಮ್ನ ನಿಜ ಮೋ
ಹರವ ರಚಿಸಿದನರ್ಧ ಚಂದ್ರೋ
ತ್ಕರ ವಿಳಾಸದೊಳಳ್ಳಿರಿವ ನಿಸ್ಸಾಳ ಕೋಟಿಗಳ
ಧುರಕೆ ನಿಗುರುವ ಭಟರ ತೂಳುವ
ಕರಿಘಟೆಯ ಕೆಲಬಲಕೆ ಸೂಸುವ
ತುರಗ ರಾಜಿಯ ತೇರ ಗಮನದ ಗಜರು ಘಾಡಿಸಿತು ೨೪

ಒದೆದುದಬುಧಿಯನಬುಧಿಯೆನೆ ಹೊ
ಕ್ಕುದು ಚತುರ್ಬಲ ಹೊಯ್ದು ತಲೆಯೊ
ತ್ತಿದುದು ಕೇಶಾಕೇಶಿ ಖಾಡಾಖಾಡಿಯಲಿ ಭಟರು
ಕೆದರಿತರಿಬಲ ಮತ್ತೆ ಹೊದರೆ
ದ್ದುದು ವಿಘಾತಿಯಲಳಿದು ಹುರಿ ಗೊಂ
ಡೊದಗಿ ಹಾಣಾಹಾಣಿಯಲಿ ಹೊಯ್ದಾಡಿತುಭಯಬಲ ೨೫

ಹಳಚುವಸಿಗಳ ಖಣಿಖಟಿಲು ಕಳ
ಕಳಕೆ ಮಿಗೆ ಹೊಯ್ದಾಡಿತುರುಳುವ
ತಲೆಯ ಬೀಳುವ ಹೆಣನ ಧಾರಿಡುವರುಣ ವಾರಿಗಳ
ತಳಿತ ಖಂಡದ ಹರಿದ ಕರುಳಿನ
ಕಳಚಿದೆಲುವಿನ ಕುಣಿವ ಮುಂಡದ
ಕೊಳಗುಳದ ಹೆಬ್ಬೆಳಸು ಹೆಚ್ಚಿಸಿತಂತಕನ ಪುರವ ೨೬

ಉಲಿದು ಸೂಠಿಯೊಳೇರಿದರು ವೆ
ಗ್ಗಳೆಯ ರಾವ್ತರು ಗಜರಿ ಮಸ್ತಕ
ಹಿಳಿಯಲಂಕುಶವಿಕ್ಕಿ ಬಿಟ್ಟರು ಸೊಕ್ಕಿದಾನೆಗಳ
ತಳಪಟವ ತುಂಬಿದವು ತೇರುಗ
ಳಿಳೆ ಜಡಿಯೆ ಕಾಲಾಳು ಹೊಕ್ಕೊಡೆ
ಗಲಿಸಿ ಹೊಯ್ದರು ಜೂಣಿಯರೆದುದು ಕಳನ ಚೌಕದಲಿ ೨೭

ಇತ್ತಲರ್ಜುನನಾ ತ್ರಿಗರ್ತರಿ
ಗಿತ್ತನವಸರವನು ಕೃತಾಂತನ
ತೆತ್ತಿಗರಿಗೌತನವ ಹೇಳಿಸಿದನು ಶರೌಘದಲಿ
ಕುತ್ತಿದವು ಕೂರಂಬು ದೊರೆಗಳ
ಮುತ್ತಿದವು ಕೆದರಿದವು ನಿಮಿಷಕೆ
ಬತ್ತಿಸಿದನಂದಹಿತ ಸುಭಟರ ವೀರ ಶರನಿಧಿಯ ೨೮

ಏನ ಹೇಳುವೆನಿತ್ತಲಾದುದು
ದಾನವಾಮರರದುಭುತಾಹವ
ವಾ ನಿರಂತರ ವಿಕ್ರಮೋನ್ನತ ಭಟರ ಬವರದಲಿ
ಆನಲಾರಿಗೆ ನೂಕುವುದು ತವ
ಸೂನುವಿನ ಸುಭಟರು ಪರಾಕ್ರಮ
ಹೀನರೇ ಧೃತರಾಷ್ಟ್ರ ಕೇಳ್ಳೆ ದ್ರೋಣ ಸಂಗರವ ೨೯

ಬಿಲ್ಲನೊದರಿಸಿ ಕೆಲಬಲದ ಭಟ
ರೆಲ್ಲರಿಗೆ ಕೈವೀಸಿ ಚೌಪಟ
ಮಲ್ಲ ನುಡಿದನು ತನ್ನ ಸಾರಥಿಗಿತ್ತು ವೀಳೆಯವ
ಖುಲ್ಲ ರಿಪುಗಳ ಬಿಸುಟು ಹೊದರಿನ
ಹೊಳ್ಳುಗರನೊಡೆಹಾಯ್ಸಿ ಧರ್ಮಜ
ನೆಲ್ಲಿ ಮೋಹರದೆಗೆವನತ್ತಲೆ ರಥವ ಹರಿಸೆಂದ ೩೦

ರಥವ ಬಿಟ್ಟನು ಸೂಠಿಯಲಿ ನಿ
ರ್ಮಥಿತ ರಿಪುಗಳನಟ್ಟಿದನು ಭುಜ
ಶಿಥಿಲ ಸಾಹಸರೇನ ನಿಲುವರು ದ್ರೋಣನುರವಣೆಗೆ
ಪೃಥಿವಿ ನೆಗ್ಗಿತು ಹೊತ್ತ ಕಮಠನ
ವ್ಯಥೆಯನಾರುಸುರುವರು ಸುಮಹಾ
ರಥರ ಹೊದರಲಿ ಹೊಕ್ಕನುರಿ ಬಲು ಮೆಳೆಯ ಹೊಕ್ಕಂತೆ ೩೧

ಆಳ ಹೊಗಿಸೋ ದ್ರೋಣ ರಥ ದು
ವ್ವಾಳಿಯಲಿ ಬರುತದೆ ಕೃತಾಂತನ
ದಾಳಿಗೆತ್ತಣ ವೀರವೋ ನೆಗ್ಗಿದವು ನೆನಹುಗಳು
ಕಾಳುಗೆಡದಿರಿ ಕೂಡೆ ಕೈಕೊಳ
ಹೇಳಿ ಕೈ ತಪ್ಪಾಗದಿರದು ನೃ
ಪಾಲಕಂಗೆಂದೊದರಿದರು ಧರ್ಮಜನ ಮಂತ್ರಿಗಳು ೩೨

ಫಡ ಫಡಾನಿರುತಿರಲು ರಾಯನ
ಹಿಡಿದವವನ ಹೆಸರೇನು ರಿಪು ಭಟ
ನೊಡಲ ಹೊಳ್ಳಿಸಿ ನೆಣನನುಣಲಿಕ್ಕುವೆನು ದೈತ್ಯರಿಗೆ
ಬಿಡು ರಥವನಾ ದ್ರೋಣನಿದಿರಲಿ
ತಡೆಯೆನುತ ಸಾರಥಿಗೆ ಸೂಚಿಸಿ
ತುಡುಕಿದನು ಬಲುಬಿಲ್ಲ ಧೃಷ್ಟದ್ಯುಮ್ನನಿದಿರಾದ ೩೩

ಬಲ್ಲೆನೀತನ ಬಲುಹ ಸಾಕೀ
ಯೊಳ್ಳೆಗನನೆಡಕಿಕ್ಕಿ ಹಾಯಿಸು
ಕಲ್ಲೆಯಲಿ ಮುರಿನೂಕು ನಡೆ ಭೂಪತಿಯ ಸಮ್ಮುಖಿಕೆ
ನಿಲ್ಲದೊಡ್ಡೈಸೆನುತ ಸಾಹಸ
ಮಲ್ಲ ಸಾರಥಿಗರುಹೆ ಬಲವ
ಲ್ಲಲ್ಲಿ ಭಯಗೊಳೆ ದ್ರೋಣ ಹೊಕ್ಕನು ರಾಯಮೋಹರವ ೩೪

ಶಿವಶಿವಾ ಸಿಕ್ಕಿದನು ಸಿಕ್ಕಿದ
ನವನಿಪತಿಯೆನಲೌಂಕಿದರು ಗಜ
ನಿವಹವಗಿದಬ್ಬರಿಸೆ ಮುಕ್ಕುರುಕಿದವು ಕುದುರೆಗಳು
ತವಕದಲಿ ಬದ್ದರದ ಬಂಡಿಗ
ಳವುಚಿದವು ತಲೆವರಿಗೆಗಳಲಾ
ಹವವ ಹೊಕ್ಕುದು ಪಾಯದಳವಾಚಾರ್ಯನಿದಿರಿನಲಿ ೩೫

ಪಟುಗಳೋ ಮಱುಘು ಪೂತು ಪಾಂಡವ
ಭಟರು ಖರೆಯವಲಾ ಯುಧಿಷ್ಠಿರ
ನಟಮಟಿಸಿ ತಾ ಚುಕ್ಕಿಗಿಕ್ಕುವ ಲೆಕ್ಕ ಲೇಸಾಯ್ತು
ಕುಟಿಲತನದಲಿ ಗೆಲುವನೇ ಹುಲು
ಕುಟಿಗರಿವದಿರ ಹೊಯ್ದು ತನ್ನನು
ನಿಟಿಲಲೋಚನನಡ್ಡ ಹಾಯ್ದರೆ ಹಿಡಿವೆನೆನುತೆಚ್ಚ ೩೬

ನೂಕಿ ಹರಿತಹ ತೇಜಿಗಳ ಖುರ
ನಾಕ ಖಂಡಿಸಿ ಕವಿವ ನಾಗಾ
ನೀಕವನು ನೆರೆ ಕೆಡಹಿ ತೇರಿನ ಹೊದರ ಹರೆಗಡಿದು
ಟೊಕಿ ತಲೆವರಿಗೆಯಲಿ ತೆರಳಿದ
ನೇಕ ಸುಭಟರ ಸೀಳಿ ಜಯ ರ
ತ್ನಾಕರನು ಕಲಕಿದನು ಪಾಂಡವ ಸೈನ್ಯ ಸಾಗರವ ೩೭

ಬಲವ ಬರಿಕೈದೆವು ಯುಧಿಷ್ಠಿರ
ಬಿಲುದುಡುಕು ಸಾಕೋಡಿ ಬದುಕುವ
ಹುಲು ಪರೆಯುತನ ಹೆಮ್ಮೆಯೇ ಕ್ಷತ್ರಿಯರ ಮಕ್ಕಳಿಗೆ
ಅಳಿದರಮರರಿಗೊಡೆಯನಹೆ ಮೇ
ಣುಳಿದಡವನೀಪಾಲನಹೆ ಯೀ
ಕಲಹವಿಹಪರಕೊಳ್ಳಿತೆಂದುರವಣಿಸಿದನು ದ್ರೋಣ ೩೮

ಫಡ ಫಡುರವಣೆ ಬೇಡ ತೆಗೆ ಬಾ
ಯ್ಬಡಿಕತನವಿದು ಗುರುವರಂಗವೆ
ಕಡುಹ ನಾಲಗೆಯರುಹಲೇತಕೆ ಕೈಯ ಧನುವಿರಲು
ಒಡನೆ ತಾನಿರುತಿರಲು ರಾಯನ
ಹಿಡಿವ ಭಟನೇ ನೀನೆನುತ ಬಿಲು
ದುಡುಕಿ ಮುಂದೆ ಶಿಖಂಡಿ ದ್ರೋಣನ ರಥಕೆ ಮಾರಾಂತ ೩೯

ಅಕಟ ಸಿಂಹಕೆ ಮಲೆತುದೋ ಜಂ
ಬುಕನು ನೋಟ್ಟೈ ಸೂತ ಭೀಷ್ಮನ
ಶಕುತಿಗಂದಿದಿರಾದ ಮದದಲಿ ಮುಂದುಗಾಣನಿವ
ಚಕಿತ ಚಾಪ ಶಿಖಂಡಿ ನಿಲು ಸಾ
ಯಕದ ಮೊನೆಯಲಿ ಮಾತನಾಡುವು
ದುಕುತಿ ಚಾಪಳವೇಕೆನುತ ಕಣೆಗೆದರಿದನು ದ್ರೋಣ ೪೦

ಗುರುವಿನಂಬಿನ ಬಂಬಲನು ಕ
ತ್ತರಿಸಿ ಕೈದೋರಿದನು ದಿಗುತಟ
ಬಿರಿಯೆ ದಿಟ್ಟ್ಮಯವಾದವಂಬುಗಳೇನನುಸುರುವೆನು
ಅರಿ ಶಿಖಂಡಿಯು ಕೈಚಳಕ ಕಾ
ಹುರವಲೇ ಲೇಸಾಯ್ತು ಬಿಲ್ಲಿನ
ಭರವಸಿಕೆಯುಹುದೆನುತ ಕೈಕೊಂಡೆಚ್ಚನಾ ದ್ರೋಣ ೪೧

ಸಾಕು ಷಂಡನ ಕೂಡೆ ಕಾದುವು
ದೇಕೆ ತಿದ್ದುವೆನೆನುತ ರಥವನು
ನಾಕು ಶರದಲಿ ಮುರಿದು ಸೂತನ ತಲೆಯನೆರಡರಲಿ
ನೂಕಿ ಧನುವನು ಮೂರು ಬಾಣದ
ಲೌಕಿ ಖಂಡಿಸಿ ಹೋಗು ಹೋಗಿ
ನ್ನಾಕೆವಾಳರನರಸಿ ತಾ ಎನುತೈದಿದನು ದ್ರೋಣ ೪೨

ಎಲೆ ಯುಧಿಷ್ಠಿರ ಬಿಲ್ಲ ಹಿಡಿ ನರ
ಹುಳುಗಳಿವದಿರ ಕವಿಸಿ ಕಾಲವ
ಕೊಲುವುದೇ ಸಾಕಿನ್ನು ಕೈವಶವಾದೆ ನಿಲ್ಲೆನುತ
ಅಳವಿಗಿಟ್ಟಣಿಸಲು ಶರಾಳಿಯ
ತುಳುಕಿ ಹೊಕ್ಕನು ಸತ್ಯಜಿತು ದಳ
ವುಳಿಸಿದರು ಚಿತ್ರ ಶತಾನೀಕಾದಿ ನಾಯಕರು ೪೩

ಬರಿಯ ಕಾರ್ಪಣ್ಯದಲಿ ಮೇಘದ
ಮರೆಯ ಹೊಕ್ಕರೆ ರಾಹು ಬಿಡುವನೆ
ಉರಿವ ರವಿಮಂಡಲವನೆಲೆ ಕುಂತೀ ಕುಮಾರಕನೆ
ಇರಿದು ಮೆರೆವುದು ಮಹಿಮೆಯನು ಕೈ
ಮರೆಯದಿರು ಮೈಮಾರಿಗಳ ಮು
ಕ್ಕುರಿಕಿದಿವದಿರ ತಿದ್ದಿ ಬಹೆನಿದೆಯೆನುತ ತೆಗೆದೆಚ್ಚ ೪೪

ಏನು ತರಹರಿಸುವುದು ತಿಮಿರವು
ಭಾನುರಶ್ಮಿಯ ಮುಂದೆ ದ್ರೋಣನ
ನೂನ ಶರವರ್ಷದಲಿ ನಾದವು ಸುಭಟರೊಡಲುಗಳು
ಆ ನಿರಂತರ ನಿಶಿತ ಶರ ಸಂ
ಧಾನಕಿವದಿರು ಲಕ್ಷ್ಯವೇ ನಿ
ನ್ನಾನೆಗಳಿಗಿದಿರಾವನೈ ಧೃತರಾಷ್ಟ್ರ ಕೇಳೆಂದ ೪೫

ಕೋಲಿಗೊಬ್ಬರ ಕೆಡಹಿದನು ಪಾಂ
ಚಾಲ ಬಲದಲಿ ಸತ್ಯಜಿತುವನು
ಮೇಲಣಾಹವದೊಳು ಶತಾನೀಕ ಕ್ಷಿತೀಶ್ವರನ
ಸೀಳಿದನು ಮಿಡುಕುವ ಮಹಾರಥ
ರೇಳು ನೂರನು ತುರಗ ಗಜ ಕಾ
ಲಾಳನಳಿದುದನಾವನೆಣಿಸುವನಹಿತ ಸೇನೆಯಲಿ ೪೬

ಹೊಳ್ಳುಗಳ ತೂರಿದೆವು ಹಿಡಿ ಹಿಡಿ
ಬಿಲ್ಲ ಸುರಿ ಸುರಿ ಶರವನಕಟಿ
ನ್ನೆಲ್ಲಿ ಹೊಗುವೈ ಕಂದ ಕುಂತಿಯ ಜಠರವಲ್ಲವಲೆ
ನಿಲ್ಲುನಿಲ್ಲೆನುತೈದಿ ಬರಲ
ಲ್ಲಲ್ಲಿ ಮರುಗಿತು ಸೇನೆ ಸಾಹಸ
ಮಲ್ಲನಡಹಾಯಿದನು ದ್ರುಪದನು ಧನುವನೊದರಿಸುತ ೪೭

ರಾಯನಾಪತ್ತಿಂದ ಮುನ್ನವೆ
ಸಾಯಬೇಹುದು ತನಗೆನುತಲಡ
ಹಾಯಿದನು ಕಲಿ ಮತ್ಸ್ಯನೃಪ ನಿಜಬಂಧುಗಳ ಸಹಿತ
ನೋಯಬೇಹುದು ಮುನ್ನ ತಾವೆನು
ತಾಯತಿಕೆಯಲಿ ಪಂಚ ಕೈಕೆಯ
ರಾಯುಧದ ಬೆಳಗಳ್ಳಿರಿಯೆ ನೂಕಿದರು ತೇರುಗಳ ೪೮

ತಲೆಗೆ ಕೊಂಡೆವು ಹಣವನಿನ್ನಿದ
ನುಳುಹಿಕೊಂಡಿರಲಾಗದೆಂದಿ
ಟ್ಟಳಿಸಿ ಹೊಕ್ಕುದು ಯವನ ಸಂವೀರರು ಸುಷೇಣಕರು
ಅಳವಿಗಳುಕುವುದಾಳುತನದ
ಗ್ಗಳಿಕೆಯೇ ಸುಡಲೆನುತ ಮನ ಮುಂ
ಕೊಳಿಸಿ ಕುಂತೀಭೋಜ ಹೊಕ್ಕ ಸಕಲದಳ ಸಹಿತ ೪೯

ಹರೆದ ಬಲವೊಗ್ಗಾಯ್ತು ರಾಯನ
ನುರವಣಿಸಲೀಯದೆ ನೃಪಾಲಕ
ರುರುಬಿದರು ತರುಬಿದರು ಪರಬಲ ಕಾಲಭೈರವನ
ಹೊರಳಿಯೊಡೆಯದೆ ಭಾರಣೆಯಲೊ
ತ್ತರಿಸಿ ಕಲ್ಪದ ಕಡೆಯ ಕಡಲಿನ
ಗರುವಿಕೆಯ ಗಾಢದಲಿ ನಡೆದರು ತಡೆದರರಿಭಟರ ೫೦

ತೊಲಗು ವಿಪ್ರಾಧಮ ಸುಯೋಧನ
ಬಲದೊಳಗೆ ಬಹು ಭಾಷೆತನದಲಿ
ಗಳಹಿ ಬಂದರೆ ಹಿಡಿಯ ಬಲ್ಲೈ ಧರ್ಮನಂದನನ
ಗಳದ ಸತ್ವವನರಿಯದದ್ರಿಗೆ
ತಲೆಯನೊಡ್ಡುವರೇ ವೃಥಾ ಕಳ
ಕಳಿಸಿ ನುಡಿವರೆ ಮಾನ್ಯರೆನುತಿದಿರಾದನಾ ದ್ರುಪದ ೫೧

ದಿಟ್ಟನಹೆಯೋ ದ್ರುಪದ ಹಾ ಜಗ
ಜಟ್ಟಿಗಳಿಗುಪಹಾಸ್ಯವೇ ಗರಿ
ಗಟ್ಟಿದಿರಿ ನೀವ್ ಹಿಡಿಯಲೀವಿರೆ ಧರ್ಮನಂದನನ
ತೊಟ್ಟ ಜೋಹಕೆ ತಕ್ಕ ನುಡಿಗಳ
ಬಿಟ್ಟೆವಲ್ಲದೆ ನಿಮ್ಮ ರಾಯನ
ಕಟ್ಟಲಾಪೆವೆ ಎನುತ ಕರೆದನು ಸರಳ ಸರಿವಳೆಯ ೫೨

ದರ್ಪದಾಭರಣಕ್ಕೆ ಸೂಸಿದ
ವೊಪ್ಪ ಸಲಿಗೆಗಳೆನಲು ಗರಿಗಳು
ಚಪ್ಪರಿಸಿ ತುರುಗಿದುವು ರಿಪುಸೇನಾಸಮುದ್ರದಲಿ
ಹಿಪ್ಪೆಗರ ಹರಗಡಿದು ಹೊಗರಲ
ಗೊಪ್ಪಿದವು ಕರುಳುಗಳ ನಿಮಿಷದೊ
ಳೊಪ್ಪಗೆಡಿಸಿದವರಿ ಕದಂಬವನೀತನಂಬುಗಳು ೫೩

ಮರುಳೆ ಮಂಜಿನ ಮಳೆಗೆ ಕುಲಗಿರಿ
ಕರಗುವುದೆ ನೀನೆಚ್ಚ ಶರ ಪಂ
ಜರಕೆ ಸಿಲುಕುವ ವೀರರೇ ಪಾಂಡವ ಮಹಾರಥರು
ಕೊರಳ ರಕ್ಷಿಸಿಕೊಳ್ಳೆನುತ ಚ
ಪ್ಪರಿಸಿ ದ್ರುಪದ ವಿರಾಟರೆಚ್ಚರು
ಸರಳ ರಶ್ಮಿಯ ಮಾಲೆ ಮುಕ್ಕುರುಕಿದುವು ದಿಗುತಟವ ೫೪

ಗಿರಿಯ ಮಕ್ಕಳು ನೆರೆದು ವಜ್ರವ
ಸರಸವಾಡುವ ಕಾಲವಾಯಿತೆ
ಹರಹರತಿ ವಿಸ್ಮಯವೆನುತ ಹೊಗರೇರಿ ಖತಿ ಮಸಗಿ
ತಿರುವ ಕಾರಿಸಿದನು ಕಠೋರದ
ಮೊರಹುಗಳ ಬಾಯ್ಧಾರೆಗಳ ಕಿಡಿ
ಹೊರಳಿಗಳ ಹೊಗರಂಬು ಹೊಕ್ಕವು ಪಾಂಡು ಸೈನ್ಯದಲಿ ೫೫

ನರರ ಕಡಿಯಾನೆಗಳ ಕಡಿಯಲಿ
ಬೆರಸಿದವು ತೇಜಿಗಳ ಕರುಳಲಿ
ಕರಿ ಘಟೆಯ ಕರುಳುಗಳು ತೊಡಕಿದವುಡಿದ ತೇರುಗಳು
ಜರಿದ ಜೋಡಿನೊಳೊಂದಿದವು ಕ
ತ್ತರಿಸಿದಾಯುಧ ಕಡಿದ ಸಿಂಧದ
ಹೊರಳಿಯಲಿ ಹೂಳಿದವು ನಿಮಿಷಕೆ ಪಾಂಡು ಸೇನೆಯಲಿ ೫೬

ನೊರೆ ರಕುತ ಸುಳಿ ಮಸಗಿ ಮಿದುಳಿನ
ಹೊರಳಿಗಳೆದುಬ್ಬಣದ ನೆಣ ವಸೆ
ದೊರಳೆಗಳ ಮೆದಕುಗಳ ಮೂಳೆಯ ಬಸಿವ ಬಲು ಜಿಗಿಯ
ಕರುಳ ಬಂಬಲು ಖಂಡದಿಂಡೆಯ
ತುರುಗಿದೆಲುವಿನ ತಳಿತ ಚರ್ಮದ
ಶಿರದ ತಡಿಗಳಲಡಸಿ ಹರಿದುದು ವೈರಿಸೇನೆಯಲಿ ೫೭

ಕೂಡೆ ತಳಪಟವಾಯ್ತು ಸುಭಟರ
ಜೋಡಿ ಜರಿದುದು ಕೌರವೇಂದ್ರಗೆ
ಖೋಡಿಯುಂಟೇ ದ್ರೋಣ ಕೇಣವ ಬಿಟ್ಟು ಕಾದುವರೆ
ಖೇಡತನ ಬಿಗುಹಾಯ್ತು ಮೆಯ್ಯಲಿ
ಮೂಡಿದವು ಹೊಗರಂಬುಗಳು ತೆಗೆ
ದೋಡಿದವು ತೆಕ್ಕೆಯಲಿ ಪಾಂಡವ ನೃಪ ಮಹಾರಥರು ೫೮

ಘಾಯವಡೆದನು ದ್ರುಪದ ಮತ್ಸ್ಯನ
ಬಾಯೊಳೊಕ್ಕುದು ರಕುತ ಕೈಕೆಯ
ರಾಯುಧಂಗಳನೊಪ್ಪಿಸಿದರಿಳಿದೋಡಿದರು ರಥವ
ಸಾಯಲಾದನು ಧೃಷ್ಟಕೇತು ವಿ
ಡಾಯಿಗೆಟ್ಟನು ಭೋಜನಿತ್ತಲು
ರಾಯನಲ್ಲಿಗೆ ರಥವ ದುವ್ವಾಳಿಸಿದನಾ ದ್ರೋಣ ೫೯

ತೀರಿತಿನ್ನೇನರಿ ನೃಪನ ಸಂ
ಸಾರವಿನ್ನರೆ ಘಳಿಗೆಯಲಿ ಗಾಂ
ಧಾರಿ ನೆರೆ ನೋಂಪಿಯಲಿ ಪಡೆದಳು ಕೌರವೇಶ್ವರನ
ಸಾರ ಹೇಳೋ ಸಾಹಸಿಕರೆಂ
ದಾರುತಿರೆ ಬಲವಿತ್ತಲಾಹವ
ಧೀರ ಸಾತ್ಯಕಿ ಭೀಮ ಪಾರ್ಥ ಕುಮಾರರನುವಾಯ್ತು ೬೦

ಗೆಲಿದನೈ ಮಝ ಪೂತು ದ್ರೋಣನ
ಬಲುಹು ಭರ್ಗನ ಸರಿ ಯುಧಿಷ್ಠಿರ
ಸಿಲುಕಿದನಲಾ ಶಿವಶಿವಾ ಕಲಿಕರ್ಣ ನೋಡೆನುತ
ಉಲಿವ ದುರಿಯೋಧನನನೀಕ್ಷಿಸು
ತಲಘು ಭುಜಬಲ ಭಾನು ನಂದನ
ನಳುಕದೀ ಮಾತುಗಳನೆಂದನು ನೀತಿಸಮ್ಮತವ ೬೧

ಗೆಲವು ನಮಗೆಲ್ಲಿಯದು ಧರ್ಮಜ
ಸಿಲುಕುವುದು ತಾನಿಲ್ಲ ಕೃಷ್ಣನ
ನೆಳಲು ದಿಟವುಂಟಾದೊಡೊಳಗಾಗರು ವಿರೋಧಿಗಳು
ನೆಲನ ತಿಣ್ಣವ ತಿದ್ದಲೋಸುಗ
ಸುಳಿದನರಿಯಾ ಕೃಷ್ಣನೀತನ
ಬಲದವರಿಗೆಂತಹುದು ಬಾಧೆಗಳೆಂದನಾ ಕರ್ಣ ೬೨

ಗಿರಿಯ ಕೊರಳಿಗೆ ವಜ್ರಮಣಿಯಾ
ಭರಣವೇ ದಳ್ಳುರಿಯ ಜೋಡುಗ
ಳರಗಿನೋಲೆಯಕಾರರಿಗೆ ಸುಯಿಧಾನವೇ ನೃಪತಿ
ವರ ತಿಮಿರ ರಾಜಂಗೆ ಮಂಗಳ
ಕರವೆ ಆ ರವಿ ಕೃಷ್ಣ ಭಕ್ತರ
ಪರಿಭವವು ಜೀವರಿಗೆ ಪಥ್ಯವೆ ಎಂದನಾ ಕರ್ಣ ೬೩

ಇರಲಿ ಮೇಣ್ ದೂರದಲಿ ಹತ್ತಿರೆ
ಯಿರಲಿ ತನ್ನವರೆಂದರತ್ತಲೆ
ಹರಹಿಕೊಂಬನು ಕೃಷ್ಣನದು ತನಗೇರಿಸಿದ ಬಿರುದು
ಹರಿ ಸಮೀಪದೊಳಿಲ್ಲ ದ್ರೋಣಂ
ಗರಸ ಸಿಲುಕಿದನೆಂದು ಬಗೆದೈ
ಮರುಳೆ ಮುರವೈರಿಯ ಕಟಾಕ್ಷದ ಕಾಹು ಘನವೆಂದ ೧೪

ಆ ಹದನದಂತಿರಲಿ ನಮ್ಮ
ಯಾಹವಕೆ ಕಲಿ ಭೀಮ ಸಾತ್ಯಕಿ
ರೂಹುದೋರಿದರರೆದೆ ಘಟೋತ್ಕಚ ಪಾರ್ಥಸುತರೊಡನೆ
ಸಾಹಸಿಕರೊಗ್ಗಾಯ್ತು ದ್ರೋಣಂ
ಗೀ ಹದನು ಭಾರಾಂಕವೀಗಳೆ
ಬೇಹ ಸುಭಟರ ಕಳುಹು ಕಾಳೆಗಕೆಂದನಾ ಕರ್ಣ ೧೫

ಎನಲು ನೂಕಿದನರಸ ದುಶ್ಶಾ
ಸನ ಜಯದ್ರಥನಿನತನುಜ ಗುರು
ತನುಜ ಕೃಪ ಮಾದ್ರೇಶ ಭಗದತ್ತಾದಿಗಳು ಸಹಿತ
ತನತನಗೆ ನಾಯಕರು ದ್ರೋಣನ
ಮೊನೆಯಬಲಿದರು ಹಿಡಿ ಯುಧಿಷ್ಠಿರ
ಜನಪತಿಯನೆನುತುರುಬಿದರು ತರುಬಿದರು ಪರಬಲವ ೧೬

ಫಡಫಡಾರೋ ಧರ್ಮಪುತ್ರನ
ಹಿಡಿವವರು ಬಾಯ್ಬಡಿಕರ್ಮೈ ಕಾ
ಳ್ಗೆಡೆದಡೇನಹುದೆನುತ ಹೊಕ್ಕನು ಭೀಮನುರವಣಿಸಿ
ಕಡಲ ಕಡುಹಿನ ಬಹಳ ಲಹರಿಯ
ನೊಡೆಮುರಿವ ಮಂದರದವೋಲವ
ಗಡಿಸಿ ಹೊಕ್ಕನು ಗದೆಯ ಘಾಡದ ಹೊದರ ಹೊಯ್ಲಿನಲಿ ೧೭

ಗದೆಯ ಘಾತಾಘಾತಿಕಾರನ
ನಿದಿರುಗೊಂಡುದು ದೆಸೆದೆಸೆಗೆ ಹ
ಬ್ಬಿದುದು ಬಲನೆಡಜೋಡು ಬಲು ಭಾರಣೆಯ ಪಟುಭಟರು
ಮದಗಜದ ನಿಡುವರಿಯ ತೇರಿನ
ಕುದುರೆಕಾರರ ಕಾಹಿನಲಿ ಕೊ
ಬ್ಬಿದುದು ನಿಬ್ಬರವಾಗಿ ಬಹುವಿಧ ವಾದ್ಯ ನಿರ್ಘೋಷ ೧೮

ತೆತ್ತಿಗರ ಬರಹೇಳು ಭೀಮಂ
ಗೆತ್ತಣದು ಜಯವೆನುತ ಸುಭಟರು
ಮುತ್ತಿಕೊಂಡರು ಮುಸುಕಿದರು ಮೆತ್ತಿದರು ಸರಳುಗಳ
ಕತ್ತಲೆಯ ಹೇರಾಸಿ ಸೂರ್ಯನ
ನೊತ್ತಿ ತಹ ದಿನವಾಯ್ತಲಾ ಎನು
ತತ್ತಲಿತ್ತಲು ಮುರಿದು ತಳಪಟ ಮಾಡಿದನು ಭೀಮ ೧೯

ಒಂದು ಕಡೆಯಲಿ ಭೀಮ ಸವರಿದ
ನೊಂದು ದೆಸೆಯಲಿ ಸಾತ್ಯಕಿಯು ಶರ
ವೊಂದು ಕಡೆಯಲಿ ಪಾರ್ಥನಂದನ ಭೀಮನಂದನರು
ಒಂದು ಕಡೆಯಲಿ ನಕುಲ ಪಾಂಡವ
ನಂದನರು ಮತ್ತೊಂದು ದೆಸೆಯಲಿ
ಮುಂದುವರಿವರು ಮುರಿದರರಿಗಳ ಹೊದರ ಹೊಸ ಮೆಳೆಯ ೨೦

ಥಟ್ಟು ನುಗ್ಗಾಯಿತು ವಿರೋಧಿಗ
ಳಿಟ್ಟಣಿಸುತಿದೆ ದ್ರೋಣನೊಬ್ಬನ
ಬಿಟ್ಟು ನೋಡುವುದುಚಿತವಲ್ಲೆನುತೆಡಬಲನ ನೋಡಿ
ಬಿಟ್ಟನಾಹವಕಹಿತಬಲ ಜಗ
ಜಟ್ಟಿ ಕೌರವ ನೃಪತಿ ರಥವನು
ಹೊಟ್ಟುಗರ ತೆಗೆ ಹೋಗ ಹೇಳೆಂದೆಚ್ಚನತಿರಥರ ೨೧

ಮಗನ ತೆಗೆಯೋ ಸಾತ್ಯಕಿಯ ಹೆರ
ತೆಗೆಯ ಹೇಳೋ ಬೇಡ ನಕುಲಾ
ದಿಗಳ ನೂಕಭಿಮನ್ಯುವನು ಹಿಮ್ಮೆಟ್ಟ ಹೇಳೆನುತ
ಮೊಗದ ಹೊಗರಿನ ಕೆಂಪನುಗುಳ್ವ
ಲಿಗಳ ದಂತದಲೌಕಿದಧರದ
ಬಿಗಿದ ಹುಬ್ಬಿನ ಭೀಮ ಹೊಕ್ಕನು ಗದೆಯ ತಿರುಗಿಸುತ ೨೨

ಸಿಲುಕಿದನು ಶಿವ ಸ್ವಾಮಿದ್ರೋಹನ
ಗಳದ ರಕುತಕೆ ಬಾಯನೊಡ್ಡೆನು
ತಳವಿಯಲಿ ಹೊಕ್ಕೊಕ್ಕಲಿಕ್ಕಿದನಾನೆ ಕುದುರೆಗಳ
ಎಲೆ ದುರಾತ್ಮ ದ್ಯೂತಕೇಳೀ
ಕಲಹಲಂಪಟ ನಿಲ್ಲು ನಿಲ್ಲೆನು
ತೊಳಗುವರಿದಪ್ಪಳಿಸಿದನು ದುರ್ಯೋಧನನ ರಥವ ೨೩

ತೋಳನಳವಿಗೆ ಸಿಕ್ಕಿತೋ ಮೃಗ
ಜಾಲ ಶಿವಶಿವ ದಿವಿಜ ವಧುಗಳ
ತೋಳ ತೆಕ್ಕೆಗೆ ಒಡಲನಿತ್ತನು ರಾಯನಕಟೆನುತ
ಆಳು ಮಿಗೆ ಕಳವಳಿಸೆ ಕುರುಭೂ
ಪಾಲಕನ ಹಿಂದಿಕ್ಕಿ ಕವಿಗಡಿ
ಗೋಲ ತೆಗಹಿನೊಳೊದಗಿದರು ದುಶ್ಶಾಸನಾದಿಗಳು ೨೪

ವರ ವಿಕರ್ಣ ಸುಲೋಚನನು ದು
ರ್ಮರುಷಣನು ದುಶ್ಶಾಸನನು ಸಂ
ಗರವ ಕೆಣಕಿದರನಿಲಸುತನೊಳು ನೃಪನ ಹರಿಬದಲಿ
ನೆರೆದ ನುಸಿಗಳು ಗಿರಿಯ ಕಾಡುವ
ಸರಿಯ ನೋಡೈ ಪೂತುರೆನುತು
ಬ್ಬರಿಸಿ ಕೈದೋರಿದನು ಕಲಿ ಪವಮಾನಸುತ ನಗುತ ೨೫

ಎಚ್ಚ ಶರವನು ಗದೆಯಲಣೆದಿಡು
ಗಿಚ್ಚು ಹೊಕ್ಕಂದದಲಿ ರಥವನು
ಬಿಚ್ಚಿ ಬಿಸುಟನು ಸಾರಥಿಯನಾ ಹಯವನಾ ಧನುವ
ಕೊಚ್ಚಿದನು ಕೊಲೆಗಡಿಗನಿದಿರಲಿ
ಕೆಚ್ಚು ಮನದವರಾರು ಸೋಲವಿ
ದೊಚ್ಚತವಲೇ ನಿಮ್ಮ ಸೇನೆಗೆ ಭೂಪ ಕೇಳೆಂದ ೨೬

ಸರಿದರೀ ನಾಲುವರು ರಾಯನ
ಮರಳಲೀಯದೆ ಮತ್ತೆ ಮಾರುತಿ
ಹರಿಸಿದನು ನಿಜರಥವನತಿರಥರೊಡ್ಡು ಲಟಕಟಿಸೆ
ದೊರೆಯ ತೆಗೆಯೋ ನೂಕು ನೂಕಲಿ
ಕರಿಘಟೆಯನೆನೆ ಮುಗಿಲ ಮೋಹರ
ಧರೆಗೆ ತಿರುಗಿದವೆನಲು ಜೋಡಿಸಿದರು ಗಜವ್ರಜವ ೨೭

ವಂಗನಂಬಟ್ಟನು ವರಾಳ ಕ
ಳಿಂಗ ಬರ್ಬರರಾನೆಗಳ ಥ
ಟ್ಟಿಂಗೆ ಕೈವೀಸಿದರು ಕೊಂಡರು ನಾಳಿವಿಲ್ಲುಗಳ
ವಂಗಡದಲೆಂಬತ್ತು ಸಾವಿರ
ತುಂಗ ಗಜಘಟೆ ಕವಿದವಿವಕಿ
ನ್ನಂಗವಿಸುವವರಾರೆನುತ ಗಜಬಜಿಸಿತರಿಸೇನೆ ೭೮

ಆಳ ಹೆದರಿಸಿ ನುಡಿವ ನಾಯ್ಗಳ
ಬೀಳ ಬಡಿ ಬಡಬಾಗ್ನಿ ನೊರಜಿನ
ದಾಳಿಗಳುಕುವುದುಂಟೆ ಘಡ ಘಡಯೆನುತ ಬೊಬ್ಬಿರಿದ
ಕಾಲ ದಂಡವ ತಿರುಹಿ ಭುವನದ
ಲೂಳಿಗವ ಮಾಡುವ ಕೃತಾಂತನ
ಹೋಲುವೆಯ ಹೊಸಬಿಗನು ಹೊಕ್ಕನು ಭೀಮನುರವಣಿಸಿ ೭೯

ಗದೆಯಲಪ್ಪಳಿಸಿದನು ಕೋದಂ
ಡವಲಿ ಕಾದಿದ ಮುದ್ಗರವಲೊರ
ಸಿದನು ಲೌಡಿಯಲರೆದನುರೆ ತರಿದನು ಕೃಪಾಣದಲಿ
ಒದೆದು ಕೆಲವನು ಮುಷ್ಟಿಯಲಿ ಮೋ
ದಿದನು ಕೆಲವನು ನಿಖಿಳ ಶಸ್ತ್ರಾ
ಸ್ತ್ರದಲಿ ಕಾದಿದನನಿಲಸುತನಿಭಬಲವ ಬರಿಕೈದು ೮೦

ಗಿಳಿಯ ಹಿಂಡುಗಳೆತ್ತ ಗಿಡಿಗನ
ದಳದುಳವು ತಾನೆತ್ತ ಭೀಮನ
ಸುಳಿವು ಗಡ ಕಾಲೂರುವವೆ ಕರಿ ಘಟೆಗಳೊಗ್ಗಿನಲಿ
ಕಳಿತ ಹೂವಿನ ತೊಡಬೆಗಳೊ ರಿಪು
ಬಲವೊ ಬಿರುಗಾಳಿಯೊ ವೃಕೋದರ
ನಳವ ಬಲ್ಲವನಾವನೈ ಧೃತರಾಷ್ಟ್ರ ಕೇಳೆಂದ ೮೧

ಹೋಯಿತಾ ಮಾತೇಕೆ ಗಜದಳ
ಮಾಯವಾದುದು ವಂಗ ಭೂಪನ
ಬಾಯೊಳಗೆ ಬೆಟ್ಟಿದನು ಗದೆಯನು ಮಿಕ್ಕ ನಾಲ್ವರನು
ಸಾಯ ಬಡಿದನು ಮುಂದೆ ಕೌರವ
ರಾಯನನು ತಾಗಿದನು ಭೀಮನ
ದಾಯ ಬಂದುದು ಸಕಲ ಕುರು ತಳತಂತ್ರ ತಲ್ಲಣಿಸೆ ೮೨

## ನೂರನೆಯ ಸಂಧಿ

ಸೂ. ಹನುಮನನುಜನ ಬಾಹುಬಲ ರಿಪು
ವನಧಿಯನು ತುಳುಕಿದನು ಭಗದ
ತ್ತನನು ಮರ್ದಿಸಿ ಮುರಿದನರ್ಜುನ ಸುಪ್ರತೀಕವನು

ಗುರುಗಳಾಡಿದ ಭಾಷೆ ಪರಬಲ
ದರಸ ಕಟ್ಟುವದದು ನಿಲಲಿ ನ
ಮ್ಮರಸ ಸಿಲುಕಿದ ಭೀಮ ಗಜ ಕಟ್ಟಿದುದು ಬೀದಿಗಳ
ತಿರುಗಲಾಪರೆ ಸಮಯವಿದು ಸಂ
ಗರ ಸಮರ್ಥರು ಬರಲಿ ಯೆಂಬ
ಬ್ಬರದೊಳಗೆ ಭಗದತ್ತ ಮೇಳೈಸಿದನು ನಿಜಗಜವ ೧

ಬಲವೊರಜೆ ಎಡವೊರಜೆ ಬೆನ್ನಿನ
ಮಿಳಿಯ ಜಾಳಿಗೆವೊರಜೆ ತಳ ಸಂ
ಕಲೆಯ ತೊಡರಂಕಣೆಯ ಕೊಂಡೆಯ ಪಕ್ಕ ಗಂಟೆಗಳ
ತುಳುಕಿನುಗ್ಗಡಣೆಗಳ ಹಿಣಿಲಿನ
ಬಲುವೊರಜೆಗಳ ಬಾರ ಸಂಕಲೆ
ಗಳನು ಬಿಗಿದರು ಜೋಡಿಸಿದರುಬ್ಬರದ ಮದಗಜವ ೨

ಬಿಗಿದು ಗಳವತ್ತಿಗೆಯನೆದೆವ
ತ್ತಿಗೆಯ ಘನಮುಂಡಿಗೆಯ ಲೌಡಿಯ
ಬಿಗಿದು ಗುಳ ರೆಂಚೆಗಳ ಭಾರಿಯ ಕೈಯ ಪಟ್ಟೆಯವ
ಆಗಿವ ಬಡಿಗೆಯನಂಕುಶದ ಕ
ಟ್ಟಿಗೆಯ ಧಾರೆಯ ಕಮಳದಳ ಕೊಡ
ತಿಗಳ ಕೈಹಾರೆಗಳನಳವಡಿಸಿದರು ವಹಿಲದಲಿ ೩

ಮುಗಿಲ ಹೊದರಿನೊಳೆಳೆಯ ರವಿ ರ
ಶ್ಮಿಗಳು ಪಸರಿಸುವಂತೆ ಸುತ್ತಲು
ಬಿಗಿದ ಗುಳದಲಿ ಹೊಳೆಯೆ ಹೊಂಗೆಲಸದ ಸುರೇಖೆಗಳು
ಗಗನ ಗಂಗಾ ನದಿಯ ಕಾಲುವೆ
ತೆಗೆದರೆನೆ ತೆಕ್ಕೆಯುದ ಪಲ್ಲವ
ವಗಿಯೆ ಮೆರೆದುದು ಬಿಗಿದ ಮೊಗರಂಬದ ವಿಳಾಸದಲಿ ೪

ಗಗನ ತಳವನು ಬಿಗಿದ ಬಲು ರೆಂ
ಚೆಗಳ ತುಂಬಿದ ಹೊದೆಯ ಕಣೆಗಳ
ಬಿಗಿದ ನಾಳಿಯ ಬಿಲ್ಲುಗಳ ತೆತ್ತಿಸಿದ ಸೂನಿಗೆಯ
ಉಗಿವ ಸರಿನೇಣುಗಳ ಕೈ ಗುಂ
ಡುಗಳ ಕವಣೆಯ ಲೌಡಿ ಕರವಾ
ಳುಗಳ ಜೋಡಿಸಿ ಜೋದರಡರಿದರಂದು ಬೊಬ್ಬಿರಿದು ೫

ಸುತ್ತ ಮೆರೆದವು ಮೇಲೆ ಪಲ್ಲವ
ಸತ್ತಿಗೆಯ ಸಾಲುಗಳು ಬಿರುದಿನ
ಕತ್ತರಿಯ ಹೀಲಿಗಳ ಝಲ್ಲರಿ ಮುಸುಕಿದವು ಗಜವ
ಒತ್ತಿ ಕಿವಿಗಳನೊದೆದು ಶಿರವಲಿ
ತೆತ್ತಿಸಿದರಂಕುಶವನಾ ಭಗ
ದತ್ತ ದಂತಿಯನೇರಿದನು ಜಯರವದ ರಭಸದಲಿ ೬

ಕಾಲುಗಾಹಿನ ಕುದುರೆಗಳ ಕಾ
ಲಾಳ ಕೈವಾರಿಗಳ ಸಬಳದ
ಸೂಲಿಗೆಯ ತೇರುಗಳ ಹರಹಿನ ಹೊಂತಕಾರಿಗಳ
ಆಳ ಬಲು ಬೊಬ್ಬೆಯಲಿ ಘನ ನಿ
ಸ್ಸಾಳತತಿ ಮೊಳಗಿದವು ಡೌಡೆಯ
ತೂಳುವರೆಗಳು ಗಜರಿದವು ತಂಬಟದ ಲಗ್ಗೆಯಲಿ ೭

ಸುರಪ ಕಡಿಯಲು ಕೆರಳಿ ಕುಲಗಿರಿ
ಯುರಿಯನುಗುಳುವುದೆನಲು ದಾಡೆಗ
ಳರುಣಮಯ ರಶ್ಮಿಗಳ ಪಸರದಲೆಸೆದುದಿಭಪತಿಯ
ಧರಣಿಯಳತೆಯ ಹರಿಯ ನೆಗಪಿನ
ಚರಣದಗ್ರದೊಳಿಳಿವ ಘನ ನಿ
ರ್ಝರದವೊಲು ಮದಧಾರೆ ಮೆರೆದುದು ಕರಿಕಪೋಲದಲಿ ೮

ಜಗದ ನಿಡುನಿದ್ರೆಯಲಿ ಮೋಹರ
ದೆಗೆದ ಮುಗಿಲೋ ಮೇಣಖಿಳ ಕುಲ
ದಿಗಿಭವೆಂಟೊಂದಾಯ್ತೊ ಕೈ ಕಾಲ್ ಮೂಡಿತೋ ನಭಕೆ
ಅಗಿದು ಮೆಟ್ಟಿವಡವನಿ ಪಡುವಲು
ನೆಗೆದುದಡರಿದು ಮುಂದೆ ಮೆಟ್ಟಲು
ಚಿಗಿದುದಿಳೆ ಮೂಡಲು ಮಹಾ ಗಜವೈದಿತಾಹವವ ೯

ಪವನಬಲ ಪರಿದಳಿತ ಕದಳೀ
ನಿವಹದಲಿ ನಭ ಧಾತುಗೆಟ್ಟುದು
ರವಿಗೆ ಕಾಪಥವಾಯ್ತು ಹೊಗಳುವೆನೇನನದುಭುತವ
ಭುವನ ಕೋಶದೊಳಾದ ವಿಪಿನೋ
ದ್ಭವವೊ ಭಾರಿಯ ದಂತಿ ಮಹದಾ
ಹವದೊಳಿಳಿದುದು ಕೃಷ್ಣನೊಲಿದರಿಗಾವುದರಿದೆಂದ ೧೦

ಹಿಡಿವ ಬಿಡುವೊಬ್ಬುಳಿಗೆ ತಹ ಬಲ
ನೆಡಕೆ ಹಾಯ್ಕುವ ಸುತ್ತಲೊತ್ತುವ
ತಡೆವ ನಡಸುವ ಸೆಳೆವ ತಿರುಹುವ ಹದಿರ ಜೋಕೆಯಲಿ
ಗಡಣಿಸಿದನವನಿಭಪತಿಯನವ
ಗಡಿಸಿ ನೂಕಿದೊಡಮಮ ದಿಕ್ಕರಿ
ನಡುಗೆ ಚೌಕದ ಕಳನ ತುಳಿದುದು ಸುಪ್ರತೀಕಗಜ ೧೧

ಇದು ಗಜಾಸುರನೋ ಮಹಾ ದೇ
ವಿದುವೆ ಮಹಿಷಾಸುರನೊ ಮಾಯಾ
ರದನಿಯೋ ದಿಟವಿವನು ಗೆಲುವರೆ ಭೀಮ ಫಲುಗುಣರು
ತ್ರಿದಶ ರಿಪುಗಳ ಗಂಡನಿದು ಕಾ
ದಿದೆವು ನಾವಿಂದೆನುತ ಸುಭಟರು
ಕದಡಿ ಸರಿದುದು ಸೂರೆಗೊಂಡುದು ಬಲ ಪಲಾಯನವ ೧೨

ಮೊಗದ ಜವನಿಕೆದೆಗೆದು ನೆತ್ತಿಯ
ಬಗಿದು ಕೂರಂಕುಶದಲಾನೆಯ
ಬೆಗಡುಗೊಳಿಸಲು ಬೀದಿವರಿದುದು ಸುಭಟರೆದೆಯೊಡೆಯೆ
ಹಗೆಯ ಬಲದಲಿ ಹರಿದು ಸುಭಟರ
ಚಿಗುಳಿದುಳಿದುದು ತಲೆಗಳನು ಮುಗಿ
ಲಗಲದಲಿ ಹರಹಿದುದು ದಿಕ್ಕರಿ ಹೊಕ್ಕು ಮೋಹರವ ೧೩

ನೆಳಲು ಸುಳಿಯಲು ದಂತಿಯೆಂದ
ಪ್ಪಳಿಸೆ ವಾಸುಕಿ ನೊಂದನಂಬುಧಿ
ತುಳುಕಿದವು ಸತ್ವಾತಿಶಯವೆಂತುಟು ಮಹಾದೇವ
ತುಳಿದುದರಿ ಸುಭಟರನು ಸಾವಿರ
ತಲೆಯ ಸೆಳೆದುದು ಸೊಂಡಿಲಲಿ ವೆ
ಗ್ಗಳೆಯ ಮದಕರಿ ಕೇಣಿಗೊಂಡುದು ವೈರಿಮೋಹರವ ೧೪

ಸೀಳಿ ಹರಹಿತು ಕರಿಗಳನು ನೇ
ಪಾಳಗುದುರೆಯ ಥಟ್ಟುಗಳ ಹಿಂ
ಗಾಲಲಣೆದುದು ರಥವನೈದಾರೇಳನೊಂದಾಗಿ
ತೋಳೊಳಗೆ ನೆಗ್ಗೊತ್ತಿ ಮಿಗೆ ಕಾ
ಲಾಳ ತೊತ್ತಳದುಳಿದು ಕಾಲನ
ಗೂಳೆಯಕ್ಕುಪಕಾರಿಯಾದುದು ಸುಪ್ರತೀಕಗಜ ೧೫

ದ್ವಿಗುಣ ತ್ರಿಗುಣದಲಣೆದು ಜೋಡಿಸಿ
ಚಿಗಿದು ಹಾಯ್ಕುವ ಮೆಟ್ಟಿ ಸೀಳುವ
ತೆಗೆದು ಕಟ್ಟುವ ತಿರುಹಿ ನೂಕುವ ಹೆಡತಲೆಯೊಳಡಸಿ
ಉಗುರೊಳೌಕುವ ನಿಗ್ಗವದೊಳಿ
ಬ್ಬಗಿಯ ಮಾಡುವ ಕಾಲುಗೊಲೆಯಲಿ
ವಿಗಡ ಕರಿ ತುಳಿದಾಡಿತಿದಿರಿದಿರಾದ ಪಟುಭಟರ ೧೬

ಅರೆದುದೋ ಪರಬಲವ ಕಾಲನ
ಹೊರೆದುದೋ ಮಾರಣದ ಮಂತ್ರವ
ಬರೆದುದೋ ಬವರಕ್ಕೆ ಬಲುಗೈಗಳನು ಕೈ ನೆಗಹಿ
ಕರೆದುದೋ ಬಲವೆಲ್ಲ ನೀರಲಿ
ನೆರೆದುದೋ ಮಾರ್ಬಲದ ವೀರರು
ಹರೆದುದೋ ಹವಣೆಲ್ಲ ದಂತಿಯ ಸಮರಸೌರಂಭ ೧೭

ಮುರಿದು ಮಂದರಗಿರಿ ಪಯೋಧಿಯ
ತೆರೆಗಳನು ತುಳಿವಂತೆ ರಿಪು ಮೋ
ಹರವನರೆದುದು ನುಗ್ಗುನುಸಿಯಾಯ್ತಖಿಳ ತಳತಂತ್ರ
ತೆರಳಿದರು ರಾವುತರು ರಥಿಕರು
ಹೊರಳಿಯೊಡೆದುದು ಗಜದ ಗಾವಳಿ
ಜರಿದುವಳಿದುದನಾರು ಬಲ್ಲರು ಭೂಪ ಕೇಳೆಂದ ೧೮

ಮುರಿದು ಕೊಟ್ಟುದು ದಂತಿ ಗುರುವಿ
ನ್ನುರುಬಿ ರಾಯನ ಹಿಡಿಯದಿರನಿದ
ತರುಬಲಾಪರೆ ಬರಲಿ ಸಾತ್ಯಕಿ ನಕುಲ ಪವನಜರು
ಇರಿತಕಿವರಂಜಿದರೆ ಪಾರ್ಥಂ
ಗರುಹಿ ಬೇಗದೊಳೆನುತ ನಾಯಕ
ರೊರಲುತಿರಲನುವಾದುದಿತ್ತಲು ದೊರೆಗಳೊಗ್ಗಿನಲಿ ೧೯

ಅಳ್ಳಿದೆಯ ಮನ್ನೆಯರನೊಗ್ಗಿನ
ಡೊಳ್ಳುಗರ ಕಟವಾಯ ಕೊಯ್ ತಲೆ
ಗಳ್ಳರಿವದಿರು ತರಿಚುಗೆಡೆವರ ಹೋಗ ಹೇಳೆನುತ
ಬಿಲ್ಲಗೊಲೆಗೇರಿಸುತ ಚೌಪಟ
ಮಲ್ಲ ಹೊಕ್ಕನು ಭೀಮ ಭಟರ
ಲ್ಲಲ್ಲಿ ಕವಿದುದು ದ್ರುಪದ ನಕುಲ ಯುಧಿಷ್ಠಿರಾದಿಗಳು ೨೦

ಕರಿ ಬಲುಹು ಕಲಿ ಭೀಮಸೇನನು
ದುರುಳನಿನ್ನೇನಹನೆನುತ ಮೋ
ಹರಿಸಿ ಕವಿದುದು ಮತ್ಸ್ಯ ಸೃಂಜಯ ಪಂಚ ಕೈಕೆಯರು
ತಿರುವಿಗಂಬನು ತೊಡಚಿ ಸಾತ್ಯಕಿ
ನರನ ಮಗ ಹೈಡಿಂಬ ಯವನೇ
ಶ್ವರರು ಧೃಷ್ಟದ್ಯುಮ್ನ ಮೊದಲಾಗೈದಿದರು ಗಜವ ೨೧

ಗಿರಿಯ ತರಿವರೆ ಶಕ್ರನಲ್ಲದೆ
ನೆರೆದ ದಿವಿಜ ಸಮೂಹ ಮಾಡುವ
ಭರವಸಿಕೆ ತಾನೇನು ಹೊದ್ದಿದರಿವರು ದಿಗ್ಗಜವ
ಸರಳ ಬಲುವಳೆಗಾಲವಹಿತ
ದ್ವಿರದ ಗಿರಿಯಲಿ ಕಾಣಲಾದುದು
ಕೆರಳಿ ಕರಿ ಕೈಕೊಂಡುದರೆಯಟ್ಟಿತು ಮಹಾರಥರ ೨೨

ಚೆಲ್ಲಿತಿದು ದೆಸೆದೆಸೆಗೆ ಚೌಪಟ
ಮಲ್ಲ ಗಿಲ್ಲರ ಪಾಡೆ ನಮ್ಮದು
ಬಲ್ಲಿತಹುದುಸುರಿಲ್ಲದೊಡಲಿನ ಚೆಲುವು ಫಲವೇನು
ಅಲ್ಲಿ ದೈವದ ನೆನಹು ಘನ ಜಯ
ವಲ್ಲಿಯದು ನಮಗಿನ್ನು ಸಾಕಿ
ನ್ನೆಲ್ಲವೇತಕೆ ಚಿತ್ತವಿಸು ಚೌದಂತನಾಹವವ ೨೩

ಸೆಳೆವಿಡಿದು ತುರುಗಾಹಿ ಪಶು ಸಂ
ಕುಲವ ತೆವರುವವೋಲು ವಾಯಸ
ಕುಲವನೊಂದೇ ಗೂಗೆ ಹೊಯ್ದರೆಯಟ್ಟುವಂದದಲಿ
ಬಲುಕಣೆಗಳಿವದಿರನು ಕರಿ ಮುಂ
ಕೊಳಿಸಿ ಕೆಡಹಿತು ಯವನ ಕೌಸಲ
ಬಲವ ಕೈಕೆಯ ಮಗಧ ಭೂಪರ ಕೊಡಹಿ ಹಾಯಿಕಿತು ೨೪

ಹಿಡಿಹಿಡಿಯಲೋಡಿದನು ದ್ರುಪದನು
ಸಿಡಿದು ಕೆಲಸಾರಿದನು ಪವನಜ
ನೊಡಲುಸುರ ಸಂಬಂಧವಳಿದುದು ಸಿಲುಕಿದನಿಬರಿಗೆ
ಒಡೆಮುರಿದು ಸಾತ್ಯಕಿಯ ರಥವನು
ತುಡುಕಿ ಹಾಯ್ಕಿತು ಭೀಮತನಯನ
ಕೊಡಹಿ ಬಿಸುಟುದು ಕೊಂದುದಗಣಿತ ಕರಿ ತುರಂಗಮವ ೨೫

ಮರಳಿ ಮತ್ತೆ ಮಹಾರಥರು ಸಂ
ವರಿಸಿಕೊಂಡುದು ಸರಳ ಮಳೆಗಳ
ಸುರಿದರಾನೆಯ ಮೇಲೆ ಜೋದರ ಕೋಲ ಮನ್ನಿಸದೆ
ಗಿರಿಯ ಮುತ್ತಿದ ಮಿಂಚುಬುಳುವಿನ
ಹೊರಳಿಯಂತಿರೆ ಹೊನ್ನ ಬರಹದ
ಸರಳು ಮೆರೆದವು ಕರೆದರದುಭುತ ಕಣೆಯ ಸರಿವಳೆಯ ೨೬

ಬಾಲರೆಸುಗೆಯ ಮಿಟ್ಟೆಯಂಬಿಗೆ
ಸೋಲುವುದೆ ಗಿರಿ ವೈರಿ ಸುಭಟರ
ಕೋಲ ಕೊಂಬುದೆ ವೀರ ಕುಂಜರ ಮತ್ತೆ ಮೊಗ ನೆಗಹಿ
ಆಳೊಳಗೆ ಬೆರಸಿತು ಮಹಾ ರಥ
ರೋಳಿ ಮುರಿದುದು ಕುರಿಯ ಹಿಂಡಿನ
ತೋಳನೈ ನಿನ್ನಾನೆ ಸವರಿತು ಮತ್ತೆ ಮಾರ್ಬಲವ ೨೭

ಹಡಗು ಜಲಧಿಯೊಳೋಡಿ ಗಿರಿಗಳ
ನೆಡಹಿ ನುಗ್ಗಾದಂತೆ ಸುಭಟರ
ಗಡಣ ಗಜವನು ತಾಗಿ ತಾಗಿ ವಿಘಾತಿಯಲಿ ನೊಂದು
ಒಡಲ ಮೇಲೆಳ್ಳನಿತು ಮೋಹವ
ಹಿಡಿಯದಿವರೌಕಿದರು ಹಾವಿನ
ಕೊಡನು ದೋಷಿಗೆ ಸುಲಭವೇ ಧೃತರಾಷ್ಟ್ರ ಕೇಳೆಂದ ೨೮

ಮುರಿದು ಮೋದಿತು ಸಮ್ಮುಖದೊಳಿ
ಟ್ಟೊರಸಿತೆಡದಲಿ ಹೊಯ್ದು ಸೀಳಿತು
ಹರಹಿತಪಸವ್ಯದಲಿ ಮೆದೆಗೆಡಹಿತು ಮಹಾರಥರ
ಹೊರೆದ ರಕುತದ ಧಾರೆಗಳ ತುದಿ
ಕರದೊಳೆಳಲುವ ತಲೆಗಳಂಭ್ರಿಯೊ
ಳೊರೆದ ನೆಣನಡಗಿನ ಮಹಾಗಜ ಮೊಗೆದುದರಿಬಲವ ೨೯

ಹಿಂದೆ ಹಿಡಿವರು ಮುರಿದರೆಡದಲಿ
ಸಂದಣಿಸುವರು ತಿರುಗಿದರೆ ಬಲ
ದಿಂದ ಕೈ ಮಾಡುವರು ಕವಿದರೆ ಸಿಡಿವರೆಡಬಲಕೆ
ಮುಂದೆ ಕಟ್ಟುವರಟ್ಟಿದರೆ ಮುರಿ
ವಿಂದ ಜಾರುವರಾ ಮಹಾರಥ
ವೃಂದ ಕಾದಿತು ಮದಕರಿಯ ಬೇಸರದೆ ಬಳಿಸಲಿಸಿ ೩೦

ಕರಿಯ ಕೋಲಾಹಲವನಾ ಜೋ
ದರ ಶರೌಘವ ಸೈರಿಸುತ ಮು
ಕ್ಕುರುಕಿ ಧರ್ಮಜ ನಕುಲ ಸಾತ್ಯಕಿ ಭೀಮ ನಂದನರು
ಸರಳ ಸಾರವ ಕಟ್ಟಿದರು ಮಿಗೆ
ಕೆರಳಿದನು ಭಗದತ್ತನನಿಬರ
ಹರೆಗಡಿದು ಹೊಗರಂಬ ಸುರಿದನು ಸರಿದರತಿರಥರು ೩೧

ಹತ್ತು ಶರದಲಿ ಧರ್ಮಜನನಿ
ಪ್ಪತ್ತರಿಂದಭಿಮನ್ಯುವನು ತೊಂ
ಬತ್ತು ಶರದಲಿ ನಕುಲ ಸಾತ್ಯಕಿ ದ್ರುಪದ ಕೈಕೆಯರ
ಕೆತ್ತಿದನು ಹದಿನೆಂಟು ಬಾಣದ
ಲಿತ್ತ ಭೀಮನ ನಂದನನನೈ
ವತ್ತು ಶರದಲಿ ಸಕಲ ರಥಿಕರನೆಚ್ಚು ಬೊಬ್ಬಿರಿದ ೩೨

ಬಿನುಗುಗಳ ತೆಗೆ ಭೀಮಸೇನನ
ಮೊನೆಗೆ ಬಿಡು ಬಿಡು ಗಜವನೆಂದು
ಬ್ಬಿನಲಿ ತಿರುಹಿದನಾನೆಯನು ಪವನಜನ ಸಮ್ಮುಖಕೆ
ಧನುವ ಬಿಸುಟನು ಗದೆಯ ತುಡುಕಿದ
ನನುವರದೊಳಡ್ಡೈಸಿ ದಂತಿಯ
ಕನಲಿಸಿದನೊಳಹೊಕ್ಕು ಹೊಯ್ದನು ಸಿಂಹನಾದದಲಿ ೩೩

ಭುಜದ ಸಾಹಸ ಹತ್ತು ಸಾವಿರ
ಗಜದ ಘಾಡಿಕೆ ಸಿಂಹನಾದದ
ವಿಜಯ ವಿಗ್ರಹ ವೀರ ಹಳಚಿದನಮಮ ಮದಕರಿಯ
ತ್ರಿಜಗ ತಲೆಕೆಳಗಾಗೆ ದಿವಿಜ
ವ್ರಜ ಭಯಂಗೊಳೆ ಮಿಕ್ಕು ಸುರಪನ
ಗಜದ ಹೊಯ್ ಕೈಯ್ಯಾನೆ ಹೆಣಗಿತು ಭೀಮಸೇನನಲಿ ೩೪

ಚಿಗಿದು ಹರಿಸುತ ಹಳಚಿದರೆ ಕುಲ
ದಿಗಿಭವೆದೆಯೊಡೆದವು ನಗಂಗಳ
ಬಿಗಹು ಸಡಿಲಿತು ಧರಣಿ ನೆಗ್ಗಿತು ಚರಣ ಹತಿಗಳಲಿ
ಜಗಿವ ರಕುತದ ಗದೆಯ ಬಿರುಪೊ
ಯ್ಲುಗಳೊಳಗೆ ಕಿಡಿ ಮಸಗಿ ಕಬ್ಬೊಗೆ
ನೆಗೆಯೆ ಹೊಯ್ದನು ಭೀಮ ಲಂಘಿಸಿ ಗಜದ ಮಸ್ತಕವ ೩೫

ಹೊಯ್ದು ಹಿಂಗದ ಮುನ್ನ ಭೀಮನ
ಕೈದುಡುಕಿದರೆ ಮುರಿದು ಹಿಂದಕೆ
ಹಾಯ್ದುಡೊಡೆಮುರಿಯಿತ್ತು ಕುಸಿದರೆ ಕಾಲೊಳೊಡೆ
ಮೈದೆಗೆದರಿಟ್ಟಣಿಸಿ ಪೂತ್ಕೃತಿ
ಗೈದು ಸುಭಟನ ಸಿಂಹನಾದಕೆ
ಮುಯ್ಯಿಗೆದು ಕರಿ ಕಾದುತಿರ್ದುದು ಭೀಮಸೇನನಲಿ ೩೬

ನೆಳಲುಗಂಡವನ್ನಳಿಸುವುದು ಸುಂ
ಡಿಲನು ತೂಗಾಡುವುದು ಹೋರಿದು
ಬಳಲುವುದು ಮೊಗ ನೆಗಹಿ ಭೀಮನ ದನಿಯನಾಲಿಪುದು
ಅಳಿಯ ಮುತ್ತಿಗೆಗಳನು ಬೀಸದೆ
ನೆಲಕೆ ಕಿವಿಯನು ಜೋಲುಬಿಡುವುದು
ಬಲುಕಣೆಯ ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ ೩೭

ಭೀಮನಿನ್ನರೆಘಳಿಗೆಯಲಿ ನಿ
ರ್ನಾಮನೋ ತಡವಿಲ್ಲ ದಂತಿಯು
ತಾಮಸಿಕೆ ಘನ ತೆಗೆಯಿ ತಮ್ಮನನೆನುತ ಕಳವಳಿಸೆ
ಭೂಮಿಪತಿ ಕೈಕೊಂಡನೊಡನೆ ಸ
ನಾಮರೈದಿತು ನಕುಲ ಸಾತ್ಯಕಿ
ಭೀಮಸುತನಭಿಮನ್ಯು ದ್ರುಪದ ಶಿಖಂಡಿ ಕೈಕೆಯರು ೩೮

ಮತ್ತೆ ರಥವರುವತ್ತು ಸಾವಿರ
ಮುತ್ತಿಕೊಂಡುದು ಗಜವನಾ ಭಗ
ದತ್ತ ಬಳಲಿದನವಧಿಯಿಲ್ಲದೆ ಶರವ ನೆರೆ ತುಳುಕಿ
ಮೆತ್ತಿದವು ಶರವಿಭದ ಮೆಯ್ಯಾಲಿ
ಬೆತ್ತ ಬೆಳೆದದ್ರಿಯವೊಲಿದ್ದುದು
ಮತ್ತಗಜ ನೊಂದರಿಯದನಿಬರ ಬಾಣ ಹತಿಗಳಲಿ ೩೯

ಕರಿ ವಿನೋದದಿ ಕುಡಿದ ಜಲವನು
ಕರಣಿಯಲಿ ತೆಗೆತೆಗೆದು ರಿಪು ಮೋ
ಹರಕೆ ಚೆಲ್ಲಿತು ಕಲ್ಪಮೇಘದ ಬಸುರ ಬಗಿದಂತೆ
ಕರ ತುಷಾರದಲಿವರು ಮೋರೆಯ
ತಿರುಹೆ ನನೆದವು ಬಾಹುರಕಿ ಹ
ಕ್ಕರಿಕೆ ಹಲ್ಲಣ ಜೋಡು ಸೀಸಕ ಛತ್ರ ಚಮರಿಗಳು ೪೦

ಸಾಕು ಬಳಲಿದಿರಕಟಕಟ ನಿಮ
ಗೇಕೆ ಸಂಗರವಾನೆಯೊಡನೆ ಪಿ
ನಾಕಿ ಸಮರದೊಳಳುಕುವನು ಕರಿ ನಿಮ್ಮ ಪಾಡೇನು
ಆ ಕಿರೀಟಿಯು ಕರಸಿಕೊಳ್ಳಿ ವಿ
ವೇಕವುಳ್ಳರೆ ತೊಲಗಿಯೆನುತವೆ
ನೂಕಿದನು ಭಗದತ್ತನನಿಬರ ಮೇಲೆ ದಿಗ್ಗಜವ ೪೧

ಮಿಗೆ ತಿಮಿಂಗಿಲನೊಡನೆ ಹುಲು ಮೀ
ನುಗಳು ಮಾಡುವುದೇನು ಹೊರ ಕಾ
ಲುಗಳ ಹೋರಟೆ ಕಾಣಲಾದುದು ಪರರ ಥಟ್ಟಿನಲಿ
ತೆಗೆಯೆ ರಿಪುಬಲ ಕೊಲುತ ಬಂದುದು
ದಿಗಿವವಿವರೊಡನೈದಿ ದ್ರೋಣಾ
ದಿಗಳು ಹೊಕ್ಕುದು ಧರ್ಮಪುತ್ರನ ಹಿಡಿವ ತವಕದಲಿ ೪೨

ತಿದ್ದಿತೋ ಕಲಿ ಪಾರ್ಥನಿದ್ದರೆ
ಹೊದ್ದ ಹೇಳೋ ರಾಯದಳವಡಿ
ಗದ್ದುದೋ ಬಿದ್ದುದು ಭಯಾಂಬುಧಿಯೊಳಗೆ ಭಟನಿಕರ
ಹದ್ದು ಕಾಗೆಯ ಮನೆಗೆ ಬಾಣಸ
ವಿದ್ದುದೋ ಗಜವೆನುತ ಬೊಬ್ಬಿಡು
ತಿದ್ದುದರಿ ಬಲವಿತ್ತ ಹರಿ ಕೇಳಿದನು ಕಳಕಳವ ೪೩

ಮರುಳು ಫಲುಗುಣ ಸುಪ್ರತೀಕದ
ಖುರಪುಟವ ನೋಡಿತ್ತಲಗ್ಗದ
ಪರಶುರಾಮನ ಖಾತಿಗಂಬುಧಿ ನೆಲನ ಬಿಡುವಂತೆ
ತೆರಳುತಿದೆ ನಮ್ಮವರು ದಿಕ್ಕರಿ
ಹರಹಿ ಕೊಲುತಿದೆ ಮಾತಿಗಿಲ್ಲವ
ಸರವೆನುತ ಕರಿಯತ್ತ ತಿರುಹಿದನಸುರರಿಪು ರಥವ ೪೪

ಹೆದರದಿರು ನರ ಹೋಗದಿರು ಹೋ
ಗದಿರು ಕೊಡು ಕೊಡು ಕಾಳಿಗವನೆಂ
ದದಟರಟ್ಟಿತು ವೀರ ಸಮಸಪ್ತಕರು ಸೂಠಿಯಲಿ
ಇದಿರಲಿಸಸುತ ಶಲ್ಯರಡಗ
ಟ್ಟಿದರು ಖತಿಯಲಿ ಪಾರ್ಥನನಿಬರ
ಸದೆದು ವಹಿಲದಲೈದಿದನು ದಿಕ್ಕರಿಯ ಸಮ್ಮುಖಕೆ ೪೫

ಬಲು ಬಿಸಿಲೊಳುರೆ ನೊಂದ ನೈದಿಲೆ
ಗಳಿಗೆ ಚಂದ್ರಿಕೆ ದೈತ್ಯರುರುಬೆಗೆ
ಸಿಲುಕಿದಮರರಿಗಸುರಹರನ ಕಟಾಕ್ಷವಿಕ್ಷೇಪ
ಬಲಿದ ತಾಪತ್ರಯದ ಭವಗೋ
ಟಲೆಯ ಜೀವಿಗೆ ಸುಪ್ರಬೋಧದ
ಸುಳುವಿನಂತಿರೆ ಪಾರ್ಥ ಮೈದೋರಿದನು ನಿಜಬಲಕೆ ೪೬

ಕೆದರಿತೀ ಬಲ ಬೆರಳ ತುಟಿಗಳೊ
ಳೊದರಿತಾ ಬಲ ತಾಪಶಿಖಿಯಲಿ
ಕುದಿದುದೀ ಬಲ ಭೀತಿಕಂಚುಕ ಕಳೆದುದಾ ಬಲಕೆ
ಕದಡಿತೀ ಬಲ ರೋಮಪುಳಕವ
ಹೊದೆದುದಾ ಬಲ ಹಿಂಡೊಡೆದು ನೆರೆ
ಕದುಬಿತೀ ಬಲ ನೆರೆದುದಾ ಬಲ ನರನ ರಥ ಸುಳಿಯೆ ೪೭

ಗಿರಿಯ ವಿಸಟಂಬರಿಯನಮರೇ
ಶ್ವರನು ತಡೆವವೊಲಳ್ಳಿರಿವ ದಿ
ಕ್ಕರಿಯನಡಗಟ್ಟಿದನು ಕಾಯದೊಳೊಟ್ಟಿದನು ಶರವ
ಕೆರಳಿದನು ಭಗದತ್ತನಿವನೇ
ನರನು ಫಡ ಫಡ ನಿಲ್ಲು ನಿಲ್ಲೆನು
ತುರು ಶರೌಘವ ಕರೆದು ಮುಸುಕಿದನರ್ಜುನನ ರಥವ ೪೮

ಪೂತುರೇ ಭಗದತ್ತ ಬಿಲು ವಿ
ದ್ಯಾತಿಶಯ ಕಿರಿದುಂಟಲಾ ಶರ
ಪಾತವಿನಿತಿಲ್ಲದಡೆ ಹೊಳ್ಳಿಸಬಹುದೆ ನೃಪ ಧನವ
ನೂತನ ದ್ವಿಪದಿಂದ ವೈರಿ
ವ್ರಾತವನು ಸೋಲಿಸಿದ ಗರ್ವದ
ರೀತಿಗಿದು ಠಾವಲ್ಲೆನುತ ತೆಗೆದೆಚ್ಚನಾ ಪಾರ್ಥ ೪೯

ನರನ ಶರಜಾಲವನು ಖಂಡಿಸಿ
ಸುರಿದನಂಬನು ಕೃಷ್ಣರಾಯನ
ಸಿರಿಯೊಡಲ ಸೋಂಕಿದವು ನೂಕಿದವಂಬು ಗರಿ ಸಹಿತ
ನರನ ಕುದುರೆಯ ಮೇಲೆ ಸಿಂಧದ
ಹರಿಯ ತನುವಿನ ಮೇಲೆ ತಳಿತವು
ಶರನಿಕರ ಬಿಡದೆಚ್ಚನಾ ಭಗದತ್ತನರ್ಜುನನ ೫೦

ಸೆಳೆದು ಬಾಣತ್ರಯದಲೆಚ್ಚನು
ಫಲುಗುಣನ ಮಕುಟವನು ಮುರಿದುದು
ಕೆಲಕೆ ಸಡಿಲುವ ಮಣಿಗಳಲಿ ವರಮೌಳಿಯೋಸರಿಸೆ
ಬಲಿದ ಸಸಿನವ ಮಾಡಿ ಖಾತಿಯ
ತಳೆದು ಕೂರಂಬಿನಲಿ ಹೊಳಿದ
ನಳವಿಯಲಿ ರಿಪುಗಜವನಾ ಭಗದತ್ತನವಯವವ ೫೧

ಇಳುಹಿದನು ಬಲುಗುಳವ ಖಂಡಿಸಿ
ಕಳಚಿದನು ಮೊಗರಂಬವನು ಹೊ
ಮ್ಮಳಿಯ ಕುಣಿಕೆಯ ಮುರಿದು ತರಿದನು ಸುತ್ತ ರಂಚೆಗಳ
ಹಳವಿಗೆಯನಾ ಛತ್ರ ಚಮರಾ
ವಳಿಯ ಸೀಳಿದು ಬಿಸುಟನಾ ಗಜ
ತಿಲಕ ಮುಂಡಾಸನದಲಿರ್ದುದು ಭೂಪ ಕೇಳೆಂದ ೫೨

ಮತ್ತೆ ಖಾತಿಯೊಳಂಕುಶದಿನೊಡೆ
ಯೊತ್ತಿ ಬಿಟ್ಟನು ಗಜವನರ್ಜುನ
ನತ್ತಲಿಭ ತೂಳಿದಡೆ ತಿರುಹಿದನಸುರರಿಪು ರಥವ
ಇತ್ತ ಬಲದಲಿ ಬಲಕೆ ಮೊಗವಿಡ
ಲತ್ತಲೆಡದಲಿ ಮರಳಲಲ್ಲಿಂ
ದತ್ತ ತಿರುಗಿಸಿ ಬಳಲಿಸಿದನಸುರಾರಿ ದಿಗ್ಗಜವ ೫೩

ಸಾರಥಿಯ ಕೊಂದಲ್ಲದರ್ಜುನ
ತೀರುವವನಲ್ಲೆನುತ ದಳ್ಳುರಿ
ಧಾರೆಯುಬ್ಬೆದರಲಿ ದೇವನನೆಸಲು ಮಧ್ಯದಲಿ
ಹಾರಿಸಿದನಾ ಪಾರ್ಥನಿವನೆಡೆ
ಗೋರಿದನಲಾಯೆನುತ ಕೆಡೆಯೆನು
ತಾರಿ ಸುರಿದನು ನೂರು ಬಾಣವನರ್ಜುನನ ಮೇಲೆ ೫೪

ಅನಿತು ಶರವನು ಕಡಿದು ಭಗದ
ತ್ತನ ಧನುವನಿಕ್ಕಡಿಗಡಿಯೆ ಕಂ
ಗನೆ ಕನಲಿ ಗವಸಣಿಗೆಯಿಂದುಗಿದನು ನಿಜಾಯುಧವ
ದಿನಪ ಕೋಟಿಯ ರಶ್ಮಿಯನು ತುದಿ
ಮೊನೆಯೊಳುಗುಳುವ ಬಾಯಿ ಧಾರೆಯ
ತನಿಯುರಿಯ ತೆಕ್ಕೆಯಲಿ ಥಳಥಳಿಸುವ ಮಹಾಂಕುಶವ ೫೫

ತೈಲ ಲೇಪದ ನಯದ ಹೊಗರಿನ
ಜಾಳಿಗೆಯ ಗಹಗಹಿಕೆಗಳ ಹೂ
ಮಾಲೆಗಳ ಸಿಂಪಿಸಿದ ಗಂಧದ ಬಂಧದಕ್ಷತೆಯ
ಕೀಲಣೆಯ ಮಣಿವೆಳಗುಗಳ ಹರಿ
ದಾಳಿಯಲಿ ಕಾಳೋರಗನ ಕುಡಿ
ನಾಲಗೆಯುವೋಲೆಸೆದುದಂಕುಶ ಭಟನ ಮುಷ್ಟಿಯಲಿ ೫೬

ಕುಡಿ ಕಿರೀಟಿಯ ರಕುತವನು ಹಗೆ
ಕೆಡಲಿ ಕೌರವ ರಾಯನಾಳಲಿ
ಪೊಡವಿಯನು ಪರಿತೋಷವಾಗಲಿ ನೃಪನ ಮಿತ್ರರಿಗೆ
ತಡೆದು ಹಲಕಾಲದಲುಪಾಸಂ
ಬಡಿಸಿದೆನ್ನದು ದೋಷ ಖಾತಿಯ
ಹಿಡಿಯದಿರು ನೀನೆನುತ ತಿರುಹಿಟ್ಟನು ಮಹಾಂಕುಶವ ೫೭

ತೀರಿತಿನ್ನೇನಕಟ ಪಾಂಡವ
ವೀರರುಬ್ಬಟೆ ಹಾರಿತೇ ತ್ರಿಪು
ರಾರಿಯುರಿಗಣ್ಣಿಂಗೆ ಸೋಲದ ಕೈದುಗೊಂಡನಲ
ಧಾರುಣಿಯನಿನ್ನಾಣಲಿ ಧರ್ಮಾ ಕು
ಮಾರನಕಟಿನ್ನಾರು ಕಾವವ
ರಾರೆನುತ ತಲ್ಲಣಿಸುತಿರ್ದುದು ಪಾಂಡುಸುತ ಸೇನೆ ೫೮

ಹಾ ಯುಧಿಷ್ಠಿರ ರಾಯ ಶಿವ ಶಿವ
ವಾಯುಸುತ ಹಾ ಪಾರ್ಥ ಹಾ ಮಾ
ದ್ರೇಯರಿರ ಹಾಯೆನುತ ಹರೆದುದು ಸೇನೆ ದೆಸೆದೆಸೆಗೆ
ಬಾಯ ಬಿಟ್ಟುದು ದಿವಿಜಬಲ ನಿ
ರ್ದಾಯದಲಿ ನೆಲನಾಯಿತಲ ಕುರು
ರಾಯಗೆನುತಿರ್ದುದು ಜಗತ್ರಯವೊಂದು ನಿಮಿಷದಲಿ ೫೯

ಇದರ ಪಾಡೇನೆಸಪಾಯವ
ನೊದೆದು ಕಳೆಯರು ಕೃಷ್ಣಭಕ್ತರು
ಸದರವೇ ಉರಿಗೆಂಡವೊರಲೆಯ ಬಾಯ್ಗೆ ಭಾವಿಸಲು
ಹೊದರುಗಿಡಿಗಳ ಹೊಗೆಯ ಹೇರಾ
ಳದಲಿ ಬಹ ದಿವ್ಯಾಯುಧಕೆ ಚಾ
ಚಿದನು ವಕ್ಷಸ್ಥಳವನಸುರಾರಾತಿಯುಡಹಾಯ್ದು ೬೦

ಮೆರೆದುದುರದಲಿ ಕೌಸ್ತುಭದ ಮಣಿ
ಮರಿಯನಿಳುಹಿದ ವೋಲು ಬೆಳಗಿನ
ತುರುಗಲಲಿ ತೂಗಾಡುತಿದ್ದುದು ಕೈದು ತೊಡವಾಗಿ
ಮುರಿದುದಗ್ಗದ ಭೀತಿ ಹರುಷದ
ಸೆರಗೆ ಬಿಡುಗಡೆಯಾಯ್ತು ಬಲು ಬೊ
ಬ್ಬಿರಿವುತಿರ್ದುದು ವೈರಿಕಟಕದೊಳರಸ ಕೇಳೆಂದ ೬೧

ಕೌತುಕವನಿದ ಕಂಡು ಫಲುಗುಣ
ಕಾತರಿಸಿ ನುಡಿದನು ಮುರಾಂತಕ
ಸೂತತನಕಲಸಿದನೆ ಕಾದಲಿ ಕೌರವನ ಕೂಡೆ
ಸೂತತನವೇ ಸಾಕು ತನಗೆನು
ತಾ ತತುಕ್ಷಣ ಧನುವ ಬಿಸುಟು ವಿ
ಧೂತ ರಿಪುಬಲ ಪಾರ್ಥನಿದ್ದನು ಹೊತ್ತ ದುಗುಡದಲಿ ೬೨

ತಿರುಗಿ ಕಂಡನು ಕೃಷ್ಣನೀತನ
ಪರಿಯನರಿದನು ಮನದಲಿವನು
ತ್ತರವ ಕೇಳುವೆನೆಂದು ಪಾರ್ಥನ ನುಡಿಸಿದನು ನಗುತ
ಉರವಣಿಸುತಿದೆ ಮತ್ತೆ ಕರಿ ನಿಜ
ಕರದೊಳಾಯುಧವಿಲ್ಲ ಘನ ಸಂ
ಗರಕೆ ಬೇಸರು ತೋರಿತೇ ತನ್ನಾಣೆ ಹೇಳೆಂದ ೬೩

ಕಾದುವಾತನು ನೀನು ವೈರಿಯ
ಕೈದುವನು ನೀ ಗೆಲಿದೆಯಿನ್ನುರೆ
ಕಾದುವವರಾವಲ್ಲ ಸಾರಥಿತನವೆ ಸಾಕೆಮಗೆ
ಕೈದುವಿದೆಕೊ ಕೃಷ್ಣ ನೀನೇ
ಕಾದು ವಾಘೆಯ ತಾಯೆನಲು ಮರು
ಳಾದನೈ ನರನೆನುತ ಮುರಾರಿಯಿಂತೆಂದ ೧೪

ಆಡಬಾರದು ತೋರಿ ನುಡಿದರೆ
ಖೋಡಿ ನಿನಗಹುದೆಲೆ ಮರುಳೆ ನೀ
ನೋಡಲೆವೆ ಸೀವವು ಕಣಾ ನಿನ್ನಳವಿನಾಯುಧವೆ
ಹೂಡಲಾಪುದು ಜಗವನಂತಕ
ಗೂಡಲಾಪುದು ಮುನಿದರಿದ ಕೈ
ಮಾಡುವರೆ ನಿಲಬಾರದಜ ರುದ್ರಾಮರೇಂದ್ರರಿಗೆ ೧೫

ವಿಲಸದುಪನಿಷದುರು ರಹಸ್ಯವ
ತಿಳುಹಿದೆನು ನಿನಗೊಮ್ಮೆ ಮತ್ತೆಯು
ತಿಳಿದುದಿಲ್ಲಾ ಕ್ಷತ್ರತಾಮಸ ಬಿಡದು ಬುದ್ಧಿಯಲಿ
ಸುಲಭವಂತರ್ನಿಷ್ಠರಿಗೆ ನಿ
ಷ್ಕಳ ನಿರೂಪನನಂತ ನಿಜ ನಿ
ರ್ಮಳವೆನಿಪ ಪರಮಾತ್ಮ ಚಿನುಮಯ ರೂಪ ತಾನೆಂದ ೧೬

ಸಂಗಿಯಲ್ಲದ ವಿಮಳ ಪರಮಾ
ತ್ಮಂಗೆ ಲೀಲೆಯೊಳಾಯ್ತು ಮಾಯಾ
ಸಂಗವದರಿಂದಾಯ್ತು ನಾಲುಕು ಮೂರ್ತಿಗಳು ತನಗೆ
ಅಂಗಿಯಂಗ ವಿಭಾಗವಿಲ್ಲದ
ಭಂಗ ಸನ್ಮಾತ್ರಂಗೆ ಭಾವಿಸ
ಲಂಗ ಕಲ್ಪನೆ ಮಿಥ್ಯವಲ್ಲಾ ಪಾರ್ಥ ಹೇಳೆಂದ ೧೭

ಇಂದು ಕಮಳಭವ ಪ್ರಜೇಶ್ವರ
ರೊಂದು ಮೂರುತಿ ವಿಷ್ಣು ಮನುಗಳು
ಸಂದ ಪಾರ್ಥಿವ ಲೋಕಪಾಲಕರೊಂದು ಮೂರ್ತಿಯದು
ಇಂದು ಶೇಖರನಗ್ನಿ ಯಮನರ
ವಿಂದಸಖ ಕಾಲಾಗ್ನಿ ಮೂರ್ತಿಯ
ರೊಂದು ಮೂರುತಿ ವಿಶ್ವದೊಳು ನಿಷ್ಯೂತ ಚೈತನ್ಯ ೧೮

ಇದುವೆ ಮತ ಕೆಲಬರಿಗೆ ಕೆಲಬರಿ
ಗಿದು ಮತವು ವಿವಿಧಾವತಾರದ
ಲುದಿಸುತೊಂದಿಹುದೊಂದು ಮೂರ್ತಿ ತಪೋ ವಿನೋದದಲಿ
ಉದಧಿಯೊಳು ವರ ಯೋಗ ನಿದ್ರಾ
ಸ್ಪದದಲೊಂದಿಹುದೊಂದಖಿಳ ವಿ
ಶ್ವದ ಸುಕೃತ ದುಷ್ಕೃತವನೀಕ್ಷಿಸುತಿಹುದು ಕೇಳೆಂದ ೧೯

ಕೆಲರು ಧರ್ಮಾರ್ಥಾದಿ ನಾಲುಕು
ಲಲಿತ ಮೂರ್ತಿಗಳೆಂಬರಿದರೊಳು
ಕೆಲರು ಜಾಗರಣಾದ್ಯವಸ್ಥೆಗಳೆಂಬ ಮೂರ್ತಿಗಳು
ತಿಳಿಯಲೋತಪ್ರೋತದಲಿ ನಿ
ಷ್ಕಳವೆ ಸಕಳವೆಯಾಗಿ ವಿಶ್ವದೊ
ಳೊಳಗು ಹೊರಗಾನಲ್ಲದಿಲ್ಲೆಲೆ ಪಾರ್ಥ ಕೇಳೆಂದ ೨೦

ಉದಧಿಶಯನನ ಮೂರ್ತಿ ಕಲ್ಪಾಂ
ತದಲಿ ಕರಗಿದ ಧರೆಯನುದ್ಧರಿ
ಸಿದೆನು ಯಜ್ಞವರಾಹ ರೂಪಿನಲಂದು ಕರುಣದಲಿ
ಪದವ ಭಜಿಸಿಯೆ ಭೂಮಿ ತಾ ಬೇ
ಡಿದಳು ಪುತ್ರನನಾಕೆಯಲಿ ಜನಿ
ಸಿದನು ನರಕಾಸುರನವಧ್ಯನು ಸಕಲ ದಿವಿಜರಿಗೆ ೨೧

ಇದು ವರಾಹನ ದಾಡೆಯಿದನಾ
ತ್ರಿದಶವೈರಿಗೆ ಕೊಟ್ಟೆನವನಿಂ
ದಿದುವೆ ಭಗದತ್ತಂಗೆ ಬಂದು ವೈಷ್ಣವಾಸ್ತ್ರವಿದು
ಇದು ಹರಬ್ರಹ್ಮಾದಿಗಳ ಗೆಲು
ವುದು ಕಣಾ ನಿಮಿಷದಲಿ ತನಗ
ಲ್ಲದೆ ಮಹಾಂಕುಶವುಳಿದ ಭಟರಿಗೆ ಮಣಿವುದಲ್ಲೆಂದ ೨೨

ತೀರಿತಾತನ ಶಕ್ತಿ ಚಾಪದ
ನಾರಿ ಬೆಸಲಾಗಲಿ ಮಹಾಸ್ತ್ರವ
ನಾರುಭಟೆಯಲಿ ಗಜವ ಮುರಿ ಕೆಡೆಯೆಸು ಮಹೀಸುತನ
ಹೋರದಿರು ಹೊಗು ಬವರಕೆನಲಸು
ರಾರಿಯಂಘ್ರಿಯೊಳೆರಗಿ ಕರುಣಾ
ವಾರಿಧಿಯೊಳಭಯವನು ಪಡೆದನು ತುಡುಕಿದನು ಧನುವ ೨೩

ಎಲವೆಲವೊ ಭಗದತ್ತ ಕಲಿತನ
ದಳವ ತೋರಿನ್ನೆನಗೆನುತ ಹೊಳೆ
ಹೊಳೆವ ಕೂರಂಬಿನಲಿ ಕೋದನು ಗಜದ ಮಸ್ತಕವ
ನಿಲುಕಿ ನೆತ್ತಿಯನೊಡೆದು ನಿಡು ಪ
ಚ್ಚಳಕೆ ಹಾಯ್ದವು ಬಾಣ ದಿಕ್ಕರಿ
ನೆಲಕೆ ದಾಡೆಯನೂರಿ ಕೆಡೆದುದು ಸುಪ್ರತೀಕಗಜ ೨೪

ಸುತ್ತಿದುರಗನ ಮಂದರಾಚಲ
ಕಿತ್ತು ಬೀಳ್ವಂದದಲಿ ಬರಿಕೈ
ಸುತ್ತಿ ಮಗ್ಗುಲನೂರಿ ಕೆಡೆದುದು ಸುಪ್ರತೀಕಗಜ
ಇತ್ತಲರ್ಜುನ ದೇವನುಗಿದನು
ಬತ್ತಳಿಕೆಯಲಿ ದಿವ್ಯ ಶರವನು
ತೆತ್ತಿಸಿದನವನುರವನಿಬ್ಬಗಿಯಾದುದರಿ ದೇಹ ೨೫

ಗಿರಿಯ ಶಿರದಲಿ ಹೂತ ಕಕ್ಕೆಯ
ಮರ ಮುರಿದು ಬೀಳ್ವಂತೆ ವಿಮಳಾ
ಭರಣ ಕಾಂತಿಯ ಕಡಲ ಕೋಮಲಕಾಯ ಭಗದತ್ತ
ಉರುಳಿದನು ಗಜದಿಂದ ಕುರುಬಲ
ಸರಿಯೆ ಸುರಕುಲ ಕುಸುಮ ವೃಷ್ಟಿಯ
ಸುರಿಯೆ ರಿಪುಸೇನೆಯಲಿ ಹರುಷದ ಹೊನಲು ಬಿರುವರಿಯೆ ೨೬

ಹರಿದುದಗ್ಗದ ಸುಪ್ರತೀಕ
ದ್ವಿರದ ಭಗದತ್ತಾಂಕನವನಿಯೊ
ಳುರುಳಿದನು ದಳ ಮುರಿದುದಿನ್ನೇನೆನುತ ಬಲ ಬೆದರೆ
ನರನ ತಡೆದರು ಸುಬಲ ಸುತರಿ
ಬ್ಬರು ನೃಪಾಲ ಕುಮಾರರೈನೂ
ರುರುಬಿದರು ಗಾಂಧಾರ ರಾಜರು ಶಕುನಿಯೊಡಗೂಡಿ ೨೭

ಕೊಂದನಿಬ್ಬರ ಸೌಬಲರ ನೃಪ
ನಂದನರ ಗಾಂಧಾರರೊಂದೆರ
ಡೆಂದು ಸಲುಗೆಗೆ ಸಲಿಸಿ ಬಂದೈನೂರ ಬರಿಕೈದು
ಬಂದ ದ್ರೋಣನ ಹಳಚಿ ಭಂಗಕೆ
ತಂದನಹಿತ ವ್ರಜವನಿತ್ತಲು
ಸಂದಣಿಸಿದರು ಕೌರವರು ಪವಮಾನಸುತನೊಡನೆ ೭೮

ಗುರುತನುಜ ರವಿಸೂನು ಮಾದ್ರೇ
ಶ್ವರ ಜಯದ್ರಥ ಕೌರವಾದಿಗ
ಳರಿ ಗದಾಘಾತದಲಿ ಕೈ ಮೈ ಬದಣಿದು ಮನವಣಿದು
ತೆರಳಿದರು ಬಳಿಕಪರ ಜಲಧಿಯೊ
ಳುರಿವ ವಡಬನ ದೀಪ್ತಶಿಖರದೊ
ಳಿರಗುವಂತೆ ಪತಂಗ ಮಂಡಲವಿಳಿದುದಂಬರವ ೭೯

ತಿರುಗಿದರು ಕೌರವರು ದ್ರೋಣನ
ಬೆರಳ ಸನ್ನೆಗೆ ಸನ್ನೆಗಾಳೆಗ
ಳುರವಣಿಸಿತೆನೆ ತಂಬಟದ ನಿಸ್ಸಾಳ ರಭಸದಲಿ
ಮುರಿದರಿವರಳ್ಳಿರಿವ ಬೊಬ್ಬೆಯ
ಧರಧುರದ ಕಹಳೆಗಳ ಭೇರಿಯ
ಭರಿತ ರವದಲಿ ವೀರನಾರಾಯಣನ ಕರುಣದಲಿ ೮೦

## ನಾಲ್ಕನೆಯ ಸಂಧಿ

ಸೂ. ರಾಯ ಕಟಕಾಚಾರ್ಯನಾ ಚಾ
ಪಾಯುಧಾಗ್ರಣಿ ಮೋಹಿದನು ಪ
ದ್ಮಾಯತ ವ್ಯೂಹವನು ಸೈನ್ಯದ ಜಾಣನಾ ದ್ರೋಣ

ನೀನು ನೆರಹಿದ ಸುಕೃತ ಫಲವದ
ನೇನ ಹೇಳುವೆನಿತ್ತಲುಗ್ಗಡ
ದಾನೆ ಬಿದ್ದುದು ಕಾದಿ ನಸು ಸೊಪ್ಪಾದುದರಿಸೇನೆ
ಧ್ಯಾನವಿತ್ತಲು ರಾಗವತ್ತಲು
ಮೋನವಿತ್ತಲು ರಭಸವಿತ್ತಲು
ಹಾನಿಯಿತ್ತಲು ವೃದ್ಧಿಯತ್ತಲು ಭೂಪ ಕೇಳೆಂದ ೧

ಎತ್ತಲೊಲೆವುದು ಧರ್ಮಬಲ ತಾ
ನತ್ತಲೊಲೆವುದು ದೈವ ದೈವವ
ದೆತ್ತಲೊಲೆದಿಹುದತ್ತ ವಿಜಯಶ್ರೀಯ ಕುಡಿನೋಟ
ಹೆತ್ತ ನಿನ್ನೊಡಲಿಂಗೆ ತಂಪಿನ
ತೆತ್ತಿಗನೊ ಮೇಣ್ ಬಹಳ ತಾಪದ
ಮುತ್ತಯನೊ ಕುರುರಾಯನೆಲೆ ಧೃತರಾಷ್ಟ್ರ ಕೇಳೆಂದ ೨

ಸಾಕು ಸಂಜಯ ನುಡಿಯ ಖಡ್ಗದ
ಲೇಕೆ ಗಂಟಲ ಕೊಯ್ವೆ ತಾನವಿ
ವೇಕದಲುಪಾರ್ಜಿಸಿದ ದುಷ್ಕೃತ ಫಲವೆ ತನಗಾಯ್ತು
ಸಾಕದಂತಿರಲಿನ್ನದೇಹರಿ
ಶೋಕಿಸುವೆನಿಲ್ಲಿಂದ ಮೇಲು
ದ್ರೇಕಿ ಕೌರವನೇನ ನೆಗಳಿದ ಹದನ ಹೇಳೆಂದ ೩

ಚಿತ್ತವಿಸು ಧೃತರಾಷ್ಟ್ರ ಕೌರವ
ನಿತ್ತನಿರುಳೋಲಗವ ಮಂಜಿನ
ಮುತ್ತಿಗೆಯ ನಭದಂತೆ ಹೊಗೆದುದು ರಾಯನಾಸ್ಥಾನ
ನೆತ್ತಿ ಮುಸುಕಿನ ಕೈಯ ಗಲ್ಲದ
ಕುತ್ತದಲೆ ನೆಟ್ಟಾಲಿಗಳ ಚಲ
ಚಿತ್ತರಿದ್ದುದು ಸಕಲ ನಾಯಕವಾಡಿ ದುಗುಡದಲಿ ೪

ದುಗುಡವೇಕೈ ನಿಮಗೆ ಕರ್ಣಾ
ದಿಗಳು ನೀವಕ್ಕಡರೆ ಬಲುಗಾ
ಳೆಗದೊಳಗೆ ಕೈಮಾಡಿ ನೊಂದಿರಿ ಕೊಂದಿರರಿಭಟರ
ಹಗೆಯ ಕಟ್ಟಲು ಕೊಟ್ಟ ಭಾಷೆಯು
ಬಿಗುಹು ಬೀತುದು ಗುರುಗಳಲಿ ನಂ
ಬುಗೆ ನಿರರ್ಥಕವಾಯ್ತೆನುತ ಕುರುರಾಯ ಬಿಸುಸುಯ್ದ ೫

ದ್ರೋಣ ಮನಗೊಂಡಿರಿವಡಂಬುಜ
ಪಾಣಿಯಿದಿರೇ ನಮ್ಮ ಭಾಗ್ಯದ
ಜಾಣಸಿಗ ವಿಧಿ ವಿಷವ ಬೆರಸಿದಡಾರು ಕಾವವರು
ಹೂಣಿ ಹೊಕ್ಕನು ಹಿಡಿದು ವೈರಿ
ಕ್ಷೋಣಿಪನ ತರುಬಿದನು ನಾವ
ಕ್ಷೀಣದುರಿತರು ಹಲುಬಿ ಮಾಡುವುದಾವುದುಂಟೆಂದ ೬

ಬಲದೊಳಗೆ ಹೆಸರುಳ್ಳವರು ಮು
ಮ್ಮುಳಿತವಾಯಿತ್ತಾನೆ ಕುದುರೆಗ
ಳಳಿದುದಕೆ ಕಡೆಯಿಲ್ಲ ಪವನಜ ಪಾರ್ಥರುಬ್ಬಟೆಯ
ನಿಲಿಸುವಾಪತ್ತಿಗರು ನಮಗಿ
ಲ್ಲಳಲಿ ಮಾಡುವುದೇನೆನುತ ನೃಪ
ತಿಲಕ ಬೇಸರ ನುಡಿಯೆ ಬಳಿಕಿಂತೆಂದನಾ ದ್ರೋಣ ೭

ಪರಮ ಗರುಡೋದ್ಗಾರ ಮಣಿಯನು
ಗರಳ ಸುಡುವುದೆ ಕೃಷ್ಣರಾಯನ
ಕರುಣ ಕವಚವನೊಡೆಯಲಾಪವೆ ಎಮ್ಮ ಕೈದುಗಳು
ಅರಸ ಮರುಳೈ ಧರ್ಮಪುತ್ರನ
ಬೆರಸಿ ತುಡುಕಲು ತಡೆದನರಿಯಾ
ಮುರಹರನ ಮೈದುನನು ಬಳಿಕೆಮ್ಮಳವೆ ಹೇಳೆಂದ ೮

ನಾಳೆ ಫಲುಗುಣ ತಪ್ಪಿದರೆ ಭೂ
ಪಾಲಕನ ಕಟ್ಟುವೆನು ರಣದಲಿ
ಶೂಲಿಯಡ್ಡೈಸಿದರೆ ಹಿಡಿವೆನು ಚಿಂತೆ ಬೇಡಿದಕೆ
ಕೇಳು ಪದ್ಮವ್ಯೂಹದಲಿ ಹೊ
ಕ್ಕಾಳು ಮರಳಿದಡಸ್ತ್ರವಿದ್ಯಾ
ಭಾಳಲೋಚನನೆಂಬ ಬಿರುದನು ಬಿಟ್ಟೆ ನಾನೆಂದ ೯

ಒಳ್ಳಿತಿದು ಕಡುಭಾಷೆ ನಾಳಿನ
ಗೆಲ್ಲವೇ ಗೆಲವರ್ಜುನನು ಹೊ
ಕ್ಕಲ್ಲಿ ಹೊಗುವೆವು ತರುಬಿ ಕಾದುವೆವೆಮ್ಮ ಕಳನೊಳಗೆ
ಅಲ್ಲಿ ನೀನೊಲಿದಂತೆ ಮಾಡಿ
ನ್ನೆಲ್ಲವೇತಕೆಯೆನುತ ಸಾಹಸ
ಮಲ್ಲರೆದ್ದರು ವೀರ ಸಮಸಪ್ತಕರು ಗರ್ಜಿಸುತ ೧೦

ಪೂತು ಪಾಯಿಕು ತತ್ತ ಹೊತ್ತಿನೊ
ಳಾತುಕೊಂಬವರಾರು ಪಾರ್ಥಿವ
ಜಾತಿಯಲಿ ರಣದಿಟ್ಟರುಂಟೇ ನಿಮ್ಮ ಹೋಲಿಸಲು
ಸೋತುದರಿಬಲ ಹೋಗೆನುತ ಮು
ಯ್ಯಾಂತು ಮನ್ನಿಸಿ ಹೊನ್ನ ಬಟ್ಟಲೊ
ಳಾತಗಳಿಗೊಲಿದಿತ್ತನೈ ಕರ್ಪುರದ ವೀಳೆಯವ ೧೧

ಹರೆದುದೋಲಗವಿತ್ತ ಭುವನದೊ
ಳಿರುಳಡವಿಗಡಿತಕ್ಕೆ ಹರಿದವು
ಕಿರಣ ತೆತ್ತಿದವಭ್ರದಲಿ ತಾರಕೆಯ ತೇರುಗಳು
ಹರಿವ ಮಂಜಿನ ನದಿಯ ಹೊಳ್ಳವು
ಸರಸವಾಯಿತು ಗಗನತಳ ತಾ
ವರೆಯ ಸಖ ನಿಜರಥವ ನೂಕಿದನುದಯ ಪರ್ವತಕೆ ೧೨

ಕೆದರಿದವು ನಿಸ್ಸಾಳ ಬರ ಸಿಡಿ
ಲದುಭುತ ಧ್ವನಿಯಲಿ ನಿರಂತರ
ವೊದರಿ ಬಯ್ದವು ಕಹಳೆ ಬಿರುದಾವಳಿಯಲತಿರಥರ
ಕದುಬಿದವು ತಂಬಟದ ದನಿ ದಿಗು
ಸದನವನು ಬಲು ಬೊಬ್ಬೆಯಲಿ ನೆಲ
ನದಿರೆ ನಡೆದುದು ಸೇನೆ ಕಲಶೋದ್ಭವನ ನೇಮದಲಿ ೧೩

ಉಲಿದು ಸಮಸಪ್ತಕರು ತಮ್ಮಯ
ಕಳನ ಗೆಲಿದರು ಚಾತುರಂಗದ
ದಳದ ತೆರಳಿಕೆ ತೆಕ್ಕೆಮಿಗೆ ಕುರುಸೇನೆ ನಡೆತಂದು
ಕಳನ ವೆಂತಣಿಸಿದವು ರಾಯನ
ಕೆಲಬಲದ ಸುಯಿಧಾನದಲಿ ರಿಪು
ವಳಯ ಧೂಳೀಪಟನು ಹೊಕ್ಕನು ರಣವನಾ ದ್ರೋಣ ೧೪

ನೆರೆದ ನಿಜ ಸೇನಾಧಿಪರ ಸಂ
ವರಣೆಗಳ ನೋಡಿದನು ನೀಡಿದ
ನರಿಬಿರುದ ಮಂಡಳಿಕರಿಗೆ ಕಾಳೆಗದ ವೀಳೆಯವ
ಹರಿಗೆ ಹಲಗೆ ಕೃಪಾಣ ತೋಮರ
ಪರಶು ಕಕ್ಕಡೆ ಕೊಂತ ಮುದ್ಗರ
ಸುರಗಿಯತಿಬಳ ಪಾಯ್ದಳವ ನಿರಿಸಿದನು ವಳಯದಲಿ ೧೫

ಎಸಳೆಸಳು ಮಿಗೆ ಸರಿಸದಲಿ ಜೋ
ಡಿಸಿದನವನೀಪಾಲರನು ತ
ದ್ವಿಸಜ ಕರ್ಣಿಕೆಯೊಡ್ಡಿನಲಿ ಬಲಿದನು ಸುಯೋಧನನ
ಪಸರಿಸಿತು ಕೌರವ ಕುಮಾರ
ಪ್ರಸರ ಕೇಸರವಾಯ್ತು ಮೃತ್ಯುವಿ
ನೊಸಗೆಗೆತ್ತಿದ ಗುಡಿಗಳೆನೆ ತಳಿತವು ಪತಾಕೆಗಳು ೧೬

ನಿಲಿಸಿದನು ರಾವುತರನಾ ಹೊರ
ವಳಯದಲಿ ರಾವುತರು ಮುರಿದರೆ
ನಿಲುವುದೊಗ್ಗಿನ ದಂತಿಘಟೆ ಗಜಸೇನೆಗಡಹಾಗಿ
ತೊಳಗಿದವು ತೇರುಗಳು ತೇರಿನ
ದಳಕೆ ತಾನೊತ್ತಾಗಿ ರಣದ
ಗ್ಗಳೆಯರಿದ್ದುದು ರಾಯನೊಡಹುಟ್ಟಿದರು ಸಂದಣಿಸಿ ೧೭

ಅರನೆಲೆಯ ಸುಯಿಧಾನ ಬಾಹ್ಲಿಕ
ತರಣಿಸುತ ಗುರುಸೂನು ಕೃತವ
ರ್ಮರಿಗೆ ಕೃಪ ದುಶ್ಶಾಸನಾದ್ಯರಿಗಿದಿರಿನಾರೈಕೆ
ಎರಡು ಕೆಲದಲಿ ಶಲ್ಯ ಶಕುನಿಗ
ಳಿರವು ಸೇನೆಯ ಸುತ್ತುವಳಯದ
ಭರವ ಕೈಕೊಂಡೊಡ್ಡ ಮೆರೆದನು ಗರುಡಿಯಾಚಾರ್ಯ ೧೮

ಹಿಳುಕ ತಿರುಹುತ ಸಮ್ಮುಖದ ಬಲ
ದಳವಿಯಲಿ ಗಿರಿಯಂತೆ ಸೈಂಧವ
ಬಿಲುದುಡುಕೆ ಮೋಹರಿಸಿದರು ಭೂರಿಶ್ರವಾದಿಗಳು
ದಳದ ಕೆಲಬಲದೊಳಗೆ ನೃಪ ಸಂ
ಕುಲವ ನಿಲಿಸಿದನಮಮ ಕಾಲನ
ಬಳಗಕೌತಣವೆನಲು ಪದ್ಮವ್ಯೂಹ ರಂಜಿಸಿತು ೧೯

ಏನ ಹೇಳುವೆನದನು ನೃಪ ತವ
ಸೂನುವಿನ ಮೋಹರದೊಳಳ್ಳಿರಿ
ವಾನೆಗಳನುಪ್ಪರಿಸಿ ಗಗನವ ಮೊಗೆವ ಕುದುರೆಗಳ
ಆ ನೃಪರ ವಾಜಿಗಳ ಗಿರಿ
ಸಾನು ಸಡಿಲಲು ಜಡಿವ ಭೇರಿ
ಧ್ವಾನವನು ಪಯದಳದ ಸುಭಟರ ಸಿಂಹಗರ್ಜನೆಯ ೨೦

ಮೇಳವದಲೆನ್ನಾನೆಗಳ ಬರ
ಹೇಳು ಸುಭಟರೊಳಗ್ಗಳರ ಬರ
ಹೇಳು ಬಿಂಕಕೆ ಮೆರೆವ ಭೀಮಾರ್ಜುನರ ಬರಹೇಳು
ಲೋಲುಪತೆಯವನಿಯಲಿಹರೆ ಬರ
ಹೇಳು ಯಮನಂದನನನಿಂದಿನ
ಕಾಳೆಗಕ್ಕೆಂದಿತ್ತ ಭಟ್ಟರನಟ್ಟಿದನು ದ್ರೋಣ ೨೧

ತುರಗ ಹಲ್ಲಣಿಸಿದವು ಸಮರ
ದ್ವಿರದ ಸಜ್ಜಂಬಡೆದವೊಗ್ಗಿನ
ತುರಗದಲಿ ಹೂಡಿದವು ರಥ ಕಾಲಾಳು ಮುಂಕೊಳಿಸಿ
ಅರಸನನುಜರು ಸಹಿತ ಕೃಷ್ಣನ
ಬೆರಳ ಸನ್ನೆಯೊಳೈದೆ ಬಿಡೆ ಮೋ
ಹರಿಸಿ ನಿಂದುದು ಮುರಿದ ಮಕರವ್ಯೂಹ ರಚನೆಯಲಿ ೨೨

ಬಂದು ಸಮಸಪ್ತಕರ ದೂತರು
ನಿಂದರರ್ಜುನನಿದಿರಲೇಳೈ
ನಂದಗೋಪನ ಮಗನ ಬಿಡು ಸೆರವಿಂಗೆ ಕರೆ ಹರನ
ಇಂದು ರಣದಲಿ ಬದುಕಿದರೆ ನೀ
ನೆಂದಿಗೆಯೂ ಬದುಕಿದನೆ ನಿಂದಿರು
ನಿಂದಿರೆಂದವಗಡಿಸಿ ಹಿಡಿದರು ಫಲುಗುಣನ ಸೆರಗ ೨೩

ಖರೆಯುರಹಿರುಂಟುಂಟು ನೆರವನೆ
ಕರಸಿಕೊಂಡೇ ಬಹೆನೆನುತ ರಿಪು
ಚರರ ಕಳುಹಲು ದ್ರೋಣನಟ್ಟಿದ ದೂತರೈತಂದು
ಕರೆದರರ್ಜುನನನು ವೃಕೋದರ
ಧರಣಿಪತಿ ಮಾದ್ರೇಯ ಹೈಡಿಂ
ಬರಿಗೆ ನೂಕದು ಪಾರ್ಥ ಪದ್ಮವ್ಯೂಹವಿಂದಿನಲಿ ೨೪

ಶಿವನ ಬೇಡಿದ ಶರವ ತೆಗೆ ಗಾಂ
ಡಿವವ ಬಿಗಿ ನಿನ್ನಿಷ್ಟದೈವವ
ತವಕದಲಿ ನೀ ಬೇಡಿಕೊಂಬುದು ಪರಮಸದ್ಗತಿಯ
ಅವರಿವರ ಹವಣಲ್ಲ ಗುರು ಮುನಿ
ದವಗಡಿಸಿದರೆ ನಿಲುವನಾವನು
ಬವರಕೇಳೇಳೆಂದು ಜರಿದರು ದೂತರರ್ಜುನನ ೨೫

ಚರರ ಕಳುಹಿದನಸುರವೈರಿಗೆ
ಕರವ ಮುಗಿದನು ಪಾರ್ಥನೀ ಸಂ
ಗರದೊಳಗೆ ನಿಮ್ಮಡಿಯ ಚಿತ್ತದೊಳಾವ ಥಟ್ಟಿನಲಿ
ಬೆರಸುವೆವು ನಾವಿಂದಿನೀ ಮೋ
ಹರದ ಮುರಿವಸದಳ ನಿಧಾನಿಸ
ಲರಿದೆನಲು ಮನದೊಳಗೆ ನಿಶ್ಚೈಸಿದನು ಮುರವೈರಿ ೨೬

ಅಳಿಯನೀ ಮೋಹರದೊಳಲ್ಲದೆ
ಫಲುಗುಣನ ಮಗನಿವನು ಬಲುಗೈ
ಯುಳುಹ ಬಾರದು ಕಾಯಿದರೆ ಕಲಿಯುಗಕೆ ಗತಿಯಿಲ್ಲ
ಫಲುಗುಣನ ನಾವಿತ್ತಲೊಯ್ದರೆ
ಬಳಿಕ ನಿರ್ಣಯವೆಂದು ಮನದಲೆ
ತಿಳಿದು ಪಾರ್ಥಂಗೆಂದನಸುರಾರಾತಿ ನಸುನಗುತ ೨೭

ಗುಣಕೆ ಹುರುಡೇ ನಿನ್ನ ಮಗನೀ
ರಣವ ಬಗೆವನೆ ಸೂರ್ಯನಾರೋ
ಗಣೆಗೆ ಸೊಡರೇ ಸಾಕಿದೇತಕೆ ಬಯಲ ಭಂಡತನ
ಕೆಣಕು ನಡೆ ಸಮಸಪ್ತಕರನೀ
ಬಣಗುಗಳ ಕೊಂಬನೆ ಕುಮಾರಕ
ನಣಕವಲ್ಲೆಂದಸುರರಿಪು ತಿರುಹಿದನು ನಿಜರಥವ ೨೮

ಹರಿ ಸಹಿತ ಕಲಿ ಪಾರ್ಥನತ್ತಲು
ತಿರುಗಿದನು ಬಳಿಕಿತ್ತಲೀ ಮೋ
ಹರ ಮಹಾಂಭೋನಿಧಿಗೆ ಮೊಗಸಿತು ಸರ್ವತೋಮುಖರು
ಮೊರೆವ ಪಟಹ ಮೃದಂಗ ಘನ ಜ
ರ್ಜರಿತವಹ ನಿಸ್ಸಾಳ ಚಯದ
ಬ್ಬರಣೆ ಗಬ್ಬರಿಸಿದುದು ಕಮಲಭವಾಂಡ ಖರ್ಪರವ ೨೯

ಉರವಣಿಸಿದರು ನಕುಲ ಸಾತ್ಯಕಿ
ವರ ವಿರಾಟ ದ್ರುಪದ ಕೈಕೆಯ
ಬಿರುದ ಧೃಷ್ಟದ್ಯುಮ್ನ ಕುಂತೀಭೋಜ ಮೊದಲಾಗಿ
ಧರಣಿಪರು ಥಟ್ಟೈಸಿ ರಿಪು ಮೋ
ಹರಕೆ ಕವಿದುದು ಕಾದಿ ದುರ್ಗಾವ
ಮುರಿಯಲರಿಯದೆ ಮುರಿವುತಿದ್ದುದು ಬಸಿವ ರಕ್ತದಲಿ ೩೦

ಸುಳಿದು ಹರಿ ಮೇಖಲೆಯ ಮೋಹರ
ದೊಳಗೆ ಮುಗ್ಗಿದಿರೈ ಮಹಾ ಮಂ
ಡಳಿಕರಿರ ಫಡ ಹೋಗಿರೈ ನೀವೆನುತ ಖಾತಿಯಲಿ
ಬಿಲುದುಡುಕಿ ಪವಮಾನ ನಂದನ
ನಳವಿಗೊಟ್ಟನು ಹೂಣೆ ಹೊಕ್ಕರಿ
ಬಲವನಿರಿದನು ಘಾಯವಡೆದನು ಘೋರ ಸಮರದಲಿ ೩೧

ಕಾದಲೆನ್ನಳವಲ್ಲ ಬಲ ದು
ರ್ಭೇದವಿದು ಶಿವಶಿವಯೆನುತ್ತ ವೃ
ಕೋದರನು ಮರಳಿದನು ದುಗುಡಕೆ ತೆತ್ತು ನಿಜಮುಖವ
ಕೈದೆಗೆಯೆ ರಿಪುಬಲದ ಸುಭಟರು
ಕಾದಿದನು ಕಲಿ ಭೀಮ ಗೆಲಿದನು
ಪೋದನೆಂದರು ಕೂಡೆ ಕೈಗಳ ಹೊಯ್ದು ತಮತಮಗೆ ೩೨

ಆ ಮಹಾ ಮೋಹರವನೊಡೆಯಲು
ಸೋಮಕುಲಜರು ಭೀತರಾದರು
ಹಾ ಮಹಾದೇವೆನುತ ಧರ್ಮಜ ನೋಡಿ ತಲೆದೂಗಿ
ರಾಮನರಿವನು ಕೃಷ್ಣನರಿವನು
ಸೀಮೆಯಲಿ ಕಲಿ ಪಾರ್ಥನರಿವನು
ಭೂಮಿಪತಿಗಳೊಳುಳಿದ ಸುಭಟರಿಗರಿವುದಿಲ್ಲೆಂದ ೩೩

ಹೋಗಲು ಬಲ್ಲನು ಹೊಕ್ಕವೊಲು ಹೆರ
ದೆಗೆಯಲರಿಯನು ವೀರ ಪಾರ್ಥನ
ಮಗನು ಮತ್ತಯ್ದನೆಯ ಸುಭಟರ ಕಾಣೆ ನಾನೆನುತ
ಅಗಿವ ಚಿಂತೆಯೊಳರಸ ಕದನದ
ದುಗುಡ ಭಾರದಲಿರಲು ಮುಂಗೈ
ನಿಗಳವನು ತಿರುಹುತ್ತ ನಸು ನಗುತೆದ್ದನಭಿಮನ್ಯು ೩೪

ಜನಪನಂಘ್ರಿಗೆ ಮಣಿದು ಕೈಮುಗಿ
ದೆನಗೆ ಬೆಸಸೈ ಬೊಪ್ಪ ತಾ ಬ
ಲ್ಲೆನು ಮಹಾಹವದೊಳಗೆ ಪದ್ಮವ್ಯೂಹ ಭೇದನವ
ಅನುವರವ ಗೆಲುವೆನು ಕೃತಾಂತನ
ಮನೆಗೆ ಕಳುಹುವೆನಹಿತರನು ನೀ
ನಿನಿತು ಚಿಂತಿಸಲೇಕೆ ಕಾಳೆಗಕೆನ್ನ ಕಳುಹೆಂದ ೩೫

ಹಸುಳೆಯುದಟಿನ ನುಡಿಯ ಕೇಳಿದು
ನಸು ನಗುತ ಧರ್ಮಜನು ಘನ ಪೌ
ರುಷವು ನಿನಗುಂಟೆಂದು ಕಂದನ ತೆಗೆದು ಬಿಗಿಯಪ್ಪಿ
ಶಿಶುವು ನೀನೆಲೆ ಮಗನೆ ಕಾದುವ
ರಸಮ ಬಲರು ಕಣಾ ಮಹಾ ರಥ
ರೆಸುಗೆಯನು ನೀನೆಂತು ಸೈರಿಸಲಾಪೆ ಹೇಳೆಂದ ೩೬

ಸುಳಿಯಬಹುದಂಬುಧಿಯ ನಡುವಣ
ಸುಳಿಯೊಳಗೆ ಸಂವರ್ತಕನ ಕೊರ
ಳೊಳಗೆ ಕುಣಿಯಲುಬಹುದು ಮೃತ್ಯುವಿನಣಲ ಹೊಳಲೊಳಗೆ
ಹೊಳಕಬಹುದಹಿಪನ ಫಣಾ ಮಂ
ಡಳದೊಳಾಡಲುಬಹುದು ಕಾಣೆನು
ಗೆಲುವ ಹದನನು ಮಗನೆ ಪದ್ಮವ್ಯೂಹದೊಡ್ಡಣೆಯ ೩೭

ಬಿಡು ಮರೀಚಿಯ ತೊರೆಗೆ ಹರುಗೋ
ಲಿಡುವರುಂಟೇ ಲೆಪ್ಪದುರಗನ
ಹಿಡಿವಡೇತಕೆ ಗರುಡಮಂತ್ರವು ಚಪಲನೆನ್ನದಿರು
ಕೊಡನ ಮಗನ ಕುಮಂತ್ರದೊಡ್ಡಿನ
ಕಡಿತಕಾನಂಜುವೆನೆ ವೆಗ್ಗಳ
ನುಡಿಯಲಮ್ಮೆನು ತನ್ನನೀಗಳೆ ಬಿಟ್ಟು ನೋಡೆಂದ ೩೮

ಅವರೊಳಗಲಕೆ ನಿಂದ ರಿಪುಗಳ
ಜವನ ಬೋನವ ಮಾಡದಿದ್ದರೆ
ಅವನಿಯನು ಗೆಲದೇ ಮಹಾರಥರೆನಿಪ ನಾಯಕರ
ಅವನಿಯೊಳಗೊರಗಿಸದೆ ಮಾರಾಂ
ತವರ ನುಂಗದೆ ಮಾಣ್ದೆನಾದರೆ
ದಿವಿಜಪತಿತನಯಂಗೆ ತಾ ಜನಿಸಿದವನಲ್ಲೆಂದ ೩೯

ಕಂದ ವೈರಿ ವ್ಯೂಹವಸದಳ
ವೆಂದೆನಿಪುದದರೊಳಗೆ ಕೃಪ ಗುರು
ನಂದನರು ರಾಧೇಯ ಭೂರಿಶ್ರವ ಜಯದ್ರಥರು
ಇಂದುಧರನಡಹಾಯ್ದರೊಮ್ಮಿಗೆ
ಹಿಂದು ಮುಂದೆನಿಸುವರು ನೀ ಗೆಲು
ವಂದವೆಂತೈ ಸಮರವಿದು ಸಾಮಾನ್ಯವಲ್ಲೆಂದ ೪೦

ಗಾಳಿ ಬೆಮರುವುದಂಟೆ ವಹ್ನಿ
ಜ್ವಾಲೆ ಹಿಮಕಂಜುವುದೆ ಮಂಜಿನ
ಮೇಲುಗಾಳೆಗವುಂಟೆ ಬಲುಬೇಸಗೆಯ ಬಿಸಿಲೊಳಗೆ
ಬಾಲನಿವನೆನ್ನದಿರು ದುಗುಡವ
ತಾಳಲಾಗದು ಬೊಪ್ಪ ನಿಮ್ಮಡಿ
ಯಾಲಿಗಳಿಗೌತಣವನಿಕ್ಕುವೆನೊರಸಿ ರಿಪುಬಲವ ೪೧

ಅಹುದು ಮಗನೆ ಸಮಗ್ರಬಲ ನೀ
ನಹೆ ನಿಧಾನಿಸಲಿಂದು ಪವನಜ
ನಹವ ಮುರಿದರು ಕಾಯ್ದು ಬಿಟ್ಟರು ನಕುಲ ಸಾತ್ಯಕಿಯ
ಸಹಸ ದ್ರುಪದ ವಿರಾಟರುಗಳು
ಮ್ಮಹವ ಸೆಳೆದರು ವಿಜಯ ಗರ್ವದ
ಲಿಹ ಬಲವ ನೀನೊಬ್ಬನೇ ಸಾಧಿಸುವುದರಿದೆಂದ ೪೨

ಧರಣಿಪತಿ ಕೇಳುಳಿದ ಪುಷ್ಪದ
ಪರಿಮಳವು ಪಥಿಸಿದರೆ ಸಂಪಗೆ
ಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ
ಅರಿಭಟರು ಭೀಮಾದಿಗಳ ಗೆಲಿ
ದಿರಲಿ ಹೊಲ್ಲಹವೇನು ಘನ ಸಂ
ಗರದೊಳಗೆ ನನ್ನೊಡನೆ ತುಡುಕಿದಡರಿಯಬಹುದೆಂದ ೪೩

ಕೈದುಕಾರರ ಬಿಗುಹು ಘನ ನೀ
ಹೊಯ್ದು ಮೊದಲಲಿ ಬಿಡಿಸು ಬಳಿಕಾ
ವೈದಿ ನಿನ್ನನು ಕೂಡಿಕೊಂಬೆವು ಹೊಕ್ಕು ಬಳಿಸಲಿಸಿ
ಎಯ್ದೆ ಹಗೆಯಲಿ ಹೂಣೆ ಹೊಗದಿರು
ಮೈದೆಗೆದು ಕಾದುವುದು ಜಯಸಿರಿ
ಯೈದೆತನ ನಿನ್ನಿಂದ ಮೆರೆವುದು ಕಂದ ಕೇಳೆಂದ ೪೪

ಕೆತ್ತುಕೊಂಡಿರೆ ಬಿಡಿಸುವೆನು ರಥ
ವೆತ್ತಲುರುಬಿದರತ್ತ ಕಣಸೊಳು
ಮತ್ತಗಜ ಮುರಿದಂತೆ ಕದಡುವೆನಹಿತ ಮೋಹರವ
ಹೊತ್ತಿ ಹೊಗೆವ ಪರಾಕ್ರಮಾಗ್ನಿಯ
ತುತ್ತು ಪದ್ಮವ್ಯೂಹ ದೇವರು
ಚಿತ್ತಯಿಸುವುದು ಹೊತ್ತುಗಳೆಯದೆ ಎನ್ನ ಕಳುಹೆಂದ ೪೫

ಶರನಿಧಿಯ ವಡಬಾನಳನ ದ
ಳ್ಳುರಿಯ ವರ್ಮವ ತಿವಿವ ತುಂಬಿಗೆ
ಮರಳುದಲೆಯುಂಟಾದಡದು ಭವಭವದ ಪುಣ್ಯಫಲ
ಅರಿಬಲವ ನೀ ಖಂಡಿಗಳೆ ಮೋ
ಹರ ಸಹಿತ ನಾ ಬಹೆನು ನಡೆಯೆಂ
ದರಸನಭಿಮನ್ಯುವಿಗೆ ನೇಮವ ಕೊಟ್ಟನಾಹವಕೆ ೪೬

ಶಿವಶಿವಾ ಶಿಶುವಿವನು ರಿಪುಗಳು
ಜವನ ಜೂಜೆನಿಸುವ ಮಹಾರಥ
ನಿವಹಕೊಬ್ಬನೆ ಗಡ ಸಮಾಹಿತವಲ್ಲ ಸಮರಂಗ
ಅವನಿಪತಿ ನಿರ್ದಯನಲಾ ಕಂ
ಡೆವು ಕುಮಾರನನಿಕ್ಕಿ ಬಹ ರಾ
ಜ್ಯವನು ಸುಡು ಸುಡಲೇತಕೆಂದುದು ನಿಖಿಳ ಪರಿವಾರ ೪೭

ಲಲಿತ ಚಂದ್ರಿಕೆಗೇಕೆ ದಾವಾ
ನಳನ ಖಾಡಾಖಾಡಿ ಸುರಲತೆ
ಯೆಳೆಯ ಕುಡಿ ಮುರಿದೊತ್ತಲಾಪುದೆ ವಜ್ರಧಾರೆಗಳ
ನಳಿನ ನಾಳವು ಗಜದ ಕೈಯೊಡ
ನಳವಿಗೊಡಲಂತರವೆ ಪಾಪಿಗ
ಳೆಳಮಗನ ನೂಕಿದರು ಕಾಳೆಗಕೆಂದುದಮರಗಣ ೪೮

ಬಿಗಿದ ಗಂಡುಡಿಗೆಯಲಿ ಹೊನ್ನಾ
ಯುಗದ ಹೊಳೆವ ಕಠಾರಿಯನು ಮೊನೆ
ಮಗುಂಚಿ ಸಾಧು ಜವಾಜಿ ಕತ್ತುರಿ ಗಂಧಲೇಪದಲಿ
ಮಗಮಗಿಪ ಹೊಂದೊಡರ ಹಾರಾ
ದಿಗಳಲೊಪ್ಪಂಬಡೆದು ನಸುನಗೆ
ಮೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು ೪೯

ಉಲಿವ ಘಂಟೆಯ ಕುಣಿವ ತುರಗಾ
ವಳಿಯ ಗಗನದೊಳಗಿವ ಬಿರುದಿನ
ಪಳಹರದ ತೆತ್ತಿಸಿದ ಕನಕದ ಚೌಕ ಸತ್ತಿಗೆಯ
ಘುಳಘುಳಿಪ ಚೀತ್ಕಾರ ಕೋಳಾ
ಹಳದ ಸೂತನ ರೇಖೆಯಲಿ ಭಟ
ಕುಲಲಲಾಮನ ತೇರು ಬಂದುದು ತೀವಿದಸ್ತ್ರದಲಿ ೫೦

ತುರಗ ತತಿಗಭಿನಮಿಸಿ ರಥವನು
ತಿರುಗಿ ಬಲವಂದೆರಗಿ ಚಾಪಕೆ
ಕರವ ನೊಸಲಲಿ ಚಾಚಿ ಭಾರಿಯ ಭುಜವನೊದರಿಸುತ
ಅರಸಗಭಿವಂದಿಸುತ ಭೀಮನ
ಹರಕೆಗಳ ಕೈಕೊಳುತ ನಕುಳಾ
ದ್ಯರಿಗೆ ಪೊಡವಟ್ಟಡರಿದನು ನವರತುನಮಯ ರಥವ ೫೧

ಸೂಳವಿಸಿದವು ಲಗ್ಗೆಯಲಿ ನಿ
ಸ್ಸಾಳತತಿ ಸಿಡಿಲೆರಗಿತೆನಲು
ಬ್ಬಾಳು ಮಿಗೆ ಕೈನೆಗಹಿ ಕೈವಾರಿಸುವ ಗಮಕಿಗಳು
ಸಾಲ ಹೆಗ್ಗಹಳೆಗಳು ರಿಪು ಭೂ
ಪಾಲಕರ ಬೈಬೈದು ಗಜರಿದ
ವಾಳುತನದಾಳಾಪ ಬೀರಿತು ಬೆರಗನಹಿತರಿಗೆ ೫೨

ಒಡನೆ ಕಳುಹುತ ಬಂದನಾ ನೆಲ
ದೊಡೆಯನನುಜರು ಸಹಿತ ನಯನದಿ
ಬಿಡುವನಿಯ ಸಾಲಿನಲಿ ನನೆದರು ಬಂದು ಕಿರಿದೆಡೆಯ
ನಡೆ ವಿಜಯನಾಗೆಂದು ತನುವನು
ತಡವಿದರು ಕಡುಮೋಹವೆಡೆಯಲಿ
ಘುಡುಘುಡಿಸೆ ಶಿಶು ಬೀಳುಕೊಂಡನು ಪಿತೃಚತುಷ್ಟಯವ ೫೩

ಎಲೆ ಕುಮಾರಕ ಹರ ಕುಮಾರಂ
ಗಳವಿಯಲಿ ನಿಲಲರಿದು ಕೊರಳಿನ
ಬಲುಹನರಿಯದೆ ಗಿರಿಯ ಹೊರಲಂಘೈಸುವರೆ ಭಟರು
ಬಲುಗುಡಿಯನೀ ಕರ್ಣನೀ ಕೃಪ
ನಲಘು ಭುಜಬಲ ದ್ರೋಣನೀ ವೆ
ಗ್ಗಳೆಯ ಜಯದ್ರಥನೆಂದು ಸಾರಥಿ ತೂಗಿದನು ಶಿರವ ೫೪

ಮರುಳು ಸಾರಥಿ ನಮ್ಮ ನಾವ್ ಪತಿ
ಕರಿಸಿಕೊಳಲಾಗದು ಕಣಾ ನೀ
ನರಿಯೆ ನಮ್ಮಂತರವ ನಾವಿನ್ನಾಡಿ ಫಲವೇನು
ಗುರುತನುಜನೇ ಕೃಪನೆ ದ್ರೋಣನೆ
ತರಣಿತನಯನೆ ಸೈಂಧವನೆ ಹುಲು
ನರರು ಗಣ್ಯವೆ ಕೇಳು ಭಾಷೆಯನೆಂದನಭಿಮನ್ಯು ೫೫

ಬವರವಾದರೆ ಹರನ ವದನಕೆ
ಬೆವರ ತಹೆನವಗಡಿಸಿದರೆ ಪಾ
ಸವನ ಸದೆವೆನು ಹೊಕ್ಕಡಹುದೆನಿಸುವೆನು ಭಾರ್ಗವನ
ಜವನ ಜವಗೆಡಿಸುವೆನು ಸಾಕಿ
ನ್ನಿವರವರಲೇನರ್ಜುನನು ಮಾ
ಧವನು ಮುನಿವಡೆ ಗೆಲುವೆನಂಜದೆ ರಥವ ಹರಿಸೆಂದ ೫೬

ಬಾಲನೆನ್ನದಿರೆನುತ ರಿಪುಭಟ
ಭಾಳಲೋಚನನೆನಿಸುವರ್ಜುನ
ಬಾಳುಗೆನುತುದ್ದಂಡ ಕೋದಂಡವನು ಜೇವೊಡೆಯೆ
ಮೇಲು ಜಗವಲ್ಲಾಡಿದವು ಕೊರ
ಳೋಳಿ ಕೆದರಿತು ಕುಸಿದನಹಿ ಪಾ
ತಾಳ ಗೂಳೆಯ ತೆಗೆಯಲಳ್ಳಿರಿಯಿತ್ತು ಬಲು ರಭಸ ೫೭

ಸುರನದಿಗೆ ಶಿವನಾಯ್ತು ಮಕರಾ
ಕರಕೆ ಕಳಶಜನಾಯ್ತು ತರಣಿಗೆ
ಅರಿ ವಿಧುಂತುದನಾಯ್ತು ರಥಪದತಳಿತ ಧೂಳಿಯಲಿ
ಅರರೆ ಸತ್ವ ರಜಸ್ತಮಂಗಳೊ
ಳೆರಡು ಗುಣವಡಗಿತು ರಜೋ ಗುಣ
ದುರುಳಿಯಾದುದು ಲೋಕವೆನೆ ಘಾಡಿಸಿತು ಪದಧೂಳಿ ೫೮

ಆರ ರಥವಿದು ಸೈನ್ಯ ಪಾರಾ
ವಾರಕಿದನಂಘೈಸುವನು ತ್ರಿಪು
ರಾರಿಯೋ ಮೇಣಾ ತ್ರಿವಿಕ್ರಮನೋ ಸುರೇಶ್ವರನೊ
ವೀರನಹನೋ ಪೂತು ರಣದ ದೊ
ಠಾರನಿವನಾರೆನುತ ತರುಬಿಯೆ
ತೋರಹತ್ತರು ತಾಗಿದರು ಸೌಬಲ ಜಯದ್ರಥರು ೫೯

ಘಡ ಜಯದ್ರಥ ಹೋಗು ಹೋಗಳ
ವಡಿಕೆಯಲ್ಲಿದು ಸಾರು ಸೌಬಲ
ಮಿಡುಕಿದಡೆ ಮರುಳಹಿರಿ ಲೇಸಲ್ಲೆಮ್ಮೊಳತಿಮಥನ
ತುಡುಕಿದರೆ ಕೈ ಬೇವುದೀ ಬಲು
ಗಡಿಯತನ ಬಯಲಹುದೆನುತ ತಡೆ
ಗಡಿದು ಬಿಸುಟನು ಭಟರ ಹಯ ರಥ ಧನುವ ಸಾರಥಿಯ ೬೦

ರಥ ಮುರಿದು ಮನನೊಂದು ಸುಮಹಾ
ರಥರು ಹಿಮ್ಮೆಟ್ಟಿದರು ಬಳಿಕತಿ
ರಥಭಯಂಕರನೊಡೆದು ಹೊಕ್ಕನು ವೈರಿಮೋಹರವ
ಮಥನದಲಿ ಮುರಿಯೊಡೆದ ಶೈಲ
ವ್ಯಥಿತ ಸಾಗರದಂತೆ ಬಿರಿದವು
ರಥನಿಕರ ಕಾಲಾಳು ಕುದುರೆಗಳೊಂದು ನಿಮಿಷದಲಿ ೬೧

## ಐದನೆಯ ಸಂಧಿ

ಸೂ. ವೀರ ರಿಪುಕದಳೀವನಕೆ ಮದ
ವಾರಣನು ಫಲುಗುಣನ ತನಯನು
ದಾರ ಪದ್ಮವ್ಯೂಹದಲಿ ಗೆಲಿದನು ಕುಮಾರಕರ

ಅವಧರಿಸು ಧೃತರಾಷ್ಟ್ರ ನೃಪ ಸೈಂ
ಧವನ ಗೆಲಿದಾ ವ್ಯೂಹ ಭೇದಾ
ಹವವಿಜಯ ವಿಜಯಾತ್ಮಕನ ಕೌತುಕ ರಣೋದಯವ
ತಿವಿದನುರುಬುವ ರಥ ಪದಾತಿಯ
ಕವಿವ ಗರುವ ತುರಂಗಗಳ ಬಲು
ಜವದ ರಥ ಕೋಟ್ಯಾನುಕೋಟಿಯ ಹೊದರ ಹೊಸ ಮೆಳೆಯ ೧

ಹರಿಯ ಚಕ್ರ ವರೂಥ ಚಕ್ರದೊ
ಳುರವಣಿಪ ತೇಜಿಗಳ ಕಡುಹಿನ
ಖುರದ ಹೊಯ್ಲಲಿ ವಿಲಯ ಪವನನ ಗರಿಯ ಗಾಳಿಯಲಿ
ಹರನ ನಯನಜ್ವಾಲೆ ಪಾರ್ಥಿಯ
ಸರಳ ಕಿಡಿಯಲಿ ಪಲ್ಲಟಿಸೆ ಸಂ
ಗರದೊಳಗೆ ಸೈವರಿದು ಸದೆದನು ಸಕಲ ಸೈನಿಕರ ೨

ಮಿಕ್ಕು ನೂಕುವ ಕುದುರೆಕಾರರು
ತೆಕ್ಕೆಗೆಡೆದರು ಸಂದಣಿಸಿ ಕೈ
ಯಿಕ್ಕಿದಾನೆಯನೇನನೆಂಬೆನು ಕಾಣೆನಳವಿಯಲಿ
ಹೊಕ್ಕು ಹರಿಸುವ ರಥ ಪದಾತಿಯ
ನೊಕ್ಕಲಿಕ್ಕಿದನಮಮ ಮಗುವಿನ
ಮಕ್ಕಳಾಟಿಕೆ ಮಾರಿಯಾಯಿತು ವೈರಿ ರಾಯರಿಗೆ ೩

ಕದಳಿಯೊಳು ಮದದಾನೆ ಹೊಕ್ಕಂ
ದದಲಿ ಹೆಚ್ಚಿದ ಚಾತುರಂಗದ
ಮೆದೆಯನೊಟ್ಟಿದು ಹೂಣೆ ಹೊಕ್ಕನು ಥಟ್ಟನೊದೆತುಳಿದು
ಇದಿರೊಳೆಚ್ಚನು ಕೆಲಬಲದೊಳಿಹ
ಕದನಗಲಿಗಳ ಸೀಳಿದನು ಕಾ
ದಿದನು ಕಾಲನ ಲೀಲೆಯಾದುದು ವಿಷಮ ಸಮರಂಗ ೪

ಜೋಡೊಡೆದು ಥಟ್ಟುಗಿದು ಬೆನ್ನಲಿ
ಮೂಡಲದಟರ ಸೀಳಿದನು ಖುರ
ಜೋಡು ಹುಡಿಹುಡಿಯಾಗೆ ತೇಜಿಯ ಥಟ್ಟ ಖಂಡಿಸಿದ
ನೋಡಲಮ್ಮುವರಿಲ್ಲ ಮಿಗೆ ಕೈ
ಮಾಡಲಮ್ಮುವರಿಲ್ಲ ಬಲವ
ಲ್ಲಾಡಿತೊಬ್ಬನೆ ಹಸುಳೆ ಹೊಕ್ಕನು ವೈರಿ ಮೋಹರವ ೫

ಆವ ವಹಿಲದೊಳಂಬ ತೊಡಚುವ
ನಾವ ವೇಗದೊಳಿದಿರಲೆಸುವನ
ದಾವ ನಿರುತದಲೊಡ್ಡುವನು ಕೊರಳಿಂಗೆ ಕೋಲುಗಳ
ಆವ ದೃಢತೆಯೊ ದೃಷ್ಟಿವಾಳವಿ
ದಾವ ಗರುಡಿಶ್ರಮವೆನುತ ದಿವಿ
ಜಾವಳಿಗಳುಲಿಯಲು ವಿಭಾಡಿಸಿದನು ರಿಪುವ್ರಜವ ೬

ಎಡದಲೌಕುವ ರಾವುತರ ಷಂ
ಗಡವನೆಚ್ಚನು ಸಮ್ಮುಖದೊಳವ
ಗಡಿಸುವಿಭ ಕೋಟಿಗಳ ಕೊಂದನು ಸರಳ ಸಾರದಲಿ
ಕಡುಗಿ ಬಲದಲಿ ಕವಿವ ರಥಿಕರ
ಕೆಡಹಿದನು ಕಾಲಾಳು ತೇರಿನ
ಗಡಣ ಹುಡಿಹುಡಿಯಾಯ್ತೆನಲು ಸವರಿದನು ಪರಬಲವ ೭

ಉರವಣಿಸಿದರು ಮತ್ತೆ ಭಟರ
ಬ್ಬರವ ಖತಿಯಲಿ ನಿಖಿಳ ಮನ್ನಂ
ತರದ ಕಡೆಯಲಿ ನೆಲನನದ್ದುವ ಕಡಲ ಕಡುಹಿನಲಿ
ಸರಳು ಕಡಿದವು ಸಕುತಿ ಸೆಲ್ಲೆಹ
ಪರಶು ಕವಿದವು ಖಡ್ಗ ತೋಮರ
ಸುರಗಿ ಹೊಳೆದವು ಕೈದು ಹೇರಿದವಖಿಳ ದೆಸೆಗಳಲಿ ೮

ತೊಲಗಿರೈ ಕಾಲಾಳು ಮೇಲಾ
ಳಳವಿಗೊಡಲಿ ಮಹಾರಥರು ಮುಂ
ಕೊಳಲಿ ಜೋದರು ದಿಟ್ಟರಾದರೆ ಕವಿಸಿ ಕರಿಘಟೆಯ
ಕೆಲದ ದೊರೆಗಳು ಬರಲಿ ಮಾರಿವ
ತಲೆಯ ಭಂಡವ ಹೊತ್ತಿರದೆ ಕೈ
ಕೊಳಲಿ ಕರ್ಣಾದಿಗಳೆನುತ ಹೊಕ್ಕೆಚ್ಚನಭಿಮನ್ಯು ೯

ಕಾರಗಲಿಸಿದನಮಮ ರಾಜ ಕು
ಮಾರ ಕಂಠೀರವನು ರಿಪು ಪರಿ
ವಾರವನು ನಡೆಗೊಳಿಸಿದನು ಯಮರಾಜನಾಲಯಕೆ
ಮಾರಿ ಮೊಗವಡದೆರೆದಳೋ ಕೈ
ವಾರವೋ ತರುವಲಿಗಿದೆತ್ತಣ
ವೀರವೋ ಶಿವ ಎನುತ ಬೆರಗಾಯಿತ್ತು ಸುರಕಟಕ ೧೦

ಕೊಡೆನೆಗೆದವಟ್ಟೆಗಳು ರಕುತದ
ಕಡಲೊಳರೆಜೀವದ ಭಟರು ಬಾ
ಯ್ಬಿಡುತ ತೇಕಾಡಿದರು ಮುಂಡದ ಹಿಂಡು ಮುಳುಗಾಡೆ
ಅಡಸಿ ನೆಗೆವಾನೆಗಳ ತಲೆಗಳ
ಗಡಣ ಮೆರೆದವು ಮಿಕ್ಕ ತೇಜಿಯ
ಕಡಿಕುಗಳು ಕುಣಿದಾಡಿದವು ಕಿಗ್ಗಡಲ ರಕುತದಲಿ ೧೧

ಕರಿಘಟೆಯ ಕಲಕಿದನು ಹಯ ಮೋ
ಹರವ ಜರುಹಿದನೌಕಿ ಹರಿತಹ
ವರ ರಥವ ಹುಡಿಮಾಡಿದನು ಕೆಡಹಿದನು ಕಾಲಾಳ
ಹುರಿಯೊಡೆದು ಮೈದೆಗೆದು ಸಲೆ ಕೈ
ಮರೆದು ಕೈದುವ ಹಾಯ್ಕಿ ಪಡೆ ಮೊಗ
ದಿರುಹಲೆಚ್ಚನು ಕೊಚ್ಚಿದನು ಕೌರವ ಚತುರ್ಬಲವ ೧೨

ತಳಿತ ಹೊಗರಿನ ಬಾಯಿ ಧಾರೆಯ
ಹೊಳಹುಗಳ ಹೊಸ ಮಸೆಯ ತಳಪದ
ಬೆಳಗುಗಳ ಬಲಿದಿಂಗಲೀಕ ಸುವರ್ಣ ರೇಖೆಗಳ
ಲುಳಿಯ ಹಂಗನ ಗರಿಯ ಬಿಗುಹಿನ
ಹಿಳುಕುಗಳ ಹೊಗರಂಬು ಕವಿದವು
ತುಳುಕಿದವು ತೂರಿದವು ಕೆದರಿದವಹಿತ ಬಲದಸುವ ೧೩

ಅಳವಿಗೆಡೆ ಧುಮ್ಮಿಕ್ಕಿ ರಥದವ
ರಿಳಿಯ ಬಿದ್ದರು ಭಯದಿ ತೇಜಿಯ
ನಿಳಿದು ರಾವ್ತರು ಕರವ ಮುಗಿದರು ಕೊರಳ ಸಲಹೆನುತ
ಗುಳವ ಸಡಿಲಿಸಿ ಹಾಯ್ಕಿ ಜೋದಾ
ವಳಿಗಳಿಳಿದುದು ಕೈಯ ಕೈದುವ
ನಿಳುಹಿ ಬಾಯಲಿ ಬೆರಳನಿಟ್ಟುದು ವೈರಿ ಪಾಯದಳ ೧೪

ಎಸಳ ಮೊನೆ ಮೋಹರದ ಸಂದಣಿ
ಯುಸಿರನುಳಿದುದು ಕೇಸರಾಕೃತಿ
ಯಸಮ ವೀರರು ಪಥಿಕರಾದರು ಗಗನ ಮಾರ್ಗದಲಿ
ನುಸುಳಿದರು ಕರ್ಣಿಕೆಯ ಕಾಹಿನ
ವಸುಮತೀಶರು ರಾಯನರನೆಲೆ
ದೆಸೆಗೆಡಲು ಮೊಳಗಿದನು ಪಾರ್ಥಕುಮಾರನಳವಿಯಲಿ ೧೫

ಜರಿದುದಬ್ಜವ್ಯೂಹ ನೂಕಿದ
ಕರಿ ತುರಗ ಕಾಲಾಳು ತೇರಿನ
ಮರಳುದಲೆ ತಾನಿಲ್ಲ ನೆರೆ ನುಗ್ಗಾಯ್ತು ಕುರುಸೇನೆ
ದೊರೆಗಳಹ ದ್ರೋಣಾದಿಗಳು ಕೈ
ಮರೆದು ಕಳೆದರು ಪಾರ್ಥತನಯನ
ಸರಿಯೊರೆಗೆ ಭಟನಾವನೆಂದನು ಕೌರವರ ರಾಯ ೧೬

ತಂದೆ ಹಡೆಯುನೆ ಮಗನನಹುದೋ
ಕಂದ ಕಲ್ಪ ಸಹಸ್ರ ನೋಂತಳೊ
ಇಂದುಧರನನು ನಿನ್ನ ತಾಯಿ ಸುಭದ್ರೆಯಲ್ಲದಡೆ
ಇಂದಿನೀ ಬಲವೀ ಸಮರ ಜಯ
ದುಂದವೀ ಸೌರಂಭವೀ ಸರ
ಳಂದವೀ ತೆರಳಿಕೆಯದಾವಂಗೆಂದನವನೀಶ ೧೭

ಹುರುಡು ಮರೆದೆನು ಮಗನೆ ಸಾಲದೆ
ಭರತಕುಲದಲಿ ನಿನ್ನ ಬೆಳವಿಗೆ
ಯೆರಡು ಕವಲನ್ವಯಕೆ ಕೊಡದೇ ಸುಗತಿ ಸಂಪದವ
ಕರುಳು ಬೀಳವೆ ತನ್ನ ಬಸುರಿಂ
ದುರುಳಿದವದಿರಲೇನು ಫಲ ಮ
ತ್ಸರವೆ ಪಾರ್ಥ ಕೃತಾರ್ಥನೆಂದನು ಕೌರವರ ರಾಯ ೧೮

ಎನುತ ಬಿಲುದುಡುಕಿದನು ಸೇನಾ
ವನಧಿಗಭಯವನಿತ್ತು ಮರಳುವ
ಜನಪರನು ಜರೆದೆಡಬಲದ ಮನ್ನೆಯರ ಮೂದಲಿಸಿ
ಮೊನೆಗಣೆಯ ತೂಗುತ್ತ ನರ ನಂ
ದನನ ರಥವನು ತರುಬಿ ನಿನ್ನಯ
ತನಯನಡ್ಡೈಸಿದನು ಕೌರವ ರಾಯ ಖಾತಿಯಲಿ ೧೯

ಮಗುವು ನೀ ಕೆಡಬೇಡ ಹೋಗೆನು
ತಗಣಿತಾಸ್ತ್ರವ ಸುರಿವುತೈತರೆ
ನಗುತ ನಿಂದಭಿಮನ್ಯು ನುಡಿದನು ಕೌರವೇಶ್ವರನ
ಮಗುವು ತಾನಹೆ ತನ್ನ ಬಾಣಕೆ
ಮಗುವುತನ ಬೇರಿಲ್ಲ ನೋಡೆಂ
ದಗಲದಲಿ ಕೂರಂಬ ಸುರಿದನು ಪಾರ್ಥನಂದನನು ೨೦

ಎಸಲು ಕಣೆ ಮುಕ್ಕುರುಕಿದವು ಹೊಸ
ಮಸೆಯ ಧಾರೆಯ ತೋರ ಕಿಡಿಯಲಿ
ಮುಸುಕಿತರಸನ ತೇರು ತಳಿತವು ಮೆಯ್ಯೊಳಂಬುಗಳು
ಬಸಿವ ರಕುತದ ಜರಿವ ಜೋಡಿನ
ನಸಿದ ಗರ್ವದ ನೆಗ್ಗಿದಾಳ್ತನ
ದೆಸಕದೊಣಗಿಲ ಬಾಯ ಭೂಪನ ಕಂಡನಾ ದ್ರೋಣ ೨೧

ರಾಯ ಸಿಲುಕಿದನಕಟಕಟ ರಾ
ಧೇಯ ನಡೆ ಕೃಪ ಹೋಗು ಮಗನೆ ನಿ
ಜಾಯುಧವ ಹಿಡಿ ಶಲ್ಯ ತಡೆಯದಿರೇಳು ಕೃತವರ್ಮ
ರಾಯನನುಜರು ಕೈದುಗೊಳಿ ರಣ
ದಾಯ ತಪ್ಪಿತು ನೃಪತಿ ಮಾರಿಯ
ಬಾಯ ತುತ್ತಾದನು ಶಿವಾ ಎಂದೊರಲಿದನು ದ್ರೋಣ ೨೨

ಮಾತು ಹಿಂಚಿತು ಮುಂಚಿ ಸುಭಟ
ವ್ರಾತ ಹೊಕ್ಕುದು ಸಿಕ್ಕಿದರಸನ
ಭೀತಿಯನು ಬಿಡಿಸಿದರು ಬೀರಿದರಂಬುಗಳ ಮಳೆಯ
ಸೋತೆವಾವ್ ನೀ ಗೆಲಿದೆ ನಿ
ರ್ಮಾತಗಳನೀ ಭ್ರೂಣಹತ್ಯಾ
ಪಾತಕಕ್ಕಂಜುವೆನೆನುತ ಕೈಕೊಂಡನಾ ದ್ರೋಣ ೨೩

ರಾಯನನು ತೊಲಗಿಸಿದರಾ ಕ
ರ್ಣಾಯುತಾಸ್ತ್ರರು ರಾಹುವಿನ ಕಟ
ವಾಯ ಚಂದ್ರನ ಸೆಳೆವವೋಲರಿದಾಯ್ತು ಸುಭಟರಿಗೆ
ಸಾಯಕವ ಸರಿಗೊಳಿಸಿದರು ವ
ಜ್ರಾಯುಧನ ಮೊಮ್ಮನ ರಥವ ನಿ
ರ್ದಾಯದಲಿ ಮುತ್ತಿದರು ಕುರುಸೇನಾ ಮಹಾರಥರು ೨೪

ಹಸುಳೆತನದಲಿ ಹರನ ಮಗನಾ
ವಿಷಮ ದೈತ್ಯನ ಸೀಳಿ ಬಿಸುಡನೆ
ಶಿಶುವಲಾ ಪ್ರದ್ಯುಮ್ನ ಮುರಿಯನೆ ಶಂಬರಾಸುರನ
ಶಿಶುವೆ ನೋಡಭಿಮನ್ಯು ಸುಭಟ
ಪ್ರಸರದಿನಿಬರನೊಂದು ಘಾಯದೊ
ಳುಸಿರ ತೆಗೆಬಗೆ ಮಾಡಿದನು ಧೃತರಾಷ್ಟ್ರ ಕೇಳೆಂದ ೨೫

ಗುರುಸುತನನೊಟ್ಟೈಸಿ ಶಲ್ಯನ
ಭರವಸವ ನಿಲಿಸಿದನು ಕೃಪನು
ಬ್ಬರದ ಗರ್ವವ ಮುರಿದು ಕೃತವರ್ಮಕನ ನೋಯಿಸಿದ
ಅರಸನನುಜರ ಸದೆದು ಬಾಹ್ಲಿಕ
ದುರುಳ ಸೌಬಲ ಸೋಮದತ್ತರ
ಹುರುಳುಗೆಡಿಸಿದನೊಬ್ಬ ಶಿಶು ಗೆಲಿದನು ಮಹಾರಥರ ೨೬

ಮುಳುಗಿದನು ಮರುಮೊನೆಯ ಮೈ
ಗಳ ಮಹಾರಥರಾಜಿ ಕದನದ
ನೆಲನ ಬಿಡೆ ಖತಿಗೊಂಡು ಮುರಿದೋಡುವರ ಮೂದಲಿಸಿ
ಬಿಲುದುಡುಕಿ ಸಾರಥಿಗೆ ಸೂಚಿಸಿ
ಮಲೆತ ನೋಡೈ ಮಗುವು ಫಡ ಫಡ
ತೊಲಗು ತೊಲಗೆಂದೆನುತ ರಿಪುವನು ತರುಬಿದನು ಕರ್ಣ ೨೭

ಗಾರುಗೆಡೆದರೆ ಮೆರೆಯದೋಲೆಯ
ಕಾರತನವೆಮ್ಮೊಡನೆ ನೀ ಮೈ
ದೋರಿ ಮಡಮುರಿವಿಲ್ಲದೆಚ್ಚಾಡಿದರೆ ಸಫಲವಿದು
ತೋರುವೆನು ಕೈಗುಣವನೆನುತ್ತೈ
ದಾರು ಶರದಲಿ ಕರ್ಣನೆದೆಯನು
ಡೋರುಗಳೆಯಲು ಬಳಲಿದನು ಪೂರಾಯ ಘಾಯದಲಿ ೨೮

ಬೆದರಿ ಭೂಕಂಪದಲಿ ಕುಲಗಿರಿ
ಯದಿರುವಂತಿರೆ ಚರಿಸಿ ಕಾಯುವ
ಬಿದಿರಿ ಮರಳುವ ಕಂಗಳಲಿ ಕಲಿಕರ್ಣ ಮೈಮರೆಯೆ
ಕೆದರಿತೀ ಬಲವಕಟ ಕರ್ಣನ
ಸದೆದನೋ ಸಾಹಸಿಕ ಶಿಶು ಕಾ
ದಿದೆವು ನಾವಿನ್ನೆನುತಲಿರೆ ಕಲಿ ಶಲ್ಯನಿದಿರಾದ ೨೯

ಬಾಲಕನೆ ಹಿಮ್ಮೆಟ್ಟು ಹಿಮ್ಮೆ
ಟ್ಟಾಳುತನವೆಮ್ಮೊಡನೆಯೋ ಮರು
ಳೇಳಿಗೆಯಲುಬ್ಬೆದ್ದು ಕರ್ಣನ ಸದೆದ ಗರ್ವದಲಿ
ಮೇಲನರಿಯಾ ಶಲ್ಯನೊಡನೆಯು
ಕಾಳಿಗವೆ ನಿಮ್ಮಯ್ಯನಿಂದಿನ
ಲೂಳಿಗವ ತಹುದೆನುತ ಸುರಿದನು ಸರಳ ಸರಿವಳೆಯ ೩೦

ಬಾಲತನವೇನೂಣಯುವೆ ಕ
ಟ್ಟಾಳುತನವಾಭರಣವವನೀ
ಪಾಲ ಸುತರಿಗೆ ವಿದ್ಯವೇ ವಿಪ್ರರಿಗಲಂಕಾರ
ಆಳಿನಂಗವನೆತ್ತ ಬಲ್ಲೆ ಶ
ರಾಳಿಯಲಿ ನಿನ್ನಂಘವಣೆಯ ಥ
ಡಾಳತನವನು ಮುದ್ರಿಸುವೆನೆನುತೆಚ್ಚನಭಿಮನ್ಯು ೩೧

ಸರಳ ಸರಳಲಿ ಕಡಿದು ಸವೆಯದೆ
ಸರಿ ಮಿಗಿಲ ಕಾದಿದರೆ ಶಲ್ಯನ
ಥರಥುರದ ದೆಖ್ಖಾಳತನವನು ಕಂಡು ಖಾತಿಯಲಿ
ಸರಳು ಹದಿನೈದರಲಿ ಶಲ್ಯನ
ಬರಿಯ ಕೆತ್ತಿದನೈದು ಬಾಣದೊ
ಳುರವ ತೋಡಿದನೊಂದು ನಿಮಿಷಕೆ ಶಲ್ಯ ಸೈಗೆಡೆದ ೩೨

ತಲೆ ತಿರುಗಿ ತುಟಿಯೊಣಗಿ ಕಂಗಳ
ಬಳಿ ಮರಳಿ ಬಸವಳಿಯೆ ಸಾರಥಿ
ತೊಲಗಿಸಿದನಾ ರಥವನೊಡಹುಟ್ಟಿದನ ವೇದನೆಯ
ನಿಲುಕಿ ಕಂಡನು ಶಲ್ಯನನುಜನು
ಹಿಳುಕು ಹಿಳುಕಿನ ಮೇಲೆ ಸಂಧಿಸಿ
ಮುಳಿದೆಸುತ ತಾಗಿದನು ಖತಿಯಲಿ ಪಾರ್ಥನಂದನನ ೩೩

ಪೂತು ಶಲ್ಯನ ತಮ್ಮನೇ ಮಾ
ರಾಂತನಣ್ಣನ ಹರಿಬವನು ದಿಟ
ಸೂತ ನೋಡೈ ಸಾಹಸಿಕನೈ ಲೇಸು ಲೇಸೆನುತ
ಆತನಂಬೈದಾರ ಮನ್ನಿಸಿ
ಸೋತವೊಲು ಮನಗೆಲವ ಮಾಡಿ ನಿ
ಶಾತ ಶರದಿಂದಿಳುಹಿದನು ಶಲ್ಯಾನುಜನ ಶಿರವ ೩೪

ದೊರೆ ಮಡಿಯೆ ಮಾದ್ರಾನುಜನ ಬಲ
ತಿರುಗಿತಭಿಮನ್ಯುವಿನ ಹೊಯ್ಲಲಿ
ಹುರುಳುಗೆಟ್ಟುದು ಹೆಸರ ನಾಯಕವಾಡಿ ದುಗುಡದಲಿ
ತರಹರವ ನಾ ಕಾಣೆನೀ ಮೋ
ಹರಕೆ ಗತಿಯೇನೆನುತ ಭರದಲಿ
ಕರೆದು ತೋರಿದನಾ ಕೃಪಾಚಾರ್ಯಂಗೆ ಕಲಿ ದ್ರೋಣ ೩೫

ಮಗುವೆ ನೋಡಭಿಮನ್ಯು ನಮಗಿದು
ಹೊಗುವಡಳವೇ ಕಾಲರುದ್ರನ
ತಗಹು ಬಿಟ್ಟಂತಿದೆ ಕುಮಾರನ ಕೋಪದಾಟೋಪ
ಮೊಗಸಲರಿದು ಭುಜಪ್ರತಾಪದ
ಹೊಗರು ಹೊಸಪರಿಯೆನುತ ರಿಪುಗಳ
ಹೊಗಳುತಿರೆ ಕೇಳಿದನು ಕೌರವ ರಾಯನೀ ನುಡಿಯ ೩೬

ಕೇಳುತಿರ್ದೈ ಕರ್ಣ ಸಲೆ ನ
ಮ್ಮಾಳ ಬೆದರಿಸಿ ನುಡಿದು ರಿಪು ಭಟ
ನಾಳನೇರಿಸಿ ನುಡಿವ ಬಾಹಿರರೇನ ಹೇಳುವೆನು
ಖೂಳರೆಂಬೆವೆ ಗುರುಗಳಿಂದು ವಿ
ಶಾಲಮತಿಗಳು ತಮ್ಮ ಭಾಗ್ಯದ
ಮೇಲೆ ದೈವವನೆಂದು ಫಲವೇನೆನುತ ಬಿಸುಸುಯ್ದ ೩೭

ವೀರರಂಗವನೆತ್ತ ಬಲ್ಲರು
ಹಾರುವರು ಬೆಳುದಿಂಗಳಿನ ಬಿರು
ಸಾರ ಸುಡುವುದು ಕೈದು ಹಿಡಿದರೆ ಕಲಿಗಳೇ ದ್ವಿಜರು
ವೈರಿಭಟನಿವ ಮಗುವಲಾ ಮನ
ವಾರೆ ಕಾದಲು ಲಕ್ಷ್ಯವಿಲ್ಲೀ
ಯೂರುಗರ ಬೈದೇನು ಫಲವೆಂದರಸ ಹೊರವಂಟ ೩೮

ಎನಲು ದುಶ್ಶಾಸನನು ರಾಯನ
ಕನಲಿದನು ಖತಿಯೇಕೆ ಜೀಯಿಂ
ದೆನಗೆ ಬೆಸಸಾ ಸಾಕು ಭಂಡರ ಬೈದು ಫಲವೇನು
ದಿನಪ ದೀವಿಗೆಯಾಗಲುಳಿದೀ
ಬಿನುಗು ಬೆಳಗಿನ ಹಂಗು ಬೇಹುದೆ
ದನುಜ ದಿವಿಜರ ದಳಕೆ ತನ್ನನು ಬಿಟ್ಟು ನೋಡೆಂದ ೩೯

ತಳಿತುದೆಡಬಲವಂಕದಲಿ ಹೆ
ಬ್ಬಲ ಥಡಾಳಿಸಿ ಮೊರೆವ ಭೇರಿಯ
ಘುಳುಘುಳು ಧ್ವನಿ ಕೂಡೆ ಜಡಿದುದು ಕಮಲಜಾಂಡಘಟ
ಹಳವಿಗೆಯ ಸೀಗುರಿಯ ಚಮರಾ
ವಳಿಯ ವಿಮಳಚ್ಛತ್ರ ಪಙ್ತಿಯ
ವಳಯದಲಿ ನಭ ಮುಳುಗೆ ಮುತ್ತಿತು ಸೇನೆ ರಿಪುಭಟನ ೪೦

ತಿರುಹು ತೇಜಿಯನಿತ್ತಲಿವದಿರ
ನೊರಸಿ ದುಶ್ಶಾಸನನ ಬೆನ್ನಲಿ
ಕರುಳು ತೆಗೆವೆನು ನೋಡು ಸಾರಥಿ ಬೆಚ್ಚಬೇಡೆನುತ
ಅರಗಿನರಸನ ಬಾಗಿಲಲಿ ದ
ಳ್ಳುರಿಗೆ ತಡವೇ ಹೊಕ್ಕು ನಿಮಿಷದೊ
ಳೊರಸಿದನು ಚತುರಂಗ ಬಲವನು ಕೌರವಾನುಜನ ೪೧

ಎಲವೊ ಕೌರವ ಕೊಬ್ಬಿ ನರಿ ಹೆ
ಬ್ಬುಲಿಯ ಕೂಸನು ಬೇಡುವಂದದಿ
ಅಳವನರಿಯದೆ ಅಧಮ ರಥಿಕರ ಕೂಡೆ ತೊಡಕುವರೆ
ಮಲೆತು ನೀನೆನ್ನೊಡನೆ ರಣದಲಿ
ಹಳಚಿ ನೀ ತಲೆವೆರಸಿ ಮರಳಿದ
ಡಿಳುಹುವೆನು ಕೈದುವನು ಶರಸನ್ಯಾಸ ನನಗೆಂದ ೪೨

ಸಾಕು ತರುವಲಿತನದ ಮಾತುಗ
ಳೇಕೆ ಗರುವರ ಮುಂದೆ ವೀರೋ
ದ್ರೇಕದಲಿ ಮೈಮರೆದು ರಣದಲಿ ಹೊಯ್ದು ಹೊಟ್ಟುಗರ
ಆ ಕಿರೀಟಿ ವೃಕೋದರರು ಮೈ
ಸೋಕಿದರೆ ಸಂತೋಷ ನೀನವಿ
ವೇಕಿ ಬಾಲಕನೇನ ಮಾಡುವೆನೆಂದನವ ನಗುತ ೪೩

ಕೊಳಚೆ ನೀರೊಳಗಾಳುತೇಳುತ
ಜಲಧಿ ಕಾಲ್ವೊಳೆಯೆಂಬ ಭಂಡರ
ಮುಳಿದು ಮಾಡುವುದೇನು ಮೊದಲಲಿ ನಮ್ಮ ನೀ ಗೆಲಿದು
ಬಳಿಕ ಭೀಮಾರ್ಜುನರ ಬಯಸುವು
ದೆಲೆ ಮರುಳೆ ನಿನ್ನೊಡಲ ಸೀಳಿಯೆ
ತಿಳಿ ರಕುತದಲಿ ತಾಯ ತುರುಬನು ನಾದಿಸುವೆನೆಂದ ೪೪

ಕಾತರಿಸದಿರು ಬಾಲ ಭಾಷೆಗ
ಳೀತಕಿವು ನೀ ಕಲಿತ ಬಿಲು ವಿ
ದ್ಯಾತಿಶಯವುಂಟಾದಡೆಮ್ಮೊಳು ತೋರು ಕೈಗುಣವ
ಭೀತ ಭಟರನು ಹೊಳ್ಳುಗಳೆದ ಮ
ದಾತಿರೇಕದ ಠಾವಿದಲ್ಲೆಂ
ದೀತನೆಚ್ಚನು ನೂರು ಬಾಣದಲಿಂದ್ರಸುತ ಸುತನ ೪೫

ಬಿಲ್ಲ ಹಿಡಿಯಲು ಕೌರವಾನುಜ
ಬಲ್ಲ ನೋಡೈ ಸೂತ ಮಿಗೆ ತ
ಪ್ಪಲ್ಲ ತಪ್ಪಲ್ಲಂಬು ಬಿದ್ದವು ಗುರಿಯ ಸರಿಸದಲಿ
ನಿಲ್ಲು ನಿಲ್ಲಾದರೆಯೆನುತ ಬಲು
ಬಿಲ್ಲನುಗುಳಿಸಿದನು ಶರೌಘವ
ನೆಲ್ಲಿ ನಭ ದೆಸೆಯೆತ್ತಲೆನೆ ಥಾಡಿಸಿದವಂಬುಗಳು ೪೬

ಆವನ ನೂರಂಬುಗಳ ಕಡಿದವ
ನವಯವವ ಕೀಲಿಸಿದಡಾಕ್ಷಣ
ವವನಿಯಲಿ ಬಲುಗರುಳು ಬಿದ್ದವು ಭಟನ ಕಿಬ್ಬರಿಯ
ಅವಗಡಿಸಿ ಖಾತಿಯಲಿ ಖಳ ಶರ
ನಿವಹವನು ತುಡುಕಿದನು ಕೊಡಹಿದ
ವವನ ನಿಮಿಷದೊಳರ್ಜುನಾತ್ಮಕನಗಣಿತಾಸ್ತ್ರಗಳು ೪೭

ತಾಯ ತುರುಬಿಗೆ ಹಾಯ್ದ ಪಾತಕಿ
ನಾಯ ಕೊಂಡಾಡುವರೆ ಕೊಬ್ಬಿದ
ಕಾಯವನು ಕದುಕಿರಿದು ನೆತ್ತರ ನೊರೆಯ ಬಾಸಣಿಸಿ
ತಾಯ ಕರಸುವೆನೆನುತ ಕಮಳ ದ
ಳಾಯತಾಂಬಕನಳಿಯನನುಪಮ
ಸಾಯಕವ ಹೂಡಿದನು ನೋಡಿದನೊಂದು ಚಿತ್ತದಲಿ ೪೮

ಇವನ ಕೊಂದರೆ ತಂದೆ ಮಿಗೆ ಮ
ಚ್ಚುವನೊ ಮುನಿವನೊ ತನ್ನ ನುಡಿ ಸಂ
ಭವಿಸದೆಂಬನೊ ಭೀಮಸೇನನ ಭಾಷೆಗಂಜುವೆನು
ಇವನ ತಾನೇ ಕೊಲಲಿ ನಮಗಿ
ನ್ನಿವನ ತೊಡಕೇ ಬೇಡ ಕದನದೊ
ಳಿವನ ಭಂಗಿಸಿ ಬಿಡುವೆನೆಂದನು ತನ್ನ ಮನದೊಳಗೆ ೪೯

ಕಾಯ್ದುಕೊಳ್ಳೈ ಕೌರವಾನುಜ
ಹೊಯ್ದು ಹೋಗಲು ಬಹುದೆ ಹರನಡ
ಹಾಯ್ಡುಡೆಯು ಗೆಲುವೆನು ಕಣಾ ನಿಲ್ಲೆನುತ ತೆಗೆದೆಸಲು
ಬಾಯ್ದೆಗೆದು ಕೇಸುರಿಯ ಕಾರುತ
ಕೈದುವೆದೆಯಲಿ ಕೊಂಡು ಬೆನ್ನಲಿ
ಹಾಯ್ದುಡವನೋರ್ಗುಡಿಸಿದನು ಕುರುಸೇನೆ ಕಳವಳಿಸೆ ೫೦

ಅಹಹ ಕೈತಪ್ಪಾಯ್ತು ರಾಯನ
ಸಹಭವನು ನೊಂದನು ಶಿವಾ ಎನು
ತಹಿತ ಸುಭಟರು ಸರಿಯೆ ಸಾರಥಿ ತಿರುಹಿದನು ರಥವ
ಬಹಳ ಬಲ ನುಗ್ಗಾಯ್ತು ಶಿಶುವಿನ
ಸಹಸ ಕುಂದದೆನುತ್ತ ಖತಿಯಲಿ
ಮಿಹಿರಸುತನಡಹಾಯ್ದು ತಡೆದನು ಮತ್ತೆ ಬಾಲಕನ ೫೧

ಸಾರು ಸಾರಭಿಮನ್ಯು ಫಡ ಇ
ನ್ನಾರ ಬಸುರನು ಹೊಗುವೆ ನಿನ್ನವ
ರಾರ ಸಂತತಿ ಮಾಡಿಕೊಳಲಿ ಭವತ್ ಪರೋಕ್ಷದಲಿ
ಭೂರಿ ಬಲವನು ಸದೆವ ಗರ್ವವಿ
ದಾರ ಕೂಡೆ ಧನುರ್ಧರಾಗ್ರಣಿ
ವೀರ ಕರ್ಣ ಕಣಾ ಎನುತ ತೆಗೆದೆಚ್ಚನತಿರಥನ ೫೨

ಬಲ್ಲೆನುಂಟುಂಟಖಿಳ ವೀರರೊ
ಳಿಲ್ಲ ಸರಿದೊರೆ ನಿನಗೆ ಬಾಯಲಿ
ಬಲ್ಲಿದನು ನೀನಹೆ ಭಟಾಂಗದ ಮಾತದಂತಿರಲಿ
ಒಳ್ಳೆ ಗಡ ಪಾವುಡವ ವಾಸುಗಿ
ಯಲ್ಲಿಗಟ್ಟಿತು ಗಡ ಮಹಾಹವ
ಮಲ್ಲ ಮಡ ಮುರಿಯದಿರೆನುತ ಹೊಕ್ಕೆಚ್ಚನಭಿಮನ್ಯು ೫೩

ಇರುಳುರಾಯನ ಮನೆಗೆ ಕಪ್ಪವ
ತೆರುವುದೋ ಹಗಲೆಲವೊ ಕೆಲಬರ
ನಿರಿದ ದರ್ಪವದಾರೊಡನೆ ಫಡ ಮರಳು ಮರಳೆನುತ
ಕಿರುಮೊನೆಯ ಮುಗುಳಂಬುಗಳ ಸೈ
ಗರೆದನಭಿಮನ್ಯುವಿನ ಮೆಯ್ಯಲಿ
ತುರುಗಿದವು ಮರಿದುಂಬಿ ಕೆಂದಾವರೆಗೆ ಕವಿವಂತೆ ೫೪

ಸುರಪನಂಕುಶವೌಕಿದರೆ ಮೆ
ಯ್ಯರಿಯದೈರಾವತಕೆ ಕಬ್ಬಿನ
ಲಿರಿದರಂಜಿಕೆಯುಂಟೆ ನಿನ್ನಯ ಕಣೆಗಳೌಕಿದರೆ
ತೆರಳುವನೆ ಅಭಿಮನ್ಯುವೆನುತ
ಬ್ಬರಿಸಿ ಕರ್ಣನ ಕಾಯವನು ಹುಗಿ
ಲಿರಿದನೆಂಟಂಬಿನಲಿ ತೋದುದು ತೇರು ರಕ್ತದಲಿ ೫೫

ಮಳೆಗೆ ಮೊಗದಿರುಹಂವುದೆ ಬಡಬಾ
ನಳನೆಲವೊ ನಿನ್ನಂಬು ತಾಕಿದ
ರಳುಕುವೆನೆ ತಾನೆನುತ ರವಿಸುತನೆಚ್ಚನತಿರಥನ
ಹೊಳುಕು ಕವಿದವು ಭಟನ ಕೈ ಮೈ
ಗಳಲಿ ಮಿನುಗಿದವಿರುಳು ಮರನಲಿ
ಹೊಳೆದು ಮುತ್ತಿದ ಮಿಂಚುಬುಳುವಿನ ಮಿನುಗಿನಂದದಲಿ ೫೬

ಹೂಣೆಗರು ಕೆಲರಿವರು ಇವದಿರ
ಗೋಣನರಿವರೆ ಇವರ ಜೀವದ
ಕೇಣಿಕಾರರು ಖಾತಿಗೊಂಬರು ಭೀಮ ಫಲುಗುಣರು
ಮಾಣದಿವದಿರು ಮತ್ತೆ ರಣದಲಿ
ಕಾಣೆನಿದಕಿನ್ನನುವನೆನುತ
ಕ್ಷೀಣಭುಜಬಲನೆಚ್ಚು ಕಡಿದನು ಸೂತಜನ ಧನುವ ೫೭

ಕೈದು ಮುರಿಯಲು ಮುಂದೆ ನೂಕದೆ
ಹಾಯ್ದನಾ ರವಿಸೂನು ಬಳಿಕಡ
ಹಾಯ್ದು ತಡೆದನು ಬವರವನು ಕರ್ಣಾತ್ಮಜನು ಕಡುಗಿ
ಐದು ಬಾಣದಲವನ ಕೊರಳನು
ಕೊಯ್ದು ನರ್ಜುನ ಸೂನುವಾತನ
ನೊಯ್ದರಂತಕದೂತರದ್ಭುತವಾಯ್ತು ಸಂಗ್ರಾಮ ೫೮

ಛಾಯಪಡೆದನು ಶಲ್ಯ ರವಿಸುತ
ನಾಯಂಧವ ಬಿಟ್ಟೋಡಿದನು ಕುರು
ರಾಯನನುಜನು ಬದುಕುವರೆ ಮೆಯ್ಯೆಲ್ಲ ಬಾದಣವು
ಸಾಯದುಳಿದವರಿಲ್ಲ ಮಿಕ್ಕಿನ
ನಾಯಕರೊಳಕಟೆನಲು ಕುರುಬಲ
ಬಾಯ ಬಿಡೆ ಶಲ್ಯನ ಕುಮಾರಕ ಹೊಕ್ಕನಾಹವವ ೫೯

ಆ ಕುಮಾರನ ಸೇನೆ ಗಡಣಿಸಿ
ನೂಕಿತುರವಣಿಸಿದುದು ತುರಗಾ
ನೀಕವಿಭತತಿ ತೂಳಿದವು ತುಡುಕಿದವು ರಥನಿಕರ
ತೋಕಿದವು ಕೈದುಗಳ ಮಳೆ ರಣ
ದಾಕೆವಾಳರ ಸನ್ನೆಯಲಿ ಸಮ
ರಾಕುಳರು ಕೆಣಕಿದರು ರಿಪುಕಲ್ಪಾಂತ ಭೈರವನ ೬೦

ಭಟ ಭಡಾಳಿಸಿದನು ಘೃತಾಹುತಿ
ಘಟಿಸಿದಗ್ನಿಯವೋಲು ರಣ ಚೌ
ಪಟ ಚತುರ್ಬಲದೊಳಗೆ ಹೊಕ್ಕನು ಸಿಂಹ ನಾದದಲಿ
ನಿಟಿಲ ನೇತ್ರನ ಕೋಪಶಿಖಿ ಲಟ
ಕಟಿಸುವಂತಿರೆ ಹೆಚ್ಚಿದತಿ ಬಲ
ದಟವಿಯನು ಸವರಿದುದು ಪಾರ್ಥಕುಮಾರ ಶರಜಾಲ ೬೧

ಧರೆ ಬಿರಿಯೆ ಬೊಬ್ಬೆಯಲಿ ಬಲದ
ಬ್ಬರಣೆ ದೆಖ್ಖಾದೆಖ್ಖೆಯಾಗಲು
ಧರಣಿಪತಿ ಮರುಗಿದನು ಮಗನೇನಾದನೋ ಎನುತ
ಕರೆದು ಭೀಮನ ನಕುಳನನು ಸಂ
ಗರಕೆ ಧೃಷ್ಟದ್ಯುಮ್ನ ದ್ರುಪದರ
ಪರುಠವಿಸಿ ಕಳುಹಿದನು ಸೌಭದ್ರಂಗೆ ಪಡಿಬಲವ. ೬೨

ಗದೆಯ ತಿರುಹುತ ಸಿಂಹನಾದದ
ಲೊದರಿ ಮಗನಾವೆಡೆಯೆನುತ ನೂ
ಕಿದನು ರಥವನು ತನ್ನ ಸೇನೆಗೆ ಸೀಗುರಿಯ ಬೀಸಿ
ಆದಟನೈತರೆ ಹೋಗಲೀಯದೆ
ಮೊದಲ ಬಾಗಿಲ ಕಟ್ಟಿಕೊಂಡ
ಗ್ಗದ ಜಯದ್ರಥ ಭೀಮನೊಳು ಬಲುಗಾಳೆಗವ ಹಿಡಿದ ೬೩

ತೆರಹುಗೊಡು ಫಡ ಫಡ ಜಯದ್ರಥ
ಹೆರತೆಗೆದು ಸಾರೆನುತ ಹೂಣಿಗ
ನುರುಬಿದರೆ ಮಾರಾಂತು ಭೀಮನ ಕಡುಹ ನಿಲಿಸಿದನು
ಮರೆದು ಕಳೆಯಭಿಮನ್ಯುವನು ಮೈ
ಮರೆಯದೆನ್ನಲಿ ಕಾದು ಮಾತಿನ
ಬಿರುಬಿನಲಿ ಫಲವಿಲ್ಲೆನುತ ಕೆಂಗೋಲ ತೊಡಚಿದನು ೬೪

ಬವರದಲಿ ಕಲಿಪಾರ್ಥನಲ್ಲದೆ
ಪವನತನಯಾದಿಗಳ ಗೆಲುವರೆ
ಶಿವನ ಕೃಪೆಯೆನಗುಂಟು ಮುನ್ನೆನುತಾ ಜಯದ್ರಥನು
ಕವಲುಗೋಲಲಿ ಭೀಮನನು ಪರಿ
ಭವಿಸಿದನು ಸಹದೇವ ನಕುಳರ
ಶಿವಿದು ಧೃಷ್ಟದ್ಯುಮ್ನ ಮೊದಲಾದಗಣಿತರ ಗೆಲಿದ ೬೫

ಪಡಿಬಲವ ಬರಲೀಯದನಿಲಜ
ನೊಡನೆ ಸೈಂಧವ ಕಾದುತಿರಲಿ
ವ್ಮ್ಮಡಿಸಿತಾಹವವಿತ್ತ ಮೋಹರ ಮಧ್ಯ ರಂಗದಲಿ
ಕಡುಗಿ ನೂಕುವ ಕದನ ರಾಗಿಗ
ಳೊಡನೆ ಕಾದುವ ಪಾರ್ಥತನಯನ
ಬಿಡಿ ಸರಳು ಬೀರಿದವು ರಮಣರನಮರ ವಧುಗಳಿಗೆ ೬೬

ತರಿದನಾನೆಯ ಘಟ್ಟುಗಳ ಮು
ಕ್ಕುರುಕಿದನು ಕಾಂಭೋಜ ತೇಜಿಯ
ನುರುಬಿ ಹೊಯ್ದನು ಸೂನಿಗೆಯ ತೇರುಗಳ ತಿಂತಿಣಿಯ
ಮುರಿದನೊಗ್ಗಿನ ಪಾಯ್ದಳವನ
ಳ್ಳಿರಿವ ಹೆಣ ಕುಣಿದಾಡೆ ಭಟ ಬೇ
ಸರದೆ ಕೊಂದನು ವೈರಿಸೇನೆಯನರಸ ಕೇಳೆಂದ ೬೭

ಒರಸಿದನು ಹದಿನೆಂಟು ಸಾವಿರ
ಕರಿ ಘಟೆಯನೈವತ್ತು ಸಾವಿರ
ತುರಗವನು ಮೂವತ್ತು ಸಾವಿರ ವರ ಮಹಾರಥರ
ಧುರದಿ ಲಕ್ಷ ಪದಾತಿಯನು ಸಂ
ಹರಿಸಿ ಶಲ್ಯ ಕುಮಾರಕನ ಕ
ತ್ತರಿಸಿದನು ಗೋನಾಳಿಯನು ದಿವ್ಯಾಸ್ತ್ರಧಾರೆಯಲಿ ೬೮

ಮಡಿದನಕಟಾ ತಮ್ಮ ಸಖನೆಂ
ದಡಸಿದಳಲಿನೊಳೆದ್ದು ಕೋಪದ
ಕಡುರಝಳದ ಕಾಲಾಗ್ನಿ ರುದ್ರನ ಕಣ್ಣ ಹೋಲುವೆಯ
ಸಿಡಿದ ಮೀಸೆಯ ಬಿಗಿದ ಹುಬ್ಬಿನ
ಜಡಿವ ರೋಮಾಂಚನದ ಖಾತಿಯ
ಕಡುಹುಕಾರರು ಮುಸಗಿದರು ದುರ್ಯೋಧನಾತ್ಮಕರು ೬೯

ಚಂಡ ಭುಜಬಲನೊಡನೆ ಮಕ್ಕಳ
ತಂಡವೆದ್ದುದು ಬಿಗಿದ ಬಿಲ್ಲಿನ
ದಂಡವಲಗೆಯ ಮುಸುಂಡಿ ಮುದ್ಗ ಕಠಾರಿಯುಬ್ಬಣದ
ಗಂಡುಗಲಿಗಳು ಕವಿದರದಿರುವ
ಖಂಡಯದ ಮುಡುಹುಗಳ ಗಂಧದ
ಮುಂಡನದ ಮೈಸಿರಿಯ ಪರಿಮಳ ಪೂರರೊಗ್ಗಿನಲಿ ೭೦

ತಳಿತ ಸತ್ತಿಗೆಗಳ ವಿಡಾಯಿಯ
ಲೊಲೆವ ಚಮರಿಯ ವಜ್ರ ಮಕುಟದ
ಹೊಳಹುಗಳ ಹೊಗೆ ಮೀಸೆಗೆದರಿನ ಬಿರುದಿನುಬ್ಬಟೆಯ
ಕೆಲಬಲದ ವೇಲಾಯತರ ವೆ
ಗ್ಗಳದ ರಾವ್ತರ ಗಡಣ ನಾಲಗೆ
ದಳೆದುದೆನೆ ಹೊಳೆಹೊಳೆವಡಾಯುಧ ಭಟರು ನೂಕಿದರು ೭೧

ಭಾಪುರೇ ಕೌರವನ ಸುತರಾ
ಟೋಪವೊಳ್ಳಿತು ಬಂದ ಬರವಿನ
ಚಾಪಳದಲೊದಗಿದರೆ ಲೇಸಲ್ಲಿದರ ಫಲವೇನು
ಕಾಪುರುಷರೇ ಕಾಣಬಹುದೆಂ
ದಾ ಪುರಂದರ ಸುತನ ಸುತ ನಿಜ
ಚಾಪವನು ನೇವರಿಸುತಿದ್ದನು ಬಗೆಯದರಿಬಲವ ೭೨

ಮಂಗುಳದಿರು ಶಲ್ಯಾತ್ಮಕನನುಗು
ಳುಗುಳು ನಿನ್ನಯ ಬಸಿರ ಸೀಳಿಯೆ
ತೆಗೆವೆವೆಮ್ಮಯ ಸಖನನೆನುತಾ ಲಕ್ಷಣಾದಿಗಳು
ತೆಗೆದೆಸುತ ಮೇಲಿಕ್ಕಿದರು ತಾ
ರೆಗಳು ನೆಣಗೊಬ್ಬಿನಲಿ ರಾಹುವ
ತೆಗೆದು ಬದುಕಲು ಬಲ್ಲವೇ ಧೃತರಾಷ್ಟ್ರ ಕೇಳೆಂದ ೭೩

ದಿಟ್ಟರೋ ಲಕ್ಷಣನವರು ಜಗ
ಜಟ್ಟಿಗಳಲಾ ರಾಜಕುಲದಲಿ
ಹುಟ್ಟಿದರೆ ಕೆಲರೀಸು ಚಪಳತೆ ಯಾರಿಗುಂಟೆನುತ
ಕಟ್ಟಿದನು ಕಣೆಗಳಲಿ ಸುತ್ತಲು
ತಟ್ಟಿವಲೆಗಳ ಸೋಹಿನಲಿ ಬೆ
ನ್ನಟ್ಟಿ ಪಾರ್ಥಕುಮಾರ ಸದೆದನು ವೈರಿಮೃಗ ಕುಲವ ೭೪

ಆ ಸುಯೋಧನ ಸುತರ ಸರಳ ವಿ
ಳಾಸವನು ಖಂಡಿಸಿದನವದಿರ
ಬೀಸರಕೆ ಬಂದಡ್ಡ ಬೀಳುವ ಭಟರ ಕೆಡೆಯೆಚ್ಚ
ರೋಷವಹ್ನಿಯ ಕೆದರೆ ಕವಿವ ಮ
ಹೀಶರನು ಮಾಣಿಸಿದನವನೀ
ವಾಸವನು ವಾಸವನ ಮೊಮ್ಮನುದಾರ ಸಮರದಲಿ ೭೫

ಘಡ ಕುಮಾರಕ ದೊಡ್ಡಗರ ಸದೆ
ಬಡಿದ ಗರ್ವಿತತನವಕಟ ನ
ಮ್ಮೊಡನೆಯೋ ನೋಡಿಲ್ಲಿ ಮೇಳವೆ ಸಾರು ಸಾರೆನುತ
ಒಡನೊಡನೆ ನಾರಾಚ ನಿಚಯವ
ಗಡಣಿಸಿದರೇನೆಂಬೆನವರು
ಗ್ಗಡದ ಬಿಲು ವಿದ್ಯಾತಿಶಯವನು ಸಮರಭೂಮಿಯಲಿ ೭೬

ಸರಳ ಮೊನೆಯಲಿ ವೈರಿ ಸುಭಟರ
ಕರುಳ ತೆಗೆದನು ರಣದೊಳಾಡುವ
ಮರುಳ ಬಳಗವ ತಣಿಸಿದನು ಕಡಲಾದುದರುಣಜಲ
ತರಳನರೆಯಟ್ಟಿದನು ಧುರದಲಿ
ದುರುಳ ದುರಿಯೋಧನನ ಮಕ್ಕಳ
ಮರಳಲೀಯದೆ ಭಟರ ಕೇಣಿಯ ಕೊಂಡನಭಿಮನ್ಯು ೭೭

ಉರಗನಿಕ್ಕಡಿಗಾರ ಹುಲ್ಲಿನ
ಸರವಿಗಂಜುವುದುಂಟೆ ಕರ್ಣಾ
ದ್ಯರನು ಕಡ್ಡಿಗೆ ಬಗೆಯನೀ ಹೂಹೆಗಳ ಗಣಿಸುವನೆ
ಎರಡು ಶರದಲಿ ಲಕ್ಷಣನ ಸಂ
ಹರಿಸಿದನು ಹದಿನೈದು ಬಾಣದ
ಲರಿದನುಳಿದ ಕುಮಾರಕರನಭಿಮನ್ಯು ನಿಮಿಷದಲಿ ೭೮

ತಳಿತ ಚೂತದ ಸಸಿಗಳವನಿಗೆ
ಮಲಗುವಂತಿರೆ ರಾಜಪುತ್ರರು
ಹೊಳೆವ ಪದಕದ ಕೊರಳ ತಲೆಗಿಂಬಾದ ತೋಳುಗಳ
ಬಳಿರಕುತದಲಿ ನನೆದ ಸೀರೆಯ
ತಳಿತ ಖಂಡದ ಬಿಗಿದ ಹುಬ್ಬಿನ
ದಳಿತ ದಂಷ್ಟ್ರಾನನದಲೆಸೆದರು ಸಾಲ ಶಯನದಲಿ ೭೯

ಇಕ್ಕಿದಿರಲಾ ರಾಜಪುತ್ರರ
ನಕ್ಕಟಕಟಾ ಸ್ವಾಮಿದ್ರೋಹರು
ಹೊಕ್ಕಮನೆ ಹಾಳಹುದಲಾ ದ್ರೋಣಾದಿ ನಾಯಕರು
ಹಕ್ಕಲಾದುದು ನಮ್ಮ ಬಲ ಶಿಶು
ಸಿಕ್ಕನಿನ್ನೂ ಪಾಂಡವರ ಪು
ಣ್ಯಕ್ಕೆ ಸರಿಯಿಲ್ಲೆನುತ ಕೌರವರಾಯ ಗರ್ಜಿಸಿದ ೮೦

ಕುಲವ ನೋಡಿದಡಿಲ್ಲ ತನ್ನಯ
ಬಲುಹ ನೋಡಿದಡಿಲ್ಲ ಕದನದೊ
ಳುಳಿವ ನೋಡಿದರಿಲ್ಲಲಾ ಪತಿಯೆಂಬ ಪಾತಕಿಯ
ಇಳೆಯೊಳೋಲೆಯಕಾರರೆಂಬರ
ತಲೆಗೆ ತಂದನು ತೃಣವನೆಂದ
ಗ್ಗಳೆಯರನು ಮೂದಲಿಸಿ ಬಯ್ದನು ಸುಯ್ದು ಕುರುರಾಯ ೮೧

ಕೇಳುತಿದ್ದರು ಪತಿಯ ಮೂದಲೆ
ಗಾಳಿಯಲೆ ದಳ್ಳಿಸುವ ಶೌರ್ಯ
ಜ್ವಾಲೆ ಜಡಿದುದು ಖಾತಿಯಲಿ ಹೊಗರೇರಿದಾನನದ
ಆಳುತನವುಬ್ಬೆದ್ದು ಕಡು ಹೀ
ಹಾಳಿಕಾರರು ಕೈದು ಕೊಂಡರು
ಬಾಲಕನ ತರುಬಿದರು ದೊರೆಗಳು ಕೇಳು ಧೃತರಾಷ್ಟ್ರ ೮೨

## ಆರನೆಯ ಸಂಧಿ

ಸೂ. ರಿಪುಕುಮಾರ ಕುಠಾರ ಧೀರನು
ಚಪಳ ನೃಪಸಂಹಾರ ಕಾಲನು
ವಿಪುಳ ಸಂಗ್ರಾಮದಲಿ ಮಡಿದನು ಫಲುಗುಣನ ತನಯು

ಮೇರೆದಪ್ಪಿತು ಕೌರವನ ಪರಿ
ವಾರದಲಿ ಬೇಹವರು ಮಕುಟದ
ಬಾರಿಯಾಳುಗಳಾಂತುಕೊಂಡರು ಪಾರ್ಥನಂದನನ
ಸೂರಿಯನ ಸುತ ಶಲ್ಯ ಗೌತಮ
ಕೌರವಾನುಜನುಭಯ ಕಟಕಾ
ಚಾರ್ಯನಶ್ವತ್ಥಾಮನಿವರೊಗ್ಗಾಯ್ತು ಷಡುರಥರು ೧

ಹೊಳೆವ ಸಿಂಧದ ಜಡಿವ ಕಹಳಾ
ವಳಿಯ ಲಗ್ಗೆಯ ವಿವಿಧ ವಾದ್ಯದ
ಕಳಕಳದ ಕಾಲಾಳ ಬೊಬ್ಬೆಯ ಬಹಳ ರಭಸದಲಿ
ಕಲಶ ಪಲ್ಲವ ಚೌಕದಲಿ ಮಂ
ಡಳಿಸಿದವು ಸತ್ತಿಗೆಗಳೊದರುವ
ಕೆಲಬಲದ ಶಂಖಾಳಿಯಲಿ ಸಂದಣಿಸಿತತಿರಥರು ೨

ಅಳವಿಗೊಟ್ಟುದು ಮತ್ತೆ ಕೌರವ
ಬಲಪಯೋನಿಧಿ ವೈರಿ ಬಡಬನ
ಬಿಲು ಸರಳು ಬಿರುಗಿಡಿಯಲೌಕಿತು ಚಾತುರಂಗದಲಿ
ಎಲೆಲೆ ಬೆಂಗಾಹಿನಲಿ ನೂಕುವ
ಬಲ ಸಮರ್ಥರ ಜೋಕೆಯಲಿ ಕುರು
ಬಲಕೆ ಕದನಾಳಾಪವಾಯ್ತೆನುತೆಚ್ಚನಭಿಮನ್ಯು ೩

ಎಸಲು ತಲೆವರಿಗೆಯಲಿ ಕವಿದುದು
ದೆಸೆಯ ಹಳುವಿಂಗೌಕುವತಿರಥ
ರುಸುರುಮಾರಿಗಳೇರಿ ಹೊಯ್ದರು ರಾಯ ರಾವುತರು
ನುಸುಳಿದರು ನಾಚಿಕೆಯಲಾತನ
ವಿಶಿಖ ಜಲದಲಿ ತೊಳೆದರತಿರಥ
ರಸಮ ಸಂಗರವಾಯ್ತು ಮತ್ತಭಿಮನ್ಯುವಿದಿರಿನಲಿ ೪

ಹಳಚಿ ಮುರಿದುದು ವೀರ ಕರ್ಣನ
ಬಲ ಕೃಪಾಚಾರಿಯರ ಸೇನೆಗೆ
ತಲೆಯ ಋಣ ಸಂಬಂಧ ಸವೆದುದು ಕಾತರಿಸಿ ಕವಿವ
ಬಲದ ಬಿರುದರಿಗಮರ ನಾರಿಯ
ರೊಳಗೆ ಸೇರುವೆಯಾಯ್ತು ಶಲ್ಯನ
ಬಲದಡಗು ಸವಿಯಾಯ್ತು ಜಂಬುಕ ಕಾಕ ಸಂತತಿಗೆ ೫

ಕಡೆದ ರಥ ಸಲೆ ಕಾಂಚನಾದ್ರಿಯ
ನಡಸಿದವು ನಾಚಿಕೆಯನಭ್ರದೊ
ಳಿಡಿಯೆ ತಲೆ ಬೀರಿದವು ಭಂಗವನನುಪಮಾಂಬರಕೆ
ಕಡಲುವರಿವರುಣಾಂಬು ಜಲಧಿಗೆ
ಬಿಡಿಸಿದವು ಬಿಂಕವನು ಶಿವ ಶಿವ
ನುಡಿವ ಕವಿ ಯಾರಿನ್ನು ಪಾರ್ಥ ಕುಮಾರನಾಹವವ ೬

ಪಡೆಯ ತೆಗೆ ತರುವಲಿಯ ಕೊಲ್ಲದೆ
ಹಿಡಿಯೆನುತ ಬಿರುಸರಳ ತಿರುವಿನ
ಲಡಸಿ ಸೂತರಿಗರುಹಿ ಕೆಲಬಲದವರ ಕೈವೀಸಿ
ಕಡುಮನದ ಕೈಚಳಕಿಗರು ಮುಂ
ಗುಡಿಯಲೈತರೆ ರವಿಸುತಾದಿಗ
ಳೊಡನೊಡನೆ ಕೈಕೊಂಡರಿಂದ್ರಕುಮಾರ ನಂದನನ ೭

ಶಿಶುತನದ ಸಾಮರ್ಥ್ಯ ಸಾಕಿ
ನ್ನೆಸದಿರೆಲವೋ ಮರಳು ಮರಳೆಂ
ದಸಮ ಬಲರೈದಿದರು ಷಡುರಥರೊಂದು ಮುಖವಾಗಿ
ಎಸುಗೆ ನಿಮಗೆಂದಾಯ್ತು ನಿದ್ರೆಯ
ಮುಸುಕಿನಲಿ ಗೋಗ್ರಹಣದಲಿ ಜೀ
ವಿಸಿದ ಜಾಣರು ನೀವೆನುತ್ತಿದಿರಾದನಭಿಮನ್ಯು ೮

ತರಳತನದಲಿ ನುಡಿಯದಿರು ಸಂ
ಗರಕೆ ನಿಮ್ಮಯ್ಯನನು ಹೊಸ
ಸರಳು ನಾಚುವವಲ್ಲ ಶಿಶುವಧೆಯೆಂಬುದಪವಾದ
ಮರುಳುವುದು ಲೇಸೆನುತ ಷಡು ರಥ
ರುರವಣಿಸಿ ಬಿಗಿದ ಬಿಲ್ಲಿನ
ಗರುಡಿಕಾರನ ಕೂಡ ನೂಕಿತು ರವಿಸುತಾದಿಗಳು ೯

ಪಾರ್ಥ ಪರಿಯಂತೇಕೆ ಸಮರ
ವ್ಯರ್ಥಜೀವರು ನೀವು ಕೌರವ
ನರ್ಥವನು ಸಲೆ ತಿಂಬುದಲ್ಲದೆ ಸಮರ ನಿಮಗೇಕೆ
ಸ್ವಾರ್ಥ ಲೋಲುಪ್ತಿಯಲಿ ನಿಲುವ ಸ
ಮರ್ಥರಾದರೆ ಬಾಣ ಧಾರಾ
ತೀರ್ಥದೊಳಗೋಲಾಡಿಸುವೆನೆಂದೆಚ್ಚನಭಿಮನ್ಯು ೧೦

ಮನದ ಕೆಚ್ಚುಳ್ಳದಟನಹೆ ಮಾ
ತಿನ ಸಘಾಡಿಕೆ ಲೇಸು ಪಾರ್ಥನ
ತನಯನಲ್ಲಾ ಪೂತು ಪಾಯಿಕು ಎನುತ ಷಡುರಥರು
ತನತನಗೆ ಕೆಂಗೋಲಿನಲಿ ಮು
ಮ್ಮೊನೆಯ ಬೋಳೆಯ ಸರಳಿನಲಿ ಸಾ
ಧನ ಸಮಗ್ರರು ಶಿಶುವನೆಚ್ಚರು ದೆಸೆದೆಸೆಗೆ ಕವಿದು ೧೧

ಮುಸಗಿ ಮದದಾನೆಗಳು ಸಿಂಹದ
ಶಿಶುವ ಮುತ್ತುವವೋಲು ಕವಿಕವಿ
ದೆಸುತ ಬಂದರು ಮಕುಟವರ್ಧನರಸಮ ಬಾಲಕನ
ನುಸುಳದವರವರಸ್ತ್ರವನು ಖಂ
ಡಿಸುತ ಸನ್ನಾಹದಲಿ ಘನ ಪೌ
ರುಷದಲೆಚ್ಚಾಡಿದನು ಹಲಬರ ಕೂಡೆ ಸುಕುಮಾರ ೧೨

ಕೋಡಿದನೆ ಕೊಂಕಿದನೆ ನಾಯಕ
ವಾದಿಗಳು ಹಲರೆಂದು ಬೆಂಗೊ
ಟ್ಟೋಡಿದನೆ ಕೈಗಾಯದೆಚ್ಚನು ನಚ್ಚಿದಂಬಿನಲಿ
ತೋಡು ಬೀಡಿನ ಹವಣನಾತನ
ಮಾಡಿದಾತನೆ ಬಲ್ಲನೆನೆ ಕೈ
ಮಾಡಿ ಸುರಿದನು ಸರಳ ಮಳೆಯ ಮಹಾರಥರ ಮೇಲೆ ೧೩

ಪೂತು ಮಝು ಬಿಲ್ಲಾಳುತನವಿದು
ಭೂತನಾಥಂಗಿಲ್ಲ ಸುಭಟ
ವ್ರಾತವೀಕ್ಷಿಸಲರಿದೆನುತ ಕಣೆಗೆದರಿದನು ದ್ರೋಣ
ಏತಕಿದು ಹಿಮ್ಮೆಟ್ಟು ದಿಟ ನೀ
ಸೋತಡೆಯು ಜಯವಿಲ್ಲಮಗೆ ಮೃಗ
ಪೋತನನು ಹರಿಹೊಯ್ವುದುಚಿತವೆ ಮಗನೆ ಕೇಳೆಂದ ೧೪

ವಿನಯವೇಕಿದು ನಿಮ್ಮ ಭುಜಬಲ
ದನುವ ಬಲ್ಲೆನು ನಿಮ್ಮ ಕೈಮೈ
ತನದ ಹವಣನು ಕಾಬೆನೆನ್ನೊಳು ಸೆಣಸಿ ಜಯಿಸಿದರೆ
ಧನುವ ಹಿಡಿಯೆನು ಸಾಕು ಡೊಂಬನ
ಬಿನುಗು ನುಡಿಯಂತಿರಲಿ ಬಲ್ಲಡೆ
ಮೊನೆಗಣೆಯಲೇ ಮಾತನಾಡೆಂದೆಚ್ಚನಭಿಮನ್ಯು ೧೫

ಎಡದೊಳೌಕುವ ಕೃಪನನೆಚ್ಚನು
ತಡೆಯಲಶ್ವತ್ಥಾಮನನು ರಥ
ಕೆಡೆಯಲೆಚ್ಚನು ತೊಡಚಿ ಕೈಯಲಿ ಕೌರವಾನುಜನ
ಮಿಡುಕಲೆಚ್ಚನು ಹಿಂದು ಮುಂದವ
ಗಡಿಸಿದಾ ಮಾದ್ರೇಯ ರವಿಸುತ
ರೊಡಲೊಳಂಬನು ಹೂಳಿದನು ಸೀಳಿದನು ಸಮರಥರ ೧೬

ಅಡಸಿ ಹೊಕ್ಕರೆ ಕೃಪನ ರಥವನು
ಕಡಿದು ಬಿಸುಟನು ಗುರುಸುತನನಡಿ
ಮಿಡುಕಲೀಯದೆ ಬಿಗಿದು ಕರ್ಣನ ಧನುವ ಖಂಡಿಸಿದ
ಕೊಡಹಿದನು ಕೌರವನ ರಥವನು
ತುಡುಕಲೀಯದೆ ದ್ರೋಣನನು ಜವ
ಗೆಡಿಸಿದನು ಜೋಡಿಸಿದನು ಷಡುರಥರೊಗ್ಗನೊಡೆ ಹೊಯ್ದು ೧೭

ಮುರಿಮುರಿದು ಹಿಯ್ಯಾಳಿಯಲಿ ಮ !
ತ್ತುರವಣಿಸಿ ಗರಿಗಟ್ಟಿ ರಥಿಕರು
ಹುರಿಬಿಡದೆ ಬಿಗುಹಿನಲಿ ಭಾಷೆಯ ಮಾಡಿ ತಮ್ಮೊಳಗೆ
ಸರಳ ಸೂಸಿದರೆಡ ಬಲದಲ
ಬ್ಬರವ ಮಾಡಿದರೋಡಿದರು ಹಗೆ
ಯರುಣ ಜಲದಲಿ ನಾದಿದರು ನಿಶಿತಾಸ್ತ್ರ ಸಂತತಿಯ ೧೮

ವಡಬಗೌತಣವಿಕ್ಕುವರೆ ಕಡ
ಲೊಡೆಯಗಹುದು ಸಮರ್ಥನಲ್ಲಾ
ಬಿಡುಗಣೆಯ ಬೀರುವರೆ ಕಟಕಾಚಾರ್ಯನೆಂದೆನುತ
ಕಡುಮೊನೆಯ ಕೂರಂಬುಗಳ ಮಿಗೆ
ಗಡಣಿಸಿದನೊಗ್ಗೊಡೆದ ಷಡುರಥ
ರೊಡಲೊಳಂಬನು ಹೂಳಿದನು ಕಾರಿದರು ಶೋಣಿತವ ೧೯

ಹೊಸಕದ ಶೌರಿಯದ ಬಾಳಿಕೆ
ಯೇಸು ದಿನವೈ ಕರ್ಣ ಕೃಪ ದು
ಶ್ಶಾಸನರ ಕೊಂಬನೆ ಕುಮಾರಕ ಸುರರಿಗಲಗಣಸು
ಘಾಸಿಯಾದರು ಘಾಯವಡೆದು ವಿ
ಳಾಸವಳಿದುದು ರಿಪುಭಟನ ಗೆಲು
ವಾಸೆ ಬೀತುದು ಧಾತುಗೆಟ್ಟುದು ಸರಳ ಸಾರದಲಿ ೨೦

ವಿರಥನಾದನು ಕರ್ಣನಂಬಿಗೆ
ತಿರುಹಿ ಬಿಲ್ಲನು ತೊಟ್ಟನಾ ಗುರು
ಗುರುತನೂಜನು ತನ್ನ ಸೂತನ ಶಿರವ ಹರಿಯೆಚ್ಚ
ಸುರಗಿಯನು ಬಿಸುಟೋರೆಯ ತಿರುಹಿದ
ನರಸನನುಜನು ಕೃಪನು ಶಲ್ಯನು
ಕೊರಳಲಸುಗಳ ಹಿಡಿದು ಹಂಗಿಗರಾದರೊಡೆಯಂಗೆ ೨೧

ಗನ್ನದಲಿ ಗುರು ಜಾರಿದನು ಕೃಪ
ಮುನ್ನವೇ ಹಿಂಗಿದನು ಕರ್ಣನ
ನಿನ್ನು ಕಂಡವರಾರು ಮೂರ್ಛೆಗೆ ಮೂರು ಬಾರಿಯದು
ಬೆನ್ನ ತೆತ್ತರು ಬಿರುದರಾತಗೆ
ಕೆನ್ನೆಯೆಡೆಗುಗಿದಂಬು ಸಹಿತವೆ
ನಿನ್ನ ಮಗನರನೆಲೆಗೆ ಸರಿದನು ಭೂಪ ಕೇಳೆಂದ ೨೨

ಕೊಂಡು ಬರುತಿದೆ ಭಟರು ಮನ್ನೆಯ
ಗಂಡನಾಗೈ ಜೀಯ ಎನೆ ಖತಿ
ಗೊಂಡು ಕುರುಪತಿ ನೋಡಿದನು ಮೂಗಿನಲಿ ಬೆರಳಿಟ್ಟು
ಭಂಡರೆಂಬೆವೆ ಜಗದ ಗುರುಗಳು
ಗಂಡುಗಲಿಗಳು ವೈರಿ ಭಟರಿಗೆ
ಹೆಂಡಿರಾಗಲು ಹೋಗಿರೈ ದಿಟ ಹೋಗಿ ನೀವೆಂದ ೨೩

ಕಾಲ ವಹಿಲವ ಕಲಿಸಲೋಸುಗ
ಕೋಲಗುರು ಜಾರಿದನು ಶಲ್ಯನ
ಮೇಲು ಮುಸುಕನುವಾಯ್ತು ಬಿರುದೇನಾಯ್ತುಗುರುಸುತನ
ಆಳುವಾಸಿಯ ಕಡುಹು ಕರ್ಣನ
ಬೀಳುಕೊಂಡುದು ಪೂತು ಮಝರೇ
ಬಾಲ ಎಂದವನೀಶ ಮೂದಲಿಸಿದನು ತನ್ನವರ ೨೪

ಇದಿರೊಳೀಶನ ಭಾಳ ನಯನದ
ಕದಹು ತೆಗೆದಿದೆ ಹಿಂದೆ ಮರಳುವ
ಡಿದೆ ಕೃತಾಂತನ ಕೊಂತವರಸನ ಮೂದಲೆಯ ವಚನ
ಅದಟು ಕೊಳ್ಳದು ರಾಜಸೇವೆಯ
ಪದವಿ ಪಾತಕ ಫಲವೆನುತ ನೂ
ಕಿದರು ರಥವನು ಹಳಿವು ದರ್ಪದ ಹೇವ ಮಾರಿಗಳು ೨೫

ರಸದ ಬಂಧದ ಬಿಗುಹು ವಹ್ನಿಯ
ಮುಸುಕನುಗಿದುಳಿವುದೆ ಕುಮಾರನ
ಮುಸುಡ ಮುಂದಕೆ ಬಿದ್ದು ಬದುಕುವರೇ ಮಹಾದೇವ
ಎಸುತ ಹೊಗುವವರು ಭಟನ ಘಾಯಕೆ
ಮುಸುಡ ತಿರುಹುವರಡಿಗಡಿಗೆ ಸಾ
ಹಸದ ಸುಂಕಿಗನೊಡನೆ ತಲೆಯೊತ್ತಿದರು ಷಡುರಥರು ೨೬

ಹರಿದು ಬಿದ್ದವು ಜೋಡು ಮೆಯ್ಯಲಿ
ಮುರಿದವಗಣಿತ ಬಾಣದೇರಿನೊ
ಳೊರೆದ ರಕುತದ ಧಾರೆ ನಾದಿತು ರಥದ ಹಲಗೆಗಳ
ಅರಿವು ಮರೆದಪಕೀರ್ತಿನಾರಿಯ
ಸೆರಗ ಹಿಡಿದರು ಹೇಳಲೇನದ
ನರಿಯೆನೇಕಾಂತದಲಿ ಕರ್ಣನ ಕರೆದನಾ ದ್ರೋಣ ೨೭

ಇದಿರೊಳಾನುವುದರಿದು ಹಸುಳೆಯ
ಕದನ ಹಂಗಿಗರಾದೆವಾಳ್ದನ
ವದನಕಮಲಕೆ ನಮ್ಮ ಪೌರುಷವಿಂದು ಹಿಮವಾಯ್ತು
ಇದಿರೊಳಾನಿಹೆ ಶಲ್ಯನೆಡವಂ
ಕದಲಿ ಬಲದಲಿ ಕೃಪನಪರಭಾ
ಗದಲಿ ನೀ ಬಂದೆಸು ಕುಮಾರನ ಕರದ ಕಾರ್ಮುಕವ ೨೮

ಚಾಪವೀತನ ಕೈಯಲಿರಲಿ
ಸ್ವಾ ಪಿನಾಕಿಗೆ ಗೆಲವು ಘಟಿಸದು
ವೈಪರೀತ್ಯಕೆ ಬೆದರಲಾಗದು ಸ್ವಾಮಿಕಾರ್ಯವಿದು
ರೂಪುದೋರದೆ ಬಂದು ಸಂಭಟನ
ಚಾಪವನು ಖಂಡಿಸುವುದಿದು ಕುರು
ಭೂಪನುಳಿವೆಂದಿನಸುತನನೊಡಬಡಿಸಿದನು ದ್ರೋಣ ೨೯

ಹಿಂದಣಿಗೆ ತಿರುಗಿದನು ಭಾಸ್ಕರ
ನಂದನನು ಬಲವಂಕದಲಿ ಗುರು
ನಂದನನು ಕೃಪ ಶಲ್ಯ ವಾಮದೊಳಿದಿರಲಾ ದ್ರೋಣ
ನಿಂದು ಕದನವ ಕೆಣಕಿದರು ರಿಪು
ಬಂದಿಕಾರನೊಳೀರ ಸೂರೆಗೆ
ಬಂದು ಬಸಿವುತ ಹೋದರನಿಬರು ಬೈದು ರವಿಸುತನ ೩೦

ದಳವು ದಳವುಳವಾಯ್ತು ಕೇಸರ
ದೊಳಗೆ ವಿಸಟಂಬರಿದು ಕರ್ಣಿಕೆ
ಯೊಳಗೆ ರಿಂಗಣಗುಣಿದು ಸಂಗರ ಜಯದ ಮಡುವಿನಲಿ
ಸಲೆ ಸೊಗಸಿ ತನಿ ಸೊಕ್ಕಿ ದೆಸೆ ಪಟ
ದುಳಿದು ಸೌಭದ್ರೇಯ ಭೃಂಗನ
ಬಿಲು ದನಿಯು ಭರವಂಜಿಸಿತು ಜಯಯುವತಿ ವಿರಹಿಗಳ ೩೧

ಅರಿಯಿದು ಮಗನೆನಿಸುವೀ ಮಮ
ಕಾರವೆಮ್ಮಳು ಮೊಳೆತಡಾ ದಾ
ತಾರನುಳಿವೆನ್ನಿಂದ ತಪ್ಪುವುದೆನುತ ಮನದೊಳಗೆ
ಕೂರಲಗನಾ ಕರ್ಣ ಬರಸೆಳೆ
ದಾರಿ ಹಿಂದಣಿನೆಚ್ಚು ಪಾರ್ಥ ಕು
ಮಾರಕನ ಚಾಪವನು ಮುಕ್ಕಡಿಯಾಗಿ ಖಂಡಿಸಿದ ೩೨

ಉರುವ ಜಯವಧುವೊಕ್ಕತನದಲಿ
ಮುರಿದ ಕಡ್ಡಿಯಿದೆನಲು ಕರದಿಂ
ಮುರಿದು ಬಿದ್ದುದು ಚಾಪವಿಂದ್ರ ಕುಮಾರ ನಂದನನ
ಬೆರಗಡರಿ ಮುಖದಿರುಹಿ ಹಿಂದಣೆ
ನಿರಿದ ಕರ್ಣನ ನೋಡಿ ಮುಖದಲಿ
ಕಿರುನಗೆಯ ಕೇವಣಿಸಿ ನುಡಿದನು ಬೆರಳನೊಲೆದೊಲೆದು ೩೩

ಆವ ಶರಸಂಧಾನ ಲಾಘವ
ದಾವ ಪರಿ ಮಝು ಪೂತು ಪಾಯಿಕು
ದೇವ ಬಿಲ್ಲಾಳೆಂತು ಕಡಿದೈ ಕರ್ಣ ನೀ ಧನುವ
ಈ ವಿವೇಕವಿದಾರ ಸೇರುವೆ
ಯಾವಗಹುದಿದು ಹಿಂದೆ ಬಂದೆಸು
ವೀ ವಿಗಡತನ ನಿನಗೆ ಮೆರೆವುದು ಕರ್ಣ ಕೇಳೆಂದ ೩೪

ಎನಲು ಲಜ್ಜಿತನಾಗಿ ತಿರುಗಿದ
ನನುವರದಲೀ ಕರ್ಣನಾತನ
ಧನು ಮುರಿಯೆ ಕೈಕೊಂಡರೀ ದ್ರೋಣಾದಿ ನಾಯಕರು
ಕನಕ ರಥವನು ದ್ರೋಣನಾ ಗುರು
ತನುಜ ಸಾರಥಿಯನು ಕೃಪಾಚಾ
ರ್ಯನು ತುರಗವನು ಶಲ್ಯ ಕಡಿದನು ಭಟನ ಠೆಕ್ಕೆಯವ ೩೫

ತುಡುಕುವರೆ ಧನುವಿಲ್ಲ ಮುಂದಡಿ
ಯಿಡಲು ಸಾರಥಿಯಿಲ್ಲ ರಥ ಕಡಿ
ವಡೆದುದಿನ್ನೆಂತೊದಗುವನೊ ಸುಕುಮಾರ ತಾನೆನುತ
ಪಡೆ ಬಿಡದೆ ಬೊಬ್ಬಿರಿಯೆ ಬೆದರದೆ
ಕಡುಗಿ ಖಡ್ಗವ ಕೊಂಡು ರಿಪುಗಳ
ಕಡಿದು ಹರಹುತ ಬೀದಿವರಿದನು ಕಣನ ಮಧ್ಯದಲಿ ೩೬

ಈತನಿರೆ ಕಲ್ಪಾಂತ ರುದ್ರನ
ಮಾತು ಜಗಕೇಕೆನಲು ವೈರಿ
ವ್ರಾತವನು ಮುಂಕೊಂಡು ಹೊಯ್ದನು ಹೊಳೆವ ಖಡುಗದಲಿ
ಸೋತನೇ ಶಿಶು ಷಡುರಥರ ಕರೆ
ಈತನಾರೈ ಹೇಳಿ ಭಯವಿ
ನ್ನೇತಕೆಂದವನೀಶ ಮೊದಲಿಸಿದನು ತನ್ನವರ ೩೭

ಗೆಲಿವರಭಿಮನ್ಯುವನು ತನ್ನವ
ರೆಲವೊ ತಾ ವೀಳೆಯವನೆನುತವೆ
ಮೆಲುನಗೆಯಲತಿರಥರ ಜರೆದನು ಕೌರವರ ರಾಯ
ಬಳಿಕ ಎಡಬಲವಂಕದಲಿ ಮಂ
ಡಲಿಸಿ ಮೋಹರಿಸಿತ್ತು ರಿಪುಬಲ
ಜಲಧಿ ವಡಬನೊಳಾಂತು ತಾಗಿದರಂದು ಷಡುರಥರು ೩೮

ತುಡುಕಿದವು ತೇಜಿಗಳು ವಾಘೆಯ
ಗಡಣದಲಿ ತೂಳಿದವು ದಂತಿಗ
ಳೆಡಬಲದ ಬವರಿಯಲಿ ಮುತ್ತಿತು ಮತ್ತೆ ರಿಪುನಿಕರ
ಕಡುಮನದ ಕಾಲಾಳು ಕರೆದುಂದು
ಖಡುಗ ಧಾರೆಯನೀತನಳವಿಯ
ಕೆಡಿಸಿ ತಲೆಯೊತ್ತಿದರು ಭೂಪನ ಮೊನೆಯ ನಾಯಕರು ೩೯

ವಿಷದ ಹುಟ್ಟಿಯೊಳೆರಗಿ ನೊಣ ಜೀ
ವಿಸುವುದೇ ಶಿವ ಶಿವ ಕುಮಾರನ
ಮುಸುಡ ಮುಂದಕೆ ಬಿದ್ದು ಬದುಕುವುದುಂಟೆ ಭಟನಿಕರ
ಕುಸುರಿದರಿದನು ಕರಿಘಟೆಯ ನಿ
ಪ್ಪಸರದಲಿ ಕಾಲಾಳು ಕಂದುರೆಗ
ಳಸುವ ಸೂರೆಯ ಬಿಟ್ಟನಂತಕ ದೂತ ಸಂತತಿಗೆ ೪೦

ಅರಿಭಟರ ಬೊಬ್ಬೆಗಳ ಮೊಳಗಿನೊ
ಳರುಣಜಲ ವರುಷದಲಿ ರಿಪುಗಳ
ಕೊರಳ ಬನದಲಿ ಕುಣಿದುವೀತನ ಖಡ್ಗವನಕೇಕಿ
ಸುರಿವ ಖಂಡದ ರಕುತ ಧಾರೆಗೆ
ತರತರದಿ ಬಾಯ್ದೆಗೆದು ಶಾಕಿನಿ
ಯರ ಸಮೂಹವು ಬಳಿಯಲೈದಿತು ಪಾರ್ಥನಂದನನ ೪೧

ಕರುಳ ಹೂಗೊಂಚಲಿನ ಮೂಳೆಯ
ಬಿರಿಮುಗುಳ ನವ ಖಂಡದಿಂಡೆಯ
ಕರತಳದ ತಳಿರೆಲೆಯ ಕಡಿದೋಳುಗಳ ಕೊಂಬುಗಳ
ಬೆರಳ ಕಳಿಕೆಯ ತಲೆಯ ಫಲ ಬಂ
ಧುರದ ಘೂಕಧ್ವಾಂಕ್ಷ ನವ ಮಧು
ಕರದ ರಣವನವೆಸೆದುದೀತನ ಖಡ್ಗ ಚೈತ್ರದಲಿ ೪೨

ವೈರಿ ವೀರಪ್ರತತಿಗಮರೀ
ನಾರಿಯರಿಗೆ ವಿವಾಹವನು ವಿ
ಸ್ತಾರಿಸುವ ಸಮಯದೊಳಗಾಂತ ಸಿತಾಕ್ಷತಾವಳಿಯ
ತಾರಕಿಗಳೆಸೆದಭ್ರವೆನೆ ರಿಪು
ವಾರಣದ ಮಸ್ತಕದ ಮುತ್ತುಗ
ಳೋರಣಿಸಲೊಪ್ಪಿದುದು ಖಡ್ಗ ಸುರೇಂದ್ರಸುತ ಸುತನ ೪೩

ಶಾಕಿನಿಯರೋಕುಳಿಯ ಧಾರೆಯ
ಜೀಕೊಳವೆಯೋ ಜವನ ಜಳ ಜಂ
ತ್ರಾಕರುಷಣವೊ ರಕುತ ಲತೆಗಳ ಕುಡಿಯ ಕೊನರುಗಳೊ
ನೂಕಿ ಕೊಯ್ದೊರಳುಗಳ ಮುಂಡದ
ಮೂಕಿನಲಿ ನೆಗೆದೊಗುವ ನೆತ್ತರು
ನಾಕವನು ನಾದಿದುದೆನಲು ಸವರಿದನು ಪರಬಲವ ೪೪

ಅಟ್ಟಿ ಹೊಯ್ದನು ದಂತಿಗಳ ಹುಡಿ
ಗುಟ್ಟಿದನು ವಾಜಿಗಳ ತೇರಿನ
ಥಟ್ಟುಗಳ ಸೀಳಿದನು ವಿಂಗೆ ಕಾಲಾಳನಸಿಯರೆದ
ಕೆಟ್ಟು ಬಿಟ್ಟೋಡಿದುದು ಭಟನರೆ
ಯಟ್ಟಿದನು ರಣದೊಳಗೆ ರಾಯ ಘ
ರಟ್ಟ ಪಾರ್ಥನ ತನಯ ಕೊಂದನು ಖಡ್ಗ ಮನದಣಿಯೆ ೪೫

ಸೀಳಿದನು ಸೌಬಲನೊಳಿಪ್ಪ
ತ್ತೇಳನಾ ಮಾದ್ರೇಶರೊಳು ಹದಿ
ನೇಳನಗ್ಗದ ರವಿಸುತನ ಮಂತ್ರಿಗಳೊಳೈವರನು
ಮೇಲೆ ಕೇರಳರೊಳಗೆ ಹತ್ತು ನೃ
ಪಾಲರನು ಕೌಸಲ ಯವನ ನೇ
ಪಾಳ ಬರ್ಬರರೊಳಗೆ ಕೊಂದನು ಹತ್ತು ಸಾವಿರವ ೪೬

ಹಸುಳೆಯೆನಬಹುದೇ ಮಹಾದೇ
ವಸಮ ಬಲ ಬಾಲಕನೆನುತ ಚಾ
ಳಿಸಿತು ಪಡೆಯುಲ್ಲಲ್ಲಿ ತಲ್ಲಣಿಸಿದರು ನಾಯಕರು
ಮುಸುಡ ತಿರುಹುತ ಮಕುಟ ವರ್ಧನ
ರುಸುರಲಮ್ಮದೆ ಸಿಕ್ಕಿ ಭೂಪನ
ನುಸುಳುಗಂಡಿಯ ನೋಡುತಿರ್ದರು ಕೂಡೆ ತಮತಮಗೆ ೪೭

ತುಡುಕಲಮ್ಮುವರಿಲ್ಲ ಬಲವಲಿ
ಮಿಡುಕಲಮ್ಮುವರಿಲ್ಲ ರಕುತದ
ಕಡಲೊಳಗೆ ಬೊಡೆದ್ದು ನೆಗೆದುದು ಕೋಟಿ ಪಾಯದಳ
ಸಿಡಿಲು ಜಂಗಮವಾಯ್ತೊ ಪ್ರಳಯದ
ಮೃಡನು ಬಾಲಕನಾದನೋ ಕೊಲೆ
ಗಡಿಕನಹುದೋ ಕಂದ ಎಂದನು ಕೌರವರ ರಾಯ ೪೮

ಧನು ಮುರಿದ ಬಳಿಕಿಮ್ಮಡಿಸಿತೀ
ತನ ಪರಾಕ್ರಮವೆನುತ ಸೇನಾ
ವನಧಿ ಜರೆದುದು ಭಟರು ಹರಿದರು ಬಿಟ್ಟ ಮಂಡೆಯಲಿ
ಜನಪತಿಯ ಕಟ್ಟಳವಿಯಲಿ ರವಿ
ತನುಜನಡ್ಡೈಸಿದನು ಫಡ ಹೋ
ಗೆನುತ ನಾರಾಚದಲಿ ಮುಸುಕಿದನರ್ಜುನಾತ್ಮಜನ ೪೯

ಎಳೆಯ ರವಿ ರಶ್ಮಿಗಳು ರಕ್ತೋ
ತ್ಪಲದೊಳಗೆ ಹೊಳೆವಂತೆ ಹೊನ್ನರೆ
ಬಳಿದ ಹಿಳುಕನೆ ಕಾಣಲಾದುದು ಭಟನ ಕಾಯದಲಿ
ಒಲೆದು ಕೇಸರಿ ಹೊಯ್ವವೋಲ
ವ್ವಳಿಸಿ ಕರ್ಣನ ಹಯ ರಥವನ
ಪ್ಪಳಿಸಿ ಮರಳುವ ಲಾಗಿನಲಿ ಖಂಡೆಯವ ಖಂಡಿಸಿದ ೫೦

ಕರದ ಕರವಾಳುಡಿಯೆ ಬಿಡೆ ಹ
ಲ್ಮೊರೆದು ಭರದಲಿ ಗದೆಯ ಕೊಂಡೆ
ಬ್ಬರಿಸಿ ಕೋಪದಲಗಿದು ಹರಿಗೆಯ ಹಿಡಿದು ಮುಂದಣಿಗೆ
ಅರರೆ ಸಮ್ಮುಖವಾಗೆನುತ ಸಂ
ಗರದೊಳುರವಣಿಸಿದನು ಕರ್ಣನ
ತೆರಳಿಚಿದನೈನೂರು ಹಜ್ಜೆಯಲಿಂದ್ರಸುತ ಸೂನು ೫೧

ಗದೆಯ ಹೊಯ್ಲಲಿ ನೊಂದು ಕೋಪದೊ
ಳದಿರೆನುತ ಸೈಗೆಡೆದ ರೋಮದ
ಹೊದರುಗಳ ಬಿಡುಗಣ್ಣ ಕೆಂಪಿನ ಕುಣಿವ ಮೀಸೆಗಳ
ಕುದಿದ ಹೃದಯದ ಕಾದ ದೇಹದ
ಕದನಗಲಿ ರವಿಸೂನು ಮೇಲಿ
ಕ್ಕಿದನು ಫಡ ಹೋಗದಿರು ಹೋಗದಿರೆನುತ ತೆಗೆದೆಚ್ಚ ೫೨

ಶರಮಯವು ಸರ್ವಾಂಗವಿನ್ನೀ
ಸರಳು ನೆಡಲಿಂಬಿಲ್ಲ ಮೈಗಳೊ
ಳರಿಯನದನಭಿಮನ್ಯು ಕರ್ಣನ ಮೇಲುವಾಯಿದನು
ತರಹರಿಸಿ ಕೆಲಸಿಡಿದು ರಿಪು ಭಟ
ನುರವನುದರವನೆಡಬಲನ ಕಿ
ಬ್ಬರಿಯನೆಚ್ಚನು ಕರ್ಣ ನೂರೈವತ್ತು ಬಾಣದಲಿ ೫೩

ಸರಳು ನೆಡಲುಬ್ಬೆದ್ದು ಬೊಬ್ಬಿರಿ
ದುರವಣಿಸಿ ಬರೆ ದಿವ್ಯಶರದಲಿ
ಕರವೆರಡ ಹರಿಯೆಚ್ಚಡಾಗಳೆ ಕೆಡೆದವವನಿಯಲಿ
ಇರದೆ ಗಹಗಹಿಸಿದನು ಕೇಳಲೆ
ಮರುಳೆ ಸೂತಜ ಕೈಮುರಿಯೆ ಸಂ
ಗರದ ಸಿರಿ ಹಿಂಗುವಳೆ ತನ್ನನೆನುತ್ತ ಗರ್ಜಿಸಿದ ೫೪

ಸುರಿವ ರಕುತದ ಸರಿಯು ಸೆರಗಿನೊ
ಳೊರಸಿ ರಥದಚ್ಚುಗಳನೊದೆದನು
ತಿರುಹಿ ಗಾಲಿಯ ತೆಗೆದು ಮುಂಗೈಗೊಂಡು ನಡೆನಡೆದು
ಅರಿಬಲವನಿಡೆ ಮುಗ್ಗಿ ಕೆಡೆದುದು
ತುರಗವಜಿಗಿಜಿಯಾದುದಿಭ ತತಿ
ಯುರುಳಿದವು ಹೊರಳಿದವು ಹೂಣಿಗರಟ್ಟೆ ಸಮರದಲಿ ೫೫

ಹರಿಯ ಚಕ್ರದ ಸತ್ವವೀತನ
ಧುರದೊಳಾಯ್ತೆನೆ ರಥದ ಚಕ್ರದೊ
ಳರಿಬಲವನಿಡೆ ಮುಗ್ಗಿ ಕೆಡೆದುದು ಬಹಳ ತಳತಂತ್ರ
ಬಿರುದರಾನುವರಿಲ್ಲ ಷಡುರಥ
ರುರವಣೆಯು ಹಿಂದಾಯ್ತು ರಾಯರ
ಗುರುವ ಕಂಡವರಿಲ್ಲೆನುತ ಕುರುರಾಯ ಚಿಂತಿಸಿದ ೫೬

ಮನದ ಖತಿ ಹೊಗರೇರೆ ದುಶ್ಶಾ
ಸನನ ಮಗನಿದಿರಾಗಿ ಖಡುಗದ
ಮೊನೆಯ ಚೂರಿಸಿ ದಂಡವಲಗೆಯ ತೊಡೆಯೊಳೊದರಿಸುತ
ತನಗೆ ಮೃತ್ಯುವ ಕರೆವವೋಲ
ರ್ಜನ ಕುಮಾರನ ಕರೆದು ಹಳಚಿದ
ನನಿಮಿಷಾವಳಿ ಪೂತು ಪಾಯ್ಕನೆ ಹೆಣಗಿದರು ಭಟರು ೫೭

ಗಾಲಿ ತೀರಿದವೆಂದು ಬಂದನೆ
ಕಾಳೆಗಕೆ ತಪ್ಪೇನೆನುತ ಕರ
ವಾಳಿನಾತನ ಬಗೆಯದೊಳಹೊಕ್ಕೆರಗಿದನು ಶಿರವ
ಮೇಲುವಲಗೆಯಲಣೆದು ಹಾಯ್ದನು
ಬಾಲಕನ ಘಾಯವನು ನಸು ನಗು
ತೇಳಿಸುತ ದಂಡೆಯಲಿ ಕಳೆದನು ತಿವಿದನವನುರವ ೫೮

ಕರಹತಿಗೆ ಧಡಧಡಿಸಿ ತಿರ್ರನೆ
ತಿರುಗಿ ಬೀಳುತ ಧೈರ್ಯದಲಿ ಹೊಡ
ಕರಿಸಿ ಹೊರಬಿನೊಳೆದ್ದು ಹೊಯ್ದನು ಪಾರ್ಥನಂದನನ
ಅರಿ ಕೃಪಾಣದ ಘಾಯವನು ತರ
ಹರಿಸಲರಿಯದೆ ಬೀಳುತಹಿತನ
ನೆರಗಿದನು ಬಳಿಕವನಿಗೊರಗಿದರಾ ಕುಮಾರಕರು ೫೯

ಕಾಳುಕಿಚ್ಚೆದ್ದಡವಿಯನು ಕುಡಿ
ನಾಲಗೆಯೊಳಳವಡಿಸಿ ದಳ್ಳುರಿ
ಜ್ವಾಲೆ ತಗ್ಗಿದವೋಲು ಗಗನದ ಮುಗಿಲ ಮೋಹರವ
ದಾಳಿಯಲಿಯರೆಯಟ್ಟಿ ಸುಂಟರು
ಗಾಳಿಯುರವಣೆ ನಿಂದವೊಲು ಸುರ
ಪಾಲ ತನಯನ ತನಯನಸ್ತಮಿಸಿದನು ರಣದೊಳಗೆ ೬೦

ತೋಳ ತಲೆಗಿಂಬಿನಲಿ ಕೈದುಗ
ಳೋಳಿಗಳ ಹಾಸಿನಲಿ ತನ್ನಯ
ಕಾಲ ದೆಸೆಯಲಿ ಕೆಡೆದ ಕೌರವ ಸುತರು ನೂರ್ವರಲಿ
ಬಾಲಕನು ಬಳಲಿದನು ಸಮರದ
ಲೀಲೆಯಲಿ ಕುಣಿಕುಣಿದು ಬಸವಳಿ
ದಾಳುಗಳ ದೇವನು ಮಹಾಹವದೊಳಗೆ ಪವಡಿಸಿದ ೬೧

ಬಿಗಿದ ಹುಬ್ಬಿನ ಬಿಟ್ಟ ಕಂಗಳ
ಹೊಗರು ಮೋರೆಯ ಹಿಣಿಲ ಮಂಡೆಯ
ಜಿಗಿಯ ರಕುತದ ಜೋರಿನೊಡಲಿನ ತುರುಗಿದಂಬುಗಳ
ಹೆಗಲ ಕೊಯ್ಲಿನ ತಗ್ಗಿನಲಿ ಸೈ
ನೆಗೆದ ರೋಮದ ವಿಕ್ರಮಾಗ್ನಿಯ
ತಗಹು ಬಿಡದಭಿಮನ್ಯು ಮೆರೆದನು ಶಸ್ತ್ರ ಶಯನದಲಿ ೬೨

ಸಾವ ಹರಯವೆ ಎನುತ ಗಗನದ
ದೇವತತಿ ಮರುಗಿತ್ತು ಶಕ್ರನ
ಸಾವಿರಾಲಿಯೊಳೊರತೆ ಮಸಗಿತು ಪೌತ್ರ ಶೋಕದಲಿ
ತಾವು ಷಡುರಥರೊಬ್ಬ ಹಸುಳೆಯ
ಹೇವವಿಲ್ಲದೆ ಕೊಂದರೋ ಸುಡ
ಲಾವ ವೀರರು ಕೌರವಾದಿಗಳೆಂದುದಮರಗಣ ೬೩

ಮಗುವು ವೇಷವ ಧರಿಸಿ ದೂರದ
ಲಗಲಿ ಹೋಗಲು ತನ್ನ ಚಿತ್ತಕೆ
ಧಗೆಯ ಡಾವರವಾಯ್ತು ತನಗೊಳಗಾಯ್ತು ಪರಿತಾಪ
ಮಗನ ಮರಣದಲೆಂತು ಜೀವವ
ಬಗೆವಳಕಟ ಸುಭದ್ರೆಯೆನುತವೆ
ದೃಗುಜಲವ ಬೆರಳಿಂದ ಮಿಡಿದರು ಗೌರಿದೇವಿಯರು ೬೪

ಹಲವು ಗಜಗಳು ಸಿಂಹ ಶಿಶುವನು
ಗೆಲಿದ ಪರಿಯಂತಾಯ್ತು ಹಾವಿನ
ಬಳಗ ಗರುಡನ ಮರಿಯ ಮುರಿದವೊಲಾಯಿತಕಟೆನುತ
ಅಳಲಿದುದು ಸುರ ಕಟಕವವನಿಯೊ
ಳಿಳಿದರಪ್ಸರ ಗಣಿಕೆಯರು ಕೋ
ಮಳನ ತಂದರು ವಾಸವನ ಸಿಂಹಾಸನದ ಹೊರೆಗೆ ೬೫

ಧುರದ ಪ್ರಳಯ ಕೃತಾಂತನನು ಪರಿ
ಹರಿಸಿದೆವು ಮೃತ್ಯುವಿನ ಪಾಶದ
ಕೊರಳ ಬಳಚಿದೆವೆನುತ ಕೌರವ ಬಲದ ನಾಯಕರು
ಶಿರವ ತಡಹುತ ತಮ್ಮ ಶಿಬಿರಕೆ
ತಿರುಗಿದರು ಬಾಲಕನನೀಕ್ಷಿಸ
ಲರಿದು ತನಗೆಂಬಂತೆ ರವಿ ಜಾರಿದನು ಪಶ್ಚಿಮಕೆ ೬೬

ಸೋಲವರಿಗಳಿಗೆಂದು ಹರುಷವ
ತಾಳದಿರು ಧೃತರಾಷ್ಟ್ರ ಕೃಷ್ಣನ
ಸೋಲವದು ಪಾಂಡವರು ಸೋತವರಲ್ಲ ನಂಬುವುದು
ಸೋಲವಿದು ನಾಳಿನಲಿ ಪ್ರಳಯದ
ಕಾಲ ಕೌರವ ಕುಲಕೆ ದಿಟವಿದು
ಸೋಲವುಂಟೇ ವೀರ ನಾರಾಯಣನ ಭಕ್ತರಿಗೆ ೬೭

## ಏಳನೆಯ ಸಂಧಿ

ಸೂ. ಅರಿ ಮಹೇಶ ಕುಠಾರ ವೀರನು
ವರ ಕಿರೀಟಕುಮಾರ ಧೀರನು
ಸುರರ ನಗರಿಗೆ ನಡೆಯೆ ಹಲುಬಿದನಂದು ಯಮಸೂನು

ತೆಗೆದುದರಿ ಪರಿವಾರ ಕಹಳಾ
ದಿಗಳ ಸನ್ನೆಯಲುಭಯ ಬಲ ಕಾ
ಳೆಗವನುಳಿದುದು ಬಂದು ಹೊಕ್ಕರು ತಮ್ಮ ಪಾಳೆಯವ
ಮಗನು ರಣದಲಿ ಮಡಿದ ಹದ ಬೀ
ಡುಗಳೊಳಾದುದು ವಾರ್ತೆ ದೂತರು
ದುಗುಡ ಭರದಲಿ ಬಂದು ಹೊಕ್ಕರು ರಾಜ ಮಂದಿರವ ೧

ಅವನಿಪತಿ ಖಂಡೆಯುವ ನಕುಲನ
ಪವನಸುತನ ಕಠಾರಿಯನು ನೃಪ
ನಿವಹದಾಯುಧ ತತಿಯನೊಯ್ಯನೆ ತೆಗೆದು ಬೈಚಿಟ್ಟು
ಬವರದಲಿ ಸುತನಳಿದನೋ ಕೌ
ರವರ ಕೈವಶವಾದನೋ ಸಂ
ಭವಿಪ ಹದನೇನೆಂಬ ನೃಪತಿಯ ಕಂಡರೈತಂದು ೨

ಅವನಿಪಾಲ ಕುಮಾರ ಕಂಠೀ
ರವನು ರಣದಲಿ ಬೀದಿವರಿದು
ತ್ರವದಲಹಿತರನಿರಿದು ಕೌರವ ರಾಯ ನಂದನರ
ಜವನ ನಗರಿಗೆ ಕಳುಹಿ ತಾ ವಾ
ಸವನ ಸಿಂಹಾಸನವನಡರುವ
ತವಕದಲಿ ಜಾರಿದನೆನಲು ಶಿವ ಎನುತ ಬಸವಳಿದ ೩

ಕುಲಿಶ ಹತಿಯಲಿ ಕುಲ ಶಿಲೋಚ್ಚಯ
ವಿಳೆಗೆ ಕೆಡೆವಂದದಲಿ ನಿಜಸುತ
ನಳಿದ ವಾರ್ತಾ ವಚನದುಪಟಳಕವನಿಪಾಲಕನು
ಮಲಗಿದನು ಮೈಮರೆದು ಮಹಿ ಮಂ
ಡಳಿಕರೊಳು ಗುಜುಗುಜಿನೊಳಿರೆ ಕಳ
ವಳಿಕೆ ಮೊಳೆತುದು ಕಟಕದಲಿ ದುಮ್ಮಾನಮಯವಾಯ್ತು ೪

ಅರಮನೆಯ ಗಜಬಜದ ಹದನರಿ
ದರಸನಪಗತನೆಂದು ಪಾಳಯ
ದಿರುಳು ನಡುಗಿತು ತೊಡಗಿದವು ಕೈಸೂರೆ ಕೆಲಕಡೆಯ
ನೆರವಿ ಮಸಗಿತು ಕೆತ್ತುವಂಗಡಿ
ದುರುಳರಬ್ಬರಿಸಿದರು ಮುಸುಕಿನ
ಸುರಗಿ ಕೆತ್ತವು ಮಂದಿ ದಳವುಳವಾಯ್ತು ನಿಮಿಷದಲಿ ೫

ಹೊಳಲು ತಲೆಕೆಳಕಾಯ್ತು ಹುಯ್ಯಲು
ತಳಿತುದೊಳತೋಟಿಯಲಿ ಕೆತ್ತವು
ನಿಳಯ ನಿಳಯ ಕವಾಟವುದ್ರೇಕಿಗಳ ಮಯವಾಯ್ತು
ಎಲೆಲೆ ಕೆಟ್ಟುದು ಕಟಕವೆಂದು
ಮ್ಮಳಿಸಿದರು ಸಚಿವರು ಮಹೀಪತಿ
ಯುಳಿವನರಿಯಲು ನಾಸಿಕದಲಾರೈದರುಸುರುಗಳ ೬

ಉರಿಯ ಚೂಣಿಯಲುಸುರು ಮೂಗಿನ
ರಲುರವಣಿಸುತಿದೆ ಧರಣಿಪತಿ ಸು
ಸ್ಥಿರನು ಹೊಯ್ ಹೊಯ್ ಹೊಳಲ ಬೆವರಿಸಿ ಬಣಗುಗಳ
ಹರಿಯೆನಲು ಹೊರವಂಟು ಹೊಯ್ದರು [ಸುಲಿವ
ತುರಗ ಗಜಘಟೆ ಬೀದಿವರಿದವು
ನೆರವಿದೊಳಸಿನ ಮನ್ನೆಯರ ಸೆಣಸಿದರು ಶೂಲದಲಿ ೭

ಹೊಳಲ ಗಜಬಜವಡಗಿತರಮನೆ
ಯೊಳಗೆ ಪಸರಿಸಿತತುಳ ಶೋಕದ
ಜಲಧಿ ಭೂಪಾಲಕನ ಸೈರಣೆಗಾಯ್ತು ಮಹನವಮಿ
ಒಳಗುರಿವ ಹಸಿಮರದ ತುದಿಯಲಿ
ಜಲವೊಗುವವೊಲು ಹೃದಯ ಶಿಖಿಯುರೆ
ತಳಿತು ಲೋಚನವಾರಿ ತುಳುಕಿತು ಪವನಜಾದಿಗಳ ೮

ಮರೆವುತೆಚ್ಚರುತವನಿಪತಿ ಕರೆ
ತರುಣನಾವೆಡೆ ರಾಯಗಜ ಕೇ
ಸರಿಯುದಾವೆಡೆ ಕಂದ ಬಾಯೆನುತಪ್ಪಿದನು ಬಯಲ
ಹೊರಳಿದನು ಹುಡಿಯೊಳಗೆ ಸಲೆ ಕಾ
ತರಿಸಿದನು ಮೋಹಾಂಧಕಾರಕೆ
ಕರಣವನು ಕೈಸೂರೆಗೊಟ್ಟನು ನಿಜದೊಳೆಚ್ಚರದೆ ೯

ಬಂದು ಫಲುಗುಣನೆನ್ನ ಮೋಹದ
ಕಂದನಾವೆಡೆಯೆಂದಡಾನೇ
ನೆಂದು ಮಾರುತ್ತರವ ಕೊಡುವೆನು ವೈರಿ ನಾಯಕರು
ಕೊಂದರೆಂಬೆನೊ ಮೇಣು ನಾನೇ
ಕೊಂದೆನೆಂಬೆನೊ ಶಿವ ಮಹಾ ದೇ
ವೆಂದು ಪುತ್ರಸ್ನೇಹ ಸೌರಂಭದಲಿ ಹಲುಬಿದನು ೧೦

ಅರಮನೆಯ ಗಜಬಜವ ಕೇಳಿದು
ದೊರೆಯೊಳಾವವನಳಿದನಕಟಂ
ದರಸಿಯರು ಬೆಸಗೊಳಲು ದ್ರೌಪದಿಗರುಹಿದರು ಹದನ
ಉರಿವ ಪಾವರವೆಳೆಯ ಬಾಳೆಯ
ಬೆರಸುವಂತಿರೆ ರಾಯ ಕುವರನ
ಮರಣ ವಾರ್ತೆಯನಾ ಸುಭದ್ರಾ ದೇವಿ ಕೇಳಿದಳು ೧೧

ತೆಳುವಸುರ ಬಿರುವೊಯ್ಲು ಮುರಚಿದ
ಬಳಲ ಮುಡಿಯುರಳುಗಳ ಮುತ್ತಿಗೆ
ಯಳಿ ರವದ ಭಾರಣೆಯು ಹಾಹಾರವದ ಕಾಯದಲಿ
ಲಲನೆ ಬರೆ ಚೆಲುವಾಯ್ತು ಧರ್ಮಜ
ನಳಲು ಮಿಗೆ ಕೊಂಡಿರಲು ನಾಟ್ಯದ
ಕಳನ ಗೆಲದಿರಳೆನಲು ಬಂದಳು ದ್ರೌಪದಾದೇವಿ ೧೨

ಅಳಲ ಶಿಖಿಯಲಿ ಬಾಡಿದಾನನ
ಜಲರುಹದ ಕಡುವೇದನೆಯ ಕಳ
ಕಳದ ಹಾಹಾ ರವದ ರೌದ್ರೆ ಸುಭದ್ರೆ ನಡೆತಂದು
ನೆಲಕೆ ಧೊಪ್ಪನೆ ಕೆಡೆದು ಸಭೆಯಲಿ
ಹಲುಬಿದಳು ಕೊಳುಗುಳಕೆ ಕಂದನ
ಕಳುಹಿದವರಿಗೆ ಸಂದುದೇ ಪರಿಣಾಮವೆಂದೆನುತ ೧೩

ಎಲೆ ಯುಧಿಷ್ಠಿರದೇವ ಸಾಲದೆ
ಕೆಲನ ಮೆಚ್ಚಿಸುವಳಲು ಲೋಚನ
ಜಲವ ತೊಡೆಯೈ ಭೀಮ ಬಲ್ಲೆನು ನಿಮ್ಮ ನೆನಹುಗಳ
ಅಳಲದಿರಿ ಸಹದೇವ ನಕುಳರು
ನಿಲಿಸಿರೈ ನಿಮ್ಮಿಷ್ಟ ಸಿದ್ಧಿಯ
ಬೆಳಸು ಫಲವಾಯ್ತೇಕೆ ನೋವಿನ್ನೆಂದಳಿಂದುಮುಖಿ ೧೪

ಮಗನು ಪಂಚದ್ರೌಪದೇಯರ
ಬಗೆಯನೆನ್ನವನಿರಲು ರಾಜ್ಯವ
ಹೊಗಿಸಲನುವಿಲ್ಲೆಂದು ಕಂದನ ರಣಕೆ ನೂಕಿದಿರಿ
ಬಗೆಯೊಲವು ಫಲವಾಯ್ತಲಾ ಕಾ
ಳಗವ ಗೆಲಿದೈವರು ಕುಮಾರರು
ಹೊಗಿಸಿರೈ ಗಜಪುರವನೆಂದು ಸುಭದ್ರೆ ಹಲುಬಿದಳು ೧೫

ಅಕಟ ಮಗನೇ ಬಹಳ ಪಾಪಾ
ತ್ಮಕರ ಬಸುರಲಿ ಬಹುದರಿಂದೀ
ನಕುಳನುದರದಲಾಗಲೀ ಧರ್ಮಜನ ಜಠರದಲಿ
ಸುಕೃತಿ ನೀನುದಯಿಸಲು ಬಹು ಕಂ
ಟಕರು ಬಳಿಕಾರುಂಟು ಕಡು ಪಾ
ತಕಿಯಲಾ ನಿಮ್ಮಯ್ಯನೆಂದಳು ಫಲುಗುಣನ ರಾಣಿ ೧೬

ಧುರವ ಹೊಗತಕ್ಕವನೆ ಚಿಕ್ಕವ
ನಿರಿಯಲಾಪನೆ ಬಹನೆ ಮರಳಿದು
ಧರೆಯ ವೈಭವಕಳುಪಿ ಕಳುಹಿದಿರೆನ್ನ ಕಂದನನು
ವರ ಯುಧಿಷ್ಠಿರ ಜನಪ ಲೋಕದ
ಕರುಣಿಯೆಂಬರು ಕುನ್ನಿಗಳು ಮರೆ
ಗೊರಳುಗೊಯ್ಕನನರಿಯರೆಂದಳು ಫಲುಗುಣನ ರಾಣಿ ೧೭

ಶೋಕವಿಮ್ಮಡಿಸಿತ್ತು ಚಿತ್ತ
ವ್ಯಾಕುಳತೆಯಾ ಸತಿಯ ನುಡಿಗಳ
ನೇಕ ಸಾಣೆಯ ಸರಳು ಮುರಿದವು ನೃಪನ ಹೃದಯದಲಿ
ಆ ಕುಮಾರ ವಿಯೋಗವಹ್ನಿಗೆ
ಯೀಕೆಯಳಲು ಸಮೀರನಾಯ್ತು ದಿ
ವಸಕರ ಸಮ್ಮೇಳವೇ ಪುರುಷಾರ್ಥ ತನಗೆಂದ ೧೮

ಎಲೆ ವೃಕೋದರ ನಕುಳ ಸಾತ್ಯಕಿ
ನಿಲಿಸಿರೈ ತಂಗಿಯನು ತನ್ನಯ
ಕೊಲೆಗೆ ಮಗನಳಿವೊಂದು ಸಾಲದೆ ತನ್ನ ನುಡಿಯೇಕೆ
ನಳಿನನಾಭನ ಕರುಣದೊರತೆಯು
ಕಳಿದರಾರೇಗುವರು ಶಿವ ಶಿವ
ನೆಲನೊಳೆನ್ನವೊಲಾರು ಪಾಪಿಗಳೆಂದು ಬಿಸುಸುಯ್ದ ೧೯

ಧರಣಿಪನ ಶೋಕಾತಿಶಯವನು
ವರ ಸಮಾಧಿಯೊಳರಿದು ಮುನಿಪತಿ
ಕರುಣದಲಿ ಕಡುನೊಂದು ಸಕಲ ಜಗಕ್ಕನುಗ್ರಹವ
ಕರುಣಿಸುವವೊಲು ಕರುಣಿತನವನು
ಮೆರೆಯಲೋಸುಗವಿರದೆ ಗಗನೇ
ಚರದ ಗತಿಯಲಿ ಬಂದನೈ ದ್ವೈಪಾಯನವ್ರತಿಪ ೨೦

ಬಂದು ವೇದವ್ಯಾಸಮುನಿ ನೃಪ
ಮಂದಿರವ ಹೊಗಲೆದ್ದು ಪದದಲಿ
ಸಂದಣಿಸಿ ಚಾಚಿದನು ಮಕುಟವನವನಿಪಾಲಕನು
ನೊಂದವರು ಸತ್ಸಂಗತಿಯಲಾ
ನಂದವಡೆವುದೆನುತ್ತ ಮುನಿಪತಿ
ಕಂಡು ಮೋರೆಯ ಮಹಿಪತಿಯ ನೆಗಹಿದನು ಕರುಣದಲಿ ೨೧

ಎಲೆ ಯುಧಿಷ್ಠಿರ ನೃಪ ಕುಮಾರ
ಪ್ರಳಯದಾಪತ್ತಾಯ್ತೆ ಭೀಮನ
ನಲವಿಗೂಣೆಯವಾಯ್ತೆ ದುಸ್ಥಿತಿಯಾಯ್ತೆ ನಕುಲಂಗೆ
ಬಲುದುಗುಡ ಸಹದೇವನಲಿ ಸಂ
ಗಳಿಸಿತೇ ದ್ರೌಪದಿ ಸುಭದ್ರಾ
ಲಲನೆಯರಿಗನುಚಿತವು ಘಟಿಸಿತೆ ಎಂದನಾ ಮುನಿಪ ೨೨

ಅಡಸಿದಾಪತ್ತಿನಲಿ ಧೈರ್ಯವ
ಹಿಡಿವುದೇ ಸುಪ್ರೌಢಿ ಸಾಕಿ
ನ್ನೊಡಲು ಕರಗಿದೊಡೇಳಲರಿವನೆ ಹಿಂಗಿದಭಿಮನ್ಯು
ಒಡನೆ ಬಂದವು ಬಿಡವು ಭವದಲಿ
ತೊಡಕಿ ಸುಕೃತವು ದುಷ್ಕೃತಂಗಳು
ಕಡೆಗೆ ತಿಳಿವಿನೊಳಲ್ಲದಿಹಪರ ಸೌಖ್ಯವಿಲ್ಲೆಂದ ೨೩

ಎಲ್ಲರೋಪಾದಿಯ ಕುಮಾರಕ
ನಲ್ಲ ಕಾಣಿರೆ ವೀರ ವಿತರಣ
ದಲ್ಲಿ ಛಲದಲಿ ಶೀಲದಲಿ ನಾನಾ ಗುಣಂಗಳಲಿ
ಇಲ್ಲ ಸುಕುಮಾರಂಗೆ ಸರಿ ಮಗ
ನಿಲ್ಲದೇಗುವೆನಕಟ ವಚನದ
ಸೆಲ್ಲಹದಲಿರಿಯದಿರೆನುತ ಹಲುಬಿದನು ಭೂಪಾಲ ೨೪

ಜನನವೇ ಲಯಬೀಜ ಮರಣವೆ
ಜನನ ಬೀಜವು ತೋರಿ ಕೆಡುವೀ
ತನುವಿನಭಿರಂಜನೆಯ ಸೌಖ್ಯಕೆ ಮಾರದಿರು ಮನವ
ಘನ ಪರಂಜ್ಯೋತಿ ಸ್ವರೂಪದ
ನೆನಹ ಮರೆದೀ ಮೋಹಮಯ ಬಂ
ಧನದೊಳಗೆ ಮರುಳಹರೆ ಮಗನೇ ನಿನ್ನನರಿಯೆಂದ ೨೫

ಹರನೊಡನೆ ಹೊಯ್ದಾಡಿದಗ್ಗದ
ನರನು ತಂದೆ ಸಮಸ್ತ ಭುವನೇ
ಶ್ವರನಲಾ ಮುರವೈರಿ ಮಾವನು ನಿನ್ನ ತನಯನಿಗೆ
ಧುರದೊಳೀ ಹದನಾಯ್ತು ಮಿಕ್ಕಿನ
ನೊರಜುಗಳ ಪಾಡೇನು ಕಾಲನು
ಹರಿ ಹರ ಬ್ರಹ್ಮಾದಿಗಳ ಕೈಕೊಂಬನಲ್ಲೆಂದ ೨೬

ದೇಹ ತಾನಭಿಮನ್ಯುವೋ ದಿಟ
ದೇಹಿ ತಾನಭಿಮನ್ಯುವೋ ಜಡ
ದೇಹ ತಾನಭಿಮನ್ಯುವಲ್ಲದು ಕೆಟ್ಟರೇನಾಯ್ತು
ದೇಹವೆಂಬುದನಿತ್ಯ ನಿನ್ನವ
ರಾಹವದೊಳಳಿದವರ ಬಿಡು ಸಂ
ದೇಹವನಹಮ್ಮಮತೆಗಳ ಬೀಳ್ಕೊಟ್ಟು ನೋಡೆಂದ ೨೭

ಎನ್ನದಾನೆಂಬೆರಡರಿಂದವೆ
ಬನ್ನಬಡುವನು ಜೀವನಲ್ಲದೆ
ಮುನ್ನವಿನ್ನೆಂದೆಂದಿಗಾತ್ಮಂಗಿಲ್ಲ ಭವಬಂಧ
ನಿನ್ನ ನೀನರಿ ಸಾಕು ಮಾಯೆಯ
ಗನ್ನಗತಕವ ಗೆಲುವೆ ಕನಸಿನ
ಪೊನ್ನ ಕಾಣದೆ ದುಃಖಿಪಡುವರೆ ಭೂಪ ಕೇಳೆಂದ ೨೮

ಉರಗ ನರ ದಿವಿಜಾದಿಗಳಿಗಿದು
ಪರಿಹರಿಸಲಳವಲ್ಲ ದೈವದ
ಪರುಠವಣೆ ಮುನ್ನಾದಿಯಲಿ ನಿರ್ಮಿಸಿತು ಮೃತ್ಯುವನು
ಅರಸನಾಗಲಿ ಧನಿಕನಾಗಲಿ
ಹಿರಿಯನಾಗಲಿ ಬಡವನಾಗಲಿ
ಮರಣ ಜನಿಸಿದ ಬಳಿಕ ತಪ್ಪದು ಮಗನೆ ಕೇಳೆಂದ ೨೯

ಇರುಳ ಹಗಲಿನ ಬೀಜ ನೆರವಿಯೆ
ಹರೆವುದಕೆ ಮೊದಲುನ್ನತೋನ್ನತ
ಮರುಳೆ ಕೇಡಿನ ಕಾಳಕೂಟವೆ ವೀರನಿರ್ವಹಣ
ಸಿರಿ ದರಿದ್ರತೆಗಡಹು ಜನನವೆ
ಮರಣ ಫಲವಿದನರಿದು ಬುಧರಾ
ಚರಿಸುವುದು ಕೇಳೆಂದು ವೇದವ್ಯಾಸ ಮುನಿ ನುಡಿದ ೩೦

ತಿಳಿದು ಧರ್ಮಜ ಕೇಳು ಕೃತಯುಗ
ದೊಳಗೆ ಕಂಪನನೆಂಬ ಭೂಪನು
ಕುಲತಿಲಕ ಹರಿಯೆಂಬ ಮಗನಾತಂಗೆ ಜನಿಸಿದನು
ಬಳಿಕ ಯೌವ್ವನನಾಗಿ ಪರ ಮಂ
ಡಲಕೆ ನಡೆದನು ವೈರಿ ರಾಯರ
ವಳಿತವನು ತಾನೊತ್ತಿಕೊಂಡನು ರಿಪುನ ಪರ ಕೆಡಹಿ ೩೧

ಮಗನೆ ಕಂಪನನೆಂಬ ಭೂಪನ
ಮಗನು ಮತ್ತೊಮ್ಮಿನಲಿ ಬಲುಗಾ
ಳೆಗವ ಕಾದಿ ವಿರೋಧಿ ಸೇನೆಯೊಳಾನೆವರಿವರಿದು
ಬಗೆಯೆ ನಿನ್ನಭಿಮನ್ಯುವಿನವೋ
ಲಗಣಿತರ ನಸಿಯರೆದು ಸುರಪನ
ನಗರಿಗೈದಿದನೆಂದು ಕಂಪನು ಕೇಳಿ ಬಸವಳಿದ ೩೨

ನಿನಗೆ ಬಂದಾಪತ್ತಿನಂತಿರ
ಲನಿತು ಬಂದುದು ಕಂಪನೆಂಬಾ
ತನನು ಸಂತೈಸಲ್ಕೆ ನಾರದನವನಿಗೈತಂದು
ಜನಪತಿಯ ಹಿಡಿದೆತ್ತಿದನು ಕಾ
ಲನನು ಮೀರುವರಾರು ಪೌರಾ
ತನ ಕೃತ ಧ್ರುವ ಮೃತ್ಯುವನು ಗೆಲುವಾತನಿಲ್ಲೆಂದ ೩೩

ಮೃತ್ಯುವಾರೆಂದವನಿಪತಿ ಮುನಿ
ಪೋತ್ತಮನ ಬೆಸಗೊಳಲು ಬ್ರಹ್ಮನ
ಕಿತ್ತಡದ ಕೋಪದಲಿ ಜನಿಸಿದ ರುದ್ರನಿಂ ಬಳಿಕ
ಮೃತ್ಯುವೆಂಬವಳಾದಳಾ ಸತಿ
ಯತ್ತ ಕಂಬನಿ ರುಜೆಗಳಾದವು
ತೆತ್ತಿಗರು ಷಡುವರ್ಗ ಕಾಮ ಕ್ರೋಧ ಮೊದಲಾಗಿ ೩೪

ಜನದ ಕೊಲೆಗೆಲಸದ ನಿರೂಪಕೆ
ಮನವ ತಂದಳು ಮೃತ್ಯು ನಿಜ ಸಾ
ಧನ ಸಹಿತ ಕೈಕೊಂಡ ಕೆಲಸವನಾಗುಮಾಡುವಳು
ಜನಪ ದೃಷ್ಟನ್ನಷ್ಟವೆಂಬುದ
ನನುಕರಿಸಿ ಮೂರ್ತಿ ತ್ರಯಂಗಳ
ತನಗೆ ನೆರೆ ವಶಮಾಡಿಕೊಂಡಿಹಳೆಂದು ಮುನಿ ನುಡಿದ ೩೫

ಆ ಮಹಾ ಮೃತ್ಯುವನು ಹುಟ್ಟಿಸಿ
ದಾ ಮಹಾದೇವಾದಿ ದೇವರು
ಕಾಮಿನಿಯ ಕಳುಹಲ್ಕೆ ಬಾರದೆನುತ್ತ ಬೋಧಿಸಲು
ಭೂಮಿಪತಿ ನಿಜಸುತನ ಮೃತಿಯುಂ
ದ್ದಾಮ ತಾಪವ ಕಳೆಯ ಬೇಕೆಂ
ದಾ ಮುನೀಶ್ವರ ಸಂತವಿಟ್ಟನು ಕಂಪಭೂಪತಿಯ ೩೬

ಆದರಾ ಮೃತ್ಯುವಿನ ಕೈವಶ
ವಾದವರನೆನಗರುಹ ಬೇಹುದು
ಮೇದಿನೀಶರೊಳೆಂದು ಬಿನ್ನಹ ಮಾಡಿದನು ನೃಪತಿ
ಆ ದಯಾಳುಗಳರಸನಾ ಶೋ
ಕೋದಧಿಗೆ ವಡಬಾಗ್ನಿ ಸಮನೆನಿ
ಪಾದಿಯಲಿ ಷೋಡಶ ಮಹೀಶರ ಕಥೆಯ ವಿರಚಿಸಿದ ೩೭

ಭರತ ಪೃಥು ಪೌರವ ಭಗೀರಥ
ವರ ಯಯಾತಿ ಮರುತ್ತ ನಹುಷೇ
ಶ್ವರ ಪುರೂರವ ರಂತಿದೇವ ಗಯಾಂಬರೀಷಕರು
ಪರಶುರಾಮ ದಿಲೀಪ ಮಾಂಧಾ
ತರು ಹರಿಶ್ಚಂದ್ರಾದಿ ಪೃಥ್ವೀ
ಶ್ವರರನಂತರು ಮೃತ್ಯುವಶವರ್ತಿಗಳು ಕೇಳೆಂದ ೩೮

ಎಂದು ಷೋಡಶ ರಾಯರಾ ಕಥೆ
ಯಿಂದ ನೃಪತಿಯ ಸಂತವಿಟ್ಟನು
ಬಂದು ಧರ್ಮಜನೆರಗಿದನು ಮುನಿರಾಯನಂಘ್ರಿಯಲಿ
ಅಂದು ವೇದವ್ಯಾಸ ಪಾಳಯ
ದಿಂದ ಕಳುಹಿಸಿಕೊಂಡನಿತ್ತ ಮಂ
ಕುಂದನಭಿಮನ್ಯುವಿನ ಮರಣವನರಿದ ಮನದೊಳಗೆ ೩೯

## ಎಂಟನೆಯ ಸಂಧಿ

ಸೂ. ಹಾ ಮಗನೆ ರಣರಂಗ ಧೀರನೆ
ಹಾ ಮದೀಯ ಕುಮಾರ ವೀರನೆ
ಬಾ ಮಗನೆ ಮೊಗದೋರೆನುತ ಹಲುಬಿದನು ಕಲಿ ಪಾರ್ಥ

ಕೇಳು ಜನಮೇಜಯ ಧರಿತ್ರೀ
ಪಾಲ ಸಮಸಪ್ತಕರ ಬಲ ನಿಜ
ಪಾಳಯಕೆ ತಿರುಗಿದುದು ತೀರಿತು ತರಣಿಯಾಟೋಪ
ಕಾಳಿಗವ ತೆಗೆಸಿದರು ಕೌರವ
ರೇಳು ಫಲುಗುಣ ಎನುತ ಲಕ್ಷ್ಮೀ
ಲೋಲ ವಾಘೆಯ ಮರಳಿ ಕೊಂಡನು ಹಯವ ಬೋಳೈಸಿ ೧

ಅಳಿಯನಳಿವನು ಹೇಳಬಾರದು
ತಿಳಿಯಲಿದನಿನ್ನೆನುತ ಚಿಂತಿಸಿ
ನಳಿನಲೋಚನ ಬರುತ ಕಂಡನು ವರ ಸರೋವರವ
ಇಳಿದು ರಥವನು ರಣ ಪರಿಶ್ರಮ
ಗಳೆವೆನೆನುತವೆ ಪಾರ್ಥ ಸಹಿತಾ
ಕೊಳನ ಹೊಕ್ಕನು ಜಗದುದರ ಲೀಲಾವತಾರಕನು ೨

ಧುರದ ಕೋಲಾಹಳದ ಧಗೆ ಪಾ
ವರಿಸಿ ಬಳಲಿ ಧನಂಜಯನು ವರ
ಸರಸಿಯಲಿ ಮುಳುಗಿರಲು ನಸು ನಗುತೊಂದುಪಾಯದಲಿ
ನರನೊಳಿನ್ನರುಹುವೆನು ಘನ ಸಂ
ಗರದೊಳಗಿಡದ ರಾಜ ಕುವರನ
ಮರಣವಾರ್ತೆಯನೆಂದು ಮನದಲಿ ನೆನೆದನಸುರಾರಿ ೩

ಎಲೆ ಸುರೇಂದ್ರ ಕುಮಾರ ಕೇಳ್ ನಿ
ನ್ನೊಲುಮೆಯಣುಗನು ರಣದೊಳಗೆ ರಿಪು
ಬಲವ ಕೋಲಾಹಳಿಸಿ ಕೌರವ ಸುತರು ನೂರ್ವರನು
ತಲೆಯನರಿದನು ಬಳಿಕ ತಾ ಸುರ
ಲಲನೆಯರ ಚೆಲುವಿಂಗೆ ಸೋತನು
ಕಳಿದನೆನುತವೆ ನುಡಿದು ಹರಿ ಮುಳುಗಿದನು ಜಲದೊಳಗೆ ೪

ಆ ಸುತನ ಶೋಕದ ಮರುಕವಾ
ಕಾಶ ವಚನದೊಳಾಯ್ತು ಶಿವ ಶಿವ
ವಾಸುದೇವ ಎನುತ್ತ ಫಲುಗುಣ ಜಲವ ಬಗಿದೆದ್ದು
ಘಾಸಿಯಾದನು ಮಗನಕಟ ಸಂ
ತೋಷವೆಲ್ಲಿಯದೆನುತ ಮಾಯಾ
ವೇಷಿಯನು ಕರೆದನು ವಿಲೋಚನ ವಾರಿ ಪೂರದಲಿ ೫

ಎನಲು ಧಿಮ್ಮನೆ ಕೊಳದೊಳಗೆ ನಿಂ
ದನು ಮುಕುಂದನು ಸುರಪ ಸುತನಾ
ನನವ ನೋಡುತದೇನದೇನೆನೆ ಬಿಕ್ಕಿ ಬಿರಿದಳುತ
ತನಯನಳಿಯದೆ ಮಾಣ ಗಗನ
ಧ್ವನಿಯೊಳಾದುದು ವಾರ್ತೆ ಚಿತ್ತಕೆ
ಮೊನೆಯ ಸರಳೆನೆ ಮರುಳೆ ಬಾ ಎಂದೇರಿದನು ರಥವ ೬

ಹರಿ ಕಿರೀಟಿಗಳಿತ್ತ ಶಿಬಿರಕೆ
ತಿರುಗಿದರು ಸುತಶೋಕ ಸೂಚನೆ
ನರನ ಚಿತ್ತದೊಳಾಯ್ತು ವೆಂಠಣಿಸಿತ್ತು ಪರಿತಾಪ
ಕೊರಳ ಸೆರೆ ಹಿಗ್ಗಿದವು ಕಂಬನಿ
ದುರುಗಿದವು ಕಡುಶೋಕ ಜಠರದ
ಉರವಣಿಸಲಾಕಸ್ಮಿಕದ ಭಯವಾಯ್ತು ಪಾರ್ಥಂಗೆ ೭

ತರಣಿ ತೊಲಗಿದ ಗಗನವೋ ಪಂ
ಕರುಹವಿಲ್ಲದ ಸರಸಿಯೋ ಕೇ
ಸರಿಯ ಲೀಲಾಳಾಪವಿಲ್ಲದ ಬಹಳ ಕಾನನವೊ
ಪರಮತತ್ತ್ವನಿಧಾನವರಿಯದ
ನರನ ವಿದ್ಯಾರಚನೆಯೋ ನಿ
ರ್ಭರ ಭಯಂಕರವಾಯ್ತು ಪಾಳಯವೆನುತ ಬರುತಿರ್ದ ೮

ದೆಸೆದೆಸೆಯ ನೋಡಿದರೆ ಕತ್ತಲೆ
ಮುಸಗುವುದು ಪರಿತಾಪ ತನುವನು
ಮುಸುಕುವುದು ಮನ ಮರುಗುವುದು ಕಳವಳಿಸುವುದು ಧೈರ್ಯ
ಮಸೆದ ಸರಳೊಡಲೊಳಗೆ ಮುರಿದವೊ
ಉಸುರಿಗುಬ್ಬಸವಾಯ್ತು ಬಲ್ಲಡೆ
ಬೆಸಸು ಮುರಹರ ಹಿರಿದು ಬಳಲಿಸಬೇಡ ಹೇಳೆಂದ ೯

ತಂದೆ ಧೃತಿಗೆಡಬೇಡ ನಡೆ ನಿಜ
ನಂದನನನಾರೈವೆವೆನುತ್ತೈ
ತಂದು ಕೋಟೆಯ ಕಳೆದು ಬಂದರು ರಾಜ ಬೀದಿಯಲಿ
ಕಂದನಿರವನು ಕಾಣಲಾಪೆನೊ
ಕೊಂದರೆಂಬುದ ಕೇಳುವೆನೊ ತನ
ಗಿಂದು ಗತಿಯೇನೆನುತ ಬಂದನು ರಾಜ ಮಂದಿರಕೆ ೧೦

ಸುರನಗರಿ ನಡುಗಿತ್ತು ಸುರಪತಿ
ಹರನ ನೆನೆದನು ಯಮುನ ಪಟ್ಟಣ
ಸರಕುದೆಗೆಯಿತು ಮತ್ತು ಮರೆಹೊಕ್ಕಳು ಮಹೇಶ್ವರನ
ಬಿರುದರಂಜಿತು ದೇಶದೇಶದ
ಧರಣಿಪತಿಗಳಪಾಯವಾಯ್ತೆನೆ
ನರನ ಕಡು ದುಮ್ಮಾನ ನೆರೆ ಹೆದರಿಸಿತು ಮೂಜಗವ ೧೧

ವೀರರಿದಿರುಗ್ಗಡಣೆಗಳ ಕೈ
ವಾರಿಗಳ ಮಾಣಿಸುತಲೈತಹ
ನಾರಿಯರ ರತುನಾರತಿಯ ತಳಿಗೆಗಳ ನೂಕಿಸುತ
ಸಾರಿ ಕೈಗೊಡುವವದಟರನು ಕ
ಣ್ಣೋರೆಯಲಿ ಕೋಪಿಸುತ ತನ್ನಯ
ತೇರನಿಳಿದನು ಪಾರ್ಥನಸುರಾರಿಯ ನಿರೂಪದಲಿ ೧೨

ಹರಿ ರಥವನಿಳಿದಂತೆ ಪಾರ್ಥನ
ಭರದ ಕೋಪವ ಕಂಡು ನಿಜ ಮಂ
ದಿರಕೆ ಮೆಲ್ಲನೆ ಜುಣುಗಿದನು ಯಾದವರ ಗಡಣದಲಿ
ವರ ಧನುವ ಶಸ್ತ್ರಾಸ್ತ್ರ ಕವಚವ
ನಿರಿಸಿ ಕೈಗೊಡುವವರ ಕನಲು
ತ್ತರಮನೆಯ ಹೊಕ್ಕನು ಯುಧಿಷ್ಠಿರ ರಾಯನೋಲಗವ ೧೩

ಧರಣಿಪನ ನಿರಿಗೆಯಲಿ ಕಂದನ
ಮರಣವನು ನಿಶ್ಚಯಿಸಿ ಪ್ರಳಯದ
ಹರನ ಕೋಪವ ಕೇಣಿಗೊಂಡನು ತನ್ನ ಚಿತ್ತದಲಿ
ಸುರಿವ ನಯನಾಂಬುಗಳ ಜಲನಿಧಿ
ಗುರವಣಿಸಿದನೊ ವಡಬನೆನೆ ಮುರ
ಹರನ ಮೈದುನನೊಯ್ಯನೈದಿದನವನಿಪಾಲಕನ ೧೪

ಉಕ್ಕಿ ಶೋಕದ ಕಡಲು ಪಾರ್ಥನ
ಮುಕ್ಕುಳಿಸಿತಾ ಶೋಕಶರಧಿಯ
ಹೊಕ್ಕು ಬೆಳೆದುದು ಕೋಪಶಿಖಿವಡಬಾಗ್ನಿಯಂದದಲಿ
ಮಕ್ಕಳೊಳು ನೋಡಿದನು ಕಂದನ
ನಿಕ್ಕಿದಿರಲಾ ಲೇಸು ಮಾಡಿದಿ
ರೆಕ್ಕತುಳದಾಳುಗಳೆನುತ ಭೂಪತಿಗೆ ಪೊಡವಂಟ ೧೫

ತಲೆಯ ಮುಸುಕಿನ ಕಂಗಳೊರತೆಯ
ಜಲದ ದುಗುಡದ ಮುಖದ ಜನಪತಿ
ಫಲುಗುಣನನೆತ್ತಿದನು ತಲೆಗುತ್ತಿದನು ಭೀತಿಯಲಿ
ಮಲಗಿದನು ವರ ಭೀಮ ಸಭೆ ತ
ಲ್ಲಳಿಸಿತರ್ಜುನ ಬಂದನೆನೆ ಬಸ
ವಳಿದು ಬಂದು ಸುಭದ್ರೆ ಪತಿಯಂಘ್ರಿಯಲಿ ಹೊರಳಿದಳು ೧೬

ಕಂದನಾವೆಡೆ ತನ್ನ ಮೋಹದ
ಸಿಂಧುವಾವೆಡೆ ತನುಜವನ ಮಾ
ಕಂದನಾವೆಡೆ ಹೇಳೆನುತ ಫಲುಗುಣನು ತೊದಳಿಸುತ
ನೊಂದು ಮನದಲಿ ಪಾರ್ಥನಾ ಸತಿ
ಯಂದವನು ಕಾಣುತ್ತ ಬೆದೆಬೆದೆ
ಬೆಂದು ಯಮರಾಜನ ಕುಮಾರನ ಮೊಗವ ನೋಡಿದನು ೧೭

ಪತಿಯುಳಿದ ಸತಿಯಿರವು ನಾಯಕ
ರತುನವಿಲ್ಲದ ಪದಕ ದೈವ
ಸ್ತುತಿಗಳಿಲ್ಲದ ಕಾವ್ಯ ರಚನಾ ಭಾವದಂದದಲಿ
ಕೃತಕವಲ್ಲಭಿಮನ್ಯುವಿಲ್ಲದೆ
ಕ್ಷಿತಿಪ ನಿನ್ನಾಸ್ಥಾನ ಮೆರೆಯದು
ಸುತನ ಸುದ್ದಿಯದೇನು ಮರುಗಿಸಬೇಡ ಹೇಳೆಂದ ೧೮

ಬರಲು ಬಹನಿದಿರಾಗಿ ತನ್ನಯ
ವರ ರಥವ ಬಂದೇರುವನು ನಿಜ
ಕರತಳದಿ ಮೈದಡವಿ ಘಾಯವ ನೋಡಿ ಮರುಗುವನು
ತರುಣನಿದಿರ್ಗೈತರಲು ತನ್ನಯ
ಘುರದ ಬಳಲಿಕೆ ಹಿಂಗುವುದು ಹೇ
ಳರಸ ಕಂದನ ಸುಳಿವ ಕಾಣೆನು ಕರಸಿ ತೋರೆಂದ ೧೯

ಮಗನ ಮಣಿರಥವೆಲ್ಲಿ ಹೂಡಿದ
ವಿಗಡ ತೇಜಿಗಳೆಲ್ಲಿ ಮಣಿವೆಳ
ಗುಗಳ ಛತ್ರವದೆಲ್ಲಿ ಚಾಮರವೆಲ್ಲಿ ಧನುವೆಲ್ಲಿ
ಹಗೆಯರಲಿ ಹತವಾದನೇ ಹಾ
ಸುಗುಣನಿಲ್ಲಿಗೆ ಬಾರನೇ ತಾ
ಮೊಗವ ಕಾಣದೆ ಹೋದನೇ ಎನಗೇನು ಗತಿಯೆಂದ ೨೦

ಕಂದ ಬಾರೋ ಎನ್ನ ಮನಕಾ
ನಂದ ಬಾರೋ ಬಾಲಕರ ಪೂ
ರ್ಣೇಂದು ಬಾರೋ ರಿಪುಕುಲಾಂತಕ ನಿಪುಣ ಮುಖದೋರೊ
ತಂದೆ ನಿನಗೆನ್ನಲ್ಲಿ ಋಣ ಸಂ
ಬಂಧ ಸವೆದುದೆ ಶಿವ ಶಿವಾ ತಾ
ಮಂದಭಾಗ್ಯಂಗಣುಗ ದಕ್ಕುವನಲ್ಲ ಎನಗೆಂದ ೨೧

ಅಸಮ ಪದ್ಮವ್ಯೂಹವನು ಭೇ
ದಿಸುವನಾವವನೆನಲು ಕೇಳಿದು
ಶಿಶುತನದಲಾಹವಕೆ ನಡೆದನು ನಾವು ಬೇಡೆನಲು
ಹೊಸ ಮದದ ವನದಂತಿ ಕದಳಿಯ
ಕುಸುರಿದರಿದಂದದಲಿ ಘನ ಪೌ
ರುಷವ ಮಾಡಿದನೆಂದನವನೀಪಾಲನನುಜಂಗೆ ೨೨

ಅರಿನೃಪಾಲರ ನೂರು ಮಕ್ಕಳ
ಶಿರವನರಿದನು ಷಡುರಥರ ಮಿಗೆ
ಪರಿಭವಿಸಿದನು ರಿಪುಬಲವನಡ ಹಾಯ್ದಾನೆವರಿವರಿದು
ಧುರಕೆ ಹೆರತೆಗೆದೆಮ್ಮ ನಾಲ್ವರ
ಸರಿದು ಹೋದಭಿಮಾನವನು ಕಾ
ಯ್ದುರವಣಿಸಿ ಮಗನೇರಿದನು ವಾಸವನ ಗದ್ದುಗೆಯ ೨೩

ಈ ನಕುಳನೀ ಭೀಮನೀ ಪಾಂ
ಚಾಲನೀ ಸಹದೇವನೀ ಭೂ
ಪಾಲನೀ ಸಾತ್ಯಕಿ ಯುಧಾಮನ್ಯೂತ್ತಮೌಂಜಸರು
ಕಾಳಿಗದೊಳಂಗೈಸಲಮ್ಮದೆ
ಬಾಲಕನ ನೂಕಿದಿರಲಾ ನಿ
ಮ್ಮಾಳುತನವನು ತೋರಿದಿರಲಾ ತನ್ನ ಮೇಲೆಂದ ೨೪

ವೀರರಿನಿಬರು ನೆರೆದು ರಿಪುಪರಿ
ವಾರವನು ಹೊಗಲಂಜಿ ಹೊರಗಣ
ಮಾರಿಹೊರಹೊರಗೆಂಬವೊಲು ನಂದನನ ನೂಕಿದಿರಿ
ಆರ ನಂಬಲುಬಹುದು ನಿಮಿಷವು
ದೂರ ತಾ ತೊಲಗಿದರೆ ತನ್ನ ಕು
ಮಾರನಿದ್ದರೆ ಹರಿವ ಕಂಡಿರಿ ಹೊಲ್ಲಹೇನೆಂದ ೨೫

ಕೆಡೆನುಡಿದು ಫಲವೇನು ಸಾಕಿ
ನ್ನೊಡೆಯರಿಲ್ಲದ ವಸ್ತುವಾದೆನು
ಕಡೆಗೆ ಧರ್ಮಜ ಹೇಳು ಕೊಂದವನಾರು ನಂದನನ
ಕಡುವಗೆಯದಾರವರ ಬಲದಲಿ
ನುಡಿ ನಿದಾನವನವನ ಜೀವಕೆ
ಹಿಡಿ ಮಹೀಪತಿ ಸಂಚಕಾರವನೆಂದನಾ ಪಾರ್ಥ ೨೬

ಹೇಳಿ ಫಲವೇನಿನ್ನು ಶೋಕ
ಜ್ವಾಲೆಗಿಂಧನವೆನ್ನ ನುಡಿ ರಿಪು
ಜಾಲವನು ನೀ ಖಂಡಿಗಳೆ ಬಹೆವಾವು ಬಳಿಸಲಿಸಿ
ಕಾಳೆಗವ ಜಯಿಸುವೆವು ನಡೆಯೆನೆ
ಬಾಲನುರವಣಿಸಿದನು ಮಸಗಿದ
ಕಾಲರುದ್ರನ ರೂಪ ತಾಳ್ದನು ವೈರಿ ಸೇನೆಯಲಿ ೨೭

ಅರಸು ಮಕ್ಕಳ ಕೊಂದನೈನೂ
ರ್ವರನು ಮೂರಕ್ಷೋಣಿ ಸೈನ್ಯವ
ನೊರಸಿದನು ಮಸೆಗಾಣಿಸಿದನಗ್ಗದ ಮಹಾರಥರ
ಧುರವ ಗೆಲಿದನು ಪಡಿತಳಿಸಿ ನಾ
ವುರವಣಿಸಲಡಹಾಯ್ದು ನಮ್ಮನು
ಹರನ ವರವುಂಟೆಂದು ತಡೆದನು ಸಿಂಧು ಭೂಪಾಲ ೨೮

ವಿರಥನಾದನು ಭೀಮ ನಕುಳನು
ತಿರುಗಿದನು ಸಹದೇವ ಕೊರಳಿನ
ಹರಣದಲಿ ಹಿಮ್ಮೆಟ್ಟಿದನು ದ್ರುಪದಾದಿ ನಾಯಕರು
ಧುರದೊಳೋಸರಿಸಿದರು ಸೈಂಧವ
ಹರನ ವರದಲಿ ನಮ್ಮ ಗೆಲಿದನು
ಮರಣವನು ಕಂದಂಗೆ ತಂದವನವನು ಕೇಳೆಂದ ೨೯

ಇನ್ನು ಹೇಳುವುದೇನೆನುತ ಕೈ
ಸನ್ನೆಯಲಿ ಮಾತಾಡಿ ಭೂಪತಿ
ಬೆನ್ನತೆತ್ತನು ಭೀಮಸೇನನ ವಿಪುಲ ವಕ್ಷದಲಿ
ತನ್ನ ಮರೆದನು ನಯನ ಧಾರಾ
ಭಿನ್ನ ಚಾರು ಕಪೋಲನಿರೆ ಸಂ
ಪನ್ನ ಶೋಕಾಗ್ನಿಯಲಿ ಬೆಂದುದು ಸಕಲ ಜನಹೃದಯ ೩೦

ಮುಚ್ಚಿದನು ಕಂಗಳನು ಧೈರ್ಯದ
ಕೆಚ್ಚಿನೆದೆ ಕರಗಿತ್ತು ಶೋಕದ
ಕಿಚ್ಚು ಕೊಂಡುದು ಮನವನಖಿಳೇಂದ್ರಿಯದ ಸುಳಿವಡಗೆ
ಎಚ್ಚರಡಗಿತು ನೆಲಕೆ ಕೈಗಳ
ಬಿಚ್ಚಿ ಬಿದ್ದನು ಪುತ್ರವಿರಹದ
ಹೆಚ್ಚುಗೆಯ ತಾಪವನು ಹೆಸರಿಡಲರಿಯೆನರ್ಜುನನ ೩೧

ಘನ ವಿಕರ್ಮದ ವಿಲಗದಲಿ ನಿಜ
ತನುಜ ಶೋಕದ ತಗಹಿನೊಳಗ
ರ್ಜುನನು ಧೈರ್ಯ ದರಿದ್ರನಾದನದೇನ ಹೇಳುವೆನು
ಮನ ಬಳಲಿ ಮೈ ಮರೆದು ತಾಪದಿ
ಕನಸ ಕಂಡನು ಝುಡಿಕೆ ಮಿಗೆ ಝೊ
ಮ್ಮನ ಸುಷುಪ್ತಿಯೊಳಿದ್ದು ನಿಮಿಷದೊಳೆದ್ದು ಕಣ್ದೆರೆದ ೩೨

ಅಳಲ ಮುಕ್ಕುಳಿಸಿದನು ಮೋಹದ
ಬೆಳವಿಗೆಯ ಗವಸಣಿಸಿದನು ಕಳ
ಕಳಕೆ ಹಿಂಗಿದುದಶ್ರು ಜಲವನು ಕಂಗಳಲಿ ಕುಡಿದು
ಪ್ರಳಯ ರುದ್ರನ ಕೋಪಶಿಖಿ ವೆ
ಗ್ಗಳಿಸಿತೆನೆ ಕಂಗಳಲಿ ಕಿಡಿಗಳು
ಸುಳುಕಿದವು ರೌದ್ರಾನುಭಾವದ ರಸದ ಭಂಗಿಯಲಿ ೩೩

ಹೇಳು ಹೇಳಿನ್ನೇನು ಮಾರಿಯ
ಮೇಳವಾಡಿದನೇ ಜಯದ್ರಥ
ನಾಳುತನವನು ಬವರದಲಿ ತನ್ನೊಡನೆ ತೋರಿದನೆ
ನಾಳೆ ಬೈಗಿಂದೊಳಗೆ ರಿಪುವನು
ಸೀಳುವೆನು ಸೀಳದಿರೆ ಧರ್ಮಜ
ಕೇಳು ಭಾಷೆಯನೆಂದು ಮಿಗೆ ಗರ್ಜಿಸಿದನಾ ಪಾರ್ಥ ೩೪

ಹರನ ದುರ್ಗದಲಿರಲಿ ಮೇಣಾ
ಹರಿಯ ಕಡಲೊಳಗಿರಲಿ ಬ್ರಹ್ಮನ
ಕರಕಮಂಡಲದೊಳಗೆ ಹುದುಗಲಿ ರವಿಯ ಮರೆಹೊಗಲಿ
ಉರಗ ಭುವನದೊಳಿರಲಿ ಮೇಣ್ ಸಾ
ಗರವ ಮುಳುಗಲಿ ನಾಳೆ ಪಡುವಣ
ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ ೩೫

ಕುರುಬಲವ ಬಿಟ್ಟರೆ ಯುಧಿಷ್ಠಿರ
ನರಮನೆಯ ಹೊಕ್ಕರೆ ಮುರಾರಿಯ
ಶರಣುವೊಕ್ಕರೆ ಸರ್ವಥಾ ಕೊಲ್ವೆನು ಜಯದ್ರಥನ
ಧುರದೊಳುಳಿದಂತಿಂದ್ರ ಯಮ ಭಾ
ಸ್ಕರ ವಿರಂಚಿಗಳಡ್ಡವಿಸಿದರೆ
ಶಿರವನರಿವೆನು ನಾಳೆ ಬೈಗಿಂದೊಳಗೆ ಸೈಂಧವನ ೩೬

ಗುರುವಿಘಾತಿಯ ವೇದನಿಂದಾ
ಪರನ ಪರದಾರಾಭಿಗಾಮಿಯ
ಹರ ಮುರಾರಿಯ ಭೇದವಾದಿಯ ವಿಪ್ರನಿಂದಕನ
ಪರಗುಣಾಸೂಯಕನ ಹಿಂಸಾ
ಪರನ ಪಿಸುಣನ ಶಠನ ಕೃಪಣನ
ನರಕವಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ ೩೭

ಖಳನ ಧೂರ್ತನ ನಾಸ್ತಿಕನ ಚಂ
ಚಳನ ಪರನಿಕ್ಷೇಪಹಾರಿಯ
ದಳಿತ ಮರ್ಯಾದನ ಕೃತಘ್ನನ ಭರ್ತೃನಿಂದಕನ
ಸ್ಖಲಿತ ವಚನನ ಯೋಗಿ ನಿಂದಾ
ಕುಳನ ವಿಕಳವ್ರತನ ಲೋಕಾ
ವಳಿಗಳಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ ೩೮

ನಾಳೆ ಖಚರೀಜನದ ತೊಡವಿನ
ತೋಳನವನಸು ನೆಮ್ಮದಿದ್ದರೆ
ಕಾಳೆಗದೊಳೆನ್ನೊಡಲ ಬಿಸುಡುವೆನಗ್ನಿ ಕುಂಡದಲಿ
ಕೇಳು ಧರ್ಮಜ ಎಂಬ ನುಡಿಗಳು
ಕಾಳೆಗದ ಸೊಗಸಾಗೆ ಲಕ್ಷ್ಮೀ
ಲೋಲ ಕೇಳುತ ಬಂದು ಪಾರ್ಥನ ಬಿರುದ ಹೊಗಳಿದನು ೩೯

ತೀರಿತಿನ್ನೇನರಿ ನೃಪನ ಸಂ
ಸಾರ ನೀನೇರಿಸಿದ ನುಡಿಗಳ
ನಾರು ಕಳಚಲು ಬಲ್ಲರಗ್ಗದ ದೇವ ದೈತ್ಯರಲಿ
ವೀರ ರಾಮನ ನುಡಿಗೆ ರಾಮನು
ದಾರ ಬಾಣಕೆ ನಿನ್ನ ನುಡಿಗಳು
ಕೂರಲಗು ಸಮಜೋಳಿ ಜಗದೊಳಗೆಂದನಸುರಾರಿ ೪೦

ನಳಿನನಾಭನು ಪಾಂಚಜನ್ಯವ
ನೊಳಗಿದನು ನಿಜದೇವದತ್ತವ
ನೆಳೆದು ಫಲುಗುಣನೂದಿದನು ಗಾಂಡಿವವನೊದರಿಸುತ
ಪ್ರಳಯ ದಿನದಲಿ ತಿವಿವ ಸಿಡಿಲ
ವ್ವಳಿಸುವಂತಿರೆ ರೌದ್ರರವ ಘುಳು
ಘುಳಿಸಿ ತಲ್ಲಣಿಸಿತ್ತು ಕೌರವ ರಾಯ ಪರಿವಾರ ೪೧

ಏನಿದೆತ್ತಣ ರಭಸ ತ್ರೈಲೋ
ಕ್ಯಾನುಕಂಪನವಾಯ್ತು ಶಿವ ಎನು
ತಾ ನರೇಂದ್ರ ನಿಕಾಯ ನಡುಗಿತು ಕೌರವೇಶ್ವರನ
ಸೇನೆ ತಲೆಕೆಳಕಾಯ್ತು ಪಾರ್ಥನ
ಸೂನುವಿನ ಮರಣದಲಿ ಮಂತ್ರ
ಧ್ಯಾನ ನಮಗಾಯ್ತೆಂದು ತಲ್ಲಣಿಸಿತ್ತು ನೃಪಕಟಕ ೪೨

ಎಲೆಲೆ ಕವಿ ಕಳ್ಳೇರಿ ಹಾಯ್ದರು
ಕೊಲೆಗಡಿಗರೋ ನೃಪರು ಮಗ ಮಡಿ
ದಳಲು ಮಿಗಲನ್ಯಾಯಕೆಳಸಿದನೇ ಯುಧಿಷ್ಠಿರನು
ಬಲವ ಕರೆ ಕರೆ ಎನುತ ಕಾಹಿನ
ತೊಳಲಿಕೆಯ ನಾಯಕರು ಗಜರಲು
ಬೆಳಗಿದವು ಬೊಂಬಾಳ ದೀವಿಗೆ ನೆರೆದುದತಿರಥರು ೪೩

ಪಾಳಯವು ಗಜಬಜಿಸೆ ತೊಳಲಿಕೆ
ಯಾಳು ನೆರೆದುದು ಕೋರಡಿಯ ಮುಳು
ವೇಲಿಗಾಂತರು ಬೇಹ ಹರಿಸಿದರಖಿಳ ದೆಸೆದೆಸೆಗೆ
ಮೇಲುಗುದುರೆಗಳೊದಗಿದವು ಭೂ
ಪಾಲಕರು ತಲೆಗೆದರಿ ಹುಯ್ಯಲ
ನಾಲಿಸುತ ಹೊರವಂಟು ತಳಕೆಳಕಾಯ್ತು ನೃಪಕಟಕ ೪೪

ಕಡಿಯಣವನಾನೆಗಳ ಮೋರೆಗೆ
ತೊಡಸಿದರು ದಂತಿಗಳ ಹೆಗಲಲಿ
ನಿಡು ನೊಗನ ಕಟ್ಟಿದರು ಕಿವಿಯಲಿ ಕೀಲಿಗಳ ಸರಿಸಿ
ಜಡಿವ ಗುಳವನು ಹಾಯ್ಕಿ ಬೀಸಿದ
ರೊಡನೊಡನೆ ಹಕ್ಕರಿಕೆ ಜೋಡಿನ
ಲಡಸಿ ಗಾಲಿಯ ಬಿಗಿದು ಗಜಬಜಿಸಿತ್ತು ನೃಪಕಟಕ ೪೫

ಶಿರದೊಳಾಂತರು ಮೊಚ್ಚೆಯವನಾ
ಚರಣದಲಿ ಸೀಸಕವ ತೋಳಲಿ
ಬರಿಯ ಕವಚವ ಬೆನ್ನಿನಲಿ ಕಟ್ಟಿದರು ಕೈಹೊಡೆಯ
ಸುರಗಿಗಳನೀಡಾಡಿ ತಿರುಹಿದ
ರೊರೆಗಳನು ಬತ್ತಳಿಕೆಯನು ಬಿಲು
ದಿರುವಿನಲಿ ಮೋಹಿದರು ತಲ್ಲಣಿಸಿತ್ತು ತಮತಮಗೆ ೪೬

ಕರಿಗಳನು ರಾವುತರು ಜೋಧರು
ತುರಗವನು ಕಾಲಾಳು ರಥವನು
ವರ ಮಹಾರಥರಿಟ್ಟೆ ಸಬಳ ಕಠಾರಿಯುಬ್ಬಣವ
ಧುರದ ಭರ ಮಿಗೆ ಕೊಂಡು ಬೆದರ
ಳ್ಳಿರಿಯೆ ಬೆರಗಿನ ಬಳಿಯಲೊದಗಿ
ಸ್ತರರೆ ಪಾಂಡವರೆನುತ ಹೊಯ್ಪಾಡಿದರು ತಮ್ಮೊಳಗೆ ೪೭

ಹರಿದು ಬೇಹಿನ ಚರರು ಪಾಂಡವ
ರರಮನೆಯ ಹೊಕ್ಕರಿದು ಮರಳಿದು
ಬರುತ ಕಟಕದ ಗಜಬಜವನಲ್ಲಲ್ಲಿ ಮಾಣಿಸುತ
ನೆರವಿ ನಗೆಗೆಡೆಯಾಗೆ ಮುಸುಕಿನ
ಮುರುವಿನಲಿ ಪಾಳಯವ ಹೊಕ್ಕರು
ಗರುವ ಮನ್ನೆಯ ಮಂಡಳೀಕರು ಕೇಳ್ದರೀ ಹದನ ೪೮

ರವಿತನುಜ ಗುರುಸೂನು ಭೂರಿ
ಶ್ರವ ಸುಲೋಚನ ಶಲ್ಯ ಕೃಪ ಸೈಂ
ಧವ ವಿವಿಂಶತಿ ಚಿತ್ರಸೇನರು ಕರ್ಣನಂದನರು
ತವತವಗೆ ಬೆದರಿದರು ರಿಪು ಕೌ
ರವನ ಹೊರಗೈತಂದರಂದಿನ
ರವದ ರೌದ್ರದ ರಾಜಕಾರ್ಯವ ತಿಳಿವ ತವಕದಲಿ ೪೯

ಇರುಳು ಬೇಹಿನ ಚರರು ಪಾರ್ಥನ
ನಿರುಪಮಿತ ಗಾಢ ಪ್ರತಿಜ್ಞಾ
ಚರಿತವನು ಕೌರವನ ಸಭೆಯಲಿ ತಂದು ಹರಹಿದರು
ಮರಣ ಸೈಂಧವಗಲ್ಲದಿದ್ದರೆ
ಮರಣ ಪಾರ್ಥಂಗಲ್ಲದೆಡೆಯಲಿ
ಪರಿಹರಿಸುವುದ ಕಾಣೆವೆಂದರು ಚರರು ಭೂಪತಿಗೆ ೫೦

ಲೇಸು ಲೇಸಭಿಮನ್ಯುವೀ ದು
ಶ್ಶಾಸನನ ಮಗನಿಂದ ರಣದಲಿ
ಘಾಸಿಯಾದನು ನಾವು ಮಾಡಿದುದೇನು ಪಾರ್ಥಂಗೆ
ಈಸನೇರಿಸಿ ನುಡಿದ ಪಾರ್ಥನ
ಭಾಷೆ ಹೊಳ್ಳಾಗದು ಸುಯೋಧನ
ದೇಶವನು ಬೀಳ್ಕೊಂಡೆನೆಂದನು ಸೈಂಧವನು ಸಭೆಗೆ ೫೧

ಅಳಲಿ ಮನೆಯಲಿ ಕಾಳುಗೆಡೆವಡೆ
ಫಲವಹುದೆ ನಿಜಸತಿಯ ಹಿಡಿದಾ
ನೆಳಸುವಂದಿನ ಭೀಮ ಮಾಡಿದ ಭಾಷೆಯೇನಾಯ್ತು
ಅಳುಕದಿರು ಪರಿವಾರವಿದೆ ಕೊಳು
ಗುಳಕೆ ವಜ್ರದ ಜೋಡು ದ್ರೋಣನು
ಬಲವಿಹೀನನೆ ತಾನೆನುತ ಕುರುರಾಯ ಗರ್ಜಿಸಿದ ೫೨

ಆವನೋಲೆಯಕಾರತನ ಗಾಂ
ಡೀವಿಯಿದಿರಲಿ ಫಲಿಸುವುದು ಮೋ
ಹಾವನದ್ಭುತ ಮಂತ್ರಶಕ್ತಿಗೆ ಮಣಿವನಸುರಾರಿ
ಕಾವರಿಲ್ಲರ್ಜುನನ ಕೈಯಲಿ
ಸಾವವರು ನಾವಲ್ಲೆನಲು ನರ
ದೇವ ಕುರುಪತಿ ಮತ್ತೆ ನುಡಿದನು ನಗುತ ಸೈಂಧವಗೆ ೫೩

ಗರುಡನೂರವರೆರೆವರೇ ನಾ
ಗರಿಗೆ ತನಿಯನು ನಮ್ಮ ಬಲದಲಿ
ಗುರುವಲಾ ಪಾಲಕನು ಕೈಕೊಂಬನೆ ಧನಂಜಯನ
ನರನ ನುಡಿಯನು ಪೊಳ್ಳುಗಳೆವರೆ
ಚರಣದಲಿ ಬೀಳುವೆವು ನಡೆಯೆಂ
ದಿರುಳು ದ್ರೋಣನ ಮನೆಗೆ ಬಂದನು ಕೌರವರ ರಾಯ ೫೪

ನೆಗಹಿದವು ಕೈದೀವಿಗೆಯು ಸಾ
ಲುಗಳು ಹೊಂದಂಡಿಗೆಯು ಮೂವಾ
ರಿಗಳು ಮೆಂತಣಿಸಿದರು ಸೀಗುರಿ ಮೊಗವ ಮೋಹಿದವು
ಉಗಿದ ಕಡಿತಲೆ ಮುಸುಕಿದವು ಚೌ
ರಿಗಳ ಡೊಂಕಣಿ ತುರುಗಿದವು ಮೌ
ಳಿಗಳ ಮಸ್ತಕದವರು ನೆಲನುಗ್ಗಡಿಸಲೈತಂದ ೫೫

ಗರುಡಿಯೊಡೆಯನ ಪಾಳಯಕೆ ಕಡು
ಭರದಲೈತರೆ ಕೌರವೇಂದ್ರನ
ಬರವಿದೇನೆಂದಿದಿರು ಬಂದನು ದ್ರೋಣನಿದಿರಾಗಿ
ಧರಣಿಪನ ಸತ್ಕರಿಸಿ ನೆಲೆಯು
ಪ್ಪರಿಗೆಗೊಯ್ದನು ನುಸುಳುಗಂಡಿಯೊ
ಳುರವಣಿಸಿದರು ಕರ್ಣ ಕೃಪ ಮೊದಲಾದ ಬೇಹವರು ೫೬

ವೀಳೆಯವ ಕರ್ಪೂರವನಿತ್ತು ನೃ
ಪಾಲರನು ಕರ್ಣಾದಿ ಸುಭಟರ
ಸಾಲ ಮನ್ನಿಸಿ ದ್ರೋಣ ಬೆಸಕೊಂಡನು ಸುಯೋಧನನ
ಕಾಳಿಕೆಯ ಕೈಕೊಂಡು ಸಿರಿಮೊಗ
ಹೇಳುತಿದೆ ಭೀತಿಯನು ನಿನ್ನಿನ
ಕಾಳೆಗದ ಜಯ ನಮ್ಮದೀ ದುಮ್ಮಾನವೇನೆಂದ ೫೭

ಏನ ಹೇಳುವೆನರ್ಜುನನು ನಿಜ
ಸೂನು ಮಡಿಯೆ ದುರಾಭಿಮಾನದ
ಲೇವನೆಂದನು ಕೇಳಿರೈ ಕರ್ಣಾದಿ ಮಂತ್ರಿಗಳು
ತಾನು ಗಡ ಸೈಂಧವನ ತಲೆಯನು
ಭಾನುವಡಗದ ಮುನ್ನ ಕೊಂಬೆನು
ಹೀನನಾದರೆ ಹೊಗುವೆನೆಂದನು ಹವ್ಯವಾಹನನ ೫೮

ಕೊಂದವನು ದುಶ್ಶಾಸನನ ಮಗ
ಬಂದುದಪರಾಧವು ಜಯದ್ರಥ
ಗಿಂದಿವನ ಪತಿಕರಿಸಬೇಹುದು ರಣದೊಳರ್ಜುನನ
ಮುಂದುಗೆಡಿಸಲೆಬೇಕು ಭೀಷ್ಮರು
ಸಂದ ಬಳಿಕೆಮಗಾಪ್ತ ನೀನೇ
ತಂದೆ ನೀನೆಂದರಸನೆರಗಿದನವರ ಚರಣದಲಿ ೫೯

ಮುಕುಟವನು ನೆಗಹಿದನು ಭೂಪಾ
ಲಕ ನಿದಾನಿಸಿ ಕೇಳು ಶಶಿಕುಲ
ಮುಕುರವಿತ್ತಂಡದಲಿ ನೆನೆಯೆವು ಭೇದಬುದ್ಧಿಗಳ
ಯುಕುತಿಯಿನ್ನಿದಕಿಲ್ಲ ಪಾರ್ಥನ
ಶಕುತಿ ಘನವೀ ರಾಜಕಾರ್ಯಕೆ
ಚಕಿತರಾದೆವು ರಾಯ ಚಿತ್ತೈಸೆಂದನಾ ದ್ರೋಣ ೬೦

ಕಾವಡನ್ನಳವಲ್ಲ ಮೇಣ್ ಗಾಂ
ಡೀವಿ ಕೊಲುವವನಲ್ಲ ಕೃಷ್ಣನು
ಕಾವರೆಯು ಕೊಲುವರೆ ಸಮರ್ಥನು ವೇದಸಿದ್ಧವಿದು
ಜೀವಜಾತಕ್ಕೊಡೆಯನಾ ರಾ
ಜೀವನಾಭನು ಬರಿಯಹಂಕಾ
ರಾವಲಂಬನದಿಂದ ಕೆಡುತಿಹುದಖಿಳ ಜಗವೆಂದ ೬೧

ಇದು ಮುರಾರಿಯ ಲೀಲೆಗೋಸುಗ
ಉದಯಿಸಿದ ಜಗವಿದರೊಳೊಬ್ಬನ
ಸದೆವನೊಬ್ಬನ ಹಿಡಿದು ಸಲಹುವನೊಬ್ಬನೊಬ್ಬನಲಿ
ಇದರೊಳಾತಂಗಿಲ್ಲ ಕರುಣಾ
ಸ್ಪದತೆ ನಿಷ್ಕಾರುಣ್ಯ ಭೂಯಂ
ತ್ರದ ವಿನೋದಕ್ರೀಡೆ ಕೃಷ್ಣನದೆಂದನಾ ದ್ರೋಣ ೬೨

ನರನ ನುಡಿಯೆಂದಿರದಿರವು ಮುರ
ಹರನ ನುಡಿಗಳು ಕೇಳು ಗಿರಿಗ
ಹ್ವರದ ನುಡಿಯೋ ಜಂಗಮ ಧ್ವನಿಯೋ ವಿಚಾರಿಸಲು
ನರನ ನುಡಿ ಹೊಳ್ಳಾಗದಾ ಮುರ
ಹರನ ಬಲುಹುಳ್ಳನ್ನ ಬರವೆನ
ಲರಸನಾಲಿಸಿ ಕೇಳುತಿರ್ದನು ಕೈಯ ಗಲ್ಲದಲಿ ೬೩

ಕೇಳುತಿರ್ದೈ ಕರ್ಣ ಬೊಮ್ಮವ
ಕೇಳ ಬಂದೆವೆ ನಾವು ನಾಳಿನ
ಕಾಳೆಗದ ಜಯಮುಖವ ಬೆಸಗೊಳ ಬಂದೆವಿಂದೀಗ
ಹೇಳುತಿದ್ದರಸಂಗತವನಿದು
ಹೋಲುವುದಲೇ ಮುನಿ ಕುಮಾರರು
ಕಾಳೆಗವನೇಗುವರು ಬಳಿಕೇನೆಂದನಾ ಭೂಪ ೬೪

ಕಟಕಿಯೇಕಿದು ವಿಪ್ರರಹೆವು
ತ್ಕಟದ ಶೌರಿಯುವಿಲ್ಲ ನಾವ್ ದಿಟ
ಪುಟವ ನುಡಿದರೆ ಖಾತಿಯಾದುದೆ ನಿಮ್ಮ ಚಿತ್ತದಲಿ
ನಿಟಿಲಲೋಚನ ನೋಡುವರೆ ದು
ರ್ಘಟವೆನಿಪ ಮೋಹರದ ಬಲು ಸಂ
ಘಟನೆಯನು ತೋರುವೆನು ಚಿಂತಿಸಬೇಡ ನೀನೆಂದ ೬೫

ವ್ಯೂಹವನು ರಚಿಸುವೆನು ನಾಳಿನೊ
ಳಾಹವಕೆ ತಳತಂತ್ರವೊಂದೇ
ಮೋಹರಕೆ ನಡೆತರಲಿ ಷಡುರಥರಾದಿ ಯಾದವರು
ಸಾಹಸವನುದಯದಲಿ ತೋರುವೆ
ಬಾಹುಬಲವನು ಸೈಂಧವನ ಮೈ
ಗಾಹ ಬಲಿವೆನು ಕಾಂಬೆ ಕೃಷ್ಣನ ನೆನಹ ಬಳಿಕೆಂದ ೬೬

ಸಾಕು ನೀ ಚಿಂತಿಸಲು ಬೇಡ ಪಿ
ನಾಕಧರನಡಹಾಯ್ದಡೆಯು ನಾ
ವಾಕೆವಾಳರು ರಣಕೆ ಕೃಷ್ಣಾರ್ಜುನರ ಪಾಡೇನು
ನೂಕಿ ನೋಡಾ ಸೈಂಧವನನೇ
ಕೈಕವೀರರು ಕಾವೆವೆಂದು
ದ್ರೇಕ ಮಿಗೆ ಗರ್ಜಿಸಿತು ಕರ್ಣಾದಿಗಳು ತಮತಮಗೆ ೬೭

ಬೀಳುಕೊಂಡುದು ರಾಜಸಭೆ ತ
ಮ್ಮಾಲಯಕೆ ಸೈಂಧವನು ಚಿಂತಾ
ಲೋಲನಿರ್ದನು ಮರಣಜೀವನ ಜಾತ ಸಂಶಯನು
ಕೋಲ ಗುರುವಿನ ವಿವಿಧ ರಚನೆಯ
ಕೇಳಿದನು ನಸುನಗುತ ಪಾರ್ಥಗೆ
ಹೇಳಿದನು ಕರುಣದಲಿ ಗದುಗಿನ ವೀರ ನಾಯರಣ ೬೮

## ಒಂಬತ್ತನೆಯ ಸಂಧಿ

ಸೂ. ಜಯಸಮರ ಸೌರಂಭನಾಹವ
ಭಯ ಬಹಿರ್ಮುಖನಸ್ತ್ರವಿದ್ಯಾ
ನಿಯತಮತಿ ಮೋಹರಿಸಿ ಸಮರಕೆ ದ್ರೋಣನನುವಾದ

ಕೇಳು ಜನಮೇಜಯ ಧರಿತ್ರೀ
ಪಾಲ ಫಲುಗುಣ ಹೊಕ್ಕನಾಯುಧ
ಶಾಲೆಯನು ತೆಗೆಸಿದನು ಧನು ಮೊದಲಾದ ಕೈದುಗಳ
ಸಾಲರಿದು ನಿಲಿಸಿದನು ನಿಶಿತ ಶ
ರಾಳಿ ಚಾಪ ಕೃಪಾಣ ಪರಶು ತ್ರಿ
ಶೂಲ ಮುದ್ಗರ ಚಕ್ರ ಸೆಲ್ಲೆಹ ಶಕುತಿ ತೋಮರವ ೧

ಸವಗ ಮೊಚ್ಚೆಯ ಜೋಡು ಸೀಸಕ
ಕವಚ ಬಾಹುರಿಕೆಗಳ ನಿಲಿಸಿದ
ನವಿರಳಾಕ್ಷತೆ ಗಂಧ ಪುಷ್ಪ ಸುಧೂಪ ದೀಪದಲಿ
ವಿವಿಧ ಸತ್ಕಾರದಲಿ ದುರ್ಗಾ
ಸ್ತವವ ಜಪಿಸಿದ ವರ ಘೃತೋದನ
ನವರುಧಿರ ಮಾಂಸೋಪಹಾರಂಗಳಲಿ ಪೂಜಿಸಿದ ೨

ಒಡನೆ ಗಜರುವ ವಾದ್ಯದಲಿ ಕೆಂ
ಪಡರಿದೋಗರಸಹಿತ ಭೂತಕೆ
ಬಡಿಸಿದರು ಮಾಂತ್ರಿಕರು ಬಲಿಗೆದರಿದರು ದೆಸೆದೆಸೆಗೆ
ತೊಡವು ವಸನಾದಿಗಳಲೊಪ್ಪಂ
ಬಡುವ ಬಲಿಯನು ಹರಿಯೊಳರ್ಪಿಸಿ
ನಡುವಿರುಳು ಕಲಿಪಾರ್ಥನರ್ಚಿಸಿದನು ನಿಜಾಯುಧವ ೩

ಇರುಳಿನದ್ಭುತ ರವವನಾಲಿಸಿ
ಮುರಮಥನ ನೀ ಫಲುಗುಣನ ಸಂ
ಗರ ಜಯೋದ್ಧತಮಂತ್ರವೆಂದನು ದಾರುಕನ ಕರೆದು
ಹರ ಮಹಾಸೇನಾದಿಗಳು ಗೆಲ
ಲರಿದು ನಾಳಿನ ಬವರವಿನ್ನೀ
ನರನ ಜಯವೆಂತೆನುತ ಚಿಂತಿಸುತಲ್ಲಿಗೈತಂದ ೪

ರಚನೆ ಚೆಲುವಿದು ನಾಳಿನಾಹವ
ಖಚರ ಕಿಂಪುರುಷರಿಗೆ ಅಸದಳ
ವಚಲಬಲಗಾಂಡಿವಿಗೆ ಹರಿಯದು ಸುಪ್ತಿಯೊಳಗವನ
ಉಚಿತದಲಿ ಕೊಂಡೊಯ್ದು ರುದ್ರನ
ವಚನದನುವನು ತಿಳಿವೆನೆಂದಾ
ಶಚಿಯುಗಂಡನ ಮಗನನೀಶನ ಪದವ ಕಾಣಿಸಿದ ೫

ಶಿವನ ಕರುಣಾಲಾಭ ಪುಣ್ಯಾ
ಪ್ರವರ ಪಾರ್ಥನ ಮುನ್ನಿನಂದದ
ಲವನಿಗಿಳುಹಿದ ನಿಖಿಳದಿವ್ಯಾಯುಧದ ವೇದಿಕೆಗೆ
ಸವೆದುದಿರುಳಿಂದೂಪಲಂಗಳ
ನಿವಹ ಬಲಿದುದು ಚಕ್ರವಾಕದ
ತವಕ ತಗ್ಗಿತು ತರಣಿಯುಡರಿದನುದಯಪರ್ವತವ ೬

ವಿಮಳ ದರ್ಭಾಂಕುರದ ಶಯನದೊ
ಳಮರಪತಿಸುತ ಪವಡಿಸಿದನನು
ಪಮ ವಿಳಾಸನು ಕನಸ ಕಂಡೆನೆನುತ್ತ ಕಂದೆರೆದ
ಸಮರವಿಜಯಕೆ ಶಿವನ ಕೃಪೆ ಸಂ
ಕ್ರಮಿಸಿತೆನಗೆನುತಿರಲು ಮುಂದಣ
ಕಮಲನಾಭನ ಕಂಡು ಬಿನ್ನಹ ಮಾಡಿದನು ನಗುತ ೭

ದೇವ ನಿಮ್ಮಡಿ ಸಹಿತ ಕಂಡೆನು
ದೇವದೇವನ ಚರಣವನು ಸಂ
ಭಾವಿಸಿದ ನಮ್ಮಿಬ್ಬರನು ದಕ್ಷಾಧ್ವರಧ್ವಂಸಿ
ನಾವು ಬಂದುದನರಿದು ವರ ರಾ
ಜೀವಸರಸಿಗೆ ಕಳುಹಿದನು ಗಾಂ
ಡೀವ ನಿಜಚಾಪವನು ಕಂಡೆನು ಕೊಳನ ಮಧ್ಯದಲಿ ೮

ಬಳಿಕ ತಿರುವಿಟ್ಟಾಗಲಸ್ತ್ರವ
ಸೆಳೆದು ಬಿಲುವಿದ್ಯಾಚಮತ್ಕೃತಿ
ಯಳವ ತೋರಿದಡಾಗಳೀಶನ ಹೊರೆಗೆ ನಾನೈದಿ
ನಿಲೆ ತದೀಯಾಸ್ತ್ರಪ್ರಯೋಗದ
ಬಲುಹನೀಕ್ಷಿಸೆ ತೆಗೆವ ಬೆಡಗನು
ಕಲಿಸೆ ಪಾಶುಪತಾಸ್ತ್ರವೆನಗಾಯ್ತಲ್ಲಿ ವಶವರ್ತಿ ೯

ಕನಸನೀ ಹದನಾಗಿ ಕಂಡೆನು
ದನುಜಹರ ಬೆಸಸಿದರ ಫಲವನು
ನನಗೆನಲು ನಸುನಗುತ ನುಡಿದನು ದಾನವಧ್ವಂಸಿ
ನಿನಗೆ ಶೂಲಿಯ ಕರುಣವಾಯ್ತಿಂ
ದಿನಲಿ ಪಾಶುಪತಾಸ್ತ್ರ ನಿನ್ನದು
ದಿನದೊಳರಿ ಸೈಂಧವ ವಧವ್ಯಾಪಾರವಹುದೆಂದ ೧೦

ಉಲಿವ ಮಂಗಳಪಾಠಕರ ಕಳ
ಕಳದೊಳುಪ್ಪವಡಿಸಿದನವನಿಪ
ತಿಲಕ ಮಾಡಿದನಮಲ ಸಂಧ್ಯಾವಂದನಾದಿಗಳ
ನಳಿನನಾಭನ ಪಾದಪದ್ಮವ
ನೊಲವಿನಿಂದಭಿನಮಿಸಿ ಸುಭಟಾ
ವಳಿಗೆ ನೇಮವ ಕೊಟ್ಟನಂತಕಸೂನು ಸಂಗರಕೆ ೧೧

ನಡೆದುದುರುಸನ್ನಾಹದಲಿ ಸೂ
ಳಡಸಿ ಮೊರೆವ ಗಭೀರ ಭೇರಿಯ
ಕಡುರವದ ರಿಪುಭಟರ ಬೈಗುಳ ಗೌರುಗಹಳೆಗಳ
ಎಡಬಲಕೆ ತನಿಹೊಳೆವ ತೇಜಿಯ
ಕಡುಮದದ ಕರಿಘಟೆಯ ತೇರಿನ
ನಿಡುವರಿಯ ಕಾಲಾಳ ಕಳಕಳವಾಯ್ತು ರಣದೊಳಗೆ ೧೨

ಎದ್ದುದೀ ಕಟಕದಲಿ ಬಲ ಮಿಂ
ಡೆದ್ದು ಸುಭಟರು ಸಮರಭೂಮಿಯ
ಹೊದ್ದಿದರು ಝಳಪಿಸುವಡಾಯ್ದದ ಹೊಗರ ಹೊಳಹುಗಳ
ಅದ್ದುದೆತಳಕೆ ಅವನಿಯೆನೆ ಹೊವ
ರೆದ್ದು ನಡೆದುದು ದಂತಿಘಟೆ ಬರು
ತಿದ್ದುದಗಣಿತ ರಥ ಪದಾತಿಗಳಾಹವಾಂಗಣಕೆ ೧೩

ವಿನುತ ಸಂಧ್ಯಾವಂದನಾದಿಯ
ನನುಕರಿಸಿ ಹರಿಪದ ಪಯೋಜವ
ನೆನೆದು ವಿರಚಿತ ದೇವವಿಪ್ರಾನಳ ಸಮಾರ್ಚನನು
ಕನಕ ಕವಚವ ತೊಟ್ಟು ಗಡ್ಡದ
ಘನತೆಯನು ಗಂಟಿಕ್ಕಿ ವರಕಾಂ
ಚನಮಯದ ಯಜ್ಞೋಪವೀತವನಿಳುಹಿದನು ದ್ರೋಣ ೧೪

ನಿರಿಯುಡಿಗೆಯಲಿ ಮಲ್ಲಗಂಟಿನ
ಸೆರಗ ಮೋಹಿಸಿ ಬೆರಳ ದರ್ಭೆಯ
ಹರಿದು ಬಿಸುಟನು ಜೋಡು ಸೀಸಕ ಬಾಹುರಕ್ಷೆಗಳ
ಮುರುಹಿ ಬಿಗಿದನು ನಿಖಿಳಭೂಸುರ
ರುರುವ ಮಂತ್ರಾಕ್ಷತೆಯ ಕೊಳುತ
ಳ್ಳಿರಿವ ಜಯರವದೊಡನೆ ರಥವೇರಿದನು ಕಲಿದ್ರೋಣ ೧೫

ಸೂಳವಿಸಿದವು ಸನ್ನೆಯಲಿ ನಿ
ಸ್ಸಾಳ ಕೋಟಿಗಳುರವಣಿಸಿ ಹೆ
ಗ್ಗಾಳೆಗಳು ಸಾರಿದವು ಸುಭಟರ ವೀರ ವಿತರಣವ
ಸಾಲು ಝಲ್ಲರಿಗಳ ಪತಾಕಾ
ಜಾಲ ಸಬಳದ ಹೊದರ ಗೋವಳಿ
ಗೋಲ ತೂಗಾಟದಲಿ ಸಮರಕೆ ದ್ರೋಣ ನಡೆತಂದ ೧೬

ನೆಗಹಿ ಬೀಸುವ ಚೌರಿಗಳ ಸ
ನ್ನೆಗೆ ಚತುರ್ಬಲವೆಲ್ಲ ದ್ರೋಣನ
ದೃಗುಪಥಕೆ ತೋರಿದರು ತಂತಮ್ಮಾಳು ಕುದುರೆಗಳ
ತೆಗೆದು ಯೋಜನಪಾರರಲಿ ಕಾ
ಳೆಗಕೆ ಶಕಟವ್ಯೂಹವನು ಹೂ
ಣಿಗರ ಬಲಿದನು ಕೌರವೇಂದ್ರಾನುಜರ ಗಡಣದಲಿ ೧೭

ಇದಿರೆ ಶಕಟವ್ಯೂಹವದರ
ಗ್ರದಲಿ ದುಶ್ಶಾಸನನು ಕೆಲಬಲ
ದೊದವಿನಲಿ ಬಾಹ್ಲಿಕನು ಸೌಬಲ ಸಿಂಧು ಮಾಗಧರು
ಇದರ ಹಿಂದಣ ಮೈಯೊಳೈಗಾ
ವುದದ ನೀಳದೊಳೆರಡುವರೆ ಗಾ
ವುದದ ವಿಸ್ತಾರದಲಿ ಮಕರವ್ಯೂಹವನು ಬಲಿದ ೧೮

ಹಿಂದೆ ಯೋಜನವೈದರಳವಿಯೊ
ಳೊಂದು ಚಕ್ರವ್ಯೂಹವನು ನಲ
ವಿಂದ ಬಲಿದನು ನಿಲಿಸಿದನು ಕಾಂಭೋಜಭೂಪತಿಯ
ವಿಂದನನುವಿಂದನನು ದಕ್ಷಿಣ
ವೃಂದ ಸಮಸಪ್ತಕರ ಬಲವನು
ಸಂದಣಿಸಿದರು ಹತ್ತು ಸಾವಿರ ನೃಪರ ಗಡಣದಲಿ ೧೯

ತುರಗವರುವತ್ತಾರು ಕೋಟಿಯ
ನುರು ಮದೇಭವನೆಂಟು ಲಕ್ಷವ
ವರ ರಥವನರುವತ್ತು ಸಾವಿರವನು ಸಗಾಢದಲಿ
ಧುರದ ಕಾಲಾಳಗಣಿತವ ಮೋ
ಹರಿಸಿ ಹಂಸವ್ಯೂಹವನು ಸಡ
ಗರಿಸಿದನು ನಿಯುತಾಯು ಮೊದಲಾದವರ ಕಾಹಿನಲಿ ೨೦

ಕೆಲಬಲದ ಸಬಳಿಗರು ಸಬಳದ
ವಳಯದಲಿ ಹರಿಗೆಗಳು ಹರಿಗೆಗ
ಳೊಳಗೆ ಬಿಲ್ಲಾಳುಗಳ ಮರೆಯಲಿ ವಾಜಿ ಗಜ ರಥವ
ನಿಲಿಸಿ ಗರ್ಭವ್ಯೂಹವನು ಮಂ
ಡಳಿಸಿದನು ಸಂವೀರರರನು ಸಿಂ
ಹಳರ ನಿಲಿಸಿದ ಹತ್ತು ಸಾವಿರ ಮಂಡಳೇಶ್ವರರ ೨೧

ಅಪರಭಾಗದಲಳವಿಯಲಿ ಭೂ
ಮಿಪರ ಭೂರಿಶ್ರವನ ಶಲ್ಯನ
ಕೃಪನ ವೃಷಸೇನನ ಸುಲೋಚನ ದೀರ್ಘಬಾಹುಕರ
ನೃಪತಿಗಳನೆಂಬತ್ತು ಸಾವಿರ
ಚಪಳಗಜ ಹದಿನೆಂಟು ಕೋಟಿಯ
ನಪರಿಮಿತ ತೇಜಿಯಲಿ ಪದ್ಮವ್ಯೂಹವನು ಬಲಿದ ೨೨

ಆ ಮಹಾಮೋಹರದ ಬಳಿಯಲಿ
ಸೋಮದತ್ತನ ದಂಡಧರನನು
ತಾಮರಸಬಂಧುವಿನ ಮಗನನು ಕ್ಷೇಮಧೂರ್ತಕನ
ಆ ಮಹಾಬಾಹುಕನನಶ್ವ
ತ್ಥಾಮನನು ಕೃತವರ್ಮಕರೆನಿಪ ಸ
ನಾಮರನು ನಿಲಿಸಿದನು ಸೂಚೀವ್ಯೂಹ ವಳಯಂದಲಿ ೨೩

ಪದುಮ ಸೂಚೀವ್ಯೂಹ ಮಧ್ಯದೊ
ಳದಟರನು ನಿಲಿಸಿದನು ಸಮರಾ
ಗ್ರದಲಿ ಅವನಳಲಿಗರನಾಪ್ತರನವನ ಬಾಂಧವರ
ಕದನಗಲಿ ಸೈಂಧವನನಾ ಮ
ಧ್ಯದಲಿ ನಿಲಿಸಿದನಮುಪು ಸಮರಕೆ
ಮದನ ಮಥನನು ಮೊಗಪಲಸದಳವೆನಿಸಿ ರಂಜಿಸಿತು ೨೪

ತಿವಿವ ಸಿಡಿಲೊಬ್ಬುಳಿಯೊ ಪ್ರಳಯದ
ಜವನ ನೆರವಿಯೊ ಕಾಳಕೂಟಾ
ರ್ಣವದ ಸೀಮಾಲಂಘನವೊ ಮೃತ್ಯುವಿನ ಪಾಳಯವೊ
ಅವನಿ ಕುಸಿದುದು ನೆರೆದ ಸೇನೆಯ
ಹವಣೆಗೀಶ್ವರ ಬಲ್ಲನೆನೆ ಸೈಂ
ಧವನ ಕಾಹಿನ ಮೋಹರಂಗಳು ಕಿಡಿಯನುಗುಳಿದವು ೨೫

ಜಡಿವ ಮದದಾನೆಗಳ ಗಗನವ
ನಡರ್ವ ಕಡುಗುದುರೆಗಳ ಸೂರಿಯೊ
ಳೆಡಬಲಕೆ ಬಿರುವರಿವ ತೇರಿನ ಸೂತರೋಜೆಗಳ
ಖಡುಗ ಕೊಂತವ ನಭಕೆ ಹಾಯಿಕಿ
ಹಿಡಿವ ಸುಭಟರ ಭುಜದ ಹೊಯ್ಲಿನ
ಕಡುಮನದ ರಣದವಕಿಗರ ಸೌರಂಭ ರಂಜಿಸಿತು ೨೬

ಮೊಳಗಿದವು ನಿಸ್ಸಾಳ ಕೋಳಾ
ಹಳಿಸಿದವು ಕಹಳೆಗಳು ಪರ್ವತ
ಹಿಳಿಯೆ ಹೆಚ್ಚಿದ ಪಟಹ ಪಣಹ ಮೃದಂಗ ಡಿಂಡಿಮದ
ಉಲಿಯ ತೇಜಿಯ ಹೇಷಿತದ ವೆ
ಗ್ಗಳಿಯ ಕರಿಗಳ ಬೃಂಹಿತದ ಗೊಂ
ದಳದ ಕಳಗರ್ಜಾಯ್ತು ಕೌರವ ಸೈನ್ಯಶರಧಿಯಲಿ ೨೭

ಮುಂದೆ ಶಕಟವ್ಯೂಹದಲಿ ನಡೆ
ತಂದು ನಿಂದನು ದ್ರೋಣ ನಿಜಬಲ
ದಂದವನು ನೆರೆನೋಡಿ ನೋಡಿ ಕಿರೀಟವನು ತೂಗಿ
ಇಂದು ಗೆಲಿದರೆ ಧರ್ಮಸುತನವ
ರಿಂದುಕುಲದಗ್ಗಳರು ಬರಹೇ
ಳೆಂದು ಭಟ್ಟರನಟ್ಟಿದನು ಪಾಂಡವರ ಪಾಳಯಕೆ ೨೮

ಕೇಳು ಧೃತರಾಷ್ಟ್ರಾವನಿಪ ಸಿರಿ
ಲೋಲ ಸಹಿತ ಯುಧಿಷ್ಠಿರಾದಿಗ
ಳಾಳಮೇಳಾಪದಲಿ ಹೊಕ್ಕರು ಕಾಳೆಗದ ಕಳನ
ಸಾಲರಿದು ನಿಜಸೇನೆಯನು ಪಾಂ
ಚಾಲಸುತ ಮೋಹರಿಸಿದನು ಕೆಂ
ಧೂಳಿ ಮಾಣಿಸಿತನಿಮಿಷತ್ವವನಮರ ಸಂತತಿಯ ೨೯

ಅರಸನೆಡವಂಕದಲಿ ಮತ್ಸ್ಯರು
ಬಿರುದ ಕೈಕೆಯ ಚೈದ್ಯ ಕೇರಳ
ಮರು ಯವನ ಸಂವೀರ ಕೌಸಲ ಪಾಂಡ್ಯ ಮಾಗಧರು
ಧರಣಿಪನ ಬಲವಂಕದಲಿ ಮೋ
ಹರಿಸಿ ಪಾಂಚಾಲಕರು ಚೂಣಿಯೊ
ಳುರವಣಿಸಿದರು ನಕುಲ ಸಾತ್ಯಕಿ ಭೀಮನಂದನರು ೩೦

ನರ ಮುರಾಂತಕರೊಂದು ಕಡೆಯಲಿ
ಮುರಿಯೆ ಕಂಡನು ನೃಪತಿ ಕೃಷ್ಣನ
ಹೊರೆಗೆ ಬಂದನು ನಮಿಸಿ ಬಿನ್ನಹ ಮಾಡಿದನು ಬಳಿಕ
ನರನಿವನು ಮಗನಿದಿರುಗಾಣದೆ
ಹಿರಿದನೇರಿಸಿ ನುಡಿದನಿದ ಪತಿ
ಕರಿಸಬೇಹುದು ನಿನ್ನ ಕರುಣವೆ ಹರಣವೆಮಗೆಂದ ೩೧

ಹಗೆಯ ತಲೆ ಹೋಗದಡೆ ವಹ್ನಿಯ
ಹೊಗುವ ನುಡಿ ತಮ್ಮನದು ಬಳಿಕಾ
ಸೆಗಳಿಕೆಯೊಳುಳಿದೆಮ್ಮ ನಾಲ್ವರ ದೇಹ ನಿಕ್ಷೇಪ
ಬಗೆಯಲೈವರ ಜೀವನದ ವಿಲ
ಗಿಗನು ನೀನೆಂದರಸ ಕರುಣಾ
ಳುಗಳ ದೇವನ ಬೇಡಿಕೊಂಡನು ಕೇಳು ಧೃತರಾಷ್ಟ್ರ ೩೨

ಪಡೆಗಡಲು ಕುಡಿನೀರು ನೆರೆ ನೀ
ರಡಸಿದುದು ಪಾರ್ಥನ ಶರಾವಳಿ
ವಡಬನಿದರೊಳು ಕೆಲಬಲದ ಹಂಗೇಕೆ ಕದನದಲಿ
ಕಡುಹಿನಲಿ ಸೈಂಧವನ ತಲೆಯನು
ಹೊಡೆದು ನಿನ್ನಯ ಕಾಲ ಬಳಿಯಲಿ
ಕೆಡಹುವನು ನಿಮಿಷದಲಿ ಫಲುಗುಣನೆಂದನಸುರಾರಿ ೩೩

ಕರೆದು ಸಾತ್ಯಕಿ ಭೀಮನನು ನೃಪ
ವರನ ಸುಯ್ಯಾನದಲಿ ನಿಲಿಸಿದ
ನರಿಬಲಕೆ ನೂಕಿದನು ಕೈಕೆಯ ಚೈದ್ಯ ಸೃಂಜಯರ
ಮುರಮಥನನೊಡಗೂಡಿ ನಿಜ ಮೋ
ಹರವನಂದೈನೂರು ಬಿಲ್ಲಂ
ತರಕೆ ತೊಲಗಿ ಮಹಾಸ್ತ್ರಮಂತ್ರವ ಜಪಿಸಿದನು ಪಾರ್ಥ ೩೪

ಇಳಿದು ರಥವನು ಮುರಹರನ ಪದ
ತಳದ ಧೂಳಿಯ ಕೊಂಡನತಿ ನಿ
ರ್ಮಲ ಸಮಾಧಾನದಲಿ ಕೃಷ್ಣನ ಚರಣಕೆರಗಿದನು
ತಲೆಯ ಹಿಡಿದೆತ್ತಿದನು ಹರಿ ಕೋ
ಮಳ ಕರಾಂಬುಜದಿಂದ ಪಾರ್ಥನ
ನೊಲಿದು ಮೈದಡವಿದನು ಗೆಲು ಹೋಗೆಂದು ಹರಸಿದನು ೩೫

ಖುರಕೆ ರತುನವ ಸುರಿದು ತೇರಿನ
ತುರಗವನು ವಂದಿಸಿದನಾ ಪಳ
ಹರದ ಹನುಮಂಗೆರಗಿದನು ಸುರಕುಲಕೆ ಕೈಮುಗಿದು
ವರರಥವ ಬಲಗೊಂಡು ಕವಚವ
ಬರಿಗೆ ಬಿಗಿದನು ಕೈಗೆ ವಜ್ರದ
ತಿರುವೊಡೆಯನವಚಿದನು ರಥವೇರಿದನು ಕಲಿಪಾರ್ಥ ೩೬

ದೇವದತ್ತವ ಮೊಳಗಿದನು ಗಾಂ
ಡೀವಿ ಚಾಪವ ಮಿಡಿದ ನಿಷ್ಠುರ
ರಾವ ತಿವಿದುದು ಜರಿದವಡಕಿಲು ಜಗದ ಜೋಡಿಗಳ
ರಾವು ಫಲುಗುಣಯೆನುತ ಪಾರ್ಥನ
ಭಾವ ಕಂಡಿ ಚಮ್ಮಟಿಗೆಯಲಿ ತುರ
ಗಾವಳಿಯನದುಹಿದನು ಸುಳಿಸಿದನಾಹವಕೆ ರಥವ ೩೭

ವರ ಯುಧಾಮನ್ಯೂತ್ತಮೌಂಜಸ
ರೆರಡು ಕಡೆಯಲಿ ಬರೆ ಮುರಾರಿಯ
ಪರಮ ಸಾಹಾಯ್ಯದಲಿ ಸಾಹಸಮಲ್ಲನುರವಣಿಸೆ
ಅರಿಬಲವ ಕೆಣಕಿದನು ಪಾರ್ಥನ
ಬರವನೀಕ್ಷಿಸಿ ತನ್ನ ಸೇನೆಗೆ
ಬೆರಳ ಚೌರಿಯ ಬೀಸಿ ದುಶ್ಶಾಸನನು ಮಾರಾಂತ ೩೮

ಇವನ ಕೊಂದರೆ ಮುನ್ನ ಮಾಡಿದ
ಪವನತನಯನ ಭಾಷೆಗೂಣೆಯ
ವಿವನ ಕೊಲ್ಲದೆ ಗೆಲುವ ಹದನೇನೆನುತ ನಿಮಿಷದಲಿ
ಕವಲುಗೋಲಿನಲರಿಭಟನ ಚಾ
ಪವನು ಸೂತನ ರಥವ ರಥವಾ
ಹವನು ಖಂಡಿಸಿ ಬಿಸುಡಲವ ಜಾರಿದನು ದುಗುಡದಲಿ ೩೯

ಉರಿಯ ಬಂದಿಯ ಹಿಡಿದು ಹೆಚ್ಚುವ
ದೊರೆಯಲೇ ದಿಟ ಪಾದರಸವೆಲೆ
ಯರಸ ನಿನ್ನ ಕುಮಾರನೇಸರ ಪಾಡು ಪಾರ್ಥಂಗೆ
ತೆರಳಿದನು ನಿನ್ನಾತ ಸೂರಿಯೊ
ಳುರವಣಿಸಿತಾ ತೇರು ನರನೈ
ತರಲು ಕಂಡನು ಶಸ್ತ್ರವಿದ್ಯಾ ಭಾಳಲೋಚನನ ೪೦

ಅರುಣಮಯ ರಥವಾಜಿಗಳ ವಿ
ಸ್ತರದ ಹೇಮದ ಕಳಶ ಸಿಂಧದ
ಸರಳು ತೀವಿದ ಬಂಡಿ ಬಳಿಯಲಿ ಲಕ್ಷ ಸಂಖ್ಯೆಗಳ
ತರಣಿಯನು ಸೋಲಿಸುವ ರತ್ನಾ
ಭರಣಕಾಂತಿಯ ರಾಯಕಟಕದ
ಗುರುವ ಕಂಡನು ಪಾರ್ಥ ಶಕಟ ವ್ಯೂಹದಗ್ರದಲಿ ೪೧

ಅರಿವನು ಕಲಿಪಾರ್ಥನೇ ತ್ರಿಪು
ರಾರಿ ಹಿಡಿವಂಬಾಯಿತೆಂಬ ದೊ
ಠಾರನೇ ದೈತ್ಯಾರಿ ಸಾರಥಿಯೆಂಬ ಗರ್ವಿತನೆ
ಹಾರುವರು ನಾವಸ್ತ್ರ ವಿದ್ಯಾ
ಪಾರಗರು ನಾವಲ್ಲ ರಣದೌ
ದಾರಿಯವ ತೋರೆಮಗೆನುತ್ತಡಹಾಯ್ದನಾ ದ್ರೋಣ ೪೨

ನಾಳೆ ಹಗೆವನ ಹೊಯ್ವೆನೆಂಬು
ಬ್ಬಾಳುತನವಿನ್ನೊಮ್ಮೆ ಭೂಪತಿ
ಯೋಲಗಾತಿಯರಿದಿರಲಾಡಿದ ಭಾಷೆಯಿನ್ನೊಮ್ಮೆ
ಆಳು ನೆರೆದಿದೆ ಜೋಣಿಯೊಳಗೊಂ
ದಾಳ ಹೊಯ್ದರೆ ಗೆಲವು ನಿನ್ನದು
ಕಾಳಕೂಟದ ಕಮಲ ತುಂಬಿಗೆ ಪಥ್ಯವಲ್ಲೆಂದ ೪೩

ಎಂಬಡಿದಿರುತ್ತರವಲೇ ಗರ
ಳಾಂಬುಜದ ಪರಿಮಳಕೆ ಗರುಡನು
ತುಂಬಿಯಾವರೆ ಸೇರುವುದಲೇ ಸಾಕದಂತಿರಲಿ
ಅಂಬುಗಳಿಗೆಡೆದೆರಹ ಕುಡಿ ನೀ
ವೆಂಬ ನುಡಿಗಂಜುವೆನು ಸೈಂಧವ
ನೆಂಬವನ ತೋರಿಸಿರೆಯೆಂದನು ನಗುತ ಕಲಿಪಾರ್ಥ ೪೪

ಎಲೆ ಮರುಳೆ ಮುಂದಿದ್ದ ನಮ್ಮಯ
ವಿಲಗವನು ಪರಿಹರಿಸಿ ಸೈಂಧವ
ನಳಿವುಪಾಯವ ಮಾಡು ಗರುವರು ನುಡಿದು ಕೆಡಿಸುವರೆ
ಅಳವಿಗೊಡು ಕೊಳ್ಳೆಂಬನೆನುತ
ಗ್ಗಳಿಯನೆಚ್ಚನು ನರನ ಮೆಯ್ಯಲಿ
ತಳಿತವಂಬುಗಳೇನನೆಂಬೆನು ವಿಗಡ ವಿಗ್ರಹವ ೪೫

ಅವರ ಪಾದಾಂಬುಜಕೆ ಫಲುಗುಣ
ಕವಿಸಿದನು ಸರಳುಗಳ ಲೆಕ್ಕಿಸ
ದವಗಡಿಸಿ ಗುರುವೆಚ್ಚು ಕಡಿದನು ಗಾಂಡಿವದ ತಿರುವ
ಸವತಳಿಸಿ ಮಾರ್ತಿರುವಿನಲಿ ಸಂ
ತವಿಸಿಕೊಂಡರ್ಜುನನು ದ್ರೋಣನ
ನವ ನಿಶಿತ ಬಾಣೌಘದಲಿ ಹೂಳಿದನು ನಿಮಿಷದಲಿ ೪೬

ಸರಳ ಸವರಿ ಮಹಾಸ್ತ್ರಚಯದಲಿ
ನರನನೆಚ್ಚನು ನಮ್ಮ ಲಾಗಿನ
ಧುರವು ತಾನಿದು ದಿಟ್ಟನಹೆಯೋ ಪಾರ್ಥ ಲೇಸೆನುತ
ಸರಳು ಸುರಿಯಲು ಕೃಷ್ಣ ಪಾರ್ಥನ
ಕೆರಳಿದನು ಫಡ ಮರುಳೆ ಗುಣದಲಿ
ಗುರುವ ಗೆಲುವುದ ಮಾಡು ಗೆಲುವಾ ಕಾದಿ ನೀನೆಂದ ೪೭

ಇಳುಹಿದನು ಗಾಂಡಿವವನುರು ಬ
ತ್ತಳಿಕೆಯನು ಕಳಚಿದನು ರಥದಿಂ
ದಿಳಿದು ಮೈಯಿಕ್ಕಿದನು ದ್ರೋಣನ ಚರಣಕಮಲದಲಿ
ತಿಳಿಯಲೆಮ್ಮೈವರಿಗೆ ಜೀವನ
ದುಳಿವು ನಿನ್ನದು ನಿನ್ನ ಮಕ್ಕಳ
ಸಲಹು ಮೇಣ್ ಕೊಲ್ಲೆನುತ ನುಡಿದನು ವಿನಯದಲಿ ಪಾರ್ಥ ೪೮

ಆ ಶಿಶುತ್ವದಲೆಮ್ಮ ಬೊಪ್ಪನು
ವಾಸವನ ಪುರಕೈದಿದನು ನಿ
ವ್ಯಾಸೆಯಲಿ ಗಾಂಗೇಯರಿಂದವೆ ಹಿರಿದು ಬದುಕಿದೆವು
ಘಾಸಿಯಾದೆವು ಜೂಜಿನಲಿ ವನ
ವಾಸವನು ನೂಕಿದೆವು ಮೈಮರೆ
ದೀಸನೇರಿಸಿ ನುಡಿದ ನುಡಿಗಳ ಕಾಯಬೇಕೆಂದ ೪೯

ನೀವು ಹೂಣೆಗರಾಗಿ ರಿಪುವನು
ಕಾವಡಿತ್ತಲೆ ತೊಲಗುವೆನು ಕರು
ಣಾವಲೋಕನವೆನ್ನ ಮೇಲುಂಟಾದಡಿದಿರಹೆನು
ಆವುದನು ನಮಗೇನು ಗತಿ ತಲೆ
ಗಾವ ಮತವೇ ನಿಮ್ಮ ಚಿತ್ತದೊ
ಳಾವ ಹದನೆನೆ ಮುಗುಳುನಗೆಯಲಿ ದ್ರೋಣನಿಂತೆಂದ ೫೦

ಕಂದನಶ್ವತ್ಥಾಮ ಹುಸಿಯೆನ
ಗಿಂದು ಬೇಹ ಕುಮಾರ ನೀ ನಿ
ನ್ನಿಂದ ತನ್ನಯ ಕೀರ್ತಿ ಮೆರೆವುದು ಮೂರುಲೋಕದಲಿ
ತಂದೆ ನಿನಗಾ ಮುನಿಯಲಾಪೆನೆ
ಸಂದುದಾಡಿದ ಭಾಷೆ ನೀ ಹೋ
ಗೆಂದು ಗುಣದಲಿ ಬೀಳುಕೊಟ್ಟನು ದ್ರೋಣನರ್ಜುನನ ೫೧

ಬಲದೊಳಧಿಕರು ಭಟರೊಳತಿ ವೆ
ಗ್ಗಳರು ಹೆಸರುಳ್ಳವರು ವಿದ್ಯಾ
ಕುಲ ತಪೋಧರ್ಮಾದಿ ಗುಣಿಗಳು ಧೈರ್ಯಸಂಯುತರು
ಹಲಬರಿಹುದುಸುರಿಲ್ಲದೊಡಲಿನ
ಚೆಲುವಿನಂತಿರೆ ನಮ್ಮ ಬಲ ಹರಿ
ಯೊಲವಿನವರಭ್ಯುದಯವನು ಧೃತರಾಷ್ಟ್ರ ಕೇಳೆಂದ ೫೨

## ಹತ್ತನೆಯ ಸಂಧಿ

ಸೂ. ನಡೆದು ಪರಬಲ ಮಧ್ಯದಲಿ ನೀ
ರ್ಗುಡಿಸಿ ಹರಿಯನು ಸಕಲ ಸುಭಟರ
ಮಡಹಿ ಫಲುಗುಣ ಗೆಲಿದನಗ್ಗದ ಕೌರವೇಶ್ವರನ

ನರನು ಕಳುಹಿಸಿಕೊಳಲು ಗುರುವೋ
ಹರವನಪಸವ್ಯದಲಿ ವಂಚಿಸಿ
ಮುರುಹಿದನು ಮುರವೈರಿ ರಥವನು ಮುಂದಣೊಡ್ಡಿಂಗೆ
ಅರರೆ ನರನೋ ನೂಕು ನೂಕರಿ
ಬಿರುದರಾವಡೆ ಪೂತು ಮಝಿ ಎಂ
ದುರವಣಿಸಿದರು ಮುರಿದು ಮಕರವ್ಯೂಹದತಿರಥರು ೧

ನೂಕಿತರಿಚತುರಂಗಬಲ ನೆಲ
ನೋಕರಿಸಿತೋ ಪ್ರಳಯ ಜಲಧಿಯ
ನೂಕುತೆರೆಗಳ ಲಹರಿಯೋ ನಿಲುವಾತನಾರಿದಕೆ
ನಾಕು ಕಡೆಯಲಿ ಕವಿದುದಳವಿಗೆ
ನೂಕುನೂಕಾಯಿತ್ತು ನರನ
ವ್ಯಾಕುಳತೆಯಲಿ ಸವರ ತೊಡಗಿದನಹಿತ ಬಲ ವನವ ೨

ಕುಸುರಿದರಿದವು ಜೋಡು ವಜ್ರದ
ರಸುಮೆಗಳು ಹಾರಿದವು ರಿಪುಗಳ
ಯೆಸೆವ ಸೀಸಕ ಕವಚವನು ಸೀಳಿದನು ತೋಳಿನಲಿ
ನೊಸಲ ಸೀಸಕ ನುಗ್ಗುನುಸಿ ಬಂ
ಧಿಸಿದ ಸರಪಣಿ ಹಿಳಿದವರಿಬಲ
ದೆಸಕ ನಿಂದುದು ಪಾರ್ಥನೆಚ್ಚನು ವೈರಿವೋಹರವ ೩

ಕುಳುವೆಳಗು ಕಿಡಿಗೆದರೆ ಹೊಗರಿನ
ಹೊಳಹು ಗಗನವನುಗುಳೆ ಧಾರೆಯ
ಬಲುಗಿಡಿಗಳುರಿ ಮಸಗೆ ತಳಿಹದ ಬಣ್ಣ ಗಜಗಜಿಸೆ
ಹಿಳುಕು ಬೊಬ್ಬಿಡೆ ಹೊದರಡಸಿ ಕಣ
ಗಿಲೆಯ ಕೋಲುಳಿಯುಂಬು ಕವಲಂ
ಬಲಗಿನಂಬೀಸಾಡಿದವು ಪರಸೈನ್ಯ ಸಾಗರವ ೪

ವ್ರಣದ ಬಲುವೊನಲೊಳಗೆ ತಲೆಗಳು
ಕುಣಿದವರ್ಜುನನಂಬಿನುರುಬೆಗೆ
ಹೆಣನ ದಾವಣಿ ಹಾಸಿದವು ಸೂಸಿದವು ದೊಂಡೆಗಳು
ತಣಿದನಂತಕನಟ್ಟೆಗಳ ರಿಂ
ಗಣದ ನಾಟಕದೊಳಗೆ ಸಮರಾಂ
ಗಣದ ರೌರವ ರೌದ್ರವಾಯಿತು ಕಳನ ಚೌಕದಲಿ ೫

ಏರುಗಳು ಬುದುಬುದಿಸಿ ರಕುತವ
ಕಾರಿ ಕಾಳಿಜ ಖಂಡ ನೆಣ ಜಿಗಿ
ದೋರಿ ಬೆಳುನೊರೆ ಮಸಗಿ ನಸುಬಿಸಿರಕುತ ಹೊನಲಿಡಲು
ಕೌರಿಡಲು ಕಡಿದುಡಿದವೆಲು ಮೊಗ
ದೋರುಗಳ ಪೂರಾಯ ಘಾಯದ
ತಾರುಥಟ್ಟಿನ ಹೆಣನ ಮೆದೆ ಹೇರಾಳ ರಂಜಿಸಿತು ೬

ಎಲೆಲೆ ಪ್ರಳಯದ ರುದ್ರನನು ತಲೆ
ಬಳಿಚಿಬಿಟ್ಟನು ದ್ರೋಣನಕಟಾ
ನೆಲನೊಡೆಯನಾಪ್ತಗರು ಬಗೆದರು ಸ್ವಾಮಿದ್ರೋಹಿಕೆಯ
ಕೊಲುವವನು ಫಲುಗುಣನೊ ದ್ರೋಣನೊ
ಕೊಲೆಗಡಿಗನೋ ಕೊಂದನೋ ಕುರು
ಕುಲತಿಲಕ ನೆರೆ ಪಾಪಿಯೆಂದರು ನಿಖಿಳ ಪರಿವಾರ ೭

ಈತನರ್ಜುನನಿತ್ತಲಿದೆ ಪುರು
ಹೂತಸುತನ ವರೂಥವಿದೆ ಕಪಿ
ಕೇತನನ ಬೊಬ್ಬಾಟವಿದೆ ಫಲುಗುಣನ ಶರಜಾಲ
ಈತ ಪಾರ್ಥನು ಹೊಕ್ಕನಿತ್ತಲು
ಶ್ವೇತಹಯನಿತ್ತಲು ಧನಂಜಯ
ನೀತನೆನೆ ಫಲುಗುಣನ ಮಯವಾಯ್ತಖಿಳ ತಳತಂತ್ರ ೮

ಇದೆ ಕಿರೀಟಿಯ ಬಿಲ್ಲ ಜೇವಡೆ
ಯದೆ ಸಿತಾಶ್ವನ ಸಿಂಹಗರ್ಜನೆ
ಯಿದೆ ಮುರಾರಿಯ ಮನಕೆ ಮುಂಚುವ ಹಯದ ಖುರನಿನದ
ಅದೆ ವಿಜಯನಸ್ತ್ರೌಘವತ್ತಲು
ಕದನ ಕಾಲಾನಲನ ತೀವ್ರತೆ
ಯದೆಯೆನುತ ಹೆದರೆದೆಯ ಸುಭಟರು ಬಿಸುಟರುತ್ಸಹವ ೯

ಉಡಿದು ಕುಪ್ಪಳಿಸಿದವು ರಥ ಕಡಿ
ವಡೆದುದಗ್ಗದ ಸಾರಥಿಗಳೆಡೆ
ಗೆಡೆದುದತಿರಥ ಸಮರಥಾರ್ಧ ಮಹಾರಥಾದಿಗಳು
ಹೊಡೆಗೆಡೆದ ದಂತಿಗಳು ರಕ್ತದ
ಕಡಲೊಳೀಸಾಡಿದವು ತೇಜಿಯ
ಕಡಿಕು ಹರಿದವು ಹೊರೆದನಂತಕನುರುಪರಿಗ್ರಹವ ೧೦

ಸರಳು ಸೇನೆಯ ತಾಗಿ ರಿಪುಗಳ
ಕೊರಳ ಕೊಯ್ಮದ ಮುನ್ನವರಿವೋ
ಹರವ ಹಿಂದಿಕ್ಕುವುದು ರಥವತಿಜವದ ಜೋಕೆಯಲಿ
ಹೊರಳಿದವು ಭಟರಟ್ಟೆ ಶೋಣಿತ
ಶರಧಿ ಮಸಗಿತು ಮಕುಟಬದ್ಧರ
ಹರಣದನಿಲಸಮೂಹ ಬೀಸಿತು ನಭಕೆ ಬಿರುಬಿನಲಿ ೧೧

ಮುರಿವಡೆದು ಚತುರಂಗವರ್ಜುನ
ನುರುಬೆಗಾರದೆ ನಿಲೆ ಶ್ರುತಾಯುಧ
ನಿರಿಯಲುತ್ಸಾಹಿಸಿದನಿದಿರಾದನು ಧನಂಜಯನ
ಮುರಿಯೆಸುತ ಮುಂಕೊಂಡು ಪಾರ್ಥನ
ತರುಬಿದರು ಬಳಿಕೀತನಾತನ
ನೆರೆವಣಿಗೆ ಲೇಸೆನುತ ತುಳುಕಿದನಂಬಿನಂಬುಧಿಯ ೧೨

ನರನ ಬಾಣಾನೀಕವನು ಕ
ಕತ್ತರಿಸಿದನು ನಿಜಗದೆಯಲಾತನ
ಧುರಚಮತ್ಕಾರವನು ನೋಡುತ ಪಾರ್ಥ ಬೆರಗಾಗೆ
ಕೆರಳಿ ವಾಘೆಯ ಕೊಂಡು ರಥವನು
ಧುರಕೆ ದುವ್ವಾಳಿಸಲು ಮುರಹರ
ನುರವಣೆಗೆ ಕನಲುತ ಶ್ರುತಾಯುಧ ಹೊಯ್ದನಚ್ಯುತನ ೧೩

ವರುಣನಿತ್ತುಪದೇಶ ಬರಿದಿ
ದ್ದರನು ಹೊಯ್ದರೆ ತನ್ನ ಕೊಲುವುದು
ನಿರುತವೆನಲದ ಮರೆದು ಹೊಯ್ದನು ಹರಿಯ ಮಸ್ತಕವ
ಕೆರಳಿ ಗದೆ ಮುರಹರನ ಮುಟ್ಟದೆ
ಮರಳಿ ತನ್ನನೆ ಕೊಂದುದೇನ
ಚ್ಚರಿಯೊ ದೈವದ್ರೋಹಿಗೆತ್ತಣ ಲೇಸು ಬಹುದೆಂದ ೧೪

ಆ ಶ್ರುತಾಯುಧ ಮಡಿದನಲ್ಲಿ ಮ
ಹಾಸುರದ ರಣವಾಯ್ತು ಕಾಂಭೋ
ಜೇಶ ಕೈದುಡಂಕಿದನು ಕದನವನಿಂದ್ರಸುತನೊಡನೆ
ಸೂಸಿದನು ಸರಳುಗಳನಾತನ
ಸಾಸವನು ಮನ್ನಿಸುತ ಫಲುಗುಣ
ಬೇಸರದೆ ಕೊಂಡಾಡಿ ಕಾದಿದನೊಂದು ನಿಮಿಷದಲಿ ೧೫

ಸರಳು ಸವೆಯಲು ಶಕ್ತಿಯಲಿ ಕಾ
ತರಿಸಿ ಕವಿದಿಡೆ ಶಕ್ತಿಯನು ಕ
ತ್ತರಿಸಿದನು ಕಾಂಭೋಜಭೂಪನ ಮುಕುಟ ಮಸ್ತಕವ
ಕೊರಳ ತೊಲಗಿಸಿ ಮುಂದೆ ನೂಕುವ
ವರ ಶ್ರುತಾಯುವಿನೊಡನೆ ಘನಸಂ
ಗರಕೆ ತೆಗೆದನು ಕಳುಹಿದನು ಕಾಂಭೋಜನೊಡನವರ ೧೬

ಹರಿಬದಯುತಾಯುವನು ಮಗುಳಿ
ಬ್ಬರು ಸುತರು ನಿಯತಾಯು ಘನಸಂ
ಗರದ ದೀರ್ಘಾಯುವನು ಕಳುಹಿದನಮರಮಂದಿರಕೆ
ಧುರಕೆ ನೂಕಿದವಂಗರಾಜನ
ಕರಿಘಟೆಗಳಂಬಟ್ಟ ಮೊದಲಾ
ದರಿ ಸುಭಟ ಸಂದೋಹ ಮುತ್ತಿತು ಮತ್ತೆ ಫಲುಗುಣನ ೧೭

ಕರಿಘಟೆಯನಂಬಟ್ಟಭೂಪನ
ಶಿರವನೆಚ್ಚನು ಪಾರಸೀಕರ
ತುರಗ ಕವಿಯಲು ಕುಸುರಿದರಿದನು ಕೋಟಿಸಂಖ್ಯೆಗಳ
ಬಿರುದ ಹೊಗಳಿಸಿಕೊಂಡು ದಾತಾ
ರರ ಹಣವ ಸಲೆ ತಿಂದು ಹೆಚ್ಚಿದ
ಹಿರಿಯ ಡೊಳ್ಳಿನ ರಾವುತರ ಕೆಡಹಿದನು ನಿಮಿಷದಲಿ ೧೮

ಇರಿದು ಚಕ್ರವ್ಯೂಹವನು ಕುರಿ
ದರಿಯ ಮಾಡಿ ಕಿರೀಟಿಯದರಿಂ
ಹೊರಗೆ ಹಂಸವ್ಯೂಹದಲಿ ಕೆಣಕಿದನು ಕಾಳೆಗವ
ತುರುಗಿದವು ತೂರಂಬು ತಲೆಗಳ
ತರಿದು ಬಿಸುಟವು ಘಮ್ಮು ಘಲಿಲೆನೆ
ನಿರಿನಿಳಿಲುಗರೆದೊರಲಿದವು ಫಲುಗುಣನ ಶರಜಾಲ ೧೯

ಬಿಲುರವದ ಮೊಳಗಿನಲಿ ಕೃಷ್ಣನ
ಫಲುಗುಣನ ಮೈಕಾಂತಿ ಮೇಘಾ
ವಳಿಗಳಲಿ ಹೊಂಗರಿಯ ಗಾಳಿಯ ಸರಳಸೋನೆಯಲಿ
ನಿಲುವ ಹಂಸವ್ಯೂಹವೆಲ್ಲಿಯ
ದೆಲೆ ಮಹೀಪತಿ ಕೇಳು ನಿನ್ನ
ಗ್ಗಳೆಯ ಸುಭಟರ ವಿಧಿಯನೆಂದನು ಸಂಜಯನು ನಗುತ ೨೦

ಅಳಿದುದೈನೂರರಸುಗಳು ಮು
ಮ್ಮುಳಿತವಾಯ್ತೈವತ್ತು ಸಾವಿರ
ಬಲುಗುದುರೆ ಸುಗ್ಗಾದುದೊಂಬೈನೂರು ಭದ್ರಗಜ
ಅಳಿದುದಕೆ ಕೊಲೆಕೊತ್ತುವಡೆದ
ಗ್ಗಳ ಪದಾತಿಗೆ ಗಣನೆಯೆಲ್ಲೀ
ಬಲದ ಮೈವಶವವರ ಕೈವಶವೇನು ಹೊಸತೆಂದ ೨೧

ಕೆಡಹಿದನು ವಿಂದಾನುವಿಂದರ
ನಡಗುದರಿಯಾಯ್ತಖಿಳಬಲದು
ಗ್ಗಡದ ವೀರರು ಕಾದಿ ಬಿದ್ದುದು ಕಾಯಮಾರಿಗಳು
ನಡುಹಗಲು ಪರಿಯಂತ ಕಾಳೆಗ
ಬಿಡದೆ ಬಲುಹಾಯ್ತಖಿಳ ವೇಗದ
ಕಡುಗುದುರೆ ಬಳಲಿದವು ಬಗೆಯದೆ ಹರಿಯ ಗರ್ಜನೆಯ ೨೨

ಭಾರಿಸಿತು ಮೈ ಮುಂಪ್ಟಿಯಲಿ ಲುಳಿ
ಸಾರತರ ಲಂಬಿಸಿತು ತಾಗಿದ
ಕೂರಲಗು ಗರಿದೋರಿದವು ನಿಜ ಹಯದ ಮೈಗಳಲಿ
ಹಾರಿದರ್ಜುನನರಿದನಾ ದೈ
ತ್ಯಾರಿಗೆಂದನು ದೇವ ಬಿನ್ನಹ
ವಾರುವಂಗಳ ವಹಿಲತೆಯ ಚಿತ್ತೈಸಿದಿರೆಯೆಂದ ೨೩

ಕಡಿಯಣವ ಕಾರಿದವು ಕಂದವ
ನಡಿಗಡಿಗೆ ಹಾಯ್ಕಿದವು ಸುತ್ತಿದ
ಕುಡಿನೊರೆಯ ಕಟವಾಯ ಲೋಳೆಯ ನಿಮಿರ್ದ ಮೈಲುಳಿಯ
ತಡಿನೆನೆದ ಬಲುಬೆಮರ ಘುಡುಘುಡು
ಘುಡಿಪ ನಾಸಾಶ್ವಾಸ ಲಹರಿಯ
ಕಡುಮನದ ರಥತುರಗ ಮಿಕ್ಕವು ಸರಳಸೂರಿಯಲಿ ೨೪

ಗಮನ ತಟ್ಟೆಯವಾಯ್ತು ವೇಗ
ಭ್ರಮಣ ಜಡವಾಯ್ತಡಿಗಡಿಗೆ ನಿ
ಗ್ಗಮದೊಳಗೆ ರಥವದ್ದುದರಿ ಭಾರಣೆಯ ಭರವಸದ
ಸಮತೆ ನಿಂದುದು ಸಾಹಸೀಕರು
ಭ್ರಮಿಸುತಿದೆ ಭಟಜಲಧಿ ತುರಗ
ಶ್ರಮವ ನಾವ್ ಪರಿಹರಿಸಿದಲ್ಲದೆ ಕಾದಲರಿದೆಂದ ೨೫

ಉಂಟು ಹೊಲ್ಲೆಹವಲ್ಲ ರಣದೊಳ
ಗೆಂಟುಮಡಿ ಬಳಲಿದವು ತೇಜಿಗ
ಳೆಂಟುವರೆ ನೀರಿಲ್ಲ ಮುರಿದರೆ ಬೆನ್ನ ಬಿಡರಿವರು
ಗೆಂಟರಲಿ ನಮ್ಮೊಡ್ಡ ಸುತ್ತಲು
ವೆಂಟಣಿಸಿ ರಿಪುಸೇನೆಯಿದೆ ಏ
ನುಂಟು ಮಾಡುವುಪಾಯವೆಂದನು ನಗುತ ಮುರವೈರಿ ೨೬

ದೇವ ಕಾಳೆಗ ಬಲುಹು ಬಿಸಿಲಿನ
ಡಾವರಕೆ ರಥತುರಗವತಿ ನಿ
ರ್ಜೀವಿಯಾದವು ಹರಿಯ ಗಮನದ ಹದನನರಿಯೆನಲು
ಆ ವಿನೋದಿಗಳರಸ ಶರಣರ
ಕಾವ ಭರದಲಿ ದನುಜಕುಲ ವಿ
ದ್ರಾವಣನು ನಸುನಗುತ ಬೋಳೈಸಿದನು ತೇಜಿಗಳ ೨೭

ದೇವ ವಾಘೆಯ ಹಿಡಿ ತುರಂಗಕೆ
ಜೀವನವನೀ ಕಳನೊಳಗೆ ಸಂ
ಭಾವಿಸುವೆ ನೋಡೆನುತ ಧುಮ್ಮಿಕ್ಕಿದನು ಧಾರುಣಿಗೆ
ತೀವಿ ತೆಗೆದನು ವಜ್ರಶರದಲಿ
ಡಾವರಿಸಿದನು ಕಳನೊಳುದಕದ
ಸೈವಳೆಯ ಸೆಲೆಯರಿದು ಚೌಕಕೆ ಸೀಳಿದನು ನೆಲನ ೨೮

ನೋಡಿ ನರನುದ್ದಂಡತನವನು
ತೋಡುತೈದನೆ ತುರಗ ಲೀಲೆಗೆ
ಖೇಡಕುಳಿಯನು ಶೌರ್ಯಗರ್ವಿತನೈ ಶಿವಾ ಎನುತ
ಕೂಡೆ ಮಸಗಿತು ರಿಪುಚತುರ್ಬಲ
ಜೋಡು ಮಾಡಿತು ಕಡಹದಮರರು
ಹೂಡಿದದ್ರಿಯನಂಬುಧಿಯ ತೆರೆಮಾಲೆ ಕವಿದಂತೆ ೨೯

ಒದರಿ ಮೇಲಿಕ್ಕಿದರು ನಿಸ್ಸಾ
ಳದ ನಿರಂತರ ಸೂಳುವೊಯ್ಲಿನ
ಹೊದರುಗಳ ಹೊಸ ಮಸೆಯಡಾಯ್ದದ ಸಾಲ ಸಂದಣಿಯ
ಸದರವೀ ಹೊತ್ತೆನುತ ಗೆಲವಿನ
ಕುದುಕುಳಿಗಳುರವಣಿಸೆ ಕಾಣುತ
ಗದಗದಿಸಿ ಮುರವೈರಿ ಚಾಚಿದನರ್ಜುನಗೆ ರಥವ ೩೦

ಆಲಿಕಲುಗಳ ಕಡಿವಡುಕ್ಕಿನ
ಚೀಲಣದ ಹಂಗೇಕೆ ನಿಮ್ಮಡಿ
ಮೇಲುನೋಟವ ನೋಡೆ ರಥ ಪರಿಯಂತ ಕಾಳೆಗವೆ
ಹೋಳುಗಳೆವೆನು ಹುಗ್ಗಿಗರನೆನು
ತಾಳೊಳಗೆ ಬೆರಸಿದನು ಬರಿಗಾ
ಲಾಳುತನದಲಿ ಕಾದಿ ಕೊಂದನು ಕೋಟಿ ರಿಪುಭಟರ ೩೧

ವರುಣ ಬಾಣದಲುಕವನು ತ
ತ್ಸರಸಿಯಲಿ ತುಂಬಿದನು ತಮಗವ
ಸರವಿದೆಂದೌಕುವ ಮಹೀಶರ ಮತ್ತೆ ಬರಿಕೈದು
ಕರಿ ರಥಾಶ್ವಪದಾತಿಯನು ಸಂ
ಗರದ ಮಧ್ಯದೊಳೊಬ್ಬನೇ ಸಂ
ಹರಿಸಿದನು ಶತಗುಣವನೊಂದೇ ಲೋಭ ಗೆಲುವಂತೆ ೩೨

ಕೊಳನ ತಡಿಯಲಿ ಹೂಡಿದನು ಶರ
ವಳಯದಲಿ ಚಪ್ಪರವನಾತನ
ಬಲುಹ ಕಂಡಸುರಾರಿ ಮೆಚ್ಚಿದನಡಿಗಡಿಗೆ ಹೊಗಳಿ
ಕಳಚಿ ನೊಗನನು ತೆಗೆದು ಕಬ್ಬಿಯ
ನಿಳುಹಿ ಪಡಿವಾಘೆಗಳ ಸರಿದನು
ಕೊಳಿಸಿ ಪಿಡಿಯಲು ಪಾಡಿಗೈದವು ಮರಳಿದೆಡಬಲಕೆ ೩೩

ಮುರುಹಿ ನಿಂದವು ಕೊಡಹಿದವು ಕೇ
ಸರವನಧ್ವಶ್ರಮದ ಥಗೆ ಪರಿ
ಹರಿಸೆ ನೀರೊಳು ಹೊಗಿಸಿದನು ಹರಿ ಹಯ ಚತುಷ್ಟಯವ
ಸರಸಿಯಲಿ ಮೊಗವಿಟ್ಟು ಮೊಗೆದವು
ವರ ಜಲವನೆರಡಳ್ಳೆ ಹಿಗ್ಗಲು
ಮುರುಹಿದವು ಮುಖವನು ಮುರಾಂತಕ ತಡಿಯನಡರಿಸಿದ ೩೪

ಕರತಳದಿ ಮೈದಡವಿ ಗಾಯದ
ಸರಳ ಕಿತ್ತೌಷಧಿಯ ಲೇಪವ
ನೊರಸಿದನು ಕರುಣದಲಿ ಚಪ್ಪರಿಸಿದನು ಕಂಧರವ
ಹರುಷ ಮಿಗೆ ಕೊರಳೆತ್ತಿ ನಯನವ
ತಿರುಹಿ ದೇವನ ನೋಡುತಿರ್ದುವು
ತುರಗ ನಾಲ್ಕರ ಪುಣ್ಯ ಸನಕಾದಿಗಳಿಗಿಲ್ಲೆಂದ ೩೫

ಮೊಗಕೆ ಭಾಣವ ಕಟ್ಟಿ ನೆಳಲಲಿ
ಬಿಗಿದು ಫಲುಗುಣ ಸಹಿತ ಕೊಳನನು
ನಗುತ ಹೊಕ್ಕನು ನೋಡುತಿದ್ದುದು ಕೂಡೆ ಕುರುಸೇನೆ
ಬಿಗಿದ ಕತ್ತಲೆ ದೂರದಲಿ ದೀ
ವಿಗೆಯ ಸುತ್ತಲು ಕಟ್ಟಿ ನಿಂದವೊ
ಲಗಣಿತ ಪ್ರತಿಸುಭಟರಿದ್ದುದು ನರನ ಬಳಸಿನಲಿ ೩೬

ಚರಣ ವದನವ ತೊಳೆದು ನಿರ್ಮಳ
ವರಜಲವನೀಂಟಿದರು ನಿರುಪಮ
ಪರಮ ಕರುಣಾರ್ಣವನು ಮೈದುನಸಹಿತ ಸರಸಿಯಲಿ
ಪರಿಹೃತಶ್ರಮನಾಗಿ ಹರುಷೋ
ತ್ಕರುಷದಲಿ ಹರಿ ಕಳೆದುಕೊಂಡನು
ನರಗೆ ಕೊಟ್ಟನು ಹೋಳಿಸಿದ ಕರ್ಪುರದ ವೀಳೆಯವ ೩೭

ರಾಗ ಮಿಗೆ ಬ್ರಹ್ಮಾಂಡಕೋಟಿಯ
ನಾಗುಮಾಡುವನಲಸಿದರೆ ಮುನಿ
ದಾಗ ನುಂಗುವುದೊಂದು ಲೀಲೆ ಮನುಷ್ಯದೇಹದಲಿ
ಲೋಗರೆಂದುದನೈದೆ ಮಾಡುವ
ನಾಗಿ ಜನಿಸಿಹುದೊಂದು ಲೀಲಾ
ಸಾಗರನು ಲಕ್ಷ್ಮೀಪತಿಗೆ ನಮೊ ಎಂದುದಮರಗಣ ೩೮

ಸೆಳೆದು ಪಡಿವಾಘೆಯಲಿ ತುರಗಾ
ವಳಿಯನನುಕೊಳಿಸಿದನು ಹರಿ ಕೈ
ಚಳಕದಲಿ ತುಡುಕಿದನು ಫಲುಗುಣನತುಳ ಗಾಂಡಿವವ
ಉಲಿದುದಾಹವ ಸೇನೆ ರಿಪುಮುಂ
ಡಳಿಕರೋರಣಗೆಡಲು ರಣಮುಂ
ಡಲದ ಪದ್ಮವ್ಯೂಹದಲಿ ಕೆಣಕಿದನು ಕಾಳೆಗವ ೩೯

ಇದು ಕೃತಾಂತನ ಸೀಮೆಗಳವ
ಟ್ಟುದು ಸುಯೋಧನನೃಪತಿ ವಿಗತಾ
ಭ್ಯುದಯನಾದನೆನುತ್ತ ಕರ್ಣಾದಿಗಳು ಕಳವಳಿಸೆ
ಹೆದರೆದೆಯ ಹೇರಾಳ ವೀರರ
ಕದನದನುವನು ಕಂಡು ಕಡುಗೋ
ಪದಲಿ ಕೌರವರಾಯ ಸಮರೋದ್ಯೋಗಪರನಾದ ೪೦

ತಳಿತವಮಳಚ್ಛತ್ರ ಚಾಮರ
ವಲುಗಿದವು ನವಹೇಮ ದಂಡದ
ಹಳವಿಗೆಯ ತುದಿವಲಗೆಯಲಿ ಹಾಯ್ಕಿದರು ಪನ್ನಗನ
ಮೊಳಗಿದವು ನಿಸ್ಸಾಳ ಬಿರುದಾ
ವಳಿಯ ಕಹಳೆಗಳೂದಿದವು ನೆಲ
ಮೊಳಗಿದಂತಿರೆ ಬಿರುದ ಹೊಗಳಿತು ಭಟ್ಟ ಸಂದೋಹ ೪೧

ತಳಿತುದರನೆಲೆ ರಾಯ ಘಟ್ಟಿನ
ಕಳವಳಿಗರುರವಣಿಸಿದರು ಮುರಿ
ದೊಳಸರಿವ ಮನ್ನೆಯರ ಹೊಯ್ದರು ಮುಂದೆ ಕಂಬಿಯಲಿ
ಉಲಿವ ಪಾಠಕರೋದುಗಳ ಕಳ
ಕಳಿಕೆಯಲಿ ನೃಪ ಬಂದು ಗುರುವಿನ
ದಳವ ಹೊಕ್ಕನು ನಮಿಸಿ ಬಿನ್ನಹ ಮಾಡಿದನು ನಗುತ ೪೨

ನರನ ಬಲುಗೈತನವನೀ ಮೋ
ಹರದ ಹೆಂಗುಸುತನವ ನೀವವ
ಧರಿಸಿದಿರೆ ಜಗಭಂಡರಿವರಿಗೆ ಬಿರುದುಗಳೆ
ತುರಗ ನೀರಡಸಿದರೆ ರಣದಲಿ
ಸರಸಿಯನು ತೋಡಿದನು ನಮ್ಮನು
ಸರಕು ಮಾಡನು ಕಂಡು ಬಲ್ಲಿರೆ ಮುನ್ನ ನೀವೆಂದ ೪೩

ಅರಸ ಮೃತಸಂಜೀವಿನಿಯ ಬಲು
ಹಿರಲು ಬಹಳವ್ಯಾಧಿ ಮಾಡುವ
ದುರುಳತನ ತಾನೇನು ನರರಿಗೆ ದಿಟ ವಿಚಾರಿಸಲು
ಪರಮ ಪುರುಷೋತ್ತಮ ಮುಕುಂದನ
ಕರುಣಕವಚದ ಬಲದಿನಮರಾ
ಸುರರ ಬಗೆಯನು ಪಾರ್ಥನಿದು ನಮ್ಮಾರ ಹವಣೆಂದ ೪೪

ಹಗೆಯ ಪತಿಕರಿಸುವರೆ ನಾಲಗೆ
ನಿಗುರುವುದು ನೂರು ಮಡಿಯಲಿ ಕಾ
ಳಗಕೆ ತನ್ನನು ಬಿಟ್ಟು ನೋಡಿರೆ ನುಡಿದು ಫಲವೇನು
ತೆಗೆಸುವೆನು ಫಲುಗುಣನನೆನೆ ನಸು
ನಗುತ ಗುರು ಕೌರವ ಮಹೀಶನ
ಮೊಗದ ಸುಮ್ಮಾನಕ್ಕೆ ಹರುಷಿತನಾಗುತಿಂತೆಂದ ೪೫

ಆದಡೆಲೆ ಭೂಪಾಲ ನರನೊಳು
ಕಾದಲೀಶಂಗರಿದು ನೀನಿದಿ
ರಾದಡಪಜಯವಾಗದಿದ್ದರೆ ನಮ್ಮ ಪುಣ್ಯವದು
ಕಾದಲಾಪರೆ ಮಗನೆ ಪರರಿಗೆ
ಭೇದಿಸುವರಳವಲ್ಲ ಕವಚವ
ನಾದಿಯದು ಕೊಳ್ಳೆಂದು ಕೊಟ್ಟನು ಗವಸಣಿಗೆದೆಗೆದು ೪೬

ಇದು ಮಹಾದೇವರದು ವೃತ್ರನ
ಕದನದಲಿ ಕೈಸಾರ್ದುದೀಶಂ
ಗಿದು ಸುರೇಂದ್ರಂಗಾ ಸುರೇಶ್ವರನಾಂಗಿರಂಗಿತ್ತ
ಇದು ಬೃಹಸ್ಪತಿಗಾಂಗಿರನಿನಾ
ದುದು ಭರದ್ವಾಜಂಗೆ ಬಳಿಕಾ
ದುದು ಭರದ್ವಾಜಾಖ್ಯನಿತ್ತನು ತನಗೆ ಕರುಣದಲಿ ೪೭

ನರ ಸುರಾಸುರರಿದನು ಭೇದಿಸ
ಲರಿದು ಕೈಕೊಳ್ಳೆಂದು ಮಂತ್ರಿಸಿ
ಬರಿಗೆ ಕವಚವ ಕಟ್ಟಿದನು ಕೌರವ ಮಹೀಪತಿಗೆ
ಗುರುವಿನಂಘ್ರಿಯೊಳೆರಗಿ ಮರಳಿದು
ಧುರವ ಹೊಕ್ಕನು ಶಕ್ರತನುಜನ
ಕರೆದು ಮೂದಲಿಸಿದನು ತುಳುಕಿದನಂಬಿನಂಬುಧಿಯ ೪೮

ಎಲವೊ ಕೌರವ ಹಿಂದೆ ವಂಚಿಸಿ
ಕಳವಿನಲಿ ಜೂಜಾಡಿ ರಾಜ್ಯವ
ಗೆಲಿದ ಗರ್ವವನುಗುಳು ಸಮರದ್ಯೂತಕೇಳಿಯಲಿ
ಹಲಗೆಯೈ ಕುರುಭೂಮಿ ಕೌರವ
ಕುಲದ ತಲೆ ಸಾರಿಗಳು ಸೆರೆಯಲಿ
ಗೆಲಲು ಬಂದೆನು ಕೊಳ್ಳು ಹಾಸಂಗಿಗಳನೆನುತೆಚ್ಚ ೪೯

ಎಸಲು ಪಾರ್ಥನ ಬಾಣವನು ಖಂ
ಡಿಸಿದನೆಲವೋ ತಮ್ಮ ನಿಮಗಿಂ
ದಸುರರಿಪು ತೆತ್ತಿಗನಲೇ ತುಡುಕಲಿ ಸುದರ್ಶನವ
ನುಸಿಗಳೌಕಿದರಕಟ ದಿಗ್ಗಜ
ಘುಸಣಿಗೊಂಬುದೆ ನಿನ್ನ ಬಾಣ
ಪ್ರಸರಕಾನಂಜುವೆನೆ ಫಡ ಹೋಗೆನುತ ತೆಗೆದೆಚ್ಚ ೫೦

ಕಾಲುವೊಳೆಗೇಕವನಿಪತಿ ಹರು
ಗೋಲು ನೀವಿನ್ನರಿಯದಿದ್ದರೆ
ಹೇಳೆವಾತ್ಮಸ್ತುತಿಯ ಮಾಡೆವು ಸಾಕದಂತಿರಲಿ
ಮೇಲುಗವಚವ ನಂಬಿ ನಮ್ಮೊಳು
ಕಾಳೆಗವ ನೀ ಬಯಸಿ ಬಂದೆ ನೃ
ಪಾಲ ಜೋಡಿನ ಬಲದಿ ನಮ್ಮನು ಜಯಿಸುವೈ ಎಂದ ೫೧

ಆರ ದೀಪನ ಚೂರ್ಣ ಬಲದಲಿ
ವೀರರುದ್ರನು ಜಗವ ನುಂಗುವ
ನೋರೆಗೆಡೆಯದಿರಂಬ ಸುರಿ ಸುರಿ ಹೊಳ್ಳುನುಡಿಯೇಕೆ
ಸಾರು ನೀ ಬರಹೇಳು ಕೀಚಕ
ವೈರಿಯನು ಪಡಿಸಣವ ನೋಡಲಿ
ಭೂರಿಬಾಣದ ಸವಿಯನೆಂದನು ಕೌರವರರಾಯ ೫೨

ಗರುಡನಾರೋಗಣೆಯ ಬೋನಕೆ
ಮರಳಿ ಪಡಿಸಣವೇಕೆ ಮಾತಿನ
ಮುರಿವುಗಳು ಗೆಲ್ಲವಲೆ ನೀ ನೆರೆ ನೋಡು ಕೈಗುಣವ
ಅರಸ ನಿನ್ನಯ ಕೊರಳ ಕಡಿತಕೆ
ಸರಳು ಕುದಿತದಲೆನಗೆ ತನಗೆಂ
ದೊರಲುತಿವೆ ನಿನಗಿಂದಿನಲಿ ಸಾವಿಲ್ಲ ಹೋಗೆಂದ ೫೩

ಎನುತ ಕೂರಂಬಿನಲಿ ದುರ್ಯೋ
ಧನನನೆಚ್ಚನು ವಜ್ರ ಕವಚದ
ಲನಿತು ಶರವಕ್ಕಾಡಿದವು ಸೊಪ್ಪಾದವೇಣುಗಳು
ಅನಲ ಗಿರಿ ವಜ್ರಾಸ್ತ್ರದಲಿ ಫಲು
ಗುಣನು ಬೊಬ್ಬಿರಿದೆಚ್ಚನೆಚ್ಚಂ
ಬನಿತು ಮುರಿದವು ಮಸೆಯ ಕಾಣದು ಮೈ ಮಹೀಪತಿಯ ೫೪

ಹರಿಯನೆಚ್ಚನು ಫಲುಗುಣನ ತನು
ಬಿರಿಯೆ ಬಿಗಿದನು ಶರವನಾ ರಥ
ತುರಗದೊಡಲಲಿ ಹೂಳಿದನು ಹೇರಾಳದಂಬುಗಳ
ವರ ಕಪೀಂದ್ರನ ಘಾಸಿ ಮಾಡಿದ
ನುರವಣಿಸಿ ಕವಿದೆಸುವ ಭೂಪನ
ಭರದ ಬಲುವೇಗಾಯ್ಲತನವನು ಹೊಗಳಿದನು ಪಾರ್ಥ ೫೫

ಕವಚವಿದೆ ಸರ್ವಾಂಗದಲಿ ನೃಪ
ನವಯವಕೆ ಕೇಡಿಲ್ಲ ಕೆಲಬಲ
ದವರು ನೆರೆ ಕೈಮಾಡುತಿದೆ ಕರ್ಣಾದಿನಾಯಕರು
ರವಿಯ ಕೈಗಳಸಸ್ತಗಿರಿಯಾ
ನುವವೊಲಿದೆ ಮುನಿದಿವನ ಕೊಂದರೆ
ಪವನಜನ ಕೊಂದವನು ಹದನೇನೆಂದು ಚಿಂತಿಸಿದ ೫೬

ಎನುತ ಮೂರಂಬಿನಲಿ ರಾಯನ
ಧನುವ ಖಂಡಿಸಿ ಮತ್ತೆ ಕೂರಂ
ಬಿನಲಿ ನೃಪನಂಗೈಯನೆಚ್ಚನು ಬಾಣ ಥಟ್ಟುಗಿಯೆ
ಜನಪ ನೊಂದನು ಬಳಿಕ ಕೃತವ
ರ್ಮನು ಕೃಪಾಚಾರಿಯನು ನಿನ್ನಯ
ತನುಜನನು ತೊಲಗಿಸಿದರೈ ಧೃತರಾಷ್ಟ್ರ ಕೇಳೆಂದ ೫೭

ರಾಯ ನೊಂದನು ಹರಿಬಕಿಲ್ಲದ
ನಾಯಕರ ಸುಡು ಹೊಟ್ಟೆ ಹೊರೆಕರ
ವಾಯಕಿವದಿರ ಸಂತವಿಟ್ಟನು ಸ್ವಾಮಿಕಂಟಕರ
ಆಯುಧವ ಹಿಡಿದಕಟ ರಣದಲಿ
ಸಾಯಲಮ್ಮರು ಬಿರುದ ಹೊಗಳುವ
ಬಾಯ ನೋಡೆನುತಿದ್ದುದಾ ದುಶ್ಶಾಸನಾದಿಗಳು ೫೮

ಕದಡಿತೀ ಬಲಜಲಧಿ ಸುಭಟರು
ಹೊದರುಗಟ್ಟಿತು ಹೊಳೆವಡಾಯುಧ
ಹೊದಕೆಗಳ ಸತ್ತಿಗೆಯ ಸೂಸುವ ಚಮರ ಸೀಗುರಿಯ
ತುದಿವೆರಳ ಕಿರುದನಿಯ ಕೆಂಪಿನ
ಕದಡುಗಂಗಳ ಕುಣಿವ ಮೀಸೆಯ
ಕದನಗಲಿಗಳು ಕವಿದರೀ ಕರ್ಣಾದಿ ನಾಯಕರು ೫೯

ಮುತ್ತಿದರು ಹಿಂದೆಡಬಲನ ಮುಂ
ದೆತ್ತಲೀಕ್ಷಿಸಲತ್ತ ರಾಯನ
ತೆತ್ತಿಗರ ಕೂರಂಬು ಕವಿದವು ನರನ ಹಯರಥವ
ಎತ್ತ ನೋಡುವಡತ್ತ ಬಲ ದು
ರ್ವೃತ್ತ ಸುಭಟರ ಬಲಶರೌಘದ
ಕತ್ತಲೆಗೆ ಹದನೇನೆನುತ ದೈತ್ಯಾರಿ ಚಿಂತಿಸಿದ ೬೦

ಅರಿಭಟರು ಕಟ್ಟಳವಿಯಲಿ ಮು
ಕ್ಕುರುಕೆ ಮುರರಿಪು ಪಾಂಚಜನ್ಯವ
ನಿರದೆ ಮೊಳಗಿದ ಹನುಮ ಗರ್ಜಿಸಿದನು ಪತಾಕೆಯಲಿ
ಸುರರ ದೈತ್ಯರ ಸಮರಸಿರಿ ವಿ
ಸ್ತರಿಸಿತಿತ್ತಲು ದ್ರೋಣನತ್ತಲು
ತೆರಳಿಚಿದನೈ ಪಾಂಡುಪುತ್ರರ ಸೈನ್ಯ ಸಾಗರವ ೬೧

ನಕುಲನನು ಮುಸೆಗಾಣಿಸಿಯೆ ಸಾ
ತ್ಯಕಿಯ ವಿರಥನ ಮಾಡಿ ಪಾಂಚಾ
ಲಕರನೋಡಿಸಿ ಮತ್ಸ್ಯ ಕೇಕೆಯ ಬಲವ ಬರಿಕೈದು
ಸಕಲ ಸನ್ನಾಹದಲಿ ಚೈದ್ಯ
ಪ್ರಕರವನು ತವೆ ಕೊಂದು ಭೂಪಾ
ಲಕನ ಬೆಂಬತ್ತಿದನು ಭೀಮ ಘಟೋತ್ಕಚರ ಗೆಲಿದ ೬೨

ದಾನವರು ಬಲುಗೈಗಳಪ್ರತಿ
ಮಾನರಹುದಾದಡೆಯು ಸಮರದೊ
ಳಾನಲಸದಳವಸುರರಿಗೆ ಸುರರಿಗೆ ಜಯಾಭ್ಯುದಯ
ಏನ ಹೇಳುವುದಲ್ಲಿ ಸುಭಟ ನಿ
ಧಾನರಿದ್ದುದು ಪಾಂಡವರೊಳವ
ಧಾನಗುಂದನು ರಾಯ ಗದುಗಿನ ವೀರನಾರಯಣ ೬೩

## ಹನ್ನೊಂದನೆಯ ಸಂಧಿ

ಸೂ. ವಿಜಯ ವಿಗ್ರಹ ವೀರನಾ ಧ
ರ್ಮಜನ ನೇಮದಲಂದು ವೈರಿ
ವ್ರಜವ ತೊತ್ತಳದುಳಿದು ಸಾತ್ಯಕಿ ಕಂಡನರ್ಜುನನ

ಬವರದೊಳು ಹರಿಪಾಂಚಜನ್ಯದ
ರವ ಭಯಂಕರವಾಯ್ತು ಬಹಳಾ
ಹವದೊಳಗೆ ಪಾರ್ಥಂಗೆ ಬಿದ್ದುದು ಭಟರ ಭಾರಾಂಕ
ಅವನಿ ಬಿರಿದುದು ಧರ್ಮಪುತ್ರನ
ಕಿವಿಗೆ ಸೆಲ್ಲೆಹವಾಯ್ತು ರಣರೌ
ರವದೊಳರ್ಜುನದೇವನಳಿಯದೆ ಮಾಣನಕಟೆಂದ ೧

ತಂದೆ ಸಾತ್ಯಕಿ ಹೋಗು ಫಲುಗುಣ
ನೊಂದನೋ ಜೀವಿಸಿದನೋ ಸುರ
ವೃಂದವನು ಸೇರಿದನೊ ಮೇಣೆಂಬೀ ನಿಧಾನವನು
ತಂದು ನೀನೆನಗರುಹು ಪಾರ್ಥನ
ಹಿಂದೆ ಬದುಕಿಲ್ಲವನಿಯಲಿ ತನ
ಗೆಂದು ದುಗುಡವ ಹಿಡಿದು ಸಾತ್ಯಕಿಗರಸ ನೇಮಿಸಿದ ೨

ಮೊಲನ ಬಲೆಯಲಿ ವನದ ಮದಕರಿ
ಸಿಲುಕಲರಿವುದೆ ಶಿವಶಿವಾ ನರ
ನಳವನರಿಯಾ ಕೃಷ್ಣನಾರೆಂದರಸ ಮರೆದೆಯಲಾ
ಕೊಳಗುಳವನಾರೈದು ಬಾಯೆನೆ
ನಿಲುವುದನುಚಿತವರ್ಜುನನ ನೆಲೆ
ಗೊಳಿಸಿ ಬಹೆನೆಂದಾಯುಧವ ಕೊಂಡಡರಿದನು ರಥವ ೩

ದಾರುಕನು ನಿಜ ರಥವನೆಸಗಲು
ದಾರ ಸಾತ್ಯಕಿ ಭೀಮಸೇನಗೆ
ಧಾರುಣೀಶನ ಕೊಟ್ಟು ಭಾರಿಯ ಭಟರ ಗಡಣದಲಿ
ಭಾರಣೆಯಲೈತಪ್ಪ ನಿಜ ಪರಿ
ವಾರವನು ಬೋಳೈಸಿ ನಿಸ್ಸಾ
ಳಾರವದ ಘಟ್ಟಣೆಯಲಿದಿರಾದನು ರಿಪುವ್ರಜಕೆ ೪

ತಳಿತ ಬೆಳಗೊಡೆಗಳಲಿ ದೆಸೆ ಕ
ತ್ತಲಿಸೆ ಕರಿ ರಥ ತುರಗ ಚರಣೋ
ಚ್ಚಲಿತ ಧೂಳಿಯ ದಂಡು ನಡೆದುದು ಸೂರ್ಯಮಂಡಲಕೆ
ಮೊಳಗಿದವು ಬರಸಿಡಿಲ ಕಣ್ಣಿಯ
ಕಳಚಿದಂತಿರೆ ವಾದ್ಯಚಯವರಿ
ಬಲಕೆ ನಡೆದನು ವೀರಸಾತ್ಯಕಿ ಸಕಲ ಬಲ ಸಹಿತ ೫

ಬರಬರಲು ಮುಂದುಭಯರಾಯರ
ಗರುಡಿಯಧಿಪತಿ ಕಂಡನೆಲೆ ಸಂ
ಗರ ಸಹಾಯಸಮಗ್ರ ಸಾತ್ಯಕಿ ಗಮನವಾವೆಡೆಗೆ
ಧುರದ ಬಡವರನೆಮ್ಮ ವಂದಿಸಿ
ಮರಳು ಮೇಣ್ ನೀ ಸರಳ ಮೊನೆಯಲಿ
ಪರಿಹರಿಸಿ ಹೋಗೆನುತ ಗುರು ಚಾಚಿದನು ನಿಜರಥವ ೬

ನಿಂದು ಕಾದುವ ಮನವೊ ಮೇಣು ಪು
ರಂದರಾತ್ಮಜನಂತೆ ಭಯದಲಿ
ವಂದಿಸಿಯೆ ಬೀಳ್ಕೊಂಬ ಮನವೋ ಹೇಳು ನಿಶ್ಚಯವ
ಎಂದಡಾಲಿಸಿ ನಗುತ ಸಾತ್ಯಕಿ
ಯೆಂದನವಧರಿಸೈ ಗುರೋರಪಿ
ಯೆಂದು ನೀ ಗುರುವೆಂದು ತಲೆವಾಗಿದನು ವಿನಯದಲಿ ೭

ಇತ್ತಲೀತನ ಕೂಡೆ ಕಾದುವ
ಡತ್ತಲರ್ಜುನನಿರವನರಿಯೆನು
ಚಿತ್ತದಲಿ ಖತಿಗೊಂಬನವನೀಪಾಲನೆಂದೆನುತ
ಮತ್ತೆ ಸಾತ್ಯಕಿ ಬಿಲ್ಲನಿಳುಹಿದ
ನುತ್ತಮಾಂಗಕೆ ಕರಯುಗವ ಚಾ
ಚುತ್ತ ಬಿನ್ನೈಸಿದ ಧನುರ್ಧರ ಫಾಲನೇತ್ರಂಗೆ ೮

ಕಳುಹಿದನು ಯಮಸೂನು ಪಾರ್ಥನ
ಬಳಿಗೆ ನೀ ಕೃಪೆ ಮಾಡಿ ತನ್ನನು
ಕಳುಹಬೇಹುದು ನಿಮ್ಮೊಳಿದಿರೇ ರಣಕೆ ತಾನೆನುತ
ಸೆಳೆದ ಬಾಣವನಿಳುಹಿದರೆ ಗುರು
ತೊಲಗಿ ಕೊಟ್ಟನು ಪದವನಹಿತಾ
ವಳಿಗೆ ಸಾತ್ಯಕಿ ಮೊಳಗಿದನು ಕಳಶಜನ ನೇಮದಲಿ ೯

ಪಾರಸಿಕ ನೇಪಾಳ ಸಿಂಹಳ
ವೀರ ಬಾಹ್ಲಿಕ ಯವನ ಕೌಸಲ
ಪಾರಿಯಾತ್ರರು ತುರುಕ ಬರ್ಬರ ವಂಗ ಮಾಗಧರು
ಕೌರವೇಂದ್ರನ ಮನ್ನಣೆಯ ಪರಿ
ವಾರವೀತನ ಕೆಣಕಿದರು ಸರ
ಳೋರಣವ ಸೈಗರೆದರದಂಭುತವಾಯ್ತು ಸಂಗ್ರಾಮ ೧೦

ಚೀನ ಭೋಟ ವರಾಳ ಕೇಶಿ ಸು
ದೀನ ಖುರಸಾಣಾದಿ ದೇಶದ
ಮಾನನಿಧಿಗಳು ಕವಿದು ಮುತ್ತಿತು ಕೈಯ ಕೋಲ್ಗಳಲಿ
ಏನನೆಂಬೆನು ಸಮರದಲಿ ರಾ
ಜಾನುಮಿತ ಮಂತ್ರಣವೆನಿಪ ಮುನಿ
ಪಾನುಮತವರಿದಾಯ್ತು ಸಾತ್ಯಕಿಗಾ ಮಹಾಕದನ ೧೧

ಕಡಿದನನಿಬರ ಕೈಯ ಕೋಲ್ಗಳ
ನಡಗುದರಿದನನೇಕಭೂಪರ
ಗಡಣವನು ಘಾಡಿಸಿದನಂಬಿನ ಸರಿಯಸುರವಣಿಸಿ
ಕಡಗಿ ಸಾತ್ಯಕಿಯೊಡನೆ ಬವರವ
ಹಿಡಿದ ಭಟರಮರರ ವಿಮಾನವ
ನಡರುತ್ತಿದ್ದರು ಕೊಂದನತಿಬಳನಹಿತಮೋಹರವ ೧೨

ಎಡಬಲಕೆ ತೂಳುವ ಮದೇಭವ
ಕಡಿದು ಹರಹಿದನೌಕಿ ಚೂರಿಸಿ
ಗಡಣಿಸುವ ಭೂಪರಿಗೆ ಮಾಡಿದನಮರ ಪದವಿಯನು
ಕಡಿದು ಬಿಸುಟನು ಕೇಣವಿಲ್ಲದೆ
ಕಡುಗಲಿಗಳನು ವೈರಿಸೇನೆಯ
ನಡಗುದರಿದನು ಕೆಡಹಿದನು ಜಲಸಂಧಭೂಪತಿಯ ೧೩

ಒಂದು ದೆಸೆಯಲಿ ಪಾರ್ಥ ಸವರಿದ
ನೊಂದು ದೆಸೆಯಲಿ ಸಾತ್ಯಕಿಯ ಸರ
ಳಿಂದ ನೊಂದುದು ಸೇನೆಯೆನೆ ಕೃತವರ್ಮನಿದಿರಾಗಿ
ನಿಂದನೆಲವೋ ಮರುಳೆ ವಿಷಾರಿದ
ಡಿಂದುಧರ ತಲೆಗಾವಡೀಗಳೆ
ಕೊಂದಡಲ್ಲದೆ ಬಿಡೆನೆನುತ ಮೂದಲಿಸುತೈತಂದ ೧೪

ನರನ ಮೈಗಂಡೀತನಲಿ ಸಂ
ಗರವನಾದರಿಸುವೆನು ಬಳಿಕೆಂ
ದರಿದು ಕೃತವರ್ಮಕನ ರಥವನು ಧನುವ ಸಾರಥಿಯ
ಸರಳು ಮೂರರಲೆಚ್ಚು ರಿಪುವನು
ಧುರದಿ ಹಿಂಗಿಸಿ ಹಂಸಮಯ ಮೋ
ಹರದೊಳಗೆ ಮೊಳಗಿದನು ತಾಗಿದನತಿರಥಾವಳಿಯ ೧೫

ಹೊಗಿಸದಿರಿ ಸಾತ್ಯಕಿಯ ಹಿಂದಕೆ
ತೆಗೆಸು ತೆಗೆಸೋ ಫಲುಗುಣನ ತೆ
ತ್ತಿಗನಿವನು ಹೊಯ್ ಹೊಯ್ಯೆನುತ ಹೊರವಂಟರತಿರಥರು
ಬಿಗಿದ ಬಿಲುಗಳ ತಿರುವೆರಳ ಬೊ
ಬ್ಬೆಗಳ ಕಿವಿಗಡಿಯಂಬುಗಳಿನಾ
ಳುಗಳ ದೇವನ ತರುಬಿದರು ಕೌರವ ಸಹೋದರರು ೧೬

ಅವರ ಬಲನೆಡವಂಕದಲಿ ಸೈಂ
ಧವನ ಮೊನೆಯವರೌಕಿದರು ಕೌ
ರವನ ಬಳಿಯಲಿ ಸಂದಣಿಸಿದರು ಕರ್ಣ ನಂದನರು
ಬವರವಸದಳವಾಯ್ತು ರಿಪುಭಟ
ನಿವಹ ಮಧ್ಯದೊಳೀತ ಸಿಲುಕಿದ
ನವಿರಳಾಸ್ತ್ರವ ಸುರಿದು ಕಾಣನು ಹಗೆಗೆ ಹರಿವುಗಳ ೧೭

ಅತ್ತ ಸಾತ್ಯಕಿಗಾಯ್ತು ರಣದೊ
ತ್ತೊತ್ತೆ ಮೋಹರ ಮಧ್ಯರಂಗದೊ
ಳಿತ್ತಲರ್ಜುನನಾಹವವನೇನೆಂಬೆನದ್ಭುತವ
ಮತ್ತೆ ಕೃಷ್ಣನ ಶಂಖನಾದವ
ನಿತ್ತಲವನೀಪಾಲ ಕೇಳಿದು
ಚಿತ್ತ ಕದಡಿದುದಡಿಗಡಿಗೆ ಮನನೊಂದು ಬಿಸುಸುಯ್ದು ೧೮

## ಹನ್ನೆರಡನೆಯ ಸಂಧಿ

ಸೂ. ರಾಯಸೇನಾ ಸೂರೆಕಾರನ
ಜೇಯ ಮಾರುತ ಸುತನು ಕೌರವ
ರಾಯನನುಜರ ಸೀಳಿದನು ಕಳಶಜನ ಪರಿಹರಿಸಿ

ದೃಗುಯುಗಳ ನೀರೇರಿದವು ಸೆರೆ
ಬಿಗಿದು ಹಲುಬಿದನಕಟ ಕಡು ದೇ
ಸಿಗನು ತಾ ತನ್ನೊಡನೆ ಫಲುಗುಣನೇಕೆ ಜನಿಸಿದನೊ
ಹಗೆಯ ಹರಿವಿಂಗೊಪ್ಪುಗೊಟ್ಟೆನು
ಮಗನಳಲು ಮಿಗೆ ಹೂಣೆ ಹೊಕ್ಕನು
ಮಗುಳಲರಿಯನು ತಮ್ಮನೆನುತವನೀಶ ಚಿಂತಿಸಿದ ೧

ಕಳುಹಲತ್ತಲು ಹೋಗಿ ಸಾತ್ಯಕಿ
ತಿಳಿದು ಮರಳಿದುದಿಲ್ಲ ಫಲುಗುಣ
ನಳಿದನೋ ಮೇಣುಳಿದನೋ ಶರಹತಿಗೆ ಬಳಲಿದನೊ
ತಿಳಿದು ಹೇಳುವರಾರು ಪಟುಭಟ
ರೊಳಗೆ ಮಕುಟದ ಮಹಿಮರೆನುತಳ
ವಳಿದು ಭೀಮನ ವದನವನು ನೋಡಿದನು ಭೂಪಾಲ ೨

ಎಲೆ ವೃಕೋದರ ವೈರಿಮೋಹರ
ದೊಳಗೆ ಸಿಲುಕಿದನೋ ಕಿರೀಟಿಗೆ
ನೆಲದ ಋಣಸಂಬಂಧ ಸವೆದುದೊ ಮೇಣು ಸಮರದಲಿ
ತಿಳಿಯಲಟ್ಟಿದ ಸಾತ್ಯಕಿಗೆ ಕೊಳು
ಗುಳದ ಧಾರಣೆಯಾಯ್ತು ಫಲುಗುಣ
ನಳಬಳವನರಿದಲ್ಲದೆನ್ನಸು ಸೈರಿಸದು ತನುವ ೩

ಮುರವಿರೋಧಿಯ ಪಾಂಚಜನ್ಯದ
ಪರಮ ರವ ಪಾರ್ಥನ ಪತಾಕೆಯ
ವರ ಕಪೀಂದ್ರನ ರಭಸವೇ ತುಂಬಿತು ಜಗತ್ರಯವ
ನರನ ಧನುವಿನ ದನಿಯ ಕೇಳೆನು
ಕರಗಿತಂತಃಕರಣವರ್ಜುನ
ನಿರವ ಕಾಣಿಸಿ ಬಾಯೆನಲು ಕೈಕೊಂಡನಾ ಭೀಮ ೪

ಅರನೆಲೆಯ ಸುಯ್ದಾನ ಪಾಂಚಾ
ಲರಿಗೆ ನೇಮಿಸಿತನಿಲತನಯನ
ಬೆರಳ ಸನ್ನೆಗೆ ತೀವಿದಂಬಿನ ತೇರ ಚಾಚಿದರು
ಕರೆದು ತನ್ನ ವಿಶೋಕಗಖಿಳಾ
ಭರಣವನು ಕೊಟ್ಟನು ವರೂಥದ
ಹರಿಗೆ ಹೊಡವಂಟಡರಿದನು ನವ ರತುನಮಯ ರಥವ ೫

ಸೂಳು ಮಿಗಲಳ್ಳಿರಿದವುರು ನಿ
ಸಾಳತತಿ ದಿಗುವಳಯದಲಿ ಕೈ
ಮೇಳವಿಸಿದವು ತಂಬಟಧ್ವನಿ ಜಡಿವ ಕಹಳೆಗಳು
ಕೀಳ ಬಗೆಯದೆ ಕೆರಳಿ ಹೊಯ್ದವು
ಕಾಲಲಿಳೆಯನು ಕುದುರೆ ಮೋರೆಯ
ತೋಳಿನಲಿ ಮೋದಿದವು ಮುಹಿಯನು ಸೊಕ್ಕಿದಾನೆಗಳು ೬

ಒದಗಿತೆಡಬಲವಂಕದೊಯ್ಯಾ
ರದಲಿ ರಾವುತರು ಮುಂದೆ ತಲೆದೋ
ರಿದರು ಮುಂಗುಡಿಯವರು ಚೂಣಿಯ ಹೊಂತಕಾರಿಗಳು
ಅದಿರ್ವ ಖಡುಗದ ಕಾಂತಿ ಸೂರ್ಯನ
ಹೊದಿಸಿದುದು ಹೊದರೆದ್ದು ಕೊಂತದ
ತುದಿಗಳಿತ್ತವು ರಾಹುಭಯುವನು ರವಿಯ ಮಂಡಲಕೆ ೭

ಕೆಲಕೆ ಹೊಳೆದವು ಕಡುಗುದುರೆ ನೆಲ
ನಳುಕೆ ನಡೆದವು ದಂತಿ ದೆಸೆಗಳ
ಹೊಲಗೆ ಹರಿಯದೆ ಮಾಣವೆನೆ ಹೊಕ್ಕವು ರಥಾನೀಕ
ತಳಪಟವ ತುಂಬಿತ್ತು ಪಯದಳ
ವುಲಿವ ಕಹಳೆಯ ಚೆಂಬುಕನ ಕಳ
ಕಳಿಕೆ ಮಿಗೆ ಕೈಕೊಂಡುದನಿಲ ಕುಮಾರಕನ ಸೇನೆ ೮

ಮುಸುಕಿದನು ರವಿ ಧೂಳಿಯಲಿ ಹೊಳೆ
ವಸಿ ಮುಸುಂಡಿ ತ್ರಿಶೂಲ ಕೊಂತ
ಪ್ರಸರ ಕಾಂತಿಗಳಿಳುಹಿದವು ಖದ್ಯೋತ ದೀಧಿತಿಯ
ಬಿಸಜಸಖನಡಗಿದರೆ ನಭದಲಿ
ಮಸಗಿದವು ತಾರೆಗಳೆನಲು ಶೋ
ಭಿಸಿದವವನೀಪಾಲ ಮೌಳಿ ಸುರತ್ನ ರಾಜಿಗಳು ೯

ಎಲೆಲೆ ರಿಪುಸಂವರ್ತನೊಳು ಕೊಳು
ಗುಳಕೆ ವರ್ತಿಸಲರಿದೆನುತ ತ
ಲ್ಲಳಿಸಿ ತೆತ್ತುದು ಮನವನವನೀಪಾಲ ಸಂದೋಹ
ಹಳವಿನಬ್ಬರಕಂಜದಿರಿ ನಿಜ
ಗಳದ ಹಸುಗೆಯ ಹಾರದಿರಿಂಬು
ದಳಿಮನರು ಬೆಂಗೊಟ್ಟು ಹೊಕ್ಕುದು ಕಳಶಜನ ಮರೆಯ ೧೦

ಮಿಗೆ ವಿರೋಧಿಯ ಬಸುರನುಗಿ ಕು
ನ್ನಿಗಳ ಕೆಡೆ ಬಡಿ ಸೀಳು ಹೆಣನುಂ
ಗಿಗಳ ಹೊಯ್ ಹೊಯ್ ರಣಕೆ ಹೆದರುವ ಕೌರವಾನುಜರ
ಹಗೆಯ ಶೋಣಿತ ಪಾನದರವ
ಟ್ಟಿಗೆಗೆ ಕರೆ ಭೇತಾಳ ಭೂತಾ
ಳಿಗಳನೆನುತ ಸುಧೈರ್ಯ ನಡೆದನು ಗರುಡಿಯಾಚಾರ್ಯ ೧೧

ಏನಿದೆತ್ತಣ ರಭಸವೆಲೆ ಪವ
ಮಾನಸುತ ಫಡ ಮರಳು ನಿನ್ನನು
ಮಾನವಾವುದು ಗಮನವೆಲ್ಲಿಗೆ ಮಾಡು ಬಿನ್ನಹವ
ಆನಿರಲು ಕೈಕೊಳ್ಳದುರುಬುವ
ದಾನವಾಮರರಿಲ್ಲ ನಿನ್ನಳ
ವೇನು ಸಾಕೊಮ್ಮಿಂಗೆ ಕಾವೆನು ಬೇಡ ಮರಳೆಂದ ೧೨

ಎಲೆ ಮರುಳೆ ಗುರುವೆಮಗೆ ನೀ ಪೆ
ಕ್ಕಳಿಸಿ ನುಡಿದರೆ ಮೊದಲಲಂಜುವೆ
ನುಳಿದ ಮಾತಿನಲೇನು ನಿಮ್ಮೊಡನೆನಗೆ ಸಂಗ್ರಾಮ
ಬಳಿಕವೀಗಳು ನಿಮ್ಮ ಮೋಹರ
ದೊಳಗೆ ಕೊಡಿ ಬಟ್ಟೆಯನು ಸಿಲುಕಿದ
ಫಲುಗುಣನ ತಹೆನಣ್ಣದೇವನ ನೇಮ ತನಗೆಂದ ೧೩

ಆದರೆಲವೋ ಭೀಮ ಪಾರ್ಥನ
ಹಾದಿಯಲಿ ಗಮಿಸುವರೆ ಸಾತ್ಯಕಿ
ಹೋದವೊಲು ನೀನೆಮಗೆ ವಂದಿಸಿ ಮಾರ್ಗವನು ಪಡೆದು
ಹೋದಡೊಪ್ಪುವುದಲ್ಲದೇ ಬಿರು
ಸಾದಡಹುದೇ ಬೀಳು ಚರಣಕೆ
ಕಾದುವರೆ ಹಿಡಿ ಧನುವನೆಂದನು ದ್ರೋಣನನಿಲಜನ ೧೪

ತರಳರರ್ಜುನ ಸಾತ್ಯಕಿಗಳವ
ದಿರಿಗೆ ಪಂಥವದೇಕೆ ನಿಮ್ಮನು
ಗರುಡಿಯಲಿ ವಂದಿಸುವ ವಂದನೆಯುಂಟೆ ಸಮರದಲಿ
ಮರುಳಲಾ ಮರುಮಾತು ಕಡುವೃ
ದ್ಧರಿಗದೇಕೆಂಬಂತೆ ಚಿತ್ತದ
ಹುರುಳ ಬಲ್ಲೆನು ಪಥವ ಬಿಡಿ ಕೆಲಸಾರಿ ಸಾಕೆಂದ ೧೫

ಫಡ ಫಡೆಲವೋ ಭೀಮ ಬಣಗುಗ
ಳೊಡನೆ ಸರಿಗಂಡೆನ್ನ ಬಗೆಯದೆ
ಕಡುಗುವೈ ಕಾಳೆಗಕೆ ತಪ್ಪೇನಾವಡನುವಾಗು
ಒಡಲನೀವೆನು ವಿನಯದೆಡೆಗವ
ಗಡಿಸಿದರೆ ಕೊಲುವೆನು ರಿಪುವ್ರಜ
ಮೃಡನನರಿಯಾ ದ್ರೋಣ ತಾನೆನುತೆಚ್ಚನನಿಲಜನ ೧೬

ಈತನೊಡನಂಬಿನಲಿ ಕಾದಲು
ಭೂತನಾಥಂಗರಿದು ಸಾರಥಿ
ಪೂತುರೇ ಎನುತಿಳಿದು ರಥವನು ತುಡುಕಿದನು ಗದೆಯ .
ಆತನಸ್ತ್ರಕೆ ದಂಡೆಯೊಡ್ಡಿ ಮ
ಹಾತಿಬಳ ಕವಿದನು ವಿರೋಧಿಯ
ಸೂತನನು ಕೆಡೆಹೊಯ್ದು ಕೊಂದನು ರಥದ ಕುದುರೆಗಳ ೧೭

ಇದು ನಿಮಗೆ ವಂದನೆಯೆನುತ ನಿಜ
ಗದೆಯಲಾತನ ರಥವ ಹುಡಿಗು
ಟ್ಟಿದನು ಸುರಗಿಯನುಗಿಯಲಪ್ಪಳಿಸಿದನು ಮೋಹರವ
ಇದಿರಲಿರಲಳವಡದೆ ಗುರು ಹಿಂ
ಗಿದನು ಶಕಟವ್ಯೂಹವನು ಮ
ಧ್ಯದೊಳು ಥಟ್ಟುಗಿದುರವಣಿಸಿ ಪವಮಾನಸುತ ನಡೆದ ೧೮

ಹರಿಯ ಕುಲಿಶದ ಧಾಳಿಯಲಿ ಕುಲ
ಗಿರಿಗಳಿಬ್ಬಗಿಯಾದವೊಲು ಮುಂ
ದರದ ಘಾರಾಘಾರಿಯಲಿ ಬಾಯ್ಬಿಡುವ ಕಡಲಂತೆ
ಅರಿ ವರೂಥಿನಿ ಕೆದರಿ ತಳಿತವು
ತುರಗ ಕರಿ ರಥ ಪಾಯಿದಳ ಬಲ
ಹೊರಳಿಯೊಡೆದುದು ಹೊದರು ತಗ್ಗಿತು ಹೂಣೆಗರ ಮನದ ೧೯

ಹೊಸರಥವ ತಾ ಹೋದನೇ ಸಂ
ಧಿಸುವೆನಿನ್ನನಿಲಜನು ಕುಂತಿಯ
ಬಸುರ ಹೊಕ್ಕರೆ ಹೊಗುವೆನೆನುತಾ ದ್ರೋಣ ಗಜಬಜಿಸೆ
ಕುಸುರಿದರಿದನು ಮುಂದೆ ವೈರಿ
ಪ್ರಸರವನು ಸಂವರ್ತ ರುದ್ರನೊ
ಹೊಸಬನಿವನಾರೆಂದು ತಲ್ಲಣಿಸಿತ್ತು ರಿಪುಸೇನೆ ೨೦

ಎಚ್ಚನುಚ್ಚಳಿಸುವ ತುರಂಗವ
ನೊಚ್ಚತವೆ ಕೊಂದನು ರಥೌಘವ
ನಚ್ಚರಿಯರೊಡನಾಡಿಸಿದನುರವಣಿಪ ಕಾಲಾಳ
ಕಿಚ್ಚುಗಿಡಿಗೆದರುವ ಸಿಳೀಮುಖ
ಕೊಚ್ಚಲಿಭದವಯವವನಮರರಿ
ಗಚ್ಚರಿಯ ತನಿಸೂರೆ ಬಿಟ್ಟನು ಭೀಮ ಬವರದಲಿ ೨೧

ತನತನಗೆ ಮುಂಕೊಂಡು ಸಂಗರ
ವೆನಗೆ ತನಗೆಂಬಖಿಳವೀರಾ
ವನಿಪರಹಮಿಕೆಯಿಂದ ಹೊಯ್ದರು ಪವನನಂದನನ
ಮೊನೆಯಲಗಿನಂಬುಗಳ ಬಿರುಸರಿ
ಗನಿಬರಂಗವ ತೆತ್ತುವಾತಾ
ಯನಿತ ವಿಗ್ರಹವಾಯ್ತು ನಿಗ್ರಹದತಿಮಹಾರಥರು ೨೨

ಸಿಡಿದ ಕಣ್ಣಾಲಿಗಳ ಮೀಂಗಳ
ಕೆಡೆದ ಸತ್ತಿಗೆಯಬುಜಪಂಕ್ತಿಯ
ಬಿಡುಮಿದುಳ ರಾಸಿಗಳ ರಚನೆಯ ರಾಜಹಂಸೆಗಳ
ಬಿಡದೆ ಬೆಂಡೆದ್ದೇಳ್ವ ತಲೆಗಳ
ಗಡಣ ನೀರ್ವಕ್ಕಿಗಳ ಸರಸಿಯ
ನಡುವೆ ನಲಿ ನಲಿದಾಡುತಿರ್ದುದು ಭೀಮ ವನದಂತಿ ೨೩

ಮಕುಟಬದ್ಧ ಮಹೀಶ ವೇಣು
ಪ್ರಕರದಲಿ ಛಟಛಟಿಸಿ ತುರಗ
ಪ್ರಕರ ಪಲ್ಲವ ಭೂಜರಾಜಿಗಳೊಳಗೆ ಘುಳುಘುಳಿಸಿ
ಸಕಲ ಗಜ ರಥ ಭೂಧರಾಧಿ
ತ್ಯಕೆಯೊಳಗೆ ಭುಗಿಭುಗಿಸಿ ರಿಪುವನ
ನಿಕರದಲಿ ಸಲೆ ಬೀದಿವರಿದುದು ಭೀಮ ದಾವಾಗ್ನಿ ೨೪

ಕಲಕೆ ಚಕ್ರವ್ಯೂಹ ಹಂಸಾ
ವಳಿಗೆ ಹಂಸವ್ಯೂಹ ಹಿಂದಣ
ಬಲದೊಳಾ ಮೋಹರಕೆ ತರಹರವಾಯ್ತು ಪದ್ಮದಲಿ
ಬಳಿಕ ಮಕರವ್ಯೂಹದಲಿ ಮುಂ
ಡಳಿಕರಾಂತುದು ಭೀಮಸೇನನ
ಕೊಳುಗಳಕೆ ಕೈಕೊಂಡರಾ ಕರ್ಣಾದಿ ಪಟುಭಟರು ೨೫

ನಿಲಿಸಿದರು ರವಿಸುತನನೀತನ
ತಲೆಯ ಮಿಸಲು ತಮ್ಮ ಸರಳದು
ಗೆಲವು ನಿಮಗಲ್ಲೆನುತ ಹೊಕ್ಕರು ಕೌರವಾನುಜರು
ಚಲಿಸಿತರನೆಲೆ ಕೋದಕೈಯಲಿ
ಮೊಳಗಿದವು ನಿಸ್ಸಾಳ ಬಲು ಮಂ
ಡಳಿಕರೆಡಬಲವಂಕದಲಿ ನೆರೆದುದು ಕುಮಾರಕರು ೨೬

ಸಾಲ ಗೋವಳಿಗಟ್ಟಿಗೆಯ ಕುಂ
ತಾಳಿಗಳ ತೂಗಾಟ ಮಿಗೆ ದು
ವ್ವಾಳಿಗಳ ದೆಖ್ಖಾಳ ಗಜ ರಥ ತುರಗ ಸೇನೆಯಲಿ
ಮೇಲೆ ಹೇಳಿಕೆಯಾಯ್ತು ಕವಿವ ನೃ
ಪಾಲಕರು ಭೀಮಂಗೆ ಹರಣದ
ಸಾಲಿಗರು ಸಂದಣಿಸಿತಬುಜವ್ಯೂಹದಗ್ರದಲಿ ೨೭

ದುರುಳರುರವಣಿಸಿದರು ಜವ್ವನ
ದುರು ಮದದ ಭರತಾನ್ವಯದ ದು
ರ್ಧರ ಮದದ ಘನಭುಜಮದದ ದಿವ್ಯಾಸ್ತ್ರದರಿಕೆಗಳ
ಭರಮದದ ಮರ್ಕಟವಿಲಾಸರು
ಧುರರಚಿತ ಪರಿಹಾಸರಭಿಜನ
ಕುರುವಿನಾಶರು ತಾವಕರು ಧೃತರಾಷ್ಟ್ರ ಕೇಳೆಂದ ೨೮

ಎಳೆಯ ಬಾಳೆಯ ಸುಳಿಗೆ ಸೀಗೆಯ
ಮೆಳೆಯೊಡನೆ ಸರಸವೆ ಕುಮಾರರ
ಬಲುಹ ನೋಡು ವಿಶೋಕ ತೊಡಗಿದರೆಮ್ಮೊಡನೆ ರಣವ
ಕಲಹದಲಿ ಮೈದೋರಿದಿವದಿರ
ತಲೆಗಳಿವು ವಾರಕದವಿವನರೆ
ಗಳಿಗೆಯಲಿ ತಾ ಕೊಂಬೆನೆಂದನು ನಗುತ ಕಲಿಭೀಮ ೨೯

ಬಿಲುದೆಗಹಿನಾ ಕರ್ಣಪೂರದ
ಹಿಳುಕಿನನಿಲಜನಿರಲು ಸಿಂಹದ
ಹೊಲನ ಹೊಗುವಿಭದಂತೆ ಹೊರಕಾಲ್ಗೊಳುತಲಿರೆ ಕಂಡು
ತೊಲಗದಿರಿ ತಮ್ಮಂದಿರಿರ ಕುರು
ಕುಲಲಲಾಮರು ಜಗದೊಳತಿ ವೆ
ಗ್ಗಳೆಯ ಸುಭಟರು ನೀವೆನುತ ತೆಗೆದೆಚ್ಚನಾ ಭೀಮ ೩೦

ಸರಳ ಸೊಂಪಿನ ಸೋಹಿನಲಿ ನಿರಿ
ಗರುಳ ದಾವಣಿವಲೆಗಳಲಿ ಸಂ
ಗರದ ಸುಭಟವ್ರಜದ ಮಧ್ಯದ ಗೂಡುವಲೆಗಳಲಿ
ಉರುಗದೆಯ ದಡಿವಲೆಯಲಸಿ ಮು
ದ್ಗರದ ಸಿಡಿವಲೆಗಳಲಿ ಸಮರದೊ
ಳರಿಮೃಗವ್ರಾತವನು ಭೀಮಕಿರಾತ ಕೈಕೊಂಡ ೩೧

ವಿಂದನನುವಿಂದನನು ಚಿತ್ರಕ
ನಂದನನ ಚಿತ್ರಾಂಗದನ ಸಾ
ನಂದ ದುಸ್ಸಹ ಶಂಕುಕರ್ಣ ಸುದೀರ್ಘಬಾಹುಕನ
ನಂದ ಚಿತ್ರಾಂಬಕನ ಕುಂತಿಯ
ನಂದನನು ಬರಿಕೈದು ಭಾಸ್ಕರ
ನಂದನಾಶ್ವತ್ಥಾಮರನು ಮೂದಲಿಸಿ ತಾಗಿದನು ೩೨

ಕೆಡೆದುದನುಜರು ಕೇಣವಿಲ್ಲದೆ
ತೊಡಗಿದಾಹವದೊಳಗೆ ಕೊಂದವ
ಕೊಡನಮಗನೋ ದೂರುಹೊತ್ತುದು ಬರಿದೆ ಹಗೆಗಳಿಗೆ
ನುಡಿದು ಫಲವೇನಿನ್ನು ಭೀಮನ
ಬಿಡದೆ ಸುಭಟರು ನೂಕಿಯೆಂಬೀ
ನುಡಿಯ ಕೇಳಿದು ಖಾತಿಗೊಂಡನು ಮತ್ತೆ ಕಲಿ ದ್ರೋಣ ೩೩

## ಹದಿಮೂರನೆಯ ಸಂಧಿ

ಸೂ. ಗಂಡುಗಲಿ ಕೋದಂಡ ರುದ್ರನ
ಕಂಡು ವಿರಥನ ಮಾಡಿದನು ಮಾ
ರ್ತಾಂಡತನಯನ ಗೆಲಿದು ರಣದಲಿ ನೊಂದನಾ ಭೀಮ

ಕೇಳು ಜನಮೇಜಯ ಧರಿತ್ರೀ
ಪಾಲ ಕಡುಗೋಪದಲಿ ಕಳಶಜ
ನಾಳ ಮೇಳೈಸಿದನು ನಿಜಮೋಹರವ ಹಿಂದಿಕ್ಕಿ
ಕಾಳೆಗದೊಳನಿಲಜನನರಸುತ
ಲೋಲುಪತಿ ಮಿಗೆ ಬರುತ ಭೀಮನ
ಕೋಲ ಕೋಳಾಹಳವನೀಕ್ಷಿಸುತಲ್ಲಿಗೈತಂದ ೧

ಇದೆ ಗದಾದಂಡದ ಹತಿಗೆ ಮುಂ
ಗ್ಗಿದ ಮತಂಗ ವರೂಥಚಯವಿ
ಲ್ಲಿದೆ ಶರಾಳಿಯಲತಿರಥರ ಗೋನಾಳಿಗಡಿತವಿದೆ
ಇದೆ ರಥದ ಪದಘಾತದಲಿ ಹೆಣ
ಮೆದೆಯ ಪಾಯದಳೌಘ ಭೀಮನ
ಕದನ ಪಥವಿದೆಯೆನುತ ನಗುತೈತಂದನಾ ದ್ರೋಣ ೨

ಕಡಿದ ಖಡೆಯುದ ಕುಸುರಿಗಳ ಚಿನ
ಕಡಿಯ ಹೀರಾವಳಿಯ ಮುಕುಟದ
ಸಡಿಲಿದನುಪಮ ರತುನರಾಜಿಯ ಮುರಿದ ಕಂಕಣದ
ಕಡಿಕು ಪಸರಿಸೆ ಕೌರವಾನುಜ
ರಡೆಗೆಡೆದ ರಣ ಕಾಂಚನಾದ್ರಿಯು
ಸಿಡಿಲ ಕಾಳೆಗದಂತೆ ಮೆರೆದಿರೆ ಕಂಡನಾ ದ್ರೋಣ ೩

ಉಡಿದ ಬೆಳುಗೊಡೆಯಬುಜ ಪಂಕ್ತಿಯ
ಸಿಡಿದ ಚಮರಿಯ ಹಾವಸೆಯ ಕೆಸ
ರಿಡುವ ರಕುತಾಂಬುಗಳ ನರವಿನ ನಾಳದೇಳಿಗೆಯ
ಕಡುಮದದ ಕಾಡಾನೆ ಹೊಕ್ಕೊಡ
ನೊಡನೆ ಕಲಕಿದ ಕೊಳನವೊಲು ಭಯ
ವಡಸುತಿದೆ ಪವನಜನ ರಣಪಥವೆನುತ ಬರುತಿರ್ದ ೪

ಧುರದೊಳಗೆ ಗುರು ಪಹಿಲ ಮಿಗಲ್ಕೆ
ತರಲು ದೂರಕೆ ಕೇಳಲಾದುದು
ಹರಿಸುತನ ಹರಿನಾದ ತೇಜಿಯ ರಥದ ರೌದ್ರರವ
ತಿರುವಿನಬ್ಬರವಂಬಿನುಬ್ಬರ
ಧುರರಭಸ ಕಲ್ಪಾಂತ ಘನ ಸಾ
ಗರದ ಮೊರೆವಾಳಾಪ ಭೀಮನ ಸಮರದಾಟೋಪ ೫

ಅತ್ತಲದೆ ಪವನಜನ ಕಳಕಳ
ದತ್ತ ಹರಿಸೈ ರಥವನೆನುತಂ
ದ್ವಲ್ಲತ್ತ ಭೀಮನನೈದಿದನು ಚಾಪಾಗಮಾಚಾರ್ಯ
ಇತ್ತಲಿತ್ತಲು ಭೀಮ ಬಣಗುಂಗ
ಳತ್ತಲೇಕೈ ವೀರ ಶೌರ್ಯೋ
ನ್ಮತ್ತನಹೆಯಿದಿರಾಗೆನುತ ಕೆಣಕಿದನು ಪವನಜನ ೬

ತಿರುಗಿನೋಡಿದನಸ್ತ್ರ ಶಿಕ್ಷಾ
ಗುರುವ ಕಂಡನು ಮನದೊಳಾತನ
ಚರಣಕಭಿನಮಿಸಿದನು ನುಡಿದನು ವಿನಯಪರನಾಗಿ
ಗುರುವೆ ಬಿಜಯಂಗೈದ ಹದನನು
ಕರುಣಿಸೈ ಕಾಳಗದ ಭಾರಿಯ
ಭರವಸದಲಾನಿದ್ದೆನೆಂದನು ನಗುತ ಕಲಿಭೀಮ ೭

ಅನಿಲಸುತ ಫಡ ಮರುಳು ಠಕ್ಕಿನ
ವಿನಯವೇ ನಮ್ಮೊಡನೆ ಕೌರವ
ನನುಜರನು ಕೆಡೆಹೊಯ್ದು ಗರ್ವದ ಗಿರಿಯನಿಳಿಯೆನುತ
ಕನಲಿ ಕಿಡಿ ಸುರಿವಂಬ ತೆಗೆದು
ಬ್ಬಿನಲಿ ಕವಿದೆಸುತಿರೆ ವೃಕೋದರ
ನನಿತು ಶರವನು ಕಡಿದು ಬಿನ್ನಹ ಮಾಡಿದನು ನಗುತ ೮

ಗುರುವೆಮಗೆ ನೀವ್ ನಿಮಗೆ ನಾವ್ ಡಿಂ
ಗರಿಗರೆಮ್ಮಿತ್ತಂಡವಿದರಲಿ
ವರ ವಿನೀತರು ಕೆಲರು ಕೆಲಬರು ಧೂರ್ತರಾಗಿಹರು
ನರ ಯುಧಿಷ್ಠಿರ ನಕುಳ ಸಹದೇ
ವರವೊಲೆನಗಿಲ್ಲತಿ ಭಕುತಿ ಸಂ
ಗರದೊಳೆನ್ನಯ ದಂಡಿ ಹೊಸಪರಿ ಬೇಡ ಮರಳೆಂದ ೯

ಎಲವೊ ದುಷ್ಟಗ್ರಹದ ಬಾಧೆಯ
ನಿಲಿಸಲರಿಯರೆ ಮಂತ್ರವಾದಿಗ
ಳಳಿಬಲವನಂಜಿಸಿದ ಕೊಬ್ಬುಗಳಕಟ ನಮ್ಮೊಡನೆ
ಗೆಲುವ ಕೊಡುವನು ವಾಸಿಯೇ ಮ
ಕ್ಕಳುಗಳೊಡನೆಂದಿರ್ದಡತಿ ವೆ
ಗ್ಗಳನು ನೀನೆಂದಂಬ ಸುರಿದನು ಪವನಜನ ಮೇಲೆ ೧೦

ನಿಲ್ಲು ಕಳಶಜ ತಪ್ಪಿದವ ನಾ
ನಲ್ಲ ಫಲುಗುಣ ಸಾತ್ಯಕಿಯವೊ
ಲಿಲ್ಲ ತನ್ನಲಿ ವಿನಯ ಹಾರದಿರಿಲ್ಲಿ ಮನ್ನಣೆಯ
ಬಿಲ್ಲ ಗುರುವಿನ ಬಿಂಕ ಬಯಲಾ
ಯಿತ್ತಲ್ಲಿಯೆಂಬಪಕೀರ್ತಿ ಹೊರುವುದು
ಬಲ್ಲೆನೆನುತುರವಣಿಸಿದನು ಮುಂಗೈಯ ಮುರೆವಿಡಿದು ೧೧

ಮಳೆಗೆ ತೆರಳದೆ ಕೋಡ ಬಾಗಿಸಿ
ಕಲಿವೃಷಭ ಹೊಗುವಂತೆ ದ್ರೋಣನ
ಬಲುಸರಳ ಸರಿವಳೆಗೆ ದಂಡೆಯನೊಡ್ಡಿ ದಳವುಳಿಸಿ
ಅಳವಿದಪ್ಪದೆ ಕೆಲದ ಖಡ್ಗವ
ಸೆಳೆದು ಗುರುವಪ್ಪಳಿಸಿ ಕೈಯಲಿ
ಕಳೆದು ಕಟ್ಟಳವಿಯಲಿ ಹೊಕ್ಕನು ಭೀಮ ಬೊಬ್ಬಿರಿದು ೧೨

ಗಜರಿನಲಿ ಗಿರಿ ಬಿರಿಯೆ ದಿವಿಜ
ವ್ರಜ ಭಯಂಗೊಳೆ ಹೂಣೆ ಹೊಕ್ಕರಿ
ವಿಜಯನಿಟ್ಟಣಿಸಿದರೆ ಹಿಮ್ಮೆಟ್ಟಿದರೆ ಬಳಿಸಲಿಸಿ
ಸುಜನ ವಂದ್ಯನ ರಥವ ಹಿಡಿದನಿ
ಲಜನು ಮುಂಗೈಗೊಂಡು ಪಡೆ ಗಜ
ಬಜಿಸೆ ನಭಕೀಡಾಡಿದನು ಹಿಡಿ ಬುಗುರಿಯಂದದಲಿ ೧೩

ಗಗನದಲಿ ರಥ ಯೋಜನಾಂತಕೆ
ಚಿಗಿದು ಧರಣಿಯ ಮೇಲೆ ಬೀಳಲು
ನಗುತ ಕರಣವ ಹಾಯ್ಕಿ ಮುಂಡಿಯೊಳಿರ್ದನಾ ದ್ರೋಣ
ಜಗದೊಳಾವಭ್ಯಾಸಿಯೋ ತಾ
ಳಿಗೆಯ ತಲ್ಲಣದೊಳಗೆ ನೆಗಹಿನ
ಸುಗಮ ಸಾಹಸನರರೆ ಮಝ ಭಾಪೆಂದುದುಭಯ ಬಲ ೧೪

ತೂಗಿ ಕೆಡೆದುದು ತೇರು ಹುಡಿ ಹುಡಿ
ಯಾಗಿ ಹೋದುದು ದ್ರೋಣ ಮನದನು
ರಾಗ ಮಿಗೆ ಮತ್ತೊಂದು ಹೊಸರಥದೊಳಗೆ ವೆಂಠಣಿಸಿ
ಹೋಗಬಿಡೆನಿನ್ನಲಜನ ತಲೆ
ವಾಗಿಸುವೆನಿನ್ನೆನುತ ಶಕಟದ
ಬಾಗಿಲಲಿ ಗಿರಿಯಂತೆ ನಿಂದನು ಸಮರಕನುವಾಗಿ ೧೫

ಕೊಲುವುದನುಚಿತವೆಂದು ಗಗನ
ಸ್ಥಳಕೆ ರಥವನು ಬಿಸುಡೆ ಯೋಜನ
ದಳವಿಯಲಿ ಲಂಘಿಸಿತು ಹಯತತಿ ಸೂತಜರು ಸಹಿತ
ಎಲೆಲೆ ಕಟಕಾಚಾರ್ಯನಕಟಾ
ಕೊಳುಗುಳದೊಳಪದೆಸೆಯ ಕಂಡನೊ
ಗೆಲಿದನೋ ರಿಪುವೆಂದುಲಿಯೆ ನಿಜಪಾಯದಳವಂದು ೧೬

ನಿಜವರೂಥದಲಂದು ಕೌರವ
ವಿಜಯ ಮಾರುತಿ ಹೊಕ್ಕು ರಿಪು ಭೂ
ಭುಜರನರೆಯಟ್ಟಿದನು ಬಹಳಿತ ಸಿಂಹನಾದದಲಿ
ತ್ರಿಜಗ ತಲ್ಲಣಿಸಿದುದು ವರ ವಾ
ರಿಜವಿಲೋಚನ ಕೇಳಿದನು ಪವ
ನಜನ ಪಡಿಬಲ ಬಂದುದೆಂದರುಹಿದನು ಪಾರ್ಥಂಗೆ ೧೭

ಭಕುತ ಮುಖ ದರ್ಪಣನು ಬಹ ಸಾ
ತ್ಯಕಿಯ ಕಂಡನು ಭೀಮಸೇನನ
ವಿಕಟ ಸಿಂಹಧ್ವನಿಯನಾಲಿಸಿ ಹಿಗ್ಗಿದನು ಪಾರ್ಥ
ವಿಕಳತನವನು ಮಾದು ಧರ್ಮಜ
ಸುಕರ ಪರಿತೋಷದಲಿರಲು ರಿಪು
ನಿಕರ ಮುರಿದುದು ಪವನಪುತ್ರನ ರಥದ ಖುರ ಪುಟಕೆ ೧೮

ಅರಿಭಟರು ಪವನಜನನಾನುತ
ಮರಳುತುಬ್ಬರ ಬವರವನು ತಂ
ದರನೆಲೆಗೆ ಹಾಯ್ಕಿದರು ಕರ್ಣಾದಿಗಳ ಮುಂಬಿನಲಿ
ಜರಿದುದತಿರಥರಾಜಿ ಬಾಯಲಿ
ಕರಿಪ ಹಾಯ್ದುದು ಭೂಮಿಪಾಲರ
ಬಿರುದು ಮುದ್ರಿಸಿದವು ಸಮೀರಕುಮಾರನುರವಣೆಗೆ ೧೯

ಓಡುವುದು ಗರುವಾಯಿಯೇ ಭಯ
ಬೇಡ ಭೂಮಿಪರೆನ್ನ ತೇರಿನ
ಕೂಡೆ ಗಡಣಿಸಿ ಸಾಕು ತಾರೆನು ನಿಮಗೆ ಕಾಳಗವ
ನೋಡಿ ನಿಮಿಷಕೆ ಭೀಮನಡಗಿನ
ಲೂಡುವೆನು ರಣಭೂತವನು ಭಯ
ಬೇಡೆನುತ್ತನಿಲಜನ ರಥವನು ತರುಬಿದನು ಕರ್ಣ ೨೦

ಬಿಗಿದ ಹುಬ್ಬಿನ ಬಿಲ್ಲ ತೆಗಹಿನ
ಹೊಗರಲಗಿನುರವಣೆಯ ರಥದಲಿ
ಮಗುಳ್ದ ಮುಂಡಿಯ ದೃಷ್ಟಿಯೋರೆಯ ಬಾಗಿದವಯವದ
ಆಗಿದು ಕಡುಗೋಪವನು ಬೆಸಲಹ
ನಗೆಯ ನಿರಿಗೆಯಲರಿಯ ನುಂಗುವ
ಬಗೆಯ ಬಲುಗೈ ಕರ್ಣ ಮೂದಲಿಸಿದನು ಪವನಜನ ೨೧

ಸಾರೆಲವೊ ಸಾಯದೆ ವೃಥಾಹಂ
ಕಾರವೇತಕೆ ನುಗ್ಗ ಸದೆದ ಕ
ಠೋರ ಸಾಹಸವಿಲ್ಲಿ ಕೊಳ್ಳದು ಕರ್ಣ ತಾನೆನುತ
ಆರಿದ್ದೈದಂಬಿನಲಿ ಪವನಕು
ಮಾರಕನನೆಸೆ ಮೇಘ ಘನ ಗಂ
ಭೀರರವದಲಿ ಭೀಮ ನುಡಿದನು ಭಾನುನಂದನನ ೨೨

ದೇವ ದಾನವ ಭಟರು ನುಗ್ಗಿಂ
ದಾವು ಬಗೆದಿಹೆವುಳಿದ ಮರ್ತ್ಯರು
ನೀವು ತಾವೇಸರ ಸಮರ್ಥರು ಕರ್ಣ ಗಳಹದಿರು
ಡಾವರಿಗತನವಾರ ಕೂಡೆ ವೃ
ಥಾ ವಿಲಾಸಿಗಳೆಲವೊ ಸುಭಟರೆ
ನೀವೆನುತ ಹದಿನೈದು ಶರದಿಂದೆಚ್ಚನಿನಸುತನ ೨೩

ಎಸಲು ಭೀಮನ ಬಾಣವನು ಖಂ
ಡಿಸಿದ ಮೂರಂಬಿನಲಿ ರವಿಸುತ
ನಸಮ ಸಾಹಸಿಯೆಚ್ಚಡೆಚ್ಚನು ಭೀಮ ಮರುಗಣೆಯ
ನಿಶಿತ ಶರವನು ಹತ್ತು ಶರದಲಿ
ಕುಸುರಿದರಿದನು ಕರ್ಣನಿಬ್ಬರ
ದೆಸೆಗೆ ದೇವಾನೀಕ ಮೆಚ್ಚಿತು ಭೂಪ ಕೇಳೆಂದ ೨೪

ತೋಳುವಲಕಿದಿರಿಲ್ಲ ಬಿನುಗು ನೃ
ಪಾಲನೆಲವೋ ಕರ್ಣ ಫಡ ಫಡ
ಮೇಳವಾದರೆ ಮೊಗೆವೆನರುಣಾಂಬುವನು ನಿನ್ನೊಡಲ
ಕೋಲ ಸುರಿ ಸುರಿಯೆನುತ ಕುರುಭೂ
ಪಾಲಕನ ಮದದಾನೆಯನು ಹೀ
ಹಾಳಿಗೆಡಿಸಿ ತುರಂಗ ರಥ ಸಾರಥಿಯ ಖಂಡಿಸಿದ ೨೫

ಉಡಿದು ರಥ ಸಾರಥಿಗಳವನಿಗೆ
ಕೆಡೆಯೆ ಕಾಲಾಳಾಗಿ ಭೀಮನ
ಬಿಡದೆ ಥಟ್ಟೈಸಿದನು ಶರನಿಕರದಲಿ ರವಿಸೂನು
ಕಡಿದು ಬಿಸುಡದೆ ಕರುಣಿಸಿದಡವ
ಗಡಿಸಿದನೆ ತಪ್ಪೇನೆನುತ ಕೈ
ಗಡಿಯ ಪವನಜನೆಚ್ಚು ಕರ್ಣನ ಧನುವ ಖಂಡಿಸಿದ ೨೬

ಕರದ ಬಿಲು ಕಳಚಿದರೆ ಖಾತಿಯೊ
ಳಿರದೆ ಹೊಸ ಹೊಂದೇರ ತರಿಸಲು
ತಿರುಗಿದನು ನಿಜಮೋಹರಕೆ ದುಗುಡದಲಿ ಕಲಿಕರ್ಣ
ತೆರಹು ಕೊಡದಿರಿ ಸೋತ ಕರ್ಣನ
ಹರಿಬವೆಮ್ಮದು ನೂಕು ನೂಕೆಂ
ದುರವಣಿಸಿದರು ಮತ್ತೆ ಕೌರವನನುಜರವಗಡಿಸಿ ೨೭

ಎಲವೊ ಕರ್ಣನ ಗೆಲಿದ ಗರ್ವವ
ಕಲಕುವೆವು ಫಡ ನಿಲ್ಲೆನುತ ಕೈ
ಚಳಕಿಗರು ಪೂರಾಯಚಾಪದ ಬೆರಳ ಕಿವಿಗಡಿಯ
ಬಲುಸರಳ ಸರಿವಳೆಯ ಸಾಹಸಿ
ಗಳುರವಣಿಸಿ ಕವಿದೆಸುತ ಬರೆ ಕಂ
ಡೆಲೆ ಮಿಡುಕನಾ ಭೀಮ ಮೂಗಿನ ಬೆರಳ ಬೆರಗಿನಲಿ ೨೮

ರಾಯನೊಡಹುಟ್ಟಿದರಲಾ ಪೂ
ರಾಯವಿವದಿರ ಕೈ ಮಹಾದೇ
ವಾಯುಧದ ಮಳೆಗರೆದರೈ ನಿಲಲರಿದು ನಮಗೆನುತ
ವಾಯುಸುತನಬ್ಬರಿಸೆ ಗಾಳಿಯ
ಘಾಯ ಮೇಘದ ಮೇಲೆ ಬಿದ್ದವೊ
ಲಾಯಿತೇನೆಂಬೆನು ಕುಮಾರರ ಹೊಯಿಲ ಬೆಳೆ ಸಿರಿಯ ೨೯

ಬಲ್ಲಡಗ್ನಿಸ್ತಂಭವನು ಸಿಡಿ
ಲಲ್ಲಿ ಮೇಳವೆ ಬಿನುಗುಗಳ ಗೆಲ
ಬಲ್ಲಡಿವರಿಗೆ ಭೀಮ ಸದರವೆ ಹೇಳಲೇನಿದನು
ಚೆಲ್ಲಿದರೆ ಬಳಿವರಿದು ಚೌಪಟ
ಮಲ್ಲ ಹೊಕ್ಕನು ಹೊಯ್ದು ಗದೆಯಲಿ
ಘಲ್ಲಿಸಿದನಸಿಯುರೆದು ಕೊಂದನು ಕೌರವಾನುಜರ ೩೦

ವರ ಸುಲೋಚನ ಚಿತ್ರರಥ ದು
ರ್ಮರುಷಣ ಶತಾನೀಕ ನೀಲಾಂ
ಬರ ವಿವಿಂಶತಿ ಚಿತ್ರಸೇನರ ದೀರ್ಘಲೋಚನನ
ತರಿದು ತಿರುಗಿ ಸುಯೋಧನನ ಮೋ
ಹರಕೆ ಮೊಳಗಲು ಮತ್ತೆ ಬಲ ಸಂ
ವರಣೆಯಲಿ ಕೈಗೈದು ಭೀಮನ ಹಳಚಿದನು ಕರ್ಣ ೩೧

ಫಡ ತೊಲಗು ಪವಮಾನಸುತ ನಿ
ನ್ನೊಡಲನೀ ಶಾಕಿನಿಯ ಬಳಗಕೆ
ಬಡಿಸುವೆನು ಬದುಕುವರೆ ಹಿಮ್ಮೆಟ್ಟೆನುತ ಬಳಿಸಲಿಸೆ
ಕಡುನುಡಿಗೆ ಮೆಚ್ಚಿದನು ಹಿಂದಕೆ
ಮಿಡುಕುವವನೇ ಕರ್ಣನೀತನ
ಕಡುಹ ನೋಡು ವಿಶೋಕ ಎಂದನು ನಗುತ ಕಲಿಭೀಮ ೩೨

ತಗರು ತೊಲಗಿದಡೇನು ಬಲುಗಾ
ಳೆಗದ ಗಾಢಿಕೆ ಮೇಲೆ ಶೌರ್ಯದ
ಸೊಗಡ ಸೈರಿಸಲರಿಯೆ ಕಲಿತನದಂಗ ನಿನಗೇಕೆ
ಉಗಿ ಸರಳ ಬಿಲುಗಾರನಾದರೆ
ತೆಗೆದು ಕೈದುವ ಕೊಳ್ಳೆನುತ ತನಿ
ಹೊಗರುಗಣೆಗಳ ಸೂಸಿದನು ರವಿಸೂನು ಸಮರದಲಿ ೩೩

ಸರಳ ಸರಳಲಿ ಕಡಿವನೆಚ್ಚರೆ
ತರಹರಿಸಿ ಮಗುಳೆಚ್ಚನೌಕಿದ
ಡುರವಣಿಸಿದನು ಸಿಂಹಗರ್ಜನದೊಡನೆ ಗರ್ಜಿಸಿದ
ತಿರುಗೆ ತಿರುಗಿದನೊತ್ತಲಗಿದೊ
ತ್ತರಿಸಿದನು ಭುಜಬಲಕೆ ಭುಜಬಲ
ಸರಿಯೆನಿಸಿ ಸಮ ಬೆಸನನೆಚ್ಚಾಡಿದನು ಕಲಿಕರ್ಣ ೩೪

ಬಳಲಿದವು ತೇಜಿಗಳು ಸಾರಥಿ
ಯಳುಕಿದನು ಶರಹತಿಗೆ ಭೀಮನ
ಬಲು ಪತಾಕೆ ತನುತ್ರ ರಥ ಕರ್ಣಾಸ್ತ್ರಮಯವಾಯ್ತು
ಹಿಳುಕ ಹೊದಿಸಿದನಖಿಲ ದೆಸೆಗಳ
ನಿಲುಕಲರಿದೆನೆ ನಿಮಿಷ ಮಾತ್ರಕೆ
ಕಳಚಿ ಕಳೆದನು ಭೀಮ ತೊಟ್ಟನು ಮತ್ತೆ ಮಾರ್ಗಣವ ೩೫

ತರಹರಿಸು ಬಿಲುಗಾರನಾದರೆ
ಪರಿಹರಿಸಿಕೊಳ್ಳೆನುತ ಪವನಜ
ಬಿರುಗಣೆಯಲಿರದೆಚ್ಚನಹಿತನ ಧನುವ ಸಾರಥಿಯ
ತುರಗವನು ಸಿಂಧವನು ಮಾರ್ಗಣ
ವೆರಡರಲಿ ನುಗ್ಗೊತ್ತೆ ರಥದಿಂ
ಧರಣಿಗಿಳಿದನು ಕರ್ಣ ಕೊಂಡನು ಹಲಗೆ ಖಂಡೆಯವ ೩೬

ಉಳಿಯಲೊಲೆದಿದಿರಾಗಿ ತಾಗಿದ
ಬಲುಕಣೆಯ ಕರವಾಳನಿಕ್ಕಡಿ
ಗಳೆದು ಹಲಗೆಯನೆಂಟು ಕಡಿ ಮಾಡಿದನು ಕಲಿಭೀಮ
ತೊಲಗು ಬಾಹಿರ ಮತ್ತೆ ಸಾರಥಿ
ಬಿಲು ರಥವನನುಮಾಡು ಪಾರ್ಥಗೆ
ಕಳದ ವಿಾಸಲು ಕೊಲ್ಲೆನೆಲವೋ ಕರ್ಣ ಹೋಗೆಂದ ೩೭

ತೇರ ಬಾಚಲಿ ಬೇಗ ಬಲುಗೈ
ಸಾರಥಿಯು ಬರಹೇಳು ಹಿಂದಣ
ಸಾರಥಿಯ ದೆಸೆಯಿಂದ ಬಂದುದು ಕರ್ಣ ಸೋಲುವನೆ
ವೀರನಾವೆಡೆ ಶೌರ್ಯ ಪಾರಾ
ವಾರನಾವೆಡೆಯೆನುತ ಕೌರವ
ಧಾರುಣೀಪತಿ ಬೆಸಸಿದನು ತನ್ನನುಜ ದುರ್ಜಯಗೆ ೩೮

ಬಿಲುದುಡುಕಿ ರಿಪುಭಟನೊಡನೆ ಮುಂ
ಕೊಳಿಸಿದನು ದುರ್ಜಯನು ಹಿಮ್ಮೆ
ಟ್ಟೆಲವೊ ಪವನಜ ನಿಂದಡರಿವೆನು ನಿನ್ನೊಡಲನೆನುತ
ಒಲುಮೆಯೊಡಹುಟ್ಟಿದರ ಬಯಕೆಯ
ಸಲಿಸುವರೆ ನಾವಲ್ಲವೇ ಕುರು
ಕುಲ ಲಲಾಮರು ತಪ್ಪಿ ನುಡಿಯರೆನುತ್ತ ಮುಂಡಿಸಿದ ೩೯

ಕೀಲಿಸಿದನೆಂಟಂಬಿನಲಿ ತುರ
ಗಾಳಿಯನು ಸಾರಥಿಯನಾತನ
ಕೋಲ ಖಂಡಿಸಿ ಧನುವ ಕಡಿದನು ಮೂರುಬಾಣದಲಿ
ಹೋಳುಗಳೆದನು ಸುಭಟನಿಟ್ಟೆಲು
ಮೂಳೆಯನು ಮುಂಕೊಂಡ ಬಿರುದರ
ಸೀಳಿದನು ಕರೆ ಮತ್ತೆ ಕರ್ಣನನೆನುತ ಬೊಬ್ಬಿರಿದ ೪೦

ರಥವ ಮೇಳೈಸಿದನು ಹೊಸ ಸಾ
ರಥಿಯು ಕರಸಿದನಾಹವದೊಳತಿ
ರಥಭಯಂಕರನೇರಿದನು ಬಲುಬಿಲ್ಲನೊದರಿಸುತ
ಪೃಥುವಿ ನೆಗ್ಗಲು ಸುಭಟ ಸಾಗರ
ಮಥನ ಕರ್ಣನು ಭೀಮಸೇನನ
ರಥವನರಸುತ ಬಂದು ಪುನರಪಿ ಕಾಳೆಗವ ಹಿಡಿದ ೪೧

ಗೆಲಿದು ಹೋಗದಿರಿನ್ನು ಕರುಳನು
ಕಲಕುವೆನು ನಿಲ್ಲೆನುತ ರವಿಸುತ
ಸೆಳೆದು ಮುಷ್ಟಿಯ ಕೆನ್ನೆಗಡಿಯಂಬಿನಲಿ ಬರೆ ಕಂಡು
ಎಲವೊ ಲೋಕದ ಭಂಡ ನಿನ್ನೊಡ
ನುಲಿವವರು ನಾವಲ್ಲ ಮಲೆತರೆ
ತಲೆಯ ಕಾಯಿದು ಬಿಡುವೆನಲ್ಲದೆ ಕೊಲುವನಲ್ಲೆಂದ ೪೨

ಸರಳ ಸರಿಸೋನೆಯನು ಪವನಜ
ಗಿರಿಗೆ ಕರೆದುದು ಕರ್ಣ ಮೇಘದ
ಹೊರಳಿಯೇನೆಂಬೆನು ಮಹಾಸಂಗ್ರಾಮ ಸಂಭ್ರಮವ
ಸರಳಿನಲಿ ಧನುವಿನಲಿ ಗದೆಯಲಿ
ಕರಹತಿಯಲಹಿತಾಸ್ತ್ರವನು ಸಂ
ಹರಿಸಿ ಬೀಸಿತು ಭೀಮಮಾರುತ ಕರ್ಣಮೇಘದಲಿ ೪೩

ಧನುವನಿಕ್ಕಡಿಗಳೆದು ರಿಪು ಸೂ
ತನ ಶಿರವ ಹರಿಯೆಸಲು ಸಾರಥಿ
ತನವ ತಾನೇ ಮಾಡುತಿದಿರಾದನು ಕೃಪಾಣದಲಿ
ಕನಲಿ ಖಡ್ಗವ ಮುರಿಯೆಸಲು ಮು
ಮ್ಮೊನೆಯ ಶೂಲದಲಿಟ್ಟನಂತದ
ನನಿಲಸುತ ಖಂಡಿಸಲು ಮುರಿದನು ಮೋನದಲಿ ಕರ್ಣ ೪೪

ಪವನಜನ ಬಡಿಹೋರಿ ಹೋದನೆ
ರವಿ ಸುತನು ಹೋಗಲಿ ವೃಕೋದರ
ನವಯವವ ಕೇಣಿಯನು ಕೊಟ್ಟೆವು ಬಾಣತತಿಗೆನುತ
ತವ ಕುಮಾರರು ಮತ್ತೆ ಬಹಳಾ
ಹವವ ಹೊಕ್ಕರು ಹಕ್ಕಲಾದವ
ರವಗಡಿಸಿ ಕೆಣಕಿದರು ರಿಪು ಕಲ್ಪಾಂತ ಭೈರವನ ೪೫

ವೀರರೆಂದೆನಿಸುವರು ತೊಡೆಹದ
ಶೌರಿಯದ ಸಿರಿವಂತರರಸುಕು
ಮಾರಕರು ನಿನ್ನವರು ಕೋಮಲ ಧೈರ್ಯರಾಹವಕೆ
ಮಾರಿ ಮುಖದವ ಕಠಿನಮನ ನಿ
ಸ್ಸಾರ ಹೃದಯನು ಭೀಮನವನೊಳು
ಹೋರಿದವರೇನಹರು ಕೇಳೈ ನಿನ್ನವರ ವಿಧಿಯ ೪೬

ಒಳಗೊಳಗೆ ತನ್ನಾಣೆ ಘೋಷಣೆ
ಸಲುವುದಲ್ಲದೆ ಸೊಡರು ಬೀದಿಗೆ
ಸುಳಿಯಲೆಲ್ಲಿಯು ಬೆಳಗು ತನ್ನುಳಿವಿಂಗೆ ಹೊಣೆಯಾರು
ಕೆಲಬಲದ ಮನ್ನೆಯರ ಹೊಯ್ವ
ಗ್ಗಳಿಕೆ ಕೊಂಬುದೆ ಭೀಮನಲಿ ಕೈ
ಹೊಲಸುಂಗಾರನು ಹಿಂಡಿದನು ಕೌರವ ಸಹೋದರರ　೪೭

ದ್ರುಮ ವಿಕರ್ಣ ಸುಷೇಣ ಚಾರು
ಕ್ರಮ ವಿವಿತ್ಸುಕ ವಜ್ರಬಾಹುಕ
ದಮನ ದೀರ್ಘೋದರ ಮಹೋದರ ಕುಂಡದಾರುಕನ
ಯಮನ ಕೈಯೆಡೆಗೊಟ್ಟು ಘನ ವಿ
ಕ್ರಮದ ಸಿರಿ ಹೊದರೇಳೆ ಜಯವಿ
ಕ್ರಮದೊಳಬ್ಬರಿಸಿದನು ನಿಷ್ಠುರ ಸಿಂಹನಾದದಲಿ　೪೮

ಇದೆ ಸಮೀರಕುಮಾರಕನ ಜಯ
ಮದದ ಸಿಂಹಧ್ವನಿಯೆನುತ ಹಿ
ಗ್ಗಿದನು ಧರ್ಮಜನೊದರಿದವು ಗಂಭೀರಭೇರಿಗಳು
ಕದನ ಲಗ್ಗೆಯ ಕಹಳೆ ಬಹು ವಾ
ದ್ಯದ ಮಹಾದ್ಭುತರಭಸ ಮಿಗೆ ಹೊ
ಡಿದನು ಸನ್ನಾಹದಲಿ ಹೊಕ್ಕನು ಮತ್ತೆ ಕಲಿಕರ್ಣ　೪೯

ನವ ವರೂಥ ತುರಂಗ ಸಾರಥಿ
ಸವಗ ಮೊಚ್ಚೆಯದಲ್ಲಿ ಬಹಳಾ
ಹವದೊಳಗೆ ಮುಂಕೊಂಡು ಭೀಮನ ಹಳಚಿದನು ಕರ್ಣ
ತವಕ ಮಿಗಲೆಚ್ಚಾಡಿ ಪುನರಪಿ
ಪವನಜನ ಘಾಯದಲಿ ಸೋಲಿದು
ಬವರಮುಖದಲಿ ಹಿಂಗಿದನು ಹದಿನೆಂಟು ಸೂಳಿನಲಿ　೫೦

ಮುಳಿದು ಮೀಸೆಯ ಮುರಿದು ಹುಬ್ಬನು
ಬಲಿದು ದಳ್ಳುರಿದಿರುಳನಕ್ಷಿಗ
ಳೊಳಗೆ ಪಸರಿಸಿ ಘುಡುಘುಡಿಸಿ ರೋಮಾಳಿ ಸೈ ನಿಮಿರೆ
ಹಲು ಮೊರೆದು ಹೊಗರಿಡುವ ಮೋರೆಯ
ಲಿಳಿವ ಬೆಮರನು ಬೆರಳ ಕೊನೆಯಲಿ
ಬಳಿದು ಭಾರ್ಗವದತ್ತಬಾಣಕೆ ನೀಡಿದನು ಕರವ　೫೧

ಎಲವೆಲವೊ ಕಲಿಯಾಗು ಮಾರುತಿ
ಗೆಲಿದನೆಂದಿರಬೇಡ ಸೋಲದ
ಗೆಲವಿನುದಯ ಮುಹೂರ್ತ ವಶ ಮೈಗುಡದೆ ಕಾದುವುದು
ಛಲವದುಳ್ಳಡೆ ಸಾಕು ನೀನೀ
ಹಲಗೆಯಲಿ ಹೊಕ್ಕಾಡಿ ಮರಳಿದು
ತಲೆವೆರಸಿ ನೀ ಹೋದಡಸ್ವತ್ಥಾಮ ತನಗೆಂದ　೫೨

ಉಂಟು ಶಿವ ಶಿವ ಹುಸಿಯ ನುಡಿ ನಿನ
ಗುಂಟೆ ಗೆಲ್ಲದೆ ಮಾಣೆ ಶೌರ್ಯದ
ಗಂಟು ಬಲುಹದ ಕಂಡು ಬಲ್ಲೆನು ಹಲವುಬಾರಿಯಲಿ
ಸುಂಟಿಗೆಯನಾಯ್ವೆನು ಕಣಾ ಬಲು
ಕಂಟಕವಲೇ ನರನ ನುಡಿ ನೀ
ನೆಂಟುಮುಡಿ ಗಳಹಿದರೆ ತಪ್ಪೇನೆಂದನಾ ಭೀಮ　೫೩

ಆದಡೆಲವೊ ದುರಾತ್ಮ ಮಾರುತಿ
ವಾದದಲಿ ಫಲವೇನು ಬಲ್ಲರೆ
ಕಾದುಕೊಳ್ಳಾ ಸಾಕು ಕಡುಸಾಹಸಿಕ ಗಡ ನೀನು
ಹೋದೆ ಹೋಗಿನ್ನೆನುತ ಕಣೆ ಹದಿ
ನೈದರಲಿ ಕೆಡಹಿದನು ತುರಗವ
ನೈದುಬಾಣದಲೆಚ್ಚು ಕಡಿದೀಡಾಡಿದನು ರಥವ　೫೪

ಎರಡು ಶರದಲಿ ಸಾರಥಿಯ ಹೇ
ರುರವನೆಸೆಯಲು ಘಾಯದಲಿ ತರ
ಹರಿಸದವ ಹಾಯ್ದನು ಯುಧಾಮನ್ಯುವಿನ ಹೊರೆಗಾಗಿ
ಮರಳಿ ಹತ್ತಂಬಿನಲಿ ಭೀಮನ
ಕೆರಳಿಚಿದನಾರಂಬಿನಲಿ ಹ
ನ್ನೆರಡರಲಿ ಹದಿನೆಂಟರಲಿ ಮುಗುಳೆಚ್ಚು ಬೊಬ್ಬಿರಿದ　೫೫

ಶರಹತಿಗೆ ಸೆಡೆಯದೆ ವೃಕೋದರ
ನೆರಡು ಕವಲಂಬಿನಲಿ ಕರ್ಣನ
ಶಿರವನೆಚ್ಚಡೆ ತರಿದನೆಡೆಯಲಿ ಭಾನುಸುತ ನಗುತ
ತಿರುಹಿ ಶಕ್ತಿಯಲಿಟ್ಟರೆಡೆಯಲಿ
ತರಿದು ಭೀಮನ ಕರದ ಚಾಪವ
ನೆರಡುಕಡಿ ಮಾಡಿದನು ಬಳಿಯಲಿ ನೊಸಲನೊಡೆಯೆಚ್ಚ　೫೬

ವಾಯುಸುತ ಖಾತಿಯಲಿ ಹಲಗೆಯ
ಡಾಯುಧವ ಕೊಂಡರಿಭಟನ ಮೇ
ಲ್ವಾಯಿದಡೆ ಸಮ್ಮುಖವ ಬಿಟ್ಟನು ಧ್ವಜದ ಕಂಭದಲಿ
ಆಯುಧವ ಕೊಂಡೈದಿದಡೆ ಹಗೆ
ಮಾಯವಾದನು ಪೂತುರೆನುತ ಗ
ದಾಯುಧನು ಮರಳಿದರೆ ಕೈಯೊಡನೆದ್ದನಾ ಕರ್ಣ　೫೭

ಅರಿ ಬೊಬ್ಬಿರಿದೆಚ್ಚನನಿಲಕು
ಮಾರಕನ ಖಂಡೆಯವನೊಂದೇ
ಕೂರಲಗಿನಲಿ ಕಡಿದು ಬಿಸುಟನು ಹಿಡಿದ ಹಲಗೆಯನು
ಆರುಭಟೆಯಲಿ ಭೀಮ ಕಾವವ
ರಾರು ಕರೆಯಾ ಕರ್ಣ ಕೊಲಂವಡ
ದಾರು ಫಡ ಹಿಂದಿಕ್ಕಿ ಕೊಂಬವರೆನುತ ಗರ್ಜಿಸಿದ　೫೮

ಮಡಿದ ಕರಿಗಳ ಕಾಯವನು ನಿ
ಟ್ಟೊಡಲ ತುರಗಂಗಳನು ಮುಗ್ಗಿದ
ಕೆಡೆದ ತೇರಿನ ಗಾಲಿಗಳ ಕೊಂಡಿಟ್ಟನಾ ಭೀಮ
ಎಡೆಯಲಾ ಕರಿಯೊಡಲನಾ ಹಯ
ದೊಡಲನಾ ರಥ ಚಕ್ರವನು ಕಡಿ
ಕಡಿದು ಬಿಸುಟನು ಹೊದ್ದಿದನು ಕಟ್ಟಳವಿಯಲಿ ಕರ್ಣ　೫೯

ಕೈದು ನೆರೆತೀರಿದರೆ ಹೆಣನೇ
ಕೈದುವಾದುವು ಪರಬಲಾಂತಕ
ಕೈದುಕಾರರ ಕೈಯ ಬಾಯಲಿ ಭೀಮ ಸಿಲುಕಿದೆಲಾ
ಕಾದುಕೊಳ್ಳನೆ ಕೃಷ್ಣ ನಿನ್ನಯ
ಮೈದುನನು ಗಡ ಮರೆಯ ಹೊಗು ಹೋ
ಗೈದೆಯುಹಳೋ ವಿಧವೆಯೋ ಪಾಂಚಾಲಿ ಹೇಳೆಂದ　೬೦

ಬಿಲ್ಲ ಕೊಪ್ಪಿನಲಿರಿದು ಭೀಮನ
ಘಲ್ಲಿಸಿದನೆಲವೆಲವೊ ಮಾರುತಿ
ಯುಳ್ಳಿಗಡ್ಡದ ಹರಿದಲೆಯ ರಣಮೂಢ ಸಿಲುಕಿದೆಲಾ
ಎಲ್ಲಿ ನಿನ್ನಾಟೋಪ ಹಿಂದಣ
ಹೊಳ್ಳುನುಡಿ ಹಾರಿದವೆ ಕೌರವ
ರೆಲ್ಲರನು ಸವರಿದೆಯೆಲಾ ಸಂದೇಹವೇನೆಂದ ೭೧

ಒಡೆಯ ದುರಿಯೋಧನನ ತೊಡೆಗಳ
ನುಡಿವೆ ದುಶ್ಶಾಸನನ ರಕುತವ
ಕುಡಿವೆನೆಂದುಬ್ಬಟೆಯ ಭಾಷೆಯಲಾ ಮಹಾದೇವ
ನುಡಿದ ನುಡಿವಳಿ ಸಂದುದೇ ನಿ
ಮ್ಮಡಿಗಳಿಗೆ ಕಲಿಭೀಮ ದುಗುಡವ
ಬಿಡು ಮರುಳೆ ತಲೆಗುತ್ತಲೇತಕೆಯೆಂದನಾ ಕರ್ಣ ೭೨

ಎಲ್ಲಿ ಷಡುರಸಮಯದ ಭೋಜನ
ವೆಲ್ಲಿ ಮಧುರ ಫಲೌಘದುಬ್ಬರ
ವೆಲ್ಲಿ ನಾನಾ ಭಕ್ಷ್ಯಗಿರಿಗಳು ಘೃತದ ಕಡಲುಗಳು
ಅಲ್ಲಿ ನಿನ್ನುರವಣೆಗಳೊಪ್ಪುವ
ದಲ್ಲದೀ ಸಂಗ್ರಾಮ ಮುಖದಲಿ
ಬಿಲ್ಲಹಬ್ಬದ ತುಷ್ಟಿ ನಿನಗೇಕೆಂದನಾ ಕರ್ಣ ೭೩

ತಾಯ ಮಾತನು ಮೀರಿ ನಿನ್ನನು
ನೋಯಿಸಿದೆನದೆ ಸಾಕು ಜೀವವ
ಕಾಯಿದೆನು ಬಿಟ್ಟೆನು ವೃಕೋದರ ಹೋಗು ಹೋಗೆನಲು
ವಾಯುಸುತ ಸಿಲುಕಿದನಲಾ ಕಾ
ಳಾಯಿತೆನುತಸುರಾರಿ ರಥವನು
ಹಾಯಿಸಲು ಮುರಿಯೆಚ್ಚು ಕರ್ಣನ ತೆಗೆಸಿದನು ಪಾರ್ಥ ೭೪

## ಹದಿನಾಲ್ಕನೆಯ ಸಂಧಿ

ಸೂ. ಸಂಗರದೊಳಂದಹಿತಭಟ ಮಾ
ತಂಗ ಕಂಠೀರವನು ರಣದೊಳ
ಭಂಗ ಮುರಿದನು ಫಲುಗುಣನು ರಿಪುರಾಯ ಸೈಂಧವನ

ಚಿತ್ತವಿಸು ಧೃತರಾಷ್ಟ್ರ ರವಿಸುತ
ನಿತ್ತ ಮುರಿದನು ಸಾತ್ಯಕಿಯ ರಥ
ದತ್ತ ತಿರುಗಿದನನಿಲಸುತ ಭಾರಣೆಯ ದುಗುಡದಲಿ
ಇತ್ತ ಭೂರಿಶ್ರವನು ಭಾರಿಯ
ಹತ್ತು ಸಾವಿರ ರಥಸಹಿತ,ಕೈ
ಗುತ್ತಿದನು ರಣವಿಜಯಲಕ್ಷ್ಮಿಯ ಲಲಿತಕಬರಿಯಲಿ ೧

ಒಂದು ಕಡೆಯಲಿ ಕರ್ಣ ಗುರುಸುತ
ರೊಂದು ದೆಸೆಯಲಿ ಶಲ್ಯ ಶಕುನಿಗ
ಳೊಂದು ದೆಸೆಯಲಿ ಭೂರಿ ಕೃತವರ್ಮಕ ಸುಯೋಧನರು
ಮುಂದುಗೆಡಿಸಿದರರ್ಜುನನನೀ
ಬಂದ ಭೂರಿಶ್ರವನ ನಿಲಿಸುವೆ
ನೆಂದು ಸಾತ್ಯಕಿ ಬಿಟ್ಟನಾತನ ಹೊರೆಗೆ ನಿಜರಥವ ೨

ಎಲವೆಲವೊ ಭೂರಿಶ್ರವನೆ ಫಡ
ಗೆಲಿದು ಹೋಗದಿರೆಲ್ಲಿ ಹೊಗುವಡೆ
ತಲೆವೆರಸಿ ಹೊಗಲೀಯೆನಿದಿರಾಗೆನುತ ಮೂದಲಿಸೆ
ಎಲವೊ ಸಾತ್ಯಕಿ ಸುಭಟ ಬಾಹಿರ
ಗಳಹದಿರು ದಿಟ ವೀರನೇ ಕೂ
ರಲಗಿನಲಿ ಮಾತಾಡು ಬರಿನುಡಿ ಭಂಡತನವೆಂದ ೩

ಆದಡಿದ ಕೊಳ್ಳೆನುತ ಸಾತ್ಯಕಿ
ಕೋದನಭ್ರವನಂಬಿನಲಿ ಬಲು
ಹಾದನೈ ಮರುಳು ಎನುತ ಕಡಿನು ಸೋಮದತ್ತಸುತ
ಕಾದುಕೊಳ್ಳೆನುತೆಚ್ಚನಂಬಿನ
ಬೀದಿವರಿ ಬಲುಹಾಯ್ತು ಖತಿಯಲಿ
ಕೈದುಕಾರರು ಮೆಚ್ಚಿಸಿದರಮರಾಸುರಾವಳಿಯ ೪

ದೂರದಲಿ ನಿಂದೊಬ್ಬರೊಬ್ಬರ
ನಾರು ಮಾಡುವುದೇನು ಸಾತ್ಯಕಿ
ಕೂರಸಿಯನುಗಿ ಬಿಸುಟು ಕಳೆ ಕೋದಂಡ ಮಾರ್ಗಣವ
ವೀರನಹಡಿದಿರಾಗೆನುತ ಬಹು
ಭಾರಣದ ಚಮ್ಮಟದ ಖಡುಗದ
ಪಾರಗದ ಪರಿಣತರು ಹೆಣಗಿದರುಬ್ಬಣಾಯತರು ೫

ನೆಲನ ತಗ್ಗಿನಲುಪ್ಪರದ ಮೆ
ಯ್ಯೊಲವಿನಲಿ ಪಾರಗದ ಬವರಿಯ
ಸುಳುಹಿನಲಿ ಚಮ್ಮಟದ ಪಯಮಂಚನೆಯಲುಜ್ಜುಟದ
ಬಲಿದ ದಂಡೆಯ ಮಸೆಯ ಬಯಸಿಕೆ
ಲುಳಿಯ ಮೈಗಳ ಲವಣಿಸಾರರು
ಕೊಳುಗಿಡಿಯ ಖಂಡೆಯದ ಖಣೆಕಟಿಲೆಸೆಯೆ ಕಾದಿದರು ೬

ತಳಿತ ಮಿಂಚಿನ ಮುರಿವುಗಳೊ ತನಿ
ಹೊಳಹುಗಳೊ ಖಂಡೆಯದ ಧಾರೆಯ
ಕೊಳುಗಿಡಿಯೊ ಖದ್ಯೋತರಾಸಿಯೊ ಹೇಳಲೇನದನು
ಖಳಿಕಟಿಲ ಬಿರುವೊಯಿಲೊ ಸಿಡಿಲಿನ
ಸುಳಿಯೊ ಮೈಮಸೆಯರುಣವಾರಿಯೊ
ಮಳೆಗಳಿಲ್ಲದ ಹೊನಲೊ ರಣದಲಿ ಚಿತ್ರವಾಯ್ತೆಂದ ೭

ಲುಳಿಯ ಪಯಪಾಡುಗಳ ಬವರಿಯ
ಸುಳಿವುಗಳ ಜಾರುಗಳ ಘಾಯದ
ಕಳವುಗಳ ಕೈಮೆಗಳ ಮೋಡಾಮೋಡಿಯುಬ್ಬಣದ
ಲಲಿತ ಚಿತ್ರದ ಚದುರ ಭಟರ
ವ್ವಳಿಸಿ ಹೊಯ್ದಾಡಿದರು ನೋಟಕ
ರುಲಿದುದಿಬ್ಬರ ಶ್ರಮದ ಶೌರ್ಯದ ವೆಗ್ಗಳೆಯತನಕೆ ೮

ಮಸೆಯ ಮೈಗಳೊಳೊರೆವುತಿರ್ದುವು
ಬಿಸಿರಕುತ ಮೊನೆಗುತ್ತುಗಳ ಕಿ
ಬ್ಬಸುರಿನಲಿ ಜೋಲಿದವು ಕರುಳುಗಳಾಹವದ ಭಟರ
ಮಸಕ ಮಸುಳದು ಮನದ ಖಾತಿಯು
ಮುಸುಡು ಮುರಿಯದು ಬಿಗಿದ ಹುಬ್ಬಿನ
ಬೆಸುಗೆ ಸಡಿಲದು ಭೂಪ ಭೂರಿಶ್ರವನ ಸಾತ್ಯಕಿಯ ೯

ಬರಬರಲು ರಿಪುಭಟನ ಹೊಯ್ಲುಗ್ಗಳ
ಧರಧುರಕೆ ಕಲಿ ಸಾತ್ಯಕಿಯ ತರ
ಹರಣೆ ತಗ್ಗಿತು ಮಹಿಮೆ ಮುಗ್ಗಿತು ಮುರಿದುದಗ್ಗಳಿಕೆ
ಉರವಣಿಸಿ ಭೂರಿಶ್ರವನು ರಿಪು
ವರನ ಖಡುಗವ ಮುರಿಯ ಹೊಯ್ದು
ಬ್ಬರಿಸಿ ಕಡೆಗಾಲಿಂದ ಹೊಯ್ದನು ಹಾಯ್ದು ಮುಂದಲೆಗೆ ೧೦

ಕೊಡಹಿ ಕುಸುರಿದಡ್ಡ ಬೀಳಿಕಿ
ಮಡದಲುರೆ ಘಟ್ಟಿಸಿ ಕೃಪಾಣವ
ಜಡಿದು ಗಂಟಲ ಬಳಿಗೆ ಹೂಡಿದನರಿವುದಕೆ ಕೊರಳ
ಹಿಡಿದು ಮಹಾಸ್ತ್ರವ ನಿನ್ನ ಶಿಷ್ಯನ
ಕಡು ನಿರೋಧವ ನೋಡು ಫಲುಗುಣ
ನುಡಿಗೆ ತೆರಹಿಲ್ಲೆಂದು ಮುರರಿಪು ಜರೆದನರ್ಜುನನ ೧೧

ದೇವ ನಮ್ಮದು ಧರ್ಮಯುದ್ಧವಿ
ದಾವ ಹದನನು ಬೆಸಸಿದಿರಿ ತಲೆ
ಗಾವುದೇನರಿದಲ್ಲ ಮೊದಲಲಿ ನುಡಿದ ಸಮಯವನು
ಭಾವಿಸುವುದೆನೆ ಮುಗುಳುನಗೆಯಲಿ
ರಾವಣಾಂತಕನೆಂದನೆಲೆ ಮರು
ಳಾವ ನಿರುತದ ಧರ್ಮವಿದ್ದುದು ಕೌರವೇಂದ್ರನಲಿ ೧೨

ನೆರೆದ ಷಡುರಥರೊಬ್ಬ ಹಸುಳೆಯ
ಕೊರಳನರಿವಂದಾವ ಧರ್ಮದ
ನಿರುತವನು ನೀ ಕಂಡೆಯೆನಲುರಿ ಮಸಗಿತುದರದಲಿ
ಸರಳ ಕೆನ್ನೆಗೆ ಸೇದಿದನು ಸಂ
ಗರದ ಭೂರಿಶ್ರವನ ಖಡುಗದ
ಕರವ ಕತ್ತರಿಸಿದನು ತಲೆಗಾಯಿದನು ಸಾತ್ಯಕಿಯ ೧೩

ಭರದಲೆತ್ತಿದ ತೋಳು ಕಡಿವಡೆ
ದುರುಳಿತವನಿಗೆ ಸುರಿವ ರಕುತದ
ಸರಿವಿನಲಿ ನೆರೆ ನನೆದು ಭೂರಿಶ್ರವನು ನಸುನಗುತ
ಮುರಿದು ಪಾರ್ಥನ ನೋಡಿ ಪಾಮದ
ಬೆರಳನೊಲೆದನು ಲೇಸು ಲೇಸ
ಬ್ಬರದ ಬಿರುದಿನ ಧರ್ಮನಿಷ್ಠರು ಪಾಂಡುಸುತರೆಂದ ೧೪

ಆರು ಕೊಟ್ಟರು ಶರವನಿದ ಮದ
ನಾರಿಯೋ ನಿಮ್ಮಯ್ಯನಹ ಜಂ
ಭಾರಿಯೋ ಮೇಣ್ ಕೃಷ್ಣ ದ್ರೋಣರೊ ಹೇಳು ಹುಸಿಯದಿರು
ವೀರನಹೆಯೋ ಪಾರ್ಥ ನಿನ್ನವೊ
ಲಾರು ಬಿಲುಗಾರರು ಮಹಾಸ್ತ್ರವಿ
ದಾರು ಕಲಿಸಿದ ವಿದ್ಯವುಪಯೋಗಿಸಿತು ನಿನಗೆಂದ ೧೫

ಅರಿದೆನೀ ವಿದ್ಯವನು ಕೃಷ್ಣನೊ
ಳರಿದೆಯಾಗಲು ಬೇಕು ಕಪಟದ
ನೆರೆವಣಿಗೆಗಳನರಿಯರಿಂದ್ರ ದ್ರೋಣ ಶಂಕರರು
ಮರೆ ಮರೆಯಲಿರಿಗಾರನಸುರರ
ಮುರಿದನೆಂಬರು ಕುಹಕತಂತ್ರದ
ಹೊರಿಗೆವಾಳನ ಸಂಗದಲಿ ನೀವ್ ಕೆಟ್ಟಿರಕಟೆಂದ ೧೬

ಓಡಿ ಕೊಂದನು ಕಾಲಯವನನು
ಬೇಡಿ ಕೊಂದನು ಕೈಟಭನ ಕೈ
ಮಾಡಿ ಕೊಲಿಸಿದ ಮಾಗಧನನಭಿಮಾನಗೇಡುಗನ
ಕೂಡಿಕೊಂಡಿರಿ ಮೂರುಲೋಕದ
ಬೀಡರಿಯೆ ಬಾಹಿರನನೀ ಹರಿ
ಯಾಡಿಸಿದವೋಲಾಡಿ ಕೆಟ್ಟಿರಿ ಖಳರು ನೀವೆಂದ ೧೭

ಪೊಡವಿಯೊಳು ಯಾದವರು ಕ್ಷತ್ರಿಯ
ಗೆಡುಕರದರೊಳು ಹುಟ್ಟಿದನು ಕೊಲೆ
ಗಡಿಗ ಹಾವಿನ ಹುತ್ತದಲಿ ಹಾವ್ಮೆಕ್ಕೆ ಬೆಳೆದಂತೆ
ನಡೆವಳಿಯ ನೋಡಿದರೆ ಲೋಗರ
ಮಡದಿಯರು ತನ್ನವರು ಠಕ್ಕಿನ
ಕಡಲು ಕೃಷ್ಣನ ನಂಬಲಿಹಪರವಿಲ್ಲ ನಿಮಗೆಂದ ೧೮

ಎಂದಡೆಂದನು ಪಾರ್ಥನೆಲವೋ
ಮಂದಮತಿ ನೀನೆಂದರಹುದೆ ಮು
ಕುಂದನನು ನಂಬಿದರಿಗಿಹಪರಸೌಖ್ಯಭಯವಿಲ್ಲ
ಇಂದು ನಾವ್ ಮಾಡಿದುದು ಹೊಲ್ಲೆಹ
ವೆಂದೆ ನೀನದನರಿಯೆ ಶಿಷ್ಯನ
ಕುಂದು ಹೆಚ್ಚುಗಳಾರದೆಂಬುದ ಹೇಳು ನೀನೆಂದ ೧೯

ಎನಗೆ ಸಾತ್ಯಕಿ ಕೋಲ ಮಗನಾ
ತನ ವಧೆಯನಾ ಕಾಣಲಾಗದು
ಮನಕೆ ಮತವೇ ನಮ್ಮ ಹರಿಬಕೆ ಬಂದು ಕಾದುವನ
ನಿನಗೆ ಕೊಡುವೆನೆ ನಮ್ಮ ಧರ್ಮವ
ಜನವರಿಯದೇ ಹೋಗು ಹೋಗೆನೆ
ಮನದೊಳಗೆ ನಗುತಿರ್ದನಾ ಭೂರಿಶ್ರವ ಕ್ಷಿತಿಪ ೨೦

ಎಲವೊ ಸಾತ್ಯಕಿ ಬದುಕಿದೈ ನರ
ನುಳುಹಿಕೊಂಡನು ಹೋಗೆನುತ ಹೆಡ
ತಲೆಯನೊದೆದನು ನಿಂದು ಬರಿಕೈ ಮುರಿದ ಗಜದಂತೆ
ಒಲೆವುತೈತಂದೊಂದು ರಣಮಂ
ಡಲದೊಳಗೆ ಪದ್ಮಾಸನವನನು
ಕೊಳಿಸಿ ಯೋಗಾರೂಢನಾದನು ಪರಸಮಾಧಿಯಲಿ ೨೧

ತರಣಿಮಂಡಲದಲ್ಲಿ ದೃಷ್ಟಿಯ
ನಿರಿಸಿ ಬಹಿರಿಂದ್ರಿಯ ಬಳಕೆಯ
ಮುರಿದು ವೇದಾಂತದ ರಹಸ್ಯದ ವಸ್ತು ತಾನಾಗಿ
ಇರಲು ಸಾತ್ಯಕಿ ಕಂಡು ಖತಿಯು
ಬ್ಬರಿಸಿ ಕಿತ್ತ ಕಠಾರಿಯಲಿ ಹೊ
ಕ್ಕುರವಣಿಸಿ ಭೂರಿಶ್ರವನ ತುರುಬಿಂಗೆ ಲಾಗಿಸಿದ ೨೨

ಆಗದಾಗದು ಕಷ್ಟವಿದು ತೆಗೆ
ಬೇಗವೆನಲರ್ಜುನನ ಕೃಷ್ಣನ
ನಾಗಳವ ಕೈಕೊಳ್ಳದರಿದನು ಗೋಣನಾ ನೃಪನ
ಹೋಗು ಹೋಗೆಲೆ ಪಾಪಿ ಸುಕೃತವ
ನೀಗಿ ಹುಟ್ಟಿದೆ ರಾಜಋಷಿಯುವ
ನೇಗಿದನು ನಿನಗೆನುತ ಬೈದುದು ನಿಖಿಳಪರಿವಾರ ೨೩

ಒಡಲನೊಡೆದಾ ಜ್ಯೋತಿ ಗಗನಕೆ
ನಡೆದುದಿತ್ತಲು ಸುರರು ಮರ್ತ್ಯರು
ಸುಡು ಸುಡೆಂದುದು ಸಾತ್ಯಕಿಯ ದುಷ್ಕರ್ಮವಾಸನೆಗೆ
ಒಡಿದ ದುಗುಡದಲರ್ಜುನನು ಮನ
ಮಿಡುಕಿದನು ಕುರುನೃಪರು ಶೋಕದ
ಕಡಲೊಳದ್ದರು ಬೈವುತಿದ್ದರು ಕೃಷ್ಣಫಲುಗುಣರ ೨೪

ಇತ್ತ ರವಿರಶ್ಮಿಗಳು ನೆರೆ ಕೆಂ
ಪೊತ್ತಿದವು ಸೈಂಧವನನೀಗೊ
ತ್ತೊತ್ತೆಯಲಿ ನೆಲೆ ಕಾಣಬಾರದು ಸಾಕು ದುಮ್ಮಾನ
ಇತ್ತ ನಿಜಭಾಷೆಗೆ ಪರಾಭವ
ಹತ್ತಿರಾಯಿತು ನರ ನಿದಾನಿಸೆ
ನುತ್ತ ಮುರರಿಪು ರಥವ ಬಿಟ್ಟನು ಕಡೆಯ ಮೋಹರಕೆ ೨೫

ಕಾದಿರೈ ಷಡು ರಥರು ನೃಪತಿಗೆ
ಕಾದು ಕೊಡಿರೈ ಸೈಂಧವನನಿದು
ಕೈದುಕಾರರ ತಾವು ಸಾಹಸಿಗರಿಗೆ ಸಮಯವಿದು
ಮೂದಲೆಗಳಿವು ಮುಟ್ಟುವಡೆ ಮುನಿ
ಸಾದಡೊಳ್ಳಿತು ನಿಪ್ಪಸರದಲಿ
ಕಾದುವಿರಲೈ ಕಾಣಲಹುದೆಂದೊರಲಿದನು ಪಾರ್ಥ ೨೬

ಜರಿದುದೀ ಬಲರಾಸಿ ಗಾಳಿಯ
ಹೊರಳಿಗೊಡ್ಡಿದ ಹೊಟ್ಟು ಹಾರುವು
ದರಿದೆ ಗಿರಿಗಳು ನೆಲನ ಬಿಟ್ಟುದನೇನ ಹೇಳುವೆನು
ಗುರುತನುಜ ಕೃಪ ಕರ್ಣ ಮಾದ್ರೀ
ಶ್ವರ ಸುಯೋಧನ ಚಿತ್ರಸೇನರು
ಮುರಿದು ತರಹರಿಸಿದರು ಸೂಚೀವ್ಯೂಹದಗ್ರದಲಿ ೨೭

ಹರಿಯ ಬೊಬ್ಬೆ ರಥಾಶ್ವದಬ್ಬರ
ನರನ ಬಿಲುಟಂಕಾರ ತೇರಿನ
ಧರಧುರದ ಚೀತ್ಕಾರ ಹನುಮನ ಸಿಂಹನಿರ್ಘೋಷ
ಅರಿಬಲವ ತಿವಿದುದು ಚತುರ್ಬಲ
ಹೊರಳಿಯೊಡೆದುದು ಸುಭಟರೆದೆ ಜ
ರ್ಝರಿತವಾದುದು ಪಾರ್ಥ ಹೊಕ್ಕನು ಸೈಂಧವನ ದಳವ ೨೮

ಅಳವಿಗೊಡಲಿ ಮಹಾರಥರು ಕೈ
ಕೊಳಲಿ ಸೈಂಧವ ನೃಪನನೊಂದರೆ
ಘಳಿಗೆ ಕಾಯ್ದರೆ ನಾವು ನೆರೆ ಕೊಂದವರು ಫಲುಗುಣನ
ಹೊಳಹುಗೆಳೆದುದು ಕಾಲವಿನ್ನರೆ
ಘಳಿಗೆ ಸೈರಿಸಿ ಶಿವ ಶಿವಾಯೆಂ
ದೊಳಗೊಳಗೆ ಮೂದಲಿಸುತಿರ್ದರು ಭಟರು ತಮ್ಮೊಳಗೆ ೨೯

ಧನುವನೊದರಿಸಿ ಸಕಲ ಸುಭಟರು
ಮನವ ಬಲಿದೊಗ್ಗಾಗಿ ಸರಳಿನ
ಜಿನುಗುವಳೆಯಲಿ ನಾದಿದರು ನಾರಾಯಣಾರ್ಜುನರ
ಅನಿಬರಂಬನು ಕಡಿದು ಗುರುನಂ
ದನನ ಕರ್ಣನ ಕೃಪನ ದುರಿಯೋ
ಧನನ ಮೆಯ್ಯಲಿ ಮೆತ್ತಿದನು ಮುಮ್ಮೊನೆಯ ಬೋಳೆಗಳ ೩೦

ಫಡಫಡರ್ಜುನ ಹೋಗು ಹೋಗಳ
ವಡದು ಸೈಂಧವನಳಿವು ಭಾಷೆಯ
ನಡಸಬಲ್ಲರೆ ಬೇಗ ಬೆಳಗಿಸು ಹವ್ಯವಾಹನನ
ಕಡಲ ಮಧ್ಯದ ಗಿರಿಗೆ ಸುರಪತಿ
ಕಡುಗಿ ಮಾಡುವುದೇನೆನುತ ಕೈ
ಗಡಿಯ ಬಿಲ್ಲಾಳುಗಳು ಬಿಗಿದರು ಸರಳಲಂಬರವ ೩೧

ದ್ಯುಮಣಿಯೊದೆದರೆ ತರಹರಿಸುವುದೆ
ತಿಮಿರ ರಾಜನ ದೇಹವೀ ವಿ
ಕ್ರಮ ದರಿದ್ರರಿಗಳುಕಿದರೆ ಬಳಿಕವ ಧನಂಜಯನೆ
ಸಮತಳಿಸಿ ಶರವಳೆಯ ಕರೆದು
ದ್ಭ್ರಮಿ ಮಹಾರಥ ಭಟರ ವಿಜಯದ
ಮಮತೆಗಳ ಮಾಣಿಸಿದನಂದಮಳಾಸ್ತ್ರಬೋಧೆಯಲಿ ೩೨

ನೊಂದು ಮರಳದೆ ಮಸಗಿ ಸೂರ್ಯನ
ನಂದನನು ತಾಗಿದನು ಗುರುಸುತ
ಮುಂದುವರಿದನು ತಲೆ ಹರಿದರೆನ್ನಟ್ಟೆ ಕಲಿಯೆನುತ
ಇಂದಿನಲಿ ಮಹನವಮಿ ತಲೆಗಳಿ
ಗೆಂದು ಕವಿದರು ಸಕಲ ಭಟರರ
ವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ ೩೩

ಮೇಲೆ ಬಿದ್ದುದು ಸೇನೆ ಸವೆಯದು
ನಾಳೆ ಪರಿಯಂತರ ಘಳಿಗೆಗಿಸ
ನಾಳುವನು ಜಲಧಿಯಲಿ ಕಾಣೆನು ವೈರಿ ಸೈಂಧವನ
ಹೇಳಿ ಫಲವೇನಿನ್ನು ವಹ್ನಿ
ಜ್ವಾಲೆ ಕೊಳ್ಳಲಿ ದೇಹವನು ಸಾ
ಕೇಳು ಮುರಹರ ತೇರ ತಿರುಹೆನ್ನೆಂದನಾ ಪಾರ್ಥ ೩೪

ಸಲಿಸಬೇಹುದು ಭಕುತ ಮಾಡಿದ
ಛಲದ ಭಾಷೆಯನೆನುತ ರವಿಮಂ
ಡಲಕೆ ಮರೆಯೊಡ್ಡಿದನು ಮುರರಿಪು ವರಸುದರ್ಶನವ
ಕಳನೊಳಗೆ ಕತ್ತಲಿಸಿತಹಿತನ
ಕೊಲೆಗೆ ಕಾವಳ ಕವಿದವೋಲರೆ
ಘಳಿಗೆಯಲಿ ಸುಮ್ಮಾನ ಮಸಗಿತು ಸಕಲ ಕುರುಬಲಕೆ ೩೫

ಸೆರಗ ಬೀಸಿದರಾರಿದರು ಬೊ
ಬ್ಬಿರಿದರುರು ಗಂಭೀರಭೇರಿಯ
ಬಿರುದನಿಗಳುಬ್ಬರಿಸಿದವು ಗಬ್ಬರಿಸಿದವು ನಭವ
ತೆರಹ ಕೊಡು ಕೊಡು ಭಾಷೆಕಾರನು
ಮೆರೆದು ಹೋಗಲಿ ವಹ್ನಿ ಕುಂಡದೊ
ಳೊರಗುವುದ ನೋಡುವೆವೆನುತ ತನಿಗೆದರಿತರಿಸೇನೆ ೩೬

ಹೊಲಬುದಪ್ಪಿದ ತಳಪಟದ ಹೆ
ಬ್ಬುಲಿಯವೊಲು ನಿನ್ನಾತ ಸಿಲುಕಿದ
ನಿಲುಕಿ ನೋಡಿದನೆಲ್ಲಿ ತೋರರ್ಜುನನನೆನಗೆನುತ
ಉಲಿಯೆ ಸೈಂಧವನಿತ್ತ ಪಾರ್ಥನ
ಮುಳಿದು ಜರೆದನು ಕೃಷ್ಣನಹಿತನ
ತಲೆಗೆ ಹರ ಹಿಡಿವಂಬ ತೊಡು ತೊಡು ಬೇಗ ಮಾಡೆಂದ ೩೭

ದೇವ ರವಿಯಸ್ತಮಿಸಿದನು ನೀ
ವಾವುದುಚಿತವ ಕಂಡಿರೆನೆ ನಿನ
ಗಾವ ಭಯ ಬೇಡಾಡಬಾರದು ತೊಡು ಮಹಾಶರವ
ಈ ವಿರೋಧಿಯ ಕೆಡಹು ಸೂರ್ಯನ
ನಾವು ತೋರಿಸಿ ಕೊಡುವೆವೆನೆ ಗಾಂ
ಡೀವದಲಿ ಹೂಡಿದನು ಫಲುಗುಣ ಪಾಶುಪತಶರವ ೩೮

ತೆಗೆಯೆ ಜಗ ಕಂಪಿಸಿತು ತಾರೆಗ
ಳೊಗಡಿಸಿತು ನಭ ಜಲಧಿ ರತ್ನಾ
ಳಿಗಳನೋಕರಿಸಿತು ಕುಲಾದ್ರಿಗಳೊಲೆದವೆಡಬಲಕೆ
ದಿಗಿಭತತಿ ನಡುನಡುಗೆ ತಳ
ವಾಸುಗಿ ಫಣಾಳಿಯ ಸೆಳೆಯೆ ಬಲುಂಸರ
ಉಗಿದು ದಳ್ಳುರಿದಿರುಳ ಕಾರಿತು ಬೆಸಸು ಬೆಸಸೆನುತ ೩೯

ಬಲಿದು ಮಂಡಿಯನೂರಿ ಕೆನ್ನೆಗೆ
ಸೆಳೆದು ಮುಷ್ಟಿಯ ಪಾರ್ಥನಹಿತನ
ತಲೆಯನೆಚ್ಚನು ಗೋಣ ಕಡಿದುದು ಪಾಶುಪತ ಬಾಣ
ಹೊಳೆವ ಮಕುಟದ ವದನ ಗಗನಾಂ
ಗಳಕೆ ಚಿಮ್ಮಿತು ರಕುತಧಾರಾ
ವಳಿಯ ರಿಂಗಣವಾಯ್ತು ಮುಂಡದ ತಲೆಯ ಮಧ್ಯದಲಿ ೪೦

ಬೀಳು ಬೀಳಭಿಮನ್ಯುವಿನ ವಧೆ
ಬಾಳಲೀವುದೆ ನಿನ್ನನೆನುತಂ
ಬ್ಯಾಳುತನದಲಿ ಪಾರ್ಥ ಬೊಬ್ಬಿಡೆ ಕೃಷ್ಣ ಖಾತಿಯಲಿ
ಖೂಳ ಕೇಳಿಳೆಗವನ ತಲೆಯನು
ಬೀಳಿಕಿದನ ಕಪಾಲ ಸಾವಿರ
ಹೋಳಹಂದು ತೊಡು ಪಾಪಿ ಬೇಗದಲಂಬ ಕಳುಹೇದ ೪೧

ಇವನ ತಂದೆಯು ಶಾಪವಾವವ
ನಿವನ ತಲೆಯನು ನೆಲಕೆ ಕೆಡಹುವ
ನವನ ಮಸ್ತಕ ಬಿರಿದು ಬೀಳಲಿಯೆಂದನೀ ತಲೆಯ
ಇವನ ತಂದೆಯ ಕೈಯೊಳಗೆ ಬೀ
ಳುವವುಪಾಯವ ಮಾಡು ನೀನೆನೆ
ದಿವಿಜಪತಿಸುತನಾ ಮಹಾಸ್ತ್ರಕೆ ಬೆಸಸಿದನು ಹದನ ೪೨

ತುಡುಕಿ ಖಂಡವ ಕಚ್ಚಿ ನಭದಲಿ
ಗಿಡಿಗ ಹಾಯ್ವಂದದಲಿ ತಲೆಯನು
ಹಿಡಿದು ಹಾಯ್ದುದು ಬಾಣ ವೃದ್ಧಕ್ಷತ್ರನಿದ್ದೆಡೆಗೆ
ಕುಡಿತೆಯೆರಡರೊಳರ್ಘ್ಯಜಲವನು
ಹಿಡಿದು ಹಾಯ್ಕುವ ಸಮಯದಲಿ ತಲೆ
ನಡುವೆ ಬಿದ್ದುದು ಅರ್ಘ್ಯಜಲ ನವರಕ್ತಮಯವಾಗೆ ೪೩

ಏನಿದದ್ಭುತವೆನುತ ತಲೆಯನು
ತಾನೆ ಕೊಡಹಿದನಂಜಲಿಯನದ
ನೇನನೆಂಬೆನು ಕೃಷ್ಣರಾಯನ ಮಂತ್ರಶಕ್ತಿಯನು
ಆ ನರೇಂದ್ರನ ತಲೆ ಸಹಸ್ರವಿ
ಧಾನದಲಿ ಬಿರಿದುದು ಸುಯೋಧನ
ಸೇನೆ ಹರಿದುದು ಜರಿದುದರಿಭಟ ಧೈರ್ಯಗಿರಿನಿಕರ ೪೪

ನಡುಗಿ ಸಂಗರ ಭೀತಿಯಲಿ ಬೆಂ
ಗೊಡುವ ನಾಯಕವಾಡಿಗಳ ವಂ
ಗಡವ ನೋಡುತ ಮರೆಯ ಚಕ್ರವ ತೆಗೆದನಸುರಾರಿ
ಪಡುವಲಿಳಿಯದ ರವಿಯ ಬಯ್ದುತ
ನಡೆದನಾ ಕುರುರಾಯನಿತ್ತಲು
ಹಿಡಿದ ಚೌರಿಗಳಾಡಿದವು ಪಾಂಡವರ ಸೇನೆಯಲಿ ೪೫

ದೈವ ಪೌರುಷದೊಳಗೆ ಶಿವ ಶಿವ
ದೈವ ಬಲವೇ ಬಲವಲಾ ನಿ
ರ್ದೈವರಂಗೈತಳಕೆ ಬಂದರೆ ಪರುಷ ಪಾಷಾಣ
ದೈವದೂರರು ಧರ್ಮಹೀನರು
ನೆಯ್ವ ನೆಯ್ಗೆಗಳೆನುತ ಮಿಗೆ ಬಿಸು
ಸುಯ್ವುತಿರ್ದರು ಕರ್ಣ ಕೃಪ ಗುರುನಂದನಾದಿಗಳು ೪೬

ಕಡಲ ಮೊರಹಿನ ಲಹರಿ ಲಘುವೀ
ಪಡೆಯಂನೊಡೆಯಲು ಯುಗಸಹಸ್ರದೊ
ಳೊಡೆಯಬಹುದೇ ದ್ರೋಣ ರಚಿಸಿದ ವ್ಯೂಹ ಪರ್ವತವ
ಒಡೆದು ಹೋಯಿಂತ್ತೊಡ್ಡು ಸೈಂಧವ
ನೊಡಲು ನೀಗಿತು ತಲೆಯಸಕಟಾ
ತೊಡಗಿದೆವು ದೈವದಲಿ ಕಲಹವನೆಂದನಾ ಕರ್ಣ ೪೭

ಮಲನಿದು ಮಾಡುವುದೇನು ಕೃಷ್ಣನ
ನೆನಹು ಘನ ನಮ್ಮಸುವ ನಾವೀ
ಜನಪತಿಗೆ ಮಾರಿದೆವು ನಮಗೀ ಚಿಂತೆಯೇಕೆನುತ
ಇನಸುತಾದಿಗಳಿದ್ದರಿತ್ತಲು
ಮನದ ಹರುಷದ ಹರಹಿನಲಿ ಪಾ
ರ್ಥನ ರಥವ ತಿರುಹಿದನು ಗದುಗಿನ ವೀರನಾರಯಣ ೪೮

## ಹದಿನೈದನೆಯ ಸಂಧಿ

ಸೂ. ರಾಯ ಕಟಕಾಚಾರ್ಯನೊಡ್ಡಿದ
ರಾಯ ಘಟ್ಟಿಸೊಳಿರುಳು ಕೊಂದನು
ವಾಯುತನಯನ ತನುಜನಗ್ಗದ ದೈತ್ಯಕೋಟಿಗಳ

ಕೇಳು ಜನಮೇಜಯ ಧರಿತ್ರೀ
ಪಾಲ ಕೃಷ್ಣಾರ್ಜುನರು ಬರೆ ಭೂ
ಪಾಲನಂದಿದಿರಾಗಿ ಬಂದನು ಸಕಲ ದಳಸಹಿತ
ಹೇಳಲರಿಯೆನು ಹರುಷದುದಯವ
ನಾಲಿ ಹೂಳಿದವಶ್ರುಜಲದಲಿ
ಮೇಲುವಾಯ್ಸುಪ್ಪಿದನು ದೇವನ ಪಾದಪಂಕಜವ ೧

ಮಾತುದೋರದು ಹೆಚ್ಚಿದಾನಂ
ದಾತಿರೇಕಕೆ ಚಿತ್ತ ನೆರೆಯದು
ಹೂತು ಹಿಗ್ಗುವ ಪುಳಕರಾಜಿಗೆ ದೇಹ ಕಿರಿದೆನುತ
ಕಾತರಿಸಿದನು ಮೇಲೆ ಮೇಲೆ ಮ
ಹೀತಳಾಧಿಪ ಮೈಮರೆಯೆ ತೆಗೆ
ದಾತನನು ತಕ್ಕೈಸಿದನು ಕಾರುಣ್ಯನಿಧಿ ನಗುತ ೨

ಫಲಿಸಿತರಸಾ ನಿನ್ನ ಭಾಗ್ಯದ
ಬೆಳಸು ನಿನ್ನೊಡವುಟ್ಟಿದನ ನುಡಿ
ಕಳಸಗಂಡುದು ಕದನವಿದು ಭಾರಾಂಕವುಳಿದರಿಗೆ
ಕಳಿದುದೊಂದಪಮೃತ್ಯುವೆನೆ ನೃಪ
ತಿಲಕ ನುಡಿದನು ನಿನ್ನ ಭಾಷೆಯ
ಬಲಿದೆ ನಿನ್ನಯ ಬಿರುದ ಸಲಿಸಿದೆ ನಮಗಿದೇನೆಂದ ೩

ತೆಗೆಸು ದಳವನು ಸಾಕು ಬರಿದೇ
ಹೊಗಳುತಿಹೆ ನೀ ನಮ್ಮನೀ ಕಾ
ಳೆಗದೊಳಳಿದುದು ಹಗೆಯೊಳೇಳಕ್ಷೋಹಿಣೀ ಸೇನೆ
ಬಗೆಯದಿರಿದರು ಭೀಮ ಪಾರ್ಥರು
ಜಗದೊಳದ್ಭುತ ವೀರರಿವರೆಂ
ದಗಧರನು ಪತಿಕರಿಸಿದನು ಪವನಜನ ಫಲುಗುಣನ ೪

ಇತ್ತ ದುಗುಡವ ಹಿಡಿದ ರಾಯನ
ಕೆತ್ತ ಮುಖವನು ಕಂಡು ಭಟರೆದೆ
ಹೊತ್ತಿದವು ಹೊಗೆದೋರಿದವು ಮೋರೆಗಳು ಪಟುಭಟರ
ಇತ್ತ ನೋಡವನೀಶ ಸೈಂಧವ
ನೆತ್ತಲಿಹನತ್ತಲು ಮುರಾರಿಯು
ತೆತ್ತಿಗರ ಕಳುಹಿಸುವೆನೆಂದನು ಖಾತಿಯಲಿ ಕರ್ಣ ೫

ಇನ್ನು ನೋಡಾದಡೆ ಕಿರೀಟಿಯ
ಬೆನ್ನಲುಗಿವೆನು ಕರುಳನರ್ಜುನ
ಗನ್ನಗತಕದಲರಿಯ ಹೊಯ್ದನು ಹಾಯ್ಕು ವೀಳೆಯವ
ನಿನ್ನ ಕಂಗಳ ಬರನ ಕಳೆವೆನು
ಬೆನ್ನಲಿರು ನೃಪ ನೋಡು ಚಿತ್ರವ
ನಿನ್ನು ತೋರುವೆನೆನುತ ಭಾಷೆಯ ಕೊಟ್ಟನಾ ಕರ್ಣ ೬

ಉಂಟು ಗರುಡನನೊಳ್ಳೆ ತುಡುಕುವ
ದುಂಟಲೇ ಲೋಕದಲಿ ರಾಯನ
ನಂಟರಿಷ್ಟರೊಳಧಿಕನಲ್ಲಾ ಕರ್ಣ ಕಿರುಕುಳನೆ
ಕಂಟಣಿಸಬೇಡಿನ್ನು ಭಾಷೆಗ
ಳುಂಟು ನಿನ್ನಲಿ ನಗುವರಾವ
ಲ್ಲೆಂಟುಮಡಿಯನು ಸೊರಹು ಸಾಕೆಂದನು ಕೃಪಾಚಾರ್ಯ ೭

ಗರುವರನು ಮಾನ್ಯರನು ರಣಧೀ
ರರನು ದೂರದಲಿರಿಸುವರು ಹ
ತ್ತಿರಕೆ ಕರೆವರು ಬಾಯಿಬಡಿಕರ ಜಗದ ಭಂಡರನು
ಅರಸುಗಳು ದುಶ್ಶೀಲರೆಂಬುದ
ನರಿಯದೇ ಜಗವಕಟ ಟಿಕ್ಕೆಯ
ಹರಳು ಗಡ ಕೌಸ್ತುಭಕೆ ಸರಿಯೆಂದನು ಕೃಪಾಚಾರ್ಯ ೮

ನೀವು ಮಾಡುವುದೇನು ರಣದಲಿ
ಕಾವೆವೆಂದಿರಿ ಸೈಂಧವನ ನಾ
ನಾವಿಧದ ವ್ಯೂಹದಲಿ ನಿಮ್ಮೀ ದ್ರೋಣನೇಗಿದನು
ತಾವು ಭಟರಾದರೆ ವಿಭಾಡಿಸಿ
ಹೇವಗೆಡಿಸುವುದುಚಿತ ಭಂಡರು
ತಾವು ಲೋಗರ ಚುನ್ನವಾಡುವರೆಂದನಾ ಕರ್ಣ ೯

ಎಲವೊ ಫಡ ಮಾವನ ವಿಭಾಡಿಸಿ
ಗಳಹುವೀ ನಾಲಗೆಯ ಕೀಳುವೆ
ನೆಲೆ ಮಹಾದೇವಿಲ್ಲಿ ಮೇಳವೆನುತ್ತ ಖಂಡೆಯವ
ಸೆಳೆದು ರೌಷಾಂಪಿಸಿ ಗುರುತನುಜನ
ವ್ವಳಿಸಲುಗಿದನಡಾಯುಧವನ
ಗ್ಗಳೆಯ ರವಿಸುತ ಮೇಲುವಾಯ್ದನು ದ್ರೋಣನಂದನನ ೧೦

ಬೆಂದುದೊಳತೋಟಿಯಲಿ ಕೌರವ
ವೃಂದವಕಟಕಟೆನಲು ಜನವೈ
ತಂದು ನಿಂದನು ನಡುವೆ ಕೌರವರಾಯ ಖಾತಿಯಲಿ
ಇಂದಿನಾಹವ ಲೇಸು ಲೇಸಿದು
ಮಂದಭಾಗ್ಯನು ತಾನು ಸಾಕಿ
ನ್ನೆಂದು ಮಾಡುವುದೇನು ನಿಮ್ಮೊಳು ಕದನ ಬೇಡೆಂದ ೧೧

ಹೇವವುಳ್ಳರೆ ಭೀಮ ಪಾರ್ಥರ
ನೀವು ಕೊಲುವುದು ಮೇಣು ರಣದಲಿ
ಸಾವುದಲ್ಲದೆ ಗರುವರೊಳತೋಟಿಯಲಿ ತೊಡಕುವರೆ
ಕಾವೆವೆಂದಿರಿ ಸೈಂಧವನ ಸುಭ
ಟಾವಳಿಯ ಮೂಗುಗಳನರ್ಜುನ
ದೇವ ಕೊಯ್ದನು ಸಾರಿ ನೀವೆಂದರಸ ಮಾಣಿಸಿದ ೧೨

ನೆರೆವಣಿಗೆಯುಳ್ಳರೆ ವಿರೋಧಿಯ
ನಿರಿವುದೋಲೆಯಕಾರತನವವನು
ಮೆರೆವುದುಚಿತವಿದೇಕೆ ಡೊಂಬಿನ ಶೌರ್ಯವೊಳಗೊಳಗೆ
ಕಿರುಕುಳರು ನೀವಲ್ಲ ನಿಮ್ಮಲಿ
ಕೊರತೆಯಿಲ್ಲದು ನಮ್ಮ ಪುಣ್ಯದ
ಬರನ ದಿನ ನೀವೇನ ಮಾಡುವಿರೆಂದು ಬಿಸುಸುಯ್ದು　೧೩

ಖಾತಿಯೇಕೈ ಸೈಂಧವನ ಕಾ
ವಾತನಾರೈ ತ್ರಿಪುರದಹನದ
ಭೂತನಾಥನ ಬಾಣ ಬಂದುದು ನರನ ಗಾಂಡಿವಕೆ
ಆತನೆಚ್ಚದು ಪಾಶುಪತವದ
ನಾತುಕೊಂಬವರಾರು ಬರಿದೆ ಭ
ಟಾತಿಶಯವನು ಹುರುಳುಗೆಡಿಸಂವಿರೆಂದನಾ ದ್ರೋಣ　೧೪

ಒಂದು ಹರ ಹಿಡಿವಂಬು ಶಕ್ರನ
ದೊಂದು ಕೌಬೇರಾಗ್ನಿ ವಾಯುವ
ದೊಂದು ಪಾರ್ಥನ ಬತ್ತಳಿಕೆ ದಿವ್ಯಾಸ್ತ್ರ ತುಂಬಿಹವು
ಕೊಂದಡಲ್ಲದೆ ಮಾಣವವು ನಾ
ವೊಂದಕೊಬ್ಬರು ಗುರಿ ನಿದಾನಿಸ
ಲಿಂದು ನಮಗಳವಡದು ಜಯವಿಲ್ಲೆಂದನಾ ದ್ರೋಣ　೧೫

ಅರಸ ಮರುಳೈ ನೀನು ಸುರರನು
ಸರಕುಮಾಡನು ಸಕಲ ದೈವದ
ದೊರೆಯಲೇ ಹರನಾತನಸ್ತ್ರವನಾರು ತರುಬುವರು
ಹರನ ಶರವಿಲ್ಲಿನ್ನು ಹಗೆಗಳ
ನಿರುಳು ರಣದಲಿ ಹಿಂಡುವೆನು ಸಂ
ವರಿಸು ಕೈದೀವಿಗೆಯನೆಂದನು ದ್ರೋಣನುಬ್ಬಿನಲಿ　೧೬

ಘಾಯವಡೆದಾನೆಗಳ ಕೈ ಮೈ
ನೋಯೆ ಕಾದಿದ ರಾಜಪುತ್ರರ
ನಾಯುಧದ ಮಳೆಗಳಲಿ ನನೆದ ಜವಾಯ್ಲ ತೇಜಿಗಳ
ಹಾಯಿದುರೆ ಸೊಪ್ಪಾದ ಶಕಟ ನಿ
ಕಾಯವನು ಪೂರಾಯದೇರಿನ
ನಾಯಕರ ಕರೆಕರೆದು ಬವರಕೆ ಕಳುಹಿದನು ದ್ರೋಣ　೧೭

ಜರಿದ ಜೋಡನು ನೆರೆ ಹರಿದ ಹ
ಕ್ಕರಿಕೆಗಳ ನುಗ್ಗಾದ ಗುಳವನು
ಬಿರಿದ ಸೀಸಕ ಬಾಹುರಕ್ಕೆಯ ಮುರಿದ ಬಲ್ಲೆಹದ
ಅರೆಗಡಿದ ಬಿಲ್ಲುಗಳ ನೆಗ್ಗಿದ
ಹರಿಗೆಯನು ಮುಕ್ಕಾದ ಕೈದುವ
ತರಿಸಿ ಕಳುಹಿಸುತಿರ್ದನತಿರಭಸದಲಿ ಕಲಿದ್ರೋಣ　೧೮

ಎಣಿಸಲರಿಯೆನು ಬಂಡಿಗಳು ಸಂ
ದಣಿಸಿದವು ಹಕ್ಕರಿಕೆಗಳ ಹ
ಲ್ಲಣದ ಕವಚದ ಸೀಸಕದ ಜೋಡುಗಳ ರೆಂಚೆಗಳ
ಮಣಿಮಯದ ಮೋಹಳದ ಹಿರಿಯು
ಬ್ಬಣದ ಸಬಳದ ಶೂಲ ಸುರಗಿಯ
ಕಣೆಯ ಹೊರೆ ಚಾಚಿದವು ಕಟಕಾಚಾರ್ಯನಿದಿರಿನಲಿ　೧೯

ಕರೆಕರೆದು ರಥಿಕರಿಗೆ ಮಾವಂ
ತರಿಗೆ ಕಾಲಾಳಿಂಗೆ ರಾವು
ತ್ತರಿಗೆ ಕೊಡಿಸಿದನವರವರಿಗವರಂಗದಾಯುಧವ
ತರಿಸಿ ಸಾದು ಜವಾದಿಯನು ಕ
ರ್ಪುರದ ವೀಳೆಯವುಡುಗೊರೆಗಳಲಿ
ಹಿರಿದು ಪತಿಕರಿಸಿದನು ಪರಿವಾರವನು ಕಲಿದ್ರೋಣ　೨೦

ಉರವಣಿಸುವುದು ಕೊಂಡ ಹಜ್ಜೆಗೆ
ಮುರಿಯಲಾಗದು ಶಸ್ತ್ರಧಾರಾ
ಪರಮತೀರ್ಥಸ್ನಾನ ತೊಳೆವುದು ಭವದ ಕಿಲ್ಬಿಷವ
ಹರಣದಲಿ ಕಕ್ಕುಲಿತೆ ಬೇಡು
ದ್ಧರಿಸುವುದು ಸತ್ಕುಲತೆಯನು ಸಂ
ವರಿಸುವುದು ಸದ್ಗತಿಯನೆಂದನು ದ್ರೋಣ ನಿಜಬಲಕೆ　೨೧

ಲಟಕಟಿಸಿತಾಹವಕೆ ರಾಯನ
ಕಟಕ ಸುಮ್ಮಾನದಲಿ ಮೊಳಗುವ
ಪಟಹ ಡಮರು ಮೃದಂಗ ಘನಗಂಭೀರ ಭೇರಿಗಳ
ಚಟುಳ ಕಹಳೆಯ ಗಜರು ಮಿಗಲು
ತ್ಕಟಿಸಿತಂಬುಜಭವನ ನಿರ್ಮಿತ
ಘಟ ಬಿರಿಯೆ ಬಿಗುಹಾಯ್ತು ದ್ರೋಣನ ಸಮರಸನ್ನಾಹ　೨೨

ನರನ ಕರೆ ಕರೆ ಸಿಂಧುರಾಜನ
ಹರಿಬವೆಮ್ಮದು ತಮ್ಮದೆಂದ
ಬ್ಬರಿಸಿ ನೂಕಿತು ಕದನಲಂಪಟರಾಗಿ ಪಟುಭಟರು
ಸರಿಸದಲಿ ಲಟಕಟಿಸಿ ಮೋಹರ
ಮರಳಿ ನಿಂದುದು ರಣಕೆ ರಜನೀ
ಚರರ ಥಟ್ಟಣೆ ಧಾತುಗೆಡಿಸಿತು ದಿಟ್ಟರುಬ್ಬಟೆಯ　೨೩

ಹಿಂದೆ ಸೆಳೆದುದು ವೈರಿ ಬಲ ಭಟ
ವೃಂದ ನಿಲಲಿ ಕಿರೀಟಿ ಭೀಮರ
ಕುಂದುಗಾಬುದು ಲೋಕ ನಮ್ಮನು ತೆಗೆದು ಹಿಂಗಿದರೆ
ಬಂದ ಜಯವಕ್ಕುವುದು ರಜನಿಯು
ಕೊಂದೆವಾದರೆ ನಮಗೆ ಸರಿಯಿ
ಲ್ಲೆಂದು ಧೃಷ್ಟದ್ಯುಮ್ನ ಕರೆಸಿದನಖಿಳನಾಯಕರ　೨೪

ಸೋತ ಬಲ ಸಂವರಿಸಿಕೊಂಡುದು
ಪೂತುರೇ ರಣವೆಂಬುದೆಮ್ಮಾಯು
ಧಾತು ಕಲಿ ಮೂದಲಿಸಿ ಕರೆದರೆ ರಾಜ್ಯಸಿರಿಯೇಕೆ
ಭೀತಿ ಮನದಲಿ ಪೌರಷಾಂಗದ
ಮಾತು ಮುಖದಲಿ ಮುರಿವು ಕಾಲಲಿ
ಬೂತುಗಳು ಕುರುವೀರರೆನುತಿದಿರಾದುದರಿಸೇನೆ　೨೫

ಇಳಿದುದೀ ಕಣನೊಳಗೆ ದಿಗುಮಂ
ಡಲದ ಸಂಧ್ಯಾರಾಗವೆನೆ ಪರಿ
ದಳಿತ ಚತುರಂಗದಲಿ ಮಸಗಿದುದರುಣಜಲರಾಶಿ
ಕಲಿಗಳುಬ್ಬಿನ ರೋಷತಾಮಸ
ತುಳುಕಿತೆನೆ ದಿಗುವಳಯದಲಿ ಕುಡಿ
ವೆಳಗ ಕುಡಿ ಕುಡಿದಡರುತಿರ್ದುದು ತಿಮಿರಲತೆ ಜಗವ　೨೬

ಜಡಿವ ಖಡುಗದ ಕಿಡಿಗಳಲಿ ಬೇ
ಗಡೆಯನಾಂತುದು ಮಕುಟಬದ್ಧರ
ಮುಡಿಯ ರತ್ನಪ್ರಭೆಗಳಲಿ ಜರ್ಝರಿತ ತನುವಾಯ್ತು
ಗಡಣದಂಬಿನ ಮಸೆಯ ಬೆಳಗಿನೊ
ಳಡಸಿದಾಕ್ಷಣ ಮತ್ತೆ ನಿಮಿಷಕೆ
ಹೊಡಕರಿಸಿ ಹಬ್ಬಿದುದು ಮಬ್ಬಿನ ಧಾಳಿ ದೆಸೆದೆಸೆಗೆ ೨೭

ಖಳರ ಹೃದಯದ ಗರುಡಿ ಘೂಕಾ
ವಳಿಯ ನಯನಾಂಜನ ಧರಿತ್ರಿಯ
ನಳಿನಕೆರಗಿದ ತುಂಬಿ ಸುಭಟಸ್ವಾಂತ ಶಶಿ ರಾಹು
ಪ್ರಳಯ ತಿಮಿರದ ಬೀಜ ನೀಲಾ
ಚಳದ ಸಾಯುಜ್ಯವೊ ನಭೋಮಂ
ಡಲದೊಳದನೇವೊಗಳುವೆನು ಮಸಗಿತು ತಮಸ್ತೋಮ ೨೮

ದಳದ ಬೊಬ್ಬೆಯ ಸಿಡಿಲ ಬಲುಗ
ತ್ತಲೆಯ ಝಾಡಿಯ ಮುಗಿಲ ಮಿಗೆ ಹೊಳೆ
ಹೊಳೆವ ಮಹಿಪರ ಮಕುಟರತ್ನದ ಬಳ್ಳಿಮಿಂಚುಗಳ
ಬಲುಸರಿಯ ನಾರಾಚ ಜಾಳದ
ಮಳೆಯ ನೆತ್ತರ ಹೊನಲುಗಳ ರೌ
ಕುಳದ ಮಳೆಗಾಲದಲಿ ಹೆಚ್ಚಿತು ಭಟರ ಶೌರ್ಯಶಿಖಿ ೨೯

ಹೆಣಗಿ ಮಿಗೆ ತಲೆಯೊತ್ತಿ ಹೊಯ್ದರು
ಹಣಿದದಲಿ ತಮ್ಮೊಳಗೊಳಗೆ ಸಂ
ದಣಿಗಳಲಿ ಸೈಗರೆದರಂಬಿನ ಸಿರಿಯನುರವಣಿಸಿ
ರಣಮಹೀ ಸಂತಮಸ ಶಾಂತೇ
ಕ್ಷಣರು ದಿಗುಭ್ರಮೆಯಲಿ ಸ್ವಕೀಯ
ಕ್ಷಣನವನು ರಚಿಸಿದರು ರೌರವವಾಯ್ತು ರಾತ್ರಿಯಲಿ ೩೦

ಆರ ವಂಗಡದಾಳಿವನು ನೀ
ನಾರು ಹೆಸರೇನೆಂದು ಬಳಿಕ ವಿ
ಚಾರ ಮಿಗೆ ಹೊಯ್ದಾಡಿದರು ಕರೆಕರೆದು ಮೂದಲಿಸಿ
ಭಾರಿಸಿತು ಬಲುತಿಮಿರ ಬಲ ಸಂ
ಹಾರವನು ವಿವರಿಸುವನಾವನು
ಭೂರಿ ಭಟರಂಘವಣೆ ಬೀತುದು ಭೂಪ ಕೇಳೆಂದ ೩೧

ತೆಗೆಸು ಚೂಣಿಯ ಬಲವ ದೀವ
ಟ್ಟಿಗರ ಕರೆ ಕರೆ ತೈಲಪೂರ್ಣದ
ತೊಗಲ ಕುನಿಕಿಲ ಬಂಡಿ ಕವಿಯಲಿ ಕೋಟಿ ಸಂಖ್ಯೆಯಲಿ
ಬಿಗಿದ ಮಳವೆಯನೆಣ್ಣೆಗೊಪ್ಪರಿ
ಗೆಗಳೊಳದ್ದಲಿ ಗಳಿಗಳಲಿ ಸೀ
ರೆಗಳ ಸುತ್ತಲಿಯೆಂದು ಕೈವೀಸಿದನು ಕಲಿದ್ರೋಣ ೩೨

ಬೆಳಗಿದವು ಬೊಂಬಾಳ ದೀವಿಗೆ
ಬಲದೊಳಾನೆಗೆ ಹತ್ತು ರಥಿಕಾ
ವಳಿಗೆ ನಾಲುಕು ಹಯಕೆರಡು ಕಾಲಾಳಿಗೊಂದೊಂದು
ಬಲಸಮುದ್ರದೊಳೊಗೆದ ವಡಬಾ
ನಳನ ಝಳವೋ ಮೃತ್ಯುವಿನ ದೀ
ವಳಿಗೆಯಿರುಳೋ ತಿಳಿಯಲರಿದೆನೆ ಚಿತ್ರವಾಯ್ತೆಂದ ೩೩

ಬಗೆಯಲರಿದಿದು ಗರ್ಭ ಬಲಿಯದೆ
ಹಗಲನೀನುದೊ ರಾತ್ರಿ ಕುಡಿಕುಡಿ
ದುಗುಳುತಿರ್ದುವು ತಿಮಿರವನು ಕರದೀಪ್ತಿಕಾಳಿಗಳು
ಹೊಗರುಗೆಟ್ಟುದು ಕುಮುದ ಕಮಳದ
ಬಿಗುಹು ಬಿಟ್ಟುದು ಚಕ್ರವಾಕದ
ತಗಹು ಕೆಟ್ಟುದು ಹೇಳೆನಲು ರಂಜಿಸಿತು ದೀಪಾಳಿ ೩೪

ತಿಮಿರವಡಗಿತು ಮನದ ರೋಷದ
ತಿಮಿರವಡಗದ ಮುನ್ನ ಭುಜವಿ
ಕ್ರಮದ ವಿತರಣೆಯುಳ್ಳಡವಸರವಿದು ನೃಪಾಲರಿಗೆ
ನಿಮನಿಮಗೆ ಮುಂಕೊಂಡು ವಂಶ
ಕ್ರಮ ಸಮಾಗತ ಕೀರ್ತಿಸತಿಯಲಿ
ಮಮತೆಗಳ ನೆರೆಮಾಡಿಯೆಂದನು ದ್ರೋಣ ನಿಜಬಲಕೆ ೩೫

ಮತ್ತೆ ಹೊಕ್ಕುದು ಭಟರಮಮ ದಿಗು
ಭಿತ್ತಿ ಬಿರಿಯಲು ಮೊರೆವ ಭೇರಿಯ
ಕಿತ್ತು ನೆಲ ಹೊಡೆಮರಳೆ ಮೊಳಗುವ ಪಟಹ ಡಿಂಡಿಮದ
ಹತ್ತು ಸಾವಿರ ನೃಪರು ರಿಪುಗಳ
ಮುತ್ತಿದರು ಮುಸುಕಿದರು ಮೆಯ್ಯಲಿ
ಮೆಂತ್ತಿದರು ಮೊನೆಗಣೆಗಳನು ಪಾಂಡವರ ಬಲದೊಳಗೆ ೩೬

ಅಕಟ ಘಡ ಕುನ್ನಿಗಳಿಗಸುರಾಂ
ತನಕ ಕಪಟದ ಮಂತ್ರವೇ ಬಾ
ಧಕವಿದಲ್ಲದೆ ನಿಮಗೆ ಸೋಲುವುದುಂಟೆ ಕುರುಸೇನೆ
ಸಕಲ ಸನ್ನಾಹದಲಿ ಯಾದವ
ನಿಕರ ಸಹಿತೀಯಿರುಳು ರಣದಲಿ
ಚಕಿತರಾದರೆ ಜೋಡಿಸೆನುತಿದಿರಾದನಾ ದ್ರೋಣ ೩೭

ತವಕ ತಗ್ಗಿತು ಭಟರ ತಾಳಿಗೆ
ಜವಳಿದೆಗೆದುದು ಮನಕೆ ಭೀತಿಯ
ಗವಸಣಿಗೆ ಘಾಡಿಸಿತು ಜಾಳಿಸಿತದಟರಪಸರಣ
ಸವೆನ ಶೌರ್ಯದ ಛಾಯ ಘಲ್ಲಿಸಿ
ತವಯುವದ ಮಡಮುರಿವ ಮೋಹರ
ದವನಿಪತಿಗಳ ನಿಲವ ನೋಡಿದನಸುರರಿಪು ನಗುತ ೩೮

ನಿಲ್ಲಿ ಭಯ ಬೇಡಾವ ರಣವಿದು
ತಲ್ಲಣಿಕೆ ತರುವಾಯೆ ದೀವಿಗೆ
ಪಲ್ಲವಿಸಿದರೆ ತಳಿತುದೇ ಭುಜಶೌರ್ಯ ಕುರುಬಲಕೆ
ಮಿಲ್ಲರಾರೋ ಬಲವ ತಿರುಹಿದ
ರಿಲ್ಲಿ ನಿಲಲಂಜಿದರೆನುತ ಕರ
ಪಲ್ಲವವ ನೆಗಹಿದನು ಲಕ್ಷ್ಮೀಕಾಂತ ಕರುಣದಲಿ ೩೯

ಆವನೊಬ್ಬನ ಮಧುರವಚನ ಕೃ
ಪಾವಲೋಕನದಿಂದ ಶತ ಜ
ನ್ಮಾವಳಿಯ ಘನ ದುರಿತವಹ್ನಿಯ ಝಳಕೆ ಕಡೆಯಹುದು
ದೇವರೀತನ ಲಲಿತವಚನಸು
ಧಾವಸೇಚನದಿಂದ ಭಟರುರೆ
ಜೀವಿಸುವುದೇನರಿದೆ ಕೇಳ್ ಜನಮೇಜಯಕ್ಷಿತಿಪ ೪೦

ಹಿಂಗಿದುದು ಭಯ ಕಂತದ ಸುಸ
ರ್ವಾಂಗದಲಿ ಪಸರಿಸಿತು ಕಾಳೆಗ
ದಂಘವಣೆ ಹೊಗರೇರಿದುದು ವಿಕ್ರಮ ಭಡಾಳಿಸಿತು
ಪೊಂಗಿದರು ಹೊಂಪುಳಿಯ ಪುಳಕದ
ಮುಂಗುಡಿಯ ರೋಮಾಂಚನದ ರಣ
ರಂಗ ಧೀರರು ತರುಬಿ ನಿಂದರು ಮತ್ತೆ ಕಾಳೆಗವ ೪೧

ಭಟರು ಬಳಲಿದರಿಂದು ರಣವು
ತ್ಕಟವು ಧೀವಶಿಗಳು ಮಹಾರಥ
ರಟಕಟಿಸುತಿದೆ ಮತ್ತೆ ನಾವಿದನೇನ ಹೇಳುವೆವು
ಕುಟಿಲ ಭಾರದ್ವಾಜನಿವನು
ಬ್ಬಟ್ಟೆಗೆ ಮದ್ದರವೆನು ನಿಶಾಚರಿ
ಯಟನಪಟುಗಳು ಬರಲಿ ಕಾಳೆಗಕೆಂದನಸುರಾರಿ ೪೨

ಕರಸು ಧರ್ಮಜ ಕಲಿಘಟೋತ್ಕಚ
ನಿರುಳುಬವರಕೆ ನಿಲಲಿ ಸಾತ್ಯಕಿ
ನರ ವೃಕೋದರ ನಕುಲ ಸಹದೇವಾದಿಗಳಿಗರಿದು
ಇರುಳು ರಣದಾಯತವನವನೇ
ಹಿರಿದು ಬಲ್ಲನು ಗೆಲುವನೆನೆ ಮುರ
ಹರನ ನೇಮದಲನಿಲತನಯನ ತನಯನೈತಂದ ೪೩

ಜಡಿವ ಹಿರಿಯುಬ್ಬಣದ ಹೆಚ್ಚಿದ
ಮುಡುಹುಗಳ ಮುರಿದಲೆಯ ಚರಣದ
ತೊಡರ ಮೊಳಗಿನ ಬಾವುಲಿಗಳಲಿ ಘಣಘಣ ಧ್ವನಿಯ
ನಿಡಿಯೊಡಲ ಮುರಿಮೀಸೆಗಳ ಕೆಂ
ಪಡರ್ದ ಕಂಗಳ ಹೊಳೆವ ದಾಡೆಯ
ದಡಿಗ ದಾನವನವನಿ ಹಜ್ಜೆಗೆ ನೆಗ್ಗಲೈತಂದ ೪೪

ಏನು ಧರ್ಮಜ ಕರಸಿದೈ ಕುರು
ಸೇನೆ ಮಲೆತುದು ಬಿಡು ಬಿಡಾ ತಡ
ವೇನು ತಾ ವೀಳೆಯವನೆನುತೆಡಗಯ್ಯನರಳಿಚುತ
ದಾನವಾಮರರೊಳಗೆ ನಿನ್ನಯ
ಸೂನುವಿಗೆ ಸರಿಯಿಲ್ಲೆನಿಸಿ ನಿಲ
ಲಾನು ಬಲ್ಲೆನು ನೋಡೆನುತ ಬದಿರಿದನು ಖಂಡೆಯವ ೪೫

ಜಡಿದು ಝೊಂಪಿಸಿ ವೀಳೆಯವ ಕೊಂ
ಡೆಡದ ಕಯ್ಯಿಂದೆರಗಿ ಮದಮುಖ
ನೆಡಬಲನ ನೋಡಿದರೆ ರಕ್ಕಸಕೋಟಿ ಜೀಯೆನುತ
ಸಿಡಿಲ ಸೆರೆ ಬಿಟ್ಟಂತೆ ಭುಜವನು
ಹೊಡೆದು ಮುಂಚಿತು ದೈತ್ಯಬಲವುಲಿ
ದಡಿಯಿಡಲು ಮೇಲುಸುರು ಮುಸಗಿತು ಫಣಿಪ ಕಮಠರಿಗೆ ೪೬

ಕಾಳರಾತ್ರಿಯ ಕಟಕವೋ ಮೇಣ್
ಕಾಲರುದ್ರನ ಪಡೆಯೊ ದಾನವ
ನಾಳಿನಗ್ಗಳಿಕೆಗಳ ಬಣ್ಣಿಸಬಲ್ಲ ಕವಿಯಾರು
ಆಳ ಬೋಳೈಸಿದನು ಕಪ್ಪುರ
ವೀಳೆಯವ ಹಾಯ್ಕಿದನು ಲೋಹದ
ಗಾಲಿ ಘೀಳಿಡೆ ರಥವನೇರಿದನನಿಲಸುತಸೂನು ೪೭

ಸಾಲು ಮಿಗೆ ಮೋಹರದೊಳಗೆ ಬೊಂ
ಬಾಳ ದೀವಿಗೆ ಬೆಳಗಿದವು ಶರ
ಜಾಳ ದೀಧಿತಿ ತೊಳಗಿದವು ರಕ್ಕಸರ ಕೈಗಳಲಿ
ಬಾಳ ಹೊಳಹನು ಜರೆದು ದಾಡೆಯ
ಥಾಳ ಮಿಗೆ ಗಜಗಲಿಸೆ ದಾನವ
ಕಾಳೆಗಕ್ಕನುವಾಗಿ ನಿಂದನು ಬಿಗಿದ ಬಿಲುವೆಗೆದು ೪೮

ಹಯಕೆ ಹಯ ರಥ ರಥಕೆ ಪಯದಳ
ಪಯದಳಕೆ ಗಜಸೇನೆ ಗಜಸೇ
ನೆಯಲಿ ಭಾಷೆಯ ಭಟರು ಭಾಷೆಯ ಭಟರ ಗಡಣದಲಿ
ನಿಯುತ ಚಾತುರ್ಬಲವೆರಡು ನಿ
ರ್ಭಯದಲೊದಗಿತು ಮಕುಟಮಸ್ತಕ
ಮಯ ಮಹೀತಳವೆನಲು ಹಳಚಿದು ಹೊಯ್ದುದುಭಯಬಲ ೪೯

ಕೌರವನ ತಳತಂತ್ರ ಕಟಕಾ
ಚಾರಿಯನ ಕಾಹಿನಲಿ ರಿಪುಪರಿ
ವಾರ ನಿಂದುದು ಭೀಮಸೇನನ ಸುತನ ಬಳಸಿನಲಿ
ಆರಿದನು ಜಗ ನಡುಗೆ ಬೊಬ್ಬೆಯ
ಭಾರದಲಿ ವೈರಿಗಳ ಬಲಸಂ
ಹಾರ ರುದ್ರನು ಕಲಿಘಟೋತ್ಕಚ ಹೊಕ್ಕನಾಹವವ ೫೦

ಬೆಳೆದವೋ ಕೈಕಾಲು ನೀಲಾ
ಚಲಕೆ ಹೇಳೆನೆ ಮುಗಿಲ ತುಡುಕುವ
ತಲೆಯ ತೋಕೆಯ ತೋರಹತ್ತನ ಕಂಡು ಕುರುಸೇನೆ
ಕಳವಳಿಸಿದರು ಕಾಯದಲಿ ಕ
ಕ್ಕುಲಿತೆಗಾರರು ಕೈದೆಗೆದರ
ಗ್ಗಳೆಯನುರುಬೆಗೆ ಬೀಳುಕೊಟ್ಟರು ಭಟರು ಸೈರಣೆಯ ೫೧

ಏನ ಹೇಳುವೆನವರ ರಣಸು
ಮ್ಮಾನವನು ನಮ್ಮವರ ಮೊಗದು
ಮ್ಮಾನವನು ಪ್ರಥಮಪ್ರವೇಶದೊಳಾದುದೀ ಹದನು
ದಾನವರ ಥಟ್ಟಣೆಗೆ ನಿಲುವರ
ನಾನು ಕಾಣೆನು ದಿಟ್ಟತನದಲಿ
ತಾನೆ ನಿಂದನು ಕೌರವೇಂದ್ರನು ಸಕಲ ಬಲಸಹಿತ ೫೨

ಘಡ ನಿಶಾಚರ ಹೋಗು ಹೋಗಳ
ವಡದು ಕರೆ ನಿಮ್ಮಯ್ಯನನು ಹೇ
ರೊಡಲ ತೋರಿಸಿ ಬಲವ ಬೆದರಿಸಲಗ್ಗಳಿಕೆಯಹುದೇ
ಮಿಡುಕುವರೆ ಕರೆ ನಿಮ್ಮ ತೆತ್ತಿಗ
ನಡಗಲೇತಕೆ ಕೃಷ್ಣ ನಿಮಗಿ
ನ್ನೊಡಲ ಬಳಿನೆಳಲವಸಹಿತ ಬಾಯೆಂದು ಗರ್ಜಿಸಿದ ೫೩

ಮರಳು ಕೌರವ ಜಂಗಮ ಸ್ಥಾ
ವರದ ದೇಹಕೆ ನೆಳಲಹುದು ದಿನ
ಕರನ ದೇಹಕೆ ನೆಳಲು ಶ್ರುತವೊ ದೃಷ್ಟವೋ ನಿನಗೆ
ಸುರ ನಿಶಾಚರ ಮರ್ತ್ಯರೊಳು ತಾ
ನೆರವ ಬಯಸುವುದುಂಟೆ ಹರಿಯಂ
ತಿರಲಿ ಚೈತನ್ಯಾತ್ಮನಾತನ ಮಾತದೇಕೆಂದ ೫೪

ಹೆಣನನರಸುತ ರಕುತಪಾನಕೆ
ಸೆಣಸಿ ಶಾಕಿನಿ ಢಾಕಿನಿಯರೊಳು
ಹೆಣಗಿ ಗೆಲುವುದೆಯಾಯ್ತು ದಾನವವಿದ್ಯೆ ಜಗವರಿಯೆ
ರಣದೊಳಗ್ಗದ ಕೈದುಕಾರರ
ಕೆಣಕಿ ಗೆಲುವುದ ಕೇಳಿದರಿಯೆವು
ಹೆಣದಿನಿಹಿಗಳು ಹೇವ ಮಾರಿಗಳೆಂದನಾ ಭೂಪ ೫೫

ಬಯ್ಯಲರಿವೆ ದುರುಕ್ತಿ ಶರದಲಿ
ಮೆಯ್ಯನೆಸುವೆಯೊ ಮೇಣು ಮಾರ್ಗಣೆ
ಕಯ್ಯಲುಂಟೇ ನಿನಗೆ ಸಂಬಳವೇನು ಸಮರದಲಿ
ಅಯ್ಯನನು ಕರೆಯೆಂಬ ಬಾಯಸು
ಕೊಯ್ಯಬೇಡಾ ಸಿಂಹಕೇಸರ
ದುಯ್ಯಲಾಡುವ ಗಜವ ನೋಡೆಂದುರುಬಿದನು ನೃಪನ ೫೬

ಎಸುತ ಹೊಕ್ಕನು ದಳ್ಳಿಸುವ ಹೊಸ
ಮಸೆಯ ಕಣೆ ಮುಕ್ಕುರುಕಿದವು ನಿ
ಪ್ರಸರದಲಿ ನೃಪನೆಚ್ಚು ಕಾಣನು ಹರಿವನಾ ಕಣೆಗೆ
ಕುಸುರಿದರಿದವು ಜೋಡು ಸೀಸಕ
ಬೆಸುಗೆಯೊಡೆದುದು ಘಾಯದಲಿ ಮೈ
ಬಸಿಯೆ ಬಿರಿದುದು ಶೌರ್ಯ ಬಿಗಿದುದು ಭೀತಿ ಭೂಪತಿಗೆ ೫೭

ಅಕಟ ದೊರೆಯೋ ಸಿಕ್ಕಿದನು ಪಾ
ತಕರು ರಥಿಕರು ಶಿವ ಹಿಡಿಂಬಾ
ರ್ಭಕನಿಗೊಪ್ಪಿಸಿಕೊಟ್ಟು ಕೊಂದರು ದ್ರೋಣ ಕೃಪರೆನುತ
ಸಕಲ ಪರಿಚಾರಕರು ಮಂತ್ರಿ
ಪ್ರಕರವೊರಲಲು ಕೇಳಿ ಬದ್ಧ
ಭ್ರುಕುಟಿ ಭೀಷಣಮುಖರು ಮುಸಗಿತು ದೈತ್ಯಬಲಜಲಧಿ ೫೮

ಬಕನ ಮಕ್ಕಳು ಜಟನ ಕಿಮ್ಮೀ
ರಕನ ಸುತರು ಹಿಡಿಂಬತನುಜರು
ವೃಕ ಜರಾಸಂಧಾತ್ಮಜರು ಶಿಶುಪಾಲನಂದನರು
ಸಕಲ ಸನ್ನಾಹದಲಿ ದೈತ್ಯ
ಪ್ರಕರ ಹೊಕ್ಕುದು ರಾಯ ರಥಪಾ
ಲಕರು ಕವಿದರು ತುಡುಕಿದರು ರಣವನು ಘಟೋತ್ಕಚನ ೫೯

ಕೆಣಕಿದರಲಾ ರಣವ ರಕ್ಕಸ
ಬಣಗುಗಳು ಮರುಳು ಪೂತು ಸಮರಾಂ
ಗಣದೊಳಗೆ ನಾವಾವ ಸದರವೊ ನೋಡಿರೈ ಭಟರು
ಸೆಣಸು ಗಡ ನಮ್ಮೊಡನೆ ಸಲೆ ಟಿಂ
ಠಣಿಸುವರು ಗಡ ಬವರಕೋಸುಗ
ಹೊಣಕೆ ಗಡ ನಮ್ಮೊಡನೆನುತ ಸಾರಥಿಯ ಕೈವೊಯ್ದು ೬೦

ಹೆಸರುಗೊಂಡರೆ ಕಿವಿಗಳಿಗೆ ಕ
ರ್ಕಶರು ರಕ್ಕಸರೆಂಬ ಹೆಸರಿದು
ನುಸಿಗಳೊಳಗಾಶ್ರಯಿಸಿ ಕೆಟ್ಟುದು ಶಿವ ಶಿವಾಯೆನುತ
ಹೊಸ ಮಸೆಯ ಹೊಗರಂಬುಗಳನೆ
ಬ್ಬಿಸಿದನುಬ್ಬಿಸಿದನು ವಿರೋಧಿಗ
ಳಸು ಸಮೀರಣನಿಂದ ನಿಜಭುಜ ವಿಕ್ರಮಾನಳನ ೬೧

ಓಡಲೀಯದೆ ಸದರಗೊಡುತ ವಿ
ಘಾಡಿಸುತ ಮೇಲಿಕ್ಕಿದರೆ ಕೈ
ಮಾಡಿದರೆ ಶರಹತಿಗೆ ದೇಹವ ಕೊಟ್ಟು ಸೈರಿಸುತ
ಖೇಡತನವನು ಬಿಡಿಸಿ ಸಲೆ ಕೊಂ
ಡಾಡಿ ಕಾದಿದನಸುರಜಾತಿಯೊ
ಳೋಡೆ ಪರಿಭವ ತನ್ನದೆಂಬ ಪದಸ್ಥತನದಿಂದ ೬೨

ಎಸುಗೆಯೊಳ್ಳಿತಲಾಯುಧನ ಲಂ
ಬುಸನ ಪರಿ ತಪ್ಪಲ್ಲ ತಪ್ಪ
ಲ್ಲಸುರನಹೆಯೋ ಜಾಗು ಕಿಮ್ಮೀರಾತ್ಮಜಾಯೆನುತ
ಅಸಿ ಪರಶು ಪಟ್ಟಿಸ ಮುಸುಂಡಿ
ಪ್ರಸರ ಧಾರಾಪಾತದಲಿ ಮೈ
ಬಸಿಯೆ ರಕುತದ ಸಾರ ಸಾಲಿಡೆ ಬಲದೊಳೊಳಹೊಕ್ಕ ೬೩

ಉರು ತಿಮಿಂಗಿಳನಬುಧಿಯಲಿ ಡಾ
ವರಿಸುವುದು ಹುಲುಮೀನಿನಂತಿರ
ಲರಸ ಹೇಳುವುದೇನು ಮೊಗೆದನು ದೈತ್ಯ ಜಲನಿಧಿಯ
ಅರಿದ ಕೊರಳಿನ ಬಸಿವ ಬಂಬಲು
ಗರುಳ ಜರಿವ ಕಪಾಲದೊಗುನೆ
ತ್ತರ ರಣಾವನಿ ಕರೆವುತಿರ್ದುದು ರೌದ್ರಮಯರಸವ ೬೪

ಜಾಗು ದೈತ್ಯರ ರಭಸದಲಿ ಲೇ
ಸಾಗಿ ಕಾದಿದಿರೀಸು ನಮ್ಮಲಿ
ತಾಗಿ ನಿಂದವರಾರು ಕೆಚ್ಚುಳ್ಳವರು ಕಲಿತನದ
ಆಗಲಿನ್ನಾವುದು ನಮಗೆ ಕೈ
ಲಾಗು ನಿಮ್ಮಸುಗಳು ಶರೀರವ
ನೀಗಿ ಕಳೆಯಲಿ ಎಂದು ಬೊಬ್ಬಿರಿದೆಚ್ಚನತಿರಥರ ೬೫

ಸಿಡಿಲು ಮೊರೆದರೆ ಸರ್ಪನಂಜುವು
ದಡಗುವನೆ ಗರುಡನ ವೃಥಾ ಕೆಡೆ
ನುಡಿಯ ನುಡಿದರೆ ದಿಟ್ಟನೆಂಬರೆ ವೀರರಾದವರು
ಫಡ ಫಡೆನುತ ಬಕಾಸುರನ ಮಗ
ನಡಸಿದನು ಕೂರಂಬನಾತನ
ಕಡುಹ ಹೊಗಳುತ ಹೊಕ್ಕು ಹಿಡಿದನು ಬೀಸಿದನು ಖಳನ ೬೬

ರಥಚಯವ ನುಗ್ಗೊತ್ತಿದನು ಸಾ
ರಥಿಗಳನು ಸೀಳಿದನು ಸುಮಹಾ
ರಥರ ಬಿಂಕದ ಬಿಗುಹ ಮುರಿದನು ಹೊಕ್ಕು ಬೀದಿಯಲಿ
ಶಿಥಿಲವಾಯಿತು ವೈರಿಬಲವತಿ
ಮಥನವಾಯಿತು ದೈತ್ಯನೂಳಿಗ
ಪೃಥುವಿ ಲಘುತರವಾಯ್ತು ಫಣಿತಪನ ಕೊರಳು ಸೈನಿಮಿರೆ ೬೭

ಬರಸಿದನು ರಣದಲಿ ಹಿಡಿಂಬಾ
ಸುರನ ಮಕ್ಕಳ ಚೈದ್ಯ ಮಾಗಧ
ನರಕ ಕಿಮ್ಮೀರಕ ಜಟಾಸುರಸೂನು ಸಂತತಿಯ
ಬರಲಿ ಕರ್ಣ ದ್ರೋಣರುಳಿದೀ
ಜರಡ ಜೋಡಿಸಬೇಡ ಭೀಮನ
ನರನ ಬಯಸುವರೆನ್ನೊಡನೆ ಕೈಮಾಡಹೇಳೆಂದ ೬೮

ಎನಲು ಕವಿದುದು ಸೇನೆ ಕಂಗನೆ
ಗನಲಿ ಕರ್ಣ ದ್ರೋಣರಿಗೆ ನೀ
ನೆನಿತರವ ಘಡ ಬಾಯಿಬಡುಕನು ಭೀಮಸುತನೆನುತ
ತನತನಗೆ ಕಾಲಾಳು ಮೇಲಾ
ಳನುಪಮಿತರೌಕಿದರು ಚಾಪ
ಧ್ವನಿಯೊಳಗೆ ನೆರೆ ಮುಳುಗೆ ಬಹುವಿಧವಾದ್ಯ ನಿರ್ಘೋಷ ೬೯

ಆಳಹಿರಿ ನಿಮಗಂಜುವೆನು ಕಾ
ಲಾಳ ಹೊಯ್ಯೆನು ಕುದುರೆಕಾರರು
ಮೇಲುವಾಯಲಿ ರಥಿಕರೊಡೆ ಹಾಯಿಸಲಿ ತೇರುಗಳ
ತೂಳಿಸಲಿ ಗಜದಳವನವರಿಗೆ
ಕೋಲ ತೊಡಚುವನಲ್ಲ ನೆರೆ ಓ
ಹಾಳಿಯುಳ್ಳರೆ ಬರಲಿ ಕರ್ಣ ದ್ರೋಣ ಕೃಪರೆನುತ ೭೦

ಹಲಬರಸುರರು ಮುಡಿದರಿವನ
ಗ್ಗಳಿಯನಿರುಳಿನ ಬವರದಾಯತ
ತಿಳಿವುದೀತಂಗೆನುತಲಾ ದ್ರೋಣಾದಿ ನಾಯಕರು
ಅಳುಕಿದರು ಬಳಿಕೇನು ಭಕುತಿಯ
ಲೊಲಿಸಿದರಲ್ಲೈ ಪಾಂಡವರು ಯದು
ಕುಲಲಲಾಮನನಮಳ ಗದುಗಿನ ವೀರನರಯಣನ ೭೧

## ಹದಿನಾರನೆಯ ಸಂಧಿ

ಸೂ. ಚಂಡಬಲ ಕುರುಪತಿಗೆ ಮಲೆವರ
ಗಂಡನಿರುಳಿನ ಕಾಳೆಗದೊಳು
ದ್ದಂಡಭಟ ಕಲಿಕರ್ಣ ಕೊಂದನು ಭೀಮನಂದನನ

ಕೇಳು ಧೃತರಾಷ್ಟ್ರಾವನಿಪ ದೊರೆ
ಯಾಳನರಸುತ ಹೊಕ್ಕು ಸೂಠಿಯೊ
ಳಾಳುಕುದುರೆಯ ಥಟ್ಟನಿಬ್ಬಗಿ ಮಾಡಿ ದಳವುಳಿಸಿ
ಕೋಲ ತೊಡಚೈ ಕರ್ಣ ಕುರುಭೂ
ಪಾಲ ಕೈದುವ ಹಿಡಿ ಕೃಪಾದಿಗ
ಳೇಳಿ ಸಮ್ಮುಖವಾಗೆನುತ ಕೈಮಾಡಿ ಬೊಬ್ಬಿರಿದ ೧

ಚೆಲ್ಲಿತರಿಬಲಜಲಧಿ ಭಟರ
ಲ್ಲಲ್ಲಿ ಮುಕ್ಕುರುಕಿದರು ಸಬಳದ
ಸೆಲ್ಲಹದ ತೋಮರದ ಚಕ್ರದ ಸರಿಯ ಸೈಗರೆದು
ಘಲ್ಲಿಸಿದವಾನೆಗಳು ತೇರಿನ
ಬಿಲ್ಲವರು ತುಡುಕಿದರು ಕಂಬುಗೆ
ಯಲ್ಲಿ ಖರ ಕುಣಿದಾಡೆ ಹೊಕ್ಕರು ರಾಯರಾವುತರು ೨

ಎಡಬಲದಿ ಹಿಂದಿದಿರಿನಲಿ ಕೆಲ
ಕಡೆಯ ದಿಕ್ಕಿನೊಳೌಕಿದರು ಬಲು
ಗಡಲ ಕಡೆಹದ ಗಿರಿಯನಬುಧಿಯ ತೆರೆಗಳೊದೆವಂತೆ
ಕೊಡಹಿದರೆ ಕಟ್ಟಿರುಹೆಗಳು ಬೆಂ
ಬಿಡದೆ ಭುಜಗನನಳಲಿಸುವವೋ
ಲಡಸಿ ತಲೆಯೊತ್ತಿದರು ಬೀಳುವ ಹೆಣನನೊಡಮೆಟ್ಟಿ ೩

ಹೊಕ್ಕ ಸುಭಟರು ಮರಳದಿರಿ ಖಳ
ಸಿಕ್ಕಿದನು ಸಿಕ್ಕಿದನು ಚಲಿಸುವ
ಚುಕ್ಕಿಗರ ಹೊಯ್ ಬೀಳಗುತ್ತೆನುತರಸನುಬ್ಬರಿಸೆ
ಹೊಕ್ಕು ತಿವಿದರು ತೀಡಿ ಹರಿಗೆಯ
ನಿಕ್ಕಿ ನಿಂದರು ತಮತಮಗೆ ಮೇ
ಲಿಕ್ಕಿದರು ತೆರೆ ಮುರಿಯೆ ಬಳಿದೆರೆ ಮುಸಗಿ ಕವಿವಂತೆ ೪

ಅಗಡು ದಾನವನಿವನು ಕಡ್ಡಿಗೆ
ಬಗೆವನೇ ಸಾಗರವನರವ
ಟ್ಟಿಗೆಯನಿಟ್ಟರೆ ವಡಬನಲ್ಲಾ ನೀರ ಕುಡಿವವನು
ಹೊಗೆದುದ್ದೈ ಹೆಚ್ಚಾಳುಗಳ ನಗೆ
ಮೊಗವು ಮೋಡಾಮೋಡಿಯಲಿ ಕೈ
ಮಗುಚಿ ಕಳೆದನು ನಿಮಿಷದಲಿ ಹೇರಾಳ ರಾಶಿಗಳ ೫

ಕೆಲರ ನುಂಗಿದನೊದೆದು ಕೊಂದನು
ಕೆಲಬರನು ಹೊರಕೈಯ್ಯ ಹೊಯಿಲಲಿ
ಕೆಲಬರನು ಧನುವಿನಲಿ ಗದೆಯಲಿ ಹೊಯ್ದು ಕೆಲಕೆಲರ
ಕಲಕಿದನು ಬಲಜಲಧಿಯನು ಮೇ
ಲುಲಿದು ಕವಿದುದು ಮತ್ತೆ ಹೆಣನನು
ತುಳಿದು ಮುಗ್ಗಿತು ಮೇಲೆ ಬಿದ್ದುದು ಮುಸುಕಿತರಿಭಟನ ೬

ಪೂತುರೇ ಕುರುಸೈನಿಕವಸಂ
ಖ್ಯಾತವೆಂದಿಗೆ ಸವೆವುದೋ ಕೈ
ಸೋತವೇ ಹರ ಕೊಲುವೆನೆನುತಮುರಾರಿ ಚಿಂತಿಸಿದ
ಈತಗಳಿಗಿದು ಮದ್ದೆನುತ ಮಾ
ಯಾತಿಶಯ ಯುದ್ಧದಲಿ ಬಲಸಂ
ಘಾತವನು ಬೆದರಿಸಿದನದನೇವಣ್ಣಿಸುವೆನೆಂದ ೭

ಮಾಯದಲಿ ಹುಲಿಯಾಗಿ ಗರ್ಜಿಸಿ
ಹಾಯಿದನು ಕಲಿಸಿಂಹವಾಗಿ ಗ
ದಾಯುಧದಲಪ್ಪಳಿಸಿದನು ಭೈರವನ ರೂಪಾಗಿ
ಬಾಯಲಡಸಿದನಹಿತರನು ದಂ
ಡಾಯುಧದ ನಿಲವಿನಲಿ ಸುಭಟರ
ದಾಯಗೆಡಿಸಿದನೊಂದು ನಿಮಿಷದೊಳೊರಸಿದನು ಬಲವ ೮

ಬೀಳಹೊಯ್ದನು ಬಿರುದರನು ಬಿರು
ಗಾಳಿಯಾಗಿ ವರೂಥಚಯವನು
ಕಾಳುಕಿಚ್ಚಾಗುರುಹಿದನು ಫಣಿಯಾಗಿ ತುಡುಕಿದನು
ಮೇಲುಗವಿದನು ಜಲಧಿಯಾಗಿ ನೃ
ಪಾಲನಿಕರದೊಳುರುಳಿದನು ಗಿರಿ
ಜಾಳವಾಗಿ ಘಟೋತ್ಕಚನು ಘಲ್ಲಿಸಿದನತಿರಥರ ೯

ಎರಗಿದನು ಸಿಡಿಲಾಗಿ ಕಂಗಳೊ
ಳಿರುಕಿದನು ಮಿಂಚಾಗಿ ಮಳೆಯನು
ಕರೆದು ನಾದಿದನಾತಪತ್ರ ತನುತ್ರ ಸೀಸಕವ
ತುರುಕಿದನು ಹೊಗೆಯಾಗಿ ಮಿಗೆ ಬೊ
ಬ್ಬಿರಿದನೊಂದೆಡೆಯಲ್ಲಿ ಸುಭಟರ
ನೊರಲಿಸಿದನೊಂದೆಡೆಯಲೇನೆಂಬೆನು ಮಹಾರಣವ ೧೦

ಸುರಿವ ಕರುಳ್ಗಳ ಸಿಡಿದ ಹಲುಗಳ
ಜರಿದ ತಲೆಗಳ ಹಾಯ್ದ ಮೂಳೆಯ
ಹರಿದ ನರವಿನ ಬಿಗಿದ ಹುಬ್ಬಿನ ಬಿಟ್ಟ ಕಣ್ಣುಗಳ
ಮುರಿದ ಗೋಣಿನ ಬಸಿವ ತೊರಳೆಯ
ಹರಿವ ರಕುತದ ತಳಿತ ಖಂಡದ
ಬಿರಿದ ಬಸುರಿನ ಕೌರವದ ರಣಭೂಮಿ ರಂಜಿಸಿತು ೧೧

ಗರುಡನುಬ್ಬಟೆಗಹಿ ನಿಕರ ಜ
ಜ್ಝರಿತವಾದವೊಲಿವನ ಕಡು ನಿ
ಬ್ಬರದ ಧಾಳಿಗೆ ಧೈರ್ಯಗೆಟ್ಟುದು ಕೂಡೆ ಕುರುಸೇನೆ
ಹೊರಳಿಯೊಡೆದರು ಭಟರು ಸಿಡಿದರು
ಜರುಗಿದರು ಜವಗುಂದಿದರು ಮಡ
ಮುರಿದು ಬಿರುದರು ತಣಿದುದೈ ಪರಿಭವದ ಸೂರೆಯಲಿ ೧೨

ಧಾತುಗೆಟ್ಟುದು ದೊಡ್ಡಿಯೆಂದೇ
ಭೂತಳಾಧಿಪ ಬಗೆಯದಿರು ತೆಗೆ
ಮಾತು ಹುಸಿ ಮರಳಿದರು ನಿನ್ನಯ ಪಟ್ಟದಾನೆಗಳು
ಭೀತಿಗೊಂಡನು ದ್ರೋಣ ಸೋಲಕೆ
ಕೇತುವಾದನು ಶಲ್ಯನಪಜಯ
ಮಾತೃಕಾಕ್ಷರನಾದನಶ್ವತ್ಥಾಮನಿಂದಿನಲಿ ೧೩

ಇವನ ಧಾಳಿಯನಿವನ ಧೈರ್ಯವ
ನಿವನ ಹೂಣಿಗತನವನಿವನಾ
ಹವದ ಹೊರಿಗೆಯನಿವನ ಭಾರಿಯ ವೆಗ್ಗಳೆಯತನವ
ದಿವಿಜರಾನಲು ನೂಕದಿದು ನ
ಮ್ಮವರ ಪಾಡೇನೈ ಪಲಾಯನ
ತಪನಿಧಿಯಲೇ ನಿಮ್ಮ ಬಲ ಧೃತರಾಷ್ಟ್ರ ಕೇಳೆಂದ ೧೪

ಹಾಯಿಕಲಿ ಟೆಕ್ಕೆಯವ ಭಟ್ಟರ
ಬಾಯ ಹೊಯ್ ಗಡಬಡೆಯ ಹೊತ್ತ
ಲ್ಲಾಯುಧವನೀಡಾಡು ಕೊಯ್ ಕೊಯರ್ ಜೋಡಂ ಹೊಲಿಗೆಗಳ
ರಾಯ ಕೊಂದರೆ ಕೊಲಲಿ ಸುಕೃತವು
ಬೀಯವಾಗಲಿ ನಾವು ರಕ್ಕಸ
ನಾಯ ಕಯ್ಯಲಿ ಸಾಯೆವೆನುತೊಡೆಮುರಿದರತಿರಥರು ೧೫

ಇಳಿದ ಕುದುರೆಗೆ ಬಿಸುಟ ರಥಸಂ
ಕುಳಕೆ ಹಾಯ್ಕಿದ ಟೆಕ್ಕೆಯಕೆ ಕೈ
ಬಳಿಚಿದಾಯುಧತತಿಗೆ ನೂಕಿದ ಜೋಡು ಸೀಸಕಕೆ
ಕಳಚಿದಾಭರಣಾತಪತ್ರಾ
ವಳಿಗೆ ಕಾಣೆನು ಕಡೆಯನೀ ಪರಿ
ಕೊಲೆಗೆ ಭಂಗಕೆ ನಿನ್ನ ಬಿರುದರು ಬಂದುದಿಲ್ಲೆಂದ ೧೬

ಸಿಡಿವ ತಲೆಗಳ ಬಳಿವಿಡಿದು ಧಾ
ರಿಡುವ ರಕುತದಲೆರಡು ಬಲದಲಿ
ಹಿಡಿದ ದೀವಿಗೆ ನಂದಿದವು ಕುಂದಿದುದು ಚತುರಂಗ
ಮಡಮುರಿಯಮಯವಾಯ್ತು ಸುಭಟರ
ನಿಡು ಮುಸುಕು ಮೋಹಿಸಿತು ಮುರುಹಿನ
ಕಡುಹುಕಾರರು ಕೇಣಿಗೊಂಡರು ಬಹಳ ದುಷ್ಕೃತವ ೧೭

ದ್ರೋಣನೆಂಬರೆ ಮುನ್ನವೇ ನಿ
ರ್ವಾಣದೀಕ್ಷಿತನಾದನಾತನ
ಕಾಣೆವೈ ಗುರುಸುತನದ್ಯಶ್ಯಾಂಜನವೆ ಸಿದ್ಧಿಸಿತು
ಹೂಣಿಗರು ಮತ್ತಾರು ಶಲ್ಯ
ಕ್ಷೋಣಿಪತಿ ಕೃತವರ್ಮ ಕೃಪನತಿ
ಜಾಣರೋಟದ ವಿದ್ಯೆಗೆಸುತಿರ್ದುದು ಭಟಸ್ತೋಮ ೧೮

ಏನ ಹೇಳುವೆಸಮುಮ ಬಹಳಾಂ
ಭೋನಿಧಿಯ ವಿಷದುರಿಯ ಧಾಳಿಗೆ
ದಾನವಾಮರರಿಂದುಮೌಳಿಯ ಮರೆಯ ಹೊಗುವಂತೆ
ದಾನವಾಚಳ ಮಥಿತ ಸೇನಾಂ
ಭೋನಿಧಿಯ ಪರಿಭವದ ವಿಷದುರಿ
ಗಾ ನರೇಂದ್ರ ನಿಕಾಯ ಹೊಕ್ಕುದು ರವಿಸುತನ ಮರೆಯ ೧೯

ಶರಣು ಹೊಕ್ಕುದು ಬಂದು ಮಕುಟದ
ಗರುವರವನೀಪಾಲಕರು ಮೋ
ಹರಕೆ ತೋರ್ಪಟ್ಟವರು ಭಾರಿಯ ಬಿರುದಿನತಿಬಳರು
ದುರುಳ ದೈತ್ಯನ ಬಾಧೆ ಘನ ಪರಿ
ಹರಿಸಲರಿಯೆವು ಕರ್ಣ ನೀನೇ
ಮರಳಿ ಸೇನೆಯ ರಕ್ಷಿಸೆಂದುದು ನಿಖಿಳ ಪರಿವಾರ ೨೦

ತಳಿತ ಮಂಸುಕಿನ ಬೆರಳ ಮೂಗಿನ
ನೆಲನ ನೋಟದ ಮೆಯ್ಯ ತೂಕದ
ಝಳದ ಸುಯ್ಲಿನ ಮುಖದ ಮೋನದ ನಸಿದ ನೆನಹುಗಳ
ಕಳಿದ ಕಡುಹಿನ ಬೀತ ಬಿರುದಿನ
ಬಲಿದ ಭಂಗದ ನೃಪತಿಗಳನ
ಗ್ಗಳೆಯ ರವಿಸುತ ಕಂಡು ಹೊಗಳಿದನಾ ಘಟೋತ್ಕಚನ ೨೧

ಶಿವಶಿವಾ ಕೌರವನ ಸುಭಟರು
ದಿವಿಜರಿಗೆ ವೆಗ್ಗಳರು ನಿನಗಿಂ
ದಿವರು ಸೋತರು ಪೂತು ದಾನವ ನೀ ಕೃತಾರ್ಥನಲ
ಇವನ ಪಾಡಿನ ಸುಭಟರೇ ನ
ಮ್ಮವರು ಗೆಲವೇನಿವನದೇ ಮಾ
ಧವನ ಸೂತ್ರದಯಂತ್ರವಿದು ಲಯಕಾಲ ನಮಗೆಂದ ೨೨

ಸಾಕು ದೈತ್ಯನ ಕೆಡಹು ಸೇನೆಯ
ಸಾಕು ಸುಭಟರು ಬಾಯಬಿಡುತಿದೆ
ನೂಕು ನೂಕಮರಾರಿಯನು ತಡೆ ತಡವುಮಾಡದಿರು
ಆಕೆವಾಳರು ವಿಗಡ ವೀರಾ
ನೀಕವಿದೆ ತಲ್ಲಣದ ತಗಹಿನ
ಲೇಕೆ ಕಾಲಕ್ಷೇಪವೆಂದನು ಕೌರವರಾಯ ೨೩

ದುಗುಡವೋ ಮೇಣ್ ವಿಕ್ರಮಾಗ್ನಿಯ
ತಗಹುಗಳ ತನಿಹೊಗೆಯೊ ರಾಯರ
ಮೊಗವ ನೋಡೈ ಕೀರ್ತಿಕೌಮುದಿ ಕಳಿದ ಕತ್ತಲೆಯೊ
ಬಿಗಿದ ಭೀತಿಯ ಸೂರೆಗಳೊ ಮೋ
ರೆಗಳೊ ಸವಿಪಾತುಗಳ ಸೋನೆಯ
ಸೊಗಸುಕಾರರು ನಿಂದ ನಿಲವನು ಕರ್ಣ ನೋಡೆಂದ ೨೪

ವಿಗಡತನವನು ವಹಿಲದಲಿ ಕೈ
ಮಗುಚಿ ಕಳೆದರು ಹೂಸಿಕದ ಹೂ
ಣೆಗತನವ ಸೊನ್ನಾರವಿದ್ಯೆಯ ಸಾಹಸೋನ್ನತಿಯ
ಸೊಗಸ ಹುಟ್ಟಿಸಿ ಸುಲಿವ ರಸವಾ
ದಿಗಳನಿವರ ವಿಪಾಯಿಗಳ ನಂ
ಬುಗೆಯ ಕೇವಣ ಪಾಡುಕಾರರ ಕರ್ಣ ನೋಡೆಂದ ೨೫

ನಡೆವುತೆಡಹಿದ ಪಟ್ಟದಾನೆಯ
ಮಿಡಿಯ ಹೊಯ್ವರೆ ಜೀಯ ರಣವವ
ಗಡವು ನಮಗಿದು ರಾತ್ರಿ ದೈತ್ಯರಿಗಿದುವೆ ನಡುಹಗಲು
ಮೃಡನನೊಂದವಸರಕೆ ಬಗೆಯದ
ಕಡುಹುಕಾರರು ನಿನ್ನವರು ಕೆಡೆ
ನುಡಿದು ನೋಯಿಸಲೇತಕೆಂದನು ಕರ್ಣನರಸಂಗೆ ೨೬

ತಾಗಿ ವಜ್ರವ ಮುಕ್ಕುಗಳೆವಡೆ
ಸಾಗರವ ಹೊಗಲೇಕೆ ಗಿರಿಗಳು
ಹೋಗಲಿನ್ನಾ ಮಾತು ಮೀರಿದ ದೈತ್ಯನುಪಟಳವ
ಈಗ ಮಾಣಿಸು ನಮ್ಮ ಸುಭಟರು
ಯೋಗಿಗಳವೊಲು ದಂಡಹೀನರು
ಬೇಗ ಮಾಡಿನ್ನಮರವೈರಿಯ ತರಿದು ಬಿಸುಡೆಂದ ೨೭

ಕಳೆದ ವಾಸವ ಶಕ್ತಿ ಪಾರ್ಥನ
ತಲೆಗೆ ಬೈಚಿಟ್ಟಿಹುದನೀಗಳು
ಸೆಳೆದೆನಾದರೆ ಮುಂದೆ ಫಲುಗುಣನೆನ್ನ ಲೆಕ್ಕಿಸನು
ಉಳಿದ ಬಾಣಂಗಳಲಿ ದೈತ್ಯನ
ಗೆಲುವುದರಿದಿದಕಾವ ಹದನೋ
ತಿಳಿಯಲರಿಯೆನು ಜೀಯಯೆಂದನು ಕುರುಪತಿಗೆ ಕರ್ಣ ೨೮

ಈಗಳೀ ದಾನವನ ಬಲೆಯಲಿ
ತಾಗಿ ಸಿಲುಕಿತು ನಮ್ಮ ಮೋಹರ
ಮೇಲೆ ಫಲುಗುಣನಾರ ಕೊಲುವನು ಮರಣ ನಮಗಾಗೆ
ನೀಗಿ ಕಳೆ ಕೊಲೆಗಡಿಗನನು ಜಯ
ವಾಗಲೀಗಳೆ ಮುಂದೆ ನರನು
ದ್ಯೋಗಕಾರೈವೆವು ಚಿಕಿತ್ಸೆಯನೆಂದನಾ ಭೂಪ ೨೯

ಆದಡಮರವಿರೋಧಿಯಸುವನು
ಸೇದುವೆನು ಸರಿಸದಲಿ ನಿಂದರೆ
ನಾದುವೆನು ನಿಟ್ಟೊಡಲ ರಕುತದಲಖಿಳ ದಿಗುತಟವ
ಕಾದುವೆನು ನಮ್ಮವರು ಕಳಚಿದ
ಕೈದುವನು ಕೈವಶಮಾಡಿ ವಿ
ನೋದವನು ನೀವ್ ನೋಡಿ ಎಂದನು ಕರ್ಣನರಸಂಗೆ ೩೦

ಇತ್ತಲೀ ದನುಜೇಂದ್ರ ಕದನವ
ದಿತ್ತಲಿತ್ತಲು ಗಮನ ಸುಭಟರ
ಕತ್ತಲೆಯೊಳೋಡಿಸಿದ ಕಡುಹನು ತೋರು ನಮ್ಮೊಡನೆ
ಮೃತ್ಯು ನಿನಗಾನೆನ್ನೊಡನೆ ತಲೆ
ಯೊತ್ತಿನೋಡೆಂದೆನುತ ಬೊಬ್ಬಿರಿ
ವುತ್ತ ದೈತ್ಯನ ತರುಬಿದನು ಬಲವೆಲ್ಲ ಬೆರಗಾಗೆ ೩೧

ಎಲವೊ ನರೆ ಗಂಡಹೆ ಕಣಾ ನೀ
ಮಲೆತು ನಿಂದುದು ಸಾಲದೇ ಸುರ
ರೊಳಗೆ ಸಿತಗರ ಸೀಳುವೆನು ಮಾನವರ ಪಾಡೇನು
ಕಲಿತನಕೆ ಮೆಚ್ಚಿದೆನು ಸತ್ತರೆ
ಮೊಳೆಯದಿಹುದೇ ಕೀರ್ತಿ ರಿಪುಬಲ
ದೊಳಗೆ ದಿಟ್ಟನು ಕರ್ಣ ನೀನೆನುತಸುರ ಮಾರಾಂತ ೩೨

ತಾನೆ ತನ್ನನೆ ಹೊಗಳಿಕೊಂಬರೆ
ಮಾನನಿಧಿಯಾದವರು ಸಾಕೀ
ದಾನವರ ಗರುವಾಯಿ ಭಾರಿಯ ಭಂಡವಿದ್ಯೆಗಳು
ಏನು ಹೊಸತೆಂತೆಂತು ಶರಸಂ
ಧಾನವುಳಿದಗ್ಗಳಿಕೆಗಳ ಮಾ
ತೇನು ಬಲ್ಲರೆ ಬಿಲ್ಲ ಹಿಡಿ ಹಿಡಿ ಕಾಣಲಹುದೆಂದ ೩೩

ಫಡ ದೊಠಾರಿಸಿ ನುಡಿದ ಜಿಹ್ವೆಯ
ಹೆಡತಲೆಯಲುಗಿವೆನು ಕಣಾ ಕೇಳ್
ತೊಡಕಿ ತನ್ನಲಿ ಬದುಕುವವರಾರಿಂದ್ರ ಯಮರೊಳಗೆ
ಕಡುಹುಕಾರರ ಗರ್ವವಿಷಗಾ
ರುಡವನೆನ್ನಲಿ ನೋಡು ನೋಡೆನು
ತೊಡನೊಡನೆ ಶರವಳೆಯ ಕರೆದನು ಪವನಸುತಸೂನು ೩೪

ದಾನವರು ದಕ್ಕಡರು ಧೈರ್ಯೋ
ದ್ದಾನಶೀಲರು ಘಾಯವನು ಗಿರಿ
ಯಾನಬಾರದು ಮುಟ್ಟಿಬಲವೆಗ್ಗಳರು ಸತ್ವದಲಿ
ಈ ನಿರಂತರ ಬಾಣ ರಚನಾ
ನೂನ ಧನುರಭ್ಯಾಸದನುವನ
ದೇನ ಹೇಳುವೆ ಲೇಸೆನುತ ಕಲಿಕರ್ಣ ತೆಗೆದೆಚ್ಚ ೩೫

ಹಾರಿದವು ಗರಿಸಹಿತ ದೇಹವ
ಡೋರುಗಳೆದಂಬುಗಳು ನೆತ್ತರ
ಜೋರು ಮಸಗಿತು ಕೂಡೆ ಜಾಜಿನ ಗಿರಿಯ ರೌಕುಳದ
ಏರ ಬಾಯ್ಗಳ ತಳಿತಖಂಡದ
ಸೂರೆಗೊಂಡವು ಹಿಂದಣಂಬುಗ
ಳಾರೆನಭಿವರ್ಣಿಸಲು ಕರ್ಣ ಘಟೋತ್ಕಚಾಹವವ ೩೬

ತಾರಕನ ಕೈಟಭನ ಮಹಿಷನ
ವೀರ ಜಂಭನ ಕಾಲನೇಮಿಯ
ತಾರಕಾಕ್ಷನ ಕುಂಭಕರ್ಣನ ಮುರ ಗುಹಾಸುರನ
ಆರುಭಟೆ ರಣದುಬ್ಬಟೆಯ ಜ
ಜ್ಝಾರತನವಿವನೊಬ್ಬನಲಿ ಕೈ
ವಾರವೇ ನೆರೆ ಕಾಣಲಾಯ್ತೆಂದುದು ಸುರಸ್ತೋಮ ೩೭

ನಿಲುವಡಸುರನ ಮುಂದೆ ಕರ್ಣನೆ
ನಿಲಲು ಬೇಹುದು ಕರ್ಣನುರುಬೆಗೆ
ನಿಲುವಡೀಯಮರಾರಿಗೊಪ್ಪುವುದೈ ಮಹಾದೇವ
ಉಳಿದ ಭೂರಿಯ ಬಣಗುಗಳು ವೆ
ಗ್ಗಳೆಯುವೆಸರಿಗೆ ನೋಂತರೇ ಕುರು
ಬಲದೊಳರಿಬಲದೊಳಗೆ ಸರಿಯಿನ್ನಿವರಿಗಿಲ್ಲೆಂದ ೩೮

ಎರಡು ಬಲವಿವರಿಬ್ಬರಾಹವ
ದರವಣೆಯನೇ ನೋಡುತಿರ್ದುದು
ಸರಿಮಿಗಿಲ ಕಾದಿದರು ಶಿವ ಶಿವ ಭಾರಿಯಂಕದಲಿ
ಸರಳು ತೀರಲು ತೀರದಸುರನ
ಕೆರಳಿದುರಿ ಕುಡಿಯಿಟ್ಟುದಿವನ
ಬ್ಬರಣೆ ಕೆಡೆಬೀಳೆನುತ ಶೂಲದಲಿಟ್ಟನಿನಸುತನ ೩೯

ಹೊಗರುಗಿಡಿಗಳ ಬಾಯಿಧಾರೆಯ
ಲೊಗೆವ ಹೊಗೆಗಳ ಹೊದರಿನುರಿ ಜಾ
ಳಿಗೆಯ ಭೋಂಕಾರದ ಭಯಂಕರ ಶೂಲವೈತರಲು
ನಗುತ ಮೂರಂಬಿನಲಿ ಕೈದುವ
ತೆಗೆಸಿದನು ನೆರೆ ಹತ್ತು ಶರವನು
ಹಗೆಯ ಹೇರುರದೊಳಗೆ ಹೂಳಿದು ಕರ್ಣ ಬೊಬ್ಬಿರಿದ ೪೦

ದರಿಗಳೊಳು ದರ್ವೀಕರಾವಳಿ
ಯುರವಣಿಸಿದರೆ ಬಲ್ಲುದೇ ಕುಲ
ಗಿರಿ ಮಹಾದೇವಾವ ಸತ್ವವೊ ದಾನವೇಶ್ವರಗೆ
ಅರಿಯ ಶರಹತಿಗೊಡಲು ನೆರೆ ಜ
ರ್ಜ್ಜರಿತವಾಗಲು ನೊಂದುದಿಲ್ಲ
ಬ್ಬರಿಸಿ ಪರಿಘದಲಿಟ್ಟನಂಬುಜಬಂಧುನಂದನನ ೪೧

ತಿರುಗುತ್ತೈತಹ ಪರಿಘ ಕಾಂತರೆ
ಗಿರಿಗಳಡಿ ಮೇಲಹವು ನಾವಿ
ನ್ನರಸ ಹೇಳುವುದೇನು ಕರ್ಣನ ಬಾಹುವಿಕ್ರಮವ
ಪರಿಘವದು ಪರಮಾಣುಮಯವಾ
ಯ್ತೆರಡುಶರದಲಿ ಸಾರಥಿಯುನಿ
ಟ್ಟೊರಸಿದನು ಹದಿನೈದು ಶರದಲಿ ರಥದ ಕುದುರೆಗಳ ೪೨

ಸಮರಸಾಧನ ಸವೆಯೆ ಕೋಪದ
ತಿಮಿರ ಗರಿಗಟ್ಟಿತು ಮಹಾವಿ
ಕ್ರಮನ ಚಳಕವನೇನ ಹೇಳುವೆ ರಥದ ಬಳಸಿನಲಿ
ಸಮುತಳಿಸಿ ಕೈದುಗಳ ಮಳೆಯನು
ದ್ಯುಮಣಿತನಯನ ಮೇಲೆ ಕರೆದನು
ನಿಮಿಷಕದ ಪರಿಹರಿಸಿ ದೈತ್ಯನನೆಚ್ಚನಾ ಕರ್ಣ ೪೩

ತೂರಿದರೆ ತನಿಹೊಟ್ಟು ಗಾಳಿಗೆ
ಹಾರುವುದು ಕುಲಗಿರಿಯ ಬೈಸಿಕೆ
ಜಾರುವುದೆ ಮರುಳು ಪೂತು ನಮ್ಮಾಯುಭಯ ಕಟಕದಲಿ
ತೋರಲಿಲ್ಲೆಣೆ ಜಗದೊಳೋಲೆಯ
ಕಾರ ನೀನಹೆಯೆನುತ ಸುರರಿರಿ
ಗಾರ ಕವಿದನು ಕರ್ಣನಳವಿಗೆ ಜಡಿವಡಾಯುಧದಿ ೪೪

ಘಡ ದೊಠಾರಿಸಿ ನಿಂದರೆರಡೇ
ಕಡಿಯ ಮಾಡುವೆನೆಲವೊ ನಿನ್ನಯ
ಗಡಣಿಗರ ಕರೆ ಕಾಯ್ದುಕೊಳ್ಳಲಿ ಸುಯೋಧನಾದಿಗಳು
ಮಡಮುರಿಯದಿದಿರಾಗು ರಕುತವ
ಕುಡಿಸುವೆನು ಕೂರಸಿಗೆನುತ ಕೊಲೆ
ಗಡಿಗನೌಕಿದಡಿದಿರ ಬಿಟ್ಟನು ಕರ್ಣ ಕೆಲ ಸಿಡಿದ ೪೫

ಅಹಹ ಶಿವಶಿವ ದೈತ್ಯರಾಹು
ಗ್ರಹಣವಾಯಿತು ಕರ್ಣಸೂರ್ಯನ
ಮಹಿಮೆ ಮಸುಳಿತಕಟಕಟಾಯೆನುತಖಿಳಬಲ ಬೆದರೆ
ಅಹಿತನಿಟ್ಟಳಕಳುಕಿ ಕೆಲದಲಿ
ಮಿಹಿರನಂದನನೆಚ್ಚಡಂಬಿನ
ಲಹರಿ ಮುಸಗಿತು ಖಳನ ಖಡುಗವ ಕಾಣೆನಾಕ್ಷಣಕೆ ೪೬

ಚಾರಿವರಿದನು ದನುಜ ಮದ್ದು ಕ
ಠಾರಿಯಲಿ ಕರ್ಣಾಸ್ತ್ರಧಾರಾ
ಸಾರದಲಿ ಮೈನನೆದು ಹೊನಲಿಡುವರುಣವಾರಿಯಲಿ
ಅರಿವನು ಹೈಡಿಂಬನೀಚೆಯ
ಲಾರು ಭೀಮಜನಿತ್ತಲಾರು ಬ
ಕಾರಿನಂದನನೆನಲು ಬಲವಿರುಳಸುರಮಯವಾಯ್ತು ೪೭

ಅಣೆದನಶ್ವತ್ಥಾಮನನು ತ
ಕ್ಷಣದೊಳರಸನ ತಾಗಿ ದ್ರೋಣನ
ಕೆಣಕಿ ದುಶ್ಶಾಸನನ ಮುಸೆಗಾಣಿಸಿ ಕೃಪಾದಿಗಳ
ರಣದೊಳೋಡಿಸಿ ಮುರಿದು ಕರ್ಣನ
ಸೆಣಸಿ ನಿಂದನು ಮತ್ತೆ ಸಮರಾಂ
ಗಣದ ಚೌಪಟಮಲ್ಲನಿತ್ತನು ಪಡೆಗೆ ತಲ್ಲಣವ ೪೮

ಬರಿಯ ಕಕ್ಕುಲಿತೆಯಲಿ ಕರ್ಣನ
ಮರೆಯ ಹೊಕ್ಕೆವು ಕರ್ಣನೀತನ
ತರುಬಿದನಲಾ ಶಕ್ತಿಯಾವೆಡೆಯೆಂದು ಕೆಲಕೆಲರು
ಕರುಬುತನವೇಕಕಟ ಪುಣ್ಯದ
ಕೊರತೆ ನಮ್ಮದು ಕರ್ಣನೇಗುವ
ನಿರಿತಕಂಜದ ನಾವೆ ಬಾಹಿರರೆಂದರುಳಿದವರು ೪೯

ಕಾರಿಸುವೆನಿವನಸುವನಿವ ಮೈ
ದೋರಿ ನಿಂದರೆ ನಿಮಿಷದಲಿ ಬಾ
ಯಾರದಿರಿ ಕಳ್ಳೆರುಕಾರನ ಕರುಳ ಹರಹುವೆನು
ಜಾರದಿರಿಯೆನುತಭಯಹಸ್ತವ
ತೋರಿ ತುಡುಕಿದನುಗ್ರಧಾರೆಯ
ತೂರುಗಿಡಿಗಳ ತುರುಗಿದುರಿಯ ಮಹಾಸ್ತ್ರವನು ಕರ್ಣ ೫೦

ತಳಿತ ಕಿಡಿಗಳ ಕೈದುವಿನ ಮೈ
ಝಳದ ಝಾಡಿಯೊಳುಭಯ ಬಲದ
ಗ್ಗಳದ ಹರುಷ ವಿಷಾದ ವಾರಿಧಿ ಕಾಲುಹೊಳೆಯಾಯ್ತು
ಬಿಳಿಯ ಚೌರಿಗಳೆಸೆಯೆ ಘಂಟಾ
ವಳಿಗಳಣಸಿನ ಹೊಗರನುಗುಳುವ
ಹೊಳೆವ ಧಾರೆಯ ಭಾರಿಶಕ್ತಿಯ ತೂಗಿದನು ಕರ್ಣ ೫೧

ಕಾಯಲಾಪರೆ ದನುಜ ಕರೆ ಕಮ
ಲಾಯತಾಕ್ಷನನಿಂದು ಬದುಕುವು
ಪಾಯವುಳ್ಳಡೆ ಬೇಗ ಬೆಸಗೊಳು ಭೀಮ ಫಲುಗುಣರ
ಆಯುಧಕೆ ತೆರವಿಟ್ಟೆನೈ ನಿ
ನ್ನಾಯುಷವ ಹಿಂದಿಕ್ಕಿ ಕೊಂಬನ
ತಾಯೆನುತ ಬೊಬ್ಬಿರಿದು ಶಕ್ತಿಯಲಿಟ್ಟನಾ ಕರ್ಣ ೫೨

ಅರಿದನು ಪರಿಹರಿಸುವರು ಜಂ
ಭಾರಿ ಕೊಟ್ಟನು ಕಮಲಭವ ಕಾ
ಮಾರಿಗುಬ್ಬಸದ ಕೈದುವಚೇಯವೆಂದಿದನು
ಧಾರೆಯಲಿ ದಳ್ಳಿಸುವ ಕಿಡಿಗಳ
ಭಾರಿಯಾಯುಧವಸುರನುರವನು
ಡೋರುಗಳೆದುದು ಹಾಯ್ದುಹೋದುದು ವಾಸವನ ಹೊರೆಗೆ ೫೩

ಅರಿ ಬೊಬ್ಬಿರಿವುತ್ತ ಕಂಡುದು
ಪಾರುಖಾಣೆಯನಸುರನಸು ಬಲು
ಭಾರಿಯೊಡಲೊರ್ಗುಡಿಸಿ ಕೆಡೆದುದು ಬಿರಿದ ಗಿರಿಯಂತೆ
ತೇರು ತುರಗ ಪದಾತಿ ಕರಿಘಟೆ
ವೈರಿಬಲದಲಿ ನಮ್ಮ ಬಲದಲಿ
ತೀರಿತೊಂದಕ್ಷೋಣಿ ಸುರರಿಪು ಬಿದ್ದ ಭಾರದಲಿ ೫೪

ಕುರುಬಲದ ಕಳಕಳದ ಹವಣ
ಲ್ಲರಿಬಲದ ಸಂತೋಷವಿದು ಮುರ
ಹರನ ಮಂತ್ರವು ಜೀಯ ಹರಿ ಸೂಳೈಸಿದನು ಭುಜವ
ಗರಳವಿಲ್ಲದ ಕುಪಿತಫಣಿ ಹಲು
ಮೊರೆದು ಮಾಡುವುದೇನು ಕರ್ಣನ
ನೊರಸಿದೆವು ಹೋಗೆಂದು ಸಂತೈಸಿದನು ಪಾಂಡವರ ೫೫

ಸಾರಿದನು ಶರಮಂಚವನು ಭಾ
ಗೀರಥೀನಂದನನು ಕರ್ಣನು
ಬೇರುಹರಿದಾ ದ್ರುಮದವೊಲು ಗತಶೌರ್ಯನಿನ್ನೇನು
ಭಾರಿಯಾಳೈ ದ್ರೋಣನಾತನು
ತೀರಿದನು ಹಾ ಪಾಂಡುಸುತರಿ
ನ್ನಾರ ಮುರಿಯರು ವೀರನಾರಾಯಣನ ಕರುಣದಲಿ ೫೬

## ಹದಿನೇಳನೆಯ ಸಂಧಿ

ಸೂ. ಇರುಳು ಸಮರದಲುಭಯರಾಯರ
ಗುರು ವಿರೋಧಿ ಮಹೀಶ ಸೇನಾ
ಶರಧಿಯನು ಕಲಕಿದನು ಗೆಲಿದನು ಮಕುಟವರ್ಧನರ

ಕೇಳು ಧೃತರಾಷ್ಟ್ರಾವನಿಪ ನಿ
ಮ್ಮಾಳನವರಾಳನು ವಿಭಾಡಿಸಿ
ನೀಲಗಿರಿಯೆಡೆವೊಕ್ಕುದೆನೆ ಖಳನೊಡಲು ನಿಡುಗೆಡೆಯೆ
ಕಾಳೆಗದ ಕೈಚಳಕದವನು
ಬ್ಬಾಳುತನವಕ್ಕುಡಿಸೆಯಿಕ್ಕೆಲ
ದಾಳು ತೆಗೆದುದು ಬಿಗಿದ ಕತ್ತಲೆ ಮೊಗೆದುದಂಬರವ ೧

ಇನ್ನು ಬದುಕಿದೆವಮುಮು ರಕ್ಕಸ
ಕುನ್ನಿಯೂಳಿಗವಡಗಿತೆಂದೇ
ನಿನ್ನವರ ಸುಮ್ಮಾನವುಕ್ಕಿತು ಸುಕ್ಕಿತಿಭೀತಿ
ಇನ್ನು ಫಡಫಡ ಸೂತತನುಜನ
ಬೆನ್ನಲುಗಿವೆವು ಕರುಳನಾಹವ
ಕೆನ್ನ ಬಿಡುಬಿಡು ಎನುತ ಗರ್ಜಿಸಿ ಹೊಕ್ಕುದರಿಸೇನೆ ೨

ಅಂಗವಣೆ ಮನದಲ್ಲಿ ಪದದಲಿ
ಮುಂಗುಡಿಯ ದುವ್ವಾಳಿ ಕಯ್ಯಲಿ
ಸಿಂಗದಾಯತ ಸವೆಯದೆರಡೊಡ್ಡಿನಲಿ ಸುಭಟರಿಗೆ
ಕಂಗಳನು ಕಾರಿರುಳು ರಕ್ಕಸಿ
ನುಂಗಿದಳು ನಾನೇನನುಸುರುವೆ
ನಂಗವಿಸಿ ಕಡುಗಲಿಗಳಿರಿದಾಡಿದರು ತಮ್ಮೊಳಗೆ ೩

ಒಳಗೊಳಗೆ ಹೊಯಿದಾಡಿ ಹೊರಳುವ
ಬಲುಭಟರನಗಿದೊಗುವ ಬಲುಗ
ತ್ತಲೆಯು ಕೋಲಾಹಳವನುಭಯದ ಚಾತುರಂಗದಲಿ
ಬಲಿದ ತೂಕಡಿಕೆಗಳ ನಸು ಬೆದ
ರೊಲಹುಗಳ ಜವವೆದ್ದ ಝೊಮ್ಮಿನ
ಬಲೆಗೆ ಸಿಲುಕಿದ ಬಲವನರ್ಜುನದೇವನೀಕ್ಷಿಸಿದ ೪

ಶಿವಶಿವಾ ಬಳಲಿದುದು ಬಲವಗಿ
ದವಗಡಿಸಿದುದು ನಿದ್ದೆ ನೂಕದು
ಬವರವುಬ್ಬಿದ ತಿಮಿರವಳಿಯಲಿ ಸಾಕು ರಣವೆನುತ
ದಿವಿಜಪತಿಸುತನೆದ್ದು ಸೇನಾ
ನಿವಹದಲಿ ಸಾರಿದನು ಲಗ್ಗೆಯ
ರವವ ನಿಲಿಸಿದನಖಿಳ ಘನಗಂಭೀರ ನಾದದಲಿ ೫

ಬಳಲಿದಿರಿ ಹಗಲಿರುಳಕಾಳೆಗ
ದೊಳಗೆ ಕೈಮಾಡಿದಿರಿ ಕಗ್ಗತ್ತಲೆಯು
ಬಲುಗಂಡಿಯಲಿ ಸಿಲುಕಿತು ಕಂಗಳಂಗವಣೆ
ನಳಿನರಿಪುವುದಯಿಸಲಿ ಬೆಳುದಿಂ
ಗಳಲಿ ಕೈದುವ ಕೊಳ್ಳಿ ನಿದ್ರೆಯ
ನಿಳಿಯುಬಿಡಬೇಡೆಂದು ಸೇನೆಗೆ ಸಾರಿದನು ಪಾರ್ಥ ೬

ನರನ ಮಾತಿಂ ಮುನ್ನ ನಿದ್ರಾ
ಭರದ ಭಾರಿಯ ಹೊರೆಯ ಭಟರಿ
ತ್ತರದದೊಲೆದರು ಸಡಿಲಿದವು ಕೈದುಗಳು ಕರಗಳಲಿ
ನೆರೆದುಸುರ ವೈಹಾಳಿಗಳ ನಿ
ಬ್ಬರದ ಮೊರಹಿನ ಮುರಿದಗೋಣಿನ
ಕರದ ತಲೆಗಿಂಬುಗಳ ಕಾಲಾಳೊರಗಿತವನಿಯಲಿ ೭

ಒಲಿದ ಒಡಲನು ಮುರಿದು ಬರಿಕೈ
ಗಳನು ದಾಡೆಯೊಳಿಟ್ಟು ಪೂತ್ಕೃತಿ
ಬಲಿದ ನಾಸಾಪುಟದ ಜೋಲಿದ ಕರ್ಣಪಲ್ಲವದ
ತಳಿತ ನಿದ್ರಾರಸವನರೆ ಮು
ಕ್ಕುಳಿಸಿದಕ್ಷಿಯೊಳಿರದು ಗಲ್ಲದ
ಲುಲಿವ ತುಂಬಿಯ ರವದ ದಂತಿಗಳೆಸೆದವೊಗ್ಗಿನಲಿ ೮

ಬಾಯ ಲೋಳೆಗಳಿಳಿಯೆ ಮೈ ಹಳು
ವಾಯಿ ಮಿಗೆ ತುದಿ ಖುರವನೂರಿ ಸ
ವಾಯಿ ಮಿಗಲರೆನೋಟದಾಲಿಯ ಮಿಡುಕದವಿಲಣದ
ಲಾಯದಲಿ ಲಂಬಿಸಿದವೊಲು ವಾ
ನಾಯುಜದ ಸಾಲೆಸೆದುದೊರಗಿದ
ರಾಯ ರಾವುತರ ಮಣಿಮಕುಟ ಮರಗೋಡನೋಲೈಸೆ ೯

ಒಲಿದ ಕಾಂತೆಯ ಕೂಡೆ ಮನುಮಥ
ಕಲಹದಲಿ ಬೆಂಡಾದ ಕಾಂತನು
ಕಳಶಕುಚ ಮಧ್ಯದಲಿ ಮಲಗುವವೋಲು ರಜನಿಯಲಿ
ಒಲಿದ ಸಮರಶ್ರಮದಲತಿವೆ
ಗ್ಗಳ ಗಜಾರೋಹಕರು ಕುಂಭ
ಸ್ಥಳದ ಮೇಲೊರಗಿದರು ನಿದ್ರಾ ಮುದ್ರಿತೇಕ್ಷಣರು ೧೦

ಕಲಹವನು ಕನಸಿನಲಿ ಕಂಡ
ವ್ವಳಿಸಿ ಹಳುಹಳು ಪೂತು ಸಾರಥಿ
ಭಲರೆ ಸಾರಥಿ ಜಾಗುರೆನುತಿರ್ದುದು ಮಹಾರಥರು
ತೊಲಗದಿರಿ ತಿನ್ನಡಗನಹಿತನ
ತಿಳಿರಕುತವನು ಸುರಿಯೆನುತ ಕಳ
ವಳಿಸುತಿರ್ದರು ವೀರರೆಡೊಡ್ಡಿನಲಿ ರಭಸದಲಿ ೧೧

ಎಲೆ ಮಿಡುಕದೆರಡೊಡ್ಡು ಲೆಪ್ಪದ
ಬಲದ ವೊಲು ನಿದ್ರಾ ಸಮುದ್ರವ
ಮುಳುಗಿ ಝೊಮ್ಮಿನ ಝಾಡಿಯಲಿ ಝೊಂಪಿಸಿದುದರೆಜಾವ
ತಳಿತ ಮರವೆಯ ಪಾಳೆಯದ ಕ
ಗ್ಗೊಲೆಗೆ ಕವಿವ ಗುರೂಪದೇಶಾ
ವಳಿಯವೊಲು ಮೈದೋರಿದವು ಹಿಮರುಚಿಯ ರಶ್ಮಿಗಳು ೧೨

ತಣಿದುದಂತಃಕರಣ ನಿದ್ರಾ
ಗಣಿಕೆಯರ ರತಿಯಲ್ಲಿ ರಿಂಗಣ
ಗುಣಿವ ಮನ ಹದುಳಿಸಿತು ತಿಳಿದುದು ಝೊಮ್ಮಿನುಮ್ಮೋಹ
ರಣವನೀಗಳೆ ಕಾಣಬಹುದೆಂ
ಬಣಕಿಗರನೆಬ್ಬಿಸುವವೊಲು ಸುಳಿ
ದಣೆದು ಹೊದರೆದ್ದುದು ಸುಧಾದೀಧಿತಿಯ ಕರನಿಕರ ೧೩

ಬಾಡಿದವು ತಾವರೆಗಳುರೆ ಝಳ
ವೋಡಿದವು ನೈದಿಲುಗಳಂಬುಧಿ
ಝಾಡಿ ಮಾಡಲು ಬೆರಸಿದವು ಝಷ ಮಕರ ಕರ್ಕಟಕ
ತೋಡಿದವು ಮುಖದಲ್ಲಿ ತುಂಡದ
ಲೀಡಿರಿದು ಕುಡಿಕುಡಿದು ಬೊಬ್ಬಿ
ಟ್ಟಾಡುತಿರ್ದವು ಸಾಂದ್ರಚಂದ್ರಿಕೆಯಲಿ ಚಕೋರಿಗಳು ೧೪

ನಳಿನದಳದೊಳಗಡಗಿದವು ನೈ
ದಿಲುಗಳಲಿ ತನಿವೊರೆವ ತುಂಬಿಯ
ಕಳರವಕೆ ಬೆಚ್ಚಿದವು ಹೊಕ್ಕವು ಬಗಿದು ತಿಳಿಗೊಳನ
ಝಳಕೆ ಸೈರಿಸದೆಳಲತೆಯ ನೆಳ
ಲೊಳಗೆ ನಿಂದವು ಬೇಗೆ ಬಲುಹಿಂ
ದಳುಕಿ ಮಮ್ಮಲುಮರುಗುತಿರ್ದವು ಜಕ್ಕವಕ್ಕಿಗಳು ೧೫

ವಿನುತ ಸುಕವಿಯ ಸೂಕ್ತಿ ತಾಗಿದ
ಮುನಿಗಳಂತಃಕರಣದಂತಿರೆ
ಹೊನಲುವರಿದವು ಚಂದ್ರಕಾಂತದ ಸಾಲಶಿಲೆ ಕರಗಿ
ಮನದ ಕತ್ತಲೆ ಗುರುವರನ ವಾ
ಕ್ಕಿನಲಿ ತೊಲಗುವವೋಲು ತುಂಬಿಯ
ತನತನಗೆ ನೂಕಿದವು ವಿಕಸಿತ ಕೈರವಾದಿಗಳು ೧೬

ವಿರಹಿಜನದೆದೆಗಿಚ್ಚು ಮನುಮಥ
ನರಸುತನದಭಿಷೇಕಘಟ ತಾ
ವರೆಯ ಕಗ್ಗೊಲೆಕಾರನುತ್ಪಳವನ ವಿದೂಷಕನು
ಹರನ ಹಗೆಯಡ್ಡಣ ವಿಳಾಸಿನಿ
ಯರ ಮನೋರಥಫಲವೆನಲು ಮಿಗೆ
ಮೆರೆದನುದಯಾಚಲದ ಚಾವಡಿಯಲಿ ಸುಧಾಸೂತಿ ೧೭

ತಳಿತ ತಂಪಿನ ತಂಗದಿರ ತೊರೆ
ಯೊಳಗೆ ತೇಕಾಡಿದುದು ಬಲವ
ಗ್ಗಳದ ಬಳಲಿಕೆ ಬೀಳುಕೊಂಡುದು ಬಲಿದುದಂಗವಣೆ
ಒಲೆದು ಬರಿಕೈತೂಗಿ ಕಿವಿಗಳ
ನಲುಗಿದವು ಕರಿನಿಕರವವಿಲಣ
ಘಲಿಲೆನಲು ಕೊಡಹಿದವು ವಳಯುವನಖಿಳ ಹಯನಿಕರ ೧೮

ತುರುಬ ಬಲಿದೊಳಗೌಕಿ ವೊನೆ ಮುಂ
ಜೆರಗನಳವಡೆ ಸೆಕ್ಕಿ ಸುತ್ತಿನೊ
ಳಿರುಕಿ ಬಿಗಿದ ಕಠಾರಿ ದಾರದ ಗೊಂಡೆಯವ ಕೆದರಿ
ಒರಗಿದೆಡಬಲದವರನೆಬ್ಬಿಸಿ
ಜರೆದು ವೀಳೆಯಗೊಂಡು ಕೈದುವ
ತಿರುಹುತಾಯತವಾಯ್ತು ಪಡೆಯೆರಡರಲಿ ಪಾಯದಳ ೧೯

ಬಿಗುಹನೇರಿಸಿ ಮತ್ತೆ ತುರಗಾ
ಳಿಗಳ ಬಿಗಿದರು ರಾವುತರು ಹೊರ
ಜಿಗಳ ಜೋಡಿಸಿ ಜೋದರಾಯತವಾಯ್ತು ಕರಿಗಳಲಿ
ಬಿಗಿದು ಕೀಲಚ್ಚುಗಳ ರಥಿಕಾ
ಳಿಗಳು ಮೋಳೈಸಿದರು ಕೈದುವ
ನುಗಿದು ಕಾಲಾಳೆದ್ದು ನಿಂದುದು ಕದನಕನುವಾಗಿ ೨೦

ಕದಡಿದವು ಬಲವೆರಡು ಕಲ್ಪದೊ
ಳುದಧಿಯುದಧಿಯನೊದೆವವೊಲು ತಾ
ಗಿದರು ನೀಗಿದರಸುವ ನಸೆಮುಸೆಗಕ್ಕುಡಿಸಿದವರು
ಬಿದಿರಿದರು ಕೊಯ್ದಲೆಗಳನು ಕಾ
ರಿದರು ಕರುಳನು ಕುಸುರಿ ಖಂಡದ
ಕದಳಿ ಮೈಗಳ ಚೂಣಿ ಮಲಗಿತು ತಾರು ಥಟ್ಟಿನಲಿ ೨೧

ಚೂಣಿ ತೆಗೆಯಲಿ ಮಿಸುಕಿದರೆ ನೃಪ
ನಾಣೆ ಬರಿದೇಕಾಳು ಕುದುರೆಯು
ಗೋಣನವರಿಗೆ ಮಾರುವಿರಿ ಕೌರವನ ಥಟ್ಟಿನಲಿ
ದ್ರೋಣನಲ್ಲಾ ರಕ್ಷಕನು ರಣ
ಹೂಣಿಗರು ನಿಲಿ ಭೀಮ ಪಾರ್ಥರ
ಕಾಣಬಹುದೋ ಕರೆಯೆನುತ ಗರ್ಜಿಸಿದನಾಚಾರ್ಯ ೨೨

ರಥವ ಸಂವರಿಸಿದನು ನಿಜ ಸಾ
ರಥಿಯ ಬೋಳೈಸಿದನು ಬಳಿಕತಿ
ರಥ ಮಹಾರಥ ರಾಜಿಗಿತ್ತನು ರಣಕೆ ವೀಳೆಯವ
ಪೃಥೆಯ ಮಕ್ಕಳ ಕರೆ ಮಹೀಸಂ
ಪ್ರಥಿತ ಬಲರನು ಕರೆಯೆನುತ ನಿ
ರ್ಮಥಿತ ರಿಪು ಪರಬಲವ ಹೊಕ್ಕನು ಬಿಟ್ಟ ಸೂಟಿಯಲಿ ೨೩

ರಾಹುವೆತ್ತಲು ಲಲಿತ ತಾರಾ
ವ್ಯೂಹವೆತ್ತಲು ದಳ್ಳಿಸುವ ದವ
ದಾಹವೆತ್ತಲು ನೀರಸದ ತೃಣರಾಶಿ ತಾನೆತ್ತ
ಗಾಹುಗತಕವನುಳಿದು ಕಾದುವ
ಡಾಹವಕೆ ಗುರು ಭೀಷ್ಮರಿಗೆ ಸರಿ
ಸಾಹಸಿಕರಾರುಂಟು ಮುರಿದುದು ಪಾಂಡುಸುತಸೇನೆ ೨೪

ಉದಧಿಯುದರದೊಳಿಳಿದು ತೆರೆಗಳ
ನೊದೆವ ಮಂದರದಂತೆ ಮದಕರಿ
ಕದಳಿಯಲಿ ಕೈಮಾಡುವಂತಿದೆ ಪರರ ಥಟ್ಟಿನಲಿ
ಹೊದರ ಹರೆಗಡಿದೌಕಿದನು ತೋ
ಕಿದನು ಸುಭಟರ ಜೀವವನು ಹಳೆ
ವಿದಿರ ಮೆಳೆಯಲಿ ಮೊಳಗಿದುರಿಯವೊಲುರುಹಿದನು ದ್ರೋಣ೨೫

ಹೊಕ್ಕ ಸಾಲರುಣಾಂಬುಮಯ ಕೈ
ಯಿಕ್ಕಿದತ್ತಲು ಖಂಡಮಯ ಮೊಗ
ವಿಕ್ಕಿದತ್ತಲು ಮೊರೆವ ಹೆಣಮಯವೇನನುಸುರುವೆನು
ಇಕ್ಕಡಿಯ ಬಸುರುಚ್ಚುಗಳ ನರ
ಸೊಕ್ಕು ಡೊಳ್ಳಾಸದ ಮಹಾಭಯ
ವೆಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ ೨೬

ಹಸಿದ ಹೆಬ್ಬುಲಿ ಮುಸಗಿದರೆ ಮೃಗ
ವಿಸರವೇನಹುದರಸ ಕೇಳ್ ನಿ
ಪ್ಪಸರದಲಿ ಪಾಳಿಸಿದನಹಿತರನುಗಿದನುಸುರುಗಳ
ಕುಶಲರೇ ಭೀಮಾರ್ಜುನರು ಪಾ
ಲಿಸುವ ಬಿರುದೇ ಕೃಷ್ಣನದು ಹರಿ
ಹುಸಿಕನೋ ಬೆಸಗೊಂಬೆವೆನುತರೆಯಟ್ಟಿದನು ದ್ರೋಣ ೨೭

ಆರು ಸಾವಿರ ಕುದುರೆಯೊಂಬೈ
ನೂರು ಗಜಘಟೆ ಸಾವಿರದ ಮೂ
ನೂರು ರಥವೊಗ್ಗಾಗಿ ಬಿದ್ದುದು ಲಕ್ಷಪಾಯದಳ
ಏರುವಡೆದವರನು ಪಲಾಯನ
ಸೂರೆಕಾರರನವರ ದಳದಲಿ
ತೋರಿ ಹೇಳುವರೆನ್ನ ಹವಣೇ ಭೂಪ ಕೇಳೆಂದ ೨೮

ಎಲೆಲೆ ದೊಡ್ಡೆಗರೇಕೆ ಕೊಬ್ಬಿದ
ರಳವನರಿಯದೆ ಸುಗ್ಗು ಮುರಿದರೆ
ದಳದ ದೊರೆಗದು ಭಂಗವೇ ಬಾಹಿರನ ಹೊಯ್ಯೆನುತ
ಒಳಸರಿವ ನಾಯಕರ ನೆರೆ ಮೂ
ದಲಿಸಿ ಲಗ್ಗೆಯ ಲಹರಿಯಲಿ ಪಡಿ
ತಳಿಸಿದರು ಪಾಂಚಾಲ ಸೃಂಜಯ ಮತ್ಸ್ಯ ಕೇಕೆಯರು ೨೯

ಬಲವ ಕಲಿಯೇರಿಸಿ ಛಡಾಳದೊ
ಳುಲಿವ ಪಟಹ ಮೃದಂಗ ಕಹಳಾ
ವಳಿಯ ಬೊಗ್ಗಿನ ಬೊಬ್ಬಿರಿವ ನಿಸ್ಸಾಳ ಕೋಟಿಗಳ
ತಳಿತ ಝಲ್ಲರಿಗಳ ಪತಾಕಾ
ವಳಿಯ ಬಲಿದು ಪವಾಡಿಗಳ ಕಳ
ಕಳದ ಕೈವಾರದಲಿ ಕವಿದರು ದ್ರೋಣನಿದಿರಿನಲಿ ೩೦

ಅರಿಬಲದ ಥಟ್ಟಣೆಯ ಬಿರುಬಿನ
ಬರವನೀಕ್ಷಿಸಿ ಪೂತು ಪಾಂಚಾ
ಲರ ಸಘಾಡಿಕೆ ಸಾಹಸಿಕರೈ ಹಾ ಮಹಾದೇವ
ದೊರೆಯಲೇ ಬಳಿಕೇನು ಪಾಂಡವ
ರರಸಿಯಯ್ಯನು ದ್ರುಪದನಲ್ಲಾ
ಹರಯೆನುತ ಗಹಗಹಿಸಿ ತಲೆದೂಗಿದನು ಕಲಿದ್ರೋಣ ೩೧

ಇರುಳುಗಳ್ಳನ ಕೂಡೆ ಸೇರಿದ
ಮರುಳಿನಂತಿರೆ ನೀವು ರಣದಲಿ
ತರಿಸಿಕೊಂಬಿರಿ ಹಾಯ್ದರವದಿರು ನಿಮ್ಮನೆಡೆಯೊಡ್ಡಿ
ಮರಳಿರೈ ಕೈಕೆಯರು ಮತ್ಸ್ಯರು
ಬಿರುದು ಸೃಂಜಯರಕಟಕಟ ಖೂ
ಳರು ವೃಥಾ ನಿಮಗೇಕೆ ಸಾವೆನುತಿರ್ದನಾ ದ್ರೋಣ ೩೨

ಬಿಲ್ಲ ಕೊಪ್ಪಿನ ಮೇಲೆ ಚಾಚಿದ
ಗಲ್ಲದುಪಹಾಸದ ನುಡಿಯ ಮೈ
ಭುಲ್ಲಣೆಯ ರೋಮಾಂಚನದ ಚಡ್ಡಣೆಯ ಚೇತನದ
ಗೆಲ್ಲದಲಿ ಘಾಡಿಸಿದ ಚಿತ್ತದ
ಕೆಲ್ಲೆಗಂಗಳ ನಗೆಯ ಚೌಪಟ
ಮಲ್ಲನಿದ್ದನು ರಿಪುಬಲವ ಲೆಕ್ಕಿಸದೆ ಕಲಿದ್ರೋಣ ೩೩

ಕೆಣಕಿದರು ಪಾಂಚಾಲ ನಾಯಕ
ರಣಕಿಗನ ಕೈಕೊಳ್ಳದುರೆ ಸಂ
ದಣಿಸಿದರು ಸಮರಥರು ಕವಿದರು ರಾಯ ರಾವುತರು
ಕಣೆಗೆದರಿ ಹೊದ್ದಿದರು ಜೋದರು
ಕುಣಿದು ಕಾಲಾಳೌಕಿತೊಂದೇ
ಕ್ಷಣದೊಳನಿಬರನೊರಸಿದನು ಬೆರಸಿದನು ದೊರೆಗಳಲಿ ೩೪

ಅಡಸಿದರು ಚತುರಂಗ ಬಲವನು
ಕಡಿದು ಹರಹಿ ವಿರಾಟನನು ಜವ
ಗಿಡಿಸಿ ದ್ರುಪದನನೆಚ್ಚು ವಿರಥರ ಮಾಡಿ ಕೈಕೆಯರ
ನಡೆದು ಬರೆ ನಿಮಿಷದಲಿ ಬಲವವ
ಗಡಿಸಿ ಹೊಕ್ಕುದು ಮುಸಗಿದಂಬುಧಿ
ವಡಬನನು ಮೊಗೆವಂತೆ ಮುತ್ತಿತು ಕಳಶಸಂಭವನ ೩೫

ಮತ್ತೆ ಮುರಿದನು ವೈರಿಬಲದಲಿ
ಹತ್ತು ಸಾವಿರ ಕರಿಘಟೆಯನೈ
ವತ್ತು ಸಾವಿರ ಹಯವನಿರ್ಭಾಸಿರ ಮಹಾರಥರ
ಹತ್ತುಕೋಟಿ ಪದಾತಿಯನು ಕೈ
ವರ್ತಿಸಿದನಂತಕನವರಿಗಿವ
ರತ್ತ ಬಿಟ್ಟನು ರಥವನಾ ದ್ರುಪದಾದಿ ನಾಯಕರ ೩೬

ಆಳನೊಪ್ಪಿಸಿ ಜಾರದಿರು ಪಾಂ
ಚಾಲಪತಿ ಘಡ ನಿಲ್ಲೆನುತ ಶರ
ಜಾಲದಲಿ ಹೊಳಿದನು ದ್ರುಪದನ ಕೆಲದ ಬಲದವರ
ಖೂಳ ಘಡ ಹಾರುವರು ಬರಿ ಮಾ
ತಾಳಿಗಳು ತಾವೇಕೆ ನಾವೇ
ಕಾಳುತನ ತನಗೆತ್ತಲೆನುತಿದಿರಾದನಾ ದ್ರುಪದ ೩೭

ಹಿಂದ ನೆನೆಯಾ ಖೂಳ ನಾವಾ
ರೆಂದು ಮರೆದಾ ಸಾಕದಂತಿರ
ಲೊಂದನಲ್ಲದೆ ನಿನ್ನ ತಲೆಗೆರಡಂಬ ತೊಡಚಿದರೆ
ಇಂದು ನಿನ್ನಯ ಬಾಯ ತಂಬುಲ
ತಿಂದವನು ನೋಡೆನುತ ಹೆರೆಯಂ
ಬಿಂದ ಕಡಿದಿಳುಹಿದನು ಪಾಂಚಾಲಾಧಿಪನ ಶಿರವ ೩೮

ದೊರೆಯಳಿದನೇ ಸ್ವಾಮಿದ್ರೋಹರು
ತಿರುಗಿಯೆನೆ ಪಾಂಚಾಲಕರಲಿ ಹ
ನ್ನೆರಡು ಸಾವಿರ ರಾಜಪುತ್ರರು ಜರೆದು ಜೋಡಿಸಿತು
ಹರಿಬವೆಮ್ಮದು ಸಾರಿ ನೀವೆಂ
ದರಸು ಮಕ್ಕಳ ನಿಲಿಸಿ ಬಿಲುಗೊಂ
ಡುರವಣಿಸಿ ತಡೆದನು ವಿರಾಟನು ಕಳಶಸಂಭವನ ೩೯

ಅಡಸಿ ಗಿರಿಗಳ ನುಂಗುವನ ಬಾಯ್
ಹಿಡಿಯದಿಹುದೇ ಹಣ್ಣು ಹಂಪಲ
ಒಡ ವಿರಾಟನನಾರು ಬಲ್ಲರು ದ್ರೋಣನಿದಿರಿನಲಿ
ನಡೆದು ಬಹುದನು ಕಂಡವಾಗಲೆ
ಮಡಿದನೆಂಬುದನರಿಯೆವೈ ಬಿಲು
ದುಡುಕಿ ಕುಂತೀಭೋಜ ಹೊಕ್ಕನು ಮಿಕ್ಕನವರುಗಳ ೪೦

ಅವರ ಹರಿಬವ ಬೇಡಿ ಸೃಂಜಯ
ರವಗಡಿಸಿದರು ಕೈಕೆಯರು ನೃಪ
ನಿವಹದಗಣಿತ ಚೈದ್ಯ ಯಾದವ ಮಗಧ ಮಾಳವರು
ವಿವಿಧ ವಾದ್ಯ ನಿನಾದ ಗಜ ಹಯ
ರವ ರಥಧ್ವನಿ ಜಗದ ಜಂತ್ರವ
ತಿವಿದು ಕೆದರೆ ವಿರೋಧಿಬಲ ಕೆಣಕಿದುದು ಕಳಶಜನ ೪೧

ಕೇಳಿದೆನು ರಭಸವನು ಬಲು ಕೆಂ
ಧೂಳಿಯನು ಕಂಡೆನು ವಿರೋಧಿಗ
ಳಾಳ ಕಂಡೆನು ಕಾಣೆನಿತ್ತಲು ಕಳಶಸಂಭವನ
ಕೇಳಿದೀ ನಿಮಿಷಾರ್ಧದಲಿ ಕೆಂ
ಧೂಳ ಕಾಣೆನು ಕಾಣೆನರಿಭೂ
ಪಾಲರನು ಕೇಳರಸ ಕಂಡೆನು ಚಾಪಧೂರ್ಜಟಿಯ ೪೨

ಅರಸುಮಕ್ಕಳು ಮತ್ಸ್ಯ ಪಾಂಚಾ
ಲರಲಿ ಕೈಕೆಯ ಚೈದ್ಯ ಯಾದವ
ತುರುಕ ಬರ್ಬರ ಗೌಳ ಮಾಗಧ ಪಾರಿಯಾತ್ರರಲಿ
ಉರುಳಿತೊಂದೇ ಲಕ್ಷವುಳಿದೀ
ಕರಿ ವರೂಥ ಪದಾತಿ ತುರಗವ
ನರಸ ಲೆಕ್ಕಿಸಲಾರು ಬಲ್ಲರು ವೈರಿಸೇನೆಯಲಿ ೪೩

ಮುರಿದುದಾ ಬಲವಿಳೆಯೊಡೆಯ ಬೊ
ಬ್ಬಿರಿದುದೀ ಬಲವಪಜಯದ ಮಳೆ
ಗರೆದುದವರಿಗೆ ಹರಿದುದಿವರಿಗೆ ಸರ್ಪರಜ್ಜು ಭಯ
ತೆರಳಿತಾಚೆಯ ಮುಂದಣೆ
ಗುರವಣಿಸಿತೀಯೊಡ್ಡು ಕೌರವ
ರರಸನುತ್ಸಾಹವನು ಬಣ್ಣಿಸಲರಿಯೆ ನಾನೆಂದ ೪೪

ಭೂರಿ ವಿರಹಾಗ್ನಿಯಲಿ ಲೋಚನ
ವಾರಿಯಾಜ್ಯಾಹುತಿಗಳಲಿ ರಿಪು
ಮಾರಣಾಧ್ವರವೆಸೆದುದಿರುಳು ರಥಾಂಗ ದೀಕ್ಷಿತನ
ತಾರಕೆಯ ಮುರಿವುಗಳು ಕುಣಿವ ಸ
ಮೀರಣನ ಶಶಿಯೆಡೆಗೆ ರಜನೀ
ನಾರಿ ತೋಳೆಡೆಗೊಟ್ಟಳಂಬುಜಬಂಧು ಪೊರವಂಟ ೪೫

## ಹದಿನೆಂಟನೆಯ ಸಂಧಿ

ಸೂ. ರಿಪುಬಲವ ಗೆಲುವಲ್ಲಿ ಶಾಪಾ
ದಪಿ ಶರಾದಪಿಯೆಂಬ ಜಯ ಲೋ
ಲುಪನು ಸಂಗ್ರಾಮದಲಿ ಮಡಿದನು ಪುತ್ರಮೋಹದಲಿ

ಸಾಲದೇ ಸಮರಂಗವಿರುಳಿನ
ಕಾಳೆಗದ ಜಯ ನಮ್ಮದರಿ ಭೂ
ಪಾಲಕನ ಥಟ್ಟಿನಲಿ ಮಡಿದುದು ಬೇಹ ಬೇಹವರು
ಮೇಲುಗಾಳೆಗ ನಮ್ಮದೀಸರ
ಮೇಲೆ ತೆಗೆಸುವುದತಿಮಥನದಲಿ
ಕಾಳಹುದು ಬಳಿಕೆನಲು ನೃಪತಿಗೆ ನುಡಿದನಾಚಾರ್ಯ ೧

ಅವನಿಪಾಲರು ಕಂಗಳಿಂದವೆ
ಕಿವಿಗೆ ಕರವೊಳ್ಳಿದರು ಕಂಡುದ
ನವರು ನಂಬರು ಕೊಂಡೆಯರ ನುಡಿಗೇಳ್ದು ನಂಬುವರು
ನಿವಗೆ ಹೇಳುವುದಲ್ಲ ಲೋಕದ
ಹವಣನೆಂದೆವು ನಾವು ಪಾಂಡವ
ರವರು ನಿನ್ನವರೆಂಬುದನು ನೀನಿಂದು ನೋಡೆಂದ ೨

ಬಿಲ್ಲನೊದರಿಸಿ ವೈರಿ ಭಟರಿಗೆ
ಚೆಲ್ಲಿದನು ಭೀತಿಯನು ಬರಸಿಡಿ
ಲೆಲ್ಲಿ ತುಡುಕುವುದಾರು ಬಲ್ಲರು ದ್ರೋಣನುರವಣೆಯ
ಘಲ್ಲಣೆಯ ಖುರಪುಟದ ತುರಗದ
ಹಲ್ಲಣೆಯ ಹೇಷಿತಕೆ ಹಗೆಯೆದೆ
ಝಲ್ಲೆನಲು ಕಣೆ ಜಾಡಿ ಕವಿದುದು ಕಟಕದಗಲದಲಿ ೩

ಇಳೆಯೊಳದುಭುತವಿದು ಕೃತಾಂತನ
ಫಲಿತ ಶಾಳೀವನವ ಮುತ್ತಿದ
ಗಿಳಿಗಳೋ ಆಚಾರ್ಯನಂಬುಗಳೋ ಮಹಾದೇವ
ನಿಳಿನಿಳಿಲು ಭುಗಿಲೆಂಬ ಛಿಳಿಛಿಳಿ
ಛಿಳಿಛಿಟಿಲು ಭೋರೆಂಬ ಖಣಿಖಟಿ
ಖಳಿಲು ಖಳಿಲೆಂಬಂಬುಗಳ ದನಿ ತುಂಬಿತಂಬರವ ೪

ಕಡಿದು ಬೀಳುವ ಕೈದುಗಳನರೆ
ಗಡಿದು ಜೋಲುವ ಜೋಡುಗಳ ನೆರೆ
ಸಿಡಿದು ಹಾರುವ ಸೀಸಕದ ನುಗ್ಗಾದ ಹಲಗೆಗಳ
ಉಡಿದ ಸಿಂಧದ ನೆಲಕೆ ಹರಹಿದ
ಕೊಡೆಯ ಚಮರದ ತಾರು ಥಟ್ಟಿಗೆ
ಕೆಡೆದ ಚಾತುರ್ಬಲವನಭಿವರ್ಣಿಸುವನಾರೆಂದ ೫

ಅಳಿದವೈನೂರಾನೆ ಮುಗ್ಗುಲ
ನೆಲಕೆ ಕೀಲಿಸಿ ಪಾಡಿಗೈದವು
ಬಲುಗುದುರೆ ಹದಿನೈದು ಸಾವಿರವೇಳುನೂರು ರಥ
ಮಲಗಿದವು ಕಾಲಾಳು ಲೆಕ್ಕದ
ಕಲೆಯ ತೊಡಸಿತು ರಾಜಪುತ್ರರು
ಹಲಬರವರಲಿ ಹೊಯ್ದು ಹೊಕ್ಕರು ಸುರರ ಪಟ್ಟಣವ ೬

ಸಾಲ ಮೇಘದ ಮನೆಗಳಿಗೆ ಬಿರು
ಗಾಳಿ ಬಿದ್ದಿನನಾಗಿ ಬರಲವ
ರಾಲಯದ ಸಿರಿ ಮೆರೆವುದೇ ಧೃತರಾಷ್ಟ್ರ ಚಿತ್ತಯಿಸು
ಬೀಳಹೊಯ್ದರು ಹೊಕ್ಕ ಭೂಮಿಾ
ಪಾಲನೆಯನಿವರೊಲ್ಲೆವೆಂಬವೊ
ಲೂಳಿಗವ ಮಾಡಿದನು ಪರಬಲದೊಳಗೆ ಕಲಿದ್ರೋಣ ೭

ಮುರಿದು ಬರುತಿದೆ ಸೇನೆ ಸಾಕೀ
ಪರಿಯ ಸೈರಣೆ ನಿಮ್ಮ ಮಾವನ
ಕುರಿದರಿಗೆ ಖತಿಗೊಂಡು ಕಾದಿ ವಿರಾಟ ಕೈಕೆಯರು
ತುರುಗಿದರು ತೆತ್ತೀಸರಲಿ ತೆಗೆ
ಮರೆಯ ಮಾತೇ ವಿಜಯಲಕ್ಷ್ಮಿಯ
ಸೆರಗ ಹಿಡಿದನು ದ್ರೋಣನೆಂದರು ಚರರು ಭೂಪತಿಗೆ ೮

ಹೊಳೆಹೊಳೆದು ತಂಬುಲದ ರಸದಲಿ
ಮುಳುಗಿ ಮೂಡುವ ಢಗೆಯ ತೊಡೆಹದ
ಮೆಲುನಗೆಯ ಕಳವಳವನರೆ ಮುಕ್ಕುಳಿಸಿದಾಲಿಗಳ
ಹಿಳಿದ ಛಲದ ವಿಡಾಯಿ ಧೈರ್ಯದ
ತಳಿತ ಭೀತಿಗೆ ಕಾಲುವೊಳೆಯಾ
ದಳಿಮನದ ಭೂಪಾಲನಿರವನು ಕಂಡನಾ ಪಾರ್ಥ ೯

ನಾಯಿಗಳ ಹೊಯ್ ನೂಕು ರಣದಲಿ
ಸಾಯಬೇಡಾ ಕ್ಷತ್ರಿಯರು ತಾ
ವಾಯುಧಂಗಳ ಹಿಡಿದರೋ ಮೇಣೇಕದಂಡಿಗಳೊ
ಜೀಯ ಖಾತಿಯಿದೇಕೆ ಬೀಳಲಿ
ನಾಯಕರು ನಿನಗೇನು ಹರನಡ
ಹಾಯಲಿಂದರಿಬಲವನುರುಹುವೆನೆಂದನಾ ಪಾರ್ಥ ೧೦

ನಿಲ್ಲು ಫಲುಗುಣ ನಿನ್ನ ಪರಿಯಂ
ತೆಲ್ಲಿಯದು ರಣವಕಟ ಹಾರುವ
ನಲ್ಲಿ ಕೆಲಬರ ಹೊಯ್ದು ಕೊಂದನು ಬಿನುಗು ಬಿಚ್ಚಟೆಯ
ಬಲ್ಲನಾತನ ಬಲುಹನೀಶ್ವರ
ನಲ್ಲಿ ಹರಿವೇಖಳೆಯೆ ಸಾಕಿ
ನ್ನೆಲ್ಲವೇತಕೆಯೆನುತ ಧೃಷ್ಟದ್ಯುಮ್ನನನುವಾದ ೧೧

ನೇಮವಾಯಿತು ಸಾತ್ಯಕಿಗೆ ಶ್ರುತ
ಸೋಮಕಾದಿ ಕುಮಾರರಿಗೆ ಸಂ
ಗ್ರಾಮವೀರ ಶಿಖಂಡಿ ಸೃಂಜಯ ಚೇಕಿತಾನರಿಗೆ
ಆ ಮಹಾರಥರೈದಿದರು ಘನ
ತೋಮರದಿ ತುರುಗಿದ ವರೂಥ
ಸ್ತೋಮದಲಿ ಬಹುವಿಧದ ವಾದ್ಯ ವಿಡಾಯಿ ರಭಸದಲಿ ೧೨

ಸರಕಟಿಸಿ ನೂಕಿತು ಚತುರ್ಬಲ
ವರರೆ ಹಾರುವನೆಲ್ಲಿ ಯಾವೆಡೆ
ದೊರೆ ಸುಯೋಧನನೆಲ್ಲಿ ರಾಧೆಯ ಮಗನ ಬರಹೇಳು
ಗುರುಸುತನ ಕರೆ ಕಾದುಹೇಳೋ
ದುರುಳ ದುಶ್ಶಾಸನನನೆನುತ
ಬ್ಬರಿಸಿ ಕವಿದುದು ವೈರಿ ಬಲವಾಚಾರ್ಯನಿದಿರಿಸಲಿ ೧೩

ಅಂಗವಣೆಯೊಳ್ಳಿತು ಮಹಾದೇ
ವಂಗೆ ಮೊಗಸುವಡರಿದು ಮೊದಲಲಿ
ಸಿಂಗದಾಯತದಂಬು ಸುಳಿದರೆ ಮೊಲನ ಮುಂಚುವಿರಿ
ಭಂಗವಿಲ್ಲದೆ ಬಿದ್ದ ನಿಮ್ಮ
ಯ್ಯಂಗೆ ಹಳಿವನು ಹೊರಿಸದಿಹ ಮನ
ದಂಗವಣೆಯುಂಟಾಗೆ ಮೆಚ್ಚುವೆನೆಂದನಾ ದ್ರೋಣ ೧೪

ಗಳಹತನ ನಿಮುಲ್ಲಿ ನೆಲೆ ನೀವ್
ಕಲಿತ ವಿದ್ಯವು ಮಾತಿನಲಿ ನೀವ್
ಗೆಲುವುದಿದು ತಪ್ಪಲ್ಲ ಮುಖದಿಂ ದ್ವಿಜರು ಜನಿಸಿದಿರಿ
ಗೆಲವು ತೋಳಿಂದೆಮಗೆ ಜನ್ಮ
ಸ್ಥಳವಲೇ ಭುಜವರಸುಗಳಿಗಿ
ನ್ನಳುಕದಿದಿರಲಿ ನಿಂದಿರಾದಡೆ ಗೆಲವು ನಿಮಗೆಂದ ೧೫

ಎನ್ನ ಮತ್ತೊಮ್ಮೆನ್ನ ತನ್ನಾ
ಣೆನ್ನ ಗೆಲವೇ ನಮಗೆ ನಿಂದರೆ
ನಿನ್ನ ಸಮ್ಮುಖದಲಿ ಮಹಾದೇವಹುದು ಬಳಿಕೇನು
ತನ್ನಲುಂಟೇ ಖಿರೆಯುತನ ಬರಿ
ದೆನ್ನನಿವನಿದ ಬಾರಿಯ
ಮುನ್ನ ಬಲ್ಲೈ ನೀನೆನುತ ಸಾರಥಿಯ ಕೈವೊಯ್ದು ೧೬

ಈತ ಸೇನಾಪತಿ ಕರ್ಣಾ ತಾ
ನೀತನೈವರ ಮೈದುನನು ವಿ
ಖ್ಯಾತನಿವ ಪಾಂಚಾಲಕುಲದಲಿ ದ್ರುಪದತನುಜನಿವ
ಈತ ಸಾತ್ಯಕಿ ಯಾದವರ ಕುಲ
ದಾತನೀತ ಶಿಖಂಡಿ ಮೊದಲಾ
ದೀತಗಳು ನೆರೆ ಖರೆಯರೆಂದನು ನಗುತ ಸಾರಥಿಗೆ ೧೭

ಮುಟ್ಟಿ ಬಂದುದು ಸೇನೆ ಕವಿದುದು
ಕಟ್ಟಳವಿಯಲಿ ಕಲಿಗಳಿದು ಬಳಿ
ಕಟ್ಟಿ ತಿಂಬ ಮಹಾಂತಕಂಗೌತಣವ ಹೇಳ್ವಂತೆ
ಕಟ್ಟೆಯೊಡೆದಂಬುಧಿಯೊ ಮೇಣ್ ಜಗ
ಜಟ್ಟಿ ಸುರಿದಂಬುಗಳೊ ನಿಮಿಷಕೆ
ಕೆಟ್ಟುದಾಚೆಯ ಬಲದ ತರಹರವರಸ ಕೇಳೆಂದ ೧೮

ನುಡಿಗೆ ಮುಂಚುವ ಬಾಣ ಮಾರುತ
ನಡಸಿ ಬೀಸುವ ಲಾಗು ತಲೆಗಳ
ತೊಡಬೆಗಳಚುವ ಬೇಗವನು ಬಣ್ಣಿಸುವರೆನ್ನಳವೆ
ಕಡಲ ಕಡಹದಲುರಿವ ಗರಳವ
ನುಡುಗಿದವರಿವರೋ ಶಿವಾಯೆಂ
ದೊಡನೊಡನೆ ಪಡೆ ನಡುಗಲೊರಸಿದನಾ ಮಹಾರಥರ ೧೯

ಕರಿಗಳೈಸಾವಿರ ತುರಂಗಮ
ವೆರಡು ಸಾವಿರವೆಂಟು ಸಾವಿರ
ವರವರೂಥದ ಥಟ್ಟು ಮುರಿದುದು ಲಕ್ಷ ಪಾಯದಳ
ಅರಸುಗಳು ಮೂನೂರು ಪುನರಪಿ
ಕರಿ ತುರಗ ರಥ ಮತ್ತೆ ಮೂವ
ತ್ತೆರಡು ಸಾವಿರವಳಿದುದರಿ ಪಾಂಚಾಲ ಸೇನೆಯಲಿ ೨೦

ಮತ್ತೆ ಕವಿದುದು ಹೆಣನ ತುಳಿದೊ
ತ್ತೊತ್ತೆಯಲಿ ರಿಪುಸೇನೆ ಮುಂಜಿನ
ಮುತ್ತಿಗೆಯ ರವಿಯಂತೆ ಕಾಣೆನು ಕಳಶಸಂಭವನ
ಮತ್ತೆ ನಿಮಿಷಾರ್ಧದಲಿ ಕಾಲನ
ತುತ್ತು ಜೋಡಿಸಿತೇನನೆಂಬೆನು
ಹತ್ತು ಕೋಟಿಯನಿಳುಹಿದನು ರಿಪುಚಾತುರಂಗದಲಿ ೨೧

ಘಾಸಿಯಾದುದು ಸೇನೆ ಸುಡಲೆನು
ತಾ ಸುಭಟರಿದಿರಾಗಿ ಕಾದಿದ
ರೈಸೆ ಬಳಿಕೇನವರ ಸತ್ವ ತ್ರಾಣವೇನಲ್ಲಿ
ಸೂಸುಗಣೆಗಳ ಸೊಗಡು ಹೊಯ್ಲು ಪ
ಹಾಸಕೊಳಗಾದರು ಮಹಾರಥ
ರೀಸು ಭಂಗಕೆ ಬಂದುದಿಲ್ಲ ನೃಪಾಲ ಕೇಳೆಂದ ೨೨

ಕಂಡುದಿವರನು ರಾಯ ಮೋಹರ
ವಂಡುಗೊಂಡುದು ದೊರೆಗಳಿದು ಕೋ
ದಂಡ ರುದ್ರನ ರಣ ಕರ್ಣಾ ತಾವೇನನೊದಗುವರು
ಉಂಡ ಬಾಸಣದೇರು ಮದ್ದಿನ
ಗಂಡನೋ ದ್ರೋಣಾಸ್ತ್ರವನು ಸವಿ
ಗಂಡನೋ ಸಾತ್ಯಕಿಯೆನುತ ಗರ್ಜಿಸಿದನಾ ಭೀಮ ೨೩

ನುಡಿದು ಭಂಗಿಸಲೇಕೆ ಸದರವ
ಕೊಡುವುದಾಹವವೊಮ್ಮೆ ಮಗುಳವ
ಗಡಿಸುವುದು ವಿಕ್ರಮಕೆ ಕುಂದೇನಿದು ಮುಹೂರ್ತ ವಶ
ಪಡೆ ಸವೆದುದಿನ್ನೇನೆನುತ ಬಿಲು
ದುಡುಕಿ ಹೊಕ್ಕನು ಪಾರ್ಥನನಿಲಜ
ನೊಡನೆ ಬಳಿಸಂಧಿಸಿತು ಸನ್ನಾಹದಲಿ ಪರಿವಾರ ೨೪

ಭೀತಿ ಮಾಣಲಿ ಭೀಮ ಫಲುಗುಣ
ರಾತುಕೊಂಡರು ಬವರವನು ನೆರೆ
ಸೋತವರು ಸಂವರಿಸಿ ಕೊಂಬುದೆನುತ್ತ ಚರರುಲಿಯೆ
ಚಾತುರಂಗದ ಚರಣಹತಿ ನಿ
ರ್ಧೂತ ಧೂಳೀಮಯವಖಿಳ ದಿಗು
ಜಾತವೆನೆ ಥಟ್ಟಣೆಯಲೇರಿತು ಪಾಂಡುಸುತಸೇನೆ ೨೫

ಆಳಿಯೇ ನಿಮಗೆನ್ನ ಸರಳಿಂ
ದಾಳು ಕುದುರೆಯ ಕೊಲಿಸುವುದು ನಿಮ
ಗಾಳುತನವುಂಟೆಂಬ ಗರ್ವವನಿಲ್ಲಿ ತೋರಿಸಿರೆ
ಆಳು ನೋಡುತ್ತಿರಲಿ ನಿಮ್ಮೀ
ಕಾಳೆಗವನೆಲೆ ಪಾರ್ಥ ಪವನಜ
ಹೇಳೆನುತ ಕೈವರ್ತಿಸಿದನಂಬುಗಳಿಗಿವರೊಡಲ ೨೬

ನರನನೆಚ್ಚನು ಪವನಜನ ತನು
ಬಿರಿಯಲೆಚ್ಚನು ಸಾರಥಿಗಳಿ
ಬ್ಬರಲಿ ಹೂಳಿದನಂಬ ನೆರೆ ನೋಯಿಸಿದ ರಥ ಹಯವ
ನರನ ಕಣೆಯನು ಭೀಮನಂಬನು
ಹರೆಗಡಿದು ಮಗುಳೆಚ್ಚನವರನು
ಸರಳ ಪುನರಪಿ ಸವರಿ ಸೆಕ್ಕಿದನೊಡಲೊಳಂಬುಗಳ ೨೭

ದಿಟ್ಟಿ ಮುಷ್ಟಿಯ ಸರಿಸದಲಿ ತಲೆ
ಮುಟ್ಟು ಕವಿದರು ಭೀಮ ಫಲುಗುಣ
ರಿಟ್ಟ ತೊಡರಿನೊಳಾರು ಸಿಲುಕರು ದಿವಿಜ ದನುಜರಲಿ
ನೆಟ್ಟನೈದುವ ಹಿಳುಕುಗಳ ತರಿ
ದೊಟ್ಟಿದನು ದೆಖ್ಖಾಯಿಯಲಿ ಗರಿ
ಗಟ್ಟಿತೀತನ ಖ್ಯಾತಿ ಮೆರೆದುದು ಕೇಣವಿಲ್ಲೆನಿಸಿ ೨೮

ರಾಯನನು ಬರಹೇಳು ನಾವ್ ಕೈ
ಗಾಯೆವೋ ಕಾಯಿದೆವೊ ಕಾಣಲಿ
ಬಾಯಿಬಡುಕರು ಬಂದು ನೋಡಲಿ ಕರ್ಣ ಶಕುನಿಗಳು
ಆಯುಧವ ಹಿಡಿದವರು ಮೇಣಿವ
ರಾಯತದೊಳೊಡವೆರಸಿ ನೋಡಲಿ
ರಾಯನಾಣೆಯೆನುತ್ತ ಮೂದಲಿಸಿದನು ತನ್ನವರ ೨೯

ಬಾಲಸೂರ್ಯನವೊಲ್ ಪ್ರತಿಕ್ಷಣ
ದೇಳಿಗೆಯ ತೇಜದ ವಿಕಾರ ಚ
ಡಾಳಿಸಿತು ವಿಕ್ರಮದ ಝಳ ಜಗವಳುಕೆ ಝೊಂಪಿಸಿತು
ಹೇಳಲೇನರ್ಜುನನ ಭೀಮನ
ಸೋಲವದು ತಾ ಮೃತ್ಯುವೀ ಪರಿ
ಕಾಳೆಗವ ನಾನರಿಯೆನಮರಾಸುರರ ಥಟ್ಟಿನಲಿ ೩೦

ಸಾಕು ನಿಮಗಾಗದು ವೃಥಾ ನೀ
ವೇಕಪಂಕರಿಸುವಿರಿ ಸೇನಾ
ನೀಕ ಹೊದ್ದಲಿ ಹೊಗಲಿ ಧೃಷ್ಟದ್ಯುಮ್ನ ಮೊದಲಾಗಿ
ಆಕೆವಾಳರು ನಿಲಲಿ ಕುಪಿತ ಪಿ
ನಾಕಿಯರಿಯಾ ದ್ರೋಣನೆನುತ ನ
ರಾಕೃತಿಯ ಪರಬೊಮ್ಮರೂಪನು ತಿರುಹಿದನು ರಥವ ೩೧

ಮೇಲೆ ಬಿದ್ದುದು ಮುಳಿಸಿನಲಿ ಪಾಂ
ಚಾಲರಾಯನ ಥಟ್ಟು ನಿಶಿತ ಶ
ರಾಳಿಯಲಿ ಹೂಳಿದನು ಧೃಷ್ಟದ್ಯುಮ್ನನಂಬರವ
ಬಾಲಕರಲೇ ಖಡ್ಗಧಾರೆಯ
ಮೇಲೆ ಮೋಹಿದ ಮಧುವ ಸವಿಯಲಿ
ನಾಲಗೆಯಲಿವರೊಲ್ಲರೆಂದನು ನಗುತ ಕಲಿದ್ರೋಣ ೩೨

ತೆರಹ ಕೊಟ್ಟೊಳಹೊಗಿಸಿ ಸದೆದನು
ಬರಸಿಡಿಲು ಜಡಿವಂತೆ ರಿಪುಬಲ
ಪೊರಲಿ ಕೆಡೆದುದು ಘಾಯವಡೆದುದು ಬೇಹ ನಾಯಕರು
ದುರುದುರಿಪ ತಲೆಮಿದುಳ ದಂಡೆಯ
ಹರಿಗರುಳ ನೆಣವಸೆಯ ಮೂಳೆಯ
ಮುರಿಕಂಗಳ ಕಡಿಖಂಡಮಯವಾಯ್ತಖಿಳ ಚತುರಂಗ ೩೩

ಬೆರಳ ಬಾಯ್ಗಳ ಬಿಸುಟ ಕೈದುಗ
ಳೆರಗಿರಿದ ಹಲ್ಲುಗಳ ಕೂಡಿದ
ಕರಪುಟದ ಬಿಡುಂದಲೆಯ ಬಸಿವೇರುಗಳ ಶೋಣಿತದ
ನರಳುವಾರೋಹಕರ ರಾವ್ತರ
ವರ ಮಹಾರಥ ಪಾಯದಳದು
ಬ್ಬರದ ಭಂಗವನೇನನೆಂಬೆನು ವೈರಿಸೇನೆಯಲಿ ೩೪

ಮುಂದೆ ಹೊಗುವತಿಬಳರು ಹಾರಿತು
ಹಿಂದಣವರನು ಹಿಂದೆ ನಿಲುವರು
ಮುಂದಣವರಾಸೆಯಲಿ ನಿಂದುದು ಪಾರ್ಥಪರಿಯಂತ
ಅಂದು ಪಾರ್ಥನು ಕೃಷ್ಣ ಬಲದಲಿ
ನಿಂದನೇವೇಳುವೆನು ನಿನ್ನವ
ರೆಂದು ಗೆಲ್ಲರು ಗಾಹುಗತಕವನುಳಿದು ಕಾದುವರೆ ೩೫

ಆರು ಸಾವಿರ ತೇರು ಗಜ ಹದಿ
ನಾರುಸಾವಿರ ಲಕ್ಷ ಕುದುರೆಗ
ಳಾರು ಕೋಟಿ ಪದಾತಿ ಮುಗ್ಗಿತು ಮತ್ತೆ ಸಂದಣಿಸಿ
ಆರು ಲಕ್ಷ ತುರಂಗ ನೃಪರೈ
ನೂರು ಗಜಘಟೆ ಲಕ್ಷ ರಥ ಹದಿ
ಮೂರು ಸಾವಿರವಳಿದುದರಿ ಪಾಂಚಾಲ ಸೇನೆಯಲಿ ೩೬

ಅಂಗವಿಸುವವರಿಲ್ಲ ಭಟರಿಗೆ
ಭಂಗವಿಕ್ಕಿತು ಕೌರವೇಂದ್ರಗೆ
ಸಂಗರದ ಸಿರಿ ಸೊಗಸಿನಲಿ ಕಡೆಗಣ್ಣ ಸೂಸಿದಳು
ಮುಂಗುಡಿಯಲಿನ್ನಾರು ನಮಗಾ
ವಂಗದಲಿ ಜಯವೇನು ಹದನರ
ಸಂಗೆ ಬಿನ್ನಹ ಮಾಡಿಯೆಂದರು ನಿಖಿಳ ಮಂತ್ರಿಗಳು ೩೭

ಕರಸಿದನು ಹರಿ ಧರ್ಮಪುತ್ರನ
ಸರಸ ಕೇಳಿಂದಿನಲಿ ಗುರುವನು
ಸರಳ ಮೊನೆಯಲಿ ಗೆಲಲು ನೂಕದು ಭೂತನಾಥಂಗೆ
ತೆರಳಿ ಬರುತಿದೆ ನಮ್ಮ ಬಲ ಸಂ
ಗರದ ಜಯವಹುದೆಂತು ಹೇಳೈ
ಧರಣಿಪತಿ ನೀನೆನಲು ನೀವೇ ಬಲ್ಲಿರಿದನೆಂದ ೩೮

ಧುರದ ಜಯವಹುದೊಂದು ಪರಿಯಲಿ
ನಿರುತವಲ್ಲದ ನುಡಿಯ ನುಡಿದರೆ
ಪರಿಹರಿಸಬಹುದೆಂದನಸುರಾರಾತಿ ನಸುನಗುತ
ನರನದೆಂತೆನೆ ಗುರುತನುಜ ಸಂ
ಗರದೊಳೊರಗಿದನೆಂದು ದ್ರೋಣಂ
ಗರುಹು ಫಲುಗುಣ ಮನದೊಳಳುಕದೆ ಬೇಗ ಮಾಡೆಂದ ೩೯

ಕಿವಿಯ ಮುಚ್ಚಿದನರ್ಜುನನು ಹರಿ
ಯುವಗಡಿಸೆ ಕೈಕೊಂಡನರಸನು
ಪವನಸುತನಾ ಮಾತಕೊಂಡನು ಹೊಕ್ಕನಾಹವವ
ತವಕದಲಿ ತೆಗೆದೆಸುತ ರಿಪುಶರ
ನಿವಹವನು ಖಂಡಿಸುತಲಿಂದಿನ
ಬವರದಲಿ ಕಡಿವಡೆದುದಶ್ವತ್ಥಾಮ ಕೇಳೆಂದ ೪೦

ಶಿವ ಶಿವಾ ಕರ್ಣಜ್ವರಾಯತ
ರವವಿದೆತ್ತಣದೋ ಕುಮಾರನ
ತಿವಿದರಾರೋ ತಾನಿದದ್ಭುತವೆನುತ ತನ್ನೊಳಗೆ
ತವಕಿಸುತ ತಿಳಿದನು ವೃಕೋದರ
ನಿವ ದುರಾತ್ಮನು ತನ್ನ ಮಗನಾ
ಶಿವನೊಡನೆ ಸಮಜೋಳಿ ಹುಸಿ ಹೋಗೆಂದನಾ ದ್ರೋಣ ೪೧

ಮತ್ತೆ ಮುಸೆದುದು ಖಾತಿ ಕರ್ಬೊಗೆ
ಸುತ್ತಿದುಸುರಲಿ ಮೀಸೆಗಡಿದೌ
ಡೊತ್ತಿ ಸೆಳೆದನು ಶರವನೆಚ್ಚನು ಪವನನಂದನನ
ಹತ್ತೆಗಡಿದನು ಭೀಮ ಮುಗುಳಿವ
ನೊತ್ತಿ ಹೊಕ್ಕರೆ ಕೈ ನೆರವ ಹಾ
ರುತ್ತ ಮುರಿದನು ಬಳಿಕ ಧೃಷ್ಟದ್ಯುಮ್ನನಿದಿರಾದ ೪೨

ಎನಿತು ಬಾರಿ ಪಲಾಯನದ ಸಿರಿ
ನಿನಗೆ ಸೇರಿತು ವೀರ ಭಂಡನೊ
ಳೆನಗೆ ನೂಕದು ಸಾಕು ಧೃಷ್ಟದ್ಯುಮ್ನ ನಿಲ್ಲೆನುತ
ಅನಿಲ ಜವದಲಿ ರಥವ ಬಿಟ್ಟನು
ಜನಪತಿಯ ಮೋಹರಕೆ ಕವಿದುದು
ತನತನಗೆ ರಾಯನ ವಿಪತ್ತಿನೊಳಖಿಳ ಭಟನಿಕರ ೪೩

ಒಲೆದು ಗಜವಿಟ್ಟಣಿಸಿದವು ತಲೆ
ವಲಗೆಯಲಿ ಕಲಿ ಪಾಯದಳ ಪಡಿ
ತಳಿಸಿತೊಳಹೊಕ್ಕಾಕಿದವು ಬದ್ದರದ ಬಂಡಿಗಳು
ಸೆಳೆವಡಾಯ್ದದ ರಾವುತರು ಕೈ
ನಿಲುಕಿದರು ಮುತ್ತಿದರು ಪರಿಮುಂ
ಡಳಿಸಿ ಬೊಬ್ಬಿರಿದಾರಿದರು ಸಿಕ್ಕಿದನು ಹಗೆಯೆನುತ ೪೪

ಸಾರಥಿಯ ತಂಡುಕಿದರು ತಿವಿದರು
ತೇರ ಕುದುರೆಯನಿಳಿದ ಬರಿಕೈ
ತೇರ ಹಿಡಿದವು ಘಲ್ಲಿಸಿದವನುಕರುಪ ಕೂಬರವ
ಭಾರಿಯಾಚಿನ ಮೇಲೆ ಬಿದ್ದವು
ವಾರುವಂಗಳ ಖುರನಿಕರವಸಿ
ಧಾರೆ ಮೊಗದಲಿ ಮಿಂಚಿದವು ಮುತ್ತಿದವು ಕಳಶಜನ ೪೫

ದ್ರೋಹಿ ಸಿಲುಕಿದನೆನುತೆ ಜೀವ
ಗ್ರಾಹವೋ ಸಾಹಸ ವಿಚಾರಿಸು
ಬೇಹವರನೆನುತೊರಲಿ ಧೃಷ್ಟದ್ಯುಮ್ನನಿದಿರಾಗೆ
ಸಾಹಸಿಕರಳುಕಿದರು ಕೌರವ
ಮೋಹರದ ಮೊನೆಯಾಳುಗಳು ಸ
ನ್ನಾಹದಲಿ ಪಡಿತಳಿಸಿ ಕರ್ಣ ಕೃಪಾದಿ ನಾಯಕರು ೪೬

ಗಾಳ ಗಂಟಲಲಿಳಿವುದೇ ಮ
ತ್ಸ್ಯಾಳಿಗಕಟೀ ದೊದ್ದೆ ಕವಿದರೆ
ಕೋಲಗುರು ಕಳವಳಿಸುವನೆ ಬಯಸುವನೆ ಕೆಲಬಲನ
ಮೇಲುಗಾಣದೆ ಕವಿದಡಿದಿರೇ
ಬಾಲಹರಿಣನ ಹಿಂಡು ಹೆಬ್ಬುಲಿ
ಗಾಳ ತತ್ತರಿದರಿದು ತಳಪಟ ಮಾಡಿದನು ದ್ರೋಣ ೪೭

ಆರ ನೆರವಿಯೊಳಂಧಕಾರದ
ಭಾರವನು ರವಿ ಗೆಲುವನಿನ್ನೀ
ವೈರಿಬಲಭಂಜನಕೆ ಗುರು ಹಂಗಹನೆ ಕೆಲಬಲಕೆ
ಭೂರಿ ರಿಪುಚತುರಂಗಬಲಸಂ
ಹಾರದಲಿ ಒರವೆದ್ದ ರಕುತದ
ಪೂರದಲಿ ಮುಳುಗಿದರು ಪಾಂಚಾಲಾದಿ ನಾಯಕರು ೪೮

ಧಾಯವಾಯ್ತರ್ಜುನಗೆ ಮಿಗೆ ಪೂ
ರಾಯದೇರಿನೊಳೊದೆದು ಕೊಂಡರು
ವಾಯುತನುಜ ಶಿಖಂಡಿ ಸಾತ್ಯಕಿ ದ್ರುಪದನಂದನರು
ಬಾಯ ಬಿಟ್ಟುದು ಭೀತಿಯಲಿ ಕೌಂ
ತೇಯಸುತರಿನ್ನುಳಿದ ಸುಭಟರ
ನಾಯಕರ ಪಾಡೇನು ನಸಿದುದು ಪಾಂಡುಸುತಸೇನೆ ೪೯

ಮೊದಲಲೌಕಿದ ಚಾತುರಂಗವ
ಸದೆದನೊಂದೇ ಲಕ್ಷವನು ಮಿ
ರಿದರೆ ಮೋದಿದನೆಂಟುಲಕ್ಷವನೊಂದು ನಿಮಿಷದಲಿ
ಕದನದಲಿ ದಿಗ್ವೇವಿಯರುರಿಗಿ
ಕ್ಕಿದನು ಲಕ್ಷವನೇಳು ಲಕ್ಷವ
ನೊದಗಿಸಿದನಂತಕನ ಪುರಿಗವನೀಶ ಕೇಳೆಂದ ೫೦

ಧಾರುಣೀಶರು ಮಡಿದರೊಂದೇ
ಸಾರಿಗೆಯುಲೈನೂರು ಮತ್ತೆ ಮ
ಹಾರಥರು ಮೂನೂರು ಪುನರಪಿ ನೂರು ನಾನೂರು
ಮಾರಿ ಬಿರುದೇಗಿದಳು ಯಮನವ
ರಾರದೊಯ್ದುಲು ನಾಕದಲಿ ಹೊರ
ಕೇರಿಗಟ್ಟಿದುದೆನಲು ಕೊಂದನು ರಿಪುಚತುರ್ಬಲವ ೫೧

ಇಳಿದರಿತ್ತಲು ಗಗನದಿಂ ಹೊಳೆ
ಹೊಳೆವ ಧಾಳದ ರೂಢಿಯಲಿ ಜಗ
ಮುಳುಗೆ ಭಸ್ಮವಿಭೂಷಿತಾಂಗದ ಜಡಿವ ಕೆಂಜೆಡೆಯ
ಪುಲಿದೊಗಲ ಸುಲಿಪಲ್ಲ ಮುಕ್ತಾ
ವಳಿಯ ಮಣಿ ಜಪಮಾಲಿಕೆಯ ನಿ
ರ್ಮಳ ತಪೋಧನರೈದಿದರು ಸಂಗ್ರಾಮಭೂಮಿಯನು ೫೨

ಅತ್ರಿ ಭಾರದ್ವಾಜ ವಿಶ್ವಾ
ಮಿತ್ರ ಗೌತಮ ಕಣ್ವ ಕಶ್ಯಪ
ಮಿತ್ರಸೂನು ವಸಿಷ್ಠ ಗಾರ್ಗ್ಯಾಂಗಿರಸ ಭಾರ್ಗವರು
ಅತ್ರಿಸುತ ವರ ವಾಲಖಿಲ್ಯರು
ಚಿತ್ರಚರಿತರು ಬಂದರಲ್ಲಿಗೆ
ಮಿತ್ರಭಾವದಲವರನಭಿವಂದಿಸಿದನಾಚಾರ್ಯ ೫೩

ವರಮುನೀಶ್ವರರವನಿಯಲಿ ಮೂ
ವರಿಗೆ ಗೋಚರವಾದರಿತ್ತಲು
ಮುರವಿರೋಧಿಗೆ ನರಗೆ ಕುರುಸೇನಾಧಿನಾಥಂಗೆ
ಅರಿಯರುಳಿದವರೀತನಿಂ ಸ
ತ್ಕರಿಸಿಕೊಂಡರು ನುಡಿದರಾ ಮುನಿ
ವರರು ಕಡಿದರು ಕೌರವಾನ್ವಯ ಕಲ್ಪ ಭೂರುಹವ ೫೪

ಪಾತಕವಲಾ ದ್ರೋಣ ನಿನಗೀ
ಭೂತಹಿಂಸೆಯದೇಕೆ ಪಾರ್ಥಿವ
ಜಾತಿಯಲಿ ಜನಿಸಿದವರೀ ನಿನ್ನಂತೆ ನಿರ್ದಯರೆ
ಸೋತರೇನದು ಋಷಿತನಕಪ
ಖ್ಯಾತಿಯೇ ಶಸ್ತ್ರೋಪಜೀವನ
ವೇತಕಿದು ನಿನಗೆಂದು ಭಾರದ್ವಾಜಮುನಿ ನುಡಿದ ೫೫

ಲೋಕವೆಂಬುದು ವರ್ಣಧರ್ಮವ
ನೌಕಿ ನಡೆವುದು ವೈದಿಕಕೆ ನಾ
ವಾಕೆವಾಳರು ತಪ್ಪಿ ನಡೆದರೆ ಭ್ರಮಿಸುವರು ಬುಧರು
ಲೋಕ ನಮ್ಮನುದಾಹರಿಸುವುದು
ಕಾಕನೇ ಬಳಸುವುದು ದುರ್ಯಶ
ವೇಕೆ ನಿಮಗಿದು ವಿಹಿತ ಕರ್ಮಶ್ರುತಿ ಪರಿತ್ಯಾಗ ೫೬

ಶ್ರುತಿಪಠಣವೋ ತರ್ಪಣವೊ ಮೇ
ಣತಿಥಿ ಪೂಜೆಯೊ ಭೂತಯಜ್ಞವೊ
ಹುತವಹಾರಾಧನೆಯೊ ರಣವೀಯೈಯ್ದರೊಳಗೇನು
ಶ್ರುತಿ ತದರ್ಥಸ್ಮೃತಿಗಳಲಿ ಪಂ
ಡಿತರು ನಡೆವುದ ಮಾದು ಮೂರ್ಖರ
ಗತಿಯನನುಕರಿಸಿದರೆ ಬಳಿಕ ವಿಶೇಷವೇನೆಂದ ೫೭

ಆದುದವಿವೇಕದಲಿ ಸತ್ಪಥ
ವೈದಿಕಾತಿಕ್ರಮಣವಿನ್ನು ಗ
ತೋದಕದಲುರೆ ಸೇತುಸಂಬಂಧದಲಿ ಫಲವೇನು
ಈ ದುರಾಗ್ರಹ ನಿಲಲಿ ಹಾಯಿಕು
ಕೈದುವನು ಸುಸಮಾಧಿ ಯೋಗದ
ಲೈದು ನಿಜವನು ದೇಹ ನಿಸ್ಪೃಹನಾಗು ನೀನೆಂದ ೫೮

ದೇಹವಿದು ಭೂತೇಂದ್ರಿಯಾದಿಯ
ಗೇಹವುಪಚಿತ ಕರ್ಮ ಫಲ ಸಂ
ದೋಹದಲಿ ತಿರುಗುವುವು ಸುರ ನರ ತಿರ್ಯಗಾದಿಯಲಿ
ದೇಹ ಕರಣಾದಿ ಪ್ರಪಂಚವು
ನಾಹಮೆನಲಳಿದುಳಿದ ನಿತ್ಯ ನಿ
ರೀಹ ವಿಮಳ ಜ್ಞಾನರೂಪನು ನಿನ್ನ ನೋಡೆಂದ ೫೯

ನನೆದುದಂತಃಕರಣ ರೋಮಾಂ
ಚನದಲಾನಂದಾಶ್ರುಜಲದಲಿ
ನನೆದು ಹೊಂಪುಳಿಯೋಗಿ ಕಣ್ಣೆವೆ ಮುಚ್ಚಿ ಹೊರೆಹೆಚ್ಚಿ
ನೆನೆದೆನೆನ್ನನು ನಿಮ್ಮ ಪದದರು
ಶನದಿ ಧನ್ಯನು ಬಿಜಯಮಾಡುವು
ದೆನುತ ಕಂದೆರೆದೀಕ್ಷಿಸಿದನಂದುಭಯಸೈನಿಕವ ೬೦

ತಿರುಗಿದುದು ಮುನಿನಿಕರವತ್ತಲು
ಮರಳಿತೀತನ ಬುದ್ಧಿಯಿತ್ತಲು
ತೆರೆಯ ಹಿಡಿದುದು ಮರವೆ ಸಮ್ಯಜ್ಞಾನದೀಧಿತಿಗೆ
ಅರಸನನು ಬೆಸಗೊಂಬ ತನುಜನ
ಮರಣ ಹುಸಿಯೋ ದಿಟವೊ ಭೀಮನ
ಸೊರಹ ನಂಬೆನೆನುತ್ತ ರಾಯನನರಸುತೈತಂದ ೬೧

ಎಲೆ ಯುಧಿಷ್ಠಿರ ನನ್ನ ಸುತನೇ
ನಳಿದನೇ ಹುಸಿಯಲ್ಲಲೇ ನಿ
ರ್ಮಳವಚೋನಿಧಿ ನೀನು ಹೇಳೆನಲಸುರಹರ ನಗುತ
ಎಲೆಲೆ ನುಡಿಯಾ ಪಾಪಿ ಕದನದೊ
ಳಳಿದುದಶ್ವತ್ಥಾಮನೆಂಬ
ಗ್ಗಳಿಯ ಕರಿ ಮಾಳವರ ಥಟ್ಟಿನೊಳಂಜಬೇಡೆಂದ ೬೨

ಆದರಶ್ವತ್ಥಾಮ ಗಜವಿದಿ
ರಾದುದಳಿದುದು ದಿಟವೆನಲು ಬಿಸು
ಸುಯ್ದು ನರಸನ ನುಡಿಗೆ ನಂಬಿದನಕಟ ಮಗನೆನುತ
ಕೈದು ಕಯ್ಯಲಿ ಜಾರೆ ಝೊಂಪಿಸಿ
ಖೇದದಲಿ ಕಾತರಿಸಿ ಚಿತ್ತವಿ
ಭೇದದಲಿ ಕಳವಳಿಸಿ ಕರೆದನು ರೋಷತಾಮಸವ ೬೩

ಬಿಲುದುಡಂಕಿ ಬಲುಸರಳ ತಿರುವಾಯ್
ಗೊಳಿಸಿ ಮಲೆತನು ಮಾರ್ಬಲಕೆ ಬಲೆ
ಕಳಚಿದರೆ ಮೃಗ ಬಿದ್ದು ದಿರುಬಿನ ಕುಳಿಯೊಳೆಂಬಂತೆ
ತಿಳುಹಿ ಹೋದರು ಮುನಿಗಳೀತನ
ತಿಳಿವು ತೊಟ್ಟುದು ಮರವೆಯನು ಮುಂ
ಕೊಳಿಸಿ ಮೊಗೆದನು ಮತ್ತೆ ಪಾಂಡವಸೈನ್ಯಸಾಗರವ ೬೪

ತಿರುಗಿ ಭೀಮನನೆಚ್ಚ ನಿತ್ತಲು
ನರನ ಮುಸೆಗಾಣಿಸಿದನರಸನ
ಹೊರೆಯ ಬಿರುದರ ಬಸಿಯಲೆಚ್ಚನು ವಾಮದಕ್ಷಿಣವ
ಮರಳಿ ಧೃಷ್ಟದ್ಯುಮ್ನ ಸಾತ್ಯಕಿ
ವರ ಯುಧಾಮನ್ಯೂತ್ತಮೌಂಜಸ
ರರಸುಮಕ್ಕಳ ಹಲಬರನು ಮುರಿಯೆಚ್ಚು ಬೊಬ್ಬಿರಿದ ೬೫

ಈಸು ಭರದಲಿ ಭೂತಹಿಂಸಾ
ದೋಷವನು ನೆರೆ ಮಾಡಿ ಮಕ್ಕಳಿ
ಗೋಸುಗವಲೇ ಹಣವ ಗಳಿಸುವುದಾತ ತಾನಳಿಯೆ
ಆಸೆಯಿದರೊಳಗೇಕೆ ಧುರದಾ
ವೇಶವಳಿಯದು ಶಿವ ಶಿವಾ ಸುತ
ನಾಶವನು ಬಗೆಗೊಳ್ಳನೆಂದನು ಪವನಸುತ ನಗುತ ೬೬

ಕೇಳಿದನು ಕಡುನೊಂದನಡಿಗಡಿ
ಗಾಲಿ ನೀರೇರಿದವು ಕೈಯಲಿ
ಕೋಲು ಬಿಲು ಸಡಲಿದವು ಸಾಕೀ ದೇಹವೇಕೆನುತ
ಮೇಲು ದುಗುಡದ ಮೊಗದಲವನೀ
ಪಾಲ ಕರ್ಣ ಕೃಪಾದಿ ಭಟರಿಗೆ
ಹೇಳಿದನು ಮಗನಳಿದನಸ್ತ್ರ ತ್ಯಾಗ ತನಗೆಂದು ೬೭

ಎನುತ ರಥದೊಳು ರಚಿಸಿ ಪದ್ಮಾ
ಸನವನಿಂದ್ರಿಯ ಕರಣವೃತ್ತಿಯ
ನನಿತುವನು ತಡೆದೆತ್ತಿ ಮೂಲಾಧಾರ ಮಾರುತನ
ಇನ ಶಶಿಗಳೊಂದಾಗೆ ನಾಡಿಗ
ಳನಿಲನಿಕರವನುಗಿದು ಬಿಂದು
ಧ್ವನಿಕಳಾಪರಿಲುಳಿತನೆಸೆದನು ವರ ಸಮಾಧಿಯಲಿ ೬೮

ನಾಸಿಕಾಗ್ರದಲಿಟ್ಟ ಕಂಗಳ
ಸೂಸದುಸುರಿನ ಶಶಿಕಿರಣಪೀ
ಯೂಷಪಾನದ ರೋಮಪುಳಕದ ಗುಡಿಯ ಬೀಡುಗಳ
ಆ ಸುಷುಮ್ನಾ ನಾಡಿಯಲಿ ಕಾ
ಳಾಸಿಸಿದ ಪವನನ ಸಮಾಧಿ ವಿ
ಳಾಸನೆಸೆದನು ಸೌಖ್ಯ ಭಾವದ ಜಡಿವ ಝೊಮ್ಮಿನಲಿ ೬೯

ತನ್ನೊಳಿತರವನಿತರದೊಳು ನೆರೆ
ತನ್ನನೀಕ್ಷಿಸಿ ತಾನು ತನ್ನಿಂ
ದನ್ಯವೆರಡರೊಳೈಕ್ಯವೆಂಬುಪಚರಿತ ಭಾವವನು
ತನ್ನೊಳಗೆ ಹುಸಿಯೆಂದು ನಿತ್ಯನ
ನನ್ಯನಮಳಜ್ಞಾನರೂಪವೆ
ತನ್ನ ನಿಜವೆಂದರಿದು ತಾನಾಗಿರ್ದನಾ ದ್ರೋಣ ೭೦

ಒಡೆದು ನಡುನೆತ್ತಿಯನು ಝಳಪಿಸಿ
ಕಡುವೆಳಗು ಥಳಥಳಿಸಿ ತರಣಿಯ
ತುಡುಕಿ ಹಾಯ್ದುದು ರಶ್ಮಿ ರಂಜಿಸಿತಖಿಳ ದಿಗುತಟವ
ಕುಡಿವೆಳಗನಸುರಾರಿ ಮುನಿಗಳ
ಗಡಣವರ್ಜುನ ಕೃಪರು ಕಂಡರು
ಪಡೆಯೊಳಗೆ ತಾನುಳಿಯೆ ಕಂಡವರಿಲ್ಲ ಕೇಳೆಂದ ೭೧

ತೀರಿತೇ ಮಗನುಬ್ಬಟೆಯು ಜ
ಜ್ಜಾರತನವಾಚಾರ್ಯನಳಿದನ
ದಾರು ನಮಗಾಪ್ತಿಗರು ದೊರೆಯಿನ್ನಾರು ಸಂಗರಕೆ
ಆರು ನಿಮಗಿದ್ದೇಗುವರು ರಣ
ವೀರರಗ್ಗದ ದೈವವೇ ಮುನ
ವಾರೆ ಮೆಚ್ಚಿ ಹುದವರನಿನ್ನೇನರಸ ಕೇಳೆಂದ ೭೨

## ಹತ್ತೊಂಬತ್ತನೆಯ ಸಂಧಿ

ಸೂ. ರಾಯಕಟಕವ ಬೆದರಿಸಿದ ನಾ
ರಾಯಣಾಸ್ತ್ರದ ಬಾಧೆಯನು ಕಮ
ಲಾಯತಾಂಬಕ ನಿಲಿಸಿ ಸಂತೈಸಿದನು ಪಾಂಡವರ

ಕೇಳು ಧೃತರಾಷ್ಟ್ರಾವನಿಪ ಗುರು
ಬೀಳುಕೊಟ್ಟನು ದೇಹವನು ನ
ಮ್ಮಾಳ ವಿಧಿಯೇನಪಜಯದ ತವನಿಧಿಯಲೇ ನಮಗೆ
ಮೇಲೆ ಬಂದುದು ಕಷ್ಟವರಿ ಭೂ
ಪಾಲರಿಗೆ ಕೇಳಿದನು ಖಿಳ ಪಾಂ
ಚಾಲಸುತನೈತಂದನಲ್ಲಿಗೆ ಜಡಿವಡಾಯುಧದಿ ೧

ಐದಿ ಮುಂದಲೆವಿಡಿದು ಬಾಗಿಸಿ
ಕೊಯ್ದನಾತನ ಕೊರಳನೆಡದಲಿ
ಹೊಯ್ದು ಮುರಿದನು ಬರಿಯಲಪ್ಪಳಿಸಿದನು ಬೆನ್ನೆಲುವ
ಕೈದಣಿಯೆ ಕಡಿಖಂಡವಮಯವೆನೆ
ಹೊಯ್ದು ರಥದಲಿ ಕೆದರಿ ಜಡಿದನ
ಡಾಯ್ದವನು ಕಡುಗೋಪದಲಿ ನೋಡಿದನು ರಿಪುಶಿರವ ೨

ಎಲೆಲೆ ಪಾತಕಿ ಹೆಣನ ಹೊಯ್ದರೆ
ಬಲುಗಡಿಯ ನೀನೆಂಬರೇ ಸುಡು
ಹೊಲೆಯರಿದಕಂಗೈಸುವರೆ ತಾ ರಾಜಸೂನು ಗಡ
ಅಳಿದನಾದರೆ ನಿನ್ನ ಭಾಗ್ಯವು
ಉಳಿದಡೀತನ ಮಗನು ನಿನ್ನಯ
ಕುಲದ ತಲೆ ಚೆಂಡಾಡಿದಲ್ಲದೆ ಬರಿದೆ ಬಿಡನೆಂದ ೩

ಎಂದ ಸೂತನ ಬಾಯ ಹೊರಕ
ಯ್ಯಿಂದ ಹೊಯ್ದನು ಹಡಪದವರನು
ಹಿಂದಣಾಪ್ತರನಖಿಳ ಚಮರಚ್ಛತ್ರಧಾರಿಗಳ
ಮುಂದುವರಿದೊಡೆ ತಿವಿದು ಮುರಿದನು
ಮಂದಮತಿ ಬಳಿಕವನ ಸುಡುಸುಡ
ಲೆಂದು ಧೃಷ್ಟದ್ಯುಮ್ನನನು ನೆರೆ ಬೈದುದಖಿಳಜನ ೪

ಕಡಿಕುಗಳನಾಯ್ದರಸಿ ರಥದೊಳು
ಗುಡಿಸಿ ಸಿಂಧವನೆತ್ತಿ ಸಾರಥಿ
ತುಡುಕಿ ವಾಘೆಯ ಮುರುಹಿ ಮರಳಿಚಿ ರಥದ ಕುದುರೆಗಳ
ತಡೆಯದಶ್ವತ್ಥಾಮನಲ್ಲಿಗೆ
ನಡೆದು ಬರುತಿರೆ ಕಂಡು ಮನದಲಿ
ಕಡು ನಿರೋಧವ ಹಿಡಿದು ಚಿಂತಿಸುತಿರ್ದನಾ ದ್ರೌಣಿ ೫

ಏನಿದಚ್ಚರಿ ಕೌರವೇಂದ್ರನ
ಸೇನೆ ತಲೆಕೆಳಗಾಗುತಿದೆ ರಿಪು
ಸೇನೆ ಬೊಬ್ಬಿರಿದಾರುತಿದೆ ಮಡಿದಾತನಾವವನೊ
ಸೇನೆಗೊಡೆಯನು ಬೊಪ್ಪನಿದು ತಾ
ನೇನು ರಥವೇ ಬರಿದೆ ಬರುತಿದೆ
ಹಾನಿ ಜನಕಂಗಾಯ್ತೊ ಶಿವ ಶಿವ ಎಂದನಾ ದ್ರೌಣಿ ೬

ತಂದು ಸಾರಥಿ ರಥವನೀತನ
ಮುಂದೆ ನಿಲಿಸಿದ ಬಿದ್ದನಂಘ್ರಿಯೊ
ಳೆಂದು ಗೋಳಿಟ್ಟೊರಲಿದುದು ಕಳಶಜನ ಪರಿವಾರ
ತಂದೆಯೈದನೆ ಚಾಪವೇದ ಮು
ಕುಂದನೈದನೆ ನಿನ್ನ ಕಾಣಲು
ಬಂದನಯ್ಯನನಪ್ಪಿಕೊಳು ಮಾತಾಡಿ ನೋಡೆಂದ ೭

ಕೂಡೆ ಪರಿಹಂಚಾದ ತಂದೆಯ
ಗೂಡ ನೋಡದ ಮುನ್ನ ಕಂಬನಿ
ಮೂಡಿ ಮುಳುಗಿದವಾಲಿ ಕಾಣವು ಪಿತೃಕಳೇವರವ
ನೋಡಲೆಳಸದ ಮುನ್ನ ಕಿಡಿಗಳ
ಝಾಡಿಯನು ಕಣ್ಣುಗುಳಿದವು ಮಿಗೆ
ನೋಡಿದಶ್ವತ್ಥಾಮ ಕಾಣನು ಮುಂದೆ ಪರಬಲವ ೮

ಅದ್ದನಳಲಿನ ಜಲಧಿಯೊಳು ಮುರಿ
ದೆದ್ದು ಕೋಪಾನಳನ ಝಳದಲಿ
ಬಿದ್ದು ನನೆದನು ನೀರಿನಲಿ ಕಾಹೇರಿ ಕಿಚ್ಚಿನಲಿ
ಗೆದ್ದುದುದಕವನನಲನನಲನ
ನದ್ದಿತುದಕವದೊಂದನೊಂದನು
ಕದ್ದುವೆರಡರ ಹೋರಟೆಗೆ ಗುರುಸೂನು ಬೆಂಡಾದ ೯

ಕೆದರಿ ಹೊರಳುವ ಸಾರಥಿಯನೆ
ತ್ತಿದನು ರಣವೃತ್ತಾಂತವನು ಕೇ
ಳಿದನು ಶಮೆ ಸ್ವೈರಣೆವಿವೇಕವ ನೂಕಿದನು ಸೆರೆಗೆ
ಒದೆದನಳಲನು ರೋಮ ಹರುಷವ
ಹೊದೆದು ಹೊರೆ ಹೆಚ್ಚಿದನು ಕಾಹೇ
ರಿದನು ಕಲಿ ಮನವಳುಕಿ ತಗ್ಗಿತು ರೋಷಭಾವದಲಿ ೧೦

ಚಟುಳಕೋಪಾಗ್ನಿಯಲಿ ನಾಸಾ
ಪುಟದ ಸುಯ್ಲಲಿ ವಿಸ್ಫುಲಿಂಗೋ
ತ್ಕಟಸಮಾಧಿಗಳಿದ್ದಲಲಿ ನಿಗ್ರಹಕಟಾಹದಲಿ
ಪಟುತರದ ಬಾಹುಪ್ರತಾಪದ
ಪುಟವನೆತ್ತದೆ ಮಾಣನೆನಲು
ತ್ಕಟಿಸುತಿರ್ದುದು ರೌದ್ರವೀರಾಭ್ಯುದಯ ಸನ್ನಾಹ ೧೧

ನೊಂದ ಜವನೋ ಜಗವನುರುಹಲು
ಬಂದ ಶಿವನೋ ಕಂಬದಿಂದೊಗೆ
ತಂದ ರೌದ್ರಾಟೋಪ ಮಾನವರೂಪ ಕೇಸರಿಯೊ
ತಂದೆಯುಳಲಿಗನಿರವು ವಿಶ್ವವ
ನೊಂದು ನಿಮಿಷಕೆ ಸುಡುವುದೋ ಹಾ
ಯೆಂದುದಮರಾನೀಕವೆಲೆ ಭೂಪಾಲ ಕೇಳಿದ ೧೨

ಮುರುಹಿದನು ಮಿಾಸೆಯನು ಕಣ್ಣುಗ
ಳರಳಿದವು ಹೊಗೆ ಸುತ್ತಿ ಸುಯ್ಲಲಿ
ಸುರಿದುದುರಿ ಹುಬ್ಬುಗಳನುರೆ ಬಿಗಿದೌಡನೊಡೆಯೊತ್ತಿ
ಬೆರಳ ತುದಿಯಲಿ ಬೊಬ್ಬಿರಿದು ಹರಿ
ಶರಕೆ ಕೈನೀಡಿದನು ಕಲ್ಪದ
ಹರನವೊಲು ಹರರೂಪ ಹೊಂಗಿದನಧಿಕ ರೋಷದಲಿ ೧೩

ದನುಜಹರ ಮಂತ್ರವನು ಮನದಲಿ
ನೆನೆದು ಕೈನೀಡಿದನು ತುದಿಯಂ
ಬಿನಲಿ ತುರುಗಿದ ಕಿಡಿಯ ಬಿರುಕೇಸರಿಯ ಥಾಳಿಗಳ
ತನಿವೊಗರ ಬಲುವೊಗೆಯ ಹೊರಳಿಯ
ಕನಕರಸ ರೇಖಾವಳಿಯ ಮ್ಯೆ
ಮಿನುಗುಗಳ ಹೊಂಗರಿಯ ನಾರಾಯಣ ಮಹಾಶರಕೆ ೧೪

ಪ್ರಳಯ ಮೇಘವನೊಡೆವ ರವಿಮಂ
ಡಲ ಸಹಸ್ರದ ರಶ್ಮಿಯೋ ಜಗ
ದಳವಿನಲಿ ಝೊಂಪಿಸುವ ಹರನುರಿಗಣ್ಣ ದೀಧಿತಿಯೊ
ಮುಳಿದ ನರಕೇಸರಿಯ ದಾಡೆಯ
ಥಳಥಳತ್ಕಾರವೊ ಮಹಾಸ್ತ್ರದ
ಬೆಳಗೊ ಹೆಸರಿಡಲಾರು ಬಲ್ಲರು ಭೂಪ ಕೇಳೆಂದ ೧೫

ಸರಳ ಜೊಳಿಯ ಝಳದೊಳಗೆ ಸಾ
ವಿರ ನಿದಾಘದ ಸೂರ್ಯರುಬ್ಬಟೆ
ಕರಗಿ ಹೋಯಿತು ಬಾಯಿಧಾರೆಯ ಕಿಡಿಯ ಥಾಳಿಯಲಿ
ಬರಸಿಡಿಲ ಶತಕೋಟಿ ಸೀದವು
ನಿರಿವೊಗರ ಕಬ್ಬೊಗೆಯ ಕಿಡಿಯಲಿ
ನೆರೆದವಂತ್ಯದ ಮೇಘವೆನೆ ಝುಗಝುಗಿಸಿತಮಳಾಸ್ತ್ರ ೧೬

ಒಳಗೆ ಜಲಚರವೊದರೆ ಕುದಿದುದು
ಜಲಧಿ ಕಾದುದು ಧರಣಿ ಸೀದುದು
ಕುಲಗಿರಿಗಳುರೆ ಸಿಡಿದು ಸೀಕರಿವೋಯ್ತು ವನನಿಕರ
ನೆಲಕೆ ದಾಡೆಯ ಕೊಟ್ಟು ಕಂಭ
ಸ್ಥಳವ ತೆಗೆದವು ದಿಗಿಭತತಿ ಹೆಡೆ
ನೆಳಿಯೆ ಮಣಿಗಳಲಾಂತನವನಿಯನುರಗಪತಿಯಂದು ೧೭

ಗುಳವ ಕೊಯ್ದುಳುಹಿದರು ಕರಿ ಸಂ
ಕುಳದಲಾರೋಹಕರು ಜೋಡನು
ಕಳಚಿ ಬಿಸುಟರು ರಾವುತರು ಹಕ್ಕರಿಕೆಗಳು ಸಹಿತ
ಝಳದ ಝಾಡಿಗೆ ಬೆವರಿ ವಸನಾಂ
ಚಲವ ಗಾಳಿಗೆ ಮೊಗವನೆತ್ತಿದ
ರಳುಕಿ ಕಣ್ ಕೋರೈಸಿ ಮಮ್ಮಲ ಮರುಗಿತುಭಯಬಲ ೧೮

ಮೇಲ ಜಗವೇಳೊಡಿದವು ಧ್ರುವ
ನಾಲಯಕೆ ನೆಲೆದಪ್ಪಿದ್ದುದು ಗ್ರಹ
ಮಾಲೆ ತಾರಾರಾಸಿ ಜೋಯಿಸರೋದು ಹುಸಿಯಾಯ್ತು
ಥಾಳಿಡುವ ಸೆಗಳಿಯಲಿ ತಳ ಪಾ
ತಾಳಕದ್ದುದು ಕಮಲಜಾಂಡದ
ಮೇಲಣಾವರಣಾಂಬು ಕುದಿದುದು ಹೇಳಲೇನೆಂದ ೧೯

ಒಡೆಯರಿಲ್ಲಾ ಜಗಕೆ ಲೋಗರ
ಸುಡುವರೊಪ್ಪಿಸಿ ಕೊಡುವರೇ ನಾ
ನೊಡೆಯ ಫಡ ತಾನೊಡೆಯರೆಂಬರು ಮೂವರೀ ಜಗಕೆ
ನುಡಿಯರೀ ಹೊತ್ತಿನಲಿ ನಮಗಿ
ನ್ನೊಡೆಯರಾರಿನ್ನಾರ ಬಸುರೊಳ
ಗಡಗುವೆವು ಶಿವ ಶಿವ ಎನುತ ತಲ್ಲಣಿಸಿತಮರಗಣ ೨೦

ಕವಿದ ಕೌರವ ಬಲದ ಸುಮ್ಮಾ
ನವನು ತಮ್ಮಂಜಿಕೆಯನಾ ಭೈ
ರವನ ಭಾರಿಯಸರಳ ಸೊಗಡಿಗೆ ಬೇವ ಮೂಜಗವ
ಅವರು ಕಂಡರು ಖಾತಿಯಲಿ ಪಾಂ
ಡವರು ಧೃಷ್ಟದ್ಯುಮ್ನನನು ತವ
ತವಗೆ ಬೈದರು ಪಾಪಿ ಲೋಕವ ಕೊಂದೆ ನೀನೆನುತ ೨೧

ಅಕಟ ಗುರುಹತ್ಯಾ ಮಹಾ ಪಾ
ತಕವನೇ ನೆರೆ ಮಾಡಿತಲ್ಲದೆ
ಸಕಲ ಲೋಕದ ಬೇರುಗೊಲೆಗೆಲೆ ಪಾಪಿ ನೀನಾದೈ
ವಿಕಟ ವಿಕ್ರಮ ವಿಸ್ಫುಲಿಂಗ
ಪ್ರಕರದಲಿ ಧಗಧಗಿಸುತಿದೆ ಸಾ
ಯಕವ ನಿಲಿಸಾ ನೀನೆನುತ ಭಂಗಿಸಿತು ಪರಿವಾರ ೨೨

ಅವನ ಗುರುತನವೇನು ವಿಪ್ರಾ
ಧಮನಲಾ ಶಸ್ತ್ರೋಪಜೀವನ
ನಿವನು ಋಷಿಯೇ ದ್ರೋಣವಧೆಯನ್ಯಾಯವೇ ತನಗೆ
ಇವನು ತಮ್ಮಯ್ಯನನು ನೆರೆ ಪರಿ
ಭವಿಸನೇ ಚಿಕ್ಕಂದು ನಿಮಗೇ
ಕಿವನನಿರಿದರೆ ಖಾತಿಯೆಂದನು ದ್ರುಪದಸುತ ಮುಳಿದು ೨೩

ಅವಗಡಿಸಲೇಕಗ್ರ ಜನ್ಮ
ಬ್ರುವನೆ ಕಟಕಾಚಾರ್ಯನೆಲೆ ನೀ
ನವರಿವರನೆಂಬಂತೆ ನುಡಿವರೆ ಗುರುವಲಾ ನಿನಗೆ
ಇವರಿಗೀ ನುಡಿಯುರಿಸಿತೇನಿದು
ಶಿವ ಶಿವಾ ಗುರುನಿಂದೆಯನು ಕೇ
ಳುವರು ನಾವಲ್ಲೆನುತ ಸಾತ್ಯಕಿ ಮುಚ್ಚಿದನು ಕಿವಿಯ ೨೪

ಗುರುವಿಘಾತಕರಾವು ತಾನತಿ
ಗುರುಪದೋಪಾಸಕನು ತನ್ನನು
ಕರೆದರಾರಿಕೆಂದು ಧೃಷ್ಟದ್ಯುಮ್ನನುರಿದೇಳೆ
ದುರುಳತನವಾರೊಡನೆಯೋ ಬಾ
ಹಿರ ಮಹಾಪಾತಕಿಯನೊದದಿ
ಟ್ಟೊರಸುವೆನು ತಾನೆನುತ ಸಾತ್ಯಕಿ ಖಂಡೆಯವನುಗಿದ ೨೫

ಎಲೆಲೆ ಹಿಡಿಹಿಡಿ ಸಾತ್ಯಕಿಯನೊಳ
ಗೊಳಗೆ ತೋಟಿಯೆ ಜಾಗು ಕೌರವ
ಬಲದವರ ಬೂತಾಟವಾಯೆತೆ ನಮ್ಮ ಥಟ್ಟಿನಲ್ಲಿ
ನಿಲಿಸೆನುತ ನೃಪನೊರಲೆ ಕವಿದೆಡೆ
ಗಲಿಸಿ ಹಿಡಿದನು ಭೀಮನೀತನ
ಬಲುಭುಜವನೌಚಿದನು ಕೊಂಡನು ಕಯ್ಯ ಖಂಡೆಯವ ೨೬

ಸೆಳೆದನೊರೆಯುಲಡಾಯುಧವನ
ವ್ವಳಿಸಿದನು ಪಾಂಚಾಲಸುತನೀ
ಗಳಹನನು ಬಿಡು ಭೀಮ ಕೊಡು ಸಾತ್ಯಕಿಯ ಖಂಡೆಯವ
ಎಲವೊ ಸಾತ್ಯಕಿ ಕೃಷ್ಣದೇವರಿ
ಗಳುಕಿ ಸೈರಿಸಿದರೆ ದೊಠಾರಿಸಿ
ಗೆಲನುಡಿವೆ ಹೆಡತಲೆಯುಲುಗಿವೆನು ನಿನ್ನ ನಾಲಗೆಯ ೨೭

ತನ್ನೊಳಿದ್ದವಗುಣವ ನೋಡದೆ
ಚುನ್ನವಾಡುವನಿದಿರನೆಲವೋ
ನಿನ್ನ ಹೋಲುವರಾರು ಬಾಹಿರ ಭಂಡರವನಿಯಲಿ
ನಿನ್ನೆ ಶಸ್ತ್ರವ ಬಿಸುಟ ಯೋಗ ವಿ
ಪನ್ನನನು ನೀನೇನ ಮಾಡಿದೆ
ನಿನ್ನ ಶೋಧಿಸಿ ಬಳಿಕ ಪರರನು ಹಳಿವುದೇನೆಂದ ೨೮

ಮಿಡುಕಿದನು ಸಾತ್ಯಕಿ ವೃಕೋದರ
ನೊಡೆಯುವಟಿದನು ಮತ್ತೆ ಪವನಜ
ಬಿಡು ನಿನಗೆ ನೃಪನಾಣೆ ಕುಡಿವೆನು ಖಳನ ಶೋಣಿತವ
ಬಿಡು ಬಿಡಕಟಾ ಭೀಮ ಸಾತ್ಯಕಿ
ಹಿಡಿಹಿಡಿಯ ಹಮ್ಮೈಸುವನು ಬಿಡಂ
ತೊಡಕಿ ನೋಡಲಿಯೆನುತ ಧೃಷ್ಟದ್ಯುಮ್ನನಳ್ಕಿರಿದ ೨೯

ಮುಳಿದು ಯಾದವ ಸೇನೆ ಕೈದುವ
ಸೆಳೆದುದಾ ಪಾಂಚಾಲನಾಯಕ
ರುಲಿದು ನಿಂದುದು ಕಂಡನಸುರಧ್ವಂಸಿ ನಸುನಗುತ
ಎಲೆಲೆ ಪಾಪಿಗಳಿರ ವೃಥಾ ತ
ಮ್ಮೊಳಗೆ ತೋಟಿ ಶರಾಗ್ನಿಯಿತ್ತಲು
ಮೊಳಗುತವೆ ಕೆಡೆಬೀಳಹೊಯ್ ಹೊಯ್ ಕುನ್ನಿಗಳನೆಂದ ೩೦

ಬೇರೆ ತಮಗೊಂದಾಳುತನವುರಿ
ಸೂರೆಗೊಳುತಿದೆ ಜಗವನಿತ್ತಲು
ಕೌರಿಡುವ ಕಾಲಾಗ್ನಿಯಿದೆ ಕಚ್ಚೊಗೆಯ ಕವಚದಲಿ
ತೋರಲಾಪರೆ ಬಾಹು ಸತ್ವವ
ತೋರಿರೈ ದಿಟ ಪಂಥದೋಲೆಯ
ಕಾರರಹಿರೆನುತಸುರರಿಪು ಗಜಬಜವ ನಿಲಿಸಿದನು ೩೧

ಇತ್ತ ಲೋಕದ ಕಂಗಳೆವೆಗಳು
ಕೆತ್ತವಳ್ಕಿರಿವುರಿಯ ಜಾಳಿಗೆ
ತೆತ್ತಿಸಿತು ಹರಿದಶ್ವ ಶತವನು ಶಿವ ಮಹಾದೇವ
ಕಿತ್ತು ಶರವನು ತೂಗಿ ಬಿಲ್ಲಿಗೆ
ತೆತ್ತಿಸಿದನುರೆ ಸೇದಿ ತೋರಿಹ
ತುತ್ತು ನಿನಗರಿಸೇನೆ ಹೋಗೆನುತೆಚ್ಚು ಬೊಬ್ಬಿರಿದ ೩೨

ಜಗದ ಹುಯ್ಯಲು ಜಡಿಯಲಭ್ರದ
ಲಗಿದು ಕೌರವಸೇನೆ ಹರುಷದ
ಸೊಗಸಿನಲಿ ಮೈಮರೆಯೆ ಕೃಷ್ಣಾದಿಗಳು ಕೈಮರೆಯೆ
ಹೊಗೆಯ ಹೊರಳಿಯ ಕಿಡಿಯ ಘಟ್ಟನ
ತಗೆದುರಿಯ ತೆಕ್ಕೆಯಲಿ ಧಗಧಗ
ಧಗಿಸಿ ಧಾಳಿಟ್ಟುದು ಮಹಾಶರವಹಿತ ಮೋಹರಕೆ ೩೩

ಹಾ ಮುರಾಂತಕ ಹಾ ಯುಧಿಷ್ಠಿರ
ಹಾ ಮರುತ್ಸುತ ಹಾ ಧನಂಜಯ
ಹಾ ಮಗನೆ ಹಾ ತಂದೆ ಹಾ ಒಡವುಟ್ಟಿದನೆಯೆನುತ
ಭೂಮಿ ತೆರೆಯಳೆ ಬಾಯನಕಟಕ
ಟಾ ಮುಹೋದಧಿ ದೂರವಿನ್ನೇ
ನೀ ಮಹಾಸ್ತ್ರಕೆ ಸಿಕ್ಕಿದೆವೆಯೆಂದೊರಲಿತರಿಸೇನೆ ೩೪

ಕಳವಳಿಸಿತರಿಸೇನೆ ಚೂಣಿಯ
ಕೊಳುಗಿಡಿಯ ಸೆಕೆ ತಾಗಿ ಸುಭಟಾ
ವಳಿಯ ಮೀಸೆಗಳುರಿಯೆ ನೆರೆ ಕಂದಿದವು ಮೋರೆಗಳು
ಬಲದ ಸುತ್ತಲು ಕಟ್ಟಿತುರಿ ಕೆಂ
ಬೆಳಗು ಕುಡಿದವು ಕರ್ಬೊಗೆಗಳ
ಗ್ಗಳದ ಬಾಣದ ಬಂದಿಯಲಿ ಸಿಲುಕಿತ್ತು ರಿಪುಸೇನೆ ೩೫

ಝುಳಕೆ ಘೀಳಿಟ್ಟೊರಲಿದವು ಕರಿ
ಕುಳ ತುರಂಗದ ಘಟ್ಟು ಖುರದಲಿ
ನೆಲನ ಹೊಯ್ದೊವ್ವಳಿಸಿದವು ರಾವುತರನೀಡಾಡಿ
ಬಲು ರಥವನಸಬಡಿದು ಸೂತನ
ನಿಳುಹಿ ಹಯವೋಡಿದವು ಮುಂ
ಮ್ಮುಳಿಸಿ ತನಿಗುದಿಗುದಿದು ಕೋಟಲೆಗೊಂಡುದರಿಸೇನೆ ೩೬

ವಾಯಕಂಜದಿರಂಜದಿರಿ ಫಡ
ಬಾಯ ಬಿಟ್ಟರೆ ಹೋಹುದೇ ನಿ
ಮ್ಮಾಯುಪಕೆ ಹೊಣೆ ತಾನು ಹೇಳಿತ ಮಾಡಿ ಬೇಗದಲಿ
ಆಯುಧಂಗಳ ಬಿಸುಟು ಕರಿ ರಥ
ಜಾಯಿಲಂಗಳನಿಳಿದು ಬದುಕುವು
ಪಾಯವೆಂದಸುರಾರಿ ಸಾರಿದನಂದು ಕೈ ನೆಗಹಿ ೩೭

ಕಳಿದ ಹೂವಿನ ತೊಡಬೆಯೋ ಕಂಸಿ
ದಲೆಯ ಬಿಟ್ಟಿಯ ಭಾರವೊ ನಿ
ರ್ಮಳನ ಚಿತ್ತದ ಖತಿಯೊ ದಾನವ್ಯಸನಿಯೊಡವೆಗಳೊ
ನಳಿನನಾಭನ ಮಾತು ಹಿಂಚಿತು
ಕಳಚಿದವು ಕೈದುಗಳು ಕೈಗಳ
ಲುಳಿವುಪಾಯದ ಜೋಡ ತೊಟ್ಟುದು ಪಾಂಡುಸುತಸೇನೆ ೩೮

ಬೀತ ಕೈದುಗಳಖಿಳದಳ ಸಂ
ಘಾತವನು ಬಾಣಾಗ್ನಿ ಬೆರಸಿತು
ಪೂತು ಭಂಡರಿರೆನುತ ಬಿಟ್ಟುದು ಬಾಣವರಿಭಟರ
ಆತನಾವೆಡೆ ಧರ್ಮಜನು ವಿ
ಖ್ಯಾತನರ್ಜುನನನಿಲಸುತ ಮಾ
ದ್ರೀತನುಜರೆಂದೆನುತ ಹೊಕ್ಕುದು ರಾಜ ಮೋಹರವ ೩೯

ಹರಿಯ ಬಯ್ಗುಳು ಬೆದರಿಸಲು ನೃಪ
ನಿರೆ ನಿರಾಯುಧನಾಗಿ ಮಾದ್ರೇ
ಯರು ಶಿಖಂಡಿ ಯುಯುತ್ಸು ಸಾತ್ಯಕಿ ಸೃಂಜಯಾದಿಗಳು
ಕರದ ಕದಪಿನ ತಳಿತ ಮುಸುಕಿನ
ಮುರಿದ ಮೋರೆಯ ಮುಂದೆ ಹರಹಿದ
ತರತರದ ಕೈದುಗಳ ಸುಭಟರ ಕಂಡುದಮಳಾಸ್ತ್ರ ೪೦

ಏಕೆ ನಾಚಿಕೆ ಧರ್ಮಹಾನಿ
ವ್ಯಾಕುಳತೆಯಿನ್ನೇಕೆ ವೈದಿಕ
ಲೌಕಿಕವದೇಗುವುವು ಜೀವವ್ರಯಕೆ ಕುಲವುಂಟೆ
ಏಕೆ ಭಯ ನಮಗಿನ್ನು ಕೈದುವ
ನೂಕಿದವರನು ಹೆಂಗುಸನು ತಾ
ಸೋಕಿದರೆ ಮುರಹರನ ಪದದಾಣೆಂದುದಮಳಾಸ್ತ್ರ ೪೧

ಇವರೊಳುಂಟೇ ಕೈದುವೊತ್ತವ
ರವರನರಸುವೆನೆನುತ ಬರಲಾ
ಪವನಸುತನನು ಧಟ್ಟಿಸಿದನಾ ದನುಜರಿಪು ಮುಳಿದು
ಅವನಿಗಿಳಿದೀಡಾಡಿ ಕಳೆ ಕೈ
ದುವನು ತಾ ಮೊದಲಾಗಿ ನಿಂದಂ
ದವನು ನೋಡೆನಲನಿಲಸುತ ನಸುನಗುತಲಿಂತೆಂದ ೪೨

ದೇಹ ಕೀರ್ತಿಗಳೊಳಗೆ ನಿಲುವುದು
ದೇಹವೊ ಕೀರ್ತಿಯೊ ಮುರಾಂತಕ
ಬೇಹಂದನು ಬೆಸಸಿದಡೆ ಮಾಡೆನು ಬಲ್ಲಿರೆನ್ನನುವ
ಗಾಹುಗತಕವಲುಳಿವ ಧರ್ಮ
ದ್ರೋಹಿ ತಾನಲ್ಲಿನ್ನು ನೋಡಾ
ಸಾಹಸವನೆನುತಿತ್ತ ಮುರಿದನು ಸರಳ ಸಮ್ಮುಖಕೆ ೪೩

ಘೂತು ಪಾಯಿಕು ಭೀಮ ನೆರೆದೀ
ಬೂತು ಬಲದಲಿ ವೀರ ನೀನಹೆ
ಯೇತಕಿವದಿರು ಗಂಡು ಜೋಹದ ಗರುವ ಸೂಳೆಯರು
ಸೋತಡೆಯು ಜಯ ನಿನ್ನದೆನುತ ವಿ
ಧೂತಧೂಮದಿ ಕಿಡಿಯ ಝಾಡಿಗ
ಳೀತನನು ಮುಸುಕಿದವು ಚುಂಬಿಸಿತಂಬು ಪವನಜನ ೪೪

ಗಿರಿಯ ಮುತ್ತಿದ ಮುಗಿಲವೊಲು ಹೊಗೆ
ಹೊರಳಿಗಟ್ಟಿತು ಮೇಲೆ ದಳ್ಳುರಿ
ಧರಧುರದಲೊಳಬೀಳುತಿದ್ದವು ಕಿಡಿಯ ಚೂಣಿಯಲಿ
ಉರಿಯೊಳದ್ದೆಲೆ ತಮ್ಮ ಹಾಯೆಂ
ದರಸ ಮೊದಲಾದಖಿಳಭೂಪರು
ಕರದ ಬಿರುವೊಯ್ಲುಗಳ ಬಾಯುವರೊರಲಿ ಹೊರಳಿದರು ೪೫

ವಾಯುಸುತ ಹಾಯೆನುತ ಫಲುಗುಣ
ಬಾಯಿ ಬಿಡೆ ಹರಿ ಜರೆದೆನಳುವನ
ಬಾಯ ನೋಡಾ ಬೇಗ ತೊಡು ತೊಡು ವರುಣ ಮಾರ್ಗಣವ
ಸಾಯಲರಿಯನು ಭೀಮನೆನೆ ನಾ
ರಾಯಣನ ನುಡಿಯಿಂದ ಮುನ್ನ ಜ
ಲಾಯತಾಸ್ತ್ರವನರ್ಜುನನು ಗಾಂಡಿವದಲುಗುಳಿಸಿದ ೪೬

ಹೊಗೆಯನೊದೆದೊಳಬಿದ್ದು ಕಿಡಿಗಳ
ನುಗಿದು ದಳ್ಳುರಿದುರುಗಲನು ತನಿ
ಬಿಗಿದು ಭೀಮನ ರಥದ ಸುತ್ತಲು ಸೂಸಿ ತೆರೆ ಮಸಗೆ
ಹಗೆಯನೆನಗಿದಿರೊಡ್ಡಿ ಜುಣುಗಲು
ಬಗೆದರೇ ಖಂಡೆಯದ ಮೊನೆಯಲಿ
ಮಗುಳಿಚುವರೇ ತನ್ನನೆನುತುರವಣಿಸಿತಮಳಾಸ್ತ್ರ ೪೭

ಉರುಬಿದವು ಕೇಸುರಿಗಳುದಕವ
ಸುರಿದುಪೊಣಗಿಲುಗಿಡಿಯ ಹಬ್ಬುಗೆ
ಹೊರಗೆ ಮಸಗಿತು ಮುಸುಕಿತುದಕದ ಬಾಣವಕ್ಕುಡಿಸೆ
ಒರತೆಯಾರಿತು ವರುಣಶರ ಬಾ
ಯರತು ನೀರಡಿಸಿದುದು ಭೀಮನ
ಸೆರಗ ಹಿಡಿದಳು ಮೃತ್ಯುವವನೀಪಾಲ ಕೇಳೆಂದ ೪೮

ಆವ ಶರವಿದ್ದೇಗುವುದು ಮೈ
ಗಾವನಸುರಾಂತಕನಲ್ಲೆ ತಾ
ನಾವ ವಹಿಲದೊಳುರಿಯೊಳಿಡೆಹಾಯ್ದನಿಲಜನ ತೆಗೆದ
ನಾವರಿಯೆವಾ ಪವನಜನ ಶ
ಸ್ತ್ರಾವಳಿಯನಾ ಫಲುಗುಣನ ಗಾಂ
ಡೀವವನು ಹರಿ ಸೆಳೆದುಕೊಂಡನು ಬಿಸುಟನವನಿಯಲಿ ೪೯

ಮುರಿಮುರಿದು ಕಬ್ಬೊಗೆಯ ಹೊದರಿನ
ಹೊರಳಿ ಹರೆದುದು ಸೂಸುಗಿಡಿಗಳ
ನೆರವಿ ನಸಿದುದು ನಿಮಿರ್ದ ಹೊಂಗರಿಯಂಬು ಹೊಳೆಹೊಳೆದು
ಮುರಹರನ ಪಾದಾರವಿಂದದ
ಹೊರೆಯೊಳಡಗಿತು ಹೋಯ್ತು ಭಯವು
ಬ್ಬರದೊಳಗೆ ಬೊಬ್ಬಿರಿದವವುರು ನಿಸ್ಸಾಳಕೋಟಿಗಳು ೫೦

ಜಗದುಸುರು ಪಸರಿಸಿತು ಹರುಷದ
ಹೊಗರು ಮಸಗಿತು ರಿಪುನೃಪರ ನಿ
ನ್ನಗಡು ಮಗನುತ್ಸಾಹವದ್ದುದು ಖೇದಪಂಕದಲಿ
ಹೊಗೆವ ಮೋರೆಯ ಕಯ್ಯುಗಲ್ಲದ
ಬಿಗಿದ ಬೆರಗಿನ ಖತಿಯೊಳುಸುರುವ
ನಗೆಯೊಳಶ್ವತ್ಥಾಮನಿದ್ದನು ಮೊಗದ ಮೋನದಲಿ ೫೧

ಏನು ಮಾಡುವೆನಿನ್ನು ಭಾಗ್ಯವಿ
ಹೀನನಕಟಾ ಕೌರವನು ಸುರ
ಧೇನು ನೆರೆ ಗೊಡ್ಡಾಯ್ತು ಸುರತರು ಕಾಡಮರನಾಯ್ತು
ಹಾನಿಯಿವದಿರಿಗೊಲಿದುದಾರಿ
ದ್ವೇನಹುದು ಪರದೈವದನುಸಂ
ಧಾನವತ್ತಲು ಸುಡಲೆನುತ ತಿರುಗಿದನು ಪಾಳೆಯಕೆ ೫೨

ಬಂದು ವೇದವ್ಯಾಸಮುನಿ ಗುರು
ನಂದನಂಗರುಹಿದನು ಪಾರ್ಥ ಮು
ಕುಂದರನು ಪೂರ್ವದಲಿ ನರನಾರಾಯಣಾಖ್ಯಯುದ
ಸಂದ ಋಷಿಗಳು ಭೂಮಿ ಭಾರವ
ನೊಂದುಪಾಯದಲಪಹರಿಸಲೈ
ತಂದ ಹದನನು ತಿಳುಹಿ ಬಂದನು ಫಲುಗುಣನ ಹೊರೆಗೆ ೫೩

ನರನ ಚಿತ್ತಗ್ಲಾನಿಯನು ಪರಿ
ಹರಿಸಿದನು ಶೂಲದಲಿ ಮುಂಕೊಂ
ಡರಿ ಬಲವನಿರಿದಾತನಾರೆನಲಿಂದುಧರನೆಂದು
ಹರನ ಕರುಣದ ಹದನನೀತಂ
ಗೊರೆದು ಶತರುದ್ರೀಯವನು ವಿ
ಸ್ತರಿಸಿ ಬಿಜಯಂಗೈದನಾ ಮುನಿಪತಿ ನಿಜಾಶ್ರಮಕೆ ೫೪

ಬಿಸುಟಿರು ಕೈದುಗಳೆಲ್ಲವನು ಕೈ
ವಶವ ಮಾಡಿತು ಸೇನೆ ಲಜ್ಜಾ
ರಸಕೆ ಗುರಿಯಾಯ್ತೊಮ್ಮೆ ಮರಳಿದು ಹರುಷಮಯರಸಕೆ
ಮುಸುಕುದಲೆಯಲಿ ಮುರಿದುದದು ಭಯ
ರಸದ ರಹಿಯಲಿ ತಿರುಗಿತಿದು ರವಿ
ಮುಸುಡ ತಿರುಹಿ ವಿರಾಗದಲಿ ಬೀಳ್ಕೊಟ್ಟನಂಬರವ ೫೫

ಆವ ಶರದಲಿ ಕೊರತೆ ನಿನ್ನವ
ರಾವ ಬಲದಲಿ ಕುಂದು ಭುವನದೊ
ಳಾವನೈ ಸಮಜೋಳಿ ನಿನ್ನರಮನೆಯ ಸುಭಟರಿಗೆ
ಆವನಿದ್ದೇನಹುದು ಜಗದಧಿ
ದೈವದಲಿ ಸೆಣಸಿದಿರಿ ಪಾಂಡವ
ಜೀವಿಯೆಂದರಿದರಿದು ಗದುಗಿನ ವೀರನಾರಯಣ ೫೬

ಇತಿ ಶ್ರೀಮದಚಿಂತ್ಯಮಹಿಮ ಗದುಗು ವೀರನಾರಾಯಣ ಚರಣಾರವಿಂದ
ಮಕರಂದ ಮಧುಪಾನ ಪರಿಪುಷ್ಟ ವಚಃಷಟ್ಪದೀನಿಕಾಯ
ಶ್ರೀಮತ್ಕುಮಾರವ್ಯಾಸ ಯೋಗೀಂದ್ರ ವಿರಚಿತಮಪ್ಪ
ಕರ್ಣಾಟ ಭಾರತ ಕಥಾಮಂಜರಿಯೊಳ್
ದ್ರೋಣಪರ್ವಂ ಸಮಾಪ್ತಮಾದುದು

# ಕರ್ಣ ಪರ್ವ

## ಮೊದಲನೆಯ ಸಂಧಿ

ಸೂ. ರಾಯ ಕಟಕಾಚಾರ್ಯನಾ ತರು
ಪಾಯ ಸೇನಾಪಟ್ಟವನು ರಾ
ಧೇಯನಲಿ ರಚಿಸಿದನು ಮುದದಲಿ ಕೌರವರ ರಾಯ

ಕೇಳು ಜನಮೇಜಯ ಧರಿತ್ರೀ
ಪಾಲ ತೆಗೆದವು ಬಲವೆರಡು ನಿಜ
ಪಾಳಯಕೆ ಪರಿತೋಷ ಖೇದಸ್ತಿಮಿತವಿಕ್ರಮರು
ಕೋಲಗುರುವಿನ ಮರಣವಾರ್ತಾ
ಕಾಲಸರ್ಪನ ತಂದು ಸಂಜಯ
ಹೇಳಿಗೆಯನೀಡಾಡಿದನು ಧೃತರಾಷ್ಟ್ರನಿದಿರಿನಲಿ ೧

ಬೆದರಿತಾಯಾಸ್ಥಾನ ಧಿಗಿಲೆಂ
ದುದು ಧರಾಧೀಶ್ವರನ ತಂದೆಯ
ಹೃದಯದಲಿ ಹುರುಳೇನು ಬಳಿಕುಳಿದವರ ಪೋರೆಗಳ
ಕದಡಿತಂತಃಕರಣವರಸನ
ಕದಪು ಕೈಯಲಿ ಕೀಲಿಸಿತು ಹೇ
ಳಿದನು ಸಂಜಯ ಮತ್ತೆ ಮೇಲಣ ರಣದ ವಾರ್ತೆಯನು ೨

ಗುಡಿಯ ಕಟ್ಟಿಸು ಜೀಯ ಬರತುದು
ಕಡಲು ಮುರಿದುದು ಮೇರು ತಿರುಗಿತು
ಪೊಡವಿ ಬಿದ್ದುದು ಭಾನುಮಂಡಲವಹಹ ವಿತಳದಲಿ
ಮಡಿದುದ್ಗೆ ನಿನ್ನಾನೆ ನಿನ್ನು
ಗ್ಗಡದ ಭಟ ಬೀಳ್ಕೊಂಡನ್ನೆ ಕಡಿ
ವಡೆದನ್ನೆ ಕಲಿ ಕರ್ಣನೊಸಗೆಯ ಮಾಡಹೇಳೆಂದ ೩

ಮೊದಲಲಿದ್ದುದು ಜೀವಕಳೆ ಹೃದ
ಯದಲಿ ಹೃದಯವನೊಡೆದು ಮಿಗೆ ಕಂ
ಠದಲಿ ಕವಿದುದು ಮಂಚದಲಿ ಮೈಮರೆದು ಮಲಗಿದನು
ಕೆದರಿತಲ್ಲಿಯದಲ್ಲಿ ರಾಯನ
ಹದನನರಿದೊಳಗೊಳಗೆ ರಾಣಿಯ
ರೊದರಲಂತಃಪುರದಲುಕ್ಕಿತು ಶೋಕರಸ ಜಲಧಿ ೪

ಬಾಯ ಬಸುರಿನ ನೊಸಲ ಹೊಯ್ಲಿನ
ರಾಯನರಸಿಯರರಸನಿದಿರಲಿ
ಹಾಯಿದರು ಭಿತ್ತಿಗಳನೊದರಿದರೊಡನೆ ದೆಸೆಯೊದರೆ
ರಾಯನಾವೆಡೆ ಜೀಯ ಕಲಿ ರಾ
ಧೇಯನಾವೆಡೆ ನೂರು ಮಕ್ಕಳು
ಬೀಯವಾದರೆ ಮಾವ ಎಂದರು ಸೊಸೆಯರಡಗೆಡೆದು ೫

ರವಕುಳವ ನಾನೇನ ಹೇಳುವೆ
ನವನಿಪತಿಯಾ ಕರ್ಣ ಮೊದಲಾ
ದವರ ರಾಣೀವಾಸ ಬಹಳಾಕ್ರಂದನಧ್ವನಿಯ
ಕವಿದುದೊಳಸೂರೆಗರು ಕೋಟೆಯ
ತವಕಿಗರು ಗುಜುಗುಜಿಸೆ ಬಿಗಿದವು
ಭವನ ಭವನ ಕವಾಟ ತತಿಗಾಳಾಯ್ತು ಗಜನಗರ ೬

ನೆರೆದುದಲ್ಲಿಯದಲ್ಲಿ ಸೂರೆಗೆ
ಹರಿದುದಲ್ಲಿಯದಲ್ಲಿ ಮನ ಮು
ತ್ಸರದ ಜಗಳಕೆ ಸೂಳುಬಂಟರು ಹೊಯ್ದರೊಳಗೊಳಗೆ
ಅರಮನೆಯಲಾ ಬೊಬ್ಬೆ ಹಸ್ತಿನ
ಪುರದಲೀ ಬೊಬ್ಬಾಟವಿನ್ನುಳಿ
ದರಸುಗಳ ಪಾಡಾವುದೆಂದನು ಮುನಿ ನೃಪಾಲಂಗೆ ೭

ಸೂರೆ ಹೋದುದು ನಗರಿ ಖಳರಿಗೆ
ಮಾರಿದರು ಪಟ್ಟಣವನಕಟಾ
ಕಾರುಮದ್ದಿಗೆ ಹೋಹುದೇ ಕೈಮುಸಕವವನಿಪನ
ನೂರುಮಕ್ಕಳನಿಕ್ಕಿ ಸಾಧಿಸ
ಲಾರನೇ ಜಯಸಿರಿಯನೆಂದುರೆ
ಮೀರಿ ನುಡಿದುದು ಮಂತ್ರಿಗಳು ಧೃತರಾಷ್ಟ್ರನಿದಿರಿನಲಿ ೮

ಎರಡು ಗಲ್ಲದ ನಯನವಾರಿಯ
ಹರಿಕುಣಿಯ ನಿಲಿಸಿದನು ಸಂಜಯ
ನರಸನನು ಕುಳ್ಳಿರಿಸಿ ಬೆನ್ನಿಗೆ ಚಾಚಿದನು ಮಲಗ
ಅರಸ ಹದುಳಿಸು ನಿನ್ನ ಸೊಸೆಯರ
ಕರೆದು ಸಂತೈಸಕಟ ಹಸ್ತಿನ
ಪುರದ ಗಾವಳಿಗಜಬಜಕೆ ಡಂಗುರವ ಹೊಯ್ಸೆಂದ ೯

ಬೀದಿ ಬೀದಿಗಳೊಳಗೆ ಡಂಗುರ
ನಾದವೆಸೆದವು ಕೇರಿ ಕೇರಿಗೆ
ಕೈದುಕಾರರು ನೆರೆದು ನಿಂದರು ಸೂರೆಗರ ಕೆಡಹಿ
ಸುಯ್ದು ನಡಿಗಡಿಗೊಲೆದೊಲೆದು ಪರಿ
ಖೇದಶೋಕಜ್ವಲನ ಜನಿತ
ಸ್ವೇದ ಸಲಿಲ ಸ್ತಿಮಿತಕಾಯನು ರಾಯನಿಂತೆಂದ ೧೦

ಹೇಳು ಸಂಜಯ ನಮ್ಮ ಭಾಗ್ಯದ
ಶಾಳಿವನ ಫಲವಾಯ್ತಲಾ ಕೈ
ಮೇಳವಿಸಿದನೆ ಕರ್ಣನಮರಸ್ತ್ರೀ ಕದಂಬದಲಿ
ಹೇಳು ಹೇಳೆನ್ನಾಣೆ ಮಾತಿನ
ಜಾಳಿಗೆಯ ಮರೆ ಬೇಡ ಕುರುಪತಿ
ಕಾಳಿಗದೊಳಸ್ತಮಿಸಿದನೆ ನುಡಿಯಂಜಬೇಡೆಂದ ೧೧

ಸಾವೆನಾನೆಂದಂಜದಿರು ಕ
ರ್ಣಾವಸಾನವ ಕೇಳಿ ತನ್ನಯ
ಜೀವವಿದಲಾ ದೇಹದಲಿ ಬೇರಿನ್ನು ಕೆಲಬರಲಿ
ಸಾವನೇ ತಾನಕಟ ಕೌರವ
ಜೀವಿಸಲಿ ಮೇಣಳಿಯಲೆಮಗಿ
ನ್ನಾವ ತೊಡಕಿಲ್ಲಿನ್ನು ವಜ್ರಶರೀರ ತಾನೆಂದ ೧೨

ಘಾಯವಡೆದನು ಭೀಷ್ಮ ಬಳಿಕಿನೊ
ಳಾಯುಧದ ಗುರು ತೊಡಬೆಗಳಚಿದ
ನೀಯವಸ್ಥೆಗೆ ನಮ್ಮ ತಂದನು ಭಾನುನಂದನನು
ಸಾಯನೇ ಮಗನಿನ್ನು ಸಾಕಾ
ನಾಯ ನುಡಿಯಂತಿರಲಿ ಕರ್ಣನ
ಗಾಯಿತೇ ಕಡೆ ಶೋಕವನು ವಿಸ್ತರಿಸಿ ಹೇಳೆಂದ ೧೩

ಸರಳ ಕೊರತೆಯೊ ಸಾರಥಿಯ ಮ
ತ್ಸರವೊ ರಥದ ವಿಘಾತಿಯೋ ದು
ರ್ಧರ ಧನುರ್ಭಂಗವೊ ಮಹಾಸ್ತ್ರವ್ಯಥೆಯೊ ರವಿಸುತನ
ಹುರುಳುಗೆಡಿಸಿದರೆಂತು ರಿಪು ರಾ
ಯರಿಗೆ ನಾವ್ ಗೋಚರವೆ ದುರಿತೋ
ತ್ಕರುಷವೈಸಲೆ ನಮ್ಮ ಕೆಡಿಸಿತು ಶಿವಶಿವಾ ಎಂದ ೧೪

ಹರಹುಗೆಟ್ಟುದು ತೇರು ಸಾರಥಿ
ಹುರುಳುಗೆಡಿಸಿಯೆ ನುಡಿದನಂಬಿನ
ಕೊರತೆ ತಾ ಮುನ್ನಾಯ್ತು ದೈವದ್ರೋಹಿಗಳು ನಿಮಗೆ
ಅರಿವಿಜಯವೆಲ್ಲಿಯದು ನೀವ್ ಮನ
ಬರಡರೈ ನಿಮ್ಮನ್ವಯವ ಸಂ
ಹರಿಸಿದಿರಿ ಸಾಕೆಂದು ಸಂಜಯ ತೂಗಿದನು ಶಿರವ ೧೫

ಸುರ ನರೋರಗರರಿಯೆ ನಾವ್ ಬಾ
ಹಿರರು ಭಂಗಿಸಬೇಡ ಸಾಕಂ
ತಿರಲಿ ಕರ್ಣಾಹವದ ಕರ್ಣಾಮೃತವ ಸುರಿ ಸಾಕು
ಅರಿಗಳಭ್ಯುದಯವನು ನಮ್ಮಪ
ಸರಣವನು ಕಿವಿಯಾರೆ ಕೇಳುವ
ಪರಮ ಸುಕೃತಿಗಳಾವು ನೀ ಹೇಳಂಜಬೇಡೆಂದ ೧೬

ಹೇಳಿದನು ಬಳಿಕೆರಡು ಥಟ್ಟಿನೊ
ಳಾಳು ಕುದುರೆಯು ಗಜ ರಥವ ಭೂ
ಪಾಲರಳಿದುಳಿದವರ ಲೆಕ್ಕವನೈದೆ ವಿಸ್ತರಿಸಿ
ಕೇಳು ನಿನ್ನಾತನ ವಿನೋದದ
ಖೂಳ ಬೋಳೆಯತನದಲೊದಗಿದ
ಬಾಳಿಕೆಯ ಬೀಸರವನೆಂದನು ಸಂಜಯನು ನಗುತ ೧೭

ತೊಡರ ತೆಗೆದರು ಕೈಯಡಾಯ್ದವ
ಜಡಿಯಲಮ್ಮರು ಹೊತ್ತ ದುಗುಡದ
ನಿಡು ಮುಸುಕುಗಳ ಬಿಗಿದ ಬೆರಗಿನ ಬಿಟ್ಟ ಕಣ್ಣುಗಳ
ಒಡೆಯನಿದಿರಲಿ ಕುಳ್ಳಿರದೆ ಕೆಲ
ಕಡೆಯ ಕೈದೀವಿಗೆಯ ಮರೆಯಲಿ
ಮಿಡುಕದಿರ್ದುದು ರಾಯನೋಲಗದೊಳಗೆ ಪರಿವಾರ ೧೮

ಸಾಲ ಸಾವಿರ ದೀವಿಗೆಯ ಹರಿ
ದಾಳಿಗಳುಕದೆ ನೃಪರ ಮೋರೆಗ
ಳೋಳಿಗಳ ನೆರೆ ಹೊದ್ದಿ ಕತ್ತಲೆ ನಿಂದುದಲ್ಲಲ್ಲಿ
ಹೇಳಲೇನದ ಬಹಳ ದುಗುಡದ
ಪಾಳೆಯವೊ ನಿನ್ನಾತನೋಲಗ
ಶಾಲೆಯೋ ನಾವರಿಯೆವೆಂದನು ಸಂಜಯನು ನೃಪಗೆ ೧೯

ಎಲೆ ಮಿಡುಂಕದಾಸ್ಥಾನ ವೀಳೆಯ
ದೆಲೆಯ ಮಡಿಸುವ ರಭಸವಿಲ್ಲೊಳ
ಗೊಳಗೆ ಸನ್ನೆಗಳೋರೆಗೊರಳುಗಳೌಡುಗಚ್ಚುಗಳ
ಹಳಸಿದಗ್ಗಳಿಕೆಗಳ ಮಿಸಲು
ಗಳೆದ ಬಿರುದಿನ ಮಾನಭಂಗದ
ಕಳವಳದ ಕನಸುಗಳಲಿದ್ದುದು ರಾಯನಾಸ್ಥಾನ ೨೦

ಕೆತ್ತು ಕೊಂಡಿರಲೇಕೆ ನೀವಿ
ನ್ನುತ್ತರಾಯಿಗಳೆಮ್ಮ ಭಾಗ್ಯದ
ಬಿತ್ತು ಹುರಿದರೆ ಬಿರುದ ಭಟರಿದ್ದೇನಮಾಡುವರು
ಮೆತ್ತಿದಂಬಿನ ಮೆಯ್ಯ ಭೀಷ್ಮನು
ಹೊತ್ತ ಕೈದುವ ಬಿಸುಟ ಕಳಶಜ
ನುತ್ತಮಿಕೆಗಳ ಮೆರೆದರೆಂದನು ಕೌರವರ ರಾಯ ೨೧

ಬಿಗಿದ ತಿಮಿರದ ಕೆಚ್ಚು ಸೂರ್ಯನ
ಸೊಗಡು ಹೊಯ್ದರೆ ಮುರಿಯದೇ ಕಾ
ಳೆಗಕೆ ಕರ್ಣನ ಕೈದು ಭಂಡಾರಿಸಿದುದಿನ್ನಬರ
ತೆಗೆಸುವೆವು ನಾಳಿನಲಿ ನಿಮ್ಮಯ
ಮೊಗದ ದುಗುಡದ ದಡ್ಡಿಯನು ಮೈ
ದೆಗೆಯದಿರಿ ಕಲಿಯಾಗಿಯೆಂದನು ನೃಪತಿ ಸುಭಟರಿಗೆ ೨೨

ಜೇಯ ಸಂಶಯವಿಲ್ಲ ಗುರು ಗಾಂ
ಗೇಯರಳುಕಿದರೇನು ಕಲಿ ರಾ
ಧೇಯನೇ ವಜ್ರಾಂಗಿಯಲ್ಲಾ ನಮ್ಮ ಮೋಹರಕೆ
ರಾಯ ನೀ ಪತಿಕರಿಸಿದರೆ ಚ
ಕ್ರಾಯುಧನ ಚಾತುರ್ಯ ಕೊಳ್ಳದು
ಜೇಯ ಕರ್ಣನ ಮುಂದೆಯೆಂದುದು ನಿಖಿಳ ಪರಿವಾರ ೨೩

ಬೇರೆ ತನಗಗ್ಗಳಿಕೆಯೋಲೆಯ
ಕಾರತನವೇ ರಾಯ ಮನವೊಲಿ
ದೇರಿಸಿದರೇರುವುದು ದೊರೆ ಮನಮುರಿಯೆ ಕುಂದುವುದು
ತೋರಿ ನುಡಿದರೆ ಭೀಷ್ಮ ದ್ರೋಣರು
ಜಾರಿಸಿದ ರಣವೆಮಗೆ ಸದರವೆ
ದೂರುವವರಾವಲ್ಲವೆಂದನು ಭಾನುಸುತ ನಗುತ ೨೪

ಸಾಕದಂತಿರಲಿನ್ನು ಥಟ್ಟಿಂ
ಗಾಕೆವಾಳರ ಮಾಡು ಸಾಕಾ
ಸ್ತೋಕಪುಣ್ಯರ ಮಾತದೇತಕೆ ಗುರು ನದೀಸುತರ
ಸಾಕಿ ಸಲಹಿದೆ ಕರ್ಣನನು ಹುರು
ಡೇಕೆ ಗುಣದೊಳಗೀತ ಸೇನಾ
ನೀಕಭಾರದ ಹೊರಿಗೆಗಹನೆಂದನು ಕೃಪಾಚಾರ್ಯ ೨೫

ಎಮ್ಮ ತೋರಿಸಬೇಡ ಸುಖದಲಿ
ನಿಮ್ಮ ಚಿತ್ತಕೆ ಬಹುದ ಮಾಡುವು
ದೆಮ್ಮ ಹೃದಯ ವ್ಯಥೆಯ ನಾವಿನ್ನಾಡಿ ಫಲವೇನು
ಎಮ್ಮ ಪುಣ್ಯದ ಬೆಳೆಗಳೊಣಗಿದ
ಡಮ್ಮ ಮಾಡುವುದೇನು ಕರ್ಣನು
ನಮ್ಮ ದಳವಾಯೆಂದನಶ್ವತ್ಥಾಮನರಸಂಗೆ ೨೬

ಆ ಮಹಾರಥ ಭೀಷ್ಮನೇ ಸ್ವೇ
ಚ್ಛಾಮರಣಿಯಾಚಾರ್ಯಚಾಪ
ವ್ಯೋಮಕೇಶನು ಹೊಕ್ಕು ಕಾಣರು ಹಗೆಗೆ ಹರಿವುಗಳ
ಆ ಮಹಾ ನಾರಾಯಣಾಸ್ತ್ರದ
ಸೀಮೆ ಸೀದುದು ಮಿಕ್ಕ ಭಟರು
ದ್ದಾಮರೇ ಸಾಕಿನ್ನು ಸೇನಾಪತಿಯ ಮಾಡೆಂದ ೨೭

ಕರಸಿದನು ಭೂಸುರರನೌದುಂ
ಬರದ ಮಣೆ ಮಡಿವರ್ಗ ದೂರ್ವಾಂ
ಕುರ ಸಿತಾಕ್ಷತ ಧವಳಸರ್ಷಪ ವರಫಲಾವಳಿಯ
ತರಿಸಿದನು ಹೊಂಗಳಶ ತತಿಯಲಿ
ವರ ನದೀವಾರಿಗಳನಾಡಂ
ಬರದ ಲಗ್ಗೆಯಲೊದರಿದವು ನಿಸ್ಸಾಳಕೋಟಿಗಳು ೨೮

ವಿರಚಿಸಿತು ಪಟ್ಟಾಭಿಷೇಕೋ
ತ್ಕರುಷ ಮಂತ್ರಾಕ್ಷತೆಯ ಮಳೆಗಳ
ಕರೆದರವನೀಸುರರು ಜಯರವಮೇಘಘೋಷದಲಿ
ಗುರುಸುತಾದಿ ಮಹಾಪ್ರಧಾನರು
ದರುಶನವ ನೀಡಿದರು ಕರ್ಣನ
ಬಿರುದಿನುಬ್ಬಟೆಲಹರಿ ಮಸಗಿತು ವಂದಿಜಲಧಿಯಲಿ ೨೯

ಅರಳಿತರಸನ ವದನ ಶಕುನಿಯ
ಹರುಷಮಿಗೆ ದುಶ್ಶಾಸನಂಗು
ಬ್ಬರಿಸೆ ರೋಮಾವಳಿ ವಿಕರ್ಣಾದಿಗಳ ಮನ ನಲಿಯೆ
ಗುರುಜ ಕೃಪ ಕೃತವರ್ಮ ಶಲ್ಯಾ
ದ್ಯರಿಗೆ ಹೂಸಕದೊಲಹು ಮಿಗಿಲಾ
ಯ್ತರುಳು ಕರ್ಣಗೆ ಪಟ್ಟವಾಯಿತು ಭೂಪ ಕೇಳೆಂದ ೩೦

## ಎರಡನೆಯ ಸಂಧಿ

ಸೂ. ಭೀಮ ವಿಕ್ರಮಕುರುಬಲದೊಳು
ದ್ದಾಮ ಕರ್ಣಾಹವದೊಳಗ್ಗದ
ಕ್ಷೇಮಧೂರ್ತಿ ನೃಪಾಲಕನ ಕೆಡಹಿದನು ಕಲಿಭೀಮ

ಮಗನು ದಳಪತಿಯಾದ ಗಡ ಕಾ
ಳೆಗವ ನೋಡುವೆನೆಂಬವೊಲು ಜಗ
ದಗಲದಲಿ ನೆರೆ ಕಡಿತವಿಕ್ಕಿತು ತಿಮಿರವನದೊಳಗೆ
ಹೊಗರು ಕುವಳಯಕಳಿಯೆ ಸೊಂಪಿನ
ನಗೆ ಸರೋರುಹಕೊಗೆಯೆ ವಿರಹದ
ಧಗೆ ರಥಾಂಗದೊಳಳಿಯೆ ರವಿಯುದಯಾಚಳಕೆ ಬಂದ ೧

ಸೂಳು ಮಿಗಲಳ್ಳಿರಿದವುರು ನಿ
ಸ್ಸಾಳಕೋಟಿಗಳುದಯದಲಿ ದಿಗು
ಜಾಲ ಜರಿಯಲು ಝಾಡಿಗೆದರುವ ಗೌರುಗಹಳೆಗಳ
ತೂಳುವರೆಗಳ ರಾಯ ಗಿಡಿಗನ
ಘೋಳ ಘೋರದ ಘೋಷವವನಿಯ
ಸೀಳೆ ನಡೆದುದು ಸೇನೆ ರವಿನಂದನನ ನೇಮದಲಿ ೨

ಮೋಹರಿಸಿತಿದು ನಡೆದು ಮಂಕರ
ವ್ಯೂಹದಲಿ ಬಳಿಕರ್ಧಚಂದ್ರ
ವ್ಯೂಹದಲಿ ಬಂದೊಡ್ಡಿ ನಿಂದುದು ಪಾಂಡುಸುತಸೇನೆ
ಮೋಹರಿಸಲೊಡೆವೆರಸಿ ಹೊಯ್ದರು
ಗಾಹುಗತಕವನುಳಿದು ಚೂಣಿಯ
ಸಾಹಸಿಗರು ಸನಾಮರೊದಗಿದರೆರಡು ಥಟ್ಟಿನಲಿ ೩

ಹೊಯ್ದು ಮುಗ್ಗಿತು ಭಟರು ವೆಗ್ಗಳ
ಕೈದುಕಾರರು ತಲೆಗೆ ಸಂದರು
ಮೈದೆಗೆಯದೊಡವೆರಸಿ ಹೊಕ್ಕರು ಬೇಹಬೇಹವರು
ಕೊಯ್ದ ಕೊರಳಿನ ಕೊರೆದ ತೋಳಿನ
ಹಾಯ್ದ ಮೂಳೆಯ ಸುರಿವ ಕರುಳಿನ
ಲೆಯ್ದೆ ಪಡೆಗೇರಾಯ್ತು ಚೂಣಿಯ ಚಾತುರಂಗದಲಿ ೪

ಇಂದು ಬರಹೇಳರ್ಜುನನ ರಣ
ವಿಂದಲೇ ಭೀಮಂಗೆ ಮನದಲಿ
ಕಂದುಕಸರಿಕೆ ಬೇಡ ಕಾದಲಿ ಧರ್ಮನಂದನನು
ಹಿಂದೆ ನಂಬಿಸಿ ಭೀಷ್ಮಗುರುವನು
ಕೊಂದ ಗೆಲುವಿನಲುಬ್ಬ ಬೇಡೆಮ
ಗಿಂದು ದಳವಾಯ್ ಕರ್ಣನೆಂದುದು ಭಟರು ಬೊಬ್ಬಿರಿದು ೫

ತೇರು ಬಿಟ್ಟವು ಸೂಠಿಯಲಿ ಜ
ಜ್ಝಾರ ರಾವ್ತರು ವಾಘೆ ಸರಿಸದ
ಲೇರಿದರು ಕಾರ್ಮುಗಿಲ ಬಲವೆನೆ ಕವಿದವಾನೆಗಳು
ಆರಿದರೆ ನೆಲ ಬಿರಿಯೆ ಬೆರಸಿತು
ಪೌರಕರು ಸಬಳಿಗರು ಬಿಲ್ಲಿನ
ಭೂರಿ ಭಟರಳ್ಳಿರಿದು ಕೆಣಕಿತು ಕೆದರಿ ರಿಪುಬಲವ ೬

ಮುರಿಯುದಹಿತರ ಥಟ್ಟು ನಮ್ಮದು
ತೆರಹುಗೊಡದೌಂಕಿತ್ತು ದೊರೆಗಳು
ಹೊರಗೆ ಲಗ್ಗೆಯ ಮಾಡಿ ತೋರಿದರೊಡನೆ ಪಡಿಬಲವ
ಉರುಬಿದರು ವೃಷಸೇನ ಸೌಬಲ
ಗುರುಜ ಕೃಪ ಕೃತವರ್ಮ ದುರ್ಮುಖ
ವರ ವಿಕರ್ಣ ಕ್ಷೇಮಧೂರ್ತಿ ಬೃಹದ್ರಥಾದಿಗಳು ೭

ಸೂತಸುತ ದಳಪತಿಯೆ ಘಡ ಮು
ಯ್ಯಾಂತರೇ ಮುಂಬಿಗರು ಬಿರುದಿನ
ಬೂತುಗಳ ಬೊಬ್ಬಾಟ ಬಿಡದೇ ಕಂಡು ಕಾಣರಲ
ಸೋತ ಸಮರದ ಕೇಣಿಕಾರರು
ಕೂತರೋ ಜಯಸಿರಿಗೆ ಪೊಯ್‌ಹೊ
ಯ್ಯಾತಗಳನೆನುತೇರಿದರು ಪಾಂಡವ ಮಹಾರಥರು ೮

ನೂಕಿತೊಂದೇ ವಾಘೆಯಲಿ ರಥ
ನಾಕು ಸಾವಿರ ಬಲುಗುದುರೆ ಹದಿ
ನಾಕುಸಾವಿರ ನೂರು ಕರಿಘಟೆ ಲಕ್ಕ ಪಾಯದಳ
ಜೋಕೆ ಜವಗೆಡೆ ಮುರಿವಡೆದು ಬಲ
ದಾಕೆವಾಳರು ಸರಿಯೆ ಸೋಲದ
ನೂಕು ನೂಕಾಯಿತ್ತು ಕೌರವರಾಯ ಸೇನೆಯಲಿ ೯

ಘಡಘಡೆತ್ತಲು ಸ್ವಾಮಿದ್ರೋಹರು
ಸಿಡಿದರೋ ನಿಜಕುಲದ ಬೇರ್ಗಳ
ಕಡಿದರೋ ಕುರುಬಲದ ಕಾಹಿನ ಪಟ್ಟದಾನೆಗಳು
ಕೊಡನ ಫಣಿಯಿದು ಪಾಂಡವರ ಬಲ
ತುಡುಕಬಹುದೇ ಎನುತ ಸೇನೆಯ
ತಡೆದು ನಿಂದನು ಕ್ಷೇಮಧೂರ್ತಿ ಸಹಸ್ರಗಜಸಹಿತ ೧೦

ತರಿಸಿ ಲೋಹದ ಜತ್ತರಟ್ಟವ
ಪರಹಿದರು ಸೂಲಿಗೆಯ ಬಂಡಿಯ
ನಿರಿಸಿದರು ಕೆಲಬಲದ ಕಡೆಯಲಿ ಸಬಳಿಗರ ನಿಲಿಸಿ
ತುರಗ ರಥ ಬಲ್ಲಾಳನೊತ್ತಾ
ಗಿರಿಸಿ ಲಗ್ಗೆಯ ಲಹರಿಯಲಿ ಮೋ
ಹರಿಸಿದರು ಪಾಂಚಾಲ ಕೈಕೆಯರವರ ಥಟ್ಟಿನಲಿ ೧೧

ನೀಡಿ ಬರಿಕೈಗಳಲಿ ಸೆಳೆದೀ
ಡಾಡಿದವು ಬಂಡಿಗಳನೌಕಿದ
ಕೋಡ ಕೈಯಲಿ ಸಬಳಿಗರ ಸೀಳಿದವು ದೆಸೆದೆಸೆಗೆ
ಹೂಡು ಜಂತ್ರದ ಜತ್ತರಟ್ಟವ
ನಾಡಲೇತಕೆ ಹಿಂದಣೊಡ್ಡನು
ಝಾಡಿಸಿದವೀ ಕ್ಷೇಮಧೂರ್ತಿ ನೃಪಾಲನಾನೆಗಳು ೧೨

ರಾಯದಳ ಕಳವಳಿಸೆ ಗಜಘಟೆ
ಘಾಯಘಾಯಕೆ ನೆಲನ ಕೊಂಡವು
ಹಾಯಿದವು ರಥ ಹಯವ ಸೆಳೆದವು ಹೊದರ ಹರೆಗಡಿದು
ನಾಯಕರ ಕೆಡೆನುಡಿವ ಬೈಗುಳ
ಬಾಯ ಬೊಬ್ಬೆಯ ಕೈಯ ಹೊಯ್ಲುಗಳ
ದಾಯಿಗರಲೇ ಎನುತ ಮೂವಲಿಸಿದನು ತಮ್ಮೊಳಗೆ ೧೩

ಕೆದರಿತರನೆಲೆ ರಾಯ ಥಟ್ಟನು
ಕೆದರಿಸಿದವಾನೆಗಳು ಹಗೆಗಳ
ಮದಮುಖಕೆ ಮಾರೊಡ್ಡ ಮೆರೆದರೆ ಪೂತುರೇ ಎನುತ
ತುದಿವೆರಳ ತುಟಿಯುಬ್ಬರಕೆ ಗಜ
ಬೆದರೆ ಗಜರೋಹಕರ ಗರ್ಜಿಸಿ
ಗದೆಯ ತಿರುಹುತ ಹೊಕ್ಕನಿವರೊಡ್ಡಿನಲಿ ಕಲಿಭೀಮ ೧೪

ಗರುಡನೂರವರೆರೆವರೇ ನಾ
ಗರಿಗೆ ತನಿಯನು ಭೀಮಸೇನನ
ಬಿರುದಿನೋಲೆಯಕಾರರೇನಂಜುವರೆ ಮಾರ್ಬಲಕೆ
ಕರಿಘಟೆಯ ಕೆದರಿದರು ಕೇಣದ
ಧುರವ ಬಲ್ಲರೆ ಗಜದ ಕರುಳಲಿ
ಕರುಳ ತೊಡಕಲು ಬಿದ್ದುವೈಸಾವಿರ ಮಹಾರಥರು ೧೫

ಮುಂಗುಡಿಯ ಮುರಿದೌಕಿ ಭೀಮಂ
ಗಂಘವಿಸಿದನು ಕ್ಷೇಮಧೂರ್ತಿ ಮ
ತಂಗಜದ ಮೇಲೆಸುತ ಬಲು ನಾರಾಚ ಸೋನೆಯಲಿ
ಅಂಘವಣೆಯಹುದೋ ಮಹಾದೇ
ವಂಗೆ ನೂಕದು ಪೂತು ಮಝರೆಯ
ಭಂಗನೋ ನೀನೆನುತ ಮೂದಲಿಸಿದನು ಕಲಿಭೀಮ ೧೬

ಮೇಲುವಾಯ್ದಾರೋಹಕರ ಹಿಂ
ಗಾಲ ಹಿಡಿದೀಡಾಡಿ ರಿಪುಗಜ
ಜಾಲದೊಳಗೊಂದಾನೆಯನು ತಾನೇರಿ ಬೊಬ್ಬಿರಿದು
ಘೀಳಿಡುವ ಕರಿ ಕೆದರಲಂಕುಶ
ವಾಳೆ ನೆತ್ತಿಯನಗೆದು ದಂತಿಯ
ತೂಳಿಸಿದನಾ ಕ್ಷೇಮಧೂರ್ತಿಯ ಗಜದ ಸಮ್ಮುಖಕೆ ೧೭

ಇದು ವಿನೋದವಲೇ ಮದೀಯಾ
ಭ್ಯುದಯವಿದಲೇ ನಮ್ಮ ಕೋಪವ
ನಿದಿರುಗೊಂಡವನಿವನಲೇ ಎನುತೆಚ್ಚನಾ ಭೀಮ
ಸದೆಗ ನೀ ಸಾರೆಲವೊ ಭಾರಿಯ
ಮದಗಜದ ಬಡಿಹೋರಿ ಹೋಗೆನು
ತೊದರಿ ಭೀಮನ ಮುಸುಕಿದನು ನಾರಾಚಸೋನೆಯಲಿ ೧೮

ಆಗಲೀ ನಾಲಗೆಯ ಸಾಲವ
ನೀಗ ಕೈಯಲಿ ತಿದ್ದಿ ಕೊಡುವರೆ
ಹೋಗದೇ ಹೊತ್ತಿಹವೆ ಹೇಳೆನುತೆಚ್ಚನಾ ಭೀಮ
ಆಗಳಾವುದು ನೆಲನು ನಭ ದಿಗು
ಭಾಗವೆಲ್ಲಿಯದೆನಲು ಕಣೆಗಳ
ತೂಗಿ ತುರುಗಿದವರಿಭಟನ ಕರಿಘಟೆಯ ಮೈಗಳಲಿ ೧೯

ಸರಳ ಮಳೆಯಲಿ ನನೆದು ಕರಿಘಟೆ
ಯುರುಳಿದವು ಕಲ್ಪಾಂತವರುಷದೊ
ಳುರುಳುವದ್ರಿಗಳಂತೆಯೆಸೆದವು ವೈರಿದಂತಿಗಳು
ಎರಡು ಸೀಳಾಯ್ತವನ ಕರಿ ಧರ
ಗಿರದೆ ದೊಪ್ಪನೆ ಹಾಯ್ದು ಖಾತಿಯೊ
ಳುರವಣಿಸಿದನು ಕ್ಷೇಮಧೂರ್ತಕ ಸೆಳೆದೊಡಾಯುಧದಿ ೨೦

ಕುಣಿದು ಫುಟನೆಗೆದರಿ ಗಜವ ಹೊ
ಯ್ದಣೆದು ಹಿಂಗದ ಮುನ್ನ ತಲೆ ಮೇ
ಲಣಿಗೆ ಚಿಗಿದುದು ಮುಂಡ ನಡೆದುದು ನೂರು ಹಜ್ಜೆಯನು
ಬಣಗು ನೀನಕಟಕಟ ಭೀಮನ
ಕೆಣಕಿ ಬದುಕಿದೆಯೆನುತಲಪ್ಸರ
ಗಣಿಕೆಯರು ನಗುತವನ ಕೊಂಡೊಯ್ದರು ವಿಮಾನದಲಿ ೨೧

## ಮೂರನೆಯ ಸಂಧಿ

ಸೂ. ರಣಭಯಂಕರನಹಿತ ಸುಭಟರ
ಹಣಿದವನು ಹೊಯ್ದಾಡಿ ಸಾತ್ಯಕಿ
ಕೆಣಕಿದನು ಕಲಕಿದನು ಕುರುಸೇನಾ ಮಹಾರ್ಣವವ

ಬೀಳಲಗ್ಗದ ಕ್ಷೇಮಧೂರ್ತಿ ನೃ
ಪಾಲಕನ ಪರಿವಾರ ರೋಷ ಕ
ರಾಳ ಶಿಖಿಪರಿತಪ್ತ ಕಂಪಿತ ಖಡ್ಗದೊಗ್ಗಿನಲಿ
ಆಳಿದನ ಮರಣದಲಿ ಹಿಂದಣ
ಕೂಳಿನಾಸೆಯ ಕುನ್ನಿಗಳಿರೆನು
ತಾಳು ಕವಿದುದು ಭೀಮ ಫಡ ಫಡ ನಿಲ್ಲು ನಿಲ್ಲೆನುತ ೧

ಕರೆದು ಮೂದಲಿಸಿದರೆ ಹುಲ್ಲೆಯ
ಮರಿಗಳಿಗೆ ಖತಿಗೊಂಬುದೇ ಮದ
ಕರಿ ಕರೂಷದ ಕೊಬ್ಬಿನವದಿರು ಹಿಂದೆ ಹತ್ತಿದರೆ
ಮರಳಬಲ್ಲನೆ ಭೀಮನಿವರ
ಬ್ಬರಿಸಿ ಕವಿದರು ಹತ್ತು ಸಾವಿರ
ತುರಗ ಸರಿಸದಲೇರಿದವು ಪಡಿಮುಖದ ಬಲ ಬೆದರೆ ೨

ರಾವುತೋ ಎನಿತೊಂದು ಹಂತಿಯ
ಸಾವಿನಾತಗಳೇರಿದರು ಪರಿ
ಧಾವನೋದ್ಧತ ಧೂಳಿ ಮುಸುಕಿತು ತರಣಿ ಮಂಡಲವ
ಆ ವೃಕೋದರ ಗತಿಯ ಕಂಡನು
ರಾವುತರ ದೃಢವಾಘೆ ವಾಘೆಯ
ಲಾವಣಿಗೆ ಲೇಸೆನುತ ಸಾತ್ಯಕಿ ತುಡುಕಿದನು ಧನುವ ೩

ಅರರೆ ರಾವುತು ಜಾಗು ಸ್ವಾಮಿಯ
ಹರಿಬಕೋಸುಗ ಹಗೆಯ ಹೊಯ್ದಿರಿ
ಬಿರುದರಹುದೋ ಎನುತ ವಿಾರುವ ಹಯುವ ಮುರಿಯೆಸುತ
ಸರಳನೊಂದನೆ ತೊಡಚಿ ತುರಗದ
ಕೊರಳ ವಾಘೆಯ ಕರವ ರಾವ್ತರ
ಶಿರವನೆಚ್ಚನು ಕೊಂದನೀಪರಿ ಹತ್ತು ಸಾವಿರವ ೪

ಬಿದ್ದವಗಣಿತ ತುರಗ ದಳ ಕೈ
ಮುದ್ದೆಗೊಂಡನು ಕಾಲನಸುವಿಡಿ
ದಿದ್ದವರ ನಾ ಕಾಣೆ ತೊಡಕಿದ ವೈರಿ ಬಲದೊಳಗೆ
ಹದ್ದು ಕಾಗೆಗೆ ನಿನ್ನವರು ಸಾ
ಲಿದ್ದು ಬೋನವ ಸವಸಿದರು ಬಲ
ವಿದ್ದು ಮಾಡುವುದೇನು ನಿಮಗಿನ್ನರಸ ಕೇಳೆಂದ ೫

ಥಟ್ಟು ಮುರಿದುದು ಕೊಂಡ ನೆಲನನು
ಬಿಟ್ಟು ಹಿಂಗಿತು ನಮ್ಮ ಬಲ ಮೈ
ಬಿಟ್ಟು ತಲೆದೋರಿದನು ಸಾತ್ಯಕಿ ದೊರೆಗಳಿದಿರಿನಲಿ
ದಿಟ್ಟನಾರಿವನೀಸು ಮುಷ್ಟಾ
ಮುಷ್ಟಿಯಲಿ ಬಂದವನೆನುತ ಜಗ
ಜಟ್ಟಿಗಳು ವಿಂದಾನುವಿಂದರು ನಿಂದರಿದಿರಿನಲಿ ೬

ಕವಿದುದಿವದಿರ ಸೇನೆ ಸಾತ್ಯಕಿ
ಹವಣನರಿಯದೆ ಹೊಕ್ಕು ಸಿಕ್ಕಿದ
ನವರೊಳಗೆ ಕಟ್ಟಿದವು ಸುತ್ತಲು ಸಾವಿರಾನೆಗಳು
ನವ ಸಹಸ್ರ ತುರಂಗ ಕಾಲಾ
ಳವಗಡಿಸಿತೈವತ್ತು ಸಾವಿರ
ವವನಿತಳ ನುಗ್ಗಾಯ್ತು ಪದಘಟ್ಟಣೆಯ ಘಲ್ಲಣೆಗೆ ೭

ಕೆಣಕಿದರೆ ಭುಗಿಲೆಂದುದೀತನ
ರಣ ಪರಾಕ್ರಮವಹ್ನಿ ಕರಡದ
ಬಣಬೆ ಸಿಕ್ಕಿತು ಕಾಳುಗಿಚ್ಚಿನ ಬಾಯ ಬಗರಗೆಗೆ
ಕಣೆಯ ಕಾಣೆನು ಸುತ್ತಲೊಟ್ಟುವ
ಹೆಣನ ಕಂಡೆನಿದಾವ ಬಾಳೆಯ
ಹಣಿದವೋ ನಿನ್ನಾಳು ಕುದುರೆಯನರಿಯೆ ನಾನೆಂದ ೮

ದೊರೆಗಳವದಿರು ತಮ್ಮ ಬಲ ಸಂ
ವರಣೆ ನೆಗ್ಗಿದ ಹೇವದಲಿ ಹೊಡ
ಕರಿಸಿ ಹೊಕ್ಕರು ಹೊಳಿದರು ಸಾತ್ಯಕಿಯನಂಬಿನಲಿ
ಸರಳ ಬರವೊಳ್ಳಿತು ಮಹಾ ದೇ
ವರಸು ಮಕ್ಕಳಲೇ ವಿರೋಧವೆ
ಹರಹರತಿಸಾಹಸಿಕರಹುದಹುದೆನುತ ತೆಗೆದೆಚ್ಚ ೯

ಏನನೆಂಬೆನು ಮೊದಲ ಲಗ್ಗೆಯ
ಲಾ ನಿಶಿತಶರ ದೈತ್ಯಭಟ ವಿಂ
ದಾನುವಿಂದರ ಜೀವ ಧುಮ್ಮಿಕ್ಕಿದುದು ಜವಪುರಿಗೆ
ಚೀನ ಭೋಟ ಕರೂಷ ಖರ್ಪರ
ಸೂನು ಜೋನೆಗ ತುರಕ ಬರ್ಬರ
ಸೇನೆ ತಾಗಿತು ತಾಗಿದಾಗಳೆ ನೀಗಿದುದು ತಲೆಯ ೧೦

ಮುರಿದುದಿದು ನಮ್ಮವರು ಸಾತ್ಯಕಿ
ಯುರುಬೆಗಾನುವರಿಲ್ಲ ದೊರೆ ಕೈ
ಮರೆದನೋ ಕಾಳಾಯ್ತೆನುತ ಕುರುಸೇನೆ ಕಳವಳಿಸೆ
ಜರೆದು ಮೂದಲಿಸಿದನು ಮಾದ್ರೇ
ಶ್ವರನ ದುಶ್ಶಾಸನನ ಸೌಬಲ
ಗುರುಜ ಕೃತವರ್ಮಾದಿ ಪರಿವಾರವನು ಕಲಿಕರ್ಣ ೧೧

ಪೂತು ಮಝು ದಳಪತಿಯ ಚಿತ್ತದ
ಖಾತಿ ಕೊಬ್ಬಿತು ನಮ್ಮ ಭುಜ ಬಲ
ವೇತಕಿದು ಬಳಿಕೇನು ಸಾತ್ಯಕಿ ಸರಸವೇ ತಮಗೆ
ಭೂತನಾಥನ ಕಡುಹ ತಡೆವಭಿ
ಜಾತರಲ್ಲಾ ತಾವೆನುತ ನಿಜ
ಸೂತರನು ಬೋಳೈಸಿ ನೂಕಿತು ಗುರುಸುತಾದಿಗಳು ೧೨

ಮುರಿದ ಬಲ ಗರಿಗಟ್ಟಿತೊಗ್ಗಿನ
ಲೊರಲಿದವು ನಿಸ್ಸಾಳ ಕಹಳೆಯು
ಬಿರುಸರದ ಬಹುವಿಧದ ವಾದ್ಯಧ್ವನಿಯ ಕಳಕಳದ
ತುರುಗಿ ತೂಳುವ ಸಿಂಧ ಸೆಳೆ ಮಡ
ಲಿರಿವ ಝಲ್ಲರಿ ಪಲ್ಲವದ ನಿಡು
ದೆರೆಯ ಧವಳಚ್ಛತ್ರ ಚಮರದೊಳೊದಗಿತತಿರಥರು ೧೩

ಮುಂಕಣಿಯಲಿಟ್ಟಣಿಸಿದರು ಭಾ
ರಂಕದಾಳುಗಳೆಂಟು ಸಾವಿರ
ಬಿಂಕದತಿರಥರೆಂಟು ಕೋಟಿ ತುರಂಗ ಪಾಯದಳ
ಶಂಕಿಸುವನೇ ಬಳಿಕ ಯದುಕುಲ
ದಂಕಕಾರನು ನಿಂದನನಿಬರಿ
ಗಂಕ ಝುಂಕೆಯನೇನನೆಂಬೆನು ಸಾತ್ಯಕಿಯ ಮನದ ೧೪

ಭಾರಿಯಾಹವವಾಯ್ತು ಖಿಳದಳ
ಭಾರ ಬಿದ್ದುದು ಸಾತ್ಯಕಿಯ ಸುರ
ನಾರಿಯರ ತೋಳಿನಲಿ ಕಾಬುದು ನೆಲನ ರಿಣ ಹರಿದು
ಹೋರಿದರೆ ಹುರುಳಿಲ್ಲೆನುತ ಪರಿ
ವಾರವೊರಲಿತು ಪಾಂಡ್ಯ ಕೈಕೆಯ
ಕೇರಳರ ಹಿಂದಿಕ್ಕಿ ಪಡಿಬಲವಾನನಾ ಭೀಮ ೧೫

ಮುಂದೆ ಪರಿದರು ಪಾಂಡುತನಯರ
ನಂದನರು ತಾವೈವರೀತನ
ಹಿಂದುಳುಹಿ ಹಿಂಡಿದರು ಹೇರಾಳದ ಚತುರ್ಬಲವ
ಕೊಂದರಗ್ಗದ ಚಿತ್ರಸೇನನ
ಬಂದ ಪರಿಬಿದ ಚಿತ್ರನನು ಗುರು
ನಂದನನು ಬಳಿಕವರ ಬೆದರಿಸಿ ನೂಕಿದನು ರಥವ ೧೬

ಹೆರತೆಗೆದು ಕೆಲಸಾರಿ ಮಕ್ಕಳು
ಮರಿಗಳಿಗೆ ರಣವೇಕೆ ಪಾಂಡವ
ರುರುವ ಸಂತತಿ ನೀವಕಟ ಎನುತವರನೊಡಹಾಯ್ಸಿ
ಇರಿವ ಭಟನಹೆ ಯಾದವರ ಬಡ
ಕರುವೆ ಬಾ ಬಾ ಎಂದು ಚಿಟಿಕಿಸಿ
ಕರೆದು ಗುರುಸುತ ಸಾತ್ಯಕಿಯ ತಾಗಿದನು ನಗೆಮಾಡಿ ೧೭

ಸಾರು ನೀ ಸಾರೆಲವೊ ಭೀಮನ
ತೋರಗರುಳಿನ ದಂಡೆಯನು ಕೈ
ಯಾರೆ ಮಾರಿಗೆ ಮುಡಿಸುವೆನು ಫಡ ಭೀಮ ನಿಲ್ಲೆನುತ
ಆರಿದನು ಜಗ ನಡುಗಲಾ ಜಂ
ಭಾರಿ ಜವಗೆಡೆ ಬೊಬ್ಬಿರಿದನಾ
ಭಾರತದ ಭಾರಣೆಯುಕೈದಿದನನಿಲ ನಂದನನ ೧೮

ಗುರುತನೂಜ ಕಣಾ ವಿರೋಧಿ
ಸ್ಮರಕಪರ್ದಿ ಕಣಾ ವೃಕೋದರ
ಕರಿ ಮೃಗೇಂದ್ರ ಕಣಾ ಕಣಾಳಿಯ ಕಾಯ್ದುಕೊಳ್ಳೆನುತ
ಸರಳನೆಚ್ಚನು ಸರಳನಾ ಬಳಿ
ಸರಳು ಮುಂಚಿದುದಾ ಸರಳ ಬಳಿ
ಸರಳು ಮುಂಚಿದುದಾವ ಕೈಚಳಕವೊ ಶಿವಾ ಎಂದ ೧೯

ತಿರುಗಿ ನಿಂದನು ಪವನಸುತನೆಲೆ
ಗುರುಜ ನಿನ್ನಗ್ಗಳಿಕೆಗಳ ಜಗ
ವರಿಯದೇ ಫಡ ಭಟ್ಟನಾದ್ಯೆ ನಿನಗೆ ನೀನೆನುತ
ಸರಳ ಬಳಿಸರಳುಗಳನಾ ಲಘು
ತರದ ಲೆಕ್ಕದಲೆಸೆವ ವಿವರದ
ಪರಿವಿಡಿಯ ವೇಗಾಯ್ಲತನವನು ತೋರಿದನು ಭೀಮ ೨೦

ಜಾಗು ಮಝುರೇ ಭೀಮ ಬಲುಗೈ
ಲಾಗು ಮರೆಯದಲಾ ಶರೌಘ
ತ್ಯಾಗದಸ್ತ್ರ ಪ್ರವರ ಬಂಧವ ಮತ್ತೆ ನೋಡೆನುತ
ಆ ಗಗನವಿದು ಧರಣಿಯಿದು ದಿ
ಗ್ಭಾಗವೆಲ್ಲಿಯದೆಂಬ ವಿವರವ
ನಾಗಳರಿಯೆನು ದ್ರೋಣನಂದನನೆಚ್ಚನನಿಲಜನ ೨೧

ಎಲೆಲೆ ಹಾರುವನೇಕೆ ಹರಿಮೇ
ಖಳೆಯ ಕೇಳಿಕೆಯೇಕೆ ಪಡಿಮ
ದ್ದಳೆಯ ಬಡಿಕರ ಬಿಂಕ ಮೇಳವವಿಲ್ಲಲಾ ನಿನಗೆ
ಹೊಲಬುಗೆಡುವನೆ ಭೀಮನೀ ಸರ
ಳೊಳಗೆ ಹುಸಿಯೇಕೆನುತ ಬಾಣಾ
ವಳಿಯ ನಿಮಿಷಕೆ ಕಡಿದು ಗುರುಜನನೆಚ್ಚನಾ ಭೀಮ ೨೨

ರಥದ ಮೇಲಂಬುಗಳು ರಿಪು ಸಾ
ರಥಿಯ ಮೈಯಲಿ ಘಾಯ ತುರಗ
ವ್ಯಥೆಯನೇವೇಳುವೆನು ಟೆಕ್ಕೆಯವೈದೆ ಬಾಣಮಯ
ಶಿಥಿಲವಾದುವು ಗಾಲಿಗಳು ಬಳಿ
ರಥಿಕರೀತನ ಬಿಟ್ಟು ಹಾಯ್ದರು
ಪೃಥುಳಬಲನೈ ಭೀಮನೆಚ್ಚನು ಗುರುತನೂಭವನ ೨೩

ನೊಗವನೀಡಾಡಿದನು ಕುದುರೆಗ
ಳೊಗಡಿಸಲು ರಕುತವನು ಸಾರಥಿ
ಬಿಗಿದ ಹಿಳುಕುಗಳೌಕಿದವು ತೇರಿನಲಿ ಸಿಂಧದಲಿ
ಒಗುವ ನೆತ್ತರ ಸುರಿವ ಬಾಣದ
ನುಗುತೆಗಂಡಿಯ ಮೆಯ್ಯ ಭೀಮನ
ಬೆಗಡು ಮೊಳೆತುದು ಗುರುತನೂಭವನೆಚ್ಚನನಿಲಜನ ೨೪

ಈತನೆಚ್ಚನು ಮತ್ತೆ ಶರ ಸಂ
ಘಾತವೋ ಗುರುಸುತನ ತನುವೋ
ಪೂತ ಮುತ್ತವೊ ತಳಿತೆಸೆವ ಕೆಂದಾವರೆಯ ಬನವೊ
ಭೀತಿ ಬಿಗಿದುದು ದಿಟ್ಟತನದನು
ಧಾತುಗೆಟ್ಟುದು ನೋಡಿ ಕಂಗಳು
ಸೋತು ಮರಳಿದನಿತ್ತಲಶ್ವತ್ಥಾಮ ಮೈಮರೆದ ೨೫

ನನೆದ ಜಾಜಿನ ಗಿರಿಯೊ ಭೀಮನ
ತನುವೊ ಖಂಡಿತ ರಕ್ತಚಂದನ
ಬನವೊ ರಥವೋ ತಳಿತಶೋಕೆಯ ಮರನೊ ಸಾರಥಿಯೊ
ಮನ ಹಣುಗಿ ತುಟಿಯೊಣಗಿ ನೋಟದ
ಮೊನೆ ಮುರಿದು ರ್ಝೊಂಪಿಸುತ ಮುಂದಣ
ಗೊನೆದು ಬಿದ್ದನು ಭೀಮ ಪಾಂಡವ ಸೇನೆ ಕಳವಳಿಸೆ ೨೬

ಅಹಹ ವೈರಿಗೆ ಧರೆಗೆ ಪಾಣಿ
ಗ್ರಹಣವಾಯಿತೆ ಪಾಂಡುಸುತರಿಗೆ
ಬಹ ವಿಪತ್ತುಗಳೊಳಗಿದೊಂದೇ ಕಳಶವಾದುದಲ
ಅಹಿತರಿಗೆ ಗೆಲುವಾಯ್ತು ನಮಗಿ
ಲ್ಲಿಹುದು ಮತವಲ್ಲೆನುತ ಸಾರಥಿ
ಸಹಸಿಗನ ಸಂತೈಸಿ ತಂದನು ರಾಜಮಂದಿರಕೆ ೨೭

ತಂದೆಯುಳಿದಾ ಹೊತ್ತು ಹಗೆಯನು
ಕೊಂದು ಸಾಯದೆ ದೇಹ ಮೋಹಕೆ
ನಿಂದು ನೀ ನಿಶ್ಶಂಕನಾದ್ಯೆ ವೈರಿಶರಹತಿಗೆ
ಎಂದು ಸಾರಥಿ ಶೋಕಿಸುತ ಗುರು
ನಂದನನ ಕೊಂಡೊಯ್ದನಿತ್ತಲು
ಸಂದಣಿಸಿತತಿರಥರು ಸೌಬಲ ಶಲ್ಯ ಮೊದಲಾಗಿ ೨೮

ದೊರೆಗಳಿಬ್ಬರ ಸೋಲವನು ವಿ
ಸ್ತರಿಸಿ ಹೊಕ್ಕರು ಮತ್ತೆ ಮಾದ್ರೇ
ಶ್ವರ ಶಕುನಿ ಕೃತವರ್ಮ ಕೃಪ ದುಶ್ಶಾಸನಾದಿಗಳು
ಅರಿಬಲದಲಾ ದ್ರೌಪದೇಯರು
ಹರಿಯನುಜ ಮಾದ್ರೇಯ ಕೈಕೆಯ
ವರಯುಧಾಮನ್ಯೂತ್ತಮೌಂಜಸ ಪಾಂಡ್ಯ ಸೃಂಜಯರು ೨೯

ಬಲಿದುದಾಹವ ಮತ್ತೆ ಚಾತು
ರ್ಬಲ ಭಡಾಳಿಸಿ ಕಾದುತಿರ್ದುದು
ಮುಳಿದು ಶಲ್ಯನ ಕೂಡೆ ಪಂಚದ್ರೌಪದೀಸುತರು
ಅಳವಿಗೊಟ್ಟರಿಯಕಟಕಟ ಮಂ
ಕ್ಕಳಿರ ನಿಮಗೇಕಿದು ಯುಧಿಷ್ಠಿರ
ಫಲುಗುಣರ ಬರಹೇಳೆನುತಲೆಚ್ಚನು ಮಹಾಸ್ತ್ರದಲಿ ೩೦

ಎಚ್ಚನಿವನಿವನೊಡನೆ ಬಾಣವ
ಕೊಚ್ಚಿದರು ಕೊಡಹಿದರು ಶರದಲಿ
ಚುಚ್ಚಿದನು ಜೀಕುಳಿಯ ಬಿಟ್ಟನು ನೆತ್ತರನು ನೆಲಕೆ
ಬೆಚ್ಚಿದವು ರಥವಾಜಿ ಹತ್ತಿಗೆ
ಬಿಚ್ಚಿ ರಥ ನುಗ್ಗಾಯ್ತು ಶೌರ್ಯದ
ಕೆಚ್ಚು ಮುರಿದುದು ಹಿಂಗಿದರು ಪಾಂಡವಕುಮಾರಕರು ೩೧

## ನಾಲ್ಕನೆಯ ಸಂಧಿ

ಸೂ. ರಾಯದಳ ಮಝು ಪೂತುರೆನೆ ರಿಪು
ರಾಯ ಸೇನೆಯ ಮುರಿದು ಪಾಂಡವ
ರಾಯ ಧರ್ಮಕುಮಾರ ಗೆಲಿದನು ಕೌರವೇಶ್ವರನ

ಫಡ ಫಡೆಲವೋ ಶಲ್ಯ ಮಕ್ಕಳ
ಬಡಿದು ಬೆರೆದ್ಯೆ ಬಾಹುಬಲದಲಿ
ತೊಡರು ನಿನಗೆಡಗಾಲಲಿದೆಯೆನುತೊದೆದು ನಿಜರಥವ
ಘುಡುಘುಡಿಸಿ ರೋಮಾಂಚನದ ಹೊರ
ಗುಡಿಯ ಸೊಂಪಿನ ಮೈಯ್ಯ ಕಡುಗಲಿ
ತಡೆದನೇಕಾಂಗದಲಿ ಸಾತ್ಯಕಿ ಶಲ್ಯ ಭೂಪತಿಯ ೧

ಬಾಯಿ ಬಡಿಕರು ಯಾದವರು ಗರು
ವಾಯಿ ನಿನಗೆಲ್ಲಿಯದು ಸುಭಟರಿ
ಗಾಯುಧದ ಸಿಂಗಾರವೋ ಮೇಣ್ ಕಾಲ ನೇವುರವೊ
ಸಾಯಕವ ಹಿಡಿ ಸಾಕು ಸೋಲದ
ತಾಯಿಮನೆ ನಿನಗಿದಿರಲಿದೆ ನಿ
ನ್ನಾಯತವ ತಾನರಿಯೆನೆನುತೋರಂತೆ ತೆಗೆದೆಚ್ಚ ೨

ಎಲವೊ ಮಾದ್ರಾಬಾಹಿರನೆ ಬಿಡು
ಗಳಹತನವೇ ನಮ್ಮೊಡನೆ ತೊ
ಟ್ಟಳುಕೆ ಗರಿನಾಲಗೆಯ ಕೊಯ್ವೆನು ಮಾಣು ಮಾಣೆನುತ
ಬಿಲುದಿರುವನುಗುಳಿಸಿದನಂಬಿನ
ಬೆಳಸನಾರಳವಡಿಸುವರು ದಿಗು
ವಳೆಯ ನೆರೆಯದಿದೆತ್ತಣದು ಬಿಲುಗಾರತನವೆಂದ ೩

ಬಾಯಿಬಡಿಕರು ನಾವು ನೀ ಗರು
ವಾಯಿಕಾರನು ಬಯ್ವ ಬಿರುದಿನ
ಬಾಯ ನೋಡಾಯೆನುತ ತೋಟಿಗೆ ತೆರಹುಗೊಡದೆಸಲು
ಸಾಯಕದ ಹೊದೆ ಹಲವು ಶಲ್ಯಗೆ
ಬೀಯವಾದವು ಬಳಿಕ ಕೌರವ
ರಾಯನನುಜನು ತರುಬಿ ನಿಂದನು ಸಾತ್ಯಕಿಯ ರಥವ ೪

ಹಳಚಿದವು ರಥವೆರಡು ಬಲುಗೈ
ಗಳಿಗೆ ಬಲಿದುದು ಬವರ ಕೌರವ
ಬಲದ ಭಟರಲಿ ಹತ್ತು ಸಾವಿರ ರಥಿಕರನುವಾಯ್ತು
ಒಳಹೊಗಿಸಿ ಸಾತ್ಯಕಿಯ ಸಿಕ್ಕಿಸಿ
ಗೆಲುವ ತವಕವ ಕಂಡು ಕೆಣಕಿದ
ರಳವಿಯಲಿ ಸಹದೇವ ನಕುಳರು ಕೌರವಾನುಜನ ೫

ತೆಗಸಿದನು ಸಾತ್ಯಕಿಯನೀತನ
ಬಿಗಿದನಂಬಿನಲವನ ಬಾಣಾ
ಳಿಗಳ ಕಡಿದನು ಘಾಸಿಮಾಡಿದನವನ ರಥಹಯವ
ಜಗುಳಿದನು ಕಲಿನಕುಲ ರಥ ವಾ
ಜಿಗಳ ಜೋಡಣೆ ಬಿಚ್ಚಿ ರಕುತವ
ನೊಗಡಿಸಲು ಸಹದೇವನೆಚ್ಚನು ನಿನ್ನ ನಂದನನ ೬

ಸರಳ ಸೈರಿಸಿ ನಿನ್ನ ಮಗನ
ಬ್ಬರಿಸಿ ಮಾದ್ರೀಸುತನನೆಚ್ಚನು
ತರಹರಿಸಿ ಮಗುಳೆಚ್ಚನಾತನು ಕೌರವಾನುಜನ
ಮರುಳೆ ನೀನೇನಹೆ ಮಹಾ ಸಂ
ಗರಕೆ ಕಳುಹಾ ನಿನ್ನವರನೆನು
ತುರವನೆಚ್ಚನು ಜರಿಯೆ ಜೋಡಿನ ಚಿಪ್ಪು ದೆಸೆದೆಸೆಗೆ ೭

ನೋವನೇ ನೊಣವೂರಿದರೆ ಸಹ
ದೇವನೆಲವೋ ನಿನ್ನ ಕೊಂದಡೆ
ಪಾವಮಾನಿಗೆ ಪಂಥ ತಪ್ಪುವುದೆನುತ ಖಾತಿಯಲಿ
ತಾವಕನ ಸಾರಥಿಯ ರಥ ತುರ
ಗಾವಳಿಯನಾಯುಧವ ಖಂಡಿಸೆ
ಜೀವಗಳ್ಳರ ದೇವ ಪಸರಿಸಿದನು ಪಲಾಯನವ ೮

ರಾಯನನುಜನ ಹರಿಬದಲಿ ರಾ
ಧೇಯ ಹೊಕ್ಕನು ಸ್ವಾಮಿದ್ರೋಹರ
ಕಾಯಿದರೆ ಕೈಕೊಳ್ಳದೌಷಧವಾವುದಿವದಿರಿಗೆ
ನೋಯಿಸುವೆನೊಮ್ಮೆನುತ ತಿರುವಿನ
ಸಾಯಕದ ಕಿವಿಗಡಿಯ ತೆರಹಿನ
ರಾಯ ದಳಪತಿ ತರುಬಿದನು ಮಾದ್ರೀಸುತನ ರಥವ ೯

ಸಾರು ನೀ ಸಹದೇವ ಜಗದ ವಿ
ಕಾರಿಯಿವನೀ ಕರ್ಣನಿವನ ದೊ
ಠಾರಿಸುವ ನಾಲಗೆಯ ಕೊಯ್ಲಿಗೆ ಶಸ್ತ್ರವಿವೆಯೆನುತ
ಸಾರಥಿಯ ಬೋಳೈಸಿ ಚಾಪದ
ನಾರಿಯನು ದನಿಮಾಡಿ ನಕುಲನು
ದಾರ ಕರ್ಣನ ಮುಟ್ಟಿ ಬಂದನು ಚಾಚಿದನು ರಥವ ೧೦

ಆರಿವರು ನಕುಳಾಂಕರೇ ಜ
ಜ್ಝಾರತನವೇ ನಮ್ಮೊಡನೆ ನೀ
ವಾರು ಪಾಂಡುಕುಮಾರರೋ ಮಾದ್ರೀಕುಮಾರಕರೊ
ಭಾರಿಯಾಹವದೆಡೆಗೆ ನಿಮ್ಮನಿ
ದಾರು ಬಿಟ್ಟರುಪಾಯದಲಿ ನಿಮ
ಗಾರು ಮುನಿದರು ಶಿವ ಶಿವೆಂದನು ಕರ್ಣ ನಸುನಗುತ ೧೧

ತೊಲತೊಲಗು ತರುವಲಿಗೆ ರಣವಿದು
ಸುಲಭವೇ ಲೋಕೈಕವೀರರು
ಹಲಬರಿದರೊಳು ಹೊಕ್ಕು ಹೊದಕುಳಿಗೊಂಡು ಹೋದಂತೆ
ಗೆಲುವ ನಂಬುಗೆ ನಿನ್ನ ತಂದುದು
ಕೊಲೆಗೆ ನೋಡಾದರೆಯೆನುತ ಕೈ
ಚಳಕದಲಿ ಮುಸುಕಿದನು ಮೊನೆಗಣೆಯಿಂದ ರಿಪುಭಟನ ೧೨

ಬಿಗಿದ ಬಾಣದ ದಡ್ಡಿಯನು ತಳ
ಮುಗುಚಿದನು ನೂರಂಬಿನಲಿ ಹೇ
ಳಿಗೆಯ ಮುಚ್ಚಳ ತೆಗೆದ ಹಾವಿನವೋಲು ಝೊಂಪಿಸುತ
ಹೊಗರನುಗುಳುವ ಹೊಸ ಮಸೆಯ ಕೋ
ಲುಗಳ ಕವಿಸಿದನಾತನಂಬಿನ
ಝುಗೆಯ ಝಳದಲಿ ಮುಳುಗಿ ಮೋನದೊಳಿರ್ದನಾ ಕರ್ಣ ೧೩

ಆಳು ನೀನಹುದೆಲವೊ ಕರ್ಣ ವಿ
ಶಾಲಮತಿ ನೀ ಲೇಸು ಮಾಡಿದೆ
ಬಾಲರಾದಡೆ ಭಂಗವೇ ಜಾವಳನೆ ಅಭಿಮನ್ಯು
ಕೋಲ ಸೈರಿಸು ಸೈರಿಸಾದಡೆ
ಭಾಳಲಿಪಿ ಸಂಕರುಷ ವಿಪುಳ ಶ
ರಾಳಿಯಿವೆ ಕೊಳ್ಳೆನುತ ನಕುಳನನೆಚ್ಚನಾ ಕರ್ಣ ೧೪

ತಾಗಿದವು ನಾಲ್ಕೇಯು ದೇಹದ
ಬೇಗಡೆಯಲೆಂಟಂಬು ನುಸುಳಿದ
ವಾಗ ಹದಿನಾರಂಬು ಹರಿದವು ಮತ್ತೆ ಬಳಿಸಲಿಸಿ
ಸೂಗುರಿಸಿ ಝೊಮ್ಮಿನಲಿ ಮುಂದಕೆ
ಬಾಗಿ ಬಿದ್ದನು ಸಾರಥಿಯ ಕೈ
ಲಾಗಿನಲಿ ತಿರುಗಿದನು ನಕುಳನು ರಾಜ ಮೋಹರಕೆ ೧೫

ಹರಿಬದಾಹವವೆನಗೆ ತನಗೆಂ
ದುರವಣಿಸಿದರು ಚೇಕಿತಾನಕ
ದುರುಳ ಧೃಷ್ಟದ್ಯುಮ್ನ ಪಾಂಡ್ಯ ಶಿಖಂಡಿ ಸೃಂಜಯರು
ಬರಲಿ ಬರಲೀ ಹೊಟ್ಟ ತೂರುವ
ಡರಸು ಮೋಹರವೇಕೆ ಸಾಕೆಂ
ದರಿಭಟರು ತರುಬಿದರು ಕೃಪ ಕೃತವರ್ಮ ಸೌಬಲರು ೧೬

ದಳಪತಿಯ ಹಿಂದಿಕ್ಕಿ ಪಾಂಡವ
ಬಲ ಮಹಾರಥರುರವಣಿಸಿ ಮೂ
ದಲಿಸಿ ನಿಂದರು ಕೊಂದರಿದಿರೇರುವ ಚತುರ್ಬಲವ
ಕೊಲೆಗೆ ಬೇಸರರಿವರು ಸಾವುದ
ಕಳುಕದವದಿರು ಹೇಳುವಡೆ ನಾ
ವಲಸಿದೆವು ಧೃತರಾಷ್ಟ್ರ ಎಂದನು ಸಂಜಯನು ನೃಪನ ೧೭

ವಿರಥರಾದ ಶಿಖಂಡಿ ಮೊದಲಾ
ದರಿಭಟರು ಜಾರಿದರು ಸುಭಟರ
ನೊರಸಿ ಕೊಂದೇರಿದರು ಕೆದರಿದರವರು ರಿಪುಬಲವ
ದೊರೆಗೆ ಹತ್ತಿರೆಯಾಯ್ತು ಕಾಳೆಗ
ವರಿದೆನಲು ನಿಸ್ಸಾಳಕೋಟಿಯ
ಧರಮುರದ ದೆಖ್ಖಾಳದಲಿ ತಲೆದೋರಿದನು ಪಾರ್ಥ ೧೮

ಭಟರ ತೆಗೆತೆಗೆ ಪಾರ್ಥನೋ ರಿಪು
ಕಟಕ ಭೈರವನೋ ಪೃಥಾ ಸಂ
ಕಟದ ಸನ್ನಾಹದಲಿ ಸುಭಟರ ಮಾರಬೇಡೆನುತ
ಲಟಕಟಿಸಿ ಬಲವೊದರಲಪ್ರತಿ
ಭಟರು ಬಳಿಕನುವಾಯ್ತು ವಿಜಯೋ
ತ್ಕಟದಲಿಪ್ಪತ್ತೈದು ಸಾವಿರ ವರ ಮಹಾರಥರ ೧೯

ನೂಕಿದರು ಸಂಶಪ್ತಕರು ಬಲ
ದಾಕೆವಾಳರ ತೆಗಸಿ ಬಹಳೋ
ದ್ರೇಕ ಸಾಹಸರೊದಗಿದರು ಕಂಪಿತ ಕುಳಾಚಳರು
ತೋಕಿದರು ಶರವಳೆಯಲರ್ಜುನ
ಸಾಕು ಸಾರೈ ನಿನ್ನ ಜೊತ್ತಿನ
ಜೋಕೆಯಾಹವವಲ್ಲೆನುತ ತೆಗೆದೆಚ್ಚರಿದಿರಾಗಿ ೨೦

ಆರಿದಿಪ್ಪತ್ತೈದು ಸಾವಿರ
ತೇರು ಸರಿಸದಲೊಂದು ವಾಘೆಯ
ಲೇರಿದವು ನಿಪ್ಪಸರದಲಿ ನಿಲುವಾತನಾರಿದಕೆ
ಸಾರಿಗೆಗೆ ಸಾರಿಗೆಗೆ ಬಾಣಾ
ಸಾವಿರವಿಪ್ಪತ್ತೈದು ಸಾವಿರ
ವಾರು ಸೈರಿಸಿ ನಿಲುವರೆನುತಿದ್ದುದು ಸುರಸ್ತೋಮ ೨೧

ಸುರಿದುದತಿವಳೆಯೆಂದು ಕುಲಗಿರಿ
ಕರಗುವುದೆ ಮೇಗರೆಯ ಶಿಲೆಯಿ
ಬ್ಬೆರಳು ನೆನೆವುದೆ ನಾಡ ಹಂತಿಯಲಳುಕುವರ್ಜುನನೆ
ಆರಿ ಮಹಾರಥರನಿಬರೈಸರ
ಸರಳು ಸಂಖ್ಯಾತೀತವವದರೊಂ
ದುರವಣೆಗೆ ಪೈಸರಿಸಿತಿಲ್ಲವನೀಶ ಕೇಳೆಂದ ೨೨

ಅವರ ಶರಸಂಘಾತವನು ಕಡಿ
ದವರ ಸಾರಥಿಗಳನು ರಥವಾ
ಹವನು ಧನುವನು ಸಿಂಧವನು ಸೀಗುರಿಯ ಝಲ್ಲರಿಯ
ಅವರ ಪದಕ ಕಿರೀಟ ಕಂಕಣ
ವಿವಿಧ ಕರ್ಣಾಭರಣ ಕೇಯೂ
ರವನು ಕಡಿಕಡಿದೊಟ್ಟಿದನು ಕಲಿಪಾರ್ಥ ನಿಮಿಷದಲಿ ೨೩

ಘಾಯವಡೆದರು ಘಾಸಿಯಾದರು
ಬಾಯಲೊಕ್ಕುದು ಕರುಳು ಮಕ್ಕಳಂ
ತಾಯಿಗಾಗದೆ ಕೆಟ್ಟರೆಂಬುದ ಕಾಣಲಾಯ್ತಿಲ್ಲಿ
ನಾಯಕರು ಹಲರುಳಿದುದಧಿಕರು
ಹಾಯಿದರು ಹೂಣೆಗರು ಹರಿಹಂ
ಚಾಯಿತಿಪ್ಪತ್ತೈದುಸಾವಿರ ವರ ಮಹಾರಥರು ೨೪

ಎಲೆಲೆ ಸಂಶಪ್ತಕರ ಭಾರಿಯ
ಬಲ ಮುರಿದು ಬರುತಿದೆ ವಿಘಾತಿಗೆ
ನಿಲುವರಿಲ್ಲಾ ಸೂರೆವೋಯಿತು ರಾಯನಭಿಮಾನ
ಜಲಧಿ ಬರತುದು ರಾಜ್ಯಕಾರ್ಯಕೆ
ನಿಲುವಡಿದು ಹೊತ್ತೆನುತ ಮಂತ್ರಿಗ
ಳುಲಿಯೆ ಕೌರವರಾಯ ಕಂಡನು ಪಾರ್ಥನುರವಣೆಯ ೨೫

ಕರವ ನೆಗಹಿದನಕಟ ಹೋಹೋ
ಬಿರುದರಂಜದಿರಂಜದಿರಿ ನಿ
ಮ್ಮರಿಭಟಗೆ ನಾಲ್ಕಿಲ್ಲ ಕೈಕಣ್ಣಿಲ್ಲ ನೊಸಲಿನಲಿ
ದೊರೆಯ ಕೈಯನು ಕಂಡ ಬಳಿಕೋ
ಸರಿಸಿರೈ ಪರಿವಾರ ದೂರದ
ಲಿರಿ ವೃಥಾ ಭಯವೇಕೆನುತ ಕುರುರಾಯನನುವಾದ ೨೬

ಕೂಡೆ ಗರಿಗಟ್ಟಿತು ಚತುರ್ಬಲ
ಜೋಡು ಮಾಡಿತು ರಾಯನಿದಿರಲಿ
ಹೇಡಿ ಕಲಿಯಹರೆಂಬರಿವದಿರು ಹೇವಮಾರಿಗಳೆ
ಚಾಡಿಸುವ ಝಲ್ಲರಿಯ ಮೋರೆಗೆ
ನೀಡಿ ಮರಳುವ ಸೀಗುರಿಯ ದಳ
ವೇಡಿಸಿತು ಕಲ್ಪಾಂತ ರಂಜಿತ ಮೇಘಡಂಬರವ ೨೭

ಸರಕಟಿಸಿ ದಳ ಸರ್ವಲಗ್ಗೆಯ
ಲುರವಣಿಸೆ ಯಮಸೂನು ಕಂಡನು
ನರನ ತೆಗೆತೆಗೆ ಇಂದಿನಾಹವ ನಮ್ಮ ಮೇಲೆನುತ
ಅರಸ ನಡೆದನು ರಾಜ ಮೋಹರ
ಪೊರಳಿಗಟ್ಟಿತು ಪ್ರಳಯ ಸಮರ
ಸ್ಫುರಿತ ಬಹಳಾರ್ಣವದ ಲಹರಿಯ ಲಳಿಯ ಲಗ್ಗೆಯಲಿ ೨೮

ಎರಡು ದಳ ಗಂಟಿಕ್ಕಿದುದು ನೆಲ
ಬಿರಿಯೆ ಬೆರಸಿತು ಹೊಯ್ದುರುರುಳುವ
ಶಿರದ ಬೀಳುವ ಭಟರ ಮೆದೆಗೆಡೆವಾನೆ ಕುದುರೆಗಳ
ಪರಿವಿಡಿಯದಂತಿರಲಿ ದೊರೆದೊರೆ
ಯುರವಣಿಸಿ ಹಳಚಿದರು ಪಾಂಡವ
ರರಸ ಕೌರವರರಸರೆಚ್ಚಾಡಿದರು ಮೊದಲಿಸಿ ೨೯

ಅರಸರಿವರೇ ಶಿವಶಿವಾ ನಿ
ಷ್ಕರುಣರೈ ನೀವೆಮ್ಮವೊಲು ಮೊನೆ
ಸರಳು ಮಾನ್ಯರನರಿವವೇ ನೀವೇಕೆ ರಣವೇಕೆ
ಒರಟರರ್ಜುನ ಭೀಮರತಿ ನಿ
ಷ್ಠುರರು ನಾವಡಿಮೇಲಹೆವು ನೀವ್
ಮರಳಿ ಬಿಜಯಂಗೈವುದೆಂದನು ಕೌರವರರಾಯ ೩೦

ಕೋಲ ಬಲುಹುಂಟಾಗೆ ನಾಲಗೆ
ಹೋಲ ನುಡಿಯದು ಹೊಲ್ಲದೇನಿದು
ಖೂಳ ಕಟಕಿಯ ಮಾತು ಬೇಡಂಬಿನಲಿ ಮಾತಾಡು
ಆಳುತನಕಾಭರಣವೇ ಮಾ
ತಾಳಿತನ ಕೈದೋರದಹಿತನ
ಮೇಲಣೇರಿನ ಬಾಯ ಸುಭಟರ ಹೊಗಳಬೇಡೆಂದ ೩೧

ಖರೆಯರಲ್ಲಾ ನೀವು ಕೊಂತಿಯ
ವರ ಕುಮಾರರು ನಿಮ್ಮೊಡನೆ ಸಂ
ಗರಕೆ ಸರಿಸರೆ ನಾವು ಸಂತೈಸಾದಡೆಂದೆಸಲು
ಸರಳು ಗಗನವ ಹೊದಿಸಿದವು ಹೂಂ
ಕರಿಸಿದವು ಹರೆಗಡಿದವರಿಮೋ
ಹರವ ಮುರಿದವು ಮುಸುಕಿದವು ಮೋದಿದವು ರಿಪುಭಟರ ೩೨

ಎಚ್ಚನೆಂಟಂಬಿನಲಿ ಕೌರವ
ನೆಚ್ಚ ಬಾಣವ ಕಡಿದು ನೂರರ
ಲೆಚ್ಚನೀತನ ರಥವನದ ಪರಿಹರಿಸಿ ಕುರುರಾಯ
ಎಚ್ಚನರಸನನಾ ಶರವ ಕಡಿ
ದೆಚ್ಚನವನಿಪನುಭಯರಾಯರ
ನಿಚ್ಚಟಿಕೆ ಮಝಪೂತುರೆಂದುದು ಮೇಲೆ ಸುರಕಟಕ ೩೩

ದ್ಯುಮಣಿ ಪಡುವಣ ಕಡಲ ಸಾರುವ
ಸಮಯವಾಯಿತ್ತುಭಯರಾಯರ
ಸಮರ ಸೌರಂಭಾತಿಶಯವಿಮ್ಮಡಿಸಿತಡಿಗಡಿಗೆ
ಅಮಿತ ರೋಷ ವಿಧೂತ ಪಾಣಿ
ಭ್ರಮಿತ ಶರತತಿ ವಿಸ್ಫುಲಿಂಗ
ಭ್ರಮಿತ ಭುವನತ್ರಯರು ಕಾದಿದರರಸ ಕೇಳೆಂದ ೩೪

ಗೆಲವು ನಮಗಾಯ್ತೆಂದು ಕೌರವ
ರುಲಿದರೆಮಗಗ್ಗಳಿಕೆಯೆಂದವ
ರುಲಿವುತಿರ್ದರು ಕಾದಿದರು ಸಮಜೋಳಿ ಜೋಕೆಯಲಿ
ಬಳಿಕ ಯಮನಂದನನ ಕೈ ವೆ
ಗ್ಗಳಿಸಿ ತಾಗಿತು ನಿನ್ನ ತನುಜನ
ಬಿಲು ಸರಳು ರಥ ಸೂತ ವಾಜಿಗಳೊರಗಿದವು ಧರೆಗೆ ೩೫

ಸೆಳೆದು ಹಿರಿಯುಬ್ಬಣವನವನಿಪ
ಕೆಲಕೆ ಚಿಗಿದನು ಹಾ ಮಹಾದೇ
ವಲೆಲೆ ದೊರೆ ದೊರೆ ಹಗೆಗೆ ಸಿಕ್ಕಿದನೆನುತ ಬಲ ಬೆದರೆ
ಬಿಲುದುಡುಕಿ ಕೃತವರ್ಮ ಕೃಪ ಸೌ
ಬಲ ಕೃಪಾನುಜ ಶಲ್ಯ ಗುರುಸುತ
ದಳಪತಿಗಳೇರಿದರು ರಾಯನ ಸುತ್ತುವಳಯದಲಿ ೩೬

ದೊರೆಗೆ ಬಿದ್ದುದು ಭಾರಿಯಾಹವ
ವರರೆ ಬರಹೇಳೆನುತ ಕವಿದುದು
ಸರಳ ಹೊದೆಗಳ ಕೆದರಿ ಸಾತ್ಯಕಿ ಭೀಮ ಕೈಕೆಯರು
ಬಿರುದ ಧೃಷ್ಟದ್ಯುಮ್ನ ಮಾದ್ರೇ
ಯರು ಶಿಖಂಡಿ ಯುಯುತ್ಸು ಸೃಂಜಯ
ತರಳ ಪಂಚದ್ರೌಪದೇಯರು ಮುತ್ತಿದರು ನೃಪನ ೩೭

ಬಳಿಕ ಸಂಕುಳ ಸಮರವತಿ ವೆ
ಗ್ಗಳಿಸಿತದನೇನೆಂಬೆನಂಬುಧಿ
ಗಿಳಿದನಂಬುಜಮಿತ್ರ ಬೆನ್ನಲಿ ತಿಮಿರ ಬಳಿಸಲಿಸೆ
ಗೆಲಿದು ಹೋಗದಿರೆಂದು ಕೌರವ
ನಳವಿಗೊಟ್ಟನು ಮತ್ತೆ ಧರ್ಮಜ
ಬಿಲುದಿರುವ ನೇವರಿಸಿ ನಿಂದನು ಸಮರಕನುವಾಗಿ ೩೮

ರಾಯರಿಬ್ಬರ ಮನದ ತಿಮಿರದ
ತಾಯಿಮನೆಯೆಂಬವೊಲು ತಾ ಪೂ
ರಾಯದಲಿ ನುಂಗಿದುದು ಕತ್ತಲೆ ನಿಮಿಷದಲಿ ಜಗವ
ರಾಯ ಮೋಹರ ತೆಗೆದವೆರಡು ವಿ
ಡಾಯಿಯಲಿ ಬಹುವಿಧದ ವಾದ್ಯ ನ
ವಾಯಿ ಮಿಗೆ ನಲವಿನಲಿ ಬಂದರು ಪಾಳೆಯಂಗಳಿಗೆ ೩೯

## ಐದನೆಯ ಸಂಧಿ

ಸೂ. ವೈರಿ ವಿಜಯಕೆ ತ್ರಿಪುರ ದಹನದ
ಚಾರು ಕಥನವನರುಹಿ ಶಲ್ಯನ
ಸಾರಥಿಯ ಮಾಡಿದನು ಕರ್ಣಗೆ ಕೌರವರರಾಯ

ಕೇಳು ಜನಮೇಜಯ ಧರಿತ್ರೀ
ಪಾಲ ದಿನವೊಂದಾಯ್ತು ಕರ್ಣನ
ಕಾಳೆಗದೊಳಲ್ಲಿಂದ ಮೇಲಣ ವರ ಕಥಾಮೃತವ
ಕೇಳಲಿಚ್ಛೈಸಿದ ಗತಾಕ್ಷ ನೃ
ಪಾಲಕಗೆ ವಿಸ್ತರಿಸಿ ಸಂಜಯ
ಹೇಳಿದನು ಬಳಿಕೆರಡನೆಯ ದಿವಸದ ರಣೋತ್ಸವವ ೧

ಹೊಗಳಿ ಕೆಲವರ ಹೊಳ್ಳುಗಳೆವುತ
ನಗುತ ಕೆಲವರನವರ ಮೋಹರ
ತೆಗೆದು ಹೋಯಿತು ಬಂದುದಿದು ತಂತಮ್ಮ ಪಾಳಯಕೆ
ಹೊಗಳುಭಟ್ಟರ ಸಾಲ ಕೈದೀ
ವಿಗೆಯ ಕಹಳಾರವದ ಲಗ್ಗೆಯ
ಬಿಗುಹಿನಲಿ ಕುರುರಾಯ ಬಂದನು ರಾಜಮಂದಿರಕೆ ೨

ಗುಳವನಿಳುಹಿದವಾನೆಗಳು ಹ
ಲ್ಲಳವ ಬಿಡೆ ಘುಲ್ಲೈಸಿದವು ಹಯ
ಕುಳ ವರೂಥವನಿಳಿದು ಸೂತರು ನಿಲಿಸಿದರು ರಥವ
ಕಳಚಿ ಸೀಸಕ ಜೋಡು ಕೈದುವ
ನಿಳುಹಿ ಸಮರ ಶ್ರಮುವ ನಿಮಿಷಕೆ
ನಿಳಯ ವೇದಿಯಲಿದ್ದು ಕಳೆದುದು ಕೂಡೆ ಪರಿವಾರ ೩

ಘಾಯುವಡೆದಾನೆಗಳು ಗುಳವನು
ಹಾಯಿಕಲು ನೆಲಕುರುಳಿದವು ವಾ
ನಾಯುಜಂಗಳು ಬಿಗುಹ ಬಿಡೆ ದೊಪ್ಪೆಂದವಾಜಿಯಲಿ
ಘಾಯದಲಿ ಮುರಿದಂಬನುಗುಳಿದು
ಸಾಯದಿಹರೇ ಭಟರು ಗಜ ಹಯ
ಲಾಯ ಹತ್ತೊಂದಾಗಿ ಹೆಚ್ಚಿತು ಕೌರವೇಶ್ವರನ ೪

ಬಂದುದಿರುಳೋಲಗಕೆ ರಾಯನ
ಮಂದಿ ದಳಪತಿ ಶಕುನಿ ಕೃಪ ಗುರು
ನಂದನಾದಿ ಪ್ರತತಿ ಸಚಿವ ಪಸಾಯಿತರು ಸಹಿತ
ಇಂದಿನಾಹವದೊಳಗೆ ಕುಂತೀ
ನಂದನರ ಬೊಬ್ಬಾಟ ಬಲುಹಾ
ಯ್ತೆಂದು ಮೆಲ್ಲನೆ ಮಾತ ತೆಗೆದನು ಕೌರವರ ರಾಯ ೫

ಬಲುಹಲೇ ಬಳಿಕೇನು ಹಗೆಯ
ಗ್ಗಳಿಕೆ ಮೆರೆಯದೆ ಮುರವಿರೋಧಿಯ
ಬಲುಹ ಹೇಳಾ ಪಾರ್ಥನೆಂಬವನಾವ ಮಾನಿಸನು
ಬಲುಹು ಸಾರಥಿಯಿಂದ ರಿಪುಗಳ
ಗೆಲವು ಸಾರಥಿಯಿಂದ ಸಾರಥಿ
ಯೊಲಿದಡೇನೇನಾಗದೆಂದನು ಭೂಪತಿಗೆ ಕರ್ಣ ೬

ಭಾರಿ ಧನುವಿದ್ದೇನು ತೋಳಿನ
ತೋರದಲಿ ಫಲವೇನು ಕೈದುಗ
ಳಾರನಂಜಿಸಲಾಪವಾಹವರಂಗ ಮಧ್ಯದಲಿ
ಸಾರಥಿಯು ಬಲುಹಿಲ್ಲದಿರ್ದಡೆ
ಭೂರಿ ಸಾಧನವಿವು ನಿರರ್ಥಕ
ವಾರಿಗುಸುರವೆ ತನ್ನ ಕೊರತೆಯುನೆಂದನಾ ಕರ್ಣ ೭

ತೃಣಕೆ ಕೊಂಬೆನೆ ಫಲುಗುಣನ ಕಣೆ
ಗಿಣೆಯನಾ ಸಾರಥಿಯ ಕೈ ಮೈ
ಗುಣವಲೇ ಗರುವಾಯಿಗೆಡಿಸಿತು ನಮ್ಮ ಮೋಹರವ
ರಣದೊಳೆನಗತಿಶಯದ ಸಾರಥಿ
ಮಣೆದನಾದಡೆ ನಾಳೆ ಹೆಣದಾ
ತಣದಲುಣ ಬಡಿಸುವೆನು ಜಂಬುಕ ಕಾಕ ಸಂತತಿಗೆ ೮

ಲೇಸನಾಡಿದೆ ಕರ್ಣ ನಿನಗಿ
ನ್ನೈಸಲೇ ಸಾರಥಿಯ ಕೊರತೆ ಸು
ರಾಸುರರ ಥಟ್ಟಿನಲಿ ತೊಡಕುವರಾರು ನಿನ್ನೊಡನೆ
ಈ ಸಮಸ್ತ ನೃಪಾಲ ವರ್ಗದೊ
ಳಾಸೆ ಯಾರಲಿ ಸೂತ ಕರ್ಮಾ
ಭ್ಯಾಸಿಯನು ಜೋಡಿಸುವೆನೆಂದನು ಕೌರವರ ರಾಯ ೯

ಹಲವು ಮಾತೇನರಸ ನುಡಿದುದು
ಫಲಿಸಲರಿಯದು ದೈವಗತಿಯಲಿ
ಫಲಿಸಿತಾದಡೆ ರಾಜ್ಯಲಕ್ಷ್ಮಿಗೆ ಸೂಳೆತನವಹುದೆ
ಸುಲಭವಾದಡೆ ಮಾದ್ರರಾಜನ
ತಿಳುಹಿ ಸೈರಿಸು ರಿಪುಗಳೈವರ
ತಲೆಗೆ ಹಾಯಿಕು ಸಂಚಕಾರವನೆಂದನಾ ಕರ್ಣ ೧೦

ಉಬ್ಬಿದನು ರೋಮಾಂಚ ಮೆಯ್ಯಲಿ
ಹಬ್ಬಿದುದು ಹೊರೆಯೇರಿ ಮರವೆಯ
ಮಬ್ಬು ಕವಿದುದು ಕರ್ಣನಾಡಿದ ಮಾತ ಸವಿಸವಿದು
ಟೆಬ್ಬರಿಸುವಿಂದ್ರಿಯ ತುರಂಗದ
ಕಬ್ಬಿ ಕಳಚಿತು ಕೌರವೇಂದ್ರನು
ಸರ್ಬಲಗ್ಗೆಯ ಹರುಷದಲಿ ಹೊರವಂಟನರಮನೆಯ ೧೧

ಹರಿದರರಸಾಳುಗಳು ರಾಯನ
ಬರವನೀತಂಗರುಹಿದರು ಕಡು
ಹರುಷದಲಿ ಕಲಿ ಶಲ್ಯ ಹೊರವಂಟನು ನಿಜಾಲಯವ
ಅರಸುಮಕ್ಕಳ ವಜ್ರಮಣಿಯಾ
ಭರಣ ಕಿರಣಸ್ತೋಮ ದೀಪ
ಸ್ಫುರಿತ ಜನಮಧ್ಯದಲಿ ಕಂಡನು ಕೌರವೇಶ್ವರನ ೧೨

ಅಂದಣವನಿಳಿದರಸನಾತಗೆ
ವಂದಿಸಿದನಾ ಮಾದ್ರಪತಿ ಸಾ
ನಂದದಲಿ ತೆಗೆದಪ್ಪಿ ತಂದನು ರಾಜಮಂದಿರಕೆ
ಇಂದಿದೇನಿದ್ದಿದ್ದು ನೀನೇ
ಬಂದ ಕಾರ್ಯ ವಿಶೇಷವೇನುಂ
ಟೆಂದು ಕೌರವರಾಯನನು ಬೆಸಗೊಂಡನಾ ಶಲ್ಯ ೧೩

ಏನ ಹೇಳುವೆ ನಮ್ಮ ಪುಣ್ಯದ
ಹಾನಿಯನು ಸುಗ್ಗಾಯ್ತು ಬಲ ಸು
ಮ್ಮಾನ ಬೀತುದು ಬಿರುದರಿಗೆ ಕಾಲೂರಿತಪಮಾನ
ಜೈನ ದೀಕ್ಷೆಯ ಹಿಡಿದುದೆನ್ನ ಸ
ಮಾನ ಸುಭಟರು ಜಯಸಿರಿಯ ಸಂ
ಧಾನ ಮುರಿದುದು ಮಾವ ನಿಮಗಜ್ಞಾತವೇನೆಂದ ೧೪

ಸಮರಜಯ ಸಾಧಕರು ಮಂತ್ರ
ಭ್ರಮಿತರಾಯ್ತುಪಜಯವಧೂ ವಿ
ಭ್ರಮ ಕಟಾಕ್ಷದ ಛಾಯದಲಿ ಕಳವಳಿಸದವರಾರು
ಸಮತೆಯಾಯಿತು ತವಕಿಗಳಿಗು
ದ್ಭ್ರಮಿಗಳಿಗೆ ತಿಳಿವಾಯ್ತು ವಾಸಿಯ
ಮಮತೆಯವರು ವಿರಕ್ತರಾದರು ಮಾವ ಕೇಳೆಂದ ೧೫

ಮುರಿವಡೆದು ಕಲಿ ಭೀಷ್ಮನೇ ಕು
ಕ್ಕರಿಸಿದನು ದ್ರೋಣಂಗೆ ಬಂದುದ
ನರುಹಲೇತಕೆ ಬಳಿಕ ಕರ್ಣನ ವೀರಪಟ್ಟದಲಿ
ನೆರವಣಿಗೆಯುಂಟಾದಡೊಂದೇ
ಕೊರತೆಯಿದು ನಿಮ್ಮಿಂದ ಕಡೆಯಲಿ
ನೆರತೆಯಹುದಿನ್ನುತ್ತರೋತ್ತರ ಸಿದ್ಧಿ ಬಳಿಕೆಂದ ೧೬

ದ್ರೋಣ ಭೀಷ್ಮರವೋಲು ನೆಟ್ಟನೆ
ಹೂಣೆಗರು ರಾಧೇಯ ಮಾದ್ರ
ಕ್ಷೋಣಿಪತಿಯೆಂದೆಂಬ ನುಡಿಯುಂಟೆರಡು ಥಟ್ಟಿನಲಿ
ಕೇಣವಿಲ್ಲದ ರಥಗತಿಯ ಬಿ
ನ್ನಾಣವನು ತೋರಿದಡೆ ತನ್ನಯ
ಗೋಣೆಗೊಡ್ಡಿದ ಕೈದುವನು ನೀ ತೆಗೆಸಿದವನೆಂದ ೧೭

ಬರಿದೆ ಬೋಳೈಸದಿರು ಕಾರ್ಯದ
ಹೊರಿಗೆಯೇನದ ಹೇಳು ಮೇಗಡೆ
ಮೆರೆವವರು ನಾವಲ್ಲ ನುಡಿಯಾ ಬಯಲ ಡೊಂಬೇಕೆ
ಅರುಹು ಕೇಳುವೆನೆನಲು ಶಲ್ಯನ
ಬಿರುನುಡಿಗೆ ಬೆಚ್ಚದೆ ಮಹೀಪತಿ
ಯರಿವು ತಪ್ಪದೆ ಬಿನ್ನವಿಸಿದನು ಮಾದ್ರರಾಜಂಗೆ ೧೮

ಮಾವ ಸಾರಥಿಯಾಗಿ ಕರ್ಣನ
ನೀವು ಕೊಂಡಾಡಿದಡೆ ಫಲುಗುಣ
ನಾವ ಪಾಡು ಸುರಾಸುರರ ಕೈಕೊಂಬನೇ ಬಳಿಕ
ಆವುದೆಮಗಭ್ಯುದಯವದ ನೀ
ನಾವ ಪರಿಯಲಿ ಮನ್ನಿಸಿದಡರೆ
ಜೀವ ಕೌರವ ವಂಶವೇ ಸಪ್ರಾಣಿಸುವುದೆಂದ ೧೯

ಕೇಳಿದನು ಕುರುಪತಿಯ ಮಾತಿನ
ಗಾಳಿ ತುಡುಕಿತು ಮನದ ರೋಷ
ಜ್ವಾಲೆಯನು ಮೀಸೆಗಳು ಕುಣಿದವು ಕಾಯ ಕಂಪಿಸಿತು
ಮೇಲು ಮೂಗಿನ ಬೆರಳ ಕಡುಗಾ
ದಾಲಿಗಳ ಮಣಿಮಕುಟದೊಲಹಿನ
ನಾಲಗೆಯ ನಿರ್ದ್ರವದ ಮಾದ್ರಾಧೀಶನಿಂತೆಂದ ೨೦

ಖೂಳನೆಂಬೆನೆ ನೀ ಸಮಸ್ತ ಕ
ಳಾಳಿ ನಿಪುಣನು ಬಾಲನೆಂಬೆನೆ
ಮೇಲೆ ಪಲಿತದ ಬೀಡು ಬಿಟ್ಟಿದೆ ತಳಿತ ತನುವಿನಲಿ
ಹೇಳು ಹೇಳಿನ್ನೊಮ್ಮೆ ನುಡಿ ನುಡಿ
ಕೇಳುವೆನು ಕಿವಿಯಾರೆ ಕರ್ಣನ
ಕಾಳೆಗಕೆ ನಾವ್ ಸಾರಥಿಗಳೇ ಶಿವಶಿವಾ ಎಂದ ೨೧

ತಾರ ತಮತೆಯ ಬಲ್ಲೆ ಪುರುಷರ
ಚಾರು ಚರಿತವನರಿವೆ ಸುಭಟರ
ವೀರ ವೃತ್ತಿಯ ಬಲ್ಲೆ ಮಾನ್ಯರ ಮೈಸಿರಿಯ ತಿಳಿವೆ
ಆರವನು ರಾಧೇಯ ದಿಟ ನಾ
ವಾರವರು ನಮ್ಮಂತರವ ನೀ
ನಾರ ಕೈಯಲಿ ಕೇಳಿದರಿಯಾ ಶಿವಶಿವಾ ಎಂದ ೨೨

ಖೂಳನನು ಹಿಡಿತಂದು ಧರಣೀ
ಪಾಲರಲಿ ಸರಿಮಾಡಿ ರಾಜ್ಯದ
ಮೇಲೆ ನಿಲಿಸಿದೆ ಬಳಿಕ ಬಂದುದು ಖೂಳತನ ನಿನಗೆ
ಕೀಳು ಮೇಲಿನ ಸೀಮೆ ನಿನ್ನಲಿ
ಬೀಳುಕೊಂಡುದು ಸಾಕು ನಮಗಿ
ನ್ನಾಳುತನವೇಕೆನುತ ಧಿಮ್ಮನೆ ನಿಂದನಾ ಶಲ್ಯ ೨೩

ಒಡನೆ ನಿಂದನು ಸೆರಗ ಹಿಡಿದವ
ಗಡಿಸಲೇಕಿನ್ನೆನುತ ಗುಣದಲಿ
ನುಡಿದು ಕುಳ್ಳಿರಿಸಿದನು ಸಂತೈಸಿದನು ವಿನಯದಲಿ
ನುಡಿಗೆ ಕೋಪಿಸಲೇಕೆ ಮನವೊಡ
ಬಡುವುದೇ ಕೈಕೊಂಬುದಲ್ಲದ
ಡೊಡೆಯರುಂಟೇ ನಿಮಗೆ ಎಂದನು ಕೌರವರ ರಾಯ ೨೪

ಅರುಣ ಸಾರಥಿ ಭುವನ ಕಾರ್ಯದ
ಧುರವ ಹೊರನೇ ಕೃಷ್ಣನಲ್ಲಾ
ನರನ ಸಾರಥಿಯಾಗನೇ ಪರಕಾರ್ಯದನುವರಿದು
ಹರನ ಸಾರಥಿ ಕಮಲಸಂಭವ
ಸುರರ ಕಾರ್ಯಕ್ಕೊದಗನೇ ಸ
ತ್ಪುರುಷರೇ ಪರಕಾರ್ಯನಿಷ್ಠರು ಕೋಪವೇಕೆಂದ ೨೫

ಸವರಿದರು ಕುರುವಂಶವನು ಪಾಂ
ಡವರು ಸಕಲ ಮಹಾರಥರು ಸಲೆ
ಸವೆದುದಿಲ್ಲಿ ನದೀಸುತ ದ್ರೋಣಾದಿಗಳು ಸಹಿತ
ಅವರೊಳಳಿದವರಿಬ್ಬರೇ ನೀ
ವವಸರಕೆ ಸಾರಥ್ಯವನು ನಿ
ಮ್ಮವರ ಮೇಲನುರಾಗವುಳ್ಳಡೆ ಮಾಡು ಮಾಣೆಂದ ೨೬

ನಿನ್ನ ಕೈಯಲಿ ಬರಲಿ ಸತ್ತಿಗೆ
ಯೆನ್ನ ಕೈಯಲಿ ಹೊಡೆಸು ಬಂಡಿಯ
ನಿನ್ನ ತಮ್ಮನ ಹೆಗಲಲಾತನ ಹಡಪ ಹಾಯ್ಕಿರಲಿ
ನಿನ್ನ ಬಂಧುಗಳವನ ಬೇಂಟೆಯ
ಕುನ್ನಿಗಳ ಹಿಡಿಯಲಿ ಸುಯೋಧನ
ನಿನ್ನ ಭಾಗ್ಯವನೊದೆದು ಕಳೆ ಕೇಡಾವುದೆಮಗೆಂದ ೨೭

ಗೆಲುವೆನವದಿರನೆಂಬ ಬರಿಕ
ಕ್ಕುಲಿತೆಯಲ್ಲದೆ ದ್ರೋಣಭೀಷ್ಮರಿ
ಗಳುಕದರಿಭಟರಿವನ ಕೊಂಬರೆ ಕಂಡು ಮರುಳಾದೈ
ಬಲುಬಿದಿರನುಚ್ಚಳಿಸುವಳಿಮುಖ
ಕೆಳೆಯ ಕಬ್ಬಾನುವುದೆ ಕೌರವ
ಕುಲವನದ್ದಿದೆ ಪಾಪಿ ಕಷ್ಟವ ನೆನೆದೆ ಹೋಗೆಂದ ೨೮

ಅರಿಶಿರವ ಸೆಂಡಾಡಿ ಎನ್ನೀ
ಕರವು ವಂದಿ ವ್ರಾತದೆಡರನು
ಪರಿಹರಿಸಿತೀ ಹದನು ನಾವ್ ಹಿಂದೀಸು ಕಾಲದಲಿ
ಧರಣಿಪತಿ ನಿನ್ನಿಂದ ಕರ್ಣನ
ತುರಗ ವಾಘೆಯ ಚಮ್ಮಟಿಗೆಗೀ
ಕರವು ಹೂಡುವುದಾಯ್ತು ಹರಹರ ಧನ್ಯರಾವೆಂದ ೨೯

ಜಾತಿಹೀನರ ಕರ್ಮವೃತ್ತಮ
ಜಾತಿಗಳ ಕರ್ತವ್ಯ ತಿರ್ಯ
ಗ್ಜಾತಿಗಳ ಗತಿ ಧರ್ಮವೃತ್ತಿಯ ಸೇರುವೆಯನರಿದು
ಆತನಳವಡಿಸಿದನು ವಿಧಿ ನಿಮ
ಗಾತ ಮಾಡಿದನಳಿವ ಸಾಮ
ರ್ಥ್ಯಾತಿಶಯವುಂಟೈಸಲೇ ಶಿವಯೆನುತ ಖತಿಗೊಂಡ ೩೦

ಆಸುರದ ಬೆರಗೇಕೆ ನವ್ಮೊಡ
ನೀಸು ಮಾತೇಕೆಮ್ಮ ರಕ್ಷಿಸು
ವಾಸೆಯುಂಟೇ ಮಾಡಿ ಮಾಣ್ಬುದು ಕರುಣವಿಲ್ಲದಡೆ
ವಾಸಿವಟ್ಟವ ನೋಡಿದನೆ ಲ
ಕ್ಷ್ಮೀಶನವರಲಿ ಸೂತ ಕರ್ಮಾ
ಭ್ಯಾಸಿಯೇ ಮುರವೈರಿ ಮುನ್ನೆಂದನು ಸುಯೋಧನನು ೩೧

ಮುರಹರನ ಸಮುಜೋಳಿ ನೀವಾ
ನರನ ಸಮಗೈ ಕರ್ಣನಿಂತಿ
ಬ್ಬರನು ನೀವಿಬ್ಬರು ವಿಭಾಡಿಸಿ ಗೆಲುವುದೇನರಿದು
ಸುರರ ಕಾರ್ಯದಲಂದು ಸಾರಥಿ
ಸರಸಿಜೋದ್ಭವನಾಗನೇ ಎ
ನ್ನರಸುತನವಿಂದಳಿದುದಿದ ನೀನುಳುಹಬೇಕೆಂದ ೩೨

ಒಣಗುತಿದೆ ಕುರುವಂಶಲತೆ ಫಲು
ಗುಣನ ಕೋಪಾನಳನ ನಾಲಗೆ
ಕೆಣಕುತಿದೆ ಕಕ್ಕುಲಿತೆಬಟ್ಟರೆ ಕಾಣೆ ಕಾವವರ
ಅಣಕಿಸದೆ ಕಾರುಣ್ಯ ವರ್ಷವ
ನೊಣಗಲಲಿ ಸುರಿ ಪಾಪಿ ಮಕ್ಕಳ
ಹೆಣನ ಕಾಣುತ ದುಃಖವಿಲ್ಲ ದುರಾತ್ಮ ನೀನೆಂದ ೩೩

ದೇವಕೀಸುತನೇನು ಬಂಡಿಯ
ಬೋವಗುಲದಲಿ ಜನಿಸಿದನೆ ಮೇ
ಣಾ ವಿರಿಂಚಿಯದಾವ ಸಾರಥಿಕುಲದ ಪೀಳಿಗೆಯೊ
ಕಾವುದೊಬ್ಬರನೊಬ್ಬರಿದರೊಳ
ಗಾವ ಹಾನಿ ಪರ ಪ್ರಯೋಜನ
ಭಾವಕರು ಸತ್ಪುರುಷರಿದಕೆ ವಿಚಾರವೇನೆಂದ ೩೪

ಗುರು ಪಿತಾಮಹರಿಂದ ಮೋರೆಯ
ಮುರಿದ ವಿಜಯ ವಧೂ ಕಟಾಕ್ಷವ
ತಿರುಹಿ ಹಾಯ್ಕುವ ಗಂಡನಾವನು ನೀವು ತಪ್ಪಿದಡೆ
ಕುರು ಕುಲೋದ್ಧಾರಕನು ಮಾದ್ರೇ
ಶ್ವರನೆನಿಪ ವಿಖ್ಯಾತಿ ಬಂದುದು
ಪರಿಹರಿಸದಿರು ಮಾವ ಎಂದೆರಗಿದನು ಚರಣದಲಿ ೩೫

ಶಿವ ಶಿವಾ ನಿರ್ಬಂಧವಿದು ಕೌ
ರವನಲಾಯಿತೆ ಮದ್ಯಮಯು ಗಂ
ಧವನು ಕುಡಿಸುವ ಪರಿಯುಲಾ ತುಂಬಿಗಳ ಸೆರೆವಿಡಿದು
ಅವನಿಪತಿಗಳ ಸೇವೆಯಿದು ಕ
ಷ್ಟವಲೆ ಮೊದಲಲಿ ಬಳಿಕ ನಾವಿ
ನ್ನವಗಡಿಸಲೇನಹುದು ಸಾರಥಿಯಾದೆವೇಳೆಂದ ೩೬

ಆಯಿತೇ ಸಂತೋಷ ಕಮಲದ
ಳಾಯತೇಕ್ಷಣನೊಡನೆ ಬಂಡಿಯು
ಬೋಯಿಕೆಗೆ ವೀಳೆಯವ ಹಿಡಿದೆವು ಹಲವು ಮಾತೇನು
ದಾಯ ಬಂದುದೆ ನಿನಗೆ ಬೊಮ್ಮಂ
ಗಾಯಿತೇ ಸೂತತ್ವವಾದಡೆ
ರಾಯ ಹೇಳೈ ತ್ರಿಪುರ ದಹನದ ಕಥೆಯ ನೀನೆಂದ ೩೭

## ಆರನೆಯ ಸಂಧಿ

ಸೂ. ನಗರ ಮೂರರ ದೂರುಕಾರರ
ದುಗುಡವನು ಪರಿಹರಿಸಿ ಕರುಣಾ
ಳುಗಳರಸ ಶಿವ ಸಂತವಿಟ್ಟನು ಸುರ ಕದಂಬಕವ

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವ ನೃಪತಿ ಶಲ್ಯಗೆ
ಹೇಳಿದನು ಸಾರಥ್ಯ ಸಂಯೋಜನ ಸಮಾಹಿತವ
ಲೋಲನಾಪರಿಕರ್ಮತರು ನಿ
ರ್ಮೂಲನೈಕಕ್ಷಮ ಸುಧಾಕರ
ಮೌಳಿ ಕೇಳೀ ಕಲಿತ ವಿಸ್ತರ ವರ ಕಥಾಂತರವ ೧

ತಾರಕನ ಮಕ್ಕಳುಗಳೆನಿಸುವ
ತಾರಕಾಕ್ಷನು ಕಮಳಲೋಚನ
ವೀರ ವಿದ್ಯುನ್ಮಾಲಿಯೆಂಬೀ ಮೂವರತಿಬಳರು
ಘೋರತರ ಸುತಪಃಪ್ರಭಾವಿ
ಸ್ತಾರಿಗಳಸಂಖ್ಯಾತ ಯುಗದಲಿ
ವಾರಿಜೋದ್ಭವನನು ವಶೀಕರಿಸಿದರು ಭಕುತಿಯಲಿ ೨

ಬಂದು ಕಮಲಜನಿವದಿರಿದಿರಲಿ
ನಿಂದನೆಲೆ ಋಷಿಗಳಿರ ಸಾಕಿ
ನ್ನೆಂದು ಪರಿಯಂತೀ ತಪೋನುಷ್ಠಾನದಾಯಾಸ
ನಿಂದು ಬೇಡುವುದೊಲಿದುದನು ನಾ
ವಿಂದು ಸಲಿಸುವೆವೆನಲು ನಿಮಿಷಕೆ
ಕಂದೆರೆದು ಕಮಳಾಸನಂಗೆರಗಿದರು ಭಕ್ತಿಯಲಿ ೩

ಎನಿತನೊಲಿದಡೆ ಏನಹುದು ದು
ರ್ಜನರು ಪುರುಷಾರ್ಥಿಗಳೆ ಹಾವಿಂ
ಗನಿಲವೇ ಆಹಾರವಾದಡೆ ಬಿಟ್ಟುದೇ ವಿಷವ
ದನುಜರದ್ಭುತ ತಪವ ಮಾಡಿದ
ರನಿಮಿಷಾವಳಿ ಬೇಂಟೆಯಾಡಲು
ನೆನೆದು ಬಿನ್ನೈಸಿದರು ಕಮಲಭವಂಗೆ ನಿಜಮತವ ೪

ರಚಿಸುವೆವು ಪುರ ಮೂರನಗ್ಗದ
ಖಚರ ಕಿನ್ನರ ಸಿದ್ಧ ನಿರ್ಜರ
ನಿಚಯುವೆಮಗೋಲೈಸಿ ಹೋಗಲಿ ಹಲವುಮಾತೇನು
ಉಚಿತದಲಿ ನಿಮ್ಮಡಿಗಳನು ಪರಿ
ರಚಿಸಲಾವೋಲೈಸಿಸುವೆವು ವರ
ವಚನ ನಿಮ್ಮದು ಕರುಣಿಸುವುದಮರತ್ವವನು ನಮಗೆ ೫

ಹಾ ಮಹಾದೇವೀ ಕುಠಾರರ
ತಾಮಸದ ನೆನಹಿದ್ದ ಪರಿಯಿಂ
ತೀ ಮಹಾನುಷ್ಠಾನವಿದರಲಿ ಶಾಂತಿ ಲವವಿಲ್ಲ
ಕಾಮಿತವನಿವದಿರಿಗೆ ಕೊಟ್ಟರೆ
ಕಾಮಹರ ಕಮಳಾಕ್ಷರಿಗೆ ಸಂ
ಗ್ರಾಮದಲಿ ಜಯವಾಗದೆಂದಡಿಗಡಿಗೆ ಬೆರಗಾದ ೬

ಹುಲಿಗೆ ಧೈರ್ಯವನೆರಕೆಗಳನಹಿ
ಗಳಿಗೆ ಖಳರಿಗೆ ಲಕ್ಷ್ಮಿಯನು ಕ
ತ್ತಲೆಗೆ ಕಾಠಿಣ್ಯವನು ಚೈತನ್ಯವನು ಗಿರಿಗಳಿಗೆ
ಕೊಲೆಗಡಿಕರಿಗೆ ನಿತ್ಯದೇಹವ
ನೊಲಿದು ಕೊಟ್ಟರೆ ಲೇಸು ಬಳಿಕೇ
ನೆಲೆ ಮಹಾದೇವೇನ ನೆನೆದರೊ ಶಿವಶಿವಾ ಎಂದ ೭

ಪುರವ ವಿರಚಿಸಿ ದಿವ್ಯ ಸಾಸಿರ
ವರುಷ ಕೈಗೂಡಿದರೆ ಒಂದೇ
ಸರಳಲಾವವನೆಚ್ಚಡಾಗಳೆ ನಿಮಗೆ ಕಡೆಗಾಲ
ಬರಲಿ ಬಳಿಕಿಂದ್ರಾದಿ ನಿರ್ಜರ
ನೊರಜುಗಳ ನೀವ್ ಸದೆಯಿ ಹೋಗೆಂ
ದರಸ ಕೇಳೈ ಕೊಟ್ಟನವರಿಗೆ ಕಮಲಭವ ವರವ ೮

ಕರುಣವಿನಿತೇ ಸಾಕು ನಮಗೇ
ನುರದಲೊಗೆದವೆ ಮೊಲೆಗಳೆಮ್ಮಯ
ಪುರವನೊಂದಂಬಿನಲಿ ಗೆಲುವನ ತಾಯಿ ಹುಸಿಯೆನುತ
ದುರುಳರೀತನ ಬೀಳುಕೊಂಡು
ಬ್ಬರದ ಹರುಷದಿ ಹೆಚ್ಚಿ ಮಯನನು
ಕರಸಿ ಮಾಡಿಸಿದರು ಮಹಾ ವಿಭವದಲಿ ನಗರಗಳ ೯

ಕನಕದಲಿ ರಜತದಲಿ ಬಲುಗ
ಬ್ಬುನದಲೊಂದೊಂದಕ್ಕೆ ಶತ ಯೋ
ಜನದ ತೆರಹುಗಳೆಡೆಗೆ ಹಬ್ಬಿಸುವಮಳ ತೋರಣದ
ವಿನುತ ನಗರಿಗಳಾದುವಲ್ಲಿಯು
ದನುಜರೆರೆಗಳ ಹಾಯ್ಕಿ ಗಾಣದ
ಲನಿಮಿಷರನೀಡಾಡಿ ಕೊಂಡರು ದುರ್ಗವನು ಸುರರ ೧೦

ಸೂರೆವೋಯಿತು ಸುರಪತಿಯ ಭಂ
ಡಾರ ಹೆಂಡಿರು ಸಹಿತ ನಿರ್ಜರ
ನಾರಿಯರು ತೊತ್ತಾದರಮರಾರಿಗಳ ಮನೆಗಳಿಗೆ
ಮೂರು ಭುವನದೊಳಿವದಿರಾಣೆಯ
ಮೀರಿ ಬದುಕುವರಿಲ್ಲ ಕಡೆಯಲಿ
ತಾರಕನ ಮಕ್ಕಳಿಗೆ ಕೈವರ್ತಿಸಿತು ಜಗವೆಂದ ೧೧

ನೆರೆದುದಮರರು ಹಾಳು ಹರಿ ಸಾ
ಗರದ ಕಡೆಯಲಿ ರೂಹುಗಳೆದು
ಟ್ಟಿರುವೆಗಳ ಕಾಳಿಕೆಯ ಮೋರೆಯ ತಾರಿದೊಡಲುಗಳ
ಹುರಿದ ಧೈರ್ಯದ ತಳ್ಳವಾರುವ
ತರಳ ಹೃದಯದ ದೇವರಿಂದ್ರನ
ನರಸಿ ಕಂಡರು ತಮ್ಮೊಳಾಳೋಚನೆಯ ಮಾಡಿದರು ೧೨

ತಾರಕನ ಮಕ್ಕಳುಗಳೇ ಹಿಂ
ದಾರ ಗೆಲಿದರು ತಪವ ಮಾಡಿ ವಿ
ಕಾರಿಗಳು ಬ್ರಹ್ಮಂಗೆ ಬಂದಿಯನಿಕ್ಕಿದರು ಬಳಿಕ
ವಾರಿಜೋದ್ಭವ ಮೇಲನರಿಯ ಕು
ಠಾರ ನಾಯ್ಗಳ ಹೆಚ್ಚಿಸಿದನಿದ
ನಾರಿಗರುಪುವೆವೆಂದು ಸುಯ್ವರು ಬಯ್ದು ಕಮಲಜನ ೧೩

ಆದರೆಯು ನಮಗಾತನೇ ಗತಿ
ಯೀ ದುರಾತ್ಮರಿಗೆಂದು ಹರಿವೆಂ
ದಾದರಿಸಿ ಕೇಳುವೆವೆನುತ ಕಮಲಜನ ಹೊರೆಗೈದಿ
ಖೇದವನುಸುರಿದರು ಪಿತಾಮಹ
ನಾ ದಿವಿಜಗಣ ಸಹಿತ ಬಂದನು
ವೇದಸಿದ್ಧ ವಿಶುದ್ಧ ದೈವವ ಕಾಬ ತವಕದಲಿ ೧೪

ಬಂದು ಕೈಲಾಸಾದ್ರಿಯಲಿ ಗಿರಿ
ನಂದನಾವಕ್ಷೋಜ ಘುಸೃಣ
ಸ್ಕಂಧತನು ಚಿನ್ಮಯ ನಿರಂಜನ ಭೂರಿ ಪಂಜರನ
ವಂದ್ಯಮಾನ ಸುರಾಸುರೋರಗ
ವೃಂದ ಮಣಿಮುಕುಟ ಪ್ರಭಾ ನಿ
ಷ್ಯಂದ ಭೂಯಸ್ತಿಮಿತಕಾಯನ ಕಂಡನಬುಜಭವ ೧೫

ಕೊರಳ ಕಪ್ಪಿನ ಚಾರು ಚಂದ್ರಾ
ಭರಣ ಮೂರ್ಧದ ಭಾಳನಯನದ
ಭರಿತ ಪರಿಮಳದಂಗವಟ್ಟದ ಜಡಿದ ಕೆಂಜೆಡೆಯ
ಕರಗಿ ಕಾಸಿದ ವಿದ್ಯೆಯನು ಬೇ
ರಿರಿಸಿ ಶುದ್ಧಬ್ರಹ್ಮವನು ಕಂ
ಡರಿಸಿದಂತಿರಲೆಸೆವ ಶಿವನನು ಕಂಡನಬುಜಭವ ೧೬

ವೇದವರಿಯದ ತರ್ಕವಿದ್ಯಾ
ವಾದ ನಿಲುಕದ ಬುಧರ ಮತಿ ಸಂ
ಪಾದನೆಗೆ ಮುಖಗೊಡದ ವಾಚ್ಯಾಯನರ ಚೇತನಕೆ
ಹೋದ ಹೊಲಬಳವಡದ ಬ್ರಹ್ಮೇಂ
ದ್ರಾದಿ ಸುರರುಬ್ಬಟೆಗೆ ಸೋಲದ
ನಾದಿ ದೇವರದೇವ ಶಿವನನು ಕಂಡನಬುಜಭವ ೧೭

ಕಂತುಹರನನು ವಿಮಳನನು ವೇ
ದಾಂತ ವೇದ್ಯನನದ್ವಿತೀಯನ
ಚಿಂತ್ಯ ಮಹಿಮನ ಸಚ್ಚಿದಾನಂದೈಕರಸಮಯನ
ಅಂತ್ಯರಹಿತನನಪ್ರಮೇಯನ
ನಂತರೂಪನನಂಘ್ರಿಭಜಕ ಭ
ವಾಂತಕನನುದ್ದಂಡ ದೈವವ ಕಂಡನಬುಜಭವ ೧೮

ಇದ್ದುದಗಣಿತ ರುದ್ರ ಕೋಟಿಗ
ಳಿದ್ದುದನುಪಮ ವಿಷ್ಣು ಕೋಟಿಗ
ಳಿದ್ದುದಂಬುಜಭವ ಸುರೇಂದ್ರಾದಿಗಳು ಶತಕೋಟಿ
ಇದ್ದುದಮಳಾಮ್ನಾಯ ಕೋಟಿಗ
ಳಿದ್ದುದಗಣಿತ ಮಂತ್ರಮಧ್ಯದೊ
ಳಿದ್ದ ನಿರ್ಮಳ ಖಂಡಪರಶುವ ಕಂಡನಬುಜಭವ ೧೯

ಪುಳಕ ಜಲವುಬ್ಬರಿಸೆ ಕುಸುಮಾಂ
ಜಳಿಯನಂಘ್ರಿದ್ವಯಕೆ ಹಾಯಿಕಿ
ನಳಿನಭವ ಮೆಯ್ಯಿಕ್ಕಿದನು ಭಯಭರಿತ ಭಕ್ತಿಯಲಿ
ಬಳಿಯಲಮರೇಂದ್ರಾದಿ ದಿವಿಜಾ
ವಳಿಗಳವನಿಗೆ ಮೆಯ್ಯ ಚಾಚಿದ
ರುಲಿವುತಿರ್ದುದು ಜಯಜಯ ಧ್ವಾನದಲಿ ಸುರಕಟಕ ೨೦

ಪರಮಕರುಣ ಕಟಾಕ್ಷರಸದಲಿ
ಹೊರೆದು ಕಮಳಾಸನನ ಹತ್ತಿರೆ
ಕರೆದು ಮನ್ನಿಸಿ ನಿಖಿಳ ನಿರ್ಜರ ಜನವ ಸಂತೈಸಿ
ಬರವಿದೇನಿದ್ದಂತೆ ವಿಶ್ವಾ
ಮರ ಕದಂಬಕ ಸಹಿತ ವಿಂದಂ
ಬುರುಹಭವನನು ನಸುನಗುತ ನುಡಿಸಿದನು ಶಶಿಮೌಳಿ ೨೧

ತಾರಕನ ಮಕ್ಕಳುಗಳಿಗೆ ನೆರೆ
ಸೂರೆವೋದುದು ಸುರರ ಸಿರಿ ಮು
ಮ್ಮಾರುವೋದುದು ಸುರರ ಸತಿಯರು ಖಳರ ಮನೆಗಳಿಗೆ
ಚಾರು ವೈದಿಕ ಹವ್ಯಕವ್ಯ ವಿ
ಹಾರ ವೃತ್ತಿಗಳಳಿದವಿದನವ
ಧಾರಿಸೆಂದಬುಜಾಸನನು ಮಾಡಿದನು ಬಿನ್ನಹವ ೨೨

ನಗೆಯ ಮೊಳೆ ನಸುಹೊಳೆಯೆ ಬೊಮ್ಮನ
ಮೊಗವ ನೋಡಿದನಭವನೀಶನ
ಬಗೆಯ ಭಾವವನರಿದು ತಲೆಗುತ್ತಿದನು ಕಮಲಭವ
ದುಗುಡವನು ಬಿಡಿ ನಿಖಿಳ ದಿವಿಜಾ
ಳಿಗಳು ಪಶುಗಳಲಾ ವಿರಿಂಚನ
ವಿಗಡತನದಲಿ ಕೆಟ್ಟಿರಕಟಿನ್ನಂಜಬೇಡೆಂದ ೨೩

ಪಶುಪತಿತ್ವವ ನಮಗೆ ಕೊಡಿ ನೀವ್
ಪಶುಗಳಾಗಿರಿ ಪಾಶುಪತ ವರ
ನಿಶಿತ ಶರದಲಿ ದೈತ್ಯ ದುರ್ಗವನುರುಹಿ ತೋರುವೆವು
ದೆಸೆದೆಸೆಗೆ ಹರೆದಖಿಳದೇವ
ಪ್ರಸರವನು ನೀವ್ ನೆರಹಿ ಮೇಲಿ
ನ್ನಸಮುಸೆಗೆ ಹೆದರದಿರಿ ಎಂದನು ನಗುತ ಮದನಾರಿ ೨೪

ಜಾರಿದುಬ್ಬಿನ ಹೊತ್ತ ಮುಗುಡದ
ಮೋರೆಗಳ ಮೋನದ ನಿಹಾರದ
ದೂರುಗಂಗಳ ದೇವ ನಿಕರವ ಕಂಡು ಕರುಣದಲಿ
ಏರುವಡೆದುದು ಮನದವಿದ್ಯೆಗೆ
ಮಾರುವೋದಿರಲಾ ಎನುತ ಶಿವ
ತೋರಿ ನುಡಿದನು ಪಾಶುಪತ್ಯದ ಸಾರ ಸಂಗತಿಯ ೨೫

ಕರ್ಮಕಿಂಕರರಾಗಿ ಕೃತ ದು
ಷ್ಕರ್ಮವಾಸನೆವಿಡಿದು ತಾನೇ
ಕರ್ಮಕರ್ತನು ಭೋಗಿ ತಾನೇ ದುಃಖಿ ಸುಖಿಯೆಂದು
ನಿರ್ಮಳಾತ್ಮನೊಳೀಯಹಂಕೃತಿ
ಧರ್ಮವನೆ ನೇವರಿಸಿ ಮರುಗುವ
ದುರ್ಮತಿಗಳನು ಪಶುಗಳೆಂದರೆ ಖೇದವೇಕೆಂದ ೨೬

ಪಂಚವಿಂಶತಿ ತತ್ವರೂಪದ
ಸಂಚವರಿಯದೆ ನೀತಿಮುಖದಲಿ
ರಂಚೆಗಾಣದೆ ಸಗುಣಮಯ ನೀಹಾರದಲಿ ಮುಳುಗಿ
ಮಿಂಚುವೆಳಗಿನ ಬಳಕೆಯಲಿ ಮನ
ಮುಂಚಿ ಮೈಗೊಂಡಳಲುವಾತುಮ
ವಂಚಕರು ನೀವ್ ಪಶುಗಳೆಂದರೆ ಖೇದವೇಕೆಂದ ೨೭

ತೋರುವೀ ಜಗವೆಲ್ಲ ಬೊಮ್ಮವೆ
ತೋರುತಿದೆಯೆನಿಪರ್ಥದಲಿ ಸಲೆ
ತೋರುವೀ ಜಗಕೆಲ್ಲ ಪರತತ್ವದಲಿ ಪರಿಣಾಮ
ತೋರುವೀ ತೋರಿಕೆಯೊಳಗೆ ಸಲೆ
ಮೀರಿ ತೋರುವ ನಿಜವನರಿಯದ
ಗಾರುಗಳು ನೀವ್ ಪಶುಗಳೆಂದರೆ ಖೇದವೇಕೆಂದ ೨೮

ಆದಿಭೌತಿಕದಿಂದ ನೊಂದು ವಿ
ರೋಧಿ ಷಡ್ವರ್ಗದ ವಿಕಾರ
ವ್ಯಾಧಿಯಲಿ ಬೆಂಡಾಗಿ ಭವಪಾಶದಲಿ ಬಿಗಿವಡೆದು
ವಾದ ರಚನೆಯ ಬಲೆಗೆ ಸಿಲುಕಿ ವಿ
ರೋಧಗೊಂಬೀ ಮೋಹ ವಿದ್ಯಾ
ಸಾಧಕರು ನೀವ್ ಪಶುಗಳೆಂದರೆ ಖೇದವೇಕೆಂದ ೨೯

ಪಶುಪತಿಯೆ ಪರಮಾತ್ಮ ಜೀವರು
ಪಶುಗಳೀ ಪರಿ ಜೀವ ಭಾವದೊ
ಳೆಸಗುವರು ನೀವ್ ಪಶುಗಳೀಗಳು ನಿಮ್ಮ ರಕ್ಷಣವ
ಪಸರಿಸುವ ಪರಮಾತ್ಮ ತಾನೀ
ಘಸಣಿ ನಿಮಗೇಕೆಂದು ದೇವ
ಪ್ರಸರವನು ತಿಳುಹಿದನು ಕಾರುಣ್ಯದಲಿ ಕಾಮಾರಿ ೩೦

ತುಂಬಿಕೊಟ್ಟುದವಿದ್ಯೆಯನು ಸುಧೆ
ಗೊಬ್ಬುಗಳ ಗಂಡಿಗರ ಗಾಢದ
ಗರ್ಭವನು ಹೊಳ್ಳಿಸಿತು ಗರಳಗ್ರೀವನುಪದೇಶ
ಹುಬ್ಬಿನಲಿ ಮಾತಾಡಿ ತಮ್ಮೊಳ
ಗೊಬ್ಬರೊಬ್ಬರು ತಿಳಿದು ಸಕಳ ಸು
ಪರ್ಬಜನವೆರಗಿದುದು ಜಯಜಯ ಎನುತ ಪಶುಪತಿಗೆ ೩೧

ಜಗವುಘೇ ಎಂದುದು ಜಯಧ್ವನಿ
ಜಗವ ಝೊಂಪಿಸಿತೊಗ್ಗಿನಂಜುಳಿ
ಗಗನದಗಲಕೆ ಕುಣಿವುತಿದ್ದುದು ಸುರರ ಭಾಳದಲಿ
ಬೆಗಡು ಬೀತುದು ಬೇಸರಿನ ಬಲು
ದಗಹು ಸೋತುದು ಶಿವಗೆ ದೈತ್ಯಾ
ರಿಗಳು ಮುದದಲಿ ಮಾಡಿದರು ಮೂರ್ಧಾಭಿಷೇಚನವ ೩೨

ಪಾಶುಪತ್ಯದ ಪಟ್ಟವಾಯ್ತು ಮ
ಹೇಶನಲಿ ಬ್ರಹ್ಮಾದಿ ದೇವರು
ಪಾಸಿವಟ್ಟವ ಬಿಟ್ಟರೋಲೈಸಿದರು ಪಶುಪತಿಯ
ಪಾಶುಪತ ಸುವ್ರತವ ಧರಿಸಿದು
ದಾ ಸುಪರ್ವಸ್ತೋಮ ವಿಶ್ವಾ
ಧೀಶನೆಸೆದನು ಕೋಟಿ ಶತಸೂರ್ಯ ಪ್ರಕಾಶದಲಿ ೩೩

## ಏಳನೆಯ ಸಂಧಿ

ಸೂ. ಕಾಮಕೋಳಾಹಳನು ದಕ್ಷನ
ಹೋಮದಳವುಳಕಾರ ಹರ ನಿ
ಸ್ಸೀಮದಲಿ ಪುರ ಮೂರ ಗೆಲಿದನು ಸಲಹಿದನು ಸುರರ

ರಚಿಸಿ ರಥವನು ಭೀತಿ ಬೇಡಿ
ನ್ನುಚಿತವೇನದ ಮಾಡಿ ದೈತ್ಯ
ಪ್ರಚಯವನು ಪರಿಹರಿಸಿ ಕೊಡುವುದು ಪಾಶುಪತ ಬಾಣ
ಕುಚಿತರಿನ್ನೇಗುವರು ಖಳರಿ
ನ್ನಚಳಿತವಲೇ ನಿಮ್ಮ ಪದವೆನೆ
ನಿಚಿತಪರುಷರು ವಿಶ್ವಕರ್ಮಂಗರುಹಿದರು ಹದನ ೧

ಮಾವ ಕೇಳದುಭುತವನೀ ವಿ
ಶ್ವಾವನೀತಳವಾಯ್ತು ರಥ ತಾ
ರಾವಳಿಗಳೀಸಾಯ್ತು ಸತ್ತಿಗೆಯಾಯ್ತು ಕನಕಾದ್ರಿ
ಆವುದಯ ಘನ ಶೈಲವಸ್ತ್ರ
ಗ್ರಾವ ಕೂಬರ ರಥದಧಿಷ್ಠಾ
ನಾವಲಂಬನವಾಗೆ ರಚಿಸಿದನಾತ ನಿಮಿಷದಲಿ ೨

ಆಸುರವಲೇ ವಿಂಧ್ಯ ಹಿಮಗಿರಿ
ಹಾಸು ಹಲಗೆಗಳಾದವಚ್ಚು ಮ
ಹಾಸಮುದ್ರವೆ ಆಯ್ತು ಗಾಲಿಗೆ ಬೇರೆ ತರಲೇಕೆ
ಆ ಸಸಿಯ ಸೂರಿಯನ ಮಂಡಲ
ವೈಸಲೇ ಗಂಗಾದಿ ಸಕಲ ಮ
ಹಾ ಸರಿತ್ಕುಲವಾಯ್ತು ಚಮರಗ್ರಾಹಿಣಿಯರಲ್ಲಿ ೩

ರಾಯ ಕೇಳೈ ಮತ್ತೆ ಯಾಹವ
ನೀಯ ಗಾರುಹಪತ್ಯ ದಕ್ಷಿಣಾ
ವಾಯುಸಖರಾದರು ತ್ರಿವೇಣುಕಪಾ ರಥಾಗ್ರದಲಿ
ಆಯಿತಲ್ಲಿ ವರೂಥ ನಕ್ಷ
ತ್ರಾಯುತವು ಬಳೆಯನುಕರುಷರ್ವೊಂ
ದಾಯಿತಾ ಗ್ರಹರಾಜಿಯಾದವು ಮಾವ ಕೇಳೆಂದ ೪

ಆ ರಥಾಗ್ರಕೆ ವೇದ ನಾಲುಕು
ವಾರುವಂಗಳ ಹೂಡಿದರು ನೊಗ
ನಾ ರಜನಿ ದಿನ ಮಾಸವುತ್ತರದಕ್ಷಿಣಾಯನವು
ಸಾರ ಧೃತಿ ವೇದಪ್ರತತಿ ವಿ
ಸ್ತಾರವಾದವು ನೊಗನ ಕೀಲ್ಗಳು
ಚಾರು ಕುಲಫಣಿನಿಕರ ಹಯಬಂಧನದ ನೇಣುಗಳು ೫

ಮಿಳಿಗಳಾದವು ಕುಹು ಸುತಾರಾ
ವಳಿಗಳವಳ ಪ್ರಣವವಾದುದು
ಮೊಳೆಯ ಬಲುಚಮ್ಮಟಿಗೆ ಹಗ್ಗಕೆ ವರ ಷಡಂಗಮವು
ನಿಲಿಸಲಖಿಳ ಕ್ರತು ರಥಾಂಗಾ
ವಳಿಗಳಾದವು ವಿವಿಧವರ್ಣದ
ಜಲದಪಟಲ ಪತಾಕೆಯಾದವು ರಥದ ಬಳಸಿನಲಿ ೬

ಕಾಲದಂಡದ ರೌದ್ರದಂಡ ಕ
ರಾಳ ರಥ ಸೀಮಾಗ್ರ ದಂಡ ವಿ
ಶಾಲ ವಿಮಳ ಬ್ರಹ್ಮದಂಡದ ಸಾಲು ಚೆಲುವಾಯ್ತು
ಮೇಲುವಲಗೆಯ ಸುತ್ತ ಚಮರೀ
ಜಾಳ ಕನಕಧ್ವಜದ ತುದಿಯಲಿ
ಮೇಳವಿಸಿದನು ವಿಶ್ವಕರ್ಮನು ವಿಪುಳ ಶಾಕ್ವರವ ೭

ಅರಸ ಕೇಳ್ ಋತುಚರಿತ ಸಂವ
ತ್ಸರವೆ ಧನು ತತ್ಕಾಳ ರಾತ್ರಿಯೆ
ತಿರುವಿದೇನಾಶ್ಚರ್ಯವೈ ಶಿವ ಕಾಲರೂಪಿನಲಿ
ಸರಳ ರಚನೆಗೆ ವಿಷ್ಣುವನೆ ಸಂ
ಸ್ಮರಿಸಿದರು ವೈಕುಂಠತೇಜ
ಸ್ಫುರಿತ ಮಾರ್ಗಣ ಮೆರೆದುದಗ್ನಿಷ್ಟೋಮ ಮುಖವಾಗಿ ೮

ಶ್ರುತವೆ ನಿಮುಗಿದು ಮಾವ ಬಹಳಾ
ದ್ಭುತದ ರಥ ನಿರ್ಮಾಣ ದೇವ
ಪ್ರತತಿ ನೆರೆದುದು ನೆರೆ ಚತುರ್ದಶ ಭುವನವಾಸಿಗಳ
ಶತಮುಖಿ ಬ್ರಹ್ಮಾದಿಗಳು ತ
ನ್ಮತಿಶಯದ ತೇಜೋರ್ಥವನು ಪಶು
ಪತಿಯ ಪದಕೋಲೈಸಿದರು ಮಾದ್ರೇಶ ಕೇಳೆಂದ ೯

ಆ ಮಹಾ ಶಾಂಭವ ಸುತೇಜ
ಸ್ತೋಮಕೇನದು ಕೊರತೆಯೇ ಮು
ತ್ತೀ ಮಹೇಂದ್ರ ಬ್ರಹ್ಮಮುಖ ತೇಜಸ್ವಿಗಳ ಶಕ್ತಿ
ಆ ಮಹಾದೇವನಲಿ ಸೇರಿದು
ದೀ ಮಹಾರಥಕಾಗಿ ವಿಮಳ
ವ್ಯೋಮಕೇಶನು ನಗುತ ಬಿಜಯಂಗೆಯ್ಯಲನುವಾದ ೧೦

ಕಳಚಿ ತಲೆವಾಲೆಯನು ಕೊಟ್ಟನು
ಕೆಲದವರ ಕೈಯಲಿ ವಿಭೂತಿಯ
ಗುಳಿಗೆಯನು ನೆಗ್ಗೊತ್ತಿ ಸರ್ವಾಂಗದಲಿ ಧೂಳಿಸಿದ
ಹೊಳೆ ಹೊಳೆವ ಕಂಚೆಡೆಯನಹಿಪತಿ
ಯಳುಕೆ ಬಿಗಿದನು ದಂತಿಚರ್ಮವ
ನೆಲಕೆ ಮುಂಜೆರಗೆಳೆಯಲುಟ್ಟನು ದೇಸಿ ಪರಿ ಮೆರೆಯೆ ೧೧

ಖಡೆಯ ಸರಪಣಿ ತೋಳಬಂದಿಗೆ
ಪೆಡೆವಣಿಯ ಮರಿವಾವುಗಳನಳ
ವಡಿಸಿದನು ಜೋಡಿಸಿದ ಶೇಷನ ಜಳವಟಿಗೆ ಮೆರೆಯೆ
ಜಡಿವ ಕಿರುಗೆಜ್ಜೆಗಳ ಬಿಗುಹಿನ
ಉಡೆಯ ಬದ್ದುಗೆ ದಾರ ಉರಗನ
ಪೆಡೆವಣಿಯ ಗೊಂಡೆಯದ ಕಿಗ್ಗಟ್ಟೆಸೆಯೆ ಪಶುಪತಿಯ ೧೨

ನೆರೆದುದಭವನ ಕೆಲಬಲದಲು
ಬ್ಬರದ ಬೊಬ್ಬೆಯ ಜಡಿವ ಖಡ್ಗದ
ಚೆರಳ ಚಕ್ರದ ಭವಣೆಗಳ ಧವಣಿಸುವ ಧಾಣೆಗಳ
ಪರಿಪರಿಯ ಕೈದುಗಳ ಕರ್ಕಶ
ತರದ ಚರಿತದ ರೌದ್ರವೇಷದ
ವರ ಮಹಾಗಣ ನಿಕರವೊದಗಿತು ಮಾವ ಕೇಳೆಂದ ೧೩

ಸುರಬಲದ ನಿಸ್ಸಾಳ ಕೋಟಿಯ
ಮೊರಹು ಮೊಳಗಿತು ಬಿಲುದಿರುವಿನ
ಬ್ಬರದಲಾ ದನಿಯಡಗಿತಗಣಿತ ವಂದಿಘೋಷದಲಿ
ಅರರೆ ವಂದಿ ಧ್ವನಿಯ ಗರ್ಭೀ
ಕರಿಸಿ ಹೆಚ್ಚಿತು ಜಯಜಯ ಧ್ವನಿ
ನೆರೆ ಚತುರ್ದಶ ಜಗವ ಜಡಿದುದು ಮಾವ ಕೇಳೆಂದ ೧೪

ಮುರಿಯೆ ಬಲವಂಕದಲುಘೇ ಎಂ
ದೆರಗಿದವು ಶ್ರುತಿಕೋಟಿ ವಾಮದ
ಕೊರಳ ಕೊಂಕಿನಲುಪನಿಷತ್ತುಗಳೆರಗಿದವು ಕೋಟಿ
ತಿರುಗೆ ಬೆನ್ನಲಿ ನೆರೆದ ಸಚರಾ
ಚರವುಘೇ ಎಂದುದು ಕಪರ್ದಿಯ
ಸರಿಸದಲಿ ಸಿಡಿಲಂತೆ ಮೊಳಗಿತು ವೀರಗಣನಿಕರ ೧೫

ನಡೆದು ರಥದಲಿ ವಾಮ ಚರಣವ
ನಿಡುತ ಧೂರ್ಜಟಿ ದೇವ ನಿಕರಕೆ
ನುಡಿದನಾವನ ನೀ ರಥಕೆ ಸಾರಥಿಯ ಮಾಡಿದಿರಿ
ಕಡೆಗೆ ಸಾರಥಿಯಿಲ್ಲದೀ ರಥ
ನಡೆವುದೇ ದಾನವರ ಥಟ್ಟಣೆ
ತೊಡೆವುದೇ ಲೇಸಾಯ್ತೆನುತ ನೋಡಿದನು ಸುರಪತಿಯ ೧೬

ಮಾವ ಕೇಳೈ ಬಳಿಕ ಹರಿದುದು
ದೇವಕುಲ ಪರಮೇಷ್ಠಿಯಲ್ಲಿಗೆ
ಭಾವವನು ಬಿನ್ನೈಸಿದರು ನಿಜರಾಜಕಾರಿಯದ
ಆ ವಿಭುವನೊಡಬಡಿಸಿದರು ದಿವಿ
ಜಾವಳಿಗಳಿಂದಿನಲಿ ಕರ್ಣಗೆ
ನೀವು ಸಾರಥಿಯಾದಡಭಿಮತ ಸಿದ್ಧಿ ತನಗೆಂದ ೧೭

ಕೋಗಿಲೆಯ ತಾಯಕ್ಕೆ ಬಂದುದು
ಕಾಗೆಗಳ ಧುರಪಥವದಂತಿರ
ಲಾಗಳಬುಜಾಸನನ ಸಾರಥಿತನವದೇನಾಯ್ತೊ
ಹೋಗಲದು ಸಾರಥ್ಯಕಾಯತ
ವಾಗಿ ಬಂದು ವಿರಿಂಚ ಮಕುಟವ
ತೂಗಿದನು ಹೊಗಳಿದನು ತ್ರಿಪುರ ನಿವಾಸಿಗಳ ಬಲುಹ ೧೮

ಹುಸಿಯೆ ಬಳಿಕದು ಸಕಲ ಜಗವೊಂ
ದೆಸೆ ಪುರತ್ರಯ ದೈತ್ಯ ಭಟರೊಂ
ದೆಸೆ ಮಹಾದೇವೆನುತ ಕಮಲಜನೇರಿದನು ರಥವ
ಸಸಿನೆ ವಾಘೆಯ ತಿದ್ದಿ ತುರಗ
ಪ್ರಸರವನು ಬೋಳೈಸಿ ರಥವನು
ದೆಸೆದೆಸೆಗೆ ಹೊಳಸಿದನು ಉಳಿವಡಿಸಿದ ಮಹಾರಥವ ೧೯

ದೇವ ಬಿಜಯಂಗೈವುದೆನೆ ದಿವಿ
ಜಾವಳಿಗಳುಬ್ಬರದ ಬೊಬ್ಬೆಯ
ಡಾವರದಲೇರಿದನು ಧೂರ್ಜಟಿ ವೇದಮಯ ರಥವ
ಮಾವ ಕೇಳದುಭುತವನೀ ವಿ
ಶ್ವಾವನೀತಳ ರಥ ರಥಾಂಗ
ಗ್ರಾವ ತತಿ ನುಗ್ಗಾಯ್ತು ಮುಗ್ಗಿತು ತೇರು ನಿಮಿಷದಲಿ ೨೦

ಕುದುರೆ ತಲೆಕೆಳಗಾದುದಿಳೆಯೆ
ದ್ದುದು ರಸಾತಳಕವರ ಭಾರಕೆ
ಕೆದರಿದವು ಕುಲಗಿರಿಯ ಹೂಟದ ಸಂಚ ದೆಸೆದೆಸೆಗೆ
ಕುದಿದುದಮರ ವ್ರಾತ ಸಂತಾ
ಪದಲಿ ವಿತಳಕೆ ಹಾಯ್ದು ನಿಮಿಷಾ
ರ್ಧದಲಿ ಹೆಗಲಿಂದೆತ್ತಿದನು ಹರಿ ವೃಷಭ ರೂಪಿನಲಿ ೨೧

ಅದ್ದ ರಥ ಹರಿಯುರವಣೆಗೆ ಚಿಗಿ
ದೆದ್ದು ಸಮವಾಯ್ತುಭಯ ಪುಟ ನೆಗೆ
ದೆದ್ದು ವಳಯುವ ಕೊಡಹಿ ನಿಂದವು ವೇದವಾಜಿಗಳು
ಎದ್ದುದೋ ರಥ ಖಳ ಮನೋರಥ
ವದ್ದುದೋ ಮಝು ಪೂತುರೆನುತು
ಬ್ಬೆದ್ದುದಮರ ಕದಂಬ ಭಾರಿಯ ಭುಜದ ಬೊಬ್ಬೆಯಲಿ ೨೨

ಪ್ರಣವ ನಾದಾ ಹತಿಗೆ ಗತಿಯಲಿ
ಕುಣಿದವಗ್ಗದ ವೇದಹಯ ಹ
ಲ್ಲಣೆಯ ಹೇಷಿತ ರವಕೆ ಹೆದರಿತು ರಾಕ್ಷಸ ವ್ರಾತ
ಗಣಸಮೂಹದ ಚೂಣಿಯಲಿ ಸುರ
ಗಣ ಸುರಾರಿಗಳೂರ ಮುತ್ತಿತು
ಕೆಣಕಿದರು ಕಾಳೆಗವನಸುರರ ಥಟ್ಟು ಕಳವಳಿಸೆ ೨೩

ಭಟರು ವಿದ್ಯುನ್ಮಾಲಿಯದು ಲಟ
ಕಟಿಸಿ ನೂಕಿತು ತಾರಕಾಕ್ಷನ
ಚಟುಳ ಹಯ ಬಲ ಹೊಕ್ಕು ಹೊಯ್ದುದು ಬಿಟ್ಟ ಸೂಠಿಯಲಿ
ಲಟಕಟಿಸೆ ಸುರಸೇನೆ ಬಲು ಗಜ
ಘಟೆಗಳಾಕಿತು ದೈತ್ಯ ಸುರ ಸಂ
ಘಟಿತ ಸಮರವನೇನನೆಂಬೆನು ಮಾವ ಕೇಳೆಂದ ೨೪

ಹೊಯ್ದುದಮರರನಸುರರಗ್ಗದ
ಕೈದುಕಾರರು ಮತ್ತೆ ನೂಕಿತು
ಮೈದೆಗೆಯಲೊಡವೆರಸಿ ನೂಕಿತು ಬೇಹ ಬೇಹವರು
ಬೈದರಿಂದ್ರನನಿಂದುಮೌಳಿಗೆ
ನೆಯ್ದು ರಥ ನುಗ್ಗಾಯ್ತು ನಾಳವ
ಕೊಯ್ದರೋ ಹುಗ್ಗಿಗರೆನುತೊರಲಿದುದು ಸುರಸ್ತೋಮ ೨೫

ಹೊಗಲಿ ಸಮರಕೆ ಸ್ವಾಮಿದ್ರೋಹರು
ತೆಗೆಯಬೇಡೋ ಬೆನ್ನ ಲಾಂಕೆಗೆ
ಜಗದೊಡೆಯನೋ ಫಡ ಫಡಂಜದಿರೆನಲು ಸುರರಾಜ
ಉಗಿದ ಖಡುಗದ ತಿರುವಿನಂಬಿನ
ಬಿಗಿದ ಬಿಲ್ಲಿನ ಸುರಪನಿದಿರಿನೊ
ಳಗಣಿತಾಮರ ಭಟರು ಹೊಕ್ಕುದು ದೈತ್ಯಬಲದೊಳಗೆ ೨೬

ಮೊಲನ ಮರಿ ಕೈವೊಯ್ದು ನಕ್ಕುದು
ಹುಲಿಯೊಡನೆ ಗಡ ಶಿವಶಿವಾ ವೆ
ಗ್ಗಳೆಯರು ವಿಗ್ರಹದಲರಿವೆವು ಕಂಡು ಕೈಗುಣವ
ಹುಲುಪರೆಯ ದೇವಾಳಿ ತ್ರಿಪುರದ
ನೆಲನ ಮುಟ್ಟಿತು ನಾಯ್ಗಳಿರ ಮುಂ
ದಲೆಯ ಕೊಯ್ ಕಡಿ ಬೆರಳನೆಂದರು ಖಳರು ತಮ್ಮೊಳಗೆ ೨೭

ಕಾದ ಲೋಹದ ಹಳಿಯವೊಲು ಕೆಂ
ಪಾದವಸುರರ ಮೋರೆಗಳು ತಿದಿ
ಯೂದುಗಿಚ್ಚಿನ ಹೊದರಿನಂತಿರೆ ಬಿಡದೆ ಭುಗಿಲಿಡುತ
ಸೇದುವೆರಳಿನ ತಿರುವಿನಂಬಿನ
ವಾದಿನೆಸುಗೆಯ ಬಿರುದರಗ್ಗದ
ಕೈದುಕಾರರು ಕೆಣಕಿದಮರರ ಹೊಟ್ಟೆ ತೂರಿದರು ೨೮

ಮುರಿದುದಿದು ಕಲ್ಪಾಂತ ವಹ್ನಿಯ
ಸೆರೆಯ ಬಿಟ್ಟರೊ ಶಿವಶಿವಾ ಖಳ
ರುರುಬೆ ಘನ ನಾವೇಕೆ ರಣವೇಕಿವರ ಕೂಡೆನುತ
ಒರಲುವಮರರ ಬಾಯಿ ಕೈಗಳ
ಮೊರೆಯ ತೆಗಸಿ ಮಹಾ ಗಣಂಗಳೊ
ಳುರುವ ನಂದೀಶ್ವರನು ಹೊಕ್ಕನು ಹೊಯ್ದು ದಾನವರ ೨೯

ದಿಂಡುದರಿದನು ದಾನವರ ಕಡಿ
ಖಂಡ ಮಯಮಾಯ್ತವನಿ ರಕುತದ
ದೊಂಡೆಗೆಸರಿನೊಳದ್ದುದಗಣಿತ ರಥಗಜಾಶ್ವಚಯ
ಹಿಂಡೊಡೆದು ಹೇರಾಳ ರಕ್ಕಸ
ದಿಂಡೆಯರು ಧಿಮ್ಮೆನಲು ಹೊಯ್ದರು
ಖಂಡ ಪರಶುವಿನಾಳು ಹೊಯ್ದನು ಸಾಲಹೆಣ ಹರೆಯೆ ೩೦

ಅರನೆಲೆಯ ಮುರಿದಿಟ್ಟಣಿಸಿ ತಲೆ
ವರಿಗೆಯಲಿ ಹೊಕ್ಕಾಕಿ ದುರ್ಗದ
ಹಿರಿಯ ಹುಲಿಮುಖದೊಳಗೆ ಹೊಯ್ದರು ಬೇಹಬೇಹವರ
ಅರಸ ಕೇಳ್ದೈ ದೈತ್ಯ ಭಟರ
ಚ್ಚರಿಯ ಮಾಡಿದರಳಿದವರನೆ
ಚ್ಚರಿಸಿದರು ಮಯವಿರಚಿತಾಮೃತ ಸಲಿಲ ಕೂಪದಲಿ ೩೧

ಮಯನ ಬಿನ್ನಾಣವನು ದೇವ
ತ್ರಯವರಿದುದಿದು ತೀರಲಸುರರ
ಲಯವೆನುತ ಹರಿ ಧೇನುವಬುಜಾಸನನು ಕರುವಾಗಿ
ಭಯವಿಹೀನರು ಹೊಕ್ಕರಾ ಬಾ
ವಿಯನು ಬತ್ತಿಸಿ ಬಳಿಕ ದೈತ್ಯರ
ಜಯವ ಮುರಿದರು ಮೋಹನದ ಬೌದ್ಧಾವತಾರದಲಿ ೩೨

ಭವನ ಭಕುತಿಯ ಬಿಡಿಸಿದರು ಶಾಂ
ಭವ ಸುಸಿದ್ಧಾಂತವನು ಬೌದ್ಧ
ವ್ಯವಹರಣೆಗಳ ಮಾಯೆಯಲಿ ಕೆಡಹಿದರು ಕಪಟದಲಿ
ಯುವತಿಯರು ಪರಪುರುಷ ಯೋಗ
ಪ್ರವರ ದೀಕ್ಷಿತರಾಯ್ತು ಬೌದ್ಧನ
ವಿವಿಧ ಮಾಯೆಗೆ ಮಾರುವೋದುದು ಮನ ಸುರಾರಿಗಳ ೩೩

ಹರಿ ಸರೋಜಾಸನರು ಶೂಲಿಯ
ಹೊರೆಗೆ ಬಂದರು ದೇವ ದೈತ್ಯರ
ಪುರವಧರ್ಮದ ಪೇಟೆಯಾದುದು ನಯನಪಾವಕನ
ಕರೆದು ಬೆಸಸುವಡಿದು ಸಮಯವೀ
ಸುರರ ಸಲಹುವ ಚಿತ್ತವುಳ್ಳರೆ
ಕರುಣಿ ಬಿಜಯಂಗೈವುದೆಂದರು ಪಾರ್ವತೀಪತಿಗೆ ೩೪

ಬಿಲ್ಲ ತುಡುಕಿದನಭವನೆಡಬಲ
ದಲ್ಲಿ ಜಯಜಯಜಯಜಯಧ್ವನಿ
ಘಲ್ಲಿಸಿತ್ತೀರೇಳು ಭುವನ ಶ್ರವಣ ವೀಧಿಗಳ
ಝುಲ್ಲವಿಸಿ ಹಯ ಪದಸಮೂಹವ
ಚೆಲ್ಲಿದವು ಸಕ್ರಮದ ಪಾಳಿಯ
ಪಲ್ಲವಿಕೆ ಪರಿವಡೆದುದಮಳಪ್ರಣವಮಯವಾಗಿ ೩೫

ಅಡಿಗಡಿಗೆ ಚಮ್ಮಟಿಗೆಯಳ್ಳೆಯ
ತುಡುಕೆ ಕುಣಿದವು ವೇದಹಯ ಬಲ
ನೆಡ ಪುರಃಪಶ್ಚಿಮದಲೆರಗುವ ಮಂತ್ರಕೋಟಿಗಳ
ನುಡಿಯಲರಿದಾಕಾಶ ಸರಸಿಯೊ
ಳಿಡಿದ ತಾವರೆಮುಗುಳುಗಳೊ ಸುರ
ಪಡೆಯೊಳೊತ್ತಿದ ಮುಗಿದ ಕೈಗಳೊ ಚಿತ್ರವಾಯ್ತೆಂದ ೩೬

ಪರಮ ಶ್ರುತಿ ವೇದಾಂಗ ಮಂತ್ರೋ
ತ್ಕರ ಧರಿತ್ರಿ ಕುಲಾದ್ರಿ ಸಸಿ ಭಾ
ಸ್ಕರ ಸುರೋರಗ ಜಲಧಿ ನದಿ ನಕ್ಷತ್ರ ರಾಶಿಗಳು
ಸರಸಿರುಹಭವ ವಿಷ್ಣು ವಿವಿಧಾ
ಧ್ವರ ಮುನೀಂದ್ರ ಗ್ರಹವು ಸಚರಾ
ಚರವುಘೇ ಎಂದೆರಗುತಿರ್ದುದು ಶಿವನ ಬಳಸಿನಲಿ ೩೭

ಒದಗಿತೀ ಹೇಳಿದ ಸಮಸ್ತ
ತ್ರಿದಶಸಚರಾಚರವು ತಮ್ಮಂ
ಗದಲಿ ರಚಿಸಿದ ವಿಶ್ವಕರ್ಮನ ಕೃತ ನಿಯೋಗದಲಿ
ಅದು ಬಳಿಕ ನಿರ್ಜರ ಸಮೂಹಾ
ಭ್ಯುದಯವ್ಯೆಸಲೆ ಧನುವ ಕೊಂಡನು
ಮದನರಿಪು ತಿರುಹಿದನು ಬೆರಳಲಿ ಪಾಶುಪತ ಶರವ ೩೮

ಕೃತಕವೋ ದಿಟವೋ ದುರಂತರ
ಶ್ರುತಿಗಳರಿಯವು ನಮ್ಮ ಮಿಡುಕುವ
ಮತಿಯ ಪಾಡೇ ನಿಮಿಷಕಬುಜಭವಾಂಡ ಕೋಟಿಗಳ
ಸ್ಥಿತಿಗತಿಯನಗ್ಗಳದ ನಯನಾ
ಹಂತಿಯ ಮಾಡುವ ತ್ರಿಪುರಹರ ಸಂ
ಗತಿಯ ಸಮಯವ ಹಾರಿದನು ಸುರವರುಷ ಸಾವಿರವ ೩೯

ಕೂಡಿದವು ಪುರ ಮೂರು ನಿಮಿಷದೊ
ಳೀಡಿರಿದುದುರಿ ನಯನ ವಹ್ನಿಯ
ಕೂಡಿ ಹುರಿಗೊಂಡೌಕಿ ಹರಿದುದು ಪಾಶುಪತ ಬಾಣ
ಝಾಡಿ ಹೊರಳಿಯ ಹೊಗೆಯ ಜೋಡಿಯ
ನೀಡು ನಾಲಗೆ ಪುರದ ಸುತ್ತಲು
ಕೂಡೆ ವೇಢಯವಾಯ್ತು ಹರಹಿನ ಕಿಡಿಯ ಗಡಣದಲಿ ೪೦

ಕಟ್ಟಿತುರಿ ದೆಸೆ ನಾಲ್ಕರಲಿ ಬೆ
ನ್ನಟ್ಟಿ ಹೊಯ್ದುದು ಬಿನುಗುಗಳ ಜಗ
ಜಟ್ಟಿಗಳನೊರಗಿಸಿತು ಮರುಗಿಸಿತಸುರ ನಾರಿಯರ
ದಿಟ್ಟರುರಿದುದು ವೀರರಸುಗಳ
ಬಿಟ್ಟರಭವದ್ರೋಹಿಗಳು ನೆರೆ
ಕೆಟ್ಟ ಕೇಡಿಂಗಾರು ಮರುಗುವರರಸ ಕೇಳೆಂದ ೪೧

ಸರಳ ಮೊನೆಯಲಿ ಸಿಡಿದ ಕಿಡಿಯೊಂ
ದೆರಡರಲಿ ಬೆಂದುದು ಪುರತ್ರಯ
ವರಸ ಕೇಳೈ ಬಳಿಕ ಬಾಣದ ಬಾಯಿಧಾರೆಗಳ
ಹರನ ನಯನದ ಕಿಚ್ಚು ಕಾಣದು
ಪುರವನಾ ಖಾತಿಯಲಿ ಭೇದಿಸಿ
ಮುರಿಮುರಿದು ಸುಡತೊಡಗಿತಬುಜಭವಾಂಡ ಮಂಡಲವ ೪೨

ಎಲೆ ಚತುರ್ದಶ ಜಗವನುರಿಯ
ಪ್ಪಳಿಸಿತೇ ಬೆಂದುದು ಸುರೌಘದ
ಗೆಲವು ಕರೆಯಾ ಕಲ್ಪಮೇಘವನುರಿಯ ಮಾಣಿಸಲಿ
ಬಲುಕಣಿಗಳಲ್ಲಾ ಜನಾರ್ದನ
ನಳಿನಭವರಾವೆಡೆಯೆನುತ ಕಳ
ವಳಿಸಿದುದು ಮೊರೆಯಿಟ್ಟುದಭವನ ಮುಂದೆ ಭುವನಜನ ೪೩

ಅರಿಪುರತ್ರಯ ದಹನ ಕರ್ಮ
ಸ್ಫುರಣವಸ್ಮತ್ಕಾರ್ಯವದು ಗೋ
ಚರಿಸಿತಲ್ಲಿಂ ಮೇಲಣುಚಿತಾನುಚಿತ ಕೃತ್ಯವನು
ಕರುಣಿ ನೀನೇ ಬಲ್ಲೆ ಜನ ಸಂ
ಹರಣ ಕಾಲವೊ ಮೇಣು ರಕ್ಷಾ
ಕರಣ ಕಾಲವೊ ದೇವ ಎಂದೊರಲಿದುದು ಭುವನಜನ ೪೪

ತ್ರಾಹಿ ಮದನಾಂತಕ ಪುರತ್ರಯ
ದಾಹ ಹರ ಶಂಕರ ಮಹೇಶ
ತ್ರಾಹಿ ಮೃತ್ಯುಂಜಯ ಪಿನಾಕಿ ತ್ರಾಹಿ ಲೋಕೇಶ
ದ್ರೋಹಿಗಳು ಧೂಳಾಯ್ತು ಬಳಿಕಿನೊ
ಳೀ ಹದನು ಬಂದಿದೆ ಜಗತ್ರಯ
ರೂಹುಗೆಡುತಿದೆ ದೇವ ಎಂದುದು ಸಕಲ ಭುವನಜನ ೪೫

ಕರುಣರಸದಲಿ ನನೆದು ನಗೆಯಂ
ಕುರಿಸಲಾಜ್ಞಾಹಸ್ತದಲಿ ಶಂ
ಕರನ ಹೂಂಕರಣೆಯಲಿ ತಳಿತುರಿ ತಗ್ಗಿತಲ್ಲಲ್ಲಿ
ಶಿರವ ತಡಹುತ ದೇವತತಿ ಪುರ
ಹರನ ಬೀಳ್ಕೊಂಡರು ಮಹಾರಥ
ಹರಿದು ನಿಜ ಸಂಸ್ಥಾನ ಸಂಗತವಾಯ್ತು ನಿಮಿಷದಲಿ ೪೬

## ಎಂಟನೆಯ ಸಂಧಿ

ಸೂ. ಪೃಥಿವಿಪತಿ ಮಾದ್ರೇಶನನು ಸಾ
ರಥಿಯ ಮಾಡಿದನೊಲವು ಮಿಗಲತಿ
ರಥ ಭಯಂಕರ ಭಾನುಸುತನಾಹವಕೆ ನಡೆತಂದ

ಹರನ ಬೀಳ್ಕೊಂಡಖಿಳ ದಿವಿಜರು
ಹರೆದುದೀ ಪರಿ ಕಮಲಭವನೀ
ಶ್ವರನ ಸಾರಥಿಯಾಗೆ ಸಾರಿದುದಮರರಭ್ಯುದಯ
ಹರಿಯ ಸಾರಥಿತನದಿ ಜಯವಂ
ಕುರಿಸಿತವರಿಗೆ ನಿಮ್ಮ ಕೃಪೆಯಲಿ
ಕುರುಬಲಕೆ ಗೆಲವಾದಡೊಳ್ಳಿತು ಮಾವ ಕೇಳೆಂದ ೧

ಹರನು ಬಿಲುವಿದ್ಯವನು ಕೊಡುತವೆ
ಪರಶುರಾಮಂಗೆಂದನಧಮರಿ
ಗೊರೆಯದಿರು ಸತ್ಪಾತ್ರಕಿದನಾದರಿಸಿ ಕಲಿಸೆಂದ
ಸುರರ ಮೆಚ್ಚದ ರಾಮನೀತನ
ಕರೆದು ಗರುಡಿಯ ಹೊಗಿಸಿದನು ಕಡು
ಗರುವನೀ ರಾಧೇಯನಧಮನೆ ಮಾವ ಕೇಳೆಂದ ೨

ಸೂತಕುಲಸಂಭವನೆ ಭುವನ
ಖ್ಯಾತ ಕರ್ಣನು ಸಾಕಿದಾತನು
ಸೂತನಾದಡೆ ಮಾವ ಕೇಳನ್ವಯಕೆ ಹಳಿವುಂಟೆ
ಸ್ವಾತಿಯುದಕದೊಳಾದ ಮೌಕ್ತಿಕ
ವ್ರಾತಕಯ್ಯನೆ ಚಿಪ್ಪು ನಿಮಗಿ
ನ್ನೇತಕೀ ಸಂದೇಹ ರವಿಸುತ ಸೂತನಲ್ಲೆಂದ ೩

ಈ ದುರಾಗ್ರಹ ನಿನ್ನ ಚಿತ್ತದೊ
ಳಾದುದೇ ತಪ್ಪೇನು ಕೋಗಿಲೆ
ಯಾದರಿಸಿದಡೆ ಬೇವು ಮಾವಹುದಾದಡೆಮಗೇನು
ಕಾದಿ ಗೆಲುವುದು ಭಾರಿ ಗುರು ಭೀ
ಷ್ಮಾದಿ ಭಟರೇನಾದರೈ ತಾ
ನಾದುದಾಗಲಿ ನಾವು ಸಾರಥಿಯಾದೆವೇಳೆಂದ ೪

ನಿಮ್ಮ ವಿಜಯ ಶ್ರೀಯ ಕಡೆಗ
ಣ್ಣೆಮ್ಮ ಮುಖದಲಿ ಮುರಿದುದಾದಡೆ
ನಮ್ಮ ಕೊರತೆಯದೇಕೆ ಕರಸೈ ಸೂತನಂದನನ
ನಮ್ಮ ಹೇಳಿಕೆ ಯಾವುದದನೀ
ತಮ್ಮ ಮೀರಿದು ನಡೆದನಾದಡೆ
ನಮ್ಮ ವಾಘೆಯು ಬೀಳುಕೊಡುವವು ರಾಯ ಕೇಳೆಂದ ೫

ಹೊತ್ತ ಮುಗುಡವ ಹಾಯ್ಕಿ ಕೈವಿಡಿ
ದೆತ್ತಿ ಕರ್ಣನ ಕೊಟ್ಟು ಮೈಗಳ
ಲೆತ್ತ ಗುಡಿಗಳ ರೋಮ ಪುಳಕದ ಪೂರ್ಣ ಹರುಷದಲಿ
ಬತ್ತಿತಂತಸ್ತಾಪಜಲನಿಧಿ
ಚಿತ್ತದುರು ಸಂದೇಹ ತರುವಿನ
ಬಿತ್ತು ಕರಿವೊಳೆವೋಯ್ತು ನಿನ್ನ ಮಗಂಗೆ ನಿಮಿಷದಲಿ ೬

ಬೀಳುಕೊಂಡನು ಶಲ್ಯನನು ಭೂ
ಪಾಲನಿತ್ತಲು ಕರ್ಣನಾಯುಧ
ಶಾಲೆಯಲಿ ಶುಚಿಯಾಗಿ ಶಸ್ತ್ರಾಸ್ತ್ರವನು ಪೂಜಿಸಿದ
ಸಾಲದೀವಿಗೆಗಳನು ಶಸ್ತ್ರ
ಜ್ವಾಲೆ ಮಿಕ್ಕವು ತೀಕ್ಷ್ಣಧಾರಾ
ಭೀಳವಿಕ್ರಮ ವಿಸ್ಫುಲಿಂಗಿತವಾದವಡಿಗಡಿಗೆ ೭

ಕುರಿಯ ಹಣಿದದ ಕೋಳಿ ಕೋಣನ
ಮುರಿದಲೆಯ ಮಿಸಲಿನ ರಕುತದ
ದುರುದುರಿಪ ದಂಡೆಯಲಿ ಕಲಸಿದ ಕೂಳ ಮುದ್ದೆಗಳ
ಹೊರಗೆ ಬಡಿಸಿದ ಭೂತಬಲಿ ಬೊ
ಬ್ಬಿರಿತದೊಡನುಬ್ಬೇಳ್ವ ಲಗ್ಗೆಯ
ಹರೆಗಳಬ್ಬರವಾಯ್ತು ಕರ್ಣನ ಶಸ್ತ್ರಪೂಜೆಯಲಿ ೮

ವಿರಚಿಸಿತು ಶಸ್ತ್ರಾಸ್ತ್ರ ಪೂಜಾ
ಪರಿಸರಣ ರವಿಸೂನು ದರ್ಭಾಂ
ಕುರದ ಶಯನಸ್ಥಾನದಲಿ ಮಾಡಿದನು ಜಾಗರವ
ಕುರು ನೃಪಾಲನ ಪಾಳೆಯದೊಳಾ
ಯ್ತಿರುಳು ಮನೆಮನೆಗಳಲಿ ಶಸ್ತ್ರೋ
ತ್ಕರ ಸಮಾರಾಧನೆಯೊಳಿರ್ದುದು ಕೂಡೆ ನೃಪಕಟಕ ೯

ಸವೆದುದಿರುಳರುಣೋದಯದಲಾ
ಹವದ ಸಂಭ್ರಮರಭಸವೆದ್ದುದು
ವಿವಿಧ ಬಲ ಭಾರಣೆಯ ಭುಲ್ಲವಣೆಯ ಭಡಾಳದಲಿ
ತವಕಿಸುತ ಬಿಗಿ ವಾರುವನ ತಾ
ಸವಗವನು ಬಲ್ಲೆಹವ ಸೀಸಕ
ಕವಚಗಳನೆಂಬಬ್ಬರಣೆ ರಂಜಿಸಿತು ರಾವ್ತರಲಿ ೧೦

ಬಿಡು ಗಜವ ಬಿಗಿ ರೆಂಚೆಗಳ ತೆಗೆ
ದಡಿಯ ಹಾಯಿಕು ಗುಳವ ತಾ ಮೊಗ
ವಡವ ಕೊಡು ಪಟ್ಟೆಯವ ಕೈಯಲಿ ಬೀಸು ಚೌರಿಗಳ
ತಡವಿದೇನೋ ಸಾಯಿ ಫಡ ಫಡ
ಕೆಡೆಯೆನುತ ತಮ್ಮೊಬ್ಬರೊಬ್ಬರ
ಜಡಿಯುಲಬ್ಬರವಾದುದಾರೋಹಕರ ಕೇರಿಯಲಿ ೧೧

ಕೀಲ ತೆಗೆಯಂಚುಗಳ ಹೆರೆ ಬಲು
ಗಾಲಿಗಳ ಜೋಡಿಸು ಪತಾಕಾ
ಜಾಲವನು ನಿಲಿಸೀಸ ಬಲಿ ಬಲುಮಿಣಿಯ ಬಿಗಿಯೆನುತ
ಮೇಲೆ ಮೇಲಬ್ಬರದ ಘೋಳಾ
ಘೋಳಿ ಘಲ್ಲಿಸೆ ದೆಸೆಯಲತಿರಥ
ಜಾಲ ಕವಿದುದು ಕದನಕೌತೂಹಲರ ಕೇರಿಯಲಿ ೧೨

ನೀಡು ಬಿಲು ಬತ್ತಳಿಕೆಯನು ನಡೆ
ಜೋಡ ತೆಗೆ ತಾ ಸವಳವನು ರಣ
ಖೇಡನೇ ಫಡ ಘಾಯವನು ಬಿಗಿ ಮದ್ದನರೆಯೆನುತ
ಕೂಡೆ ತಮತಮಗಾಹವದ ಖಯ
ಖೋಡಿಯಿಲ್ಲದೆ ಸುಭಟರಬ್ಬರ
ಝಾಡಿ ಮಸಗಿತು ಕದನದಲಿ ಕಾಲಾಳ ಕೇರಿಯಲಿ ೧೩

ಬಿರಿದುದಬುಜಭವಾಂಡವೆನೆ ಭೋಂ
ಕರಿಸಿದವು ನಿಸ್ಸಾಳತತಿ ನಿ
ಬ್ಬರದ ಬಿರುದನು ಬೀರುತಿರ್ದವು ಗೌರುಗಹಳೆಗಳು
ಎರಲು ಸುಳಿದುದು ದೀಪಶಿಖಿ ಪರಿ
ಹರಿಸಿದತಿಬಲದಬ್ಬರದ ನಿ
ಷ್ಠುರತೆಗಂಜದೆ ಮಾಣದೆನೆ ಹೆರಹಿಂಗಿತಾ ರಜನಿ ೧೪

ಅರಸ ಕೇಳಭ್ಯುದಿತವಾದುದು
ಸರಸ ಕೈರವ ರಾಜಿ ಕೋಮಲ
ಸರಸಿರುಹವನವಾದುದಾಕ್ಷಣ ಸುರಭಿ ನಿರ್ಮುಕ್ತ
ಕಿರಣ ತೋಮರ ದಕ್ಷಿಣೋರು
ಸ್ಫುರಣ ತಿಮಿರ ಮೃಗೀಕದಂಬಕ
ತರಣಿ ನೋಕಿದನುದಯಶೈಲಕೆ ರತುನಮಯ ರಥವ ೧೫

ಉಲಿವ ಮಂಗಳಪಾಠಕರ ಕಳ
ಕಳಿಕೆ ಮೆರೆಯಲು ಹೊಳೆವ ಹೊಂಬ
ಟ್ಟಲಲಿ ಸೂಸಿದನರ್ಘ್ಯಜಲವನು ಜನಕನಿದಿರಿನಲಿ
ಲಲಿತ ಮಂತ್ರಾಕ್ಷತೆಗಳನು ಕರ
ತಳದೊಳಾಂತು ಮಹೀಸುರರಿಗ
ಗ್ಗಳಿಯನಿತ್ತನು ಧೇನುಮಣಿಕನಕಾದಿ ವಸ್ತುಗಳ ೧೬

ವರ ನಿಭಾರಿಯ ಬಳವಿನಲಿ ಬಲ
ಮುರಿಯ ಬಿಗಿದನು ಪದಮುಖಿಕೆ ಮುಂ
ಜೆರಗ ಬಿಟ್ಟನು ಬಿಗಿದ ಬದ್ದುಗೆ ದಾರ ಗೊಂಡೆಯವ
ಕಿರಣ ಲಹರಿಯ ವಜ್ರಮಾಣಿಕ
ಪರಿರಚಿತ ಭುಜಕಂಠಕರ್ಣಾ
ಭರಣ ಚರಣದ ಖಿಡೆಯದಲಿ ರಂಜಿಸಿದನಾ ಕರ್ಣ ೧೭

ದಿನ ಗಣನೆ ಹದಿನೆಂಟು ಕೋಟಿಯ
ಕನಕಮಂದಿನ ದಿನದಿ ಚೆಲ್ಲಿದ
ನನುಪಮಿತ ಧನ ರತುನ ಭಂಡಾರವನು ತೆಗೆತೆಗೆಸಿ
ಮನದಣಿಯೆ ಯಾಚಕರಿಗಿತ್ತುದ
ನೆನಗೆ ಬಣ್ಣಿಸಲಳವೆ ಕೇಳೈ
ಜನಪ ಕರ್ಣನದೇನ ನಿಶ್ಚಯಿಸಿದನೊ ಮನದೊಳಗೆ ೧೮

ಹೊಳೆಹೊಳೆದವಾಭರಣ ತಾರಾ
ವಳಿಗಳಂತಿರೆ ಪೂರ್ಣ ಶಶಿಮಂ
ಡಲದವೊಲು ತನುಕಾಂತಿ ತಿವಿದುದು ನಿಖಿಳದಿಗಂತಟವ
ತಳಿತ ವಿಕ್ರಮ ಸುಪ್ರತಾಪೋ
ಜ್ವಲಿತಸೂರ್ಯಪ್ರಭೆ ಜಗತ್ರಯ
ದೊಳಗೆ ಝಳಪಿಸೆ ಕರ್ಣನೆಸೆದನು ದಿವ್ಯತೇಜದಲಿ ೧೯

ದೇವ ಗುರು ವಿಪ್ರರಿಗೆ ಬಹು ಸಂ
ಭಾವನೆಯ ಮಾಡಿದನು ಶಸ್ತ್ರಾ
ಸ್ತ್ರಾವಳಿಯ ತರಿಸಿದನು ತುಂಬಿಸಿದನು ವರೂಥದಲಿ
ರಾವುತರಿಗಾರೋಹಕರಿಗೆ ಭ
ಟಾವಳಿಗೆ ರಥಿಕರಿಗೆ ಚೆಲ್ಲಿದ
ನಾ ವಿವಿಧ ಸೌಗಂಧ ಭಾವಿತ ಯಕ್ಷ ಕರ್ದಮವ ೨೦

ನಡೆದು ಬಂದನು ರಥಕೆ ದೆಸೆ ಕಂ
ಪಿಡುತ ನೆರೆದ ಮಹಾಪ್ರಧಾನರ
ನಡುವೆ ಚಲಿಸುವ ಚಾತುರಂಗದ ಸುಳಿಯ ಸಂದಣಿಯ
ಒಡನೆ ನೆಲನಳ್ಳಿರಿಯೆ ವಾದ್ಯದ
ಗಡಣ ಮೊರೆದುದು ಪಾಠಕರ ಗಡ
ಬಡಿಯ ಕಳರವ ಬಗಿದುದಬುಜಭವಾಂಡಮಂಡಲವ ೨೧

ಅತಿರಭಸದಿಂದಾಯ್ತು ಸೇನಾ
ಪತಿಯ ಪಯಣವಲಾ ಎನುತ ಗುರು
ಸುತ ಶಕುನಿ ಕೃತವರ್ಮ ಕೃಪ ದುಶ್ಶಾಸನಾದಿಗಳು
ವಿತತಸನ್ನಾಹದಲಿ ಕುರುಭೂ
ಪತಿಸಹಿತ ಹೊರವಂಟು ಭಾಸ್ಕರ
ಸುತನ ಸನ್ನೆಯ ಮೇಲೆ ನಡೆದರು ಮುಂದೆ ಸಂದಣಿಸಿ ೨೨

ಬಳಿಯ ನೆಲನುಗ್ಗದಣೆಗಳ ವೆ
ಗ್ಗಳೆಯ ಸುಭಟರ ಮೇಳದಲಿ ಬಂ
ದಿಳಿದು ದಂಡಿಗೆಯಿಂದ ನಸುನಗುತೇರಿದನು ರಥವ
ಚಳಹಯಂಗಳು ಹುರಿಯ ವಾಘೆಯ
ನಳವಡಿಸೆ ಬಲನೆಡಕೆ ವಾಜಿಯ
ಸುಳಿಸಿ ಸಾರಥಿತನವ ತೋರಿದನಂದು ಕಲಿಶಲ್ಯ ೨೩

ಬಳಿಯ ಪಾಯವಧಾರುಗಳ ಕಳ
ಕಳದೊಳಗೆ ರಥವೇರಿದನು ನೆಲ
ಹಿಳಿಯೆ ಹೇರಾಳಿಸಿತು ಬಹುವಿಧವಾದ್ಯನಿರ್ಘೋಷ
ತಳಿತವಮಳಚ್ಛತ್ರ ಚಮರಾ
ವಳಿಯ ಝಲ್ಲಿಯ ಪಟ್ಟಿಗಳ ನವ
ಪಳಹರ ಧ್ವಜ ದಂಡವೆತ್ತಿತು ವರ ರಥಾಗ್ರದಲಿ ೨೪

ಇಕ್ಕೆಲದ ರಾವುತರ ತೇರಿನ
ತೆಕ್ಕೆಗಳ ಗಜಘಟೆಯ ಕಾಲಾ
ಳಕ್ಕಜದ ನಿಸ್ಸಾಳ ಸೂಳಿನ ಲಗ್ಗೆದಂಬಟದ
ಉಕ್ಕಿತೋ ವಿಲಯಾಬ್ಧಿಯೆನೆ ಸಾ
ಲಿಕ್ಕಿ ನಡೆದುದು ಸೇನೆ ರಾಯನ
ಸಿಕ್ಕಿನವಸರದಾನೆ ನಿಜ ಪಾಳೆಯವ ಬೀಳ್ಕೊಂಡ ೨೫

ರಾಯ ಕೇಳ್ಳೆ ಬಳಿಕ ಕಲಿರಾ
ಧೇಯ ಬರುತಿರೆ ತೋರಿದುತ್ಪಾ
ತಾಯುತವನೇನೆಂಬೆನೈ ಶಿವಶಿವ ಮಹಾದೇವ
ವಾಯಸದ ತಡೆ ಭೂಮಿಕಂಪ ನಿ
ಘಾಯುಧಂಗಳ ಕಿಡಿ ಗಜಾಶ್ವನಿ
ಕಾಯ ರಥವಾಜಿಗಳ ಕಂಬನಿ ಕಾಣಲಾಯ್ತೆಂದ ೨೬

ಒದರಿದವು ನರಿ ಮುಂದೆ ಕರ್ಣನ
ಕಂದುರೆಗಳು ಮುಗ್ಗಿದವು ಪರಿವೇ
ಷದಲಿ ಸಪ್ತಗ್ರಹದ ವಕ್ರತೆ ಸೂರ್ಯಮಂಡಲಕೆ
ಇದಿರಿನಲಿ ಬಿರುಗಾಳಿ ಧೂಳಿಯ
ಕೆದರಿ ಬೀಸಿತು ನಿಖಿಳಬಲ ಮು
ಚ್ಚಿದುದು ಕಂಗಳನವನಿಪತಿ ಕಂಡನು ಮಹಾದ್ಭುತವ ೨೭

ತೃಣಕೆ ಕೊಂಬನೆ ಕರ್ಣನಿದನಾ
ರೆಣೆಸಂವರು ದುಷ್ಕರ್ಮಶೇಷದ
ಋಣನಿಬದ್ಧರು ಕಂಡು ಮಾಡುವುದೇನು ಕೌರವರು
ರಣಮನೋರಾಗದಲಿ ದಳಸಂ
ದಣಿಯ ನಿಲಿಸಿದನತಿರಥರ ಲಾ
ವಣಿಗೆಗೊಂಡನು ಕರ್ಣ ಪರಿವಾರಕ್ಕೆ ಕೈಮುಗಿದು ೨೮

ನೊಂದವರು ನಿಲಿ ಸ್ವಾಮಿಕಾರ್ಯಕೆ
ಹಿಂದುಗಳೆವರು ಮರಳಿ ಮನೆಗಳ
ಹಿಂದಣಾಸೆಯ ಹೇವ ಹರುಕರಿಗಿಂದು ಮಹನವಮಿ
ನಿಂದರೊಳ್ಳಿತು ನೃಪನ ದೆಸೆಯಲಿ
ಕಂದು ಕಲೆಯುಳ್ಳವರು ಕಾಳೆಗ
ವಿಂದು ಬೆಟ್ಟಿತು ಬೀಳುಕೊಂಬುದು ಭೀತಿ ಬೇಡೆಂದ ೨೯

ಓಡಿ ನಾಚಿಸುವವರು ನಿಲಿ ರಣ
ಖೇಡರೀಗಳೆ ಮರಳಿ ಮನವ
ಲ್ಲಾಡಿ ಮರುಗುವರೇಳಿ ಮರಣದಲಾವ ಫಲಸಿದ್ಧಿ
ಕೂಡುಂಗಲಕರು ನಿಲ್ಲಿ ಇಹಪರ
ಗೇಡಿಗರು ಹೆರಸಾರಿ ಗುಣದಲಿ
ಬೇಡಿಕೊಂಬೆನು ಖಾತಿಗೊಳ್ಳೆನು ಹೋಗಿ ನೀವೆಂದ ೩೦

ಸಂದ ಸುಭಟರು ಬನ್ನಿ ಸ್ವರ್ಗದ
ಬಂದಿಕಾರರು ಬನ್ನಿ ಮನದಿಂ
ಮುಂದೆ ಹೆಜ್ಜೆಯ ತವಕಿಗರು ಬಹುದೆನ್ನ ಸಂಗಾತ
ನೊಂದಡುಬ್ಬುವರಿತ್ತ ಬನ್ನಿ ಪು
ರಂದರನ ಸರಿಗದ್ದುಗೆಗೆ ಮನ
ಸಂದವರು ಹೊಗಿ ರಣವನೆಂದನು ಕರ್ಣ ನಿಜಬಲಕೆ ೩೧

ವೀರ ಭಟರಾಹವವ ಹೊಗಿ ಜ
ಝ್ಝರಿತ್ರಲು ನಡಯಿ ಕದನವಿ
ಚಾರಶೀಲರು ಮುಂದೆ ಹೋಗಿ ಮಹಾರಥಾದಿಗಳು
ಆರು ಬಲ್ಲರು ಸಮರ ಯಜ್ಞದ
ಸಾರವನು ಪಾಪಿಗಳಿರಕಟ ಶ
ರೀರವನು ಕೊಡಿ ಪಡೆಯಿ ಮುಕ್ತಿಯನೆಂದನಾ ಕರ್ಣ ೩೨

ರಾಯ ಕೇಳ್ಳೆ ಕರ್ಪೂರದ ತವ
ಲಾಯಿಂಗಳನೊಡೆದೊಡೆದು ಭಟರಿಗೆ
ಹಾಯಿಕಿದನಂಬುಳಿಗಳಲಿ ಮೊಗೆಮೊಗೆದು ಬೇಸರದೆ
ಸಾಯದಿಹರೇ ರಣದೊಳಗೆ ರಾ
ಧೇಯನೀ ಮನ್ನಣೆಗೆ ಬದುಕುವ
ನಾಯಿಂಗಿಹಪರವುಂಟೆ ಎಂದುದು ನಿಖಿಳ ಪರಿವಾರ ೩೩

ಕೇಳಿರೈ ಪರಿವಾರವಿಂದಿನ
ಕಾಳೆಗವಲೇ ನಮಗೆ ಭೀಷ್ಮರ
ಕೋಲಗುರುವಿನ ಹರಿಬವನು ಮನವಾರೆ ಹೊತ್ತೆವಲ
ಸೋಲವೋ ಕೌರವನ ಭಾಗ್ಯದ
ಕಾಲವೋ ವಿಧಿ ಬಲ್ಲದೆನ್ನಯ
ತೋಳ ಬಲುಹನು ಹಗೆಗೆ ತೋರುವೆನೆಂದನಾ ಕರ್ಣ ೩೪

ಆವ ತೋರಿಸಲಾಪನರ್ಜುನ
ದೇವನನು ರಿಪು ಬಲದೊಳಾತಂ
ಗೀವೆನೀ ಪದಕವನು ಖಡೆಯವ ವಜ್ರಮಾಣಿಕದ
ಆವನೀ ಫಲುಗುಣನ ತೇರಿನ
ಠಾವಿದೇ ಎಂದವಗೆ ಇದೆ ಮು
ಕ್ತಾವಳಿಯಲಂಕಾರವೆಂದನು ಕರ್ಣ ನಿಜಬಲಕೆ ೩೫

ನರನ ತೋರಿಸಿದವಗೆ ಶತ ಸಾ
ವಿರದ ಪಟ್ಟಣವರ್ಜುನನ ಮೋ
ಹರವಿದೇ ಎಂದವಗೆ ಕೊಡುವೆನು ಹತ್ತು ಸಾವಿರವ
ನರನ ತೆರಳಿಚಿ ತಂದು ತನ್ನೊಡ
ನರುಹಿದಗೆ ನೂರಾನೆ ಹಯ ಸಾ
ವಿರದ ವಳಿತವ ಬರಸಿ ಕೊಡುವೆನು ರಾಯನಾಣೆಂದ ೩೬

ತೋರಿರೈ ಫಲುಗುಣನನಿದಿರಲಿ
ತೋರಿರೈ ಸಿತಹಯನನಕಟಾ
ತೋರಿರೈ ವಿಜಯನನು ನಿಮಗೆಯು ಸ್ವಾಮಿಕಾರ್ಯವಲ
ತೋರಿ ಪಾರ್ಥನನವನ ನೆತ್ತರ
ಸೂರೆ ಶಾಕಿನಿಯರಿಗೆ ನಿಮಗುರೆ
ಸೂರೆಯೋ ಭಂಡಾರ ಕೌರವ ರಾಯನಾಣೆಂದ ೩೭

ನರನ ಶರಹತಿಗೆನ್ನ ತನು ಜ
ಝ್ಝರಿತವಾಗಲಿ ನನ್ನ ಕಣೆಯಲಿ
ಬಿರಿಯಲಾತನ ದೇಹ ಖಾಡಾಖಾಡಿ ಯುದ್ಧದಲಿ
ಕರುಳು ಕರುಳಲಿ ತೊಡಕಿ ನೊರೆ ನೆ
ತ್ತರಲಿ ನೆತ್ತರು ಕೂಡಿ ಕಡಿಯಲಿ
ಬೆರಸಿ ಕಡಿ ಪಲ್ಲಟಿಸೆ ಕಾದುವೆನಿಂದು ಹಗೆಯೊಡನೆ ೩೮

ಸರಳು ಸರಳಿಂಗೊಮ್ಮೆ ರೋಮಾಂ
ಕುರದ ಗುಡಿಯಲಿ ರಕ್ತಜಲದಲಿ
ಕರುಳ ಹೂಮಾಲೆಯಲಿ ವೀರರಣಾಭಿಷೇಕವನು
ಧರಿಸಿ ವೈರಿಯ ಘಾಯಘಾಯದ
ಧರಧುರಕೆ ತನಿಹೆಚ್ಚಿ ಮನದು
ಬ್ಬರದಲಿರಿದಾಡಿದರೆ ದಿಟ ಕೃತಕೃತ್ಯ ತಾನೆಂದ ೩೯

ಅವನ ಮುಂದಲೆ ತನ್ನ ಕೈಯಲಿ
ಅವನ ಕೈಯಲಿ ತನ್ನ ಮುಂದಲೆ
ಅವನ ದೇಹದ ಘಾಯವೆನ್ನಯ ಘಾಯ ಚುಂಬಿಸುತ
ಅವನ ಖಡುಗದಲೆನ್ನ ಮೈ ನಾ
ತಿವಿದ ಖಡ್ಗಕೆ ನರನ ಮೈ ಲವ
ಲವಿಸಲಡಿಮೇಲಾಗಿ ಹೊರಳ್ದರೆ ಧನ್ಯ ತಾನೆಂದ ೪೦

ಕೈದಣಿಯೆ ಹೊಯ್ದರಿಯ ಸೀಳಿದು
ಬಾಯ್ದಣಿಯೆ ಮೂದಲಿಸಿ ಹೆಚ್ಚಿದ
ಮೈದಣಿಯೆ ರಿಪುಭಟನ ಹೊಯ್ಲಲಿ ಘಾಯವನು ಪಡೆದು
ಹಾಯ್ದ ಕರುಳಿನ ಮಿದುಳ ಜೋರಿನ
ತೊಯ್ದ ರಕ್ತಾಂಬರದಿ ತಾನಿರ
ಲೈದಿ ಕುರುಪತಿ ಕಂಡನಾದರೆ ಧನ್ಯ ತಾನೆಂದ ೪೧

ನರನ ರಕುತದ ಮದ್ಯಪಾನವ
ನೆರೆದು ಶಾಕಿನಿಯರಿಗೆ ಪಾರ್ಥನ
ಕರುಳ ದೊಂಡೆಯ ಕೂಳ ಮುದ್ದೆಯ ಬಡಿಸಿ ದೈತ್ಯರಿಗೆ
ಅರಿಯ ಖಂಡದಿ ಹಸಿಯ ಸಂಟಿಗೆ
ವೆರಸಿ ಭೂತಾವಳಿಯ ದಣಿಸಿದ
ಡರಸು ಕೌರವನೆನ್ನ ಸಾಕಿತಕಿಂದು ಫಲವೆಂದ ೪೨

## ಒಂಬತ್ತನೆಯ ಸಂಧಿ

ಸೂ. ಸೆಣಸು ಮಿಗಲೊಳಗೊಳಗೆ ಖತಿಯಲಿ
ಕೆಣಕಿ ಬೈದಾಡಿದರು ಸಮರಾಂ
ಗಣಭಯಂಕರ ಶಲ್ಯಭಾಸ್ಕರಸುತರು ರಥದೊಳಗೆ

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳ ಖರೆಯದ ನುಡಿಯನಾಲಿಸಿ
ಕೇಳಿದನು ಕಲಿಶಲ್ಯ ಬೆರಳಲಿ ಮಿಸೆಗಳ ಮುರಿದು
ಹೇಳು ಹೇಳಿನ್ನೊಮ್ಮೆ ಪಾರ್ಥನ
ಹೇಳಿ ತೋರಿಸಲೇನ ಕೊಡುವೆ ನೃ
ಪಾಲಕನ ಪದದಾಣೆ ನುಡಿ ನುಡಿ ಕರ್ಣ ನುಡಿಯೆಂದ ೧

ಹಾರ ಖಡೆಯವ ಬೇಹ ಗಜಹಯ
ನಾರಿಯರ ಕೊಡಬೇಡ ಪಾರ್ಥನ
ತೋರಿ ಕೊಡುವೆನು ತನಗೆ ಹೇಳದೆ ಬರಿದೆ ಹಲುಗಿರಿದೈ
ಸೈರಿಸೀಗಳೆ ನಿನ್ನ ಕರುಳಿನ
ತೋರಣದ ಬಾಗಿಲಲಿ ವಿಜಯ
ಶ್ರೀರಮಣಿಯನು ತಹ ಕಿರೀಟಿಯ ತೋರಿಸುವೆನೆಂದ ೨

ಮೊಲನ ಕಾಹಿನ ಕಾಡಿನಲಿ ಹೆ
ಬ್ಬುಲಿ ವಿಭಾಡಿಸುವಂತೆ ನರಿಗಳು
ಬಲಿದ ಬೇಲಿಯ ಕದಳಿಯನು ಕಾಡಾನೆ ಹೊಗುವಂತೆ
ದಳವ ಬಗಿದು ಮಹಾರಥರನೊಡೆ
ದುಳಿದು ನಿನ್ನಯ ನಾಲಗೆಯ ಹೆಡ
ತಲೆಯಲುಗಿವರ್ಜುನನನೀಗಳೆ ತೋರಿಸುವೆನೆಂದ ೩

ಹೊರಗೆ ಕೊಡುವುದನಿತ್ತ ತಾ ನಾ
ನರಸಿ ತಹೆನರ್ಜುನನನೇತಕೆ
ಬರಿದೆ ಭಟರಿಗೆ ಬಾಯ ಬಿಡುತಿಹೆ ಕರ್ಣ ಖೂಳನಲ
ಅರಸಲೇತಕೆ ಕಾಲ ಮೃತ್ಯುವ
ನರಸುವರೆ ಕಾಲಾಗ್ನಿಯನು ನೀ
ನರಸಲೇಕರ್ಜುನನನೀಗಳೇ ತೋರಿಸುವೆನೆಂದ ೪

ಆವನೊಬ್ಬನ ಬಿಲ್ಲ ಬೊಬ್ಬೆಯ
ಡಾವರದಲೆದೆ ಬಿರಿವುದಹಿತರ
ಗಾವನೊಬ್ಬನ ದನಿಗೆ ಬಿರಿವುದು ಧೈರ್ಯಗಿರಿಶಿಖರ
ಆವನೊಬ್ಬನ ಕಂಡರರಿಗಳ
ಜೀವ ತಲೆಕೆಳಕಹುದು ಸುಭಟರ
ದೇವನಾತನು ಪಾರ್ಥ ಬೇಕೇ ತೋರಿಸುವೆನೆಂದ ೫

ಹಸುಳೆ ನಿದ್ದೆಯ ಹಾವ ಹೊಯ್ದ
ಬ್ಬಿಸುವರೇ ಮೈಮರೆದು ಮಾರಿಯ
ಮುಸುಕನುಗಿವುದು ಬುದ್ಧಿಯೇ ಜೀವಾಭಿಲಾಷರಿಗೆ
ನುಸಿಗಳುರಿಜಾಳಿಗೆಯೊಡನೆ ಝೊಂ
ಪಿಸುವುದುಚಿತವೆ ಕರ್ಣ ಪಾರ್ಥನ
ಘಸಣಿಯೇಕೈ ನಿನಗೆ ಬೇಕೇ ತೋರಿಸುವೆನೆಂದ ೬

ಗರುಡನೆತ್ತಲು ಕೊಬ್ಬಿದೊಳ್ಳೆಯ
ಮರಿಯದೆತ್ತಲು ಸಿಂಹವೆತ್ತಲು
ನರಿಗಳೆತ್ತಲು ದಿಗಿಭವೆತ್ತಲು ನಾಯಮರಿಯೆತ್ತ
ನರನೊಡನೆ ಸಮದಂಡಿಯೇ ಜಗ
ವರಿಯದೇ ನಿನ್ನಾತನಬ್ಬಂ
ತರವನಕಟಾ ಕರ್ಣ ಸುಡು ನೀ ಕಷ್ಟ ಹೋಗೆಂದ ೭

ದಿಟಕೆ ಪಾರ್ಥನ ತೋರಿದರೆ ಸಂ
ಕಟವ ಮಾಡದೆ ಮಾಣಲಾಕಟ
ಕಟ ಧನಂಜಯನೆಂದು ಸೋತನು ಹಿಂದೆ ನಿನ್ನೊಡನೆ
ಕುಟಿಲಮತಿ ಗೋಗ್ರಹಣದಲಿ ಲಟ
ಕಟಿಸಿದನಲಾ ಮದುವೆಯೊಳಗು
ಬ್ಬಟೆಯ ಬಿಲ್ಲಿನೊಳೊದಸಿಕೊಂಡವ ಪಾರ್ಥನಹುದೆಂದ ೮

ನರನ ತೋರಿಸಿದವಗೆ ಶತ ಸಾ
ಸಿರವೆ ಸೂಸುವೆನೆಂದಲಾ ನಿ
ನ್ನರಸನನು ಗಂಧರ್ವರೆಳೆದೊಯ್ದಂದು ಗಗನದಲಿ
ಅರಸಿಯರು ಸಚಿವರು ಕುಮಾರರು
ಮೊರೆಯಿಡಲು ಫಲುಗುಣನು ಬಿಡಿಸಿದ
ಪರಿಯ ನೀ ನೆರೆ ಕಂಡು ಮರೆವರೆ ಕರ್ಣ ಹೋಗೆಂದ ೯

ಕಂಡು ಮಾಡುವುದೇನು ಭೀಷ್ಮರು
ಕಂಡುದಿಲ್ಲಾ ಚಾಪವಿದ್ಯಾ
ಖಂಡಪರಶು ದ್ರೋಣನರ್ಜುನನನು ರಣಾಗ್ರದಲಿ
ಕಂಡು ನೀನೇಗುವೆ ಸುಯೋಧನ
ಭಂಡನೋ ಸಾರಥಿತನದ ನಾ
ಭಂಡನೋ ನೀ ಭಂಡನೋ ನಾವರಿಯೆವಿದನೆಂದ ೧೦

ಕಡು ಪರಾಕ್ರಮಪಿತ್ತ ನೆತ್ತಿಯು
ಹಿಡಿದು ನೀ ಗಳಹಿದರೆ ನಿನ್ನೀ
ಹಡಪದವರೀ ಚಮರದವರೀ ಛತ್ರಧಾರಿಗಳು
ಒಡೆಯ ನೀನೆಂದಂಜಿ ನಿರುತವ
ನುಡಿಯಲಮ್ಮರು ತಮ್ಮ ಮನದೊಳ
ಗೊಡಬಡುವರೇ ಕದನಬಾಹಿರ ಕರ್ಣ ಹೋಗೆಂದ ೧೧

ಕೇಳುತಿರ್ದನು ಕರ್ಣನಿವನಾ
ಭೀಳ ವಚನವನಧಿಕ ರೋಷ
ಜ್ವಾಲೆ ಝಳಪಿಸೆ ಮೀಸೆಗಡಿದನು ತೂಗಿದನು ಶಿರವ
ಖೂಳನಿವನನು ಹೊಯ್ದುರೊಳಗೊಳ
ಗಾಳುದೋಟಿ ವಿಕಾರಿ ವಿಪ್ರನ
ಕಾಳು ಶಾಪದ ಫಲವಲಾ ಸಂಪ್ರಾಪ್ತವಾಯ್ತೆಂದ ೧೨

ಈಸು ನೀನರ್ಜುನನ ಪಕ್ಷಾ
ವೇಶಿಯೇ ಶಿವಶಿವ ಮಹಾದೇ
ವೇಸು ನಂಬಿಹನೋ ಸುಯೋಧನನೇನ ಮಾಡುವನೊ
ಸೀಸಕವೆ ರವಿಕಾಂತವಾಗಿ ದಿ
ನೇಶನನು ಕೆಣಕಿದವೊಲಿಂದವ
ನೀಶನೀತನ ನಂಬಿ ಕೆಟ್ಟನು ಕೆಟ್ಟನಕಟೆಂದ ೧೩

ಸೆಣಸಿದೈ ತನ್ನೊಡನೆಯಿಾ ಫಲು
ಗುಣನ ಭಟನೋ ನೀನು ನೃಪತಿಯ
ರಣವಿಜಯವಿದ್ವೇಷಿಯೋ ನಾವರಿಯೆವಿಂದೀಗ
ಅಣಕವೇ ತುರುಗಾಹಿ ಕಾಜಿನ
ಮಣಿಯು ಬಲ್ಲನು ಗಡ ಕಿರೀಟಿಯ
ಗುಣ ಪರಾಕ್ರಮತನವ ನೀನೇ ಬಲ್ಲೆ ದಿಟವೆಂದ ೧೪

ರೂಢಿಯೋಲೆಯಕಾರನರ್ಜುನ
ನಾಡಿ ಪತಿಕರಿಸುವನು ನೀನದ
ನೋಡಿ ಸಂತಸಬಡುವರಿಬ್ಬರು ಕೃಪನು ಗುರುಸುತನು
ಕೋಡಗದ ಮೊಗಸಿರಿಗೆ ಕಾವಲಿ
ಯೋಡು ಕನ್ನಡಿಯಾಯ್ತು ಗಡ ಕೃತ
ಗೇಡಿಗುಚಿತವನೇನ ಮಾಡುವೆನೆಂದನಾ ಕರ್ಣ ೧೫

ಹಗೆಯನೇ ಕೊಂಡಾಡಿ ಸ್ವಾಮಿಗೆ
ಬೆಗಡ ಬೆಳಸಿ ರಣಾಗ್ರ ಸುಭಟರ
ನಗಡು ಮಾಡಿ ವೃಥಾತ್ಮ ಕುಕ್ಷಿಂಭರಿಕರೆಂದೆನಿಸಿ
ಹೊಗಳಿಕೆಗೆ ಹೊರಗಾದರೈವರು
ವಿಗಡರದರೊಳಗಿಬ್ಬರಳಿದರು
ಹಗೆಗಳುಳಿದಿರಿ ಮೂವರೆಂದನು ಭಾನುಸುತ ಮುಳಿದು ೧೬

ನಾವು ಭಂಡರು ಗರುವ ರಾಯರು
ನೀವಲೇ ಭಂವನದಲಿ ಬಾಹಿರ
ರಾವು ನೀವತಿ ಚದುರರಾದಿರಲಾ ಮಹಾದೇವ
ತಾವು ತಮ್ಮಯ ಹೆಚ್ಚು ಕುಂದಿನ
ಜೀವಕಳೆಯರಿಯದ ನಿರರ್ಥಕ
ಜೀವಿಗಳಹಂಕಾರತನಕೇನೆಂಬುದಿದಕೆಂದ ೧೭

ಮುನಿದೆನಾದರೆ ಕೋಟಿ ಕೃಷ್ಣಾ
ರ್ಜುನರ ಕೊಂಬೆನೆ ರಣಕೆ ದುರ್ಯೋ
ಧನಗೆ ಮಲೆವರ ಮಾರಿ ಪಾಂಡವಮೇಘ ಪವಮಾನ
ತನಗೆ ಸರಿ ಯಾರಿಲ್ಲ ನೆಣಗೊ
ಬ್ಬಿನಲಿ ನುಡಿದೈ ನಿನ್ನ ಬಾಂಧವ
ಜನ ಸಹಿತ ಹಿಂಡುವೆನು ಹಿಂದಿಕ್ಕುವನ ತೋರೆಂದ ೧೮

ಆರಿಗಾವುದು ದೇಶವಾ ಸಂ
ಸ್ಕಾರವವರಿಗೆ ಬಿಡದು ಬುದ್ಧಿಗೆ
ಬೇರುಗೊಲೆಯಲ್ಲಾ ಕುದೇಶ ಕುವಂಶ ಸಂಭೂತಿ
ಊರುಗರಲಾ ಮಾದ್ರದೇಶದ
ಭೂರಿ ದುರಿತರು ಕ್ಷತ್ರ ತಿಮಿರ ವಿ
ಕಾರಿಗಳ ಜಾತಿಯಲಿ ಜನಿಸಿದೆ ಶಲ್ಯ ಕೇಳೆಂದ ೧೯

ಖೂಳರಿಗೆ ತಾ ಜನ್ಮಭೂಮಿ ವಿ
ಟಾಳ ಚರಿತರ ತೌರುಮನೆ ದು
ಶ್ಶೀಲರಿಗೆ ದರ್ಪಣ ವಿಕಾರಿಗಳಿಗೆ ವಿಹಾರವನ
ಹೇಳುವರೆ ಪರಮಾಣು ಗುಣವಾ
ಬಾಲ ವೃದ್ಧರೊಳಿಲ್ಲ ತಕ್ಕಿನ
ಶೌಳಿಕಾರರು ಮಾದ್ರದವರೆಲೆ ಶಲ್ಯ ಕೇಳೆಂದ ೨೦

ರಣದೊಳೊಡೆಯನ ಜರೆದು ಜಾರುವ
ಗುಣಸಮುದ್ರರು ಮಾದ್ರದೇಶದ
ಭಣಿತೆ ತಾನದು ಬೇರೆ ನಡೆವಳಿಯಂಗವದು ಬೇರೆ
ಗಣಿಕೆಯರ ಮಧ್ಯದಲಿ ಮಧ್ಯದ
ತಣಿವಿನಲಿ ತನಿಸೊಕ್ಕಿ ಬತ್ತಲೆ
ಕುಣಿವ ಭಂಗಿಯ ಭಂಡರೆಲವೋ ಶಲ್ಯ ಕೇಳೆಂದ ೨೧

ಕುಟಿಲಸೃಷ್ಟಿಗೆ ನೀವರಸು ಚಾ
ವಟೆಯರಿಗೆ ಮನೆ ದುರ್ವ್ಯಸನ ಲಂ
ಪಟರಿಗಾಚಾರಿಯರು ಖಳರಿಗೆ ನಿಮ್ಮೊಳುಪದೇಶ
ಅಟಮಟದ ಘನದೇಹಸಿದ್ಧಿಯ
ಘುಟಿಕೆ ನಿಮ್ಮಲಿ ರಣಪಲಾಯನ
ಪಟುಭಟರಲಾ ಗುಣವಿಹೀನರು ಶಲ್ಯ ನೀವೆಂದ ೨೨

ಗರುಡ ಮತದಲಿ ಸರ್ಪವಿಷ ಪರಿ
ಹರಿಸುವುದು ದುರ್ಜನವಚೋ ನಿ
ಷ್ಠುರ ಮಹಾ ವಿಷಕಾವ ಗಾರುಡವಾವ ಮಂತ್ರಮುಖ
ದುರುಳ ನೀ ದುರುದುಂಬಿತನದಲಿ
ಹುರುಳುಗೆಡಿಸಿದಡೀಸರಲಿ ನೀ
ಗರುವನೇ ಬಾಹಿರನು ನಾನೇ ಶಲ್ಯ ಕೇಳೆಂದ ೨೩

ಏಸು ಪರಿಯಲಿ ನುಡಿದು ನಮ್ಮಯ
ದೇಶವನು ನೀ ಹಳಿದಡೆಯು ನೀ
ನೇಸು ಪರಿಯಲಿ ಬಯ್ದು ಭಂಗಿಸಿ ನಮ್ಮ ದೂರಿದಡೆ
ಆ ಸಿತಾಶ್ವನ ಬಿಲ್ಲನೊದೆದಾ
ಕಾಶಕವ್ವಳಿಸುವ ಶರೌಘಕೆ
ಏಸಲರಿಯಾ ಕರ್ಣ ನಿನ್ನೊಡಲೆಂದನಾ ಶಲ್ಯ ೨೪

ಅರಳಿದಂಬುಜದೆಸಳಿನಲಿ ಕಡ
ದುರುವ ಕಂಡಡೆ ಕೂಡುವುದೆ ಮಧು
ಕರನ ಲಾಯದೊಳೆಲವೊ ಕರ್ಣ ದುರಾತ್ಮ ನಿನ್ನೊಡನೆ
ನರನ ಸರಿದೂಗುವರೆ ತೋರಿದ
ಪರಿಯಲೆಮ್ಮನು ಹೊಳ್ಳುಗಳೆ ಸಾ
ವಿರವನಿವರಲಿ ಖಾತಿಗೊಂಡಡೆ ಪಾರ್ಥನಾಣೆಂದ ೨೫

ಕ್ಷಣದೊಳೀಗಳೆ ಭೀಮ ಪಾರ್ಥರ
ರಣದೊಳಗೆ ತೋರುವೆನು ಕದಳಿಯ
ಹಣೆದವ್ರೋ ನಿನ್ನಾಳು ಕುದುರೆಯ ಕಾಣಲಹುದೀಗ
ಬಣಗು ನೀ ಭಾರಂಕ ಭಟನೊಳ
ಗಣಕಿಸುವೆ ಫಡ ಪಾಡನರಿಯದೆ
ಸೆಣಸಿದರೆ ನೀ ಶೂರನೆಂಬರೆ ಕರ್ಣ ಕೇಳೆಂದ ೨೬

ಜಲಧಿ ಗಹನವೆ ನಿನ್ನೊಡನೆ ಹೊ
ಕ್ಕಳವಿಗೊದಗುವೆನೆಂದು ವಾಯಸ
ಕಳಿನುಡಿದು ಹಾರಿತ್ತು ಹಂಸೆಯ ಕೂಡೆ ಗಗನದಲಿ
ಬಳಿಕ ತಲೆಕೆಳಗಾಗಿ ಸಾಗರ
ದೊಳಗೆ ಬಿದ್ದುದು ಹಂಸೆ ತಂದಿಳೆ
ಗಿಳುಹಿತಾ ಪರಿ ಕಾಕ ಪೌರುಷ ಕರ್ಣ ನೀನೆಂದ ೨೭

ಆಡಲರಿಯದೆ ಬರಿದೆ ಸೈನ್ಯವ
ಹೂಡಿ ಹಲಬರ ಕೊಲಿಸಿ ಬಲವ
ಕ್ಕಾಡೆ ಕುರುಪತಿ ಕಟ್ಟುವಡೆಯನೆ ಕಳನ ಮಧ್ಯದಲಿ
ಆಡಿದಾತನು ಗೆಲವನರಸಿಗೆ
ಮಾಡಿದಾತನು ಸಾಕು ಪಾರ್ಥನ
ಕೂಡೆ ವಿಗ್ರಹ ಬೇಡ ತೆಗೆ ಮರಳೆಂದನಾ ಶಲ್ಯ ೨೮

ಬರಿಯ ಪಕ್ಷಭ್ರಮೆಯಲಾಡಿದ
ಡುರುವ ನುಡಿಯೇ ಶಲ್ಯ ಪಾರ್ಥನ
ನರಿವೆ ನಾನೆನ್ನಂಘವಣೆಯನು ಬಲ್ಲನಾ ಪಾರ್ಥ
ಸರಿಹೃದಯ ನೀ ನಿನ್ನೊಡನೆ ಸರಿ
ಗೊರಲಲಾರೆನು ಭೀಮ ಪಾರ್ಥರ
ನೊರಲಿಸುವೆನೀ ಬಾಣದಲಿ ಮಾದ್ರೇಶ ಕೇಳೆಂದ ೨೯

ಝಳದ ಝಾಡಿಗೆ ಹೆದರಿ ಸೂರ್ಯನ
ನುಳುಹುವನೆ ಕಲಿ ರಾಹು ದಾವಾ
ನಳನ ದಳ್ಳುರಿಗಳುಕುವುದೆ ಜೀಮೂತ ಸಂದೋಹ
ಫಲುಗುಣನ ಕಣೆಗಿಣೆಯ ಪವನಜ
ನಳಬಳವ ಕೈಕೊಂಬ ಕರ್ಣನೆ
ತಿಳಿಯಲಾ ಮಾದ್ರೇಶ ನನ್ನಯ ವ್ಯಥೆಯ ಕೇಳೆಂದ ೩೦

ಪರಶುರಾಮನ ಕಂಡು ಹೊಕ್ಕೆನು
ಗರುಡಿಯನು ದ್ವಿಜನೆಂದು ಕಲಿತೆನು
ವರಧನುರ್ವೇದವನು ಪಡೆದೆನು ದಿವ್ಯಮಾರ್ಗಣವ
ಸುರಪತಿಯು ಬೇಳಂಬವನು ವಿ
ಸ್ತರಿಸಲೇತಕೆ ವಜ್ರ ಕೀಟೋ
ತ್ಕರವ ಕಳುಹಿದರೆನ್ನ ತೊಡೆಗಳನುಗಿದವವು ಬಳಿಕ ೩೧

ಅರುಣಜಲ ಹೊನಲೆದ್ದು ಮಗ್ಗುಲ
ಲುರವಣಿಸಲಾ ರಾಮ ನಿದ್ರಾ
ಭರವಲಿದ್ದವನೆದ್ದು ನೋಡಿದನೆನಗೆ ಕಡುಮುಳಿದು
ಧರಣಿಸುರನೆಂದೆನ್ನ ಠಕ್ಕಿಸಿ
ಶರವ ಬೇಡಿದೆ ಕಾಳೆಗದೊಳೀ
ಶರ ನಿರರ್ಥಕವಾಗಲೆಂದನು ಶಾಪಹಸ್ತದಲಿ ೩೨

ಅದರಿನೀ ದಿವ್ಯಾಸ್ತ್ರ ಕಾಳೆಗ
ಕೊದಗಲರಿಯವು ಶಲ್ಯ ಪಾರ್ಥನ
ಸದೆವುದೇನರಿದಲ್ಲ ಕುರುಪತಿ ಹೀನಪುಣ್ಯನಲೆ
ಇದು ನಿದಾನವು ಬಾಣ ಮತ್ತೇನ
ಗೊದಗುವುವು ಬೇರುಂಟು ನೃಪನ
ಭ್ಯುದಯವುಳ್ಳಡೆ ಗೆಲುವೆನಹಿತರನೆಂದನಾ ಕರ್ಣ ೩೩

ಅರಸನಭ್ಯುದಯವನು ನೀನಧಿ
ಕರಿಸಿ ಗೆಲುವಡೆ ನಿನ್ನ ಹಂಗೇ
ಕರಿಗಳನು ಜಯಿಸುವರು ನಮ್ಮಾ ಛತ್ರಧಾರಕರು
ಸೊರಹದಿರು ಸಾರತ್ತ ತಾಗಿತು
ಪರಶುರಾಮನ ಶಾಪ ಗಡ ಮರು
ಳರಸು ಕೌರವ ನಿನ್ನ ಸಾಕಿದನೆಂದನಾ ಶಲ್ಯ ೩೪

ಕುಲಕೆ ಸೇರುವ ಮಾತು ಮಾತಿನ
ಬಳಿಗೆ ಸೇರುವ ಬಾಹುಬಲ ಭುಜ
ಬಲದ ತೂಕದ ಕೀರ್ತಿ ಕೀರ್ತಿಯ ಪರಿಯ ಪರಲೋಕ
ಇಳೆಯೊಳಗೆ ನಿನಗಲ್ಲದಾರಿಗೆ
ಸಲುವುದೆಲವೋ ಸೂತಸುತ ನಿ
ರ್ಮಳ ಪುರುಷ ನಿನ್ನಂಗ ದೇಶದ ವಿಧಿಯ ಕೇಳೆಂದ ೩೫

ವೇದಕರ್ಮವಿರೋಧಿಗಳು ಪರಿ
ವಾದಶೀಲರು ವರ್ಣಜಾತಿವಿ
ಭೇದಹೀನರು ಸಾರಸಪ್ತವ್ಯಸನಸಂಗತರು
ಕಾದುವರು ಬೆನ್ನಿನಲಿ ಗೆಲುವರು
ಪಾದದಲಿ ಪರಬಲವನಿರಿವರು
ಬೀದಿಯಲಿ ನಿನ್ನಂಗದೇಶದ ಸಿರಿಯ ಕೇಳೆಂದ ೩೬

ನಿನಗೆ ಸಾರಥಿಯಾದ ಬಾಹಿರ
ತನವೆ ತಾನದು ಸಾಲದೇ ಬೇ
ರೆನಗೆ ತಲೆಗುತ್ತಾವುದೆನುತವೆ ಬಿಸುಟು ವಾಘೆಯವ
ಮನಕತದ ಮೋರೆಯಲಿ ತತ್ಸ್ಯಂ
ದನವನಿಳಿಯಲು ಭಂಡ ಫಡ ಹೋ
ಗೆನುತ ಖಡುಗವ ಜಡಿದು ನುಡಿದನು ಭಾನುಸುತ ಮುಳಿದು ೩೭

ಹೊಡೆದು ತಲೆಯನು ನಿನ್ನ ರಕುತವ
ಕುಡಿಸುವೆನು ಕೂರಸಿಗೆ ಪವನಜ
ನೊಡಲನೆತ್ತರ ತುಂಬುವೆನು ಪಾರ್ಥನ ಕಪಾಲದಲಿ
ಮಿಡುಕಬಾರದಲೇ ಸುಯೋಧನ
ತೊಡಗಿದಗ್ಗದ ರಾಜಕಾರಿಯ
ಕೆಡುವುದೆಂದೇ ನಿನ್ನನುಳಿಹಿದೆನೆಂದನಾ ಕರ್ಣ ೩೮

ಒಳಗೆ ಗಜಬಜವಾಯ್ತು ಶಲ್ಯನ
ಬಲುಭಟರು ಮುಕ್ಕುರುಕಿದರು ಕುರು
ಬಲದ ಮೆಳೆಯುಲ್ಲಾಡಿತಲ್ಲಿಯದಲ್ಲಿ ಗುಜುಗುಜಿಸಿ
ಬಳಿಕ ಕೌರವರಾಯ ಹರಿತಂ
ದಿಳಿದು ದಂಡಿಗೆಯಿಂದ ಗುಣದಲಿ
ತಿಳುಹಿ ಶಲ್ಯನ ಬೇಡಿಕೊಂಡನು ರಥಕೆ ಮರಳಿಚಿದ ೩೯

ನುಡಿದು ಕರ್ಣನ ತಿಳುಹಿ ಶಲ್ಯನ
ನೊಡಬಡಿಸಿ ರವಿಸುತನನಂಘ್ರಿಗೆ
ಕೆಡಹಿ ಮಾದ್ರೇಶನ ಮನಸ್ತಾಪವನು ನೆರೆ ಬಿಡಿಸೆ
ಕಡಹದಂಬುಧಿಯಂತೆ ವಾದ್ಯದ
ಗಡಣ ಮೊರೆದವು ಪ್ರಳಯಸಮಯದ
ಸಿಡಿಲವೊಲು ಸೂಳೈಸಿದವು ನಿಸ್ಸಾಳಕೋಟಿಗಳು ೪೦

## ಹತ್ತನೆಯ ಸಂಧಿ

ಸೂ. ರಾಯದಳ ಹಳಚಿದುದು ಕಲಿರಾ
ಧೇಯನಲಿ ಸಂಕುಳದೊಳೊದಗಿದ
ವಾಯುಸುತ ಸುಮರದಲಿ ಕೊಂದನು ಕರ್ಣನಂದನನ

ಕೇಳು ಧೃತರಾಷ್ಟ್ರಾವನಿಪ ತ
ಮ್ಮಾಳ ಮೇಳಾಪದಲಿ ಪಾಂಡು ನೃ
ಪಾಲಕರ ದಳ ನಡೆದು ಬಂದುದು ಭೂರಿ ರಭಸದಲಿ
ಆಳೊಳಗ್ಗಳೆಯರಿಗೆ ಕೊಟ್ಟನಂ
ವೀಳೆಯವನಾ ಕರ್ಣನತಿರಥ
ಜಾಳವನು ಪರುಠವಿಸಿ ನಿಲಿಸಿದನೆರಡು ಪಕ್ಕದಲಿ ೧

ರಾಯಥಟ್ಟಿನ ಬಲದ ಬಾಹೆಯ
ನಾಯಕರು ಸಂಶಪ್ತಕರು ವಿವಿ
ಧಾಯುಧದ ಕಾಂಭೋಜ ಬರ್ಬರ ಚೀನ ಭೋಟಕರು
ಸಾಯಕದ ಕಿವಿವರೆಯ ತೆಗಹಿನ
ಘಾಯ ತವಕಿಗರೆಡಬಲದ ಕುರು
ರಾಯನನುಜರು ರಂಜಿಸಿತು ದುಶ್ಶಾಸನಾದಿಗಳು ೨

ಗುರುಸುತನ ಕೂಡೆಂಟುಸಾವಿರ
ವರ ಮಹಾರಥರೈದುಸಾವಿರ
ಕರಿಘಟೆಗಳಿಪ್ಪತ್ತು ಸಾವಿರ ರಾವ್ತರೊಗ್ಗಿನಲಿ
ಧರಣಿಪತಿ ಕೃತವರ್ಮ ಕೃಪ ಹ
ನ್ನೆರಡು ಸಾವಿರ ರಥಸಹಿತ ಮೋ
ಹರಿಸಿದರು ಬಲವಂಕದಲಿ ದಳಪತಿಯ ನೇಮದಲಿ ೩

ಥಟ್ಟಿನೆಡವಂಕದಲಿ ಹಗೆಗೊರೆ
ಗಟ್ಟಿ ನಿಂದರು ಕುರುಬಲದ ಜಗ
ಜಟ್ಟಿ ವೃಷಸೇನನು ಸುಷೇಣನು ಶಕುನಿ ಬಲಸಹಿತ
ಬೆಟ್ಟ ಬೀಳಲುವರಿದವೆನೆ ಕೈ
ಮುಟ್ಟಿ ಮಹಿಯನು ದಂತಿಘಟೆ ಸಾ
ಲಿಟ್ಟುದೆತ್ತಣ ಸೇನೆಯೋ ನಾವರಿಯೆವಿದನೆಂದ ೪

ಆ ನದೀನಂದನನ ಸಮರದಿ
ಸೇನೆ ಸವೆದುದನಂತ ಬಳಿಕಿನ
ಸೇನೆ ಗರಿ ಸೋಂಕಿಲ್ಲ ಕಂಡೆನು ದ್ರೋಣ ಪರ್ವದಲಿ
ಏನನೆಂಬೆನು ಜೀಯ ಮತ್ತೀ
ಭಾನುತನಯನ ಕದನಕೊದಗಿದ
ಸೇನೆ ಸಂಖ್ಯಾತೀತವೆಂದನು ಸಂಜಯನು ನೃಪಗೆ ೫

ಒಡ್ಡಿತೀ ಬಲ ರಿಪುಭಟರು ಮಾ
ರೊಡ್ಡ ಮೆರೆದರು ನೆರತೆಯೊ
ಳೊಡ್ಡಿಗೊಬ್ಬರ ಕರೆದು ಪರುಠವಿಸಿದನು ಮುರವೈರಿ
ಒಡ್ಡಿನೆಡದಲಿ ಭೀಮನಾ ಬಲ
ದೊಡ್ಡಿನಲಿ ಕಲಿಪಾರ್ಥ ದಳಪತಿ
ಯೊಡ್ಡಿನಲಿ ನಿಂದನು ಯುಧಿಷ್ಠಿರರಾಯ ದಳಸಹಿತ ೬

ಈ ಮಹಾ ಮೋಹರವನತಿ ನಿ
ಸ್ಸೀಮರಾಂತರು ಮೂವರೇ ಬಳಿ
ಕಾ ಮಹಾರಥ ರಾಜಿಯಡಗಿದುದವರ ರಶ್ಮಿಯಲಿ
ಸೋಮಸೂರ್ಯಾಗ್ನಿಗಳಿದಿರೊಳು
ದ್ದಾಮ ತೇಜಸ್ವಿಗಳೆ ದಿಟ ಕುರು
ಭೂಮಿಪತಿ ಹೇಳೆಂದು ನುಡಿದನು ಸಂಜಯನು ನಗುತ ೭

ಎರಡು ಬಲವುಬ್ಬೆದ್ದುದಿದರೊಳು
ಮೊರೆವ ಭೇರಿಯ ಭಟರ ಬೊಬ್ಬೆಯ
ಕರಿಯ ಗಜರಿನ ಹಯದ ಹೇಷಾರವದ ಹಲ್ಲಣೆಯ
ಜರಿವ ಕಹಳೆಯ ಝಾಡಿಸುವ ಜ
ರ್ಝರದ ಡಿಂಡಿಮ ಡಮರು ಪಟಹದ
ಧರಧುರದ ದನಿ ಧೈರ್ಯಗೆಡಿಸಿತು ಸಕಲ ಸಾಗರವ ೮

ಬೆರಸಿದವು ಬಲವೆರಡು ಹೊಕ್ಕವು
ಕರಿಘಟೆಗಳೇರಿದವು ಕುದುರೆಗ
ಳುರವಣಿಸಿದವು ತೇರ ತಿವಿದರು ಹೊಂತಕಾರಿಗಳು
ಉರುಳ್ವ ತಲೆಗಳ ಬಸಿವ ಮಿದುಳಿನ
ಸುರಿವ ಕರುಳಿನ ಸೂಸುವೆಲುವಿನ
ಹೊರಳ್ವ ಮುಂಡದ ರೌದ್ರರಣ ರಂಜಿಸಿತು ಚೂಣಿಯಲಿ ೯

ಜೋಡನೊಡೆದವಯವದ ರಕುತವ
ತೋಡಿದವು ಕೂರಂಬು ಸಬಳದ
ನೀಡುವೊನೆ ನಿರಿಗರುಳನೆಂಜಲಿಸಿದವು ಪಟುಭಟರ
ಬೇಡರಸು ಬೆನ್ನೀಯೆ ನೆತ್ತಿಯ
ಬೀಡೆ ಬಿರಿಯಲು ಬಿದ್ದ ಲೌಡೆಗ
ಳೀಡಿರಿದವರಿ ಚಾತುರಂಗದ ಚಪಳ ಚೂಣಿಯಲಿ ೧೦

ತೆಗೆಯ ಹೇಳೋ ಚೂಣಿಯಲಿ ಕಾ
ಳಗದ ಕೌತುಕವೆತ್ತ ದೊರೆಗಳು
ಹೊಗಲಿ ದಳನಾಯಕರು ನುಗ್ಗಿನ ಬೀಯಕಳುಕರಲ
ವಿಗಡ ಭೀಮಾರ್ಜುನರ ಬಸುರ
ಲ್ಲುಗಿ ಕರುಳನೆನುತಬ್ಬರದ ಬೊ
ಬ್ಬೆಗಳ ಬಿರುದರು ಕೆಣಕಿದರು ಸಮುಸಪ್ತಕರು ನರನ ೧೧

ರಾಯನಾವೆಡೆ ಕೌರವೇಂದ್ರನ
ದಾಯಿಗನ ಬರಹೇಳು ಹಿಂದಣು
ಪಾಯ ಕೊಳ್ಳದು ನಿಮ್ಮ ಭೀಷ್ಮದ್ರೋಣರಾವಲ್ಲ
ಕಾಯಿದೆವು ಕೈಮುಗಿದನಾದರೆ
ಸಾಯಬಲ್ಲರೆ ತಿರುವನೊದೆಯಲಿ
ಸಾಯಕದ ಹಿಳುಕೆನುತ ಬಿಟ್ಟನು ಸೂಠಿಯಲಿ ರಥವ ೧೨

ಬಿಟ್ಟ ಸೂಠಿಯೊಳುಗಿವ ಕರ್ಣನ
ಥಟ್ಟಣೆಯ ಕಂಡನಿಲಸುತನಡ
ಗಟ್ಟಿದನು ಹದಿನೆಂಟು ಸಾವಿರ ರಥಿಕರೊಗ್ಗಿನಲಿ
ಇಟ್ಟಣಿಸಿ ಬರೆ ರವಿಸುತನ ಕೈ
ಮುಟ್ಟಲೀಯದೆ ಕೌರವೇಂದ್ರನ
ಥಟ್ಟಿನಲಿ ಮೂವತ್ತು ಸಾವಿರ ಕರಿಗಳೌಕಿದವು ೧೩

ಕರಿಘಟೆಯಲಾ ನಮ್ಮ ಪುಣ್ಯದ
ಪರಿಣತೆಯಲಾ ನಮ್ಮ ರಥಿಕರು
ಸರಳ ತೊಡದಿರಿ ಸೈರಿಸುವುದರೆಗಳಿಗೆ ಮಾತ್ರದಲಿ
ಅರಿ ಹಿರಣ್ಯಕ ಬಲಕೆ ನರಕೇ
ಸರಿಯ ಪಾಡೆನಿಸುವೆನು ಕಣ್ಣೆವೆ
ಮರೆಗೆ ಮುಂಚುವೆನೆನುತ ಹೊಕ್ಕನು ಭೀಮ ಗಜಬಲವ ೧೪

ಬಿರಿದುವೀತನ ಸಿಂಹ ನಾದಕೆ
ಕರಿಗಳೆದೆಮಣೆ ಗದೆಯ ಹೊಯ್ಲಲಿ
ತಿರುಗಿ ಕೋಡಡಿಯಾಗಿ ಕೆಡೆದವು ಮಡಿದವಾಕ್ಷಣಕೆ
ಉರುಳಿದವು ಪರ್ವತದ ವಜ್ರದ
ಸರಿಸ ಹೋರಟೆ ಕಾಣಲಾದುದು
ಕರಿಘಟೆಯ ಪವನಜನ ರಣದಲಿ ರಾಯ ಕೇಳೆಂದ ೧೫

ನೀಲಗಿರಿಗಳ ನೆಮ್ಮಿ ಘನ ಮೇ
ಘಾಳಿ ಸುರಿದವು ಮಳೆಯನೆನೆ ಶರ
ಜಾಳ ಕವಿದುದು ಗಜದ ಜೋಧರ ಝಾಡಿಯೆಸುಗೆಯಲಿ
ಕೋಲ ಕೊಂಬನೆ ಭೀಮ ಸಿಡಿಲುರಿ
ನಾಲಗೆಗೆ ನೀರೇಗುವುದು ಮೇ
ಲಾಳ ಮುರಿದನು ವಿವಿಧ ಶಸ್ತ್ರಾಸ್ತ್ರ ಪ್ರಹಾರದಲಿ ೧೬

ಕರಿಯ ಬರಿಕೈಯೆಸುವ ಜೋಧರ
ಕರ ಮಹಾಂಕುಶದವನ ಕೈ ಕ
ತ್ತರಿಸಲೊಂದೇ ಶರದಲೆಚ್ಚನು ಮತ್ತೆ ಗದೆಗೊಂಡು
ತಿರುಗಿ ಹೊಯ್ದನು ಜೋಡು ಜೋಧರು
ಕರಿಯೊಡಲು ಸಮಸೀಳ ಸೀಳಲು
ಅರಸ ಬಣ್ಣಿಸಲಾರು ಬಲ್ಲರು ಭೀಮ ಸಾಹಸವ ೧೭

ಹಿಂಡೊಡೆದು ಗಜಸೇನೆ ಮುಮ್ಮುಳಿ
ಗೊಂಡು ಮುರಿದುದು ಮುಳಿದು ಭೀಮನ
ಗಂಡುಗೆಡಿಸುವರಿಲ್ಲ ಕೌರವ ದಳದ ಸುಭಟರಲಿ
ಅಂಡುಗೊಂಡುದು ಬಿರುದುಗಿರುದಿನ
ಗಂಡರಕಟಕಟೆನುತ ನಿಜ ಕೋ
ದಂಡವನು ದನಿಮಾಡುತಶ್ವತ್ಥಾಮನಿದಿರಾದ ೧೮

ಎಲೆಲೆ ರಾಯನ ತಮ್ಮನೋ ಗಜ
ಬಲದೊಡನೆ ಬಳಲಿದನು ಗುರುಸುತ
ನಳವು ಕಿರಿದೇ ಸ್ವಾಮಿದ್ರೋಹರ ನೂಕು ನೂಕೆನುತ
ಉಲಿದು ಧೃಷ್ಟದ್ಯುಮ್ನ ಬಲವ
ಟ್ಟಳಿಸಿ ನೂಕಿತು ಭೀಮಸೇನನ
ನೆಲನ ಕೊಂಡರು ಕಡುಹಿನಲಿ ಪಾಂಚಾಲ ನಾಯಕರು ೧೯

ಮರುಗದಿರಿ ಪಾಂಚಾಲರಾಯನ
ಮರಿಗಳಿರ ಭೀಮಂಗೆ ತಪ್ಪೇ
ನುರವ ದೊರೆ ಸೊಪ್ಪಾಗದಂತಿರೆ ನೀವು ಕಾದುವಿರೆ
ಅರಿವೆನಾದರೆಯೆನುತ ಬಾಣವ
ತಿರುಹಲಾ ನಿಮಿಷದಲಿ ನಿಂದನು
ಗುರುಸುತನ ಹಿಂದಿಕ್ಕಿ ಪಾಂಚಾಲರಿಗೆ ಕಲಿಕರ್ಣ ೨೦

ಕ್ಷಮಿಸುವುದು ಗುರುಸೂನು ರಣವನು
ನಿಮಿಷ ಚಿತ್ತೈಸುವುದು ಶೌರ್‍ಯ
ಭ್ರಮಿತರೀ ಪಾಂಚಾಲರನು ಬರಿಕೈದು ತೋರುವೆನು
ದ್ಯುಮಣಿ ಪರಿಯಂತೇಕೆ ರಶ್ಮಿಗೆ
ತಿಮಿರವಿದಿರೇ ನೀವು ನೋಟಕ
ರೆಮಗೆ ರಣ ದೆಖ್ಖಾಳವೆಂದನು ಕರ್ಣ ಗುರುಸುತಗೆ ೨೧

ಬಳಿಕ ಹೇಳುವುದೇನು ರಣದ
ಗ್ಗಳೆಯರವದಿರು ಮುತ್ತಿದರು ಕೈ
ಚಳಕಿಗರು ಕವಿದೆಚ್ಚರೀತನನೆಂಟು ದೆಸೆಗಳಲಿ
ಲುಳಿತ ಜಲಧರಪಟಲ ಜಠರದೊ
ಳಿಳಿದ ರವಿಮಂಡಲದವೋಲರೆ
ಘಳಿಗೆ ಕರ್ಣನ ಕಾಣೆನೈ ನರನಾಥ ಕೇಳೆಂದ ೨೨

ಗಾಳಿಯೆತ್ತಲು ಘಾಡಿಸುವ ಮೇ
ಘಾಳಿಯೆತ್ತಲು ವೈರಿ ಸೇನೆಯು
ನಾಳಿಗಡಿತದ ನೊರೆಯ ರಕುತದ ನೂಕು ಧಾರೆಗಳ
ವಿಳಿಗೆಯಲಾ ಛತ್ರಚಮರೀ
ಜಾಳ ನನೆದವು ಕರ್ಣನಂಬಿನ
ಕೋಲ ಕಡಿದೊಡನೊಡನೆ ಕೊಂದನು ಕೋಟಿ ಸಂಖ್ಯೆಗಳ ೨೩

ಮೇಲೆ ಬಿದ್ದುದು ಮತ್ತೆ ರಿಪು ಪಾಂ
ಚಾಲ ಬಲ ಸಾವುದಕೆ ಕಡೆಯಿ
ಲ್ಲಾಳ ಬರವಿಂಗರಿಯೆ ನಾನವಸಾನವನು ಮರಳಿ
ಕೋಲುಗಳ ತೆಗೆದೆಸುವನೋ ಶರ
ಜಾಳವನು ವಿರಚಿಸುವನೋ ಹಗೆ
ಯಾಳಿ ಮುರಿದುದ ಕಾಬೆನೆಸುಗೆಯ ಕಾಣೆ ನಾನೆಂದ ೨೪

ವೈರಿ ಪಾಂಚಾಲಕರೊಳೈವರು
ಧಾರುಣೀಶ್ವರರರಸುವ ಬಿಟ್ಟರು
ಚಾರು ಚಾಪಳ ಚಾತುರಂಗದ ನಿಧನ ನಿರ್ಣಯವ
ಆರು ಬಲ್ಲರು ಖಾತಿಯಲಿ ಜ
ಝ್ಝಾರರೆದ್ದುದು ಮತ್ತೆ ಸಕಲ ಮ
ಹಾರಥರು ನೂಕಿದರು ಲಗ್ಗೆಯ ಲಳಿಯ ಲಹರಿಯಲಿ ೨೫

ನಕುಲ ಧೃಷ್ಟದ್ಯುಮ್ನ ಸುತ ಸೋ
ಮಕ ಶಿಖಂಡಿ ಯುಂಯುತ್ಸು ವರಸಾ
ತ್ಯಕಿ ಶತಾನೀಕಾಖ್ಯ ಪ್ರತಿವಿಂಧ್ಯಕರು ಶ್ರುತಕೀರ್ತಿ
ಸಕಲ ಕೈಕೆಯ ಪಾಂಡ್ಯ ಶಿಶುಪಾ
ಲಕಸುತ ಯಧಾಮನ್ಯು ಸಹದೇ
ವಕರುಂ ಸನ್ನಾಹದಲಿ ಕವಿದುದು ವರ ಮಹಾರಥರು ೨೬

ಭೀಮ ಫಲುಗುಣ ಕೃಷ್ಣ ಧರ್ಮಜ
ರೀ ಮಹಾರಥರಲ್ಲದಿತರ
ಸ್ತೋಮವಳವಿಯ ಮೀರಿ ಕವಿದುದು ಕರ್ಣನಿದಿರಿನಲಿ
ಹಾ ಮಹಾದೇವಾ ಸಮಸ್ತ ಸ
ನಾಮರಥಿಕರು ಕರ್ಣನೊಬ್ಬನ
ಕಾಮಿಸಿದರೈ ಕದನಕವನೀಪಾಲ ಕೇಳೆಂದ ೨೭

ಉರಿಯ ಪೇಟೆಗಳಲಿ ಪತಂಗದ
ಸರಕು ಮಾರದೆ ಮರಳುವುದೆ ನಿ
ಬ್ಬರದ ಬಿರುದಿನೊಳೀ ಮಹಾರಥ ರಾಜಿ ರವಿಸುತನ
ಕೆರಳಿಚಿದರೈ ಕೇಣವಿಲ್ಲದೆ
ಬೆರಸಿದರು ಬೇಸರಿಸಿದರು ಹೊಡ
ಕರಿಸಿದರು ಹೊಯ್ದರು ವಿಭಾಡಿಸಿದರು ವಿಘಾತಿಯಲಿ ೨೮

ತಮ್ಮ ಸತ್ತ್ವೋದಧಿಯ ತೋರಿದ
ರೊಮ್ಮೆ ಮೊಗೆದನು ಬಳಿಕ ರಾಯನ
ಸೊಮ್ಮಿನವರಲಿ ಸೀಳಿದನು ಹದಿನೆಂಟು ಸಾವಿರವ
ಹಮ್ಮುಗೆಯ ಕೈಮನದ ಹೊಣಕೆಯ
ಹಮ್ಮಿನುಬ್ಬಟೆಯವರ ಪಾರ್ಥನ
ತಮ್ಮದಿರ ಸಾಹಸಕೆ ಸೇರಿಸಿದನು ಪಲಾಯನವ ೨೯

ರಥ ಮುರಿದು ಬಲು ಘಾಯದಲಿ ಸು
ವ್ಯಥಿತ ಸಾತ್ಯಕಿ ಹಿಂಗಿದನು ಸಾ
ರಥಿಗಳಳಿವಿನಲೋಡಿದರು ಸುತಸೋಮಕಾದಿಗಳು
ಪೃಥುವಿಗೊರಗಿತು ನಾಲ್ಕು ಸಾವಿರ
ರಥಿಗಳುಳಿದ ಪದಾತಿ ಗಜ ಹಯ
ರಥವ ಕೆಡಹಿದನೆನಿತನೆಂಬುದನರಿಯೆ ನಾನೆಂದ ೩೦

ಮುರಿದು ಮತ್ತೆ ಮಹಾರಥರು ಸಂ
ವರಿಸಿಕೊಂಡು ಶಿಖಂಡಿ ಸಾತ್ಯಕಿ
ವರನಕುಲ ಸಹದೇವ ಧೃಷ್ಟದ್ಯುಮ್ನ ಶೃಂಜಯರು
ಸರಳ ಬಿರುಬಿನ ಬಾಯ ಬೈಗುಳ
ಬಿರುದುಗಹಳೆಯ ಬಿಂಕದವರು
ಬ್ಬರಿಸಿ ಕವಿದರು ಕರ್ಣನಾವೆಡೆ ತೋರು ತೋರೆನುತ ೩೧

ನುಸಿಗಳಿರ ನಿಮಗೇಕೆ ಕರ್ಣನ
ಘಸಣೆ ನಾವೇ ನಿಮ್ಮ ನೆತ್ತಿಯ
ಮುಸಲವಲ್ಲಾ ಫಡ ನಕುಲ ಸಹದೇವ ನಿಲ್ಲೆನುತ
ಮುಸುಡ ಹೊಗರಿನ ಕಣ್ಣ ಕೆಂಪಿನ
ವಿಷಮುರಗ್ಗದ ಕರ್ಣತನುಜರು
ಮುಸಗಿ ಮುಂಚುವ ಮೋಹರವನಡಹಾಯ್ದು ತರುಬಿದರುಂ ೩೨

ಏನ ಹೇಳುವೆನವರ ಶರ ಸಂ
ಧಾನ ಸೌರಂಭವನು ಕಲಿ ವೃಷ
ಸೇನ ವೀರ  ಸುಷೇಣರೇರಿದರೆಚ್ಚರತಿಬಳರ
ಭಾನುಸುತನಿಂದೆಂಟು ಮಡಿಯ ಸ
ಘಾನರಹಿರೋ ಪೂತು ಮಝು ಎನು
ತಾ ನಿಖಿಳ ರಥನಿಕರ ಕವಿದುದುಂ ಮತ್ತೆ ಸಂದಣಿಸಿ ೩೩

ಕಡಿದು ಬಿಸುಟರು ತೇರುಗಳನಡ
ಗೆಡಹಿದರು ಹೇರಾನೆಗಳ ಕೆಲ
ಕಡೆಯಲೌಕುವ ಕುದುರೆ ನನೆದವು ಬಸಿವ ನೆತ್ತರಲಿ
ತುಡುಕಿದರೆ ಕಾಲಾಳನಟ್ಟೆಯ
ನುಡಿಯಲರಿಯೆನು ಕರ್ಣತನುಜರ
ಕಡುಹು ನಕುಲಾದಿಗಳ ಬೆದರಿಸಿತರಸ ಕೇಳೆಂದ ೩೪

ತಿರುಗಿ ಕಂಡನು ಭೀಮನೆಲೆ ತರು
ವಲಿಗಳಿರ ಕೊಂಡಾಡಿ ಕಾದುವ
ದೊರೆಗಳೇ ನಕುಲಾಂಕ ತೆಗೆ ಸಹದೇವ ಸಾರೆನುತ
ಸರಳ ಕೆನ್ನೆಯ ಬಿಗಿದ ಹುಬ್ಬಿನ
ಮುರಿದ ಮೀಸೆಯಲೌಡುಗಚ್ಚಿನ
ಕುರುಕುಲಾಂತಕ ಭೀಮ ಬಿಟ್ಟನು ಸೂಠಿಯಲಿ ರಥವ ೩೫

ರಾಯ ದಳದಲಿ ಸೆಣಸಲಿದು ಕ
ಜ್ಜಾಯವೇ ಮಕ್ಕಳಿರ ಮನ್ನಿಸಿ
ಕಾಯಿದೆನು ಬಳಿಕೇನು ನಿಮ್ಮಂಘವಣೆ ಲೇಸಾಯ್ತು
ಸಾಯಲೇತಕೆ ಹಿಂಗಿ ನಿಮ್ಮನು
ನೋಯಿಸುವುದನುಚಿತವು ಸೇನಾ
ನಾಯಕನು ನಿಮ್ಮಯ್ಯನಾತನ ಕಳುಹಿ ನೀವೆಂದ ೩೬

ಮರುಳಲಾ ಪವಮಾನಸುತ ನಿ
ನ್ನೊರೆಗೆ ಪಡಿಯೊರೆ ತೂಕ ತೂಕಕೆ
ಸರಿಸರಾವಿರೆ ಕನಕಗಿರಿಪರಿಯಂತ ಮಾತೇಕೆ
ತರಣಿಬಿಂಬದ ತತ್ತಿಗಳನು
ತ್ತರಿಸಿ ತೋರುವ ತಿಮಿರವುಂಟೇ
ತರಹರಿಸಿ ತೋರಾ ಎನುತ ಕವಿದೆಚ್ಚರನಿಲಜನ ೩೭

ಗಳಹತನವಿದು ನಿಮ್ಮ ತಂದೆಯು
ಗಳಿಸಿದರ್ಥವು ನಿಮ್ಮ ಬೀಯಕೆ
ಬಳಸುವಿರಿ ತಪ್ಪಾವುದೆನುತೆಚ್ಚಂಬ ಹರೆಗಡಿದು
ಹಿಳುಕ ಕವಿಸಿದನೀತನೀತನ
ಹಿಳುಕ ಮುರಿದೊಡನೆಚ್ಚು ಭೀಮನ
ಕೆರಳಿಚಿದರೈ ಕರ್ಣನಂದನರರಸ ಕೇಳೆಂದ ೩೮

ಬಾಲರೆಂದೇ ಮನ್ನಿಸಿದರೆ ಭ
ಡಾಳಿಸಿತೆ ಚಪಳತ್ವವಾಗಲಿ
ಖೂಳರಾವೈ ಸಲೆಯೆನುತ ನಾರಾಚ ಶತಕದಲಿ
ಬೀಳಲೆಚ್ಚನು ರಥವ ಗಜ ಹಯ
ಚಾಳವನು ಸಾರಥಿಗಳನು ಬಲು
ಗೋಲೊಳಿರೊಬ್ಬಳೊಬ್ಬನನು ಕೆಡೆಯೆಚ್ಚು ಬೊಬ್ಬಿರಿದ ೩೯

ಶಿವಶಿವಾ ಕರ್ಣಾತ್ಮಜನೆ ಮಡಿ
ದವನು ದಳಪತಿ ಮಡಿದನೋ ಕೌ
ರವನ ಕೇಡೋ ಹಾಯೆನುತ ಕುರುಸೇನೆ ಕಳವಳಿಸೆ
ಕವಿದರಶ್ವತ್ಥಾಮ ಕೃಪ ಕೌ
ರವ ಶಕುನಿ ದುಶ್ಶಾಸನಾದಿಗ
ಳವಗಡಿಸಲನಿಬರನು ತೊಲಗಿಸಿ ಕರ್ಣನಿದಿರಾದ ೪೦

ಆತುಕೊಳ್ಳೈ ಭ್ರೂಣಹತ್ಯಾ
ಪಾತಕಿಯೆ ಪಡಿತಳಿಸು ವಿಶಿಖ
ವ್ರಾತವಿವೆಯೆನುತೆಚ್ಚನಿನಸುತನನಿಲನಂದನನ
ಆತುಕೊಂಬರೆ ಸರಿಸನಲ್ಲ ವಿ
ಜಾತಿಯಲಿ ಸಂಭವಿಸಿದನೆ ಫಡ
ಸೂತನಂದನ ಎನುತ ಕರ್ಣನನೆಚ್ಚನಾ ಭೀಮ ೪೧

ಎಚ್ಚರೊಡನೊಡನೆಚ್ಚ ಬಾಣವ
ಕೊಚ್ಚಿದನು ಕಲಿ ಕರ್ಣನಾತನ
ನೆಚ್ಚನಂಬಿನ ಮೇಲೆ ನೂಕಿದವಂಬು ವಹಿಲದಲಿ
ಎಚ್ಚು ಕವಿಸಿದಡವನು ಪವನಜ
ನೆಚ್ಚಡವ ಪರಿಹರಿಸಿ ರವಿಸುತ
ನೆಚ್ಚಡಿಬ್ಬರು ಕಾದಿದರು ಕೈಮೈಯ ಮನ್ನಿಸದೆ ೪೨

ಭಾರಿಯಂಕವು ದಳಪತಿಗೆ ಪಡಿ
ಸಾರಿಕೆಯ ಭಟರಿಲ್ಲಲಾ ಪರಿ
ವಾರಕಿದು ಪಂಥವೆ ಎನುತ ಕುರುರಾಯ ಮೂದಲಿಸೆ
ಕೂರಲಗಿನಂಬುಗಿದು ಬಳಿಯ ಮ
ಹಾರಥರ ಕೈವೀಸಿ ರವಿಸುತ
ಸಾರೆನುತ ಕೆಣಕಿದನು ದುಶ್ಶಾಸನನು ಪವನಜನ ೪೩

ಎಲವೊ ಕರ್ಣಾತ್ಮಜನ ಹೊಯ್ದ
ಗ್ಗಳಿಕೆಯಲಿ ಹೊರೆಯೇರದಿರು ಪಡಿ
ಬಲಕೆ ಕರಸಾ ಕೃಷ್ಣ ಪಾರ್ಥರ ನಿನ್ನಲೇನಹುದು
ಬಳಿಯ ಬಿಗುಹಿನ ಬಿಂಕ ನಿನ್ನಯ
ತಲೆಗೆ ಬಹುದಾವರಿಯೆವೆನುತತಿ
ಬಳನನೆಚ್ಚನು ನಿನ್ನ ನಂದನನರಸ ಕೇಳೆಂದ ೪೪

ತಗರು ಮುಳಿದಾರಿದರೆ ತೋಳನು
ತೆಗೆದು ಜೀವಿಸಲರಿವುದೇ ನಾ
ಲಗೆಯ ವೀರರು ನೀವು ಮೂಢರು ನಾವು ನುಡಿಗಳಲಿ
ಉಗಿದಡಾಯ್ದದ ಮೊನೆಯ ತುದಿ ನಾ
ಲಗೆಗಳಲಿ ಮಾತಾಡಬಲ್ಲರೆ
ಸೊಗಸುವೆವು ನಾವೆನುತ ಪವನಜನೆಚ್ಚನರಿಭಟನ ೪೫

ಪವನಸುತನೆಚ್ಚಂಬ ಹರೆಗಡಿ
ದವಿರಳಾಸ್ತ್ರವನೀತ ಕವಿಸಿದ
ನಿವನ ಬಳಿಯ ಮಹಾರಥರು ಸೂಸಿದರು ಶರವಳೆಯ
ರವಿಯ ಕೈಕತ್ತಲೆಯ ಹೊರಳಿಯ
ತಿವಿಗುಳಿಗೆ ತೆರಳುವುದೆ ರಿಪು ಶರ
ನಿವಹವನು ಕಡಿಯೆಚ್ಚು ಕೆಡಹಿದನಾ ಮಹಾರಥರ ೪೬

ಸಿಕ್ಕಿದರೆ ಬಳಿಕೇನು ತಾಯಿಗೆ
ಮಕ್ಕಳಾಗರು ನಿನ್ನ ತನಯನ
ನಿಕ್ಕಿ ಹಾಯ್ದರು ಹಿಂಡೊಡೆದು ನೀ ಸಾಕಿದವರೆಲ್ಲ
ಹೊಕ್ಕು ಬಳಿಕೊಂದೆರಡು ಪಸರದ
ಲುಕ್ಕುಡಿಯಲೊದಗಿದನು ನಿನ್ನವ
ನೆಕ್ಕತುಳದಲಿ ಸರಿಮಿಗಿಲ ಕಾದಿದನು ಹಗೆಯೊಡನೆ ೪೭

ತೇರು ಹುಡಿಹುಡಿಯಾಗಿ ರಣದಲಿ
ಸಾರಥಿಯ ತಲೆ ಹೋಗಿ ಕಾಲಿನ
ಲಾರುಭಟೆಯಲಿ ನಿನ್ನ ಮಗನೆಸುತಿರ್ದನನಿಲಜನ
ಸಾರು ನೀ ಸಾರೆನುತ ಕರ್ಣಕು
ಮಾರನಡಹಾಯಿದನು ಭೀಮನ
ಭೂರಿ ಬಾಣದ ಪಂಜರವ ಭಂಜಿಸುತ ವಹಿಲದಲಿ ೪೮

ಎಲೆಲೆ ಕರ್ಣ ಕುಮಾರನೋ ಪಡಿ
ಬಲವ ಕರೆಯೋ ಬಾಲನೊಬ್ಬನೆ
ನಿಲುವುದರಿದೋ ಸ್ವಾಮಿದ್ರೋಹರ ಹಿಡಿದು ನೂಕೆನುತ
ಉಲಿಯೆ ಕೌರವರಾಯನುಬ್ಬಿದ
ಕಳಕಳದ ಬಹುವಿಧದ ವಾದ್ಯದ
ದಳದ ದೆಖ್ಖಾದೆಖ್ಖಿಯಲಿ ಕಲಿಕರ್ಣ ನಡೆತಂದ ೪೯

## ಹನ್ನೊಂದನೆಯ ಸಂಧಿ

ಸೂ. ರಾಯ ರಿಪುರವಿರಾಹು ಪಾಂಡವ
ರಾಯ ಸೇನಾಜಲಧಿ ವಡಬನ
ಜೇಯ ರವಿನಂದನನು ಗೆಲಿದನು ಧರ್ಮನಂದನನ

ಮಂಗನ ತೊಲಗಿಸಿ ಮಿಗುವ ಚೂಣಿಯ
ತೆಗಸಿ ಬಲವಂಕದ ಭಟಾಳಿಗೆ
ಮೊಗದ ಸನ್ನೆಯ ಮಾಡುತೆಡವಂಕದ ಕಟಾಕ್ಷದಲಿ
ತೆಗೆದು ತೂರಂಬಿನಲಿ ಭೀಮನ
ಬಿಗಿದನಾವೆಡೆ ಧರಣಿಯಾವೆಡೆ
ಗಗನವಾವೆಡೆ ದೆಸೆಗಳೆನೆ ತುರುಗಿದವು ಶರಜಾಳ ೧

ಭೀಮನೋ ನಿಮಿಷಾರ್ಧದಲಿ ನಿ
ರ್ನಾಮನೋ ತಡವೇಕೆ ರಿಪುವೇ
ಕಾಮನೋ ಕರ್ಣನೇ ಕಪರ್ದಿ ವಿಚಾರವೇಕೆನುತ
ತಾಮಸದ ಭುಲ್ಲವಣೆಯಲಿ ಕುರು
ಭೂಮಿಪನ ಬಲವೊದರಿ ವೈರಿ
ಸ್ತೋಮ ಕಂಡುದು ಪವನತನಯನ ರಣದ ಭಾರಣೆಯ ೨

ಉಲಿವುತಿದೆ ಕೌರವನ ಸೇನಾ
ಜಲಧಿ ಹರುಷದಲಿತ್ತಲನಿಲಜ
ನಳುಕದೊಬ್ಬನೆ ಕಾದುತೈದನೆ ಕರ್ಣನೊಡನೆನುತ
ತಳಿತ ಧವಳಚ್ಛತ್ರ ಚಮರಾ
ವಳಿಯ ಮಧ್ಯದಲವನಿಪತಿ ನಿಜ
ಬಲಸಹಿತ ನೂಕಿದನು ಬಹುವಿಧ ವಾದ್ಯ ರಭಸದಲಿ ೩

ಒಂದು ಕಡೆಯಲಿ ಭೀಮ ಸಾತ್ಯಕಿ
ಯೊಂದು ಕಡೆಯಲಿ ನಕುಳ ದ್ರೌಪದ
ರೊಂದು ಕಡೆಯಲಿ ಚೇಕಿತಾನ ಶಿಖಂಡಿ ಸೃಂಜಯರು
ಒಂದು ಕಡೆ ಸಹದೇವನೀ ಪರಿ
ಹಿಂದೆ ಮುಂದಿಕ್ಕೆಲದೊಳೀತನ
ಸಂದಣಿಸಿ ಮಂತ್ರಿದರು ಮುಕ್ಕುರಿಕಿತ್ತು ರಿಪುಸೇನೆ ೪

ರಾಯದಳವುಬ್ಬೆದ್ದುದೋ ಪಡಿ
ನಾಯಕರನಪ್ಪಳಿಸುವೆನು ರಿಪು
ವಾಯುಜನ ಗಾಢಣೆಯ ಗರ್ವಗ್ರಹವ ಕಳಚುವೆನು
ರಾಯಕೌರವ ಸಹಿತ ನೀವ್ ನಿ
ರ್ಮ್ಮಾಯತದಲಿರಿಯೆನುತ ಸಾರದ
ಸಾಯಕದ ಸರಿವಳೆಯ ಸುರಿದನು ಭಾನುಸುತ ಮುಳಿದು ೫

ಧನುವಿನಲಿ ಸಾತ್ಯಕಿಯ ಮಾದ್ರೀ
ತನುಜರನು ತೇರಿನಲಿ ದ್ರುಪದನ
ತನಯನನು ಸಾರಥಿಗಳಲಿ ಜೋಡಿನಲಿ ಪವನಜನ
ಬಿನುಗರವರವರಂಗದಲಿ ಕೈ
ಮನವ ಖಂಡಿಸಿ ಸಕಲ ರಿಪು ಸಾ
ಧನವನೊಬ್ಬನೆ ಕರ್ಣ ಗೆಲಿದನು ನೃಪತಿ ಕೇಳೆಂದ ೬

ಮುಂದುಗೆಟ್ಟುದು ದೊರೆಗಳೆನೆ ರವಿ
ನಂದನನ ರಥಕಾಗಿ ಸೇನಾ
ವೃಂದ ಕವಿದುದು ಚೈದ್ಯ ಸೃಂಜಯ ಮತ್ಸ್ಯ ಕೈಕೆಯರು
ಸಂದಣಿಸಿ ಪಾಂಚಾಲ ಕೇರಳ
ವಿಂದ ಮಗಧ ದ್ರವಿಡ ವಂಗ ಪು
ಳಿಂದ ಬಲ ಬಹಳಾಬ್ಧಿ ಮುತ್ತಿತು ಮತ್ತೆ ಮೂದಲಿಸಿ ೭

ಒದೆವ ಮಂದರವನು ತರಂಗದ
ಲುದಧಿ ಹೊಯ್ವಂದದಲಿ ಹೊಕ್ಕವು
ಕುದುರೆ ತೂಳಿದವಾನೆ ಕವಿದರು ರಥಿಕರೊಳಬಿದ್ದು
ಒದರಿ ವಿವಿಧಾಯುಧದ ಕಾಲಾ
ಳೊದಗಿ ಕೈದೋರಿಸಿದರಿನಿಬರ
ಸದೆದನೊಬ್ಬನ ಕರ್ಣ ಕೆದರಿದನಾ ಮಹಾಬಲವ ೮

ಬೀಳುವಂಬಿನ ಹೊಯ್ವ ಖಡ್ಗದ
ತೂಳುವಾನೆಯ ತೂಕಿ ತಾಗುವ
ಶೂಲಿಗೆಯ ತುಂಡಿಸುವ ವಂಕಿಯ ನೆಡುವ ಬಲ್ಲೆಹದ
ಸೀಳುವಿಟ್ಟಿಯ ಮುರಿವ ಪರಿಘದ
ಪಾಳಿಸುವ ಪರಶುವಿನ ಧಾಳಾ
ಧೂಳಿ ಮಸಗಿತು ಮತ್ತೆ ಕರ್ಣನ ರಥದ ಬಳಸಿನಲಿ ೯

ತುರಗ ರಾವುತರಿಗವರ ಖಡ್ಗಕೆ
ಕರಿಗೆ ಜೋಧರಿಗವರ ಶಸ್ತ್ರಕೆ
ವರ ರಥಕೆ ಸಾರಥಿಗೆ ರಥಿಕರ ಚಾಪ ಮಾರ್ಗಣಕೆ
ಸರಳನೊಂದೊಂದೆಚ್ಚು ನೆರೆ ಕ
ತ್ತರಿಸಿದನು ಕಾಲಾಳನೊಂದೇ
ಸರಳಲೈನೂರಳಿಯೆ ಕೊಂದನು ಕರ್ಣ ಪರಬಲವ ೧೦

ನಕುಳನನು ಹದಿನೆಂಟರಲಿ ಸಾ
ತ್ಯಕಿಯನೈದಂಬಿನಲಿ ಸಹದೇ
ವಕನನೊಂಬತ್ತರಲಿ ಭೀಮನನೆಂಟು ಕೋಲಿನಲಿ
ಸಕಲ ರಥಿಕರನೆಲ್ಲ ಶತ ಸಾ
ಯಕದಲೊರಗಿಸಿ ಚೈದ್ಯ ಪಾಂಚಾ
ಲಕರ ಥಟ್ಟಿನೊಳೊಕ್ಕಲಿಕ್ಕಿದನರಸ ಕೇಳೆಂದ ೧೧

ಅದು ಬಳಿಕ ಹೇರಾಳ ದಳವಾಂ
ತುದು ಮಹಾರಥರೆಸುಗೆಯಲಿ ಹೂ
ಳಿದುದು ನಭ ನುಗ್ಗಾಯ್ತು ನೆಲ ಚತುರಂಗ ಪದಹತಿಗೆ
ಕುದುರೆ ಕರಿ ತೇರಾಳ ತೆಕ್ಕೆಯ
ಹೊದರಿನಲಿ ಮುಳುಗಿದನು ನಿನ ವ
ನದುಭುತವನೇನೆಂಬೆನೈ ಧೃತರಾಷ್ಟ್ರ ಕೇಳೆಂದ ೧೨

ತಾರಕನ ಥಟ್ಟಿನಲಿ ಹರನ ಕು
ಮಾರ ಹೊಕ್ಕಂದದಲಿ ವೃತ್ರನ
ತಾರಕಾಕ್ಷನ ಜೋಡಿಯನು ಜಂಭಾರಿ ತರಿವಂತೆ
ಅರಿದೆಚ್ಚನು ಶಿವಶಿವಾ ಕಾ
ಮಾರಿಯೋ ಪಾಂಡವ ಬಲದ ಹೆ
ಮ್ಮಾರಿಯೋ ನಿಸ್ಸಾನೆ ಸವರಿತು ವೈರಿಭಟವನವ ೧೩

ವಾಘೆ ಸರಿಸದ ರಾವುತೋ ದೃಢ
ವಾಘೆಯೆನುತೇರಿದ ಹಯೌಘದ
ಮೇಘಪಟಲದ ಪಾಡೆ ಘಡಯೆನೆ ಹೊಕ್ಕ ಗಜದಳದ
ಲಾಘವದ ಲುಳಿಸಾರತನದ ಶ
ರೌಘ ರಚನೆಯ ರಥಿಕಯೂಥ
ಶ್ಲಾಘೆಗಳ ನಾ ಕಾಣೆನೊಂದು ವಿಘಳಿಗೆ ಮಾತ್ರದಲಿ ೧೪

ಬೇರೆ ಲಗ್ಗೆಯ ಮಾಡಿ ಭೋಯೆಂ
ದೇರಿ ಹಳಚುವ ರಭಸ ಕಿವಿಗಳ
ಕೀರಿದುದು ಬಳಿಕವರು ಕರ್ಣನ ತಾಗಿದಾಕ್ಷಣಕೆ
ತಾರು ಥಟ್ಟಿಗೆ ಹರೆದು ರೌದ್ರವ
ಹಾರಿದವು ಕಣ್ಣುಗಳು ರಿಪುಬಲ
ದೇರ ನಾಲಗೆ ಹೊಗಳಲಮ್ಮದು ನೃಪತಿ ಕೇಳೆಂದ ೧೫

ಆಳ ಕೊಂದನು ಲಕ್ಕವನು ತುರ
ಗಾಳಿಯನು ನಾಲ್ಸಾವಿರವ ಶುಂ
ಡಾಲ ಘಟೆಗಳ ತುಂಡಿಸಿದನೊಂದೆರಡು ಸಾವಿರವ
ಮೌಳಿಮಣಿಯಲಿ ಹೊಳೆಹೊಳೆವ ನರ
ಪಾಲರನು ನಾನೂರರೋಲೆಯ
ಸೀಳಿದನಲೈ ಚೈದ್ಯ ಪಾಂಚಾಲರಲಿ ಕಲಿಕರ್ಣ ೧೬

ತೆರಳಿದನು ಸಹದೇವ ನಸು ಪೈ
ಸರಿಸಿದನು ನಕುಳನು ಶಿಖಂಡಿಯ
ಕರಣ ತಲೆಕೆಳಕಾಯ್ತು ಕಾಣೆನು ಸಾತ್ಯಕಿಯ ರಥವ
ಮುರಿವ ಕಂಡೆನು ಭೀಮ ದುಗುಡದ
ಭರದಲಿದ್ದನು ಮಿಕ್ಕ ಬಲ ನಾ
ಲ್ಕೆರಡೊ ನಾಲ್ಕೊಂದೋ ನಿಧಾನಿಸಲರಿಯೆ ನಾನೆಂದ ೧೭

ಇಟ್ಟಣಿಸಿಕೊಂಡೊತ್ತಿ ರಾಯನ
ಥಟ್ಟ ಹೊಕ್ಕನು ಜರುಹಿದನು ಜಗ
ಜಟ್ಟಿ ಜೋಡಿಸಿದಂಗಸುಯ್ವಾನದ ಮಹಾರಥರ
ಕೆಟ್ಟ ದಳವನಘಾಟದವರೊಳ
ಗಿಟ್ಟು ಕೊಳ್ಳರದೇನು ರಾಯನೆ
ಮುಟ್ಟುತಿದಲಾ ರೌದ್ರರಣವೆನುತೆಚ್ಚನಾ ಕರ್ಣ ೧೮

ಕುರುಬಲದ ಸುಮ್ಮಾನ ಕಹಳೆಯ
ಬಿರಿವ ನಿಸ್ಸಾಳದ ನೃಪಾಲರ
ಪರುಷ ಪುಳಕದ ಭುಜದ ಹೊಯ್ಲಿನ ಬೊಬ್ಬೆಯಬ್ಬರದ
ಅರಿಬಲದೊಳಕಟಕಟ ವಿಧಿ ನಿ
ಷ್ಕರುಣಿ ಹಾಹಾಯೆಂಬ ರವದ
ಬ್ಬರದ ನಿಬ್ಬರ ಕೇಳಲಾದುದು ನೃಪತಿ ಕೇಳೆಂದ ೧೯

ಎಲೆಲೆ ರಾಯನ ಮೇಲೆ ಬಿದ್ದುದು
ಕಲಹವಕಟಾ ಹೋಗಬೇಡಿ
ಟ್ಟಳಿಸಿದವ ಹಗೆ ನಮ್ಮ ಭೀಷ್ಮ ದ್ರೋಣನಿವನಲ್ಲ
ಅಳುಕದಿರಿ ಕವಿಕವಿಯೆನುತ ಹೆ
ಬ್ಬಲ ಸಘಾಡದಲೌಕಿ ಕರ್ಣನ
ಹೊಲುಬುಗೆಡಿಸಿದುದಂಬುಗಳ ಸಾರಾಯ ಸೋನೆಯಲಿ ೨೦

ಕೊಂಬನೇ ಬಳಿಕೀ ಮಹಾರಥ
ರಂಬುಗಿಂಬನು ನಿಮ್ಮ ಹಿರಿಯರ
ಡೊಂಬಿನಾಹವವಲ್ಲ ತಮತಮಗೆ ತುಡುಕುವಡೆ
ಅಂಬುನಿಧಿ ಮಕರಂದವಾದರೆ
ತುಂಬಿಯಾಗನೆ ವಡಬನೀತನ
ನೆಂಬ ಖುಲ್ಲರು ಸುಭಟರೇ ಧೃತರಾಷ್ಟ್ರ ಕೇಳೆಂದ ೨೧

ರಾಯದಳದೊಳು ಮಡಿವ ಕರಿವಾ
ನಾಯುಜಕೆ ಕಡೆಯಿಲ್ಲ ರಥಿಕರು
ಪಾಯದಳವೆನಿತಳಿದುದೋ ನಾನರಿಯೆನವರೊಳಗೆ
ಬಾಯಬಿಟ್ಟುದು ಸೇನೆ ಕಡಿಖಂ
ಡಾಯತದ ಹೆಣನೊಟ್ಟಲಿನ ಮುರಿ
ದಾಯುಧದ ಸಂದಣಿಯೆ ನಿಲಿಸಿತು ಬಳಿಕ ರವಿಸುತನ ೨೨

ತರಿದ ಹೊಸ ಕುಮ್ಮರಿಯೊಳಗೆ ರಥ
ಹರಿಯಬಲ್ಲುದೆ ಕರ್ಣ ನಾವಿಂ
ದರಿದೆವೈ ನೀ ನೆಟ್ಟನೋಲೆಯಕಾರನೆಂಬುದನು
ಇರಿತಕಿವರಾರಿದಿರಹರು ನಿ
ನ್ನುರವಣೆಯನಾರಾನುವರು ಮ
ತ್ಸರವ ಬಿಸುಟೆನು ಪೂತು ರವಿಸುತ ಎಂದನಾ ಶಲ್ಯ ೨೩

ಕಾಲಿಡುವಡಿದು ದುರ್ಗವೆನುತಾ
ಸಾಲಬಿಟ್ಟನು ದಕ್ಷಿಣಕೆ ದು
ವ್ವಾಳಿಸಿದನಾ ರಥವನವನೀಪತಿಯ ಮೋಹರಕೆ
ಏಳು ಕಲಿಯಾಗಿನ್ನು ಕೆಲಬಲ
ದಾಳ ಹಾರದಿರೆನುತ ರಾಯನ
ಮೇಲೆ ಕರೆದನು ಕರ್ಣ ಖತಿಯಲಿ ಕಣೆಯ ಬಿರುವಳೆಯ ೨೪

ಗಳಹದಿರು ಕೆಲಬಲದ ಹಂಗಿನ
ಬಳಕೆಯೇ ಫಡ ಸೂತಸುತ ಬಾ
ಳ್ಗೊಲೆಯ ಬಾಹಿರ ಬಿನುಗ ಬೆದರಿಸಿ ಬರಿದೆ ಬೆರತೆಯಲ
ಉಲುಕಿದರೆ ನಾಲಗೆಯ ತೊಡಬೆಯ
ಕಳಚುವೆನು ನಿಲ್ಲೆನುತಲಾ ಕುಂ
ಡಳಿತ ಕಾರ್ಮುಕನೆಚ್ಚು ಕಡಿದನು ಕರ್ಣನಂಬುಗಳ ೨೫

ಆಲಿಕಲುಗಳು ಸಿಡಿಲಮರಿಗಳ
ಮೇಲುವಾಯ್ದವು ಗಡ ಯುಧಿಷ್ಠಿರ
ನಾಳುತನದಲಿ ನಮ್ಮ ಜರೆದನು ಶಲ್ಯ ನೋಡೆನುತ
ಬೋಳೆಯಂಬೈದರಲಿ ರಾಯನ
ತೋಳನೆಚ್ಚನು ಜಡಿವ ಜೋಡಿನ
ಮೇಲೆ ಮುರಿದವು ಬಾಣ ನೃಪ ಮಗುಳೆಚ್ಚನಿನಸುತನ ೨೬

ಬಲುಹು ಕೈಗಳಲುಂಟೆ ತೋರುವು
ದುಳಿವ ಹೊತ್ತದು ಬೇರೆನುತ ಮುಂ
ಕೊಳಿಸಿ ಕರ್ಣನ ಶರವ ಕಡಿದೀರೇಳು ಬಾಣದಲಿ
ಅಳುಕದೆಚ್ಚನು ತೇರು ತುರಗಾ
ವಳಿಯ ಧವಳಚ್ಛತ್ರ ಚಮರಿಯ
ನಿಳುಹಿದನು ಧ್ವಜದಂಡ ಸಹಿತೈವತ್ತು ಬಾಣದಲಿ　೨೭

ಬೇಗೆವರಿ ಬೆಳುದಿಂಗಳಲಿ ನಮ
ಗೀಗ ತೋರಿತಲಾ ಎನುತ ಮುರಿ
ದಾಗಳೇ ಸಂಧಿಸಿದ ತನ್ನಯ ಹಯ ರಥಾದಿಗಳ
ಈಗಲರಿಯಾದರೆಯೆನುತ ಕಿವಿ
ಗಾಗಿ ತೆಗೆದನು ನಿಶಿತಬಾಣವ
ತೂಗಿ ಬಿಟ್ಟನು ಬೀಳೆನುತ ಕಲಿಕರ್ಣ ಬೊಬ್ಬಿರಿದ　೨೮

ಅರಸ ಕೇಳಾಶ್ಚರಿಯವನು ರಿಪು
ಶರವನೆಡೆಯಲಿ ಕಡಿದು ರವಿಸುತ
ನುರವನೆಚ್ಚನು ಧರ್ಮನಂದನನೆಂಟು ಬಾಣದಲಿ
ಬಿರಿಯೆ ಬಲುವಜ್ರಾಂಗಿ ಹಾಯ್ದವು
ಗರಿ ಸಹಿತಲುಚ್ಚಳಿಸಿ ನೆಲದಲಿ
ಸರಳು ನೆಟ್ಟವು ಕರ್ಣ ನನೆದನು ರುಧಿರಧಾರೆಯಲಿ　೨೯

ತೂಗುವೊಡಲರೆಮುಚ್ಚುಗಂಗಳ
ಸೂಗುರಿಸುವಂಗದಲಿ ತಾಳದ
ಮೂಗಿನುಸುರಿನ ಮೂರ್ಛೆಯಲಿ ರವಿಸೂನು ಮೈಮರೆದ
ಆಗಳಂತಿರೆ ಹೊರೆಯವರ ಕೈ
ಲಾಗುಮದ್ದಿನ ಕಮಳಜಲ ಮುಂ
ತ್ರಾಗಮಂದಲೆಚ್ಚತ್ತನೊಂದೇ ನಿಮಿಷದಲಿ ಕರ್ಣ　೩೦

ಬಸಿವ ರಕುತವ ತೊಳೆತೊಳೆದು ಮುಂ
ತ್ರಿಸಿದ ಸಲಿಲವ ಮುಕ್ಕುಳಿಸಿಯುಗು
ಳ್ದಸಮ ಸಾಹಸಿ ಕೊಂಡ ವರ ಕರ್ಪುರದ ವೀಳೆಯವ
ಮುಸುಡ ದುಗುಡದ ತನ್ನ ಸೇನಾ
ಪ್ರಸರಕಭಯವನಿತ್ತು ಮಾರಿಯ
ಮುಸುಕನುಗಿದನ ತೋರೆನುತ ತಾಗಿದನು ಭೂಪತಿಯ　೩೧

ಮಂದಿ ಕವಿಯಲಿ ಘಾಯ ತಾಗಿದ
ಹಂದಿಯೋ ರಾಧೇಯನರಸನ
ಮುಂದುಗೆಡಿಸದೆ ಮಾಣನೋ ತೆಗೆ ನೂಕು ನೂಕೆನುತ
ಸಂದಣಿಸಿತತಿರಥರು ರಾಯನ
ಮುಂದೆ ತಲೆವರಿಗೆಯಲಿ ಸೇನಾ
ವೃಂದ ತುಡುಕಿತು ಕಂಪಿತ ಕಾಳೋರಗನ ನಾಲಗೆಯ　೩೨

ರಾಯನಳಲಿಗರಿವರಥಾಟದ
ನಾಯಕರು ಕಾಣಿರೆ ಸಮೀರನ
ಲಾಯದಲಿ ಲಂಬಿಸಿದವಕಟ ತುಷಾರ ವಾಜಿಗಳು
ಆಯಿತದು ತಪ್ಪೇನೆನುತ ಕ
ರ್ಣಾಯತಾಸ್ತ್ರದಿ ಹರೆಗಡಿದು ರಿಪು
ರಾಯನಲ್ಲಿಗೆ ರಥವ ಬಿಟ್ಟನು ಸೂಠಿಯಲಿ ಕರ್ಣ　೩೩

ಹೊಟ್ಟ ನೂಕಿ ಪೃಥಾಹವದ ಜಗ
ಜಟ್ಟಿ ನೀ ಹೊರಕಾಲುಗೊಂಡರೆ
ಬಿಟ್ಟನೇ ತಾ ಕರ್ಣಸರಿಯಾ ಕಾಯ್ದುಕೊಳ್ಳೆನುತ
ಕಟ್ಟಳವಿಯಲಿ ವೈರಿ ರಾಯನ
ನಿಟ್ಟೆಳಸಿ ಮುರಿಯೆಸುತ ಬರಲಡ
ಗಟ್ಟಿ ತಡೆದರು ಮತ್ತೆ ಸಕಲ ಮಹಾರಥರು ಭಟನ　೩೪

ನಿಲ್ಲು ಸೈರಿಸು ಸೂತಸುತ ಜವ
ನಲ್ಲಿ ಮೇಳವೆ ಜೀವರಿಗೆ ಭೂ
ವಲ್ಲಭನ ಸಮಜೋಳಿಯೋ ನೀ ಸಾರು ಸಾರೆನುತ
ಚೆಲ್ಲಿದರು ಕೂರಂಬುಗಳನೆಡ
ದಲ್ಲಿ ಬಲದಲಿ ಹಿಂದೆ ಮುಂದೆಸೆ
ಝಲ್ಲರಿಯ ಶರಜಾಳ ಝೊಂಪಿಸಿತಬುಜಸಖಸುತನ　೩೫

ತುರಗ ದಳವೊಂದೆಸೆಯಲೌಕಿತು
ಕರಿಘಟೆಗಳೊಂದೆಸೆಯಲತಿರಥ
ರುರವಣೆಯ ಪದಹತಿಯ ಧೂಳಿಯ ಮುಬ್ಬಿನುಬ್ಬರದ
ಧರಧುರವದೊಂದೆಸೆ ಪದಾತಿಯ
ಹೊರಳಿಗಳದೊಂದೆಸೆ ವಿಘಾತಿಸಿ
ತರಿ ಭಟನನೇನೆಂಬೆನೈ ಧೃತರಾಷ್ಟ್ರ ಕೇಳೆಂದ　೩೬

ಮುಸುಕುವುದು ಮುಗಿಲೊಮ್ಮೆ ಸೂರ್ಯನ
ಮುಸಕಮಿಗಿಲಹುದೊಮ್ಮೆ ಮೇಘ
ಪ್ರಸರಕೊಳಗಹನೊಮ್ಮೆ ರವಿ ತೋರುವನು ಮತ್ತೊಮ್ಮೆ
ಅಸಮಸಮರದೊಳೀತನಾ ಪರಿ
ಮುಸುಳುವನು ತೋರುವನು ತೊಡೆವನು
ದೆಸೆಗೆಡಿಸುವನು ಬಳಿಕ ಮುಳಿಸಿನೊಳಾ ಮಹಾರಥರ　೩೭

ಬಿದ್ದುದೈನೂರಾನೆ ರುಧಿರದೊ
ಳದ್ದ ರಿನ್ನೂರರಸು ಮಕ್ಕಳು
ಕದ್ದನಂತಕನಾರು ಸಾವಿರ ಕುದುರೆಯುಸುರುಗಳ
ಬಿದ್ದವರನೊಡೆನೆತುಳಿದು ಮೇಲು
ಬ್ಬೆದ್ದು ಕವಿಕವಿದಾಳುಕುದುರೆಯ
ಬದ್ದಿನಲಿ ಬೇಸರಿಸಿದನು ಪಿತೃಪತಿಯ ಪರಿಜನವ　೩೮

ಆಳ ನೋಯಿಸಿ ನೋಡುತಿಹ ಹೀ
ಹಾಳಿ ತಾನೇಕಕಟಕಟ ದೊರೆ
ಯಾಳ ಧೀವಶವೆನುತ ಸಹದೇವಾದಿಗಳು ಜರೆದು
ತೋಳು ಬಳಲದೆ ತೆಗೆದೆಸುತ ಸಮ
ಜೋಳಿಯಲಿ ನೂಕಿದರು ಕರ್ಣನ
ಮೇಲೆ ಸಾತ್ಯಕಿ ಭೀಮರವನೀಪಾಲನಿದಿರಿನಲಿ　೩೯

ಪೂತು ಮಝರೇ ಭೀಮ ಸಾತ್ಯಕಿ
ಯಾತರೋ ತಮ್ಮೊಡೆಯನಿದಿರಲಿ
ಘಾತಕರ ಘಟ್ಟಿಸುವನೀಗಳೆ ಶಲ್ಯ ನೋಡೆನುತ
ಭೂತನಾಥನ ಭಾಳನಯನೋ
ದ್ಧೂತಧೂಮಧ್ವಜ ಶಿಖಾ ಸಂ
ಘಾತವಿವೆಯೆನೆ ಕೆದರಿದನು ಮಾರ್ಗಣ ಮಹೋದಧಿಯ　೪೦

ಪವನಸುತ ಮುಖದಿರುಹಿದನು ಯಾ
ದವನ ಕಂಡವರಾರು ಸೇನಾ
ನಿವಹಗಿವಹದ ಪಾಡೆ ಕರ್ಣನ ಖಾತಿ ಖೊಪ್ಪರಿಸೆ
ಬವರ ಮುರಿದುದು ವಿಜಯಲಕ್ಷ್ಮಿಯು
ಸವತಿ ಸೇರಿತು ಸುಭಟರಿಗೆ ಬಳಿ
ಕವನಿಪತಿಯೇ ತರುಬಿ ನಿಂದನು ಭಾನುನಂದನನ ೪೧

ಅಂಜುವೆವು ನಿಮಗರಸರೇ ಬಲ
ಪಂಜರದ ಗಿಣಿ ನೀವು ನಿಮಗೀ
ಮಂಜರನ ಪಡಿಮುಖಕೆ ನಿಲುವುದು ನೀತಿಯೇ ನಿಮಗೆ
ಭಂಜನೆಗೆ ಬಲುಹುಳ್ಳಡೆಯು ನಿಮ
ಗಂಜುವರು ಗುರು ಭೀಷ್ಮರಾ ಪರಿ
ರಂಜಕರು ತಾವಲ್ಲೆನುತ ತಾಗಿದನು ಭೂಪತಿಯ ೪೨

ಕಲಿತನವೆ ಹೃದಯದಲಿ ಕಾರ್ಕಶ
ಬಳಕೆ ಕೈಯಲಿ ನಡುವೆ ನಾಲಗೆ
ಯುಲಿವಡೇನಗ್ಗಳಿಕೆಯಹುದೋ ವೀರ ಸಿರಿಯಹುದೊ
ಕಲಿತನದ ಕೆಚ್ಚುಳ್ಳಡೆಸುಗೆಯು
ಸುಳಿವ ತೋರಾದರೆಯೆನುತ ನೃಪ
ತಿಲಕ ಬತ್ತಳಿಕೆಯಲಿ ಸೆಳೆದನು ಹೂಡಿದನು ಶರವ ೪೩

ರೂಪಿದೊಳ್ಳಿತು ರೇಖೆಯುಚಿತ ಕ
ಳಾಪವತಿ ಹಸನಾಯ್ತು ಬಾಣ
ಸ್ಥಾಪನಕೆ ಮೆಚ್ಚಿದೆನು ಮೇಲಣ ತೂಕದಾಳವನು
ಈ ಪರಿಯಲೆಂದರಿಯೆನಹುದೈ
ಚಾಪವಿದ್ಯಾಪಾತ್ರವಿಂದವ
ನೀಪತಿಯಲಾ ಪೂತು ಮಝು ಎಂದೆಚ್ಚನಾ ಕರ್ಣ ೪೪

ಗಂಡು ಗರ್ವವನೆಮ್ಮೊಡನೆ ಕೋ
ದಂಡದಲಿ ಮೆರೆ ಸಾಕು ನಿನ್ನಯ
ಭಂಡವಿದ್ಯವ ಮೆರೆವಡದಲಾ ಕೌರವಾಸ್ಥಾನ
ದಿಂಡುದರಿವೆನು ಸೈರಿಸೆನುತವ
ಖಂಡಶರನಿಕರದಲಿ ರಿಪುಮಾ
ರ್ತಂಡತನಯನನೆಚ್ಚು ಬೊಬ್ಬಿರಿದನು ಮಹೀಪಾಲ ೪೫

ಇರಿತ ಮುನ್ನವೊ ಸುಭಟರಿಗೆ ಬೊ
ಬ್ಬಿರಿತಮುನ್ನವೊ ನಿಮ್ಮ ನುಡಿಯಲಿ
ಮುರಿವಡೆದಿರೈ ನೀವೆನುತ ನೃಪನಂಬ ಹರೆಗಡಿದು
ತೆರಹುಗೊಡದೆಚ್ಚನು ನೃಪಾಸ್ತ್ರವ
ತರಿದು ಮಗುಳೆಚ್ಚನು ಶರಾವಳಿ
ಯೆರಗಿದವು ತುರುಗಿದವು ತೆತ್ತಿಸಿದವು ರಥಾಂಗದಲಿ ೪೬

ಕಾಯಲಾಪರೆ ಕರೆದುಕೊಳ್ಳಾ
ವಾಯುಜನನರ್ಜುನನ ನಕುಲನ
ನಾಯಕರೊಳುಬ್ಬಾಳುಗಳನತಿರಥಮಹಾರಥರ
ಸಾಯಲಂಜುವಡಿಳುಹು ಧನುವನು
ನೋಯಿಸೆನು ನುಡಿಸಿದಡೆ ಕೌರವ
ರಾಯನಾಣೆ ನೃಪಾಲ ಕೇಳೆನುತೆಚ್ಚನಾ ಕರ್ಣ ೪೭

ಅರಸನೆಚ್ಚನು ಕರ್ಣ ಶರವನು
ಪರಿಹರಿಸಿ ಮಗುಳೆಚ್ಚನೀತನು
ಧರಣಿಪನನವನೀಶನೆಚ್ಚನು ಹಗೆಯ ರಥ ಹಯವ
ಮುರಳಿ ಶಲ್ಯನನೆಚ್ಚಡೀತನ
ಹೊರೆಯವರನೆಚ್ಚನು ರಥಾಂಗವ
ಹುರುಳುಗೆಡಿಸಿ ಮಹೀಶನೆಚ್ಚನು ಭಾನುನಂದನನ ೪೮

ಅಕಟ ಚಂದ್ರಿಕೆ ಗೆದ್ದುದೋ ಪಾ
ವಕನ ಝಳವೀ ಧರ್ಮಪುತ್ರನ
ವಿಕಳ ಶರದಲಿ ಕರ್ಣ ನೊಂದನಲಾ ಮಹಾದೇವ
ಅಕುಟಿಲರು ನೀವೆಮ್ಮವೊಲು ಬಾ
ಧಕರೆ ಪರರಿಗೆ ಪರಶುಧರ ಸಾ
ಯಕದ ಸವಿ ನೋಡಾದಡೆನುತೆಚ್ಚನು ಮಹೀಪತಿಯ ೪೯

ಏನ ಹೇಳುವೆನವನಿಪತಿ ನಿ
ನ್ನಾನೆಯಗ್ಗಳಿಕೆಯನು ಪಾಂಡವ
ಸೇನೆ ಮಗುಳಡ್ಡವಿಸಿತವನೀಶನ ರಥಾಗ್ರದಲಿ
ಆನೆ ಹೊಕ್ಕವು ಬದ್ದರದ ಬಲು
ವಾನಿಸದ ಬಂಡಿಗಳನೊಡ್ಡಿದ
ರಾ ನಿರಂತರ ಶರವ ತಡೆದರು ತೆಕ್ಕೆವರಿಗೆಯಲಿ ೫೦

ಕಡಿದು ಬಿಸುಟನು ತೆಕ್ಕೆವರಿಗೆಯ
ಗಡಣವನು ಬದ್ದರದ ಬಂಡಿಗ
ಳಡಗಿದವು ನಿಜಸೇನೆಸಹಿತರುಣಾಂಬುಪೂರದಲಿ
ಅಡಿಗಡಿಗೆ ಮುಕ್ಕುರಿಕಿ ತನ್ನನು
ತಡೆವ ರಿಪುಚತುರಂಗವಿಪಿನದ
ಕಡಿತ ತೀರಿತು ಮತ್ತೆ ರಾಯನ ಕೆಣಕಿದನು ಕರ್ಣ ೫೧

ಕಾವನಾರೈ ಕರ್ಣ ಮುನಿದರೆ
ಜೀವದಲಿ ಕಕ್ಕುಲಿತೆಯೇಕೆ ಶ
ರಾವಳಿಗಳಿವಲಾ ಕರಾಗ್ರದಲುಗ್ರ ಧನುವಿದಲಾ
ನಾವು ಸೂತನ ಮಕ್ಕಳುಗಳೈ
ನೀವಲೇ ಕ್ಷತ್ರಿಯರು ನಿಮಗೆಮ
ಗಾವುದಂತರವತಿಬಳರು ನೀವೆನುತ ತೆಗೆದೆಚ್ಚ ೫೨

ಅರಿಯ ಶರಹತಿಗಡ್ಡವರಿಗೆಯು
ನರಸನಭಿಮುಖಕೊಡ್ಡಿದರು ರಥ
ತುರಗವನು ಚಪ್ಪರಿಸಿ ಸಾರಥಿ ನೂಕಿದನು ರಥವ
ಧರಣಿಪತಿ ಕೆಳ್ಳೆದು ಶರದಲಿ
ಹರಿಗೆಯನು ಮುರಿಯೆಚ್ಚು ಸೂತನ
ಶಿರವನಿಳುಹಿದಡೊಮೆದುಕೊಂಡುದು ಮುಂಡ ಸಾರಥಿಯ ೫೩

ಕೆದರಿದನು ಮಾರ್ಗಣೆಯೊಳರಸನ
ಹೊದಿಸಿದನು ಹುಸಿಯೇಕೆ ರಾಯನ
ಹುದಿದ ಕವಚವ ಭೇದಿಸಿದವೊಳಬಿದ್ದವಂಬುಗಳು
ಎದೆಯಲೌಕಿದ ಬಾಣ ಬೆನ್ನಲಿ
ತುದಿಮೊನೆಯ ತೋರಿದವು ಪೂರಾ
ಯದ ವಿಘಾತಿಯಲರಸ ಕಳವಳಿಸಿದನು ಕಂಪಿಸುತ ೫೪

ಅರೆಮುರಳುವಾಲಿಗಳ ಹೆಗಲಲಿ
ಮುರಿದ ಗೋಣಿನ ದುರುದುರಿಪ ನೆ
ತ್ತರನಿಹಾರದ ಮೈಯ ಸಡಲಿದ ಕೈಯ ಬಿಲುಸರಳ
ಅರಸನನು ಕಂಡಳಲಿದರು ಚಾ
ಮರದ ಛತ್ರದ ಹಡಪದವರಾ
ಪ್ತರು ವಿಘಾತಿಯಲಂಬ ಕಿತ್ತರು ಬಹಳ ಶೋಕದಲಿ　೫೫

ಮಂತ್ರಜಲದಲಿ ತೊಳೆದು ಘಾಯವ
ಮಂತ್ರಿಸುತ ಕರ್ಪುರದ ಕವಳದ
ಯಂತ್ರರಕ್ಷೆಯಲವನಿಪನ ಸಂತೈಸಿ ಮಲಗಿಸುತ
ತಂತ್ರ ತಲ್ಲಣಿಸದಿರಿ ಜಿತಶತ
ತಂತ್ರನೋ ಭೂಪತಿ ವಿರೋಧಿಭ
ಟಾಂತ್ರಭಂಜನನೀಗಳೆಂದುದು ರಾಯನಾಪ್ತಜನ　೫೬

ಸಿಕ್ಕಿದೆಯಲಾ ಸ್ವಾಮಿದ್ರೋಹಿಗ
ಳಿಕ್ಕಿ ಹೋದರೆ ಭೀಮಫಲುಗುಣ
ರೆಕ್ಕತುಳದಲಿ ತೊಡಕಿ ನೀಗಿದಲಾ ನಿಜೋನ್ನತಿಯ
ಚುಕ್ಕಿಗಳು ನಿನ್ನವರ ಮಡುವಿನ
ಲಿಕ್ಕಿ ಕೌರವ ರಾಯನನು ಮರೆ
ವೊಕ್ಕು ಬದುಕಾ ಧರ್ಮಸುತ ಬಾ ಎಂದನಾ ಕರ್ಣ　೫೭

ಸಾಳುವನ ಕೂಡರಗಳಿಗೆ ಸಮ
ಮೇಳವೇ ಶಸ್ತ್ರಜ್ಞನಾದಡೆ
ಸೋಲುವುದೆ ವರ ಶಸ್ತ್ರವಿದ್ಯಾ ಪ್ರೌಢಿಯದು ಬೇರೆ
ಆಳುತನದಭಿಮಾನವದು ಕರ
ವಾಳಧಾರಾಗಮನವರಸರೆ
ಖೂಳರಾದಿರಿ ನೀವೆನುತ ಭಂಗಿಸಿದನಾ ಕರ್ಣ　೫೮

ಶ್ರುತಿರಹಸ್ಯವನರಿವ ಧರ್ಮ
ಸ್ಥಿತಿಗತಿಯನಾರೈವ ಶಾಸ್ತ್ರ
ಪ್ರತತಿಯರ್ಥ ವಿಚಾರವಾಚರಣಾದಿ ಕರ್ಮದಲಿ
ಚತುರರಹ ದರುಶನದ ತರ್ಕದ
ಮತನಿಧಾನವನರಿವ ವರ ಪಂ
ಡಿತರು ನಿಮಗೀ ಕದನಕರ್ಕಶವಿದ್ಯೆಯೇಕೆಂದ　೫೯

ವರ ನದಿಗಳಲಿ ಮುಳುಗಿ ಮೂಗಿನ
ಬೆರಳಲೂರ್ಧ್ವಶ್ವಾಸ ಪವನನ
ಧರಿಸಿ ಕಾಲತ್ರಯಜಪಾನುಷ್ಠಾನಹೋಮದಲಿ
ಪರಮಋಷಿ ಮಧ್ಯದಲಿ ನೀವಾ
ಚರಿಸುವುದು ಬಿಸುಟಿಂಗಿವಡಾಯ್ದದ
ಹೊರಳಿಗಿಡಿಗಳ ಹೊದರೊಳಾಚರಿಸುವರೆ ನೀವೆಂದ　೬೦

ಕೊಲುವಡವ್ವೆಗೆ ಕೊಟ್ಟ ಮಾತಿಂ
ಗಳುಕುವೆನು ನೀ ಹೋಗು ಹರಿಬಕೆ
ಮಲೆವರಾದರೆ ಕಳುಹು ಭೀಮಾರ್ಜುನರನಾಹವಕೆ
ಉಲುಕಿದರೆ ನಿನ್ನಾಣೆಯೆನುತ
ಗ್ಗಳಿಸಿ ನೃಪತಿಯ ಕೆಡೆನುಡಿದು ಪರ
ಬಲವ ಬರಹೇಳೆನುತ ನಿಂದನು ನುಡಿಸಿ ನಿಜಧನುವ　೬೧

## ಹನ್ನೆರಡನೆಯ ಸಂಧಿ

ಸೂ.　ರಾಯದಳದುಳಿಕಾರ ಕೌರವ
ರಾಯಸೇನಾಸೂರೆಕಾರನ
ಜೀಯನೋ ಕಲಿಭೀಮ ಗೆಲಿದನು ಭಾನುನಂದನನ

ಏನ ಹೇಳುವೆನರಸ ಪಾಂಡವ
ಸೇನೆಗಾದ ವಿಪತ್ತನರಸನ
ಹಾನಿಯನು ನಿನ್ನವರ ಸುಮ್ಮಾನದ ಸಘಾಡಿಕೆಯ
ಭಾನುಸುತನೋ ಕೌರವನ ಮದ
ದಾನೆಯೋ ಕುರುಸೈನ್ಯ ನಳಿನೀ
ಭಾನು ಮಝು ಭಾಪೆಂದು ಹೊಗಳಿತು ಕೂಡೆ ಪರಿವಾರ　೧

ಇವರಯುಹೆರುಷದ ನಗೆನಾ ಬಲ
ದವರ ಮೋರೆಯು ಹೊಗೆಯನೀ ಬಲ
ದವರ ಭುಜದುರೆವೊಯ್ಲನಾ ಬಲದವರ ಬಿಸುಸುಯ್ಲು
ಇವರೊಸಗೆ ಕೈಗುಡಿಯನಾ ಬಲ
ದವರ ಗೆಲುವಿನೆ ಗಡಿಯ್ಸ ನೀ ಚಿ
ತ್ತವಿಸಿದೈ ಧೃತರಾಷ್ಟ್ರ ಎಂದನು ಸಂಜಯನು ನಗುತ　೨

ಆಳುವವರ ನಗಿಸುವುದು ನಗುವರ
ನಳಿಸುವುದು ಗೆಲಿದವರ ಸೋಲಿಸಿ
ಗೆಲಿಸುವುದು ಸೋತವರನೀ ವಿಪರೀತಗತಿ ವಿಧಿಗೆ
ಅಳಲದಿರು ಸುಮ್ಮಾನದಲಿ ವೆ
ಗ್ಗಳಿಸದಿರು ನಿನ್ನವರು ನಿಮಿಷದೊ
ಳಳಲುದೊರೆಯಲಿ ಮುಗುಳುವಂದವನಿನ್ನು ಕೇಳೆಂದ　೩

ಲಳಿಯ ಲಹರಿಯಲಬ್ಬರದ ಕಳ
ಕಳದ ವಾದ್ಯದ ಲಗ್ಗೆಯಲಿ ಪರ
ಬಲವ ಹೊಕ್ಕನು ಮತ್ತೆ ಮೂದಲಿಸುತ್ತ ಮಹಿಪತಿಯ
ಎಲೆಲೆ ರಾಯನ ರಣಕೆ ಮಾರಿದ
ತಲೆಯ ಕದ್ದಿರೆ ಕುನ್ನಿಗಳಿರೆನು
ತೊಳಗೊಳಗೆ ಬಿಡೆ ಜರೆದು ಜೋಡಿಸಿ ನೂಕಿತರಿಸೇನೆ　೪

ಅಕಟ ರಾಯನ ಹರಿಬದಲಿ ಸೇ
ವಕರಿಗಾದುದು ಸೂರೆ ವೃಂದಾ
ರಕ ವಧೂವರ್ಗದಲಿ ಚಾಳಿಸಬೇಡ ವಿಗ್ರಹಕೆ
ವಿಕಳಬಲನಿವನೇನು ಭಾಳಾಂ
ಬಕನೊ ಬಲಿಬಂಧಕನೊ ಸುರಪಾ
ಲಕನೋ ಫಡಫಡ ಎನುತ ಕವಿದುದು ಕರ್ಣನಿದಿರಿನಲಿ　೫

ಅರಸ ಕೇಳಾಕ್ಷಣಕೆ ರುಧಿರದ
ಬಿರುವೊನಲ ಬಲುಗೆಸರ ನೆಣವಸೆ
ಯರಿಲ ನೆಲದಲಿ ಧೂಳಿಯೆದ್ದುದು ದಳದ ಪದಹತಿಗೆ
ಸರಕಟಿಸಿ ರಿಪು ಸರ್ವದಳ ಸಂ
ವರಿಸಿ ನೂಕಿತು ಕಲ್ಪಮೇಘದ
ಸರಿವಳಿಗೆ ಸಿಗುರೆದ್ದು ಕೊಬ್ಬಿದ ಕಡಲಿಸಂದದಲಿ ೬

ನೊಂದನೇ ಧರ್ಮಜನು ಭಂಗಕೆ
ತಂದನೇ ರಾಧೇಯನಕಟಕ
ಟಿಂದು ಮಡಿದರೆ ಭೀಮಪಾರ್ಥರು ಭೀತಿಯೇಕಿದಕೆ
ನೊಂದನೀ ಪರಿ ತನ್ನ ಕಂಗಳ
ಮುಂದೆ ನರಪತಿ ಪಾರ್ಥನಿನ್ನೇ
ನೆಂದು ಮುನಿವನೊ ಶಿವಶಿವಾ ಎಂದಳಲಿದನು ಭೀಮ ೭

ಅರಸ ಮುರಿವಡೆದಲ್ಲಿ ದಿಕ್ಕನೆ
ಬೆರಸಿದನೆ ಬವರವನೆನುತ ನ
ಮ್ಮರಸಿ ನಗಳೇ ಭಂಡವೀರನ ಮಾತ ತೆಗೆಯೆನುತ
ಅರಸ ತಾನಿನ್ನಾವ ಪರಿ ಹೇ
ವರಿಸುವನೊ ತಾ ಮುನ್ನ ಕರ್ಣನ
ಶರಹತಿಯಲೇಕಳಿದುದಿಲ್ಲಾ ಎನುತ ಚಿಂತಿಸಿದ ೮

ನರನ ಖಾತಿಗೆ ದ್ರೌಪದಿಯ ತೊ
ತ್ತಿರುಗಳುಪಹಾಸ್ಯಕ್ಕೆ ನೃಪತಿಯ
ಮರಣ ಸಾದೃಶ್ಯ ಪ್ರಹಾರವ್ಯಥೆಯ ಕಾಣಿಕೆಗೆ
ಅರರೆ ಭಾಜನವಾದೆನ್ಯೆ ಹರ
ಹರ ಮಹಾದೇವಾ ಎನುತ ತುದಿ
ವೆರಳಲಾಲಿಯ ನೀರ ಮಿಡಿದಳಲಿದನು ಕಲಿಭೀಮ ೯

ಅರಸ ಕೇಳ್ಳೆ ಶೋಕರಸಸಾ
ಗರದೊಳದ್ದುದೊ ವಡಬನೆನೆ ಕ
ಣ್ಣಿರಳಿದವು ಕುಡಿಮೀಸೆ ಕುಣಿದವು ಸುಯ್ಲು ಹೊಗೆ ಮಸಗೆ
ಕರ ನಡುಗೆ ಮೈ ಬಲಿಯೆ ಹುಬ್ಬುಗ
ಳುರೆ ಬಿಗಿಯೆ ಕಂಗಳಲಿ ಕೆಂಗಿಡಿ
ಸುರಿಯೆ ವೀರಾವೇಶದಲಿ ಮಸಗಿದನು ಕಲಿಭೀಮ ೧೦

ಧರಣಿಪನ ಸಂರಕ್ಷೆಗೈಸಾ
ವಿರ ರಥವನಿಪ್ಪತ್ತು ಸಾವಿರ
ತುರಗವನು ಹದಿನಾರು ಸಾವಿರ ಮತ್ತಗಜಘಟೆಯ
ದೊರೆಗಳನು ಸಹದೇವ ಸಾತ್ಯಕಿ
ವರನಕುಳ ಸುತಸೋಮ ಪಾಂಚಾ
ಲರ ಕುಮಾರಾನೀಕವನು ಕರೆಕರೆದು ನೇಮಿಸಿದ ೧೧

ವೈರಿ ಕರ್ಣನ ಕಾಂತೆಯುರ ದೃಗು
ವಾರಿ ಧಾರೆಯಲೆನ್ನ ಭಾರಿಯ
ಭೂರಿ ಕೋಪಾನಳನ ಲಳಿಯನು ತಗ್ಗಿಸುವೆನೆನುತ
ಧಾರುಣೀಪತಿಗೆರಗಿ ನಿಜ ಪರಿ
ವಾರವನು ಸುಯ್ಧಾನವರಸೆನು
ತಾರುಘಟೆಯಲಿ ಭೀಮ ಮೊಳಗಿದನಹಿತ ಮೋಹರಕೆ ೧೨

ಬೀಳ ಹೊಯ್ ಹೊಯ್ ಬಿಡೆಯದಲಿ ಹೊ
ಕ್ಕಾಳುತೆಗೆಯಲಿ ಧರ್ಮಪುತ್ರನ
ಮೇಲುನೋಟದಲಿರಲಿ ನೋಡಲಿ ನಮ್ಮ ನಾಟಕವ
ಆಳ ನಿಲಿಸೋ ನಿಲಿಸೆನುತ ಸಂ
ಸ್ಫಾಳಿತೋದ್ಧತ ಚಪಳ ಚಾಪ ಕ
ರಾಳ ಮೌರ್ವೀನಾದ ಭೀಷಣನಾದನಾ ಭೀಮ ೧೩

ಪವನಸುತನಿಂಗಿತವ ಮನದಂ
ಘವಣೆಯನು ಮಾದ್ರೇಶ ಕಂಡನು
ರವಿಸುತನ ನೋಡಿದನು ಮುಖದಲಿ ಮುರಿದು ತೋರಿದನು
ಇವನ ಬಲ್ಲೆಯೆ ಭೀಮನೋ ಭೈ
ರವನೋ ಭರ್ಗನೊ ಮನುಜ ಕಂಠೀ
ರವನೊ ಕಾಲಾಂತಕನೊ ಕೋಳಾಹಳವಿದೇನೆಂದ ೧೪

ಉರಿಯ ಜೊಂಪೆಯಲುಸುರ ಹೊಗೆಯು
ಬ್ಬರಿಸುತದೆ ಕೆಂಪೇರಿದಕ್ಷಿಯಂ
ಲೆರಡು ಕೋಡಿಯಲೊಗುತಲದೆ ಕಿಡಿಗಳ ತುಷಾರಚಯ
ಸ್ಫುರದಹಂಕಾರ ಪ್ರತಾಪ
ಜ್ವರದಿ ಮೈ ಕಾಹೇರುತದೆ ನಿ
ಬ್ಬರದ ಬರವಿಂದೀತನದು ಕಲಿಕರ್ಣ ನೋಡೆಂದ ೧೫

ಕಾಯಲಳವೇ ಕರ್ಣ ಬರಿಯ ನ
ವಾಯಿಯಲಿ ಫಲವಿಲ್ಲ ದೇಹದ
ಬೀಯಕಿದು ಹೊತ್ತಲ್ಲ ಸಾಧಕವಿದಕೆ ಬೇರುಂಟು
ಸಾಯಲಡಸಿದ ಬಡತನಕ್ಕೆ ಪ
ಲಾಯನವೆ ನಿಕ್ಷೇಪವಿದೆ ಬಯ
ಲಾಯಸವು ನಮಗೇತಕೆಂದನು ಮಾದ್ರಪತಿ ನಗುತ ೧೬

ನೀ ಮರುಳಲಾ ಶಲ್ಯ ಘಡ ಸು
ತ್ರಾಮನೇ ಸಮವರ್ತಿಯೇ ಜಿತ
ಕಾಮನೇ ಬಡ ಭೀಮನುರುಬೆಗೆ ಖೇದನಾದೆಯಲ
ತಾಮಸನ ತಡೆಗಡಿದು ಭೂತ
ಸ್ತೋಮಕುಣಬಡಿಸುವೆನು ಜಯ ಸಂ
ಗ್ರಾಮ ರುದ್ರನು ಕರ್ಣನಾರೆಂದರಿಯೆ ನೀನೆಂದ ೧೭

ಅಕಟ ಬಲುಗೈಯಹೆ ಕಣಾ ಸಾ
ಧಕನು ನಾನದಕೆನ್ನೆನಿಂದಿನ
ವಿಕಟ ಕೋಪಾಟೋಪ ಭೀಮನ ದಂಡಿಯದು ಬೇರೆ
ತ್ರಿಕಟುಕದ ಕಜ್ಜಾಯವಿದು ಬಾ
ಲಕರ ಸೊಗಸೇ ಕರ್ಣ ಹೇಳ್ ಕೌ
ತುಕದ ಮಾತೇ ನಿನ್ನ ಮೇಲಾಣೆಂದನಾ ಶಲ್ಯ ೧೮

ನುಡಿನುಡಿಗೆ ಭಂಗಿಸುವೆ ನೀ ನಿ
ನ್ನಡಿಗಡಿಗೆ ತಲೆಯೊತ್ತುವೆನೊ ನಿ
ನ್ನೊಡನೆ ಬಂದರಿಯೊಡನೆ ತಲೆಯೊತ್ತುವೆನೊ ತವಕದಲಿ
ಪಡಿಮುಖದೊಳೌಕುವ ವಿರೋಧಿಯ
ಕಡುಹ ತಗ್ಗಿಸಿ ನಿನ್ನ ಮೆಚ್ಚಿಸಿ
ಕೊಡುವೆನಿನ್ನರೆಗಳಿಗೆ ಸೈರಿಸು ಮಾದ್ರಪತಿಯೆಂದ ೧೯

ಇತ್ತಲೀ ಮಾತಿಂಗೆ ಮುನ್ನ ವಿ
ಯತ್ತಳವನಳ್ಳಿರಿವ ಸಿಂಧದ
ಸುತ್ತು ಝಲ್ಲರಿ ಚೌರಿಗಳ ಘಲ್ಲಣೆಯ ಘಂಟೆಗಳ
ಹೊತ್ತ ಕೋಪದ ಹೊಗೆವ ಮುಖದಾ
ಡೊತ್ತುವಥರದ ವೈರಿ ಸೇನೆಯ
ಕುತ್ತಿ ತೇಗುವ ಮನದ ಮಾರುತಿ ಮೊಳಗಿದನು ಮುಂದೆ ೨೦

ಎಲೆಲೆ ಭೀಮನು ಶಿವಶಿವಾ ದಳ
ಮುಳವ ಹಾಯ್ದನೊ ದಿಟ್ಟರಾವೆಡೆ
ನಿಲಿಸಲಾಪವರಿಲ್ಲಲಾ ಕುರುರಾಯನಾನೆಗಳು
ಕಳಕಳದ ಕಾಲಾಟ ರಾಯನ
ದಳಕೆ ದುರ್ಲಭವೆನುತ ಮಿಗೆ ಮುಂ
ಕೊಳಿಸಿ ಭೀಮನ ತುಡುಕಿದರು ರವಿಸುತನ ಪರಿವಾರ ೨೧

ಕವಿದವಾನೆಗಳಟ್ಟಿ ರಾವ್ತರು
ತಿವಿದರಂಬಿನ ಸರಿಯ ಸಾರದೊ
ಳವಘಟಿಸಿದರು ರಥಿಕರುರವಣಿಸಿದರು ಸಬಳಿಗರು
ಸವಗ ಖಂಡಿಸಲೊದಗಿದರು ಬಿ
ಲ್ಲವರು ಕಟ್ಟಿರಿಕಾರರಾತನ
ಜವಗೆಡಿಸಿದರು ಕಡಲುವಡಬನ ತಡೆದು ನಿಲುವಂತೆ ೨೨

ನುಸಿಗಳಳವಿಯ ಥಟ್ಟಣೆಯ ತೋ
ರಿಸಿದರೋ ಬಲುಹಾಯ್ತು ರಾಯನ
ಘಸಣಿಗಕಟ ವಿಶೋಕ ನೋಡ್ವೆ ಪೂತು ವಿಧಿಯೆನುತ
ಮುಸಗಿ ಮೊಗೆದನು ಹೊಗುವ ಸೇನಾ
ಪ್ರಸರವನು ಕುಡಿತೆಯಲಿ ಚೆಲ್ಲಿದ
ನಸಮಬಲನಡಹಾಯ್ಸಿ ಕೊಂಡನು ನೆಲನನಳವಿಯಲಿ ೨೩

ಎಲವೊ ಸೂತನ ಮಗನೆ ರಾಯನ
ನಳಲಿಸಿದೆಲಾ ನಿನ್ನ ರಕುತವ
ತುಳುಕುವೆನು ಹಿಂದಿಕ್ಕಿಕೊಂಬನ ತೋರು ತೋರೆನುತ
ಬಲುಸರಿಯ ನಾರಾಚದಲಿ ಕ
ತ್ತಲಿಸೆ ದೆಸೆ ಕೈಮಾಡಿದನು ಕೈ
ಚಳಕದೆಸುಗೆಯ ಕೇಣದಳತೆಯನರಿಯೆ ನಾನೆಂದ ೨೪

ಏನ ಹೇಳುವೆನಿತ್ತಲೀ ರವಿ
ಸೂನುವೇ ದುರ್ಬಲನೆ ಭೀಮನ
ನೂನ ಶರಸಂಘಾತವನು ಖಂಡಿಸಿದನಾಕ್ಷಣಕೆ
ದೀನನೇ ಶರನಿಕರದಲಿ ಪವ
ಮಾನಜನೊ ಪಾತಾಳಿಯೋ ಕಲಿ
ವೈನತೇಯನೋ ಕರ್ಣನೋ ನಾವರಿಯೆವಿದನೆಂದ ೨೫

ಅರಸ ಕೇಳಾಶ್ಚರಿಯವನು ಟೆ
ಬ್ಬರಿಸುವನೆ ಕಲಿಭೀಮನುಬ್ಬಟೆ
ಯರಿಗಳಾಹವ ಧೀರರಾದರೆ ಧಾತುಗೆಡುವವನೆ
ಶರ ಧನುವ ಹಾಯ್ಕಿದನು ಧೊಪ್ಪನೆ
ಧರೆಗೆ ಧುಮ್ಮಿಕ್ಕಿದನು ಖಡುಗವ
ತಿರುಹಿ ಬೆರಸಿದನಳವಿಯಲಿ ಕುರುಸೇನೆ ಕಳವಳಿಸೆ ೨೬

ಹೊಡೆದು ತಲೆಯನು ಹಗೆಯ ರಕುತವ
ಕುಡಿವೆನಲ್ಲದೊಡವನಿಪಾಲನ
ಕೆಡೆನುಡಿದ ನಾಲಗೆಯ ಕೀಳುವೆನೆನುತ ಕೋಪದಲಿ
ಸಿಡಿವ ಕಿಡಿಗಳ ಕೋಪಶಿಖಿಯು
ಗ್ಗಡದ ಮಾರುತಿ ಹೊಯ್ದು ಕರ್ಣನ
ಕೆಡಹಿದನು ಮುರಿಯೊದೆದನೆದೆಯನು ಹಾಯ್ದು ಮುಂದಲೆಗೆ ೨೭

ಬಾಯ ಬಿಟ್ಟುದು ಸೇನೆ ಕೌರವ
ರಾಯನಾವೆಡೆ ದಳಕೆ ಬಲುಗೈ
ನಾಯಕರು ಕೃಪ ಗುರುಸುತರು ಕೈಗೊಟ್ಟರೇ ಹಗೆಗೆ
ವಾಯುಜನ ಕೈದೊಳಸಿನಲಿ ಕುರು
ರಾಯ ರಾಜ್ಯಶ್ರೀಯ ಮುಂದಲೆ
ಹೋಯಿತೋ ಹಾ ಎನುತ ಮರುಗಿತು ಕೂಡೆ ಕುರುಸೇನೆ ೨೮

ಥಟ್ಟುಗೆಡಹಿದ ಕರ್ಣನನು ಕೈ
ಮುಟ್ಟದಿರು ಹೆರಸಾರು ಪಾರ್ಥನು
ಕೊಟ್ಟ ಭಾಷೆಯ ಮರೆದೆಲಾ ಕೈತಪ್ಪ ಮಾಡದಿರು
ಬಿಟ್ಟು ಹಿಂಗೆಲೆ ಭೀಮ ಭೀತಿಯ
ಬಿಟ್ಟು ಬೆರಸಿದೆ ಸಾಕು ಹರಿಬಕೆ
ಮುಟ್ಟಿಸಿದ ಗೆಲವಾಯ್ತು ಮರಳಿನ್ನೆಂದನಾ ಶಲ್ಯ ೨೯

ದುರುಳತನದಿಂದಣ್ಣ ದೇವನ
ಹುರುಳುಗೆಡೆ ನುಡಿದನು ವಿರೋಧಿಯ
ಶರಹತಿಗೆ ಬೆಂಡಾಗನಿವನ ದುರುಕ್ತಿ ಶರಹತಿಗೆ
ಅರಸ ಬಳಲಿದನೇನ ಮಾಡುವೆ
ದುರುಳ ನುಡಿದನ ನಾಲಗೆಯ ನಿಡು
ಸೆರೆಯ ಬಿಡಿಸುವೆ ಮಾವ ಸೈರಿಸಿಯೆಂದನಾ ಭೀಮ ೩೦

ಸಾಕು ಹೆರತೆಗೆ ಘಾಯವಡೆದವಿ
ವೇಕಿ ಮೈ ಮರೆದಿದ್ದ ಹೊತ್ತಿದು
ನೀ ಕುಠಾರನಲಾ ಕಿರೀಟಿಯ ಭಾಷಿತದ್ರುಮಕೆ
ಲೋಕಮಾನ್ಯನು ಕರ್ಣ ಕುರುಬಲ
ದಾಕೆವಾಳನು ಭಂಗವಡೆದುದೆ
ಸಾಕು ನೀ ಸಾರೆಂದು ಭೀಮನ ನೂಕಿದನು ಶಲ್ಯ ೩೧

ರಥಕೆ ಮರಳಿದನಾತನೀತನ
ವ್ಯಥೆಯನೇನೆಂಬೆನು ಸುಯೋಧನ
ರಥಿಗಳುಬ್ಬಟೆ ಗರ್ಭವಿಕ್ಕಿತು ನಿಮಿಷಮಾತ್ರದಲಿ
ರಥದೊಳಗೆ ಮಾದ್ರೇಶನೀ ಸಮ
ರಥನ ಸಂತೈಸಿದನು ಕವಳ
ಪ್ರಥಿತ ಮಂತ್ರೌಷಧಿಗಳಲಿ ಹದುಳಿಸಿದನಾ ಕರ್ಣ ೩೨

ಆರಿತದು ಬೊಬ್ಬೆಯಲಿ ದುಗುಡದ
ಭಾರದಲಿ ತಲೆಗುತ್ತಿತಿವರು
ಬ್ಬಾರದಲಿ ಭುಲ್ಲವಿಸಿತವರು ವಿಘಾತಿಯಿಂದಿವರು
ಪೂರವಿಸಿದುದು ಪುಳಕದಲಿ ದೃಗು
ವಾರಿ ಪೂರದಲಿವರಖಿಳ ಪರಿ
ವಾರವಿದ್ದುದು ಕೇಳು ಜನಮೇಜಯ ಮಹೀಪಾಲ ೩೩

## ಹದಿಮೂರನೆಯ ಸಂಧಿ

ಸೂ. ಮಡಿದರಾಹವದೊಳಗೆ ಕೌರವ
ನೊಡನೆ ಹುಟ್ಟಿದರನಿಲಸುತನಿಂ
ದಡಿಗಡಿಗೆ ಹಳಚಿದನು ಯಮನಂದನನಾ ಕರ್ಣ

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳನಗ್ಗಳಿಕೆಯ ವಿಘಾತಿಯ
ಗಾಳಿ ತಾಗಿತು ತಿರುಗಿದುದು ಬಳಿಕೀ ಸಮಸ್ತಬಲ
ಕೋಲು ತಪ್ಪಿದ ಫಣಿಯವೊಲು ಲಯ
ಕಾಲಕೊದರುವ ಸಿಡಿಲವೊಲು ಹೀ
ಹಾಳಿಸುತ ತಮತಮಗೆ ಬಯ್ವುದು ಕೂಡೆ ಪರಿವಾರ ೧

ರಣದೊಳೊಪ್ಪಿಸಿಕೊಟ್ಟು ಕರ್ಣನ
ಹಣವ ಹೊಳ್ಳಿಸಿ ಮರೆದೆವೇ ಮ
ನ್ನಣೆಯ ಮೋಹವ ತೊರೆದೆವೇ ಕರ್ಪುರದ ವೀಳೆಯವ
ಗುಣ ಪಸಾಯದ ಕಾಣಿಕೆಯ ಹರಿ
ಯಣದ ಹಂತಿಯ ದಾಯದೂಟಕೆ
ಋಣಿಗಳಾದೆವೆ ಶಿವಶಿವಾ ಎಂದೊಳರಿತಖಿಳಬಲ ೨

ಮೀಸೆಯೇಕಿವ ಸುಡಲಿ ಸುಭಟರ
ವೇಷವೇಕಿವು ತಮ್ಮ ವಧುಗಳು
ಹೇಸಿ ನಮ್ಮನು ಬಿಸುಟು ಹೋಗಳೆ ಚಂಡಿಕಾದೇವಿ
ಭಾಷೆ ಬಾಯಲಿ ಕೈದು ಕೈಯಲಿ
ವಾಸಿಯನು ಬಿಸುಟಕಟ ಜೀವದ
ಲಾಸೆ ಮಾಡಿದೆವೆನುತ ಮರುಗಿತು ಕೂಡೆ ಪರಿವಾರ ೩

ಬಯ್ವ ಹೆಂಡಿರ ಚಿಂತೆಯಿಲ್ಲದೆ
ಹೊಯ್ವ ಕೀರ್ತಿಯ ಹಂಬಲಿಲ್ಲದೆ
ಒಯ್ವ ನರಕದ ನೆನಹದಿಲ್ಲದೆ ಪತಿಯ ಸಮಯದಲಿ
ಕಾಯ್ವರಾವಲ್ಲೆಂದು ಕೆಲದಲಿ
ಬಯ್ವರಿಗೆ ಮೈಗೊಟ್ಟು ಬದುಕುವ
ದೈವದೂರರು ನಾವೆನುತ ಮರುಗಿತ್ತು ಪರಿವಾರ ೪

ನುಡಿಯ ಭಂಡರು ಕೆಲರು ಸಿಂಧದ
ಗುಡಿಯ ಭಂಡರು ಕೆಲರು ಹಾಹೆಯ
ತೊಡರ ಭಂಡರು ಕೆಲರು ಕೆಲರು ಕುಲಕ್ರಮಾಗತದ
ಗಡಬಡೆಯ ಭಂಡರು ವಿಪತ್ತಿನೊ
ಳೊಡೆಯನಿರೆ ಕೈದುಗಳ ಹೊರೆತಲೆ
ಯೊಡನೆ ಬಿಟ್ಟಿಯ ಭಂಡರಾವೆಂದುದು ಭಟವ್ರಾತ ೫

ಮೀಸೆ ಸೀದವು ಭಟರ ಸುಯ್ಲಿನ
ಲಾಸೆ ಬೀತುದು ದೇಹದಲಿ ಬಲು
ವಾಸಿಯಲಿ ಮನ ಮುಳುಗಿತನಿಬರಿಗೇಕಮುಖವಾಗಿ
ಬೀಸಿದರು ಚೌರಿಗಳ ಬಲ ವಾ
ರಾಶಿ ಮಸಗಿತು ರಿಪುಗಳಸುವಿನ
ಮೀಸಲನು ತುಡುಕಿದುದು ಕೌರವ ಮಹಾರಥರ ೬

ಕುದುರೆ ಕುದುರೆಯ ಮುಂಚಿದವು ಕರಿ
ಮದಕರಿಯ ಹಿಂದಿಕ್ಕಿದವು ನೂ
ಕಿದವು ರಥ ರಥದಿಂದ ಮುನ್ನ ಮಹಾರಥಾದಿಗಳು
ಇದಿರೊಳೊಬ್ಬನನೊಬ್ಬನೊದಗುವ
ಕದನ ಭರದ ಪದಾತಿ ಪೂರಾ
ಯದಲಿ ಕವಿದುದು ಜಡಿವ ಬಹುವಿಧವಾದ್ಯ ರಭಸದಲಿ ೭

ಪೂತು ಮಝು ದಳಪತಿಯ ಹರಿಬವ
ನಾತುದೇ ಕುರುಸೇನೆ ಸುಭಟ
ವ್ರಾತವಳವಿಗೆ ಬರಲಿ ಬರಲಿ ವಿಶೋಕ ನೋಡೆನುತ
ಹೂತ ಸಂಪಗೆ ವನವನಳಿ ಸಂ
ಘಾತ ಮುತ್ತಿದಡೇನೆನುತ ನಿ
ರ್ಭೀತನಿದ್ದನು ಭೀಮ ಸುಮ್ಮಾನದ ಸಘಾಡದಲಿ ೮

ಕವಿದುದಿಬು ಗರಿಗಟ್ಟಿ ಕೌರವ
ನಿವಹ ಮೋಡಾಮೋಡಿಯಲಿ ರಣ
ದವಕಿ ಕರ್ಣದ್ರೋಹಿಯಾವೆಡೆ ತೋರು ತೋರೆನುತ
ತಿವಿವ ಬಲ್ಲೆಹದಿಡುವ ಚಕ್ರದ
ಕವಿವ ಬಾಣದ ಹೊಯ್ವ ಖಡ್ಗದ
ವಿವಿಧಬಲ ಬಿಡದಾಕಿ ಮುತ್ತಿತು ಪವನನಂದನನ ೯

ಸಿಕ್ಕಿದನು ರಿಪು ಸ್ವಾಮಿದ್ರೋಹನು
ಚುಕ್ಕಿಯೋ ತಡೆ ಹೋಗಬಿಡದಿರಿ
ಹೊಕ್ಕುಳಲಿ ಮಗುವುಂಟೆ ಹಣೆಯಲಿ ನೋಟವೇ ಹಗೆಗೆ
ಹೊಕ್ಕು ಹೊಯ್ ಹೊಯ್ ನೆತ್ತರೊಬ್ಬರಿ
ಗೊಕ್ಕುಡಿತೆಯೇ ಸಾಕೆನುತ ಬಲ
ಮುಕ್ಕುರುಕಿತನಿಲಜನ ಕಾಣೆನು ನಿಮಿಷಮಾತ್ರದಲಿ ೧೦

ಹರಿಬದೋಲೆಯಕಾರರೋ ಮು
ಕ್ಕುರುಕಿದರೊ ಪವನಜನು ಸಿಕ್ಕಿದ
ದೊರೆಯ ಬಿಡಿಸೋ ನೂಕೆನುತ ಪಾಂಚಾಲ ಕೈಕೆಯರು
ವರನಕುಳ ಸಹದೇವ ಸಾತ್ಯಕಿ
ತುರುಕ ಬರ್ಬರ ಭೋಟ ಮಾಗಧ
ಮರು ಪುಳಿಂದಾದಿಗಳು ಕವಿದುದು ನೃಪನ ಸನ್ನೆಯಲಿ ೧೧

ಸರಕಟಿಸಿ ರಿಪುರಾಯ ದಳ ಸಂ
ವರಿಸಿಕೊಂಡುದು ಸಿಕ್ಕಿದಹಿತನ
ಸೆರೆಯ ಬಿಡದಿರಿ ಬಿಡದಿರಂಜದಿರಂಜದಿರಿ ಎನುತ
ಗುರುಜ ಕೃಪ ಕೃತವರ್ಮ ಯವನೇ
ಶ್ವರ ಕಳಿಂಗ ಕರೂಪ ಕೌರವ
ರರಸ ಮೊದಲಾದಖಿಳ ಬಲ ಜೋಡಿಸಿತು ಝಡಿತೆಯಲಿ ೧೨

ಏನ ಹೇಳುವೆನರಸ ಕರ್ಣನ
ಹಾನಿ ಹರಿಬದ ಬವರವನು ಪವ
ಮಾನನಂದನ ನಿಮಿಷದಲಿ ಮುಸುಕಿದನು ಬಾಣದಲಿ
ದಾನವರ ಥಟ್ಟಣೆಯ ಕೀಲಣ
ದಾ ನಗರಿಯನು ನೆಗ್ಗಿದಂತಿರ
ಲೀ ನಿಘಾತದ ಸೇನೆ ಮುರಿದುದು ಭಟನ ಭಾರಣೆಗೆ ೧೩

ಸಿಲುಕುವುವು ಮೃಗಪಕ್ಷಿ ಹೂಡಿದ
ಬಲೆಗಳಲಿ ಕಾಡಾನೆ ಬೀಸಿದ
ಬಲೆಯ ಕೊಂಬುದೆ ನಿನ್ನ ದಳ ಥಟ್ಟೈಸಿ ಮುತ್ತಿದರೆ
ಅಳುಕುವನೆ ಕಲಿ ಭೀಮನೆಡದಲಿ
ಕಲಕಿದನು ಬಲವಂಕದಲಿ ಕೈ
ವಳಿಸಿ ಕೊಂದನು ವರ ಪುರೋಭಾಗವ ವಿಭಾಡಿಸಿದ ೧೪

ಆಳ ಮೇಳೆಯ ಮುರಿದುದೀ ಸಾ
ಯಾಳು ಸತ್ತುದು ಹಲವು ಪಡಿಬಲ
ದಾಳು ಕೂಡದ ಮುನ್ನ ಕೊಂದನು ಕೋಟಿ ಸಂಖ್ಯೆಗಳ
ಮೇಲೆ ಮೇಲೊಡಗವಿವ ಸಮರಥ
ಜಾಲವನು ಮುರಿಯೆಚ್ಚು ನಿಮಿಷಕೆ
ಧೂಳಿಪಟ ಮಾಡಿದನು ಕರ್ಣನ ಮನ್ನಣೆಯ ಭಟರ ೧೫

ಮತ್ತೆ ಕವಿದುದು ಮೇಲೆ ಪಡಿಬಲ
ವೊತ್ತಿ ಹೊಕ್ಕುದು ಹೆಣದ ಬೆಟ್ಟವ
ಪತ್ತಿ ಹುಡಿಹುಡಿ ಮಾಡಿ ಹಿಡಿದರು ರಥದ ಕುದುರೆಗಳ
ಕುತ್ತಿದರು ಸಾರಥಿಯನಾತನ
ತೆತ್ತಿಸಿದರಿಟ್ಟಿಯಲಿ ಭೀಮನ
ಮುತ್ತಿ ಕೈಮಾಡಿದರು ರವಿಸುತ ಸಾಕಿದತಿಬಳರು ೧೬

ಇಳಿದು ರಥವನು ಗದೆಯ ಕೊಂಡ
ಪ್ಪಳಿಸಿದನು ಮೊರಕೈಯಲರೆದಿ
ಟ್ಟಳಿಸಿದರನೆಡಗಾಲಲೊದೆದನು ಹೊಯ್ದು ಮುಡುಹಿನಲಿ
ಕಲಕಿದನು ಕೌರವ ಮಹಾಬಲ
ಜಲಧಿಯನು ಸರ್ವಾಂಗ ಶೋಣಿತ
ಜಲದಲೆಸೆದನು ನನೆದ ಜಾಜಿನ ಗಿರಿಯವೊಲು ಭೀಮ ೧೭

ಸವರಿದನು ರವಿಸುತನ ಪರಿವಾ
ರವನು ಮಗುಳುಬ್ಬೆದ್ದ ಕೌರವ
ನಿವಹದಲಿ ಕಾದಿದನು ದುರ್ಯೋಧನ ಸಹೋದರರ
ತಿವಿದು ನಾಲ್ವರ ಕೊಂದನುಬ್ಬರಿ
ಸುವರ ಗರ್ವವ ಮುರಿದು ಪ್ರಳಯದ
ಭವನ ರೌದ್ರದವೋಲು ಭುಲ್ಲಯಿಸಿದನು ಕಲಿಭೀಮ ೧೮

ಶಿವ ಶಿವಾ ಕೌರವನ ತಮ್ಮದಿ
ರವಗಡಿಸಿದರು ನಂದೋಪನಂದರು
ಜವಗೆ ಜೀವಣಿಯಾದರೇ ಕಲಿ ಭೀಮನಿದಿರಿನಲಿ
ತಿವಿವರಿನ್ನಾರೆನುತ ಗುರುಸಂ
ಭವ ಕೃಪಾದಿಗಳೊತ್ತಿ ನಡೆತಹ
ರವವ ಕೇಳಿದು ಕುದಿದನವಮಾನದಲಿ ಕಲಿಕರ್ಣ ೧೯

ಪೂತು ದೈವವೆ ಭೀಮಸೇನನ
ಘಾತಿಯಲಿ ಸೊಪ್ಪಾದೆನೈ ಸುಡ
ಲೇತಕೀ ಧನುವೇತಕೀ ದಿವ್ಯಾಸ್ತ್ರ ನಿಕರಗಳು
ಜಾತಿ ನಾನೆಂದೆನ್ನನಗ್ಗಿಸಿ
ಭೂತಳಾಧಿಪ ಸಾಕಿದನು ತಾ
ನೇತರಿಂದುಪಕಾರಿ ಎಂದನು ಸುಯ್ದು ಕಲಿಕರ್ಣ ೨೦

ಎಲೆ ಮರುಳೆ ರಾಧೇಯ ಫಡ ಮನ
ವಿಳುಹದಿರು ತಪ್ಪೇನು ಸೋಲವು
ಗೆಲವು ದೈವಾಧೀನ ನಿನ್ನಾಳ್ತನಕೆ ಕುಂದೇನು
ಹಲಬರಮರಾಸುರರೊಳಗೆ ಹೆ
ಬ್ಬಲವೆ ದುರ್ಬಲವಾಯ್ತು ನೀ ಮನ
ವಳುಕದಿರು ಹಿಡಿ ಧನುವನನುವಾಗೆಂದನಾ ಶಲ್ಯ ೨೧

ಖಾತಿ ಮೊಳೆತುದು ಮತ್ತೆ ಬಲ ಸಂ
ಘಾತಕಭಯವನಿತ್ತು ಬಾಣ
ವ್ರಾತವನು ಹೊದೆಗೆದರಿ ಹೊಸ ಹೊಗರೆದ್ದನಡಿಗಡಿಗೆ
ಭೂತನಾಥನ ಮರೆಯ ಹೊಗಲಿ ಮ
ಹೀತಳೇಶನ ಹಿಡಿವೆನೆನುತ ವಿ
ಧೂತರಿಪುಬಲ ರಥವ ಬಿಟ್ಟನು ಧರ್ಮಜನ ಹೊರೆಗೆ ೨೨

ಕಾಲಯಮನೋ ಕರ್ಣನೋ ಭೂ
ಪಾಲಕನ ಬೆಂಬತ್ತಿದನು ಪಾಂ
ಚಾಲೆಯೋಲೆಯ ಕಾವರಿಲ್ಲಾ ಎನುತ ಬಲನೊದರೆ
ಕೇಳಿದನು ಕಳವಳವನೀ ರಿಪು
ಜಾಲವನು ಜರೆದಡ್ಡಹಾಯ್ದನು
ಗಾಳಿಗುದಿಸಿದ ವೀರನದ್ಭುತ ಸಿಂಹನಾದದಲಿ ೨೩

ಮತ್ತೆ ಕರ್ಣನ ಭೀಮನಾಹವ
ಹೊತ್ತಿದುದು ಹಿಂದಾದ ಹೆಕ್ಕಳ
ಹತ್ತು ಸಾವಿರ ಹಡೆಯದೇ ಫಡ ನೂಕು ನೂಕೆನುತ
ಮತ್ತೆ ಗಜಘಟೆಯಾರು ಸಾವಿರ
ಮುತ್ತಿದವು ಸೌಬಲನ ಥಟ್ಟಿನೊ
ಳೊತ್ತಿಬಿಟ್ಟವು ನಾಲ್ಕು ಸಾವಿರ ಕುದುರೆ ರಥಸಹಿತ ೨೪

ಸಂದಣಿಸಿ ದಳ ನೂಕಿಕೊಂಡೈ
ತಂದುದಿದು ರವಿಸುತನ ತೊಲಗಿಸಿ
ಮುಂದೆ ಮೋಹರದೆಗೆದು ಮೂದಲಿಸಿತು ಮರುತ್ಸುತನ
ಬಂದುದೇ ಕರ್ಣಂಗೆ ಪಡಿಬಲ
ತಂದುದೇ ನಮಗೊಸಗೆಯನು ಲೇ
ಸೆಂದು ಸುಭಟರ ದೇವ ಸುಮ್ಮಾನದಲಿ ಲಾಗಿಸಿದ ೨೫

ದಳದೊಳಗೆ ದಳವುಳಿಸಿದನು
ಕೆಲಬಲನನೆಚ್ಚನು ಕೇಣವಿಲ್ಲದೆ
ನಿಲುಕಿದರಿಗಳು ಜಿಗಿದರಮರೀಜನದ ತೋಳಿನಲಿ
ತಲೆಗಳೊಟ್ಟಿಲ ತೋಳ ಕಡಿಗಳ
ತಳಿದ ಖಂಡದ ಕುಣಿವ ಮುಂಡದ
ಸುಳಿಯ ರಕುತದ ಕಡಲ ಕೌಕುಳವಾಯ್ತು ನಿಮಿಷದಲಿ ೨೬

ಬಿಟ್ಟ ಸೂಠಿಯೊಳೊಗ್ಗು ಮುರಿಯದೆ
ಬಿಟ್ಟ ಕುದುರೆಯ ದಳವ ಕೊಂದನು
ಬೆಟ್ಟವನು ಬಲವೈರಿ ತರಿವವೊಲಿಭದ ಮೋಹರವ
ಘಟ್ಟುಗೆಡಹಿದನುರವಣಿಸಿ ಸಾ
ಲಿಟ್ಟು ರಥವಾಜಿಗಳ ನೆರೆ ಹುಡಿ
ಗುಟ್ಟಿದನು ಕಾಲಾಳ ಘಾಸಿಯನರಿಯೆ ನಾನೆಂದ ೨೭

ಮುರಿಯೆ ಪಡಿಬಲವಾಕೆಯಲಿ ಬಿಡೆ
ಜರೆದು ಬಿಟ್ಟನು ರಥವ ಭೀಮನ
ಬಿರುಬ ಕೊಳ್ಳದೆ ನೂಕಿದನು ಧರ್ಮಜನ ಸಮ್ಮುಖಕೆ
ಇರಿತಕಂಜದಿರಂಜದಿರು ಕೈ
ಮರೆಯದಿರು ಕಲಿಯಾಗೆನುತ ಬೊ
ಬ್ಬಿರಿದು ಧಾಳಾಧೂಳಿಯಲಿ ತಾಗಿದನು ಕಲಿಕರ್ಣ ೨೮

ಎಚ್ಚನರಸನ ಭುಜವ ಕೆಲ ಸಾ
ರ್ದೆಚ್ಚನಾತನ ಸಾರಥಿಯ ರಥ
ದಚ್ಚನಾತನ ಹಯವನವನೀಪತಿಯ ಟೆಕ್ಕೆಯವ
ಎಚ್ಚು ಮೂದಲಿಸಿದನು ಪುನರಪಿ
ಯೆಚ್ಚು ಭಂಗಿಸಿ ನೃಪನ ಮರ್ಮವ
ಚುಚ್ಚಿ ನುಡಿದನು ಘಾಸಿ ಮಾಡಿದನಾ ನೃಪಾಲಕನ ೨೯

ಚೆಲ್ಲಿತವನೀಪತಿಯ ಮೋಹರ
ವೆಲ್ಲ ನೆರೆ ನುಗ್ಗಾಯ್ತು ರಾಯನ
ಘಲ್ಲಿಸಿದನೇಳೆಂಟು ಬಾಣದಲೀತನಡಿಗಡಿಗೆ
ಅಲ್ಲಿಯದುಭುತ ರಣವನಪ್ರತಿ
ಮಲ್ಲ ಮಾರುತಿ ಕೇಳಿದನು ಮಗು
ಳಲ್ಲಿಯೇ ಮೊಳಗಿದನು ನಿಮಿಷಕೆ ಕರ್ಣನಿದಿರಿನಲಿ ೩೦

ಅಳಲಿಸಿದನೇ ಧರ್ಮಪುತ್ರನ
ಬಳಿಚಿ ಬಿಟ್ಟೆನು ನಾಯ ಕೊಲ್ಲದೆ
ಕಳುಹಿದರೆ ಬೆಂಬಿಡನಲಾ ಮರುಕೊಳಿಸಿ ಮರುಕೊಳಿಸಿ
ತಲೆ ಕೊರಳ ಸಂಪ್ರತಿಗೆ ಭೇದವ
ಬಳಸಿದರೆ ಸಾಕೈಸಲೇ ಎನು
ತುಲಿದು ಕಣೆಗಳ ಕೆದರಿ ಕರ್ಣನ ತರುಬಿದನು ಭೀಮ ೩೧

ಭೀಮಸೇನನ ದಳಪತಿಯ ಸಂ
ಗ್ರಾಮ ಮಸೆದುದು ಮತ್ತೆ ಕೈಕೊಳ
ಲೀ ಮಹಾರಥರೆನುತ ಕೈಬೀಸಿದನು ಕುರುರಾಯ
ಸೋಮದತ್ತನ ಸೂನು ಕೃಪನು
ದ್ದಾಮ ಶಕುನಿ ಸುಯೋಧನಾನುಜ
ನಾ ಮಹಾಹವಕೊದಗಿದರು ಕೃತವರ್ಮ ಗುರುಸುತರು ೩೨

ಅಖಿಳ ಬಲಭಾರಣೆಯಲೊಂದೇ
ಮುಖದಲೊಡ್ಡಿತು ಪವನಜನ ಸಂ
ಮುಖದೊಳನಿಬರು ಕೆಣಕಿದರು ಕಲ್ಪಾಂತಭೈರವನ
ಸುಖಿಗಳಕಟಾ ನೀವು ಸಮರೋ
ನ್ಮುಖಿರಹರೆ ಕರ್ಣಂಗೆ ಸಾವಿನ
ಸಖಿಗಳೇ ಲೇಸೆನುತ ಕೈಕೊಂಡೆಚ್ಚನಾ ಭೀಮ ೩೩

ಗುರುಸುತನನೈವತ್ತು ಬಾಣದ
ಲರಸನನುಜರ ಕೃಪನ ಕೃತವ
ರ್ಮರನು ಮೂನೂರಂಬಿನಲಿ ವೃಷಸೇನ ಸೌಬಲರ
ಸರಳು ಮೂವತ್ತರಲಿ ಪುನರಪಿ
ಗುರುಸುತಾದಿ ಮಹಾರಥರನೆರ
ಡೆರಡರಲಿ ಮುರಿಯೆಚ್ಚು ವಿಮುಖರ ಮಾಡಿದನು ಭೀಮ ೩೪

ಮತ್ತೆ ಜೋಡಿಸಿ ಕೌರವೇಂದ್ರನ
ನೊತ್ತಲಿಕ್ಕಿ ಮಹಾರಥರು ರಿಪು
ಮತ್ತದಂತಿಯ ಕೆಣಕಿದರು ಕೆದರಿದರು ಮಾರ್ಗಣವ
ಎತ್ತಲವನೀಪತಿಯ ಮೋಹರ
ವತ್ತ ಮೆಲ್ಲನೆ ರಥವ ಬಿಟ್ಟನು
ಮತ್ತೆ ಮೂದಲಿಸಿದನು ಯಮಸೂನುವನು ಕಲಿಕರ್ಣ ೩೫

ದ್ರೋಣ ಬರಸಿದ ಭಾಷೆಯೆಂದೇ
ಕ್ಷೋಣಿಪತಿ ಬಗೆಯದಿರು ತನ್ನನು
ವಾಣಿಯದ ವಿವರದಲಿ ಸಲಹನು ಕೌರವರ ರಾಯ
ಪ್ರಾಣದಾಸೆಯ ಮರೆದು ತನ್ನೊಳು
ಕೇಣವಿಲ್ಲದೆ ಕಾದೆನುತ ನಿ
ತ್ರಾಣನನು ನಿಬ್ಬರದ ನುಡಿಗಳಲಿರಿದನಾ ಕರ್ಣ ೩೬

ಬಿಡನು ರಾಯನ ಬೆನ್ನನೀತನ
ಕೆಡಹಿ ರಕುತವ ಕುಡಿಯೆನುತ ಬಲ
ನೆಡನೊಳಿಟ್ಟಣಿಸಿದರು ಸಾತ್ಯಕಿ ನಕುಳ ಸಹದೇವ
ತುಡುಕಿದರು ಪಾಂಚಾಲ ಮತ್ಸ್ಯರ
ಗಡಣ ಕೈಕೆಯ ಪಂಚ ಪಾಂಡವ
ರಡಸಿದರು ಹೊದಿಸಿದರು ಕಣೆಯಲಿ ರವಿಸುತನ ರಥವ ೩೭

ಇನಿಬರೊಂದೇ ಸೂಠಿಯಲಿ ಮುಂ
ಮೊನೆಯ ಬೋಳೆಯ ಸುರಿದರಡಿಗಡಿ
ಗಿನಿಬರಂಬನು ಮುರಿದು ತರಿದನು ಸೂತ ವಾಜಿಗಳ
ತನತನಗೆ ಹೊಸ ರಥದೊಳೊಂದೊ
ಗ್ಗಿನಲಿ ಕವಿದೆಚ್ಚರು ಮಹಾಹವ
ವೆನಗೆ ಬಣ್ಣಿಸಲರಿದು ಧರಣೀಪಾಲ ಕೇಳೆಂದ ೩೮

ಭಟರು ಮುತ್ತಿದರಿನಸುತನ ಲಟ
ಕಟಿಸಲೆಚ್ಚರು ಶಿವಶಿವಾ ನಿ
ಚ್ಚಟದ ನಿಬ್ಬರದಂಘವಣೆ ಮಝು ಪೂತು ಲೇಸೆನುತ
ನಿಟಿಲನೇತ್ರನ ನಯನಶಿಖಿಯು
ಬ್ಬಟೆಗೆ ಸಮ ಜೋಡಿಸಿತು ಕರ್ಣನ
ಚಟುಳ ವಿಕ್ರಮಪವನ ಪರಿಗತ ಬಾಣಶಿಖಿ ನಿಕರ ೩೯

ನಕುಳನನು ನೋಯಿಸಿದ ಸಹದೇ
ವಕನ ಘಾಯಂಬಡಿಸಿದನು ಸಾ
ತ್ಯಕಿಯ ಮಸೆಗಾಣಿಸಿದನಾ ಪಾಂಚಾಲ ಕೈಕೆಯರ
ವಿಕಳಗೊಳಿಸಿದನಾ ಮಹಾರಥ
ನಿಕರ ಸೈರಿಸಿ ಮತ್ತೆ ಮೇಳಾ
ಪಕದಲಂಘೈಸಿದರು ತಡೆದರು ಭಾನುನಂದನನ ೪೦

ಹೇಳಲರಿಯೆನು ನಿನ್ನವನ ಕ
ಟ್ಟಾಳುತನವನು ದೇವ ದೈತ್ಯರ
ಕಾಳೆಗದಲಿವನಂತೆ ಬಲ್ಲಿದರಿಲ್ಲ ಬಿಲ್ಲಿನಲಿ
ಆಳ ಮುರಿದನು ಹೂಣೆ ಹೊಗುವು
ಬ್ಬಾಳುಗಳ ಬಲು ದೇಹದಂಬಿನ
ಕೀಲಣದ ಕಾಳಾಸದಿರಿತವ ಮೆರೆದನಾ ಕರ್ಣ ೪೧

ಸರಳ ಹತಿಯಲಿ ನಕುಲ ಸಾತ್ಯಕಿ
ಬಿರುದ ಸಹದೇವಾದಿ ವೀರರು
ಪಿರಿದು ನೊಂದರು ಮತ್ತೆ ತರುಬಿದನವನಿಪಾಲಕನ
ಅರಸ ಹಿಡಿಹಿಡಿ ಧನುವನಿನ್ನರ
ಡರಸನಾನದು ಧರಣಿಯೊಬ್ಬನ
ಶಿರದ ಬರಹವ ತೊಡೆವೆನಿದೆಯೆಂದೆನುತ ತೆಗೆದೆಚ್ಚ ೪೨

ಅಕಟಕಟ ರಾಧೇಯ ಕೇಳೀ
ನಕುಳನೀ ಸಹದೇವನೀ ಸಾ
ತ್ಯಕಿ ನರೇಶ್ವರರೆನಿಸುವೀ ಕುಂತೀಕುಮಾರಕರು
ಅಕುಟಿಲರು ನಯಕೋವಿದರು ಧಾ
ರ್ಮಿಕರ ಕೊಲಬೇಡಿವರನತಿ ಬಾ
ಧಕರು ಭೀಮಾರ್ಜುನರ ಸಂಹರಿಸೆಂದನಾ ಶಲ್ಯ ೪೩

ಮುಳಿದು ಕಬ್ಬಿನ ತೋಟದಲಿ ನರಿ
ಹುಲಿಯವೋಲ್ ಗರ್ಜಿಸಿತು ಗಡ ಹೆ
ಕ್ಕಳದ ಹೇರಾಳದಲಿ ಹೆಣಗಿದೆ ಬಾಲವೃದ್ಧರಲಿ
ಬಲುಹು ನಿನಗುಂಟಾದಡಿತ್ತಲು
ಫಲುಗುಣನ ಕೂಡಾಡು ನಡೆ ಮರು
ವಲಗೆಯನು ಭೀಮನಲಿ ಬೇಡಿನ್ನೆಂದನಾ ಶಲ್ಯ ೪೪

ಎನಲು ಕಿಡಿಕಿಡಿವೋಗಿ ಭೀಮಾ
ರ್ಜುನರ ತೋರಾದರೆ ಎನುತ ನಿಜ
ಧನುವ ಮಿಡಿದಬ್ಬರಿಸಲಿತ್ತಲು ರಾಯದಳದೊಳಗೆ
ಅನಿಲಜನ ಕಾಲಾಟ ಕದಳೀ
ವನದ ಕಾಡಾನೆಯ ಮೃಗಾಳಿಯ
ವನಚರರ ದೆಖ್ಖಾಳದಬ್ಬರ ಕಾಣಲಾಯ್ತೆಂದ ೪೫

ಮಂಡಳಿಸಿ ಬಲಜಲಧಿ ಸುಳಿ ಸುಳಿ
ಗೊಂಡು ಸಿಕ್ಕಿದ ಕೌರವೇಂದ್ರನ
ಕೊಂಡು ಹಿಂಗುವ ಜೋಕೆ ನೂಕದೆ ಡಗೆಯ ಡಾವರದ
ಗಂಡುಗುಂದಿನ ಬೀತ ಬಿರುದಿನ
ತೊಂಡುಗೇಡಿನ ಜಯದ ಜಾರಿನ
ಖಂಡ ಶೌರ್ಯದ ಧೀರರಿದ್ದುದು ನೃಪನ ಬಳಸಿನಲಿ ೪೬

ವಾಯದಲಿ ಕೌರವನ ವಿಜಯ
ಶ್ರೀಯ ಸೆರೆವೋಯಿತ್ತು ಶಿವ ಶಿವ
ಕಾಯಲಾಪವರಿಲ್ಲಲಾ ಗುರುಸೂನು ಮೊದಲಾದ
ನಾಯಕರು ದುಷ್ಕೀರ್ತಿ ನಾರಿಯ
ನಾಯಕರು ಸುಪಲಾಯನದ ನಿ
ರ್ನಾಯಕರು ಮರುಳು ಪೂತುರೆಂದುದು ನಿಖಿಳ ಪರಿವಾರ ೪೭

ಕೇಳಿದನು ಕಳವಳವ ಕಿವಿಗೊ
ಟ್ಟಾಲಿಸಿದನೆಲೆ ಕರ್ಣ ಕರ್ಣ ಭ
ಡಾಳ ರವವೇನದು ಸುಯೋಧನ ಸೈನ್ಯ ಮಧ್ಯದಲಿ
ಖೂಳ ಬಿಡಿಸಾ ಭೀಮಸೇನನ
ತೋಳುವಲೆಯಲಿ ಸಿಕ್ಕಿದನು ಭೂ
ಪಾಲನಕಟಕಟೆನುತ ತೇಜಿಯ ತಿರುಹಿದನು ಶಲ್ಯ ೪೮

## ಹದಿನಾಲ್ಕನೆಯ ಸಂಧಿ

ಸೂ. ಮರಳಿದನು ಪಾಳೆಯಕೆ ಪಾಂಡವ
ರರಸನಿತ್ತಲು ಪಾರ್ಥ ಕೇಳಿದು
ಬರುತ ಗೆಲಿದನು ಸಕಲ ಕೌರವ ರಾಯ ಮೋಹರವ

ಮೂರುವರಲೇ ಕರ್ಣನೋಲೆಯ
ಕಾರತನವನು ಹಿಂದೆ ಕೆಲಬರು
ದೂರಿದರೆ ಫಲವೇನು ಕದನದಲವಗೆ ಸರಿಯಹರೆ
ಹಾರಲೂದಿದನಹಿತ ರಾಯನ
ನೀರತನವನು ತನ್ನ ರಾಯನ
ಸೂರೆಗಡಹಾಯ್ದುರಿಯ ತಡೆದನು ಭೂಪ ಕೇಳೆಂದ ೧

ಅರರೆ ಸಿಂಹದ ತೋಳ ತೆಕ್ಕೆಯ
ಕರಿಯ ಸೆಳೆವಂದದಲಿ ಗರುಡನ
ಕೊರಳ ಬಿಲದಲಿ ಬಿಧ್ದ ಸರ್ಪನ ಸೇದುವಂದದಲಿ
ಧರಣಿಪಾಲನ ತೆಗೆದು ಭೀಮನ
ಬರಿಯನೆಚ್ಚನು ಜೋಡ ಜೋಕೆಯ
ಜರುಹಿದನು ಜವಗೆಡಿಸಿದನು ನಿನ್ನಾತನನಿಲಜನ ೨

ಅರಸ ಕೇಳೈ ಕರ್ಣ ಭೀಮರ
ಧರಧುರದ ದೆಖ್ಖಾಯ್ಲತನ ಗ
ಬ್ಬರಿಸಿತಾಹವ ಗರ್ವಿತರ ಗಾಢಾಯ್ಲ ಚೇತನವ
ಧರಣಿಪಾಲನನೆತ್ತಲವರಾ
ದರಿಸಿದರು ಸಹದೇವ ನಕುಳರು
ಸರಳ ಕಿತ್ತರು ಘಾಯವನು ತೊಳೆತೊಳೆದು ಮಂತ್ರಿಸುತ ೩

ದುರುದುರಿಪ ಬಿಸಿರಕ್ತವೇರಿನೊ
ಳೊರತೆ ಮಸಗಿತು ಬಹಳ ಧೈರ್ಯದ
ಹೊರಿಗೆ ನುರಿದುದು ಮೂಗಿನುಸಿರುಬ್ಬೆದ್ದುದಡಿಗಡಿಗೆ
ಅರಿವು ಮರವೆಗಳೊಂದನೊಂದನು
ಮುರಿದು ನೂಕಿದವವನಿಪತಿ ಕಡು
ವೆರಗ ಕೇಣಿಯ ಕೊಂಡವೋಲಿದ್ದನು ವಿಚೇಷ್ಟೆಯಲಿ ೪

ಜಯಸಮರ ಜಾರಾಯ್ತು ತೆಗೆ ಪಾ
ಳೆಯಕೆ ಮರಳಿಚು ರಥವನಿನ್ನೆ
ಲ್ಲಿಯದು ನೆಲ ನೆರೆ ಕುದಿವ ಕುರುಡನ ಮಕ್ಕಳೇ ಕೊಳಲಿ
ನಿಯತವೆಮ್ಮಿಬ್ಬರಿಗೆ ರಾಯನ
ಲಯವೆ ಲಯವಿನ್ನೆನುತಲಾ ಮಾ
ದ್ರಿಯ ಕುಮಾರರು ದೊರೆ ಸಹಿತ ತಿರುಗಿದರು ಪಾಳೆಯಕೆ ೫

ರಾಯರಥ ಮಡಮುರಿಯೆ ಮುರಿದುದು
ನಾಯಕರು ಪಾಂಚಾಲಕರು ವಾ
ನಾಯುಜರು ಮತ್ಸ್ಯ ಪ್ರಬುದ್ಧಕ ಸೋಮಕಾದಿಗಳು
ವಾಯುಪತಿಯಲಿ ಮೇಘದೊಡ್ಡಿಂ
ಗಾಯಸವು ಕರ್ಣಾಸ್ತ್ರಹತಿಯಲಿ
ಪಾಯವರಿ ರಾಯರಿಗಪೂರ್ವವೆ ಭೂಪ ಕೇಳೆಂದ ೬

ಮುರಿದುದೈ ರಿಪುರಾಯದಳ ಹಗೆ
ಹರಿದುದೈ ಕುರುಪತಿಗೆ ಹರುಷವ
ಕರೆದುದೈ ಕರ್ಣಪ್ರತಾಪಾಟೋಪ ಜೀಮೂತ
ಇರಿತ ಮರೆದುದು ನಿನ್ನವರ ಬೊ
ಬ್ಬಿರಿತ ಜರೆದುದು ವಿಜಯಲಕ್ಷ್ಮಿಯ
ಸೆರಗು ಸೋಂಕಿತು ಕೌರವೇಶ್ವರಗರಸ ಕೇಳೆಂದ ೭

ಅರಿಬಲದ ಲಗ್ಗೆಯನು ನಿಜ ಮೋ
ಹರದ ಮುರಿವಿನ ಸುಗ್ಗಿಯನು ಧರ
ಧುರದ ಪರಬಲದೊಸಗೆಯನು ನಿಜಬಲದ ಹಸುಗೆಯನು
ಮುರಮಥನ ನೋಡಿದನು ಮೂಗಿನ
ಬೆರಳ ತೂಗುವ ಮಕುಟದೊಲಹಿನ
ಬೆರಳ ಕುಡಿಚಮ್ಮಟಿಗೆಯಲಿ ಸೂಚಿಸಿದನರ್ಜುನಗೆ ೮

ಆರ ರಥವಾ ಹೋಹುದದು ಹಿಂ
ದಾರವರು ಬಳಿವಳಿಯಲೊಗ್ಗಿನ
ಲೋರಣೆಸಿ ಮುಂಚುವರು ಟೆಕ್ಕೆಯವಾರ ತೇರಿನದು
ಆರ ದಳವದು ಧುರಪಲಾಯನ
ಚಾರು ದೀಕ್ಷಿತರಾಯ್ತು ಫಲುಗುಣ
ಧಾರುಣೀಪತಿಯಾಣೆ ಹೇಳೆಂದಸುರರಿಪು ನುಡಿದ ೯

ನೋಡಿ ನೋಡಿ ಕಿರೀಟವನು ತೂ
ಗಾಡಿದನು ಕಂಬನಿಗಳಾಲಿಯೊ
ಳೀಡಿರಿದು ಸೋರಿದವು ಕಂದಿತು ಮುಖಾಂಬುಜದ
ಹೂಡಿದಂಬಿನ ತೋಳ ತೆಗಹಿನ
ಬಾಡಿದುತ್ಸಾಹದ ವಿತಾಳದ
ಬೀಡಿಕೆಯ ಬೇಳುವೆಗೆ ಬೆಬ್ಬಳಿವೋದನಾ ಪಾರ್ಥ ೧೦

ಸೇನೆ ಮುರಿಯಲಿ ಕೌರವನ ದು
ಮ್ಮಾನ ಪರಿಯಲಿ ನನಗೆ ಚಿತ್ತ
ಗ್ಲಾನಿಯೆಳ್ಳನಿತಿಲ್ಲ ಕಟ್ಟಲಿ ಗುಡಿಯ ಗಜನಗರ
ಆ ನರೇಂದ್ರನ ಸಿರಿಮೊಗಕೆ ದು
ಮ್ಮಾನವೋ ಮೇಣ್ ಸುರಪುರಕೆ ಸಂ
ಧಾನವೋ ನಾನರಿಯೆನೆಳ್ಕೆದೆಯೂಮುದೇನಗೊಂದ ೧೧

ಧರಣಿಪತಿ ಸಪ್ರಾಣನೇ ಗಜ
ಪುರದ ರಾಜ್ಯಕೆ ನಿಲಿಸುವೆನು ಮೇಣ್
ಸುರರೊಳಗೆ ಸಮ್ಮೇಳವೇ ಕುಂತೀಕುಮಾರಂಗೆ
ಅರೆಘಳಿಗೆ ಧರ್ಮಜನ ಬಿಟ್ಟಾ
ನಿರೆನು ಮುರಹರ ರಥವ ಮರಳಿಚು
ಮರಳಿಚೈ ರಥ ಮುಂಚುವುದೊ ಮನ ಮುಂಚುವುದೊ ಎಂದ ೧೨

ತಿರುಹಿ ವಾಘೆಯ ಹಿಡಿದು ಹರಿ ಹೂಂ
ಕರಿಸಿ ಬಿಟ್ಟನು ರಥವನಾತನ
ಮುರಿವ ಕಂಡುದು ಲಳಿ ಮಸಗಿ ಸಮಸಪ್ತಕರ ಸೇನೆ
ಅರರೆ ನರ ಪೈಸರಿಸಿದನೊ ಪೈ
ಸರಿಸಿದನೊ ಫಡ ಹೋಗಬಿಡದಿರಿ
ಕುರುನೃಪಾಲನ ಪುಣ್ಯವೆನುತಟ್ಟಿದರು ಸೂರಿಯಲಿ ೧೩

ಕವಿದುದದುಭುತ ಬಲ ಮುರಾರಿಯ
ತಿವಿದರಡಗಟ್ಟಿದರು ತೇಜಿಯ
ಜವಗೆಡಿಸಿ ತಲೆಯಾರ ತಡೆದರು ತುಡುಕಿದರು ನೊಗನ
ಅವರನೊಂದೇ ನಿಮಿಷದಲಿ ಪರಿ
ಭವಿಸಿ ನಡೆತರೆ ಮುಂದೆ ಗುರುಸಂ
ಭವನ ರಥವಡಹಾಯ್ದುದವನೀಪಾಲ ಕೇಳೆಂದ ೧೪

ಇತ್ತಲಿತ್ತಲು ಪಾರ್ಥ ಹೋಗದಿ
ರಿತ್ತಲಶ್ವತ್ಥಾಮನಾಣೆ ಮ
ಹೋತ್ತಮರು ಗುರು ಭೀಷ್ಮರಲಿ ಮೆರೆ ನಿನ್ನ ಸಾಹಸವ
ಕಿತ್ತು ಬಿಸುಡುವೆನಸುವನಿದಿರಾ
ಗತ್ತಲೆಲವೋ ನಿನ್ನ ಜೋಕೆಯ
ಜೊತ್ತಿನಾಹವವಲ್ಲೆನುತ ತರುಬಿದನು ಗುರುಸೂನು ೧೫

ಅವುದಿಲ್ಲಿಗುಪಾಯವೀತನ
ಭಾವ ಬೆಟ್ಟಿತು ತೆರಹುಗೊಡನಿಂ
ದೀ ವಿಸಂಧಿಯೊಳರಿಯೆನವನಿಪನಾಗುಹೋಗುಗಳ
ದೇವ ಹದನೇನೆನುತ ವರ ಗಾಂ
ಡೀವಿ ಮುಕ್ತಕಳಂಬಕಾಂಡ
ಪ್ರಾವರಣದಲಿ ಮುಸುಕಿದನು ಗುರುನಂದನನ ರಥವ ೧೬

ಖೂಳ ತೆಗೆ ಹೆರಸಾರು ಠಕ್ಕಿನ
ಠೌಳಿಯಾಟವೆ ಕದನ ಕುಟಿಲದ
ಜೇಳುವೆಯ ಡೊಳ್ಳಾಸ ಮದ್ದಿನ ಮಾಯೆ ನಮ್ಮೊಡನೆ
ಆಳುತನವುಳ್ಳೊಡೆ ಮಹಾಸ್ತ್ರದ
ಜಾಳಿಗೆಯನುಗಿಯೆನುತ ಪಾರ್ಥನ
ಕೋಲುಗಳ ನೆರೆ ತರಿದನು ತೀವಿದನಂಬಿನಲಿ ನಭವ ೧೭

ಸರಳ ಹರಿಮೇಖಳೆಗೆ ನೀವೇ
ಗುರುಗಳಲ್ಲಾ ನಿಮ್ಮ ವಿದ್ಯೆಯ
ಹುರುಳುಗೆಡಿಸುವಿರೆನುತ ಗುರುಸುತನಂಬ ಹರೆಗಡಿದು
ತುರಗದಲಿ ರಥಚಕ್ರದಲಿ ಕೂ
ಬರದೊಳೀಸಿನಲಚ್ಚಿನಲಿ ದು
ರ್ಧರ ಶಿಲೀಮುಖ ಜಾಳವನು ಜೋಡಿಸಿದನಾ ಪಾರ್ಥ ೧೮

ತಳಿವ ನಿನ್ನಂಬಿನ ಮಳೆಗೆ ಮನ
ನಲಿವ ಚಾತಕಿಯುರಿಯೆಲಾ ಕಳ
ವಳಿಸದಿರು ಕೊಳ್ಳಾವಡೆನುತೆಚ್ಚನು ಧನಂಜಯನ
ಹೊಳೆವ ಕಣೆ ಹೊಕ್ಕಿರಿದ ದಾರಿಯೊ
ಳುಳಿದ ಕಣೆ ದಾಂಟಿದವು ಗುರುಸುತ
ತುಳುಕಿದನು ಫಲುಗುಣನ ಮೈಯಲಿ ರಕುತ ರಾಟಳವ ೧೯

ಕಡುಗಿದರೆ ಕಾಲಾಗ್ನಿ ರುದ್ರನ
ಕಡುಹನಾನುವರೀತನೇ ಸೈ
ಗೆಡೆವ ರೋಮದ ಧೂಮ್ರವಕ್ತ್ರದ ಸ್ವೇದಬಿಂದುಗಳ
ಜಡಿವ ರೋಷದ ಭರದಲಡಿಗಡಿ
ಗೊಡಲನೊಲೆದು ಮಹಾಸ್ತ್ರದಲಿ ಕಡಿ
ಕಡಿದು ಬಿಸುಟನು ಗುರುಸುತನ ಸಾರಥಿಯ ರಥಹಯವ ೨೦

ಧನುವನುರು ಬತ್ತಳಿಕೆಗಳನಂ
ಬಿನ ಹೊದೆಯನುರು ಟೆಕ್ಕೆಯವ ಜೋ
ಡಿನ ಬನವ ಕಡಿದಿಕ್ಕಿದನು ಸೆಕ್ಕಿದನು ಸರಳುಗಳ
ಧನು ವರೂಥದ ಹಾನಿ ಗುರು ನಂ
ದನನ ಗರ್ವವಿನಾಶಿಯೇ ಫಡ
ಎನುತ ಪಾರ್ಥನ ತರುಬಿ ನಿಂದನು ಸೆಳೆದಡಾಯುಧದಿ ೨೧

ದಿಟ್ಟನೈ ಗುರುಸೂನು ಶಿವ ಜಗ
ಜಟ್ಟಿಯಲ್ಲಾ ಕೌರವೇಂದ್ರನ
ಥಟ್ಟಿನಲಿ ಭಟರಾರೆನುತ ತಲೆದೂಗಿದನು ಪಾರ್ಥ
ಇಟ್ಟಣಿಸಿದನು ಹಿಂದೆ ಕೃಪನಡ
ಗಟ್ಟಿದನು ಸಮಸಪ್ತಕರು ಸಲೆ
ಮುಟ್ಟಿ ಬಂದರು ಕೌರವೇಶ್ವರ ಸಕಲಬಲ ಸಹಿತ ೨೨

ತಡೆಯಿ ಪಾರ್ಥನನಿವನ ರಾಯನ
ಕೆಡಹಿದನು ಕಲಿ ಕರ್ಣನೀಗಳೆ
ಮುಡುಹುವನು ಪವನಜನನೊಂದರೆಘಳಿಗೆ ಮಾತ್ರದಲಿ
ಬಿಡಿದಿರೀತನನೆನುತ ಕುರುಪತಿ
ಯೊಡನೆ ದುಶ್ಶಾಸನ ಕೃಪಾದಿಗ
ಳಡಸಿದರು ಕೆಂಗೋಲ ಮಳೆಯಲಿ ನಾದಿದರು ನರನ ೨೩

ಅವನಿಪನ ಕಾಣಿಕೆಗೆ ಬಹು ವಿ
ಘ್ನವನು ಬಲಿದುದೆ ದೈವ ಯಂತ್ರವ
ನವಗಡಿಸಿ ನೂಕುವರೆ ನಮ್ಮಳವೇ ಶಿವಾ ಎನುತ
ಕವಲುಗೋಲ್ಗೈದರಲಿ ಕೃಪ ಕೌ
ರವನ ತಮ್ಮಂದಿರ ಸುಸನ್ನಾ
ಹವ ವಿಸಂಚಿಸಿ ಬಗಿದು ಸಮಸಪ್ತಕರನೊಡೆಹಾಯ್ದಿ ೨೪

ಹೋಗಹೋಗಲು ಮತ್ತೆ ಕುರುಬಲ
ಸಾಗರದ ಭಟಲಹರಿ ಲಳಿಯಲಿ
ತಾಗಿದರು ತುಡುಕಿದರು ತಡೆದರು ನಾಲ್ಕು ದೆಸೆಗಳಲಿ
ನೀಗಿದರು ಶಸ್ತ್ರಾಸ್ತ್ರವನು ಕೈ
ಲಾಗಿನಲಿ ಮರಳಿದರು ಪುನರಪಿ
ತಾಗಿದರು ಗುರುಸೂನು ಕೃತವರ್ಮಾದಿ ನಾಯಕರು ೨೫

ಮೇಲೆ ಬಿದ್ದುದು ಮತ್ತೆ ಬಲ ಮೇ
ಘಾಳಿ ನೂಕಿತು ನರನ ರಥ ಸುಳಿ
ಗಾಳಿಯಂತಿರೆ ತಿರುತಿರುಗಿದುದು ವಿಶ್ವತೋಮುಖದಿ
ಹೇಳಲೇನವನೀಶ ಚಪಳ ಛ
ಡಾಳ ಪಾರ್ಥನ ವಿಕ್ರಮಾಗ್ನಿ
ಜ್ವಾಲೆಯಲಿ ನೆರೆ ಸೀದು ಸೀಕರಿವೋಯ್ತು ಕುರುಸೇನೆ ೨೬

ಗುರುಸುತನ ಮುರಿಯೆಚ್ಚು ಶಕುನಿಯ
ಪರಿಭವಿಸಿ ಕೃತವರ್ಮಕನ ವಿ
ಸ್ತರಿಸಲೀಯದೆ ಕೇರಳ ದ್ರವಿಡಾಂಧ್ರ ಕೌಸಲರ
ಹುರುಳುಗೆಡಿಸಿ ಸುಯೋಧನನ ಮೊಗ
ಮುರಿಯಲೆಚ್ಚು ಸುಷೇಣ ಗೌತಮ
ರುರವಣೆಯ ನೆಗ್ಗೊತ್ತಿ ಹಾಯ್ದನು ಮತ್ತೆ ಸೈವರಿದು ೨೭

ಆವರಿಸಿದುದು ಮತ್ತೆ ಹೊಸ ಮೇ
ಳಾವದಲಿ ಕುರುಸೇನೆ ಘನ ಗಾಂ
ಡೀವ ವಿಗಳಿತ ವಿಶಿಖ ವಿಸರದ ವಹಿಗೆ ವಂಚಿಸದೆ
ಲಾವಣಿಗೆಗೊಳಲಲಸಿ ಯಮುನನು
ಜೀವಿಗಳು ಜಡರಾಯ್ತು ಫಲುಗುಣ
ನಾವ ವಹಿಲದಲೆಸುವನೆಂಬುದನರಿಯೆ ನಾನೆಂದ ೨೮

ಜಾಳಿಸಿತು ರಥ ಜಡಿವ ಕೌರವ
ನಾಳ ರಥೋಂಪಿಸಿ ಡೊಂಬು ಮಾಡುವ
ಜಾಳ ರಥಾಡಿಸಿ ಬೈದು ಹೊಕ್ಕನು ಮತ್ತೆ ಗುರುಸೂನು
ಖೂಳ ಫಡಫಡ ಜಾರದಿರು ತೋ
ರಾಳ ತೂರಿದ ಡೊಂಬು ಬೇಡ ವಿ
ಡಾಳ ವಿದ್ಯೆಗಳೆಮ್ಮೊಡನೆಯೆನುತೆಚ್ಚನರ್ಜುನನ ೨೯

ಗುರುಸುತನನೊಟ್ಟೈಸಿ ಫಲುಗುಣ
ತಿರುಗಿ ಹಾಯ್ದನು ಮುಂದೆ ಶರಪಂ
ಜರವ ಹೂಡಿದನೀತನಾತನ ಬಯ್ದು ಬೆಂಬತ್ತಿ
ಸರಳ ಹರಹಿನ ಹೂಟವನು ಕಾ
ಹುರದ ಕಡುಹಿನಲೊದೆದು ಬೊಬ್ಬಿರಿ
ದುರವಣಿಸಿದನು ಪಾರ್ಥನೀತನ ಧನುವ ಖಂಡಿಸಿದ ೩೦

ಧನು ಮುರಿಯೆ ದಿಟ್ಟಾಯ ತನವೀ
ತನಲಿ ಸಾಕಿನ್ನೆನುತ ಗುರು ನಂ
ದನನು ಮುರಿದನು ಹೊಗರು ಮೋರೆಯ ಹೊತ್ತ ದುಗುಡದಲಿ
ಅನಿಲಸೂನುವ ಹಳಚಿದರು ಮು
ಮ್ಮೊನೆಯ ಬೋಳೆಯ ಮೈಯ ಕೊಳು ಕೊಡೆ
ಯೆನಗೆ ತನಗೆಂಬಗ್ಗಳಿಕೆಗಳ ಮೆರೆದರಿಚ್ಛೆಯಲಿ ೩೧

ತರಣಿತನಯನ ತೆಗೆದು ಭೀಮನೊ
ಳುರವಣಿಸಿ ಗುರುಸೂನು ಕಾದು
ತ್ತಿರೆ ಧನಂಜಯ ತೆರಳಿದನು ಪಾಳೆಯದ ಪಥವಿಡಿದು
ಅರರೆ ಫಲುಗುಣನೋಟವನು ಸಂ
ಗರ ಸಮರ್ಥರ ನೋಟವನು ನ
ಮ್ಮರಸ ಕಂಡನಲಾ ಎನುತ ನೂಕಿದನು ಕಲಿಕರ್ಣ ೩೨

ನೆರೆದುದಲ್ಲಿಯದಲ್ಲಿ ಕಹಳೆಯು
ಥರಥುರದ ನಿಸ್ಸಾಳ ಸೂಳಿನ
ಮೊರೆವ ಭೇರಿಯ ರಾಯಗಿಡಿಗನ ಜಡಿವ ಚಂಬಕನ
ತುರಗ ಕರಿ ರಥ ಪಾಯದಳ ಚಾ
ಮರದ ಧವಳಚ್ಛತ್ರ ಪಟ ಪಳ
ಹರದ ಪಡಪಿನಲೌಕಿ ನಡೆದುದು ಮುಂದೆ ಪಾಯದಳ ೩೩

ಕವಿದು ಕೆಂಧೂಳಿಡುವ ಸೇನಾ
ಟವಿಯು ನೋಡುತ ಹಿಂದೆ ಕರ್ಣನ
ಲವಲವಿಕೆಯಾಯತವ ಕಂಡನು ಕದನಕೇಳಿಯಲಿ
ಅವನಿಪನ ದರುಶನವೆನಗೆ ಸಂ
ಭವಿಸಲರಿಯದು ಭಾಪುರೇ ಕೌ
ರವ ಮಹಾರ್ಣವವೆನುತ ಮಕುಟವ ತೂಗಿದನು ಪಾರ್ಥ ೩೪

ಬಳಿಕ ಸೇನಾಸ್ತಂಭ ಶರದಲಿ
ನಿಲಿಸಿದನು ಮಾರ್ಬಲವನಿತ್ತಲು
ಚಳೆಯದಲಿ ಹಿಮ್ಮೆಟ್ಟುತಿರೆ ಕಂಡನು ಧನಂಜಯನ
ಹೊಳಹು ದೂವಾಳಿಯಲಿ ಪಾರ್ಥನ
ಕೆಲಕೆ ಬಿಟ್ಟನು ರಥವ ನಿಲು ನಿ
ಲ್ಲೆಲವೋ ಹೋಗದಿರೆನುತ ಬೆಂಬತ್ತಿದನು ಕಲಿಕರ್ಣ ೩೫

ಕಂಡನರ್ಜುನನಿದಿರೊಳಿವನು
ದ್ದಂಡತನವನು ನೃಪತಿ ಚಿಂತಾ
ಖಂಡಧೈರ್ಯರು ನಾವಲಾ ಹೊತ್ತಲ್ಲ ಕಾದುವರೆ
ಕಂಡಿರೇ ಮುರವೈರಿ ದಳಪತಿ
ಚಂಡಬಳನಹ ನಡುಹಗಲ ಮಾ
ರ್ತಾಂಡನಂತಿರೆ ತೋರುತೈದನೆ ರಥವ ತಿರುಹೆಂದ ೩೬

ಜೀವಿಸಿರಲಾಪಾವ ಲೇಸಿನ
ಠಾವ ಕಾಣೆನು ಜೀಯ ಕರ್ಣನ
ನಾವು ತೊಡಚುವರಲ್ಲ ತೆರಳಿಚು ಪಾಳೆಯಕೆ ರಥವ
ಈ ವಿಗಡನಂತಿರಲೆನುತ ಗಾಂ
ಡೀವಿ ಚಾಪವನಿಳುಹೆ ರಥವನು
ದೇವಕಿಸುತ ನೂಕಿದನು ಪವಮಾನ ವೇಗದಲಿ ೩೭

ಬರುತ ಭೀಮನ ಕಂಡರಾತನ
ಹೊರೆಗೆ ಬಿಟ್ಟರು ರಥವನರ್ಜುನ
ಕರೆದು ಬೆಸಗೊಂಡನು ನೃಪಾಲನ ಕ್ಷೇಮ ಕೌಶಲವ
ಅರಸನಿಂದು ಸಜೀವಿಯೋ ಸುರ
ಪುರ ನಿವಾಸಿಯೊ ಹದನನೇನೆಂ
ದರಿಯೆನೀ ಸಂಗ್ರಾಮ ಧುರವೆನಗೆಂದನಾ ಭೀಮ ೩೮

ಆದಡೆಲೆ ಪವಮಾನಸುತ ನೀ
ನಾದರಿಸು ನಡೆ ನೃಪತಿಯನು ನಾ
ಕಾದುವೆನು ಕೌರವರ ಸಕಲಬಲ ಪ್ರಘಾಟದಲಿ
ಕೈದುಕಾರರು ನಿಖಿಳ ದೆಸೆಗಳ
ಲ್ಲೈದಿ ಬರುತಿದೆ ನೀ ಮರಳು ನಾ
ಭೇದಿಸುವೆನರೆಘಳಿಗೆ ಮಾತ್ರದಲೆಂದನಾ ಪಾರ್ಥ ೩೯

ಎಲೆ ಧನಂಜಯ ನೀನೆ ಬಲುಗೈ
ಯುಳಿದವರು ರಣಖೇಡರೇ ಕುರು
ಬಲವನೊಬ್ಬನೆ ಕೇಣಿಗೊಂಡೆನು ಕರ್ಣ ಮೊದಲಾಗಿ
ಅಳಿಕಿಸುವೆನೀಕ್ಷಣಕೆ ತನ್ನ
ಗ್ಗಳಿಕೆಯನು ನೋಡವನಿಪಾಲನ
ಬಳಲಿಕೆಯ ಸಂತೈಸು ನಡೆ ನೀನೆಂದನಾ ಭೀಮ ೪೦

## ಹದಿನೈದನೆಯ ಸಂಧಿ

ಸೂ. ರಾಯ ರಿಪುಬಲ ವಿಪಿನ ದಹನನ
ಜೇಯನೇಕಾಂಗದಲಿ ಕೌರವ
ರಾಯ ಬಲಬಹಳಾಂಬುಧಿಯ ಕಲಕಿದನು ಕಲಿ ಭೀಮ

ಕೇಳು ಧೃತರಾಷ್ಟ್ರಾವನಿಪ ದು
ವ್ವಾಳಿಯಲಿ ಕೃಷ್ಣಾರ್ಜುನರು ನಿಜ
ಪಾಳೆಯಕೆ ತಿರುಗಿದರು ಬಳಿಕಿತ್ತಲು ವೃಕೋದರನ
ಆಳುತನದ ಸಘಾಡಿಕೆಯ ನಾ
ಹೇಳಲರಿಯೆನು ಸಕಲ ಕುರುಬಲ
ಜಾಲವೊಂದೆಸೆ ಭೀಮನೊಂದೆಸೆ ಕೇಳು ಕೌತುಕವ ೧

ಸೆರಗ ಬೀಸಿತು ನಿನ್ನವರು ಬೊ
ಬ್ಬಿರಿದರರ್ಜುನನಿತ್ತ ಬೆನ್ನಿನ
ತೆರಿಗೆಯುತ್ಸವ ಧನವ ತೆಗೆ ಭಂಡಾರದೊಳಗೆನುತ
ತುರುಗಿತಲ್ಲಿಯದಲ್ಲಿ ಲಗ್ಗೆಯ
ಬಿರುದನಿಯ ನಿಸ್ಸಾಳ ಕಹಳೆಯ
ಜರಹು ಜೋಡಿಸಿ ಜರುಹಿತಡಕಿಲು ಜಗದ ಜೋಡಿಗಳ ೨

ಆರು ಸಾವಿರ ಕುದುರೆ ಕರಿಘಟೆ
ಮೂರು ಸಾವಿರ ಸಾವಿರದ ನಾ
ನೂರು ರಥ ಪರಿಗಣನೆಗೊಂದೇ ಲಕ್ಕ ಪಾಯದಳ
ನೂರು ರಥದಲಿ ಸರಳ ಹೊದೆ ಮೂ
ನೂರು ಪರಿಚಾರರು ಸಹಿತ ಮೈ
ದೋರಿ ನಿಂದನು ಭೀಮನೊಬ್ಬನೆ ತರುಬಿ ಕುರುಬಲವ ೩

ಅರಸ ಕೇಳೈ ನಿಮ್ಮ ದಳದೊಳು
ಗುರುತನುಜ ಕೃತವರ್ಮ ಕೃಪ ನಿ
ನ್ನರಸುಮಗ ರಾಧೇಯ ಶಕುನಿ ಸುಶರ್ಮ ವೃಷಸೇನ
ಮರು ಯವನ ಹಮ್ಮೀರ ಕೇರಳ
ತುರುಕ ಬಾಹ್ಲಿಕ ಮಗಧ ನೇಪಾ
ಳರು ಕುರೂಷಾದಿಗಳು ಸಂಖ್ಯಾತೀತ ಬಲವೆಂದ ೪

ಮಾಳವಾಂಧ್ರ ಪುಳಿಂದ ಬರ್ಬರ
ಗೌಳ ವಂಗ ದ್ರವಿಡ ಸಿಂಹಳ
ಲಾಳ ಗುರ್ಜರ ಚೀನ ಭೋಟ ಕರಾಳ ಖರ್ಪರರು
ಚೋಳ ಸಿಂಧು ಕಳಿಂಗ ಸಗರ ವ
ರಾಳ ಪಾರ್ಶ್ವಾತ್ರಪ್ರಮುಖ ಭೂ
ಪಾಲರಿವರೊಡ್ಡಿನಲಿ ಸಂಖ್ಯಾರಹಿತ ದಳವೆಂದ ೫

ಇದ್ದುದಾ ಸಮಸಪ್ತಕರು ಜಗ
ವದ್ದ ಜಲಧಿಯ ತೆರೆಯವೊಲು ಮುಳಿ
ದೆದ್ದ ಹರಿ ಬಲದಂತೆ ದುಶ್ಶಾಸನನ ಪಾಯದಳ
ದೊದ್ದೆಯಲ್ಲದೆ ದೊರೆಗಳೇ ಜರೆ
ದೆದ್ದು ದೆರಡಕ್ಷೋಣಿಯನಿಬರಿ
ಗಿದ್ದನೊಬ್ಬನೆ ಭೀಮನವನೀಪಾಲ ಕೇಳೆಂದ ೬

ಹೇಳು ಸಂಜಯ ವಿಸ್ತರಿಸಿ ಕಾ
ಲಾಳು ಮೇಲಾಳಿನಲಿ ಭೀಮನ
ಕಾಳೆಗದ ಕೌತುಕವನೀ ಹೆಬ್ಬಲದ ದುರ್ಬಲವ
ಆಳು ಹಿರಿದಿದ್ದೇನು ಫಲ ಹೀ
ಹಾಳಿ ದೈವಕೆ ಬೇರೆ ಪರಿಯು ವಿ
ತಾಳವಿಲ್ಲ ವಿಪಕ್ಷಪಾತದೊಳೆಂದನಂಧನೃಪ ೭

ಅರಸ ಕೇಳಾದಡೆ ಮಹಾ ಸಾ
ಗರಕೆ ಮುನಿ ಮಂಡಿಸಿದವೊಲು ಸಂ
ಹರಣ ದಿನದಲಿ ಜಗಕೆ ಮಲೆವ ಮಹೇಶನಂದದಲಿ
ಅರಿ ಹಿರಣ್ಯಾಕ್ಷನ ಬಲಕೆ ಕೋ
ಡೆರಗಿ ನಿಂದ ವರಾಹನಂತಿರೆ
ಪರಬಲಾಂತಕ ಭೀಮ ನಿಂದನು ತರುಬಿ ಪರಬಲವ ೮

ಆತ ನಿಂದಂಘವಣೆಯನು ನಿ
ನ್ನಾತ ಕಂಡನು ಮೆಚ್ಚಿದನು ಮಝು
ಪೂತು ಭೀಮ ಸುಧೀರನೈ ಸದ್ಗುಣಕೆ ಮತ್ಸರವೆ
ಈತನೊಬ್ಬನೆ ಕೌರವರಸಂ
ಖ್ಯಾತವೆಂಬುದು ಲೋಕ ಸಾಕಿ
ನ್ನೀತ ಮರಳಲಿ ಎಂದು ಭಟ್ಟರನಟ್ಟಿದನು ಭೂಪ ೯

ಬಂದು ಭಟ್ಟರು ಭೀಮಸೇನಂ
ಗೆಂದರೆಲೆ ಕೌಂತೇಯ ನೀ ನಿ
ನ್ನಂದಿನಗ್ಗದ ದುಂದುಮಾರನ ಕಾರ್ತವೀರ್ಯಕನ
ಸಂದ ಭರತ ಭಗೀರಥಾದಿಗ
ಳಿಂದ ಮಿಗಿಲು ಮಹಾಪ್ರಚಂಡರೊ
ಳಿಂದು ನಿನಗೆಣೆಯಾರು ದನುಜಾಮರರ ಥಟ್ಟಿನಲಿ ೧೦

ರಾಯ ಜಗಜಟ್ಟಿಗಳು ರಿಪು ಕುರು
ರಾಯ ಥಟ್ಟಿನೊಳಿನಿಬರಿಗೆ ನಿ
ನ್ನಾಯತದಿ ನಿಲುವಂಘವಣೆಗಾವೇನ ಹೇಳುವೆವು
ರಾಯನನು ಸಂತೈಸುವುದು ಮಾ
ದ್ರೇಯ ಫಲುಗುಣ ಸಹಿತ ನಿಲು ನಿ
ನ್ನಾಯತದಿ ನಮ್ಮರಸನೊಲ್ಲನು ನಿನ್ನೊಡನೆ ರಣವ ೧೧

ಆಗಲದು ತಪ್ಪೇನು ಧರ್ಮಜ
ನಾಗುಹೋಗರ್ಜುನನ ಮೇಲೆ ವಿ
ಭಾಗದಲಿ ಬಂದುದು ಸುಯೋಧನ ಸೈನ್ಯಧುರಪಮಗೆ
ಈಗಳೊಬ್ಬನೆ ವಿಷಮ ವಿಗ್ರಹ
ಯಾಗದಲಿ ರಿಪುಸುಭಟ ಪಶು ಹಿಂ
ಸಾಗಮವ ತೋರುವೆನು ಸೈರಿಸಿಯೆಂದನಾ ಭೀಮ ೧೨

ವಿವಿಧ ಮಣಿ ಕನಕಾದಿ ವಸ್ತುವ
ನವರಿಗಿತ್ತನು ತನ್ನ ಪಾಠಕ
ನಿವಹವನು ಕಳುಹಿದನು ಕೌರವ ಬಲದ ಸುಭಟರಿಗೆ
ಅವರು ಬಂದರು ಕರ್ಣ ಗುರು ಸಂ
ಭವ ಸುಶರ್ಮಕ ಶಕುನಿ ಕೃಪ ಕೌ
ರವ ನೃಪಾದಿಗಳಿದಿರಲೊದರಿದರನಿಲಜನ ಮತವ ೧೩

ಮುರಿದು ಲೋಕವ ನುಂಗಿದರೆ ಕ
ಟ್ಟಿರುವೆಯೇ ಕಾಲಂಗೆ ಕತ್ತಲೆ
ಯಿರಿತದಲಿ ಕೈದೀವಿಗೆಯ ಹಂಗೇಕೆ ದಿನಮಣಿಗೆ
ಮರೆದೆಲಾ ರಾಧೇಯ ಕೃಪ ನಿಲು
ಹೊರಗೆ ಗುರುಸುತ ನಿನ್ನ ಗರ್ವವ
ಹೆರಿಸುವವು ಭೀಮಾಸ್ತ್ರವೆಂದುದು ವಂದಿ ಸಂದೋಹ ೧೪

ಆಸೆಯೇ ಜೀವದಲಿ ಕುರುಧರ
ಣೀಶ ಬಿಡು ರಾಜ್ಯವನು ಮಾತಿನ
ವಾಸಿಯೇ ಕೊಡು ಕದನವನು ಸಾಕುಳಿದ ಮಾತೇನು
ಈ ಸುಶರ್ಮಕ ಶಕುನಿ ಸಲೆ ದು
ಶ್ಶಾಸನಾದಿ ಪಿಪೀಲಕರು ತಮ
ಗೇಸು ಬಲುಹುಂಟೈಸನೊದಗಲಿ ಎಂದರವರಂದು ೧೫

ಇವರು ಕಳುಹಿದರುಚಿತದಲಿ ನಿ
ನ್ನವರು ಮಸಗಿದ ಕಡಲವೊಲು ಬಲು
ದವಕಿಗರು ಕೋಲಳವಿಗೊಂಡರು ಕೋಡ ಕೈಗಳಲಿ
ತವತವಗೆ ದೆಖ್ಖಾಯ ಮಿಂಗೆಯು
ತ್ಸವದಲುರುಬಿದರವನಿಪಾಲನ
ಗವಿಯ ಘಾಡಿಕೆ ಜೋಡಿಸಿತು ಗೀರ್ವಾಣರಾಲಿಗಳ ೧೬

ಇನ್ನರಿಯಬಹುದೆನುತ ರಾಯನ
ಮನ್ನಣೆಯ ಮದಸೊಕ್ಕಿದಾನೆಗ
ಳೆನ್ನ ಬಿಡು ಬಿಡು ತನ್ನ ಬಿಡು ಬಿಡು ಎನುತ ಖಾತಿಯಲಿ
ತಿನ್ನಡಗನೊಡೆಹೊಯ್ದು ಭೀಮನ
ಬೆನ್ನಲುಗಿ ತನಿಗರುಳನಕಟಾ
ಕಂನ್ನಿಗಳಿರೆನುತೊದಗಿದರು ದುಶ್ಶಾಸನಾದಿಗಳು ೧೭

ಈತನೇ ನಮಗರ್ಜುನನು ಕೊ
ಳ್ಳೀತನನು ಹೊಯ್ ಹೊಯ್ಯೆನುತ ಗತ
ಭೀತರಿಟ್ಟಣಿಸಿದರು ಸಮಸಪ್ತಕರು ವಂಗಡಿಸಿ
ಪೂತು ಮಝರೇ ಭೀಮ ಎನುತವೆ
ಸೂತಸುತನೌಕಿದನು ಕೃಪ ಗುರು
ಜಾತ ಕೃತವರ್ಮಾದಿ ರಥಿಕರು ಹೊಕ್ಕರುರವಣಿಸಿ ೧೮

ಒಂದು ದೆಸೆಯಲಿ ರಾಯನಿಪ್ಪ
ತ್ತೊಂದು ಸಾವಿರ ರಥ ಸಹಿತುಘೇ
ಯೆಂದು ಬಿಟ್ಟನು ಭೀಮಸೇನನ ರಥದ ಸಮ್ಮುಖಕೆ
ಅಂದು ಗೋಗ್ರಹಣದಲಿ ಫಲುಗುಣ
ನಿಂದನನಿಬರಿಗರಸ ಚಿತ್ತೈ
ಸಿಂದು ಸೈರಿಸಿ ನಿಂದನನಿಬರಿಗೊಬ್ಬನೇ ಭೀಮು ೧೯

ಕೀರಿ ಕಾಲಿಡೆ ದಿಕ್ಕರಿಗಳೆದೆ
ಡೋರುವೋಗಲು ಸರ್ವ ಲಗ್ಗೆಯ
ಲೇರಿತೀ ದಳ ದಳವುಳಿಸಿ ದಳಪತಿಯ ನೇಮದಲಿ
ಏರು ಸೂರೆಗೆ ಹಾರಿ ವಿಾಸಲಿ
ನೇರು ನಮ್ಮದು ತಮ್ಮದೆನುತು
ಬ್ಬೇರಿ ಭೀಮನ ಮುತ್ತಿದರು ಮೆತ್ತಿದರು ಸರಳಿನಲಿ ೨೦

ಅರಸ ಕೇಳೈ ನಿಮ್ಮ ಭೀಮನ
ಪರಿಯನೀ ಸರ್ವಾಸ್ತ್ರಘಾತ
ಸ್ಫುರಣ ಮದಕರಿ ಮಕ್ಷಿಕಾ ಸಂಘಾತದಂದದಲಿ
ಕೆರಳಿ ಕವಿದನು ಕೆದರಿದುರಿ ಕ
ರ್ಪುರಕೆ ಕವಿವಂದದಲಿ ಕರ್ಣನ
ಗುರುಸುತನ ಕುರುಪತಿಯ ದುಶ್ಶಾಸನನ ರಥಕಾಗಿ ೨೧

ಎಚ್ಚನವರವರೆಚ್ಚ ಬಾಣವ
ಕೊಚ್ಚಿದನು ಕೋಲಳವಿಗೊಡ್ಡಿದ
ನಿಚ್ಚಟರ ನೀಗಿದನು ತಾಗಿದನರಸು ಮೋಹರವ
ಹೆಚ್ಚಿ ವೀರಾವೇಶದಲಿ ಬಹ
ಬಿಚ್ಚು ರಥಿಕರನಾಯ್ದು ಧೈರ್ಯದ
ಕೆಚ್ಚ ಮುರಿದನು ಕದಡಿದನು ರಿಪುಸುಭಟ ಸಾಗರವ ೨೨

ತುಡುಕುವಾನೆಯನೀಸಿನಲಿ ಖುರ
ವಿಡುವ ಕುದುರೆಯನೊತ್ತಿ ಹಾಯ್ವುವ
ಬಿಡು ರಥವ ತಲೆವರಿಗೆಯಲಿ ತವಕಿಸುವ ಕಾಲಾಳ
ಕಡಿದನಂಬಿನೊಳಾ ಗಜವನಾ
ಕಡು ಹಯವನಾ ರಥವನಾ ವಂ
ಗಡದ ಕಾಲಾಳುಗಳನೊಂದು ವಿಘಳಿಗೆ ಮಾತ್ರದಲಿ ೨೩

ಮುಂದೆ ಸಬಳಿಗರೆಡ ಬಲದಲೋ
ರಂದದಲಿ ಬಿಲ್ಲಾಳು ದೊರೆಗಳ
ಮುಂದೆ ಹರಿಗೆಗಳೆರಡು ಬಾಹೆಯಲಾನೆ ಕುದುರೆಗಳು
ಸಂದಣಿಸಿದುದು ಮತ್ತೆ ಬೀಳುವ
ಮಂದಿಗದು ನೆರವಾಯ್ತು ನೆಗ್ಗಿದ
ನೊಂದು ಹಲಗೆಯಲೇರಿದವರನು ಭೂಪ ಕೇಳೆಂದ ೨೪

ಮುರಿದು ನೆಗ್ಗಿದ ರಥವ ಬರಿಕೈ
ಹರಿದು ಬೀಳುವ ಗಜವ ಘಾಯದ
ನೆರುವಣಿಗೆಯಲಿ ನೆಗ್ಗಿ ಮುಗ್ಗಿದ ಕುದುರೆ ಕಾಲಾಳ
ಅರಿಯೆನಭಿವರ್ಣಿಸಲು ಬಲ ಮು
ಕ್ಕುರಿಕಿಕೊಂಡುದು ಮೇಲೆ ಮೇಲ
ಳಿರಿವ ಕಹಳೆಯ ಬಹಳ ಬಹುವಿಧ ವಾದ್ಯರಭಸದಲಿ ೨೫

ಸಿಕ್ಕಿದನು ಹಗೆ ಸ್ವಾಮಿದ್ರೋಹಿಯ
ಸೆಕ್ಕಿ ಸುರಗಿಯೊಳಿವನ ಖಂಡವ
ನಿಕ್ಕಳಿಸೊಳೊಡೆಯುವಟಿ ಕೊಯ್ ಸುಂಟಿಗೆಯ ತಿನ್ನೆನುತ
ಹೊಕ್ಕು ಹೊಯ್ದರು ರಥವನಳವಿಗೆ
ಮಿಕ್ಕು ಕೈ ಮಾಡಿದರು ಕಾಲ್ದುಳಿ
ಯೊಕ್ಕಲಲಿ ಬೇಸರಿಸಿದರು ಪವಮಾನ ನಂದನನ ೨೬

ನೆಲಕೆ ದೊಪ್ಪನೆ ಹಾಯ್ದು ಕೊಂಡನು
ಹಲಗೆ ಗದೆಯನು ಮೇಲುವಾಯ್ದ
ಪ್ಪಳಿಸಿದರೆ ಕುಪ್ಪಳಿಸಿತರಿಬಲ ಘಾಯ ಘಾಯದಲಿ
ತಲೆಗಳೊಟ್ಟಿಲ ಕರಿಗಳಟ್ಟೆಯ
ನೆಳೆವ ರಕುತದ ಹೊನಲ ಮುಂಡದ
ಲಳಿಯ ನಾಟ್ಯದಲೆಸೆದುದೈ ಬೀಭತ್ಸ ರೌದ್ರದಲಿ ೨೭

ಕರಿ ಕೆಡೆಯೆ ಕಾಲಿನಲಿ ಜೋದರು
ತೆರಳದೆಚ್ಚಾಡಿದರು ರಥಚಯ
ಮುರಿಯೆ ಕಾಲಿನಲೊದಗಿದರು ಸಮರಥ ಮಹಾರಥರು
ಹರಿಯೆ ಹಯ ರೂಢಿಯಲಿ ನಿಂದ
ಬ್ಬರಿಸಿದರು ರಾವುತರು ಭೀಮನ
ಬಿರುಗದೆಯ ಘಲ್ಲಣೆಗೆ ಚೆಲ್ಲಿತು ನಿಮ್ಮ ಪರಿವಾರ ೨೮

ರಾವುತರು ಕಡಿವಡೆಯೆ ಕಾಂಭೋ
ಜಾವಳಿಗಳೋಡಿದವು ಜೋದರ
ಜೀವ ಜಾಳಿಸೆ ಬೀದಿವರಿದವು ಗಜಘಟಾಳಿಗಳು
ತಾವು ನಿಬ್ಬರ ಗತಿಯ ರಥ ತುರ
ಗಾವಳಿಗಳೆಳೆದವು ರಥಂಗಳ
ನಾ ವಿಗಡ ವಿಗ್ರಹ ಮಹಾದ್ಭುತವರಸ ಕೇಳೆಂದ ೨೯

ಕೆಡೆದ ಝಲ್ಲರಿಗಳ ರಥಾಗ್ರದೊ
ಳುಡಿದ ಸಿಂಧದ ಮಕುಟ ಪದಕದ
ಖಡೆಯ ಸರಪಣಿ ತೋಳಬಂದಿಯ ವಜ್ರಮಾಣಿಕದ
ಕಡುಕು ಹೀರಾವಳಿಯ ಹಾರದ
ಕಡಿಯ ರಚನೆಯ ರಾಶಿ ಯಮುನಂ
ಗಡಿಯ ಪಸರವಿದೆನಲು ಮೆರೆದುದು ಕೂಡೆ ರಣಭೂಮಿ ೩೦

ಕಡಿದ ಹಕ್ಕರಿಕೆಗಳ ಸೀಳಿದ
ದಡಿಯ ನೆಗ್ಗಿದ ಗುಳದ ರೆಂಚೆಯ
ಸಿಡಿದ ಸೀಸಕ ಬಾಹುರಕ್ಷೆಯ ಜೋಡು ಮೊಚ್ಚೆಯದ
ಉಡಿದ ಮಿಣಿ ಮೊಗರಂಬ ಗದ್ದುಗೆ
ಬಡಿಗೆಗಳ ಸೂತ್ರಿಕೆಯ ಕಬ್ಬಿಯ
ಕಡಿಯಣದ ಕುಸುರಿಗಳಲೆಸೆದುದು ಕೂಡೆ ರಣಭೂಮಿ ೩೧

ಮುರಿದ ದೂಹತ್ತಿಗಳ ನೆಗ್ಗಿದ
ಸುರಗಿಗಳ ಚಿನಕಡಿಯ ತೋಮರ
ಪರಶು ಸೆಲ್ಲೆಹ ಚಕ್ರ ಸಬಳ ಮುಸುಂಡಿ ಲೌಡೆಗಳ
ಹರಿದ ಹೊದೆಯುಂಬುಡಿದ ಬಿಲ್ಲಿನ
ಬಿರಿದ ಬತ್ತಳಿಕೆಗಳ ಸೀಳಿದ
ಹರಿಗೆಗಳ ಹೇರಾಳದಲಿ ರಂಜಿಸಿತು ರಣಭೂಮಿ ೩೨

ಉರುಳ್ವ ತಲೆಗಳ ಕುಣಿವ ಮುಂಡದ
ಹೊರಳ್ವ ಕರಿಗಳ ಗದೆಯು ಹೊಯ್ಲಲಿ
ನರಳ್ವ ವೀರರ ಮಿದುಳ ಜೋರಿನ ಜೊಂಡೆ ಜೋಡಣೆಯು
ಅರಳ್ವ ಕಡಿನಾಳಿಕೆಯು ರಕುತಕೆ
ಮರಲ್ವ ಭೂತವ್ರಜದ ಝೋಂಪಿಸಿ
ಕೆರಳ್ವ ಭಟರಟ್ಟೆಗಳಲೆಸೆದುದು ಕೂಡೆ ರಣಭೂಮಿ　　೩೩

ಅಲ್ಲಿ ಕರ್ಣನ ರಥದ ತೇಜಿಯು
ಘಲ್ಲಿಸಿದನಾ ಕ್ಷಣದೊಳಿಚ್ಚೆಯ
ಕೆಲ್ಲೆಯಲಿ ಕಾದಿದನು ಚಿಗಿದನು ಕೌರವನ ಹೊರೆಗೆ
ಅಲ್ಲಿ ಹೊಯ್ದು ಸುಶರ್ಮನವದಿರ
ಚೆಲ್ಲಬಡಿದನು ದಳದ ನಾಯಕ
ರೆಲ್ಲರಿಗೆ ಸವಿದೋರಿದನು ಬಲುಗದೆಯ ಹೊಯ್ಲುಗಳ　　೩೪

ಇತ್ತಲಿತ್ತಲು ಭೀಮನೆಂದುರೆ
ಮುತ್ತಿ ಮುಸುಕಿತು ಸೇನೆ ಚಿಮ್ಮಿದ
ನತ್ತಲಾಚೆಯಲಲ್ಲಿ ದಳ ಘಾಡಿಸಿತು ವೇಢೆಯಲಿ
ಇತ್ತ ಹಾಯ್ದನು ಕೌರವನ ರಥದ
ದತ್ತ ಚಿಗಿದನು ಗುರುಸುತಾದಿಗ
ಳತ್ತಲಲ್ಲಿಗೆ ಮೊಳಗಿದನು ಮೋದಿದನು ಪಟುಭಟರ　　೩೫

ಕರಿಘಟೆಯು ಮರೆವೊಕ್ಕು ನಿಂದರು
ನರರು ತೇಜಿಗಳೋಡಿ ತೇರಿನ
ಮರೆಯ ಸಾರ್ದವು ತೇರು ಹಾಯ್ದವು ದೊರೆಯ ಓಸ್ಲೆಲೆಗೆ
ಕರಿಮುರಿದು ಕಾಲಾಳು ಕಾಲಾ
ಳ್ತೆರಳಿ ದೊರೆಗಳ ಹಿಂದೆ ದೊರೆ ಪೈ
ಸರಿಸಿತಲ್ಲಿಯದಲ್ಲಿ ಭೀಮನ ಹೊಯ್ಲ ಹೋರಟೆಗೆ　　೩೬

ಪೂತು ಮಝ ರಿಪುರಾಯ ಮನ್ಮಥ
ಭೂತನಾಥ ವಿರೋಧಿಬಲ ಪುರು
ಹೂತ ರಾಯಘರಟ್ಟ ವೈರಿನಿಕಾಯ ಗಿರಿವಜ್ರ
ಏತಕೀ ಸೂಳೆಯರು ಕ್ಷತ್ರಿಯ
ಜಾತಿಯಲಿ ಜನಿಸಿದರು ಶಿವಶಿವ
ಪೂತು ಗಂಡಿಗನೆಂದು ಗರ್ಜಿಸಿತಖಿಳ ವಂದಿಜನ　　೩೭

## ಹದಿನಾರನೆಯ ಸಂಧಿ

ಸೂ.　ರಾಯರಿಪುಭಟಗಿರಿ ನಿವಹ ವ
ಜ್ರಾಯುಧನು ಕಲಿ ಪಾರ್ಥನಂಭೋ
ಜಾಯತಾಂಬಕ ಸಹಿತ ಕಂಡನು ಧರ್ಮನಂದನನ

ಕೇಳು ಧೃತರಾಷ್ಟ್ರಾವನಿಪ ಬಲು
ಗಾಳೆಗವ ಭೀಮಂಗೆ ಸೇರಿಸಿ
ಪಾಳೆಯಂಕೆ ತಿರುಗಿದರು ಕೃಷ್ಣಾರ್ಜುನರು ದುಗುಡದಲಿ
ಹೇಳು ಮುರಹರ ಬುದ್ಧಿ ಕದಡಿ ಥ
ಡಾಳಿಸಿತು ಪರಿಭೇದವೊಸಗೆಯ
ಕೇಳಲರಿಯೆನು ರಾಜವಾರ್ತೆಯನೆಂದನಾ ಪಾರ್ಥ　　೧

ನೋಡುವೆವು ನಡೆ ಧರ್ಮಪುತ್ರನ
ಕೇಡು ಕಲಿಯುಗ ಬೀಜವೀ ಪರಿ
ಕೂಡದೀ ಹೊತ್ತಿನಲಿ ಧರ್ಮಸ್ಥಿತಿಗೆ ಲಯವಿಲ್ಲ
ಖೇಡನಾಗದಿರಿದಕೆ ಚಿಂತಿಸ
ಬೇಡೆನುತ ಫಲುಗುಣನ ಚಿತ್ತದ
ಪಾಡರಿದು ನುಡಿವುತ್ತ ತಂದನು ಪಾಳೆಯಕೆ ರಥವ　　೨

ಬರಲು ಪಾರ್ಥನ ಕಂಡು ಪುರಜನ
ಹರೆದುದಲ್ಲಿಯದಲ್ಲಿ ದುಗುಡದ
ಭರದ ಗುಜುಗುಜು ಗೋಷ್ಠಿಗಳ ಜನಜನದ ಮುಸುಕುಗಳ
ಮುರಿದ ನೀಹಾರದ ವಿಹಾರದ
ಸರಸಿರುಹವನದಂತೆ ಪಾಳೆಯ
ದಿರವು ಲೇಸಲ್ಲೆನುತ ಬಂದನು ರಾಜಮಂದಿರಕೆ　　೩

ಕಳಚಿದನು ಸೀಸಕವ ಬೆಂಬ
ತ್ತಳಿಕೆಯನು ವಜ್ರಾಂಗಿ ಮೊಚ್ಚೆಯ
ಬಿಲು ಸರಳನಿಳುಹಿದನು ರಥದಲಿ ದೈತ್ಯರಿಪು ಸಹಿತ
ಇಳಿದು ರಥವನು ರಣದ ಭಾರಿಯ
ಬಳಲಿಕೆಯ ಕೈಕೊಳ್ಳದರಸನ
ನಿಳಯವನು ಹೊಕ್ಕನು ಧನಂಜಯ ಕಂಡನವನಿಪನ　　೪

ಝೊಂಪಿಸುವ ಸಿರಿಮೊಗದ ನೋಟದ
ಸೊಂಪಡಗಿದಾಲಿಗಳ ಧೈರ್ಯದ
ಗುಂಪಳಿದ ನಿಜ ರಾಜತೇಜದ ವಿಪುಳ ವೇದನೆಯ
ಬಿಂಪಗಿವ ಬೇಸರಿನ ತುರುಗಿದ
ತಂಪಿನಗ್ಗಳಿಕೆಯ ವಿಘಾತಿಯ
ಝೊಂಪಿನಲಿ ಹುದುಗಿದ ಮಹೀಶನ ಕಂಡನಾ ಪಾರ್ಥ　　೫

ಬಿಗಿದು ಕಟ್ಟಿದ ಘಾಯ ಮದ್ದಿನ
ಜಿಗಿಯ ತೈಲದ ತಳಿತ ಲೇಪದ
ಲುಗಿದ ಬಾಣವ್ಯಥೆಯ ಕರ್ಣಧ್ಯಾನಚೇತನದ
ಸೊಗಸು ಮಿಗೆ ದ್ರೌಪದಿಯ ತುದಿವೆರ
ಳುಗುರುವೆರಸಿದ ಸಿರಿಮುಡಿಯ ಬಲು
ದುಗುಡ ಭರದಲಿ ಕುಸಿದ ಭೂಪನ ಕಂಡನಾ ಪಾರ್ಥ　　೬

ನಕುಳ ಧೃಷ್ಟದ್ಯುಮ್ನ ಸಹದೇ
ವಕ ಯುಧಾಮನ್ಯುಕನು ಸುತಸೋ
ಮಕ ಶತಾನೀಕ ಪ್ರಬುದ್ಧಕ ಚೇಕಿತಾನಕರು
ಸಕಲ ಕೈಕೆಯ ಮತ್ಸ್ಯಸುತ ಸಾ
ತ್ಯಕಿ ಯುಯುತ್ಸು ಶಿಖಂಡಿ ಪ್ರತಿವಿಂ
ಧ್ಯಕರು ಪಾರ್ಥನನುಪಚರಿಸಿ ಕುಳ್ಳಿರ್ದರಲ್ಲಲ್ಲಿ　　೭

ಕರಗಿತಂತಃಕರಣವಾಲಿಗ
ಳೊರತೆಯೆನೆ ಕಣ್ಣಾಲಿಯಲಿ ಕಾ
ತರಿಸಿದವು ಜಲಬಿಂದುಗಳು ಪುರುಹೂತ ನಂದನನ
ಅರಸನಿರವಿದೆಯೆನುತ ನೊಸಲನು
ಚರಣದಲಿ ಚಾಚಿದನು ಚೇಷ್ಟಾ
ಪರಿಗತಿಯನಾರ್ಕೈವುತಭಿಮುಖನಾಗಿ ಕುಳ್ಳಿರ್ದ ೮

ನೊಂದೆಲಾ ನರನಾಥ ವಿಧಿಯೇ
ನೆಂದು ಮುನಿದುದೊ ನಿನಗೆನುತ್ತ ಮು
ಕುಂದನತಿ ಕಾರುಣ್ಯ ದೃಷ್ಟಿಯಲವನಿಪನ ನೋಡಿ
ಮಂದಮಂದದಿ ಪಾಣಿ ಪಲ್ಲವ
ದಿಂದ ತಡವಿದನೇರನಾಗಳೆ
ಕಂದೆರೆದು ನೋಡಿದನು ಭೂಪತಿ ಕೃಷ್ಣ ಫಲುಗುಣರ ೯

ಹರಿ ಕರಾಬ್ಜಸ್ಪರ್ಶ ಮಾತ್ರ
ಸ್ಫುರಣದಿಂದಾಪ್ಯಾಯಿತಾಂತಃ
ಕರಣನಾದನು ನನೆದನುದ್ಧತ ಬಾಷ್ಪವಾರಿಯಲಿ
ಮುರಿಯದೇರಿನ ಮೈವಳಿಗೆ ಲಘು
ತರದ ಲುಳಿಯಲಿ ಮೈಯ ಬಲಿದಾ
ದರಿಸಿ ಕುಳ್ಳಿರ್ದನು ಮಹೀಪತಿ ಮಾನಿನಿಯ ಮಲಗಿ ೧೦

ಹದುಳವೇ ಪಾರ್ಥಂಗೆ ಹೇರಾ
ಳದಲಿ ಕಾದಿದನಾ ಸುಶರ್ಮನ
ಕದನ ಬೆಟ್ಟಿತು ಶಪಥವಲ್ಲಾ ತಮ್ಮೊಳನಿಬರಿಗೆ
ಕೆದರಿದನು ಕೊಲ್ಲಣಿಗೆಯಲಿ ಬಂ
ದೊದಗಿ ನೀವವದಿರಲಿ ಸುಯ್ದಾ
ನದಲಿ ಬಂದುದೇ ಲಕ್ಷವೆಂದನು ನೃಪತಿ ಕೃಷ್ಣಂಗೆ ೧೧

ಆಯಿತಿದು ನೀ ಬಂದ ಪರಿ ರಿಪು
ರಾಯ ಥಟ್ಟಿನೊಳೊಕ್ಕಲಿಕ್ಕಿದ
ದಾಯವೊಳ್ಳಿತು ದಿಟ್ಟನಾವನು ನಿನ್ನ ಹೋಲಿಸಲು
ಕಾಯಿದರಿ ಕಳುಹಿದನೊ ಮೇಣಡ
ಹಾಯಿದನೊ ಕರ್ಣಂಗೆ ಮಾಡಿದು
ಪಾಯವಾವುದು ಪಾರ್ಥ ಹೇಳೆಂದವನಿಪತಿ ನುಡಿದ ೧೨

ಬೇರೆ ಸಮಸಪ್ತಕರೊಳಿಕ್ಕಟಿ
ತೋರಿಸಿದೆ ನೀ ತೊಂಡಿನೋಲೆಯ
ಕಾರತನವನು ಸೂತಸುತನಿಲ್ಲವರ ಥಟ್ಟಿನಲಿ
ಹಾರಲೂದಿ ಸುಶರ್ಮನವದಿರ
ಸೂರಿ ತಿರುಗಿದ ಬಳಿಕ ಕೈ ಮೈ
ತೋರಿದನೆ ಕಲಿಕರ್ಣ ನಿನ್ನೊಡನೆಂದನಾ ಭೂಪ ೧೩

ಎಲೆ ಧನಂಜಯ ಸೂತತನಯನ
ಗೆಲಿದು ಬಂದೆಯೊ ದಿವಿಜ ನಗರಿಗೆ
ಕಳುಹಿ ಬಂದೆಯೊ ಕಂಡು ಕೆಣಕದೆ ಬಂದೆಯೋ ಮೇಣು
ಉಳುಹಿ ಬಿಡುವನೆ ಸಮರ ಮುಖದಲಿ
ಮಲೆತನಾದರೆ ಕರ್ಣನೇನ
ಗ್ಗಳಿಕೆವಡೆದನೊ ಶಿವಶಿವಾ ಎಂದರಸ ಬಿಸುಸುಯ್ದ ೧೪

ಜೀಯ ಖಾತಿಯಿದೇಕೆ ಕರ್ಣನ
ಕಾಯಿದುಳುಹಿದೆನೊಂದು ಬಾರಿ ವಿ
ಘಾಯದಲಿ ಘಟ್ಟಿಸುವೆನೀಗಳೆ ಹಾಯ್ಕು ವೀಳೆಯವ
ರಾಯದಳಗಿಳವೆನ್ನ ಕೂಡೆ ನ
ವಾಯಿಯೇ ಕಲಿ ಕರ್ಣನಾಯುಷ
ಹೋಯಿತಿದೆಯೆಂದೊರಸಿದನು ವಾಮಾಂಘ್ರಿಯಲಿ ನೆಲನ ೧೫

ಈಸು ಪರಿಯಲಿ ನಿಮ್ಮ ಚಿತ್ತದೊ
ಳಾಸರಾಯಿತೆ ನಮ್ಮ ದುಷ್ಕೃತ
ವಾಸನಾ ಫಲವೈಸಲೇ ತಾನಿದ್ದು ಫಲವೇನು
ಆ ಸುಯೋಧನ ವಿಗಡ ಭಟ ವಾ
ರಾಸಿಯನು ಮುಕ್ಕುಳಿಸುವೆನು ಧರ
ಣೀಶ ನಿಮ್ಮಡಿಯಾಣೆ ನೇಮವ ಕೊಂಡೆ ನಾನೆಂದ ೧೬

ನಾಲಗೆಯ ನೆಣಗೊಬ್ಬು ಮಿಕ್ಕು ಥ
ಥಾಳಿಸಿದರೇನಹುದು ಕರ್ಣನ
ಕೋಲಗರಿ ಸೋಂಕಿದರೆ ಸೀಯದೆ ಸಿತಗತನ ನಿನಗೆ
ವೀಳೆಯವ ತಾ ಕರ್ಣನಾಯುಷ
ಕೋಳುವೋಯಿತ್ತೆಂಬ ಗರ್ವನ
ಗಾಳುತನವನು ನಂಬಲರಿವೆನೆ ಪಾರ್ಥ ಹೇಳೆಂದ ೧೭

ನಿನಗೆ ಮಣಿವವನಲ್ಲ ರಾಧಾ
ತನಯನವ ಹೆಚ್ಚಾಳು ಕಡ್ಡಿಯ
ಮೊನೆಗೆ ಕೊಂಬನೆ ನಿನ್ನನೀ ಹೆಮ್ಮಕ್ಕಳಿದಿರಿನಲಿ
ಕನಲಿ ಕಳವಳಿಸಿದರೆ ನೀನಾ
ತನ ವಿಭಾಡಿಸಲಾಪ ಸತ್ವದ
ಮನವ ಬಲ್ಲೆನು ಪಾರ್ಥ ನುಡಿಯದಿರೆಂದನಾ ಭೂಪ ೧೮

ಬಲನ ಜಂಭನ ಕೈಟಭನ ದಶ
ಗಳನ ನಮುಚಿಯ ಕಾಲನೇಮಿಯ
ಬಲ ನಿಶುಂಭ ಹಿರಣ್ಯಕಾದಿಯ ಖಳರ ಸಂದೋಹ
ಅಳವಿಗೊಡುವರೆ ಪಾಡಹುದು ನೀ
ನಿಲುಕಲಳವೇ ಕರ್ಣಜಯುವತಿ
ಸುಲಭವೇ ನಿನ್ನಂದದವರಿಗೆ ಪಾರ್ಥ ಹೇಳೆಂದ ೧೯

ಜಾಣತನದಲಿ ಕಾದಿ ಹಿಂಗುವ
ದ್ರೋಣನಲ್ಲಳವಿಯಲಿ ಕಳವಿನ
ಕೇಣದಲಿ ಕೊಂಡಾಡುವರೆ ಗಾಂಗೇಯನಿವನಲ್ಲ
ಸಾಣೆಗಂಡಲಗಿವನು ಸಮರಕೆ
ಹೂಣಿಗನು ರಿಪುಬಲದ ಹಾಣಾ
ಹಾಣಿಕಾರನು ಕರ್ಣನಳುಕುವನಲ್ಲ ನಿನಗೆಂದ ೨೦

ಜಾಳ ಜರೆದು ಜಡಾತ್ಮರಿಗೆ ಜಂ
ಘಾಳತನವನು ಮೆರೆದು ಖೋಡಿಯ
ಖೂಳರನು ಖೊಪ್ಪರಿಸಿ ಚೂಣಿಯ ಚರರ ಚಪ್ಪರಿಸಿ
ಆಳುತನದಲಿ ಬೆರೆವ ನಿನಗವ
ಸೋಲಲರಿಯನು ನಿನ್ನ ಗಂಟಲ
ಗಾಳ ನಿನಗಳುಕುವನೆ ಕರ್ಣನು ಪಾರ್ಥ ಹೇಳೆಂದ ೨೧

ಏನ ಹೇಳುವೆನೆನ್ನ ದಳದಲಿ
ತಾನು ಭೀಮನ ಘಟ್ಟಿನಲಿ ಬಳಿ
ಕೀ ನಕುಲ ಸಹದೇವ ಸಾತ್ಯಕಿ ದ್ರುಪದರೊಡ್ಡಿನಲಿ
ಮಾನನಿಧಿ ರಾಧೇಯನತ್ತಲು
ತಾನೆ ತನುಮಯವಾಯ್ತು ಪಾಂಡವ
ಸೇನೆ ಬಡ ಸಾಹಸಿಕರೆಣೆಯೇ ಸೂತತನಯಂಗೆ ೨೨

ಎಲ್ಲಿ ಕರ್ಣನು ತಿರುಗಿ ನೋಡಿದ
ಡಲ್ಲಿ ತಾನೆಡವಂಕ ಬಲ ಮುಖ
ದಲ್ಲಿ ಸೂತಜನೆಂತು ದೆಸೆಗಳ ನೋಡೆ ಕರ್ಣಮಯ
ಎಲ್ಲಿ ನೋಡಿದಡಲ್ಲಿ ಕರ್ಣನ
ಬಿಲ್ಲ ಬೊಬ್ಬೆ ರಥಾಶ್ವರವವೆದೆ
ದಲ್ಲಣದ ದೆಖ್ಖಾಳ ರಚನಾ ರಸಿಕನವನೆಂದ ೨೩

ಮುರಿದು ಹರಿಹಂಚಾದ ನಿಜ ಮೋ
ಹರವ ನೆರೆ ಸಂತೈಸಿ ಜೋಡಿಸಿ
ಜರೆದು ಗರಿಗಟ್ಟಿದ ವಿರೋಧಿ ವ್ರಜದ ಘಟ್ಟಣೆಯ
ಮುರಿದು ಕುರಿದರಿ ಮಾಡಿ ದೊರೆಗಳ
ನರಸಿ ಕಾದಿ ವಿಭಾಡಿಸುವ ರಣ
ದುರುಬೆಕಾರನನೆಂತು ಸೈರಿಸಿ ಗೆಲುವೆ ನೀನೆಂದ ೨೪

ಕಾದಿ ನೊಂದೆನು ತಾನು ಬಳಿಕ ವೃ
ಕೋದರನೆಯಡಹಾಯ್ದನಾತನ
ಕಾದಿ ನಿಲಿಸಿ ಮದೀಯ ರಥವನು ಮತ್ತೆ ಕೆಣಕಿದನು
ಮೂದಲಿಸಿ ಸಹದೇವ ನಕುಲರು
ಕಾದಲಿವದಿರ ಮುರಿದನಗ್ಗದ
ಕೈದುಕಾರರ ದೇವ ಕರ್ಣನ ಗೆಲುವರಾರೆಂದ ೨೫

ಮುಲೆತು ಧಾಳಾಧೂಳಿಯಲಿ ಬಲ
ಸುಳಿ ಮಸಗಿಯೆನ್ನೊಬ್ಬನನು ಮೈ
ಬಳಸಿ ಕಾದಿತು ವೀರ ಕರ್ಣನ ಕೂಡೆ ತಲೆಯೊತ್ತಿ
ಒಲವರವು ನಿನಗುಳ್ಳರಾಗಳೆ
ನಿಲಿಸಿದಾ ನೀ ಬಂದು ಬಯಲ
ಗ್ಗಳಿಕೆಯನೆ ಬಿಡೆ ಕೆದರುತಿಹೆ ಮಾಣೆಂದು ನೃಪ ನುಡಿದ ೨೬

ಉಕ್ಕಿದುದು ತನಿ ವೀರರಸ ಕುದಿ
ದುಕ್ಕಿ ಹರಿದುದು ರೌದ್ರರಸವವ
ರಕ್ಕಜವ ನಭಕೊತ್ತಿ ಪರಿದುದು ಶಾಂತಿರಸಲಹರಿ
ಮಿಕ್ಕು ಬಹಳ ಕ್ರೋಧವೊಡಲೊಳ
ಗುಕ್ಕಿತಮಳೋತ್ಸಾಹ ಚಾಪಳ
ಸುಕ್ಕಿತೊಂದೇ ನಿಮಿಷ ಮೋನದೊಳಿರ್ದನಾ ಪಾರ್ಥ ೨೭

ಹೇಳಲಂಜುವೆನಾ ಸುಶರ್ಮಕ
ನಾಳು ತಾಯಿಗೆ ಮಕ್ಕಳಾಗದೆ
ಬೀಳಹೊಯ್ದು ನಿಹಾರದಲಿ ತಿರುಗಿದೆನು ಹರಿಸಹಿತ
ಕೋಲಗುರುವಿನ ಮಗನಲೇ ಹರಿ
ಥಾಳಿ ಹರಿದಡಿಗಟ್ಟಿ ತಡೆದನು
ಹೇಳಿ ಫಲವಿನ್ನೇನುತ ಬಿಸುಸುಯ್ದನಾ ಪಾರ್ಥ ೨೮

ಇಟ್ಟಣಿಸಿಕೊಂಡೆನ್ನೊಡನೆ ಸರಿ
ಗಟ್ಟಿ ಕಾದಿದ ರವಿಸುತನ ಹುಡಿ
ಗುಟ್ಟಿದೆನು ರಥವಾಜಿ ಸೂತ ಶರಾಸನಾದಿಗಳ
ಮುಟ್ಟಿ ಬಂದನು ಖಡುಗದಲಿ ಮೈ
ಮುಟ್ಟಿ ಹೆಣಗಿದೆನಾಕ್ಷಣಕೆ ಸಾ
ಲಿಟ್ಟು ಸರಿದುದು ಸಕಲ ಕೌರವ ಸೇನೆ ಸರಿಸದಲಿ ೨೯

ತೊಡಕಿದನು ಗಡ ಗರುಡ ಹಾವಿನ
ತಡಿಕೆವಲೆಯಲಿ ನಿನ್ನ ಗಮನವ
ತಡೆದರೈ ತಪ್ಪೇನು ಕೌರವ ದಳದ ನಾಯಕರು
ಕಡುಹಿನಲಿ ತಡವಾದುದುಳಿದಂ
ತೆಡೆಯಲುಳಿವರ್ಜುನನೆ ನಮ್ಮಾವ
ಗಡವ ಕೇಳಿದು ನಿಲ್ಲನೆಂದನು ನಗುತ ಯಮಸೂನು ೩೦

ಏನನೆಂಬೆನು ನಮ್ಮ ಪುಣ್ಯದ
ಹಾನಿ ತಲೆದೋರಿದರೆ ಭೀಮನ
ಸೂನುವಿರಲಭಿಮನ್ಯುವಿರಲೆವಗೀ ವಿಪತ್ತಹುದೆ
ಆ ನದೀಜ ದ್ರೋಣರಲಿ ತಾ
ಹಾನಿಯನು ಮಿಗೆ ಕಂಡೆನೇ ನೆರೆ
ಹೀನನನು ಕಂಡಾದಡೆಯುಂ ಬದುಕುವುದು ಲೇಸೆಂದ ೩೧

ಅರಳಿಚದೆ ಮಧುಮಾಸ ಮಾಣಲಿ
ವರುಷ ಋತುವೇ ಸಾಕು ಜಾತಿಗೆ
ಜರಡರೆಮಗಿನ್ನೇನು ಪೂರ್ವಪ್ರಕೃತಿ ವನವಾಸ
ಸಿರಿಗೆ ಕಕ್ಕುಲಿತೆಯೆ ವಿಪಕ್ಷವ
ಬೆರಸಿ ಬದುಕುವೆವೈಸಲೇ ವರ
ಗುರುವಲಾ ಧೃತರಾಷ್ಟ್ರನೂಣೆಯುವೇನು ಹೇಳೆಂದ ೩೨

ಬರಿದೆ ಬಯಸಿದಡಹುದೆ ರಾಜ್ಯದ
ಹೊರಿಗೆಯನು ನಿಶ್ಶಂಕೆಯಲಿ ಹೊ
ಕ್ಕಿರಿದು ಬಹ ಸತ್ವಾತಿಶಯ ಬೇಹುದು ರಣಾಗ್ರದಲಿ
ಇರಿದು ಮೇಣ್ ರಿಪುರಾಯರನು ಕು
ಕ್ಕುರಿಸುವರೆ ರಾಧೇಯನಂತಿರ
ಲುರುವನೊಬ್ಬನೆ ಬೇಹುದಲ್ಲದಡಿಲ್ಲ ಜಯವೆಂದ ೩೩

ಎವಗೆ ವಿಕ್ರಮವೆಂಬಡೀ ರೌ
ರವವ ಕಂಡೆನು ಕರ್ಣನಂತಿರ
ಲೆವಗೆ ಧೀವಸಿಯಾಗಿ ಕಾದುವರೆಂಬರವರಿಲ್ಲ
ಬವರ ಗೆಲುವರೆ ಹರಿಗೆ ಕೊಡು ಗಾಂ
ಡಿವವ ಸಾರಥಿಯಾಗು ನೀನೆಂ
ದವಗಡಿಸಿದನು ವೀರ ನಾರಾಯಣನ ಮೈದುನನ ೩೪

## ಹದಿನೇಳನೆಯ ಸಂಧಿ

ಸೂ. ರಾಯನನು ಕಿಡಿಸುಡಿದನಾ ವ
ಜ್ರಾಯುಧನ ನಂದನನು ಬಳಿಕಬು
ಜಾಯತಾಂಬಕ ಸಂತವಿಟ್ಟನು ಧರ್ಮಜಾರ್ಜುನರ

ಕೇಳು ಧೃತರಾಷ್ಟ್ರಾವನಿಪ ಭೂ
ಪಾಲನಾಡಿದ ನುಡಿಯನಾಲಿಸಿ
ಕೇಳಿದನು ಕಿದರಿದನು ಜಡಿದವು ರೋಮರಾಜಿಗಳು
ಮೇಲು ಮೇಲುಬ್ಬೇಳ್ವ ರೋಷ
ಜ್ವಾಲೆ ಹೊದಸಿತು ವದನವನು ಕ
ಣ್ಣಾಲಿ ಕಾಹೇರಿದವು ಪಾರ್ಥಂಗೊಂದು ನಿಮಿಷದಲಿ ೧

ಆಯುಧವ ಹಿಡಿದೊರೆಯನುಗಿದನ
ಡಾಯುಧವ ಝಳಪಿಸುತ ರೌದ್ರ
ಸ್ಥಾಯಿಭಾವದ ಭಾರದಲಿ ಭುಲ್ಲಯಿಸಿ ಭಯವಡಗಿ
ರಾಯನಲ್ಲಿಗೆ ಮೆಲ್ಲ ಮೆಲ್ಲನು
ಪಾಯಗತಿ ಪಲ್ಲವಿಸಲುಪ್ಪರ
ಘಾಯದಲಿ ಲಾಗಿಸುವ ಪಾರ್ಥನ ಕಂಡುದಖಿಳಜನ ೨

ಅಹಹ ಕೈತಪ್ಪಾಯ್ತು ಹಾ ಹಾ
ರಹವಿದೇನೆನುತ ರಾಯನ
ಮಹಿಳೆ ಬಿದ್ದಳು ಮೇಲುಖಡ್ಗಕೆ ತನ್ನ ನಡೆಯೊಡ್ಡಿ
ಬಹಳ ಶೋಕದಲಖಿಳ ಜನವು
ಮ್ಮಹವ ಬಿಸುಟರು ದೈವಗತಿ ದು
ಸ್ಸಹವಲಾ ಎನುತಸುರರಿಪು ಹಿಡಿದನು ಧನಂಜಯನ ೩

ಹಿಡಿಯದಿರು ಮುರವೈರಿ ಪಾರ್ಥನ
ಬಿಡುಬಿಡೀತನ ಖಡ್ಗಕಿದೆಯೆ
ನ್ನೊಡಲು ತನ್ನನೆ ಧಾರೆಯೆರೆದೆನು ನಯನವಾರಿಯಲಿ
ತೊಡಗಿದೀತನ ರಾಜಕಾರ್ಯವ
ಕೆಡಿಸದಿರು ನಿರ್ವಾಹಿಸಲಿ ನೀ
ಬಿಡು ಬಿಡೆನೆ ಜರೆದನು ಮುರಾಂತಕನಿಂದ್ರನಂದನನ ೪

ಅಕಟ ಗುರುಹತ್ಯಾ ಮಹಾ ಪಾ
ತಕಕೆ ತಂದ್ಯೆ ಮನವ ಭರತ
ಪ್ರಕಟಕುಲ ನಿರ್ಮೂಲಕನೆ ನೀನೊಬ್ಬನುದಿಸಿದಲ
ವಿಕಳ ಕುರುನೃಪರೊಳಗೆ ದುರಿತಾ
ತ್ಮಕರ ಕಾಣೆನು ನಿನ್ನ ಸರಿ ಹೋ
ಲಿಕೆಗೆ ಹರಹರದೇನ ನೆನೆದನೆನುತ್ತ ಗರ್ಜಿಸಿದ ೫

ಧರಣಿಪನ ಕೊಲಲೆಂದೊ ಮೇಣೀ
ತರುಣಿಯರಿಗೋ ನಕುಲ ಸಹದೇ
ವರಿಗೆಯೋ ಮೇಣೆನಗೆಯೋ ನೀನುಗಿದಡಾಯುಧವ
ಪರಿಯ ಹೇಳೈ ಪಾರ್ಥ ಮೋನದೊ
ಳಿರದಿರೆನ್ನಾಣೆನಲು ಬೆರಗಿನ
ಗರುವ ಗಾಹಿನಲದ್ದು ಮೋನದೊಳಿದ್ದನಾ ಪಾರ್ಥ ೬

ಬೆದರಿಸದಿರೈ ಕೃಷ್ಣ ದುಷ್ಕ
ರ್ಮದಲಿ ಸುಳಿಯೆನು ಭೂಪತಿಯ ಗ
ರ್ವದ ವಚೋವಿನ್ಯಾಸವನ್ಯಾಯ ಪ್ರಪಂಚವಿದು
ಅದರಿನೀತನ ಪೊಯ್ದು ಕೊಂದ
ಲ್ಲದೆ ಸುನಿಷ್ಕೃತಿಯಿಲ್ಲ ಸತ್ಯಾ
ಭ್ಯುದಯವೇ ತನ್ನುದಯವದರಳಿವೆನ್ನ ಲಯವೆಂದ ೭

ದೇವ ಪೂರ್ವದಲೆನ್ನ ನುಡಿ ಗಾಂ
ಡೀವವೇತಕೆ ನಿನಗೆ ನಿನಗೀ
ದೇವಧನು ಸಾದೃಶ್ಯವೇ ತೆಗೆಯೆಂದು ರೋಷದಲಿ
ಆವನೊಬ್ಬನ ನುಡಿದನಾತನ
ಜೀವನವ ಜಕ್ಕುಲಿಸಿಯೆನ್ನ ವ
ಚೋವಿಳಾಸವ ಕಾಯ್ವೆನೆಂದೆನು ಕೃಷ್ಣ ಕೇಳೆಂದ ೮

ಸಾರು ತೆಗೆ ಗಾಂಡಿವವ ನಿನಗನು
ಸಾರಿಯೇ ಬಿಸುಡೆಂದು ನುಡಿಯನೆ
ಧಾರುಣೀಪತಿ ಕೇಳಿರೇ ನೀವಿನಿಬರೀ ನುಡಿಯ
ಆರದನ್ಯಾಯವು ವಿಚಾರ ವಿ
ಶಾರದನು ನೀನೆಲೆ ಮುಕುಂದ ವಿ
ಕಾರಿಯೇ ತಾನೆಂದು ಬಿನ್ನಹ ಮಾಡಿದನು ಪಾರ್ಥ ೯

ಲೇಸು ಲೇಸಿದು ತಮ್ಮನಾಡಿದ
ಭಾಷೆ ಬಾಹಿರವಾಗಬೇಡ ವಿ
ನಾಶಕಾನಂಜೆನು ಮುರಾಂತಕ ಬಿಡು ಧನಂಜಯನ
ಆಸೆಯೆನಗೀ ರಾಜ್ಯದಲಿ ಮೇ
ಣೀ ಶರೀರದಲಿಲ್ಲ ಪಾರ್ಥನ
ಭಾಷೆ ನಿಂದರೆ ಸಾಕು ನೀ ಸಾರೆಂದನಾ ಭೂಪ ೧೦

ಮರುಳೆ ಮೋನದೊಳಿರು ಯುಧಿಷ್ಠಿರ
ನರನ ನೀ ಮುಂದಿಟ್ಟು ಯಮದೂ
ತರಿಗೆ ಕೈವರ್ತಿಸುವ ಪರಿಯೇ ಕೋಟಿ ನರಕದಲಿ
ಹುರುಳನರಿಯದೆ ಧರ್ಮಶಾಸ್ತ್ರದ
ಪರಮ ತತ್ತ್ವವದಾವ ಮುಖವೆಂ
ದರಿಯೆ ವಿಷಮ ಕ್ಷತ್ರತಾಮಸ ನಿನ್ನ ಬಿಡದೆಂದ ೧೧

ಎಲೆ ಧನಂಜಯ ಧರ್ಮಪುತ್ರನ
ಕೊಲುವೆನುಳುಹುವದಿಲ್ಲವೆಂಬ
ಗ್ಗಳಿಕೆಯಿದು ನಗೆಯಲ್ಲವೇ ನಿಶ್ಚಯವೆ ಹಿಂಸೆಯಲಿ
ಕಲುಮನವಲಾ ನಿನಗಕಟ ನಿ
ರ್ಮಳದ ಧರ್ಮಸ್ಥಿತಿ ರಹಸ್ಯವ
ತಿಳುಪಿದವರಾರೆನುತ ತಲೆದೂಗಿದನು ಮುರವೈರಿ ೧೨

ನುಡಿವ ಮಾತ್ರದಲಿರದು ಧರ್ಮದ
ಬೆಡಗು ತಾನದು ಬೇರೆ ಸತ್ಯವ
ನುಡಿದು ಕೆಟ್ಟವರುಂಟು ಹಿಂಸಾಧರ್ಮವೃತ್ತಿಯಲಿ
ನಡೆದು ಯಾವಜ್ಜೀವದಲಿ ಗತಿ
ವಡೆದವರುಂಟೆಲೆ ಪಾರ್ಥ ನಿನ್ನು
ಗ್ಗಡದ ವೀರಾವೇಶ ಮಾಣಲಿ ಮಾತ ಕೇಳೆಂದ ೧೩

ವನದೊಳೊಬ್ಬನು ಕೌಶಿಕಾಹ್ವಯ
ಮುನಿ ತಪಶ್ಚರಿಯದಲಿ ಸತ್ಯವೆ
ತನಗೆ ಸುವ್ರತವೆಂದು ಬಟ್ಟೆಯೊಳಿದ್ದನೊಂದು ದಿನ
ವನಚರರು ಬೇಹಿನಲಿ ಭೂಸುರ
ಜನವ ಬೆಂಬತ್ತಿದರು ಕೌಶಿಕ
ಮುನಿಯ ಬೆಸಗೊಂಡರು ಮಹೀಸುರ ಮಾರ್ಗಸಂಗತಿಯ ೧೪

ವಿತತ ಸತ್ಯದ ವಿಷಯಭೇದ
ಸ್ಥಿತಿಯನರಿಯದ ಮುನಿಪ ವನಚರ
ತತಿಗೆ ಭೂಸುರಜನದ ಮಾರ್ಗವನರುಹಿದನು ಬಳಿಕ
ಅತಿ ದುರಾತ್ಮಕರವದಿರನಿಬರು
ಕ್ಷಿತಿಸುರರ ಕೊಂದಮಳ ಭೂಷ
ಪ್ರತತಿಯನು ಕೊಂಡೊಯ್ದರೆಲೆ ಕೌಂತೇಯ ಕೇಳೆಂದ ೧೫

ಕಾಲವಶದಲಿ ಕೌಶಿಕನನಾ
ಕಾಲದೂತರು ತಂದರಾತನ
ಮೇಲುಪೋಗಿನ ಸುಕೃತ ದುಷ್ಕೃತವನು ವಿಚಾರಿಸಲು
ಮೇಲನರಿಯದೆ ಸತ್ಯದಲಿ ವಿ
ಪ್ರಾಳಿ ವಧೆಯಾತಂಗೆ ಬಂದುದು
ಹೇಳಲದು ಭೋಕ್ತವ್ಯವತಿ ಪಾತಕದ ಫಲವೆಂದ ೧೬

ನರಕಕಾತನ ನೂಕಿದರು ವಿ
ಸ್ತರಣವೆಂತೈ ಪಾರ್ಥ ಸತ್ಯದ
ಹುರುಳನರಿಯದೆ ಕಾಳುಗೆಡೆದರೆ ಕಾರ್ಯವೆಂತಹುದು
ಮರುಳೆ ಕೇಳದ್ಭುತವ ಹಿಂಸಾ
ಪರನಹರ್ನಿಶವಾ ದುರಾತ್ಮನ
ವರಿಸಿದರು ದೇವಾಂಗನೆಯರೀ ಕಥೆಯ ಕೇಳೆಂದ ೧೭

ಬನದೊಳೊಬ್ಬ ಬಳಾಕನೆಂಬವ
ವನಚರನು ತನ್ನಯ ಕುಟುಂಬವ
ನನುದಿನವು ಮೃಗವಧೆಯಲೇ ಸಲಹಿದನು ಬೇಸರದೆ
ತನಗೆ ಕಡೆಪರಿಯಂತ ಮತ್ತೊಂ
ದನುವನರಿಯನು ರಾಗ ಲೋಭವ
ನೆನೆಯನವರಿಂ ಹಿಂಸೆ ಸಂದುದು ವೃತ್ತಿರೂಪದಲಿ ೧೮

ವರವವಂಗೆ ಕುಟುಂಬ ರಕ್ಷಾ
ಕರಣ ಕಾರಣವಾದ ಹಿಂಸಾ
ಚರಣೆಯಿಂದೇ ಬರಹ ಧರ್ಮನ ಸೇನಬೋವನಲಿ
ಮರಣವಾತಂಗಾಗೆ ಕೊಂಡೊ
ಯ್ದರು ಸುರಾಂಗನೆಯರು ಧನಂಜಯ
ಪರಮ ಧರ್ಮರಹಸ್ಯವಾವಂಗರಿಯಬಹುದೆಂದ ೧೯

ಪಿತೃಸಮೋಭ್ರಾತಾ ಎನಿಪ್ಪುದು
ಶ್ರುತಿವಚನವರಸಂಗೆ ನೀನುಪ
ಹತಿಯ ಮಾಡಲು ನೆನೆದೆ ಮಾತಿನ ವಾಸಿ ಬೇಕೆಂದು
ಕ್ಷಿತಿಯೊಳಬುಜ ಮೃಣಾಳಕೋಸುಗ
ಕೃತತಟಾಕವನೊಡೆದವೊಲು ಭೂ
ಪತಿ ವಧವ್ಯಾಪಾರ ನಿರ್ಮಳ ಧರ್ಮವಹುದೆಂದ ೨೦

ಗುರುಹತಿಯೆ ಕರ್ತವ್ಯ ತಾನಾ
ದರಿಸಿ ಮಾಡಿದ ಮಾತನೇ ಪತಿ
ಕರಿಸುವುದು ಶ್ರುತಿವಿಹಿತ ಧರ್ಮವಿದೆಂಬುದೀ ಲೋಕ
ವಿರಡರಭ್ಯಂತರವ ನೀನೇ
ನರಿಯದವನೇ ವೇದಶಾಸ್ತ್ರದ
ವರ ನಿಧಾನಜ್ಞಾತೃವಲ್ಲಾ ಪಾರ್ಥ ನೀನೆಂದ ೨೧

ಈಸು ನಿರ್ದಯನೆಂಬುದನು ನಾ
ವೀಸು ದಿನವರಿಯೆವು ಮಹಾದೇ
ವೇಸು ಪರಿಯಂತಿದ್ದುದೋ ನಿನ್ನಂತರಂಗದಲಿ
ವಿಸನೋದಿದಡೇನು ಪಾಪ ವಿ
ಳಾಸ ರಚನಾ ರೌರವಾತ್ಮರ
ವಾಸನೆಗಳವು ಬೇರೆ ಹರಹರ ಎಂದನಸುರಾರಿ ೨೨

ನನೆದುದಂತಃಕರಣ ಮಧುಸೂ
ದನನ ಸೂಕ್ತಿ ಸುಧಾರಸದಿ ನೆರೆ
ನೆನೆದುದಾತನ ಮೈ ವಿಲೋಚನವಾರಿ ಪೂರದಲಿ
ಮನದ ಪರಿತಾಪ ವ್ಯಥಾ ದು
ರ್ಮನನು ಖಡ್ಗವನೊರೆಯೊಳಾಸುತ
ವಿನಯದಲಿ ಕೃಷ್ಣಂಗೆ ಬಿನ್ನಹ ಮಾಡಿದನು ಪಾರ್ಥ ೨೩

ನಾವು ನೆರೆ ಸರ್ವಾಪರಾಧಿಗ
ಳಾವ ಗುಣದೋಷವನು ನಮ್ಮಲಿ
ಭಾವಿಸುವೆ ನಾವೆತ್ತ ಬಲ್ಲೆವು ಧರ್ಮನಿರ್ಣಯವ
ಆವ ಪರಿಯಲಿ ತನ್ನ ಸತ್ಯದ
ಠಾವು ನಿಲುವುದು ರಾಯನುಪಹತಿ
ಯಾವ ಪರಿಯಿಂದಾಗದಿಹುದದನರಿದು ಬೆಸಸೆಂದ ೨೪

ಭರತವಂಶದೊಳುದಿಸಿದೆಮ್ಮೈ
ವರಿಗೆ ಇಹಲೋಕದ ನಿವಾಸಕೆ
ಪರದ ಸೌಖ್ಯಸ್ಥಿತಿಗೆ ಹೊಣೆ ನೀನಲ್ಲದೆಮಗಾರು
ದುರುಳರಾವನ್ವಯ ಮದದ ದು
ರ್ಧರ ಪರಾಕ್ರಮ ಮದದ ಘನ ಮ
ತ್ಸರಿಗೆ ಕೃಪೆಮಾಡೆಂದು ಬಿನ್ನಹ ಮಾಡಿದನು ಪಾರ್ಥ ೨೫

ಕೊಲುವುದೇನೊಂದರಿದೆ ಟೆಕ್ಕರಿ
ಗಳೆವುದೇ ಪರಹಿಂಸೆ ಲೋಗರ
ಹಳಿವುದೇ ವಧೆ ಶಸ್ತ್ರವಧೆ ವಧೆಯಲ್ಲ ನೋಡುವರೆ
ಖಳರ ದುಸ್ಸಹ ದುಷ್ಟವಚನದ
ಹಿಳುಕು ಹೃದಯವ ಕೊಂಡು ಮರುಮೊನೆ
ಮೊಳೆತ ಬಳಿಕವ ಬದುಕಿದವನೇ ಪಾರ್ಥ ಹೇಳೆಂದ ೨೬

ಅರಸಗುಪಹತಿಯೆನಿಸದೇ ನಿ
ಷ್ಠುರ ದುರುಕ್ತಿ ಕೃಪಾಣದಲಿ ಸಂ
ಹರಿಸಿದರೆ ನಿರ್ವಾಹವಾಗದೆ ನಿನ್ನ ನುಡಿಗಳಿಗೆ
ಪರಮ ಋಷಿಮತವೆನೆ ಮುರಾರಿಯ
ಸಿರಿವಚನಕೆ ಹಸಾದವೆಂದು
ಬ್ಬರದ ಗರ್ವೋಕ್ತಿಯಲಿ ಗರುವಿಕೆಗೆಡಿಸಿದನು ನೃಪನ ೨೭

ಎಲೆ ಯುಧಿಷ್ಠಿರ ಜನಿಸಿದೈ ಶಶಿ
ಕುಲದ ವೀರ ಕ್ಷತ್ರ ಪಂಕ್ತಿಯೊ
ಳೆಳಮನದ ಕಾಳಿಕೆಯ ತೊಡಹದ ಗಂಡು ರೂಪಿನಲಿ
ನೆಲನ ಕೊಂಡರು ನಿನ್ನ ಮೋರೆಯ
ಬಲುಹ ಕಂಡೇ ಕೌರವರು ನಿ
ನ್ನೊಳಗೆ ಬಲ್ಲಿದನೆನ್ನ ಭಂಗಿಸಲೇಕೆ ನೀನೆಂದ ೨೮

ನಿನ್ನ ಜೂಜಿನ ವಿಲಗದಲಿ ಸಂ
ಪನ್ನರಾಜ್ಯವ ಬಿಸುಟು ನಿನ್ನಯ
ಬೆನ್ನಲಡವಿಯಲಾಡಿದೆವು ಹನ್ನೆರಡು ವರ್ಷದಲಿ
ಮನ್ನಿಸಿದೆ ಲೇಸಾಗಿ ಕೌರವ
ರಿನ್ನು ಕೊಡುವರೆ ನಿನಗೆ ರಾಜ್ಯವ
ನಿನ್ನ ಹಿಡಿದೇ ಭೀಮ ಬದುಕಲಿ ಎಂದನಾ ಪಾರ್ಥ ೨೯

ರಣದ ಘಾರಾಘಾರಿಯಾರೋ
ಗಣೆಯ ಮನೆಯಲ್ಲರಸ ಶಿರದಲಿ
ಕುಣಿವಡಾಯ್ದಕೆ ಸುಳಿವ ಸುರಗಿಗೆ ತಿವಿವ ಬಲ್ಲೆಹಕೆ
ಹಣಿವ ಲೌಡಿಗೆ ಪಾಯ್ದು ಬೀಳುವ
ಕಣೆಗೆ ಖಂಡದ ರುಧಿರ ರಣದೌ
ತಣವ ರಚಿಸದೆ ಬರಿದೆ ರಾಜ್ಯವ ಕೊಂಬೆ ನೀನೆಂದ ೩೦

ಕರುಳ ಕಂಕಣದಾರ ಮಿದುಳಿನ
ಶಿರವ ಬಾಸಿಗ ಭುಜದ ವಕ್ಷದ
ಕರದ ಘಾಯದ ತೋಳ ಬಂದಿಯ ಪದಕ ಸರಪಣಿಯ
ಅರುಣಜಲ ಲುಳಿತಾಂಬರದ ಸಂ
ಗರ ವಿವಾಹದ ಭೂಷಣದ ಸೌಂ
ದರಿಯವಿಲ್ಲದೆ ರಾಜ್ಯಸಿರಿ ನಿನಗೊಲಿವಳಲ್ಲೆಂದ ೩೧

ಇಂದಿನಲಿ ಹದಿನೇಳು ದಿನವಿ
ಲ್ಲಿಂದ ಹಿಂದಣ ಬವರದಲಿ ನೀ
ನೊಂದುದುಂಟೇ ದ್ರೋಣ ಭೀಷ್ಮರ ಕೋಲ ತೋಹಿನಲಿ
ಒಂದು ತೂರಂಬಿನಲಿ ಗಡ ನೀ
ನಿಂದು ಜೀವವ ಜಾರಿಸುವೆ ಸುಡ
ಲಿಂದುಕುಲ ಕಂಟಕರನಿರಿದರೆ ದೋಷವೇನೆಂದ ೩೨

ಎನುತಡಾಯ್ದವನೊರೆಯೊಳುಗಿದ
ರ್ಜುನನು ತನ್ನಯ ಕೊರಳ ಸಂದಿಗೆ
ಮನದೊಳಗೆ ಖಯಖೋಡಿಯಿಲ್ಲದೆ ಚಾಚಿದನು ಬಳಿಕ
ದನುಜರಿಪುವಡಹಾಯ್ದು ಹಿಡಿದೀ
ತನ ಕೃಪಾಣವ ಕೊಂಡು ನಿನ್ನಯ
ನೆನಹಿದೇನೈ ಪಾರ್ಥ ಹೇಳೆನ್ನಾಣೆ ಹೇಳೆಂದ ೩೩

ಏನ ಹೇಳುವೆನಡ್ಡಹಾಯಿದು
ನೀನೆ ಕೆಡಿಸಿದೆಯೆಮ್ಮನಲ್ಲದ
ಡೇನ ಮಾಡೆನು ಸತ್ಯಶೌರ್ಯದ ಹಾನಿ ಹರಿಬದಲಿ
ಈ ನರೇಂದ್ರನ ಕೊಂದ ನನಗಿ
ನ್ನೇನು ದೇಹಕೆ ತಲೆಯೊಡನೆ ಸಂ
ಧಾನವೇ ಸಾಕೆನ್ನ ಕೈದುವನೆನಗೆ ನೀಡೆಂದ ೩೪

ಎಲವೊ ಖೂಳ ಕಿರೀಟಿ ಮತ್ತೆಯು
ತಿಳಿಯೆಲಾ ನೀನಾವ ಪರಿಯಲಿ
ಮುಳಿದು ರಾಯನನಿರಿದೆ ನಿನಗೆಯು ತದ್ವಿಧಾನದಲಿ
ಅಳಿವ ನೆನೆಯಾ ಸಾಕು ದೇಹವ
ನಳಿವುದೇ ಕೊಲೆಯಲ್ಲ ನಿನ್ನ
ಗ್ಗಳಿಕೆಗಳನೀನಾಡಿ ನಿನ್ನನೆ ಕೊಂದುಕೊಳ್ಳೆಂದ ೩೫

ಸಂದ ಪರಿಯಿದು ಜಗಕೆ ಲೋಗರ
ನಿಂದಿಸುವುದೇ ಹಿಂಸೆ ತನ್ನನೆ
ಕೊಂದವನು ತನ್ನಾಳುತನವನು ತಾನೆ ಹೊಗಳಿದರೆ
ಎಂದಡರ್ಜುನನವನಿಪಾಲಂ
ಗೆಂದನೆನಗಿದಿರಾಗಿ ರಣದಲಿ
ನಿಂದು ಕಾದುವನಾರು ದನುಜಾಮರರ ಥಟ್ಟಿನಲಿ ೩೬

ನಾನಲಾ ದ್ರೌಪದಿಯ ಮದುವೆಯೊ
ಳಾ ನರೇಂದ್ರರ ಗೆಲಿದವನು ಬಳಿ
ಕಾ ನಿಳಿಂಪ ವ್ರಜವ ಮುರಿದುರುಹಿದೆನು ಖಾಂಡವವ
ಏನನೆಂಬೆನು ಸಕಲ ಕೌರವ
ಸೇನೆಯನು ಗೋಗ್ರಹಣದಲಿ ಸಲೆ
ನಾನಲೇ ರಥವೊಂದರಿಂದವೆ ಗೆಲಿದೆ ದಿಟವೆಂದ ೩೭

ಬಳಿಕ ಭೀಷ್ಮನನಾರು ರಣದಲಿ
ಗೆಲಿದವನು ದ್ರೋಣ ಪ್ರತಾಪಾ
ನಳನ ನಂದಿಸಿದಾತನಾರು ಮಹಾಹವಾಗ್ರದಲಿ
ಮಲೆತು ನಿಂದರೆ ಸೂತತನಯನ
ಕೊಲುವನಾವನು ಎನ್ನ ಟಿಕ್ಕರಿ
ಗಳೆವೆ ನೀನೆನ್ನೊಡನೆ ಸೆಣಸುವ ಭಟನ ತೋರೆಂದ ೩೮

ಉಂಟು ಫಲುಗುಣ ನಿನ್ನ ಹೋಲಿಸ
ಲುಂಟೇ ಸುಭಟರು ದೇವ ದೈತ್ಯರೊ
ಳೆಂಟು ಮಡಿ ನಾವರಿಯೆವೇ ಕೈವಾರವೇನದಕೆ
ಕಂಟಣಿಸದಿರು ಕೃಷ್ಣನಿಕ್ಕಿದ
ಗಂಟಿನಲಿ ಸಿಲುಕದಿರು ತನ್ನಯ
ಗಂಟಲಿದೆ ಶಸ್ತ್ರೌಘವಿದೆ ನೀ ಬೇಗ ಮಾಡೆಂದ ೩೯

ಭರತ ಕುಲದಲಿ ಭಾಗಧೇಯ
ಸ್ಫುರಣ ಹೀನರನೆಮ್ಮನುರೆ ಧೀ
ಕ್ಕರಿಸಿದಾದಡೆ ಮುನಿದು ಮಾಡುವುದೇನು ವಿಧಿಯೊಡನೆ
ಅರಿನೃಪಾಲರ ಗೆಲಿದು ವಿಶ್ವಂ
ಭರೆಯ ಕೊಂಡರೆ ಭೀಮಸೇನನ
ನರಸುತನದಲಿ ನಿಲಿಸು ಸುಖದಲಿ ಬದುಕಿ ನೀವೆಂದ ೪೦

ಇರಿದು ಮೆರೆವ ವಿನೋದ ವಿಗ್ರಹ
ದಿರಿತವೇ ಹಿಂದಾಯ್ತು ಹರಹಿನೊ
ಳುರುವ ಫಲಿತದ ಬೀಡು ಬಿಟ್ಟುದು ನಮ್ಮ ತನುವಿನಲಿ
ಇರಿದ ಕರ್ಣನೆ ಸಾಲದೇ ಪೆಣ
ನಿರಿದು ಪಗೆಯೇಕೆಂಬ ಮಾತನು
ಮರೆದು ಕಳೆದೈ ತಮ್ಮ ಎಂದವನೀಶ ಬಿಸುಸುಯ್ದ ೪೧

ನಿನ್ನ ಜನನಿಯ ಜಠರದಲಿ ತಾ
ಮುನ್ನ ಜನಿಸಿದೆನೀ ಗುರುತ್ವಕೆ
ಮನ್ನಿಸಿದೆ ಸಾಕೈಸಲೇ ಸರ್ವಾಪರಾಧವನು
ಎನ್ನನೊಬ್ಬನನುಳಿಯಲುಳಿದರ
ಭಿನ್ನ ಸಾಹೋದರ್ಯ ಸಂಪ್ರತಿ
ಪನ್ನಗುಣರವರೊಡನೆ ಸುಖದಲಿ ರಾಜ್ಯ ಮಾಡೆಂದ ೪೨

ಸೇರುವುದು ಭೀಮನಲಿ ಸಾಹಂ
ಕಾರನಾತನ ಕೊಂಡು ನಡೆವುದು
ಕಾರಣಿಕ ನೀನಾದಡೀ ಸಹದೇವ ನಕುಲರನು
ಆರಯಿದು ಸಲಹುವುದು ದ್ರುಪದ ಕು
ಮಾರಿಯನು ಬೇಸರಿಸದೀ ಪರಿ
ವಾರವನು ಮನ್ನಿಸುವುದರ್ಜುನದೇವ ಕೇಳೆಂದ ೪೩

ಎನುತ ನಯನೋದಕದ ಸರಿಯಲಿ
ನನೆದವಲ್ಲಿಯ ಬಾಹುಮೂಲದ
ಕನಕದೊರೆಯ ಕಠಾರಿಯವನಿಪನೆದ್ದು ಸಂವರಿಸಿ
ಮನದ ದುಗುಡದ ದಡಿಯ ಮೋರೆಯ
ತನಿ ಹೊಗರ ಬಿಸುಸುಯ್ಲ ತವಕದ
ಬನದ ಪಯಣದ ಧರ್ಮಸುತ ಹೊರವಂಟನರಮನೆಯ ೪೪

ರಾಯನಪರೋಕ್ಷದಲಿ ರಾಜ್ಯ
ಶ್ರೀಯ ಬೇಟವೆ ಶಿವ ಶಿವಾದಡೆ
ತಾಯ ನುಡಿ ತೊದಳಾಯ್ತೆ ತಮತಮ್ಮಂತರಂಗದಲಿ
ಆಯಿತಿದು ಲೇಸೆನುತ ತಮ ತ
ಮ್ಮಾಯುಧಂಗಳ ಕೊಂಡು ವರ ಮಾ
ದ್ರೇಯರರಸನ ಕೂಡೆ ಹೊರವಂಟರು ನೃಪಾಲಯವ ೪೫

ಕೊರಳನೊಲೆದಳು ಭಾಪು ದೈವದ
ಪರುಠವಣೆ ದುಶ್ಶಾಸನನ ನೆ
ತ್ತರಿನ ವೇಣೀಬಂಧಕಘಟಿತವಾಯ್ತು ಸಂಬಂಧ
ತರಣಿ ಬಿಜಯಂಗೈದರಬುಜದ
ಸಿರಿಗೆ ಸುಮ್ಮಾನವೆ ಎನುತ ಪಂ
ಕರುಹಮುಖಿ ಸಖಿಯರು ಸಹಿತ ಹೊರವಂಟಳರಮನೆಯ ೪೬

ಸದನವನು ತಮತಮಗೆ ಹೊರವಂ
ಟುದು ನೃಪಾಲಸ್ತೋಮ ದುಮ್ಮಾ
ನದಲಿ ಧೃಷ್ಟದ್ಯುಮ್ನ ಸಾತ್ಯಕಿ ಚೇಕಿತಾನಕರು
ಕದಡಿತಾ ಪರಿವಾರ ವಾರಿಧಿ
ಕೆದರಿ ಹೊರವಂಟುದು ಕಿರೀಟಿಯ
ಹೃದಯ ಹೊಗೆದುದು ಹೊತ್ತಿದನುಪಮ ಶೋಕವಹ್ನಿಯಲಿ ೪೭

ಮೂಗನಾದನು ಪಾರ್ಥ ನೃಪ ಚಿಂ
ತಾಗಮದೊಳಳ್ಳಿರಿವ ಶೋಕದ
ಸಾಗರವನೀಸಾಡಿ ತೆರೆಗಳ ಹೊಯ್ಲ ಹೊದರಿನಲಿ
ಆ ಗರುವನಡಿಗದ್ದು ಮೂಡಿದ
ನಾಗಳೀ ತಡಿಗಡರಿ ಬಳಲಿದು
ತಾಗಿದನು ನೆರೆ ತಳ್ಳವಾರುತ ಪಾರ್ಥ ಹೊರವಂಟ ೪೮

ಹರಿದು ಬೀದಿಯೊಳವನಿಪಾಲನ
ಚರಣದಗ್ರದೊಳೊಡಲ ಹಾಯಿಕಿ
ಹೊರಳಿದನು ಹೊನಲಿಡುವ ಲೋಚನವಾರಿ ಪೂರದಲಿ
ಧರಣಿಪತಿಯೆ ದುರಾತ್ಮಕನನು
ದ್ಧರಿಸಬೇಹುದು ಜೀಯ ಕರುಣಾ
ಕರನಲಾ ನೀನೆನುತ ಪಿಡಿದನು ಭೂಪನಂಘ್ರಿಗಳ ೪೯

ಮಾಡಿದೆನ್ನಪರಾಧ ಶತವನು
ನೋಡಲಾಗದು ಕರುಣದಲಿ ನೀ
ಖೋಡಿಯನು ಬಿಡು ಚಿತ್ತಗೊಡದಿರು ಖತಿಯ ಫಲ್ಲಣೆಗೆ
ನೋಡುವುದು ಕಾರುಣ್ಯದೃಷ್ಟಿಯೊ
ಳೀಡಿರಿವ ಘನ ಶೋಕವಹ್ನಿಗೆ
ಖೇಡನಾದೆನು ಜೀಯೆನುತ ಹಲುಬಿದನು ಕಲಿಪಾರ್ಥ ೫೦

ಏಳು ತಂದೆ ಕಿರೀಟಿ ತನ್ನಾ
ಣೇಳು ಸಾಕೀ ಹವಣಿನಲಿ ಮು
ನ್ನಾಳಿಕೆಯ ಕಾಂತಾರ ರಾಜ್ಯದ ಸಿರಿಯೆ ಸಾಕೆಮಗೆ
ಬಾಲಕರು ನೀವ್ ಮೇಲಣದು ದು
ಷ್ಕಾಲವೀ ಸಾಮ್ರಾಜ್ಯ ಭೋಗ
ವ್ಯಾಳ ವಿಷಕಂಜುವೆನು ಪಾಂಡುವಿನಾಣೆ ಸಾರೆಂದ ೫೧

ಹಿಂಗದಿನ್ನೂ ದ್ವಾಪರದ ಸ
ರ್ವಾಂಗವೀ ದ್ವಾಪರದ ಸೀಮಾ
ಸಂಗದಲಿ ಸಿಗುರೆದ್ದ ಕಲಿಕೆಯ ಸೊಗಡ ಸೋಹಿನಲಿ
ಸಂಗಡಿಸಿತಧರೋತ್ತರದ ಸಮ
ರಂಗವೀ ಹದನರಿದು ರಾಜ್ಯಾ
ಸಂಗ ಸುಗತಿವ್ಯರ್ಥನಹೆನೇ ಪಾರ್ಥ ಹೇಳೆಂದ ೫೨

ಸಾಕು ಪಾರ್ಥನ ಬಿನ್ನಹವ ಕೆಡೆ
ನೂಕದಿರು ನೆಳಲಿಂಗೆ ಬೇರೆ ವಿ
ವೇಕ ಚೇಷ್ಟೆಗಳೇ ಸಹೋದರರೀ ಚತುಷ್ಟಯಕೆ
ಈ ಕಮಲಮುಖಿಯರಿಗೆ ನಿನ್ನಾ
ಲೋಕವಲ್ಲದೆ ಬೇರೆ ಕಾರ್ಯ
ವ್ಯಾಕುಳತೆ ಬೇಡೆಂದು ಮುರರಿಪು ತಿರುಹಿದನು ನೃಪನ ೫೩

## ಹದಿನೆಂಟನೆಯ ಸಂಧಿ

ಸೂ. ಗಂಡುಗಲಿ ಯಮತನುಜನಲಿ ಮಾ
ರ್ತಾಂಡ ತನಯನ ವಧೆಗೆ ನೇಮವ
ಕೊಂಡು ಕದನೋದ್ದಾಮದಲಿ ಹೊರವಂಟನಾ ಪಾರ್ಥ

ಕೇಳು ಧೃತರಾಷ್ಟ್ರಾವನಿಪ ಭೂ
ಪಾಲನನು ಸಾಮದಲಿ ಮುರರಿಪು
ಬೋಳವಿಸಿ ಭಾವಜ್ಞ ನಂದಿಸಿದನು ಮನೋವ್ಯಥೆಯ
ಮೇಲುಸುರ ಬಿಕ್ಕುಳಿನ ಬಿಗುಹಿನ
ತಾಳಿಗೆಯ ನೀರುಗಳ ಮುಕ್ಕುಳಿ
ನಾಲಿಗಳ ನರನಾಥ ತೆಗೆದಪ್ಪಿದನು ಫಲುಗುಣನ ೧

ಒರಲುತರಸನ ಮುರುಚಿಕೊಂಡಡಿ
ಗೆರಗೆ ಕೈಯೊಡನವನಿಪತಿ ಮುರಿ
ದೆರಗಿ ಪಾರ್ಥನ ಸೇರಿ ತಕ್ಕೈಸಿದನು ಗೋಳಿಡುತ
ಮುರುಗಿದಳು ದ್ರೌಪದಿ ಧೃಗಂಬುಗ
ಳೊರತೆಯಲಿ ಸಹದೇವ ನಕುಳರ
ಲರಿಯೆನುಪಮಿಸಲವರ ಬಹುಳಾಕ್ರಂದನ ಧ್ವನಿಯ ೨

ಮುರಹರನ ಮಂತ್ರದಲಿ ಶೋಕ
ಜ್ವರಕೆ ಬಿಡುಗಡೆಯಾಯ್ತು ಬಳಿಕಿನೊ
ಳರಸ ಸಿರಿಮೊಗದೊಳೆಮ ವಸನಾಂಚಲದೊಳಾನನವ
ಒರಸಿ ಪಾರ್ಥನ ಸಂತವಿಸಿ ಮುಂ
ದಿರಕೆ ಬಿಜಯಂಗೈದು ಮುದದಲಿ
ಕರಸಿ ಕಾಣಿಕೆಗೊಂಡು ಪರಿವಾರವನು ಮನ್ನಿಸಿದ ೩

ಇಟ್ಟಣಿಸುವರಿಸೈನ್ಯ ಜಲಧಿಗೆ
ಕಟ್ಟೆಯಾದನು ಭೀಮನೊಬ್ಬನ
ಬಿಟ್ಟು ನೋಡುವುದುಚಿತವೇ ಪರಿವಾರ ಪಂಥದಲಿ
ಕೊಟ್ಟ ನೇಮವ ಯಮಳರಿಗೆ ಜಗ
ಜಟ್ಟಿ ಸಾತ್ಯಕಿ ಕಮಲಮುಖಿಯೊಡ
ಹುಟ್ಟಿದನು ಮೊದಲಾಗಿ ನೃಪಜನವೇಳಿ ನೀವೆಂದ ೪

ದೇವ ಪರಿವಾರಕ್ಕೆ ನೇಮವ
ನೀವ ಸಮಯದಲಿಂದು ನಿಮ್ಮ ಕೃ
ಪಾವಲೋಕನವಾದುದೆನ್ನ ಪರಾಕ್ರಮಾನಳಕೆ
ಜೀವಸಖನಲ್ಲಾ ಸುಯೋಧನ
ನಾವ ಪಾಡು ವಿರೋಧಿಕುಲ ವಿ
ದ್ರಾವಣಕೆ ಕೊಡು ತನಗೆ ನೇಮವನೆಂದನಾ ಪಾರ್ಥ ೫

ಬರೆಸು ಭಾಷೆಯನಿಂದು ಕರ್ಣನ
ಶಿರವುಳಿದು ತಾವರೆಯ ನಗೆ ಪೈ
ಸರಿಸಿದರೆ ಮೈಬೆಸುಗೆ ಬಿಟ್ಟರೆ ಜಕ್ಕವಕ್ಕಿಗಳ
ಇರುಳ ಬೀಜವನಿಂದು ನಭದಲಿ
ಹರಹಿದರೆ ಕಲಿ ಭೀಮನಯ್ಯನ
ಪರಹು ನಿಂದರೆ ಬಳಿಕ ನಿಮ್ಮಯ ತಮ್ಮನಲ್ಲೆಂದ ೬

ಖಳನ ಹಿಂಸಾಪರನ ಡಂಬನ
ಚಳಮತಿಯ ನಾಸ್ತಿಕನ ನಿಂದಾ
ಕುಳನ ಪರಧನಬಾಧಕನ ದತ್ತಾಪಹಾರಕನ
ಜ್ವಲನದನ ಶಿಶುಘಾತಕನ ಪರಿ
ದಳಿತಧರ್ಮನ ಗತಿಗಳಲಿ ತಾ
ನಿಳಿವೆನಿಂದೇ ಕೊಲ್ಲದಿರ್ದರೆ ಸೂತನಂದನನ ೭

ನೀನಿನಿತ ನೆರೆ ನುಡಿವರೇ ತ
ನ್ನಾಣೆ ಬಾರೈ ತಂದೆ ಬಾ ಎನು
ತಾ ನರೇಶ್ವರ ತೆಗೆದು ಬಿಗಿಯಪ್ಪಿದನು ಫಲುಗುಣನ
ದಾನವಾಮರರೊಳಗೆ ನಿನಗೆ ಸ
ಮಾನ ಭಟರಿಲ್ಲೆಂಬುದೀ ಸ್ನೇ
ಹಾನುಗುಣವೇ ಲೋಕವರಿಯದೆ ಪಾರ್ಥ ಹೇಳೆಂದ ೮

ತಾಯೆನುತ ಘನ ಸಾರದುರು ತವ
ಲಾಯಿಗಳ ನೂಕಿದನು ಮುದದಲಿ
ಬಾಯ ತಂಬುಲವಿತ್ತು ತಮ್ಮನ ಮತ್ತೆ ತಕ್ಕೈಸಿ
ರಾಯ ಕೇಳ್ಕೆ ಬಳಿಕಖಿಳ ದಳ
ನಾಯಕರ ಕರೆಕರೆದು ಕದನ ಪ
ಸಾಯತರಿಗಿತ್ತನು ನೃಪತಿ ಕರ್ಪೂರದ ವೀಳೆಯವ ೯

ನೇಮವಾಯಿತು ಮತ್ತೆ ನೃಪತಿ
ಸ್ತೋಮವರ್ಜುನನೊಡನೆ ಕದನೋ
ದ್ದಾಮರುಬ್ಬರಿಸಿದರು ಪತಿಕರಣೆಗೆ ಮಹೀಪತಿಯ
ಸೋಮಕರು ನಕುಲಾದಿಗಳು ಸುತ
ಸೋಮಕಾದಿ ಕುಮಾರರಖಿಳ ಸ
ನಾಮರೆದ್ದುದು ತೊಡರ ಝಣಝಣ ರವದ ಖಡೆಯದಲಿ ೧೦

ನುಡಿವ ವಾದ್ಯದ ಜಡಿವ ಕಹಳೆಯ
ಹೊಡೆವ ಭೇರಿಯ ರವದ ರಭಸದೊ
ಳೊಡೆದುದಾ ದಿಗುಭಿತ್ತಿಯೆನೆ ಚಲಿಸುವ ಚತುರ್ಬಲದ
ತುಡುಕು ಚಮರಿಯ ಝಾಡಿಗೆದರಿನ
ಗಡಣಿಸುವ ಝಲ್ಲರಿಯ ದಳ ಬರ
ಸಿಡಿಲ ಮೇಳವದಂತೆ ನೆರೆದುದು ನೃಪತಿಯಿದಿರಿನಲಿ ೧೧

ವೀರ ಸೇಸೆಯನಿಕ್ಕಿ ರಾಯನ
ನಾರಿ ಪರಸಿದಳಖಿಳ ವಿಪ್ರರ
ಚಾರು ಚಾತುರ್ವೇದ ಮಂಗಳಸೂಕ್ತ ಘೋಷದಲಿ
ತೇರನೇರಿದನಸುರರಿಪು ಸಹಿ
ತಾರುಘಟೆಯಲಿ ನೂಕಿದವು ರತು
ನಾರತಿಯ ತಳಿಗೆಗಳು ವರ ಕಾಂತಾ ಕದಂಬದಲಿ ೧೨

ಕೊಡೆ ಗರಿಗಟ್ಟಿದವು ರಥದಲಿ
ಹೂಡಿದಶ್ವವ್ರಾತವಾನೆಗ
ಳೀಡಿರಿದು ಬರಿಕಯ್ಯನೆತ್ತಿದವೊಲೆದವಡಿಗಡಿಗೆ
ಜೋಡಿಸಿತು ಜಯ ಜಯ ಜಯಧ್ವನಿ
ಕೂಡೆ ಜಗದಗಲದಲಿ ಬಿರುದುಪ
ಾಡಗಳ ಮೊಗನೆಗಹಿ ಹೊಗಳಿತು ವಂದಿ ಸಂದೋಹ ೧೩

ನಿಳಯವನು ಹೊರವಂಟು ಬೀದಿಗ
ಳೊಳಗೆ ಬರೆಬರೆ ಮುಂದೆ ಮೋಹಿದ
ತಳಿಗೆದಂಬುಲ ವೀರಸೇಸೆಯ ಮಂಗಳಾರತಿಯ
ಫಲ ಸಮೂಹದ ಕಾಣಿಕೆಯ ಕೋ
ಮಲೆಯರುಪ್ಪಾರತಿಯ ಮನೆಮನೆ
ಗಳಲಿ ಮನ್ನಿಸಿಕೊಳುತ ಪಾಳೆಯದಿಂದ ಹೊರವಂಟ ೧೪

ಮೇಲೆ ಮೊಳಗುವ ದೇವದುಂದುಭಿ
ಜಾಲದೊಸಗೆಯ ಪಕ್ಷಿಮೃಗದನು
ಕೂಲ ಶಕುನದ ಸೌಮನಸ್ಯದ ಸಾಧುವಾದದಲಿ
ಲಾಲನೆಯ ಮೈವಳಿಯ ಲಳಿಯ ವಿ
ಶಾಲ ಮಂದಾನಿಲನಖಿಳ ಭೂ
ತಾಳಿ ಸಂತೋಷದಲಿ ಪತಿಕರಿಸಿತು ಧನಂಜಯನ ೧೫

ನಡೆದು ಬಂದುದು ರಾಯದಳ ಮುಂ
ಗುಡಿಯ ವಾದ್ಯಧ್ವನಿಯ ಥಟ್ಟಣೆ
ತುಡುಕಿತರಿ ಚತುರಂಗ ಚಪಳರ ಕರ್ಣ ಕೋಟರವ
ನಡುಗಿದವು ಕೈದುಗಳು ಜೋಧರ
ಕೊಡಹಿದವು ಗಜರಾಜಿ ವಾಜಿಯ
ಗಡಣವೀಡಾಡಿದವು ರಾವುತರನಿವರ ಥಟ್ಟಿನಲಿ ೧೬

ಅರಸ ಕೇಳೈ ಸಮರಭೂಮಿಗೆ
ಪರಿದರರಸಾಳುಗಳು ರಾಯನ
ಸಿರಿಮುಡಿಗೆ ಸುಕ್ಷೇಮ ಮುಟ್ಟಿದವೇರುಮದ್ದಿನಲಿ
ಮರಳಿ ನೇಮವ ಕೊಂಡು ಫಲುಗುಣ
ಬರುತಲೈದನೆ ಜೀಯ ನಿಮ್ಮಯ
ಚರಣ ಸರಸಿಜದಾಣೆಯೆಂದರು ಭೀಮಸೇನಂಗೆ ೧೭

ಜೋಡು ಬಿರಿದುದು ಹರುಷಜಲ ಕಡೆ
ಗೋಡಿವರಿದುದು ರೋಮಪುಳಕದ
ಬೀಡು ಬಿಟ್ಟುದು ಮೈಯನುಬ್ಬಿದನೊಲೆದನಡಿಗಡಿಗೆ
ನೀಡುವರೆ ತಳುವೆನುತ ತೆಗೆದೀ
ಡಾಡಿದನು ದೂತರಿಗೆ ರತಿನದ
ಜೋಡಣೆಯ ಭುಜ ಕಂಠ ಕರ್ಣಾಂಘ್ರಿಗಳ ಭೂಷಣವ ೧೮

ರಾಯ ಹದುಳಿಸಿದನೆ ಮಹಾದೇ
ವಾಯಿದೆತ್ತಣ ಪುಣ್ಯವೋ ರಣ
ದಾಯಸವ ಸೈರಿಸಿದ ತನಗಿದು ಸಫಲವಾಯಿತಲ
ದಾಯ ಬಂದುದು ನಮಗೆ ಹೋ ಲೇ
ಸಾಯಿತೇಳು ವಿಶೋಕ ಸಾಕುಳಿ
ದಾಯುಧದ ಪರಿಗಣಿತವನು ಹೇಳೆಂದನಾ ಭೀಮ ೧೯

ಉಳಿದ ಕೈದುಗಳೇಸು ಬಂಡಿಯ
ಲುಳಿದ ಸರಳಿನ ಹೊದೆಯ ಲೆಕ್ಕವ
ತಿಳಿದು ಹೇಳೈ ತಂದೆ ಸಾರಥಿ ನೋಡಲಹುದಿನ್ನು
ಅಳಲಿಸಿದ ಕೌರವನ ರಕ್ತದ
ಮಳೆಯೊಳಲ್ಲದೆ ತನ್ನ ಕೋಪಾ
ನಳನ ಝಳವಡಗದು ಯುಧಿಷ್ಠಿರ ರಾಯನಾಣೆಂದ ೨೦

ಅರಸ ಚಿತ್ತವಿಸುಳಿದ ಧನು ಹ
ನ್ನೆರಡುಸಾವಿರ ಬಲುಸರಳು ಹ
ನ್ನೆರಡುಸಾವಿರ ಬೋಳೆಯೈನೂರರ್ಧಚಂದ್ರಶರ
ಪರಿಗಳಿತ ಲುಳಿಯಂಬು ಕಣಗಿಲ
ಸರಳುಗೂಡಿಪ್ಪತ್ತು ಸಾವಿರ
ವೆರಡುಸಾವಿರವುಳಿದವೀ ನಾರಾಚ ನಿಕರದಲಿ ೨೧

ಆಲಿಸೈ ಮುಂಗುಳಂಬು ಸಾವಿರ
ವೇಳು ಬಳಿಕೊಂಬತ್ತು ಸಾವಿರ
ಕೋಲು ವೀಂಟೆಯ ಕವಲುಗಣೆ ಹನ್ನೆರಡುಸಾವಿರವು
ಮೇಲೆ ಸಾವಿರ ನಾಲ್ಕು ಮುಮ್ಮೊನೆ
ಬೋಳೆಯಂಬೀರೈದುಸಾವಿರ
ನಾಳಿಯಂಬುಗಳಾರುಬಂಡಿಯ ಲೆಕ್ಕವಿದೆಯೆಂದ ೨೨

ಪರಶು ಮುಸಲ ಮುಸುಂಡಿ ಸೆಲ್ಲೆಹ
ಪರಿಘ ತೋಮರ ಚಕ್ರವಸಿ ಮು
ದ್ಗರ ತ್ರಿಶೂಲ ಕಠಾರಿ ಖೇಟಕ ಪಿಂಡಿವಾಳಜಯ
ಸುರಗಿ ಮೊದಲಾದಖಿಳ ಶಸ್ತ್ರೋ
ತ್ಕರವನೊಂದೇ ಬಂಡಿಯಲಿ ಸಂ
ವರಿಸಿದೆನು ರಿಪುರಾಯರೊಡಲಲಿ ಬೀಯಮಾಡೆಂದ ೨೩

ಪೂತು ಸಾರಥಿ ಈಸುಬಾಣ
ವ್ರಾತವುಳಿದುದೆ ತನ್ನ ಕರ ಕಂ
ಡೂತಿಯನು ಕಳಚುವೆನಲಾ ಕೌರವನ ನೆತ್ತಿಯಲಿ
ಆತನೇನಾದನು ಯುಧಿಷ್ಠಿರ
ಸೋತು ಪಿಂಗಿದನೆಂಬ ಹಂಬಲ
ಬೀತುದಿನ್ನೇನೆನ್ನ ನೋಡಾ ಎನುತ ಗರ್ಜಿಸಿದ ೨೪

ಚಳಯದಲಿ ಫಲುಗುಣನ ಮೋಹರ
ಕಳನ ಪೊಕ್ಕುದು ಹಲವು ಮೊನೆಯಲಿ
ತಳಿತು ನಿಂದುದು ಜಡಿವ ಬಹುವಿಧವಾದ್ಯರಭಸದಲಿ
ಅಳುಕಿತೀ ನಮ್ಮವರು ಭೀಮನ
ಸುಳಿವಿನಲಿ ಸೊಪ್ಪಾದೆವರ್ಜುನ
ನೆಳತಟಕೆ ನಿಲವೆಂತೆನುತ ನೆಗ್ಗಿದುದು ದುಗುಡದಲಿ ೨೫

ದಳದ ಮಧ್ಯದೊಳೊಂದು ರಥದಲಿ
ಹೊಳೆದು ದುವ್ವಾಳಿಸಿ ಧನಂಜಯ
ನಿಲಿಸಿದನು ನಿಜರಥವ ಭೀಮನ ರಥದ ಮುಂಬಿನಲಿ
ಬಳಿಕ ತನ್ನಿಂದಾದ ಕೋಳಾ
ಹಳವನಾ ತರುವಾಯಲವ್ವಾ
ಕುಳ ಸಮಾಧಾನವನು ಬಿನ್ನಹಮಾಡಿದನು ಪಾರ್ಥ ೨೬

ಜನಪ ಕೇಳ್ಳೈ ಬಳಿಕ ಭೀಮಾ
ರ್ಜುನರ ಮೋಹರಕ್ಕೈದುಸಾವಿರ
ಕನಕಮಯರಥಸಹಿತ ಬಿಟ್ಟನು ಶಕುನಿ ಸೂಠಿಯಲಿ
ಅನಿಲಸುತನರ್ಜುನನ ನೀ ಸಾ
ರೆನುತ ಕೆದರಿದನಹಿತನಂಬಿನ
ಮೊನೆಯೊಳಳ್ಳಿರಿದೌಕಿ ತಂಡುಂಕುವ ತೇರ ತೆಕ್ಕೆಯಲಿ ೨೭

ಒಂದು ಶರಸಂಧಾನದಲಿ ಕವಿ
ತಂದವೈಸಾವಿರ ರಥಾವಳಿ
ಯೊಂದು ಧನುವಿನೊಳೀತ ಮೊಗೆದನು ಸರಳಸಾಗರವ
ಸಂದಣಿಸಿತಾ ರಥಿಕರಾ ಹಯ
ವೃಂದವಾ ಸಾರಥಿಗಳಾ ರಥ
ಕೊಂದುಹತ್ತರ ಲೆಕ್ಕದಲಿ ಮಿಕ್ಕವು ಶರವ್ರಾತ ೨೮

ಒಗ್ಗಿನೈಸಾವಿರ ರಥಾವಳಿ
ಮುಗ್ಗಿದವು ಕಣೆ ತಾಗಿ ರಥಿಕರು
ನೆಗ್ಗಿದರು ಮೇಲಂಬು ಸುಳಿದೊಯ್ದವು ಸಜೀವಿಗಳ
ಒಗ್ಗೊಡೆದು ಕಲಿಶಕುನಿ ಘಾಯದ
ಸುಗ್ಗಿಯಲಿ ಲಘುವಾಗಿ ಹರುಷದ
ಮುಗ್ಗಲೊಣಗಿಲ ಮೋರೆಯಲಿ ತಿರುಗಿದನು ಮೋಹರಕೆ ೨೯

ಶಕುನಿ ಮುರಿದನು ಬೇಹ ದಳನಾ
ಯಕರು ತಿರುಗಿತು ಭೀಮಸೇನನ
ವಿಕಟ ಸಿಂಹಧ್ವನಿಗೆ ಜರಿದುದು ಭಟರ ಬಲುಹೃದಯ
ಅಕಟಕಟ ಕುರುಸೇನೆ ನಿರ್ನಾ
ಯಕವಲಾ ಹಾ ಎನುತ ಮಂತ್ರಿ
ಪ್ರಕರ ಮರುಗಿತು ತುರುಗಿತಲ್ಲಿಯದಲ್ಲಿ ಕಳವಳಿಸಿ ೩೦

## ಹತ್ತೊಂಬತ್ತನೆಯ ಸಂಧಿ

ಸೂ. ರಾಯ ಚೌಪಟಮಲ್ಲ ಮಲೆವರಿ
ರಾಯ ಧೂಳೀಪಟ್ಟ ಗರ್ವಿತ
ರಾಯ ಭೀಕರ ಭೀಮ ಕೊಂದನು ಕೌರವಾನುಜನ

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳು ತಲೆಕೆಳಗಾಯ್ತು ಭೀಮನ
ಧಾಳಿ ಹೆಚ್ಚಿತು ಹೊಸತು ದಶಕದ ಮಸಕ ಮಿಗಿಲಾಯ್ತು
ಮೇಲೆಮೇಲುಬ್ಬೇಳ್ವ ರಿಪುಶರ
ಜಾಲ ಧಾರಾಧೂಮವಹ್ನಿ
ಜ್ವಾಲೆಗುರೆ ತೇರ್ಸೈಸಿ ಕೋರ್ಸೈಸಿತು ಕುರುಸ್ತೋಮ ೧

ಉಲುಕಲಮ್ಮುವರಿಲ್ಲಲಾ ಭಟ
ರಳುಕಿದರೆ ಭಾರಂಕದವರ
ಗ್ಗಳೆಯ ಬಿರುದರು ಬೀತರೇ ಸೋತರೆ ಪಲಾಯನಕೆ
ಹಲವು ಮಾತೇನೆಮ್ಮ ಮಾವನ
ಕಳನ ಹರಿಬಕೆ ನಾವೆ ಇನ್ನೈ
ಸಲೆ ಎನುತ ನೆರಹಿದನು ನಿನ್ನ ಕುಮಾರಕನು ದಳವ ೨

ಆ ವಿಗಡ ಪರಿವಾರದಲಿ ರಥ
ಸಾವಿರವ ಮೇಳೈಸಿದರು ದಂ
ತ್ಯಾವಳಿಯ ಬೇರೆಣಿಸಿ ನಿಲಿಸಿದರೈದುಸಾವಿರವ
ರಾವುತರೊಳಗ್ಗಳೆಯರನು ದಶ
ಸಾವಿರವ ಜೋಡಿಸಿದರಿನಿಬರು
ಸಾವನೇ ನಿಶ್ಚೈಸಿ ಬಿಗಿದರು ವೀರಕಂಕಣವ ೩

ಕುಡಿತೆಯಲಿ ಕರ್ಪೂರವ ಸುರಿಸುರಿ
ದೊಡನೆ ಸಾದು ಜವಾಜಿಲೇಪವ
ಮುಡಿವ ಹೊಸಹೂಗಳನು ವರಗಂಧಾನುಲೇಪನದ
ಉಡುಗೊರೆಯ ವೀಳೆಯದ ರತ್ನದ
ತೊಡಿಗೆಗಳಲಾ ಪಟುಭಟರ ಮಂ
ಗಡವ ಮನ್ನಿಸಿ ನಿನ್ನ ಮಗನನುವಾದನಾಹವಕೆ ೪

ಬಲದೊಳಗೆ ಹೆಸರುಳ್ಳವರು ನೃಪ
ತಿಲಕ ನೀ ಸಾಕಿದ ಕುಮಾರರು
ಹಳೆಯರಲಿ ಮಿಕ್ಕವರು ಮಕ್ಕಳ ತಂಡದಲಿ ಕೆಲರು
ಆಳಲಿಗರು ದುಶ್ಯಾಸನನ ಬಲ
ದೊಳಗೆ ನಿಂದುದು ಸಾಲಸಿಡಿಲಿನ
ಬಳಗವೋ ನಿನ್ನವರ ಬಣ್ಣಿಸಲರಿಯೆ ನಾನೆಂದ ೫

ಸಾಲ ಸಿಂಧದ ಮಣಿವ ಗೋವಳಿ
ಗೋಲ ತೂಕದ ತಳಿತ ಚೌರಿಯ
ಜಾಲವೋಹಿದ ಮೇಘಘಟೆಯೆನೆ ಜಡಿವ ಝಲ್ಲರಿಯ
ಜಾಳಿಗೆಯ ಹೊಗರೊಗುವ ವಹ್ನಿ
ಜ್ವಾಲೆಯೆನೆ ಝಳಪಿಸುವ ಕೈದುಗ
ಳೋಳಿ ಹೊಳೆದುದು ಸೆಳೆದುದೀತನ ಗರ್ವವಿಭ್ರಮವ ೬

ಹರೆದ ಬಲ ಹುರಿಗಟ್ಟಿ ಖತಿಯಲಿ
ದೊರೆಯ ಕೂಡೊದಗಿದುದು ಬೀರುವ
ಬಿರುದುಗಹಳೆಯ ದನಿಯ ಘಾಯದ ಭೂರಿ ಭೇರಿಗಳ
ಮೊರೆವ ಬಹುವಿಧ ವಾದ್ಯರಭಸದ
ಧರಧುರದ ಕೆಂಧೂಳಿಯಲಿ ಮೋ
ಹರಿಸಿ ಮುಸುಕಿತು ಭೀಮಸೇನನ ರಥದ ಬಳಸಿನಲಿ ೭

ಸಾರಹೇಳೋ ರಾಯಕುವರ ಮು
ರಾರಿ ದುಶ್ಯಾಸನ ಕಣಾ ಘಡ
ವೈರಿ ಭೀಮ ದ್ವಿರದ ಕುಂಭಸ್ಥಳಕೆ ಪಂಚಮುಖ
ವೀರಮನ್ಮಥ ತ್ರಿಪುರಹರ ಜು
ಜ್ಝಾರ ಭಟ ಜಗಜಟ್ಟಿಗಿದಿರೆ ವಿ
ಕಾರಿಯೋ ಘಡ ಭೀಮನೆನುತ್ತೈದಿತು ಭಟಸ್ತೋಮ ೮

ದಾಯವಿದು ಮರುಖ ಪೂತು ರಣದ ವಿ
ಡಾಯಿಯಹುದೋ ಕಲಿ ಯುಧಿಷ್ಠಿರ
ರಾಯನಾಣೆ ಸುಯೋಧನಾನುಜನೋಜೆ ಲೇಸೆನುತ
ವಾಯುಸುತನಾಕರ್ಣ ಕರುಷಿತ
ಸಾಯಕನು ರಿಪುಸುಭಟಕುಲ ಲಯ
ದಾಯಕನು ದಳದುಳವ ಹಾಯ್ದನು ವೈರಿಮೋಹರವ ೯

ನುಸಿಗಳೆನ್ನೆವು ನೀವು ಜಗಸಾ
ಹಸಿಕರೈ ಕಾಲಾಳು ಜೋಧ
ಪ್ರಸರದೆಸುಗೆಗೆ ಹೆದರುವೆವು ಹೇರಾಳದಂಬುಗಳ
ದಶಕವುಳ್ಳವರಹಿರಿ ಸಮರಥ
ವಿಷಮರಾವ್ಮರು ನೋಡುತಿರಿ ಸರ
ಳಿಸಲಿ ನಿಮ್ಮಯ ದೊರೆಗಳೆನುತುರವಣಿಸಿದನು ಭೀಮ ೧೦

ಸಾರಿರೈ ಕಾಲಾಳು ರಥಿಕರು
ಸಾರಿರೈ ರಾವುತರು ಜೋಧರು
ಭಾರಣೆಯಲಿರಿ ದೊರೆಯನರಸುವ ಬಯಲ ಬೊಬ್ಬೆಗಳ
ಆರುಭಟೆಗಾರಳುಕುವರು ಪರಿ
ವಾರ ಕೈಮಾಡದಿರೆನುತ ಕುರು
ವೀರನನುಜರು ತರುಬಿದರು ಪವಮಾನನಂದನನ ೧೧

ಸದಿಫದೇನಿದು ತಮ್ಮ ತಲೆಗಳಿ
ಗೊಡೆಯರಲ್ಲದೆ ಕೌರವಾನುಜ
ರೊಡೆಯರೇ ಪರಿವಾರದಭಿಮಾನಾವಮಾನದಲಿ
ಬಿಡುವವರು ನಾವಲ್ಲ ಭೀಮನ
ಕಡಿಯೊಳಗೆ ಕಡಿವೆರಸಿ ನೆತ್ತರು
ಗುಡಿಯೆವೇ ತಾವೆನುತ ದಳ ಮುಕ್ಕುರುಕಿತನಿಲಜನ ೧೨

ಏನ ಹೇಳುವೆನರಸ ತೂಳಿದ
ವಾನೆಗಳು ನಾರಾಚನಿಚಯದ
ಸೋನೆ ಸುರಿದುದು ಭೀಮಸೇನನ ರಥದ ಶಿಖರದಲಿ
ಭಾನುಬಿಂಬವ ಮೊಗೆವ ಲೌಡೆಯ
ಮಾನಸದ ಧಕ್ಕಡರು ಕಲಿ ಪವ
ಮಾನತನಯನ ಮುತ್ತಿಕೊಂಡರು ರಾಯರಾವುತರು ೧೩

ಬಳಸಿನಲಿ ಚಾಚಿದವು ರಥಸು
ಕುಳ ಪದಾತಿಯ ಕೈದು ಮೀರಿದ
ವಳವಿಯಲಿ ಮೊನೆಗಾಣಿಸಿದರರಿಸೂತವಾಜಿಗಳ
ಸಿಲುಕಿದನು ಘಡ ಸ್ವಾಮಿದ್ರೋಹಿಗೆ
ಬಲೆಯ ಹಾಯಿಕೊ ಗಂಡುಮೀನ
ಗ್ಗಳೆಯ ಗಾಣವ ಕೊಳ್ಳದೆನುತೌಕಿದರು ಬಳಸಿನಲಿ ೧೪

ಧೂಳು ಮುಸುಕಿತು ಸುತ್ತುವಳಯದ
ಲಾಳು ಹೊಕ್ಕುದು ಹೊಯ್ಲು ಹೊದರಿನ
ಬಾಳುಗಿಡಿಗಳ ಖಣಿಖಟಿಲ ಘಲ್ಲಣೆಯ ಗರ್ಗರದ
ಮೇಲುಮೇಲುಬ್ಬೇಳ್ವ ಬೊಬ್ಬೆಯ
ತೂಳುವರೆ ಕಹಳೆಗಳ ಘೋಳಾ
ಘೋಳಿ ಮುಸಗಿತು ಭೀಮಸೇನನ ರಥದ ಬಳಸಿನಲಿ ೧೫

ಆಳಲಿಗರಲೇ ಕೌರವಾನುಜ
ರಳುಕದಿರಿದರಲೈ ವಿಘಾತಿಗೆ
ಸಿಲುಕದಿರನೋ ಭೀಮನೆನುತುಬ್ಬಿದರು ನಿನ್ನವರು
ಜಲನಿಧಿಯೊಳುಬ್ಬೆದ್ದ ತೆರೆಯಲಿ
ಮುಳುಗುವುದೆ ಮಂದರವೆನುತ ಕಳ
ವಳಿಸಿದವರೇನರಿಯರೇ ತಮ್ಮವನ ಕೈಗುಣವ ೧೬

ತೆಗಸಬೇಹುದು ಪವನಜನ ಮು
ತ್ತಿಗೆಯನೆನುತುರವಣಿಪ ನಕುಲಾ
ದಿಗಳ ಕಂಡನು ಕರೆದು ಮರುಳಾಡಿದನು ಕಲಿಪಾರ್ಥ
ತೆಗಸಬೇಹುದು ತರಣಿಬಿಂಬವ
ತಗುಳ್ದ ತಿಮಿರವ ನಿಮ್ಮ ಹಂಗಿನ
ನುಗುಳಗಂಡಿಯ ನುಸುಳುಂದಲೆಗನೆ ಮರಳಿ ನೀವೆಂದ ೧೭

ಮಾತು ಹಿಂಚಿತ್ತಿದು ವಿಲಂಬಿಸ
ದಾತ ಮುರಿದನು ಮುತ್ತಿದಿಭಸಂ
ಘಾತವನು ಪಲ್ಲಟಿಸಿ ಕಡಿ ಕೊಟ್ಟಿದನು ತೇರುಗಳ
ಆತು ತಾಗಿದ ರಾವುತರ ಸುರ
ಜಾತಿಯಲಿ ಕಂಡೆಸು ಪದಾತಿ
ವ್ರಾತ ಪಾಣಿಗ್ರಹಣವನು ಗೀರ್ವಾಣವಧುಗಳಲಿ ೧೮

ಬಲನೆಡನ ಗದೆ ಖಡುಗದಲಿ ರಿಪು
ಜಲನಿಧಿಯನೀಸಾಡಿದನು ಹೆ
ಬ್ಬಲದ ಹೆಬ್ಬೆಳೆ ಸಾಲಕೊಯ್ಲಿನ ಮೆದೆಗಳೊಟ್ಟಿಲಲಿ
ತಳಕುಗಳ ವರ ರಥ ಹಯದ ಹೊಸ
ಮೆಳೆಯ ಕಡಿತದ ಕರಿಘಟಾಳಿಯ
ಬಲುಮೊರಡಿಗಳ ಸವರಿ ತಳಪಟವಾಡಿದನು ಭೀಮ ೧೯

ಅಸಿಯಲಿಟ್ಟರೆದಂತೆ ಬಲ ನಿ
ಪ್ಪಸರದಲಿ ಸುಗ್ಗಾಯ್ತು ನೀಗಿದ
ರಸುವನೀ ದುಶ್ಯಾಸನನ ನಂಬುಗೆಯ ಪರಿವಾರ
ಬಸಿವ ನೆತ್ತರ ಮೆಯ್ಯ ಕರುಳಿನ
ಕುಸುರಿಗಳ ತಲೆವಿಂದುಳ ಮೆತ್ತಿಗೆ
ವಸೆಯ ತೊರಳೆಯ ತೊಂಗಲಲಿ ರಂಜಿಸಿತು ರಣಭೂಮಿ ೨೦

ಹೋರಿ ಹಂಗಿಗರಾದೆವೇ ಪರಿ
ವಾರ ನೆರೆದುದು ನಾಕದಲಿ ತೆಗೆ
ವೀರಕಂಕಣವೇಕೆನುತ ದುರಿಯೋಧನಾನುಜರು
ತೇರ ಸೂತನ ಸೂಚನೆಯ ಚೀ
ತ್ಕಾರ ಪರಿಧಾವನೆಯ ಧೂಳಿಯ
ಲೋರಣದ ಭಾರಣೆಯಲೈದಿದರನಿಲನಂದನನ ೨೧

ಇಂದಲೇ ನೀವ್ ಗದೆಯ ಹಬ್ಬಕೆ
ಬಂದಿರೈ ಲೇಸಾಯ್ತು ನೀವೇ
ನೆಂದಿರೈ ನಿಮ್ಮಣ್ಣದೇವನ ಮುಂದೆ ಭಾಷೆಗಳ
ತಂದಿರೈ ತಳ್ಳಂಕವನು ನಮ
ಗೆಂದು ಕೊಡುವಿರಿ ಕೌರವನ ತ
ಮ್ಮಂದಿರೈ ನೀವೆನುತ ಸುಳಿದನು ಸಿಂಹನಾದದಲಿ ೨

ಗಿಡಿಗನೆತ್ತಲು ಗಿಣಿಯ ಮರಿಗಳ
ಗಡಣವೆತ್ತಲು ತೋಳನೆತ್ತಲು
ತೊಡಕುವರೆ ತಗರೆತ್ತಲಿವರಿಗೆ ಗೆಲವು ಸೋಲವನು
ನುಡಿಯಲಮ್ಮೆನು ನಿನ್ನ ಮಕ್ಕಳ
ಮಿಡುಕಿನಂತರವೇನು ಪ್ರಳಯದ
ಸಿಡಿಲ ಬಲುಹೋ ಭೀಮನೋ ನಾವರಿಯೆವಿದನೆಂದ ೨೩

ಘಟ್ಟಿಗೆಡಹಿ ಕುಮಾರಕರನರೆ
ಯಟ್ಟಿ ಹೊಯ್ದನು ಕೆಲಬಲದಲಡ
ಗಟ್ಟಿದರನಪ್ಪಳಿಸಿದನು ಚಿಗಿದಾನೆವರಿವರಿದು
ಇಟ್ಟಣಿಸಿ ಹೊಕ್ಕೆಸುವವರ ಹುಡಿ
ಗುಟ್ಟಿದನು ಹೆಣಸಾಲಿನಲಿ ಮಡು
ಗಟ್ಟಿ ನಿಂದುದು ರಕ್ತಜಲ ನರನಾಥ ಕೇಳೆಂದ ೨೪

ಒಂದು ಹಲಗೆಯಲೈದು ಹರಿಬಕೆ
ಬಂದು ಹೊಕ್ಕವರೈದು ಖತಿಯಲಿ
ಹಿಂದ ಕೆಣಕಿದರೆಂಟು ಮಗುಳಿಬ್ಬರನು ಕದನದಲಿ
ಕೊಂದನಿಂತಿಪ್ಪತ್ತು ನಿನ್ನಯ
ನಂದನರು ನೀಗಿದರು ನೆಲನನು
ನಿಂದು ಕರೆದನು ಬಳಿಕ ದುಶ್ಶಾಸನನ ಕಲಿಭೀಮ ೨೫

ಧಾರುಣೀಪತಿ ಕೇಳು ನಿನ್ನ ಕು
ಮಾರರಲಿ ತೊಂಬತ್ತಯೆಂಟರ
ಪಾರುಖಾಣೆಯ ಲೆಕ್ಕ ಸಂದುದು ನಿಮ್ಮ ಚಿತ್ತದಲಿ
ಸಾರಭೂತರಲೇ ಸಮಸ್ತವಿ
ಕಾರಿಗಳೊಳೀ ವಿಶ್ವನೃಪ ಸಂ
ಹಾರರಿಬ್ಬರ ಬೀಯವನು ಮೇಲಿನ್ನು ಕೇಳೆಂದ ೨೬

ಮುರಿದುದಚ್ಚಾಳೆಚ್ಚು ಕುದುರೆಗ
ಳುರುಕುಗೊಂಡುದು ನಿನ್ನವರ ಹೊ
ಕ್ಕಿರಿದು ಹೋಗಾಡಿದರು ತನ್ನ ಸಹೋದರವ್ರಜವ
ಹೊರಗೆ ಕರ್ಣಕೃಪಾದಿಗಳು ಮೈ
ಮರೆವ ಹೊತ್ತಾಯ್ತಿವನ ನೆತ್ತರ
ಸುರಿಯದೆಡೆಯಲಿ ಬಿಡೆನೆನುತ ಪವನಜನು ಗರ್ಜಿಸಿದ ೨೭

ದೊರೆಯ ತಮ್ಮನ ತವಕ ತೋಟಿಗೆ
ತಿರುಗುತದೆ ತಡವೇನು ನೂಕೆನು
ತರಸ ಕೇಳೈ ತನತನಗೆ ದುಶ್ಶಾಸನನ ರಥವ
ಪರಿಹರಿಸಿಕೊಂಡೇರಿತೀ ದಳ
ದುರವಣೆಯ ಸೈರಿಸಿದಡವನೀ
ಶ್ವರನಲೇ ಕಲಿಭೀಮನಲ್ಲದೆ ಧೀರನಾರೆಂದ ೨೮

ನೂಕದಿರಿ ಸಂಘಟಿಸಿ ಹೋಹೋ
ಸಾಕು ಸಾಕಾ ವೆಂಚ್ಚಿದೆನು ತಳು
ವೇಕೆ ದುಶ್ಶಾಸನ ವೃಥಾ ನೀ ಹೊತ್ತುಗಳೆವೆಯಲಾ
ನೀ ಕಳೆದುಕೊಳು ಧನುವ ನಮ್ಮ ವಿ
ವೇಕವನು ದಳ ನೋಡುತಿರಲಿ ನಿ
ರಾಕುಳದಲೆಚ್ಚಾಡುವೆವು ನಿಲ್ಲೆಂದನಾ ಭೀಮ ೨೯

ರೂಢಿಸಿದ ಭಟ ನೀನು ಹರಿಬವ
ಬೇಡಿ ತೊಡಕಿದೆ ನಾನು ಖಾಡಾ
ಖಾಡಿಯಲಿ ಸಿಗುರಿಲ್ಲ ತೆಗೆ ಹಂಗೇಕೆ ತೆತ್ತಿಗರ
ನೋಡುತಿರಲೀ ಬಲವೆರಡು ಹೋ
ಗಾಡು ನಮ್ಮನು ಮೇಣು ನಿನ್ನನು
ಸೂಡುದರಿವನು ಸತ್ವದಳತೆಯ ಕಾಣಲಹುದೆಂದ ೩೦

ತೊಲಗಿರೈ ಪರಿವಾರ ಬಾಳೆಯ
ತಳಿಯ ಮುರಿವತಿಸಹಸಿ ಗಡ ಮರಿ
ಮೊಲನ ಬೇಟೆಯ ವೀರ ಗಡ ಬಾಣಪ್ರಯೋಗದಲಿ
ಸಲೆ ಮೃಗದ ಸಾಹಸಿಕ ಗಡ ಕು
ಟ್ಮಳಿತ ಕೇತಕಿ ತೀಕ್ಷ್ಣ ಗಡ ನೀ
ವಳವಿಗೊಡದಿರಿ ಎನುತ ನಿನ್ನ ಕುಮಾರನನುವಾದ ೩೧

ಪೂತು ಸುಭಟ ಸುಯೋಧನನ ಸಹ
ಜಾತನಲ್ಲಾ ಮತ್ತೆ ಕೆಲಬರಿ
ಗೀ ತವಕವೀ ಶೌರ್ಯವೀ ಬಲುಹೀಸುದಿಟ್ಟತನ
ಸೋತುದುಂಟೇ ಹೊಳ್ಳುವಾತಿನ
ಹೂತೊಡಬೆ ನಿನಗಿಲ್ಲ ಧೈರ್ಯದ
ಧಾತುವೊಳ್ಳಿತು ಕೊಳ್ಳೆನುತ ತೆಗೆದೆಚ್ಚನಾ ಭೀಮ ೩೨

ಫಡ ಎನುತ ಪವನಜನ ಬಾಣವ
ಕಡಿದು ಕೂರಂಬಿನಲಿ ಭೀಮನ
ಕೆಡೆಯೆಸುತ ಮುರಿಯೆಚ್ಚು ಮಗುಳೆಚ್ಚಂಬ ಹರೆಗಡಿದು
ಎಡೆಯಲೆಚ್ಚಂಬುಗಳನಿಬ್ಬರು
ಕಡಿದರಂಬಂಬುಗಳ ಹೋರಟೆ
ಕಿಡಿಗೆದರೆ ನಿಬ್ಬರದ ಕದನವ ಕಂಡೆನಿಬ್ಬರಲಿ ೩೩

ಸವೆಯೆ ಸರಳೆಚ್ಚಾಡಿದರು ಕಲಿ
ಪವನಸುತ ದುಶ್ಶಾಸನರ ರಣ
ದವಕಿಗರ ಕೋಪಾಗ್ನಿ ಭುಗಿಭುಗಿಲೆಂದುದಡಿಗಡಿಗೆ
ಅವನಿಗಿಳಿಬಿಡು ಧನುವ ತೆಗೆ ಖಡು
ಗವನೆನುತ ರಥದಿಂದ ಹಾಯ್ದರು
ಬವರಿಗರು ಬಿನ್ನಣದಿ ಹೊಯ್ದಾಡಿದರಡಾಯುಧದಿ ೩೪

ಚಾರಣದ ಚಮ್ಮಟದ ಖಡುಗದ
ಪಾರಗದಲುಚ್ಚಟದ ಉಳಿಯು
ಖ್ಯಾರದೊಡ್ಡಿನ ಹೊಯ್ಲ ಹೋರಟೆಗಳ ಸುರೇಖೆಗಳ
ಸಾರತರಶ್ರಮರೊದಗಿದರು ಜ
ಜ್ಝಾರರುಬ್ಬಣ ಮುರಿಯೆ ಕಾದಿ ಕ
ಠಾರಿಗಳಲೇ ತರುಬಿ ನಿಂದರು ದಂಡೆ ಮಂಡಿಯಲಿ ೩೫

ಉಳಿಯ ಪಯಪಾಡುಗಳ ದಂಡೆಯ
ಬಳಿಯ ಲೋಹದ ಲವಣಿಗಳ ಮನ
ಲಳಿಯ ಲಾಗಿನ ದೃಷ್ಟಿಯೋರೆಯ ಕೊಂಕಿದವಯವದ
ಬಲಿದ ದಂಡೆಯ ಮುರೆಯ ದೇಹದ
ತಳಿತ ಠಾಣದ ಹಜ್ಜೆ ಹಜ್ಜೆಯ
ನೆಲನ ಪಲ್ಲಟದರಿಭಟರು ಕಾದಿದರು ಖಾತಿಯಲಿ ೩೬

ಬಿಡಿಸಿದರೆ ಕುತ್ತುವ ವಿಘಾತಿಯ
ಮಡಮುರಿಯಲೇ ಕಳೆವ ದಂಡೆಯ
ತುಡುಕಿದಡೆ ನೋಡುವ ನಿವಾರಿಸಿ ಜಡಿದು ಝಳಪಿಸುವ
ಪಡಿಮುಖದೊಳಂಘೈಸಿ ಬವರಿಯ
ಲೊಡಲನೊಲೆವ ಕಠಾರಿಕಾರರ
ಬಿಡುಶ್ರಮದ ಬಿನ್ನಣಕೆ ಮರುಳು ಭಾಪೆಂದುದುಭಯಬಲ ೩೭

ಕಣೆಯಂ ಕಾಲಾಟದಲಿ ಹಿರಿಯು
ಬ್ಬಣದ ಹೋರಟೆಯಲಿ ಕಠಾರಿಯ
ಕುಣಿಹದಲಿ ಮುಸೆಗಾಣದಿದ್ದುದು ನಿನ್ನ ದೇಹದಲಿ
ರಣಮುಖದೊಳಿದು ನಮ್ಮ ಪುಣ್ಯದ
ರಿಣವಿಶೇಷ ಕಣಾ ಎನುತ ರಿಪು
ಗಣಭಯಂಕರ ಭೀಮ ನುಡಿದನು ಕೌರವಾನುಜನ ೩೮

ಸಾಕಿದೇತಕೆ ಮಲ್ಲ ಶ್ರಮದಲಿ
ನೂಕಿನೋಡುವೆವಿನ್ನು ಕೈದುಗ
ಳೇಕೆ ದೃಢಮುಷ್ಟೀ ಪ್ರಹಾರ ಪ್ರಕಟಸತ್ವರಿಗೆ
ಈ ಕುಮಾರಕರೊಳಗೆ ನೀನೇ
ಜೋಕೆಯುಳ್ಳವನಹೆ ನಿಯುದ್ಧ
ವ್ಯಾಕರಣಪಾಂಡಿತ್ಯವೆಮಗುಂಟೆಂದನಾ ಭೀಮ ೩೯

ಏಸನಗ್ಗಿಸಿಕೊಂಬೆ ನಿನಗಿ
ನ್ನೈಸು ಕೈದುಗಳಲ್ಲಿ ಕೃತವ
ಭ್ಯಾಸವಾ ಕೈದುಗಳ ಬಾಯಿಗೆ ನಿನ್ನ ಬೀರುವೆನು
ಏಸು ಬೇಹುದು ಮಲ್ಲತನ ನಿನ
ಗೈಸು ಬಿನ್ನಾಣದಲಿ ನಿನ್ನಯ
ಸೀಸವಾಳವ ಹೊಯ್ವೆನೆಂದನು ನಿನ್ನ ಮಗ ನಗುತ ೪೦

ತರಿಸಿ ಬಿಗಿದರು ಚಲ್ಲಣವ ಠ
ಪ್ಪರವನಳವಡೆಗಟ್ಟಿದರು ಕ
ಸ್ತುರಿಯ ತಿಲಕವನೊಟ್ಟಿದರು ನೊಸಲಿನಲಿ ಮುಡುಹಿನಲಿ
ಕರತಳವ ಮಾರುದ್ದಿ ಭುಜದಲಿ
ಶಿರದಲಂದಕ್ಕಡದ ಮಣ್ಣನು
ಬೆರಳಲುದುರಿಚಿ ಬಾಳುಗೆಂದರು ನೆನೆದು ನಿಂಬಜೆಯ ೪೧

ಸೂಳವಿಸಿದರು ಭುಜಶಿಖರ ನಿ
ಸ್ಸಾಳವನು ನೆಲಕುಣಿಯೆ ದಿಕ್ಕಿನ
ಮೂಲೆ ಬಿರಿಯೆ ಪಯೋಧಿಗಳಲಿ ಪಯೋಧಿ ಪಲ್ಲಟಿಸೆ
ಘೀಳಿಡಲು ಕಿವಿಗಳಲಿ ಸೇನಾ
ಜಾಳವೆರಡರೊಳುಭಯದಿಗು ಶುಂ
ಡಾಲ ಕೈಯಿಕ್ಕುವವೊಲಿವರೊತ್ತಿದರು ತೋಳ್ಗಳಲಿ ೪೨

ತೆಗೆದು ಗಳಹತ್ತದಲಿ ಕೊರಳನು
ಬಿಗಿಯೆ ಬಿಡಿಸುವ ತೋರಹತ್ತದ
ಹೊಗುತೆಯನು ವಂಚಿಸುವ ತಳಹತ್ತದಲಿ ತವಕಿಸುವ
ಲಗಡಿಯಲಿ ಲಟಕಟಿಸುವಂತರ
ಲಗಡಿಯಲಿ ಲಾಲಿಸುವ ಡೊಕ್ಕರ
ಗಳ ಬಿಗುಹಿನ ಬಿಡೆಯ ಬಿನ್ನಾಣದಲಿ ಹೆಣಗಿದರು ೪೩

ಘಾಯವೇ ಜಗಜಟ್ಟಿ ಮಲ್ಲರಿ
ಗಾಯಸವು ಜೊಕ್ಕೆಯವು ಬಿಡುವಡು
ಪಾಯ ಕೇಳೆಂದೊದೆದು ದಂಡೆಯನೊಡ್ಡಿದನು ಭೀಮ
ರಾಯ ಕೇಳ್ಳೆ ಸಿಡಿಲ ತಿವಿಗುಳ
ತಾಯಿಮನೆಯೋ ಪವನಜನ ಬಲು
ಘಾಯವೋ ಘನ ತೋರಹತ್ತರು ತಿವಿದರುರವಣಿಸಿ ೪೪

ಮೈಗೆ ಮೇಣದ ಹಾಹೆ ಸರಿ ಮುಂ
ಗೈಗೆ ಮೇರುವಿನಿರವು ದೊರೆ ಹೊರ
ಕೈಗೆ ವಜ್ರದ ಹೊಯ್ಲು ಪಡಿಘಟ್ಟಣೆ ಮಹಾದೇವ
ಕೈಗಡಿಯ ಪಟುಭಟರೊಳಗೆ ಬಲು
ಗೈಗಳೆಂದಮರಾಳಿ ಹೊಗಳಲು
ಹೊಯ್ಲುಗಳಿನ ಹೊಸನಾಟಕವನಭಿನಯಿಸಿ ಕಾದಿದರು ೪೫

ಒಂದು ಭೀಮನ ಮೇಲೆ ನಿನ್ನಯ
ನಂದನನ ಮೇಲೆರಡು ಕೊಂತೀ
ನಂದನಗೆ ನಾಲ್ಕೆಂಟು ನಿನ್ನ ಕುಮಾರನಂಗದಲಿ
ಸಂದಣಿಸಿದವು ಘಾಯ ಘಾಯದ
ಮುಂದೆ ಹೊದರೆದ್ದವು ಸುಘಾಯದ
ಬಂದಿಯಲಿ ಸಿಲುಕಿತ್ತು ನಿನ್ನ ಕುಮಾರನಂಘವಣೆ ೪೬

ತ್ರಾಣವೆಳದಾಯ್ತಖಿಳಶೌರ್ಯದ
ಚೂಣಿ ಮುರಿದುದು ಘರ್ಮಜಲವು
ಗ್ರಾಣಿಸಿತು ಭುಜಬಲವನಂಕುರಿಸಿತ್ತು ರಣಭೀತಿ
ಪ್ರಾಣಪವನನ ಬೀಡುಬಿಟ್ಟುದು
ಗೋಣಿನಲಿ ಗರುವಾಯಿಗೆಡೆ ರಣ
ಹೂಣಿಗನು ಜವಗುಂದಿದನು ದುಶ್ಶಾಸನನು ಬಳಿಕ ೪೭

ಹೊಯ್ದು ತುರುಬನು ಹಿಡಿದು ತಡೆಗಾ
ಲ್ಗೊಯ್ದು ಕೆಡಹಿದನಸಬಡಿದು ಹೊಯ್
ಹೊಯ್ದು ಬಿಡೆ ಖೊಪ್ಪರಿಸಿ ಡೊಕ್ಕರವಿಕ್ಕಿ ರಾಘೆಯಲಿ
ಹಾಯ್ದುವಾಲಿಗಳುಸುರ ಪಾಳೆಯ
ವೆಯ್ದೆ ಬಿಟ್ಟುದು ಮೂಗಿನಲಿ ಕೈ
ಗೆಯ್ದು ತುಡುಕಿದ ಶೋಣಿತಕೆ ಲಟಕಟಿಸಿದನು ಭೀಮ ೪೮

ಹರಿ ಮದೋತ್ಕಟ ದಂತಿಯನು ಡೊ
ಕ್ಕರಿಸಿ ಡಾವರಿಸುವವೊಲಾ ನರ
ಹರಿ ಹಿರಣ್ಯಕಶಿಪುವನಂಕದ ಮೇಲೆ ತೆಗೆವಂತೆ
ಅರಸ ನಿನ್ನ ಕುಮಾರಕನ ನಡು
ತರದೊಳಗೆ ಕೆಡಹಿದನು ಕೊಬ್ಬಿದ
ಮರುಷ ಹರುಷ ನಿಯುದ್ಧದಕ್ಕಡನಾದನಾ ಭೀಮ ೪೯

ಸಿಕ್ಕಿದೆಯಲಾ ಸ್ವಾಮಿದ್ರೋಹಿಯೆ
ಸೊಕ್ಕಿದೆಯಲಾ ಹಿಂದೆ ಜೂಜಿನ
ಲಕ್ಕಜವ ಮಾಡಿದೆಯಲಾ ಮಾನಿನಿಯ ಮುಡಿವಿಡಿದು
ಚುಕ್ಕಿಗಳಲಾ ನಿನ್ನವರು ಕೈ
ಯಿಕ್ಕ ಹೇಳಾ ನಿನ್ನನೊಬ್ಬನ
ನಿಕ್ಕಿ ನೋಡಿದರಕಟೆನುತ ಮೂದಲಿಸಿದನು ಭೀಮ ೫೦

ಉಕ್ಕಿದುದು ತನಿಹರುಷ ಮೈಯೊಳ
ಗೊಕ್ಕವಾ ಪುಳಕಾಂಬು ಕಂಗಳಂ
ಮುಕ್ಕುಳಿಸಿದವು ಮುನ್ನ ದುಶ್ಶಾಸನನ ಶೋಣಿತವ
ಬಿಕ್ಕುವಹಿತನನಡಿಗಡಿಗೆ ಎವೆ
ಯಿಕ್ಕದೀಕ್ಷಿಸಿ ತಣಿಯದಿನ್ನಕ
ಸಿಕ್ಕಿ ಸಿಡಿಮಿಡಿಗೊಂಬ ರೋಷವೆ ರಾಜ್ಯಮಾಡೆಂದ ೫೧

ಎತ್ತಿ ಕಳೆದಿರಿ ವನಕೆ ನಾವ್ ನಿ
ಮ್ಮೆತ್ತುಗಳಲಾ ಬೀದಿಯಲಿ ಬೆಂ
ಬತ್ತಿ ಕೊಂಕಿನ ಬೆರಳಲೇಡಿಸಿ ಬಯ್ದು ಭಂಗಿಸಿದೈ
ತೊತ್ತಲಾ ಪಾಂಚಾಲೆ ನಾವ್ ನಿ
ಮ್ಮೆತ್ತುಗಳಲಾ ಹಿಂದೆ ಕಿಚ್ಚಿನ
ತಂತ್ತು ವಿಷದುಬ್ಬಟೆಗಳನು ನೆನೆಯೆಂದನಾ ಭೀಮ ೫೨

ಎರಗಿದನು ಕಟವಾಯ ಹಲುಗಳ
ಮುರಿಯಲುಗುರಲಿ ಹೊಯ್ದು ಹೃದಯವ
ನುರೆ ಬಗಿದು ಮೊಗೆಮೊಗೆದು ರಕ್ತವ ಕಂಡಿತೆಕುಡಿತೆಯಲಿ
ಸುರಿಸುರಿದು ಸುರಿದಡಿಗಡಿಗೆ ಚ
ಪ್ಪರಿದು ಚಪ್ಪರಿದಿದರ ಮಧುರಕೆ
ನೆರೆವವೇ ಸುಧೆಯಿಕ್ಷುರಸಗಿಸವೆಂದನಾ ಭೀಮ ೫೩

ಆಡಿದುದು ಹುಸಿಯಲ್ಲ ನೀ ಸವಿ
ನೋಡು ಕರ್ಣನರೇಂದ್ರ ಕೌರವ
ನೋಡು ಸವಿಯನು ಶಕುನಿ ಕೃಪಕೃತವರ್ಮ ಗುರುಸುತರು
ನೋಡಿರೈ ಹೇವರಿಸುವರೆ ಕೈ
ಮಾಡಿರೈ ನಿಮ್ಮಾತನಳಿವನು
ನೋಡುತಿಹುದೇ ನಿಮಗೆ ನೀತಿಯೆ ಎಂದನಾ ಭೀಮ ೫೪

ಬಿಡಿಸಲಾಗದೆ ಕೈದುಕಾತಿಯ
ರಡಬಳವನೀ ಹುಲಿಯ ಬಾಯಲಿ
ಕೆಡವಿ ಕಳೆದಿರಲಾ ಸುಯೋಧನ ಕರ್ಣ ಗುರುಸುತರು
ಸುಡಲಿ ನಿಮ್ಮನು ಮೊಲೆಗಳಿಲ್ಲದ
ಕಡುಮುಖಹುಳಿ ನಿಮಗೇಕೆ ನಿಮ್ಮನು
ನುಡಿಸುವವರಾವಲ್ಲೆನುತ ಮದವೇರಿದನು ಭೀಮ ೫೫

ಎಲೆಲೆ ಕೌರವ ಮೋಹರದ ಮಂ
ಡಳಿಕರಿರ ದುಶ್ಶಾಸನನ ತೊ
ಟ್ಟುಳಿಕೆಗಾಂತಿದೆ ಹರಣವಕಟಾ ಕಾಯಲೆಳಸಿರಲಾ
ಸಲಹಿದವನೊಡಹುಟ್ಟಿದೀತನ
ಕೊಲುವೆಡೆಗೆ ಮತವೇ ಮಹೀಶರ
ಕುಲಕೆ ಪಂಥವಿದೇ ಎನುತ ಮೂದಲಿಸಿದನು ಭೀಮ ೫೬

ಏನ ಹೇಳುವೆನರಸ ಕೌರವ
ಸೇನೆ ಗರಹೊಡೆದಂತೆ ಬಹಳಾಂ
ಭೋನಿಧಿಯಲದ್ದಂತೆ ಬೆಗಡಿನ ಸೊಗಡ ಸೆರೆವಿಡಿದು
ಮೋನದಲಿ ಮನವಳುಕಿ ಯೋಗ
ಧ್ಯಾನಪರರಾದಂತೆ ಚಿತ್ತ
ಗ್ಲಾನಿಯೊಳಗೆಲೆಮಿಡುಕದಿದ್ದುದು ನಿನ್ನ ಪರಿವಾರ ೫೭

ಅಡಿಗಡಿಗೆ ಕದುಕಿರಿದು ರಕುತವ
ಕುಡಿತೆಯಲಿ ಕುಡಿಕುಡಿದು ಬೆರಳಲಿ
ಮಿಡಿದು ಕದನಸ್ಥಾನದೇವತೆಯರಿಗೆ ಕೈಕೊಳಿಸಿ
ಕುಡಿದು ಮಿಕ್ಕುದನಖಿಳಭೂತಕೆ
ಬಡಿಸಿ ಚಪ್ಪರಿದಾರಿ ಬೊಬ್ಬಿರಿ
ದೊಡನೊಡನೆ ನೊರೆನೆತ್ತರೋಕುಳಿಯಾಡಿದನು ಭೀಮ ೫೮

ಎಲವೆಲವೊ ಗುರುಸೂನು ಭೂಮಂ
ಡಲದೊಳಗೆ ನಿಮ್ಮಯ್ಯನೂ ನೀ
ನುಳಿಯೆ ಭಟರಿಲ್ಲೆಂಬ ಗರ್ವದ ಗಿರಿಯನೇರಿಹಿರಿ
ನಿಲುಕಲಾಗದೆ ಕೌರವಾನುಜ
ನುಳಿವು ಸೊಗಸದೆ ನಿನಗೆ ಬಿಲುವಿಡಿ
ದುಳಿಹಿರೈ ಲೇಸಹುದೆನುತ ಮೂದಲಿಸಿದನು ಭೀಮ ೫೯

ಎಲೆ ಕೃಪಾಚಾರಿಯ ಸುಯೋಧನ
ನೊಳಗೆ ಸೇರುವೆ ಹಿರಿದು ನಿಮಗೀ
ಖಳನ ಕೊಲೆಯನು ನೀವು ಮನಗೊಟ್ಟೊಲಿದು ನೋಡುವರೆ
ಎಲೆ ಶಕುನಿಯೆಲೆ ಶಲ್ಯ ಎಲೆ ಬಾ
ಹಿಲಿಕ ಕೃತವರ್ಮಾದಿ ವೀರರು
ಸೆಳೆದುಕೊಳ್ಳಿ ದುಶ್ಶಾಸನನನೆನುತೊರಲಿದನು ಭೀಮ ೬೦

ಪತಿಗೆ ಮಲೆವರಗಂಡನಾಳ್ದಗೆ
ಹಿತವ ಕೌರವಕುಲಕೆ ಕಣ್ ಗತಿ
ಮತಿಯೆನಿಸಿ ನೀ ಕರ್ಣನೆಂಬುದು ಸಕಲಜನಜನಿತ
ಪತಿಯ ಸಹಸಂಭವನ ಮರಣ
ವ್ಯತಿಕರವ ನೋಡಿದಡೆ ದುಃಖೀ
ರಿತಿಯ ಮೊಳೆ ಹೊಮ್ಮುವವಲೇ ರವಿಸುತನೆ ಕೇಳೆಂದ ೬೧

ಕರೆದು ಮೂದಲಿಸಿದರೆ ರಣಭೀ
ಕರರು ಮರಳುವರವರಿಗೆತ್ತಿದ
ಬಿರುದಿನಗ್ಗದವೀರ ನೋಡುತ್ತಿಹರೆ ಕಲಿಕರ್ಣ
ಹರಣವಿದೆ ದುಶ್ಶಾಸನನ ತೆಗೆ
ಬರಸೆಳೆವ ಬಲುಹುಳ್ಳಡೆನುತಂ
ಬ್ಬರಿಸಿ ಗಜರಿನ ಗರುವನೊರಲಿದನಹಿತವೀರರಿಗೆ ೬೨

ಆಕೆವಾಳರು ಕರ್ಣಗುರುಸುತ
ರೀ ಕೃಪಾಚಾರಿಯರು ತಾವೇ
ಕೈಕವೀರರು ನಿನ್ನನೊಬ್ಬನನೊಪ್ಪುಗೊಟ್ಟರಲಾ
ಏಕೆ ತರುಬಿದಿರಿವರನಾಹವ
ಭೀಕರರನವಿವೇಕಿಗಳು ಇವ
ರೇಕೆ ನೀವೇಕೆಂದು ದುಶ್ಶಾಸನನ ನೋಡಿದನು ೬೩

ಮರಣ ನೆರೆಹೊರೆಯಾಯ್ತು ನಿನ್ನಯ
ಹರಣವೆನ್ನಂಗಯ್ಯಲಿದೆ ನಿ
ಮ್ಮರಸನನು ಕರಸೆಲವೊ ಕಾದಿಸು ನಿನ್ನ ರಕ್ಷಿಸಲಿ
ಅರಿಬಲದೊಳಿದಿರಿಲ್ಲ ನಿಜಮೋ
ಹರದೊಳಗೆ ಮಿಡುಕುಳ್ಳ ವೀರರು
ಮರಳಿಚಲಿ ನಿನ್ನುವನೆನುತ ನೋಡಿದನು ತನ್ನವರ ೬೪

ಎಲವೊ ಧೃಷ್ಟದ್ಯುಮ್ನ ಸಾತ್ಯಕಿ
ಎಲೆ ಶಿಖಂಡಿಪ್ರಮುಖನಾಯಕ
ರಳುಕದಿಹ ಮನವುಳ್ಳಡಿದಿರಾಗಿವನ ಸಲಹುವುದು
ಹಲಬರಲಿ ಫಲವೇನು ದಾನವ
ಕುಲ ದಿಶಾಪಟಕೃಷ್ಣ ಮುನಿದಡೆ
ಕಳೆದುಕೊಳು ಕೌಮೋದಕಿಯನೆಂದೊದರಿದನು ಭೀಮ ೬೫

ಕೇಳು ಫಲುಗುಣ ಲೋಕಮೂರರೊ
ಳಾಳು ನೀನೆಂದೆಂಬ ಗರ್ವವ
ಪಾಲಿಸುವೊಡಿದಿರಾಗು ತೊಡು ಗಾಂಡಿವದಲಂಬುಗಳ
ಆಳುತನ ನಿನಗುಳ್ಳೊಡಹಿತನ
ಪಾಲಿಸುವೊಡೇಳೆಂದೆನಲು ಜಯ
ಲೋಲ ಸುಗತಿಯೊಳಿಳಿದನರ್ಜುನನಮಳಮಣಿರಥವ ೬೬

ಅಹುದಹುದು ತಪ್ಪೇನು ತಪ್ಪೇ
ನಹಿತದುಶ್ಶಾಸನನ ಸಲಹುವೆ
ನಹಿತಬಲವೆನಗನಿಲಸುತನೆನುತ್ತೈದೆ ಬರೆ ಕಂಡು
ಬಹಳ ಭೀತಿಯೊಳಸುರರಿಪು ಸ
ನ್ನಿಹಿತ ಚಾಪವ ಹಿಡಿದು ಮನದು
ಮ್ಮಹವ ಕೆಡಿಸಿ ಕಿರೀಟಿಯನು ನಿಲಿಸಿದನು ರಥದೊಳಗೆ ೬೭

ಅಹುದು ಭೀಮನ ಗೆಲುವ ಭಟನೀ
ನಹೆಯಲೇ ನಾವಂಜುವೆವು ನಿ
ರ್ವಹಿಸಬಹುದೇ ಕಾಲರುದ್ರನ ಕೆಣಕಿ ಕದನದಲಿ
ಸಹಜವಿದು ಸಾಕ್ಷಾದುಮಾಪತಿ
ಯಹ ಕಣಾ ಪವನಜನ ನೋಡಲು
ಬಹಡೆ ನೋಡೆಂದಸುರರಿಪು ನುಡಿದನು ಧನಂಜಯಗೆ ೬೮

ಕಂಡನರ್ಜುನ ತ್ರಿಪುರದಹನದ
ಖಂಡಪರಶುವೊಲಿರ್ದ ಭೀಮನ
ದಂಡಿಯನು ಥಟ್ಟೈಸಿ ಭೂತಗಳೆಡಬಲದೊಳಿರಲು
ಚಂಡಬಲನಹನೈ ವೃಕೋದರ
ಗಂಡುಗಲಿಗಿದಿರಾವನೆನುತಾ
ಖಂಡಲಾತ್ಮಜನೆರಗಿದನು ಮುರವೈರಿಯಂಘ್ರಿಯಲಿ ೬೯

ಉಭಯವೀರರ ನೋಡಿ ಸಂಗರ
ರಭಸದಲಿ ಮೂದಲಿಸಿ ಚಾಪ
ಪ್ರಭವ ಚಪಲರ ಚದುರುಗೆಡಿಸಿದ ಭುಜಬಲೋನ್ನತಿಯ
ಸಭೆಯೊಳಾದವಮಾನದಹನ
ಪ್ರಭೆಯ ನಂದಿಸಲಾಯ್ತಲಾ ರಿಪು
ಸುಭಟನುರವೆಂಬಭ್ರ ಸಂಭವ ರುಧಿರಜಲವೆಂದ ೭೦

ಕೆಡೆದ ಹಗೆಯೊರಲಿನಲಿ ಕಿವಿ ಎಡೆ
ಯುಡುಗದೀಕ್ಷಿಸಿ ಕಂಗಳಾ ಖಳ
ನೊಡಲ ಕಡಿಗೆಡಹಿನಲಿ ಮೈ ರಿಪುಮಾಂಸಗಂಧದಲಿ
ಬಿಡದೆ ನಾಸಿಕ ಖಳನ ರಕುತವ
ಕುಡಿದು ನಾಲಗೆ ಸೊಗಸೆ ಸೊಕ್ಕಿದ
ನೊಡನೊಡನೆ ಪಂಚೇಂದ್ರಿಯ ಪ್ರೀತಿಯಲಿ ಕಲಿಭೀಮ ೭೧

ಘನ ಪರಾಕ್ರಮಿ ಭೀಮಸೇನಗೆ
ವಿನುತ ಭುಜಗೇಂದ್ರಂಗೆ ದುಶ್ಶಾ
ಸನನ ಜೀವಾನಿಳನ ಪಾರಣೆ ಸಮರಭೂಮಿಯಲಿ
ಮುನಿವನಾರಿವನೊಳಗೆ ಕರುಳಿನ
ಘನ ನಿಶಾಕರಬಿಂಬದುದಯದೊ
ಳನಿಲಜನ ಮುಖ ಕುಮುದ ನಸುನಗೆಯೆಸಳು ಪಸರಿಸಿತು ೭೨

ಉಕ್ಕಿದುದು ಕಡುಗೋಪ ರಕುತದ
ಸೊಕ್ಕಿನಲಿ ಸೊಗಡೇರಿ ಕಂಗಳ
ಲುಕ್ಕಿದುದು ಕಡುಗೆಂಪು ತೊದಳಿನ ಗಜರು ಘಾಡಿಸಿತು
ಮಿಕ್ಕ ರಕುತವ ಮೊಗೆದು ಬದಿಗಳೊ
ಳೊಕ್ಕ ಕರುಳ್ಗಳನಾಯ್ದು ಮೂಲೆಗ
ಳೊಕ್ಕಿನಲಿ ಕೈಯಿಕ್ಕಿ ರಿಂಗಣಗುಣಿದನಾ ಭೀಮ ೭೩

ಬಳಿಕ ಪರಿತೋಷದಲಿ ಮಾರುತಿ
ಲಲನೆಯಲ್ಲಿಗೆ ಕಳುಹಿದನು ತ
ನ್ನೊಲವಿನಾಹವವಾದುದೈತಹುದೆನಲು ಬೇಗದಲಿ
ನಳಿನಮುಖಿ ನಲವೇರಿ ಮೇಳದ
ಕೆಳದಿಯರು ಕೈಗೊಡಲು ನೇವುರ
ದೆಳಮೊಳಗು ಮೋಹಿಸಲು ಮಾನಿನಿ ಬಂದಳಾಯೆಡೆಗೆ ೭೪

ಮನಸಿಜನ ಮದದಾನೆ ಮೊಗಸಿದ
ಳನುವರಕೆ ಮುಝು ಮಾಯೆ ಮೆಚ್ಚಿನ
ಮನದ ಕಡುಹಿನ ಖಾತಿಯೆಂತುಟೊ ಕೌರವನ ಮೇಲೆ
ಎನಲು ದಿವಿಜರು ಝುಣಝುಣಾಯಿತ
ನಿನದದುರವಣೆ ಮಿಗಲು ಘನಸಂ
ಜನಿತ ಪದತಳ ಚಲನಕೃತಿಯಿಂದೈದಿದಳು ರಣವ ೭೫

ಅರರೆ ಭೀಮನ ವಿಜಯಲಕ್ಷ್ಮಿಯ
ಬರವೊ ಕೌರವನೃಪನ ಮರಣಾಂ
ಕುರವ ಸೂಚಿಸುವಾತುರಶ್ರೀಸತಿಯ ಸಂಭ್ರಮವೊ
ಅರಿಭಟರಿಗದ್ಭುತವೆನಲು ಭೀ
ಕರರು ದುರ್ಧರವೆಂದೆನಲು ಪಂ
ಕರುಹಮುಖಿ ನಡೆತಂದಳಾ ಪವಮಾನಜನ ಹೊರೆಗೆ ೭೬

ಬರುತ ಕಂಡಳು ಭೀಮಸೇನನ
ಧುರಪರಾಕ್ರಮವಹ್ನಿ ಭುಗಿಲೆಂ
ದರಿ ಭಯಂಕರ ರೌದ್ರರೂಪಿನೊಳಿರಲು ಬರಲಂಜಿ
ತಿರುಗೆ ಕಂಡನು ಪವನಸುತ ಪಂ
ಕರುಹಮುಖಿಯನು ಕರೆದು ನಿನ್ನಯ
ಭರದ ಬಯಕೆಯಿದಾಯ್ತು ದಿಟ ನೋಡೆಂದು ತೋರಿಸಿದ ೭೭

ಅರಿವನು ನೀ ಕೊಟ್ಟ ಭಾಷೆಯ
ಕಾರಣಿಕ ಖಳರೊಳಗಿದಾವನು
ವೀರ ದುಶ್ಶಾಸನ ಕಣಾ ಅಂತಾದಡಾಯ್ತೆನುತ
ಸಾರಿದಳು ಸರಸಿಜವದನೆ ಭ
ರ್ತಾರನನು ನಸುನಗುತ ಚರಣದ
ಚಾರು ನೇವುರವುಲಿಯಲೊದೆದಳು ಖಳನ ಮಸ್ತಕವ ೭೮

ನುಡಿವುದರಿದೇ ನುಡಿದ ಭಾಷೆಯ
ಕಡೆತನಕ ಪೂರೈಸಿ ಮಾಡುವ
ಕಡುಗಲಿಗಳಾರುಂಟು ಜಗದೊಳು ನಿನ್ನ ಹೋಲುವರು
ಮೃಡಪರಾಕ್ರಮಿ ನನ್ನ ಹೋಲುವ
ಮಡದಿಯರು ನಿನ್ನಂದದೊಡೆಯರ
ಪಡೆವುದೇ ಪರಮೈಕಸೌಖ್ಯವಿದೆಂದಳಿಂದುಮುಖಿ ೭೯

ತರುಣಿ ಕುಳ್ಳಿರು ಸ್ವಾಮಿದ್ರೋಹಿಯ
ಕರುಳು ಮುಡಿ ಬಾ ನಿನ್ನ ಖಾತಿಯ
ಪರಿಹರಿಸುವೆನು ಖಳನ ರುಧಿರಸ್ನಾನಕೆಳಸುವರೆ
ಸರಸಿಜಾನನೆ ಕೊಳ್ಳೆನುತ ಖಳ
ನುರವನಿಬ್ಬಗಿಮಾಡಿ ಕುಡಿತೆಯ
ಲರುಣಜಲವನು ಮೊಗೆದು ಮಾನಿನಿಗಿತ್ತನಾ ಭೀಮ ೮೦

ಶೋಣಿತಾಂಬುವಿನಿಂದ ತರುಣಿಯ
ವೇಣಿಯನು ನಾದಿದನು ದಂತ
ಶ್ರೇಣಿಯಲಿ ಬಾಚಿದನು ಬೈತಲೆದೆಗೆದು ಚೆಲುವಿನಲಿ
ರಾಣಿ ಹುಸಿಯದೆ ಹೇಳು ಹೇಳೆ
ನ್ನಾಣೆ ಸೊಗಸೇ ಖಳನ ದಂತ
ಶ್ರೇಣಿ ತವೆ ಪಾವನವೆಯೆಂದನು ಪವನಸುತ ನಗುತ ೮೧

ಮುಡಿಗೆ ಹಾಯ್ದವನುದರರಕ್ತವ
ತೊಡೆದು ಕಬರಿಯ ಕಟ್ಟೆ ಕಟ್ಟುವೆ
ನುಡಿಗೆಯುಳಿದನ ಚರ್ಮವನು ನೀನುಡಿಸಲುಟ್ಟಪೆನು
ಎಡೆಯಲೊಯ್ಯಾರದಲಿ ಕಟ್ಟೆನು
ಮುಡಿಯ ಮುಡಿಯುಡೆನೆಂಬ ತೇಜದ
ನುಡಿದ ನುಡಿ ಸಲೆ ಸಂದುದೇ ತನ್ನಾಣೆ ಹೇಳೆಂದ ೮೨

ಖಳನ ತೆಳುದೊಗಲುಗಿದು ವಾಸ
ಚ್ಚೆಲವ ಸಲಿಸಿದನವ ಜಠರದೊ
ಳೊಳಗರುಳನುಗಿದಬುಜವದನೆಯ ಮುಡಿಗೆ ಮುಡಿಸಿದನು
ತಳುಕಿದನು ಖಳನುರದ ರಕ್ತದ
ತಿಳಕವನು ರಚಿಸಿದನು ಹರುಷದೊ
ಳುಲಿದು ಕೀಚಕವೈರಿ ನೋಡಿದನೊಲಿದು ನಿಜಸತಿಯ ೮೩

ಪಸರಿಸಿದ ಪರಿವಾರ ಶರಧಿಯ
ಮುಸಕ ಮುಸುಳಿತು ತೊಡೆಯಲಡಗೆಡೆ
ದ ಸುಹೃದನ ದರುಶನದೊಳಗೆ ಮುಸಗಿದವು ಮುಡುಹುಗಳು
ಶಶಿವದನೆಯುತ್ಸಾಹವತಿ ಥಾ
ಳಿಸಿತು ಭೀಮನಹರುಷಜಲನಿಧಿ
ವಿಸಟವರಿದುದು ಕೇಳು ಜನಮೇಜಯ ಮಹೀಪಾಲ ೮೪

ಎಡದ ತೊಡೆಯಲಿ ಮಡದಿ ಬಲುವಗೆ
ಯೊಡಲು ಬಲವಂಕದಲಿ ನೆಗಹಿದ
ಕುಡಿವೆರಳ ನಿಡುಗರುಳ ಮಾಲೆಯ ರೌದ್ರರಚನೆಯಲಿ
ಕಡುಮನದ ಖತಿಗಾರ ಭೀಮನ
ಕಡುಹು ಹೋಲುವೆಯಾಯ್ತು ಕಂಭದೊ
ಳೊಡೆದು ಮೂಡಿದ ಮೃಗದ ಮೊಗದ ಮಹಾಸುರಾಂತಕನ ೮೫

ಕೆಲದ ತಲೆಯದ್ರಿಗಳ ಮೂಳೆಯ
ಹೊಳೆವ ಸಾಲಿನ ಸುಂಟಗೆಯ ತೋಂ
ಗಲಿನ ತೋರಣದೊಟ್ಟಿಲಟ್ಟೆಯ ಕರುಳ ಮಾಲೆಗಳ
ತಿಳಿದ ರಕಂತದ ಕೊಳನ ಘನಕೊಳು
ಗುಳದ ತೋಪಿನ ನಡುವೆ ಮಾರುತಿ
ಲಲನೆಸಹಿತಾಡಿದನು ಶೋಣಿತವಾರಿಯೋಕುಳಿಯ ೮೬

ಕೊಳುಗುಳದ ಜಯಲಕ್ಷ್ಮಿಗಾಯಿತು
ಚಲನಸುತನಲಿ ಮದುವೆಯೆನೆ ಮುಂ
ಗಳಮುಹೂರ್ತಕದೊಳಗೆ ಮುಳುಗಿದ ಘಳಿಗೆವಟ್ಟಲೆನೆ
ತಲೆ ಕಪಾಲದ ಸಾಲಶೋಣಿತ
ಜಲದಲಂದೊಪ್ಪಿದವು ರಣದೊಳು
ಕಳದೊಳದ್ಭುತರಚನೆ ಮಿಗೆ ಸೌರಂಭ ರಂಜಿಸಿತು ೮೭

ಉಡಿದು ಕೆಡೆದ ಸಿತಾತಪತ್ರದ
ನಡುವೆ ಹರಿಸಾಲಿನ ಕಪಾಲದ
ಗಡಣವಿರೆ ಚೆಲುವಾಯ್ತು ಜನಮೇಜಯಮಹೀಪಾಲ
ಅಡಗನಂತಕಗಗಲ ತಂದುಣ
ಬಡಿಸಲಿಕ್ಕಿದ ತಳಿಗೆಯೊಳು ಸಂ
ಗಡಿಸಿದವು ಕೆಲವಟ್ಟಲೆನೆ ರಂಜಿಸಿತು ರಣಭೂಮಿ ೮೮

ಸರಳ ತುದಿಹಿಳುಕಿನಲಿ ಸಬಳದ
ಸುರಗಿಗಳ ಸೂನಗಿಯ ಬಂಡಿಯ
ಶರಗಳಲಿ ಸಿಲುಕಿರ್ದ ಸುಭಟರ ಕಡಿಕು ಮೆರೆದಿರಲು
ಅರರೆ ಜವನಂಗಡಿಯೊಳಿಕ್ಕಿದ
ತರತರದೊಳಿಹ ಪಸರವೆನೆ ಸಿಂ
ಗರಿಸಿತೈ ರಣಭೂಮಿ ಜನಮೇಜಯ ಮಹೀಪಾಲ ೮೯

ಸಿಡಿದ ಕಣ್ಣಾಲಿಗಳು ಜವನಂ
ಗಡಿಯ ನೀಲದ ಹಸರದಂತಿರ
ಲಡಗು ಮೆರೆದುದು ಸೂನೆಗಾರರ ಹಸರದಂದದಲಿ
ಹೊಡೆಗೆಡೆದ ಗಜದಟ್ಟೆ ರಕುತದ
ಕಡಲೊಳದ್ದವು ಬೀತರಸುಗಳ
ಪಡಗು ಜವಲೋಕಕ್ಕೆ ಜಂಗುಳಿಸಿರ್ದುವೆಂಬಂತೆ ೯೦

ಬಂದ ತೊರೆಗಳ ಕುಡಿದೆನತಿ ಥಗೆ
ಯಿಂದ ಸಕಲ ಸರೋರುಹಾಂಬುವ
ನೊಂದೆ ಶ್ವಾಸದಲೀಂಟಿದೆನು ಶಂಕಿಸದು ಕೋಪಾಗ್ನಿ
ಇಂದು ದುಶ್ಯಾಸನನ ಶೋಣಿತ
ದೊಂದು ಕುಡಿತೆಯಲಾ ಮಹಾಶಿಖಿ
ನಂದಿತೇನಿದು ಚಿತ್ರವಲ್ಲಾ ಸೂತ ಹೇಳೆಂದ ೯೧

ಇವನ ನೆತ್ತರ ಕುಡಿವ ರಿಪುಕೌ
ರವರ ನೂರ್ವರ ಕಡಿವ ಭಾಷೆಗ
ಳೆವಗೆ ಪೂರಾಯವು ಸುಯೋಧನಹರಣವೊಂದುಳಿಯೆ
ಅವನಿ ಜಳ ಶಿಖಿ ಪವನ ಪುಷ್ಕರ
ದಿವಿಜ ದನುಜೋರಗಮುಖಾಖಿಳ
ಭುವನಜನ ನೀವ್ ಕೇಳಿಯೆಂದನು ಭೀಮ ಮೊಗನೆಗಹಿ ೯೨

ಮಂಡದಿಯನು ಕಳುಹಿದನು ಕೆಳದಿಯ
ರೊಡನೆ ನಡೆತರೆ ನಾಕುಕಡೆಯಲಿ
ಹಿಡಿದ ಜವನಿಕೆಗಳಲಿ ಜಲರುಹವದನೆ ಗಮಿಸಿದಳು
ತುಡುಕಿ ವಾಮಾಂಘ್ರಿಯಲಿ ಹಗೆಯನು
ಮಡದಲೊದೆದನು ಬಳಿಕ ಕೌರವ
ಪಡೆಯ ಪವನಜ ಕೊಟ್ಟನಂತಕಪುರವನಾಂತರಕೆ ೯೩

ಅರಿಯ ಹೆಣನನು ಹಾಯ್ಕಿ ನೂರೆನೆ
ತ್ತರಲಿ ಬೊಟ್ಟಿಟ್ಟನು ವರೂಥದ
ಹೊರಗೆ ಬಂದನು ಕಳಶಜಲದಲಿ ತೊಳೆದು ಕರಪದವ
ಪರಿಹೃತಶ್ರಮನಾಗಿ ವರಕ
ರ್ಪೂರದ ಕಸ್ತೂರಿಗಂಧಲೇಪವ
ನೊರಸಿ ಹೊಸಮಡಿವರ್ಗದಲಿ ರಂಜಿಸಿದನಾ ಭೀಮ ೯೪

ವೀಳೆಯವ ಕೊಂಡನು ವರೂಥದ
ಮೇಲುವಲಗೆಯ ಗದ್ದುಗೆಗೆ ರಿಪು
ಕಾಲಭೈರವನಡರಿದನು ತುಡುಕಿದನು ನಿಜಧನುವ
ಕಾಳೆಗಕೆ ಕಡೆಹಾರವೇ ತೆಗೆ
ಯಾಳನಾಗಲಿ ಬಂದು ಕುರುಭೂ
ಪಾಲ ಬೀಳಲಿ ಧರ್ಮರಾಯನ ಚರಣಕಮಲದಲಿ ೯೫

ಎನುತ ಬಿಟ್ಟನು ರಥವ ದುರಿಯೋ
ಧನನ ಮೋಹರಕಾಗಿ ಬಂಡಿಯ
ಬಿನುಗುಗಳು ಕೈದೋರಿರೈ ಪುನ್ನಾಮನಾರಿಯರು
ಅನುಜರಾವೆಡೆ ಕರಸು ಕೌರವ
ಜನಪ ಕರ್ಣಾದಿಗಳ ಬಿಂಕವ
ನೆನಗೆ ತೋರಾಯೆನುತ ಮೊಳಗಿದನರಸನಿದಿರಿನಲಿ ೯೬

ನಿಯತ ಜಯಲುಬ್ಧಕನು ರಣಭೂ
ಮಿಯಲಿ ಹರಿಸಲು ಜಯದ ಸಿರಿಯನು
ಭಯವಿಹೀನರು ಬೆರಗುಗೊಂಡರು ಭೀಮನುರವಣೆಗೆ
ಹಯದ ವಾಘೆಯನಿಳುಹಿದರು ಮು
ನ್ನೆಯರು ಮನಗುಂದಿದರು ಕುರುಸೇ
ನೆಯಲಿ ಕಾಣಿಸಲಾದುದಪಜಯಸಿರಿಯ ಸಂಭ್ರಮವು ೯೭

ಬೆಟ್ಟವಾದವು ಬಿಸುಟ ಕೈದುಗ
ಳೊಟ್ಟಿಲಾದುವು ಸಿಂಧ ಸಳೆರಥ
ವಿಟ್ಟೆಡೆಗಳಲಿ ಮಿಸುಕಲಸದಳವಾದುದನಲಂಗೆ
ಥಟ್ಟುಮುರಿದುದು ಪಟುಭಟರು ಧೃತಿ
ಗೆಟ್ಟು ದೆಸೆದೆಸೆಗಳಲಿ ಮಿಗೆ ಸಾ
ಲಿಟ್ಟು ಸರಿದುದು ಕೇಳು ಜನಮೇಜಯಮಹೀಪಾಲ ೯೮

ಬಿಸುಟರಮಲಚ್ಛತ್ರವನು ಕೂ
ರಸಿಯನೀಡಾಡಿದರು ರಾಯರು
ಮುಸುಂಡ ತಿರುಹುತ ವಕುಟವರ್ಧನಕೋಟಿ ಸಮರದಲಿ
ಜಸವ ಮಾರಿದರಾಯುಧಂಗಳ
ಹೆಸರ ವೀರರು ಬಾಹುಬಲಸಾ
ಹಸರು ಕಂಗೆಟ್ಟೋಡಿದರು ಪವನಜನ ಸಮರದಲಿ ೯೯

ಬಲ ಮುರಿದು ಬರುತಿರ್ದುದೈ ಕಡೆ
ಜಲಧಿಯ ತೆರೆ ತಿರುಗಿದಂತಿರೆ
ತಲೆಮುಸುಂಕಿನಲಿ ನೋಟದುರವಣೆಕಾರ ನಾಯಕರು
ನೆಲೆದೆಗೆದು ನಮ್ಮವರು ನೃಪನರ
ನೆಲೆಗೆ ಸೇರದೆ ಸರಿಯೆ ಕಂಡನು
ನಳಿನಮಿತ್ರನ ಮೊಮ್ಮ ತಡೆದನು ಭೀಮನುರವಣೆಯ ೧೦೦

## ಇಪ್ಪತ್ತನೆಯ ಸಂಧಿ

ಸೂ. ಚಂಡಬಲ ಪವಮಾನಜನ ಮುಂ
ಕೊಂಡು ವಿರಥನಮಾಡಿ ಕದನೋ
ದ್ದಂಡ ನರನೊಳು ಕಾದಿ ಮಡಿದನು ವೀರವೃಷಸೇನ

ಅವಧರಿಸು ಧೃತರಾಷ್ಟ್ರಾವನಿಪ ನಿ
ನ್ನವಗೆ ತಿಳಿದುದು ಸೊಕ್ಕು ಚಿತ್ತದ
ಬವಣಿ ಬೀತುದು ಮನದ ಜೊಂಪಳಿದುದು ಛಡಾಳಿಸಿದ
ಡವರಿಸಿದ ಡೊಳ್ಳಾಸ ರಣಬೇ
ಳುವೆಯ ಬಿಗುಹಡಗಿದವೊಲನಿಬರು
ತವತವಗೆ ನಾಚಿದರು ಕೋಳಾಹಳಕೆ ಪವನಜನ ೧

ಮುಟ್ಟಿ ಬಂದುದು ಕೇಡು ನೃಪನೊಡ
ಹುಟ್ಟಿದನ ಹೊಯ್ದುರುಣಜಲದಲಿ
ಚಟ್ಟಿರಿದು ರಿಪು ಚಾರಿವರಿದನು ಕಳನ ಚೌಕದಲಿ
ಇಟ್ಟಣಿಸುವೀ ರಣಮದಾಂಧನ
ತೊಟ್ಟುಳಿಕೆಯನು ಕೇಳ್ವ ರಾಯಘ
ರಟ್ಟನಿಲ್ಲಾ ಎನುತ ತನಿಮಸಗಿತು ಭಟಸ್ತೋಮ ೨

ದೊರೆಯೊಡನೆ ತಲೆಯೊತ್ತಿ ಮುರಿದ
ಬ್ಬರಿಗನುಬ್ಬಿದ ಸಮರದಲಿ ನಿ
ಬ್ಬರದ ಬೆರಗಿನೊಳಿದ್ದರೈ ಬಳಿಕೀಗಲರಿತಿರಲಾ
ಅರಸನನುಜನ ಕುಡಿದ ನೆತ್ತರ
ಬರಿಸುವೆನು ಮೂಗಿನಲಿ ಮಾಣೆನು
ತರಿಯ ರಥದರವಣೆಗೆ ಕರ್ಣನಸೂನುವಿದಿರಾದ ೩

ಫಡ ವಿಕಾರವೆ ನೋಡು ನೆತ್ತರು
ಗುಡುಹಿತನವೇ ನಮ್ಮೊಡನೆ ಮೊಲೆ
ಮುಡಿಯ ಮೊದಲೆಗರುಹರೇ ಕರ್ಣಾದಿನಾಯಕರು
ಕುಡಿದ ರಕುತದ ಜಿಗುಳೆ ನೀ ನಿ
ನ್ನೊಡಲ ನಿಗುಚುವೆ ನಿಲ್ಲೆನುತ ಬಲ
ನೆಡನ ಬಿರುದರ ಮೇಳದಲಿ ತೂಗಿದನು ವೃಷಸೇನ ೪

ವೀರ ಮಝುಸೇನಾಧಿಪತಿಯಂ ಕು
ಮಾರ ನೂಕಿದನೆನುತಖಿಳಪರಿ
ವಾರ ಕವಿದುದು ಕರಿ ರಥಾಶ್ವ ಪದಾತಿಯೊಡ್ಡಿನಲಿ
ಆರು ಪೊಗಳುವರನಿಲಸುತನ ಸ
ಧಾರತನವನು ಮೇಲೆ ಬೀಳ್ವ ಕ
ಠೋರ ಶಸ್ತ್ರವ್ರಜವ ನೂಕಿದನಡ್ಡವರಿಗೆಯಲಿ ೫

ಅಕಟ ಮಗುವಿನ ಕೂಡೆ ಬಲುನಾ
ಯಕರು ಬಯಸಿದರಳಿವನಿದು ಸೇ
ವಕರ ಪಂಥವಲಾ ವಿರೋಧವೆ ಎನುತ ಮುರಿದೆದ್ದು
ಲಕುಟಹತನಿರ್ಭಿನ್ನಭಾಂಡ
ಪ್ರಕರವೋ ನಿನ್ನಾಳುಕುದುರೆಯೊ
ಸಕಲ ಸುಭಟರನೊಕ್ಕಲಿಕ್ಕಿದನೊಂದು ನಿಮಿಷದಲಿ ೬

ಸುಗ್ಗ ಬಡಿದಂಜಿಸಿದ ಗೆಲವಿನ
ಸುಗ್ಗಿಗಿದೆ ಮಳೆಗಾಲವೆನುತ ನಿ
ರರ್ಗಳಿತ ಭುಜಶೌರ್ಯ ಸುರಿದನು ಸರಳ ಸರಿವಳೆಯ
ಬಗ್ಗಿ ಕವಿವಂಬುಗಳ ಗರಿಗಳ
ಲಗ್ಗಗರಿನಾಯಕರ ಕಿವಿಗಳು
ನೆಗ್ಗಿದವು ಮುಗ್ಗಿದವು ಮನ ಮಾರಂಕದತಿರಥರ ೭

ಬಲುಹು ಮಗುವಿನ ಶೌರ್ಯವೀಸ
ಗ್ಗಳಿಯನೈ ಶಿವಯೆನುತ ಚಿತ್ತದೊ
ಳಳುಕಿ ಹೂಡಿದನಂಬನವಧಾನದಲಿ ಬಿಡೆಯುರಿದು
ಹಿಳುಕುಹಿಳುಕುಗಳೊರಸೊರಸು ಮು
ಕ್ಕೊಳಿಸೆ ಹಿಂದಣೆನಂಬನಂಬು
ಚ್ಚಳಿಸಲೆಚ್ಚನು ಭೀಮ ರವಿನಂದನನ ನಂದನನ ೮

ಕೆಣಕಿದುರಿಯುಂದದಲಿ ದಂಡೆಯೊ
ಳಣೆದ ಕಾಳೋರಗನವೊಲು ಚ
ಡ್ಡಣೆಯ ಚಪಳಕ್ರೋಧಶಿಖಿ ಮೋಹಿದುದು ಮೋರೆಯಲಿ
ಕಣೆಗಳೋ ಕಲ್ಪಾಂತವಹ್ನಿಯ
ಡೊಣೆಗಳೋ ಹಾಳಾಹಳದ ಡಾ
ವಣೆಗಳೋ ನಾವರಿಯೆವೆಚ್ಚನು ವೀರ ವೃಷಸೇನ ೯

ಫಲಿತ ಶಾಳೀವನವ ಮುತ್ತಿದ
ಗಿಳಿಗಳೋ ತಾವರೆಯ ತೆಕ್ಕೆಯೊ
ಳಿಳಿದ ಮರಿದುಂಬಿಗಳೊ ವೃಷಸೇನನ ಶರಾವಳಿಯೊ
ಹಿಳುಕು ಹೇರಿದವಾತನಶ್ವಾ
ವಳಿಯಲಾತನ ಸೂತನೊಡಲಲಿ
ಹಲವು ಮಾತೇನಾತನಂಗೋಪಾಂಗ ನಿಕರದಲಿ ೧೦

ಕೂಡೆ ಹಾಹಾಧ್ವನಿಯ ರವವ
ಲ್ಲಾಡಿಸಿತು ಪರಬಲವನೀತನ
ತೋಡು ಬೀಡಿನ ಸಂಚ ಸೆಳೆದುದು ಹಗೆಯ ಸಾಹಸವ
ಓಡಲರಿಯದೆ ಭೀಮನಂಬಿನ
ರೂಢಿ ನಿಗುಚದೆ ಕಾದುವರೆ ಜಯ
ಜೋಡಿಸದೆ ಜೋವಳಿಸಿ ಜವಗುಂದಿದನು ಕಲಿಭೀಮ ೧೧

ಅರಸ ಕೇಳೈ ಬಳಿಕ ಭೀಮನ
ತರಹರವನರಿದಾಚೆಯಲಿ ಸಂ
ವರಿಸಿಕೊಂಡನು ನಕುಳ ಬಿಟ್ಟನು ಸೂಠಿಯಲಿ ರಥವ
ತರುವಲಿಯೆ ನೀನಿದಿರಹುದೆ ಫಡ
ಸರಿಸವೇ ಭೀಮಂಗೆ ನೀನೆನು
ತರಿಭಟನ ಕೆಣಕಿದನು ಕೆದರಿದನಸ್ತ್ರ ಸಂತತಿಯ ೧೨

ಅರಿವರು ನಕುಲಾಂಕರೇ ಜು
ಜ್ಝಾರರೇ ನಿಮ್ಮಣ್ಣನಾಡಿ ದು
ಹಾರದಲಿ ಸೆರೆಯೋದನಾತನ ಹರಿಬವೇ ನಿಮಗೆ
ತೀರದೇ ನಿಮ್ಮಲಿ ವೃಥಾಹಂ
ಕಾರವೇಕಿದು ಪಾರ್ಥನೆಂಬನ
ತೋರಿರೇ ನೀ ಸಾರೆನುತ ತೆಗೆದೆಚ್ಚು ಬೊಬ್ಬಿರಿದ ೧೩

ಮಗುವು ನಿನ್ನೊಡನೇನು ಸರಿಯೋ
ಮಿಗಿಲೊ ಶರವಿವ ಹೇಳೆನುತ ಕೈ
ಮಗುಚಿದನು ಹೊದೆಯಂಬನೀತನಮೇಲೆ ನಿಮಿಷದಲಿ
ಮುಗಿಲ ಹರಿಗೆಗೆ ಮಾರುತನ ಬಂ
ದಿಗೆಯ ಹೊಯ್ಲೆನೆ ನಕುಳನೆಚ್ಚಂ
ಬುಗಳು ಕಿಡಿಸೂಸಿದವು ಕಂಡನು ರಥದ ಬಳಸಿನಲಿ ೧೪

ಮರಳಿ ನಕುಲನನೆಚ್ಚನಾತನ
ತುರಗವನು ಮುರಿಯೆಚ್ಚನಾತನ
ವರ ರಥವ ಸಾರಥಿಯನಾತನ ಟೆಕ್ಕೆಯವ ಧನುವ
ಉರುಳೆಗಡಿದನು ಮತ್ತೆ ಜೋಡಿಸಿ
ಪರಿತರಲು ಮುರಿಯೆಚ್ಚು ಪುನರಪಿ
ಹುರುಳುಗೆಡಿಸಿದನರಸಿ ಹರಿದನು ಮತ್ತೆ ಪವನಜನ ೧೫

ನಕುಲ ಮುರಿದನು ಭೀಮ ನಿಲು ಕಾ
ರ್ಮುಕವ ಹಿಡಿ ಬಿಡು ಸರಳನಳುಕವ
ಡಕಟ ಕೊಲ್ಲೆನು ನಿನ್ನ ತಮ್ಮನ ಕರಸು ಫಲುಗುಣನ
ವಿಕಳರುಳಿದಿರಲಾಗದೀ ಸಾ
ಯಕದ ಸೃಷ್ಟಿವಿರಿಂಚ ಸುಭಟ
ಪ್ರಕರದೊಳು ತಾನೆನುತ ತೆಗೆದೆಚ್ಚನು ವೃಕೋದರನ ೧೬

ಮುರಿದು ನಕುಲನ ಭೀಮಸೇನನ
ನರಸಿ ಹಿಡಿದನು ಬವರವನು ಭಟ
ನುರುಬೆ ಬಲುಹೋ ದಿಟ್ಟನಿವ ಕೌರವರ ಥಟ್ಟಿನಲಿ
ತೆರಹುಗೊಡದಿರಿ ನೂಕುನೂಕೆನು
ತುರುಬಿದನು ಸಹದೇವನೀತನ
ತರುಬಿ ಮೂದಲಿಸಿದನು ಮುಸುಕಿದನಂಬಿನಲಿ ರಥವ ೧೭

ಮೊದಲ ಬಲುಹನು ಕಂಡೆನಿನ್ನೀ
ತುದಿವರನ ತನಿಗೆಚ್ಚು ನಮ್ಮನು
ಬೆದರಿಸುವುದೋ ಶಿವಶಿವಾ ತಪ್ಪೇನು ತಪ್ಪೇನು
ಸದೆಗರಿವದಿರ ಗೆಲುವುದಾವಂ
ಗದಲಿ ಬಹುದೋ ಎನುತ ಪರಿಹಾ
ಸದಲಿ ರಿಪುಭಟನಂಬುಗಳ ಕೆದರಿದನು ಕಣೆಗಳಲಿ ೧೮

ಆತನೊಡನೆಯೆ ತೇರುತಂರಗ
ಪ್ರಾತವನು ಹುಡಿಮಾಡಿ ರಥಹಯ
ಸೂತ ಧನು ಶಸ್ತ್ರೌಘ ಕವಚ ಧ್ವಜ ಪತಾಕೆಗಳ
ಘಾತಿಸಿದನೈದಂಬಿನಲಿ ಮಗು
ಳಾತನುರವನು ತೋಡಿ ತೊಲಗಿಸಿ
ಪಾತಜನನರಸಿದನು ಮೂದಲಿಸಿದನು ಸರಳಿನಲಿ ೧೯

ಶಿವಶಿವಾ ಸಹದೇವ ನಕುಲರ
ಬವರ ಮುರಿದುದು ಬಿಡದೆ ಬಳಿಯಲಿ
ಪವನಜನ ತುಡುಕಿದನು ನೂಕಲಿ ಸರ್ವದಳವೆನುತ
ತವತವಗೆ ಸುತಸೋಮಕಾದಿಗ
ಳವಗಡಿಸಿದರು ಮತ್ಸ್ಯಕೈಕೆಯ
ನಿವಹ ಸಾತ್ಯಕಿ ಚೇಕಿತಾನರು ಕವಿದರುರವಣಿಸಿ ೨೦

ಎಲೆಲೆ ಪಾಂಡವ ಸರ್ವದಳವಿ
ಟ್ಟಳಿಸಿತೋ ಸುಕುಮಾರನೊಬ್ಬನೆ
ನಿಲುವುದರಿದೋ ನೂಕೆನುತ ಕುರುಸೇನೆ ಸಂವರಿಸೆ
ಉಲುಕದಿರಿ ಭಾರಣೆಯ ಭಟರ
ಗ್ಗಳಿಯರೆನ್ನೀ ಮಕ್ಕಳಾಟಿಕೆ
ಯಳವನೀಕ್ಷಿಸಿ ಸಾಕೆನುತ ತರುಬಿದನು ಪರಬಲವ ೨೧

ತೇರನೆಚ್ಚನು ಕಂದುರೆಕಾರರ
ದೂರದಲಿ ಖಂಡಿಸಿದನೊಗ್ಗಿನ
ವಾರಣೌಘವ ಸೀಳಿದನು ಹೂಳಿದನು ರಕುತದಲಿ
ಆರು ಬಲ್ಲರು ಪಯದಳವನಾ
ವೀರ ಸುತಸೋಮಾದಿ ನಿಖಿಳರು
ಮಾರರಂಘವಣೆಗಳ ಸೆಳೆದುದು ಭೀತಿರಸಜಲಧಿ ೨೨

ಉಗುಳುಗುಳು ದುಶ್ಶಾಸನನ ನೀ
ನುಗುಳು ಮಗುಳಿನ್ನಾರ ಬಸುರನು
ಹೊಗುವೆ ಮೊಲೆವುಡಿಯಾರಿಗಿವು ಘಡ ನಿಲ್ಲು ನಿಲ್ಲೆನುತ
ಹೊಗರೊಗುವ ಹೊಸಮಸೆಯ ಬಾಯ್ಧಾ
ರೆಗಳ ಬಂಬಲುಗಿಡಿಯ ಬಾಣಾ
ಳಿಗಳಲೀತನ ಹೂಳಿದನು ಕಾಣೆನು ವೃಕೋದರನ ೨೩

ಕಳವಳಿಸಿತರಿಸೇನೆ ಬೊಬ್ಬೆಯೊ
ಳುಲಿದುದೀ ನಮ್ಮವರು ಕಂಡನು
ಬಳಿಕ ಮುರರಿಪು ತೋರಿದನು ಪಾರ್ಥಂಗೆ ಪವನಜನ
ಎಲೆ ಧನಂಜಯ ಭೀಮಲಯ ನಿ
ಮ್ಮಳಿವು ನಮ್ಮ ಪರೋಕ್ಷದಲಿ ನಾ
ವುಳಿವರಲ್ಲೀ ಹವಣ ಕಂಡೆವು ಕರ್ಣತನಯನಲಿ ೨೪

ಈಸು ಘನವೇ ಕೃಷ್ಣ ಮಗುವಿವ
ನೈಸರವನೆಂದಿದ್ದೆನಾದರೆ
ಹಾಯ್ಸು ರಥವನು ಭೀಮಸೇನನ ರಥದ ಮುಂಗುಡಿಗೆ
ವಾಸಿಯೇಕಿವನಲಿ ವಚೋವಿ
ನ್ಯಾಸದಿಂ ರಥ ಮುಂಚಿತಹಿತನ
ಘಾಸಿಯಿಂದನಿಲಜನನುಗಿದನು ಬಗಿದು ರಿಪುಶರವ ೨೫

ಎಸುಗೆ ಚೆಲುವನು ಹಾಲುಗಲ್ಲದ
ಹಸುಳೆಯಂಗವಿದಲ್ಲ ತುಂಬಿಯ
ದೆಸೆಗೆ ಕೆಂದಾವರೆಯ ಬನವೇ ವನದವಾನಳನು
ಉಸುರದೀ ಜಯದೊಪ್ಪದಲಿ ಜಾ
ಳಿಸುವರೊಳ್ಳಿತು ತೊಲಗೆನುತ ನಿ
ಪ್ಪಸರದಲಿ ತೆಗೆದೆಚ್ಚನರ್ಜುನನಿನಸುತನಸುತನ ೨೬

ಚಾರುಪೌರುಷ ಸಮರವಿಹ್ವಳ
ತಾರಕರು ನೀವ್ ನಮ್ಮದಿದು ಕೌ
ಮಾರದೆಸೆ ತಾಮಸವಲೇ ನಿಮಗಾನು ಸಮಬಳನೆ
ಕೂರಲಗು ತೊಲೆಗೋಲಿನಲಿ ನಿ
ಮ್ಮಾರುಭಟೆಯನು ನಮ್ಮ ಬಾಹುವಿ
ಕಾರಬಲವನು ತೂಗಿಯೆನುತೆಚ್ಚನು ಧನಂಜಯನ ೨೭

ಮುರಮಥನ ಚಿತ್ತೈಸಿದೈ ತರು
ಣರಿಯ ಸಾಭಿಪ್ರಾಯ ವಾಕ್ಯ
ಸ್ಫುರಣವನು ಸಭ್ಯಾಂಗ ಭಾಷಿತ ಭಾವ ನಿಷ್ಠುರವ
ಪರಿಹೃತಿಯೆ ಕರ್ತವ್ಯವೆನುತು
ಚ್ಚರಿಸಿದನು ಮೌರ್ವೀ ನಿನಾದ
ಸ್ಫುರಿತ ವಿಮಳ ಪ್ರಣವಮುಖ ಶರಸೂಕ್ತಸಂತತಿಯ ೨೮

ಅದು ಬಳಿಕ ಲೋಕಾಯತಾಂಗ
ಚ್ಛದನ ಪರನಾರಾಚ ನಿರ್ಮಾ
ಣದಲಿ ಭಂಗಿತವಾಯ್ತು ಪಾರ್ಥನ ಬಾಣದೊಡ್ಡವಣೆ
ಬಿದಿರ ಮೊಳೆಯಲಿ ಹರಿವುದೇ ಬೆ
ಟ್ಟದಲಿ ಹರಿಯದ ವಸ್ತು ಹರನಿಂ
ದೊದಗಿದಂಬಿನ ಹವಣ ತೋರೆಂದೆಚ್ಚನರ್ಜುನನ ೨೯

ದನುಜರಿಪು ಹುಸಿಯಲ್ಲ ನಮ್ಮೊ
ಡ್ಡಿನಲಿ ಭಟನಭಿಮನ್ಯು ಪರರೊ
ಡ್ಡಿನಲಿ ಭಟನಿವನಲ್ಲದಿಲ್ಲ ಕುಮಾರವರ್ಗದಲಿ
ತನಗೆ ದೇವತ್ರಿತಯವಲ್ಲದೆ
ದನುಜ ದಿವಿಜಾದಿ ತ್ರಿಲೋಕದ
ಜನವಿದಿರೆ ಮೆಚ್ಚಿಸಿತು ಮಗುವಿನ ದಿಟ್ಟತನವೆಂದ ೩೦

ಪೂತುರೇ ವೃಷಸೇನ ಶರಸಂ
ಘಾತವಿದೆಕೋ ಸೈರಿಸಾದಡೆ
ಪಾತಕಕ್ಕೋಸರಿಸಿದೆವಲೇ ಭ್ರೂಣಹತಿಯೆಂಬ
ಮಾತು ಹಲವರಲೇನು ಪಾರ್ಥಿವ
ಜಾತಿಗೆನುತ ಮಹಾಸ್ತ್ರನಿಕರದೊ
ಳೀತನನು ಮುಸುಕಿದನು ಶರಮಯವಾಯ್ತು ರಣಭೂಮಿ ೩೧

ಆವ ವಹಿಲದೊಳರ್ಜುನನ ಬಾ
ಣಾವಳಿಯ ತರಿದೊಟ್ಟಿ ಮಗುಳೆ ಶ
ರಾವಳಿಯ ಕೊನೆಗಳಲಿ ಮಂದ್ರಿಸಿದನು ಧನಂಜಯನ
ನಾವರಿಯೆವೀಸದುಭುತವನಿವ
ಕಾವನೇ ವಿಕ್ರಮವರನರ್ಜುನ
ದೇವನಲಿ ಸರಿಮಿಗಿಲ ಕಾದಿದನರಸ ಕೇಳೆಂದ ೩೨

ನರನ ಮಾರಂಕದ ಮಹೇಂದ್ರಗೆ
ಚರಣಯುಗ ಬೆನ್ನಿನಲಿ ಬವರದೊ
ಳರಿದಲೈ ಭೀಷ್ಮಾದಿಗಳಿಗೀ ರಣವ ಮೇಳಾಪ
ಜರಡನೈ ಭಾರಂಕದಾಳಿವ
ತರಳನೇ ಸುರಗಿರಿಯನಾನುವ
ಕೊರಳ ಸತ್ವವೆ ಶಿವಶಿವವೆಂದುದು ಮೇಲೆ ಸುರಕಟಕ ೩೩

ಎಸಲು ಕಡಿದನು ಝೂಡಿಯಲಿ ಝೊಂ
ಪಿಸಲು ಜಡಿದನು ಚಳಕದಲಿ ಜಾ
ಳಿಸಿದರೊಂದಕ್ಕೆರಡು ನಾಲ್ಕಕ್ಕೆಂಟು ತೋರಿಸಿದ
ಮುಸುಕಿದರೆ ಮಂತ್ರಾಸ್ತ್ರದಲಿ ಪೋ
ಹಿಸಿದ ಸರಿಸಕೆ ಸರಿಸ ವಿಷಮಕೆ
ವಿಷಮಗತಿ ಶರಸಾರ ಸಾಳಂಗದಲಿ ರಂಜಿಸಿದ ೩೪

ಆಯಿತಿದು ಸಮರದಲಿ ಗುರು ಗಾಂ
ಗೇಯ ಕರ್ಣದ್ರೌಣಿಗಳ ತರು
ವಾಯ ಲೆಕ್ಕಕೆ ಸಂದನೈ ಮಝ ಪೂತು ಪಾಯ್ಕೆನುತ
ಸಾಯಕವನಭಿಮಂತ್ರಿಸುತ ವೈ
ನಾಯಕಾಸ್ತ್ರವ ಹೂಡಿದನು ಬಲ
ಬಾಯಬಿಡೆ ಚಿಗಿದಂಬು ಕಡಿದುದು ಕರ್ಣನಂದನನ ೩೫

ಚಿಗಿದ ತಲೆ ಬೊಬ್ಬಿರಿಯೆ ಬಳಿಕಾ
ಳುಗಳ ದೇವನು ಮುಷ್ಟಿಬಳಿಗೋ
ಲುಗಳನೈದಾರೇಳ ಹಳುಹಳುವಾಯಿಯೆಸುಗೆಯಲಿ
ತೆಗೆದು ನಿಂದುದು ಭಯರಸದ ಹ
ಬ್ಬುಗೆಯಲುಬ್ಬಿದ ಶೋಕದೊಡ್ಡಿನ
ಮುಗಿಲು ಕರೆದುದು ಕುರುಬಲದ ಕಂಬನಿಯ ಬಿರುವಳೆಯ ೩೬

ಕದಡಿತೀ ಬಲಜಲಧಿ ಕಲ್ಪಾಂ
ತದ ಸಮುದ್ರದವೊಲು ಮಹಾಧ್ವನಿ
ಗದಗದಿಸೆ ಹಾ ಕರ್ಣಸುತ ಹಾ ಕರ್ಣಸುತ ಎನುತ
ಕೆದರಿದೀಶನ ಭಾಳದುರಿನೇ
ತ್ರದವೊಲುರಿದುದು ಸೂತಸುತ ಸಾ
ಕಿದ ಕುಮಾರನ ಮೇಳವದ ಮನ್ನಣೆಯ ಪರಿವಾರ ೩೭

ನೂಕಿತೀ ಬಲದಳದ ಪದಹತಿ
ಗೇಕೆ ಬಿರಿಯದು ಧರಣಿ ದಿಕ್ಕರಿ
ಯೋಕರಿಸದೇ ಮದವನಾದರೆ ಪುಣ್ಯನಬುಜಭವ
ಈ ಕಡುಹಿನಾತಗಳನಾನುವ
ಡೀ ಕಪರ್ದಿಯೆ ಸಾಕು ಕೆಲನವ
ರಾಕೆವಾಳರೆ ಎನುತಲಿರ್ದುದು ಮೇಲೆ ಸುರಕಟಕ ೩೮

ಉರಿಯ ಸರಿಗೇರಿದ ಪತಂಗಕೆ
ಮರುಳುದಲೆಯೇ ಮತ್ತೆ ರಣದಲಿ
ನರನೊಡನೆ ಕಳನೇರಿದಾತನ ಸತಿ ಸುವಾಸಿನಿಯೆ
ಅರಳ ಹೊಸ ಸಂಪಗೆಯ ಮಧುವನು
ಮರಿಗೆ ತಹವೇ ತುಂಬಿಗಳು ಕೇ
ಳರಸ ಹರಿಬಕೆ ಹೊಕ್ಕ ಸುಭಟರ ಕಾಣೆ ನಾನೆಂದ ೩೯

ಕೇಣವಿಲ್ಲದೆ ಹೊಕ್ಕ ಕುದುರೆಗ
ಳಾಣತಿಯ ತಂಬಿಯ ಕಪೋಲ
ದ್ರೋಣಿಯೊರತೆಯ ಮದದ ಕರಿಗಳ ಕಡುಹ ನಿಜರಥದ
ಸಾಣೆಯಲಗಿನ ಸರಿಯ ಸೋನೆಯ
ಜಾಣತನವೋ ಜಯದ ಸುಭಟರ
ಕಾಣೆನೈ ಕಣೆಯೆರಡರಲಿ ಸಂವರಿಸಿದನು ಪಾರ್ಥ ೪೦

ವೀರದುಶ್ಶಾಸನನು ಕರ್ಣಕು
ಮಾರಕರು ನೀ ಸಾಕಿದಗ್ಗಳ
ವೀರದಳ ಕೌರವ ಸಹೋದರಸೇನೆ ಮೊದಲಾಗಿ
ತೀರಿತಾಹವದಲಿ ಕುರುಧ್ವಜ
ವಾರುಧಿಗೆ ಸರಿಯಾಯ್ತು ನಿನ್ನ ಕು
ಮಾರನಿಂಗಿತವರಿದು ಸಮರಕೆ ಕರ್ಣನನುವಾದ ೪೧

## ಇಪ್ಪತ್ತೊಂದನೆಯ ಸಂಧಿ

ಸೂ. ವೈರಿಗಜ ಪಂಚಾನನನು ರಣ
ಧೀರನಪ್ರತಿಮಲ್ಲ ಕರ್ಣನು
ದಾರದಲಿ ಹಳಚಿದನು ಹನುಮನ ಹಳವಿಗೆಯ ರಥವ

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳಸುಮ್ಮಾನವನು ತನುರೋ
ಮಾಳಿ ಪಲ್ಲವಿಸಿದುದು ಪರಿತೋಷಪ್ರವಾಹದಲಿ
ಕಾಳೆಗಕೆ ಕೈವೊಯ್ದು ಹಗೆವನ
ಮೇಳಯದ ಕಳನೇರಿದನು ತ
ನ್ನಾಳುತನವನು ತೋರಲಾಯ್ತೆನುತುಬ್ಬಿದನು ಕರ್ಣ ೧

ಆಳ ಹೊಯ್ ಹೊಯ್ ನಾಯಕರ ನಿಲ
ಹೇಳು ಕೃಪ ಗುರುನಂದನಾದಿಗ
ಳಾಲಿಗಳಿಗೌತಣವ ರಚಿಸುವೆ ನಿಮಿಷ ಸೈರಿಸಲಿ
ಕಾಳೆಗದಲಿಂಧಹಿತರಾಯರ
ಭಾಳಲಿಪಿಗಳನೊರಸುವೆನು ಭೂ
ಪಾಲಕನ ಮೊಗವಡದ ದುಗುಡವನುಗಿವೆ ನಾನೆಂದ ೨

ತರಿಸಿ ಸಾದು ಜವಾಜಿಗಳ ಹೊಂ
ಭರಣಿಯಲಿ ಮೊಗೆಮೊಗೆದು ಶಲ್ಯಗೆ
ಸುರಿದು ಹಡಪಿಗ ಚಮರ ಬಾಹೆಯ ಬಾಣದಾಯಕರ
ಕರೆದು ಮನ್ನಿಸಿ ತನ್ನನತಿವಿ
ಸ್ತರಿಸಿ ಹೊಸಮುಡಿವರ್ಗದಲಿ ಮಿಗೆ
ಮೆರೆದು ರಣಸುಮ್ಮಾನದಲಿ ಹೊಗರೇರಿದನು ಕರ್ಣ ೩

ತೊಳಗಿ ಬೆಳಗುವ ಶಿರದ ಪಚ್ಚೆಯ
ಹಳುಕು ಬೆರಸಿದ ವೀಳೆಯವನಿ
ಕ್ಕೆಲದ ಶಲ್ಯಾದಿಗಳಿಗಿತ್ತನು ವರರಥಾಗ್ರದಲಿ
ಕಳಚಿ ತೆಗೆದನು ಜೋಡ ಮೈವೆ
ಗ್ಗಳಿಸಿ ದಳವೇರಿದುದು ಮನ ಮೊಗ
ಥಳಥಳಿಸೆ ಬಹಳಪ್ರತಾಪದಲಿರ್ದನಾ ಕರ್ಣ ೪

ತಳಿತು ಮುತ್ತುವ ಮುಗಿಲ ಝಾಡಿಸಿ
ಝಳಪಿಸುವ ರವಿಯಂತೆ ಭುವನವ
ಬೆಳಗಲುದ್ರೇಕಿಸುವ ಭಾರ್ಗವ ಭಾಳಶಿಖಿಯಂತೆ
ಹೊಳೆಹೊಳೆವ ಕರ್ಣಪ್ರತಾಪಾ
ನಳನ ನಾಟ್ಯವ ಕಂಡು ಕೌರವ
ಬಲದೊಳೊಸಗೆಯ ಲಗ್ಗೆ ಮಸಗಿತು ಭೂಪ ಕೇಳೆಂದ ೫

ರಾಯನನುಜನ ರುಧಿರ ಜೀವದ
ಬೀಯದಲಿ ಕರ್ಣಾತ್ಮಜನ ಕುಲಿ
ಶಾಯುಧನ ಸಾಲೋಕ್ಯದಲಿ ಕಣ್ದೆರೆದ ವೇದನೆಯ
ಆಯಸವ ನೆರೆ ಮರೆದು ಕೌರವ
ರಾಯ ಭುಲ್ಲವಿಸಿದನು ಲಹರಿಯ
ಘಾಯದಲಿ ಸೂಳೈಸಿದವು ನಿಸ್ಸಾಳಕೋಟಿಗಳು ೬

ಸಾರಿ ಸುಭಟರ ಜರೆವ ಕಹಳೆಯ
ಗೌರುಗಳ ತಿತ್ತಿರಿಯ ಚಿನ್ನದ
ಚೀರುಗಳ ನಿಡುಗೊಂಬುಗಳ ಚೆಂಬಕನ ನಿರ್ಘೋಷ
ಡೋರುಗಳೆದುವು ನೆಲನನುದಧಿಯ
ಕಾರಿಸಿದವಡಿಮಳಲನೆನೆ ಹುರಿ
ಯೇರಿತಬ್ಬರವಿವರ ಬಲದಲಿ ಭೂಪ ಕೇಳೆಂದ ೭

ರಥವಿಳಿದು ಬಲವಂದು ನಿಜಸಾ
ರಥಿಗೆ ಕೈಮುಗಿದಶ್ವಚಯಕತಿ
ರಥಭಯಂಕರನೆರಗಿ ಕಂದವ ತಟ್ಟಿ ಬೋಳೈಸಿ
ರಥವನಡರಿದು ನೋಡಿ ಗಗನದ
ರಥಿಗೆ ತಲೆವಾಗಿದನು ಲೋಕ
ಪ್ರಥಿತಸಾಹಸಮಲ್ಲ ಮುದದಲಿ ತುಡುಕಿದನು ಧನುವ ೮

ಸರಳ ಹೊದೆಗಳ ತುಂಬಿ ಬಂಡಿಯ
ನರಸ ಕಳುಹಿದನೆಂಟುನೂರನು
ಚರರು ಪರಿವೇಷ್ಟಿಸಿತು ಪರಿಚಾರಕರ ವಿಗ್ರಹದ
ಸರಿಸ ಸಿಂಧವನೆತ್ತಿಸುತ ಬೊ
ಬ್ಬಿರಿದು ಜವನಿಕೆವಿಡಿದು ಭೀಮನೊ
ನರನೊ ನಿಲುವವರಾರು ಬರಹೇಳೆಂದನಾ ಕರ್ಣ ೯

ಮಾತು ತಪ್ಪಿತು ರಿಪುಗಳೈವರಿ
ಗೌತಣಿಸಿದೆವು ನೆರವಿನಲಿ ಪುರು
ಹೂತ ಶಿಖಿ ಯಮ ನಿರುತಿ ವರುಣ ಸಮೀರ ಹರಸಖರು
ಆತುಕೊಳಲಿಂದೀ ಸುಯೋಧನ
ಜಾತಪುಣ್ಯನೊ ಧರ್ಮಪುತ್ರನೆ
ಭೂತಭಾಗ್ಯನೊ ಕಾಣಲಹುದೈ ಶಲ್ಯ ಕೇಳೆಂದ ೧೦

ಸರಳೊಳಾಯ್ದು ಮಹಾಸ್ತ್ರವನು ಸಂ
ವರಿಸಿದನು ಬತ್ತಳಿಕೆಯಲಿ ಮಾ
ರ್ತಿರುವ ಬೆರಳಲಿ ತೀಡಿ ಕೊಪ್ಪಿನ ಬಲುಹನಾರೈದು
ತಿರುವನೇರಿಸಿ ಮಿಡಿಮಿಡಿದು ಪೊಂ
ಬರಹದವನಿನ್ನೂರು ಚಾಪವ
ನಿರಿಸಿದನು ಕೆಲದವರ ತೊಲಗಿಸಿ ವಾಮಭಾಗದಲಿ ೧೧

ತಿರುವ ಬೆರಳಲಿ ಮಿಡಿದು ಕೆನ್ನೆಗೆ
ಬರಸೆಳೆದು ಉಳಿವಡೆದು ಹೂಡಿದ
ಸರಳ ಕಿವಿವರೆಗುಗಿದು ಬೈಸಿಗೆದೆಗೆದು ಠಾಣದಲಿ
ಪರಿವಿಡಿಯನಾರೈದು ಗರುಡಿಯ
ಗುರುವ ನೆನೆದನು ವೈರಿಸೇನೆಯ
ತರುಬಿ ನಿಂದನು ಕಾದುವಣ್ಣನ ಬೇಗ ಕರೆಯೆನುತ ೧೨

ಭೀತಿಗೊಳುತದೆ ಮಾರುಬಲ ಮಸ್ಥು
ಪೂತು ದಕ್ಕಡ ದಿಟ್ಟರಿಪು ಸಂ
ಘಾತ ವಾರಿಧಿ ಬಾಡಬಾನಲ ಕೀರ್ತಿಜಗಝಂಪ
ಜಾತರಿಪು ನಿರ್ಮಥನವೈರಿ
ವ್ರಾತ ಕಾನನ ಧೂಮಕೇತುವ
ರಾತಿಪರ ಜಯ ಜೀಯ ಎಂದುದು ವಂದಿಸಂದೋಹ ೧೩

ಒಳಗೆ ಸುಳಿಸುಳಿಗೊಂಡು ಪಾಂಡವ
ಬಲಪಯೋಧಿ ಪರಿಭ್ರಮಿಸೆ ಕ
ಕ್ಕುಳಿಸಿದಗ್ಗಳಿಕೆಗಳ ಸುಕ್ಕಿದ ಸಾಹಸೋನ್ನತಿಯ
ಕಳಕಳವ ಕಣ್ಣೆರವೆಗಳ ಮನ
ಗಲಿತನದ ಮುಳುಮೊಟ್ಟುಗಳ ವೆ
ಗ್ಗಳೆಯರಿದ್ದುದು ಭೀಮ ಸಾತ್ಯಕಿ ಸೃಂಜಯಾದಿಗಳು ೧೪

ಮುಸುಕಿತೋ ಕರ್ಣಪ್ರತಾಪದ
ಬಿಸಿಲು ಪಾಂಡವ ಕುಮುದ ಕಾನನ
ವಿಸರವನು ವಿಗ್ರಹದ ಮುಖ ಲೇಸೆನುತ ಕುರುಸೇನೆ
ಮುಸಗಿದಂಬುಧಿಯಂತೆ ಮಿಗೆ ಗ
ರ್ಜಿಸಲು ಗರುವರ ಗಾಢ ಶೌರ್ಯದ
ಬೆಸುಗೆ ಬಿಡೆ ಗಾಂಡಿವವ ದನಿಮಾಡಿದನು ಕಲಿಪಾರ್ಥ ೧೫

ಅರಸ ಕೇಳೈ ಧೂರ್ಜಟಿಯ ಡಾ
ವರದ ಡಮರಧ್ವನಿಯೊ ವಿಲಯದ
ಬರಸಿಡಿಲ ಬೊಬ್ಬಾಟವೋ ಕಲ್ಪಾಂತಸಾಗರದ
ತೆರೆಗಳಬ್ಬರವೋ ಧನಂಜಯ
ಕರನಿಹಿತ ಗಾಂಡಿವದ ಮೌರ್ವೀ
ಸ್ಫುರಿತ ಕಳಕಳವೊದೆದುದಬುಜಭವಾಂಡಮಂಡಲವ ೧೬

ಥೀಳಿಡಲು ಕಿವಿಗಳಲಿ ಕುರುಬಲ
ಜಾಲ ಜರಿದುದು ಜಾತಭುವನಾ
ಸ್ಫಾಳಪುನರಾಗತ ಮಹಾಧ್ವನಿ ಕದಡಿತಂಬುಧಿಯ
ಮೇಲುಮೊಳಗಿನ ದನಿಯನಾಲಿಸಿ
ಹೀಲಿಗೆದರುವ ನವಿಲವೊಲು ನಿ
ನ್ನಾಳು ಬಾಹಪ್ಪಳಿಸಿ ಹಿಗ್ಗಿದನರಸ ಕೇಳೆಂದ ೧೭

ಸಂತವಿಸಿತಾ ಸೇನೆ ಕುರುಬಲ
ಕಂತುಹರನುದ್ಯೋಗವಾಗೆ ನಿ
ರಂತರದ ನಿಸ್ಸಾಳಸೂಳಿನ ಲಗ್ಗೆದಂಬಟದ
ಅಂತರಿಕ್ಷದೊಳುಲಿವ ಸುಮನಸ
ಸಂತತಿಯ ಘನಸಾಧುವಾದಶ
ಕುಂತಸೂಚಿತ ಭದ್ರಭಾಷಣವೆಸೆದುದಾಚೆಯಲಿ ೧೮

ಹರಿಗೆ ಕೈಮುಗಿದೆರಗಿ ತೇರಿನ
ಹರಿಗಳಿಗೆ ವಂದಿಸಿ ಪತಾಕೆಯ
ಹರಿಗೆ ನಮಿಸಿ ನಿಜಾಯುಧಕೆ ಕೈಮುಗಿದು ಜೇವೊಡೆದು
ಹರಿ ಧನಂಜಯ ಧರ್ಮ ನೈರುತಿ
ವರುಣ ಮಾರುತ ವೈಶ್ರವಣ ಶಂ
ಕರ ವಿರಿಂಚಾದಿಗಳಿಗಭಿವಂದಿಸಿದನಾ ಪಾರ್ಥ ೧೯

ಭರತಕುಲಸಂಭಾಳು ಜಯ ಹಿಮ
ಕರ ಪುರೂರವ ನಹುಷ ನಳ ನೃಗ
ವರ ಯಯಾತಿಪ್ರಕಟ ವಿಮಳಾನ್ವಯದೊಳವತರಿಸಿ
ಧುರಕೆ ಮನವಳುಕಿದರೆ ಹಜ್ಜೆಯ
ತಿರುಪಿದೊಡೆ ಕುಲಕೋಟಿಕೋಟಿಗೆ
ನರಕವೆಂದೆಚ್ಚರಿಸಿದರು ಭಟ್ಟರು ನಿಜಾನ್ವಯವ ೨೦

ಹಿಡಿಯೆ ಜವನಿಕೆ ಸಕಲಬಲ ಸಂ
ಗಡಿಸಿತೊಂದೇ ಮುಖದಲೀ ದಳ
ಗಡಣೆಸಿತು ಮುಂದಿಕ್ಕಿ ಕರ್ಣನನೇಕಮುಖವಾಗಿ
ಪಡಿಬಲಕೆ ಭೀಮಾದಿಭಟರಾ
ಕಡೆಯಲನುವಾಯ್ತೀಚೆಯಲಿ ನೆಲ
ನೊಡೆಯ ಕೃಪ ಗುರುಜಾದಿಗಳು ಕೈಗೈದರೊಗ್ಗಿನಲಿ ೨೧

ದಳವೆರಡ ಹಿಂದಿಕ್ಕಿ ರಥರಥ
ಹೊಳೆದು ಸುಳಿದೌಕಿದವು ಕುಲಗಿರಿ
ಕುಲಗಿರಿಗೆ ದಿಕ್ಕರಿಗೆ ದಿಕ್ಕರಿ ಜೋಳಿದೆಗೆದಂತೆ
ಬಲನ ವಜ್ರನ ಕಾಲನೇಮಿಯ
ಜಲರುಹಾಕ್ಷನ ರಾವಣನ ರಘು
ಕುಲನ ದೆಖ್ಖಾದೆಖ್ಖಿ ಜೋಡಿಸಿತಾತನೀತನಲಿ ೨೨

ನೆಲನ ರಾಜ್ಯಶ್ರೀಯ ತುರುಬಿಂ
ಗಳುಕದಂಘೈಸಿದ ವಿರೋಧಿಯ
ಲಲನೆಯರ ಶ್ರುತಿಪತ್ರ ಸೀಳಲಿ ಸಾಲ ಹಿಂಗಿತಲ
ಅಳಿದ ವೃಷಸೇನಕನ ತಾಯ್ಗಳು
ಮೆಲಲಿ ವೀಳೆಯವನು ಕಿರೀಟಿಯ
ತಲೆಯ ತೆರಿಗೆಗೆ ತಾವೆ ಹೊಣೆಯೆಂದುದು ಭಟಸ್ತೋಮ ೨೩

ಇಟ್ಟಟಿಸುತದೆ ಧುರಕೆ ರಾಯಘ
ರಟ್ಟ ಪಾರ್ಥನ ತೇರು ತೇಜವ
ದಿಟ್ಟಿಸುವಡೆವೆ ಸೀಯ್ಯವೇ ಘಡ ಸೂತಸುತನಳವೆ
ಕೆಟ್ಟುದಿನ್ನೇನಹಿತಬಲ ಜಗ
ಜಟ್ಟಿ ಗೆಲಿದನು ಧರ್ಮಪುತ್ರನ
ಪಟ್ಟದಾನೆಯೆನುತ್ತಲಿರ್ದುದು ಪಾಂಡುಸುತಸೇನೆ ೨೪

ಉಲಿದುದೀ ಬಲ ಸೂತಸುತನ
ಗ್ಗಳಿಕೆಯನು ಕೊಂಡಾಡಿ ಪಾರ್ಥನ
ಬಲುಹ ಬಹುವಿಧದಿಂದ ಬಣ್ಣಿಸುತಿದ್ದುದಾ ಸೇನೆ
ಲಳಿಯ ಲಗ್ಗೆಯ ನಿಖಿಳವಾದ್ಯದ
ಕಳಕಳವನಡಿಗಿಕ್ಕಿ ಮಲೆತುದು
ಬಲದೊಳಿಬ್ಬರ ಬಿರುದ ಪಾಡುಪವಾಡುಗಳ ರಭಸ ೨೫

ಭಾರಿಯಂಕದ ಭಟರಿವರು ಜು
ಜ್ಝಾರರೈ ತಮ್ಮಾಯತವ ತ
ಮ್ಮಾರುಭಟೆಯನು ಲಕ್ಷ್ಯ ಲಕ್ಷಣ ಭೇದ ಭಂಗಿಗಳ
ಸಾರತರ ಕೋದಂಡಪಂಡಿತ
ರಾರಯಿಕೆಯಲಿ ತರುಬಿ ನಿಂದರು
ಭಾರತದೊಳಿಂದೊಂದು ಚಿತ್ರವ ಕಂಡೆ ನಾನೆಂಪ ೨೬

## ಇಪ್ಪತ್ತೆರಡನೆಯ ಸಂಧಿ

ಸೂ. ಸಕಲ ದನುಜ ಭುಜಂಗ ವೃಂದಾ
ರಕಮಹಾಭೂತಾದಿಲೋಕ
ಪ್ರಕರವೆರಡೊಡ್ಡಾಯ್ತು ಕರ್ಣಾರ್ಜುನರ ಕದನದಲಿ

ಹೇಳು ಸಂಜಯ ಕರ್ಣಪಾರ್ಥರ
ಕಾಳಿಗದೊಳೇನಾಯ್ತು ಚಿತ್ರವ
ಕೇಳುವೆನು ಕರ್ಣಾಮೃತವೊ ಕರ್ಣವ್ಯಥಾಹವವೊ
ಹೇಳು ನೀನಂಜದಿರು ಕುರುಕುಲ
ಕಾಲಸರ್ಪನ ತಾಯಿಂದರ ಸೀ
ತ್ರಾಳಮಳಿಗೆಯಲೇ ಮಹಾದ್ಭುತವೇನು ಹೇಳೆಂದ ೧

ಅರಸ ಕೇಳಾದರೆ ಮಹಾವಿ
ಸ್ತರವನಾ ಕರ್ಣಾರ್ಜುನರ ರಥ
ಸರಿಸದಲಿ ಚಾಚಿದುವು ನೋಟಕರಾದುದುಭಯಬಲ
ಹರಿ ವಿರಿಂಚ ಸುರೇಂದ್ರ ದಿಗುಪಾ
ಲರು ಚತುರ್ದಶ ಮನುಗಳಾದಿ
ತ್ಯರು ಭುಜಂಗಮ ವಿಶ್ವವಸುಗಳು ನೆರೆದುದಭ್ರದಲಿ ೨

ಏನ ಹೇಳುವೆನವನಿಪತಿ ವೈ
ಮಾನಿಕರ ಹಂತಿಗಳ ಹರ ಚತು
ರಾನನರ ವೊಡ್ಡೋಲಗದ ವಾಗ್ಜನಿತ ವಿಗ್ರಹವ
ಭಾನುಜನ ಭಾರಣೆಯನರ್ಜುನ
ನಾನಲಳವೇ ಫಲುಗುಣಗೆ ರವಿ
ಸೂನುವೇ ಫಡಪಾಡೆ ಎಂದುದು ಮೇಲೆ ಸುರಕಟಕ ೩

ರಾಸಿ ತಾರಾಗಣಸಹಿತವಾ
ಕಾಶ ಕರ್ಣನ ಕಡೆ ಸಮೀರ ಹು
ತಾಶನಾಂಬುಧಿ ಗಿರಿಸಹಿತಲೀ ಧರಣಿ ಪಾರ್ಥನಲಿ
ಆ ಸುರಾರಿಪ್ರಮುಖ ಯಕ್ಷರಿ
ಗಾಸೆ ಕರ್ಣನ ಮೇಲೆ ನಾಕನಿ
ವಾಸಿ ನಿರ್ಜರನಿಕರವಾದುದು ನರನ ಕೈವಾರ ೪

ವಿತತ ಮಂತ್ರಾಖ್ಯಾನ ವೇದ
ಸ್ಮೃತಿ ಪುರಾಣ ಷಡಂಗವಿಂದ್ರನ
ಸುತನ ದೆಸೆಯುಚ್ಚಾಟನಸ್ತಂಭಾದಿ ವಿದ್ಯೆಗಳು
ಕ್ಷಿತಿಪ ಕೇಳ್ಳೈ ಕರ್ಣನತ್ತಲು
ಕ್ರತುಗಳಾ ದೆಸೆಯಾಭಿಚಾರ
ಕ್ರತುಗಳೀ ದೆಸೆಯಾಗಿ ನಿಂದವು ನೃಪತಿ ಕೇಳೆಂದ ೫

ವಿವಿಧ ರತ್ನಾವಳಿ ಮಹಾನಿಧಿ
ಯುವರ ದೆಸೆ ರಜತಾದಿ ಲೋಹ
ಪ್ರವರ ಧಾತುಗಳಿತ್ತಲತ್ತಲು ನಿಮ್ಮ ಥಟ್ಟಿನಲಿ
ರವಿ ಶನೈಶ್ಚರ ರಾಹು ಬುಧ ಭಾ
ರ್ಗವರು ಕರ್ಣನ ದೆಸೆಯಲಾ ವಿ
ಕ್ಕವರು ಪಾರ್ಥನ ದೆಸೆಯಲಾಯಿತು ರಾಯ ಕೇಳೆಂದ ೬

ಶೇಷ ಕಾರ್ಕೋಟಕನು ತಕ್ಷಕ
ವಾಸುಕಿ ಪ್ರಮುಖರಿಗೆ ವಿಜಯದ
ವಾಸಿ ಪಾರ್ಥನ ಮೇಲೆಯುಳಿದೀ ಕ್ರೂರಫಣಿಗಳಿಗೆ
ಆಸೆ ಕರ್ಣನ ಮೇಲೆ ಖಗಮೃಗ
ಕೇಸರಿಗಳಾಚೆಯಲಿ ಜಂಬುಕ
ಕಾಸರ ವ್ಯಾಳಾದಿ ಖಗಮೃಗವಿತ್ತಲಾಯ್ತೆಂದ ೭

ಯಾತುಧಾನ ಕುಬೇರ ಕಿನ್ನರ
ಮಾತೃಗಣ ಕರ್ಣನಲಿ ಸುಮನೋ
ಜಾತ ಚಿತ್ರರಥಾದಿ ಗಂಧರ್ವರು ವಿಪಕ್ಷದಲಿ
ಭೂತಗಣವೀಚೆಯಲಿ ದೆಸೆ ದಿಗು
ಜಾತ ಮನು ವಸು ನಾರದಾದಿ ಮ
ಹಾತಪಸ್ವಿಗಳತ್ತಲಾಯಿತು ರಾಯ ಕೇಳೆಂದ ೮

ಭರತ ನಳ ನಹುಷಾದಿ ಭೂಮೀ
ಶ್ವರರು ಪಾರ್ಥನ ದೆಸೆಗೆ ಮಹಿಪಾ
ಸುರ ದಶಾನನ ತಾರಕಾದಿಗಳಾದುದೀಚೆಯಲಿ
ಸುರಮುನಿಗಳಿಂದ್ರಾನಲಾಂತಕ
ವರುಣ ವಾಯು ಮಹೇಶ ವಿದ್ಯಾ
ಧರರು ಪಾರ್ಥನ ದೆಸೆಯಲೈದಿತು ಭೂಪ ಕೇಳೆಂದ ೯

ಖ್ಯಾತಿ ತೇಜಸ್ತೋಮ ವೀರ
ಪ್ರೀತಿ ವಿಕ್ರಮ ಸತ್ಯ ಸಿದ್ಧಿ ವಿ
ಭೂತಿ ಶೌರ್ಯ ತಪಃ ಕ್ಷಮಾದಿಗಳಾದುದಾಚೆಯಲಿ
ಭೀತಿ ಕಾಮ ಕ್ರೋಧ ಕಲಿ ದು
ರ್ನೀತಿ ಮದವಖ್ಯಾತಿ ಮಾನವಿ
ಘಾತಿ ವಿಭ್ರಮ ಕೈತವಾದಿಗಳಾದುದೀಚೆಯಲಿ ೧೦

ಭೃಗು ವಸಿಷ್ಠಾಂಗಿರಸ ದಕ್ಷಾ
ದಿಗಳು ಪಾರ್ಥನ ಪಕ್ಷವಾಯ್ತೀ
ಚೆಗೆ ಪುಲಸ್ತ್ಯ ಮರೀಚಿ ವಿಶ್ವಾಮಿತ್ರ ಗೌತಮರು
ಜಗದ ಜೀವರು ಧಾತುಮೂಲಾ
ದಿಳೊಳಿಕ್ಕಟ್ಟಾದುದೀ ಕಾ
ಳೆಗ ಚತುರ್ದಶ ಭುವನಜನ ಸಂಕ್ಷೋಭವಾಯ್ತೆಂದ ೧೧

ಲೋಕವಿವರಲಿ ಪಕ್ಷಪಾತವಿ
ದೇಕೆ ನೋಡೈ ನಿಮ್ಮ ಕರ್ಣನು
ಲೋಕವಿಖ್ಯಾತ ಪ್ರತಾಪನಲಾ ಮಹಾದೇವ
ಆ ಕೃತ ತ್ರೇತೆಯಲಿ ಕಾದಿದ
ನೇಕ ದಿವಿಜಕ್ಷತ್ರದನುಜಾ
ನೀಕವೀ ಪರಿ ಚಿತ್ರವಿಲ್ಲವನೀಶ ಕೇಳೆಂದ ೧೨

ಅರಸ ಕೇಳೈ ಶಕ್ರ ಸೂರ್ಯರ
ಮರುಳುತನವೋ ಮೇಣು ಮರ್ತ್ಯಾ
ಚರಣೆಗಳ ನಾಟಕವೊ ಮೇಣ್ ಸಾಂಸಾರಿಕ ಭ್ರಮೆಯೊ
ನರನಲೇ ಲೋಕೈಕವೀರನು
ಧಿರುರೆ ಮಝ ಭಾಪೆಂಬ ಸಡಿಫಡ
ಸರಿಯೆ ಕರ್ಣಂಗೆಂಬ ಕಳಕಳ ಕೇಳಲಾಯ್ತೆಂದ ೧೩

ಈ ಪರಿಯಲೆರಡಿಟ್ಟ ಜಗದಾ
ಳಾಪವನು ಕರ್ಣಾರ್ಜುನರ ಪ
ಕ್ಷೋಪಚಾರ ಪ್ರಕಟ ಕಲಹ ಕಠೋರ ಕಳಕಳವ
ಆ ಪುರಂದರ ಕಮಲಸಖರಾ
ಟೋಪವನು ಭುವನಾಪಘಾತವ
ನಾ ಪಿತಾಮಹನರಿದು ಸಂತೈಸಿದನು ಸಾಮದಲಿ ೧೪

ಅರಸ ಚಿತ್ತೈಸುಭಯಬಲದು
ಬ್ಬರದ ಬಹುವಿಧವಾದ್ಯರವದು
ಬ್ಬರವ ಮುಕ್ಕಳಿಸಿತು ಪಾಠಕರ ನಿಕರ ನಿರ್ಘೋಷ
ಸುರರ ಕಳಕಳವೀ ಧ್ವನಿಯನು
ತ್ತರಿಸಿತೀ ಬಲುಗಜಬಜವ ನಡ
ತರದೊಳಿಕ್ಕಿತು ಕರ್ಣಪಾರ್ಥರ ಚಾಪಟಂಕಾರ ೧೫

ಅಳವಿಯಂಕೆಯ ಮೀರಿ ರಥರಥ
ಹಳಚಿದವು ಬಹುಮಾನದಲಿ ವೆ
ಗ್ಗಳಿಸಿದವು ವೇಗಾಯ್ಲವಾಜಿಯ ಲಳಿಯ ಲಹರಿಯಲಿ
ಹೊಳೆದವೆಡಬಲವಾಘೆ ಸನ್ನೆಯ
ಸುಳಿವ ಸುಭಟರ ಬವರಿ ಭಂಗಿಯ
ಲುಳಿಯ ಸೂತರ ರೇಖೆ ಸೆಳೆದುದು ಜನದ ಕಣ್ಮನವ ೧೬

ಉಪ್ಪರಿಸಿ ಲಳಿಯೆದ್ದು ಸೂತರ
ಚಪ್ಪರಣೆಗಳ ಮೀರಿ ಖುರದಲಿ
ಚೊಪ್ಪರಿಸಿ ಹೊಯ್ದಾಡಿದವು ಹೇಷಿತದ ಹಲ್ಲಣೆಯ
ದರ್ಪದಲಿ ತೇಜಿಗಳು ತೇಜಿಯ
ತಪ್ಪಡಿಗೆ ಲಟಕಟಿಸಿದವು ರಣ
ವೊಪ್ಪಿತೈ ಕರ್ಣಾರ್ಜುನರ ರಥವಾಜಿ ವಾಜಿಗಳ ೧೭

ಅರಸ ಕೇಳೇನೆಂಬೆನೈ ಕಪಿ
ವರನ ಕೋಳಾಹಳವ ಕದನವ
ಕರೆದು ನಖದಲಿ ಹೊಯ್ದು ಕರದಲಿ ಕಾದುವಂದದಲಿ
ಮುರಿದು ಬಾಲದಲಡಿಗಡಿಗೆ ಬೊ
ಬ್ಬಿರಿದು ಹೆಣಗಿದನಿನಸುತನ ಭಾ
ಸುರದ ಹೇಮಧ್ವಜದ ಹಲಗೆಯ ಹಸ್ತಿಕಕ್ಷದಲಿ ೧೮

ಏನ ಹೇಳುವೆ ಸೂತತನದಭಿ
ಮಾನವೇರಿದ ಪರಿಯನಾ ವೇ
ಷಾನುರೂಪ ವಿಚೇಷ್ಟೆಯನು ಲೋಕೈಕ ಚೇಷ್ಟಕನ
ನೀನೆನಗೆ ಸಾರಥಿತನದಲಿ ಸ
ಮಾನನೇ ಫಡ ತುರುಗಹೃದಯ
ಜ್ಞಾನ ನಿನಗೇಕೆನುತ ಶಲ್ಯನ ಜರಿದನಸುರಾರಿ ೧೯

ಅಕಟ ಗೋರಕ್ಷಕನೆ ಪಶುಪಾ
ಲಕರ ಮಕ್ಕಳೊಳಶ್ವಹೃದಯ
ಪ್ರಕಟ ವಿಜ್ಞಾನಂಗಳುದಿಸಿದವೇ ವಿಶೇಷವಲಾ
ವಿಕಳರಾವಿದನೆತ್ತಬಲ್ಲೆವು
ಸಕಲಗುಣಸರ್ವಜ್ಞ ನಿನಗೀ
ಬಕವಿಡಂಬನವೇಕೆನುತ ಮೂದಲಿಸಿದನು ಶಲ್ಯ ೨೦

ಧಾರುಣೀಪತಿ ಕೇಳು ಬಿಲುಟಂ
ಕಾರ ಕದನೋಪಕ್ರಮದೊಳೋಂ
ಕಾರವಾಯಿತು ಕಾರ್ಮುಕಸ್ವಾಧ್ಯಾಯವಿಸ್ತರಕೆ
ಭೂರಿ ಬಹುವಿಧ ಬಾಣವರ್ಗವಿ
ಹಾರವೆಸೆದುದು ಕರ್ಣಪಾರ್ಥರು
ದಾರ ಸಮರಾರಂಭವಳ್ಳಿರಿದುದು ಜಗತ್ರಯವ ೨೧

ಸೂತಜಾತಿಯೊಳೀ ಧನುರ್ವೇ
ದಾತಿಶಯವೆಂತಾಯ್ತು ಪಾರ್ಥಿವ
ಜಾತಿಯಧ್ಯಾಪನವಿಧಾನನಿಯೋಗವಾವನದು
ಪೂತು ಮಝರೇ ಸೈರಿಸಾದಡೆ
ಸೂತನಂದನ ಎನುತ ಬಾಣ
ವ್ರಾತದಲಿ ಹೊದಿಸಿದನು ಕರ್ಣನ ರಥವನಾ ಪಾರ್ಥ ೨೨

ಹರೆಗಡಿದನಾ ಕ್ಷಣದೊಳಾತನ
ಶರವನೆಲವೋ ಪಾರ್ಥ ನಿಮ್ಮೈ
ವರಿಗೆ ಜನಕನು ಪಾಂಡು ನೀವಧ್ಯಯನಯೋಗ್ಯರಲಾ
ಧರೆಯೊಳಗ್ಗದ ರಾಜಸೂಯಾ
ಧ್ವರಕೆ ಪತ್ನಿಯೊ ಯೋಗ್ಯೆ ಯಜಮಾ
ನರುಗಳೈ ನೀವೇನಹೇಳುವವೆನುತ ತೆಗೆದೆಚ್ಚ ೨೩

ಸೂಳೆಯರು ಗಡ ಸಾಮಗಾನವ
ನಾಳಿಗೊಂಬರು ಗಡ ದಿನೇಶನ
ಮೇಳವನು ಮುದುಗೂಗೆ ಮೆಚ್ಚದು ಹಾನಿಯೇನದಕೆ
ಆಳುತನದಂಘವಣೆಯುಂಟ್ಟೆ
ಬೋಳೆಯಂಬಿನಲಾಡಿಕೊಳುಬಿಡು
ಜಾಳುನುಡಿಗಳ ಜವಳಿವಾತನೆನುತ್ತ ನರನೆಚ್ಚ ೨೪

ಆತನೆಚ್ಚ ಶರೌಘವನು ಕಡಿ
ದೀತ ನುಡಿದನು ಹೊಳ್ಳುವಾತಿನ
ಹೋತ ದರಿಹಿಗಳಿವರುಪಾಧ್ಯರು ನಾವು ಸೂಳೆಯರು
ಏತಕೀ ಬಳೆಗೈಗೆ ಬಿಲು ಹಿಣಿ
ಲೇತಕೀ ಚೊಲ್ಲೆಹಕೆ ಚಲ್ಲಣ
ವೇತಕೀ ಹೆಣ್ಣುಡಿಗೆಗೆನುತೆಚ್ಚನು ಧನಂಜಯನ ೨೫

ಕಾಣಿಸಿದನೈ ಕೌರವನ ಹರಿ
ವಾಣದಾಯದ ಹಂತಿಕಾರನು
ಕಾಣಿಕೊಂಕನು ನಮ್ಮ ಚರಿತಕೆ ಹಾ ಮಹಾದೇವ
ಜಾಣತನವೊಳ್ಳೆಯದು ಧರ್ಮಜ
ನಾಣೆ ಬಲ್ಲೆನು ದಿಟವೆನುತ ಬಲು
ಸಾಣೆಯಲಗಿನ ಸರಿಯ ಸುರಿದನು ಸವರಿ ರಿಪುಶರವ ೨೬

ರಾಯುತನವಲಿ ಬೆರೆತು ರಾಜ್ಯ
ಶ್ರೀಯ ನೆರೆ ಹೋಗಾಡಿ ಪರರಿಗೆ
ಜೀಯ ಬೆಸಸುವುದೆಂದು ಜೀವಿಸುವವರು ನಾವಲ್ಲ
ರಾಯುತನವೆಮಗಿಲ್ಲ ಕೌರವ
ರಾಯನೋಲೆಯಕಾರರಹೆವೆ
ಮ್ಮಾಯತವು ತಾ ಬೇರೆನುತ ಕವಿದೆಚ್ಚನಾ ಕರ್ಣ ೨೭

ಆವ ಹಂಜರಕೂಳಿ ಮೊಗವಲೆ
ಯಾವಗಾಣವು ಬೀಸುವಲೆಯುರೆ
ತೀವಿದುದಕದ ಮಡುವೆಯಿದು ಸಂಗ್ರಾಮಭೂಮಿ ಕಣಾ
ಹೇವವಿಲ್ಲದೆ ಕಾದಬೇಹುದು
ಧೀವರರವೋಲ್ ತಡಿಕೆವಲೆಯಲಿ
ಲಾವುಗೆಯ ಹೊಯ್ದಂದವಲ್ಲೆನುತೆಚ್ಚನಾ ಪಾರ್ಥ ೨೮

ನೀವು ನುಡಿದುದು ಹುಸಿಯೆ ಕೂಳಿಯ
ತೀವಿ ತೀವೆವು ಕೊಳಚೆಗಳ ಬಾ
ಣಾವಳಿಯ ತಡಿಕೆಯಲಿ ಹೊಯ್ವೆವು ನಕುಲ ಜಾತಿಯನು
ನಾವು ನಿಮ್ಮಯ ಹೃದಯಸರಸಿಯ
ಜೀವಮತ್ಸ್ಯಕೆ ಗಾಣವಿಕ್ಕುವ
ಧೀವರರು ನೋಡೆನುತ ಪಾರ್ಥನನೆಚ್ಚನಾ ಕರ್ಣ ೨೯

ಬೇರೆ ಕೆಲವಂಬುಗಳು ಗಡ ವೈ
ದೋರಿದವು ನಿನಗೆಂಬರವ ನೀ
ತೋರಿಸಾ ನಿನಗಾಯ್ತು ಗಡ ಶಶಿಮೌಳಿಯುಪದೇಶ
ಹಾರುಗಣೆಗಳ ಹರಸಿ ಹೆಮ್ಮೆಯ
ಬೀರಿ ಚದುರಿಗತನವ ಮೆರೆದರೆ
ನೀರನೆಂಬರೆ ನಿನ್ನನೆನುತೆಚ್ಚನು ಧನಂಜಯನ ೩೦

ಮೊಲನ ಬೇಂಟೆಗೆ ತಿವಿದು ಹಾಸವ
ಕಳಚುವರೆ ಕೇಸರಿಯನಕಟಾ
ಕೊಳಚೆಯುದಕಕೆ ಕೊಂಬುದೇ ಹರಗೋಲ ಬಾಡಗೆಯ
ಗಳಹತನವೇ ಹರನ ಬಾಣಾ
ವಳಿಗೆ ಗುರಿಯೇ ನೀನೆನುತ ಕೈ
ಚಳಕದಲಿ ರಿಪುಶರವ ಖಂಡಿಸಿ ತುಳುಕಿದನು ಪಾರ್ಥ ೩೧

ಡೊಂಬಿಯೇಕೈ ಪಾರ್ಥ ಬಯಲಾ
ಡಂಬರವ ನಾವರಿಯೆವೇ ತ್ರಿ
ಯಂಬಕಾಸ್ತ್ರದ ತೊಡಹವಲ್ಲಾ ನಿನ್ನ ವಿಕ್ರಮಕೆ
ಶಂಬರಾರಿಯ ಕಣೆಯವೊಲು ನಿ
ನ್ನಂಬು ಬಲ್ಲಿದವೆಂದು ಕೆಲದವ
ರೆಂಬರೈ ಹುಸಿಯಲ್ಲೆನುತ ರಿಪುಶರವ ಖಂಡಿಸಿದ ೩೨

ಲೇಸನಾಡಿದೆ ಕರ್ಣ ನೀನೇ
ನೈಸುಖೂಳನೆ ನಿನ್ನವಂದಿಗ
ವೇಷ ವಧುಗಳನುಗಿವಡಿವು ಮದನಾಸ್ತ್ರವೇಕಲ್ಲ
ಈ ಶರಾವಳಿ ಕುಸುಮಮಯ ನೀ
ನೈಸೆ ವನಿತಾಮಯನು ಪುಷ್ಪಶ
ರಾಸನನು ತಾನೆನುತ ಕಣೆಗೆದರಿದನು ಕಲಿಪಾರ್ಥ ೩೩

ಗಂಡುಗಲಿ ನೀ ಕಾಮನೈ ಕೈ
ಕೊಂಡೆವೈ ತಪ್ಪೇನು ನಾವೇ
ಖಂಡಪರಶುಗಳಾಗವೇ ಭವದೀಯ ವಿಗ್ರಹಕೆ
ಕಂಡೆ ನಿನ್ನನು ಸುಭಟವೇಷದ
ಭಂಡನೋ ಫಡ ಹೋಗೆನುತ ಪರಿ
ಮಂಡಳಿತ ಕೋದಂಡನೆಚ್ಚನು ಕರ್ಣನರ್ಜುನನ ೩೪

ನಿಮಿಷ ನಿಮಿಷಕೆ ಹೆಚ್ಚಿತಿಬ್ಬರ
ತಿಮಿರಮಯ ಘನರೋಷವಿಬ್ಬರ
ಸಮರಸಾಹಸಶೌರ್ಯವಿಬ್ಬರ ಕಣೆಯ ಕೈಚಳಕ
ಶ್ರಮವಿಧಾನವ್ಯಾಪ್ತಿಯಿಬ್ಬರ
ಗಮಕವಿಬ್ಬರ ಗಾಢವಿಬ್ಬರ
ಸಮತೆಯಿಬ್ಬರ ಗರ್ವವಿಬ್ಬರ ತೀವ್ರತರತೇಜ ೩೫

ಜನಪ ಕೇಳೈ ಬಳಿಕ ಕರ್ಣಾ
ರ್ಜುನರ ಸಮಸಂಗ್ರಾಮವನು ಗುರು
ತನುಜ ಕಂಡನು ಕೌರವೇಂದ್ರನ ಬಳಿಗೆ ನಡೆತಂದು
ತನತನಗೆ ತೊಲಗಿತು ಮಹೀಶರ
ಮೊನೆಯ ಸಮರಥರಾಜಿ ಗುರುನಂ
ದನನಲಾ ಎನುತಿದಿರುವಂದನು ನಿನ್ನ ಮಗ ನಗುತ ೩೬

ಏನು ಬಂದಿರಿ ಕಾಳೆಗದ ಹದ
ನೇನು ಪಾಂಡವರಾಜತಿಮಿರಕೆ
ಭಾನುವಿನ ಭಾರಣೆಯ ಬಲುಹೇ ನಿಮ್ಮ ದಳಪತಿಯ
ಆನಲಳವೇ ಪಾರ್ಥನೀತನ
ನೇನು ಹದನೈ ರಾಜಕಾರ್ಯನಿ
ಧಾನವೇನೆಂದರಸ ನುಡಿದನು ದ್ರೋಣನಂದನನ ೩೭

ಏನನೆಂಬೆನು ಜೀಯ ಕರ್ಣನ
ನಾನುವಡೆ ಫಲುಗುಣನ ಪಾಡೆ ಕೃ
ಶಾನುನೇತ್ರನೊ ಕೈಟಭಾರಿಯೊ ಕಮಲಸಂಭವನೊ
ಆ ನಿರೂಢಿಯ ದೊರೆಗಳಿವನ ಸ
ಮಾನರೇ ಗುಣದಲಿ ಸಮತ್ಸರ
ಮಾನಿಸನೆ ನಿನ್ನಾಣೆ ಭಾರದ್ವಾಜನಾಣೆಂದ ೩೮

ಹರಿ ಮಹೇಶ್ವರರಾಳುತನಕೆ
ಬ್ಬೆರಳು ಮಿಗಿಲರ್ಜುನನ ಬಲುಹೇ
ಧರೆಯರಿಯಲೀ ಹೊತ್ತಿನಲಿ ನಿನ್ನಾತನಗ್ಗಳಿಕೆ
ಸರಿಗೆ ಸಂದುದೆ ಸಾಕು ತೂಗಿದ
ಡರಸ ರವೆ ಕುಂದದು ಪರಸ್ಪರ
ವರಸುಕಾರ್ಯದ ವಾಸಿ ಬಂದುದು ರಾಯ ಕೇಳೆಂದ ೩೯

ಒಮ್ಮೆ ಮುರಿವುದು ವೈರಿದಳ ಮು
ತ್ತೊಮ್ಮೆ ಮುರಿವುದು ನಮ್ಮ ದಳ ಬಳಿ
ಕೊಮ್ಮೆ ಮಕ್ಕಳತಂಡವವರಲಿ ನಮ್ಮ ಥಟ್ಟಿನಲಿ
ನಮ್ಮ ದೆಸೆ ಬಲುದೊರೆಗಳಳಿವಿನೊ
ಳೊಮ್ಮೆ ಹೋಯಿತು ಹೊತ್ತು ರಣದಲಿ
ನಮ್ಮ ವಿಳಸಕೆ ಮೇಲುವಾಸಿ ನೃಪಾಲ ಕೇಳೆಂದ ೪೦

ಸರಿಗಳೆವೆನೆರಡಂಕವನು ನಾ
ಕರಸಿ ಕೊಡುವೆನು ಧರ್ಮಜನನೆರ
ಡರಸುಗಳು ಸರಿಯಾಗಿ ಭೋಗಿಸುವುದು ಮಹೀತಳವ
ಅರಸ ಕರ್ಣನ ಕೆಡಿಸದಿರು ನಿ
ಷ್ಠುರದ ನುಡಿಯಿದು ಕೆಂಡದಲಿ ಕ
ರ್ಪುರವ ಹಾಯ್ಕದಿರೆಂದು ರಾಯನ ಗಲ್ಲವನು ಪಿಡಿದ ೪೧

ಆಗಲಿದು ತಪ್ಪೇನು ಸಂಪ್ರತಿ
ಯಾಗಬೇಡೆಂದೆನೆ ಮಹಾಹವ
ವೀಗ ಸರಿಬರಿಯಾಯ್ತು ಬಂದುದು ವಾಸಿಯೆಂದಿರಲಿ
ಈಗಲಭಿಮನ್ಯುವಿನ ಲಕ್ಷಣ
ಹೋಗಲಾ ಸೈಂಧವಗೆ ದ್ರುಪದನ
ನೀಗಲದು ಸರಿಯಾಗಲೆಂದನು ಕೌರವರಾಯ ೪೨

ಗುರುನದೀಸುತರಳಿವುಭಯರಾ
ಯರಿಗೆ ಸರಿ ದುಶ್ಶಾಸನನ ನೆ
ತ್ತರದಿ ಪಾನಕ್ರೀಡನಾ ಸೌಭಾಗ್ಯಸಂಪದಕೆ
ಸರಿಯದಾವದು ಕರ್ಣತನಯನ
ಮರಣಕಾವುದು ಸರಿಸ ಭೀಮನ
ಕರುಳಲೆನ್ನಯ ಕರುಳು ತೊಡಕಲು ಮೇಲೆ ಸಂಧಾನ ೪೩

ಈ ದಿವಿಜರೀ ಸೇನೆಯೀ ಕ
ರ್ಣಾದಿ ಸುಭಟರು ನಾವು ನೀವೀ
ಮೇದಿನೀಶ್ವರರಖಿಳನಾಯಕರವರ ಥಟ್ಟಿನಲಿ
ಈ ದುರಾಗ್ರಹವುಚಿತವಲ್ಲೆನೆ
ಸೋದರನ ತನುಗೆಡಹಿ ರಕುತವ
ಸೇದಿ ಸೊಕ್ಕಿದ ಭೀಮನೊಡನೆಮಗೆಂತು ಸಂಧಾನ ೪೪

ನಿರಿಗರುಳನುಗಿದುಗಿದು ನೆತ್ತರಿ
ನೊರವಿನಲಿ ಮೊಗೆಮೊಗೆದು ಬಾಯೊಳ
ಗೆರೆದು ಸವಿನೋಡೆಂದು ನಿಮಗೆಲ್ಲರಿಗೆ ಕೈನೀಡಿ
ಇರಿದಿರಿದು ಮೂದಲಿಸಿ ಮಿಗೆ ಚ
ಪ್ಪರಿದು ಚಪ್ಪರಿದಾಡಿ ರಕುವ
ಸುರಿದು ಸೊಕ್ಕಿದ ಭೀಮನೊಡನೆಮಗೆಂತು ಸಂಧಾನ ೪೫

ಆಡಲೇಕಿದನಿನ್ನು ಹಿಂದಣ
ಕೇಡನೆಣಿಸಿದಡೇನು ಫಲ ತಾ
ಗೂಡಿ ಹಲಬರು ಜೀವಪುರುಷರು ಹೆಂಗಳಾದೆವಲೆ
ನೋಡದಿರು ಹಿಂದಾದ ಭಂಗವ
ನಾಡದಿರು ಬಹುಬಂಧುವರ್ಗದ
ಕೇಡದೆಲ್ಲವನೊಬ್ಬ ಕರ್ಣನ ನೋಡಿ ಮರೆಯೆಂದ ೪೬

ಅನುಜರಳಿದುದು ನೂರು ಬವರದಿ
ತನುಜರಳಿದುದು ನೂರು ಬಾಂಧವ
ಜನರು ಸಂಖ್ಯಾರಹಿತ ಬಿದ್ದೇನವದಿರಿದ್ದೇನು
ಎನಗೆ ಕರ್ಣನ ಜೀವವೇ ಜೀ
ವನವಿದೆಂಬೆಯಲಾ ಸಹೋದರ
ತನುಜರೆಲ್ಲರನೊಬ್ಬ ಕರ್ಣನ ನೋಡಿ ಮರೆಯೆಂದ ೪೭

ರಣದೊಳಳಿದೀ ಸಕಲಬಾಂಧವ
ಗುಣವಿದೆಲ್ಲವನೊಬ್ಬ ಕರ್ಣನ
ಗುಣವ ಕಂಡೇ ಮರೆದೆಯಕಟೀ ಕರ್ಣನಳಿವಿನಲಿ
ಎಣೆಯುಗಲಿ ನೀ ಬದುಕುವೈ ಧಾ
ರುಣಿಯ ಪತಿಯೇ ಪಾರ್ಥವಹ್ನಿಯ
ನಣೆದು ಕರ್ಣನನುಳುಹಿಕೊಳು ಸಂಪ್ರತಿಯ ಮಾಡೆಂದ ೪೮

ಗುರುತನುಜ ನೀವಾಡಿದುದ
ಕ್ಕರಿಸುವವರಾವಲ್ಲ ಕರ್ಣನ
ಹಿರಿಯ ಮಗನನು ಪಾರ್ಥನುದರದೊಳಾ ಸಹೋದರನ
ದುರುಳ ಭೀಮನ ಬಸಿರ ಬಗಿದು
ತ್ತರಿಸುವೆನು ಭಾಷೆಯನು ನೀವ್ ಹಿರಿ
ಯರಸರಲಿ ಯಮಳರಲಿ ಸಂಧಿಯ ಮಾಡಿಕೊಡಿಯೆಂದ ೪೯

## ಇಪ್ಪತ್ತಮೂರನೆಯ ಸಂಧಿ

ಸೂ. ಶಿವಶಿವಿದು ತಾರಕನ ಗುಹನಾ
ಹವವೊ ಮೇಣ್ ರಾವಣನ ರಾಮನ
ಬವರವೋ ಹೊಸತಾಯ್ತು ಕರ್ಣಾರ್ಜುನರ ಸಂಗ್ರಾಮ

ಕೇಳು ಧೃತರಾಷ್ಟ್ರಾವನಿಪ ಭೂ
ಪಾಲ ಮೊಗದಿರುಹಿದೊಡೆ ಬಳಿಕೀ
ಕೋಲಗುರುವಿನಸೂನು ಮುರಿದನು ಬಿಗಿದ ದುಗುಡದಲಿ
ಕೋಲಹೊದೆಯೆಂಬತ್ತು ಬಂಡಿಯ
ಹೇಳಿದನು ಕರ್ಣಂಗೆ ಕುರುಭೂ
ಪಾಲ ತಾನೊತ್ತಾಗಿ ನಿಂದನು ಸಕಲದಳಸಹಿತ ೧

ಅರಸ ಹೇಳುವುದೇನು ಬಳಿಕಿ
ಬ್ಬರ ಮಹಾಕೋದಂಡಚಂಡ
ಸ್ಫುರಿತ ಮೌರ್ವೀನಾದ ಮುಸುಕಿತು ಸಕಲ ದಿಗುತಟವ
ಸ್ಫುರದಮಂದೋದ್ಭಿನ್ನ ಭಾಸ್ವ
ತ್ಕಿರಣಗರ್ಭಕಳಾಪಭದ್ರಾ
ಕರಣಕಳಿತಧ್ವಾಂತಬಿಂಬಕಳಂಬಸಂತತಿಯ ೨

ಗಬ್ಬರಿಸಿದುದು ಗಗನವನು ಬಲು
ಬೊಬ್ಬೆ ಬಹುವಿಧವಾದ್ಯರಭಸದ
ನಿಬ್ಬರದ ನಿಡುಸೂಳು ಸೂಳೈಸಿದುದು ದಿಗುತಟವ
ಉಬ್ಬುಗೆಡದಿರಿ ಕರ್ಣಪಾರ್ಥ ಸ
ಗರ್ಭರಹಿರೋ ಪೂತು ಮಝು ಎಂ
ಬಬ್ಬರಣೆ ಸುರರೂಥಿಯಲಿ ಝೊಂಪಿಸಿತು ಮೂಜಗವ ೩

ಅಡಿಗಡಿಗೆ ಹೊರೆ ಹೆಚ್ಚಿ ತಿಬ್ಬರು
ಹಿಡಿದ ಖಾತಿ ದಿಗಂತ ಕೋಶದ
ತಡಿಯ ಬಿಲುಟಂಕಾರ ಮುಸುಕಿತು ಲೋಕ ಪದಿನಾಲ್ಕ
ಜಡಿದ ಶೌರ್ಯದ ಮೈಗಳುಬ್ಬಿನ
ಗುಡಿಯಿಡಿವ ರೋಮಾಳಿ ರಿಪುಗಳ
ಕುಡಿದ ಕಂಗಳ ಸುಭಟರೆಚ್ಚಾಡಿದರು ಚಳಕದಲಿ　೪

ಬಿರಿದುವಿಬ್ಬರ ಜೋಡು ಮೈಯು
ಬ್ಬರಿಸೆ ಹಳಹಳಿಕೆಯ ಸುತೇಜವ
ಸುರಿದುವಿಬ್ಬರ ಮೋರೆ ಗಂಟಿಕ್ಕಿದುವು ಹುಬ್ಬುಗಳು
ಅರಳ್ವ ನಿಡುಗಂಗಳ ನಿಹಾರದ
ಕರದ ಚಳಕದ ಕಾದ ನಾಸಿಕ
ದೆರಲ ಕೆತ್ತುವ ಮೀಸೆಗಳ ಭಟರೆಚ್ಚರುರವಣಿಸಿ　೫

ವಹಿಲವನು ವೇಧೈಸುವಡೆ ನರ
ರಹಿಪತಿಗಳೇ ಭಟರ ಪಡಿಯಿಡ
ಬಹುದೆ ಪಲ್ಲವ ಪಂಡಿತರ ಸತ್ಯಣಾಸಿಗಳ ಗತಿಯ
ಅಹಿಯ ಶರಮಾನದ ಸುತಾಳ
ಗ್ರಹಮುಖದ ಸರವಾದಿಗಳು ಸರ
ವಹಿಯ ನಾಯಕವಾಡಿಗಳೆ ನರನಾಥ ಕೇಳೆಂದ　೬

ಕಣೆ ಕಣೆಯನಿಟ್ಟೊರಸಿದುವು ಕೂ
ರ್ಗಣೆಗೆ ಮಾರ್ಗಣೆ ಚಾಚಿದುವು ಕಣೆ
ಕಣೆಗೆ ಮಲೆತುವು ತರುಬಿದವು ಕಣೆ ಕಣೆಯ ಪಡಿಮುಖವ
ಕಣೆ ಕಣೆಗೆ ತೆರಳಿದವು ಕಣೆ ಮಾ
ರ್ಗಣೆಯನಣೆದವು ಹಿಂಡುಗಣೆ ಸಂ
ದಣಿಗಣೆಯಲಕ್ಕಾಡಿದವು ರಣಧೀರರೆಸುಗೆಗಳು　೭

ಎಸುವ ಗತಿಗೊಮ್ಮೊಮ್ಮೆ ಜಗ ಗ
ರ್ಜಿಸಿದುದಾಯೆಂದೆರಡು ಘಟ್ಟಿನೊ
ಳೊಸಗೆಯಲಿ ಮೊಳಗಿದವು ಕೋಹಿನ ಕೋಟಿನಿಸ್ಸಾಳ
ನಿಶಿತ ಶರವೋ ಪ್ರಳಯಸೂರ್ಯರ
ಮುಸಕವೋ ಹರನೇತ್ರವಹ್ನಿಯ
ಹಸರವೋ ಹೆಸರಿಡುವನಾವನು ಭೂಪ ಕೇಳೆಂದ　೮

ಇವರ ಬಿಲುದನಿ ತುರಗ ಹೇಷಾ
ರವದ ಘಲ್ಲಣೆ ಸೂತರಬ್ಬರ
ವಿವಿಧವಾದ್ಯನಿನಾದ ದಳಪರಡರ ಮಹಾರಭಸ
ಅವಿರಳಾಸ್ತ್ರಧ್ವಾನವಭ್ರದ
ದಿವಿಜನಿಕರದ ಸಾಧುವಾದದಿ
ಭುವನ ಶಬ್ದಬ್ರಹ್ಮಮಯವಾಯ್ತೊಂದು ನಿಮಿಷದಲಿ　೯

ಮುಂಚುವುದು ಕೈಮನವ ಕೈಮೆಯ
ಸಂಚವನು ಮನ ಮುಂಚುವುದು ಮಿಗೆ
ವಂಚಿಸುವುದಂಬುಗಳ ಗತಿ ಕೈಮನದ ಕಲುಹೆಗಳ
ಮುಂಚಿದಂಬುಗಳಾರನೇಳನು
ಹಿಂಚಿದವು ಹೊಂಬರಹದಂಬಿನ
ಮಿಂಚುಗಳಲೆವೆ ಹಳಚಿದವು ಹರಿಹರ ಪುರಂದರರ　೧೦

ಮನದೊಳಗೆ ಪೊಗೆದೀಂಟಿದರು ಕ
ಣ್ಣಿನಲಿ ಕಾರಿದರಡಿಗಡಿಗೆ ಕಿವಿ
ಗೊನೆಗಳಲಿ ಕುಡಿಕುಡಿದುಗುಳಿದರು ಮೊದಲೆಯ ಮಾತುಗಳ
ಮನದಲಂಕುರವಾಗಿ ಕಡೆಗ
ಣ್ಣಿನಲಿ ಪಲ್ಲವವಾಗಿ ರಣವಾ
ತಿನಲಿ ಹೂತುದು ಕರ್ಣಪಾರ್ಥರ ರೋಷಮಯಚೂತ　೧೧

ಅರಸ ಕೇಳೈ ಬೊಬ್ಬಿರಿದು ಚ
ಪ್ಪರಿಸಿ ತೇಜಿಯ ನೂಕಿದನು ಮುರ
ಹರನು ಸೂತಾಸೂರಿಯಲಿ ಕೈದೋರಿದನು ಪಾರ್ಥ
ಖುರಪುಟದಲಾಕಾಶವನು ಕ
ತ್ತರಿಸುವವೊಲುಬ್ಬರದಲತಿನಿ
ಬ್ಬರದ ಗತಿಯಲಿ ನಿಗುರಿದವು ರಥವಾಜಿಗಳು ನರನ　೧೨

ಕುಬುಬೆನುತ ಬೊಬ್ಬಿರಿದನುಗ್ರ
ಪ್ರಬಲ ವಾನರ ರಾಜನಿದಿರಲಿ
ಕಬಳಿಸಿದವರ್ಜುನನ ಶರ ಕರ್ಣನ ಪತಾಕಿನಿಯ
ಶಬರರೂಪ ವರಾಹದೈತ್ಯನ
ನಿಬಿಡದರ್ಪವ ಮುರಿವವೊಲು ವರ
ವಿಬುಧತತಿ ಕೊಂಡಾಡೆ ಕಳೆಯೇರಿದನು ಕಲಿಪಾರ್ಥ　೧೩

ಏನ ಹೇಳುವೆನರಸ ಕೇಳ್ ನಿ
ನ್ನಾನೆಯಗ್ಗಳಿಕೆಯನು ಮುಂದಣ
ದಾನವಾಂತಕನುರವನೆಚ್ಚನು ಜೋಡನೊಡೆಬಗಿದು
ಆ ನಿರೂಢಿಯ ಹಯದ ಘಾಯವ
ನೇನನೆಂಬೆನು ಜೀಯ ಸಿಂಧದ
ವಾನರನ ವೇದನೆಯ ಗಣನೆಯನರಿಯೆ ನಾನೆಂದ　೧೪

ಬರಸೆಳೆದು ಬಿಲುಗೋಲಿನಲಿ ನಿ
ಷ್ಠುರದ ಶರಸಂಧಾನದಲಿ ರಥ
ತುರಗವನು ಕೆಡೆಯೆಚ್ಚನರ್ಜುನನಸಮಬಾಣದಲಿ
ಸುರಪನಾಯುಧಹತಿಗೆ ಕುಲಗಿರಿ
ತೆರಳುವಂತಿರಲೊಂದು ಯೋಜನ
ವರೆಗೆ ತಿರ್ರನೆ ತಿರುಗಿ ತೊಲಗಿತು ಕರ್ಣರಥವಂದು　೧೫

ಔಕಿ ವಾಘೆಯ ಕೊಂಡು ಶಲ್ಯನು
ನೂಕಿದನು ತೇಜಿಯನು ಸಮರ
ವ್ಯಾಕುಳದಿನಾ ಕರ್ಣ ಸೆಳೆದನು ದಿವ್ಯಮಾರ್ಗಣವ
ನಾಕನಿಳಯರು ನಡುಗೆ ಶರ ಕ
ರ್ಣಾಕರುಷ ಪ್ರೌಢಿಯಲಿ ನಿಂ
ದಾ ಕಿರೀಟಿಯ ರಥವನೆಚ್ಚನು ಭಾನುಸುತ ಮುಳಿದು　೧೬

ಅರಿಯ ಶರಹತಿಗಳುಕಿ ತಿರ್ರನೆ
ತಿರುಗಿ ಪಾರ್ಥನ ತೇರು ಬಿಲ್ಲಂ
ತರಕೆ ಹಿಂದಕೆ ತೊಲಗೆ ಕಂಡು ಮುರಾರಿ ಬೆರಗಾದ
ಅರರೆ ಧಣುಧಣು ಪೂತು ಪಾಯಿಕು
ಸರಿಯ ಕಾಣೆನು ಭಾಪೆನುತ ವಿ
ಸ್ತರಿಸಿ ದಾನವವೈರಿ ಕರ್ಣನ ಹಿರಿದು ಹೊಗಳಿದನು　೧೭

ನಲವು ನಿಲೆ ಫಲುಗುಣನು ಹೂಡಿದ
ಹಿಳುಕನೀಡಾಡಿದನು ಲೋಕದ
ಬಳಿಕೆ ಕೌತುಕವೆನುತ ತೂಗಿದನಮಳ ಮಕುಟವನು
ಒಲವರವಲಾ ಮುರಹರಂಗೀ
ಬಲದೊಳಗೆ ಸಾಹಸವ ಸುಡುಸು
ಡಲೆನುತ ದುಗುಡವ ಹಿಡಿದು ಫಲುಗುಣನಿಳುಹಿದನು ಧನುವ ೧೮

ಏನು ಫಲುಗುಣ ಧರ್ಮಜನ ಮದ
ದಾನೆ ದುಗುಡವಿದೇನು ಪೇಳ್ವೈ
ನೀನು ಧನುವನು ತೊರೆದ ಕಾರಣವೇನು ಪೊಸತೀಗ
ಏನು ಹದ ಹೇಳೆನಲು ಕೇಳೆಲೆ
ದಾನವಾಂತಕ ನುಡಿಯಲಾವುದು
ಹಾನಿಯೆಮಗಿಲ್ಲೆನುತ ಮೇಗರೆನುಡಿದನಾ ಪಾರ್ಥ ೧೯

ಹೇಳು ಹೇಳೆನ್ನಾಣೆ ಚಿತ್ತದೊ
ಳಾಳುವುದ ಮರೆಮಾಡದಿರು ನಿಜ
ಲೋಲ ಧರ್ಮಜನಾಣೆ ನಿನಗೆನೆ ಪಾರ್ಥ ನಸುನಗುತ
ಕಾಲಗುಣವೆಂದರಿಯೆ ಮೇಣ್ ತ
ನ್ನಾಳುತನ ಪುಸಿಯಾಯ್ತು ರಿಪುಭಟ
ನಾಳುತನ ದಿಟವಾಯ್ತು ಕೌತುಕವೆಂದನಾ ಪಾರ್ಥ ೨೦

ಒಂದು ಯೋಜನವರೆಗೆ ತಿರುಗಿತು
ಹಿಂದಕಹಿತನ ತೇರು ತಾನೆಸ
ಲೊಂದು ಬಿಲ್ಲಂತರಕೆ ತೊಲಗಿತು ನಮ್ಮ ರಥವಿಂದು
ಇಂದು ಕರ್ಣನ ಸಾಹಸಕೆ ಮನ
ಸಂದು ಪತಿಕರಿಸಿದಿರಿ ಕೌತುಕ
ವೆಂದು ಕಾಲವ ಬೈದೆನೆಂದನು ಪಾರ್ಥನಾ ಹರಿಗೆ ೨೧

ಆಳುತನದಲಿ ವೀರಕರ್ಣನ
ಹೋಲುವರ ನಾ ಕಾಣೆನೈ ಸುರ
ಪಾಲಕರು ತಾವಾನಬಹುದೇ ಕರ್ಣನುರವಣೆಯ
ಕೋಲು ಯೋಜನವರೆಗೆ ತೊಲಗಿಸಿ
ಜಾಳಿಸಿತ ನೀ ನುಡಿವೆ ನಿಜ ಬಿ
ಲ್ಲಾಳತನವನು ನಿನ್ನ ಮನದಲಿ ತಿಳಿದು ನೋಡೆಂದ ೨೨

ಬಸುರೊಳಗೆ ಬ್ರಹ್ಮಾಂಡಕೋಟಿಯ
ಮುಸುಕಿಕೊಂಡಿಹ ನಾ ಸಹಿತ ಮೇ
ಲೆಸೆವ ಸಿಂಧದ ಹನುಮಸಹಿತೀ ದಿವ್ಯಹಯಸಹಿತ
ಎಸುಗೆಯಲಿ ತೊಲಗಿಸುವ ಕರ್ಣನ
ಅಸಮಸಾಹಸ ಹಿರಿದೊ ಹುಲುರಥ
ದೆಸುಗೆ ನಿನ್ನಗ್ಗಳಿಕೆ ಹಿರಿದೋ ಪಾರ್ಥ ಹೇಳೆಂದ ೨೩

ಎನಲು ತಳವೆಳಗಾಗಿ ಫಲುಗುಣ
ಧನುವ ಕೊಂಡನು ದನುಜವೈರಿಗೆ
ಮನದ ಗರ್ವವನುಸುರಲರಿಯದೆ ಬಾಗಿದನು ಶಿರವ
ಮೊನೆಯಲಗಿನಂಬಿನಲಿ ಕರ್ಣನ
ಧನುವನಿಕ್ಕಡಿಗಳೆದು ಫಲುಗುಣ
ನನವರತ ಬಹುಸತ್ವದಲಿ ಮತ್ಸರಿಸಿ ಕಾದಿದನು ೨೪

ಎಚ್ಚನೀತನ ಸಾರಥಿಯ ಮಗು
ಳೆಚ್ಚನೀತನ ರಥವ ವಾಜಿಯ
ನೆಚ್ಚನೀತನ ಧನುವನೀತನ ಸಿಂಧ ಸೀಗುರಿಯ
ಎಚ್ಚನೀತನ ನಿಶಿತಶಸ್ತ್ರವ
ಕೊಚ್ಚಿದನು ಮಗುಳೆಚ್ಚು ಪುನರಪಿ
ಯೆಚ್ಚು ಕರ್ಣನ ಹೊಳ್ಳುಗಳೆದನು ಪಾರ್ಥ ನಿಮಿಷದಲಿ ೨೫

ಬೊಬ್ಬಿರಿದುದಾ ಸೇನೆ ಸೋಲದ
ಮಬ್ಬು ಮುಸುಕಿದುದೀ ಬಲವನೀ
ಯುಬ್ಬೆಯನು ಸೈರಿಸುತ ಸಾಹಸಮಲ್ಲ ತನಿಗೆದರಿ
ಇಬ್ಬರಿಗೆ ಘಡ ಹುಬ್ಬನಿಕ್ಕುವ
ಳೊಬ್ಬಳೇ ಜಯಲಕ್ಷ್ಮಿ ಬೊಡ್ಡಿಯ
ಕೊಬ್ಬ ನಿಲಿಸುವೆನೆನುತ ಖತಿಯಲಿ ಮಸಗಿದನು ಕರ್ಣ ೨೬

ಹನುಮನನು ಮತ್ತೊಮ್ಮೆ ಪುನರಪಿ
ದನುಜರಿಪುವನು ಮತ್ತೆ ಹಯವನು
ಧನುವನರ್ಜುನನಂಬುಗಳನಾ ಛತ್ರ ಚಾಮರವ
ಮೊನೆಗಣೆಯಲೇ ಮುಸುಕಿದನು ಮು
ಮ್ಮೊನೆಯ ಬೋಳೆಯ ತೊಡಚಿ ಕೌರವ
ಜನಪನಾವೆಡೆ ನೋಡಹೇಳೆನುತುಬ್ಬಿದನು ಕರ್ಣ ೨೭

ಮೊದಲಲಾ ಭೀಷ್ಮನ ಶರಾಘಾ
ತದಲಿ ನೊಂದೆನು ಬಳಿಕ ಕರ್ಣನ
ಕದನದಲಿ ತಪ್ಪಲ್ಲ ತಪ್ಪಲ್ಲೆನುತ ಮುರವೈರಿ
ಗದಗದಿಸುತಶ್ವವನು ಬೋಳೈ
ಸಿದನು ಹನುಮನ ನೋಡಿ ತಲೆದೂ
ಗಿದನು ಮಂದಸ್ಮಿತಮಧುರಮುಖಕಮಳನೊಲವಿನಲಿ ೨೮

ಶರಹತಿಯಲುರೆ ನೊಂದು ಧೂಪಿಸಿ
ತರಹರಿಸುವಶ್ವಾಳಿ ಕೃಷ್ಣನ
ಕರುಣವಚನಾಮೃತರಸದಿನಾಪ್ಯಾಯನಂಬಡೆದು
ಖುರದಲವನಿಯ ಪೊಯ್ದು ಲಳಿ ಮಿಗ
ಲುರವಣಿಸಿದವು ಹನುಮನಂತಃ
ಕರಣ ಹದುಳಿಸಿ ಹಿಗ್ಗಿದನು ನರನಾಥ ಕೇಳೆಂದ ೨೯

ಬಳಿಕ ಹೇಳುವುದೇನು ಪಾರ್ಥನ
ಮುಳಿಸಿನಲಿ ಕಾಲಾಗ್ನಿ ಜಿಹ್ವಾ
ವಳಿಯ ಲಳಿಯಲಿ ಕುಪಿತಕಾಳೋರಗನ ವದನದಲಿ
ಸುಳಿವವನ ಸಾಹಸವನಾತನ
ಬಲುಹನಾತನ ಜಯವನಾತನ
ನಿಲವ ಕಂಡವರಾರು ಸುರ ನರ ನಾಗಲೋಕದಲಿ ೩೦

ರಾಯ ಕೇಳಭಿಮಂತ್ರಿಸಿದನಾ
ಗ್ನೇಯವನು ಹೂಡಿದನು ಸುರಕುಲ
ಬಾಯಬಿಡಲಂಬುಗಿದು ಹಾಯ್ದುದು ಬಿಲುದಿರುವನೊದೆದು
ವಾಯು ಪಡಿಬಲವಾಗೆ ಕಿಡಿಗಳ
ಬಾಯಿಧಾರೆಯ ಹೊದರ ಕರ್ಬೊಗೆ
ಲಾಯದಲಿ ಲವಣಿಸುವ ದಳ್ಳುರಿದಿರುಳ ಚೂಣಿಯಲಿ ೩೧

ಅಹಹ ಬೆಂದುದು ಲೋಕವಿನ್ನಾ
ರಹಿಮುಖವ ಚುಂಬಿಸುವರೋ ವಿ
ಗ್ರಹದ ಫಲನಿಗ್ರಹವಲಾ ಶಿವ ಎನುತ ಸುರರುಲಿಯೆ
ವಹಿಲ ಮಿಗೆ ವರುಣಾಸ್ತ್ರದಲಿ ಹುತ
ವಹನ ಬಿಂಕವ ಬಿಡಿಸಿದನು ಜಯ
ವಹುದೆ ಪರರಿಗೆ ಪಾರ್ಥನಿರೆ ಜನನಾಥ ಕೇಳೆಂದ　೩೨

ಸರಳ ಝುಳ ಝುಾಡಿಸಿತು ಕಬ್ಬೊಗೆ
ಪರೆದುದಲ್ಲಿಯದಲ್ಲಿ ತಂಪಿನ
ಸರಳಮೊನೆಯಲಿ ಸಿಂಪಿಸುವ ತುಂತುರ ತುಷಾರದಲಿ
ಅರಿಬಲದ ಬೊಬ್ಬಾಟದಲಿ ಧರೆ
ಬಿರಿಯಲರ್ಜುನ ಹೂಡಿದನು ಹೂಂ
ಕರಣ ಮಾನಿತ ಮಂತ್ರಮಂಡಿತ ಮೇಘಮಾರ್ಗಣವ　೩೩

ಹೊಗೆಯ ಹೊರಳಿಯ ವಿವಿಧವರ್ಣದ
ಮುಗಿಲ ಪಾಳೆಯವೆತ್ತಿ ಬಿಟ್ಟುದು
ಗಗನದಗಲದಲೌಕಿದವು ದೆಸೆದೆಸೆಯ ಮೂಲೆಗಳ
ಹಗಲುಗತ್ತಲೆ ಕಟ್ಟಿತೇನಿದು
ಯುಗದ ಕಡೆಯೋ ಶಿವಶಿವಾ ಎನೆ
ಜಗಜಗತ್ತ್ರಾಣಾಸ್ತ್ರವನು ಹೂಡಿದನು ಕಲಿಕರ್ಣ　೩೪

ಅಟ್ಟಿ ಹೊಯ್ದುದು ನಿರಿಮುಗಿಲನರೆ
ಯಟ್ಟಿ ಕೊಡಹಿತು ತಳಿತಮೇಘದ
ಥಟ್ಟು ಮುರಿದುದು ಬೀಸಿದವು ಬಿರುಗಾಳಿ ಬಲ ಬೆದರೆ
ಇಟ್ಟಣಿಸಿ ಕೈಯೊಡನೆ ಕೊಂಡನು
ಬೆಟ್ಟವುರುಳುವ ಬಾಣವನು ಜಗ
ಜಟ್ಟಿ ಕೌರವರಾಯ ಬಾಳೆನುತೆಚ್ಚನಾ ಕರ್ಣ　೩೫

ಗಿರಿಯ ಡೆಂಕಣಿಜಂತ್ರವನು ತರ
ಹರಿಸುವವರಾರರಸ ಥಾವಣಿ
ಗಿರಿಯ ಧಾಳಿಗೆ ಧಾತುಗೆಟ್ಟುದು ಪಾಂಡುಸುತಸೇನೆ
ಅರರೆ ಕೆಡೆಕೆಡೆಯೆನುತ ವಜ್ರದ
ಸರಳನುಗಿದನದಾವ ವಹಿಲದೊ
ಳುರುಳೆಗೆಡಿದನು ಪರ್ವತಾಸ್ತ್ರವನಿಂದ್ರಸುತ ನಗುತ　೩೬

ಆವ ಚಳಕದೊಳರ್ಜುನನು ತಿಮಿ
ರಾವಲಂಬದ ಸರಳಲೆಚ್ಚನು
ನಾವರಿಯೆವಿರುಳಂಧತಮ ಮುದ್ರಿಸಿತು ದೃಷ್ಟಿಗಳ
ಆವನಾವನನರಿವನೋ ತಾ
ನಾವನಿದಿರಾರೆಂಬ ಭೇದವ
ಠಾವು ತೋರದು ತಮಂದೊಳದ್ದುದು ಕೂಡೆ ಕುರುಸೇನೆ　೩೭

ವೈರಿಶರಕೇನರಿಯನೇ ಪ್ರತಿ
ಕಾರವನು ನಿನ್ನಾತನಗ್ಗದ
ಸೌರಮಯ ಮಂತ್ರಾಭಿಮಂತ್ರಿತ ಭಾನುಮಾರ್ಗಣವ
ಆರು ಕಂಡರು ತಿಮಿರಜನಿತ ವಿ
ಕಾರವನು ಹೇಳಿಗೆಯ ಮಂಚು ಳ
ಜಾರಿಸಿದ ಫಣಿಯಂತೆ ಭುಲ್ಲವಿಸಿತ್ತು ಕುರುಸೇನೆ　೩೮

ಆಗಳೇ ತೆಗೆದುರಗಬಾಣವ
ತೂಗಿಬಿಟ್ಟನು ನಿನ್ನ ಕರ್ಣನ
ಲಾಗುವೇಗವನೇನನೆಂಬೆನು ಚಾಪತಂತ್ರದಲಿ
ಸೀಗುರಿಸುವುರಿವಿಷದ ಲೋಳೆಯ
ಲಾಗಿಸುವ ನಾಲಗೆಯ ಸುಯ್ಲಿನ
ಬೇಗುದಿಯ ತೊಡಬೆಗಳ ಹಾವ್ ತುಡುಕಿದವು ಥಟ್ಟನಲಿ　೩೯

ಎಲೆಲೆ ಹಾವೋ ಹಾವು ಕೆಂಡದ
ಮಳೆಯ ತಡೆವವೆ ಕೊಡೆಯೆನುತ ಕಳ
ವಳಿಸಿತಲ್ಲಿಯದಲ್ಲಿ ಹರೆದುದು ಹುದುಗಿ ಹೊದರೊಡೆದು
ಬಲುವಿಷದ ಕಿರುವನಿಯ ಹಾವಿನ
ಮಳೆಗೆ ಗರುಡಾಸ್ತ್ರದಲಿ ತನ್ನಯ
ದಳಕೆ ಹಿಡಿದನು ಕೊಡೆಯನರೆಘಳಿಗೆಯಲಿ ಕಲಿಪಾರ್ಥ　೪೦

ಏಸು ಹಾವುದುರಿದವು ರಣದೊಳ
ಗೈಸು ಹದ್ದೆರಗಿದವು ತುಂಡಿಸಿ
ಬೀಸಿ ಬಿಸುಟವು ಕಡಿಗಳನು ಕೌರವನ ಥಟ್ಟನಲಿ
ಏಸು ಪರಿಯಲಿ ನರನ ಬಿನ್ನಣ
ವೈಸುಪರಿ ಕರ್ಣನಲಿ ಕರ್ಣನ
ಕೌಶಲವದೆನಿತನಿತು ಪರಿಯನು ಕಂಡೆನಾತನಲಿ　೪೧

ಬಲುಹು ಭೀಷ್ಮದ್ರೋಣರಿಂದ
ಗ್ಗಳವಲಾ ಕರ್ಣಂಗೆನುತ ಪಡಿ
ಬಲಕೆ ಬಂದರು ಭೀಮ ಸಾತ್ಯಕಿ ನಕುಲ ಸಹದೇವ
ದಳದೊಳದಟುಳ್ಳವರು ಪಾರ್ಥನ
ಕೆಲಬಲದಲುರವಣಿಸಿದರು ವೆ
ಗ್ಗಳೆಯನೈ ನಿನ್ನಾತನಿಂದಿನಲೆರಡು ಥಟ್ಟಿನಲಿ　೪೨

ಎಲೆ ಧನಂಜಯ ಸಾಲದೇ ಹೆ
ಬ್ಬುಲಿಯ ಕಾಲಾಟದಲಿ ಮೃಗಶಿಶು
ವುಲಿತಡೇನಗ್ಗಳಿಯನೇ ಮೂಲೋಕವರಿವುದಲೇ
ಅಳವಿಗೊಡದಿರು ಸೂತತನಯನ
ತಲೆಯ ಬೆಸುಗೆಯು ಬಿಡಿಸುವಂಬಿನ
ಹಿಳುಕನುಗಿಯಾ ಹೊಳ್ಳುಗಣೆಯೇಕೆಂದನಾ ಭೀಮ　೪೩

ಪುಸಿಯೆ ಭೀಮನ ಮಾತಂ ಹೂಸುಂಕ
ದೆಸುಂಗೆ ತಾನೇಕಿನ್ನು ರಿಪು ನಿ
ಪ್ಪಸರದಲಿ ಕಲಿಯೇರಿದರೆ ಕೈಕೊಳ್ಳನೀಶ್ವರನ
ಹುಸಿಕಣೆಯಂಲೇನಹುದು ತೆಗೆ ಹರ
ವಿಶಿಖವನು ತೊಡು ಬೇಗಮಾಡೆಂ
ದಸುರರಿಪುವರ್ಜುನನ ಜರೆದನು ಭೂಪ ಕೇಳೆಂದ　೪೪

ಕ್ರೋಧಶಿಖಿ ಭುಲ್ಲವಿಸೆ ಮುಳಿದು ವಿ
ರೋಧಿಯನು ನೋಡಿದನು ಮುಳಂಗಲಿ
ರಾಧೆ ಕಂಬನಿಗಳಲಿ ಕುದಿಯಲಿ ಪುತ್ರಶೋಕದಲಿ
ಆಧಿ ತೀರಲಿ ನಮ್ಮ ಸೇನಾ
ವ್ಯಾಧಿಗಿದೆ ಮದ್ದೆನುತ ಪರಬಲ
ಸಾಧಕನು ಬ್ರಹ್ಮಾಸ್ತ್ರವನು ತೊಟ್ಟೆಚ್ಚನಾ ಪಾರ್ಥ　೪೫

ಶಿವಶಿವಾ ಬ್ರಹ್ಮಾಸ್ತ್ರವಿದಲಾ
ಭುವನಜನ ಸಂಹಾರಶರ ಸಂ
ಭವಿಸಿತೋ ಹಾ ಎನುತ ಹರೆದುದು ಮೇಲೆ ದಿವಿಜಗಣ
ತವಕದಲಿ ತತ್ಪ್ರತಿ ಮಹಾಸ್ತ್ರವ
ಜವಳಿವೆರಳಿಂದುಗಿದು ಬಿಡೆ ತಿವಿ
ತಿವಿದು ತಮ್ಮೊಳಗಡಗಿದವು ದಿವ್ಯಾಸ್ತ್ರವಭ್ರದಲಿ ೪೬

ಆ ಮಹಾಸ್ತ್ರದ ಹಾನಿ ರೋಷದ
ತಾಮಸಾಗ್ನಿಯನೂದಿ ಬಿಡಲು
ದ್ದಾಮನರ್ಜುನ ಕೊಂಡನಗ್ಗದ ಜಾತಮನ್ಯುವನು
ಆ ಮಹಾಬಾಣಾಭಿಮುಖದಲಿ
ಸೋಮಧರ ಮಾರ್ಗಣವನಿಂತೀ
ಭೀಮವಿಕ್ರಮ ಕರ್ಣನೆಚ್ಚನು ರಾಯ ಕೇಳೆಂದ ೪೭

ಆತನಲಿ ಕೌಬೇರಮಾರ್ಗಣ
ವೀತನಲಿ ವಾಯವ್ಯಶರ ಬಳಿ
ಕಾತನಲಿ ನೈರುತ್ಯವಿತ್ತಲು ಸೋಮವರ್ತಿಶರ
ಆತನಲಿ ಸಾಮುದ್ರ ರೋಷಣ
ವೀತನಲಿ ವಡಬಾಸ್ತ್ರವಿಂತಿರ
ಲಾತನೀತನ ಸಮರ ಸರಿ ನರನಾಥ ಕೇಳೆಂದ ೪೮

## ಇಪ್ಪತ್ತನಾಲ್ಕನೆಯ ಸಂಧಿ

ಸೂ. ರಾಯಸಾಹಸಮಲ್ಲ ವೆಗ್ಗಳ
ರಾಯ ಸುಭಟಶಿರೋರತುನ ರಾ
ಧೇಯಪಾರ್ಥರ ವಿಷಮ ರಣ ರಂಜಿಸಿತು ಮೂಜಗವ

ರಾಯ ಕೇಳೈ ಮತ್ತೆ ಕರ್ಣ ರ
ಸಾಯನವ ಕಟ್ಟಾಳು ರಣದಲಿ
ಸಾಯಲಾಗದೆ ಶಿವಶಿವಾ ಸಾಯರೆ ಸುರಾಸುರರು
ಬಾಯಬಿಡೆ ಪರಸೇನೆ ಭೀತಿಯ
ಲಾಯದಲಿ ಕಟ್ಟಿದನು ಪಾರ್ಥನ
ವಾಯುಜನ ಕರಣೇಂದ್ರಿಯಾಶ್ವಂಗಳನು ಕಲಿಕರ್ಣ ೧

ಎಲೆ ಮುರಾಂತಕ ಸಾಕು ರಥದಿಂ
ದಿಳಿ ಸುದರ್ಶನವೆಲ್ಲಿ ಚಾಪವ
ಕಳೆದುಕೊಳು ಕೌಮೋದಕಿಯ ಹಿಡಿ ಹಾಯ್ಕು ವಾಘೆಯವ
ಉಳುಹುವವರಾವಲ್ಲ ಕೊಳ್ಳೆನು
ತಳವಿಯಲಿ ಕೈಕೊಂಡು ಕೃಷ್ಣನ
ನಳುಕದೆಚ್ಚನು ನೂರು ಶರದಲಿ ಕರ್ಣ ಬೊಬ್ಬಿರಿದು ೨

ಜೋಡಿನಲಿ ಸೀಸಕದ ಮೇಲ
ಕ್ಕಾಡಿದವು ಕವಲಂಬು ಕವಚವ
ತೋಡಿ ನಟ್ಟವು ನೂಕಿದವು ನಾರಾಚ ಗರಿಸಹಿತ
ನೋಡಲೀ ವ್ಯಥೆಯುಂಟೆ ಭುವನದ
ಗೂಡು ಕೃಷ್ಣನ ದೇಹವಿದು ನಾ
ಡಾಡಿಗಳ ನಾಟಕವಲೈ ನರನಾಥ ಕೇಳೆಂದ ೩

ಏನ ಹೇಳುವೆ ಹೂಡಿದಾ ಸಂ
ಧಾನವನು ರಥಹಯದ ವಾಘೆಯ
ಜೇನಗೆಲಸದ ಹಕ್ಕರಿಕೆಗಳ ನೊಗನ ಜೊತ್ತಗೆಯ
ಭಾನುಸುತ ಮುರಿಯೆಚ್ಚು ನಿನಗಿ
ನ್ನೇನು ಹದನೈ ಹನುಮ ಲಂಕೆಯ
ದಾನವರು ನಾವಲ್ಲೆನುತ ಕೈಮಾಡಿ ಬೊಬ್ಬಿರಿದ ೪

ಸ್ಯೆರಿಸರ್ಜುನ ಶಿವನೊಡನೆ ನೀ
ಹೋರಿದಾತನು ನಿನ್ನ ಕೊಲುವಡೆ
ತೀರದೇ ತಪ್ಪೇನು ತಳುವಿತು ಪೇಳಲೇಕೆನುತ
ಕೂರಲಗಿನಂಬುಗಳ ಹಿಳುಕಿನ
ಸಾರದಲಿ ಮುದ್ರಿಸಿದನುದಯದ
ಲಾರನಿದಿರಲಿ ಕಂಡನೋ ಕಡುನೊಂದನಾ ಪಾರ್ಥ ೫

ಹರಿದುದಿಮ್ಮೈಜೋಡು ನೆತ್ತರಿ
ನೊರತೆ ನೂಕಿತು ಭದ್ರಪೀಠದ
ಹೊರಗು ನನೆದುದು ರೋಮ್ಮಿನಲಿ ಜೋಲಿದನು ಮಲಗಿನಲಿ
ಉರುಕುಗೊಂಡುದು ಕರಣಚಯವರೆ
ದೆರೆದ ಕಂಗಳು ರೋಮಕಂಪದೊ
ಳರಿದುದಿಲ್ಲರೆಘಳಿಗೆ ಕೋಳಾಹಳವನಾ ಪಾರ್ಥ ೬

ಮತ್ತೆ ಕೇಳವನೀಶ ಭೀಮನ
ನೆತ್ತಿ ಬಿಸುಟವು ಬಾಣ ನಕುಲನ
ಕುತ್ತಿದವು ಸಹದೇವನೊಡಲಲಿ ಮಾಡಿದವು ಪಥವ
ಇತ್ತ ಸಾತ್ಯಕಿ ಚೇಕಿತಾನಕ
ನುತ್ತಮೌಂಜ ಶಿಖಂಡಿ ದಳಪತಿ
ಕೆತ್ತಿದೊಡಲಿನ ಜೋರಿನಲಿ ಹೊರಳಿದರು ಹುಡಿ ನನೆಯೆ ೭

ಒಸಗೆಯಾದುದು ನೆಲನ ದಿಕ್ಕಿನ
ಬೆಸುಗೆ ಬಿಡೆ ನಿಸ್ಸಾಳತತಿ ಗ
ರ್ಜಿಸಿದವುಬ್ಬಿದ ಬೊಬ್ಬೆ ಬಿಡಿಸಿತು ಧ್ರುವನ ಮಂಡಲವ
ಅಸಮಭುಜಬಲ ಪೂತುರೇ ಸಾ
ಹಸಿಕೆ ಮಝುರೇ ಭಾಪು ಧಣುಧಣು
ವಿಷಮರಣ ನರಸಿಂಹ ಜಾಗೆಂದುದು ಭಟಸ್ತೋಮ ೮

ಜನಪ ಕೇಳೈ ಮತ್ತೆ ಸುತಸೋ
ಮನ ಶತಾನೀಕಾದಿ ರಿಪುನಂ
ದನರನೈವರನೆಚ್ಚು ಜರಿಸಿದನವರ ಸೀಮೆಯಲಿ
ಅನಿಲಜನ ಮರಳೆಚ್ಚು ಪಾಂಚಾ
ಳನ ವಿಭಾಡಿಸಿ ಥಟ್ಟಿನೊಳು ಮುಂ
ಮ್ಮೊನೆಯ ಬೋಳೆಯ ಸರಿಯ ಸುರಿದುದು ಕರ್ಣ ನವಮೇಘ ೯

ಸಾಲ ಝಲ್ಲರಿಗಳ ಪತಾಕಾ
ಜಾಲವನು ಚಾಮರವ ಗೋವಳಿ
ಗೋಲ ಡೊಂಕಣಿಯೊಡ್ಡನೆತ್ತಿದ ಸಿಂಧ ಸೀಗುರಿಯ
ಧೂಳಿಪಟಮಾಡಿದನು ಮಿಡುಕು
ಳ್ಳಾಳಕೊಂದನು ಗಜರಥಾಶ್ವದ
ಮಾಲೆಯನು ಮುತ್ತಿದುದು ಕರ್ಣನ ಶಿಳಿಮುಖವ್ರಾತ ೧೦

ಅರಸ ಕೇಳಾ ನರನನಾ ವಾ
ನರನನಾ ಮುರಹರನನಾ ರಥ
ತುರಗನಿಚಯವನಾ ರಥವನಾ ಶರವನಾ ಧನುವ
ಹುರುಳುಗೆಡಿಸಿದು ಭುಜಪರಾಕ್ರಮ
ದುರಿಯೊಳಗೆ ಬಿಡೆಕಾಸಿ ಹಗೆನೆ
ತ್ತರಲಿ ನೀರೂಡಿದನು ನಿಜಶರನಿಕರವನು ಕರ್ಣ ೧೧

ಹೇಳಲರಿಯೆನು ವಿಕ್ರಮಾಗ್ನಿ ಛ
ಡಾಳಿಸಿದುದಡಿಗಡಿಗೆ ಸೇನಾ
ಜಾಳವನು ಬೇಳಿದನು ಕೂರಂಬುಗಳ ಕೊಂಡದಲಿ
ಆಲಿಗಳು ಸವಿನೋಡಲಿಂದಿನ
ಕಾಳೆಗವ ಬರಹೇಳು ಕುರುಭೂ
ಪಾಲಕನ ಬರಹೇಳು ಬರಹೇಳೆನುತ ಬೊಬ್ಬಿರಿದ ೧೨

ಶರಹತಿಗೆ ಮುಖದಿರುಹಿ ಕಾಲಾಳ್
ತುರಗಸೇನೆಯ ಮರೆಯ ಸಾರಿತು
ತುರಗದಳ ಬಗಿದಂಡುಗೊಂಡುದು ಗಜಘಟಾವಳಿಯ
ಕರಿಘಟಾವಳಿ ಕೋಲಿನುರುಬೆಗೆ
ತೆರಳಿದವು ತೇರುಗಳ ಮರೆಯಲಿ
ಹೊರಳಿಯೊಡೆದುದು ತೇರ ಥಟ್ಟು ನಿಹಾರದೆಸುಗೆಯಲಿ ೧೩

ಕೋಲ ಕೋಳಾಹಳಕೆ ತೇರಿನ
ಗಾಲಿಗಳನೊಡ್ಡಿದರು ಹರಿಗೆಯ
ಹೇಳಿದರು ಹಮ್ಮುಗೆಯ ಕೊಯ್ದೊಡ್ಡಿದರು ರೆಂಚೆಗಳ
ಮೇಳೆಯುವ ಮೋಹಿದರು ಕಂಬುಗೆ
ನೂಲು ಹರಿಗೆ ತನುತ್ರ ಸೀಸಕ
ಜಾಲ ಗುಳ ಹಕ್ಕರಿಕೆ ಹಲ್ಲಣ ಬಾಹುರಕ್ಷೆಗಳ ೧೪

ಉರಿಯ ಮಳೆಗಾಲದಲಿ ದಡ್ಡಿಯ
ನರಗಿನಲಿ ಮಾಡಿದರೊ ಗಡ ಕಾ
ರಿರುಳ ಕೋಟೆಯ ರಚಿಸಿದರು ಗಡ ರವಿಯ ಮುತ್ತಿಗೆಗೆ
ಹರಿಗೆ ಸೀಸಕ ಜೋಡು ಕಾವವೆ
ಕೆರಳಿದಡೆ ಕರ್ಣಾಸ್ತ್ರವನು ನಿ
ಬ್ಬರದ ರಣದುಬ್ಬಟೆಯ ಕಂಡುಬ್ಬಿದನು ಕುರುರಾಯ ೧೫

ನೋಡಿರೈ ನಿಮ್ಮವರ ದಳ ಕೈ
ಮಾಡುತದೆ ನಮ್ಮಾತನನು ನೀವ್
ಖೋಡಿಗಾಬಿರಿ ನಿಮ್ಮ ಫಲುಗುಣ ಭೀಮರುಬ್ಬಟೆಯ
ನೋಡಿರೈ ಲೇಸಾಗಿ ನೀವ್ ಮಾ
ತಾಡಲಾಗದೆ ನಿಮ್ಮ ನಾಲಗೆ
ಗೂಡುಗೊಂಡವೆಯೆಂದನವನಿಪ ಕೃಪನ ಗುರುಸುತನ ೧೬

ನರನ ಬಿಗಿದುದು ಮೂರ್ಛೆ ಭೀಮನ
ಹರಣ ಕೊರಳಲಿ ಮಿಡುಕುತದೆ ಮುರ
ಹರನುಸುರವೈಹಾಳಿಯದೆ ಮೂಗಿನಲಿ ಮೋಹರಿಸಿ
ಬಿರುದ ಸಾತ್ಯಕಿ ನಕುಲ ಸಹದೇ
ವರಿಗದಾವದು ಹದನು ನಾವಿ
ನ್ನರಿಯೆವೈ ನೀವ್ ನೋಡಿಯೆಂದನು ನಗುತ ಕುರುರಾಯ ೧೭

ನೋಡಿ ಮಕ್ಕಳನಿಕ್ಕಿ ತಂದೆಗ
ಳೋಡುತದೆ ಸರಳಿಂಗೆ ತಮ್ಮನ
ನೀಡಿ ತೋರಿಸಿ ಜಾರುತದೆಯಣ್ಣಂದಿರಾದವರು
ಓಡುತದೆ ಆಳೊಡೆಯನನು ಬೀ
ಸಾಡಿ ತಾಯಿಗೆ ಮಕ್ಕಳಾಗದೆ
ಕೂಡೆ ಮಯ್ಮಳಿ ಮಸಗುತದೆ ಗುರುತನುಜ ನೋಡೆಂದ ೧೮

ಅರಿಬಲದ ಕಡುಗೇಡು ಹಬ್ಬಿತು
ಸುರಬಲದೊಳಕಟಕಟ ನೋಡೈ
ಸುರಪತಿಗೆ ದುಮ್ಮಾನವಡಸಿತಲಾ ಮಹಾದೇವ
ಸುರನದೀಜದ್ರೋಣರೀ ಪರಿ
ಪರವ ಶೌರ್ಯದಲೊದಗಿದರೆ ನಿ
ಷ್ಠುರದ ನುಡಿಯೆನ್ನದಿರಿ ಕಂಡುದನಾಡಬೇಕೆಂದ ೧೯

ಉಂಟು ಜೀಯ ವಿರೋಧಿಬಲವತಿ
ಕಂಟಣಿಸುತದೆ ಪಾಂಡುತನಯರ
ನಂಟರಿಷ್ಟರಿಗಾದುದೈ ದುಮ್ಮಾನ ಪುಸಿಯೇಕೆ
ಎಂಟುಮಡಿ ನಿಮಗಾದ ಜಯ ಹದಿ
ನೆಂಟುಮಡಿಯಾಚೆಯಲಿ ಸೇರುವು
ದುಂಟು ಪುಸಿದರೆ ಕೊಯ್ಸಿಕೊಟ್ಟೆವು ನಮ್ಮ ನಾಲಗೆಯ ೨೦

ಮುಗುಳುನಗೆಯೊಬ್ಬರಲಿ ಸವಿವಾ
ತುಗಳ ರಸವೊಬ್ಬರಲಿ ಕಡೆಗ
ಣ್ಣುಗಳ ಮಿಂಚೊಬ್ಬರಲಿ ನೇವುರದೆಳೆವೊಳಗು ಸಹಿತ
ಸೊಗಸು ಬೇರೊಬ್ಬರಲಿ ನೇಹದ
ತಗಹು ಬೇರೊಬ್ಬರಲಿ ಸತಿಯರ
ವಿಗಡತನವಿದು ಸಹಜ ಜಯವಧು ಜಾರೆ ನೋಡೆಂದ ೨೧

ಒಂದು ಕಡೆಗಣ್ಣಿನಲಿ ಕೌರವ
ವೃಂದವನು ನೋಡುವಳು ಕಯ್ಯೊಡ
ನೊಂದು ಕಡೆಗಣ್ಣಿನಲಿ ಮಾತಾಡಿಸುವಳರಿಬಲವ
ಇಂದು ಜಯವಧು ದೃಢಪತಿವ್ರತೆ
ಯೆಂದು ಬಗೆದೈ ಭೂಪ ಹುಸಿ ಹೋ
ಗೆಂದು ಗುರುಸುತ ನಗುತ ಹೋದನು ತನ್ನ ಮೋಹರಕೆ ೨೨

ಅರಸ ಚಿತ್ತೈಸಿತ್ತಲರ್ಜುನ
ನರೆಮುಗಿದ ಕಣ್ಣರಳ್ದವಂತಃ
ಕರಣ ಪಂಚೇಂದ್ರಿಯಕೆ ಬಿಟ್ಟುದು ತಗಹು ಕಳಕಳವ
ಮುರಿದು ಮುರಿದೆಡಬಲದ ತನ್ನವ
ರಿರವನೀಕ್ಷಿಸಿ ಕೋಪಶಿಖಿಯು
ಬ್ಬರದಲಿಬ್ಬಗಿಯಾದುದಂತರ್ಭಾವವಡಿಗಡಿಗೆ ೨೩

ಕಳಶಜಲದಲಿ ಮೆಯ್ಯ ನೆತ್ತರ
ತೊಳೆದು ಪೊಸಮಡಿವರ್ಗದಲಿ ಮುರಿ
ಮಲಕ ಬಿಗಿದನು ಧರಿಸಿ ಸಾದುಜವಾಜಿ ಕಸ್ತುರಿಯ
ಲುಳಿಯ ಹೊಸ ಸೀಸಕದ ಕವಚವ
ನಳವಡಿಸಿ ಕರ್ಪುರದ ಕವಳದ
ಹಳುಕ ಹಾಯಿಕಿಕೊಳುತ ಕೊಂಡನು ಮತ್ತೆ ಗಾಂಡಿವವ ೨೪

ನಿಮ್ಮ ಸಿರಿಯೊಡಲಿನಲಿ ಜೋಡಿನ
ಹಮ್ಮುಗೆಯನುಡಿದಂಬು ಹಾಯ್ದವು
ನಮ್ಮ ದುಷ್ಕೃತವೈಸಲೇ ನಿಮಗೆತ್ತಲೀ ವ್ಯಸನ
ನಿಮ್ಮಡಿಗಳೇ ಬಲ್ಲಿರಿಂತಿರ
ಲೆಮ್ಮ ರಾಜ್ಯದ ಹುದುವೆ ನೊಂದನು
ನಿಮ್ಮ ಹನುಮನ ನೋಡಿಯೆಂದನು ಹರಿಗೆ ಕಲಿಪಾರ್ಥ ೨೫

ಸಾಕದಂತಿರಲಾಹವಕೆ ಬರ
ಲೇಕೆ ಕಬ್ಬಿನ ಬನವೆ ಬಾಣಾ
ನೀಕಕಭಿಮುಖವಾಗೆ ಸಾವರು ನೋವರಿದಕೇನು
ಈ ಕಂಠಾರನನೀಕ್ಷಣಕೆ ಕೈ
ತೂಕದಲಿ ಕಾದದೆ ವಿವೇಕದೊ
ಳಾಕರಿಸು ಜಯವಧುವನೆಂದನು ಕೃಷ್ಣನರ್ಜುನನ ೨೬

ಹರಿಸು ರಥವನು ವೈರಿಯುರುಬೆಗೆ
ತೆರಳುತದೆ ನಮ್ಮವರು ಕರ್ಣನ
ಕೊರಳ ಬಾರಲಿ ನಿಲುಕಿಸುವೆನೀ ಶರಸಲಾಕೆಗಳ
ಅರಸ ಕೇಳೈ ಮಾತು ಹಿಂಚಿತು
ನರನ ರಥ ಜೋಡಿಸಿತು ಕರ್ಣನ
ಸರಿಸದಲಿ ಜೀವಿಸಿತು ಪಾಂಡವಸೇನೆ ನಿಮಿಷದಲಿ ೨೭

ಎಲೆಲೆ ಕರ್ಣ ಕಿರೀಟಿಯುರುಬೆಗೆ
ನಿಲುವುದರಿದೈ ಹಾವನರೆಗಡಿ
ದುಳುಪಿ ಕೆಡಿಸಿದೆ ಪಾಪಿ ರಾಯನ ರಾಜಕಾರಿಯವ
ತೊಲಗಿಸುವೆನೇ ರಥವನೆನೆ ಹೆ
ಕ್ಕಳಿಸಿ ಜರೆದನು ಕರ್ಣ ಶಲ್ಯನ
ನೆಲವೊ ಘಡ ನೋಡೆನುತ ತೆಗೆದೆಚ್ಚನು ಧನಂಜಯನ ೨೮

ಎಡೆಯುಲೀತನ ಸರಳ ಸಾರವ
ಕಡಿದು ಕಯ್ಯೊಡನೆಚ್ಚು ಮಗುಳೆ
ಚ್ಚಡಿಗಡಿಗೆ ಬಿಡದೆಚ್ಚು ಪುನರಪಿ ಮತ್ತೆ ಮಗುಳೆಚ್ಚು
ಪಡಿಬಲಕೆ ರೋಷಾಗ್ನಿಯದನಿ
ಮ್ಮಡಿಸಿ ಬೀಸುವ ಖೇದಪವನನು
ಸುಡದೆ ಬಿಡುವನೆ ಕಲಿಧನಂಜಯನಹಿತ ತೃಣವನವ ೨೯

ಒದೆದು ಕವಚವನೊಡೆದು ಗರಿದೋ
ರಿದವು ವಕ್ಷದ ಮೇಲೆ ಮೊನೆಮೂ
ಡಿದವು ಬೆನ್ನಲಿ ಕರ್ಣ ನನೆದನು ರುಧಿರಧಾರೆಯಲಿ
ಉದುರಿದವು ಕಯ್ಯಂಬು ಬಲುಕಾ
ರಿದನು ರಕುತವ ಕಳವಳದ ಕಂ
ಪದಲಿ ಝೊಂಪಿಸಿ ಮಲಗಿದನು ಮಣಿಮಯದ ಗದ್ದುಗೆಯ ೩೦

ತೋರಿಸಾ ನಿನ್ನೊಡೆಯನೋಲೆಯ
ಕಾರತನವನು ನಮ್ಮ ಬಲವನು
ಮೂರು ಮೂಲೆಯ ಹೊಗಿಸಿ ಬೆಚ್ಚನೆ ಬೆರೆತ ಗರುವನಲೆ
ಜಾರಿದವೆ ಕಯ್ಯಂಬು ಬಲು ರಣ
ವೀರಸಿರಿ ಹಾರಿದುದೆ ಶೌರ್ಯದ
ಮೋರೆಗೇಕೈ ಮುರುಕವೆಂದನು ನಗುತ ಕಲಿಪಾರ್ಥ ೩೧

ಮುರಳಿ ಶಲ್ಯನನೆಚ್ಚನಾತನ
ಕರದ ವಾಘೆಯ ಕಡಿದನಾ ರಥ
ತುರಗದೊಡಲಲಿ ಹೂಳಿದನು ಹೇರಾಳದಂಬುಗಳ
ಹೊರೆಯ ಹಡಪಿಗ ಚಾಹಿಯರ ಚಾ
ಮರಿಯರನು ನೋಯಿಸಿದ ಗೆಲವಿನ
ಗರುವತನವನು ಬಡ್ಡಿಸಹಿತುಗುಳಿಚಿದನಾ ಪಾರ್ಥ ೩೨

ದಳಪತಿಯ ದುಮ್ಮಾನದಲಿ ಕಳ
ವಳಿಸಿತೀಚೆಯ ಥಟ್ಟು ಪಾರ್ಥನ
ಹಿಳುಕು ಹೊಕ್ಕವು ಹರಹಿ ತಿವಿದುವು ರಾಯನಿದಿರಿನಲಿ
ಹಲವು ಮಾತೇನಾ ಕೃಪನ ಕೌ
ಸಲನನಾ ಗುರುಸುತನನಾ ಸೌ
ಬಲನನಾ ಕೃತವರ್ಮಕನ ಮುರಿಯೆಚ್ಚು ಬೊಬ್ಬಿರಿದ ೩೩

ಸಿಕ್ಕಿದನು ಕುರುರಾಯನಾದುದು
ಮಕ್ಕಳಾಟಿಕೆ ಗುರುನದೀಸುತ
ರಿಕ್ಕಿ ಹೋದರು ನಮ್ಮ ದಳಪತಿ ಕಾದಿ ಬಳಲಿದನು
ಪೊಕ್ಕನರ್ಜುನನಿವರ ದರ್ಪವ
ನೊಕ್ಕಿ ತೂರಿದನಿನ್ನು ಪರಿವಾ
ರಕ್ಕೆ ಬಂದುದು ಪಂಥವೆನುತಿದ್ದುದು ಭಟಸ್ತೋಮ ೩೪

ಅರಸ ಚಿತ್ತೈಸಾರು ಸಾವಿರ
ವರಮಹಾರಥರೌಕಿದರು ಝ
ಲ್ಲರಿಯ ಝಾಡಿಯ ಸೆಳೆಯ ಸಿಂಧದ ಸುಳಿವ ಸೀಗುರಿಯ
ಬಿರಿಯೆ ನೆಲನುಬ್ಬೇಳ್ವ ಬೊಬ್ಬೆಯ
ಮುರಜ ಡಿಂಡಿಮ ಪಟಹದಾಡಂ
ಬರದಲೊದಗಿತು ಕೆಲನ ಕೈವಾರಿಗಳ ರಭಸದಲಿ ೩೫

ಘಡಘಡೆಲವೋ ಪಾರ್ಥ ರಾಯನ
ತುಡುಕಲಹುದೇ ಕೂಟಗಿರಿಯಲಿ
ಕಡಲು ಹೂಳುವುದೇ ಸಧಾರನಲಾ ಮಹಾದೇವ
ಹಿಡಿ ಮಹಾಸ್ತ್ರವನಿನ್ನು ಮುಂದಡಿ
ಮಿಡುಕಿದಡೆ ತಮ್ಮಾಣೆಯೆನುತವ
ಗಡಿಸಿ ನೂಕಿತು ನಿನ್ನವನ ಮನ್ನಣೆಯ ಪರಿವಾರ ೩೬

ಜನಪ ಕೇಳೈ ರಕುತಜಲದಲಿ
ನನೆದ ನೆಲ ಪುಡಿಮಸಗೆ ಕೆಂಧೂ
ಳಿನಲಿ ಕತ್ತಲಿಸಿತ್ತು ದಿಗ್ಭ್ರಮೆಯಾದುವಡಿಗಡಿಗೆ
ಇನಿಬರಾವೆಡೆ ಕರ್ಣನೋ ಘಲು
ಗುಣನೊ ಪಾಂಡವಬಲವೊ ನಿನ್ನಾ
ತನೊ ನಿಧಾನಿಸಲರಿಯೆನೊಂದರೆಗಳಿಗೆ ಮಾತ್ರದಲಿ ೩೭

ಮಳೆಗೆ ಹೆಚ್ಚಿದ ಧೂಳಿನಬ್ಬರ
ವಳಿವವೊಲು ವಿಜಯಾಸ್ತ್ರಹತಿಯಲಿ
ಓಳಿವ ಕರಿ ನರ ತುರಗದೊಡಲರುಣಾಂಬುಧಾರೆಯಲಿ
ಕಳಚಿತೀ ಕೆಂಧೂಳಿ ಬಾಣಾ
ವಳಿಯ ಕತ್ತಲೆಯೊಳಗೆ ಕಾಣೆನು
ದಳದೊಳಾರಾರೆಂದು ಮತ್ತರೆಗಳಿಗೆ ಮಾತ್ರದಲಿ ೩೮

ಬೆರಸಿ ಹೊಯ್ದರು ರಾವುತರ ರಥ
ತುರಗನಿಕರದ ಬೆಸುಗೆ ಬಿಡೆ ಮದ
ಕರಿಗಳಂಘವಿಸಿದವು ರಥ ಚಾಚಿದವು ಮುಂದಣಿಗೆ
ಹರಿಗೆಗಳ ತಲೆಗೊಡ್ಡಿ ಕಕ್ಕಡ
ಪರಶು ಖಂಡೆಯದವರು ಮಂಡಿಯ
ತೆರಳದಾಂತರು ಫಲುಗುಣನ ರಥದೆರಡುಪಕ್ಕದಲಿ ೩೯

ಅರಸ ಕೇಳು ಜಯದ್ರಥನ ಮೋ
ಹರದ ಮಧ್ಯದೊಳೆಂದು ಸಿಲುಕದ
ನರನ ರಥವೀ ಹೊಳ್ಳುಗರ ಹೋರಟೆಗೆ ಹೆದರುವುದೇ
ಕರಿಘಟಾವಳಿಗೊಂದು ಶರವಾ
ತುರಗದಳಕೊಂದಂಬು ಬಳಿಕೆರ
ಡೆರಡು ಶರದಲಿ ಕೆಡಹಿದನು ಕಾಲಾಳುತೇರುಗಳ ೪೦

ಆಳು ಮುರಿದುದಲ್ಲೆ ಮಹಾರಥ
ರೇಳಿರೈ ನೀವಾರುಸಾವಿರ
ಮೇಲುದಳದವರಾಕೆವಾಳರು ನಿಮ್ಮ ಥಟ್ಟಿನಲಿ
ಮೇಳವದ ಪರಿ ಲೇಸು ಕರ್ಣನ
ಸೋಲದಲಿ ಸೀವರಿಸಿದರೆ ಭೂ
ಪಾಲನಾಣೆ ದೊಠಾರರಹಿರೆನುತೆಚ್ಚನಾ ಪಾರ್ಥ ೪೧

ಬಾಣಹತಿಗಕ್ಕಡಿಸಿ ರಾಜ್ಯ
ಶ್ರೇಣಿ ಜರುಗಿತು ಶೌರ್ಯನಗರದ
ವಾಣೆಯರು ಹೊಕ್ಕಿರಿದು ಹೋಗಾಡಿದರು ಪತಿರಿಣವ
ಗೋಣಕೊಯ್ಲಿನ ಕಾವಣಕೆ ಮುಂ
ಗೇಣಿಕಾರನು ಮೊಳಗಿದನು ಥಡ
ಕೇಣವಿನ್ನೇಕೆನುತ ಕೈದೋರಿತು ಭಟಸ್ತೋಮ ೪೨

ಸೀಳಿದನು ಸಮರಥರ ಸುಳಿಗೊಂ
ಡಾಳ ಸದೆದನು ಸವರಿದನು ಭೂ
ಪಾಲಪುತ್ರರನಖಿಳದೇಶದ ರಾಜಸಂತತಿಯ
ಆಳು ಮುರಿದುದು ಮಾನಹಾನಿಯ
ಹೇಳುವಡೆ ನಗೆಯದನು ಕುರುಬಲ
ಜಾಲದಲಿ ಜಳ್ಳುಗರು ಬಿದ್ದುದು ಭಂಗ ಶರಧಿಯಲಿ ೪೩

ಬಿಡುದಲೆಯಲೋಡಿದರು ಬಿರುದಿನ
ತೊಡರ ಬಿಸುಟರು ವಾಹನಂಗಳ
ತೊಡಕ ಬಿಟ್ಟರು ನೆಲಕೆ ಕೈಲೆಡೆಗೊಟ್ಟು ಕೈದುಗಳ
ಅಡಸಿ ಕಾವ ನರಪ್ರತಾಪದ
ಕಡುವಿಸಿಲ ಬೇಗೆಯಲಿ ವೀರದ
ಮಡುಗಳುರೆ ಬತ್ತಿದವು ಮೊರೆಗಳೊಣಗಿ ಪಟುಭಟರ ೪೪

ಹೋಗದಿರಿ ಹೋಗದಿರಿ ದಳಪತಿ
ಯಾಗುಹೋಗರಿಯದೆ ನೃಪಾಲನ
ಮೂಗನಾರಿಗೆ ಮಾರಿದಿರಿ ಕೊಂಬುವರು ಸಾವಲ್ಲ
ಈ ಗರುವರೀ ಪರಿ ಪಲಾಯನ
ಯೋಗಸಿದ್ಧರೆ ಸಾಹಸಿಕರೈ
ಜಾಗೆನುತ ಬೆಂಬತ್ತಿ ಹುಡಿಗುಟ್ಟಿದ ಮಹಾರಥರ ೪೫

ಇವರ ಹದನಿದು ಕರ್ಣನಾಡಿದ
ಕವಡಿಕೆಯ ಬೆಸಗೊಳ್ಳಿರೈ ಕೌ
ರವನ ಸರ್ವಗ್ರಾಸಕಿವೆ ರಾಹುಗಳು ಲಟಕಟಿಸಿ
ನಿವಗೆ ಹರಿಬದೊಳೊಂದು ಮುಟ್ಟಿಗೆ
ರವಣವುಂಟೇ ಹಾಯ್ಕಿ ನಿಮ್ಮಾ
ಟವನು ನೋಡುವೆನೆಂದು ಕರೆದನು ಕೃಪನ ಗುರುಸುತನ ೪೬

ಅರಸ ಕೇಳಾಕ್ಷಣಕೆ ಮುಗ್ಗಿತು
ಮರವೆ ನೆಗ್ಗಿತು ಭೀತಿ ಧೈರ್ಯದ
ತಿರುಳು ಬಲಿದುದು ಕೋಪ ತಳಿದುದು ಜೋಡಿ ನೀರೊರೆಯೆ
ಕರಣಪಲ್ಲಟಪಾಡಿನಲಿ ಸಂ
ವರಿಸಿಕೊಂಡುದು ವೀರರಸವು
ಬ್ಬರಿಸಿ ಸರ್ವೇಂದ್ರಿಯವ ಮುಸುಕಿತು ನಿಮ್ಮ ದಳಪತಿಯ ೪೭

ನೋಡಿದನು ಕೆಲಬಲನನುಗಿದೀ
ಡಾಡಿದನು ನಟ್ಟಂಬುಗಳ ಹರಿ
ಜೋಡಬಿಟ್ಟನು ತೊಳೆದನಂಗೋಪಾಂಗ ಶೋಣಿತವ
ಕೂಡೆ ಕಸ್ತುರಿಗಂಧದಲಿ ಮುಳು
ಗಾಡಿ ದಿವ್ಯದುಕೂಲದಲಿ ಮೈ
ಗೂಡಿ ಮೆರೆದನು ಕರ್ಣನನುಪಮ ತೀವ್ರತೇಜದಲಿ ೪೮

ಬೋಳವಿಸಿದನು ಶಲ್ಯನನು ಮಿಗೆ
ಸೂಳವಿಸಿದನು ಭುಜವನುಬ್ಬಿನೊ
ಳಾಳವಿಸಿದನು ಚಾಪಗಾನಸ್ಥಾನಕವನರಿದು
ಮೇಳವಿಸಿ ನಿಜರಥವ ಕೆಲದಲಿ
ಜೋಳವಿಸಿ ಹೊದೆಯಂಬನಹಿತನ
ಪಾಳಿಸುವಡಂಬಿದೆಯೆನುತ ತೂಗಿದನು ಮಾರ್ಗಣೆಯ ೪೯

ಫಡಫಡೆಲವೋ ಪಾರ್ಥ ಜೂಜಿಂ
ಗೊಡಬಡಿಕೆ ನಿಮಗೆಮಗೆ ಹಾರುವ
ರೊಡನೆ ಹೆಕ್ಕಳವೇಕೆ ಹೋಗದಿರಿತ್ತಲಿದಿರಾಗು
ಹಿಡಿದ ಮುಷ್ಟಿಗೆ ಸರ್ಪ ರವಣವ
ಕೊಡಹಿ ನಿನ್ನೆದೆವೆರಳಕೊಳ್ಳದೆ
ಬಿಡುವೆನೇ ಬಾ ಎನುತ ಕರೆದನು ಕರ್ಣನರ್ಜುನನ ೫೦

ಅರಸ ಕೇಳೈ ಸಿಡಿಲಗರ್ಜನೆ
ಗುರವಣಿಪ ಕೇಸರಿಯವೊಲು ಕೃಪ
ಗುರುಸುತರ ಬಿಸುಟಿತ್ತ ಹಾಯ್ದನು ಹಗೆಯ ಸಮ್ಮುಖಕೆ
ತಿರುಪು ಸದರವು ನಿನಗೆ ಗತಿಕಾ
ಹುರ ಕಣಾವಳಿ ಕಂಠಗತ ಬಾ
ಹಿರನು ನೀನೆಲೆ ಕರ್ಣ ಫಡ ಹೋಗೆನುತ ತೆಗೆದೆಚ್ಚ ೫೧

ಭರತಭಾಷೆಯುಲಾ ವಿಧಾವಂ
ತರು ವಿರಾಟನ ಮನೆಯಲಿದ್ದುದ
ನರಿಯೆವೇ ನಾವೆತ್ತ ಬಲ್ಲೆವು ನಿಮ್ಮ ವಿದ್ಯೆಗಳ
ಸರಸಮಾತಂತಿರಲಿ ಚಾಪ
ಸ್ಫುರಣದಭಿನಯದಂಗಹಾರದ
ಪರಿಯ ತೋರಾ ಎನುತ ತೆಗೆದೆಚ್ಚನು ಧನಂಜಯನ ೫೨

ಝಳಪಿಸಿದುದೆರಡಂಕದಲಿ ನಿ
ಷ್ಖಲಿತ ತೇಜಃಪುಂಜವಿಬ್ಬರ
ಹಳಹಳಿಕೆ ಹಬ್ಬಿದುದು ಗಬ್ಬರಿಸಿದುದು ಗಗನದಲಿ
ಹಿಳುಕನೀದವೊ ಹಿಳುಕು ಮೊನೆಯುಲ
ಗಲಗನುಗುಳ್ದವೊ ಕಣೆಗಳಲಿ ಕಣೆ
ತಳಿತವೋ ತ್ರೈಲೋಕ್ಯಬಾಣಾದ್ವೈತವಾಯ್ತೆಂದ ೫೩

ಪರಶುರಾಮನ ಕಾರ್ತವೀರ್ಯನ
ವರ ದಿಳೀಪನ ದುಂದುಮಾರನ
ಭರತ ದಶರಥ ನಹುಷ ನಳ ರಾಘವನ ಲಕ್ಷ್ಮಣನ
ಸರಿಮಿಗಿಲು ಕಲಿಪಾರ್ಥನೀ ಮಿ
ಕ್ಕರಸುಗಳ ಪಾಡೇ ಕಿರೀಟಿಯು
ದೊರೆಯದಾವವನೆನುತ ಕೊಂಡಾಡಿತು ಸುರಸ್ತೋಮ ೫೪

ತಾರಕನ ಜಂಭನ ನಿಕುಂಭನ
ತಾರಕಾಕ್ಷನ ಕಾಲನೇಮಿಯ
ವೀರ ಮಹಿಷಾಸುರನ ಬಾಣಾಸುರನ ರಾವಣನ
ತೋರಹತ್ತರ ಬಾಹುಬಲವನು
ಸಾರಿಯಾ ಕರ್ಣಂಗೆ ಮಿಕ್ಕಿನ
ಸಾರಿಹೃದಯರು ನಿನಗೆ ಸರಿಯಲ್ಲೆಂದುದಮರಗಣ ೫೫

ಪೂತು ಮಝರೇ ಕರ್ಣ ವಿಶಿಖ
ವ್ರಾತವೊಂದಿನಿತಿಲ್ಲ ಲಂಕೆಯು
ಘಾತಕರ ಚಾಪಳವ ಕಂಡೆನು ಚಾಪತಂತ್ರದಲಿ
ಈತನತಿಶಯಬಾಣರಚನಾ
ಜಾತಿಯಿದು ಭೀಷ್ಮಾದಿಸುಭಟ
ವ್ರಾತಕೆಲ್ಲಿಯದೆಂದು ತಲೆದೂಗಿದನು ಹನುಮಂತ ೫೬

ಅದ್ದು ದುಮ್ಮಾನದಲಿ ಹೊಡೆಮಗು
ಳೆದ್ದುದೀ ಕುರುಸೇನೆ ತಡೆಯಲಿ
ಬಿದ್ದುದತಿಸಂತೋಷ ಸಾರಕ್ಷೀರಜಲಧಿಯಲಿ
ಗೆದ್ದನೈ ನಿನ್ನಾತನೊಸಗೆಯ
ಬಿದ್ದಿನರಲೈ ನಾವು ಪರರಿಗೆ
ಬಿದ್ದುದೊಂದು ವಿಘಾತಿಯೆಂದನು ಸಂಜಯನು ನಗುತ ೫೭

## ಇಪ್ಪತ್ತೈದನೆಯ ಸಂಧಿ

ಸೂ. ರಾಯಪರಬಲಮಥನ ಕೌರವ
ರಾಯ ಧರಣಿ ವರಾಹ ಕಲಿರಾ
ಧೇಯನೆಚ್ಚನು ರೌದ್ರದರ್ಪದ ಸರ್ಪಬಾಣದಲಿ

ಹೇಳು ಸಂಜಯ ಹಗೆಗೆ ಬಿದ್ದ ವಿ
ಶಾಳವಾವುದು ಕಿವಿಗಳೈದವು
ನಾಲಗೆಯನೊಡ್ಡುವೆನು ವಚನಾಮೃತದ ಸವಿ ಹಿರಿದೆ
ಜಾಳಿಸಿತೆ ಹಗೆ ಕರ್ಣ ಗೆಲಿದನೆ
ಕಾಳಿಗವನೀ ಮಾತುಗಳನೇ
ಹೇಳುತಿರು ಸಾಕೆಂದು ನುಡಿದನು ನಗುತ ಜನನಾಥ ೧

ಅವನಿಪತಿ ಕೇಳುವಡೆ ಸಾವಿರ
ಕಿವಿಗಳೈದವು ನಿಮ್ಮ ಕರ್ಣನ
ಬವರದಲಿ ರೂಢಿಸಿದ ರೌದ್ರದ ರಾಜಕಾರಿಯವ
ಸವಡಿವೆರಳಿನ ಸೇದುವಂಬಿನ
ತವಕಿಗನ ತಗ್ಗಿಸುವೆ ನಿಲ್ಲೆನು
ತವಗಡದ ಕೋಪದಲಿ ಕಿಡಿಕಿಡಿವೋದನಾ ಕರ್ಣ ೨

ಮಾರಿತುರಿ ಸುಯ್ಲಿನಲಿ ಕಂಗಳು
ಹೇರಿದವು ಕಡುಗೆಂಪನೊಗಡಿಸಿ
ಕಾರಿದವು ರೋಮಾಳಿ ರೋಷ ಸ್ವೇದಬಿಂದುಗಳ
ಕೌರಿದವು ಕುಡಿಮೀಸೆ ಕಾದುದು
ಮೋರೆ ಬದ್ಧಭ್ರುಕುಟಿಯಲಿ ಹುರಿ
ಯೇರಿತಧಿಕಕ್ರೋಧತಾಮಸ ನಿಮ್ಮ ದಳಪತಿಯ ೩

ಉಗಿದನುರಗಾಸ್ತ್ರವನು ಹೊಮ್ಮೊ
ಡಿಗೆಯೊಳಗೆ ಹೊರಕಯ್ಯ ಗಾಳಿಗೆ
ಹೊಗೆಯ ಹೊದರಿನ ಹೊರಳಿ ಹಬ್ಬಿತು ಕೂಡೆ ಕಿವಿಯಿಡುತ
ಗಗನ ಗಮನದ ನಿಖಿಳ ವಿಹಗಾ
ಳಿಗಳು ಬೆಂದವು ಗಾಢ ಗರಳದ
ಸೊಗಡ ಸೋಹಿಗೆ ಕಂತಣಿಸಿತೆರಡೊಡ್ಡು ಕಳವಳಿಸಿ ೪

ಬೆರಳಲಂಬನು ತೂಗಲುರಿ ಫೂ
ತ್ಕರಣೆಯಲಿ ಪಂಠಿಸಿತು ಸುಯ್ಲಿನ
ಥರಥುರದ ಬೆಳುನೊರೆಯ ಲಹರಿಯ ವಿಷದ ಲೋಳೆಗಳ
ಉರವಣಿಸಿದರು ಗರಳ ರಸದ
ಬ್ಬರದ ಬೊಬ್ಬುಳಿಕೆಗಳು ಮುಸುಕಿತು
ಹೊರಳಿಗಿಡಿಗಳ ಛಟಛಟಧ್ವನಿ ಮುಸಗಿತಡಿಗಡಿಗೆ ೫

ಹೊರೆಯುವರು ಮರನಾದರಾ ರಥ
ತುರಗತತಿ ಲಟಕಟಿಸಿದವು ನಿ
ಬ್ಬರದ ಬೆರಗಿನೊಳದ್ದು ಹೋದನು ಶಲ್ಯ ನಿಮಿಷದಲಿ
ಉರಿ ಛಡಾಳಿಸಿ ಫೂತ್ಕೃತಿಯ ಪಂ
ಜರದೊಳಗೆ ಪಲ್ಲವಿಸಿತುಬ್ಬಿದ
ಹೊರಳಿಹೊಗೆಯುಂಬರವ ತುಂಬಿತು ಭೂಪ ಕೇಳೆಂದ ೬

ಆವರಿಸಿದವು ಪುಷ್ಕಳಾವ
ರ್ತಾವಳಿಗಳೆನೆ ಬಹಳವಿಷಧೂ
ಮಾವಳಿಯಲೇ ಧಾತುಗೆಟ್ಟುದು ಸಕಳಭುವನಜನ
ದೇವತತಿ ಬೆಂಡಾಯ್ತು ಮೊದಲಿನ
ದೇವರುಬ್ಬಿದರುರಗಪತಿಯ ಫ
ಣಾವಳಿಯ ಗುಡಿಯೆತ್ತಿದವು ಪಾತಾಳಲೋಕದಲಿ ೭

ಭುಜವ ಹೊಯ್ದರು ಸೂರ್ಯತಕ್ಷಕ
ರಜನ ಸಭೆಯಲಿ ಭಯದಿ ಸುರಪತಿ
ಭಜಿಸಿದನು ಗರುಡನನು ನಿರ್ವಿಷಮಸ್ತು ನರಗೆನುತ
ಗಜರಿದವು ನಿಸ್ಸಾಳವಾದ್ಯ
ವ್ರಜದ ಕಹಳೆಯ ಭಟರ ಬೊಬ್ಬೆಯ
ಗಜಬಜಿಕೆ ಘಾಡಿಸಿತು ಕೌರವಸೈನ್ಯಶರಧಿಯಲಿ ೮

ಹಣುಗಿದರು ಭೀಮಾದಿಗಳು ಕ
ಟ್ಟೊಣಗಿಲಾದವು ಭಟರ ಮೋರೆಗ
ಳೆಣಿಸುತಿರ್ದರು ಜಪವನರ್ಜುನ ಕೃಷ್ಣನೆಂಬವರು
ಸೆಣಸುವನು ಗಡ ಕೌರವನೊಳಿ
ನ್ನುಣಲಿ ಧರೆಯನು ಧರ್ಮಸುತನೆಂ
ದಣಕವಾಡಿತು ನಿನ್ನ ದುಷ್ಪರಿವಾರ ಹರುಷದಲಿ ೯

ಮೂಡಿಗೆಯೊಳಂಬುಗಿದು ತಿರುವಿಗೆ
ಹೂಡಲೀ ಹದನಾಯ್ತು ಚಾಪದೊ
ಳೋಡಿಸಿದಡೇನಹುದು ಹರಹರ ಮಹಾಸ್ತ್ರವಲೆ
ನೋಡಿರೈ ಗುರುಸುತಕೃಪಾದಿಗ
ಳೋಡದಿರಿ ನೀವೆನುತ ಪುಳಕದ
ಬೀಡಿನಲಿ ಮೈಮುಳುಗಿ ತೂಗಾಡಿದನು ಕುರುರಾಯ ೧೦

ಉರಿಯ ಜೀರ್ಕೊಳವಿಗಳವೊಲು ಪೂ
ತ್ಕರಿಸಿದವು ಫಣಿ ವದನದಲಿ ದ
ಳ್ಳುರಿಯ ಸಿಮಿಸಿಮಿಗಳ ತುಷಾರದ ಕಿಡಿಯ ತುಂತುರಿನ
ಹೊರಳಿಗಿಡಿಗಳ ಕಬ್ಬೊಗೆಯ ಕಾ
ಹುರದ ಸುಯ್ಲಿನ ಝಳವ ಗರಳಾ
ಕ್ಷರದ ಜಗಿಯಲಿ ಮಾತು ತೋರಿತು ಬೆಸಸು ಬೆಸಸೆನುತ ೧೧

ಹೂಡಿದನು ತಿರುವಿನಲಿ ಬಾಣದ
ಝಾಡಿಯುರಿನಾಲಗೆಯ ನಿರುತವ
ನೋಡಿ ಪಾರ್ಥನ ಗಳಕೆ ಸಂಧಾನವ ನಿಧಾನಿಸುತ
ನೋಡಿದನು ಶಲ್ಯನನು ಮಿಗೆ ತೂ
ಗಾಡಿದನು ಕೌರವನ ಪುಣ್ಯದ
ಬೀಡು ಬಿಡಂವಡೆ ಕಾಣಲಹುದಿಂದೆಂದನಾ ಕರ್ಣ ೧೨

ಏನು ಸಾರಥಿ ಸರಳು ಪಾಂಡವ
ಸೇನೆಯನು ಗೆಲಲಹುದೆ ಪಾರ್ಥನ
ಮಾನಿನಿಗೆ ವೈಧವ್ಯದೀಕ್ಷಾವಿಧಿಯ ಕೊಡಲಹುದೆ
ಆನಲಮ್ಮುವರುಂಟೆ ನಿನಗಿದು
ಸಾನುರಾಗವೆ ಹೇಳೆನಲು ರವಿ
ಸೂನುವಿನ ರೌದ್ರಾಸ್ತ್ರವನು ಹೊಗಳಿದನು ಮಾದ್ರೇಶ ೧೩

ಲೇಸುಮಾಡಿದೆ ಕರ್ಣ ಕೌರವ
ನೀಸುದಿನ ಸಾಕಿದ ಫಲವ ನೀ
ನೈಸಲೇ ತೋರಿದವನೀ ನೃಪಸೈನ್ಯಶರಧಿಯಲಿ
ಈಸು ಕಾಳೆಗವಾದುದೀ ಕ
ಟ್ಟಾಸುರದ ಸರಳೆಲ್ಲಿ ಗುಪ್ತಾ
ವಾಸವಾದುದು ಪೂತುರೆಂದನು ಶಲ್ಯನಿನಸುತನ ೧೪

ಆಯಿತಿದು ಸರಳೊಳ್ಳಿತೈ ಕುರು
ರಾಯನಭ್ಯುದಯ ಪ್ರಪಂಚವಿ
ದಾಯಿತೌ ಸಂಧಾನವೊಡಬಡದೆನ್ನ ಚಿತ್ತದಲಿ
ಸಾಯಕವ ನೀ ತಿರುಗಿ ತೊಡು ನಿ
ರ್ದಾಯದಲಿ ನೆಲನಹುದಲಾ ರಾ
ಧೇಯ ಎಂದನು ಶಲ್ಯನವನೀಪಾಲ ಕೇಳೆಂದ ೧೫

ಕೊರಳಿಗೊಡ್ಡಲು ಹೊಳ್ಳುವಾರಿದ
ಸರಳು ಮಕುಟವ ತಾಗುವುದು ಮೇ
ಣುರಕೆ ತೊಟ್ಟರೆ ಕೊಯ್ವುದೀಗಳೆ ಕೊರಳನರ್ಜುನನ
ಮರಳಿ ತೊಡು ತೊಡು ಬೇಗ ಕೌರವ
ನರಸುತನವುಳಿವುದು ಕಣಾ ಹೇ
ವರಿಸದಿರು ಹೇಳುವುದು ಪಥ್ಯವಿದೆಂದನಾ ಶಲ್ಯ ೧೬

ಒಂದು ಶರಸಂಧಾನ ನಾಲಗೆ
ಯೊಂದು ನಮ್ಮಲಿ ಕುಟಿಲವಿದ್ಯವ
ನೆಂದು ಕಂಡೈ ಶಲ್ಯ ನಾವಡಿಯಿಡೆವಧರ್ಮದಲಿ
ಇಂದು ಹೂಡಿದ ಶರವನಿಳುಹುವು
ದಂದವೇ ನೀನರಿಯೆ ಹೆರಸಾ
ರೆಂದು ತಿರುವಿನೊಳಂಬನೊದೆದನು ಕರ್ಣ ಬೊಬ್ಬಿಡುತ ೧೭

ಏನಹೇಳುವೆ ಬಳಿಕ ಭುವನ
ಗ್ಲಾನಿಯನು ತೆಗೆದೋಡಿದರು ವೈ
ಮಾನಿಕರು ವೆಂಠಣಿಸಿತುರಿಯುಪ್ಪಳಿಸಿತಂಬರವ
ಕಾನಿಡುವ ಕಬ್ಬೊಗೆಯ ಜೊರಿಸು
ವಾಸನದ ಕಟವಾಯ ಲೋಳೆಯ
ಜೇನಹುಟ್ಟಿಯ ಬಸಿವ ವಿಷದಲಿ ಬಂದುದುರಗಾಸ್ತ್ರ ೧೮

ಕಾದಲೆಳಸಿದ ಪಾಂಡವರ ಸಂ
ಪಾದ ತೀರಿತು ಕೌರವೇಂದ್ರನು
ಸಾಧಿಸಿದ ಹಗೆ ಸಫಲವಾದುದು ಸಮರಭೂಮಿಯಲಿ
ಹೋದನರ್ಜುನನೀ ಮಹಾಸ್ತ್ರದ
ಬಾಧೆಗಿದಿರಿಲ್ಲೆನುತ ಘನಜಿಂ
ತೋದಧಿಯಲುರೆ ಮುಳುಗಿ ಮರುಗಿತು ಮೇಲೆ ಸುರಕಟಕ ೧೯

ಹಾ ವೃಕೋದರ ನಕುಲ ಹಾ ಸಹ
ದೇವ ಹಾ ಧರ್ಮಜ ಧನಂಜಯ
ಹಾವಿನಗ್ಗಿಗೆ ಹವಿಗಳಾದಿರೆ ಹಾ ಮಹಾದೇವ
ಸಾವಡೆಯು ಶಸ್ತ್ರಪ್ರಹಾರದ
ಸಾವು ಕ್ಷತ್ರಿಯ ಕುಲಕೆ ಭಂಗವೆ
ಹಾ ವಿಧಿಯೆ ಎಂದೊದರಿ ಮರುಗಿತು ಪಾಂಡುಸುತಸೇನೆ ೨೦

ತುರಗತತಿ ತಲೆಗುತ್ತಿದವು ಮದ
ಕರಿಗಳೊದರಿದವಸವಳಿದು ರಥ
ತುರಗವೆಳೆದವು ರಥವನಾಗಳೆ ವಿಷದ ಝಳಹೊಯ್ದು
ಸುರಿವ ಗರಳದ ಗಾಳಿ ಸೋಂಕಿದ
ನರಗೆ ನಂಜೇರಿತು ಭಯಂಕರ
ತರದ ಭಾರಿಯ ವಿಷಕೆ ಕೊಳ್ಗುದಿಗೊಂಡುದರಿಸೇನೆ ೨೧

ಗರುಡಪಂಚಾಕ್ಷರಿಯ ಮಂತ್ರೋ
ಚ್ಚರಣೆಯಲಿ ಭೂನಾಗಸತ್ವದ
ಬೆರಳ ಮುದ್ರಿಕೆಗಳಲಿ ರಕ್ಷಾಯಂತ್ರಮಂತ್ರದಲಿ
ಮರಕತದ ಘುಟಿಕೆಯಲಿ ವಿಷಸಂ
ಹರಣ ವಿವಿಧೋಪಾಯದಲಿ ನೃಪ
ವರರು ನಿಂದುದು ಭೀಮಸೇನಾದಿಗಳು ದುಗುಡದಲಿ ೨೨

ಹಿಂದೆ ಭಗದತ್ತಾಯುಧದಿ ನೆರೆ
ಬೆಂದು ಬದುಕಿತು ಬಳಿಕಲೀ ಗುರು
ನಂದನನ ನಾರಾಯಣಾಸ್ತ್ರದಿನಾದುದಪಘಾತ
ಅಂದುಪಾಯದಲುಳಿದೆವೀ ಗೋ
ವಿಂದನಿಂದಪಮೃತ್ಯುವಿದನು ಮು
ಕುಂದ ತಾನೇ ಬಲ್ಲನೆನುತಿರ್ದುದು ಭಟಸ್ತೋಮ ೨೩

ಜನಪ ಕೇಳ್ಳೈ ಬಳಿಕ ಭೀಮಾ
ರ್ಜುನ ನಕುಲ ಸಹದೇವ ಸಾತ್ಯಕಿ
ತನತನಗೆ ದಿವ್ಯಾಸ್ತ್ರನಿಕರದಲೆಚ್ಚರಹಿಶರವ
ಅನಿತು ಶರವನು ನುಂಗಿ ಮಗುಳೆ
ಚ್ಚನಿತನೊಳಕೊಳುತಾಜ್ಯಧಾರೆಗೆ
ನನೆದ ಹುತವಹನಂತೆ ಹೆಚ್ಚಿತು ತೀವ್ರ ಫಣಿಬಾಣ ೨೪

ಆರುನಿಲಿಸುವರಕಟ ದುಷ್ಕೃತಿ
ಕಾರ ಶರವಿದು ಭೀಮಪಾರ್ಥರ
ಕೂರಲಗುಗಳು ಶಿವಶಿವಾ ಕೆಟ್ಟಾಯ್ತು ಕದಳಿಗಳ
ಕೌರವನ ಜಯವಧುವಿನೊಡನೆಯು
ಸೇರುಗೆಯ ಕೂಟಣೆಯೊ ಶರವಿ
ಸ್ತಾರಿಗೊರಲುವೆವಕಟೆನುತ ತಲ್ಲಣಿಸಿತರಿಸೇನೆ ೨೫

ನಾಲಗೆಯ ಚೂರಣದ ದಳ್ಳುರಿ
ಜಾಳಿಗೆಯ ಚಿಮ್ಮಟದ ಗರಳದ
ಲೋಳಿಗಳ ಚಾರಣದ ಕಿಡಿಗಳ ಖಿಡುಗ ಪೂರಯುದ
ಧೂಳಿಯುಗೆಯಬ್ಬರದ ಬಲುಗ್ಗೈ
ಯಾಳವೊಲು ಭುಗಿಲೆಂಬ ರವದಲಿ
ವೇಲುವಾಯ್ತುದು ಕೊರಳ ಸರಿಸಕೆ ಕಲಿಧನಂಜಯನಾ ೨೬

ಅರಸ ಕೇಳೇಸೇಸು ಬಾರಿಯು
ಕೊರಳಡಾಯುಧ ಕಳಚಿದೇಸು
ಬ್ಬರದ ಮಾರಿಯ ಬಿಂಕ ಮುರಿಯದು ಪಾಂಡುತನಯರಿಗೆ
ಹರಿಯ ಹರಹಿನ ವಜ್ರಪಂಜರ
ದರಗಿಣಿಯಲೇ ಪಾರ್ಥನಹಿ ಮಂ
ಜರನ ಮುರುಕುವ ಕೊಂಬುದೇ ಧೃತರಾಷ್ಟ್ರ ಕೇಳೆಂದ ೨೭

ನಡುಗುತಿರ್ದುದು ಸುರಕಟಕ ಬೊ
ಬ್ಬಿಡುತಲಿರ್ದುದು ನಮ್ಮ ಬಲ ಮೊರೆ
ಯಿಡುತಲಿರ್ದುದು ಪಾರ್ಥನಳವಿಗೆ ಪಾಂಡುಸುತಸೇನೆ
ತಡೆಯದೈದಂಗುಲಕೆ ರಥವನು
ನೆಡಿಸಿದನು ಹರಿ ಧರೆಗೆ ಪಾರ್ಥನ
ಮುಡಿಯ ಸರಿಸಕೆ ಬಾಣ ಬಂದುದು ಕೊಲುವ ತವಕದಲಿ ೨೮

ಅಣೆದುದಹಿ ಮಕುಟವನು ತಾರಾ
ಗಣದ ಮಧ್ಯದ ಚಂದ್ರಮನ ಹೊ
ಯ್ದಿಣಲೊಳಡಸಿದ ರಾಹುವಿನ ರಹಿಯಾಯ್ತು ನಿಮಿಷದಲಿ
ಕಣಿಕೆ ಮುರಿದುದು ಮೌಕ್ತಿಕದ ಕೀ
ಲಣದ ವಜ್ರದ ಮಾಣಿಕದ ವರ
ಮಣಿಗಳೊಕ್ಕವು ರಕುತ ಮಿದುಳ್ಗೊಡಸೂಸಿದಂದದಲಿ ೨೯

ಬಿದ್ದುದೇ ಫಲುಗುಣನ ತಲೆಯಡಿ
ಗದ್ದುದೇ ನಮ್ಮಾಟ ಜಯವಧು
ಕದ್ದಳೇ ರಣದೊಸಗೆಗೇಳ್ವಳೆ ದ್ರೌಪದಾದೇವಿ
ಇದ್ದುದೇ ಧರ್ಮಜನ ಸಿರಿ ತಳ
ಕದ್ದುದೇ ನಮ್ಮೊಡಲನಸು ಬಿಡ
ದಿದ್ದುದೇ ಹಾ ಎನುತ ಭೀಮಾದಿಗಳು ಹೊರಳಿದರು ೩೦

ವಿಷವ ತೆಗೆದಳು ದ್ರುಪದಸುತೆ ಕೈ
ಮುಸುಕಿನಲಿ ಚೀಲಾಯವುಗಿದನು
ವಸುಮತೀಶ್ವರನಾ ಮುಹೂರ್ತಕೆ ದೂತರೈತಂದು
ಒಸಗೆ ಜೀಯರ್ಜುನನ ಮಕುಟದ
ಬೆಸುಗೆ ಮುರಿದುದು ಹರಿ ವರೂಥವ
ಕುಸಿಯಲೊತ್ತಿದನಿಂದು ತಪ್ಪಿತು ತೀವ್ರ ಫಣಿಬಾಣ ೩೧

ಎನಲು ಸಂತೈಸಿತ್ತು ರಾಯನ
ಮನೆಯವರು ಪಾಂಡವರ ಸೇನಾ
ವನಧಿ ಬಿಡೆ ಗರ್ಜಿಸಿತು ಬಹುವಿಧ ವಾದ್ಯರಭಸದಲಿ
ವಿನುತ ಮಕುಟವ ಕಡಿದು ಕಂಗನೆ
ಕನಲಿತಹಿ ತಲೆ ಬದುಕಿತೇ ಹಾ
ಎನುತ ಹಲುಮೊರೆಯುತ್ತ ಹರಿದುದು ಕರ್ಣನಿದ್ದೆಡೆಗೆ ೩೨

ತೊಡು ತೊಡಿನ್ನೊಮ್ಮೆನ್ನನಕಟಾ
ಕೆಡಿಸಿದೆಯಲಾ ರಾಜಕಾರ್ಯವ
ನುಡಿದು ಹೇಳನೆ ನಿನ್ನ ಸಾರಥಿ ಲಕ್ಷ್ಯಭೇದನವ
ಅಡಗಲಿನ್ನೀರೇಳು ಭುವನದೊ
ಳಡಗಿ ತಿಂಬೆನು ನರನನೆಂದವ
ಗಡಿಸಿ ಕರ್ಣನ ಬೆಸನ ಬೇಡಿತು ಮತ್ತೆ ಫಣಿಬಾಣ ೩೩

ಶಿವನ ಮರೆಯನು ಹೊಗಲಿ ಮೇಣ್ ವಾ
ಸವನ ಸೀಮೆಯೊಳಿರಲಿ ಪಾತಾ
ಳವನು ಹೊಗಲಂಬುಧಿಯ ಮುಳುಗಲಿ ಜವನ ಕೆಳೆಗೊಳಲಿ
ಭುವನಕತಿಶಯವಾಗಿ ರಣದಲಿ
ತಿವಿವೆ ಪಾರ್ಥನನೆನಲು ಕೇಳಿದು
ರವಿಯ ಮಗ ಬೆರಗಾಗಿ ಬೆಸಗೊಂಡನು ಶಿಳೀಮುಖವ ೩೪

ಎಸಲು ಸರಳುಗಳತ್ತಲೇ ಕೀ
ಲಿಸುವವಲ್ಲದೆ ಮತ್ತೆ ಮರಳಿದು
ಬೆಸನ ಬೇಡುವ ಬಾಣವೆಂಬುದನರಿಯೆ ನಾ ಕೇಳ್ದು
ವಿಶಿಖ ನೀನಾರೆನಲು ಕಿಡಿಗಳ
ಕುಸುರಿಗಳನುದ್ಗರಿಸಿ ನುಡಿದುದು
ವಿಷಮನರಿಯಾ ಕಾಳಕೂಟ ಕರಂಡ ಕಾನನದ ೩೫

ಉರಗಪತಿ ತಾನಶ್ವಸೇನನು
ಸುರಪತಿಯ ಖಾಂಡವದೊಳಿಹೆನದ
ನುರುಹುವಂದಿನೊಳೆನ್ನನರೆಗಡಿದೀ ದುರಾತ್ಮಕನ
ಶಿರವನರಿವೆನು ಬೇಗ ತೊಡು ತೊಡು
ಬೆರಗ ಹಾರದಿರೆನಲು ಸತ್ಯದ
ಪರಮಸೀಮೆಗೆ ತಪ್ಪಲಮ್ಮದೆ ಕರ್ಣನಿಂತೆಂದ ೩೬

ಅರಿಯೆ ನಾ ನೀನೆಂದು ಲೋಗರ
ಮರೆಯಲರಿಗಳ ಗೆಲುವ ಕರ್ಣನೆ
ಯರಿಯಲಾ ನೀನೆನ್ನ ಹವಣನು ತೊಡುವುದಿಲ್ಲೆನಲು
ಮರುಗಿದನು ಶಲ್ಯನು ನೃಪಾಲನ
ನಿರಿದೆಯೋ ರಾಧೇಯ ನೀನೆಂ
ದುರುಬೆಯಲಿ ಕೋಪಿಸುತ ಕರ್ಣನ ಬಯ್ದು ಗಜರಿದನು ೩೭

ತೊಡು ತೊಡೆಲವೋ ಶರವು ರಿಪುವನು
ತಡೆಗಡಿವೆನೆಂದೊದರುತದೆ ನೃಪ
ನೊಡೆತನಕೆ ನೀ ಬಯಸಿದಾ ಮತವುಂಟೆ ರಿಪುಗಳಲಿ
ನುಡಿದ ಭಾಷೆಗೆ ನಾವು ಹೇಳಿತ
ನೊಡಬಡುವ ನೀನಲ್ಲ ಕುರುಪತಿ
ಬಿಡದೆ ನಿನ್ನನು ಸಲಹಿತಕ್ಕುಪಕಾರಿ ನೀನೆಂದ ೩೮

ಎಲವೊ ನಿನ್ನನು ಜಗವರಿಯೆ ಕ
ಬ್ಬಿಲನ ಮಗನನು ಮರಸಿ ಕುರುಪತಿ
ಕುಲಜನನು ಮಾಡಿದನಲಾ ಒಡನುಂಡು ಪತಿಕರಿಸಿ
ನೆಲನು ಹೇಸದೆ ನಿನ್ನ ಕೀರ್ತಿಯ
ಬೆಳಗು ಮಾಸದೆ ಬಿಡದೆ ಸಾಕಿದ
ಹೊಲೆಯನವರಸಕೊದಗುವನು ನೀ ಕಷ್ಟ ಹೋಗೆಂದ ೩೯

ನಂಬಿ ಹಿಡಿದರೆ ನದಿಯಮಗ ಹಗೆ
ಯಂಬಿಗಿತ್ತನು ಕಾಯವನು ಮಗ
ನೆಂಬ ನೆವದಲಿ ತನುವ ಬಿಸುಟನು ಗರುಡಿಯಾಚಾರ್ಯ
ಅಂಬು ಬೆಸನನು ಬೇಡಿದಡೆ ನೀ
ನೆಂಬನೀ ವಿಧಿಯಾದೆ ಮೂವರ
ನಂಬಿ ಕೌರವ ಕೆಟ್ಟನಕಟಕಟೆಂದನಾ ಶಲ್ಯ ೪೦

ಮಾತೆಗಿತ್ತೆನು ಭಾಷೆಯನು ನಿ
ನ್ನಾತಗಳೊಳೈವರೊಳಗಾರಿದಿ
ರಾತಡೆಯು ತಲೆಗಾದು ಬಿಡುವೆನು ಕೊಲುವುದಿಲ್ಲೆಂದು
ಮಾತುಗಳು ಕವಲಾದ ಬಳಿಕಿ
ನ್ನೇತಕೀ ತನುವಿದನು ಪಾರ್ಥನ
ಖಾತಿಗೊಪ್ಪಿಸಿ ಕಳೆವೆನೆಂದನು ತನ್ನ ಮನದೊಳಗೆ ೪೧

ಮರುಳಲಾ ಮಾದ್ರೇಶ ಮರಳಿವ
ಶರವ ತೊಡುವೆನೆ ಸೈರಿಸೆನೆ ಕಾ
ತರಿಸಿ ವಾಘೆಯ ಬಿಸುಟು ಕಿಡಿಕಿಡಿವೋಗಿ ಖಾತಿಯಲಿ
ಅರಸನೊಲಿದಂತಾಗಲೆನ್ನದು
ಮರುಳುತನ ಕುಲಹೀನನಲಿ ಗುಣ
ವರಸಲೇಕೆಂದೆನುತ ಧುಮ್ಮಿಕ್ಕಿದನು ಧಾರುಣಿಗೆ ೪೨

ಕಂಡುದೀ ವ್ಯತಿಕರವನೀತನ
ನಂಡಲೆದು ಫಲವಿಲ್ಲಲಾ ಕೈ
ಕೊಂಡು ನೋಡುವೆನೆನ್ನ ಸಾಮರ್ಥ್ಯದ ಸಘಾಡದಲಿ
ಚಂಡಿಯಾದೆನು ತಾನೆನುತ ಖತಿ
ಗೊಂಡು ಮರಳಿತು ಸರ್ಪಶರವಾ
ಖಂಡಳಾತ್ಮಜನತ್ತ ಹಾಳಾಹಳದ ಚೂಣಿಯಲಿ ೪೩

ಇವನ ಬಲ್ಲೈ ಪಾರ್ಥ ಚಕ್ಷು
ಶ್ರವನಿವನು ತಕ್ಷಕನ ಮಗ ಖಾಂ
ಡವದ ಬೇಳಂಬದಲಿ ಬದುಕಿದ ತಲೆಯೊಳಡಹಾಯ್ದು
ಇವನ ಮೂಡಿಗೆಯೊಳಗೆ ಶರವಾ
ಯ್ತಿವನು ತಾನೇ ಮರಳಿದನು ನೀ
ನವಧರಿಸಿಕೊಳ್ಳೆನುತ ನುಡಿದನು ದೈತ್ಯರಿಪು ನಗುತ ೪೪

ಅರಸ ಕೇಳೈ ಕರ್ಣಶಕ್ತಿ
ಸ್ಫುರಣಸಹಿತೀ ಬಾಣವತಿ ದು
ರ್ಧರವದಲ್ಲದೆ ಬರಿಯ ವಿಷದುಬ್ಬರದ ಸಾಹಸವ
ನರನಲೇ ಕೈಕೊಳ್ಳದೀ ಬಹ
ಸರಳನೈದಂಬುಗಳಲೆಡೆಯಲಿ
ತರಿದು ಬಿಸುಟನು ವೀರನಾರಾಯಣನ ನೇಮದಲಿ ೪೫

# ಇಪ್ಪತ್ತಾರನೆಯ ಸಂಧಿ

ಸೂ. ಚಂಡ ಭುಜಬಲ ವಿಕ್ರಮನ ಮಾ
ರ್ತಂಡತನಯನ ವಿಜಯಸಿರಿ ಮುಂ
ಕೊಂಡು ಮನ್ನಿಸಿ ಭುಜಕೆ ಬಂದಳು ಕಲಿ ಧನಂಜಯನ

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳ ಜಯಸಿರಿ ಸರ್ಪಬಾಣದ
ಮೇಳಿಯದ ಸೀಮೆಯಲಿ ನಿಂದುದು ಹಲವು ಮಾತೇನು
ಹೇಳಿ ಫಲವೇನಿನ್ನು ಮುಂದಣ
ಕಾಳೆಗದ ಕರ್ಣಾಮೃತದ ಮಳೆ
ಗಾಲ ಮಾಡು ವಿಲೋಚನದ ಮಳೆಗಾಲವಾಯ್ತೆಂದ ೧

ಕಳಿದ ಹೂವಿನ ಪರಿಮಳವೊ ಧರೆ
ಗಿಳಿದ ಸೂರ್ಯಪ್ರಭೆಯೊ ಶರದದ
ಹೊಳೆಯೊ ಮೇಘಸ್ಥಿತಿಯೊ ಸುರಪತಿ ಚಾಪ ವಿಭ್ರಮವೊ
ಇಳಿದ ಜವ್ವನದೊಲುಮೆಯೋ ಕುರು
ಬಲವ ಕಂಡೆನು ಜೀಯ ಜಯದ
ಗ್ಗಳಿಕೆಗಳ ಜಾರುಗಳ ನಿನ್ನ ಕುಮಾರನೊಡ್ಡಿನಲಿ ೨

ಆಗಳಳಿದುದು ಸರ್ಪಶರ ತಾ
ನಾಗಳೇ ಕುರುರಾಯ ಭುಜವನು
ನೀಗಿದಳು ಜಯವಧು ಧರಾವಧು ಭಾಗ್ಯವಧು ಸಹಿತ
ಆಗಳೇ ಬಿನ್ನೈಸನೇ ರಣ
ದಾಗುಹೋಗಿನ ಹೊರಿಗೆಯನು ತಾ
ನೀಗಿ ಬಿಸುಟನು ತನ್ನ ಸತ್ಯಸ್ಥಿತಿಗೆ ಕಲಿಕರ್ಣ ೩

ಆದರೇನದು ಮತ್ತೆ ಕರ್ಣನ
ಕೈದುಕಾರತನಕ್ಕೆ ಸುಭಟರು
ಮೇದಿನಿಯೊಳಾರುಂಟು ಪಡಿ ದೈವಾಭಿಮುಖವುಳಿಯೆ
ಹೋದೆ ಹೋಗಿನ್ನೆನುತ ಕಣೆಗಳ
ಸಾದುಗಳ ತನಿವೀರರಸದಲಿ
ತೇದು ಚಿತ್ರವ ಬರೆದನರ್ಜುನನಂಗಭಿತ್ತಿಯಲಿ ೪

ಮತ್ತೆ ಕೃಷ್ಣನನೆಚ್ಚು ಹನುಮನ
ತೆತ್ತಿಸಿದ ಕೂರಂಬಿನಲಿ ಕೈ
ವರ್ತಿಸಿದನೀರೆಂಟು ಶರವನು ತುರಗದೇಹದಲಿ
ಹೊತ್ತಿದುದು ಕಡುಗೋಪ ವಹ್ನಿಯೊ
ಳಿತ್ತಲಿದೆ ನಿಲ್ಲೆನುತ ಪಾರ್ಥನ
ಮೆತ್ತಿ ನೂರಂಬಿನಲಿ ಪುನರಪಿ ಕಪಿಯನೊಡೆಯೆಚ್ಚ ೫

ನೆಲನ ಬೇಟದ ಬೇಗೆಗೋಸುಗ
ಬಳಿವರಿವದಿರು ಪಾಂಡುನಂದನ
ರಳಿಯಲವದಿರ ಬಳಿಯ ವೇಳಾಯಿತನು ಕೃಷ್ಣ ಗಡ
ಅಳಿಯಲಥವಾ ನಿಲಲಿ ಹಣುಹಂ
ಪಲು ಪಾಲಿದು ನೀನಿವರ ಬಲೆಯಲಿ
ಸಿಲುಕಿ ನೊಂದೈ ತಂದೆ ಪವನಜ ಎಂದನಾ ಕರ್ಣ ೬

ಬಾಯಿಬಡಿಕನಲಾ ವೃಥಾ ರಾ
ಧೇಯ ಮದವೇಕಿನ್ನು ನಿನಗಹಿ
ಸಾಯಕದ ಸಾವಿನಲಿ ನೀರಿಳಿಸುವೆನು ನೆತ್ತರಲಿ
ತಾಯ ಬಸುರಿಂಬಿಲ್ಲ ನೀನುಳಿ
ವಾಯತಿಕೆಯಿನ್ನೆಂತು ಕೌರವ
ರಾಯ ನೋಡಲಿ ಕರೆಯೆನುತ ತೆಗೆದೆಚ್ಚನಾ ಪಾರ್ಥ ೭

ಆರು ಶರದಿಂದೆಚ್ಚು ಮಗುಳೀ
ರಾರುಬಾಣದಲೌಕಿ ಮೂವ
ತ್ತಾರು ಮಾರ್ಗಣದಿಂದ ಮುಕ್ಕುರಿಕಿದನು ರಿಪುಭಟನ
ಮೂರುಬಾಣದಲರಿಯ ದೇಹವ
ಕೀರಿದನು ಮತ್ತೆರಡುಶರದಲಿ
ಜಾರಲೆಚ್ಚನು ಜರೆದು ಕರ್ಣನ ಕರ್ಣಕುಂಡಲವ ೮

ಜೋಡ ಕಡಿದನು ಸೀಸಕವನೀ
ಡಾಡಿದನು ಕೆಲಬಲದ ಕಣೆಗಳ
ನೀಡುಕಾರರನಿಕ್ಕಿದನು ಗರಿಸಹಿತ ಸರಳುಗಿಯೆ
ಹೂಡಿದಂಬಿನ ಹೊದೆಯ ಬಂಡಿಯ
ತೋಡ ಕಡಿದನು ಛತ್ರ ಚಮರದ
ಝಾಡಿಗಳ ತರಿದೊಟ್ಟಿದನು ಕಲಿಪಾರ್ಥ ನಿಮಿಷದಲಿ ೯

ಈತನಬ್ಬುಡಿಸುವನೆ ಬಳಿಕಿನೊ
ಳಾ ತತುಕ್ಷಣವರ್ಜುನನ ಚಮು
ರಾತಪತ್ರವ್ಯೂಹವನು ಕೈದುಗಳ ಬಂಡಿಗಳ
ಘಾತಿಸಿದನೆಡಬಲದ ಸುಭಟ
ವ್ರಾತವನು ಕೆದರಿದನು ಸರಳ ವಿ
ಘಾತಿಯಲಿ ಬಲುಘಾಯವಡೆದನು ಪಾರ್ಥನಡಿಗಡಿಗೆ ೧೦

ಅರಸ ಹೇಳುವುದೇನು ರಾಯನ
ಸಿರಿಯ ಪೈಸರವನು ಸುಯೋಧನ
ನರಸುತನದಾಧಾರ ಮೂಲಸ್ತಂಭ ಭಂಜನವ
ನರನ ಜಯವಲ್ಲಿಯದು ದೈವವ
ಮರುಳುಮಾಡಿದರವರು ನಿಮ್ಮಯ
ಧರಣಿ ನಿಮಗನುಚಿತವ ನೆನೆದಳು ಹೇಳಲೇನೆಂದ ೧೧

ಧರೆ ನೆನೆದ ದುಷ್ಕೃತವದೇನಂ
ದರಸ ಬೆಸಗೊಂಬೈ ನಿರಂತರ
ಸುರಿವ ರುಧಿರಾಸಾರದಲಿ ಕೆಸರೆದ್ದು ಕಳನೊಳಗೆ
ಹರಿವ ಬಿಂಕದ ರಥದ ಗಾಲಿಯ
ಗರುವತನ ಗಾಳಾಯ್ತಲೇ ಖೊ
ಪ್ಪರಿಸಿ ತಗ್ಗಿತು ತೇರು ತಡೆದುದು ಭಟನ ಸಾಹಸವ ೧೨

ಗಾಲಿಯದ್ದವು ಕೂಡೆ ಯಂತ್ರದ
ಕೀಲುಗಳು ಕಳಚಿದವು ಹಯತತಿ
ತೂಳಿ ಸತ್ವದಲೌಕಿ ಸೆಳೆದವು ಕುಸಿದು ನಿಜಮುಖವ
ಮೇಲು ಮಿಡುಕದು ತೇರು ಕುರುಬಲ
ಜಾಲ ಜರಿದುದು ವೈರಿ ಬಲದಲಿ
ಸೂಳವಿಸಿದರು ಭುಜವನೊದರಿತು ಬೆರಳ ಬಾಯ್ಗಳಲಿ ೧೩

ಮೂಗಿನಲಿ ಬೆರಳಿಟ್ಟು ಮಕುಟವ
ತೂಗಿ ತೊನೆದನು ಪೂತು ಮಝು ನಿ
ರ್ಭಾಗಧೇಯನು ರಾಯನಕಟಾ ಶಿವ ಮಹಾದೇವ
ಈಗಳಿದು ತಾನೇನು ವಿಧಿ ಬರೆ
ದೋಗಟೆಯೊ ಕುರುವಂಶ ವಜ್ರದ
ಬೇಗಡೆಯೊ ಮಾಮಾ ಎನುತ ಮರುಗಿದನು ಕಲಿಕರ್ಣ ೧೪

ಶಿವನ ಬಲುಹಂಟೆಂಬೆನೇ ಶಿವ
ನವರ ಕಡೆ ಹರಿಯೆಂಬೆನೇ ಪಾಂ
ಡವರ ಬಂಡಿಯ ಬೋವನಿಂದ್ರಾದ್ಯರು ಸಹಾಯಿಗಳು
ಅವರು ಸಾಕ್ಷಾತರ್ಜುನರು ನ
ಮ್ಮವನಿ ನಮಗುಂಟೆಂಬೆನೇ ಕೌ
ರವನ ಪುಣ್ಯವನರಿಯೆನಿದು ಹದನೆಂದನಾ ಕರ್ಣ ೧೫

ಇಳುಹಿದನು ರಥದೊಳಗೆ ಚಾಪವ
ನಳವಡಿಸಿದನು ಸೆರಗನಲ್ಲಿಂ
ದಿಳಿದು ಗಾಲಿಯನಲುಗಿ ಪಾರ್ಥನ ನೋಡಿ ನಸುನಗುತ
ಎಲೆ ಧನಂಜಯ ಸೈರಿಸುವುದರೆ
ಗಳಿಗೆಯನು ರಥವೆತ್ತಿ ನಿನಗಾ
ನಳವಿಗೊಡುವೆನು ತನ್ನ ಪರಿಯನು ಬಳಿಕ ನೋಡೆಂದ ೧೬

ರೂಢಿಸಿದ ಭಟ ನೀನು ಪಂಥದ
ಪಾಡುಗಳ ಬಲ್ಲವನು ಶಾಸ್ತ್ರವ
ಖೋಡಿಗಳೆವವನಲ್ಲ ಲೌಕಿಕ ವೈದಿಕ ಸ್ಥಿತಿಯ
ನಾಡೆ ಬಲ್ಲಿರಿ ಶಸ್ತ್ರಹೀನರ
ಕೂಡೆ ವಾಹನಹೀನರಲಿ ಕೈ
ಮಾಡಲನುಚಿತವೆಂಬ ಮಾರ್ಗವನೆಂದನಾ ಕರ್ಣ ೧೭

ಎನುತ ಗಾಲಿಯನಲುಗಿ ಕೀಲ
ಚ್ಚಿನಲಿ ಮುಂಗೈಗೊಟ್ಟು ಮೊಳಕಾ
ಲಿನಲಿ ಧರಣಿಯನೌಕಿ ತಗ್ಗಿದ ರಥವ ನೆಗಹುತಿರೆ
ದನುಜರಿಪು ಚಮ್ಮಟಿಗೆಯಲಿ ಫಲು
ಗುಣನ ತಿವಿದನು ನೋಡು ರಾಧಾ
ತನುಜನಿರವನು ಬೇಗಮಾಡೆಂದರ್ಜುನನ ಜರೆದ ೧೮

ಎಸು ಮರುಳೆ ಗಾಂಡೀವಿಯಾಪ
ತ್ತೆಸಗಿದಾಗಳೆ ಹಗೆಯ ಗೆಲುವುದು
ವಸುಮತೀಶರ ನೀತಿ ತೊಡು ತೊಡು ದಿವ್ಯಮಾರ್ಗಣವ
ವಿಷಮವೀರನು ರಥವ ಮೇಳಾ
ಪಿಸದ ಮುನ್ನವೆ ಹರಿವ ನೆನೆ ಸೈ
ರಿಸಿದ ಬಳಿಕೀ ಕರ್ಣ ಕೈಕೊಂಬನೆ ತ್ರಿಯಂಬಕನ ೧೯

ಏನನೆಂಬೆನು ಜೀಯ ಕರ್ಣಂ
ಗೇನಹನೊ ಫಲುಗುಣನು ಬಳಿಕಾ
ದಾನವಾರಿಯ ನುಡಿಯ ಕೇಳಿದು ಕೇಳಿದಾಕ್ಷಣಕೆ
ಗ್ಲಾನಿಯಲಿ ಮುಳುಗಿದನು ಮನದಭಿ
ಮಾನ ಸರ್ಪನ ಕೆಡಹಿ ಧೈರ್ಯನಿ
ಧಾನವನು ಕೈಸೂರೆಗೊಂಡುದು ಶೋಕವರ್ಜುನನ ೨೦

ಮುಕ್ಕಿದನು ಮಹಿಮೆಯನು ಕಂಗಳು
ಮುಕ್ಕುಳಿಸಿದವು ನೀರನಹಿತನೊ
ಳುಕ್ಕುವನುರಾಗದಲಿ ಕೊಂಡನು ಬಳಿಕ ವೀಳೆಯವ
ಸಿಕ್ಕಿದನು ಕರುಣಾಲತಾಂಗಿಯ
ತೆಕ್ಕೆಯಲಿ ನಾನೇನ ಹೇಳುವೆ
ನೊಕ್ಕಲಿಕ್ಕಿತು ಶೋಕವರ್ಜುನನಂತರಂಗದಲಿ ೨೧

ತೇರಿನಲಿ ಚಾಚಿದನು ಮೆಲ್ಲನೆ
ಭಾರಿ ಧನುವನು ಕಯ್ಯ ಕಣೆಗಳ
ನೋರೆಯಲಿ ಸೈತಿರಿಸೆ ಕಂಡನು ಮತ್ತೆ ಮುರವೈರಿ
ಹಾರವೇಕೈ ಕಂಗಳಲಿ ಕ
ಸ್ತೂರಿಯೇಕೈ ಕದಪಿನಲಿ ಶೃಂ
ಗಾರವಿದು ವಿಪರೀತವೇನೈ ಪಾರ್ಥ ಹೇಳೆಂದ ೨೨

ದೇವ ಹಗೆಯಾಗಿರನು ಕರ್ಣನಿ
ದಾವ ಹದನೆಂದರಿಯೆ ಮನದಲಿ
ನೋವು ಮಿಗುವುದು ಕೈಗಳೇಳವು ತುಡುಕುವಡೆ ಧನುವ
ಜೀವವೀತನಮೇಲೆ ಕರಗುವು
ದಾವ ಸಖನೋ ಶತ್ರುವೆಂಬೀ
ಭಾವನೆಯ ಬಗೆ ಬೀಳುಕೊಂಡುದು ಕರ್ಣನಾರೆಂದ ೨೩

ಕೌರವನ ಮೇಲಿಲ್ಲದಗ್ಗದ
ವೈರವೀತನಮೇಲೆ ನಮಗಪ
ಕಾರಿಯಾತನು ಮರಣದನುಸಂಧಾನವಿನ್ನೆಬರ
ವೈರವುಪಶಮಿಸಿತು ಯುಧಿಷ್ಠಿರ
ವೀರನಿಂದಿಮ್ಮಡಿಯ ನೇಹದ
ಭಾರವಣೆ ತೋರುವುದಿದೇನೈ ಕರ್ಣನಾರೆಂದ ೨೪

ಆಸುರದ ವ್ಯಾಮೋಹವಿದು ಡೊ
ಳ್ಳಾಸವೋ ಕೌರವರ ಘಟ್ಟಿನ
ವೈಸಿಕವೊ ನಿಮ್ಮಡಿಯ ಮಾಯಾಮಯದ ಮಾಲೆಗಳೊ
ವಾಸಿ ಬೀತುದು ಛಲಗಿಲದ ಕಾ
ಳಾಸ ಸೋತುದು ಕರ್ಣನಲಿ ಹಿರಿ
ದಾಸೆಯಾಯಿತು ಕೃಷ್ಣ ಕರುಣಿಸು ಕರ್ಣನಾರೆಂದ ೨೫

ಕಾಲಯವನನುಪಾಯದಿಂದವೆ
ಬೀಳಿಸಿದೆ ಮಾಗಧನನಾ ಪರಿ
ಸೀಳಿಸಿದೆ ಭೀಷ್ಮಾದಿಗಳ ಸೋಲಿಸಿದೆ ಸಾಮದಲಿ
ಡಾಳನತಿ ಡೊಂಕಣಿಯ ಠಕ್ಕಿನ
ಠೌಳಿಕಾರನು ನಿನ್ನ ಮಾಯೆಯ
ಹೇಳಲಮ್ಮೆನು ಕೃಷ್ಣ ಕರುಣಿಸು ಕರ್ಣನಾರೆಂದ ೨೬

ಋಷಿಗಳನುಮತದಿಂದ ಕುಂತಿಯು
ಬಸುರಲೇನುದಯಿಸನಲೆ ನೀ
ನಸುರರಿಪು ಬಹು ಕಪಟನಾಟಕ ಸೂತ್ರಧಾರನಲೆ
ವಸುಮತಿಯ ಭಾರವನು ಸಲೆ ಹಿಂ
ಗಿಸುವ ಕೃತ್ಯವು ನಿನ್ನದೆನಗು
ಬ್ಬಸವಿದೇನೆಂದರಿಯೆನಕಟಾ ಕರ್ಣನಾರೆಂದ ೨೭

ಧರೆಯ ಬಿಡುವೆವು ಕುರುಪತಿಗೆ ನಾ
ವರುವರೊಡವುಟ್ಟಿದರು ವಿಪಿನಾಂ
ತರದೊಳಗೆ ಭಜಿಸುವೆವು ನಿನ್ನನು ಭಾವಶುದ್ಧಿಯಲಿ
ತೆರಳುವೀ ಸಿರಿಗೋಸುಗರ ಸೋ
ದರನ ಕೊಲುವೆನೆ ಕೃಷ್ಣ ಕರುಣಿಸು
ಕರುಣಿಸಕಟಾ ಕೃಷ್ಣ ಕರುಣಿಸು ಕರ್ಣನಾರೆಂದ ೨೮

ದೂರುವವರಾವಲ್ಲ ಕರುಣವ
ತೋರಿ ಬಿನ್ನಹಮಾಡಿದೆನು ಹಗೆ
ಯೇರದಿವನಲಿ ಸೇರುವುದು ಸೋದರರದ ಸಂಬಂಧ
ಆರೆನೀತನ ಕೊಲೆಗೆ ಹೃದಯುವ
ಸೂರೆಗೊಂಡನು ಕರ್ಣನಕಟಾ
ತೋರಿ ನುಡಿಯಾ ಕೃಷ್ಣ ಕರುಣಿಸು ಕರ್ಣನಾರೆಂದ ೨೯

ಅರಸ ಕೇಳ್ಳೈ ಬಳಿಕ ಪಾರ್ಥನ
ಕರುಣರಸದಾಳಾಪ ವಾಗ್ವಿ
ಸ್ತರಕೆ ಮನದಲಿ ಮರುಗಿದನು ಮುರವೈರಿ ನಸುನಗುತ
ಕೆರಳಿದನು ಮಾತಿನಲಿ ಸುಡು ಬಾ
ಹಿರನಲಾ ನೀ ನಿನ್ನ ವಂಶಕೆ
ಸರಿಯೆ ಸೂತನ ಮಗನಿದೇನೆಂದಸುರರಿಪು ಜರೆದ ೩೦

ವಾಸಿಗಾದುದೆ ಜಾತಿಸಂಕರ
ಬೇಸರಾಯಿತೆ ಧೃತಿಗೆ ಕಲಿತನ
ಕೀಸು ಮೊಲೆಗಳು ಮೂಡಿದವಲಾ ಪಾರ್ಥ ಸಮರದಲಿ
ಹೂಸಕದ ಛಲವೀಯಹಂಕೃತಿ
ಮೀಸಲಳಿದುದೆ ಶಿವಶಿವಾ ನಿ
ರ್ದೋಷದಲಿ ಬಹುದೋಷವಿದು ವಿಪರೀತವಾಯ್ತೆಂದ ೩೧

ಕ್ಷಿತಿಯೊಳೀ ಕ್ಷತ್ರಿಯರ ಧರ್ಮ
ಸ್ಥಿತಿಯನರಿಯಾ ಕೃಷ್ಣ ಚಾಪ
ಚ್ಯುತರನಪಗತವಾಹನರ ಪರಿಮುಕ್ತ ಕೇಶಿಗಳ
ಗತಿವಿಹೀನರ ದೈನ್ಯವಾಚಾ
ಯುತರ ತರು ವಲ್ಮೀಕ ಜಲ ಸಂ
ಗತರನಿರಿವುದು ಧರ್ಮವೇ ನಾವರಿಯೆವಿದನೆಂದ ೩೨

ಹೇಳು ಹೇಳಿನ್ನೊಮ್ಮೆ ಧರ್ಮವ
ಕೇಳಿದರಿಯೆವು ನಿಮ್ಮ ಕಯ್ಯಲಿ
ಕೇಳಲಾಗದೆ ರಾಜಧರ್ಮ ಪುರಾಣ ಸಂಗತಿಯ
ಆಳಿವನಘಾಟವೆ ದೊರಾರಿಸಿ
ಸೋಲಿಸುವುದೇನರಿದೆ ಬಲುಗೈ
ಯಾಳಲಾ ನೀ ರಣಕೆ ದಿಟ ವಸುದೇವನಾಣೆಂದ ೩೩

ಈಗಲೀ ಧರ್ಮಶ್ರವಣ ನೀ
ನಾಗಳೇರಿಸಿ ನುಡಿದ ಭಾಷೆಗೆ
ಮೂಗುಹೋದುದೆ ಮರೆದಲಾ ಮಾತುಗಳು ಹಳಸುವವೆ
ಹೋಗಲೆಲೆ ಮರುಳೇ ವಿಭಾಡಿಸು
ಬೇಗದಲಿ ಬಹುರಾಜಕಾರ್ಯವ
ನೀಗಳೇ ತಿದ್ದುವೆನು ತೊಲಗಿಸು ಸೂತಜನ ಶಿರವ ೩೪

ಅಕಟ ನಿಷ್ಕರುಣಿಯೆ ವೃಥಾ ಪಾ
ತಕವಿದೇಕೈ ಹೇಳು ಜಯಕಾ
ಮುಕರು ನಾವೊಲ್ಲದಡೆ ನಿಮಗೇಕೀಸು ನಿರ್ಬಂಧ
ಪ್ರಕಟ ಕುರುವಂಶದಲಿ ಯದುರಾ
ಜಕರೊಡನೆ ಹಗೆಯಿಲ್ಲಲೇ ಮತಿ
ವಿಕಳನಾದೆನು ಕೃಷ್ಣ ಕರ್ಣನ ಕೊಲುವನಲ್ಲೆಂದ ೩೫

ಬಿಸುಟು ಹೋದನು ರಥವ ಸಾರಥಿ
ವಸುಧೆಯಲಿ ರಥವದ್ದು ಕೆಡೆದುದು
ನಿಶಿತಮಾರ್ಗಣವಿಲ್ಲ ಕಯ್ಯಲಿ ದಿವ್ಯಧನುವಿಲ್ಲ
ಎಸುವಡೆಂತೇಳುವುವು ಕಯ್ ನೀ
ಬೆಸಸುವಡೆ ಮನವೆಂತು ಬಂದುದು
ಬಸುರ ಶಿಖಿ ಬಲುಹಾಯ್ತು ಕರ್ಣನ ಕೊಲುವನಲ್ಲೆಂದ ೩೬

ಗುರುವನೆಸುವಡೆ ಮೇಣು ಭೀಷ್ಮನ
ಸರಳ ತಡಿಕೆಗೆ ಚಾಚುವಡೆ ಧಿ
ಕ್ಕರಿಸುವಡೆ ಕೃಪ ಶಲ್ಯ ಸೈಂಧವ ಮುಖ್ಯ ಬಾಂಧವರ
ತೆರಳಿದೆನೆ ತೇರೈಸಿದೆನೆ ಹೇ
ವರಿಸಿದೆನೆ ಹೋರಿದೆನೆ ಕಲಿತನ
ಕರಗಿತೇನೆಂದರಿಯೆ ಕರ್ಣನ ಕೊಲುವನಲ್ಲೆಂದ ೩೭

ಬಳಿಕ ಭೀಮಾದಿಗಳ ಮನದಲಿ
ಸುಳಿದುದೈ ಸಂದೇಹವೀತನ
ಕೊಲುವುದೇನನುಚಿತವೊ ಮೇಣುಚಿತವೋ ಶಿವಾ ಎನುತ
ಅಳುಕಿದರು ದ್ರೌಪದಿ ಯುಧಿಷ್ಠಿರ
ರೊಳಗೊಳಗೆ ಸಂತಾಪಶಿಖಿಯಲಿ
ತಳಿತ ದುಗುಡದ ಬಿಗಿದ ಬೆರಗಿನೊಳಿದ್ದುದಾಚೆಯಲಿ ೩೮

ಮೊದಲಲೆರಡೊಡ್ಡಿನಲಿ ಸುಮ್ಮಾ
ನದ ಸಘಾಡವ ಕಂಡೆನೀಗಳು
ತುದಿಗೆ ಬರೆವರೆ ಕಂಡೆನಿವರವರೆರಡು ಘಟ್ಟಿನಲಿ
ತುದಿವೆರಳ ಕಂಬನಿಯ ಬಳಸಿದ
ಬೆದರುಗಳ ಕುಕ್ಕುಳಿಸಿದುತ್ಸಾ
ಹದ ವಿಘಾತಿಯ ನಟ್ಟ ಚಿಂತೆಯನರಸ ಕೇಳೆಂದ ೩೯

ಮತ್ತೆ ಜರೆದನು ದನುಜರಿಪು ತಲೆ
ಗುತ್ತಿದನು ಕಲಿ ಪಾರ್ಥನಾತನ
ಕುತ್ತಿ ಬರಸೆಳೆದಂತೆ ಭಂಗಿಸಿದನು ಮುರಧ್ವಂಸಿ
ಒತ್ತುವವು ಫಲುಗುಣನ ನುಡಿ ಮಿಗೆ
ಕೆತ್ತುವವು ಹರಿವಚನವಾತನ
ಚಿತ್ತವನು ಸಂತೈಸಿ ಹರಿ ತಿಳುಹಿದನು ಸಾಮದಲಿ ೪೦

ಎಲೆ ಧನಂಜಯ ನೀನು ಹಿಮಕರ
ಕುಲದ ಸುಕುಮಾರಕನು ಲೋಕದ
ಕುಲವಿಹೀನನು ಕರ್ಣನಿವ ನಿನಗೆಂತು ಸರಿಯಹನು
ತಲೆಯ ಮಾರಿ ಶರೀರವನು ಸಲೆ
ಸಲಹಲೋಸುಗ ಕೌರವನ ತಂ
ಬುಲಕೆ ಕಯ್ಯಾಂತವನು ಬಂಧುವೆ ಪಾರ್ಥ ಹೇಳೆಂದ ೪೧

ಕೇಡಹೊತ್ತಿಸಿ ನಿಮ್ಮ ಬೇಂಟೆಯ
ನಾಡಿಸಿದನಿವ ಜೂಜನಾಡಿಸಿ
ನಾಡ ಕೊಳಿಸಿದ ಹಿಸುಣನಿವ ನಿಮ್ಮೆಲ್ಲರನು ಕೆಡಿಸಿ
ನಾಡ ಸಂಧಾನವನು ನಾವ್ ಮಾ
ತಾಡಲೆಮ್ಮನು ಬಿಗಿಯಲನುವನು
ಮಾಡಿಸಿದನೀ ಕರ್ಣ ನಿಮಗತಿಹಿತವನಹನೆಂದ ೪೨

ಕೊಲ್ಲನೇ ಅಭಿಮನ್ಯುವನು ಹಗೆ
ಯಲ್ಲವೇ ಮಾರುತಿಯ ಕೊರಳನು
ಬಿಲ್ಲ ಕೊಪ್ಪಿನೊಳೆಳೆಯನೇ ಕೆಡೆಯೆಸನೆ ಧರ್ಮಜನ
ಖುಲ್ಲನೀತಿಯ ನೆನೆಯದಿರು ನೀ
ನೆಲ್ಲಿಯವನೀ ವೈರಿ ಕರ್ಣನ
ದೆಲ್ಲಿಯವನೆಸು ಮರುಳೆ ಎಂದನು ನಿಜವ ತೋರಿಸದೆ ೪೩

ಬೀಸಿದನು ನಿಜ ಮಾಯೆಯನು ಡೊ
ಳ್ಳಾಸದಲಿ ಹರಹಿದನು ತನುವನು
ರೋಷವನ ಬಿತ್ತಿದನು ಮನದಲಿ ನರನ ಕಲಿಮಾಡಿ
ಐಸೆ ಬಳಿಕೇನೆನ್ನಖಿಳಗುಣ
ದೋಷ ನಿನ್ನದು ಪುಣ್ಯಪಾಪದ
ವಾಸಿ ನಮಗೇಕೆನುತ ಕೊಂಡನು ಧನುವನಾ ಪಾರ್ಥ ೪೪

ಹಿಡಿ ಧನುವನನುವಾಗು ಸಾಕಿ
ನ್ನೆಡಬಲನ ಹಾರದಿರೆನುತ ಕಯ್
ಗಡಿಯನೆಚ್ಚನು ನೂರು ಶರದಲಿ ಸೂತನಂದನನ
ತೊಡಗಿತೇ ಕಕ್ಕುಲಿತೆ ಮನದಲಿ
ಫಡ ಎನುತ ನೂರಂಬನೆಡೆಯಲಿ
ಕಡಿದು ಬಿಸುಟನು ಸೆಳೆದು ಕಿಗ್ಗಟ್ಟಿನ ಕಠಾರಿಯಲಿ ೪೫

ರಥವ ಸಂತೈಸಿದನು ಬಳಿಕತಿ
ರಥ ಭಯಂಕರನೇರಿದನು ನಿಜ
ರಥವನತಿಹರುಷದಲಿ ತೊಳೆದನು ಚರಣ ಕರತಳವ
ಪೃಥಿವಿ ನೆನೆದಪಕಾರ ಲೋಕ
ಪ್ರಥಿತವಾಯಿತು ಸಾಕು ಬದುಕಲಿ
ಪೃಥೆಯ ಮಕ್ಕಳೆನುತ್ತ ಕೊಂಡನು ನಗುತ ವೀಳೆಯವ ೪೬

ಧನುವ ಕೊಂಡನು ಹಯವ ಜರೆದ
ರ್ಜುನನ ತರುಬಿದನಖಿಳ ಕುರುಬಲ
ವನಧಿಗಭಯವನಿತ್ತು ಮುಸುಕಿದನಂಬಿನಲಿ ನರನ
ಕನಲಿದವು ನಿಸ್ಸಾಳ ರಿಪುನೃಪ
ಜನವ ಬಯ್ದುವು ಕಹಳೆ ಬಹುವಿಧ
ನಿನದದಲಿ ಗರ್ಜಿಸಿದವೆರಡೊಡ್ಡಿನಲಿ ಘನವಾದ್ಯ ೪೭

ಅಳುಕಿದನೆ ರಥ ಮುಗ್ಗಿದರೆ ಕಳ
ವಳಿಸಿದನೆ ಶಲ್ಯಾಪಸರಣಕೆ
ಕೆಲಬಲನ ಹಾರಿದನೆ ನರನವಗಡಿಸಿ ಕಾದಿದಡೆ
ಬಲಿಮಥನ ಮಝು ಭಾಪು ಪಾಂಡವ
ಬಲದಿಶಾಪಟ ರಾಯಮದನ
ಪ್ರಳಯಹರ ಭಾಪೆಂದು ಹೊಗಳಿತು ವಂದಿಸಂದೋಹ ೪೮

ಅರಸ ಕೇಳೈ ಜೂಜುಗಾರರ
ಸಿರಿಯ ಸಡಗರ ಕಳಿವಗಲ ತಾ
ವರೆಯ ನಗೆ ಸಜ್ಜನರ ಖಾತಿ ನಿತಂಬಿನೀ ಸ್ನೇಹ
ಪರಮಯೋಗಿಯ ಲೀಲೆ ಕೌರವ
ರರಸನೊಡ್ಡಿನ ಜಯವಿದೀಸರ
ಗರುಡಿಯೊಂದೇ ಶ್ರಮವ ಕೊಡುವುದು ಶಕ್ರಧನುವೆಂದ ೪೯

ಉಬ್ಬಿದನು ನಿಸ್ಸಾತಸಾತನ
ತುಬ್ಬಿನಲಿ ಕುರುಬಲದ ಹರುಷದ
ಜಬ್ಬುರಿಯ ಹುರಿಗೂಡಿ ತೋರಿತು ಚಾರು ಚತುರಂಗ
ತೆಬ್ಬಿ ತುಳುಕುವ ಕಣೆಯ ಕಣೆಯಲಿ
ಹಬ್ಬಿ ಹರೆದುದು ತೋರದಲಿ ಬಲಿ
ದುಬ್ಬುಗವಳದ ಕಣ್ಣುಗಳು ಕರ್ಣಾವಸಾನದಲಿ ೫೦

ಹತ್ತು ಶರದಲಿ ತುರಗವನು ಮೂ
ವತ್ತರಲಿ ಮುರವೈರಿಯನು ತೊಂ
ಬತ್ತರಲಿ ಫಲುಗುಣನನೈವತ್ತಂಬಿನಲಿ ಕಪಿಯು
ಮತ್ತೆ ಮೂವತ್ತರಲಿ ಮಗುಳರು
ವತ್ತರಲಿ ನರರಥವ ನೂರೈ
ವತ್ತು ಶರದಲಿ ಘಾಯಗಾಣಿಸಿದನು ಚತುರ್ಬಲವ ೫೧

ಬಲಜಲಧಿ ಸುಳಿಗೊಂಡು ಪಾರ್ಥನ
ಬಳಿಗೆ ತೆಗೆದುದು ತೆಗೆದುದೀತನ
ಕಲಿತನದ ವಿಕ್ರಮ ಧನಂಜಯನಾ ಧನಂಜಯನ
ಅಳುಕಿದರು ಭೀಮಾದಿಗಳು ತ
ಲ್ಲಳಿಸಿತಾಚೆಯ ಥಟ್ಟು ಕೌರವ
ದಳದ ಕಳಕಳ ಕೆಟ್ಟುದೊಂದರೆಗಳಿಗೆ ಮಾತ್ರದಲಿ ೫೨

## ಇಪ್ಪತ್ತೇಳನೆಯ ಸಂಧಿ

ಸೂ. ಸಮರ ಸಾಹಸ ವೀರನನುಪಮ
ಕಮಲಸಖನ ಕುಮಾರನದಟಿಂ
ದಮರನಗರಿಗೆ ನಡೆಯೆ ಪಲುಬಿದ ಕೌರವರ ರಾಯ

ಸಾಲದೇ ಕಥೆಯಿನ್ನು ಮೇಲಣ
ಕಾಳಗದ ಮಾತುಗಳನಕಟಾ
ಕೇಳಿ ಜೀವವ ಹಿಡಿಯಲಾಪ್ಪೆ ತಂದೆ ಧೃತರಾಷ್ಟ್ರ
ಹೇಳುವಡೆ ಕರ್ಣವ್ಯಥೆಯ ಸಂ
ಭಾಳಿಸುವಡೆನಗರಿದು ನುಡಿಗಳ
ಕಾಳಕೂಟವ ಬಡಿಸುವೆನು ಕಿವಿಯಾರೆ ಸವಿಯೆಂದ ೧

ತೂಳಿದನು ಕಲಿಪಾರ್ಥನೀತನ
ಮೇಲೆ ಶಿವಶಿವ ಕಣೆಯ ಕಡೆವಳೆ
ಗಾಲ ತಪ್ಪಲ್ಲೆನುತ ಕಡಿದನು ಕರ್ಣನಂಬುಗಳ
ಮೇಲೆಮೇಲೆಚ್ಚಂಬುಗಳ ಸಲೆ
ಸೀಳಿ ಕರ್ಣಧ್ವಜದ ಕಂಭದ
ಕೋಲ ಮುರಿಯೆಸಲುಡಿದು ಬಿದ್ದುದು ವರ ರಥಾಗ್ರದಲಿ ೨

ಆ ಮಹಾಧ್ವಜ ದಂಡ ಪಾತದ
ಡಾಮರದ ದಳವುಳಕೆ ಹೆದರಿತು
ಹಾ ಮಹಾದೇವೇನ ಹೇಳುವೆನೈ ಮಹೀಪತಿಯೆ
ಧೂಮಚುಂಬಿತ ಚಿತ್ರದಂತೆ ಸ
ನಾಮರಿದ್ದುದು ಸೌಬಲಾಶ್ವ
ತ್ಥಾಮ ಕೃಪ ಕೃತವರ್ಮಕಾದಿಗಳೊಂದು ನಿಮಿಷದಲಿ ೩

ಮತ್ತೆ ಕೇಳರಿವಿಕ್ರಮವ ನಭ
ಕೊತ್ತಿತೀತನ ಶೌರ್ಯವಾತನ
ನೆತ್ತರಲಿ ನಾದಿದನು ನಾನಾವಿಧ ಶರಾವಳಿಯ
ಹತ್ತು ಶರದಲಿ ಕರ್ಣಚಾಪವ
ಕತ್ತರಿಸಿದನು ಪಾರ್ಥನೀತನ
ಚಿತ್ತದಲಿ ಕರುಣಾರಸಕೆ ಕಾಲಾಟವಾಯ್ತೆಂದ ೪

ದ್ರೋಣ ಭೀಷ್ಮರ ನಟ್ಟಿದರೆ ಮುಂ
ಗಾಣಿಕೆಯಲೇ ಮಡಿದರೆನ್ನಯ
ಗೋಣ ಕೊಯ್ದನು ಕೃಷ್ಣ ಮುನ್ನಿನ ಕುಲವನೆಚ್ಚರಿಸಿ
ಪ್ರಾಣ ಪಾಂಡವರೆಂಬ ನುಡಿಯನು
ಜಾಣಿನಲಿ ಹರಿ ಬಲಿದನೊಡೆಯಗೆ
ಕಾಣೆನಾಪ್ತರನೆಂದು ಮನದಲಿ ಮರುಗಿದನು ಕರ್ಣ ೫

ಕುಲಕೆ ಕೀಳಿವನೆಂದು ಟಿಕ್ಕರಿ
ಗಳೆದಡಾ ಬಹುಬಂಧುವರ್ಗವ
ನುಳಿದು ಸಿಂಹಾಸನದಲೆನಗಭಿಷೇಕವನು ಮಾಡಿ
ಕುಲದ ಮಲಿನವ ತೊಳೆದು ಕೌರವ
ಕುಲದೊಳೊಡಬೆಚ್ಚವನಿಪಾಲಕ
ತಿಲಕ ಕುರುಪತಿಗಾಪ್ತರಿಲ್ಲೆಂದಳಲಿದನು ಕರ್ಣ ೬

ನೋಡಿ ದಣಿಯನು ನಿಚ್ಚಲುಚಿತವ
ಮಾಡಿ ದಣಿಯನು ಖೇಳ ಮೇಳದ
ಲಾಡಿ ದಣಿಯನು ಶಿವಶಿವಾ ತನ್ನೊಡನೆ ಕುರುರಾಯ
ಓಡಲರಿಯದೆ ದ್ರೋಣ ಭೀಷ್ಮರು
ಗೂಡ ತಲೆಗೊಟ್ಟೈಸರಲಿ ತಾ
ಮಾಡಿತೇನರಸಂಗೆನುತ ಮರುಗಿದನು ಕಲಿಕರ್ಣ ೭

ಮೊದಲಲಾತ್ಮಜರಳಿವನೊಡವು
ಟ್ಟಿದರ ಮೆಯ್ಯಲಿ ಮರೆದನೊಡವು
ಟ್ಟಿದರು ನೂರ್ವರು ಮಡಿಯೆ ಮರೆದನು ತನ್ನ ಸುಳಿವಿನಲಿ
ಕದನವೆನ್ನಯ ಸುಳಿವನೊಳಕೊಂ
ಡುದು ಸುಯೋಧನನೃಪತಿಗಿನ್ನಾ
ಸ್ಪದರ ಕಾಣೆನು ಶಿವಶಿವಾ ಎಂದಳಲಿದನು ಕರ್ಣ ೮

ಸಲಹಿದೊಡೆಯನ ಜೋಳವಾಳಿಗೆ
ತಲೆಯ ಮಾರುವುದೊಂದು ಪುಣ್ಯದ
ಫಲವು ಮರಣದ ಹೊತ್ತು ಕೃಷ್ಣನ ಕಾಬ ಸುಕೃತಫಲ
ಇಳೆಯ ಮೇಲೆನಗಲ್ಲದಾರಿಗೆ
ಫಲಿಸುವುದು ತಾ ಧನ್ಯನೆನುತವೆ
ಹಳಚದಸುರಾಂತಕನನೀಕ್ಷಿಸುತಿರ್ದನಾ ಕರ್ಣ ೯

ಒಳಗೆ ಹೃದಯಾಂಬುಜದ ಮಧ್ಯ
ಸ್ಥಳದೊಳಗೆ ಮುರವೈರಿಯನು ಹೊರ
ವಳಯದಲಿ ಫಲುಗುಣನ ಮಣಿರಥದಗ್ರಭಾಗದಲಿ
ಹೊಳೆವ ಹರಿಯನು ಕಂಡನಿದು ಹೊರ
ಗೊಳಗೆ ಹರಿ ತಾನೆಂಬಭೇದವ
ತಿಳಿದು ನಿಜದೆಚ್ಚರ ಸಮಾಧಿಯೊಳಿರ್ದನಾ ಕರ್ಣ ೧೦

ಅರಸ ಚಿತ್ತೈಸಾಚೆಯಲಿ ಮುರ
ಹರನಲೇ ನಿಮ್ಮನ್ವಯವ ಸಂ
ಹರಿಸಿದಾತನು ಭೀಮಸೇನನೊ ಮೇಣ್ ಧನಂಜಯನೊ
ಸರಳ ತೊಡುತೊಡು ಪಾರ್ಥ ಕರ್ಣನ
ಶಿರವನಿಳುಹಾ ಹಾರದಿರು ಹೇ
ವರಿಸದಿರು ತೆಗೆ ದಿವ್ಯಶರವನು ಬೇಗಮಾಡೆಂದ ೧೧

ಕರಗುವರೆ ನೀ ಸಾರು ಭೀಮನ
ಕರೆದು ಕೊಲಿಸುವೆನೀತನನು ನಿ
ಷ್ಠುರನಲಾ ನೀನೆನ್ನದಿರು ತೆಗೆ ನಿನ್ನ ತನ್ನಿಂದ
ಹರಿಯದೇ ಹಗೆ ನಮ್ಮ ಚಕ್ರದ
ಲರಿಭಟನ ಮುರಿವೆನು ಯುಧಿಷ್ಠಿರ
ನರಸುತನವದು ನಿಲಲಿ ನೀನಂಜುವರೆ ಸಾರೆಂದ ೧೨

ಈಸು ಕರ್ಣನ ಮೇಲೆ ಬಹಳ
ದ್ವೇಷವೇನೋ ಎನುತ ಮನದಲಿ
ಘಾಸಿಯಾದನು ಪಾರ್ಥ ಕರುಣಕ್ರೋಧದುಪಟಳಕೆ
ಆಸೆಯಿನ್ನೇಕೆನುತ ಸೆಳೆದನು
ಸೂಸುಗಿಡಿಗಳ ಹೊಗೆಯ ಹೊದರಿನ
ಮಿಸಲಳಿದಾರೆಂಜಲಿಸದಂಜಳಿಕ ಮಾರ್ಗಣವ ೧೩

ಉರಿಯನುಗುಳುವ ಬಾಣದಲಿ ಕ
ತ್ತರಿಸಿ ಕರ್ಣನನೆಸಲು ಸಮರದ
ಲುರವ ಕೀಲಿಸಿತಂಬು ಗರಿಗಡಿಯಾಗಿ ಗಾಢದಲಿ
ಹರಣ ತೊಲಗದ ಮರ್ಮವನು ಮುರ
ಹರನು ಕಂಡನು ರಥದ ವಾಘೆಯ
ನಿರಿಸಿ ಕರ್ಣನ ಹೊರೆಗೆ ಬಂದನು ವಿಪ್ರವೇಷದಲಿ ೧೪

ತ್ಯಾಗಿ ಜಗದೊಳಗೆಂಬ ಕೀರ್ತಿಯ
ಲೋಗರಿಂದವೆ ಕೇಳ್ದು ಬಂದೆನು
ಮೇಗಳತಿಶಯ ಪದವನೊಲುವಡೆ ಮನದ ಬಯಕೆಗಳ
ಈಗಳೀವುದು ನಮ್ಮಭೀಷ್ಟ
ಶ್ರೀಗೆ ಮಂಗಳವೆಂದು ಹರಸಿದ
ಡಾಗಳರಿದಾ ಕರ್ಣ ನಸುನಗುತಿರ್ದ ಮನದೊಳಗೆ ೧೫

ತ್ಯಾಗಿ ಸಿಂಹಾಸನದ ಮೇಲಿ
ದ್ದಾಗ ಬೇಡಿತನೀಯಬೇಹುದು
ಈಗಳೀವುದ ಬೆಸಸಿಯೆನೆ ನಗುತೆಂದನಾ ವಿಪ್ರ
ತೂಗುವೀ ಕುಂಡಲವನೀವುದು
ಬೇಗ ಧಾರೆಯನೆರೆದು ಕೊಡಿಯೆನ
ಲಾಗಳುದಕವನರಸಿ ಕಾಣದೆ ನೋಡಿದನು ಕೆಲನ ೧೬

ಉದಕವನು ಹೊರಗರಸುತಿರಲಾ
ಪದುಮನಾಭನು ನಗುತ ನಿನ್ನಯ
ಹೃದಯದೊಳಗಿರ್ದಮಲಗಂಗಾಜಲವ ತೆಗೆದೆನಗೆ
ಹದುಳದಿಂದೆರೆ ಧಾರೆಯನು ಸಂ
ಪದದ ಮುಕುತಿಯ ಪದವನೊಲುವಡೆ
ಇದು ಶುಭೋದಯವೆಂದು ಮಾಯಾವಿಪ್ರನರುಹಿದನು ೧೭

ಸರಳ ತೆಗೆದನು ಸರಸಿಜಪ್ರಿಯ
ವರ ಸುತನು ತನ್ನುರವ ಬಗಿದನು
ಘುರಿಘುರಿಲು ಘುರಿಲೆನಲು ತೆಗೆದನು ನಿರ್ಮಲೋದಕವ
ಪರಮ ಸಂತೋಷದಲಿ ಧಾರೆಯ
ನೆರೆದು ಕುಂಡಲವೀಯೆ ಮಿಗೆ ಪು
ಷ್ಕರದ ಜನ ಜಯಯೆನಲು ಮುರರಿಪುವೊಲಿದು ಕೈಕೊಂಡ ೧೮

ಪರಮ ಕರುಣಾಸಿಂಧು ಕರ್ಣ
ಗಿರದೆ ನಿಜಮೂರ್ತಿಯನು ತೋರಿದ
ನುರುತರ ಪ್ರೇಮದಲಿ ಮುಕುತಿಯ ಪದವ ನೇಮಿಸಿದ
ನರನನೆಚ್ಚರಿಸಿದನು ಕರುಣೆಗೆ
ಕರುಣದನುಸಂಧಾನ ಮಾಣದು
ಧರೆಯೊಳಚ್ಚರಿಯೆನುತ ಬೆರಗಿನೊಳಿದ್ದುದಮರಗಣ ೧೯

ಹಿಂದೆ ಪಾಶುಪತಕ್ಕೆ ಬಳುವಳಿ
ಬಂದುದಂಜನ ಬಾಣವದರೆಣೆ
ಯಿಂದ ತೆಗೆದನು ಗಿರಿಜೆಯಂಘ್ರಿಯ ನೆನೆದು ಮಂತ್ರಿಸುತ
ಮಂದರಾಚಲ ನಡುಗೆ ಕಿಡಿಗಳ
ಸಂದಣಿಯ ಸುರಿವಂಬನಾ ರವಿ
ನಂದನನ ಕೊರಳೆಡೆಯೊಳೆಚ್ಚನು ವಾಸವನ ಸೂನು ೨೦

ಅರಸ ಕೇಳ್ಕೆ ಕರ್ಣನೊಡಲಲಿ
ಪರಮತೇಜಃಪುಂಜವೊದೆದು
ಪ್ಪರಿಸಿ ಹಾಯ್ದುದು ಹೊಳೆದುದಿನಮಂಡಲದ ಮಧ್ಯದಲಿ
ಅರರೆ ಭಾಪುರೆ ಕರ್ಣ ಮಝ ಭಾ
ಪುರೆ ಭಟಾಗ್ರಣಿ ನಿನ್ನ ಸರಿದೊರೆ
ಯೆರಡು ಯುಗದಲಿ ಕಾಣೆನೆಂದಳಲಿದನು ಹನುಮಂತ ೨೧

ಕೊಟ್ಟ ಭಾಷೆಗೆ ಮರಳಿ ಬಾಣವ
ತೊಟ್ಟನೇ ತಾನೊಡೆಯನೆಂದರೆ
ಯಟ್ಟಿದನೆ ಪಾಂಡವರೊಳನುಸಂಧಾನವನು ಬಿಸುಟು
ನಟ್ಟ ಕಣೆಗಳುಕಿದನೆ ಕೌರವ
ಕೆಟ್ಟನಕಟಕಟೆಂದು ಕಾಯುವ
ಬಿಟ್ಟ ಕರ್ಣನೊಳಾರು ಸರಿಯೆನುತಿರ್ದುದಮರಗಣ ೨೨

ಬಲುವಿಡಿಯ ಬಿಲು ವಾಮದಲಿ ಬೆರ
ಳೊಳಗೆ ಸವಡಿಸಿ ತೆಗೆವ ತಿರುವಿನ
ಒಳುಕು ನಿಮಿರಿದ ತೋಳ ತೋರಿಕೆ ಬಲದ ಭಾಗದಲಿ
ಬಲಿದ ಮುಂಡಿಯ ಬಾಗಿದೊಡಲಿನ
ಹೊಳೆವ ತನುಕಾಂತಿಯ ಮಹೀಪತಿ
ತಿಲಕ ಕೇಳ್ಕೆ ಕರ್ಣನೆಸೆದನು ರಥದ ಮಧ್ಯದಲಿ ೨೩

ಕಳಚಿ ದುರಿಯೋಧನನ ಬೆಳುಗೊಡೆ
ನೆಲಕೆ ಬೀಳ್ವಂದದಲಿ ಕೌರವ
ಕುಲದ ನಿಖಿಳೈಶ್ವರ್ಯವಿಳೆಗೊರ್ಗುಡಿಸಿ ಕೆಡೆವಂತೆ
ಥಳಥಳಿಪ ನಗೆಮೊಗದ ಗಂಟಿಕಿ
ಬಲಿದ ಹುಬ್ಬಿನ ಬಿಟ್ಟ ಕಂಗಳ
ಹೊಳೆವ ಹಲುಗಳ ಕರ್ಣಶಿರ ಕೆಡೆದುದು ಧರಿತ್ರಿಯಲಿ ೨೪

ಕರ್ಣ ಹಾ ಹಾ ಸೂತಸುತ ಹಾ
ಕರ್ಣ ಹಾ ರಾಧಾತನುಜ ಹಾ
ಕರ್ಣ ಹಾ ಎನ್ನಾನೆ ಹಾ ಬಹಿರಂಗ ಜೀವನವೆ
ನಿರ್ಣಯವು ಕುರುಕುಲಕೆ ಹಾ ಹಾ
ಕರ್ಣ ಮಡಿದೈ ತಂದೆಯೆನುತವೆ
ನಿನ್ನ ಮಗ ರಥದಿಂದ ಧೊಪ್ಪನೆ ಕೆಡೆದನವನಿಯಲಿ ೨೫

ರಾಯ ಹಮ್ಮೈಸಿದನು ಹಾ ರಾ
ಧೇಯ ಹಾ ರಾಧೇಯ ಹಾ ರಾ
ಧೇಯ ಹಾ ಎನ್ನಾನೆ ಬಾರೈ ನಿನ್ನ ತೋರೆನುತ
ಬಾಯಬಿಟ್ಟುದು ಕಯ್ಯ ಕೈದುವ
ಹಾಯಿಕಿತು ಕಂಬನಿಯ ಕಡಲೊಳು
ಹಾಯಿದೆದ್ದುದು ಹೊರಳುತಿರ್ದುದು ಕೂಡೆ ಪರಿವಾರ ೨೬

ನರಗೆ ಸೈರಣೆಯೆತ್ತಣದು ಕರಿ
ತುರಗ ಕಂಬನಿಗರೆದುದದ್ಭುತ
ತರದ ಶೋಕಾಂಬುಧಿಯ ಸುಳಿಯಲಿ ಸಿಕ್ಕಿತೀ ಸೇನೆ
ಅರಸ ಕೇಳಾಚೆಯಲಿ ಭೀಮನ
ನರ ನಕುಲ ಸಹದೇವ ಸಾತ್ಯಕಿ
ಧರಣಿಪನ ದ್ರೌಪದಿಯ ಚಿಂತೆ ದುರಂತವಾಯ್ತೆಂದ ೨೭

ಕಿತ್ತರೋ ಕಲ್ಪದ್ರುಮವ ಕೆಡೆ
ಗುತ್ತಿದರೊ ಸುರಧೇನುವನು ಕೈ
ವರ್ತಿಸಿದರೋ ಪರುಷವನು ಹಾ ಜಲಧಿ ಮಧ್ಯದಲಿ
ಎತ್ತಣದು ಭಾರತದ ರಣ ನಮ
ಗೆತ್ತಲರಸುತ ಬಂದುದಕಟಾ
ಮಿತ್ತುವೆಂದೊರಲಿದರು ಮಂದಿಗಳೆರಡು ಥಟ್ಟಿನಲಿ ೨೮

ಅರಸ ನೀ ಸೈರಿಸಿದೆಲಾ ಶಂ
ಕರ ವಿರಿಂಚಾದಿಗಳು ಕರ್ಣನ
ಪರಮ ಸತ್ಯವ್ರತವ ಕೊಂಡಾಡಿದರು ಅಕಟೆನುತ
ಎರಡು ಥಟ್ಟಿನ ದುಃಖಮಯಸಾ
ಗರವ ಹವಣಿಸಲರಿಯೆನರ್ಜುನ
ತಿರುಗಿದನು ದುಮ್ಮಾನದಲಿ ಪಾಳೆಯಕೆ ಹರಿಸಹಿತ ೨೯

ಇತ್ತ ಪರವಶವಾದ ರಾಯನ
ತೆತ್ತಿಗರು ದಂಡಿಗೆಯೊಳೀತನ
ನೆತ್ತಿ ತಂದರು ಪಾಳೆಯಕೆ ದುಃಸ್ಥಿತಿಯ ಮೇಳೆಯಕೆ
ತೆತ್ತನೇ ಮಗನಸುವನಕಟ ಎ
ನುತ್ತ ಚಿಂತಾರಾಗದಲಿ ಕಡ
ಲತ್ತ ಹಾಯ್ದನು ಬಿಸುಟನಂಬುಜಮಿತ್ರನಂಬರವ ೩೦

ದ್ಯುಮಣಿ ಕರ್ಣದ್ಯುಮಣಿಸಹಿತ
ಸ್ತಮಿಸೆ ಕಮಲಿನಿ ಕೌರವನ ಮುಖ
ಕಮಲ ಬಾಡಿತು ತಿಮಿರ ಹೆಚ್ಚಿತು ಶೋಕತಮದೊಡನೆ
ಅಮಳ ಚಕ್ರಾಂಗಕ್ಕೆ ಭೂಪೋ
ತ್ತಮನ ವಿಜಯಾಂಗನೆಗೆ ಅಗಲಿಕೆ
ಸಮನಿಸಿತು ಕೇಳಯ್ಯ ಜನಮೇಜಯ ಮಹೀಪಾಲ ೩೧

ಇತಿ ಶ್ರೀಮದಚಿಂತ್ಯಮಹಿಮ ಗದುಗು ವೀರನಾರಾಯಣ ಚರಣಾರವಿಂದ
ಮಕರಂದ ಮಧುಪಾನ ಪರಿಪುಷ್ಟ ಷಟ್ಪದೀನಿಕಾಯ
ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತಮಪ್ಪ
ಕರ್ಣಾಟ ಭಾರತ ಕಥಾಮಂಜರಿಯೊಳ್
ಕರ್ಣಪರ್ವಂ ಸಮಾಪ್ತಮಾದುದು

# ಶಲ್ಯ ಪರ್ವ

## ಮೊದಲನೆಯ ಸಂಧಿ

ಸೂ. ರಾಯ ಕೇಳೈ ಕದನದಲಿ ರಾ
ಧೇಯನವಸಾನದಲಿ ಕೌರವ
ರಾಯ ದಳಪತಿಯಾಗಿ ಹೊಕ್ಕನು ಶಲ್ಯನಾಹವವ

ಹೇಳರೇ ಭೀಷ್ಮಾದಿ ಹಿರಿಯರು
ಮೇಲುದಾಯವ ಬಲ್ಲವರು ಹೆ
ಚ್ಚಾಳುತನದಲಿ ಹಿಗ್ಗಿ ಕಂಡಿರೆ ಜಯದ ಜಾರುಗಳ
ಮೇಲಣಾಹವದೊಳಗೆ ದೇಹವ
ಬೀಳುಕೊಂಡನು ಶಲ್ಯನಲ್ಲಿಂ
ಮೇಲೆ ದೊರೆಗೇನಾದುದೆಂಬುದನರಿಯೆ ನಾನೆಂದ ೧

ಮರುಳೆ ಸಂಜಯ ಗಾಳಿಯಲಿ ಕುಲ
ಗಿರಿಯ ಬೈಸಿಕೆ ಬಿಚ್ಚಿದಡೆ ಹುಲು
ಮೊರಡಿಗಳ ಬಿಗುಹೇನು ಬೀತಂದು ಕರ್ಣನೊಡ್ಡವಣೆ
ಕುರುಪತಿಯ ಪಾಡೇನು ಮಾದ್ರೇ
ಶ್ವರನ ಮತ್ಸರವೇನು ಸಾಕುಂ
ತಿರಲಿ ಸವರಿತೆ ಕೌರವಾನ್ವಯವೆಂದನಂಧನೃಪ ೨

ಬೇಯದೆನ್ನೆದೆ ಶೋಕವಹ್ನಿಯ
ಬಾಯಲಕಟಾ ಕರ್ಣ ಕೌರವ
ರಾಯನಳಿವಿನಲುಳಿವ ಪುತ್ರದ್ರೋಹಿಯಾರಿನ್ನು
ಸಾಯಿಸುವ ಸಾವಂಜಿತೆನಗೆ ಚಿ
ರಾಯು ತೊಡರಿಕ್ಕಿದೆನು ಮಾರ್ಕಂ
ಡೇಯ ಮುನಿಗೆಂದರಸ ಧೊಪ್ಪನೆ ಕೆಡೆದನವನಿಯಲಿ ೩

ಹದುಳಿಸೈ ರಾಜೇಂದ್ರ ನೀ ಬಿ
ತ್ತಿದ ವಿಷದ್ರುಮ ಫಲಿತವಾಯಿತು
ಬೆದರಲೇಕಿನ್ನನುಭವಿಸು ಸಾಕುಳಿದ ಮಾತೇನು
ಕದನದಲಿ ಸುತನಿಧಿಯ ಹೋಗಾ
ಡಿದೆ ನಿಜಾನ್ವಯ ಕಲ್ಪತರುವನು
ಮದಕರಿಗೆ ಮಾರಿದೆಯೆನುತ ನೆಗಹಿದನು ಭೂಪತಿಯ ೪

ಮಲಗಿಸಿದನೊರವೇಳ್ವ ನಯನ
ಸ್ಥಳವ ನೇವರಿಸಿದನು ಶೋಕಾ
ನಲನ ತಾಪಕೆ ತಂಪನೆರೆದನು ನೀತಿಮಯರಸದ
ಅಳಲಶ್ರವಮಾಡಿದೆ ನದೀಸುತ
ನಳಿವಿನಲಿ ಗುರು ಕರ್ಣ ಶಲ್ಯರ
ಕಳಿವಿನಲಿ ಕಟ್ಟಳಲ ಬಹಳಾಭ್ಯಾಸಿ ನೀನೆಂದ ೫

ಅಹುದು ಸಂಜಯ ಶೋಕಶಿಖಿ ನೆರೆ
ದಹಿಸಿತೆನ್ನನು ಬೆಂದ ವಸ್ತುಗೆ
ದಹನವುಂಟೇ ಎಂಬ ನಾಣ್ನುಡಿ ನಮ್ಮೊಳಾದುದಲಾ
ಮಿಹಿರಸುತ ಪರಿಯಂತ ಕಥೆ ನಿ
ರ್ವಹಿಸಿ ಬಂದುದು ಶಲ್ಯಕೌರವ
ರೆಹಗೆ ನೆಗಳಿದರದನು ವಿಸ್ತರವಾಗಿ ಹೇಳೆಂದ ೬

ತೆಗೆದುದಾಚೆಯಲವರ ಬಲ ಜಗ
ದಗಲದುಬ್ಬಿನ ಬೊಬ್ಬೆಯಲಿ ಮೊರೆ
ಮುಗಿಲಮುದದಂದದಲಿ ಮೊಳಗುವ ವಾದ್ಯರಭಸದಲಿ
ಬಿಗಿದ ಮೋನದ ಬೀತ ಹರುಷದ
ಹೊಗೆವ ಮೋರೆಯ ಹೊತ್ತುವೆದೆಗಳ
ದುಗುಡದೊಗ್ಗಿನ ನಮ್ಮ ಮೋಹರ ತೆಗೆದುದೀಚೆಯಲಿ ೭

ಸಿಡಿದು ಕರ್ಣನ ತಲೆ ಧರಿತ್ರಿಗೆ
ಕೆಡೆಯೆ ಧೊಪ್ಪನೆ ಮೂರ್ಛೆಯಲಿ ನೃಪ
ಕೆಡೆದು ಕಣ್ಮುಚ್ಚಿದನು ಶೋಕಜ್ವರದ ಢಗೆ ಜಡಿಯೆ
ಹಡಪಿಗರು ಚಾಮರದ ಚಾಹಿಯ
ರೊಡನೆ ನೆಲಕುರುಳಿದರು ಸಾರಥಿ
ಕಡಿಯಣದ ಕುಡಿನೇಣ ಕೊಂಡನು ತಿರುಹಿದನು ರಥವ ೮

ಬಂದು ಕರ್ಣನ ಹಾನಿ ಕೌರವ
ವೃಂದವನು ವೇಢೈಸಿತೇ ಹಾ
ಯೆಂದು ಕೃಪಗುರುಸುತರು ರಥವನು ಬಿಟ್ಟು ಸೂಠಿಯಲಿ
ತಂದು ಬಾಚಿಸಿದರಸನಿರವಂ
ತೆಂದುಸುರನಾರೈದು ವಿಧಿಯನು
ನಿಂದಿಸಿದರವಧಾನ ಜೀಯವಧಾನ ಜೀಯೆನುತ ೯

ತಳಿತಳಿದು ಪನ್ನೀರನಕ್ಷಿಗೆ
ಚಳೆಯವನು ಹಿಡಿದೆತ್ತಿ ಗುರುಸುತ
ಮಲಗಿಸಿದಡೇನಯ್ಯ ಕರ್ಣ ಎನುತ್ತ ಕಂದೆರೆದು
ಘಳಿಲನೆದ್ದನು ಕರ್ಣ ತೆಗೆಸೈ
ದಳವನಿರುಳಾಯ್ತೆಂದು ಶೋಕದ
ಕಳವಳದಲರೆಮುಚ್ಚುಗಣ್ಣಲಿ ಮತ್ತೆ ವೈಮರೆದ ೧೦

ರಾಯ ಹದುಳಿಸು ಹದುಳಿಸಕಟಾ
ದಾಯಿಗರಿಗೆಡೆಗೊಟ್ಟಿಲಾ ನಿ
ದಾರ್ಯದಲಿ ನೆಲ ಹೋಯ್ತು ಭೀಮನ ಭಾಷೆ ಸಂದುದಲಾ
ವಾಯುಜನ ಜಠರದಲಿ ತೆಗೆಯಾ
ಜೇಯ ನಿನ್ನನುಜರನು ಪಾರ್ಥನ
ಬಾಯಲುಗಿ ಸೂತಜನನೆಂದರು ಜರೆದು ಕುರುಪತಿಯ ೧೧

ಏನು ಗುರುಸುತ ಮಡಿದನೇ ತ
ನ್ನಾನೆ ಬವರದಲಕಟ ಕುಂತೀ
ಸೂನುವೇಕೈ ತಪ್ಪ ಮಾಡಿದನೇ ಮಹಾದೇವ
ಭಾನುಸನ್ನಿಭ ಸರಿದನೇ ತ
ಪ್ಪೇನು ಪಾರ್ಥನ ಬಸುರಲೆನ್ನ ನಿ
ಧಾನವಿದ್ದುದು ತೆಗೆವೆನೈಸಲೆಯೆಂದು ಕಂದೆರೆದ ೧೨

ತಾಪವಡಗಿತು ಮನದ ಕಡುಹಿನ
ಕೋಪ ತಳಿತುದು ಭೀಮ ಪಾರ್ಥರ
ರೂಪು ಮುಖದಲಿ ಕರ್ಣ ದುಶ್ಶಾಸನರ ಕಲ್ಪಿಸಿದ
ಭೂಪ ಕೇಳೈ ಪಾಳಯಕೆ ಕುರು
ಭೂಪ ಬಂದನು ನಾಳೆ ಕರ್ಣೋ
ತ್ಥಾಪನವಲಾ ಎನುತ ಹೊಕ್ಕನು ಭದ್ರಮಂಟಪವ ೧೩

ಶಕುನಿ ಕೃಪ ಗುರುಸೂನು ಕೃತವ
ರ್ಮಕ ಸುಕೇತು ಸುಶರ್ಮ ಸಮಸ
ಪ್ತಕರು ಮಾದ್ರೇಶ್ವರ ಸುಬಾಹು ಸುನಂದ ಚಿತ್ರರಥ
ಸಕಲ ಸುಭಟರು ಸಹಿತ ದಳನಾ
ಯಕರು ಬಂದರು ಕರ್ಣಹಾನಿ
ಪ್ರಕಟ ಕಳಿತ ಶಿರೋವಕುಂಠನ ವೈಮನಸ್ಯದಲಿ ೧೪

ಹಿಮದ ಹೊಯ್ಲಲಿ ಸೀದು ಸಿಕ್ಕಿದ
ಕಮಲವನದಂದದಲಿ ಹತವಿ
ಕ್ರಮದ ಕೀರ್ತಿಯ ಬಹಳಭಾರಕೆ ಬಳುಕಿದಾನನದ
ಸುಮುಖತಾವಿಚ್ಛೇದ ಕಲುಷ
ಸ್ತಿಮಿತರಿರವನು ಕಂಡು ನಾಳಿನ
ಸಮರಕೇನುದ್ಯೋಗವೆಂದನು ಕೃಪನ ಗುರುಸುತನ ೧೫

ಅರಸ ಕರ್ಣಚ್ಛೇದವೇ ಜಯ
ಸಿರಿಯ ನಾಸಾಚ್ಛೇದವಿನ್ನರ
ವರಿಸದಿರು ಹೊಯ್ದಾಡಿ ಹೊಗಳಿಸು ಬಾಹುವಿಕ್ರಮವ
ಗುರುನದೀಸುತರಳಿದ ಬಳಿಕೀ
ಧರೆಗೆ ನಿನಗಸ್ವಾಮ್ಯ ಕರ್ಣನ
ಮರಣದಲಿ ನೀನರ್ಧದೇಹನು ಭೂಪ ಕೇಳೆಂದ ೧೬

ಆ ವೃಕೋದರ ನರರೊಳಂತ
ರ್ಭಾವ ದುಶ್ಶಾಸನಗೆ ತನ್ನಯ
ಜೀವಸಖಗಾ ಭೀಮ ಪಾರ್ಥರ ಮರಣಸಿದ್ಧಿಯಲಿ
ಕೈವಿಡಿಯಲೇ ಕರ್ಣನಿಹನೆಂ
ದಾವು ನಿಶ್ಚಯಿಸಿದೆವು ಕರ್ಣನ
ಸಾವ ನಾಳಿನೊಳರಿವೆನೆಂದನು ನಿನ್ನ ಮಗ ನಗುತ ೧೭

ನಾವು ಹೊಯ್ದಾಡುವೆವು ಭುಜಸ
ತ್ತ್ವಾವಲಂಬವ ತೋರುವೆವು ಕ
ರ್ಣಾವಸಾನವ ಕಂಡು ಬಳಿಕುಗುಳುವೆವು ತಂಬುಲವ
ನೀವು ಸೇನಾಪತ್ಯವನು ಸಂ
ಭಾವಿಸಿರೆ ಸಾಕಿನ್ನು ಮಿಗಿಲಾ
ದೈವಕೃತ ಪೌರುಷವ ನಾಳಿನೊಳರಿಯಬಹುದೆಂದ ೧೮

ಧರಣಿಪತಿ ಚಿತ್ತೈಸು ಸೇನಾ
ಧುರವನೀವುದು ಮದ್ರಭೂಪತಿ
ಗೆರವಲಾ ಜಯಲಕ್ಷ್ಮಿ ಬಳಿಕಾ ಪಾಂಡುತನಯರಿಗೆ
ಸುರನದೀಜ ದ್ರೋಣ ರಾಧೇ
ಯರಿಗೆ ಸರಿಮಿಗಿಲೆಂದು ಮಾದ್ರೇ
ಶ್ವರನುಳಿಯೆ ದೊರೆಯಾರು ದಿಟ್ಟರು ನಮ್ಮ ಥಟ್ಟಿನಲಿ ೧೯

ನೀವು ಕಟಕಾಚಾರ್ಯಪುತ್ರರು
ನೀವಿರಲು ಕೃಪನಿರಲು ದಳವಾಯ್
ನಾವಹೆವೆ ನೀವಿಂದು ತೇಜೋದ್ಭಯದಲಧಿಕರಲೆ
ನಾವು ತರುವಾಯವರೆನಲು ಜಯ
ಜೀವಿಗಳು ನೀವನ್ಯಗುಣಸಂ
ಭಾವಕರಲಾ ಎಂದನಶ್ವತ್ಥಾಮ ಶಲ್ಯಂಗೆ ೨೦

ಉಚಿತವಿತರೇತರಗುಣಸ್ತುತಿ
ರಚನೆ ಗುಣಯುಕ್ತರಿಗೆ ವಿಜಯೋ
ಪಚಿತ ರಣನಾಟಕಕೆ ಜವನಿಕೆಯಾಯ್ತಲೇ ರಜನಿ
ಅಚಲ ಮೂರರ ಪೈಸರದ ಬಲ
ನಿಚಯ ನಮ್ಮದು ವೀರ ಸುಭಟ
ಪ್ರಚಯ ಮುಖ್ಯರ ಮಾಡಿಯೆಂದನು ಕೃಪನು ಕುರುಪತಿಗೆ ೨೧

ಸುರನದೀಜ ದ್ರೋಣ ಕೃಪರೀ
ಕುರುಬಲಕೆ ಕಟ್ಟೊಡೆಯರವರಿ
ಬ್ಬರ ಪರೋಕ್ಷದಲಾರವಿಲ್ಲಿಯ ಹಾನಿವೃದ್ಧಿಗಳು
ಗುರು ಸುತನೊ ಶಲ್ಯನೊ ಚಮೂಮು
ಖ್ಯರನು ನೀವೇ ಬೆಸಸಿಯೆಂದನು
ಧರಣಿಪತಿ ಕೇಳೈ ಕೃಪಾಚಾರ್ಯಂಗೆ ಕುರುರಾಯ ೨೨

ಆದಡಾ ಭೀಷ್ಮಾದಿ ಸುಭಟರು
ಕಾದಿ ನೆಗ್ಗಿದ ಕಳನ ಹೊಗುವಡೆ
ಕೈದುಕಾರರ ಕಾಣೆನೀ ಮಾದ್ರೇಶ ಹೊರಗಾಗಿ
ಈ ದುರಂತರ ಸಮರಜಯ ನಿನ
ಗಾದಡೊಳ್ಳಿತು ಶಲ್ಯನಲಿ ಸಂ
ಪಾದಿಸಿರೆ ಸೇನಾಧಿಪತ್ಯವನರಸ ಕೇಳೆಂದ ೨೩

ತರಿಸಿ ಮಂಗಳವಸ್ತುಗಳನಾ
ದರಿಸಿ ಭದ್ರಾಸನದಲೀತನ
ನಿರಿಸಿ ನೃಪ ವಿಸ್ತರಿಸಿದನು ಮೂರ್ಧಾಭಿಷೇಚನವ
ಮೊರೆವ ವಾದ್ಯದ ಸಿಡಿಲ ಧರಣೀ
ಸುರರ ಮಂತ್ರಾಕ್ಷತೆಯ ಮಳೆಗಳೊ
ಳಿರುಳನುಗಿದವು ಮುಕುಟಮಣಿರಾಜಿಗಳ ಮಿಂಚುಗಳು ೨೪

ಆದುದುತ್ಸವ ಕರ್ಣಮರಣದ
ಖೇದವುಕ್ಕಿತು ಹಗೆಗೆ ಕಾಲ್ದೊಳೆ
ಯಾದ ವೀರರಸಾಬ್ಧಿ ನೆಲೆದಪ್ಪಿತ್ತು ನಿಮಿಷದಲಿ
ಬೀದಿವರಿದುದು ಬಿಂಕ ನನೆಕೊನೆ
ವೋದುದಾಶಾಬೀಜ ಲಜ್ಜೆಯ
ಹೋದ ಮೂಗಿಗೆ ಕದಪ ಹೊಯ್ದನು ನಿನ್ನ ಮಗನೆಂದ ೨೫

ಕಾಣಿಕೆಯನಿತ್ತಖಿಳ ಸುಭಟ
ಶ್ರೇಣಿ ಕಂಡುದು ನುಡಿಯ ಹಾಣಾ
ಹಾಣಿಗಳ ಭಾಷೆಗಳ ಹಕ್ಕಲು ವೀರರುಕ್ಕುಗಳ
ಪ್ರಾಣಚುಳಕೋದಕದ ಚೇಷ್ಟೆಯ
ಹೂಣಿಗರು ವಿಜಯಾಂಗನೋಪ
ಕ್ಷೀಣಮಾನಸರೊಪ್ಪಿದರು ಕುರುಪತಿಯ ಪರಿವಾರ ೨೬

ಪತಿಕರಿಸಿದೈ ವೀರಸುಭಟ
ಪ್ರತಿತಮಧ್ಯದಲೆಮ್ಮನಹಿತ
ಚ್ಯುತಿಗೆ ಸಾಧನವೆಂದು ನಿಜಸೇನಾಧಿಪತ್ಯದಲಿ
ಕೃತಕವಿಲ್ಲದೆ ಕಾದುವೆನು ಯಮ
ಸುತರೊಡನೆ ಜಯಸಿರಿಗೆ ನೀನೇ
ಪತಿಯೆನಿಸಿ ತೋರಿಸುವೆನೆಂದನು ಶಲ್ಯ ಕುರುಪತಿಗೆ ೨೭

ಉಬ್ಬಿದನಲೈ ಮಧುರವಚನದ
ಹಬ್ಬದಲಿ ನಿನ್ನಾತನಿತ್ತಲು
ತುಂಬ್ಬಿನವದಿರು ತಂದು ಬಿಸುಟರು ನಿಮ್ಮ ಪಾಳೆಯದ
ಸರ್ಬ ವೃತ್ತಾಂತವನು ಗಾಢದ
ಗರ್ಭ ಮುರಿದುದು ಕೃಷ್ಣರಾಯನ
ನೆಬ್ಬಿಸಿದನಿರುಳವನಿಪತಿ ಬಿನ್ನೈಸಿದನು ಹದನ ೨೮

ದೇವ ಚಿತ್ತೈಸಿದರೆ ಬೊಪ್ಪನ
ಭಾವನನು ಸೇನಾಧಿಪತ್ಯದ
ಲೋವಿದರಲೇ ಶಲ್ಯ ಮಾಡಿದ ಭಾಷೆಯವರೊಡನೆ
ಆವನಂಘೈಸುವನೊ ಪಾರ್ಥನೊ
ಪಾವಮಾನಿಯೊ ನಕುಲನೋ ಸಹ
ದೇವನೋ ತಾನೋ ನಿದಾನಿಸಲರಿಯೆ ನಾನೆಂದ ೨೯

ಕಲಹವೆನ್ನದು ದಳಪತಿಗೆ ತಾ
ನಿಲುವೆನೆಂದನು ಭೀಮನೆನ್ನನು
ಕಳುಹಿ ನೋಡೆಂದನು ಧನಂಜಯನೆಮ್ಮ ಮಾವನಲಿ
ಸಲುಗೆಯೆನಗೆಂದನು ನಕುಲನೆ
ನ್ನೊಲವಿನರ್ತಿಯಿದೆನ್ನ ಕಳುಹಿದ
ಡುಳುಹಿದವರೆಂದೆರಗಿದನು ಸಹದೇವನಾ ಹರಿಗೆ ೩೦

ಹರಿಯದರ್ಜುನನಿಂದ ಭೀಮನ
ನೆರವಣಿಗೆ ನೋಯಿಸದು ನಕುಲನ
ಹೊರಿಗೆಯೊದಗದು ಸೈರಿಸದು ಸಹದೇವನಾಟೋಪ
ಇರಿವಡಾ ಮಾದ್ರೇಶನನು ನೆರೆ
ಮುರಿವಡೆಯು ನಿನಗಹುದು ನಿನ್ನನು
ತರುಬಿದವರೇ ಕಷ್ಟರೆಂದನು ನಗುತ ಮುರವೈರಿ ೩೧

ಲೇಸನಾಡಿದೆ ಕೃಷ್ಣ ಶಲ್ಯಂ
ಗೀಸು ಬಲುಹುಂಟಾದಡನುಜರು
ಘಾಸಿಯಾದರು ಹಿಂದೆ ಭೀಷ್ಮಾದಿಗಳ ಬವರದಲಿ
ಈ ಸಮರಜಯವೆನಗೆ ನಾಳಿನೊ
ಳೈಸಲೇ ನಳ ನಹುಷ ಭರತ ಮ
ಹೀಶ ವಂಶೋತ್ಪನ್ನ ತಾನೆಂದನು ಮಹೀಪಾಲ ೩೨

ತಾಯಿ ಹೆರಳೇ ಮಗನ ನಿನ್ನನು
ನಾಯಕನೆ ಲೋಕೈಕವೀರರ
ತಾಯಲಾ ನಿಮ್ಮವ್ವೆಯಾ ಮೊಲೆವಾಲ ಬಲುಹಿನಲಿ
ರಾಯ ನೀ ಕ್ಷತ್ರಿಯನು ಸೇಸೆಯ
ತಾಯೆನುತ ತೂಪಿರಿದು ಕಮಲದ
ಳಾಯತಾಂಬಕನಪ್ಪಿಕೊಂಡನು ಧರ್ಮನಂದನನ ೩೩

ಸಂದವೈ ಹದಿನೇಳು ರಾತ್ರಿಗ
ಳಿಂದಿನಿರುಳಾ ಸೇನೆ ನಿರ್ಭಯ
ದಿಂದ ನಿದ್ರಾವ್ಯಸನನಿರ್ಭರ ಪೂರ್ಣ ಹರುಷದಲಿ
ಸಂದುದೀ ನಿನ್ನವರು ರಾಧಾ
ನಂದನವ್ಯಪಗಮನನಷ್ಟಾ
ನಂದವಿಹ್ವಲಕರಣರಿದ್ದರು ಭೂಪ ಕೇಳೆಂದ ೩೪

ಆ ಶಿಖಂಡಿಯ ತೋರಿ ಸರಳಿನ
ಹಾಸಿಕೆಯಲೊಬ್ಬನನ ಮಾತಿನ
ವಾಸಿಯಿಂದೊಬ್ಬನನು ಮುನ್ನಿನ ಕುಲವನೆಚ್ಚರಿಸಿ
ಘಾಸಿ ಮಾಡಿದನೊಬ್ಬನನು ಧರ
ಣೀಶ ಚೇಷ್ಟೆಯಲೊಬ್ಬನನು ಕೃಪೆ
ಯೇಸು ಘನವೋ ವೀರನಾರಾಯಣಗೆ ಭಕ್ತರಲಿ ೩೫

## ಎರಡನೆಯ ಸಂಧಿ

ಸೂ. ಗಂಡುಗಲಿ ಕದನ ಪ್ರಚಂಡನ
ಖಂಡ ಭುಜಬಲ ಧರ್ಮಸುತ ಮುಂ
ಕೊಂಡು ರಣದಲಿ ಕಾದಿ ಗೆಲಿದನು ಮಾದ್ರ ಭೂಪತಿಯ

ಒಳಗೆ ಢಗೆ ನಗೆ ಹೊರಗೆ ಕಳವಳ
ವೊಳಗೆ ಹೊರಗೆ ನವಾಯಿ ಡಿಳ್ಳಸ
ವೊಳಗೆ ಹೊರಗೆ ಸಘಾಡಮದ ಬಲುಬೇಗೆಯೊಳಗೊಳಗೆ
ಬಲುಹು ಹೊರಗೆ ಪರಾಭವದ ಕಂ
ಧೊಳಗೆ ಕಡುಹಿನ ಕಲಿತನದ ಹಳ
ಹಳಿಕೆ ಹೊರಗೆ ಮಹೀಶ ಹದನಿದು ನಿನ್ನ ನಂದನನ ೧

ನೆಗ್ಗಿದನು ಗಾಂಗೇಯನಮರರೊ
ಳೊಗ್ಗಿದನು ಕಲಿದ್ರೋಣನೆನ್ನವ
ನಗ್ಗಳಿಕೆಗೂಣೆಯವ ಬೆರಸಿದನೆನ್ನ ಬಿಂಬದಲಿ
ಉಗ್ಗಡದ ರಣವಿದಕೆ ಶಲ್ಯನ
ನಗ್ಗಿಸುವನೀ ಕೌರವೇಶ್ವರ
ನೆಗ್ಗ ನೋಡುವೆನೆಂಬವೊಲು ರವಿಯಡರ್ದನಂಬರವ ೨

ಸೂಳವಿಸಿದುವು ಸನ್ನೆಯಲಿ ನಿ
ಸ್ಸಾಳ ದಳಪತಿ ಕುರುಬಲದೆ
ಖ್ಯಾಳವನು ನೋಡಿದನು ತೂಗಾಡಿದನು ಮಣಿಶಿರವ
ಆಳು ನೆರೆದಿರೆ ನಾಲ್ಕು ದಿಕ್ಕಿನ
ಮೂಲೆ ನೆರೆಯದು ಮುನ್ನವೀಗಳು
ಪಾಳೆಯದ ಕಡೆವೀಡಿಗೈದದು ಶಿವಶಿವಾಯೆಂದ ೩

ಗಜಕೆ ಗುಳವನು ಬೀಸಿ ವಾಜಿ
ವ್ರಜವ ಹಲ್ಲಣಿಸಿದರು ಗಾಲಿಯ
ಗಜರು ಘೀಳಿಡೆ ನೊಗನ ಹೆಗಲಲಿ ಕುಣಿದವಶ್ವಚಯ
ಭುಜದ ಹೊಯ್ಲಿನ ಹರಿಗೆಗಳ ಗಜ
ಬಜದ ಬಿಲುಜೇವಡೆಯ ರವದ
ಕ್ಕಜದ ಕಾಲಾಳೊದಗಿತವನೀಪತಿಯ ಸನ್ನೆಯಲಿ ೪

ಮೊರೆವ ಕಹಳಾರವದ ಡಿಂಡಿಮ
ಮುರಜ ಗೋಮುಖ ಪಟಹ ಜರ್ಝರ
ಕರಡೆ ಪಣವ ಮೃದಂಗ ಡಮರುಗ ಢಕ್ಕೆ ಡವುಡೆಗಳ
ಬಿರಿಯೆ ನೆಲನಳ್ಳಿರಿವ ವಾದ್ಯದ
ಹರುಷತರ ನಿರ್ಘೋಷದಬ್ಬರ
ಜರಿಹಿತಡಕಿಲು ಜಗದ ಜೋಡಿಯನರಸ ಕೇಳೆಂದ ೫

ಮುರಿದ ಬಲುಗುದುರೆಗಳ ಬಾದಣ
ಗೊರೆದ ಮಯ್ಯಾನೆಗಳ ಹತ್ತಿಗೆ
ಹರಿದ ಗಾಲಿಯ ರಥವ ಚಿನಕಡಿವಡೆದ ಕಾಲಾಳ
ಅರುಹಿದರು ಭೂಪತಿಗೆ ಸೇನೆಯ
ಲರಸಿ ತೆಗೆದಾಯತ ಚತುರ್ಬಲ
ಹೊರಗೆ ನಿಂದುದು ಥೊಗೆದೆಗೆದ ಕೇಸುರಿಯ ತಿರುಳಂತೆ ೬

ಹತ್ತು ಸಾವಿರದೇಳುನೂರರು
ವತ್ತು ಗಜ ಹನ್ನೊಂದು ಸಾವಿರ
ಹತ್ತಿದವು ರಥವೆರಡು ಲಕ್ಕವನೆಣಿಸಿದರು ಹಯವ
ಪತ್ತಿ ಮೂರೇ ಕೋಟಿಯದು ಕೈ
ವರ್ತಿಸಿತು ದಳಪತಿಗೆ ಸಾಗರ
ಬತ್ತಲೆಡೆಯಲಿ ನಿಂದ ನೀರವೊಲಾಯ್ತು ಕುರುಸೇನೆ ೭

ವೈರಿಬಲದೊಳಗಾರು ಸಾವಿರ
ತೇರು ಗಜಘಟೆ ಮೂರು ಸಾವಿರ
ವಾರುವಂಗಳನೆಣಿಸಿ ತೆಗೆದರು ಹತ್ತು ಸಾವಿರವ
ವೀರಭಟರಾಯ್ತೊಂದು ಕೋಟಿ ಮ
ಹೀರಮಣ ಕೇಳುಭಯಬಲ ವಿ
ಸ್ತಾರ ಹದಿನೆಂಟೆನಿಸಿದಕ್ಷೋಹಿಣಿಯ ಶೇಷವಿದು ೮

ಶಕುನಿ ಮೋಹರಿಸಿದನು ಸಮಸ
ಪ್ತಕರು ಬೇರೊಡ್ಡಿದರು ಕೃತವ
ರ್ಮಕ ಕೃಪಾಶ್ವತ್ಥಾಮರೊದಗಿದರೊಂದು ಬಾಹೆಯಲಿ
ಸಕಲ ಬಲ ಮಾದ್ರೇಶ್ವರನ ಹೇ
ಳಿಕೆಯಲೊಯ್ಯಾರಿಸಿತು ಕುರುಬಲ
ನಿಕರ ತಳಿತುದು ತರವಿಡಿದು ಕಳನೊಂದು ಮೂಲೆಯಲಿ ೯

ಇದಿರಲೌಕಿತು ಗಾಳಿ ಪಟ್ಟದ
ಮದಗಜಾವಳಿ ಮುಗ್ಗಿದುವು ಧ್ವಜ
ವದಿರಿದವು ಹೊಡೆಗೆಡೆದು ಹೊಳೆದುದು ತೇರು ದಳಪತಿಯ
ಬಿದಿರಿದವು ತಡಿಸಹಿತ ಥಟ್ಟಿನ
ಕುದುರೆ ಮೈಗಳಲಾಯುಧದ ಕಿಡಿ
ಯುದುರಿದವು ಕುರುಬಲದಲದ್ಭುತವಾಯ್ತು ನಿಮಿಷದಲಿ ೧೦

ಬಂದುದಾ ಮೋಹರ ಬಲೌಘದ
ಮುಂದೆ ಪಾಠಕರವರ ಕಾಹಿಗೆ
ಹಿಂದೆ ಬಿಲ್ಲಾಳವರ ಸುಯ್ಧಾನದಲಿ ಸಬಳಿಗರು
ಹಿಂದೆ ತುರಗ ಸಮೂಹವಲ್ಲಿಂ
ಹಿಂದೆ ಗಜಘಟೆ ಗಜದ ಬಳಿಯಲಿ
ಸಂದಣಿಸಿದುದು ರಾಯದಳ ಮಣಿರಥ ನಿಕಾಯದಲಿ ೧೧

ಅರಸನೆಡವಂಕದಲಿ ಸಾತ್ಯಕಿ
ನರ ನಕುಲ ಸಹದೇವ ಸೋಮಕ
ವರ ಯುಧಾಮನ್ಯೂತ್ತಮೌಜಸ ಸೃಂಜಯಾದಿಗಳು
ನೆರೆದುದಾ ಬಲವಂಕದಲಿ ತನು
ಜರು ವೃಕೋದರ ದ್ರುಪದಸುತ ದು
ರ್ಧರ ಶಿಖಂಡಿ ಪ್ರಮುಖ ಘನಪಾಂಚಾಲ ಪರಿವಾರ ೧೨

ಆಯಂತಿಕೆಯಲಿ ಬಂದು ಪಾಂಡವ
ರಾಯದಳ ಮೋಹರಿಸಿ ನಿಂದುದು
ರಾಯರಿಬ್ಬರ ಬೀಸುಗೈಗಳ ಸನ್ನೆ ಸಮವಾಗೆ
ತಾಯಿಮಳಲನು ತರುಬಿದಬುಧಿಯ
ದಾಯಿಗರು ತಾವಿವರೆನಲು ಬಿಡೆ
ನೋಯಬೆರಸಿದುದುಭಯಬಲ ಬಲುಖತಿಯ ಬಿಂಕದಲಿ ೧೩

ಕೇಣವಿಲ್ಲದೆ ಭಟರ ಹಾಣಾ
ಹಾಣಿ ಮಸಗಿತು ಖಣಿಖಟಿಲ ಹೊ
ಯ್ದಾಣೆಗಳ ಬಿರುಗಿಡಿಯ ಹಿರಿಯಬ್ಬಣದ ಹೊಯ್ಲುಗಳ
ಹೂಣಿಕೆಯ ಸಬಳಿಗರೊಳಿಮ್ಮೆ
ಗಾಣಿಕೆಯ ಬಲುಸೂತರಥಿಕರ
ಜಾಣತಿಯ ಬಿಲ್ಲವರ ಧಾಳಾಧೂಳಿ ಬಲುಹಾಯ್ತು ೧೪

ರಾವುತರು ಸೆಲ್ಲಿಸಿದರಗ್ಗದ
ಮಾವುತರನಾನೆಗಳ ತುಡುಕಿ ಹ
ಯಾವಳಿಯ ಬೀಸಿದರು ರಥಿಕರು ಹಾಯ್ಸಿದರು ರಥವ
ಆ ವರೂಥವನೇಳನೆಂಟ ಗ
ಜಾವಳಿಗಳಿಟ್ಟವು ಗಜಸ್ಕಂ
ಧಾವಲಂಬವ ಸೆಕ್ಕಿದರು ಸುರಗಿಯಲಿ ಸಮರಥರು ೧೫

ಒರಲೆ ಗಜ ದಾಡೆಗಳ ಕೈಗಳ
ಹರಿಯಹೊಯ್ದರು ಪಾರಕರು ಮು
ಕ್ಕುರಿಕಿದರೆ ಸಬಳಿಗರು ಕೋದೆತ್ತಿದರು ಕರಿಘಟೆಯ
ತರುಬಿದರೆ ಕಡಿನಾಲ್ಕ ತೋರಿಸಿ
ಮೆರೆದರುರೆ ರಾವುತರು ರಾವ್ತರ
ತರುಬಿದರು ತನಿಜೂಣಿ ಮಸಗಿತು ತಾರುಥಟ್ಟಿನಲಿ ೧೬

ಅರಸ ಕೇಳ್ಳೈ ಹೊಕ್ಕ ಜೂಣಿಯ
ನೆರಡು ಬಲದಲಿ ಕಾಣೆನಗ್ಗದ
ದೊರೆಗಳನುವಾಯ್ತಾಚೆಯಲಿ ಧರ್ಮಜನ ನೇಮದಲಿ
ಗುರುಜ ಕೃಪ ಕೃತವರ್ಮ ಯವನೇ
ಶ್ವರ ಸುಶರ್ಮ ಸುಬಾಹು ಶಕುನಿಗ
ಳುರವಣಿಸಿತೀಚೆಯಲಿ ಶಲ್ಯನ ಬೆರಳ ಸನ್ನೆಯಲಿ ೧೭

ನಿಲಿಸಿದರು ನಿನ್ನವರು ಬಲದ
ಗ್ಗಳೆಯರನು ಬಿರುದಾವಳಿಯ ಮೂ
ದಲಿಸಿದರು ವಿಮಲಾನ್ವಯಾಗತ ವಿಕ್ರಮೋನ್ನತರ
ಬಲನೆಡನ ಮಡಿವೆರಳ ಮುಂಡಿಮುಂ
ದಲೆಯ ಲಘುವಾಗದಿರಿ ಶಸ್ತ್ರಾ
ವಳಿಯ ಬಾಯ್ದುತ್ತುಗಳ ಸೆಳೆಯದಿರೆಂದರುಬ್ಬಿನಲಿ ೧೮

ದೊರೆಯೊಳೊಬ್ಬನ ಹಾನಿ ಭಟರೆ
ಲ್ಲರಿಗೆ ದೊರೆ ದೊರೆ ತತ್ತರುಳಿದರು
ನೆರವು ಬಹುದೋರಂದವೊಮ್ಮುಖವೊಂದು ಸಂಕೇತ
ಉರವಣಿಸದಿರಿ ಕಂಡ ಮುಖದಲಿ
ಕರಿ ತುರಗ ರಥ ಪತ್ತಿ ರಣಕು
ಬ್ಬರಿಸದಿರಿ ಕೃತಸಮಯವೆಂದರು ಸಾರಿ ಸುಭಟರಿಗೆ ೧೯

ನೂಕಿದರು ನಿನ್ನವರು ಹಿನ್ನೆಲೆ
ಯಾಕೆವಾಳರ ಜೋಕೆಯಲಿ ರಣ
ವ್ಯೋಕರಿಸಿತರುಣಾಂಬುವನು ಗಜಹಯದ ಮೈಗಳಲಿ
ವ್ಯಾಕುಲರ ಬಯ್‌ಬಯ್ದು ಚಪಲಾ
ನೀಕ ಬಂಡಿಸಿ ಚಂಡಪಾತ ನಿ
ರಾಕರಿಷ್ಣುಗಳೊಕ್ಕಲಿಕ್ಕಿತು ದಳದ ಮಧ್ಯದಲಿ ೨೦

ಕವಿದುದೊಂದೇ ಸೂಠಿಯಲಿ ರಿಪು
ನಿವಹ ನಿಬ್ಬರದಬ್ಬರದ ಶರ
ಲವಣಿಗಳ ಲಾವಣಿಗೆಗಳ ಲಂಬನದ ಲಂಘನದ
ಪವನಜನ ಪಡಿಬಲದಲೌಕಿದ
ನವನಿಪತಿ ಸಹದೇವ ನಕುಲರ
ಸವಡಿರಥ ಸಮ್ಮುಖಕೆ ಬಿಟ್ಟವು ಮಾದ್ರಭೂಪತಿಯ ೨೧

ಆರಿವರು ಸಹದೇವ ನಕುಲರೆ
ಭಾರಿಯಾಳುಗಳಹಿರಲೇ ಬಿಲು
ಗಾರರಲ್ಲಾ ಕಳಶಸಿಂಧನ ಕೋಲ ಮಕ್ಕಳಲೇ
ಸೈರಿಸಿದರೊಪ್ಪುವುದಲೇ ಜು
ಜ್ಝಾರತನಕಾಭರಣವಹುದೆನು
ತಾರುಭಟೆಯಲಿ ಶಲ್ಯ ಹಳಚಿದನರ್ಜುನಾನುಜರ ೨೨

ಪಡಿತಳಿಸಿ ಸಹದೇವ ನಕುಲರ
ನಡೆಗಲಸಿತರ್ಜುನನ ರಥ ನರ
ನೊಡನೆ ಹೊಕ್ಕನು ಭೀಮನುರು ಪಾಂಚಾಲಬಲ ಸಹಿತ
ಜಡಿವ ನಿಸ್ಸಾಳದಲಿ ಜಗ ಕಿವಿ
ಗೆಡೆ ಯುಧಿಷ್ಠಿರರಾಯನೌಕಿದ
ನೆಡಬಲನ ಕೊಂಡರು ಯುಯುತ್ಸು ಶಿಖಂಡಿ ಸೃಂಜಯರು ೨೩

ಏರಿತೊಬ್ಬನ ಮೇಲೆ ರಿಪುರಥ
ವಾರು ಸಾವಿರ ಮತ್ತಗಜಘಟೆ
ಮೂರು ಸಾವಿರ ಹತ್ತು ಸಾವಿರ ತುರಗದಳ ಸಹಿತ
ತೂರುವಂಬಿನ ತುಂಡಿಸುವ ಬಿ
ಟ್ಟೇರುಗಳ ಚೂರಿಸುವ ಸಬಳದ
ಗೀರುಗಳ ಕಾಲಾಳು ಕವಿದುದು ಶಲ್ಯನಳವಿಯಲಿ ೨೪

ದಳಪತಿಯ ಮುಂಕ್ಕುರುಕಿದರು ಪಡಿ
ಬಲವ ಬರಹೇಳೆನುತ ಚಾಚಿದ
ಹಿಳುಕುಗೆನ್ನೆಯ ಹೊಗರುಮೋರೆಯ ಬಿಗಿದ ಹುಬ್ಬುಗಳ
ಕಳಶಜನ ಸುತನೌಕಿದನು ಕೃಪ
ನಳವಿಗೊಟ್ಟನು ಸುಬಲಸುತನಿ
ಟ್ಟಳಿಸಿದನು ಕರ್ಣಾತ್ಮಜರು ಕೈಕೊಂಡರೊಗ್ಗಿನಲಿ ೨೫

ನೆತ್ತಿಯಂಗತೆಗಳಂಕುಶದ ಬೆರ
ಳೊತ್ತುಗಿವಿಗಳ ಕರದ ಪರಿಘದ
ಮತ್ತಗಜಘಟೆಗಳನು ನೂಕಿದರೆಂಟು ಸಾವಿರವ
ಸುತ್ತು ಝಲ್ಲಿಯ ಝಲ್ಲರಿಯ ಬಲು
ಹತ್ತುಗೆಯ ಬಿರುಬುಗಳ ತೇರಿನ
ಹತ್ತು ಸಾವಿರ ಹೊದರುದೆಗೆದವು ಶಲ್ಯನೆಡಬಲಕೆ ೨೬

ಮೂರು ಕೋಟಿ ಪದಾತಿಯಲಿ ದೊರೆ
ಯೇರಿದನಲ್ಲೈ ನಿನ್ನ ಮಗನು
ಬ್ಬೇರಿರಾವ್ತರು ಹೊಕ್ಕರೆರಡೇ ಲಕ್ಕ ತೇಜಿಯಲಿ
ಕೇರಿದರು ಮಾರೊಡ್ಡ ನಿವರವ
ರೇರಿ ಹೊಯ್ದರು ನಿನ್ನವರನೊಗು
ವೇರ ಬಾಯ್ಗಳ ರುಧಿರಜಲವದ್ದುದು ಚತುರ್ಬಲವ ೨೭

ತಪ್ಪಿಸಿದ ಮೈಮೈಗಳಲಿ ಹರಿ
ತಪ್ಪ ರಕ್ತವ ಸುರಿದು ಕೆಂಧೂ
ಳುಪ್ಪರಿಸಿದುದು ಚಟುಳ ಚಾತುರ್ಬಲದ ಪದಹತಿಗೆ
ಅಪ್ಪಿದುದು ಕೆಂಧೂಳಿನೊಡ್ಡಿನ
ದರ್ಪಣದ ತನಿರಕ್ತವೆರಡರ
ದರ್ಪವಡಗದು ನಿಮಿಷದಲಿ ನರನಾಥ ಕೇಳೆಂದ ೨೮

ತೆಗೆದರರ್ಜುನನನು ಸುಶರ್ಮನ
ವಿಗಡ ರಥಿಕರು ಭೀಮಸೇನನ
ನುಗಿದನಿತ್ತಲು ನಿನ್ನ ಮಗನಾ ಸಾತ್ಯಕಿಯ ರಥವ
ಹೊಗರುಗಣೆಯಲಿ ಮುಸುಕಿದನು ಹೂ
ಣೆಗನಲೇ ಗುರುಸೂನು ನಕುಲನ
ತೆಗೆಸಿದನು ತೂರಂಬಿನಲಿ ತೆರಳದೆ ಕೃಪಾಚಾರ್ಯ ೨೯

ಹಳಚಿದನು ದಳಪತಿಯನವನಿಪ
ತಿಲಕನೆಚ್ಚನು ನೂರು ಶರದಲಿ
ಕಳಚಿ ಕಯ್ಯೊಡನೆಚ್ಚು ಬೇಗಡೆಗಳೆದನವನಿಪನ
ಅಳುಕಲರಿವುದೆ ಸಿಡಿಲ ಹೊಯ್ಲಲಿ
ಕುಲಕುಧರವೀ ಧರ್ಮಸುತನ
ಗ್ಗಳಿಕೆಗುಪ್ಪಾರತಿಗಳಾದುವು ಶಲ್ಯನಂಬುಗಳು ೩೦

ಅರಸ ಕೇಳೈ ಮುಳಿದ ಮಾದ್ರೇ
ಶ್ವರನ ಖತಿಯೋ ಕುಪಿತ ಯಮನು
ಬ್ಬರದ ಕೋಪವೊ ಕಾಲರುದ್ರನ ಹಣೆಯ ಹೆಗ್ಗಿಡಿಯೊ
ಉರಿದನಗ್ಗದ ರೋಷದಲಿ ಹೊಗೆ
ಹೊರಳಿಗಟ್ಟಿತು ಸುಯ್ಲಿನಲಿ ಸಂ
ವರಿಸಿಕೊಳು ಕೌಂತೇಯ ಎನುತೆಚ್ಚನು ಮಹೀಪತಿಯ ೩೧

ಮುಂದಣಂಬಿನ ಮೊನೆಯನೊದೆದವು
ಹಿಂದಣಂಬುಗಳವರ ಮೊನೆಗಳ
ಹಿಂದಣಂಬಿನ ಹಿಳುಕು ಹೊಕ್ಕವು ಮುಂಚಿದಂಬುಗಳ
ಹಿಂದಣವು ಹಿಂದಿಕ್ಕಿದವು ಮಿಗೆ
ಹಿಂದಣಂಬುಗಳೆಂಜಲಿಸಿ ಬಳಿ
ಸಂದವುಳಿದಂಬುಗಳೆನಲು ಕವಿದೆಚ್ಚನವನಿಪನ ೩೨

ತೋಡಿ ನೆಟ್ಟವು ಸೀಸಕವನೊಡೆ
ದೋಡಿದವು ಕವಚದಲಿ ಕುದುರೆಯ
ಜೋಡು ಹಕ್ಕರಿಕೆಯಲಿ ತಳಿತವು ಹಿಳುಕು ಹರಹಿನಲಿ
ಕೂಡೆ ರಥದಲಿ ಸಿಂಧದಲಿ ಮೈ
ಗೂಡಿ ಗಾಲಿಗಳಲಿ ವರೂಥದ
ಲೀಡಿರಿದವಂಬುಗಳು ಕಲಿಮಾದ್ರೇಶನೆಸುಗೆಯಲಿ ೩೩

ದೊರೆಗೆ ಬಲುಹೋ ಸಮರ ಶಲ್ಯನ
ಶರವಳೆಗೆ ಹಿಡಿ ಕೊಡೆಯನೆನಲ
ಬ್ಬರದೊಳಗೆ ಗಬ್ಬರಿಸೆ ನೆಲ ಗಾಲಿಗಳ ಘಲ್ಲಣೆಗೆ
ಸರಳ ಹೊದೆಗಳ ತುಂಬಿ ರಥ ಸಾ
ವಿರದಲಾ ಪಾಂಚಾಲಬಲವು
ಪ್ಪರಗುಡಿಯ ಸಿಂಧದ ಸಘಾಡದವಲೈದಿತರಿಭಟನ ೩೪

ಪೂತುರೇ ಪಾಂಚಾಲ ಬಲ ಬಂ
ದಾತುಕೊಂಡುದೆ ಧರ್ಮಪುತ್ರನ
ಘಾತಿಯನು ಘಟ್ಟಿಸಿದರೇ ತಪ್ಪಿಸಿದನೇ ನೃಪತಿ
ಈತಗಳ ಕೊಳ್ಳೆನುತ ಶರಸಂ
ಘಾತವನು ಕವಿಸಿದನು ಮಾದ್ರೀ
ಜಾತರಡಹಾಯಿದರು ಶಲ್ಯನ ರಥದ ಸಮ್ಮುಖಕೆ ೩೫

ಮಕ್ಕಳಿರ ನಿಮಗೇಕೆ ರಣವಿದು
ಮಕ್ಕಳಾಟಿಕೆಯಾಯ್ತಲಾ ಹಿಂ
ದಿಕ್ಕಿದಿರಲಾ ದೊರೆಯ ಧೂಳಿಯ ಬೆನ್ನ ತಡೆದಿರಲಾ
ಎಕ್ಕಸರವಲಿ ನಿಮ್ಮ ರಾಯನ
ನಿಕ್ಕಿ ಭೀಮಾರ್ಜುನರಿಗೌತಣ
ವಿಕ್ಕುವೆನು ಬರಹೇಳೆನುತ ತೂಳಿದನು ಮಾದ್ರೇಶ ೩೬

ದಳಪತಿಯ ದುವ್ವಾಳಿ ಪಾಂಡವ
ಬಲವ ಕೆದರಿತು ಕಲ್ಪಮೇಘದ
ಹೊಲಿಗೆ ಹರಿದವೊಲಾಯ್ತು ಮಾದ್ರೇಶ್ವರನ ಶರಜಾಲ
ಅಳುಕದಿರಿ ಬದ್ದರದ ಬಂಡಿಯ
ನಿಲಿಸಿ ಹರಿಗೆಯ ಪಾತಕರು ಕೈ
ಕೊಳಲಿ ಮುಂದಣ ನೆಲನನೆನುತುಬ್ಬರಿಸಿತರಿಸೇನೆ ೩೭

ಅರಸ ಕೇಳೈ ಬಳಿಕ ಶಲ್ಯನ
ಶರಹತಿಗೆ ಬಿಚ್ಚಿದವು ಹೂಡಿದ
ಹರಿಗೆಯಿಬ್ಬಗಿಯಾದವಾ ಬದ್ಧರದ ಬಂಡಿಗಳು
ಸರಳುಗಳ ಬಳಿಸರಳು ಬೆಂಬಳಿ
ಸರಳ ಹಿಂದಣ ಸರಳುಗಳ ಪಡಿ
ಸರಳ ಸಾರದ ಸೋನೆ ಸದೆದುದು ವೈರಿವಾಹಿನಿಯ ೩೮

ಘಾಯವಡೆದನು ದ್ರುಪದಸುತ ಪೂ
ರಾಯದೇರಿನಲೋಡಿದರು ಮಾ
ದ್ರೇಯರುಬ್ಬಟೆ ಮುರಿದು ಬೆಬ್ಬಳೆವೋದನವನೀಶ
ರಾಯದಳ ದೆಸೆಗೆಟ್ಟುದೊಗ್ಗಿನ
ನಾಯಕರು ಸುಗ್ಗಾಯ್ತು ಯಾದವ
ರಾಯ ಕಂಡನು ರಥವನಡಹಾಯ್ಸಿದನು ಫಲುಗುಣನ ೩೯

ಎಲೆಲೆ ಹನುಮನ ಹಳವಿಗೆಯ ರಥ
ಹೊಳೆಯುತದೆ ದಳಪತಿಗೆ ಕಾಳೆಗ
ಬಲುಹು ಬರ ಹೇಳುವುದು ಗೌತಮ ಗುರುಸುತಾದಿಗಳ
ಬಲವ ಕರೆ ಸಮಸಪ್ತಕರನಿ
ಟ್ಟಳಿಸಿ ನೂಕಲಿ ಕರ್ಣಸುತನೆಂ
ದುಲಿದು ಹೊಕ್ಕನು ನಿನ್ನ ಮಗನೈನೂರು ರಥಸಹಿತ ೪೦

ಉಳಿದು ಕೌರವ ಸರ್ವದಳ ಮುಂ
ಕೊಳಿಸಿ ನೂಕಿತು ಶಲ್ಯನನು ಪಡಿ
ತಳಿಸಿ ಹೊಕ್ಕುದು ಕರ್ಣಸುತ ಕೃಪ ಗುರುಸುತಾದಿಗಳು
ಪ್ರಳಯದಿನದಲಿ ಪಂಟಿಸುವ ಸಿಡಿ
ಲಳಿದುದೆನೆ ಬಹುವಿಧದ ವಾದ್ಯದ
ಮೊಳಗುಗಳ ತುದಿ ತುಡುಕಿತಾ ಬ್ರಹ್ಮಾಂಡಮಂಡಲವ ೪೧

ಧರಣಿಪತಿ ಕೇಳ್ ಭೀಮಸೇನನ
ಕರಿಘಟೆಗಳಿಟ್ಟಣಿಸಿದವು ಮೋ
ಹರಿಸಿದವು ಸಾತ್ಯಕಿಯ ರಥವಾ ದ್ರೌಪದೀಸುತರ
ಬಿರುದ ಭಟರೌಕಿದರು ರಾಯನ
ಧರರ ಧೀವಸಿಗಳು ನಿಹಾರದ
ಉರವಣಿಸಿದರು ಶಲ್ಯನಂಬಿನ ಮಳೆಯ ಮನ್ನಿಸದೆ ೪೨

ತರಹರಿಸಿದುದು ಪಾರುದಳ ತಲೆ
ವರಿಗೆಯಲಿ ಮೊಗದಡ್ಡವರಿಗೆಯು
ಲರರೆ ರಾವುತೆನುತ್ತ ನೂಕಿತು ಬಿಟ್ಟ ಸೂಠಿಯಲಿ
ತುರಗದಳ ಮೊಗರಂಬದಲಿ ಮೊಗ
ವರಿಗೆಗಳಲಾರೋಹಕರು ಚ
ಪ್ಪರಿಸಿ ಚಾಚಿದರಾನೆಗಳನಾ ಶಲ್ಯನಿದಿರಿನಲಿ ೪೩

ಚೂರಿಸುವ ಮೊಗಸೂನಿಗೆಯ ಕೊ
ಲ್ಲಾರಿಗಳ ಶರಬಂಡಿಗಳ ಹೊಂ
ದೇರು ಕವಿದುವು ಕೋಲಕೋಲಾಹಲದ ತೋಹಿನಲಿ
ವೀರರುಬ್ಬಿನ ಬೊಬ್ಬೆಗಳ ಜು
ಜ್ಝಾರರೇರಿತು ಸರಳ ಧಾರಾ
ಸಾರದಲಿ ದಕ್ಕಡರು ಬಿಲ್ಲವರಾಂತರರಿಭಟನ ೪೪

ಕಡಿದು ಬಿಸುಟನು ತಲೆವರಿಗೆಗಳ
ಉಡಿಸಿದಾ ಪಯದಳವನೊಗ್ಗಿನ
ತುಡುಕುಂಗುದುರೆಯ ಖುರವ ತರಿದನು ನಗದ ನಾಟಕದ
ಗಡಣದಾನೆಯ ಘಟ್ಟನುಪ್ಪರ
ಗುಡಿಯ ರಥವಾಜಿಗಳ ರುಧಿರದ
ಕಡಲೊಳದ್ದಿದನುದ್ದಿದನು ಮಾರ್ಬಲದ ಗರ್ವಿತರ ೪೫

ಮುರಿದುದೈ ಚತುರಂಗಬಲ ನಿ
ಷ್ಠುರಿತವಾವೆಡೆ ಧರ್ಮಸುತ ಕೈ
ಮರೆದಲಾ ಕಲಿಭೀಮಪಾರ್ಥರ ಬಿಂಕ ಬೀತುದಲಾ
ಮೆರೆಯಿ ಮದವನು ಮಾವತನವದು
ಹೊರಗಿರಲಿ ಸಹದೇವ ನಕುಲರ
ನರಿಯಬಹುದಿನ್ನೆನುತ ಹೊಕ್ಕನು ಶಲ್ಯ ಪರಬಲವ ೪೬

ಸುರನದೀಸುತನೆಸುಗೆ ದ್ರೋಣನ
ಶರಚಮತ್ಕೃತಿ ಕರ್ಣನಂಬಿನ
ಹರಹು ಹೇರಿತು ದಳಪತಿಯ ಶರಸೋನೆ ಸಾರವಲಾ
ದೊರೆಯ ಸುಯ್ದಾನದಲಿ ಸಾತ್ಯಕಿ
ಯಿರಲಿ ಧೃಷ್ಟದ್ಯುಮ್ನ ಭೀಮಾ
ದ್ಯರ ನಿರೀಕ್ಷಿಸ ಹೇಳೆನುತ ತಾಗಿದನು ಕಲಿಪಾರ್ಥ ೪೭

ಅರಸ ಕೇಳೈ ಶಲ್ಯ ಪಾರ್ಥರ
ಶರ ವಿಧಾನವನವರ ಬಾಣೋ
ತ್ಕರವನವರಂಬುಗಳ ಬಹಳಾಡಂಬರಧ್ವನಿಯ
ನಿರುಪಮಾಸ್ತ್ರಪ್ರೌಢಿಯನು ದು
ರ್ಧರ ಶಿಲೀಮುಖ ಸರ್ಗಬಂಧ
ಸ್ಫುರಣವನು ಹಿಂದೀಸು ದಿನ ಕಾಣೆನು ರಣಾಗ್ರದಲಿ ೪೮

ಎಸುವನರ್ಜುನನರ್ಜುನಾಸ್ತ್ರವ
ಕುಸುರಿದರಿವನು ಶಲ್ಯ ಶಲ್ಯನ
ವಿಶಿಖವನು ಮುರಿವನು ಧನಂಜಯನಾ ಧನಂಜಯನ
ಮುಸಕವನು ಮಾದ್ರೇಶನುರೆ ರೋಷಿಂ
ಪಿಸುವನಾ ಮಾದ್ರೇಶನಂಬಿನ
ಹಸರವನು ಹರೆಗಡಿವನರ್ಜುನನಗಣಿತಾಸ್ತ್ರದಲಿ ೪೯

ಕಂಡನೀ ಶಲ್ಯಾರ್ಜುನರ ಕೋ
ದಂಡಸಾರಶ್ರುತಿರಹಸ್ಯದ
ದಂಡಿಯನು ಕುರುರಾಯ ಕೈವೀಸಿದನು ತನ್ನವರ
ಗಂಡುಗಲಿಗಳೊ ವೀರಸಿರಿಯುಳಿ
ಮಿಂಡರೊ ತನಿನಗೆಯ ಬಿರುದಿನ
ಭಂಡರೋ ನೀವಾರೆನುತ ಮೂದಲಿಸಿದನು ಭಟರ ೫೦

ದಳವ ಕರೆ ದಳಪತಿಗೆ ಕಾಳೆಗ
ಬಲುಹು ಪಾರ್ಥನ ಕೂಡೆ ಗುರುಸುತ
ನಳವಿಗೊಡಲಿ ಸುಶರ್ಮ ತಾಗಲಿ ಭೋಜ ಗೌತಮರು
ನಿಲಲಿ ಸುಭಟರು ಜೋಡಿಯಲಿ ಪರ
ಬಲಕೆ ಜಾರುವ ಜಯಸಿರಿಯ ಮುಂ
ದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ ೫೧

ನೂಕಿದರು ಶಲ್ಯಂಗೆ ಪಡಿಬಲ
ದಾಕೆವಾಳರು ಗುರುಸುತಾದ್ಯರು
ತೋಕಿದರು ಶರಜಾಳವರ್ಜುನನಂಬಿನಂಬುಧಿಯ
ಬೀಕಲಿನ ಭಟರುಬ್ಬಿದರೆ ಸು
ವ್ಯಾಕುಲರು ತುಂಬಿದರೆ ತಪ್ಪೇ
ನೀ ಕಳಂಬವ ಕಾಯ್ದುಕೊಳ್ಳೆನುತೆಚ್ಚನಾ ಪಾರ್ಥ ೫೨

ಮುರಿಯೆನುತ ಮಾದ್ರೇಶ್ವರನ ಹೊ
ಕ್ಕುರುಬಿದನು ಗುರುಸುತನ ಸೂತನ
ನಿರಿದು ಸಮಸಪ್ತಕರ ಸೋಲಿಸಿ ಕೃಪನನಡಹಾಯ್ಸಿ
ತರುಬಿದನು ಕುರುಪತಿಯನರ್ಜುನ
ನೊರಲಿಸಿದನೀ ಸೈನ್ಯ ಸುಭಟರ
ನೆರವಣಿಗೆ ನಿಪ್ಪಸರದಲಿ ಮುಸುಕಿತು ಧನಂಜಯನ ೫೩

ಅರಸ ಕೇಳಿತ್ತಲು ಯುಧಿಷ್ಠಿರ
ನರಪತಿಯನರಸಿದನು ಮಾದ್ರೇ
ಶ್ವರನು ರಾವುತಿಯೆಸುಗೆಯಲಿ ಮುಸುಕಿದನು ಧರ್ಮಜನ
ಧರೆಗೆ ಕಾಮಿಸಿದೈ ಸುಯೋಧನ
ನರಸಿಯಲ್ಲಾ ಧಾತ್ರಿ ನಿಮ್ಮೆ
ಲ್ಲರಿಗೆ ಹದುನೆಲನಲ್ಲವೆಂದೆನುತೆಚ್ಚನಾ ಶಲ್ಯ ೫೪

ಮಾವ ಮಾಯಾಡಂಬರದ ದು
ರ್ಭಾವವೇತಕೆ ಕೌರವನೊಳೆಮ
ಗೀ ವಸುಂಧೆ ಹುದುವಲ್ಲ ನೆಲನೇಕಾಧಿಪತ್ಯವಲೆ
ನೀವು ಕೌರವ ಸರ್ವದಳದ ದು
ರಾವಹರಲೇ ಬಾಣಸೃಷ್ಟಿ ಕೃ
ತಾವಧಾನವ ತೋರೆನುತ ನೃಪನೆಚ್ಚು ಬೊಬ್ಬಿರಿದ ೫೫

ಬರಿಯ ಬೊಬ್ಬಾಟವೊ ಶರಾವಳಿ
ಯಿರಿಗೆಲಸವೇನುಂಟೊ ಧರಣಿಯ
ಲೆರಕ ನಿಮ್ಮೈವರಿಗೆ ಗಡ ದ್ರೌಪದಿಗೆ ಸಮವಾಗಿ
ಹೊರಗು ಗಡ ಕುರುರಾಯನೀಗಳೊ
ಮರುದಿವಸವೋ ಸಿರಿಮುಡಿಗೆ ನೀ
ರೆರೆವ ಪಟ್ಟವದೆಂದು ನಿಮಗೆನುತೆಚ್ಚನಾ ಶಲ್ಯ ೫೬

ಕಡಿದು ಬಿಸುಟನು ಶಲ್ಯನಸ್ತ್ರವ
ನೆಡೆಗೊಡದೆ ಕೂರಂಬುಗಳನಳ
ವಡಿಸಿದನು ನೃಪವರನ ಶರಸಂತತಿಯ ಸಂತೈಸಿ
ಒಡನೊಡನೆ ಕೈಮಾಡಿದನು ಕೈ
ಗಡಿಯನಂಬಿನ ಧಾರೆ ದಳ್ಳಿಸಿ
ಕಿಡಿಗೆದರಿದವು ನೃಪನ ರಥ ಸಾರಥಿ ಹಯಾಳಿಯಲಿ ೫೭

ಗೆಲಿದನೋ ಮಾದ್ರೇಶನವನಿಪ
ತಿಲಕನನು ಘಡ ಧರ್ಮಸುತನೀ
ದಳಪತಿಯನದ್ದಿದನು ಪರಿಭವಮಯ ಸಮುದ್ರದಲಿ
ಅಳುಕಿದನು ನೃಪನೀ ಬಲಾಧಿಪ
ನುಲುಕನಂಜಿದನೆಂಬ ಲಗ್ಗೆಯ
ಲಳಿ ಮಸಗಿ ಮೈದೋರಿತಾಚೆಯ ಸೇನೆ ಸಂದಣಿಸಿ ೫೮

ನೆಲ ಬಿರಿಯಲಳ್ಳಿರಿವ ವಾದ್ಯದ
ಕಳಕಳದ ಕೊಲ್ಲಣಿಗೆಯಲಿ ಮುಂ
ಕೊಳಿಸಿದರು ಸಹದೇವ ಸಾತ್ಯಕಿ ನಕುಲ ಸೃಂಜಯರು
ದಳದ ಪದಹತಿಧೂಳಿಯಲಿ ಕ
ತ್ತಲಿಸೆ ದೆಸೆ ಪಾಂಚಾಲಬಲವಿ
ಟ್ಟಳಿಸಿ ನೂಕಿತು ಧರ್ಮಪುತ್ರನ ರಣದ ಚೂಣಿಯಲಿ ೫೯

ಸರ್ಬಲಗ್ಗೆಯಲರರೆ ಪಾಂಡವ
ಸರ್ಬದಳ ದಳಪತಿಯ ರೆಘೊಂಪಿಸ
ಲೊಬ್ಬನೊದಗಿದಡೇನಹುದು ಕವಿ ನೂಕು ನೂಕೆನುತ
ಬೊಬ್ಬಿಡಲು ಕುರುರಾಯ ನೀ ಬಲ
ದಬ್ಬರಣೆ ವಾರಿಜಭವಾಂಡವ
ಗಬ್ಬರಿಸೆ ಘಾಡಿಸಿತು ಶಲ್ಯನ ರಥದ ಬಳಸಿನಲಿ ೬೦

ಸೆಳೆದು ಹೊಯ್ದಾಡಿದುದು ಚಾತು
ರ್ಬಲ ಧಡಾಳಿಸಿ ವಿವಿಧ ಶಸ್ತ್ರಾ
ವಳಿಯ ಧಾರಾಸಾರದಲಿ ಹೊನಲೆದ್ದುದರುಣಜಲ
ಉಳಿದರಿಬ್ಬರು ದೊರೆಗಳೆನೆ ಮು
ಮ್ಮೂಳಿತವಾದುದು ಸೇನೆ ನೃಪತಿಯ
ಹಳಚಿದನು ಮಾದ್ರೇಶನಾವೆಡೆ ಧರ್ಮಸುತನೆನುತ ೬೧

ಮತ್ತೆ ತರುಬಿದನವನಿಪನನಿದು
ಜೊತ್ತಿನಾಹವವಲ್ಲಲೇ ಮಿಗೆ
ಹೊತ್ತ ಹೊರಿಗೆಯ ನೆರವಣಿಗೆ ಸೇನಾಧಿಪತ್ಯವಲೆ
ತೆತ್ತಿಸಿದನಂಬಿನಲಿ ಜೋಡಿನ
ಹತ್ತರಿಕೆಯಲಿ ಚಿಪ್ಪನೊಡೆದೊಳು
ನೆತ್ತರೋಕುಳಿಯಾಡಿದುವು ಮಾದ್ರೇಶನಂಬುಗಳು ೬೨

ಏನ ಹೇಳುವೆನರಸ ಕುಂತೀ
ಸೂನುವೇ ಕಿರುಕುಳನೆ ಶಲ್ಯನ
ನೂನ ಶರಜಾಲದಲಿ ನೊಂದನು ಬಹಳ ಧೈರ್ಯದಲಿ
ಭಾನುವಿನ ತಮದೊದವಿದನುಸಂ
ಧಾನದಂತಿರೆಯಹಿತಭಟನ ಸ
ಘಾನತೆಯನೆತ್ತಿದವು ಕುತ್ತಿದವಂಬು ದಳಪತಿಯ ೬೩

## ನೂರನೆಯ ಸಂಧಿ

ಸೂ. ಸವೆದುದಗ್ಗದ ಪಾಂಡುಸುತ ಕೌ
ರವ ಬಲಾಂಬುಧಿ ಧರ್ಮತನುಜನ
ನವಗಡಿಸಿ ಸಮರದಲಿ ಮಡಿದನು ಮಾದ್ರಭೂಪಾಲ

ಕೇಳು ಧೃತರಾಷ್ಟ್ರಾವನಿಪ ಭೂ
ಪಾಲ ಶಲ್ಯರ ಸಮರಕಿವರನು
ಕೂಲವಾದರಲೈ ಕೃಪಾದಿಗಳಿತ್ತಲಾಚೆಯಲಿ
ಮೇಳವಿಸಿತರ್ಜುನ ನಕುಲ ಪಾಂ
ಚಾಲ ಬಲಭೀಮಾದಿಗಳು ಪದ
ಧೂಳಿಯಲಿ ಜಗ ಮುಳುಗೆ ಜೋಡಿಸಿ ಜಡಿದುದುಭಯಬಲ ೧

ಕೆದರಿದನು ಕಲಿಭೀಮ ಬಲವಂ
ಕದಲಿ ಸಾತ್ಯಕಿ ನಕುಲರೆಡವಂ
ಕದಲಿ ಚೂಣಿಗೆ ಚಿಮ್ಮಿದರು ಪಾಂಚಾಲನಾಯಕರು
ಮದಮುಖರನಿಕ್ಕಿದನು ಬಾಣೌ
ಘದಲಿ ಫಲುಗುಣನೊಂದು ಕಡೆಯಲಿ
ಸದೆದು ಸವರಿದರೊಂದು ಕಡೆಯಲಿ ದ್ರೌಪದೀಸುತರು ೨

ಕ್ಷಿತಿಪ ಚಿತ್ರಸೇನೆಯಲಿ ಗುರು
ಸುತ ಸುಶರ್ಮಕ ಶಲ್ಯ ನಿನ್ನಯ
ಸುತನು ಕೃತವರ್ಮನು ಕೃಪಾಚಾರ್ಯಾದಿಗಳು ಮಸಗಿ
ಘೃತಸಮುದ್ರದ ಸೆರಗ ಸೋಂಕಿದ
ಹುತವಹನ ಸೊಂಪಿನಲಿ ವೈರಿ
ಪ್ರತತಿಯನು ತರುಬಿದರು ತರಿದರು ಸರಳ ಸಾರದಲಿ ೩

ಕೆಣಕಿದಡೆ ಗುರುಸುತನನಡಹಾ
ಯ್ದಣೆದನಂಬಿನಲರ್ಜುನನ ಮಾ
ರ್ಗಣಮಹಾರಣ್ಯದಲಿ ನಡೆದುದು ಕಡಿತ ಗುರುಸುತನ
ರಣವಿಶಾರದರಹಿರಲೇ ನೀ
ವಣಕವೇತಕೆ ರಾಜಗುರುಗಳು
ಸೆಣಸುವರೆ ಸೈರಿಸಿರೆ ನೀವೆನುತೆಚ್ಚನಾ ಪಾರ್ಥ ೪

ಮೊಗೆದವಶ್ವತ್ಥಾಮನೆಚ್ಚಂ
ಬುಗಳನರ್ಜುನನಂಬುಪಾರ್ಥನ
ಬಿಗಿದವಾ ನಿಮಿಷದಲಿ ಭಾರದ್ವಾಜ ಶರಜಾಲ
ತಗಡುಗಿಡಿಗಳ ಸೂಸುವುರಿಧಾ
ರೆಗಳ ಘೃತಲೇಪನದ ಬಂಧದ
ಹೊಗರುಗಣೆ ಹೂಳಿದವು ಗುರುಸುತನಂಬಿನಂಬುಧಿಯ ೫

ಅರಸ ಕೇಳಡಹಾಯ್ದು ಪಾರ್ಥನ
ವರರಥವ ಹಿಂದಿಕ್ಕಿ ಪವನಜ
ನುರವಣಿಸಿದನು ನಕುಲ ಸಾತ್ಯಕಿ ಸಹಿತ ಗುರುಸುತನ
ಸರಳ ಸರಿವಳೆಗಳ ಸಘಾಡದ
ಲರಿಭಟನು ಸವೆದನು ಮಹೋಗ್ರದ
ಧುರವ ಕಂಡನು ನೃಪತಿ ಬಂದನು ಬಿಟ್ಟ ಸೂಠಿಯಲಿ ೬

ರಾಯ ಹೊಕ್ಕನು ಭೀಮಸೇನನ
ದಾಯ ಬಲುಹೋ ಧರ್ಮಪುತ್ರನ
ದಾಯವಲ್ಲಿದು ನೂಕೆನುತ ಕೃತವರ್ಮಗೌತಮರು
ಸಾಯಕದ ಮಳೆಗರೆದು ಕೌರವ
ರಾಯನನು ಹಿಂದಿಕ್ಕಿ ವೇಢೆಯ
ವಾಯುಜನ ವಂಗಡವ ಮುರಿದರು ತರಿದರರಿಬಲವ ೭

ಪಡಿಬಲಕೆ ಹೊಕ್ಕುದು ತ್ರಿಗರ್ತರ
ಗಡಣ ಕೃಪ ಕೃತವರ್ಮರಿಗೆ ಸಂ
ಗಡಿಗನಶ್ವತ್ಥಾಮನೀ ಹೇರಾಳ ದಳಸಹಿತ
ಕೊಡಹಿದರು ಪಾಂಡವಬಲವನವ
ಗಡಿಸಿದರು ಪವಮಾನಜನನ
ಕ್ಕಡಿಸಿ ಬೆಬ್ಬಳೆವೋಯ್ತು ಭೀಮನ ಭಾರಣೆಯ ಭಟರು ೮

ಘಡ ಎನುತ ಪಾಂಚಾಲಬಲ ಸಂ
ಗಡಿಸಿತನಿಲಜನೊಡನೆ ಸೃಂಜಯ
ರೆಡೆಯುಲಡಹಾಯಿದರು ಸುತ ಸೋಮಾದಿಗಳು ಸಹಿತ
ಕಡೆವಿಡಿದು ಕಲಿಪಾರ್ಥನಂಬಿನ
ವಡಬನೆದ್ದುದು ಕುರುಬಲದ ಹೆ
ಗ್ಗಡಲು ಬರತುದು ಹೇಳಲೇನದ ಭೂಪ ಕೇಳೆಂದ ೯

ಆ ಸಮಯದಲಿ ಬಹಳ ಶೌರ್ಯಾ
ವೇಶದಲಿ ನಿನ್ನಾತ ನೂಕಿದ
ನಾ ಶಕುನಿಯೈವತ್ತು ಸಾವಿರ ತುರಗದಳ ಸಹಿತ
ಕೇಸುರಿಯ ಕರ್ಬೊಗೆಯವೊಲು ನಿ
ಟ್ಟಾಸಿನಾಯುಧದಾನೆಗಳು ಕೈ
ವೀಸುವಲ್ಲಿಂ ಮುನ್ನ ಮೊಗೆದುವು ವೈರಿಮೋಹರವ ೧೦

ಗಜದಳದ ಘಾಡಿಕೆಗೆ ವಾಜಿ
ವ್ರಜದ ವೇಢೆಗೆ ಭೀಮನೇ ಗಜ
ಬಜಿಸುವನೆ ಹೊಡೆಸೆಂಡನಾಡಿದನಹಿತ ಮೋಹರವ
ಗುಜರು ಗುಲ್ಮದ ಕುಂಜರಾಶ್ವ
ವ್ರಜದ ಮೊಳೆಯೊಣಗಿದುದು ಪವಮಾ
ನಜ ಪರಾಕ್ರಮಶಿಖಿಯ ಝಳಾಳ ಝೊಂಪಿಸಿತು ನಿಮಿಷದಲಿ ೧೧

ಅಳಿದುದೈನೂರಾನೆ ಸಾವಿರ
ಬಲುಗುದುರೆ ರಥ ಮೂರು ಸಾವಿರ
ನೆಲಕೆ ಕೈವರ್ತಿಸಿತು ಭೀಮನ ಹೊಯ್ಲ ಹೋರಟೆಗೆ
ಬಿಲು ಹರಿಗೆ ಸಬಳದ ಪದಾತಿಯ
ತಲೆಯ ತೊಡಸಿದನೆಂಟು ಲಕ್ಕವ
ನುಳಿದ ಬಲವೋಲೈಸುತಿರ್ದುದು ಘನ ಪಲಾಯನವ ೧೨

ತಡೆದನಶ್ವತ್ಥಾಮ ಭೀಮನ
ಕಡುಹನಾ ಸಹದೇವ ನಕುಲರ
ನಡುಗಿಸಿದನುಡುಗಿಸಿದನಾಟೋಪವನು ಪವನಜನ
ಇಡಿದುದಂಬರವಂಬಿನಲಿ ಕೈ
ಗಡಿಯನಂಬಿನ ಲಕ್ಷ್ಯಭೇದವ
ನುಡಿಯಬಲ್ಲವನಾರು ಗುರುನಂದನನ ಸಮರದಲಿ ೧೩

ಪವನಜನನೆಂಟಂಬಿನಲಿ ಪಾಂ
ಡವಸುತರನೈವತ್ತರಲಿ ಯಾ
ದವನನಿಪ್ಪತ್ತಂಬಿನಲಿ ಮಾದ್ರೀಕುಮಾರಕರ
ಕವಲುಗೋಲಿಪ್ಪತ್ತರಲಿ ಮುರಿ
ದವಗಡಿಸಿ ಪಾಂಚಾಲ ಸೃಂಜಯ
ನಿವಹವನು ನೂರಂಬಿನಲಿ ಕೆಡೆಯೆಚ್ಚು ಬೊಬ್ಬಿರಿದ ೧೪

ಏನ ಹೇಳುವೆ ಗಜಘಟಾಪ್ರತಿ
ಮಾನದಲಿ ಕೋದಂಬುಗಳು ಹಿಂ
ಡಾನೆಗಳನೇಳೆಂಟನೊದೆದೋಡಿದವು ಪಂಚಕವ
ಭಾನು ರಶ್ಮಿಗಳಂಧಕಾರದ
ಮಾನಗರ್ವವ ಮುರಿವವೊಲು ಗುರು
ಸೂನುವಿನ ಶರ ಸವರಿದವು ಕರಿಘಟೆಯ ಬಲುಮೆಳೆಯ ೧೫

ತಾಗಿದವು ಕಂದದಲಿ ನಾಳಿಕೆ
ಗಾಗಿ ಹೊರವಂಟಶ್ವನಿಕರವ
ನೀಗಿದವು ಶರವೊಂದು ಸಾವಿರ ರಥಹಯಾವಳಿಯ
ಬೀಗಿದವು ಕಾಲಾಳ ಕಬಳಿಸಿ
ತೇಗಿದವು ಚತುರಂಗವನು ಏನಿ
ಯೋಗಿಸಿದವಂತಕನ ಮನೆಗಂಬುಗಳು ಗುರುಸುತನ ೧೬

ಕಡಿವಡೆದುದಿನ್ನೂರು ಗಜ ಧರೆ
ಗುಡಿದು ಬಿದ್ದುದು ತೇರು ಸಾವಿರ
ವಡಗುದರಿಯಾಯ್ತಶ್ವಚಯ ಸಾವಿರದ ಮೂನೂರು
ಕಡುಗಲಿಗಳರುವತ್ತು ಸಾವಿರ
ವೊಡಲನಿಕ್ಕಿತು ಪಾಯದಳವು
ಗ್ಗಡದ ಹಾವರ ಡಿಳ್ಳವಾದುದು ವೈರಿಸುಭಟರಿಗೆ ೧೭

ಮತ್ತೆ ಕವಿದುದು ಪಾಂಡುಬಲವರು
ವತ್ತು ಸಾವಿರ ಕುದುರೆ ನೂರಿ
ಪ್ಪತ್ತು ಗಜರಥ ನೂರ ಮೀರಿತು ಲಕ್ಕಪಾಯದಳ
ಸತ್ತಿಗೆಯ ಸಾಲಿನಲಿ ಧರಣಿಯ
ಕಿತ್ತು ಮಗುಚುವ ವಾದ್ಯರಭಸದ
ಲೆತ್ತಿ ನೂಕಿತು ಗುರುತನೂಜನ ರಥದ ಸಮ್ಮುಖಕೆ ೧೮

ಇತ್ತ ಹೇಳಿಕೆಯಾಯ್ತು ಹಯವಿ
ಪ್ಪತ್ತು ಸಾವಿರ ದಂತಿಘಟೆಯೈ
ವತ್ತು ನಾನೂರೇಳು ರಥ ಸಾವಿರದ ನಾನೂರು
ತೆತ್ತಿಗರು ಕಾಲಾಳು ಲಕ್ಕವು
ಹತ್ತಿತಲ್ಲಿಯ ವಾದ್ಯರವ ಕೀ
ರಿತ್ತು ಕಮಲಭವಾಂಡ ವಿಪುಲ ಕಟಾಹಖರ್ಪರವ ೧೯

ಉರವಣಿಸಿತಿದು ಗುರುಸುತನ ಹಿಂ
ದಿರಿಸಿ ಪರಬಲದಭಿಮುಖಕೆ ಮೋ
ಹರಿಸಿ ನಿಂದುದು ಕಂಡನಿತ್ತಲು ಶಲ್ಯನಾ ಬಲವ
ಧುರಕೆ ನಾವಿರೆ ಸೇನೆಯುಪಸಂ
ಹರಿಸಬಹುದೇ ದ್ರೋಣ ಭೀಷ್ಮಾ
ದ್ಯರಿಗೆ ನಗೆಗೆಡೆ ನಾವಹೆವೆ ತೆಗೆಯೆನುತ ನಡೆತಂದ ೨೦

ದಳವ ತೆಗೆತೆಗೆ ತಾನಿರಲು ಕುರು
ಬಲಕೆ ಬೀಯವೆ ಕೌರವೇಂದ್ರನ
ಕೆಲಬಲದ ಸುಯಿಧಾನದಲಿ ಕೃಪಗುರುಸುತಾದಿಗಳ
ನಿಲಲಿ ಶಕುನಿಯ ತುರಗದಳ ಹಿ
ನ್ನೆಲೆಗೆ ಹೋಗಲಿ ರಾಯದಳವೆ
ಮ್ಮಳವ ನೋಡುತ್ತಿರಲಿಯೆಂದನು ಶಲ್ಯ ಕುರುಪತಿಗೆ ೨೧

ಕೇಳು ಕೃಪ ಕೃತವರ್ಮ ಗುರುಸುತ
ಕೇಳು ಶಕುನಿ ಸುಶರ್ಮ ಸಾಲ್ವನೃ
ಪಾಲ ರಾಯನ ಮಂತ್ರಿ ಸಚಿವ ಪಸಾಯ್ತರಾದವರು
ಕೇಳಿರೈ ಭೀಷ್ಮಾದಿ ಸುಭಟರ
ಕಾಳಗವ ಕಂಡಿರಿ ಮದೀಯ ಕ
ರಾಳ ಕದನೋತ್ಸವವ ನೋಡುವುದೆಂದನಾ ಶಲ್ಯ ೨೨

ತರಿಸಿ ಕಾಂಚನಮಯ ರಥವ ಸಂ
ವರಿಸಿದನು ಟೆಕ್ಕೆಯವನೆತ್ತಿಸಿ
ಸರಳ ತುಂಬಿದ ಬಂಡಿಗಳ ಕೆಲಬಲಕೆ ಜೋಡಿಸಿದ
ಬಿರುದನೊದರುವ ಪಾಠಕರ ಮೋ
ಹರಕೆ ಮಣಿಕಾಂಚನವ ಮೊಗೆದಿ
ತ್ತರರೆ ಕರೆಯೋ ಧರ್ಮಜನನೆಂದುಬ್ಬಿದನು ಶಲ್ಯ ೨೩

ರಾಯ ನಿಲುವನೊ ಮೇಣು ಪಾರ್ಥನೊ
ಸಾಯುಸುತನೋ ನಿಮ್ಮ ಮೂವರೊ
ವಾಯುಧವ ಕೊಂಡಾರು ಹೊಕ್ಕರು ನಿಲುವೆನವರೊಡನೆ
ಳಾಯಕರು ಮಿಕ್ಕವರೊಡನೆ ಬಿಲು
ನಾಯಕವನೊಡ್ಡಿದಡೆ ಕೌರವ
ರಾಯನಾಣೆಯೆನುತ್ತ ಮದವೇರಿದನು ಕಲಿಶಲ್ಯ ೨೪

ಬೆರಳ ತುಟಿಗಳ ಬೊಬ್ಬೆ ಮಿಗಲ
ಬ್ಬರಿಸಿದವು ನಿಸ್ಸಾಳತತಿ ಜ
ರ್ಝರ ಮೃದಂಗದಪಣಹ ಪಟಹದ ಗೌರುಗಹಳೆಗಳ
ಉರು ರಭಸವಳ್ಳಿರಿಯೆ ರಥಚೀ
ತ್ಕರಣೆ ರಥಹಯ ಹೇಷಿತದ ನಿ
ಷ್ಠುರ ನಿನಾದದಲೌಕಿ ಹೊಕ್ಕನು ಶಲ್ಯನಾಹವವ ೨೫

ದಳಪತಿಯ ಸುಮ್ಮಾನಮುಖ ಬೆಳ
ಬೆಳಗುತದೆ ಗಂಗಾಕುಮಾರನ
ಕಳಶಜನ ರಾಧಾತನೂಜನ ರಂಗಭೂಮಿಯಿದು
ಕಳನನಿದನಾಕ್ರಮಿಸುವಡೆ ವೆ
ಗ್ಗಳೆಯ ಮಾದ್ರಮಹೀಶನಲ್ಲದೆ
ಕೆಲರಿಗೇನಹುದೆನುತೆ ಕೊಂಡಾಡಿತ್ತು ಕುರುಸೇನೆ ೨೬

ಪೂತು ಮಝರೇ ಶಲ್ಯ ಹೊಕ್ಕನೆ
ಸೂತಜನ ಹರಿಬದಲಿ ವೀರ
ವ್ರಾತಗಣನೆಯೊಳೀತನೊಬ್ಬನೆ ಹಾ ಮಹಾದೇವ
ಧಾತುವೊಳ್ಳಿತು ದಿಟ್ಟನೈ ನಿ
ರ್ಭೀತಗರ್ವಿತನಿವನೆನುತ ಭಟ
ರೀತನನು ಹೊಗಳಿದರು ಸಾತ್ಯಕಿ ಸೋಮಕಾದಿಗಳು ೨೭

ತಡೆದು ನಿಂದನು ಪರಬಲವ ನಿ
ಮ್ಮೊಡೆಯನಾವೆಡೆ ಸೇನೆ ಕದನವ
ಕೊಡಲಿ ಕೊಂಬವನಲ್ಲ ಕೈದುವ ಸೆಳೆಯೆನುಳಿದರಿಗೆ
ಪೊಡವಿಗೊಡೆಯನು ಕೌರವೇಶ್ವರ
ನೊಡನೆ ಸಲ್ಲದು ಗಡ ಶರಾಸನ
ವಿಡಿಯ ಹೇಳಾ ಧರ್ಮಜನನೆಂದುರುಬಿದನು ಶಲ್ಯ ೨೮

ಚೆಲ್ಲಿತದು ನಾನಾಮುಖಕೆ ನಿಂ
ದಲ್ಲಿ ನಿಲ್ಲದೆ ಸೃಂಜಯಾದ್ಯರ
ನಲ್ಲಿ ಕಾಣೆನು ಸೋಮಕರ ಪಾಂಚಾಲ ಮೋಹರವ
ಕೆಲ್ಲೆಯಲಿ ಭೀಮಾರ್ಜುನರು ಬಲು
ಬಿಲ್ಲನೊದರಿಸೆ ಕದನಚೌಪಟ
ಮಲ್ಲ ತಾನಿದಿರಾಗಿ ನಿಂದನು ಪಾಂಡವರ ರಾಯ ೨೯

ಜೀಯ ಬುಧನ ಪುರೂರವನ ಸುತ
ವಾಯುವಿನ ನಹುಷನ ಯಯಾತಿಯ
ದಾಯಭಾಗದ ಭೋಗನಿಧಿಯವತರಿಸಿದ್ದೈ ಧರೆಗೆ
ಜೇಯವೆನಿಸಿದೆ ಜೂಜಿನಲಿ ರಣ
ಜೇಯನಹನೀ ಕೌರವನು ನಿ
ನ್ನಾಯತಿಯ ಸಂಭಾವಿಸೆಂದುದು ವಂದಿಜನಜಲಧಿ ೩೦

ಹರಿಗೆ ಪೊಡವಂಟಸ್ತ್ರ ಶಿಕ್ಷಾ
ಗುರುವ ಮನದಲಿ ನೆನೆದು ಹೊಸ ಬಿಲು
ದಿರುವನೇರಿಸಿ ಮಿಡಿದು ನಿಜ ಸಾರಥಿಯ ಬೋಳೈಸಿ
ವರ ರಥವ ನೂಕಿದನು ಪವನಜ
ನರ ನಕುಲ ಸಹದೇವ ಸಾತ್ಯಕಿ
ಬರಲು ಬಲನೆಡವಂಕದಲಿ ನರನಾಥನಿದಿರಾದ ೧೩

ಮಾವನವರೇ ನಿಮ್ಮ ಹಿಂಸೆಗೆ
ನಾವು ಕಡುಗೆವು ಕ್ಷತ್ರಜಾತಿಯ
ಜೀವನವಲೇ ಕಷ್ಟವಿದು ಕಾರ್ಪಣ್ಯತರವಾಗಿ
ನೀವು ಸೈರಿಸಬೇಕು ನಮ್ಮ ಶ
ರಾವಳಿಯನೆನುತವನಿಪತಿ ಬಾ
ಣಾವಳಿಯ ಕೆದರಿದನು ಸೇನಾಪತಿಯ ಸಮ್ಮುಖಕೆ ೩೨

ನಿನಗೆ ಮಾತುಳರಾವು ಮಾಣಲಿ
ಮುನಿಯೆಮಗೆ ಮೊರೆಯಲ್ಲ ದುಶ್ಶಾ
ಸನ ಜಯದ್ರಥರಲ್ಲಲಾ ಸಂಬಂಧಿಗಳು ನಿನಗೆ
ಜನಪ ಧರ್ಮದ ಹಿಂಸೆ ಬಂದುದು
ನಿನಗೆ ಸಾಕದನಾಡಲೇತಕೆ
ಮನದ ಗರ್ವದ ಗಾಢವೈಸೆನುತೆಚ್ಚನಾ ಶಲ್ಯ ೩೩

ಅರಸ ಕೇಳ್ ಶಲ್ಯನ ಯುಧಿಷ್ಠಿರ
ಧರಣಿಪನ ಸಂಗ್ರಾಮವಂದಿನ
ಸುರನದೀನಂದನನ ದ್ರೋಣನ ಸೂತಸಂಭವನ
ನರನ ಭೂರಿಶ್ರವನ ಭೀಮನ
ಕುರುಪತಿಯ ವೃಷಸೇನ ಸೌಭ
ದ್ರರ ಸಮಗ್ರಾಹವವ ಮರಸಿತು ಹೇಳಲೇನೆಂದ ೩೪

ದಿಟ್ಟನೈ ಭೂಪತಿಗಳಲಿ ಜಗ
ಜಟ್ಟಿಯೈ ನಿನಗಸ್ತ್ರವಿದ್ಯವ
ಕೊಟ್ಟವನ ನಾ ಬಲ್ಲೆನದನಿನ್ನಾಡಿ ಫಲವೇನು
ತೊಟ್ಟ ಜೋಹದ ವಾಸಿಯೆಂಬುದ
ಬಿಟ್ಟು ನಮಗೊಡ್ಡುವುದು ನಿನ್ನೊಡ
ವುಟ್ಟಿದರನಿಬ್ಬರನೆನುತ ತೆಗೆದೆಚ್ಚನಾ ಶಲ್ಯ ೩೫

ಮಾವ ಭೀಮಾರ್ಜುನರ ಭಾರಣೆ
ಗಾವ ನಿಲುವನು ಸಾಕದಂತಿರ
ಲೀ ವಿಚಿತ್ರ ಕಳಂಬ ಖಂಡನ ಪಂಡಿತತ್ವವನು
ನೀವು ತೋರಿರೆ ಸಾಕು ಸಾಮ
ರ್ಥ್ಯಾವಲಂಬನವುಳ್ಳಡೀ ಶ
ಸ್ತ್ರಾವಳಿಯ ಸೈರಿಸಿಯೆನುತ ಯಮಸೂನು ತೆಗೆದೆಚ್ಚ ೩೬

ಧರಣಿಪತಿಯಂಬುಗಳನೆಡೆಯಲಿ
ತರಿದು ತುಳುಕಿದನಂಬಿನುಬ್ಬಿನ
ಗರಿಯ ಗಾಳಿಯ ದಾಳಿ ಪೈಸರಿಸಿದುದು ಪರ್ವತವ
ಮೊರೆವ ಕಣೆ ಮಾರ್ಗಣೆಗಳನು ಕ
ತ್ತರಿಸಿದವು ಬಳಿಯಂಬುಗಳು ಪಡಿ
ಸರಳ ತೂಳಿದಡೆಚ್ಚರೆಚ್ಚರು ಮೆಚ್ಚಲುಭಯಬಲ ೩೭

ಸೈರಿಸಾದಡೆಯೆನುತ ಮುಳಿದು ವ
ಹೀರಮಣ ಮದ್ರಾಧಿಪನನೆ
ಚ್ಚಾರಿದನು ಮಗುಳೆಚ್ಚು ಪುನರಪಿಯೆಚ್ಚು ಮಗುಳೆಸಲು
ಕೂರಲಗ ಸೀಸಕವ ಕವಚವ
ಹೋರುಗಳೆದವು ನೆತ್ತರಿನ ಬಾ
ಯ್ದಾರೆಗಳ ತೋರಿದವು ದಳಪತಿಯಪರಭಾಗದಲಿ ೩೮

ಪ್ರಳಯಪವನನ ಹೊಯ್ಲಿನಲಿ ಕಳ
ವಳಿಸಿದಮರಾದ್ರಿಯವೊಲುದುರಿದ
ಬಿಲುಸರಳ ಹೆಗಲೋರೆಗೊರಳರೆಮುಚ್ಚುಗಣ್ಣುಗಳ
ತಳಿತ ರಕ್ತಾಂಕುರದ ಬಳಕೆಗೆ
ಬಳಲಿದಿಂದ್ರಿಯಕುಳದ ಮೂರ್ಛಾ
ವಿಲಸಿತಾಂಗದ ಶಲ್ಯನಿದ್ದನು ರಥದ ಮಧ್ಯದಲಿ ೩೯

ಅರಸ ಕೇಳೈ ಮರವೆಗಾತ್ಮನ
ನೆರವ ಕೊಟ್ಟು ಮುಹೂರ್ತಮಾತ್ರಕೆ
ಮರಳಿಚಿದವೊಲು ಕಂದೆರೆದು ನೋಡಿದನು ಕೆಲಬಲನ
ಸರಳ ಕಿತ್ತೌಷಧಿಯ ಲೇಪವ
ನೊರಸಿದನು ತೊಳೆತೊಳೆದು ನೂತನ
ವರ ದುಕೂಲವನುಟ್ಟು ಕೊಂಡನು ನಗುತ ವೀಳೆಯವ ೪೦

ತುಡುಕಿದನು ಬಿಲುಸರಳನಕಟವ
ಗಡಿಸಿದನಲಾ ಧರ್ಮಸುತನು
ಗ್ಗಡದಲೊಂದು ಮುಹೂರ್ತವಾಯಿತೆ ಹಗೆಗೆ ಸುಮ್ಮಾನ
ತೊಡಕಿದೆಡೆಗೆ ಜಯಾಪಜಯ ಸಂ
ಗಡಿಸುವುವು ತಪ್ಪೇನು ಯಮಸುತ
ಹಿಡಿ ಧನುವನನುವಾಗೆನುತ ಮೂದಲಿಸಿದನು ಶಲ್ಯ ೪೧

ನರನ ರಥವದೆ ಮರೆಯಹೊಗು ಮುರ
ಹರನ ಮರೆವೊಗು ಭೀಮಸೇನನ
ಕರಸಿ ನೂಕು ಶಿಖಂಡಿ ಸಾತ್ಯಕಿ ಸೃಂಜಯಾದಿಗಳ
ಅರಸುಗುರಿಗಳ ಹೊಯ್ಸು ಗೆಲುವಿನ
ಗರುವನಾದಡೆ ನಿಲ್ಲೆನುತಲು
ಬ್ಬರಿಸಿ ಮಾದ್ರಾಧೀಶನೆಚ್ಚನು ಧರ್ಮನಂದನನ ೪೨

ಏನ ಹೇಳುವೆ ಭಟನ ಶರ ಸಂ
ಧಾನವನು ಪುಂಖಾನುಪುಂಖವಿ
ಧಾನವನು ಝೇಂಕಾರಶರಜಾಳ ಪ್ರಸಾರಣವ
ಆ ನಿರಂತರ ಸರಳ ಸಾರದ
ಸೋನೆ ಸದೆದುದು ಧರ್ಮಸುತನುರ
ಣಾನುರಾಗವ ತೊಳೆದುದದ್ಭುತವಾಯ್ತು ನಿಮಿಷದಲಿ ೪೩

ಸರಳ ಮುರಿಯೆಸಲಾ ಸರಳ ಕ
ತ್ತರಿಸಿ ಹತ್ತಂಬಿನಲಿ ರಾಯನ
ಬರಿಯ ಕವಚವ ಹರಿಯಲೆಚ್ಚನು ಮೂರು ಬಾಣದಲಿ
ಶಿರದ ಸೀಸಕವನು ನಿಘಾತದ
ಲೆರಡು ಶರದಲಿ ಮತ್ತೆ ಭೂಪತಿ
ಯುರವನಗುಳಿದನೆಂಟರಲಿ ಮಗುಳೆಚ್ಚು ಬೊಬ್ಬಿರಿದ ೪೪

ಗರುಡತುಂಡದ ಹತಿಗೆ ಫಣಿಯೊದೆ
ಬಿರಿವವೊಲು ಯಮಸುತನ ತನು ಜ
ರ್ಝರಿತವಾದುದು ಜರಿವ ಜೋಡಿನ ಜಗಿಯ ಶೋಣಿತದ
ಮುರಿದ ಕಂಗಳ ಮಲಗಿನಲಿ ಪೈ
ಸರದ ಗಾತ್ರದ ಗಾಢವೇದನೆ
ಯುರವಣಿಸೆ ಸೊಂಪಡಗಿ ನಿಮಿಷ ಮಹೀಶ ಮೈಮರೆದ ೪೫

ಬಿದ್ದನಾಚೆಯ ದೊರೆ ಸುಯೋಧನ
ಗೆದ್ದನಿನ್ನೇನೆನುತ ಸುಭಟರ
ಸದ್ದಿತತಿಸುಮ್ಮಾನಸಾಗರ ನಿಸ್ಸ ಮೋಹರವ
ಅದ್ದರೋ ಶೋಕಾಂಬುಧಿಯಲೊಡೆ
ಬಿದ್ದರೋ ಭೀಮಾರ್ಜುನರಿಗುಸು
ರಿದ್ದುದೋ ಬರಹೇಳೆನುತ ಬೊಬ್ಬಿರಿದನಾ ಶಲ್ಯ ೪೬

ಗಜಬಜಿಸಿದುದು ವೈರಿಸುಭಟ
ವ್ರಜ ನಕುಲ ಸಹದೇವ ಸಾತ್ಯಕಿ
ವಿಜಯ ಧೃಷ್ಟದ್ಯುಮ್ನ ಭೀಮ ದ್ರೌಪದೀಸುತರು
ವಿಜಿತನೋ ವಿಗತಾಸುವೋ ಧ
ರ್ಮಜನ ಹದನೇನೆನುತ ಚಿಂತಾ
ರಜನಿಯಲಿ ಕಂಗೆಟ್ಟುದಾ ಬಲವರಸ ಕೇಳೆಂದ ೪೭

ಕ್ಷಣಕೆ ಮರಳೆಚ್ಚತ್ತನಸ್ತ್ರ
ವ್ರಣವ ತೊಳೆದರು ಘಾಯದಲಿ ಕೇ
ವಣಿಸಿದರು ದಿವ್ಯೌಷಧಿಯ ಗಂಧಾನುಲೇಪದಲಿ
ರಣವಿಜಯ ನವ ವಸನ ಮಣಿಭೂ
ಷಣ ಪರಿಷ್ಕೃತನಾಗಿ ತಿರುವಿನ
ಗೊಣೆಯವನು ನೇವರಿಸಿದನು ಸಂತೈಸಿ ಸಂಹನವ ೪೮

ಮರವೆ ಮಸಳಿತೆ ಭೂಮಿಪತಿ ಕಂ
ದೆರೆದಿರೇ ಭೀಮಾರ್ಜುನರು ನಿ
ಮ್ಮಿರಿತಕೊದಗಿದರಿಲ್ಲಲಾ ನೀವೇಕೆ ರಣವೇಕೆ
ನೆರೆ ಧನುರ್ವೇದಾರ್ಥಸಾರವ
ನರಿವೆಯಾದರೆ ಕೊಳ್ಳೆನುತ ಬಿಡೆ
ತರಿದನೆಂಟಂಬಿನಲಿ ಧ್ವಜ ರಥ ಹಯವನಾ ಶಲ್ಯ ೪೯

ಧನುವನೆರಡಂಬಿನಲಿ ಮಗುಳೆ
ಚ್ಚನು ಮಹೀಶನ ಸಾರಥಿಯ ಮೈ
ನನೆಯೆ ನವ ರುಧಿರದಲಿ ಮರಳೆಚ್ಚನು ಯುಧಿಷ್ಠಿರನ
ಮನನ ಶಾಸ್ತ್ರ ಶ್ರವಣ ನಿಯಮಾ
ಸನ ಸಮಾಧಿ ಧ್ಯಾನ ವಿದ್ಯಾ
ವಿನಯವಲ್ಲದೆ ರಣದ ಜಂಜಡವೇಕೆ ನಿಮಗೆಂದ ೫೦

ಉಡಿದು ಬಿದ್ದುದು ಚಾಪ ಸಾರಥಿ
ಕಡಿವಡೆದು ರಥ ನುಗ್ಗುನುಸಿಯಾ
ಯ್ತೊಡಗುದರಿಯಾಯ್ತುಶ್ಚಚಯ ಸಜ್ಜೋಡು ತಡಿ ಸಹಿತ
ನಡುಗಿತರಿಬಲವವನಿಪತಿ ಕಾ
ಲ್ನಡೆಗೆ ಬಂದನು ಮತ್ತೆ ರಥವಂ
ಗಡವ ಮೇಳೈಸಿದನು ನಗುತಡರಿದನು ಮಣಿರಥವ ೫೧

ಬೊಬ್ಬಿರಿದುದಾ ಸೇನೆ ರಾಯನ
ಸರ್ಬುದಳ ಜೋಡಿಸಿತು ಸೋಲದ
ಮಬ್ಬು ಹರೆದುದು ಜಯದ ಜಸವೇರಿದನು ನರನಾಥ
ಉಬ್ಬಿದನು ಸತ್ಕ್ಷತ್ರತೇಜದ
ಗರ್ಭ ಗಾಡಿಸಿತಾರಿ ಮಿಡಿದನು
ತೆಬ್ಬಿನಸ್ತ್ರವ ತೂಗಿ ತುಳುಕಿದನಂಬಿನಂಬುಧಿಯ ೫೨

ಕಾದುಕೊಳು ಮಾದ್ರೇಶ ಕುರುಬಲ
ವೈದಿಬರಲಿಂದಿನಲಿ ನಿನ್ನಯ
ಮೈದುನನ ಕಾಣಿಕೆಯಲೇ ಸಂಘಟನೆಗೀ ಸರಳು
ಕೈದುಕಾತಿಯರುಂಟೆ ಕರೆ ನೀ
ನೈದಲಾರೆಯೆನುತ್ತ ಮೂನೂ
ರೈದು ಶರದಲಿ ಕಡಿದನಾ ಸಾರಥಿಯ ರಥ ಹಯವ ೫೩

ತೇರು ಹುಡಿಹುಡಿಯಾಯ್ತು ಹೂಡಿದ
ವಾರುವಂಗಳನಲ್ಲಿ ಕಾಣೆನು
ಸಾರಥಿಯ ತಲೆ ನೆಲದೊಳದ್ದುದು ಮಿದುಳ ಜೊಂಡಿನಲಿ
ಅರಿ ಬೊಬ್ಬಿರಿದರಸವೆಸಲು
ಬ್ಬಾರದಲಿ ಕಣೆಯಡಸಿದವು ಕೈ
ವಾರವೇಕೆ ಛಡಾಳಿಸಿತು ಚಪಳತೆ ಯುಧಿಷ್ಠಿರನ ೫೪

ಅರಸ ಕೇಳೈ ಬಳಿಕ ಮಾದ್ರೇ
ಶ್ವರನ ರಥ ಸಾರಥಿ ವಿಸಂಚಿಸ
ಲುರಿದನಧಿಕಕ್ರೋಧಶಿಖಿ ಪಲ್ಲೈಸಿತಕ್ಷಿಯಲಿ
ಕುರುಬಲದ ತಲ್ಲಣವನುರೆ ಸಂ
ಹರಿಸಿ ಹರಿಗೆಯಡಾಯುಧದಲರಿ
ಧರಣಿಪನಮೇಲ್ವಾಯ್ದು ಹೊಯ್ದನು ರಥ ಹಯಾವಳಿಯ ೫೫

ವಾರುವನ ವೈಚಿತ್ರಗತಿಯ ನಿ
ಹಾರದಲಿ ಸಾರಥಿ ನರೇಂದ್ರನ
ತೇರ ತಿರುಗಿಸಿದನು ವಿಘಾತಿಯಲೊಂದು ಬಾಹೆಯಲಿ
ಅರಿ ಹೊಯ್ದನುಹಯವನಗ್ಗದ
ವಾರಣಾವಳಿಗಳ ಪದಾತಿಯ
ತೇರ ತೆಕ್ಕೆಯನಿಕ್ಕಿದನು ಪ್ರತ್ಯೇಕಸಾವಿರವ ೫೬

ಮಲೆತ ಧೃಷ್ಟದ್ಯುಮ್ನನನು ಭಯ
ಗೊಳಿಸಿ ಸೋಮಕ ಸೃಂಜಯರನ
ಪ್ಪಳಿಸಿದನು ಸಾತ್ಯಕಿ ಯುಧಾಮನ್ಯೂತ್ತಮೌಂಜಸರ
ದಳದೊಳೋಡಿಸಿ ಮುರಿದು ಚಾತು
ರ್ಬಲವ ಸವರಿ ಶಿಖಂಡಿ ನಕುಲರ
ಹೊಲಬುಗೆಡಿಸಿ ಮಹೀಪತಿಯ ಪಡಿಮುಖಕೆ ಮಾರಾಂತ ೫೭

ಎಸು ಯುಧಿಷ್ಠಿರ ಹಲಗೆ ಖಡ್ಗವ
ಕುಸುರಿದರಿಯಾ ಚಾಪವಿದ್ಯಾ
ಕುಶಲನೆಂಬರಲೈ ತನುತ್ರ ರಥಂಗಳಿಲ್ಲೆಮಗೆ
ಅಸುವ ತಡೆವರೆ ರಣಪಲಾಯನ
ವೆಸೆವುದೇ ಕ್ಷತ್ರಿಯರಿಗತಿಸಾ
ಹಸಿಕನಾದಡೆ ನಿಲ್ಲೆನುತ ಮೂದಲಿಸಿದನು ಶಲ್ಯ ೫೮

ಅಕಟಕಟ ಧರ್ಮಜನನೀ ಕಂ
ಟಕಕೆ ಕೈವರ್ತಿಸಿದರೇ ಪಾ
ತಕರು ಪಾಂಡವರೆನುತ ಕುರುಬಲವೆಲ್ಲ ಸಮತಳಿಸೆ
ವಿಕಟ ರೋಷಶಿಖಿಸ್ಫುಲಿಂಗ
ಪ್ರಕಟ ಭೀಷಣಸಹಿತ ಕೌಕ್ಷೇ
ಯಕವ ಖಂಡಿಸಿ ಧರೆ ಬಿರಿಯೆ ಬೊಬ್ಬಿರಿದನಾ ಭೀಮ ೫೯

ಲೇಸ ಮಾಡಿದೆ ಭೀಮ ಕಟ್ಟಾ
ಳೈಸಲೇ ನೀನವರೊಳಗೆ ನಿ
ನ್ನಾಸೆಯೆಲ್ಲಾ ಧರ್ಮಪುತ್ರನ ಸತ್ವಸಂಪದಕೆ
ಐಸೆ ಬಳಿಕೇನೆನುತ ಶಲ್ಯನು
ಹೀಶ ಮುರಿಯಲು ಹೊಸ ರಥವ ವೇ
ಳೈಸಿ ಸಾರಥಿ ಸಂಧಿಸಿದನವಧಾನ ಜೀಯೆನುತ ೬೦

ರಥಕೆ ಬಂದು ಪಸಾಯವನು ಸಾ
ರಥಿಗೆ ಕೊಟ್ಟನು ಚಾಪಶರವನು
ರಥದೊಳಗೆ ತುಂಬಿದನು ನಂಬಿಸಿದನು ಸುಯೋಧನನ
ಪೃಥೆಯ ಮಕ್ಕಳ ರಣಪರಾಕ್ರಮ
ವ್ಯಥೆ ಕಣಾ ಕರ್ಣಾದಿ ಸುಭಟ
ವ್ಯಥೆಯ ನಿಲಿಸುವೆನೆನುತ ಮೂದಲಿಸಿದನು ಧರ್ಮಜನ ೬೧

ಸಾರಥಿಗೆ ಸೂಚಿಸಿ ನೃಪಾಲನ
ಸಾರೆ ದುವ್ವಾಳಿಸಲು ಮಿಗೆ ನೃಪ
ನೋರೆಗೊಂಡನು ತಿರುಗೆ ತಿರುಗಿದನೊಲೆದೊಡೊಡನೊಲೆದು
ಚೂರಿಸುವ ನಾರಾಚವಿಕ್ರಮ
ದೋರಣೆಗೆ ನಾರಾಚಿಸಿತು ವಿ
ಸ್ತಾರದಲಿ ವಿಸ್ತರಿಸಿದನು ಜಯಸಮರಸಾಹಸವ ೬೨

ಹಿಂದೆ ಕರ್ಣನು ಫಲುಗುಣನು ಬಳಿ
ಕಿಂದು ಶಲ್ಯಯುಧಿಷ್ಠಿರರು ಸಾ
ನಂದದಲಿ ಸಮತಳಿಸಿ ಕಾದಿದರುಭಯಬಲ ಹೊಗಳೆ
ಇಂದು ಮಾದ್ರಾಧೀಶ್ವರಗೆ ಯಮ
ನಂದನನು ಯಮಸಂತಗೆ ಪಡಿ ತಾ
ಸಂದನೈ ಮಾದ್ರಾಧಿಪತಿಯೆಂದುದು ಭಟಸ್ತೋಮ ೬೩

ಅರಸ ಕೇಳೈ ಕೃಷ್ಣಶಕ್ತಿ
ಸ್ಫುರಣವೈಸಲೆ ನಿಮ್ಮ ಬಲ ಸಂ
ಹರಣಕಾವುದು ಬೀಜ ನಿರ್ದೈವರ ವಿಲಾಸವಿದು
ಹರಿ ಯುಧಿಷ್ಠಿರ ನೃಪನನೆಕ್ಕಟಿ
ಗರೆದು ನಿಜಶಕ್ತಿಪ್ರಯೋಗವ
ನೊರೆವಡೊಡಬಟ್ಟನು ಹಸಾದದ ಮಧುರವಚನದಲಿ ೬೪

ಆಯಿದನು ಶಸ್ತ್ರಾಸ್ತ್ರದಲಿ ದಿ
ವ್ಯಾಯುಧವನರೆಬಳಿದ ತಪ
ನೀಯರೇಖೆಯ ಕುಣಿವ ಗಂಟೆಯ ಹೊಳೆವ ಹೊಂಗರಿಯ
ಛಾಯಿಧಾರೆಯ ತೈಲಲೇಪನ
ದಾಯತದ ಚೌರಿಗಳ ರಿಪುಭಟ
ನಾಯುಷದ ಕಡೆವಗಲ ಭುಕ್ತಿಯ ಶಕ್ತಿಯನು ನೃಪತಿ ೬೫

ತುಡುಕಿದನು ಹೊಸರವಿಯ ತೇಜದ
ದಡಿಯನುಗಿದಂದದಲಿ ಹೊಳೆಹೊಳೆ
ವುಡುನಿಕರವುಚ್ಚಳಿಪವೊಲು ಮಣಿಮಯದ ಕಾಂತಿಗಳ
ಕಡಿಮೊನೆಯ ಪಡಿಮುಖದಲೊದರುವ
ಕಿಡಿಯ ಘಂಟಾರವದ ರಭಸದ
ಝಡಪದಲಿ ಜೋಡಿಸಿದ ಶಕ್ತಿಯಲಿಟ್ಟನವನೀಶ ೬೬

ಇದಿರೊಳೆಚ್ಚನು ಶಲ್ಯನಂಬಿನ
ಹೊದೆ ಸವೆಯೆ ಹರಿತಪ್ಪ ಶಕ್ತಿಯು
ತುದಿಗೆ ಕಬಳಗ್ರಾಸವಾದುದಲೈ ವಿಚಿತ್ರವಲಾ
ಹೊದರುಗಿಡಿಗಳ ಕೇಸುರಿಯ ಹಾ
ರದಲಿ ಹರಿತಂದಹಿತ ದಳಪತಿ
ಯೆದೆಯನೊದೆದುದು ನೆಲಕೆ ನಟ್ಟುದು ಸಾಲ್ಕ ಮುಷ್ಟಿಯಲಿ ೬೭

ಕಾರಿದನು ರುಧಿರವನು ಧರಣಿಗೆ
ಹಾರಿ ಬಿದ್ದನು ಮಾದ್ರಪತಿಯೆದೆ
ಡೋರಿನಲಿ ಡಾವರಿಸಿದವು ರಕ್ತಾಂಬುಧಾರೆಗಳು
ಮೀರಿತಸು ಕಂಠವನು ನಾಸಿಕ
ಕೇರಿದುದು ನಿಟ್ಟುಸುರು ನಿಮಿಷಕೆ
ಚೀರಿದುದು ಕುರುರಾಯದಳ ಶಲ್ಯಾವಸಾನದಲಿ ೬೮

ಅಹಹ ಸೇನಾಪತಿಯ ಮಗ್ಗುಲು
ಮಹಿಗೆ ಬಿದ್ದುದು ಬೆಚ್ಚಿತೀಚೆಯ
ಬಹಳಬಲರಿನ್ನಾರು ಕುರುಸೇನಾಧುರಂಧರರು
ಮಿಹಿರಸುತ ಗುರು ಭೀಷ್ಮರಲಿ ಸ
ನ್ನಿಹಿತನಾದನು ಶಲ್ಯನೆನೆ ಕಂ
ಗಹನವೀ ರಣವೆನುತ ಶಲ್ಯಾನುಜನು ಮಾರಾಂತ ೬೯

ಗೆಲವು ನಿನಗಾಯ್ತರಸ ಹರಿಬಕೆ
ನಿಲುಕಿದೆನ್ನನು ಸಂತವಿಸಿ ನಿಜ
ಬಲದಲೊಸಗೆಯ ಮಾಡಿಸಾ ಮಾದ್ರೇಶಮಾರಣವ
ಅಳುಕದಿದಿರಾಗೆನುತ ಬಾಣಾ
ವಳಿಯ ತವಿಸೆ ನಿರಂತರಾಸ್ತ್ರದ
ಜಲನಿಧಿಗೆ ವಡಬಾಗ್ನಿಯಾದನು ನಗುತ ಯಮಸೂನು ೭೦

ಆತನಸ್ತ್ರವ ಮುರಿಯೆಸುತ ರಥ
ಸೂತ ಹಯವನು ತರಿದು ಬಾಣ
ವ್ರಾತದಲಿ ಶಲ್ಯಾನುಜನ ಹೂಳಿದನು ಹರಹಿನಲಿ
ಈತನನು ಕೆಡಹಿದನು ಸಾಲ್ವಮ
ಹೀತಳಾಧಿಪನವನ ಹರಿಬಕೆ
ಭೂತಳೇಶನ ಕೆಣಕಿ ಕಂಡನು ವರ ಸುರವ್ರಜವ ೭೧

ಆರಿ ಹೊಕ್ಕುದು ಶಲ್ಯನೃಪಪರಿ
ವಾರ ಮಾದ್ರದ ನಾಯಕರು ಜು
ಜ್ಝಾರ ಮನ್ನೆಯ ಮಂಡಳಿಕ ಸಾಮಂತಸಂದೋಹ
ಭೂರಿಬಲ ಸಾಲ್ವನ ಭಟಾವಳಿ
ಯಾರುಭಟೆಯಲಿ ನೂಕಿದುದು ವಿ
ಸ್ತಾರಿಸಿತಲೈ ಧರ್ಮನಂದನನೊಡನೆ ಬಲುಸಮರ ೭೨

ಕೇಳಿದನು ಕುರುರಾಯ ಮಾದ್ರನೃ
ಪಾಲನವಸಾನವನು ಕರಸಿದ
ನಾಳು ಕುದುರೆಯ ರಥ ಮದೋತ್ಕಟ ಗಜಘಟಾವಳಿಯ
ಮೇಳವದ ಮೋಡಿಯಲಿ ರಥ ದು
ವ್ವಾಳಿಸಿತು ಘಡ ಪಾಂಡುತನುಜರ
ಸಾಲ ಹೊಯ್ ಹೊಯ್ಯೆನುತ ಹೊಕ್ಕನು ಲಳಿಯ ಲಗ್ಗೆಯಲಿ ೭೩

ರಾಯನೊಡನೆ ಸಮಸ್ತ ಬಲವಡು
ಪಾಯಲೌಕಿತ ಪಾರ್ಥ ಸಾತ್ಯಕಿ
ವಾಯುಸುತರಾಜಿಯಲಿ ಮೇಳೈಸಿತ್ತು ನೃಪಸೇನೆ
ಸಾಯಕದ ಸೂಠಿಗಳ ಸಬಳದ
ಪಾಯದಳ ರಥ ವಾಜಿ ಗಜಘಟೆ
ಲಾಯಶುದ್ಧದ ತೇಜಿ ಹೊಕ್ಕವು ವಾಘೆಸರಿಸದಲಿ ೭೪

ಥಟ್ಟನೊಡಹೊಯ್ದವನಿಪತಿ ಜಗ
ಜಟ್ಟಿಗಳ ಕೆಣಕಿದನು ನಕುಲನ
ನಟ್ಟಿದನು ಸಹದೇವನಡಹಾಯ್ದರೆ ವಿಭಾಡಿಸಿದ
ಬಿಟ್ಟ ಧೃಷ್ಟದ್ಯುಮ್ನನನು ಹಂಡಿ
ಗುಟ್ಟಿದನು ಸಾತ್ಯಕಿಯ ಜೋಡಿನ
ಲೊಟ್ಟಿದನು ಕೂರಂಬುಗಳನುಬ್ಬಿನಲಿ ಕುರುರಾಯ ೭೫

ಮರಳಿ ಪಂಚದ್ರೌಪದೇಯರ
ಪರಿಭವಿಸಿದನು ಧರ್ಮಪುತ್ರನ
ತೆರಳಿಚಿದ ಸಹದೇವ ನಕುಲರ ಮತ್ತೆ ಸೋಲಿಸಿದ
ವರ ಯುಧಾಮನ್ಯೂತ್ತಮೌಜರ
ಹೊರಳಿಸಿದನವನಿಯಲಿ ಭೀಮಾ
ದ್ಯರಿಗೆ ಭೀತಿಯ ಬೀರಿದನು ಬೇಸರದೆ ಕುರುರಾಯ ೭೬

ಕೆದರುತದೆ ನಮ್ಮವರ ದಳ ದೊರೆ
ಯಂದಟು ಸುಕ್ಕಿತು ರಾಯನೊಬ್ಬನೆ
ಕದನದಲಿ ಕೈದೋರಿ ಭಂಗಿಸಿದನು ಮಹಾರಥರ
ಹೊದರು ತಳಿತುದು ಲಗ್ಗೆವರೆ ಮೋ
ನದಲಿ ಮುಗುಳ್ದವು ಪಾರ್ಥ ದಿವ್ಯಾ
ಸ್ತ್ರದಲಿ ಕೈಮಾಡೆಂದು ನುಡಿದನು ವೀರನಾರಯಣ ೭೭

ಇತಿ ಶ್ರೀಮದಚಿಂತ್ಯಮಹಿಮ ಗದುಗು ವೀರನಾರಾಯಣ ಚರಣಾರವಿಂದ
ಮಕರಂದ ಮಧುಪಾನ ಪರಿಪುಷ್ಟ ವಚಃಪಟ್ಟದೀನಿಕಾಯ
ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತಮಪ್ಪ
ಕರ್ಣಾಟ ಭಾರತ ಕಥಾಮಂಜರಿಯೊಳ್
ಶಲ್ಯಪರ್ವ ಸಮಾಪ್ತಮಾದುದು

# ಗದಾ ಪರ್ವ

## ಮೊದಲನೆಯ ಸಂಧಿ

ಸೂ. ಶಲ್ಯನವಸಾನದಲಿ ಕೌರವ
ಮಲ್ಲ ದಳಪತಿಯಾಗಿ ರಣದಲಿ
ನಿಲ್ಲದಡಗಿದನಿತ್ತ ಸಂಜಯ ಬಂದನಾಹವಕೆ

ಕೇಳು ಧೃತರಾಷ್ಟ್ರಾವನಿಪ ಸಿರಿ
ಲೋಲಸಹಿತರ್ಜುನನು ಸೇನಾ
ಜಾಲವನು ಸಂತೈಸಿ ದೊರೆ ಸುಯ್ದಾನವೆಂದೆನುತ
ಆಳೊಡನೆ ಬೆರಸಿದನು ಕುರುಭೂ
ಪಾಲಕನ ಥಟ್ಟಿನಲಿ ಶಸ್ತ್ರ
ಜ್ವಾಲೆಗಳ ಕೆದರಿದನು ಹೊದರಿನ ಹಿಂಡ ಹರೆಗಡಿದ ೧

ಎಲವೊ ಕಪಟದ್ಯೂತಕೇಳೀ
ಕಲುಷಿತಾಂತಃಕರಣ ನಿನ್ನೀ
ಬಲಕೆ ಪತಿ ನೀನೊ ಕೃಪಾಚಾರಿಯನೊ ಗುರುಸುತನೊ
ಖಳ ಸುಶರ್ಮನೊ ಶಕುನಿಯೋ ನಿ
ನ್ನುಳಿದವೊಡವುಟ್ಟಿದರೊ ರಾಜಾ
ವಳಿಯೊಳಾರಳಲಿಗರೆನುತ ತೆಗೆದೆಚ್ಚನಾ ಪಾರ್ಥ ೨

ಅರಸ ಕೇಳೈ ಮೂರು ಸಾವಿರ
ಕರಿಘಟೆಗಳಿಪ್ಪತ್ತು ಸಾವಿರ
ತುರಗದಳ ರಥವೆರಡುಸಾವಿರ ಲಕ್ಷ ಕಾಲಾಳು
ಅರಸುಗಳು ಮೂನೂರು ನಿಂದುದು
ಕುರುಬಲದ ವಿಸ್ತಾರ ಕೌರವ
ಧರಣಿಪತಿಯೇಕಾದಶಾಕ್ಷೋಹಿಣಿಯ ಶೇಷವಿದು ೩

ಕರಿಘಟೆಗಳೈನೂರು ಮೂವ
ತ್ತೆರಡು ಸಾವಿರ ಪಾಯದಳ ಸಾ
ವಿರದ ನೂರು ವರೂಥ ವಂಗಡದವನಿಪರು ಸಹಿತ
ತುರುಕ ಬರ್ಬರ ಪಾರಸೀಕರ
ತುರಗವೈಸಾವಿರ ಸಹಿತ ಮೋ
ಹರಿಸಿ ನಿಂದನು ಶಕುನಿ ಥಟ್ಟಿನ ಬಲದ ಬಾಹೆಯಲಿ ೪

ನೂರು ರಥವಿನ್ನೂರು ಗಜವೈ
ನೂರು ಹಯವೈಸಾಸಿರದ ಮೂ
ನೂರು ಸುಭಟರು ಸಹಿತ ಮೋಹರದೆರಡು ಬಾಹೆಯಲಿ
ತೋರಿದರು ಕೃತವರ್ಮ ಕೃಪರೈ
ನೂರುಗಜ ಗುರುತನುಜ ಸಹಿತೀ
ಮೂರುದಳಕೊತ್ತಾಗಿ ನಿಂದನು ಕೌರವರರಾಯ ೫

ಕವಿದುದಿದು ದುವ್ವಾಳಿಸುತ ರಥ
ನಿವಹ ಬಿಟ್ಟವು ಕುದುರೆ ಸೂಠಿಯ
ಲವಗಡಿಸಿ ತೂಳಿದವು ಹೇರಾನೆಗಳು ಸಂದಣಿಸಿ
ಸವಡಿವೆರಳಲಿ ಸೇದುವಂಬಿನ
ತವಕಿಗರು ತರುಬಿದರು ಬಲುಬಿ
ಲ್ಲವರು ಮೊನೆಮುಂತಾಗಿ ಮೋಹಿತು ಮಿಕ್ಕ ಸಬಳಿಗರು ೬

ರಣ ಪರಿಚ್ಛೇದಿಗಳು ಮಿಗೆ ಸಂ
ದಣಿಸಿತೋ ಕುರುಸೇನೆ ವಾದ್ಯದ
ರಣಿತವದ್ರಿಯನೊದೆದುದದ್ಭುತ ಬೊಬ್ಬೆಗಳ ಲಳಿಯ
ಕುಣಿದವರ್ಜುನನುರುರಥದ ಮುಂ
ಕಣಿಯಲಾರೋಹಕರು ರಥ ಹಯ
ಹೆಣಗಿದವು ಹಯದೊಡನೆ ಕಂದದ ಖುರದ ಹೊಯ್ಲಿನಲಿ ೭

ಸುತ್ತುವಲಗೆಯ ಮೇಲೆ ಕಣೆಗಳ
ತೆತ್ತಿಸಿದರೀಚಿನಲಿ ಸಬಳಿಗ
ರೆತ್ತಿದರು ರಾವುತರು ಕೀಲಿಸಿದರು ರಥಧ್ವಜವ
ಮುತ್ತಿದವು ಗಜಸೇನೆ ಪಾರ್ಥನ
ತೆತ್ತಿಗರ ಬರಹೇಳು ವೇಢೆಯ
ಕಿತ್ತು ಮಗುಚುವರಾರೆನುತ ಮುಸುಕಿತ್ತು ಕುರುಸೇನೆ ೮

ಅರಸ ಕೇಳೈ ಬಳಿಕ ಪಾರ್ಥನ
ಕೆರಳಿಚಿದರೋ ಕಾಲರುದ್ರನ
ಸರಸವಾಡಿದರೋ ಪ್ರಚಂಡಪ್ರಳಯಭೈರವನ
ಪರಿಭವಿಸಿದರೊ ಲಯಕೃತಾಂತನ
ಕರೆದರೋ ಮೂದಲಿಸಿ ನಾವಿ
ನ್ನರಿಯೆವರ್ಜುನನೆಸುಗೆಯಭಿವರ್ಣನೆಯ ನಿರ್ಣಯವ ೯

ಎಡದಲೌಕಿದ ಭಟರನಾ ವಂ
ಗಡದ ರಾವ್ತರ ಸಮ್ಮುಖದೊಳವ
ಗಡಿಸಿದಾನೆಯ ಥಟ್ಟಿನಾ ತೇರುಗಳ ಸಮರಥರ
ಕಡಿದನೊಂದೇ ಸರಳಿನಲಿ ಚಿನ
ಕಡಿಗಳೆದು ರುಧಿರಾಂಬುರಾಶಿಯೊ
ಳಡಗಿಸಿದ ಚತುರಂಗಬಲವನದೊಂದು ನಿಮಿಷದಲಿ ೧೦

ಅಳಿದವಿನ್ನೂರಾನೆ ಸರಳ
ಚ್ಚಳಿಸಿದವು ಮೂನೂರು ಪುನರಪಿ
ಮಲಗಿದವು ನೂರಾನೆ ಕೆಡೆದವು ತಾರುಥಟ್ಟಿನಲಿ
ಬಳಿಕ ನೂರು ನಿರಂತರಾಸ್ತ್ರಾ
ವಳಿ ವಿಘಾತಿಗೆ ನೂರು ಲೆಕ್ಕವ
ಕಳೆದವಿನ್ನೂರಾನೆ ಪಾರ್ಥನ ಕೋಲ ತೋಹಿನಲಿ ೧೧

ರಥ ಮುರಿದುವೈನೂರು ತತ್ಸಾ
ರಥಿಗಳಳಿದುದು ನೂರು ಮಿಕ್ಕುದು
ರಥವನಿಳಿದೋಡಿದುದು ಸಮರಥರೆಂಟುನೂರೈದು
ಪೃಥವಿಗೊರಗಿದುವೆಂಟು ಸಾವಿರ
ಪೃಥುಳ ಹಯ ನುಗ್ಗಾಯ್ತು ಗಣನೆಯ
ರಥ ಪದಾತಿಯೊಳಿತ್ತಲೆನೆ ಸವರಿದನು ಪರಬಲವ ೧೨

ಒದೆದು ರಥವನು ಸೂತರಿಳಿದೋ
ಡಿದರು ಚಾಪವನಿಳುಹಿ ಸಮರಥ
ರೆದೆಯ ನೀವಿತು ದೂರದಲಿ ಕರಿಕಂಧರವನಿಳಿದು
ಕೆದರಿತಾರೋಹಕರು ವಿಕ್ರಮ
ವಿದಿತ ವಿಪುಳ ಪದಸ್ಥಭೂಪರು
ಹುದುಗಿತಲ್ಲಿಯದಲ್ಲಿ ಪಾರ್ಥನ ಸರಳ ಘಾತಿಯಲಿ ೧೩

ಬಿರುದ ಬಿಸುಟರು ಧ್ವಜದ ಕಂಬವ
ಹರಿಯ ಹೊಯ್ದರು ಕಾಲ ತೊಡರನು
ಧರೆಗೆ ಬಿಸುಟರು ಹಡಪ ಬಾಹಿಯ ಚಮರಧಾರಿಗರ
ದೊರೆಗಳುಳಿದರು ಬೆದರಿ ರಥದಲಿ
ಕರಿಗಳಲಿ ವಾರುವದಿನಿಳೆಗು
ಪ್ಪರಿಸಿದರು ಹರಹಿನಲಿ ಹಾಯ್ದರು ಹೊತ್ತ ದುಗುಡದಲಿ ೧೪

ಬೆದರಿ ಗಜ ಮುಂಡಾಸನದಲೋ
ಡಿದುವು ಚಮರೀಮೃಗದವೊಲು ಬಲು
ಗುದುರೆ ಹಾಯ್ದವು ಕಂದದಲಿ ಬಲುನೊಗನನಸಬಡಿದು
ಕುದುರೆಯೆಳೆದವು ಬರಿರಥವನೋ
ಡಿದ ಪದಾತಿಯ ಬಿಸುಟ ಕೈದುವ
ಹೊದೆದುದಿಳೆ ಕಳನಗಲದಲಿ ಕಂಡೆನು ಮಹಾದ್ಭುತವ ೧೫

ಮರಳಿ ವಾಘೆಯ ಕೊಂಡು ರಾವ್ತರು
ತಿರುಗಿದರು ಹಮ್ಮುಗೆಯ ನೇಣ್ಗಳ
ಹರಿದು ಹಕ್ಕರಿಕೆಗಳ ಬಿಸುಟರು ಹಾಯ್ಕಿ ಖಂಡೆಯುವ
ಬಿರುದ ಸಂಭಾಳಿಸುವ ಭಟ್ಟರ
ನಿರಿದರಾರೋಹಕರು ಕರಿಗಳ
ತಿರುಹಿ ಗುಳ ರೆಂಚೆಗಳ ಕೊಯ್ದೀಡಾಡಿದರು ನೆಲಕೆ ೧೬

ರಾಯ ಕೇಳೈ ಬಲದ ಬಾಹೆಯ
ನಾಯಕರು ಜಾರಿದರು ವಾಮದ
ಜೇಯ ಸುಭಟರು ಸಿಡಿದು ತರಹರಿಸಿದರು ದೂರದಲಿ
ರಾಯ ಕಂಡನು ಬಳಿಕ ಬಲದ ಪ
ಲಾಯನದ ಪರಿವಿಡಿಯನಸುವಿನ
ಬೀಯಕಿವರಂಜಿದರೆನುತ ಮೂದಲಿಸಿದನು ನೃಪರ ೧೭

ಎಲೆ ಮಹೀಪತಿಗಳಿರ ಪುಣ್ಯ
ಸ್ಥಳ ಕುರುಕ್ಷೇತ್ರವು ಮಹಾಸ
ತ್ಕುಲದೊಳಗೆ ಜನನವು ನಿಮಗೆ ವೀರಕ್ಷತ್ರಿಯೋತ್ತಮರು
ಅಳುಕದಂಘೈಸಿದಡೆ ಸುರಸಂ
ಕುಲದ ಸೇರುವೆ ತಪ್ಪಿದರೆ ನೀ
ವಳಿವಿರೈ ಕೌರವದೊಳಾವುದು ಲಾಗು ನಿಮಗೆಂದ ೧೮

ವೀರಮಾತೆಯರೆಂದು ತಾಯ್ಗಳ
ನಾರು ಕೊಂಡಾಡುವರು ಸತಿಯರು
ವೀರಪತ್ನಿಯರೆಂದು ನುಡಿವರೆ ನಿಮ್ಮ ರಾಣಿಯರ
ವೀರಸಿರಿ ನಿಮಗೆಂದು ವಂದಿಗ
ಳೋರೆ ಕಟಕಿಯಲೆನ್ನರೇ ಕೈ
ವಾರಿಸುವ ಕವಿನಿಕರ ನಾಚದೆ ಶಿವಶಿವಾ ಎಂದ ೧೯

ಸೆರೆನರದ ದರ್ಭೆಗಳ ಮಿದುಳಿನ
ಚರುವಿನೆಲುವಿನ ಸಮಿಧೆಗಳ ಬಿಲು
ದಿರುರವದ ಚತುರಂಗರಭಸದ ಸಾಮವೇದಿಗಳ
ಅರುಣಜಲದಾಜ್ಯದ ಸ್ರುವಾದಿಯ
ಶಿರಕಪಾಲದ ವೈರಿಪಶುಬಂ
ಧುರದ ಸಂಗರಯಜ್ಞದೀಕ್ಷೆಯ ಮರೆದಿರಕಟೆಂದ ೨೦

ಇಲ್ಲಿ ಮನುಜಸ್ತ್ರೀಯ ಮೇಳವ
ವಲ್ಲಿ ಸುರನಾರಿಯರ ರತಿ ನಿವ
ಗಿಲ್ಲಿ ಭೌಮವಿಭಿನ್ನರಸ ಪೀಯೂಷರಸವಲ್ಲಿ
ಇಲ್ಲಿಯಧ್ರುವ ವಿಭವವಮರತೆ
ಯಲ್ಲಿ ಕಿಲ್ಬಿಷವಿಲ್ಲಿ ಶಿವಮಯ
ವಲ್ಲಿ ನೀವಿಂದೇನ ನೆನೆದಿರಿ ಶಿವಶಿವಾ ಎಂದ ೨೧

ಆವ ಭವದಲಿ ನಿಮ್ಮ ರಾಜ್ಯವ
ದಾವ ಭವದಲಿ ಪುತ್ರಮಿತ್ರರ
ದಾವ ಜನ್ಮಂಗಳ ಸಮಾಗಮ ನಿಮ್ಮ ರಾಣಿಯರು
ಈ ವಿಡಂಬನ ದೈಹಿಕವ ಸಂ
ಭಾವಿಸುತ ಪರಲೋಕಹಿತವನು
ನೀವು ನೆನೆಯದೆ ಕೆಟ್ಟುದಕೆ ಬೆರಗಾದೆ ನಾನೆಂದ ೨೨

ನೃಪನ ಮೂದಲೆ ನಿಜಕುಲಕ್ರಮ
ಕಪಯಶೋಭಯ ಪಾರಲೌಕಿಕ
ದುಪಹತಿ ಪ್ರತಿಭಟರ ನಗೆ ಸೌಭಟಪರಿತ್ಯಾಗ
ಕೃಪಣತೆಯ ದುಷ್ಕೀರ್ತಿ ಭುಜಬಲ
ದಪದಶಾವಿರ್ಭಾವವೀ ಭೂ
ಮಿಪರ ಮರಳಿಚಿತೇನನೆಂಬೆನು ಭೂಪ ಕೇಳೆಂದ ೨೩

ಕರೆದರೊಬ್ಬರನೊಬ್ಬರುರೆ ಧಿ
ಕ್ಕರಿಸಿದರು ತಮ್ಮೊಬ್ಬರೊಬ್ಬರ
ಬಿರುದ ಹಿಡಿದರು ಬಯ್ದರಪಮಾನಾನುತಾಪದಲಿ
ತಿರುಗಹೇಳೋ ರಾವುತರ ರಥಿ
ಕರ ಗಜಾರೋಹಕರನೆಂದ
ಬ್ಬರಿಸಿ ಚೌರಿಯ ಬೀಸಿ ಮರಳಿತು ಭೂಪತಿವ್ರಾತ ೨೪

ವಾರುವಂಗಳ ಬಿಗುಹನೇರಿಸಿ
ವಾರಣಂಗಳ ಗುಳವ ಜೋಡಿಸಿ
ತೇರುಗಳ ಕೀಲಚ್ಚು ಕೂಬರಯುಗವನಾರೈದು
ವೀರಪಟ್ಟವ ರಚಿಸಿ ಕಂಕಣ
ದಾರವನು ಕಟ್ಟಿದರು ಸಂಗರ
ವೀರಸಿರಿಯ ವಿವಾಹಸಮಯದ ಸೌಮನಸ್ಯದಲಿ ೨೫

ಧೂಪಿಸಿದ ಬಿಳಿದುಗುಳನುಟ್ಟನು
ಲೇಪನಂಗಳ ಹೂಸಿ ಮಧುರಾ
ಳಾಪದಲಿ ಬೋಳೈಸಿ ಸಾರಥಿ ಗಜ ಹಯಾವಳಿಯ
ಭೂಪತಿಯ ರಣಯಜ್ಞಮುಖಕೆ ನಿ
ಜಾಪಘನಪೂರ್ಣಾಹುತಿಯಲೇ
ಶ್ರೀಪತಿಯ ಸಾಯುಜ್ಯವೆನುತಿದಿರಾಯ್ತು ನೃಪಕಟಕ ೨೬

ಅರಿಯಬಹುದೈ ಭಾವಮೈದನ
ಮೆರೆದ ಭುಜಾಟೋಪವನು ಹಿಂದಣ
ಕೊರತೆಯನು ಕಳೆ ಮಗನೆ ಬೊಪ್ಪಕುಲಕ್ರಮಾಗತವ
ಮುರಿಯದಿರು ಮುಂಗಲಿತನಕೆ ತಾ
ನಿರಿವೆ ನಾ ಮುನ್ನೆಂದು ತಮ್ಮೊಳು
ಜರೆದರೊಡವುಟ್ಟಿದರು ಬಾಂಧವ ಮಿತ್ರ ಭೂಮಿಪರು ೨೭

ನೂಕಿತೊಂದೇ ವಾಘೆಯಲಿ ಹಯ
ನಾಕು ಸಾವಿರ ರಥದ ಜೋಡಿಯ
ಜೋಕೆ ಕವಿದುದು ಮೂರು ಸಾವಿರ ರಾಜಪುತ್ರರಲಿ
ತೋಕುವಂಬಿನ ಜೋದರೊಗ್ಗಿನೊ
ಳೌಕಿದವು ಸಾವಿರ ಮದೇಭಾ
ನೀಕ ಬೊಬ್ಬೆಯ ಲಳಿಯಲೌಕಿತು ಲಕ್ಕ ಪಾಯದಳ ೨೮

ಸುರಿದುದಂಬಿನ ಸೋನೆ ರಥಿಕರ
ಕರಿಘಟೆಯ ಥಟ್ಟಿಂದ ಕಕ್ಕಡೆ
ಪರಶು ಶೂಲ ಮುಸುಂಡಿ ಸೆಲ್ಲೆಹ ಸಬಳ ಶಕ್ತಿಗಳು
ಅರಿಬಲಾಬ್ಧಿಯನೀಸಿದವು ತ
ತ್ತುರಗ ರಥವನು ಬೀಸಿದವು ಮದ
ಕರಿಗಳಿಕ್ಕಡಿಘಾಯಕೊದಗಿತು ರಾಯರಾವುತರು ೨೯

ನೆರೆ ಪರಿಚ್ಛೇದಿಸಿದ ಬಲ ಮುಂ
ಕ್ಕರಿಸಿತೋ ನಿಜಸೈನ್ಯಸಾಗರ
ಬರತುದೋ ಬಲುಗೈಗಳೆದೆಗಳ ಕೆಚ್ಚು ಕರಗಿತಲಾ
ಮುರಿದು ಬರುತಿದೆ ಸೃಂಜಯರು ಕೈ
ಮುರಿದರೇ ಪಾಂಚಾಲಭಟರೆಂ
ದೊರಲಿದುದು ಮಂತ್ರಿಗಳು ರಾಯನ ರಥದ ಬಳಸಿನಲಿ ೩೦

ಅರಸ ಕೇಳು ಯುಧಿಷ್ಠಿರನ ಮೇ
ಲುರವಣಿಸಿತೀ ಸೇನೆ ಭೀಮನ
ಬಿರುದ ತಡೆದವು ಸಾವಿರಾನೆಗಳೊಂದು ಬಾಹೆಯಲಿ
ಅರರೆ ರಾವುತೆನುತ್ತ ಕವಿದುದು
ತುರಗ ಸಾವಿರ ನಕುಲ ಸಹದೇ
ವರಿಗೆ ಸಾತ್ಯಕಿಗಾಗಿ ಬಿಟ್ಟನು ರಥವನಾ ದ್ರೌಣಿ ೩೧

ರಾಯವಳವಳೆ ಚಾತುರಂಗವ
ಜೀಯ ಬೆದರಿಸಿತವಟರನು ಬಲು
ನಾಯಕರಿಗಿದಿರೊಡ್ಡಿದರು ಕೃಪ ಭೋಜ ಗುರುಸುತರು
ಆಯಿತೀ ರಣವೆನುತ ಪಾಂಡವ
ರಾಯ ಹೊಕ್ಕನು ಬಳಿಕಲಾ ಕ
ರ್ಣಾಯತಾಸ್ತ್ರನು ಕಂಡನರ್ಜುನನಾ ಮಹಾದ್ಭುತವ ೩೨

ಮೇಲುಲೋಕವ ಬಯಸಿ ಕುರುಬಲ
ಮೇಲೆ ಬಿದ್ದುದು ಜೀಯ ಜಡಿದು ನೃ
ಪಾಲನೇಕಾಂಗದಲಿ ಹೊಕ್ಕನು ಹೊದರನೊಡೆಬಡಿದು
ಮೇಲುದಾಯದಲವನಿಪನ ಸಂ
ಭಾಳಿಸುವೆನೆನೆ ನಗುತ ಲಕ್ಷ್ಮೀ
ಲೋಲ ಚಪ್ಪರಿಸಿದನು ನರನುದ್ದಂಡವಾಜಿಗಳ ೩೩

ಅರಸ ಕೇಳೈ ನಿಮಿಷದಲಿ ನೃಪ
ವರನ ರಥದಿಂದ ಮುನ್ನ ಪಾರ್ಥನ
ತಿರುವಿನಬ್ಬರ ಕೇಳಲಾದುದು ಕಳನ ಚೌಕದಲಿ
ಅರರೆ ದೊರೆಯೋ ಕೊಳ್ಳಿವನ ಕೈ
ಮರೆಯದಿರಿ ಕುರುಧರಣಿಪನ ಹಗೆ
ಹರಿಯಲೆಂದುರವಣಿಸಿ ಕವಿದುದು ಕೂಡೆ ಕುರುಸೇನೆ ೩೪

ಮೋಹಿದವು ಭರಿಕೈಗಳನು ರಥ
ವಾಹತತಿಗಾನೆಗಳು ವಂಶ
ದ್ರೋಹಿ ಸಿಲುಕಿದನೆನುತ ತಡೆದರು ರಥಿಕರೆಡಬಲನ
ಗಾಹಿಸಿತು ದೂಹತ್ತಿ ಲೌಡೆಯ
ರಾಹುತರು ಕಟ್ಟಳವಿಯಲಿ ಕವಿ
ದೋಹಡಿಸದೌಂಕಿತು ಪದಾತಿ ಧನಂಜಯನ ರಥವ ೩೫

ಏನನೆಂಬೆನು ಜೀಯ ಕುರುಬಲ
ದಾನೆಗಳ ವಿಕ್ರಮವನತಿರಥ
ರೇನ ನಿಲುವರು ಕೆಲಬಲನ ಚತುರಂಗದುಪಹತಿಗೆ
ಭಾನುಮಂಡಲವಕಟ ತಿಮಿರಾಂ
ಭೋನಿಧಿಯಲಕ್ಕಾಡಿತೆಂಬವೊ
ಲಾ ನಿರಂತರದ ದಳದ ಥಟ್ಟಣೆ ಧೂಳಿಪಟವಾಯ್ತು ೩೬

ಮುಂಕುಡಿಯ ಹಿಡಿದಾನೆಗಳನೆಡ
ವಂಕಕೌಕಿದ ರಥಚಯವ ಬಲ
ವಂಕಕೊತ್ತಿದ ರಾವುತರನುಬ್ಬೆದ್ದ ಪಯದಳವ
ಶಂಕೆಯನು ನಾ ಕಾಣೆ ಬಲನೆಡ
ವಂಕವನು ತರಿದೊಟ್ಟಿದನು ಮಾ
ರಂಕ ನಿಲುವುದೆ ಪಾರ್ಥ ಮುನಿದಡೆ ಭೂಪ ಕೇಳೆಂದ ೩೭

ಉಡಿಯೆ ಮೋರೆಯ ಜೋಡು ಜೋದರ
ಕೊಡಹಿ ಹಾಯ್ದವು ದಂತಿಘಟೆ ಖುರ
ಕಡಿವಡಿಯೆ ಕುದುರೆಗಳು ಹಾಯ್ದವು ಹಾಯ್ಕಿ ರಾವುತರ
ಮಡಿಯೆ ಸಾರಥಿ ಮುಗ್ಗಿದವು ರಥ
ನಡೆದು ಕಾದಿ ಮಹಾರಥರು ಮಡಿದೆ
ಗೆಡೆದುದುಳಿದ ಪದಾತಿಪತನವರಿಯೆ ನಾನೆಂದ ೩೮

ಕರಿಘಟೆಗಳೈನೂರು ರಥ ಸಾ
ವಿರದ ಮೂನೂರೆರಡು ಸಾವಿರ
ತುರಗದಳವೆಂಬತ್ತು ಸಾವಿರ ವಿಗಡ ಪಾಯದಳ
ತೆರಳಿತಂತಕಪುರಿಗೆ ಪುನರಪಿ
ತುರಗ ಸಾವಿರ ನೂರು ರಥ ಮದ
ಕರಿಗಳಿನ್ನೂರೆಂಟು ಸಾವಿರಗಣಿತ ಪಾಯದಳ ೩೯

ಮತ್ತೆ ಮೇಲೊಡಗವಿದ ನೂರರು
ವತ್ತು ಗಜ ರಥಯೂಥ ನೂರಿ
ಪ್ಪತ್ತು ಮೂನೂರಶ್ವಚಯ ಸಾವಿರದ ನಾನೂರು
ಪತ್ತಿ ಮರಳೈವತ್ತು ಗಜ ಮೂ
ವತ್ತು ಶರವಿನ್ನೂರು ಹಯವರು
ವತ್ತು ನಾನೂರಿಂದ ಮೇಲಾಯ್ತುಳಿದ ಪಾಯದಳ ೪೦

ಬಿರುದುಪಾಡಿನ ಭಾಷೆಗಳ ನಿ
ಷ್ಠುರದ ನುಡಿಗಳ ರಾಜವರ್ಗದ
ಮರಳುದಲೆಯನೆ ಕಾಣೆನರ್ಜುನನಾಹವಾಗ್ರದಲಿ
ಹರಿವ ರಕುತದ ತಳಿತ ಖಂಡದ
ಶಿರದ ಹರಹಿನ ಕುಣಿವ ಮುಂಡದ
ಕರಿ ತುರಗ ಪಯದಳದ ಹೆಣಮಯವಾಯ್ತು ರಣಭೂಮಿ ೪೧

ಮುರಿದುದೆಡಬಲವಂಕ ಪಾರ್ಥನ
ತರುಬಿದನು ನಿನ್ನಾತ ಸೈರಿಸಿ
ಹರಿದಳವ ಕೂಡಿದನು ಕಲಿಮಾಡಿದನು ಕಾಲಾಳ
ಒರಲಿದವು ಬಹುವಿಧದ ವಾದ್ಯದ
ಬಿರುದನಿಗಳುಬ್ಬೆದ್ದು ಮಾರಿಯ
ಸೆರಗ ಹಿಡಿದನು ಕೌರವೇಶ್ವರನರ್ಜುನನ ಕೆಣಕಿ ೪೨

ಕೊಲುವಡನುಚಿತವಿಂದು ಭೀಮಗೆ
ಕಳೆದ ಮೀಸಲು ನಿನ್ನ ತನು ನೀ
ನೊಲಿದ ಪರಿಯಿಂದೆಸು ವಿಭಾಡಿಸು ರಚಿಸು ಭಾಷೆಗಳ
ಅಳುಕಿದೆವು ನಿನಗೆಂದು ರಾಯನ
ಬಳಿಯ ಜೋದರ ರಾವುತರ ರಥಿ
ಗಳ ಪದಾತಿಯನಿಕ್ಕಿದನು ಸೆಕ್ಕಿದನು ಸರಳುಗಳ ೪೩

ಜನಪ ಕೇಳೈ ನಿನ್ನ ಮಗನ
ರ್ಜುನನನೆಚ್ಚನು ಫಲುಗುಣಾಸ್ತ್ರವ
ಚಿನಕಡಿದು ಮುಗುಳೆಚ್ಚು ಪಾರ್ಥನೊಳೇರ ತೋರಿಸಿದ
ಮನದ ಮದ ಮೀರಿತು ಕಿರೀಟಿಯ
ಮೊನೆಗಣೆಯ ಮನ್ನಿಸದೆ ದುರ್ಯೋ
ಧನನು ದುವ್ವಾಳಿಸಿದನವನೀಪತಿಯ ಮೋಹರಕೆ ೪೪

ಅರಸುಮೋಹರ ಸಿಲುಕಿದುದು ದೊರೆ
ಬೆರಸಿ ಹೊಯ್ದನು ಬೇಹ ಸುಭಟರು
ಮರಳಿಯೆನೆ ಮುಂಚಿದರು ಪಂಚದ್ರೌಪದೀಸುತರು
ಧರಣಿಪತಿಯು ವಿಘಾತಿಗೊಪ್ಪಿಸಿ
ಶಿರವನೆನುತಂಬ್ಬೆದ್ದು ಪಾಂಚಾ
ಲರು ಪ್ರಬುದ್ಧಕ ಸೃಂಜಯರು ರಂಜಿಸಿತು ಜೂಣಿಯಲಿ ೪೫

ಇತ್ತ ಪಡಿಬಲವಾಗಿ ಸಾವಿರ
ಮತ್ತಗಜಘಟೆ ಕೌರವೇಂದ್ರನ
ತೆತ್ತಿಗರ ತೂಳಿದರು ಪಾಂಚಾಲಪ್ರಬುದ್ಧಕರ
ಹತ್ತು ಸಾವಿರ ಪಾಯದಳ ಹೊಗ
ರೆತ್ತಿದಲಗಿನ ಹೊಳಹಿನಂತಿರೆ
ಮುತ್ತಿತವನೀಪತಿಯ ಮೋಹರದೆರಡು ಬಾಹೆಯಲಿ ೪೬

ನೂರುರಥದಲಿ ಬಲುಗುದುರೆ ನಾ
ನೂರರಲಿ ಕುರುರಾಯ ಸೂರಿಯ
ಲೇರಿದನು ಧರ್ಮಜನ ದಳ ನುಗ್ಗಾಯ್ತು ನಿಮಿಷದಲಿ
ವೀರಿದವು ಗಜಘಟೆಗಳಾವೆಡೆ
ತೋರು ದೊರೆಗಳನೆನುತ ಬೊಬ್ಬಿರಿ
ದೇರಿಸಿದರರಿಭಟರು ನೃಪತಿಗೆ ಜೋದರಂಬುಗಳ ೪೭

ಏನು ಹೇಳುವೆನವನಿಪತಿ ಯಮ
ಸೂನುವಿನ ಸುಕ್ಷಾತ್ರವನು ನಿ
ನ್ನಾನೆಗಳನಗ್ಗಳಿಯ ರಾವುತರ ರಥಪದಾತಿಗಳ
ಭಾನುಬಿಂಬವ ತೆಗೆವ ತಮದ ವಿ
ತಾನದಂತಿರೆ ವಿರಸವಾಯ್ತು ಶ
ರಾನುಗತಶರಜಾಲ ಜನದ ವಿಡಾಯ್ಲತನವೆಂದ ೪೮

ಆಳ ಕೊಂದನು ನೂರ ಪುನರಪಿ
ಸೀಳಿದನು ಮೂನೂರನುಕ್ಕಿನ
ಬೋಳೆಯಂಬಿಗೆ ಬೀರಿದನು ನಾಲ್ಕೈದು ಸಾವಿರವ
ಮೇಲೆ ಮೂಸಾವಿರದ ಸವಡಿಯ
ಸೀಳಿಸಿದನಿನ್ನೂರು ಕುದುರೆಗೆ
ಕಾಲನೂರಲಿ ಲಾಯ ನೀಡಿತು ನೃಪತಿ ಕೇಳೆಂದ ೪೯

ಚೆಲ್ಲಿದವು ರಥ ಗಾಲಿ ಮುರಿದವು
ಗೆಲ್ಲಗೆಡೆದವು ಕೂಡೆ ಕಂಬುಗೆ
ಯಲ್ಲಿ ಕಾಣೆನು ಕೊಚ್ಚಿದಚ್ಚಿನ ಕಡಿದ ಕೀಲುಗಳ
ಎಲ್ಲಿಯವು ರಥವಾಜಿ ವಾಜಿಗೆ
ತೆಲ್ಲಟಿಯಲೇ ರಥಿಕ ಸೂತರು
ಬಲ್ಲಿದರು ಕುರುಳಿಂಗೆ ಹಾಯ್ದರು ಸುರರ ಸೂಳೆಯರ ೫೦

ಉಳಿಗಡಿಯ ನಾನೂರು ಕುದುರೆಗ
ಳಳಿದವರಸನ ಶರಹತಿಗೆ ಮು
ಮ್ಮುಳಿತವಾದುದು ಹತ್ತು ಸಾವಿರ ವಿಗಡ ಪಾಯದಳ
ಕಳಚಿ ಕೆಡೆದವು ನೂರು ರಥ ವೆ
ಗ್ಗಳೆಯತನವರಿರಾಯರಲಿ ಹೆ
ಕ್ಕಳಿಸೆ ಕಳವಳಿಸಿದನು ಕೌರವರಾಯ ಖಾತಿಯಲಿ ೫೧

ಜೋಡಿಸಿದ ಸಾವಿರ ಗಜಂಗಳ
ನೀಡಿರಿದರಂಕುಶದಿ ನೆತ್ತಿಯ
ತೋಡಿಬಿಟ್ಟರು ನೃಪನ ಮತದಲಿ ದೊರೆಯ ಸಮ್ಮುಖಕೆ
ಜೋಡಿಸಿದ ಭರಿಕಯ್ಯ ಪರಿಘದ
ಲೌಡಿಗಳ ಪಟ್ಟೆಯದಲೊಬ್ಬುಳಿ
ಗೂಡಿ ತೂಳಿದವಾನೆಗಳು ಯಮಸುತನ ಪಡಿಮುಖಕೆ ೫೨

ಎಲೆಲೆ ಭೂಪತಿ ಸಿಕ್ಕಿದನು ಗಜ
ಬಲದ ಭಾರಣೆ ಬಲುಹೆನುತ ಬಲ
ಕಳವಳಿಸೆ ಕೇಳಿದನಲ್ಲೆ ಕಲಿಭೀಮನಾಟಿಯಲಿ
ಪ್ರಳಯ ದಿವಸದ ಶಿಖಿಯ ಡಾವರ
ದೊಳಗೆ ಶ್ರಮಮಾಡಿದನೆನಲು ಮಿಗೆ
ಮೊಳಗಿ ಮಂಡಿಯನಿಕ್ಕಿ ಮಲೆತನು ಸಿಂಹನಾದದಲಿ ೫೩

ಚೆಲ್ಲಿದವು ಗಜಯೂಥವಪ್ರತಿ
ಮಲ್ಲ ಭೀಮನ ಗದೆಯ ಘಾತಿಯ
ಘಲ್ಲಣೆಗೆ ಕಂಠಣೆಸಿದವು ಟೆಂಠಣೆಸುವಾನೆಗಳು
ಸೆಲ್ಲೆಹದ ಮಳೆಗರೆದು ಭೀಮನ
ಘಲ್ಲಿಸಿದರಾರೋಹಕರು ಬಲು
ಬಿಲ್ಲ ಜಂತ್ರದ ನಾಳಿಯಂಬಿನ ಸರಳ ಸಾರವಲಿ ೫೪

ಜನಪ ಕೇಳೈ ಜಡಿವ ತಂತು
ವರ್ಣಿಗಳನು ಬಿರುಗಾಳಿ ಮೊಗೆವವೊ
ಲನಿತು ಸೆಲ್ಲಹ ಶರವಳೆಯ ಗದೆಯಿಂದ ಘಟ್ಟಿಸಿ
ಜಿನುಗುವಳೆಯಲಿ ಪರ್ವತದ ಶಿಲೆ
ನೆನೆವುದೇ ಗಜಸೇನೆ ಕದಳೀ
ವನವಲೇ ಕಲಿಭೀಮದಿಗ್ಗಜ ಗಾಢ ಪದಹತಿಗೆ ೫೫

ಅವನಿಪನ ಹಿಂದಿಕ್ಕಿ ಗಜಯೂ
ಥವ ವಿಭಾಡಿಸಿ ಹಿಂಡ ಕೆದರಿದ
ನವಗಡಿಸಿದನು ಹಾರಲೂದಿದನೊದೆದು ಬೊಬ್ಬಿರಿದ
ತಿವಿದನಣಸಿನಲೂರಿ ಮೊನೆಯಲಿ
ಸವಡಿಯಾನೆಯನೆತ್ತಿದನು ಬಲ
ಬವರಿಯೆಡಬವರಿಯಲಿ ತಡೆಗಾಲ್ವೊಯ್ದನಾ ಭೀಮ ೫೬

ಒರಲಿ ತಿವಿದನು ಕರಿಯ ಬರಿಯೆಲು
ಮುರಿಯಲೊದೆದನು ಸದೆದು ದಾಡೆಯ
ತಿರುಹಿ ಕಿತ್ತನು ಬಿಕ್ಕಿದನು ಬಿದುವಿನಲಿ ಬಲುಗದೆಯ
ಜರೆದನಾರೋಹಕರ ತಲೆಗಳ
ತರಿದು ಬಿಸುಟನು ಗಜಘಟೆಯ ಥ
ಟ್ಟೊರಗಿದವು ದಡಿಸಹಿತ ನವರುಧಿರಾಂಬುಪೂರದಲಿ ೫೭

ಗುಳವನುಗಿದಾರೋಹಕರ ಮುಂ
ದಲೆಯ ಸೆಳೆದೊಡಮೆಟ್ಟಿದನು ಮುಂ
ದಳಿಸಿದೊಡ್ಡಿನ ಮೇಲೆ ಹಾಯ್ದನು ಹೊಯ್ದನುರವಣಿಸಿ
ಕಳಚಿದನು ದಾಡೆಗಳ ಭರಿಕೈ
ಗಳನು ತುಂಡಿಸಿ ವಾಲಧಿಯ ಬರ
ಸೆಳೆದು ಕೊಡಹಿದನಾನೆಗಳ ನಾನಾವಿಧಾನದಲಿ ೫೮

ಕೋಡ ಕಿತ್ತನು ನೂರು ಗಜವ ವಿ
ಭಾಡಿಸಿದನಿನ್ನೂರನಡಹಾ
ಯ್ದೋಡಿದವು ನೂರಾನೆ ಭೀಮನ ಗದೆಯ ಗಾಳಿಯಲಿ
ಜೋಡಿಗೆಡೆದವು ನೂರು ಮಗ್ಗುಲ
ನೀಡಿದವು ನಾನೂರು ಪುನರಪಿ
ಕೇಡುಗಂಡವು ನೂರು ಭೀಮನ ಗದೆಯ ಘಾಯದಲಿ ೫೯

ಧರಣಿಪತಿ ಕೇಳ್ ಭೀಮಸೇನನ
ಧರಧುರದ ದೆಖ್ಖಾಳದಲಿ ನ
ಮ್ಮರಸ ನಿಂದನು ಕಾದಿದನು ನೂರಾನೆಯಲಿ ಮಲೆತು
ಸರಳ ಸಾರದಲನಿಲಜನ ರಥ
ತುರಗವನು ಸಾರಥಿಯನಾತನ
ಭರವಸವ ನಿಲಿಸಿದನು ನಿಮಿಷಾರ್ಧದಲಿ ಕುರುರಾಯ ೬೦

ಒದೆದು ರಥವನು ಧರೆಗೆ ಧುಮ್ಮಿ
ಕ್ಕಿದನು ಕೌರವರಾಯ ಮೈದೋ
ರಿದೆಯಲಾ ಕಲಿಯಾಗು ಪಾಲಿಸದಿರು ಪಲಾಯನವ
ರದನಿಗಳ ರೌದ್ರಾಹವಕೆ ಕೋ
ವಿದನಲೇ ಕೊಳ್ಳೆನುತ ಕರಿಗಳ
ಕೆದರಿದನು ಕಲಿಜೋದರಂಬಿನ ಸರಿಯ ಸೈರಿಸುತ ೬೧

ಏನ ಹೇಳುವೆನವನಿಪನ ಮದ
ದಾನೆ ಮುರಿದವು ಭೀಮಸೇನನೊ
ವೈನತೇಯನೊ ಕರಿಗಳೋ ಕಾಳೋರಗನ ದಳವೊ
ಮಾನನಿಧಿ ಮುರಿವಡೆದನೈ ವೈ
ರಾನುಬಂಧದ ಬೇಗುದಿಯ ದು
ಮ್ಮಾನ ದಳವೇರಿದುದು ಹೇರಿತು ಭೀತಿ ಭೂಪತಿಗೆ ೬೨

ನೂರು ಗಜವಕ್ಕಾಡಲವನಿಪ
ನೇರಿದನು ವಾರುವನನೆಡದಲಿ
ಜಾರಿದನು ಸೂಠಿಯಲಿ ದುವ್ವಾಳಿಸಿ ತುರಂಗಮವ
ಆರು ಸಾವಿರ ಕುದುರೆ ರಥವೈ
ನೂರು ಗಜಘಟೆ ನೂರು ಮೂವ
ತ್ತಾರು ಸಾವಿರ ಪಾಯದಳದಲಿ ಬಂದನಾ ಶಕುನಿ ೬೩

ಶಕುನಿ ಕಂಡನು ಕೌರವೇಂದ್ರನ
ನಕಟ ನೀನೇಕಾಂಗದಲಿ ಹೋ
ರಿಕೆಗೆ ಬಂದೈ ಗರುವ ಗುರುಸುತ ಭೋಜ ಗೌತಮರು
ಸಕಲಬಲ ನುಗ್ಗಾಯ್ತು ಸಮಸ
ಪ್ತಕರು ನಿನ್ನಯ ಮೂಲಬಲವಿದೆ
ವಿಕಳನಾಗದಿರೆಂದು ಸಂತೈಸಿದನು ಕುರುಪತಿಯ ೬೪

ದಳಪತಿಯು ಪವಡಿಸಿದನರಸನ
ಸುಳಿವು ಸಿಲುಕಿತು ಭಯದ ಬಲೆಯಲಿ
ಮೊಳಗುತದೆ ನಿಸ್ಸಾಳ ಸುಮ್ಮಾನದಲಿ ರಿಪುಬಲದ
ಉಳಿದರೋ ಗುರುಸೂನು ಕೃಪರೇ
ನಳಿದರೋ ಪಾಳೆಯದೊಳಗೆ ರಥ
ವಿಳಿದರೋ ತಾನೇನೆನುತ ಚಿಂತಿಸಿತು ಕುರುಸೇನೆ ೬೫

ಕೂಡೆ ಹರಿಹಂಚಾದ ಸುಭಟರು
ಕೂಡಿಕೊಂಡುದು ನೊಂದು ನಸಿದವ
ರೋಡಿದವರೊಗ್ಗಾಯ್ತು ಕುರುರಾಯನ ಪರೋಕ್ಷದಲಿ
ನೋಡಲಹುದಾಹವದೊಳಗೆ ಕೈ
ಮಾಡಿಸಿದ ವಸುಧಾಂಗನೆಗೆ ಬೆಲೆ
ಮಾಡುವುದು ಮತವೆಂದು ಕವಿದುದು ಮತ್ತೆ ಕುರುಸೇನೆ ೬೬

ಬಿಡದಲಾ ಕುರುಸೈನ್ಯ ಹಕ್ಕಲು
ಗಡಿಯ ಭಟರೊಗ್ಗಾಯ್ತಲಾ ದೊರೆ
ಮಡಿದನೋ ಬಳಲಿದನೊ ಮಿಗೆ ಪೂರಾಯಘಾಯದಲಿ
ಪಡೆಯ ಜಂಜಡ ನಿಲಲಿ ಕೌರವ
ರೊಡೆಯನಾವೆಡೆ ನೋಡು ನೋಡೆಂ
ದೊಡನೊಡನೆ ಪವಮಾನಸುತನರಸಿದನು ಕುರುಪತಿಯ ೬೭

ಅರಸ ಕೇಳ್ಳೆ ಕೌರವೇಂದ್ರನ
ನರಸುತರ್ಜುನ ಭೀಮ ಸಾತ್ಯಕಿ
ಧರಣಿಪತಿ ಸಹದೇವ ನಕುಲರು ಕೂಡೆ ಕಳನೊಳಗೆ
ತಿರುಗಿದರು ಬಳಿಕಿತ್ತಲೀ ಪೋ
ಹರವ ಧೃಷ್ಟದ್ಯುಮ್ನ ಸೃಂಜಯ
ರೊರಸಿದರು ನಿಶ್ಶೇಷ ಕೌರವನೃಪಚತುರ್ಬಲವ ೬೮

ಧರಣಿಪತಿ ಕೇಳಿನ್ನುಮೇಲಣ
ಧುರದ ವೃತ್ತಾಂತವನು ಕುರುಪತಿ
ಯಿರವನರಿಯೆನು ಕಂಡುಬಹೆನೇ ನೇಮವೇ ತನಗೆ
ಗುರುಸುತನು ಕೃಪ ಭೋಜ ಶಕುನಿಗ
ಳರಸನನು ಪರಿವೇಷ್ಟಿಸಿದರದ
ನರಿದು ಬಹೆನೆನೆ ಕಳುಹಿದನು ಧೃತರಾಷ್ಟ್ರ ಸಂಜಯನ ೬೯

## ಎರಡನೆಯ ಸಂಧಿ

ಸೂ. ಸಕಲಬಲ ನುಗ್ಗಾಯ್ತು ಸಮಸ
ಪ್ತಕರು ಮಡಿದರು ಪಾರ್ಥಶರದಲಿ
ಶಕುನಿಯನು ಸಂಗ್ರಾಮದಲಿ ಸೀಳಿದನು ಸಹದೇವ

ಕೇಳು ಜನಮೇಜಯ ಧರಿತ್ರೀ
ಪಾಲ ಸಂಜಯ ಬಂದು ಕುರುಭೂ
ಪಾಲಕನನರಸಿದನು ಸಂಗರ ರಂಗಭೂಮಿಯಲಿ
ಮೇಲುಸಂಯಿಧಾನದ ತುರಂಗಮ
ಜಾಲ ಸಹಿತಗಲದಲಿ ಕುರುಭೂ
ಪಾಲನಾವೆಡೆಯೆನುತ ಬೆಸಗೊಳುತರಸಿದನು ನೃಪನ ೧

ವಂದಿಗಳ ನಿಸ್ಸಾಳಬಡಿಕರ
ಮಂದಿ ಹಡಪಿಗ ಚಾಹಿ ಸೂತರ
ಸಂದಣಿಗಳೌಷಧಿಕ ಹಯಗಜಸಂವಿಧಾಯಕರು
ನಿಂದುದದು ಸಂಖ್ಯಾತವಿನಿಬರ
ನಂದು ಸಂಜಯ ಕರೆದು ಕೇಳಿದ
ನಿಂದುಕುಲಸಂಭವನ ಕಂಡಿರೆ ಕೌರವೇಶ್ವರನ ೨

ಕೂಡೆ ಸಂಜಯನರಸಿದನು ನಡೆ
ಜೋಡಿಸವು ನಾನೂರು ಕುದುರೆಯ
ಕೂಡಿ ಕೌರವನೃಪನ ಕಾಣದೆ ಕಳನ ಚೌಕದಲಿ
ನೋಡುತಿರೆ ಸಾತ್ಯಕಿ ಚತುರ್ಬಲ
ಗೂಡಿ ಕವಿದನು ಹಯಬಲವ ಹುಡಿ
ಮಾಡಿದನು ನಾನೂರ ಕೊಂದನು ಸರಳ ಸಾರದಲಿ ೩

ಹಿಡಿದು ಸಂಜಯನನು ವಿಭಾಡಿಸಿ
ಕೆಡಹಿದನು ಬಲುರಾವುತರನವ
ಗಡವ ಕೇಳಿದು ದ್ರೋಣಸುತ ಕೃತವರ್ಮ ಗೌತಮರು
ಫಡಫಡೆಲವೊ ಸಂಜಯನ ಬಿಡು
ಬಿಡು ಮದೀಯ ಮಹಾಶರಕೆ ತಲೆ
ಗೊಡುವಡಿದಿರಾಗೆನುತ ತರುಬಿದರಿವರು ಸಾತ್ಯಕಿಯ ೪

ದ್ರೋಣಸುತ ಕುರುಪತಿಯ ಸಮರಕೆ
ಹೂಣಿಗನಲೇ ಬಲ್ಲೆವಿದರಲಿ
ಬಾಣವಿದ್ಯೆಯ ಬೀರಿ ಬಿಡಿಸುವರಿವರು ಸಂಜಯನ
ಕಾಣಲಹುದಂತಿರಲಿ ನಿಮಗೀ
ಕೇಣದಲಿ ಫಲವಿಲ್ಲ ಕೃಪ ತ
ನ್ನಾಣೆ ನೀ ಮರಳೆಂದು ಸಾತ್ಯಕಿ ಸುರಿದನಂಬುಗಳ ೫

ಕೋಡಕಯ್ಯಲಿ ತಿರುಗಿ ಕೃಪ ಕೈ
ಮಾಡಿದನು ಕೃತವರ್ಮನೆಸುಗೆಯ
ತೋಡುಬೀಡಿನ ಭರವ ಬಲ್ಲವನಾರು ಸಮರದಲಿ
ನೋಡಲೀತನ ಗರುಡಿಯಲಿ ಶ್ರವ
ಮಾಡಿದವರೇ ಮೂರು ಜಗವ ವಿ
ಭಾಡಿಸುವರೆನೆ ಹೊಗಳ್ವನಾವನು ದ್ರೋಣನಂದನನ ೬

ಎಚ್ಚನಶ್ವತ್ಥಾಮನಾ ಕೃಪ
ನೆಚ್ಚನಾ ಕೃತವರ್ಮಕನು ಕವಿ
ದೆಚ್ಚನೀ ಶರಜಾಲ ಜಡಿದವು ಕಿಡಿಯ ಗಡಣದಲಿ
ಬೆಚ್ಚಿದನೆ ಬೆದರಿದನೆ ಕೈಕೊಂ
ಡೆಚ್ಚು ಸಾತ್ಯಕಿ ರಿಪುಶರಾಳಿಯ
ಕೊಚ್ಚಿದನು ಕೊಡಹಿದನು ಮಿಗೆ ಭಂಗಿಸಿ ವಿಭಾಡಿಸಿದ ೭

ಎಲೆಲೆ ಸಾತ್ಯಕಿಗಾಹವದ ಧುರ
ಬಲುಹೆನಲು ಸೃಂಜಯರು ಸೋಮಕ
ಬಲ ಶಿಖಂಡಿ ದ್ರುಪದನಂದನ ಪಾಂಡವಾತ್ಮಜರು
ಚಳಪತಾಕೆಯ ವಿವಿಧವಾದ್ಯದ
ಕಳಕಳದ ಕೈದುಗಳ ಹೊಳಹಿನ
ತಳಪ ಝಳಪಿಸೆ ಜೋಡಿಸಿತು ಸಾತ್ಯಕಿಯ ಬಳಸಿನಲಿ ೮

ಹರಿಯದಿಲ್ಲಿಯ ಬವರ ರಾಯನ
ನರಸಬೇಹುದು ಕುರುಪತಿಯ ಮುಂ
ದಿರಿದು ಮೆರೆವುದು ಕೀರ್ತಿ ನಿಷ್ಫಲವಿಲ್ಲ ಶರರಚನೆ
ಅರಿವೆವೀ ಸಾತ್ಯಕಿಯ ಸಮರದ
ಮುರುಕವನು ಬಳಿಕೆನುತ ಕೌರವ
ನರಿಕೆಯಲಿ ತಿರುಗಿದರು ಕೃಪ ಕೃತವರ್ಮ ಗುರುಸುತರು ೯

ತೆರಳಿದರು ಗುರುನಂದನಾದಿಗ
ಳಿನ್ನು ಪಾಲನ ಕಾಣೆವಾತನ
ನರಸಬೇಹುದು ಶಕುನಿ ದುರ್ಯೋಧನ ಸುಶರ್ಮಾಕರು
ದೊರೆಗಳಿದು ಪರಿಶಿಷ್ಟರುಪಸಂ
ಹರಣವೇ ಕರ್ತವ್ಯವಿದು ದು
ಸ್ತರಣಶ್ರಮಫಲವೆಂದು ನುಡಿದನು ಧರ್ಮಸುತ ನಗುತ ೧೦

ಮಸಗಿದುದು ಪರಿವಾರ ಕೌರವ
ವಸುಮತೀಶ್ವರನರಕೆಯಲಿ ದಳ
ಪಸರಿಸಿತು ಬಿಡದರಸಿ ಕಂಡರು ಕಳನ ಮೂಲೆಯಲಿ
ಮಿಸುಪ ಸಿಂಧದ ಸೀಗುರಿಯ ಝಳ
ಪಿಸುವಡಾಯ್ದ ಸಿತಾತಪತ್ರ
ಪ್ರಸರದಲಿ ಹೊಳೆಹೊಳೆವ ಶಕುನಿಯ ಬಹಳ ಮೋಹರವ ೧೧

ಅದೆ ಸುಯೋಧನನೊಡ್ಡು ನಸುದೂ
ರದಲಿ ಕವಿಕವಿಯೆನುತ ಧಾಳಿ
ಟ್ಟುದು ಚತುರ್ಬಲ ಭೀಮಪಾರ್ಥರ ರಥದ ಚೂಣಿಯಲಿ
ಹೊದರು ಹಳಚಿತು ಭಟರು ಭುಜಗ
ರ್ವದಲಿ ಗರುವರ ಗಾಢ ಶೌರ್ಯದ
ಮದಕೆ ಮಡಮುರಿಯಾಯ್ತು ಸಿಲುಕಿತು ಮಾನ ಮೋನದಲಿ ೧೨

ಹೆಗಲ ಹಿರಿಯುಬ್ಬಣದ ಕೈತಳ
ಮಗುಚಲಮ್ಮದ ವಾಘೆಯಲಿ ಕೈ
ಬಿಗಿದುದಂಕಣೆದೊಡಕಿನಲಿ ಮರನಾದವಂಘ್ರಿಗಳು
ಬಗೆಯ ಮಡಿ ಮಸಳಿಸಿತು ವೀರಕೆ
ಬೆಗಡು ಹುದುವನೆಯಾಯ್ತು ಕೈನಂ
ಬುಗೆಗೆ ಮರಳಿದರೊಬ್ಬರೊಬ್ಬರು ರಾಯರಾವುತರು ೧೩

ಬಂದುದಾ ಮೋಹರ ಸಘಾಡದಿ
ನಿಂದುದೀ ಬಲ ಸೂಠಿಯಲಿ ಹಯ
ವೃಂದ ಬಿಟ್ಟವು ತೂಳಿದವು ಹೇರಾನೆ ಸರಿಸದಲಿ
ನೊಂದುದಾಚೆಯ ಭಟರು ಘಾಯದೊ
ಳೊಂದಿತೀಚೆಯ ವೀರರುಭಯದ
ಮಂದಿ ಬಿದ್ದುದು ಚೂಣಿಯದ್ದುದು ರುಧಿರಜಲಧಿಯಲಿ ೧೪

ಜಾರಿದನೆ ಕುರುಪತಿಯಕಟ ವ್ಯೈ
ದೋರನೇ ನಮಗೂರುಗಳ ಕೊಡ
ಲಾರದೇ ಕಾಳೆಗವ ಕೊಟ್ಟನು ಮತ್ತೆ ಕೊಂಡನಲಾ
ತೋರಿಸನೆ ಖಂಡೆಯದ ಸಿರಿ ವ್ಯೈ
ದೋರಹೇಳೋ ಕರೆಯೆನುತ ತಲೆ
ದೋರಿದರು ಭೀಮಾರ್ಜುನರು ಸೌಬಲನ ಥಟ್ಟಿನಲಿ ೧೫

ಫಡಫಡೆಲವೋ ಪಾರ್ಥ ಕುರುಪತಿ
ಯಡಗುವನೆ ನಿನ್ನಡಗ ತರಿದುಣ
ಬಡಿಸನೇ ವೇತಾಳರಿಗೆ ವೈತಾಳಿಕನೆ ನೀನು
ಗಡಬಡಿಸಿ ಪರರುನ್ನತಿಯ ಕೆಡೆ
ನುಡಿದು ಫಲವೇನೆನುತ ಪಾರ್ಥನ
ತಡೆದನಂದು ಸುಶರ್ಮ ಸಮಸಪ್ತಕರ ದಳ ಸಹಿತ ೧೬

ಮುತ್ತಿದವು ರಥವೇಳನೂರರು
ವತ್ತು ಹಯವೈನೂರು ಸಾವಿರ
ಮತ್ತಗಜವಿಪ್ಪತ್ತು ಸಾವಿರ ಪಾಯದಳ ಸಹಿತ
ತೆತ್ತಿಸಿದವಂಬುರವಣಿಸಿ ದೂ
ಹತ್ತಿ ಹೊಳೆದವು ಸಮರದಲಿ ಮುಖ
ಕೆತ್ತುದೆನೆ ಕೈದುಗಳ ರುಚಿ ವೇಢೈಸಿತರ್ಜುನನ ೧೭

ಶಕುನಿ ಸಹದೇವನನುಳೂಕನು
ನಕುಲನನು ಕುರುರಾಯನನುಜರು
ಚಕಿತ ಚಾಪನ ಕೆಣಕಿದರು ಪವಮಾನನಂದನನ
ಅಕಟ ಫಲುಗುಣ ಎನುತ ಸಮಸ
ಪ್ತಕರು ಕವಿದರು ನೂರು ಗಜದಲಿ
ಸಕಲದಳಕೊತ್ತಾಗಿ ನಿಂದನು ಕೌರವರರಾಯ ೧೮

ಏರಿದರು ಸಮಸಪ್ತಕರು ಕೈ
ದೋರಿದರು ಫಲುಗುಣನ ಜೋಡಿನೊ
ಳೇರು ತಳಿತುದು ನೊಂದವಡಿಗಡಿಗಾತನಶ್ವಚಯ
ನೂರು ಶರದಲಿ ಬಳಿ ವಿಶಿಖ ನಾ
ನೂರರಲಿ ಬಳಿಶರಕೆ ಬಳಿಶರ
ವಾರು ಸಾವಿರದಿಂದ ತರಿದನು ಪಾರ್ಥನರಿಬಲವ ೧೯

ಕಡಿವಡೆದವೇಳ್ನೂರು ರಥ ಮುರಿ
ವಡೆದವೈನೂರಶ್ವಚಯ ಮುಂ
ಗೆಡೆದವಂದೈನೂರು ಗಜವಿಪ್ಪತ್ತು ಸಾವಿರದ
ಕಡುಗಲಿಗಳುದುರಿತು ತ್ರಿಗರ್ತರ
ಪಡೆ ಕುರುಕ್ಷೇತ್ರದಲಿ ಪಾರ್ಥನ
ಬಿಡದೆ ಬಳಲಿಸಿಯನಿಬರಳಿದುದು ಭೂಪ ಕೇಳೆಂದ ೨೦

ದೊರೆಗಳವರಲಿ ಸತ್ಯಕರ್ಮನು
ವರ ಸುಶರ್ಮನು ದ್ರೋಣಸಮರದೊ
ಳೆರಡನೆಯ ದಿವಸದಲಿ ರಚಿಸಿದರಗ್ನಿ ಸಾಕ್ಷಿಕವ
ಧುರದ ಶಪಥದೊಳರ್ಜುನನ ಸಂ
ಗರಕೆ ಬೇಸರಿಸಿದ ಪರಾಕ್ರಮ
ಪರಿಗತರು ಪವಡಿಸಿದರಂದು ಧನಂಜಯಾಸ್ತ್ರದಲಿ ೨೧

ತರಿದನಗ್ಗದ ಸತ್ಯಕರ್ಮನ
ಧುರವ ಸಂತೈಸುವ ತ್ರಿಗರ್ತರ
ದೊರೆ ಸುಶರ್ಮನನವನ ಸಹಭವ ಗೋತ್ರ ಬಾಂಧವರ
ಒರಸಿದನು ಕುರುರಾಯನಾವೆಡೆ
ಬರಲಿ ತನ್ನಾಪ್ತರಿಗೆ ಕೊಟ್ಟೆನು
ಹರಿವನಿನ್ನಾಹವ ವಿಲಂಬವ ಮಾಡಬೇಡೆಂದ ೨೨

ಇತ್ತ ಭೀಮನ ಕೂಡೆ ನೂರರು
ವತ್ತು ಗಜ ಸಹಿತರಿಭಟರೊಳು
ದ್ವೃಪ್ತನಿದಿರಾದನು ಸುದರ್ಶನನಂಧನೃಪಸೂನು
ಹತ್ತಳವ್ವೆ ವಿರೋಧಿಸೇನೆಯ
ಮತ್ತ ಗಜಘಟೆಗೋಸುಗರವಿವು
ಮತ್ತೆ ದೊರಕವು ಕೊಂದಡೆಂದುಮ್ಮಳಿಸಿದನು ಭೀಮ ೨೩

ಸೊಕ್ಕಿದಾನೆಯ ಕೈಯ ಕದಳಿಯ
ನಿಕ್ಕಿ ಬಿಡಿಸುವನಾರು ಪವನಜ
ನೆಕ್ಕತುಳದಲಿ ದಂತಿಘಟೆಗಳ ಮುರಿದನುರವಣಿಸಿ
ಇಕ್ಕಡಿಯ ಬಸುರುಚ್ಚುಗಳ ನರ
ಸುಕ್ಕುಗಳ ನಾಟಕದವೊಲು ಕೈ
ಯಿಕ್ಕಿದಾನೆಯ ಹಿಂಡು ಮುರಿದುದು ನಿಮಿಷಮಾತ್ರದಲಿ ೨೪

ಕೆಡಹಿ ದುರ್ಯೋಧನನ ತಮ್ಮನ
ನಡಗುದರಿ ಮಾಡಿದನುಳೂಕನ
ಕಡಿದು ಬಿಸುಟನು ನಕುಲನಿಪ್ಪತ್ತೈದು ಬಾಣದಲಿ
ತುಡುಕಿದನು ಸಹದೇವನಂಬಿನ
ಗಡಣದಲಿ ಸೌಬಲನ ಸೇನೆಯ
ಕಡಲ ಮೊಗೆದನು ಮೋದಿದನು ಶರಜಾಲ ಝಂಕೃತಿಯ ೨೫

ಎಲವೊ ಕಪಟದ್ಯೂತ ಬಂಧದೊ
ಳೆಳಲಿಸಿದಲಾ ಪಾಪಿ ಕೌರವ
ಕುಲದ ತಲೆ ಸೆಂಡಾಡಿದವ ನೀನೋ ಮದಗ್ರಜನೊ
ಸಿಲುಕಿದೆಯಲಾ ನಮ್ಮ ಬಾಣದ
ಬಲೆಗೆ ನಿನ್ನನು ಕಾವನಾವವ
ನೆಲೆ ಕುಠಾರ ಎನುತ್ತ ನುಡಿದನು ನಗುತ ಸಹದೇವ ೨೬

ವ್ಯರ್ಥವಲೆ ಸಹದೇವ ನಿನ್ನ ಕ
ದರ್ಥನಕೆ ಫಲವಿಲ್ಲ ನೀ ಕದ
ನಾರ್ಥಿಯೇ ದಿಟ ತೋರಿಸಾದರೆ ಬಾಹುವಿಕ್ರಮವ
ಪಾರ್ಥ ಭೀಮರ ಮರೆಯೊಳಿರ್ದ್ದ ನಿ
ರರ್ಥಕರನಿರಿದಿರಿದು ಜಯವ ಸ
ಮರ್ಥಿಸುವೆ ಫಡ ಹೋಗೆನುತ ತೆಗೆದೆಚ್ಚನಾ ಶಕುನಿ ೨೭

ಮರುಗದಿರು ನಿನ್ನುಭಯ ಪಕ್ಷವ
ತರಿದು ತುಂಡವ ಸೀಳುವೆನು ತಾ
ಮರೆವೆನೇ ಭವದೀಯ ರಚಿತ ವಿಕಾರ ವಿಭ್ರಮವ
ನೆರೆ ಪತತ್ರಿಗಳಿವೆ ಪತತ್ರಿಯ
ಮರುವೆಸರು ನಿನಗಿವರ ಕೇಣಿಗೆ
ತೆರಹುಗೊಡು ನೀನೆಂದು ಮಾದ್ರೀತನುಜ ಮುಗುಳೆಚ್ಚ ೨೮

ಎಸಲು ಸಹದೇವಾಸ್ತ್ರವನು ಖಂ
ಡಿಸಿ ಶರೌಘದಿನಹಿತವೀರನ
ಮುಸುಕಿದನು ಮೊನೆಗಣೆಗಳೀಡಿರಿದವು ರಥಾಗ್ರದಲಿ
ಕುಸುರಿದರಿದತಿರಥನ ಬಾಣ
ಪ್ರಸರವನು ರಥ ತುರಗವನು ಭಯ
ರಸದೊಳದ್ದಿದನುದ್ದಿದನು ಸಹದೇವ ಸೌಬಲನ ೨೯

ತೇರು ಹುಡಿಹುಡಿಯಾಗೆ ಹೊಯ್ದನು
ವಾರುವನ ಮೇಲುಗಿದಡಾಯುಧ
ದಾರುಭಟೆಯಲಿ ಬಿಟ್ಟನಾ ಸಹದೇವನಭಿಮುಖಕೆ
ವೀರನಹೆಯೋ ಶಕುನಿ ಜೂಜಿನ
ಚೋರವಿದ್ಯೆಯ ಬಿಟ್ಟೆಲಾ ಜು
ಜ್ಜಾರನಹೆ ಮಝು ಪೂತೆನುತ ಖಂಡಿಸಿದನಾ ಹಯವ ೩೦

ಬಳಿಕ ಕಾಲಾಳಾಗಿ ಖಡುಗವ
ಝಳಪಿಸುತ ಬರೆ ಶಕ್ತಿಯಲಿ ಕೈ
ಚಳಕ ಮಿಗೆ ಸಹದೇವನಿಟ್ಟನು ಸುಬಲನಂದನನ
ಖಳನೆದೆಯನೊದೆದಪರಭಾಗಕೆ
ನಿಲುಕಿತದು ಗಾಂಧಾರಬಲ ಕಳ
ವಳಿಸೆ ಸಂಳಿದನು ಶಕುನಿ ಸುರತರುಣಿಯರ ತೋಳಿನಲಿ ೩೧

ಕವಿದುದಾ ಪರಿವಾರ ವಡಬನ
ತಿವಿವ ತುಂಬಿಗಳಂತೆ ಶಕುನಿಯ
ಬವರಿಗರು ಮುಂಡಳಿಸೆ ಸಹದೇವನ ರಥಾಗ್ರದಲಿ
ತೆವರಿಸಿದನನಿಬರ ಚತುರ್ಬಲ
ನಿವಹವನು ನಿಮಿಷಾರ್ಧದಲಿ ಸಂ
ತವಿಸಿದನು ಸಹದೇವ ಕೊಂದನು ಸೌಬಲನ ಬಲವ ೩೨

ಹರಿಬದಲಿ ಹೊಕ್ಕೆರಡು ಸಾವಿರ
ತುರಗ ಬಿದ್ದವು ನೂರು ಮದಸಿಂ
ಧುರಕೆ ಗಂಧನವಾಯ್ತು ಪಯದಳವೆಂಟು ಸಾವಿರದ
ಬರಹ ತೊಡೆದುದು ನೂರು ರಥ ರಿಪು
ಶರದೊಳಕ್ಕಾಡಿತು ವಿಡಂಬದ
ಕುರುಬಲಾಂಬುಧಿ ಕೂಡೆ ಬರತುದು ನೃಪತಿ ಕೇಳೆಂದ ೩೩

ಓಡಿದವರಲ್ಲಲ್ಲಿ ಧೈರ್ಯವ
ಮಾಡಿ ಹರಿಹಂಚಾದ ಸುಭಟರು
ಕೂಡಿಕೊಂಡುದು ನೂರು ಮದದಾನೆಯಲಿ ಕುರುಪತಿಯ
ಓಡಲೇಕಿನ್ನೊಂದು ಹಲಗೆಯ
ನಾಡಿ ನೋಡುವೆನೆಂಬವೊಲು ಕೈ
ಮಾಡಿದನು ಕುರುರಾಯನಾ ಸಹದೇವನಿದಿರಿನಲಿ ೩೪

ಧರಣಿಪನ ಥಟ್ಟಣೆಗೆ ನಿಲ್ಲದೆ
ತೆರಳಿದನು ಸಹದೇವನಾತನ
ಹಿರಿಯನಡ್ಡೈಸಿದಡೆ ಕೊಟ್ಟನು ಬೋಳೆಯಂಬಿನಲಿ
ಶರಹತಿಗೆ ಸೆಡೆದಾ ನಕುಲ ಪೈ
ಸರಿಸಿದನು ನೂರಾನೆಯಲಿ ಡಾ
ವರಿಸಿದನು ಧರ್ಮಜನ ದಳದಲಿ ಧೀರ ಕುರುರಾಯ ೩೫

ಎಲೆ ನಪುಂಸಕ ಧರ್ಮಸುತ ಫಡ
ತೊಲಗು ಕರೆಯಾ ನಿನಗೆ ಭೀಮನ
ಬಲುಹೆ ಬಲುಹರ್ಜುನನ ವಿಕ್ರಮ ವಿಕ್ರಮವು ನಿನಗೆ
ಮಲೆತು ಮರೆಯಾ ಕ್ಷತ್ರಧರ್ಮವ
ನಳುಕದಿರು ನೀ ನಿಲ್ಲೆನುತಲಿ
ಟ್ಟಳಿಸಿ ಬರಲೂಳಿಗದ ಬೊಬ್ಬೆಯ ಕೇಳಿದನು ಭೀಮ ೩೬

ತೂಳಿ ತುಳಿದವು ನೂರು ಗಜ ಭೂ
ಪಾಲಕನ ನೆರೆಗಡಿತದಡವಿಗೆ
ಬಾಳೆ ಹೆಮ್ಮರನಾಯ್ತು ಗಡ ಫಡ ನೂಕು ನೂಕೆನುತ
ಆಲಿ ಕಿಡಿಯಿಡೆ ಕುಣಿವ ಮೀಸೆ ಕ
ರಾಳ ವದನದ ಬಿಗಿದ ಹುಬ್ಬಿನ
ಮೇಲುಗೋಪದ ಭೀಮ ಬಂದನು ಬಿಟ್ಟ ಸೂಠಿಯಲಿ ೩೭

ನೆತ್ತಿಯುಗತೆಯೊಳೂರಿದಂಕುಶ
ವೆತ್ತಿದಡೆ ತಲೆಗೊಡಹಿದವು ಬೆರ
ಳೊತ್ತುಗಿವಿಗಳ ಡಾವರಿಪ ಡಾವರದ ಡಬ್ಬುಕದ
ಕುತ್ತುವಾರೆಯ ಬಗೆಯದಾನೆಗ
ಳಿತ್ತ ಮುರಿದವು ಸಿಂಹನಾದಕೆ
ಮತ್ತಗಜ ಮೊಗದಿರುಹಿದವು ದಳವುಳಿಸಿದನು ಭೀಮ ೩೮

ಮೆಟ್ಟಿದನು ಬಲವಂಕವನು ಹೊರ
ಗಟ್ಟಿದನು ವಾಮದ ಗಜಂಗಳ
ನಿಟ್ಟನೊಂದರೊಳೊಂದನಪ್ಪಳಿಸಿದನು ಪರಿಘದಲಿ
ಘಟ್ಟಿಸಿದನೊಗ್ಗಿನ ಗಜಂಗಳ
ಘಟ್ಟುಗೆಡಹಿದನಮಮ ಹೆಣಸಾ
ಲಿಟ್ಟವೈ ಕುರುನೃಪನ ನೂರಾನೆಗಳು ನಿಮಿಷದಲಿ ೩೯

ಉಳಿದುದಿದಿರಲಿ ಛತ್ರ ಚಮರಾ
ವಳಿಯವರು ಹಡಪಿಗರು ಬಿರುದಾ
ವಳಿಯವರು ಪಾಠಕರು ವಾದ್ಯದ ಮಲ್ಲಗಾಯಕರು
ಸಲಿಲ ಭಕ್ಷ್ಯವಿಧಾನಗಜಹಯ
ಕುಲದ ರಕ್ಷವ್ರಣಚಿಕಿತ್ಸಕ
ದಳಿತ ರಥಚಾರಕರು ಕಾರ್ಮುಕಬಾಣದಾಯಕರು ೪೦

ಕುದುರೆ ರಾವ್ತರು ಜೋದಸಂತತಿ
ಮದಗಜವ್ರಜವತಿರಥಾವಳಿ
ಪದಚರರು ಚತುರಂಗಬಲವೊಂದುಳಿಯದಿದರೊಳಗೆ
ಪದದಲೇ ಕೌರವನೃಪತಿ ಜಾ
ರಿದನು ಕುಂತೀಸುತರು ಬಹಳಾ
ಭ್ಯುದಯರಾದರು ವೀರನಾರಾಯಣನ ಕರುಣದಲಿ ೪೧

## ನೂರನೆಯ ಸಂಧಿ

ಸೂ. ರಾಯದಳ ಸಲೆ ಸವೆಯೆ ಸಮರದ
ನಾಯಕರು ನೆರೆ ಮುರಿಯಲಾ ದ್ವೈ
ಪಾಯನ ಸರೋವರವ ಹೊಕ್ಕನು ಕೌರವರ ರಾಯ

ಕೇಳು ಜನಮೇಜಯಧರಿತ್ರೀ
ಪಾಲ ಕುರುಪತಿ ಹೆಗಲ ಗದೆಯಲಿ
ಕಾಲುನಡೆಯಲಿ ಹಾಯ್ದನೇಕಾಂಗದಲಿ ಕಳನೊಳಗೆ
ಆಳ ಕಾಣೆನು ಛತ್ರ ಚಮರದ
ಮೇಳೆಯದ ವಿಸ್ತಾರವಿಭವವ
ಬೀಳುಕೊಟ್ಟನು ನಡೆದನಿಂದ್ರ ದಿಶಾಭಿಮುಖವಾಗಿ ೧

ಅಕಟ ನಮ್ಮಯ ಪೂರ್ವರಾಜ
ಪ್ರಕರಕೀ ವಿಧಿಯಾಯ್ತಲಾ ಕಂ
ಟಕನಲಾ ಧರ್ಮಪ್ರಭಾವಕೆ ಕೌರವೇಶ್ವರನು
ಶಕುನಿಮತ ವಿಷಬೀಜವೇ ಬಾ
ಧಕವ ತಂದುದಲಾ ಯುಧಿಷ್ಠಿರ
ಸಕಲ ಬಲ ಪರಿಶೇಷವೇನೆಂದರಸ ಬೆಸಗೊಂಡ ೨

ಧರಣಿಪತಿ ಕೇಳ್ ಧರ್ಮಜನ ಮೋ
ಹರದೊಳುಳಿದುದು ತೇರು ಸಾವಿರ
ವೆರಡು ಗಜವೇಳ್ನೂರು ಮಿಕ್ಕುದು ಲಕ್ಕ ಪಾಯದಳ
ತುರಗ ಸಾವಿರವೈದು ಸಾತ್ಯಕಿ
ವರ ಯುಧಾಮನ್ಯೂತ್ತಮೌಂಜಸ
ರುರು ಶಿಖಂಡಿ ದ್ರುಪದಸೂನು ದ್ರೌಪದೀಸುತರು ೩

ಆ ಸುಯೋಧನ ಸೇನೆಯಲಿ ಧರ
ಣೀಶ ಕೃಪ ಕೃತವರ್ಮ ಗುರುಸುತ
ರೈಸುಬಲದಲಿ ನಾಲ್ವರುಳಿದರು ಹೇಳಲೇನದನು
ಐಸು ಬಲವನಿತೈಶ್ವರಿಯವಿ
ದ್ವೇಸು ಭಟರೆನಿತಗ್ಗಳೆಯರಿ
ದ್ದೇಸರಲಿ ಫಲವೇನು ದೈವವಿಹೀನರಿವರೆಂದ ೪

ಇತ್ತಲೀ ಸಂಜಯನ ತಂದುದು
ಮೃತ್ಯು ಧೃಷ್ಟದ್ಯುಮ್ನನೀತನ
ಕುತ್ತಿ ಕೆಡಹಿದಡಾಗದೇ ಕುರುಡಂಗೆ ರಣರಸವ
ಬಿತ್ತರಿಸುವನು ಕೌರವನ ಜಯ
ದತ್ತಲೆರಕ ದುರಾತ್ಮನನು ಕೈ
ವರ್ತಿಸಾ ಯಮನಗರಿಗೆಂದನು ಸಾತ್ಯಕಿಯ ಕರೆದು ೫

ಸೆಳೆದಡಾಯ್ದವ ಸಂಜಯನ ಹೆಡ
ತಲೆಗೆ ಹೂಡಿದನರಿವ ಸಮಯಕೆ
ಸುಳಿದನಗ್ಗದ ಬಾದರಾಯಣನವನ ಪುಣ್ಯದಲಿ
ಎಲೆಲೆ ಸಾತ್ಯಕಿ ಲೇಸುಮಾಡಿದೆ
ಖಳನೆ ಸಂಜಯನೆಮ್ಮ ಶಿಷ್ಯನ
ಕೊಲುವುದೇ ನೀನೆನುತ ಕೊಂಡನು ಕೊರಳಡಾಯುಧವ ೬

ದೇವ ನಿಮ್ಮಯ ಶಿಷ್ಯನೇ ಪರಿ
ಭಾವಿಸೆನು ತಾನರಿದೆನಾದಡೆ
ದೇವಕೀಸುತನಾಣೆ ಬಿಟ್ಟೆನು ಸಂಜಯನ ವಧೆಯ
ನೀವು ಬಿಜಯಂಗೈವುದೆನೆ ಬದ
ರಾವಳೀಮಂದಿರಕೆ ತಿರುಗಿದ
ನಾ ವಿಗಡಮುನಿ ಖೇದಕಲುಷಿತ ಸಂಜಯನ ತಿಳುಹಿ ೭

ಅರಸ ಕೇಳೈ ಸಂಜಯನು ಬರ
ಬರಲು ಕಂಡನು ದೂರದಲಿ ನಿರಿ
ಗರುಳ ಕಾಲ್ತೊಡಕುಗಳ ಖಂಡದ ಜಿಗಿಯ ಜಾರುಗಳ
ಕರಿಗಳೊಟ್ಟಿಲನೇರಿಳಿದು ಪೈ
ಸರಿಸಿ ಮಿದುಳಿನ ಜೋರು ಜೊಂಡಿನ
ತೊರಳೆಯಲಿ ದಡದಡಿಸಿ ಜಾರುತ ಬೀಳುತೇಳುವನ ೮

ಎಡಹುದಲೆಗಳ ದಾಂಟಿ ರಕುತವ
ಮಡುವಿನಲಿ ಗದೆಯೂರಿ ನೆಲೆಗಳ
ಪಡೆದು ಕಂಪಿಸಿ ಕುಣಿವ ಮುಂಡವ ಗದೆಯಲಪ್ಪಳಿಸಿ
ಅಡಿಗಡಿಗೆ ಪೇರಾನೆಗಳ ಹೆ
ರೊಡಲ ಹತ್ತಿಳಿದೇರಿ ರೆಘೊಂಪಿಸಿ
ಮಿಡುಕಿ ನಿಲುವನು ಬಳಲಿದೂರ್ಧ್ವಶ್ವಾಸ ಲಹರಿಯಲಿ ೯

ಓಡದಿಹ ನರಿ ಹದ್ದು ಕಾಗೆಗೆ
ಕೂಡ ಗದೆಯನು ಬೀಸುವನು ಬಿಡೆ
ನೋಡುವನು ಹೆಣದಿನಿಹಿಗಳ ಹೇರಾಳ ರಕ್ಕಸರ
ತೋಡುಗೈಗಳ ಮಿದುಳ ಬಾಯ್ಗಳ
ಬಾಡುಗರುಳಿನ ಚೀತ್ಕೃತಿಯ ತಲೆ
ಯೋಡುಗಳ ತನಿರಕುತ ಪಾನದ ಶಾಕಿನೀಜನವ ೧೦

ಕಂದ ಪಕ್ಖಲೆಗಳಲಿ ತೀವಿದ
ಮಂದ ರಕುತದ ತೋದ ತಲೆಗಳ
ತಿಂದು ಬಿಸಡುವ ನೆಣನ ಕಾರುವ ಬಸೆಯ ಬಾಡಿಸುವ
ಸಂದಣಿಸಿ ಹರಿದೇರ ಬಾಯ್ಗಳೊ
ಳೊಂದಿ ಬಾಯ್ಗಳನಿಡುವ ಪೂತನಿ
ವೃಂದವನು ಕಂಡೋಸರಿಸುವನದೊಂದು ದೆಸೆಗಾಗಿ ೧೧

ಕುಣಿವ ಕರಿಗಳ ತಲೆಯ ಮಡುಹಿನ
ಲಣೆದು ಹಜ್ಜೆಯನಿಡುತ ಭೂತದ
ಹೆಣನ ತೀನಿಗೆ ತವಕಿಸುವ ವೇತಾಳ ಸಂತತಿಯ
ರಣದೊಳಂಜಿಸಿ ಸೆರೆನರದ ಕಾ
ವಣದೊಳಗೆ ಕೈಯೂರಿ ಮಿಗೆ ಹಳ
ವೆಣನ ಹೊಲಸಿಗೆ ಹೇಸಿ ಹರಿವಡಿಗಡಿಗೆ ಸುಯ್ವುವನ ೧೨

ಕಡಿವಡೆದ ಹಕ್ಕರಿಕೆ ರೆಂಚೆಯ
ತಡಿಗಳಲಿ ಕುಳ್ಳಿರ್ದು ಮೊಣಕಾ
ಲ್ಗಡಿಯ ಗಾಢವ್ರಣದ ನೆಣವಸೆಗೆಸರ ಬಳಿಬಳಿದು
ಗಡಣ ಹೆಣದೆರಹುಗಳೊಳಗೆ ಕಾ
ಲಿಡುತ ಸೋದಿಸಿ ಮುಂದೆ ಹೆಜ್ಜೆಯ
ನಿಡುತ ಪೈಸರವೋಗಿ ಮಾರ್ಗಶ್ರಮಕೆ ಬೆಮರುವನ ೧೩

ಕಡಿದ ಕೈದುಗಳೊಟ್ಟಿಲಲಿ ತನಿ
ಗೆಡೆದ ಗಾಲಿಯ ಹಾಯ್ಕಿ ಮೆಲ್ಲಡಿ
ಯಿಡುತ ಹಜ್ಜೆಯ ನೆಣದ ಕೆಸರಿಗೆ ಛತ್ರಚಮರಿಗಳ
ಅಡಸಿ ಹೆಜ್ಜೆಯನಿಡುತ ರಕುತದ
ಮಡುವನೆಡಬಲಕಿಕ್ಕಿ ಮೆಲ್ಲನೆ
ನಡೆದು ದೈವವ ಬಯ್ದು ಬಯ್ದಡಿಗಡಿಗೆ ಸುಯ್ವುವನ ೧೪

ಭೂತರವ ಭೇತಾಳ ಕಲಹ ವಿ
ಧೂತ ಜಂಬುಕ ಘೂಕ ಕಾಕ
ವ್ರಾತ ರಭಸಕೆ ಬೆಚ್ಚುವನು ಪಾಂಡವರ ಬಲವೆಂದು
ಆತು ಮರಳಿದು ಹಿಂದ ನೋಡಿ ಪ
ರೇತ ವಿಭವವಲಾ ಎನುತ ಛಲ
ಚೇತನನು ಸಲೆ ಚಂಡಿಯಾದನು ಕಳನ ಚೌಕದಲಿ ೧೫

ಹೇಳುವಡೆ ಕುರುಪತಿಯೆನೇ ನೆರೆ
ಹೋಲುವನು ಗದೆ ಹೆಗಲಲದೆ ಮೇ
ಲಾಳ ಕಾಣೆನು ಚಮರ ಚಾಹಿಯ ಗಜಹಯಾವಳಿಯ
ಹೋಲುವುದು ಜನವೊಬ್ಬರೊಬ್ಬರ
ನಾಳೊಳೊಬ್ಬನೊ ಮೇಣು ಕುರು ಭೂ
ಪಾಲಕನೊ ನೋಡುವೆನೆನುತ ಸಂಜಯನು ನಡೆತಂದ ೧೬

ಬಂದು ಕಂಡನು ರಾಜವನ ಮಾ
ಕಂದನನು ಧೃತರಾಷ್ಟ್ರ ರಾಯನ
ಕಂದನನು ದೌರ್ಜನ್ಯವಲ್ಲೀ ವಿಪುಳಕಂದನನು
ಮುಂದುವರಿವ ವಿಲೋಚನಾಂಬುಗ
ಳಿಂದ ಸೈರಣೆ ಮಿಗದೆ ಸಂಜಯ
ನಂದು ದೊಪ್ಪನೆ ಕೆಡೆದು ಹೊರಳಿದನರಸನಂಘ್ರಿಯಲಿ ೧೭

ಕಡಲತಡಿ ಪರಿಯಂತ ರಾಯರ
ಗಡಣದಲಿ ನೀನೊಬ್ಬನೆಂಬೀ
ನುಡಿಗೆ ನಿಶ್ಚಯವೀಗಲಾಯಿತು ತಂದೆ ಕುರುರಾಯ
ಬಿಡದೆ ಬಾಗುವ ನೃಪರ ಮಕುಟದೊ
ಳಿಡುವ ಕೋಮಲ ಚರಣವಿದರೊಳು
ನಡೆಯಲೆಂತೈ ಕಲಿತೆ ಎಂದನು ಸಂಜಯನು ನೃಪನ ೧೮

ರಣಮುಖದೊಳೇಕಾದಶಾಕ್ಷೋ
ಹಿಣಿಗೆ ಹರಿವಾಯ್ತೇ ಯುಧಿಷ್ಠಿರ
ನುಣಲಿ ಧರೆಯನು ಗೋತ್ರವಧೆವಿನ್ಯಸ್ತ ಕಿಲ್ಬಿಷವ
ಸೆಣಸ ಮಾಡಿದೆ ದೈವದಲಿ ಧಾ
ರುಣಿಯ ಹುದುವಿನ ಸಿರಿಗೆ ಸೇರದೆ
ಹಣೆದವಾಡಿದೆ ರಾಜವಂಶದ ಕಲ್ಪತರುವನವ ೧೯

ಶಶಿರುಚಿಗೆ ಸೈರಿಸದ ಸಿರಿಮುಡಿ
ಬಿಸಿಲ ಸೆಕೆಗಾಂತುದೆ ಸುಗಂಧ
ಪ್ರಸರಪೂರ್ಣಘ್ರಾಣವೀ ಹಳೆವೆಣನ ಹೊಲಸಿನಲಿ
ಉಸುರುದೆಗಹಾದುದೆ ಸುಗೀತದ
ರಸದ ಮಧುವಿಂಗಾಂತ ಕಿವಿ ವಾ
ಯಸ ಸೃಗಾಲಧ್ವನಿಗೆ ಸೊಗಸಿತೆ ತಂದೆ ಕುರುರಾಯ ೨೦

ಲಲಿತ ಮೃದುತರ ಹಂಸತೂಳದ
ಲುಳಿತ ಕೋಮಲ ಕಾಯ ಕೈದುಗ
ಳೆಲುಗಳೊಟ್ಟಿಲ ಹಾಸಿನಲಿ ಪೈಸರಿಸಿ ಮಲಗಿತಲಾ
ಸುಳಿಯೆ ಕೈಗೊಡುವರಸುಗಳ ಕೆಲ
ಬಲದ ಪಾಯವಧಾರಿನವರನು
ಕಳುಹಿ ಬಂದೈ ಸಾರ್ವಭೌಮರ ಚಿಹ್ನವಿದೆಯೆಂದ ೨೧

ಎತ್ತಣೇಕಾದಶ ಚಮೂಪತಿ
ಯೆತ್ತಣೇಯೇಕಾಕಿತನ ತಾ
ನೆತ್ತ ಗಜಹಯ ರಥ ಸುಖಾಸನದತಿಶಯದ ಸುಳಿವು
ಎತ್ತಣೇ ಕೊಳುಗುಳದ ಕಾಲ್ನಡೆ
ಯೆತ್ತಣಾಹವದಭಿಮುಖತೆ ಬಳಿ
ಕೆತ್ತಣಪಜಯವಿಧಿಯ ಘಟನೆ ನೃಪಾಲ ನಿನಗೆಂದ ೨೨

ಮುಳಿವಡಗ್ಗದ ಪರಶುರಾಮನ
ಗೆಲಿದನೊಬ್ಬನೆ ಭೀಷ್ಮ ಪಾಂಡವ
ಬಲದ ಸಕಲ ಮಹಾರಥರ ಸಂಹರಿಸಿದರು ದ್ರೋಣ
ದಳಪತಿಯ ಮಾಡಿದಡೆ ಪಾರ್ಥನ
ತಲೆಗೆ ತಂದನು ಕರ್ಣನೀಯ
ಗ್ಗಳೆಯರಗ್ಗಿತು ಕಡೆಯಲೊಬ್ಬನೆ ಕೆಟ್ಟೆ ನೀನೆಂದ ೨೩

ಅವರು ಬದುಕಿದರೈವರೂ ನಿ
ನ್ನವರೊಳಗೆ ನೀನುಳಿಯೆ ನೂರ್ವರು
ಸವರಿತವರೈವರು ಕುಮಾರರು ಸೌಖ್ಯ ಜೀವಿಗಳು
ಜವನ ಸಿವಡಿಗೆ ಹತ್ತಿದರು ನಿ
ನ್ನವರು ಮಕ್ಕಳು ನೂರು ದೈವವ
ನವಗಡಿಸಿ ದುಃಸ್ಥಿತಿಗೆ ಬಂದ್ಯೆ ತಂದೆ ಕುರುರಾಯ ೨೪

ಗೆಲಿದನರಸನು ಹಸ್ತಿನಾಪುರ
ದೊಳಗೆ ಕಟ್ಟಿಸು ಗುಡಿಯನೆಂಬೆನೊ
ತಲೆಬಳಿಚಿ ತಾನೋಡಿ ಬದುಕಿದನೆಂಬೆನೋ ಮೇಣು
ಲಲನೆಯರಿಗೇನೊಸಗೆ ಕುರುಡನ
ನಳಿಸುವೆನೊ ನಗಿಸುವೆನೊ ತಾಯಿಗೆ
ಕಲಿಸು ಬುದ್ಧಿಯನೇನನೆಂಬೆನು ಭೂಪ ಕೇಳೆಂದ ೨೫

ಏನು ಸಂಜಯ ಕೌರವೇಶ್ವರ
ನೇನ ಮಾಡಿದನಲ್ಲಿ ಕೊಂತೀ
ಸೂನುಗಳೊಳಾರಳಿದರುಳಿದರು ನಮ್ಮ ಥಟ್ಟಿನಲಿ
ಏನು ಹದನ್ಯೆ ಶಕುನಿ ರಣದೊಳ
ಗೇನ ಮಾಡಿದನೆಂದು ಬೆಸಗೊಳ
ಲೇನನೆಂಬೆನು ತಾಯಿ ಗಾಂಧಾರಿಗೆ ರಣೋತ್ಸವವ ೨೬

ಹಿಂದೆ ರಾಯನ ಪಟ್ಟದರಸಿಯು
ತಂದು ಭಾರಿಯ ಭಂಗಬಡಿಸಿದೆ
ಬಂದು ಹರಿಯೈದೂರ ಬೇಡಿದವರವರ ಚಿತ್ತದಲಿ
ಕಂದ ಬಿತ್ತಿದೆ ಕದನದಲಿ ನೀ
ನೊಂದು ನೆಳಲುಳಿಯಲು ಸಹೋದರ
ವೃಂದ ತನುಜ ಜ್ಞಾತಿ ಬಾಂಧವರಳಿದರದರಿಂದ ೨೭

ಕೇಳು ಸಂಜಯ ಪೂರ್ವ ಸುಕೃತದ
ಶಾಳಿವನವೊಣಗಿದೊಡೆ ಭಾರಿಯ
ತೋಳುಗುತ್ತಿನ ಜಯಲಕುಮಿ ಜಂಗಳವ ಜಾರಿದಡೆ
ಭಾಳಲಿಪಿಗಳ ಲೆಕ್ಕವನು ಪ್ರತಿ
ಕೂಲವಿಧಿ ಪಲ್ಲಟಿಸಿ ಬರೆದಡೆ
ಹೇಳಿ ಫಲವೇನೆನುತ ತುಂಬಿದನರಸ ಕಂಬನಿಯ ೨೮

ಕದಡಿತಂತಃಕರಣ ವಿಕ್ರಮ
ದುದಧಿ ನೆಲೆಯಾಯಿತು ನಿರರ್ಥಕೆ
ಒದರಿದಡೆ ಫಲವೇನು ಸಂಜಯ ಹಿಂದನೆಣಿಸದಿರು
ಕದನದಲಿ ದುಶ್ಶಾಸನನ ತೇ
ಗಿದನಲಾ ಬಕವೈರಿ ತಮ್ಮನ
ನುದರದಲಿ ತೆಗೆವೆನು ವಿಚಿತ್ರವ ನೋಡು ನೀನೆಂದ ೨೯

ನರನ ಬಸುರಲಿ ಕರ್ಣನನು ಭೂ
ವರನ ಸೀಳಿದು ಶಲ್ಯನನು ಕಾ
ತರಿಸದಿರು ಶಕುನಿಯನುಳೂಕನ ಯಮಳರಿಬ್ಬರಲಿ
ಹರಿಬಕಿದಿರಾಗಲಿ ಮುರಾಂತಕ
ಹರಹಿಕೊಳಲಿ ಮದೀಯಬಾಹು
ಸ್ಫುರಣಶಕ್ತಿಗೆ ಭಂಗಬಾರದು ನೋಡು ನೀನೆಂದ ೩೦

ಕಾನನಕೆ ಕೈಯಿಕ್ಕುವರೆ ಪವ
ಮಾನನನು ಪಾವಕನು ಬಯಸುವ
ಭಾನು ಭಾರಿಯ ತಮವ ತಿವಿವನದಾರ ನೆರವಿಯಲಿ
ಈ ನಿಭೃತ ಗದೆಯಿರಲು ಕುಂತೀ
ಸೂನುಗಳ ಕೈಕೊಂಬೆನೇ ಮನ
ಹೀನನ್ಯೆ ನೀನಕಟ ಸಂಜಯ ಎಂದನಾ ಭೂಪ ೩೧

ಆಳು ಬಿದ್ದುದು ಬೇಹ ನಾಯಕ
ರೋಲಗಿಸಿತಮರಿಯರನೀ ರಣ
ದೂಳಿಗಕೆ ನಾನೊಬ್ಬನೆಂದೇ ನಿನಗೆ ತೋರಿತಲಾ
ಆಳ ಹಂಗನು ನಾಯಕರ ಬಿಲು
ಗೋಲ ಜೋಡಿನ ಬಲವ ಚಿತ್ತದೊ
ಳಾಳಿದೊಡೆ ಧೃತರಾಷ್ಟ್ರರಾಯನ ಕಂದನಲ್ಲೆಂದ ೩೨

ಖಾತಿ ಕಂದದು ಮನದ ಧೈರ್ಯದ
ಧಾತು ಕುಂದದು ಲಜ್ಜೆಯಭಿಮತ
ಜಾತಿಗೆಡದು ವಿರೋಧ ಬಿಡದು ಯುಧಿಷ್ಠಿರಾದ್ಯರಲಿ
ಏತಕಿದು ನಿನ್ನೀ ಪ್ರಳಾಪ ವಿ
ಧೂತರಿಪು ಕುರುರಾಯನೆಂಬೀ
ಖ್ಯಾತಿಯಲ್ಲದೆ ಬೇರೆ ರಾಜ್ಯವನೊಲ್ಲೆ ನಾನೆಂದ ೩೩

ಜೀಯ ನಿಮ್ಮಡಿಗಳಿಗೆ ಗುರು ಗಾಂ
ಗೇಯ ವಿದುರಾದಿಗಳು ಹೇಳಿದ
ಜೋಯಿಸವ ಕೈಕೊಂಡಿರೇ ನಮ್ಮೀ ಪ್ರಳಾಪದಲಿ
ರಾಯ ಫಲವೇನ್ಯೆ ಯುಧಿಷ್ಠಿರ
ರಾಯನೊಲಿದಂತಿರಲಿ ನಿಮ್ಮಯ
ತಾಯಿತಂದೆಗೆ ಹೇಳ್ವೆನೇನನು ಬುದ್ಧಿಗಲಿಸೆಂದ ೩೪

ಇದೆ ಸರೋವರವೊಂದು ಹರಿದೂ
ರದಲಿ ಭುವನಖ್ಯಾತ ತನ್ಮ
ಧ್ಯದಲಿ ಮುಳುಗಿಹೆನೊಂದುದಿನ ಪರಿಯಂತ ಸಲಿಲದಲಿ
ಕದನದಲಿ ಕೌಂತೇಯರನು ಯಮ
ಸದನದಲಿ ತೋರುವೆನು ತಾನೆಂ
ಬುದು ರಹಸ್ಯವು ಜನನಿ ಜನಕಂಗರುಹು ನೀನೆಂದ ೩೫

ತೆಗೆಸು ಪಾಳೆಯವೆಲ್ಲವನು ಗಜ
ನಗರಿಗೈದಿಸು ರಾಣಿಯರ ದಂ
ಡಿಗೆಯ ಕಳುಹಿಸು ಸೂತಸುತ ದುಶ್ಶಾಸನಾದಿಗಳ
ಹಗೆಯ ವಿಜಯವ ಹರಹದಿರು ನರ
ಬುಗೆಯ ನುಡಿಯಲಿ ಭಾನುಮತಿಯರ
ಬಗೆಯ ಸಂತೈಸೆಂದು ಬೋಳೈಸಿದನು ಸಂಜಯನ ೩೬

ಎನುತ ಸಂಜಯಸಹಿತ ಕೌರವ
ಜನಪ ಬಂದನು ತತ್ಸರೋವರ
ಕನಿಲನಿದಿರಾದನು ಸುಗಂಧದ ಶೈತ್ಯಪೂರದಲಿ
ತನುವಿಗಾಪ್ಯಾಯನದಿನಂತ
ರ್ಮನಕೆ ಪಲ್ಲಟವಾಯ್ತು ಭೀಮನ
ಜನಕನರಿದನು ತನ್ನ ಗುಪ್ತಸ್ಥಾನ ಸಂಗತಿಯ ೩೭

ಉಲಿವ ಕೋಕಿಲ ಪಾಠಕರ ಮೊರೆ
ವಳಿಕುಳದ ಗಾಯಕರ ಹಂಸಾ
ವಳಿಯ ಸುಭಟರ ಜಡಿವ ಕೊಳರ್ವಕ್ಕಿಗಳ ಪಡಿಯರರ
ಅಲರ್ದ ಹೊಂದಾವರೆಯ ನವಪರಿ
ಮಳದ ಸಿಂಹಾಸನದಿ ಲಕ್ಷ್ಮೀ
ಲಲನೆಯೋಲಗಶಾಲೆಯಂತಿರೆ ಮೆರೆದುದಾ ಸರಸಿ ೩೮

ಬಂದು ತಡಿಯಲಿ ಸಂಜಯನ ಕರೆ
ದೆಂದನೀ ಸರಸಿಯಲಿ ತಾನಿಹೆ
ನಿಂದಿನೀ ದಿವಸವನು ಕಳೆವೆನು ಕೊಳನ ಮಧ್ಯದಲಿ
ಮುಂದೆ ಪಾಂಡವರೈವರನು ಗೆಲಿ
ದಂದು ಹೊಗುವೆನು ಗಜಪುರವನಿಂ
ತೆಂದು ಜನನಿಗೆ ಜನಕವಿದುರರಿಗರುಹು ನೀನೆಂದ ೩೯

ಚಾರು ಚಂದ್ರೋಪಲದ ರಮ್ಯಾ
ಗಾರದಲಿ ಮಣಿಮಯದ ಬಹುವಿ
ಸ್ತಾರ ಭದ್ರೋಪರಿಯ ಭವನದ ಚಿತ್ರಶಾಲೆಯಲಿ
ಸಾರಮಣಿ ಪರಿಯಂಕ ಪರಿಸಂ
ಸ್ಕಾರದಲಿ ಮಲಗುವ ಮಹೀಪತಿ
ನೀರೊಳೊರಗುವನೆಂದು ಸಂಜಯನೊರಲಿದನು ಹೊರಳಿ ೪೦

ಒರಲದಿರು ಸಂಜಯ ವಿರೋಧಿಗ
ಳರಿವರಾನಿದ್ದೆಡೆಯನಿಲ್ಲಿಯೆ
ಮರೆದು ಕಳೆ ಪಾಳೆಯವ ತೆಗಸಬುಜಾಕ್ಷಿಯರ ಕಳುಹು
ತೆರಹುಗೊಡು ನೀ ಹೋಗೆನುತ ಮುಂ
ಜೆರಗನಳವಡೆ ಸೆಕ್ಕಿ ಪೂರ್ವದ
ಲರಿದ ಸಲಿಲಸ್ತಂಭವಿದ್ಯೆಯನರಸ ಚಿಂತಿಸಿದ ೪೧

ಚರಣವದನಕ್ಷಾಲನಾಂತಃ
ಕರಣಶುದ್ಧಿಯಲಾಚಮನವಿ
ಸ್ಮರಣದಲಿ ಸತ್ತೃಣವವಂಗನ್ಯಾಸವಿಧಿಗಳಲಿ
ವರುಣ ಮಂತ್ರಾಕ್ಷರದ ಜಪಪರಿ
ಕರಣದಲಿ ನಿರ್ಣಿಕ್ತ ಚೇತಃ
ಸ್ಫುರಣ ಸಲಿಲಸ್ತಂಭನವನವನೀಶ ಮಂತ್ರಿಸಿದ ೪೨

ದ್ಯುಮಣಿ ಮೊದಲಾದಖಿಳ ಸುರರಿಗೆ
ನಮಿಸಿ ವರುಣಧ್ಯಾನವನು ಹೃ
ತ್ಕಮಲದಲಿ ನೆಲೆಗೊಳಿಸಿ ನಾಲಂಕು ದೆಸೆಯನಾರೈದು
ಕುಮತಿಯಿಳಿದನು ಜಾನು ಕಟಿ ಹೃ
ತ್ಕಮಲಗಳ ಮುಖ ಮೂರ್ಧ ಪರಿಯಂ
ತಮರಿದುದು ಜಲ ಕೊಳನ ಮಧ್ಯದಲರಸ ಪವಡಿಸಿದ ೪೩

ಕುರುಪತಿಯ ಬೀಳ್ಕೊಂಡು ಸಂಜಯ
ಮರಳಿದನು ತನಗಾದ ಹಿಂದಣ
ಪರಿಭವವ ನೆನೆದಡಿಗಡಿಗೆ ಕಂಪಿಸುತ ಮನದೊಳಗೆ
ಧುರದ ಮಧ್ಯದೊಳೊಬ್ಬನೇ ನಡೆ
ತರುವ ಭೂತಾವಳಿಯನೀಕ್ಷಿಸಿ
ಗುರುವ ನೆನೆದನು ಕೇಳು ಜನಮೇಜಯ ಮಹೀಪಾಲ ೪೪

ಬರುತ ಸಂಜಯ ದೂರದಲಿ ಕೃಪ
ಗುರುಸುತರ ಕೃತವರ್ಮಕನ ಕಂ
ಡರಿರಥಿಗಳಿವರಲ್ಲಲೇ ಶಿವಶಿವ ಮಹಾದೇವ
ಭರತಕುಲ ಮೊದಲೊಂದು ಬಳಿಕಾ
ಯೆರಡುಕವಲೊಬ್ಬರಿಗೆ ಜಯವಿ
ಸ್ತರಣ ಗದುಗಿನ ವೀರನಾರಾಯಣನ ಕರುಣದಲಿ ೪೫

## ನಾಲ್ಕನೆಯ ಸಂಧಿ

ಸೂ. ರಾಯಧರ್ಮಜ ಯಮಳ ಫಲುಗುಣ
ವಾಯುಸುತರರಸಿದರು ಕೌರವ
ರಾಯನನು ಕಳನೊಳಗೆ ಕಾಣದೆ ಮುತ್ತಿದರು ಕೊಳನ

ಕೇಳು ಜನಮೇಜಯ ಧರಿತ್ರೀ
ಪಾಲ ಸಂಜಯ ಬರುತ ಕುರುಭೂ
ಪಾಲನರಕೆಯ ಭೀಮನವರಿವರಲ್ಲಲೇ ಎನುತ
ಮೇಲೆ ಹತ್ತಿರ ಬರಬರಲು ಸಮ
ಪಾಳಿಯಲಿ ರಥ ಮೂರರಲಿ ಕೃಪ
ಕೋಲ ಗುರುವಿನ ಮಗನಲಾ ಎನುತಲ್ಲಿಗೈತಂದ ೧

ಇಳಿದು ರಥವನು ಸಂಜಯನ ಬರ
ಸೆಳೆದು ತಕ್ಕೈಸಿದರು ಹಗೆಯಲಿ
ಸಿಲುಕಿ ಬಂದೈ ಭಾಗ್ಯದಲಿ ಧೃತರಾಷ್ಟ್ರಭೂಪತಿಯ
ಕಲಹಗತಿಯೇನಾಯ್ತು ಶಕುನಿಯ
ದಳದೊಳಿದ್ದನು ಕೌರವೇಶ್ವರ
ನುಳಿದನೇ ಹದನಾವುದೆಂದರು ಭಟರು ಸಂಜಯನ ೨

ಅರಿದುದಿಲ್ಲಾ ಕೌರವೇಂದ್ರನ
ನರಸಿ ಶಕುನಿಯ ದಳವ ಮುತ್ತಿದ
ರಿರಿದರವರ ತ್ರಿಗರ್ತರನು ಸೌಬಲ ಸುಶರ್ಮಕರ
ಮುರಿದ ಬವರವ ಬಲಿದು ಗಜ ನೂ
ರರಲಿ ಹೊಕ್ಕನು ರಾಯನಹಿತರ.
ಜರಿದು ರಥಾಡಿಸಿ ಬೀದಿವರಿದನು ರಾಯದಳದೊಳಗೆ ೩

ಬಳಿಕ ಭೀಮನ ಗದೆಯಲಿಭ ಶತ
ವಳಿದರೊಬ್ಬನೆ ತಿರುಗಿ ಹಾಯ್ದನು
ಕೊಳುಗುಳದ ಕೋಳ್ಪಡಿಯ ಕೋಲಾಹಲದ ಕೆಸರಿನಲಿ
ತಲೆಗೆ ಬಂದುದು ತನಗೆಯಾಕ್ಷಣ
ಸುಳಿದರೆಮ್ಮಾರಾಧ್ಯ ವರ ಮುನಿ
ತಿಲಕ ವೇದವ್ಯಾಸದೇವರು ಕೃಪೆಯ ಭಾರದಲಿ ೪

ಸೆಳೆದುಕೊಂಡನು ಮೃತ್ಯುವಿನ ಹೆಡ
ತಲೆಯನೊದೆದು ಕೃಪಾಳು ತನ್ನನು
ತಲೆಬಳಿಚಿ ಕಳುಹಿದರೆ ಬಂದೆನು ರಾಯನರಕೆಯಲಿ
ಬಳಲಿ ಬೀಳುತ್ತೇಳುತೊಬ್ಬನೆ
ತಲೆಮುಸುಕಿನಲಿ ನಡೆಯೆ ಕಂಡೆನು
ನೆಲನೊಡೆಯನಹುದಲ್ಲೆನುತ ಸುಳಿದೆನು ಸಮೀಪದಲಿ ೫

ಕಂಡೆನರಸನ ನಿಬ್ಬರವ ಬಳಿ
ಕಂಡಲೆದುದತಿಶೋಕಶಿಖಿ ಕೈ
ಗೊಂಡುದಿಲ್ಲರೆಘಳಿಗೆ ಬಳಿಕೆಚ್ಚತ್ತು ಕಂದೆರೆದು
ಖಂಡಿಸಿದನೆನ್ನುಬ್ಬೆಯನು ಹುರಿ
ಗೊಂಡುದಾತನ ಸತ್ವವಾತನ
ದಂಡಿಯಲಿ ಬಹರಾರು ಸುರ ನರ ನಾಗಲೋಕದಲಿ ೬

ಬಂದನೆನ್ನನು ಸಂತವಿಡುತಲ
ದೊಂದು ಸರಸಿಯ ತಡಿಯಲಲಳವಡೆ
ನಿಂದು ಸಂವರಿಸಿದನು ಗದೆಯನು ಬಾಹುಮೂಲದಲಿ
ತಂದೆಗರುಹೆಂದೆನಗೆ ಹೇಳಿದು
ಹಿಂದೆ ಮುಂದೆಡಬಲನನಾರೈ
ದಂದವಳಿಯದೆ ನೀರ ಹೊಕ್ಕನು ಕಾಣೆನವನಿಪನ ೭

ಅವರಂ ಕಂಬನಿದುಂಬಿದರು ಕೌ
ರವ ಮಹಾವಂಶಾಭಿಚಾರ
ವ್ಯವಸಿತಕೆ ಫಲವಾಯ್ತಲಾ ಯಮುನಂದನಾದಿಗಳ
ಶಿವಶಿವಾ ಪವಡಿಸಿತೆ ಚತುರ
ರ್ಣವ ವಿಪರಿಪರಿಧಾನ ಪೃಥ್ವೀ
ಧವನ ಬಾಳಿಕೆ ನೀರೊಳೆಂದಳಲಿದನು ಗುರುಸೂನು ೮

ಅಳಲದಿರಿ ಗಜಪುರಿಗೆ ಸತಿಯರ
ಕಳುಹುವೆನು ನೀವವನಿಪಾಲನ
ತಿಳುಹಲಾಪಡೆ ಸಂಧಿಗೊಡಬಡಿಸುವದು ಕುರುಪತಿಯ
ಕೊಳನ ತಡಿಯಲಿ ಕಾಣದಂತಿರೆ
ಬಳಸಿ ನೀವೆಂದವರನತ್ತಲಂ
ಕಳುಹಿ ಸಂಜಯ ಬಂದು ಹೊಕ್ಕನು ನೃಪನ ಪಾಳೆಯವ ೯

ಅರಮನೆಗೆ ಬಂದಖಿಳ ಸಚಿವರ
ಕರಸಿದನು ಸರಹಸ್ಯವನು ವಿ
ಸ್ತರಿಸಿದನು ಸರ್ವಾಪಹಾರವ ನೃಪಪಲಾಯನವ
ಅರಸಿಯರಿದಳು ಭಾನುಮತಿ ವಿಂ
ಕ್ಕರಸಿಯರಿಗರುಹಿಸಿದಳಂತಃ
ಪುರದೊಳಲ್ಲಿಂದಲ್ಲಿ ಹರೆದುದು ಕೂಡೆ ರಣಭೀತಿ ೧೦

ಕೂಡೆ ಗಜಬಜವಾಯ್ತು ಪಾಳೆಯ
ವೋಡಿತಲ್ಲಿಯಂದಲ್ಲಿ ಜನವ
ಲ್ಲಾಡಿದುದು ಕ್ರಯವಿಕ್ರಯದ ವಾಣಿಜ್ಯವೀಥಿಯಲಿ
ಹೂಡಿದವು ಬಂಡಿಗಳು ಹರಿದೆಡೆ
ಯಾಡಿದವು ಕೊಲ್ಲಾರಿಗಳು ರಥ
ಗೂಡಿದವು ಬದ್ಧರದ ದಂಡಿಗೆ ಬಂದವರಮನೆಗೆ ೧೧

ಭಾನುಮತಿ ಹೊರವಂಟಳರಸನ
ಮಾನಿನಿಯರು ಸಹಸ್ರಸಂಖ್ಯೆಯೊ
ಳಾನನೇಂದುಪ್ರಭೆ ವಿಭಾಡಿಸೆ ಬಿಸಿಲ ಬೇಗೆಗಳ
ಭಾನುದತ್ತನ ಸೈಂಧವನ ರವಿ
ಸೂನುವಿನ ದುಶ್ಶಾಸನನ ಜಲ
ಜಾನನೆಯರೊಗ್ಗಿನಲಿ ರಥವೇರಿದರು ದುಗುಡದಲಿ ೧೨

ಸರಕ ಹಿಡಿದವು ಬಂಡಿ ಶತಸಾ
ವಿರ ನೃಪಾಲಯದಿಂದ ವಿವಿಧಾ
ಭರಣಭರಿತದ ಭೂರಿ ಪೆಟ್ಟಿಗೆ ಥಾಡಿಸಿತು ರಥವ
ವರ ದುಕೂಲದ ಪಟ್ಟಕರ್ಮದ
ಥರದದಿಂದೊತ್ತಿದವು ಚಾಮೀ
ಕರಮಯದ ಬಹುವಿಧದ ಭಾಂಡದ ಬಂಡಿ ನೂಕಿದವು ೧೩

ಬಳಿಯ ಚೌರಿಯ ಹೊರೆಯ ಚಿತ್ರಾ
ವಳಿ ವಿಧಾನದ ಹಾಸುಗಳ ಹೊಂ
ಬಳಿಯ ತೆರೆಸೀರೆಗಳ ಛತ್ರ ವ್ಯಜನ ಸೀಗುರಿಯ
ಹೊಳೆವ ಪಟ್ಟೆಯಲೋಡಿಗೆಯ ಹೊಂ
ಗೆಲಸದೊಳುಝುಗೆಗಳ ಸುವರ್ಣಾ
ವಳಿಯ ದಿಂಡುಗಳೊಟ್ಟಿದವು ಬಂಡಿಗಳ ಜವ ಜಡಿಯೆ ೧೪

ಕರವತಿಗೆ ಹೊಂಗಳಸ ಹೊಂಗೊ
ಪ್ಪರಿಗೆ ದೀಪಸಂಭ ಹೇಮದ
ಸರಪಣಿಯ ಮಣಿಮಯದ ಜಂತ್ರದ ಜೀವಪುತ್ರಿಗಳ
ಮರಕತದ ಮಧುಪಾತ್ರೆ ನೀಲದ
ಕರಗ ವೈಡೂರಿಯದ ಪಡಿಗವ
ಚರರು ತಂದೊಟ್ಟಿದರು ಬಂಡಿಗೆ ಭಾರಸಂಖ್ಯೆಯಲಿ ೧೫

ಮೆರೆವ ಗಜ ಹಯಶಾಲೆಯಲಿ ಮೈ
ಮುರಿಕ ವೃದ್ಧ ವ್ಯಾಧಿತಾವಳಿ
ಮರಿಗುದುರೆ ಮರಿಯಾನೆ ತೆಗೆದವು ಲಕ್ಕ ಸಂಖ್ಯೆಯಲಿ
ಉರುವ ಭಂಡಾರದ ಮಹಾರ್ಘದ
ನೆರವಣಿಗೆ ಗಾಢಿಸಿತು ಬೀದಿಯ
ತೆರಹು ಕೆತ್ತವು ಹೊತ್ತ ಸರಕಿನ ಬಹಳ ಬಂಡಿಗಳ ೧೬

ರಾಯನರಮನೆ ಮಂಡವಿಗೆ ಗುಡಿ
ಲಾಯ ಚವುಕಿಗೆ ನಿಖಿಳ ಭವನ ನಿ
ಕಾಯವನು ತೆಗೆದೊಟ್ಟಿದರು ಬಂಡಿಗಳ ಹಂತಿಯಲಿ
ರಾಯನನುಜರ ದ್ರೋಣ ಕೃಪ ರಾ
ಧೇಯ ಸೈಂಧವ ಶಕುನಿ ರಾಜಪ
ಸಾಯಿತರ ಗುಡಿಗೂಢಚಂಪಯವೇರಿದವು ರಥವ ೧೭

ಪಾಳೆಯಕೆ ಗಜಪುರದ ವಂಕಕೆ
ಕೀಲಿಸಿತು ದಂಡಿಗೆಯ ಸಂದಣಿ
ಮೇಲುಸರಕಿನ ಬಂಡಿ ತಲೆವೊರೆಯೆತ್ತು ಕಂಬಿಗಳ
ಹೇಳಲೇನು ಸಮುದ್ರ ವಿಭವವ
ನೇಳಿಸುವ ಪಾಳೆಯದ ಸಿರಿ ಶೂ
ನ್ಯಾಲಯಕೆ ಜೋಡಿಸಿತಲ್ಲೆ ಜನಮೇಜಯ ಕ್ಷಿತಿಪ ೧೮

ತುಂಬಿತಿದುಂ ಗಜಪುರವನಲ್ಲಿಯ
ಕಂಬನಿಯ ಕಾಲುವೆಯನದನೇ
ನೆಂಬೆನೈ ಗಜಬಜಿಕೆ ಮೊಳೆತುದು ಕೇರಿಕೇರಿಯಲಿ
ಲಂಬಿಸಿತು ಭಯತಿಮಿರ ಶೋಕಾ
ಡಂಬರದ ಡಾವರ ವಿವೇಕವ
ಝೊಂಬಿಸಿತು ಧೃತರಾಷ್ಟ್ರ ವಿದುರರ ಪೌರ ಪರಿಜನದ ೧೯

ಬಂದು ಸಂಜಯನಂಧನೃಪತಿಯ
ಮಂದಿರವ ಹೊಕ್ಕಖಿಳ ನಾರೀ
ವೃಂದವನು ಕಳುಹಿದನು ದಂಡಿಗೆಗಳಲಿ ಮನೆಮನೆಗೆ
ಬಂದರಾರೆನೆ ಸಂಜಯನು ಜೀ
ಯೆಂದಡುತ್ಸಾಹದಲಿ ಬಂದೈ
ತಂದೆ ಸಂಜಯ ಬಾಯೆನುತ ತಡವಿದನು ಬೋಳೈಸಿ ೨೦

ಹೋಗಿ ತಳುವಿದೆ ಕೌರವೇಂದ್ರನ
ನೀಗಿದಳೆ ಜಯಲಕ್ಷ್ಮಿ ಪಾಂಡವ
ರಾಗುಹೋಗೇನಾಯ್ತು ಶಕುನಿಯ ಹಯದ ವೋಹರವ
ತಾಗಿ ಮುರಿದನೆ ಭೀಮನೀ ಮೇ
ಲ್ಬೋಗಿನಾಹವವೇನು ರಾಯನ
ತಾಗು ಥಟ್ಟೇನಾಯ್ತು ಸಂಜಯ ತಿಳಿಯಹೇಳೆಂದ ೨೧

ಶಕುನಿ ಬಿದ್ದನು ಜೀಯ ಸಹದೇ
ವಕನ ಕೈಯಲುಳೂಕ ಮಡಿದನು
ನಕುಲನಂಬಿನಲಾ ತ್ರಿಗರ್ತ ಸುಶರ್ಮಕಾದಿಗಳು
ಸಕಲ ಗಜಹಯಸೇನೆ ಸಮಸ
ಪ್ತಕರು ಪಾರ್ಥನ ಶರದಲಮರೀ
ನಿಕರವನು ಸೇರಿದರು ಹೇಳುವುದೇನು ರಣರಸವ ೨೨

ಬಳಿಕ ನೂರಾನೆಯಲಿ ನಿನ್ನವ
ನಳವಿಗೊಟ್ಟನು ಭೀಮಸೇನನ
ಚಲಗತಿಯ ಚಾತುರ ಚಪೇಟ ಪದಪ್ರಹಾರದಲಿ
ಕಳನೊಳಗೆ ಕೋಡೂರಿ ಮುಗ್ಗುಲ
ನೆಲಕೆ ಕೀಲಿಸಲಾನೆಯಿಂದಿಳೆ
ಗಿಳಿದು ಹಾಯ್ದನು ಭಯದಿನೇಕಾಂಗದಲಿ ಕುರುರಾಯ ೨೩

ಕುರುಪತಿಯನರಸುತ್ತ ತಾನೈ
ತರಲು ಸಾತ್ಯಕಿ ಕಂಡು ಸೂಠಿಯ
ಲುರವಣಿಸಿ ಹರಿತಂದು ಹಿಡಿದನು ಹೊಯ್ದು ಕೆಲಬಲನ
ಕರೆದು ಧೃಷ್ಟದ್ಯುಮ್ನ ತನ್ನಯ
ಶಿರವನರಿಯನೆ ಬಳಿಕ ಸಾತ್ಯಕಿ
ಕರವ ಖಡುಗವನುಗಿದು ಹೊಡಿದನೆನ್ನ ಗಂಟಲಲಿ ೨೪

ಜಲಧಿಯಲಿ ಫಣಿವದನದಲಿ ರಿಪು
ಬಲವ ಮುಖದಲಿ ಸಿಡಿಲ ಹೊಯ್ಲಲಿ
ಹಳುವದಲಿ ಗಿರಿಶಿಖರದಲಿ ದಾವಾಗ್ನಿ ಮಧ್ಯದಲಿ
ಸಿಲುಕಿದಡೆ ಬಿಡಿಸುವವಲೇ ಪ್ರತಿ
ಫಲಿತ ಪೂರ್ವಾದತ್ತ ಪುಣ್ಯಾ
ವಳಿಗಳೆಂಬುದು ತನ್ನೊಳಾದುದು ಭೂಪ ಕೇಳೆಂದ ೨೫

ಆವ ವಹಿಲದೊಳಾದುದಾವಿ
ರ್ಭಾವವೆಂದಾನರಿಯೆನಾಗಳೆ
ದೇವಮುನಿಯಡ್ಡೈಸಿ ಹಿಡಿದನು ಕೊರಳಡಾಯುಧವ
ಸಾವು ತಪ್ಪಿತು ಬಾದರಾಯಣ
ನೋವಿ ಕೃಪೆಯಲಿ ಮೈದಡವಿ ಸಂ
ಭಾವಿಸುತ ಕುರುಪತಿಯನರಸೆಂದೆನಗೆ ನೇಮಿಸಿದ ೨೬

ಬೀಳುಕೊಂಡೆನು ಮುನಿಯನವನೀ
ಪಾಲಕನನರಸಿದೆನು ಕಳನೊಳು
ಸಾಲ ಹೆಣನೊಟ್ಟಿಲ ಕಬಂಧದ ರುಧಿರಪೂರದಲಿ
ಬೀಳುತೇಳುತ ನಿಲುತ ಬಳಲಿದು
ಕಾಲುನಡೆಯಲಿ ಸುಳಿವ ಕುರು ಭೂ
ಪಾಲಕನ ಕಂಡೊಡನೆ ಬಂದೆನು ಕೊಳನ ತಡಿಗಾಗಿ ೨೭

ಇಳಿದು ಸರಸಿಯ ಮಧ್ಯದಲಿ ನೃಪ
ತಿಲಕ ನಿಂದನು ಪಾಳೆಯವ ನೀ
ಕಳುಹು ಗಜಪುರಿಗೆನಲು ಬಂದೆನು ಪಥದ ಮಧ್ಯದಲಿ
ಸುಳಿವ ಕಂಡೆನು ಕೃಪನನಾ ಗುರು
ಗಳ ಮಗನ ಕೃತವರ್ಮಕನನಂ
ದುಳಿದ ಮೂವರ ಕಳುಹಿದೆನು ಕುರುಪತಿಯ ಹೊರೆಗಾಗಿ ೨೮

ತಂದೆನಿಲ್ಲಿಗೆ ಸಕಲ ನಾರೀ
ವೃಂದವನು ಕುರುಪತಿಯ ನೇಮದ
ಲಿಂದಿನೀ ವೃತ್ತಾಂತ ವರ್ತಿಸಿತಿಲ್ಲಿ ಪರಿಯಂತ
ಮುಂದೆ ಹೇಳುವುದೇನು ನೀ ಬೆಸ
ಸೆಂದಡವನೀಪತಿಯ ಹೊರೆಗೈ
ತಂದನೇ ಗುರುಸೂನು ಮೇಲಣ ಹದನ ಹೇಳೆಂದ ೨೯

ಅರಸ ಕೇಳ್ ಕೃಪ ಗುರುಜ ಕೃತವ
ರ್ಮರು ರಥಾಶ್ವಂಗಳನು ದೂರದ
ಲಿರಿಸಿ ತಲೆಮುಸುಕಿನಲಿ ಬಂದರು ಕೊಳನ ತಡಿಗಾಗಿ
ತರುಲತೆಗಳಿರುಬಿನಲಿ ಕಂಜಾ
ಕರದ ತಡಿಯಲಿ ನಿಂದು ಮೆಲ್ಲನೆ
ಕರೆದು ಕೇಳಿಸಿ ಹೇಳಿದರು ತಂತಮ್ಮ ಹೆಸರುಗಳ ೩೦

ಬದುಕಿ ಬಂದಿರೆ ಭೀಮ ನಿಮ್ಮನು
ಗದೆಯ ಸವಿಗಾಣಿಸನಲಾ ಸಾ
ಕಿದನ ಸಮಯಕೆ ಸುಳಿದಿರೈ ಸಾಹಿತ್ಯರೇಖೆಯಲಿ
ಕದನದಲಿ ಸೌಬಲ ಸುಶರ್ಮರ
ಹೊದರ ಹರೆಗಡಿವಲ್ಲಿ ನೀವ್ ಮಾ
ಡಿದ ಪರಾಕ್ರಮವಾವುದೆಂದನು ನೃಪತಿ ಖಾತಿಯಲಿ ೩೧

ಜೀಯ ಖತಿಯೇಕೆವ್ಮೊಡನೆ ಚ
ಕ್ರಾಯುಧನ ಚಾತುರ್ಯದಲಿ ರಣ
ದಾಯತಪ್ಪಿತು ಭಟರು ಬೀತುದು ಹೇಳಲೇನದನು
ಕಾಯಿದರೊ ಕಾದಿದರೊ ಗುರು ಗಾಂ
ಗೇಯ ಸೈಂಧವ ಮಾದ್ರಪತಿ ರಾ
ಧೇಯರನುಗತವಾಗದಿಹುದಪರಾಧ ನಮಗೆಂದ ೩೨

ಅರಸ ಹೊರವಡು ಭೀಮಪಾರ್ಥರ
ಕರುಳ ಬೀಯುವ ಭೂತನಿಕರಕೆ
ಬರಿಸುವೆವು ನೀ ನೋಡಲೊಡ್ಡು ವೆವಸ್ತ್ರಸಂತತಿಯ
ಗರುವರಿಹರೇ ನೀರೊಳಾ ಹಿಮ
ಕರ ಮಹಾನ್ವಯ ಕೀರ್ತಿ ಜಲದೊಳು
ಕರಗದಿಹುದೇ ಕಷ್ಟವೃತ್ತಿಯದೆಂದರವನಿಪನ ೩೩

ಏಳು ಕುರುಪತಿ ಪಾಂಡುತನಯು
ವ್ಯಾಳಸೇನೆಗೆ ಸಿಂಹವಿದೆ ನಿ
ನ್ನಾಳ ಬಿಡು ನೀ ನೋಡುತಿರು ಕರ್ಣಾದಿ ಸುಭಟರಲಿ
ಜಾಳಿಸಿದ ಜಯಕಾಮಿನಿಯ ಜಂ
ಘಾಳತನವನು ನಿಲಿಸಿ ನಿನ್ನಯ
ತೋಳಿನಲಿ ತೋರುವೆವು ಮೈದೋರೆಂದರವನಿಪನ ೩೪

ಒಪ್ಪದಿದು ಭೀಷ್ಮಾದಿಯವ್ವನ
ದರ್ಪದಲಿ ಜಾರಿದ ಜಯಾಂಗನೆ
ಮುಪ್ಪಿನಲಿ ನಮಗೊಲಿವುದರಿದೇಕಾಕಿಯಾದೆವಲೆ
ತಪ್ಪಿದುದನೀ ಸಲಿಲವಾಸದೊ
ಳೊಪ್ಪವಿಡುವೆನು ನಾಳೆ ನೀವ್ ತೊಲ
ಗಿಪ್ಪುದಿಂದಿನೊಳೆಂದನವನಿಪನಾ ಕೃಪಾದಿಗಳ ೩೫

ಇವೆ ಮಹಾಮಂತ್ರಾಸ್ತ್ರಸಂತತಿ
ಯಿವೆ ಮಹಾಧನುರಾಜ್ಯಸತ್ಕೃತಿ
ಸವನ ಸಾಪೇಕ್ಷಂಗಳಿವೆ ತ್ರೈರಥಿಕರೊಬ್ಬರಲಿ
ಅವನಿಪತಿ ನೀ ಸೇಸೆದಳಿ ವಿ
ಕ್ಕವರು ಸೇನೆ ವಿರೋಧಿವರ್ಗಕೆ
ದಿವವೊ ಧರೆಯೋ ನೋಡಲಹುದೇಳೆಂದನಾ ದ್ರೌಣಿ ೩೬

ಸೇಸೆದಳಿದೆನು ಭೀಷ್ಮಗಗ್ಗದ
ಭಾಷೆ ನಿಮ್ಮಯ್ಯನಲಿ ಗತವಾ
ಯ್ತೇಸ ಪತಿಕರಿಸಿದೆನು ಕರ್ಣನನಂದು ನೀನರಿಯ
ಓಸರಿಸಿದನೆ ಮಾದ್ರಪತಿ ಬಳಿ
ಕೀಸು ಬಂದುದು ದೈವದೊಲಹಿನ
ಪೈಸರಕೆ ನೀವೇನ ಮಾಡುವಿರೆಂದನಾ ಭೂಪ ೩೭

ರಣದೊಳಾ ಗಾಂಗೇಯಗಿಮ್ಮಡಿ
ಗುಣವ ತೋರುವೆನಪ್ಪನವರಿಂ
ದೆಣಿಸಿಕೊಳು ಮೂವಡಿಯನಗ್ಗದ ಸೂತನಂದನನ
ರಣಕೆ ನಾಲ್ವಡಿ ಮಾದ್ರರಾಜನ
ಹೊಣಕೆಗೈದು ಸುಂಶರ್ಮ ಶಕುನಿಗ
ಳೆಣೆಸುವಡೆ ಪಾಡಲ್ಲ ನೋಡೇಳೆಂದನಾ ದ್ರೌಣಿ ೩೮

ಖರೆಯರ್ಮೈ ನೀವುಭಯ ರಾಯರ
ಗುರುಗಳದು ಕುಂದಿಲ್ಲ ಕೃಪನೇ
ಹಿರಿಯನಾಚಾರಿಯನು ಯಾದವರೊಳಗೆ ಕೃತವರ್ಮ
ಗರುವರೈ ನೀವಿಲ್ಲಿ ರಣಬಾ
ಹಿರರೆ ಸಾಕಂತಿರಲಿ ಸುಕೃತದೊ
ಳರಗೆಲಸಿಗಳು ನಾವೆ ನಿಮ್ಮಲಿ ಕೊರತೆಯಿಲ್ಲೆಂದ ೩೯

ಅರಸ ಕೇಳೈ ಸುಕೃತವನು ವಿ
ಸ್ತರಿಸುವೆನು ಪೂರಾಯವೆನೆ ಕಾ
ಹುರದ ನುಡಿ ಬೇಡೇಳು ನಡೆವುದು ಹಸ್ತಿನಾಪುರಿಗೆ
ಅರಿಗಳೈತಂದೌಕಿದಡೆ ಗಜ
ಪುರದ ದುರ್ಗವ ಬಲಿದು ನಿಲುವುದು
ಪರಮಮಂತ್ರವಿದೆಂದನಶ್ವತ್ಥಾಮನವನಿಪನ ೪೦

ಸಲಿಲ ಮಧ್ಯದೊಳಿಂದಿನಿರುಳನು
ಕಳೆದೆನಾದಡೆ ಪಾಂಡುಪುತ್ರರ
ಗೆಲುವೆನುದಯದೊಳಿದುವೆ ನಿಶ್ಚಯವೆನ್ನ ಚಿತ್ತದಲಿ
ಅಳುಕಿ ಕದನದೊಳೋಡಿ ನಗರಿಯ
ಲಲನೆಯರ ಮರೆಗೊಂಬೆನೇ ನೀವ್
ತೊಲಗಿ ಭೀಮನ ಬೇಹು ಬಹುದಿರಬೇಡ ನೀವೆಂದ ೪೧

ಅರಸ ಕೇಳೈ ದೈವಯೋಗವ
ಪರಿಹರಿಸಲಾರಳವು ಪವನಜ
ನರಮನೆಯ ಮೃಗವೇಂಟೆಕಾರರು ಮಾಂಸಭಾರದಲಿ
ಬರುತ ನೀರಡಿಸಿದರು ಕಂಡರು
ಸರಸಿಯನು ನೀರ್ಗುಡಿಯಲೈತಂ
ದಿರಿಸಿದರು ತೀರದಲಿ ಬಹಳಾಮಿಷದ ಕಂಬಿಗಳ ೪೨

ಚರಣ ವದನವ ತೊಳೆದು ನಿರ್ಮಳ
ತರವರಾಂಬುವನೀಂಟಿದರು ಕೃಪ
ಗುರುಸುತರ ನುಡಿಗಳನು ನಡುನೀರಲಿ ನೃಪಧ್ವನಿಯ
ಅರಿದರಿವರಾಲಿಸಿದರೇನಿದು
ಕುರುಪತಿಯು ತತ್ಸಂಭಟವಾದೊ
ತ್ತರವಲಾ ಲೇಸಾಯ್ತೆನುತ ಕೇಳಿದರು ಮರೆವಿಡಿದು ೪೩

ಆಯಿತಿದು ನೃಪರಾಜಕಾರ್ಯದ
ದಾಯಕಿದು ಧುರಪಥವಲಾ ಕುರು
ರಾಯಗುಪ್ತನಿವಾಸವರ್ಥಪ್ರದವಲಾ ನಮಗೆ
ಕಾಯಿದಿರಿ ಕಂಡೌ ಸರೋಜದ
ತಾಯಿ ಸರಸಿಯೆನುತ್ತ ಹೋದರು
ವಾಯುತನುಜನ ಬೇಂಟೆಕಾರರು ನಗುತ ಪಾಳೆಯಕೆ ೪೪

ಅರಸ ಕೇಳ್ ಸಮಸಪ್ತಕರ ಸಂ
ಹರಿಸಿ ಶಕುನಿಯ ಮುರಿದು ಕಳನಲಿ
ದೊರೆಯ ಕಾಣದೆ ಭೀಮಸೇನಾರ್ಜುನರು ದುಗುಡದಲಿ
ಪರಿಸಿದರು ದೂತರನು ಕೌರವ
ಧರಣಿಪನ ಪಾಳೆಯಕೆ ಹಸ್ತಿನ
ಪುರಿಗೆ ಕೂಡೆ ದಿಗಂತದಲಿ ಚರರರಸಿದರು ನೃಪನ ೪೫

ಹರಿದು ದೂತರು ನೃಪನ ಕಾಣದೆ
ಮರಳಿದರು ಯಮಸೂನು ದುಗುಡದ
ಭರದ ಭಾರವಣೆಯಲಿ ಹೊಕ್ಕನು ತನ್ನ ಪಾಳೆಯವ
ಕುರುನೃಪತಿ ತಪ್ಪಿದನು ಭೀಷ್ಮಾ
ದ್ಯರ ವಿಜಯ ವ್ಯಥೆಯಾಯ್ತು ಹಸ್ತಿನ
ಪುರದ ಸಿರಿ ಜಾರಿದಳು ತನಗೆಂದರಸ ಬಿಸುಸುಯ್ದು ೪೬

ಹೆಣನ ಬಗಿದರಸಿದರು ಕರಿಗಳ
ಹಣೆದವಲಿ ನೋಡಿದರು ರಥಸಂ
ದಣೆಗಳೊಟ್ಟಿಲ ಕೆದರಿ ಭೀಷ್ಮನ ಸರಳ ಮಂಚದಲಿ
ಹಣುಗಿದರು ಭಗದತ್ತನಾನೆಯ
ನಣೆದುನೋಡಿದರರುಣವಾರಿಯ
ಕೆಣಕಿ ಕೂಡರಸಿದರು ಚಾರರು ಕಳನ ಚೌಕದಲಿ ೪೭

ಹರಿಹರಿದು ಕೂಡರಸಿ ದೂತರು
ಮರಳಿ ಬಂದರು ದುಗುಡಭರದಲಿ
ಬೆರಳ ಮೂಗಿನಲಿದ್ದುದವನಿಪಸಹಿತ ಪರಿವಾರ
ಇರುಳು ಬೇಗೆಯ ಚಕ್ರವಾಕಕೆ
ತರಣಿ ತಲೆದೋರಿದವೊಲಟವೀ
ಚರರಿಗರಸಗೆ ಭಾವಭಾವ ವ್ಯಕ್ತವಾಯ್ತೆಂದ ೪೮

ತಂದ ಮಾಂಸದ ಕಂಬಿಗಳನು ಪು
ಳಿಂದರೊಪ್ಪಿಸಿ ಭೀಮಸೇನನ
ಮುಂದಿರವ ಸಾರಿದರು ಕಂಡರು ಜನದ ಕಳವಳವ
ಇಂದಿನೀ ಸಂಗ್ರಾಮಜಯದಲಿ
ಬಂದ ಜಾಡ್ಯವಿದೇನು ಬಿನ್ನಹ
ವೆಂದು ಸಲುಗೆಯ ಶಬರಪತಿ ನುಡಿಸಿದನು ಪವನಜನ ೪೯

ರಣಮುಖದೊಳೇಕಾದಶಾಕ್ಷೋ
ಹಿಣಿಯ ಗೆಲಿದುದು ವಿಫಲವಾದುದು
ಜುಣುಗಿದರಿನೃಪನಾವ ಜವನಿಕೆ ಮರೆಯೊಳಡಗಿದನೊ
ತೃಣವನದೊಳಿರುಬಿನಲಿ ಮೆಳೆಸಂ
ದಣೆಗಳಲಿ ಮರಗಾಡಿನಲಿ ಮೃಗ
ಗಣದ ನೆಲೆಯಲಿ ಕಾಣೆರಲೆ ನೀವೆಂದನಾ ಭೀಮ ೫೦

ಆದರೆಕ್ಕಟಿ ಬಿನ್ನಹವ ನೀ
ವಾದರಿಪುದೆನೆ ತುಷ್ಟನಾಗಿ ವೃ
ಕೋದರನು ಕರಸಿದನು ಪರಿಮಿತಕಾ ಪುಳಿಂದಕರ
ಆದುದೇ ನೆಲೆ ಕುರುಪತಿಗೆ ದು
ರ್ಭೇದವಿದು ಮೆಚ್ಚುಂಟು ನಿಮಗೆನ
ಲಾ ದುರಾತ್ಮಕರರುಹಿದರು ಧೃತರಾಷ್ಟ್ರ ಕೇಳೆಂದ ೫೧

ಜೀಯ ಕುರುಪತಿ ಗುಪ್ತದಲಿ ದ್ವೈ
ಪಾಯನನ ಸರಸಿಯಲಿ ಸಮುರವಿ
ಧಾಯಕದ ವಾರ್ತೆಯನು ತನ್ನವರೊಡನೆ ತೀರದಲಿ
ಬಾಯಿಗೇಳಿಸುತಿರ್ದ ನಾವ್ ತ
ತ್ತೋಯಪಾನಕೆ ತಿರುಗಿ ಕಂಡೆವು
ರಾಯನಂಘ್ರಿಗಳಾಣೆಯೆಂದರು ಶಬರರನಿಲಜಗೆ ೫೨

ಇತ್ತನವದಿರಿಗಂಗಚಿತ್ತವ
ನುತ್ತಮಾಂಬರ ವೀರ ನೂಪುರ
ಮುತ್ತಿನೇಕಾವಳಿಯ ಕರ್ಣಾಭರಣ ಮುದ್ರಿಕೆಯ
ಹೊತ್ತ ಹರುಷದ ಹೊಳೆವ ಕಂಗಳ
ತೆತ್ತಿಸಿದ ಪುಳಕದ ಸಘಾಡಿಕೆ
ವೆತ್ತ ಸುಮ್ಮಾನದಲಿ ಬಂದನು ರಾಯನರಮನೆಗೆ ೫೩

ಗುಡಿಯ ಕಟ್ಟಿಸು ಜೀಯ ಚರರಿಗೆ
ಕೊಡು ಪಸಾಯವನರಿನೃಪನ ತಲೆ
ವಿಡಿದರಾ ದ್ವೈಪಾಯನ ಸರೋವರದ ಮಧ್ಯದಲಿ
ಅಡಗಿದನು ತಡಿವಿಡಿದು ನಿಂದವ
ರೊಡನೆ ಮಾತಾಡಿದನು ಗಡ ನಿ
ಮ್ಮಡಿಯೆ ಬಲ್ಲಿರಿ ರಾಜಕಾರ್ಯವನೆಂದನಾ ಭೀಮ ೫೪

ಕರೆ ಮುಕುಂದನನರ್ಜುನನ ಸಂ
ವರಣೆ ಬರಲಿ ಶಿಖಂಡಿ ಪಾಂಚಾ
ಲರಿಗೆ ನೇಮಿಸು ಕರಸು ಧೃಷ್ಟದ್ಯುಮ್ನ ಸೃಂಜಯರ
ಕರಿ ತುರಗ ರಥವಿಶ್ರಮವನಿಂ
ದಿರುಳಿನಲಿ ನೂಕುವುದು ಹೊರವಡಿ
ಹೊರವಡೆನೆ ನಿಸ್ಸಾಳ ಸೂಳವಿಸಿದವು ಲಗ್ಗೆಯಲಿ ೫೫

ಅವರ ಸುಮ್ಮಾನವನು ಸೇನಾ
ನಿವಹ ರಭಸದ ಭೂರಿಭೇರಿಯ
ವಿವಿಧ ವಾದ್ಯಧ್ವನಿಯ ರಥಗಜಹಯದ ಗರ್ಜನೆಯ
ಇವರು ಕೇಳಿದರಕಟಕಟ ಕೌ
ರವನ ಗುಪ್ತ ಪ್ರಕಟವಾದುದೆ
ಶಿವಶಿವಾ ಹರಿಸರ್ವಗತನಹುದೆಂದನಾ ದ್ರೌಣಿ ೫೬

ಏಳು ಕುರುಪತಿ ಪಾಂಡುನಂದನ
ರಾಳು ಬರುತಿದೆ ನಾವು ನಾಲ್ವರು
ಕಾಳೆಗದೊಳಂಘೈಸುವೆವು ಬಿಡುಬಿಡು ಸರೋವರವ
ಹೇಳು ಮನವೇನೆನಲು ನೀವಿ
ನ್ನೇಳಿ ದೂರದಲಿರಿ ವಿರೋಧಿಗ
ಳಾಳು ಮಾಡುವುದೇನು ಸಲಿಲದೊಳೆಂದನಾ ಭೂಪ ೫೭

ಅನಿಮಿಷರು ಗಂಧರ್ವ ಯಕ್ಷರು
ಮುನಿದು ಮಾಡುವುದೇನು ಮಾಯದ
ಮನುಜರಿಗೆ ತಾ ಸಾಧ್ಯವಹೆನೇ ತನ್ನನರಿಯಿರಲಾ
ವಿನುತ ಸಲಿಲಸ್ತಂಭವಿದ್ಯೆಯೊ
ಳೆನಗಿರವು ಪಾತಾಳದಲಿ ಯಮ
ತನುಜನೇಗುವ ರೂಹುದೋರದೆ ಹೋಗಿ ನೀವೆಂದ ೫೮

ಉರವಣಿಸಿತರಿಸೇನೆ ಮುತ್ತಿತು
ಸರಸಿಯನು ವೇಢೆಯಲಿ ಗಿಡುಮೆಳೆ
ತರುಲತೆಯಲೊಳಕೊಂಡು ನಿಂದುದು ಚತುರ ಚತುರಂಗ
ನರರ ಗರ್ಜನೆ ವಾದ್ಯರವ ಕರಿ
ತುರಗ ನಿರ್ಘೋಷ ಪರ್ವತ
ಬಿರಿಯೆ ಮೊಳಗಿತು ಸಿಲುಕಿದನು ಸಿಲುಕಿದನು ಹಗೆಯೆನುತ ೫೯

ಇವರು ತಿರುಗಿದರಿನ್ನು ದೈವ
ವ್ಯವಸಿತವೆ ಫಲಿಸುವುದಲಾ ಕೌ
ರವನ ಸಿರಿ ಪಣ್ಯಾಂಗನಾವಿಭ್ರಮವ ವರಿಸಿತಲಾ
ಅವರಿಗಿದನಾರರುಹಿದರೊ ಪಾಂ
ಡವರಿಗಾವುದು ಕೊರತೆ ಪುಣ್ಯ
ಪ್ರವರ ಗದುಗಿನ ವೀರನಾರಾಯಣನ ಕರುಣದಲಿ ೬೦

## ಐದನೆಯ ಸಂಧಿ

ಸೂ. ಮುತ್ತಿಮೂದಲಿಸಿದರು ಕುರುರಾ
ಜೋತ್ತಮನನುದಕದಲಿ ಹೊರವಡಿ
ಸುತ್ತ ಕಂಡರು ಪಾಂಡುತನುಜರು ರೋಹಿಣೀಸುತನ

ಕೇಳು ಧೃತರಾಷ್ಟ್ರಾವನಿಪ ರಿಪು
ಜಾಲ ಜಡಿದುದು ಕೊಳನ ತಡಿಯಲಿ
ತೂಳಿದುದು ಬಲುಬೊಬ್ಬೆಯಬ್ಬರವಭ್ರಮಂಡಲವ
ಸೂಳವಿಸಿದವು ಲಗ್ಗೆಯಲಿ ನಿ
ಸ್ಸಾಳ ಬಹುವಿಧ ವಾದ್ಯರವ ಹೆ
ಗ್ಗಾಳೆಗಳು ಚೀರಿದವು ಬೈಸಿಕೆ ಬಿಡೆ ಕುಲಾದ್ರಿಗಳ ೧

ತಳಮಳಲ ಮೊಗೆಮೊಗೆದು ಕವದಿತು
ಕೊಳನ ಜಲಚರನಿಚಯವೀ ಬೊ
ಬ್ಬುಳಿಕೆ ಮಿಗಲೊಬ್ಬುಳಿಕೆ ನೆಗೆದವು ವಿಗತವೈರದಲಿ
ದಳವ ಬಿಗಿದಂಬುಜದೊಳಡಗಿದ
ವಳಿ ನಿಕರ ಹಾರಿದವು ಹಂಸಾ
ವಳಿ ಜವಾಯಿಲತನದಿ ಜಗುಳ್ದವು ಜಕ್ಕವಕ್ಕಿಗಳು ೨

ಬಂದುದರಿಬಲ ಕೊಳನ ತೀರದ
ಲಂದು ವೇಢೈಸಿದರು ಸರಸಿಯ
ಬಂದಿಕಾರರು ಬೊಬ್ಬಿರಿದರಬ್ಬರಕೆ ಧರೆ ಬಿರಿಯೆ
ಅಂದಣದಲೈತಂದು ಧರ್ಮಜ
ನಿಂದನರ್ಜುನ ಭೀಮ ಯಮಳ ಮು
ಕುಂದ ಸಾತ್ಯಕಿ ದ್ರುಪದಸೂನು ಶಿಖಂಡಿಗಳು ಸಹಿತ ೩

ವರ ಯುಧಾಮನ್ಯೂತ್ತಮೌಂಜಸ
ರಿರಲು ಪಂಚದ್ರೌಪದೀಸುತ
ರರಸ ನಿಮ್ಮ ಯುಯುತ್ಸು ಸೃಂಜಯ ಸೋಮಕಾದಿಗಳು
ಕರಿಗಳೈನೂರೈದು ಸಾವಿರ
ತುರಗಪಯದಳವೆಂಟು ಸಾವಿರ
ವೆರಡು ಸಾವಿರ ರಥವಿದರಿಮೋಹರದ ಪರಿಶೇಷ ೪

ದೇವ ಕಂಡಿರೆ ಕುರುಪತಿಯ ಮಾ
ಯಾವಿಡಂಬನವಿದ್ಯೆಯನು ನಿ
ಷ್ಠೀವನಾವಿರ್ಭೂತ ಸಲಿಲಸ್ತಂಭ ಡಂಬರವ
ಆವುದಿಲ್ಲಿಯ ವಿಧಿಯ ಸಮರ
ವ್ಯಾವಹಾರಿಕ ವಿಷಯ ತಪ್ಪದೆ
ನೀವು ಬೆಸಸುವುದೆಂದನರಸನು ದೇವಕೀಸುತನ ೫

ಭರತವಂಶಲಲಾಮ ಕೇಳ್ ನೃಪ
ವರರ ಪದ್ಧತಿ ಕಂಟಕದಿನು
ತ್ತರಿಸುವುದು ಕಂಟಕವ ಮಾಯಾವಿಗಳ ವಿದ್ಯೆಗಳ
ಪರಿಹರಿಸುವುದು ಮಾಯೆಯಿಂ ಪ್ರತಿ
ಗರಳದಲಿ ಗರಳವನು ಮಾಯಾ
ಪರರು ಮಾಯೋಪಾಯವಧ್ಯರು ಭೂಪ ಕೇಳೆಂದ ೬

ಮರಣವೆಂದಿಂಗಾಗದಂತಿರೆ
ವರವ ಕೊಂಡು ಹಿರಣ್ಯಕಾಸುರ
ಸುರನರೋರಗರನು ವಿಭಾಡಿಸಿ ಧರ್ಮಪದ್ಧತಿಗೆ
ಧರಧುರವ ಮಾಡಿದಡೆ ನರಕೇ
ಸರಿಯ ರೂಪಿನೊಳಾದಿವಿಷ್ಣಂ
ಭರನು ಗೆಲಿದನು ಮಾಯೆಯನು ಮಾಯಾಭಿಯೋಗದಲಿ ೭

ಲಲಿತ ವೈದಿಕ ಧರ್ಮಮಾರ್ಗವ
ನಳಿದು ಹೆಚ್ಚಿದ ಕಾಲನೇಮಿಯ
ತಲೆಯ ಕೊಂಡನು ಚಕ್ರದಲಿ ದೈತ್ಯಾರಿ ಪೂರ್ವದಲಿ
ಬಲನ ಜಂಭನ ವೃತ್ರನನು ಶ್ರಂ
ಖಳಿತ ಮಾಯರ ಮಾಯೆಯಿಂದವೆ
ಬಲವಿರೋಧಿ ವಿಭಾಡಿಸಿದನವನೀಶ ಕೇಳೆಂದ ೮

ಹರನ ವರದಲಿ ಹೆಚ್ಚಿ ಭಸ್ಮಾ
ಸುರನು ಶಿವನ ವಿರೋಧಿಸಿದನು
ಬ್ಬರದವನನುರುಹಿದನು ಹರಿ ಮಾಯಾಪ್ರಯೋಗದಲಿ
ಸುರರನರೆಯಾಳಿದನು ಭುವನವ
ನೊರಲಿಸಿದ ರಾವಣನ ರೂಢಿಯ
ಶಿರವ ನರರೂಪಿನಲಿ ಖತಿಯಲಿ ರಾಮ ಖಂಡಿಸಿದ ೯

ಎಮಗೆ ತಾಯೊಡಹುಟ್ಟಿದನು ನಿ
ರ್ಮಮತೆಯಲಿ ನಿರ್ದಾಟಿಸಿದನಾ
ಕ್ರಮದಲೇ ಕಂಸಂಗೆ ಹಿಂಸಾಕೃತಿಯ ರಚಿಸಿದೆವು
ಸಮರದೊಳಗೆ ಸೃಗಾಲನೃಪನಾ
ಕ್ರಮಿಸಿದನು ಠಕ್ಕಿನಲಿ ಮಾಯಾ
ತಿಮಿರವನು ಮಾಯೆಯಲಿ ಗೆಲಿದೆವು ಭೂಪ ಕೇಳೆಂದ ೧೦

ಕಾಲಯವನನ ದಂತವಕ್ರನ
ಸಾಲುವನ ಮಾಗಧನ ನರಕನ
ಸೀಳಿದೆವು ಕೃತಮಾಯರನು ಮಾಯಾಪ್ರಪಂಚದಲಿ
ಥಾಳರನು ಥವಳರನು ಠಕ್ಕಿನ
ಠೌಳಿಕಾರರನವರ ವಿದ್ಯೆಯ
ಲಾಳಿಗೊಂಡಡೆ ದೋಷವಿಲ್ಲವನೀಶ ಕೇಳೆಂದ ೧೧

ದ್ಯೂತ ಮೃಗಯಾವ್ಯಸನವಿವು ನೃಪ
ಜಾತಿಗಾವ ವಿನೋದ ಕಪಟ
ದ್ಯೂತವಿದು ನೃಪಧರ್ಮವೇ ಮಾಯಾಭಿಯೋಗದಲಿ
ಸೋತಿರಿಳೆಯನದಂತಿರಲಿ ನಿ
ರ್ಭೀತಿಯಲಿ ನಿಮ್ಮರಸಿಯುಟ್ಟುದ
ನೀತ ಸುಲಿಸಿದನಿವನು ಸುಜನನೆ ಭೂಪ ಹೇಳೆಂದ ೧೨

ಐಹಿಕದ ಸಂಭಾವನೆಯ ಸ
ಮ್ಮೋಹನಕೆ ಮರುಳಾಗಿ ಸುಕೃತ
ದ್ರೋಹವಾಗದಲೇ ಸುಯೋಧನವಧೆಯ ದೆಸೆಯಿಂದ
ಈ ಹದನ ಬಿನ್ನೈಸಿದೆವು ನೀ
ವಾಹವಕೆ ಧರ್ಮಾರ್ಥಶಾಸ್ತ್ರವ
ನೂಹಿಸಿದಿರೆಂದರಸ ನುಡಿಸಿದನಿತ್ತ ಕುರುಪತಿಯ ೧೩

ಏಳು ಕೌರವರಾಯ ಸಲಿಲ
ವ್ಯಾಳನೇ ನೀನಕಟ ಜಲದೊಳ
ಗಾಳುವರೆ ಕಾಳಾಯ್ತು ನಿನ್ನಲಿ ಗರುವ ಶಶಿವಂಶ
ಕಾಳಗದೊಳದ್ದಿದೆ ಸಹೋದರ
ಜಾಲ ಪುತ್ರಜ್ಞಾತಿ ಬಂಧು ನೃ
ಪಾಲರನು ನೀ ನೀರೊಳಡಗಿದೆ ಕಷ್ಟವಾಯ್ತೆಂದ ೧೪

ಜಾತಿಮಾತ್ರದಮೇಲೆ ಬಂದ
ಖ್ಯಾತಿವಿಖ್ಯಾತಿಗಳು ನಮಗೆನೆ
ಜಾತರಾದೆವು ನಾವು ನಿರ್ಮಳಸೋಮವಂಶದಲಿ
ಭೀತಿಯಲಿ ನೀ ನೀರ ಹೊಕ್ಕಡೆ
ಮಾತು ತಾಗದೆ ತಮ್ಮನಕಟಾ
ಬೂತುಗಳ ಕೈಬಾಯ್ಗೆ ಬಂದೈ ತಂದೆ ಕುರುರಾಯ ೧೫

ನಾಡೊಳರ್ಧವ ಕೊಡದೆ ಹೋದಡೆ
ಬೇಡಿದೈದೂರುಗಳ ಕೊಡುಯೆನ
ಲೇಡಿಸಿದಲೈ ಸೂಚಿಯಗ್ರಪ್ರಮಿತಧಾರುಣಿಯ
ಕೂಡೆ ನೀ ಕೊಡೆನೆಂದು ದರ್ಪವ
ಮಾಡಿ ಸಕಲ ಮಹೀತಳವ ಹೋ
ಗಾಡಿ ಹೊಕ್ಕೈ ಜಲವನಾವೆಡೆ ನಿನ್ನ ಛಲವೆಂದ ೧೬

ಹೇಳಿದರಲಾ ಭೀಷ್ಮವಿದುರರು
ಮೇಲುದಾಯದ ತಾಗುಥಟ್ಟನು
ಕೇಳದಖಿಳಾಕ್ಷೋಹಿಣಿಯ ಕ್ಷತ್ರಿಯರ ತಡೆಗಡಿಸಿ
ಕಾಳಗದೊಳೊಟ್ಟೈಸಿ ನೀರೊಳು
ಬೀಳುವುದ ನಿನಗಾರು ಬುದ್ಧಿಯ
ಹೇಳಿದರು ನುಡಿ ನುಡಿ ಸುಯೋಧನ ಎಂದನಾ ಭೂಪ ೧೭

ಕಂಡೆವಂದೊಬ್ಬನ ಪಲಾಯನ
ಪಂಡಿತನನುತ್ತರನನಾತನ
ಗಂಡ ನೀನಾದೈ ಪಲಾಯನಸಿರಿಯ ಸೂರೆಯಲಿ
ಭಂಡರಿಬ್ಬರು ಭೂಮಿಪರೊಳಾ
ಭಂಡನಿಗೆ ನೀ ಮಿಗಿಲು ಸಲಿಲದ
ಕೊಂಡದಲಿ ಹೊಕ್ಕನೆ ವಿರಾಟಜನೆಂದನಾ ಭೂಪ ೧೮

ಅಡವಿಯೇ ನೆಲೆ ಪಾಂಡುಸುತರಿಗೆ
ಕೊಡೆನು ಧರಣಿಯನೆಂದು ಖಡುಗವ
ಜಡಿದೆಲಾ ನಿನ್ನೋಲಗದ ನಾರಿಯರ ಸಮ್ಮುಖದಿ
ಖಡುಗವನು ಕಳನೊಳಗೆ ಹಾಯಿಕಿ
ನಡುಗೊಳನ ನೀನೋಡಿ ಹೊಕ್ಕಡೆ
ಮಡದಿಯರು ತಮತಮಗೆ ನಗರೇ ಹೊಯ್ದು ಕರತಳವ ೧೯

ಜೀವಸಖ ರಾಧೇಯನಾತನ
ಸಾವಿನಲಿ ನೀನುಳಿದೆ ಸೋದರ
ಮಾವ ಶಕುನಿಯ ಸೈಂಧವನ ದುಶ್ಶಾಸನಾದಿಗಳ
ಸಾವಿನಲಿ ಹಿಂದುಳಿದ ಜೀವನ
ಜೀವನವೆ ಜೀವನನಿವಾಸವಿ
ದಾವ ಗರುವಿಕೆ ಕೊಳನ ಹೊರವಡು ಕೈದುಗೊಳ್ಳೆಂದ ೨೦

ಓಡಿ ಕೈದುವ ಹಾಯ್ಕಿ ಕಳನೊಳು
ಹೇಡಿಗರ ಹಿಡಿದಳುಕಿ ಬದುಕಿದ
ಗೂಡಿಹುದೆ ಗರುವಾಯಿಯಲಿ ಕಲ್ಪಾಂತಪರಿಯಂತ
ಓಡಿ ಪಾತಾಳವನು ಹೊಕ್ಕಡೆ
ಕೂಡೆ ಸಂಧಿಸಿ ನಿನ್ನ ಬೇಂಟೆಯ
ನಾಡದಿಹ ಠಾವುಂಟೆ ಕುರುಪತಿ ಕೈದುಗೊಳ್ಳೆಂದ ೨೧

ಭರತ ನಹುಷ ಯಯಾತಿ ನಳ ಸಂ
ವರಣ ಸಗರ ದಿಳೀಪ ನೃಗ ರಘು
ವರ ಪುರೂರವ ಧುಂಧುಮಾರ ಭಗೀರಥಾದಿಗಳು
ಧರಣಿಪಾಲರನಂತಸಮರದೊ
ಳರಿಬಲವ ಸವರಿದರು ನಿನ್ನವೊ
ಲುರುಳಿದವರಾರುದಕದಲಿ ನೃಪ ಕೈದುಗೊಳ್ಳೆಂದ ೨೨

ಕೊಳನ ಬಿಡು ಕಾದೇಳು ಹಿಂದಣ
ಹಳಿವ ತೊಳೆ ಹೇರಾಳ ಬಾಂಧವ
ಬಳಗ ಭೂಮೀಶ್ವರರ ಬಹಳಾಕ್ಷೋಹಿಣೀದಳವ
ಅಳಿದ ಕೀರ್ತಿಯ ಕೆಸರ ತೊಳೆ ಭೂ
ವಳಯಮಾನ್ಯನು ದೈನ್ಯವೃತ್ತಿಯ
ಬಳಸುವರೆ ಸುಡು ಮರುಳೆ ಕುರುಪತಿ ಕೈದುಗೊಳ್ಳೆಂದ ೨೩

ವಿಷವನಿಕ್ಕಿದೆ ಹಾವಿನಲಿ ಬಂ
ಧಿಸಿದೆ ಮಡುವಿನೊಳಿಕ್ಕಿ ಬಳಿಕು
ಬ್ಬಸವ ಮಾಡಿದೆ ಹಿಂದೆ ಮನಮುನಿಸಾಗಿ ಬಾಲ್ಯದಲಿ
ವಸತಿಯಲಿ ಬಳಿಕಗ್ನಿದೇವರ
ಪಸರಿಸಿದೆ ಪುಣ್ಯದಲಿ ನಾವ್ ಜೀ
ವಿಸಿದೆವಡಗಿದಡಿನ್ನು ಬಿಡುವೆನೆಯೆಂದನಾ ಭೀಮ ೨೪

ಎಲವೊ ರಾಯನ ಪಟ್ಟದರಸಿಯ
ಸುಲಿಸಿದಾ ಛಲವೆಲ್ಲಿ ಹಗೆಗಳ
ಹಳುವದಲಿ ಹೊಗಿಸಿದೆನೆನಿಪ ಸುಮ್ಮಾನ ತಾನೆಲ್ಲಿ
ಖಳ ಶಿರೋಮಣಿ ನಿನ್ನ ತಲೆಗೂ
ದಲಲಿ ಕೈಗಳ ಕಟ್ಟಿ ಖೇಚರ
ನೆಳೆಯೆ ಬಿಡಿಸಿದರಾರು ಕೌರವ ಎಂದನಾ ಭೀಮ ೨೫

ಭೀಮನೆನೆ ಭುಗಿಲೆಂಬ ರೋಷದ
ತಾಮಸವ ಬೀಳ್ಕೊಟ್ಟೆಲಾ ನಿ
ನ್ನಾಮವಾದುದೆ ಬಿರುದು ಪಾಂಡವತಿಮಿರರವಿಯೆಂಬ
ಭೀಮವನದಾವಾಗ್ನಿ ಹೊರವಡು
ಭೀಮಭಾಸ್ಕರರಾಹು ಹೊರವಡು
ಭೀಮಗರ್ಜನೆ ಮಧುರಗೀತವೆ ನೃಪತಿಯೇಳೆಂದ ೨೬

ಕೆಡಹಿ ದುಶ್ಶಾಸನನ ರಕುತವ
ಕುಡಿದವನು ತಾನಲ್ಲಲೇ ನಿ
ನ್ನೊಡನೆ ಹುಟ್ಟಿದ ನೂರ ನುಂಗಿದ ಕಾಲಯಮನಲ್ಲಾ
ಅಡಗಿದಡೆ ಬಿಡುವೆನೆ ಭಯಜ್ವರ
ಹಿಡಿದ ನಿನ್ನನು ಸೆಳೆದು ರಣದಲಿ
ತೊಡೆಯ ಕಳಚುವ ಮತ್ತು ಭೀಮನ ಕಯ್ಯ ನೋಡೆಂದ ೨೭

ಜಲವಹೊಕ್ಕನ ಹುಲ್ಲ ಕಚ್ಚಿದ
ಖಳನ ತರುಗಿರಿಶಿಖರದಲಿ ಕಾ
ಲ್ವೊಳಸಿದನ ವಲ್ಮೀಕಸಂಗತನನು ನಿರಾಯುಧನ
ಕೊಲುವುದನುಚಿತವೆಂಬ ಶಾಸ್ತ್ರವ
ತಿಳಿದು ನಂಬಿದೆ ನಿನ್ನನೊಬ್ಬನ
ಕೊಲುವುದಕೆ ಶ್ರುತಶಾಸ್ತ್ರರಾವಲ್ಲೆಂದನಾ ಭೀಮ ೨೮

ಅರಸನಲಿ ಹಗೆಯಿಲ್ಲ ಯಮಳರು
ತರಳರಲಿ ಮುನಿಸಿಲ್ಲ ಫಲುಗುಣ
ನರೆವಿರೋಧಿ ಸಗರ್ವಿ ಭೀಮನ ಬಾಡ ಕೊಯ್ಕೊಯ್ದು
ಮರುಳ ಬಳಗವ ತಣಿಸಿದಡೆ
ಹಿರಿಯರರಸರಲಿ ಸಂಧಾನವೆಂಬೈ
ಕುರ ಪತಿಯೆ ನೆರೆ ವೈರಿ ಭೀಮನ ಸೀಳಲೇಳೆಂದ ೨೯

ತನತನಗೆ ಸಾತ್ಯಕಿ ಯಮಳ ಫಲು
ಗುಣರು ಪಂಚದ್ರೌಪದೀನಂ
ದನರು ಧೃಷ್ಟದ್ಯುಮ್ನ ಸೃಂಜಯ ಸೋಮಕಾದಿಗಳು
ಅನುಚಿತವು ಸಲಿಲಪ್ರವೇಶವು
ಜನಪತಿಗೆ ಕರ್ತವ್ಯವೆಂಬುದು
ಜನಜನಿತವೆಂದುಲಿದುದೈದೆ ಸಮುದ್ರಘೋಷದಲಿ ೩೦

ಅರಸ ಕೇಳೈ ನಿನ್ನ ಮಗನು
ಬ್ಬರಿಸಿದನು ರೋಮಾಂಚದಲಿ ಗ
ಬ್ಬರಿಸುತಧಿಕಕ್ರೋಧಶಿಖಿ ಕರಣೇಂದ್ರಿಯಾದಿಗಳ
ತುರಗಿದಂತಃಖೇದ ಮಂತ್ರಾ
ಕ್ಷರಕೆ ಜವನಿಕೆಯಾದುದೈ ನಿ
ರ್ಭರದ ವೀರಾವೇಶದಲಿ ಪಲ್ಲಟಿಸಿದನು ಭೂಪ ೩೧

ಮುರಿದುದುದಕಸ್ತಂಭ ಸಲಿಲದ
ಹೊರಗೆ ಬೊಬ್ಬುಳಿಕೆಗಳ ತೆರೆ ನೊರೆ
ದುರುಗಿದವು ಘುಳುಘುಳಿಸಿ ಜಲಬುದ್ಬುದದ ಚೂಣಿಯಲಿ
ದುರುದುರಿಪ ಬಿಸುಸುಯ್ಲ ಸೆಕೆಯಲಿ
ಮರುಗಿ ಕುದಿದುದು ನೀರು ಭೀಮನ
ಬಿರುನುಡಿಯ ಬೇಳಂಬದಲಿ ಬೆಂಡಾದನಾ ಭೂಪ ೩೨

ಜ್ಞಾನವಳಿದುದು ವೀರಪಣದಭಿ
ಮಾನ ಮಸೆದುದು ಮಂತ್ರನಿಷ್ಠೆಯು
ಮೌನ ಹಿಂಚೆಳೆಯಾಯ್ತು ಮೋಹಿದುದಾಹವವ್ಯಸನ
ದೀನಮನ ಹೊರಗಳೆದುದುದಕ
ಸ್ನಾನಭಾವಕೆ ನಾಚಿದನು ತವ
ಸೂನು ತಳವೆಳಗಾದನಹಿತವಚೋವಿಘಾತದಲಿ ೩೩

ಜಲಧಿ ಮಧ್ಯದೊಳೇಳ್ವ ವಡಬಾ
ನಲನವೊಲು ತವಕದಲಿ ತಡಿಗ
ವ್ವಳಿಸಿದನು ತತ್ಕ್ರೋಧಶಿಖಿ ಕಿಡಿಮಸಗೆ ಕಂಗಳಲಿ
ಹೊಳೆವ ಭಾರಿಯ ಹೆಗಲ ಗದೆ ಕರ
ತಳದ ವಿಪುಳ ಸಘಾಡಗರ್ವದ
ಚಳನಯನದ ಛಡಾಳಛಲದ ನೃಪಾಲ ಹೊರವಂಟ ೩೪

ಅರಳಿತರಸನ ವದನ ಭೀಮನ
ಹರುಷವುಕ್ಕಿತು ಪಾರ್ಥನುಬ್ಬಿದ
ನುರುಮುದದಿನುರೆ ನಕುಲನುಬ್ಬರಿಸಿದನು ಸಹದೇವ
ಹರಕೆಯಲಿ ದೈವಂಗಳಿತ್ತವು
ವರವನೆಂದರು ದ್ರೌಪದೀಸುತ
ರುರು ಶಿಖಂಡಿ ದ್ರುಪದಸುತ ಸಾತ್ಯಕಿಗಳೊಲವಿನಲಿ ೩೫

ನಗೆ ಮಸಗಿ ಕರತಳವ ಹೊಯ್ಹೊ
ಯ್ದೊಗುಮಿಗೆಯ ಹರುಷದಲಿ ನಕುಲಾ
ದಿಗಳು ಬೊಬ್ಬಿರಿದಾರಿದರು ಬಹುವಾದ್ಯರವದೊಡನೆ
ಅಗಿದು ಗಂಡಿಗಟ್ಟಿದವು ಮುಂಗಾ
ಲುಗಳ ಹೊಯ್ಲಲಿ ತೇಜಿಗಳು ಕೈ
ನೆಗಹಿ ಜಯಸೂಚನೆಯಲೊಲೆದವು ಪಟ್ಟದಾನೆಗಳು ೩೬

ಧರಣಿಪತಿ ಕೇಳ್ ಕೊಳನ ತಡಿಯಲಿ
ಕುರುಕುಲಾಗ್ರಣಿ ನಿಂದು ನೋಡಿದ
ನರಿಭಟರ ಸಮ್ಮಾನವನು ಸಂಭ್ರಾಂತಚೇತನವ
ಉರಿದುದಾ ಮಸ್ತಕದ ರೋಷೋ
ತ್ಕರದ ಝಳ ಝಾಡಿಸಿತು ಶುಭ್ರ
ಸ್ಫುರಣದಂತನಿಪೀಡಿತಾಧರನಾದನಾ ಭೂಪ ೩೭

ಪೂತು ಮಝ ಕುರುಪತಿಯ ಘನಸ
ತ್ವಾತಿಶಯವೈ ಕೌರವಾನ್ವಯ
ಜಾತನಲ್ಲಾ ಬುಧ ಪುರೂರವಶಕ್ರಮಾಗತರ
ಖ್ಯಾತನಲ್ಲಾ ಬಂದುದೊಂದ
ಖ್ಯಾತಿ ಸಲಿಲದ ಗಾಹವುಳಿದು
ಶೀತನೊಳು ದೊರೆಯಾರು ಸರಿಯೆಂದನು ಮಹೀಪಾಲ ೩೮

ಅರಸ ತೊಡು ಕವಚವನು ಚಾಮೀ
ಕರ ಪರಿಷ್ಕೃತ ವಜ್ರಮಯ ಬಂ
ಧುರದ ಸೀಸಕವಿದೆ ದುಕೂಲವರಾನುಲೇಪನವ
ಪರಿಹರಿಸಬೇಡೊಲವಿನಲಿ ಪತಿ
ಕರಿಸೆನುತ ಪೆಟ್ಟಿಗೆಯ ಮುಚ್ಚಳ
ತೆರೆದು ಮುಂದಿರಿಸಿದನು ಸೌಹಾರ್ದದಲಿ ಯಮಸೂನು ೩೯

ಪೂರವಿಸಿದನು ಗಂಧವನು ಸರ
ಘೋರಪೋರೆಯ ಮೈಯ ಘಾಯದ
ಹೇರುಗಳ ಹೂಳಿದನು ವರಕಸ್ತುರಿಯ ಸಾರದಲಿ
ಸಾರತರ ಸಾದಿನ ಜವಾಜಿಯ
ಭೂರಿ ಪರಿಮಳದಿಂದ ನವಕ
ಸ್ತೂರಿ ತಿಲಕವ ರಚಿಸಿ ಗೆಲಿದನು ತಿಗುರ ತವಕದಲಿ ೪೦

ತೆಗೆದು ವಜ್ರಾಂಗಿಯನು ಮೈಯಲಿ
ಬಿಗಿದು ಹೊಂಬರಹದ ಸುರತ್ನಾ
ಳಿಗಳ ಬಲು ಸೀಸಕವನಳವಡಿಸಿದನು ಸಿರಿಮುಡಿಗೆ
ಝಗಝಗಿಪ ಬೆಳುದಿಂಗಳಿನ ತೆಳು
ವಗಡೆನಲು ತೊಳಗುವ ದುಕೂಲವ
ಬಿಗಿದು ಮೊನೆ ಮುಂಜೆರಗನಳವಡಿಸಿದನು ದೇಸಿಯಲಿ ೪೧

ಘೋಳಿಸಿದ ಕರ್ಪೂರ ಕಸ್ತುರಿ
ವೀಳೆಯವ ಕೊಂಡೆದ್ದು ಸಮರಾ
ಭೀಳ ಗದೆಯನು ತಿರುಹಿದನು ಪಯಪಾಡನಾರೈದು
ಆಳು ಕವಿಯಲಿ ರಾವುತರ ಸಮು
ಪಾಳಿಯಂಲಿ ಬಿಡಿ ಜೋದರಾನೆಯ
ತೂಳಿಸಲಿ ಸಮರಥರು ಸರಳಿಸಿಯೆಂದನಾ ಭೂಪ ೪೨

ಹಿಡಿ ಧನುವನೆಲೆ ಭೂಪ ಪವನಜ
ತುಡುಕಂ ಗದೆಯನು ಪಾರ್ಥ ಸಮರಕೆ
ತಡೆಯದಿರು ಮಾದ್ರೀಕುಮಾರಕರೇಳಿ ಕಾಳೆಗಕೆ
ಮಿಡುಕು ಧೃಷ್ಟದ್ಯುಮ್ನ ಸಾತ್ಯಕಿ
ಹೊಡಕರಿಸು ಪಾಂಚಾಲ ನೀ ವಂ
ಗಡದೊಳೆಮ್ಮೊಡನೇಳ್ವುದೊಬ್ಬನೆ ನಿಲುವೆ ತಾನೆಂದ ೪೩

ದಿಟ್ಟನೈ ನೃಪರಾವು ಮಝು ಜಗ
ಜಟ್ಟಿಯಲ್ಲಾ ದೊರೆಗಳೊಡನೀ
ಥಟ್ಟಿಗೊಬ್ಬನೆ ನಿಲುವೆನೆಂದನದಾವ ಸತ್ವನಿಧಿ
ಹುಟ್ಟಿದವರಿಗೆ ಸಾವು ಹಣೆಯಲಿ
ಕಟ್ಟಿಹುದು ವಿಧಿಯೆಂದಡೀ ಪರಿ
ಮುಟ್ಟೆ ದೀವಸಿಯಾವನೆಂದುದು ನಿಖಿಳ ಪರಿವಾರ ೪೪

ಮೆಚ್ಚಿದನು ಯಮಸೂನು ಛಲ ನಿನ
ಗೊಚ್ಚತವಲ್ಲೈ ವೈರಿಭಟರಲಿ
ಬೆಚ್ಚಿದಾಡಿದೆಯಾದಡೇನದು ನಮ್ಮೊಳೈವರಲಿ
ಮೆಚ್ಚಿದರ ನೀ ವರಿಸಿ ಕಾದುವು
ದಚ್ಚರಿಯ ಮಾತೇನು ಗೆಲವಿನ
ನಿಚ್ಚಟನೆ ನೆಲಕೊಡೆಯನಹುದಿದು ಸಮಯಕೃತವೆಂದ ೪೫

ನಿನಗೆ ಸೋಲವೆ ನಾವು ಭೂಕಾ
ಮಿನಿಯನಾಳ್ವೆವು ನಮ್ಮೊಳೊಬ್ಬರು
ನಿನಗೆ ಸೋತಡೆ ಮಿಕ್ಕ ನಾಲ್ವರು ನಿನಗೆ ಕಿಂಕರರು
ನಿನಗೆ ಹಸ್ತಿನಪುರದ ಸಿರಿ ಸಂ
ಜನಿತವೀ ಸಂಕೇತವೇ ಸಾ
ಧನ ನಿನಗೆ ನಮಗೆಂದು ನುಡಿದನು ಧರ್ಮಸುತ ನಗುತ ೪೬

ಹಾ ಯುಧಿಷ್ಠಿರ ನಿಮ್ಮ ಕೂಡೆಮ
ಗಾಯಫಲವಿಲ್ಲರ್ಜುನನು ಮಗು
ವೀ ಯಮಳರಿಗೆ ಕೈದುಗೊಳ್ಳೆನು ಹೊಯ್ದು ಕೆಣಕಿದಡೆ
ಬಾಯಿಬಡಿಕನು ಸತ್ವದಲಿ ನಾ
ಗಾಯುತದ ಬಲವೆಂಬ ಡೊಂಬಿನ
ವಾಯುವಿನ ಮಗನೆನ್ನೊಡನೆ ಮಾರಾಂತಡಹುದೆಂದ ೪೭

ವರಿಸಿದೆನು ಭೀಮನನು ನೀವಾ
ದರಿಸುವಡೆ ಧರ್ಮವನು ದುರ್ಜನ
ಸರಣಿಯಲಿ ನೀವ್ ಬಹಡೆ ದಳಸಹಿತೈವರಿದಿರಹುದು
ತೆರಳುವವರಾವಲ್ಲ ನೀವ್ ಪತಿ
ಕರಿಸಿದುದೆ ನಮ್ಮಿಷ್ಟವೆನೆ ಮುರ
ಹರ ಯುಧಿಷ್ಠಿರನೃಪನನೆಕ್ಕಟಿಗರೆದು ಗರ್ಜಿಸಿದ ೪೮

ಮರುಳೆ ನೀ ಹೆಚ್ಚಾಳುತನಕು
ಬ್ಬರಿಸಿ ನುಡಿದೆ ಸುಯೋಧನನ ನೀ
ನರಿಯಲಾಗದೆ ಕೈಗೆ ಬಂದರೆ ಕದನಭೂಮಿಯಲಿ
ಸರಿಸದಲಿ ಮಲೆತವನು ಜೀವಿಸಿ
ಮರಳಲರಿವನೆ ನಮ್ಮೊಳೊಬ್ಬನ
ವರಿಸು ವಿಗ್ರಹಕೆಂದು ನಮ್ಮನು ಕೊಂದೆ ನೀನೆಂದ ೪೯

ಗೆಲಿದಡೈವರೊಳೊಬ್ಬನನು ಮಿ
ಕ್ಕುಳಿದವರು ಕಿಂಕರರು ಗಡ ನೀ
ತಿಳಿದು ನುಡಿದಾ ನಿನ್ನಸಾಹವಮುಖಕೆ ವರಿಸಿದಡೆ
ಗೆಲಲು ಬಲ್ಲಾ ನೀನು ಫಲುಗುಣ
ಗೆಲುವನೇ ನಿನ್ನುಳಿದರಿಬ್ಬರು
ನಿಲುವರೇ ಕುರುಪತಿಯಘಾಟದ ಗದೆಯ ಘಾಯದಲಿ ೫೦

ಇಂದು ನಮ್ಮಯ ಭಾಗ್ಯಲಕ್ಷ್ಮಿಯ
ಕಂದೆರೆವೆಯಲಿ ಭೀಮ ಕಾದುವು
ದೆಂದು ಜಾರಿಸಿ ನಿಮ್ಮ ಬಿಟ್ಟನು ನಮ್ಮ ಪುಣ್ಯದಲಿ
ಇಂದಿನೀ ಸಮರದಲಿ ಪವನಜ
ನಿಂದಡೇನಹುದೆಂಬ ಚಿತ್ತದ
ಸಂದೆಯವು ನಮಗುಂಟು ಕೌರವನೈಸು ಬಲುಹೆಂದ ೫೧

ಎಲೆ ಮುರಾಂತಕ ನಿಮ್ಮ ಮುಂದ
ಗ್ಗಳಯತನವೆಮಗಿಲ್ಲ ನಿಮ್ಮಡಿ
ಗಳ ಸುಧಾಕರುಣಾವಧಾನವೆ ವಜ್ರಕವಚವಲಾ
ಮಲೆತ ಹಗೆವನ ಪಡಿಮುಖದ ಬಲು
ವಲಗೆಯಲಿ ಗದೆಯಿಂದ ರಾಯನ
ಬಲುಹ ಬಿರುದಾವಳಿಯ ಬರೆವೆನು ಕೃಷ್ಣ ಕೇಳೆಂದ ೫೨

ಪೂತು ಮಝು ಭಟ ಎನುತ ಕಂಸಾ
ರಾತಿ ಕೊಂಡಾಡಿದನು ಸಾತ್ಯಕಿ
ಭೂತಳಾಧಿಪ ಪಾರ್ಥ ಯಮಳಾದಿಗಳು ನಲವಿನಲಿ
ವಾತಜನ ಹೊಗಳಿದರು ಸುಭಟ
ವ್ರಾತಸೌಹಾರ್ದದಲಿ ಶೌರ್ಯ
ಖ್ಯಾತಿಯನು ಬಣ್ಣಿಸಿದುದವನೀಪಾಲ ಕೇಳೆಂದ ೫೩

ಗನೆಯ ಕೊಂಡನು ಕೌರವೇಂದ್ರನ
ನಿದಿರುಗೊಂಡನು ಭೀಮ ಬಲವಂ
ತದಲಿ ಪಾಮಾಂಗದಲಿ ಬಳಸಿದರಗ್ರಜಾನುಜರು
ಕದನಭೂಮಿಯ ಬಿಡವರಿದು ನಿಂ
ದುದು ಚತುರ್ಬಲ ಸುತ್ತಿ ಗಗನದೊ
ಳೊದಗಿದುದು ಸುರನಿಕರ ತೀವಿ ವಿಮಾನವೀಥಿಯಲಿ ೫೪

ಚಟುಳತರ ಭಾರಂಕದಂಕದ
ಭಟರು ತರುಬಿದರುಬ್ಬೆಯಲಿ ಲಟ
ಕಟಿಸಿದವು ಕಣ್ಣಾಲಿ ಬದ್ಧಭ್ರುಕುಟಿಭಂಗದಲಿ
ಕಟುವಚನ ವಿಕ್ಷೇಪರೋಷ
ಸ್ಫುಟನವೇಲ್ಲಿತವಾಕ್ಯಭಂಗೀ
ಘಟನ ವಿಘಟನದಿಂದ ಮೂದಲಿಸಿದರು ಮುಳಿಸಿನಲಿ ೫೫

ಅರಸ ಕೇಳಿವರಿಬ್ಬರುಬ್ಬಿನ
ಧುರದ ಘಟ್ಟಣೆ ಪಸರಿಸಿತು ಸುರ
ನರರನಾ ಸಮಯದಲಿ ಪೂರ್ವೋತ್ತರದ ದೆಸೆಯಿಂದ
ವರ ಮುನಿಸ್ತೋಮದ ನಡುವೆ ಕಂ
ಧರದ ಮುಸಲದ ವಿಮಳ ನೀಲಾಂ
ಬರದ ರಾಮನ ಸುಳಿವ ಕಂಡರು ಕೃಷ್ಣ ಪಾಂಡವರು ೫೬

ಆ ನಿಖಿಳ ಪರಿವಾರದನುಸಂ
ಧಾನ ದೃಷ್ಟಿಗಳತ್ತ ತಿರುಗಿದ
ವೇನನೆಂಬೆನು ಮುಸಲಧರನಾಗಮನ ಸಂಗತಿಯ
ಈ ನರೇಂದ್ರನ ಸುಮುಖತೆಯ ಸು
ಮ್ಮಾನ ಹೊಳೆದುದು ಭಯದಿ ಕುಂತೀ
ಸೂನುಗಳು ಮರೆಗೊಳುತಲಿರ್ದುದು ವೀರನರಯಣನ ೫೭

## ಆರನೆಯ ಸಂಧಿ

ಸೂ. ರಂಜಿಸಿತು ತ್ರೈಭುವನವನು ರಿಪು
ಭಂಜನದ ಭಾರವಣೆ ಸುಭಟರ
ನಂಜಿಸಿತು ಕಲಿಭೀಮದುರಿಯೋಧನರ ಸಂಗ್ರಾಮ

ಕೇಳು ಧೃತರಾಷ್ಟ್ರಾವನಿಪ ಸಿರಿ
ಲೋಲ ಸಹಿತ ಯುಧಿಷ್ಠಿರಾದಿ ನೃ
ಪಾಲಕರು ಕಾಣಿಕೆಯನಿತ್ತರು ನಮಿಸಿ ಹಲಧರಗೆ
ಮೇಲುದುಗುಡದ ಮುಖದ ನೀರೊರೆ
ವಾಲಿಗಳ ಕಕ್ಷದ ಗದೆಯ ಭೂ
ಪಾಲ ಬಂದನು ನೊಸಲ ಚಾಚಿದನವರ ಚರಣದಲಿ ೧

ಇಳಿದು ಗಜಹಯರಥವ ಸುಭಟಾ
ವಳಿ ಕೃತಾಂಜಲಿ ನೊಸಲೊಳಿರೆ ಕೆಲ
ಬಲಕೆ ಸಾರ್ದರ ನೋಡಿದನು ಪಾಂಡವ ಪತಾಕಿನಿಯ
ಉಳಿದುದೀಚೆಯಲೀಸು ಬಲವಿವ
ನುಳಿದನೊಬ್ಬನೆ ದೈವಗತಿಗಾ
ರಳಲಿ ಮಾಡುವುದೇನೆನುತ ನುಡಿಸಿದನು ಕುರುಪತಿಯ ೨

ಗುರುವೊ ಗಂಗಾಸುತನೊ ಮಾದ್ರೇ
ಶ್ವರನೊ ಕರ್ಣನೊ ಸೈಂಧವನೊ ಸೋ
ದರರ ಶತಕವೊ ಪುತ್ರ ಮಿತ್ರ ಜ್ಞಾತಿ ಬಾಂಧವರೊ
ಹರಸಿ ಕರಿಗಳನಿಕ್ಕಿದಡೆ ಗೋ
ಚರಿಸದೇ ರಣವಿಜಯನಿಧಿ ಹರ
ಹರ ಎನುತ ಕರಗಿದನು ಕಡು ಕರುಣದಲಿ ಬಲರಾಮ ೩

ಆಹವದಿ ಪಾಂಡವ ಮಮ ಪ್ರಾ
ಣಾ ಹಿ ಎಂಬೀ ನುಡಿಯ ಸಲಿಸಿದೆ
ಬೇಹವರನುಳುಹಿದೆ ಕುಮಾರರ ನಿನ್ನ ಮೈದುನರ
ಗಾಹುಗತಕದಲೆಮ್ಮ ಶಿಷ್ಯಂ
ಗೀ ಹದನ ವಿರಚಿಸಿದೆ ನಿನ್ನಯ
ಮೋಹದವರೇ ಗೆಲಲಿಯೆಂದನು ಹರಿಗೆ ಬಲರಾಮ ೪

ತಿಳಿದು ನೋಡಿರೆ ರಾಮ ಧರ್ಮ
ಸ್ಥಳಕೆ ನೀವು ಸಹಾಯವಿನಿಬರ
ಗೆಲವು ನಿರ್ಮಳ ಧರ್ಮಮೂಲವೊ ಧರ್ಮವಿರಹಿತವೊ
ಛಲವ ಬಿಡಿರೇ ನಿಮ್ಮ ಶಿಷ್ಯನು
ಕಲಿವೃಕೋದರನಲ್ಲವೇ ತವೆ
ಬಳಸಬಹುದೇ ಪಕ್ಷಪಾತದೊಳೆಂದನಸುರಾರಿ ೫

ನಿವಗೆ ಪಾಂಡವ ಪಕ್ಷಪಾತ
ವ್ಯವಹರಣೆ ಹುಸಿ ನಾವಲೇ ಕೌ
ರವನ ಪಕ್ಷಾವೇಶಿಗಳು ಸಾಕಿನ್ನದಂತಿರಲಿ
ಎವಗೆ ಸರಿಯಿಬ್ಬರು ಗದಾಭ್ಯಾ
ಸವನು ನಮ್ಮಲಿ ಮಾಡಿದರು ತಾ
ವಿವರು ಕಾದಲಿ ನಾವು ನೋಡುವೆವೆಂದನಾ ರಾಮ ೬

ಎಲೆ ಮುನೀಶ್ವರ ಪೂರ್ವದಲಿ ಯದು
ಬಲ ವಿಭಾಗದಲಿವರ ದೆಸೆಯಲಿ
ಹಲಧರನು ಕೃತವರ್ಮನಾ ಪಾಂಡವರಿಗಸುರಾರಿ
ಬಳಿಕ ಸಾತ್ಯಕಿಯೀ ಹಸುಗೆಯ
ಸ್ಖಲಿತವಿದರಲಿ ರಾಮನೀ ಕುರು
ಬಲವ ಬಿಟ್ಟನದೇಕೆನುತ ಜನಮೇಜಯನು ನುಡಿದ ೭

ಕೇಳು ಜನಮೇಜಯ ಧರಿತ್ರೀ
ಪಾಲ ಸಂಧಿಯ ಮುರಿದು ಲಕ್ಷ್ಮೀ
ಲೋಲ ಬಿಜಯಂಗೈಯನೇ ಕುರುಪತಿಯನವಗಡಿಸಿ
ತಾಳಹಳವಿಗೆಯವನು ಯಾದವ
ಜಾಲ ಸಹಿತೈತಂದು ಕಾರ್ಯದ
ಮೇಲುದಾಗಿನ ಹದನನರಿದನು ಕೃಷ್ಣನಭಿಮತವ ೮

ಎವಗೆ ಸರಿಯಿತ್ತಂಡ ನೀ ಕೌ
ರವನ ಮುರಿವೆ ಯುಧಿಷ್ಠಿರನನಾ
ಹವದ ಗೆಲಿಸುವೆ ಸಾಕು ನೃಪರಿಬ್ಬರಲಿ ಸಂವಾದ
ಎವಗೆ ತೀರ್ಥಕ್ಷೇತ್ರ ಯಾತ್ರಾ
ವ್ಯವಸಿತಕೆ ಮನವಾದುದೆಂದು
ತ್ಸವದಿನಸುರಾರಿಯನುಪಪ್ಲವ್ಯದಲಿ ಬೀಳ್ಕೊಂಡ ೯

ರಾಮ ಕಳುಹಿಸಿಕೊಂಡು ವಿಪ್ರ
ಸ್ತೋಮಸಹಿತ ಸಮಸ್ತ ಋಷಿಗಳು
ರಾಮಣೀಯಕವಸ್ತು ದಾನವ್ಯಯದ ವೈಭವಕೆ
ಸೌಮನಸ್ಯನು ರಾಗಪರದ ಮ
ಹಾಮಹಿಮ ತೀರ್ಥಾಭಿರತಿಯಲಿ
ಗೋ ಮಹಿಷ ಧನ ವಸ್ತ್ರದಿಂ ದ್ವಿಜವರರನರ್ಚಿಸಿದ ೧೦

ಗಂಗೆ ಮೊದಲಾದಮಳತರ ತೀ
ರ್ಥಂಗಳಲಿ ತದ್ವಾರಣಾಖ್ಯಾ
ನಂಗಳಲಿ ತತ್ತದ್ವಿಶೇಷವಿಧಾನ ದಾನದಲಿ
ತುಂಗವಿಕ್ರಮನೀ ಸಮಸ್ತ ಜ
ನಂಗಳೊಡನೆ ಸುತೀರ್ಥಯಾತ್ರಾ
ಸಂಗತಿಯಲೇ ಬಳಸಿದನು ಭೂಮಿಪ್ರದಕ್ಷಿಣವ ೧೧

ಅವನಿಪತಿ ಕೇಳ್ ಪುಷ್ಯದಲಿ ಸಂ
ಭವಿಸಿದುದ. ನಿರ್ಗಮನ ಬಳಿಕಾ
ಶ್ರವಣನಕ್ಷತ್ರದಲಿ ಕಂಡನು ಕೃಷ್ಣಪಾಂಡವರ
ಅವರು ನೋಟಕರಾದರೀ ಕೌ
ರವ ವೃಕೋದರರಂಕ ಮಸೆದು
ತ್ಸವದಿ ಕಳನೇರಿದರು ಹಾಯಿಕಿ ಹಿಡಿದು ನಿಜಗದೆಯ ೧೨

ಧಾರುಣೀಪತಿ ಕುಳ್ಳಿರ್ದ ಪರಿ
ವಾರ ಕುಳ್ಳಿರಿ ಪಾರ್ಥ ಸಾತ್ಯಕಿ
ವೀರ ಧೃಷ್ಟದ್ಯುಮ್ನ ಯಮಳ ಶಿಖಂಡಿ ಸೃಂಜಯರು
ವೀರ ಭಟರೆಘ್ಮಾಹವದ ವಿ
ಸ್ತಾರವನು ಸಮ ವಿಷಮ ಪಯಗತಿ
ಯೋರೆಪೋರೆಯನರಿವುದೆಂದನು ನಗುತ ಕುರುರಾಯ ೧೩

ಚಿತ್ತವಿಸಂ ಬಲರಾಮ ರಿಪುಗಳ
ತೆತ್ತಿಗನೆ ಲೇಸಾಗಿ ನೋಡಂ ನೃ
ಪೋತ್ತಮರು ಪಾಂಚಾಲ ಸೃಂಜಯ ಸೋಮಕಾದಿಗಳು
ಇತ್ತಲಭಿಮುಖವಾಗಿ ರಥಿಕರು
ಮತ್ತಗಜದಾರೋಹಕರು ರಾ
ವುತ್ತರೀಕ್ಷಿಸಿ ನಮ್ಮ ಸಮರವನೆಂದನವನೀಶ ೧೪

ಓಡಿ ಜಲದಲಿ ಮುಳುಗಿದವರಿಗೆ
ಖೋಡಿಯುಂಟೇ ರಥವಿಳಿದ ರಣ
ಖೇಡ ಕಾಲಾಳಿಂಗೆ ಪಯಗತಿಂಯೋರೆಪೋರೆಗಳೆ
ನೋಡುತಿದೆ ಪರಿವಾರ ನೀ ಕೈ
ಮಾಡಿ ತೋರಾ ಬಿರಿಯ ಕಂಠದ
ಮೂಡಿಗೆಯ ಡಾವರದ ಲೇಸಹುದೆಂದನಾ ಭೀಮ ೧೫

ಆಟವಿಕ ಸಂಗದಲಿ ಬಹುವಾ
ಚಾಟ ನೀನಹೆ ನಿನ್ನ ಪುಣ್ಯದ
ತೋಟವನು ತರಿದೊಟ್ಟಿ ನಿಮ್ಮವರನು ಯಮಪುರದ
ಗೋಟಿನಲಿ ಗುರಿಮಾಡುವೆನು ಜೂ
ಜಾಟದಲಿ ನೀವರಿಯಿರೇ ಬೊ
ಬ್ಬಾಟವಂದೇನಾಯಿತೆಂದನು ಜರೆದು ಕುರುರಾಯ ೧೬

ಶಕುನಿ ಕಲಿಸಿದ ಕಪಟದಲಿ ಕೌ
ಳಿಕದಲುಬ್ಬಿದಿರಿದರ ವಿಸ್ತಾ
ರಕರರೇ ನಾವಿಂದಿನಲಿ ದುಶ್ಯಾಸನಾದಿಗಳ
ರಕುತಪಾನ ಭವತ್ಸಹೋದರ
ನಿಕರನಾಶನವರುಹದೇ ಸಂ
ಪ್ರಕಟವಿದು ಜಗಕೆಂದು ಗದೆಯನು ತೂಗಿದನು ಭೀಮ ೧೭

ಸಾಯಲಾಗದೆ ಸುಭಟರಾಚಂ
ದ್ರಾಯತವೆ ತನು ವಿಧಿಯ ಟಿಪ್ಪಣ
ದಾಯುಷವು ತೀರಿದಡೆ ಸಾವರು ನಿನ್ನಲೇನಹುದು
ಕಾಯಲಳವೇ ನಿನಗೆ ಮುಂನಿದಡೆ
ನೋಯಿಸುವಡಳವಲ್ಲ ಫಡ ದೈ
ವಾಯತಕೆ ನೀನೇಕೆ ಬೆರೆತಿಹೆಯೆಂದನಾ ಭೂಪ ೧೮

ಎಲವೊ ದುರ್ಮತಿ ನಿನ್ನ ಕೌರವ
ಕುಲದ ಶಿಕ್ಷಾರಕ್ಷೆಗಿನ್ನಾ
ರೊಳರು ಹೊರಬಿಗ ದೈವವುಂಟೇ ತಾನೆ ದೈವ ಕಣಾ
ಕಳಚಿದೆನಲಾ ಕೊಂದು ನೂರ್ವರ
ತಲೆಯನಿನ್ನರೆಘಳಿಗೆಯಲಿ ಹೆಡ
ತಲೆಯನೊದೆವೆನು ಹೋಗೆನುತ ಹೊಯ್ದನು ಸುಯೋಧನನ ೧೯

ಬಿಡಿಸಿದಡೆ ಗದೆಯಿಂದ ಹೊಯ್ಲುಗ ಳ
ತಡೆದು ತಿವಿದನು ನಿನ್ನ ಮಗನವ
ಗಡದ ಘಾಯಕೆ ಗದೆಯನೊಡ್ಡಿ ಸಗಾಢ ಕೋಪದಲಿ
ತುಡುಕಿದನು ಕಲಿಭೀಮ ಹಜ್ಜೆಯೊ
ಳಿಡೆಮುರಿದು ನಿನ್ನಾತನೌಕಿದ
ರೊಡನೊಡನೆ ಗಾಹಿಸಿದರುಚಿತದ ಗತಿಯ ಗಮಕದಲಿ ೨೦

ಹೊಯ್ದು ಬಿಡಿಸಿದಡನಿಲಜನ ಮೇ
ಲ್ವಾಯ್ದನವನಿಪನೊಡ್ಡಿ ಗದೆಯಲಿ
ಕಾಯ್ದು ತಿವಿದನು ಭೀಮಸೇನನ ನೃಪತಿ ವಂಚಿಸಿದ
ಮೆಯ್ದೆಗೆದಡಿಟ್ಟಣಿಸಿ ಪವನಜ
ಹೊಯ್ದಡೊಲೆದನು ಭೂಪನಿಬ್ಬರ
ಕಯ್ದುಕಾರತನಕ್ಕೆ ಬೆರಗಾದುದು ಸುರಸ್ತೋಮ ೨೧

ಸುಳಿದರೆಡಬಲ ಚಾರಿಯಲಿ ಚಾ
ಪಳದ ಪಯಪಾಡಿನಲಿ ಚಿತ್ರದ
ಚಳಗತಿಯ ಚೇತನದ ಚಡ್ಡಣೆಗಳ ಚಡಾಳದಲಿ
ಹೊಳೆದರಾವರ್ತದಲಿ ಪರಿಮಂ
ಡಳಿಸಿದರು ಠಾಣದಲಿ ಜಂಘೆಯ
ಲುಳಿಯ ಲವಠಾಣದಲಿ ಮೆರೆದರು ಭೀಮ ಕೌರವರು ೨೨

ಒಳಹೊಗುವ ಹೆರತೆಗೆವ ಘಾಯುವ
ಕಳಚುವವಧಾನದಲಿ ದೃಷ್ಟಿಯ
ಬಳಿಗೆ ಕೈಮಾಡುವ ವಿಘಾತಿಗೆ ಜಗುಳ್ವ ಝಾಡಿಸುವ
ಸುಳಿವ ಸಂತೈಸುವ ಸುಸಂಚದೊ
ಳೆಳವರಿವ ವಂಚಿಸುವ ಗಮನಿಕೆ
ಯಳಬಳವನಾರೈವ ಭಟರೊದಗಿದರು ಸಮರದಲಿ ೨೩

ಬಿಡುವ ಬಿಡಿಸುವ ಪರರ ಘಾಯುವ
ತಡೆವ ಗೋಮೂತ್ರಕದ ಚಿತ್ರದ
ಝಡಪದವಧಾನದ ವಿಧಾನದ ಘಾಯಖಂಡಿಗಳ
ತುಡುಕುವವ್ವಳಿಸುವ ವಿಸಂಧಿಯ
ಹಿಡಿವ ಬಿಚ್ಚುವ ಬಿಗಿವ ಸೆಳೆವವ
ಗಡಿಸುವೌಕುವ ಕುಶಲದಲಿ ಕಾದಿದರು ಸಮರದಲಿ ೨೪

ಬವರಿ ಮಂತ್ರೋಪ್ಯದ್ಗತಿ ವಿಲಂಘನ
ವಿವಳಿತಾಂಗ ವರಾಹವಂತ ಸಂ
ಪ್ಲವನ ಪಾರಿಪ್ಲವ ಗದಾಪರಿರಂಭ ವಿಕ್ಷೇಪ
ಲವಣಿ ಲಹರಿಯುದಂಚ ನವ ವಿ
ದ್ರವಣ ಲಘುವಿನ್ಯಸ್ತವೆಂಬೀ
ವಿವರದಲಿ ಕಾದಿದರು ಕೌತುಕವೆನಲು ಸುರನಿಕರ ೨೫

ನೂಕಿದರೆ ಹೆರತೆಗೆವ ಹೆರತೆಗೆ
ದೌಕುವೌಕಿದಡೊತ್ತು ವೊತ್ತಿದ
ಡಾಕೆಯಲಿ ಪಂಠಿಸುವ ಪಂಠಿಸೆ ಕೂಡೆ ಸಂಧಿಸುವ
ಆ ಕಠೋರದ ಕಯ್ದು ಕಿಡಿಗಳ
ನೋಕರಿಸೆ ಖಣಿಖಟಿಲ ಝಾಡಿಯ
ಜೋಕೆಯಲಿ ಕಾದಿದರು ಸಮಬಲರಾಹವಾಗ್ರದಲಿ ೨೬

ಮರಹ ಪಡೆಯರು ಘಾಯ ಖಂಡಿಗೆ
ತೆರಹುಗಾಣರು ಹೊಯ್ಲುಹೋರಟೆ
ಹೊರಗೆ ಬಿದ್ದವು ಕದ್ದವಿಬ್ಬರ ದೃಷ್ಟಿ ಮನಮನವ
ಇರಿವ ಗದೆ ನೆಗ್ಗಿದವು ರೋಷದಿ
ಜರೆವ ನುಡಿ ತಾಗಿದವು ಹೊಗಳುವ
ಡರಿಯೆನಗ್ಗದ ಭೀಮ ದುರಿಯೋಧನರ ರಣರಸವ ೨೭

ಗಾಹಿನಲಿ ಗಾಢಿಸಿದ ಗದೆ ಹೊರ
ಬಾಹೆಯಲಿ ಹಿಂಗಿದವು ಠಾಣದ
ಲೂಹಿಸಿದ ಮನ ಮಂಗ್ಗಿದುದು ಕಂದೊಳಲ ತೋಹಿನಲಿ
ಕಾಹುರದ ಹೊಯ್ಲುಗಳು ನೋಟದ
ಕಾಹಿನಲಿ ಕಿಡಿಗೆದರೆ ಘಾಯದ
ಸೋಹೆಯುರಿವ ಸಂಚಾಣರೊದಗಿದರರಸ ಕೇಳೆಂದ ೨೮

ನೆನಹು ನೆಗ್ಗಿದುದುಪ್ಪರದ ಕೈ
ಮನವ ಕಬಳಿಸಿ ತೆರಹು ಬಿರುಬಿ
ಮ್ಮಿನಲಿ ಬಿಗಿದುದು ತೆಗೆದವಿಬ್ಬರ ಘಾಯಘಾತಿಗಳು
ಕೊನರ್ವ ಕೋಪದ ಕಂದಿವ ಕರಣದ
ತನುವಿಗುಪ್ತಿಯ ಜಯದ ತವಕದ
ತನಿಮನದ ಕಡುತೋಟಿಕಾರರು ಕಾದಿದರು ಕಡುಗಿ ೨೯

ಜಾಣು ಜಗುಳಿತು ಹೊಯ್ಲು ಮೊನೆ ಮುಂ
ಗಾಣಿಕೆಗೆ ಲಟಕಟಿಸಿದುದು ಬರಿ
ರೇಣುಜನನದ ಜಾಡ್ಯವೇ ಪಡಪಾಯ್ತು ಪಯಗತಿಗೆ
ತ್ರಾಣ ತಳವೆಳಗಾಯ್ತು ಶ್ರವ ಬಿ
ನ್ನಾಣ ಮೇಲಾಯಿತ್ತು ಕುಶಲದ
ಕೇಣದಲಿ ಕಾದಿದರು ಗದೆಗಳ ಕಿಡಿಯ ಕಿಡಿ ತಿವಿಯೆ ೩೦

ವಿಲಸದಪಸವ್ಯದಲಿ ರಿಪು ಮಂ
ಡಳಿಸಿ ಹೊಯ್ದನು ಸವ್ಯಮಂಡಲ
ವಲಯದಿಂದಾ ಭೀಮಸೇನನ ಹೊಯ್ಲು ಹೊರಬೀಸಿ
ಒಳಬಗಿದು ಕಿಬ್ಬರಿಯ ಕಂಡ
ಪ್ಪಳಿಸಿದನು ನಿಸ್ಸಾತನಾಚೆಯು
ದಳದ ಭಟತತಿ ಹಾಯೆನಲು ಝೋಂಪಿಸಿದನಾ ಭೀಮ ೩೧

ಆಗಳೇ ಸಂತೈಸಿ ರಿಪು ಕೈ
ದಾಗಿಸಿದನರಸನನು ಘಾಯದ
ಬೇಗಡೆಯಲುಚ್ಚಳಿಸಿದುದು ಬಿಸಿರಕುತ ಹುಡಿ ನನೆಯೆ
ಆ ಗರುವನದ ಬಗೆವನೇ ಸರಿ
ಭಾಗರಕುತವನನಿಲಸುತನಲಿ
ತೂಗಿ ತೆಗೆದವೊಲಾಯ್ತು ಹೊಯ್ದನು ಪವನನಂದನನ ೩೨

ಸೈರಿಸಿದವೆರಡಂಕ ತೆಗೆದವು
ದೂರದಲಿ ದುರುದುರಿಪ ರಕುತದ
ಧಾರೆಗಳ ತೊಳೆದೊರಸಿದರು ಸಿರಿಖಂಡ ಕರ್ದಮವ
ವೀರಕೇಳೀಶ್ರಮವಡಗೆ ಕ
ರ್ಪೂರ ವೀಳೆಯಗೊಂಡು ಮತ್ತೆ ಮ
ಹಾರುಭಟೆಯಲಿ ಸುಭಟರೆದ್ದರು ತೂಗಿ ನಿಜಗದೆಯ ೩೩

ಮತ್ತೆ ಹೊಕ್ಕರು ದಿಗ್ಗಜಕೆ ಮದ
ಮತ್ತದಿಗ್ಗಜ ಮಲೆತವೊಲು ಮಿಗೆ
ಹತ್ತಿದರು ಶತಮನ್ಯು ಜಂಭನ ಜೋಡಿಯಂದದಲಿ
ತತ್ತರಿಬ್ಬರು ಮೂಕದನುಜನ
ಕೃತ್ತಿವಾಸನವೋಲು ರಣಧೀ
ರೋತ್ತಮರು ಕಯ್ಯಿಕ್ಕಿದರು ಕೌರವ ವೃಕೋದರರು ೩೪

ಏನನೆಂಬೆನು ಜೀಯ ಕುರುಪತಿ
ಯಾನುವನು ಕಲಿಭೀಮನುಬ್ಬೆಯ
ನಾನುವನು ದುರಿಯೋಧನನ ಥಟ್ಟಣೆಯನಾ ಭೀಮ
ದಾನವರು ಮಾನವರೊಳಿನ್ನು ಸ
ಘಾನರಾರಿವರಂತೆ ಪಾಂಡವ
ಗೇನಸಾಧ್ಯವು ವೀರನಾರಾಯಣನ ಕರುಣದಲಿ ೩೫

## ಏಳನೆಯ ಸಂಧಿ

ಸೂ. ರಾಯ ಭಾರತ ವೀರರಾಯನು
ರಾಯ ವನದಾವಾನಳನು ಕಲಿ
ವಾಯು ತನುಜನ ಪಳಚಿ ಮಡಿದನು ಕೌರವರ ರಾಯ

ಕೇಳು ಧೃತರಾಷ್ಟ್ರಾವನಿಪ ಕೈ
ಮೇಳವಿಸಿದರು ವಿಷಮ ಸಮರಕ
ರಾಳರೋಷಶ್ವಾಸಧೂಮಳಮುಖಭಯಂಕರರು
ಚಾಳನದ ಚೌಪಟರು ಶಸ್ತ್ರಾ
ಸ್ಫಾಳನದ ವಜ್ರಾಭಿಘಾತಾ
ಭೀಳನಿಷ್ಠುರರೊದಗಿದರು ಕೌರವ ವೃಕೋದರರು ೧

ಹಳಚಿದರು ಸುಳಿ ಘಾಳಿಯಂತಿರೆ
ಸುಳಿದು ಖಗಪತಿಯಂತೆ ಹೊಯ್ಲಲಿ
ಬಳಸಿ ಬಿಗಿದೆರಗಿದರು ಬಿಡೆಯದ ಮತ್ತಗಜದಂತೆ
ಅಳುವಿದರು ಶಿಖಿಯಂತೆ ಚೂರಿಸಿ
ನಿಲುಕಿದರು ಫಣಿಯಂತೆ ಪಯಮ್ಯೈ
ಲುಳಿಯಲೊಲೆದರು ಪಾದರಸದಂದದಲಿ ಪಟುಭಟರು ೨

ಎರಗಿದರು ಸಿಡಿಲಂತೆ ಮಿಂಚಿನ
ಮಿರುಗಿನಂತಿರೆ ಹೊಳೆದು ಹಜ್ಜೆಯ
ಹೆರದೆಗೆದು ಹಾಯಿದರು ತಗರಂದದಲಿ ತವಕದಲಿ
ಇರುಕಿದರು ಗ್ರಹದಂತೆ ಮಿಗೆ ಮು
ಕ್ಕುರುಕಿದರು ಮುಗಿಲಂತೆ ರೋಷಕೆ
ನೆರೆಯದಿಬ್ಬರ ಮನವೆನಲು ಹೊಯ್ದಾಡಿದರು ಭಟರು ೩

ಗದೆಗದೆಯ ಹೊಯ್ಲುಗಳ ಖಣಿಖಟಿ
ಲೊದಗಿತಿಬ್ಬರ ಬೊಬ್ಬೆ ಭುವನವ
ಬೆದರಿಸಿತು ಪದಘಟ್ಟಣೆಯ ಘಟ್ಟಣೆಯ ಘಾತಿಯಲಿ
ಅದಿರಿತಿಳೆ ಮಝು ಭಾಪು ಭಟರೆಂ
ದೊದರಿತಾ ಪರಿವಾರದಬ್ಬರ
ತ್ರಿದಶನಿಕರದ ಸಾಧುರವವಂಜಿಸಿತು ಮೂಜಗವ ೪

ಬೆರಳ ತೂಗಿದನಡಿಗಡಿಗೆ ಹಲ
ಧರನುದಗ್ರಗದಾ ವಿಧಾನಕೆ
ಶಿರವನೊಲೆದನು ಶೌರಿ ಮಿಗೆ ಮೆಚ್ಚಿದನು ಯಮಸೂನು
ವರ ಗದಾಯುಧ ವಿವಿಧ ಸತ್ವಕೆ
ಪರಮಜೀವವಿದೆಂದನರ್ಜುನ
ನರರೆ ಮಝುರೇ ರಾವು ಜಾಗೆಂದುದು ಭಟವ್ರಾತ ೫

ತಿವಿದನವನಿಪನನಿಲತನುಜನ
ಕವಚ ಬಿರಿದುದು ಕಯ್ಯೊಡನೆ ರಣ
ದವಕಿ ಕೈದೋರಿದನು ಕೌರವನೃಪನ ವಕ್ಷದಲಿ
ಸವಗ ಸೀಳಿತು ಮರಳಿ ಹೊಯ್ದನು
ಪವನಜನ ಸೀಸಕದ ವರಮಣಿ
ನಿವಹ ಸಿಡಿದವು ಸಿಡಿಲು ಮೆಟ್ಟಿದ ಮೇರುಗಿರಿಯಂತೆ ೬

ಅಡಿಗಡಿಗೆ ಕರ್ಪೂರದ ಕವಳವ
ನಡಸಿದರು ತಾಳಿಗೆಗೆ ಬಳಿಕಡಿ
ಗಡಿಗೆ ಹೆರಸಾರಿದರು ಸಮರಶ್ರಮನಿವಾರಣಕೆ
ಕಡುಹು ತಳಿತುದು ಪೂತು ಫಲವಾ
ಯ್ತಡಿಗಡಿಗೆ ಮಚ್ಚರದ ಮುಸಕದ
ತಡಿಕೆವಲೆ ಸುಗ್ಗಾಯ್ತು ಮನ ಕುರುಪತಿಯ ಪವನಜನ ೭

ಶ್ವಾಸದಲಿ ಕಿಡಿಸಹಿತ ಕರ್ಬೊಗೆ
ಸೂಸಿದವು ಕಣ್ಣಾಲಿಗಳು ಕ
ಟ್ಟಾಸುರದಿ ಕೆಂಪೇರಿದವು ಬಿಗುಹೇರಿ ಹುಬ್ಬುಗಳು
ರೋಷ ಮಿಗಲೌಡೊತ್ತಿ ಬಹಳಾ
ಭ್ಯಾಸಿಗಳು ಡಾವರಿಸಿದರು ಡೊ
ಳ್ಳಾಸವೋ ರಿಪುಸೇನೆ ಕಾಣದು ಚಿತ್ರಪಯಗತಿಯ ೮

ಹೊಕ್ಕು ಕುರುಪತಿ ಭೀಮಸೇನನ
ನಿಕ್ಕಿದನು ಕಂದದಲಿ ಗದೆಯುನು
ಸೆಕ್ಕಿದನು ವಾಮಾಂಗದಲಿ ಪವಮಾನನಂದನನ
ಜಕ್ಕುಲಿಸಿದವೊಲಾಯ್ತು ಜರೆದು ನ
ಭಕ್ಕೆ ಪುಟನೆಗೆದನಿಲಜನ ಸೀ
ಸಕ್ಕೆ ಹೊಯ್ದಾರಿದನು ಕೌರವನೃಪತಿ ಖಾತಿಯಲಿ ೯

ಬಾಯೊಳೊಕ್ಕುದು ರುಧಿರ ಕಂಗಳ
ದಾಯ ತಪ್ಪಿತು ಡೆಂಢಣಿಸಿ ಕಲಿ
ವಾಯುಸುತನಪ್ಪಳಿಸಿ ಬಿದ್ದನು ಕಯ್ಯ ಗದೆ ಕಳಚಿ
ಹಾಯೆನುತ ತನ್ನವರು ಭಯದಲಿ
ಬಾಯ ಬಿಡೆ ನಿಮಿಷಾರ್ಧದಲಿ ನಿರ
ಪಾಯನೆದ್ದನು ನೋಡಿದನು ಚೇತರಿಸಿ ಕೆಲಬಲನ ೧೦

ಹೆದರು ಹಿಂಗಿತು ನೆಲಕೆ ಮಾರು
ದ್ದಿದನು ಕರವನು ಸೂಸಿ ಹಾರಿದ
ಗದೆಯ ಕೊಂಡನು ಸೆರಗಿನಲಿ ಸಂತೈಸಿ ಶೋಣಿತವ
ಅದಿರೆ ನೆಲನವ್ವಳಿಸಿ ಮೇಲ್ವಾ
ಯಿದನ ಹೊಳಹಿನ ಹೊಯ್ಲ ಹೊದ
ರೆದ್ದುದು ವಿಭಾಡಿಸಿ ಭೀಮ ಹೊಯ್ದನು ನೃಪನ ಮಸ್ತಕವ ೧೧

ದೂಟಿ ಬಿದ್ದವು ಸೀಸಕವು ಶತ
ಕೋಟಿ ಘಾಯದ ಘಟನೆಯೊಳು ಶತ
ಕೋಟಿ ಘಾಯಕೆ ಸಿಡಿದ ಹೇಮಾಚಳದ ತುದಿಯಂತೆ
ತಾಟಿತಸು ಕಂಠದಲುಸುರ ಪರಿ
ಪಾಟಿ ತಪ್ಪಿತು ಮೃತ್ಯುವಿನ ದರ
ಚೀಟಿ ಹಿಡಿದನೊ ಹೇಳೆನಲು ಮಲಗಿದನು ಮೈಮರೆದು ೧೨

ಹಾರಿತೊಂದೆಸೆಗಾಗಿ ಗದೆ ಮುರಿ
ದೇರಿದಪು ಕಣ್ಣಾಲಿ ನೆತ್ತಿಯ
ಜೋರು ಮುಸುಕಿತು ಮುಖವನೊಂದು ವಿಘಳಿಗೆ ಮಾತ್ರದಲಿ
ಜಾರಿತಂತಸ್ಸಿಮಿತ ಭಯ ಹುರಿ
ಯೇರಿತಧಿಕಕ್ರೋಧ ಕರಣವ
ತಾರುಘಟ್ಟಿಡಗಿದುದಪಸರಿಸಿತಸು ನಿಜಾಂಗದಲಿ ೧೩

ನಿಮಿಷದಲಿ ಕಂದೆರೆವನಂತಃ
ಶ್ರಮದ ಝಳಳವಡಗಿತು ವಿಪಕ್ಷ
ಭ್ರಮಣಚೇತೋಭಾವ ಭವನದ ಮುಖವಿಕಾಸದಲಿ
ತಮದ ತನಿಮುಸುಕದಲಿ ಭುಜವಿ
ಕ್ರಮ ಛಡಾಳಿಸಲೆದ್ದು ಭೂಪೋ
ತ್ತಮನು ಕೊಂಡನು ಗದೆಯನನುವಾಗೆಂದನನಿಲಜನ ೧೪

ಈಗಳನುವಾದೆನೆ ಧರಿತ್ರಿಯ
ಭಾಗವನು ಬೇಡಿದಡೆ ನೀ ಮುರಿ
ದಾಗಳನುವಾದುದು ಕಣಾ ಗದೆ ನಿನ್ನ ಕಿರುದೊಡೆಗೆ
ತಾಗಿ ನೋಡಿನ್ನೊಮ್ಮೆನುತ ಪೈ
ಲಾಗಿನಲಿ ಹೊಳೆಹೊಳೆದು ಕೈದುವ
ತೂಗಿ ತಂಡುಕಿದನರಸನನು ಬೊಬ್ಬಿರಿದು ಕಲಿ ಭೀಮ ೧೫

ಉಬ್ಬ ಬೇಡೆಲೆ ಭೀಮ ಗದೆಯೋ
ಬೊಬ್ಬೆಯೋ ಬಲುಗೈದು ನಿನ್ನಯ
ಗರ್ಭಗಿರಿಗಿದೆ ಸಿಡಿಲೆನುತ ಹೊಯ್ದನು ವೃಕೋದರನ
ತುಬ್ಬಿದನು ಗದೆಯಿಂದ ಘಾಡಿಸಿ
ಹಬ್ಬಿದನು ಕೆಲಬಲಕೆ ಖತಿಯಲಿ
ಕೊಬ್ಬಿದರೆವೊಯ್ಲುಗಳ ದನಿ ಕಿವಿಗೆಡಿಸೆ ಮೂಜಗವ ೧೬

ಧರಣಿಪತಿ ಕೇಳ್ ಭೀಮಸೇನನ
ಧರಧುರದ ಹೊಯ್ಲುಗಳ ಗದೆಯಲಿ
ಹೊರಳಿಗಿಡಿ ಝೊಂಪಿಸಿದುವುರು ಖದ್ಯೋತ ಮಂಡಲವ
ಅರಸನೆರಗಿದಡನಿಲಸುತ ಪೈ
ಸರಿಸಿ ಕಳಚಿದನಾ ಕ್ಷಣದೊಳ
ಬ್ಬರಿಸಿ ಹೊಯ್ದನು ಭೀಮ ಕೌರವನೃಪನ ಕಂಧರವ ೧೭

ನೋಡಿದನು ದಂಡೆಯಲಿ ಲಾಗಿಸಿ
ಹೂಡಿದನು ನೃಪ ಭೀಮನಲಿ ಪಯ
ಪಾಡಿನಲಿ ಪಲ್ಲಟಿಸಿದನು ಪಡಿತಳಕೆ ಕುರುರಾಯ
ಘಾಡಿಸಿದನುಪ ರದ ಘಾಯಕೆ
ಕೂಡೆ ತಗ್ಗಿದನನಿಲಸುತ ಖಯ
ಖೋಡಿಯಿಲ್ಲದೆ ಭಟರು ಹೊಯ್ದಾಡಿದರು ಖಾತಿಯಲಿ ೧೮

ತೊಲಗಿ ನಿಂದರು ಮತ್ತೆ ಭಾರಿಯ
ಬಳಲಿಕೆಯ ಬೇಳುವೆಯ ಚಿತ್ತ
ಸ್ಖಲಿತರಂಗೀಕರಿಸಿದರು ಕರ್ಪುರದ ವೀಳೆಯವ
ಘಳಿಲನೆದ್ದರು ನಿಮಿಷಮಾತ್ರಕೆ
ಮಲೆತು ನಿಂದರು ಘಾಯಘಾತಿಯ
ಸುಳಿವನವಧಾನಿಸುತ ತೂಗಿದರಾಯುಧದ್ವಯವ ೧೯

ಲಾಗಿಸುತ ಲಳಿಯೆದ್ದು ಭೀಮನ
ತಾಗಿಸಿದನವನೀಶನಾತನ
ಭಾಗಧೇಯವನೇನನೆಂಬೆನು ಹೊಯ್ಲು ಹೊರಗಾಯ್ತು
ಬೇಗುದಿಯಲುಬ್ಬೆದ್ದು ನೃಪತಿ ವಿ
ಭಾಗಿಸಿದನನಿಲಜನ ತನುವನು
ಬೇಗದಲಿ ಕಳಚಿದನು ಪವನಜ ಪಯದ ಬವರಿಯಲಿ ೨೦

ತಪ್ಪಿಸಿದನೇ ಘಾಯವನು ಫಡ
ತಪ್ಪಿಸಿನ್ನಾದಡೆಯೆನುತ ಕಡು
ದರ್ಪದಲಿ ಹೊಯ್ದನು ಸಮೀರಾತ್ಮಜನನವನೀಶ
ತಪ್ಪಿತದು ಗದೆ ತನುವ ರಕುತದ
ದರ್ಪಣದ ರಹಿಯಾಯ್ತು ಗದೆ ಮಾ
ರಪ್ಪಿತರಸನನೆನಲು ಹೊಯ್ದನು ಭಾಳದಲಿ ಭೀಮ ೨೧

ವಟ್ಟ ಮುರಿದುದು ಸೀಸಕದ ಗದೆ
ನಟ್ಟುದರಸನ ನೊಸಲ ರುಧಿರದ
ಕಟ್ಟೆಯೊಡೆದಂದದಲಿ ಕವಿದುದು ನೃಪನ ತನು ನನೆಯೆ
ಕೊಟ್ಟ ಘಾಯಕೆ ಬಳಲಿ ಮರವೆಗೆ
ಬಿಟ್ಟು ಮನವನು ನಿಮಿಷದಲಿ ಜಗ
ಜಟ್ಟಿ ಕೌರವರಾಯ ಕೊಂಡನು ನಿಜಗದಾಯುಧವ ೨೨

ಘಾಯಗತಿ ಲೇಸಾಯ್ತು ಪೂತುರೆ
ವಾಯುಸುತ ದಿಟ ಸೈರಿಸೆನ್ನಯ
ಘಾಯವನು ಘೋರಪ್ರಹಾರಸಹಿಷ್ಣು ಗಡ ನೀನು
ಕಾಯಲಾಪಡೆ ಫಲುಗುಣನನಬು
ಜಾಯತಾಕ್ಷನ ಕರೆಯೆನುತ ಕುರು
ರಾಯನೆರಗಿದನನಿಲಜನ ಕರ್ಣಪ್ರದೇಶದಲಿ ೨೩

ಎಡದ ದಂಡೆಯೊಳೊತ್ತಿ ಹೊಯ್ಲುಗಳ
ಕಡುಹ ತಪ್ಪಿಸಿ ಕೌರವೇಂದ್ರನ
ಮುಡುಹ ಹೊಯ್ದನು ಭೀಮ ಮಝು ಭಾಪೆನೆ ಸುರಸ್ತೋಮ
ತಡೆದನಾ ಘಾಯವನು ಗದೆಯಲಿ
ನಡುವನಪ್ಪಳಿಸಿದನು ಭೀಮನ
ಮಿಡುಕು ನಿಂದುದು ನಗುವ ಪಾಂಡವ ಬಲದ ತಲೆಮಣಿಯೆ ೨೪

ಒಲೆದು ಬಿದ್ದನು ಭೀಮ ಕುಲಗಿರಿ
ಮಲಗುವಂದದಲೇರಬಾಯಿಂ
ದಿಳಿವ ಶೋಣಿತಧಾರೆ ಮಗ್ಗುಲ ಮುಸುಕಿತವನಿಯಲಿ
ಎಲೆ ಮಹಾದೇವಾ ವೃಕೋದರ
ನಳಿದನೇ ಹಾ ಭೀಮ ಹಾಯೆಂ
ದಳಲಿದುದು ಪರಿವಾರ ಸಾತ್ಯಕಿ ಸೃಂಜಯಾದಿಗಳು ೨೫

ಮೈಮರೆದನರೆಗಳಿಗೆ ಮಾತ್ರಕೆ
ವೈಮನಸ್ಯದ ಜಾಡ್ಯರೇಖೆಯ
ಸುಯ್ ಮಹಾದ್ಭುತವಾಯ್ತು ಪರಿಣತ ಪಾರವಶ್ಯದಲಿ
ಹಾ ಮಹಾದೇವೆನುತ ಹಗೆವನ
ಕೈಮೆಯನು ಬಣ್ಣಿಸುತಲೆದ್ದನ
ಲೈ ಮರುತ್ಸುತ ಸೂಸಿ ಹಾರಿದ ಗದೆಯ ತಡವರಿಸಿ ೨೬

ಕಾದುಕೊಳು ಕೌರವ ಗದಾಸಂ
ಭೇದದಭ್ಯಾಸಿಗಳಿಗಿದೆ ದು
ರ್ಭೇದ ನೋಡಾ ಹೊಯ್ಲಿಗಿದು ಮರೆವೊಗು ಮಹೇಶ್ವರನ
ಹೋದೆ ಹೋಗಿನ್ನೆನುತ ಜಡಿದು ವಿ
ಷಾದಭರದಲಿ ಮುಂದುಗಾಣದೆ
ಕೈದಣಿಯಲಪ್ಪಳಿಸಿದನು ಕಲಿಭೀಮ ಕುರುಪತಿಯ ೨೭

ಹಾರಿತೊಂದೆಸೆಗಾಗಿ ಗದೆ ಮೈ
ಹೇರಿತುರು ಘಾಯವನು ಮೊಳಕಾ
ಲೂರಿ ಬಿದ್ದನು ವದನದಲಿ ಮೆಂತಣಿಸೆ ರಣಧೂಳಿ
ಕಾರಿದನು ರಕುತವನು ಕೌರವ
ನೇರು ಬಲುಹೋ ಹೋದನೆನುತವೆ
ಚೀರಿತಾ ಪರಿವಾರ ಸುಮ್ಮಾನದ ಸಘಾಡದಲಿ ೨೮

ಭಾಪು ಮಝರೇ ಭೀಮ ಕೌರವ
ಭೂಪವಿಲಯಕೃತಾಂತ ಕುರುಕುಲ
ದೀಪಚಂಡಸಮೀರ ಕುರುನೃಪತಿಮಿರಮಾರ್ತಾಂಡ
ಕೋಪನಪ್ರತಿಪಕ್ಷಕುಲನಿ
ರ್ವಾಪಣೈಕಸಮರ್ಥ ಎನುತಭಿ
ರೂಪನನು ಹೊಗಳಿದರು ವಂದಿಗಳಬುಧಿ ಘೋಷದಲಿ ೨೯

ಜಾಳಿಸಿದ ವೇದನೆಯ ಝೊಮ್ಮಿನ
ಜಾಳಿಗೆಯ ಜವ ಹರಿದುದೆಚ್ಚರ
ಮೇಲುಮರವೆಯ ಮುಸುಕು ಜಾರಿತು ಹಾರಿತತಿಭೀತಿ
ಬೇಳುವೆಯ ಕರಣೇಂದ್ರಿಯದ ವೈ
ಹಾಳಿ ನಿಂದುದು ಬಿಗಿದ ಬಳಲಿಕೆ
ಯೊಳಿಗದ ಮೊನೆ ಮುರಿಯೆ ಸಂತೈಸಿದನು ಕುರುರಾಯ ೩೦

ಒರೆವ ರಕುತವ ಧೂಳಿನಿಂದವೆ
ಹೊರಗ ತೊಡೆತೊಡೆದೌಕಿ ಕೋಪದ
ಹೊರಿಗೆ ಝಳಪಿಸೆ ಕಂಗಳಲಿ ಹುಬ್ಬಿನಲಿ ಸುಯ್ಲಿನಲಿ
ಮುರುಕಿಸುವ ರಿಪುಭಟನನೋರೆಯೊ
ಳೆರಗಿ ನೋಡುತ ಸಾರಸತ್ವದ
ನೆರವಣಿಗೆ ಕೈಗೂಡಲೆದ್ದನು ಗದೆಯ ಕೈನೀಡಿ ೩೧

ಹಾನಿಯೆಮಗಾಯ್ತೆಂದು ಕಡುಸು
ಮ್ಮಾನವುಕ್ಕಿತೆ ನಿಮಿಷದಲಿ ದು
ಮ್ಮಾನ ಶರಧಿಯೊಳದ್ದುವೆನು ತಿದ್ದುವೆನು ನಿನ್ನವರ
ಈ ನಗೆಯನೀ ಬಗೆಯನೀ ವಿಜ
ಯಾನುರಾಗವ ನಿಲಿಸುವೆನು ಯಮ
ಸೂನು ಸೈರಿಸೆನುತ್ತ ಜರೆದನು ವಾಮಹಸ್ತದಲಿ ೩೨

ಎಲವೊ ಭೀಮ ವಿಘಾತಿಗಳ ಕೈ
ದೊಳಸಿನಲಿ ತೆರಹಾಯ್ತು ನೀನಿ
ಟ್ಟಳಿಸುವಡೆ ನಿನಗಾದುದಾಕಸ್ಮಿಕವದಭ್ಯುದಯ
ಛಲವ ಬಿಡಿಸುವಡೇಳ ನೀ ಮನ
ವಳುಕುವಡೆ ನಿನ್ನವರ ಕರೆ ಹೊ
ಯ್ಲೊಳಗಿದೊಂದೇ ಹೊಯ್ಲೆನುತ ಹೊಕ್ಕನು ಮಹೀಪಾಲ ೩೩

ಹೊಯ್ದು ತೋರಾ ಬಂಜೆ ನುಡಿಯಲಿ
ಬಯ್ದಡಧಿಕನೆ ಬಾಹುವಿಂ ಹೊರ
ಹೊಯ್ವವನೊ ಮೇಣ್ ಮುಖದಲೊ ನೀನಾರು ಜಾತಿಯಲಿ
ಕಯ್ದು ನಿನಗಿದೆ ಲಕ್ಷ್ಯಪಣ ನವು
ಗೆಯ್ದುವಡೆ ಗುಪ್ತಪ್ರತಾಪವ
ನೆಯ್ದೆ ಪ್ರಕಟಿಸೆನುತ್ತ ತಿವಿದನು ಭೀಮ ಕುರುಪತಿಯ ೩೪

ಅವನಿಪತಿ ಕೇಳ್ ಭೀಮಸೇನನ
ತಿವಿಗಳನು ತಪ್ಪಿಸಿ ಸುಯೋಧನ
ಕವಿದು ನಾಭಿಗೆ ತೋರಿ ಜಂಘೆಗೆ ಹೊಡಿ ಝಳಪದಲಿ
ಲವಣಿಯಲಿ ಲಳಿಯೆದ್ದು ಹೊಯ್ದನು
ಪವನಜನ ಭುಜಶಿರವ ಶಿಸೀಸಕ
ಕವಚವಜಿಗಿಜಿಯಾಗೆ ಬೀಳೆನುತರಸ ಬೊಬ್ಬಿರಿದ ೩೫

ಮತ್ತೆ ಹೊಯ್ದನು ಭೀಮಸೇನನ
ನೆತ್ತಿಯನು ನಿಪ್ಪಸರದಲಿ ಕಳೆ
ಹತ್ತಿ ಝೋಂಪಿಸಿ ತಿರುಗಿ ಬಿದ್ದನು ಬಿಗಿದ ಮೂರ್ಛೆಯಲಿ
ಕೆತ್ತ ಕಂಗಳ ಸುಯ್ಲ ಲಹರಿಯ
ಸುತ್ತಲೊಗುವರುಣಾಂಬುಗಳ ಕೆಲ
ದತ್ತ ಸಿಡಿದಿಹ ಗದೆಯ ಭಟನೊರಗಿದನು ಮರವೆಯಲಿ ೩೬

ಮಡಿದವನ ಹೊಯ್ಯೆನು ಧನಂಜಯ
ತೊಡು ಮಹಾಸ್ತ್ರವನವನಿಪತಿ ಬಿಲ
ದುಡುಕು ಯಮಳರು ಕೈದುಗೊಳಿ ಸಾತ್ಯಕಿ ಶರಾಸನವ
ಹಿಡಿ ಶಿಖಂಡಿ ದ್ರುಪದಸುತರವ
ಗಡಿಸಿರೈ ನಿಮ್ಮವನ ಹರಿಬಕೆ
ಮಿಡುಕುವಡೆ ಬಹುದೆನುತ ತೂಗಿದನವನಿಪತಿ ಗದೆಯ ೩೭

ಮೇಲೆ ಕಳವಳವಾಯ್ತು ದಿಕ್ಕಿನ
ಮೂಲೆ ಬಿರಿಯೆ ಪಿಶಾಚರಾಕ್ಷಸ
ಜಾಲ ವಿದ್ಯಾಧರ ಮಹೋರಗ ಯಕ್ಷ ಕಿನ್ನರರು
ಆಳು ನೀನಹೆ ನಳ ನಹುಷ ಭೂ
ಪಾಲಕುಲದಲಭಂಗನಾದೆ ಕ
ರಾಳಭುಜಬಲ ನೀನೆನುತ ಕೊಂಡಾಡಿತಮರಗಣ ೩೮

ಅರಸ ಕೇಳಾಶ್ಚರಿಯವನು ನಿ
ಮ್ಮರಸನಾಹವ ಸಫಲ ಸುರಕುಲ
ವರಳ ಮಳೆಗರೆದುದು ಕಣಾ ಕುರುಪತಿಯ ಸಿರಿಮುಡಿಗೆ
ಅರಿನೃಪರು ತಲೆಗುತ್ತಿದರು ಮುರ
ಹರ ಯುಧಿಷ್ಠಿರ ಪಾರ್ಥ ಯಮಳರು
ಬೆರಳ ಮೂಗಿನಲಿದ್ದು ಸುಯ್ದರು ಬಯ್ದು ದುಷ್ಕೃತವ ೩೯

ಮಿಡಿದನರ್ಜುನ ಧನುವ ಯಮಳರು
ತುಡುಕಿದರು ಕಯ್ದುಗಳ ಸಾತ್ಯಕಿ
ಮಿಡುಕಿದನು ಮರುಗಿದರು ಪಂಚದ್ರೌಪದೀಸುತರು
ಒಡೆಯನಳಿವಿನಲೆಲ್ಲಿಯದು ನೃಪ
ನುಡಿದ ನುಡಿಯೆನುತನಿಲತನುಜನ
ಪಡೆ ಗಜಾಶ್ವವ ಬಿಗಿಯೆ ಗಜಬಜಿಸಿತು ಭಟಸ್ತೋಮ ೪೦

ಮುಗುಡದಲಿ ಹರಿ ರೌಹಿಣೇಯನ
ಮೊಗವ ನೋಡಿದಡಾತನಿದು ಕಾ
ಳೆಗವಲೇ ಕೃತಸಮಯರಾದಿರಿ ಪೂರ್ವಕಾಲದಲಿ
ಹಗೆಯ ಬಿಡಿ ಕುರುಪತಿಯ ಸಂಧಿಗೆ
ಸೊಗಸಿ ನಿಲಲಿ ಯುಧಿಷ್ಠಿರನ ಮಾ
ತುಗಳ ಕೆಡಿಸದಿರೆಂದನಾ ಕೃಷ್ಣಂಗೆ ಬಲರಾಮ ೪೧

ಅರಸ ಕೇಳೈ ಬಿದ್ದ ಭೀಮನ
ಹೊರೆಗೆ ಬಂದರ್ಜುನನು ಮೋರೆಗೆ
ಬೆರಳನೊಡ್ಡಿ ಸಮೀರನಂದನನುಸುರನಾರೈದು
ಮರಳಿದನು ಮುರಹರನನೆಕ್ಕಟಿ
ಗರೆದು ಸಪ್ರಾಣನು ಗದಾನಿ
ರ್ಭರಪರಿಶ್ರಮ ಭೀಮ ಬಳಲಿದನೆಂದನಾ ಪಾರ್ಥ ೪೨

ದೇವ ಬೆಸಸಿನ್ನನಿಲಸೂನು ಸ
ಜೀವನಹಿತನಿಬರ್ಹಣ ಪ್ರ
ಸ್ತಾವವನು ಕರುಣಿಸುವುದಾತನ ಧರ್ಮವಿಕೃತಿಗಳ
ನೀವು ಕಂಡಿರೆ ನಾಭಿ ಜಂಘೆಗೆ
ಡಾವರಿಸಿದನು ಹಲವು ಬಾರಿ ಜ
ಯಾವಲಂಬನವೆಂತು ಕೃಪೆಮಾಡೆಂದನಾ ಪಾರ್ಥ ೪೩

ನೀವು ಮೊದಲಲಿ ಬೆಸಸಿದಿರಿ ಮಾ
ಯಾವಿಗಳ ಮಾಯೆಯಲಿ ಗೆಲುವುದು
ದೈವಕೃತಿಯಿದು ರಾಜಮಂತ್ರದ ಸಾರತರವೆಂದು
ಈ ವಿರೋಧಿಯ ಧರ್ಮಗತಿ ಸಂ
ಭಾವವನು ಕರ್ತವ್ಯಭಾವವ
ನೀವು ಬಲ್ಲಿರಿಯೆಂದನರ್ಜುನದೇವ ವಿನಯದಲಿ ೪೪

ಧಾತುಗೆಟ್ಟನು ಭೀಮ ಮುಸುಕಿತು
ಭೀತಿ ನಮ್ಮೆಲ್ಲರನು ದೈವ
ವ್ರಾತಘಾತನ ಕೊಂಡು ಕೊನರಿತು ಹೊಯ್ದು ಹೂಮಳೆಯು
ಪಾತಕಕೆ ಪಡಪಾಗದಮಳ
ಖ್ಯಾತಿ ನೋಯಂದೆ ವಿಜಯಸಿರಿ ರಾ
ಗಾತಿಶಯದಲಿ ನಮ್ಮ ರಮಿಸುವ ದೆಸೆಯ ಬೆಸಸೆಂದ ೪೫

ಅನಿಲಸುತ ಸಪ್ರಾಣಿಸಲಿ ರಿಪು
ಜನಪನೂರುವಿಭಂಗವೇ ಮುಂ.
ನ್ನಿನ ಪ್ರತಿಜ್ಞೆಯಲಾ ಸಭಾಮಧ್ಯದಲಿ ಕುರುಪತಿಯ
ನೆನಸಿಕೊಡಿ ಸಾಕಿನ್ನು ಬೇರೊಂ
ದನುನಯವು ತಾನೇನು ವಿಜಯಾಂ
ಗನೆಗೆ ದ್ರುಪದಕುಮಾರಿ ತಪ್ಪದೆ ಸವತಿಯಹಳೆಂದ ೪೬

ಅರಸ ಕೇಳಾಕ್ಷಣದೊಳನಿಲ
ಸ್ಮರಣೆಯನು ಹರಿ ಮಾಡಿದನು ಸಂ
ಚರಿಸಿದನು ತತ್ತನುಜನಂಗೋಪಾಂಗವೀಥಿಯಲಿ
ತರತರದ ನಾಡಿಗಳೊಳಗೆ ವಿ
ಸ್ತರಿಸಿ ಮೂಲಾಧಾರದಲಿ ಚೇ
ತರಿಸಿ ಸರ್ವಾಂಗದಲಿ ಜೀವಸಮೀರ ಪಸರಿಸಿದ ೪೭

ತ್ರಾಣವಿಮ್ಮಡಿಯಾಯ್ತು ತಿರುಗಿದ
ಗೋಣು ಮರಳಿತು ರೋಷವಹ್ನಿಗೆ
ಸಾಣೆವಿಡಿದವೊಲಾಯ್ತು ಕಣ್ಣುಗುಳಿದುವು ಕೇಸುರಿಯ
ಠಾಣವೆಡಹಿದ ಗದೆಯ ರಣಬಿ
ನ್ನಾಣ ಮಸುಳಿದ ಮಾನಮರ್ದನ
ದೂಣೆಯದ ಸವ್ಯಥೆಯ ಭಟ ಸಂತೈಸಿದನು ತನುವ ೪೮

ಕೊಡಹಿದನು ತನುಧೂಳಿಯನು ಧಾ
ರಿಡುವ ರುಧಿರವ ಸೆರಗಿನಲಿ ಸಲೆ
ತೊಡೆತೊಡೆದು ಕರ್ಪುರದ ಕವಳವನಣಲೊಳಳವಡಿಸಿ
ತೊಡೆಯ ಹೊಯ್ದಾರುವ ಮುರಾರಿಯ
ನೆಡೆಯುಡುಗದೀಕ್ಷಿಸುತ ದೂರಕೆ
ಸಿಡಿದ ಗದೆಯನು ತುಡುಕಿ ನೃಪತಿಯ ತೊಡೆಗೆ ಲಾಗಿಸಿದ ೪೯

ಭಾಪೆಗಳುಪರು ಪಾಂಡುಸುತರೆಂ
ಬಾಸೆಯಲಿ ನಿನ್ನಾತ ಪೈಮರೆ
ದೋಸರಿಸದಿದಿರಾದನೂರುದ್ವಯವ ವಂಚಿಸದೆ
ಶ್ವಾಸ ಮರಳಿತೆ ನಿನಗೆ ಯೋಗಾ
ಭ್ಯಾಸಿಯಹೆಯೋ ಭೀಮ ಸೈರಣೆ
ಲೇಸು ಮೆಚ್ಚಿದೆನೆನುತ ನೃಪನೆರಗಿದನು ಪವನಜನ ೫೦

ಹೊಯ್ದು ಲಳಿಯಲಿ ಕರಣಗತಿಯಲಿ
ಹಾಯ್ದು ನಭಕುಪ್ಪರಿಸಿ ಮರಳಿದು
ಹೊಯ್ದು ಹಿಂಗುವ ನೃಪನ ತೊಡೆಗಳನಿಟ್ಟನಾ ಭೀಮ
ಹಾಯ್ದು ಗದೆ ಹೆದ್ದೊಡೆಗಳನು ಮುರಿ
ದಯ್ದಿ ತವನಿಯನರುಣಜಲದಲಿ
ತೊಯ್ದು ಧೊಪ್ಪನೆ ಕೆಡೆದನಿಳೆಯಲಿ ಕೌರವರ ರಾಯ ೫೧

ಹಾರ ರುರಿದುದು ಕರ್ಣಪೂರದ
ಚಾರು ಮೌಕ್ತಿಕನಿಕರ ಸಿಡಿದವು
ಧಾರಿಡುವ ರಕುತಾಂಬು ಮಡುಗಟ್ಟಿದುದು ಮಗ್ಗುಲಲಿ
ವೀರ ಭೀಮಾ ಮರುಳು ಎನುತ ಬಲ
ವಾರಿದುದು ನಿಸ್ಸಾಳ ಸೂಳಿನ
ವೀರಪಣಹದ ಲಗ್ಗೆ ಮುಸಗಿತು ಪರರ ಥಟ್ಟಿನಲಿ ೫೨

ಬಿದ್ದನೈ ನಿನ್ನಾತನಿನ್ನೇ
ನೆದ್ದರೈ ದಾಯಿಗರು ಜೂಜನು
ಗೆದ್ದುದಕೆ ಫಲ ಬಂದುದೇ ಸಂಧಾನದಲಿ ಛಲವ
ಹೊದ್ದಿತಕೆ ಹುಲಿಸಾಯ್ತು ಬಲುವಗೆ
ಬಿದ್ದನೆಂದುಳುಹಿದನೆ ಪವನಜ
ನುದ್ದುರುಟುತನಕೇನನೆಂಬೆನು ಭೂಪ ಕೇಳೆಂದ ೫೩

ಏಕೆ ಸಂಜಯ ಕೌರವೇಂದ್ರನ
ಸಾಕಿತಕೆ ಫಲವಾಯ್ತು ನೀ ಬರಿ
ದೇಕೆ ಚುಚ್ಚುವೆ ಕಾಸಿ ಬಾದಣಗೊರೆದ ಘಾಯದಲಿ
ನೂಕಿದರೆ ಬಲಭದ್ರನನು ಮೇ
ಲೇಕೆ ಪವನಜ ಮುನಿದನವರ
ವ್ಯಾಕುಳರಲೇ ವೀರನಾರಾಯಣನ ಕರುಣದಲಿ ೫೪

## ಎಂಟನೆಯ ಸಂಧಿ

ಸೂ. ಕೆಡೆದ ಕೌರವನೃಪನ ನೇಮವ
ಪಡೆದು ಕೃಪ ಕೃತವರ್ಮ ಗುರುಸುತ
ರೊಡನೆ ಬಂದರು ಸಾರಿದರು ಪಾಂಡವರ ಪಾಳೆಯವ

ಕೇಳು ಧೃತರಾಷ್ಟ್ರಾವನೀಶ ಕ
ರಾಳ ಲೋಹಗದಾಭಿಹತಿಗೆ ನೃ
ಪಾಲ ಬಿದ್ದನು ಭಾರತದ ದುಸ್ಸಂಗ ಭಂಗದಲಿ
ಮೇಲೆ ಚಾರಣ ಸೂತ ಮಾಗಧ
ಜಾಲ ಹೊಗಳಿತು ಗರುವ ಕುರುಭೂ
ಪಾಲ ಗಂಡಿಗನಕಟೆನುತ ಕೊಂಡಾಡಿತಮರಗಣ ೧

ಏನನೆಂಬೆನು ಜೀಯ ಮಹಿಯಲಿ
ಮಾನನಿಧಿ ಮಲಗಿದನಲೈ ತವ
ಸೂನು ರುಧಿರದ ತಿಲಕವಾದನಲೈ ಧರಾಂಗನೆಗೆ
ಭಾನುಮತಿ ವೈಧವ್ಯವಿಧಿಗಿ
ನ್ನೇನ ನೋಂತಳೊ ರಾಜರವಿಯುವ
ಸಾನಸಮಯದೊಳಾದುದದ್ಭುತವರಸ ಕೇಳೆಂದ ೨

ನಡುಗಿತಿಳೆ ನಿರ್ಘಾತದಲಿ ಬರ
ಸಿಡಿಲು ಸುಳಿದುದು ನೆಣನ ಬಸೆಸಹಿ
ತಡಗು ಸುರಿದವು ಕವಡಿ ಹರಿದುದು ರಕುತದರೆವೊನಲು
ಸಿಡಿದವರೆಗಳು ಕೆರೆಗಳುಕ್ಕಿದ
ವಡಿಗಡಿಗೆ ಹೆಮ್ಮರ ನಿವಾತದ
ಲುಡಿದು ಬಿದ್ದವು ಕೌರವೇಂದ್ರನ ಪತನ ಕಾಲದಲಿ ೩

ಬೀಸಿದುದು ಬಿರುಗಾಳಿ ಕತ್ತಲೆ
ಸೂಸಿದುದು ದಿಗುವಳಯದಲಿ ಪರಿ
ವೇಷದಲಿ ಗ್ರಹ ನೆರೆದವೈದಾರೇಳು ರವಿಯೊಡನೆ
ಸೂಸಿದವು ಹಗಲುಳುಕು ಮೃಗಗಣ
ವಾಸುರದಲೊದರಿದವು ಕಂದಿತು
ವಾಸರಪ್ರಭೆ ಕೌರವೇಂದ್ರನ ಪತನ ಕಾಲದಲಿ ೪

ಒರೆ ಸಹಿತ ಕಯ್ದುಗಳು ಕರದಿಂ
ಮುರಿದು ಬಿದ್ದವು ಗಜಹಯದ ಕ
ಣ್ಣೊರತೆಯೆದ್ದವು ಕಡಿದು ಬಿದ್ದವು ಧ್ವಜಪತಾಕೆಗಳು
ತುರುಗಿದಂತಸ್ತಾಪದಲಿ ಮನ
ಮರುಗಿತಾ ಪರಿವಾರ ಸುಭಟರಿ
ಗರುಹಿತಾಕಸ್ಮಿಕದ ಭಯುವವನೀಶ ಕೇಳೆಂದ ೫

ದ್ರುಪದತನುಜ ಶಿಖಂಡಿ ಸೃಂಜಯ
ನೃಪ ಯುಧಾಮನ್ಯೂತ್ತಮೌಂಜಸ
ಚಪಳಪಂಚದ್ರೌಪದೀಸುತ ಸೋಮಕಾದಿಗಳು
ಅಪದಶಾವಿರ್ಭೂತಚೇತಃ
ಕೃಪಣರತಿಚಿಂತಿಸಿದರಂದಿರು
ಳುಪಹತಿಯ ಸೂಚಿಸುವ ವಾಮಭುಜಾಕ್ಷಿಕಂಪದಲಿ ೬

ಅವನಿಪತಿ ಕೇಳೀಚೆಯಲಿ ಕೌ
ರವನ ಹೊರೆಗೈತಂದು ನಿಂದನು
ಸವಡಿಗೈಗದೆಯಣಸುಗಲ್ಲದ ಗಾಢಗರ್ವದಲಿ
ಪವನಸುತ ನುಡಿಸಿದನಲೈ ನಿ
ನ್ನವನನೇನೈ ಭೂಪ ಕೊಡುವೈ
ನವಗೆ ನೆಲನರ್ಧವನು ನಾಚಿಕೆಯೇಕೆ ನುಡಿಯೆಂದ ೭

ಊರ ಬೇಡಿದಡೈದ ನಾವರ
ಡೂರುಗಳನೇ ಕೊಂಡೆವೈ ನಿಜ
ಧಾರುಣಿಯ ಕೊಡೆನೆಂದಲೈ ಸೂಚ್ಯಾಗ್ರ ಸಮ್ಮಿತವ
ನಾರಿ ಋತುಮತಿಯೆಂದಡೆಯು ಸುಲಿ
ಸೀರೆಗಳನೆಂಬಗ್ಗಳಿಕೆ ಕಾ
ಸಾರದಲಿ ಕರಗಿತೆ ಸುಯೋಧನ ಎಂದನಾ ಭೀಮ ೮

ಎತ್ತಿ ಕಳೆದೈ ಬನಕೆ ನಾವ್ ನಿ
ಮ್ಮೆತ್ತುಗಳಲೈ ಬೆರಳಲೇಡಿಸಿ
ದೆತ್ತುಗಳ ಕೂಡೇಕೆ ಸರಿನುಡಿ ಸಾರ್ವಭೌಮರಿಗೆ
ಇತ್ತಲೇತಕೆ ಬಿಜಯಮಾಡಿದಿ
ರೊತ್ತಿದೇ ಕಲುನೆಲನು ಪವಡಿಸಿ
ಮತ್ತೆ ತೊಡೆಗಳ ತಿವಿಯಬೇಕೇ ಎಂದನಾ ಭೀಮ ೯

ಕೃತ್ರಿಮವ ನಿರ್ಮಿಸಿದ ಫಲ ಕೈ
ವರ್ತಿಸಿತೆ ನೀವರಗುಮನೆಯಲಿ
ಹೊತ್ತಿಸಿದ ಫಲ ಬಂದುದೇ ವ್ಯವಧಾನವಾದುವಲೆ
ಬಿತ್ತಿದಿರಿ ವಿಷಬೀಜವನು ನೆರೆ
ದತ್ತ ಫಲ ಕೈಸಾರ್ದುದಾದಡೆ
ಕೆತ್ತುಕೊಂಡಿರಲೇಕೆ ನುಡಿ ತನ್ನಾಣೆ ನುಡಿಯೆಂದ ೧೦

ಸಂದುದೇ ನೀ ಮೆಚ್ಚೆ ಸಭೆಯಲಿ
ಹಿಂದೆ ಮಾಡಿದ ಭಾಷೆ ಕುರುಡನ
ನಂದನರನಿಮ್ಮಡಿಸಿದೈವತ್ತನು ರಣಾಗ್ರದಲಿ
ಕೊಂದು ದುಶ್ಶಾಸನನ ಖಂಡವ
ತಿಂದು ರಕುತವ ಕುಡಿದು ಬಲುಗದೆ
ಯಿಂದ ನಿನ್ನಯ ತೊಡೆಯನುಡಿದೆನೆ ಭೂಪ ಹೇಳೆಂದ ೧೧

ರಾಯನಾಸ್ಥಾನದಲಿ ಖೂಳರ
ರಾಯ ನೀನೇ ಭಂಗಪಡಿಸಿ ನ
ವಾಯಿಯಲಿ ನಿಮ್ಮೂರಿಗೆಮ್ಮೈವರನು ನೀ ಕರಸಿ
ಪಾಯದಲಿ ಜೂಜಾಡಿ ಕಪಟದ
ದಾಯದಲಿ ಸೋಲಿಸಿ ಯುಧಿಷ್ಠಿರ
ರಾಯನರಸಿಯ ಸುಲಿಸಿತಕೆ ಫಲವಾಯೆ ಹೇಳೆಂದ ೧೨

ಹಳುವವಲಿ ನಾನಾ ಪ್ರಕಾರದ
ಳಳಲಿಸಿದ ಫಲಭೋಗವನು ನೀ
ತಲೆಯಲೇ ಧರಿಸೆನುತ ವಾಮಾಂಘ್ರಿಯನು ಮಕುಟದಲಿ
ಇಳುಹಿದನು ಗೌರ್ಗೌವೆನುತ ಬಿಡ
ದುಲಿದೆಲಾ ಎನುತೊದೆದು ಮಕುಟವ
ಕಳಚಿದನು ಕೀಲಣದ ಮಣಿಗಳು ಕೆದರೆ ದೆಸೆದೆಸೆಗೆ ೧೩

ಹಿಂದಣಪರಾಧವನು ಲೆಕ್ಕಿಸು
ತೊಂದೆರಡು ಮೂರಾಯ್ತು ನಾಲ್ಕೈ
ದೆಂದು ಮೆಟ್ಟಿದನವನಿಪಾಲನ ಮಕುಟಮಸ್ತಕವ
ಇಂದುಮುಖಿಯನು ಬೂತುಗೆಡೆದುದ
ಕೊಂದು ಘಾಯವ ಕೊಳ್ಳೆನುತ ಮಡ
ದಿಂದ ವದನವನೊದೆದು ಹಲುಗಳ ಕಳಚಿದನು ಭೀಮ ೧೪

ಉಚಿತವೆಂದರು ಕೆಲರು ಕೆಲರಿದ
ನುಚಿತವೆಂದರು ಪೂರ್ವಜನ್ಮೋ
ಪಚಿತ ದುಷ್ಕೃತವ್ಯಸಲೇ ಶಿವ ಎಂದು ಕೆಲಕೆಲರು
ಖಚರ ಕಿನ್ನರ ಯಕ್ಷ ನಿರ್ಜರ
ನಿಚಯ ಭೀಮನ ಬೈದು ಕುರುಪತಿ
ಯಚಳ ಬಲವನು ಬಣ್ಣಿಸುತ ಹೊಕ್ಕರು ನಿಜಾಲಯವ ೧೫

ಭೀಮ ಹಾ ಹಾ ಕಷ್ಟವಿದು ಸಂ
ಗ್ರಾಮಜಯವೇ ಸಾಲದೇ ಕುರು
ಭೂಮಿಪತಿಯಶ್ಲಾಘ್ಯನೇ ಲೋಕೈಕಮಾನ್ಯನಲಾ
ನೀ ಮರುಳಲಾ ಸಾರೆನುತ ತ
ತ್ಸೀಮೆಗೈತಂದನಿಲತನುಜನ
ನಾ ಮಹೀಪತಿ ನೂಕಿ ಸಂತೈಸಿದನು ಕುರುಪತಿಯ ೧೬

ಗುಣನಿಧಿಯನೇಕಾದಶಾಕ್ಷೋ
ಹಿಣಿಯ ಪತಿಯನಶೇಷ ಪಾರ್ಥಿವ
ಮಣಿಮಕುಟ ಕಿರಣೋಪಲಾಲಿತ ಪಾದಪಲ್ಲವನ
ರಣದೊಳನ್ಯಾಯದಲಿ ತೊಡೆಗಳ
ಹಣಿದುದಲ್ಲದೆ ಪಾದದಲಿ ನೀ
ಕೆಣಕುವರೆ ಕುರುರಾಜಮೌಳಿಯನೆಂದನಾ ಭೂಪ ೧೭

ಅನುಜರಳಿದುದು ನೂರು ರಣದಲಿ
ತನುಜರಳಿದುದು ಮಾವ ಗುರು ಮೈ
ದುನ ಪಿತಾಮಹ ಪುತ್ರ ಮಿತ್ರ ಜ್ಞಾತಿ ಬಾಂಧವರು
ಅನಿಬರವನೀಶ್ವರರು ಸಮರಾ
ವನಿಯೊಳಡಗಿದುದೇಕದೇಶದ
ಜನಪತಿಯ ಮುರಿದುದುವೆ ಸಾಲದೆ ಭೀಮ ನಮಗೆಂದ ೧೮

ಆವ ಮೋರೆಯೊಳಪ್ಪದೇವರ
ನಾವು ನೋಡುವೆವವ್ವೆಯರ ಸಂ
ಭಾವಿಸುವೆವಾವಂಗದಲಿ ಗಾಂಧಾರಿ ಕಡುಗೋಪಿ
ದೇವಿಯರುಗಳ ಶೋಕವಹ್ನಿಯ
ನಾವ ವಿಧದಲಿ ನಿಲಿಸುವೆವು ಕಾಂ
ತಾವಳಿಗಳೇನೆಂದು ಬಯ್ವರು ಭೀಮ ಹೇಳೆಂದ ೧೯

ಅಳಲಿದತಿಭಂಗಿಸಲು ಪರಮಂ
ಡಳಿಕರೇ ನಾವ್ ಪಾಂಡುವಿನ ಮ
ಕ್ಕಳುಗಳಾ ಧೃತರಾಷ್ಟ್ರ ತನುಸಂಭವರು ಕೌರವರು
ನೆಲನ ಹುದುವಿನ ದಾಯಭಾಗದ
ಕಳವಳದೊಳಾಯ್ತಲ್ಲದುಳಿದಂ
ತೊಳಗು ಭಿನ್ನವೆ ಭೀಮ ಬಿಡು ಭಂಗಿಸದೆ ಸಾರೆಂದ ೨೦

ಸೈರಿಸೆಮ್ಮಪರಾಧವನು ಕುರು
ವೀರ ಸಂಚಿತಪಾಪಕರ್ಮವಿ
ಕಾರವಿದು ಭೋಗಾದಿ ನಿನಗೆಂದರಸ ದುಗುಡದಲಿ
ನೀರೊರೆವ ಕಣ್ಣುಗಳನೊರಸುತ
ಸೀರೆಯಲಿ ಗದಗದಿತ ಗಳದಲಿ
ಸಾರಹೃದಯ ಮಹೀಶನದ್ದನು ಖೇದಪಂಕದಲಿ ೨೧

ಕಂಡನೀವ್ಯತಿಕರವನರಸನ
ಮಂಡೆಯಂಘ್ರಿಯ ಭೀಮಸೇನನ
ದಂಡಿಯನು ದಟ್ಟಯಿಸೆ ಸುಯಿ ದಳ್ಳುರಿಯ ಜೊಣೆಯಲಿ
ಗಂಡುಗೆದರಿದ ರೋಷಶಿಖಿ ಹುರಿ
ಗೊಂಡುದಕ್ಷಿಗಳಲಿ ವೃಕೋದರ
ಕೊಂಡನೇ ತಪ್ಪೇನೆನುತ ನಿಂದಿದ್ದನಾ ರಾಮ ೨೨

ಎಲವೆಲವೊ ಪಾಂಡವರಿರಾ ನೀ
ವಳುಪಿದಿರಲಾ ನಾಭಿಯಿಂದವೆ
ಕೆಳಗೆ ಕೈಮಾಡುವುದು ಸಲ್ಲದು ಗದೆಯ ಕದನದಲಿ
ಚಲಿಸಲಾಗದು ಧರ್ಮನಿರ್ಣಯ
ದೊಳಗಿದೊಂದೇ ಭಾಷೆ ಮಾಡಿದಿ
ರಳಿದಿರನ್ಯಾಯದಲಿ ಕೊಂದಿರಿ ಕೌರವೇಶ್ವರನ ೨೩

ನೀವು ಮಾಡಿದ ಸತ್ಯಭಾಷೆಗೆ
ನೀವಲಾ ತಪ್ಪಿದಿರಿ ನೋಟಕ
ರಾವು ಮಧ್ಯಸ್ಥಿತರಲೇ ಧರ್ಮೈಕರಕ್ಷಕರು
ನಾವು ಸಾಕ್ಷಿಗಳಬಳರೆಂದೇ
ನೀವು ನೃಪತಿಯ ತೊಡೆಯನುಡಿದಿರಿ
ಡಾವರವೆ ಸಾಕೈಸೆ ಕಾಲಿಕ್ಕಿದಿರಿ ಸಿರಿಮುಡಿಗೆ ೨೪

ಎಂದು ನೇಗಿಲ ತುಡುಕಿಯೆಡಗೈ
ಯಿಂದ ನೆಗಹಿ ಮಹೋಗ್ರ ಮುಸಲವ
ನೊಂದು ಕಯ್ಯಲಿ ತಿರುಹಿ ಕೊಬ್ಬಿದ ಖತಿಯ ಭಾರದಲಿ
ಮುಂದೆ ನಡೆತರೆ ಸಕಲಸೇನಾ
ವೃಂದ ನಡುಗಿತು ಬಹಳ ಭೀತಿಯ
ಬಂದಿಯಲಿ ಜರುಗಿದವು ಜವಳಿಯ ಜಗದ ಜೋಡಿಗಳು ೨೫

ಬಿಲ್ಲ ಮಿಡಿದನು ಪಾರ್ಥ ಭಾರತ
ಮಲ್ಲ ಕೊಂಡನು ಗದೆಯ ನೃಪ ನಿಂ
ದಲ್ಲಿ ಬೆರಗಾದನು ರಣೋತ್ಸವವಾಯ್ತು ಯಮಳರಿಗೆ
ತಲ್ಲಣಿಸಿತುಳಿದರಸುಮಕ್ಕಳು
ಚಲ್ಲಿತಾ ಸುಭಟೌಘ ವಿಜಯದ
ಘುಲ್ಲವಣೆ ಪಲ್ಲಟಿಸಿತವರಿಗೆ ಖೇಡತನದೊಡನೆ ೨೬

ಹಲಧರನ ಖಿತಿ ಬಲುಹು ಕದನಕೆ
ಮಲೆತನಾದಡೆ ಹಾನಿ ತಪ್ಪದು
ಗೆಲವಿನಲಿ ಸೋಲದಲಿ ತಾನೌಚಿತ್ಯವೇನಿದಕೆ
ಒಳಗೆ ಬಿದ್ದ ವಿಘಾತಿ ಮುರರಿಪು
ತಿಳಿವನೋ ತವಕಿಸುವನೋ ನಾ
ವಳಿದೆವಿನ್ನೇನೆನುತ ನಡುಗಿದನಂದು ಯಮಸೂನು ೨೭

ಹಲಧರನ ಮುಸಕವನು ಪಾಂಡವ
ಬಲದ ದುಶ್ಚೇಷ್ಟೆಯನು ಭೀಮನ
ಫಲುಗುಣನ ಧರ್ಮಜರ ಯಮಳರ ಚಿತ್ತವಿಭ್ರಮವ
ಬಲಿಮಥನನೀಕ್ಷಿಸುತ ರಜತಾ
ಚಲವ ತರುಬುವ ನೀಲ ಗಿರಿಯವೊ
ಲಳುಕದಿದಿರಲಿ ನಿಂದು ಹಿಡಿದನು ಬಲನ ಬಲಗಯ್ಯ ೨೮

ಚಿತ್ತವಿಸಿರೇ ಬರಿಯ ರೋಷಕೆ
ತೆತ್ತಡೇನಹುದಂತರಂಗವ
ನುತ್ತಮರ ಪದ್ಧತಿಗಳಲಿ ಶಾಸ್ತ್ರಾರ್ಥನಿಶ್ಚಯವ
ಬಿತ್ತರಿಸುವುದು ಕೌರವೇಂದ್ರನ
ಕಿತ್ತಡವ ನೀವರಿಯಿರೇ ನಿಮ
ಗೆತ್ತಿದಾಗ್ರಹ ನಿಲಲಿ ತಿಳುಹುವೆನೆಂದನಸುರಾರಿ ೨೯

ಏನ ತಿಳುಹುವೆ ನೀನು ಶಾಸ್ತ್ರದೊ
ಳೇನ ನಡೆದರು ನಿನ್ನವರು ಯಮ
ಸೂನು ನುಡಿಯನೆ ಸಮಯವನು ಶಾಸ್ತ್ರೌಘಸಂಗತಿಯ
ಹೀನಗತಿ ಪಡಿತಳದ ಹೊಯ್ಲು
ತ್ತಾನ ಘಾಯದಲೊದಗಬೇಕಿಂ
ಬೀ ನಿಬಂಧನವಾರಲಳಿದುದು ಕೃಷ್ಣ ಹೇಳೆಂದ ೩೦

ಅದರಿನೀ ಕೌರವನ ತೊಡೆಗಳ
ಸದೆದನನ್ಯಾಯದಲಿ ನಿನ್ನವ
ನಿದಕೆ ಸೈರಿಸಬಹುದೆ ಹೇಳೈ ಧರ್ಮನಿರ್ಣಯವ
ಮದಮುಖನ ಭುಜಬಲವ ನೋಡುವ
ವಿದು ವಿಕಾರವಲಾ ಎನುತ ಮುಂರು
ಚಿದನು ಬಲ ಬಲಗಯ್ಯನುರವಣಿಸಿದನು ಖಾತಿಯಲಿ ೩೧

ಹರಿದು ಹಿಡಿದನು ಮತ್ತೆ ನೀಲಾಂ
ಬರನ ಸೆರಗನು ನಿಮ್ಮ ಕುರುಪತಿ
ಚರಿಸಿದನಲಾ ಧರ್ಮವಿಸ್ತರವನು ವಿಭಾಡಿಸದೆ
ಕರಸಿ ಕಪಟದ್ಯೂತದಲಿ ನೃಪ
ವರನ ಸೋಲಿಸಿ ಪಟ್ಟದರಸಿಯ
ಕರಸಿ ಸುಲಿಸುವುದಾವ ಋಷಿಮತವೆಂದನಸುರಾರಿ ೩೨

ಎಣಿಸಬಹುದೇ ನಿಮ್ಮ ನೃಪನವ
ಗುಣವನನ್ಯಾಯ ಪ್ರಬಂಧಕೆ
ಗಣನೆಯುಂಟೇ ಭೀಮಗಡ ಖಂಡಿಸಿದ ತೊಡೆಗಳನು
ಕೆಣಕಿದನು ಮೈತ್ರೇಯನನು ನೃಪ
ನಣಕಿಸಲು ಶಪಿಸಿದನು ತೊಡೆಗಳ
ಹಣೆದವಾಡಲಿಯೆಂದನದು ತಪ್ಪುವುದೆ ಋಷಿವಚನ ೩೩

ಆ ಪತಿವ್ರತೆ ಬಯ್ದಳೀ ಕುರು
ಭೂಪ ತೊಡೆಗಳ ತೋರಿ ಜರೆಯಲು
ದ್ರೌಪದಿಯ ನುಡಿ ತಪ್ಪುವುದೆ ಋಷಿವಚನದನುಗತಿಗೆ
ಕೋಪ ಕುಡಿಯಿಡಲೀ ವೃಕೋದರ
ನಾಪನಿತುಡಿದನು ಪ್ರತಿಜ್ಞಾ
ಸ್ಥಾಪನಕೆ ಬಳಿಕೇನ ಮಾಡುವುದೆಂದನಸುರಾರಿ ೩೪

ಎಂದು ರಾಮನ ಮನವ ನಯನುಡಿ
ಯಿಂದ ತಿಳುಹಿದನೈಸಲೇ ಬಳಿ
ಕಂದು ದುಗುಡದಲವರು ನಡೆದರು ದ್ವಾರಕಾಪುರಿಗೆ
ಬಂದ ಕಂಟಕ ಬಳಿಚಿತೇ ಸಾ
ಕೆಂದು ಹರಿ ಕುರುಪತಿಯ ಹೊರೆಗೈ
ತಂದು ಬೋಳೈಸಿದನು ಭೀಮಾರ್ಜುನ ಯುಧಿಷ್ಠಿರರ ೩೫

ಈಸುದಿನ ಪರಿಯಂತ ಧರ್ಮದ
ಮೀಸಲಳಿಯದೆ ಬಳಸಿ ಬಹಳಾ
ಯಾಸವನು ಸೈರಿಸಿದಿರಿಂದಿನ ಯುದ್ಧಕೇಳಿಯಲಿ
ಘಾಸಿಯಾದುದು ಧರ್ಮಗತಿ ಬುಧ
ರೇಸು ಮನಗಾಣರು ವೃಥಾಭಿನಿ
ವೇಶವಾದುದು ಮುಕಂಟಭಂಗದೆ ಹೇಳೆಂದನಾ ಭೂಪ ೩೬

ಅರಸ ತಲೆಗುತ್ತಿದನು ದೃಗು ಜಲ
ವುರವಣಿಸಿ ಮೌನದಲಿ ಫಲುಗುಣ
ನಿರೆ ಮುರಾರಿ ಸುಯೋಧನನ ಸರ್ವಾವಗುಣ ಗಣವ
ಪರಿಪರಿಯಲೆಚ್ಚರಿಸಿ ದುಗುಡವ
ಪರಿಹರಿಸಿ ಸಂತೈಸಿದಡೆ ಮುರ
ಹರನ ಬೈದನು ನಿನ್ನ ಮಗ ನಾನಾ ವಿಡಂಬದಲಿ ೩೭

ಆರ ಬಸುರಲಿ ಬಂದು ಮೊಲೆಯುಂ
ಡಾರ ಮಡಲಲಿ ಬೆಳೆದು ಬಳಿಕಿನೊ
ಳಾರ ಹೆಂಡಿರ ಕೊಂಡು ಕರು ತುರುಗಾದು ಕಳವಿನಲಿ
ವೀರ ದೈತ್ಯನ ಸದೆಬಡಿದು ಕುರು
ವೀರವಂಶದ ರಾಯರೆಮ್ಮೊಳು
ವೈರಬಂಧವ ಬಿತ್ತಿ ಕೊಂದವ ಕೃಷ್ಣ ನೀನೆಂದ ೩೮

ಬಣಗುಗಳು ಭೀಮಾರ್ಜುನರು ಕಾ
ರಣಿಕ ನೀ ನಡುವಾಯಿ ಧರ್ಮದ
ಕಣಿ ಯುಧಿಷ್ಠಿರನೆತ್ತಬಲ್ಲನು ನಿನ್ನ ಮಾಯೆಂಗಳ
ಸೆಣಸನಿಕ್ಕಿದೆ ನಮ್ಮೊಳಗೆ ಧಾ
ರುಣಿಯ ಭಾರವ ಬಿಡಿಸಲೋಸುಗ
ರಣವ ಹೊತ್ತಿಸಿ ನಮ್ಮ ಬೇಂಟೆಯನಾಡಿಸಿದೆಯೆಂದ ೩೯

ಪಾಪ ನಿನಗೀ ಗೋತ್ರವಧೆಯ ವಿ
ಳಾಪ ನಿನ್ನನು ತಾಗಲೀ ಸ
ರ್ವಾಪರಾಧವು ನಿನ್ನದೀ ಕೌರವರ ಪಾಂಡವರ
ಕೋಪವನು ಕೊನರಿಸುವ ನೃಪರನು
ತಾಪವನು ತೂಳುವ ಕುಬುದ್ಧಿ
ವ್ಯಾಪಕನು ನೀ ವೈರಿಯಲ್ಲದೆ ಭೀಮನಲ್ಲೆಂದ ೪೦

ರಣಮುಖದೊಳೀ ಕ್ಷತ್ರಧರ್ಮದ
ಕಣಿಕೆ ತಪ್ಪದೆ ವೇದಶಾಸ್ತ್ರದ
ಭಣಿತೆ ನೋಯದೆ ವೀರವೃತ್ತಿಯ ಪದದ ಪಾಡರಿದು
ಸೆಣಸು ಸೋಂಕಿದ ಛಲದ ವಾಸಿಯೊ
ಳಣುವ ಹಿಂಗದೆ ಜೀವದಾಸೆಗೆ
ಮಣಿಯದಳಿದುದನೆಲ್ಲ ಬಲ್ಲರು ಕೃಷ್ಣ ಕೇಳೆಂದ ೪೧

ಮತ್ತೆ ಹೂವಿನ ಮಳೆಗಳಾತನ
ನೆತ್ತಿಯಲಿ ಸುರಿದವು ಮುರಾಂತಕ
ನತ್ತ ತಿರುಗಿದನವನಿಪತಿ ಕರತಳವ ತಳುಕಿಕ್ಕಿ
ಮುತ್ತಿದರು ಮಾಗಧರು ವಂದಿಗ
ಳೆತ್ತಣದು ನಾನರಿಯೆನರಸ ವಿ
ಯತ್ತಳವನಳ್ಳಿರಿದುದಾ ಸ್ತುತಿಪಾಠಕರ ರಭಸ ೪೨

ಗರುವ ಸುಭಟರು ಘಾಸಿಯಾದಿರಿ
ತುರಗ ಗಜ ಬಳಲಿದವು ಸೂರ್ಯನ
ತುರಗ ಬಿಡುಂತದೆ ಪಶ್ಚಿಮಾದ್ರಿಯ ತಡಿಯ ತಪ್ಪಲಲಿ
ತ್ವರಿತದಲಿ ಪಾಂಚಾಲ ಸೃಂಜಯ
ಧರಣಿಪರು ನೀವ್ ಹೋಗಿ ನಿದ್ರೆಯೊ
ಳಿರುಳ ನೂಕುವುದೆಂದು ನುಡಿದನು ದೈತ್ಯರಿಪು ನಗುತ ೪೩

ನಡೆಯಿ ಪಂಚದ್ರೌಪದೇಯರ
ಗಡಣ ಧೃಷ್ಟದ್ಯುಮ್ನ ನಿಳಯಕೆ
ನಡೆ ಯುಧಾಮನ್ಯೂತ್ತಮೌಂಜಸ ಕಲಿ ಶಿಖಂಡಿಗಳು
ತಡೆಯದಿರಿ ಭಟರೇಳಿ ವಾದ್ಯದ
ಗಡೆಬಡಿಗರೀ ಸಕಲಜನ ನೀವ್
ಕಡು ಬಳಲಿದಿರಿ ಹೋಗಿ ಪಾಳೆಯಕೆಂದು ನೃಪ ನುಡಿದ ೪೪

ಬೀಳುಕೊಂಡುದು ಸಕಲಬಲ ಪಾಂ
ಚಾಲ ಪಂಚದ್ರೌಪದೇಯರು
ಪಾಳೆಯವ ಹೊಕ್ಕರು ಯುಧಿಷ್ಠಿರನೃಪನ ನೇಮದಲಿ
ಏಳಿ ನಾವೀ ಕೌರವೇಂದ್ರನ
ಪಾಳೆಯವ ನೋಡುವವೆನುತ ವನ
ಮಾಲಿ ರಥವೇರಿದನಿವರು ತಂತಮ್ಮ ರಥವೇರೆ ೪೫

ನರ ಯುಧಿಷ್ಠಿರ ಭೀಮ ಸಹದೇ
ವರು ನಕುಲ ಸಾತ್ಯಕಿಸಹಿತ ಮುರ
ಹರನು ಹೊಕ್ಕನು ಕೌರವೇಂದ್ರನ ಶೂನ್ಯ ಶಿಬಿರವನು
ಅರಸ ಕರ್ಣ ದ್ರೋಣ ಮಾದ್ರೇ
ಶ್ವರನ ಭಗದತ್ತನ ನದೀಜಾ
ದ್ಯರ ನಿವಾಸಂಗಳನು ಕಂಡಳಲಿದನು ಯಮಸೂನು ೪೬

ಸೂತನಿಳಿದನು ಮುನ್ನ ರಥವನು
ಭೂತಳಾಧಿಪನಿಳಿದನಶ್ವ
ವ್ರಾತವನು ಕಡಿಯಣದ ನೇಣಲಿ ತೆಗೆದು ಬಂಧಿಸಿದ
ವಾತಜನ ಸಾತ್ಯಕಿಯ ಯಮಳರ
ಸೂತರಿಳಿದರು ಮುನ್ನ ತುರಗವ
ನಾತಗಳು ಸಂತೈಸಿದರು ಸಂಗರ ಪರಿಶ್ರಮವ ೪೭

ಇಳಿರಥವನೆಲೆ ಪಾರ್ಥ ಬಳಿಕಾ
ನಿಳಿವೆನೆಂದನು ಶೌರಿ ನೀವ್ ಮು
ನ್ನಿಳಿವುದೆಂದನು ಪಾರ್ಥನಾಯ್ತು ವಿವಾದವಿಬ್ಬರಿಗೆ
ಎಲೆ ಮರುಳೆ ನಾ ಮುನ್ನಿಳಿಯೆ ನೀ
ನುಳಿವೆಲಾ ಸಾಕಿನ್ನು ಗರ್ವದ
ಗಳಹತನವನು ಬಳಿಕ ತೋರುವೆ ರಥವನಿಳಿಯೆಂದ ೪೮

ಬಳಿಕ ಫಲುಗುಣ ರಥದ ಮೇಲಿಂ
ದಿಳೆಗೆ ಹಾಯ್ದನು ಕೃಷ್ಣ ನೀನಿ
ನ್ನಿಳಿಯೆನಲು ಚಮ್ಮಟಿಗೆ ವಾಘೆಯ ನೇಣ ರಥದೊಳಗೆ
ಇಳುಹಿ ನಗುತ ಮುಕುಂದ ರಥದಿಂ
ದಿಳಿಯೆ ಛಟಛಟಿಲೆಂದು ಕಿಡಿಯುಂ
ಚ್ಚಳಿಸಲುರಿದುದು ತೇರು ಕೇಸುರಿ ನಭವನಪ್ಪಳಿಸೆ ೪೯

ಧ್ವಜದ ಹಲಗೆಯನೊದೆದು ಹಾಯ್ದನು
ನಿಜನಿವಾಸಕೆ ಹನುಮ ಧೂಮ
ಧ್ವಜನಮಯವಾದುದು ರಥಾಶ್ವ ರಥಾಂಗ ರಾಜಿಯಲಿ
ವಿಜಯ ಭೀಮಾದಿಗಳು ಕಂಡ
ಕ್ಕಜದೊಳಾಕಸ್ಮಿಕದ ಕಿಚ್ಚಿನ
ಗಜಬಜವಿದೇನೆನುತ ನೆರೆ ಬೆಚ್ಚಿದರು ಭೀತಿಯಲಿ ೫೦

ಹರಿಯಿದೇನಾಕಸ್ಮಿಕದ ದ
ಳ್ಳುರಿಯೊಳದ್ದುದು ತೇರು ನಮಗೀ
ಯರಿಯ ಭಯ ಭಾರಿಸಿತಿದೇನು ನಿಮಿತ್ತವಿದಕೆನಲು
ಉರಿವುದಂದೇ ತೇರು ಕರ್ಣನ
ಗುರು ನದೀನಂದನನ ದೈವಿಕ
ಶರಹತಿಯೊಳೆಮ್ಮಿಂದ ನಿಂದುದು ಪಾರ್ಥ ಕೇಳೆಂದ ೫೧

ನಾವಿಳಿದ ಬಳಿಕೀ ರಥದೊಳಿರ
ಲಾವ ಹದನೋ ನಿನಗೆ ಕಂಡೈ
ದೈವಿಕಾಸ್ತ್ರದ ಮಹಿಮೆಗಳನೆನೆ ಪಾರ್ಥ ತಲೆವಾಗಿ
ನೀವು ಬಲ್ಲಿರಿ ದೇವ ನೀ ಮಾ
ಯಾವಿ ಮಾಯಾಪಾಶಬದ್ಧರು
ನಾವು ಬಲ್ಲೆವೆ ನಿಮ್ಮನೆಂದೆರಗಿದನು ಚರಣದಲಿ ೫೨

ಧರಣಿಪತಿ ಕೇಳೀಚೆಯಲಿ ಕೃಪ
ಗುರುತನುಜ ಕೃತವರ್ಮಕರು ನ
ಮ್ಮರಸನೇನಾದನೊ ವಿರೋಧಿಯ ದಳದ ವೇಢೆಯಲಿ
ತರಣಿ ತಿಮಿರಕೆ ತೆರಹುಗೊಟ್ಟನು
ಭರತಖಂಡವನಿನ್ನು ರಾಯನ
ಪರಿಗತಿಯನಾರೈವೆವೆನುತೇರಿದರು ನಿಜರಥವ ೫೩

ಭರದಲಿವರು ನೃಪಾಲನಡಗಿದ
ಸರಸಿಗೈತಂದಿಳಿದು ತಡಿಯಲಿ
ತುರಗವನು ಬಿಡಿಸಿದರು ಸಾರಥಿ ಹೊಗಿಸಿದನು ಕೊಳನ
ತ್ವರಿತದಲಿ ಶೌಚಾಚಮನ ವಿ
ಸ್ತರಣ ಸಂಧ್ಯಾವಂದನಾದಿಯ
ವಿರಚಿಸಿದರರಸಿದರು ಕೊಳನಲಿ ಕೌರವೇಶ್ವರನ ೫೪

ಬಳಸಿ ಜಂಬುಕ ಘೂಕ ಕಾಕಾ
ವಳಿಗಳೆದ್ದವು ಮೇಲುವಾಯ್ದು
ವ್ವಳಿಸಲಮ್ಮದೆ ಗಾಢತರ ಗರ್ಜನೆಗೆ ಕುರುಪತಿಯ
ಕಳಕಳವಿದೆತ್ತಣದೆನುತ ಕಳ
ವಳಿಸಿ ಬಂದು ಮಹಾರಥರು ನೃಪ
ತಿಲಕನಿರವನು ಕಂಡು ಧೊಪ್ಪನೆ ಕೆಡದರವನಿಯಲಿ ೫೫

ಉಡಿದ ತೊಡೆಗಳ ಮಗ್ಗುಲಲಿ ಹೊನ
ಲಿಡುವ ರಕುತದ ಭೀಮಸೇನನ
ಮುಡದ ಹೊಯ್ಲಲಿ ಕೆಲಕೆ ಸೂಸಿದ ಮಕುಟಮಣಿಮಯದ
ಕಿಡೆದು ಮೈವೇದನೆಗೆ ನರಳುವ
ನಿಡುಸರದ ಖಗ ಜಂಬುಕೌಘವ
ನಿಡುವ ಕೈಗಲ್ಲುಗಳ ನೃಪತಿಯ ಕಂಡರಿವರಂದು ೫೬

ಒರಲಿದರು ಧರೆ ಬಿರಿಯೆ ಹುಡಿಯಲಿ
ಹೊರಳಿದರು ಬಾಯ್ಗಳನು ಹೊಯ್ ಹೊ
ಯ್ದರಿಚಿ ಕೆಡೆದರು ಕುಂದಿದರು ಕಾತರಿಸಿ ಕಳವಳಿಸಿ
ಮರುಗಿದರು ಮನಗುಂದಿದರು ಮೈ
ಮರೆದರದ್ದರು ಶೋಕಜಲಧಿಯೊ
ಳರಲುಗೊಂಡರು ತಳ್ಳಬಾರಿದರವರು ನಿಮಿಷದಲಿ ೫೭

ಹದುಳಿಸಿರೆ ಸಾಕೇಳಿ ಸಾಕಿ
ನ್ನಿದರಲಿನ್ನೇನಹುದು ದೈವದ
ಕದಡು ಮನಗಾಣಿಸಿತು ನಮಗೀ ಕಂಟಕವ್ಯಥೆಯ
ಉದಯದಲಿ ನಾವೀ ಶರೀರವ
ನೊದೆದು ಹಾಯ್ವೆವು ನೀವು ನಿಜಮಾ
ರ್ಗದಲಿ ಬಿಜಯಂಗೈವುದೆಂದನು ನಗುತ ಕುರುರಾಯ ೫೮

ಶೋಕವಡಗಿದುದವರಿಗಂತ
ರ್ವ್ಯಾಕುಳತೆ ಬೀಳ್ಕೊಂಡುದಹುದಿ
ನ್ನೇಕೆ ಸಂವೇಶಾನುಭೂತಾನುಭವ ದುರ್ವ್ಯಸನ
ಸಾಕದಂತಿರಲಿನ್ನು ಬಿಡು ನೀ
ಸಾಕಿತಕೆ ಫಲವೆನಿಸಿ ರಜನಿಯೊ
ಳಾ ಕುಠಾರರ ತಲೆಗಳನು ತಹೆನೆಂದನಾ ದ್ರೌಣಿ ೫೯

ಅಕಟ ಮರುಳೇ ಗುರುಸುತನ ಮತಿ
ವಿಕಳತನವನು ಕೃಪನು ಕೃತವ
ರ್ಮಕರು ಕಂಡಿರೆ ಪಾಂಡವರ ತಲೆ ತನಗೆ ಗೋಚರವೆ
ಬಕನ ಧರ್ಮಸ್ಥಿತಿಯವೊಲು ದೇ
ವಕಿಯ ಮಗ ಕಾದಿಹನಲೇ ಕೌ
ಳಿಕದ ಸಿದ್ಧನ ಕೃತಿಯನಾರಿಗೆ ವಿಾರಬಹುದೆಂದ ೬೦

ಹರಿಹರಬ್ರಹ್ಮಾದಿದೇವರು
ವೆರಸಿ ಕಾಯಲಿ ರಾತ್ರಿಯಲಿ ರಿಪು
ಶಿರವ ತಹೆನಿದಕೇಕೆ ಸಂಶಯವೆನ್ನ ಕಳುಹುವುದು
ಇರಲಿ ಕೃಪಕೃತವರ್ಮಕರು ಹ
ತ್ತಿರೆ ರಣಾಧ್ಯಕ್ಷದಲಿ ಭಾಷಾ
ಚರಣ ಪೈಸರಿಸಿದಡೆ ದ್ರೋಣನ ತನಯನಲ್ಲೆಂದ ೬೧

ಆಗಲಾ ಪಾಂಡವರ ವಧೆ ನಿನ
ಗಾಗಲರಿಯದು ನಿನ್ನ ಭುಜಬಲ
ವಾಗುರಿಯ ವೇಢೆಯಲಿ ಬೀಳದು ಕೃಷ್ಣಬುದ್ಧಿಮೃಗ
ಈಗಳೀ ನಿರ್ಬಂಧವಚನವಿ
ರಾಗಮೆವಗೇಕಾರಿಗಾವುದು
ಭಾಗಧೇಯವದಾಗಲೆಂದನು ಕೌರವರರಾಯ ೬೨

ವರ ಚಮೂಪತಿ ನೀನು ಬಳಿಕಿ
ಬ್ಬರು ಚಮೂವಿಸ್ತಾರವೆನೆ ವಿ
ಸ್ತರಿಸಿ ರಚಿಸುವುದೆಂದು ರಥಿಕತ್ರಯಕೆ ನೇಮಿಸಿದ
ಗುರುಜ ಕೃಪ ಕೃತವರ್ಮರೀ ಮೂ
ವರು ನರೇಂದ್ರನ ಬೀಳುಕೊಂಡರು
ಕರೆದು ಸೂತರ ಸನ್ನೆಯಲಿ ಬಂದೇರಿದರು ರಥವ ೬೩

ಇವರು ಬಂದರು ದಕ್ಷಿಣದ ದೆಸೆ
ಗವರ ಪಾಳೆಯಕಾಗಿ ಸುತ್ತಲು
ಸವಡಿಗತ್ತಲೆಯಾಯ್ತು ಘನರೋಷಾಂಧಕಾರದಲಿ
ಇವರು ಮನದಲಿ ಕುಡಿದರಹಿತಾ
ರ್ಣವವರಿವರಿಗೆ ಗೋಚರವೆ ಪಾಂ
ಡವರು ಗದುಗಿನ ವೀರನಾರಾಯಣನ ಕರುಣದಲಿ ೬೪

## ಒಂಬತ್ತನೆಯ ಸಂಧಿ

ಸೂ. ರಾಯಪರಬಲ ಮದನಹರ ರಿಪು
ರಾಯಕುವರರು ಸಹಿತ ಪಾಂಡವ
ರಾಯಕಟಕವ ಕೊಂದನಶ್ವತ್ಥಾಮ ರಜನಿಯಲಿ

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳ ಚಿತ್ತದ ಚಟುಳ ಪಣದ ಚ
ಡಾಳತನವನು ಸಂಗರದೊಳುದ್ದಾಮ ಸತ್ವದಲಿ
ಪಾಳೆಯವ ಸಾರಿದರು ವಿಟಪಲ
ತಾಳಿವಿಶ್ರಮ ತಿಮಿರಗಹನವಿ
ಶಾಲ ವಟಕುಜವಿರಲು ಕಂಡರು ನಿಲಿಸಿದರು ರಥವ ೧

ನಿಲುವೆವಿಲ್ಲಿವಿರೋಧಿಸಂತತಿ
ಯಲುಹನಾಲಿಸಬಹುದು ಕೋಟಾ
ವಳಯವಿದೆ ಹತ್ತಿರೆಯೆನುತ ಗುರುಸೂನು ರಥವಿಳಿಯೆ
ಇಳಿದರಿಬ್ಬರು ಸೂತರಿಗೆ ಕೈ
ಕೊಳಿಸಿದರು ಕುದುರೆಗಳನಾ ಕಲು
ನೆಲದೊಳೊರಗಿದರವರು ಸಮರಶ್ರಮದ ಭಾರದಲಿ ೨

ಒಳಗೆ ತೊಳಲಿಕೆಯುಕ್ಕಡಕೆ ಕಳ
ವಳಿಸಿ ಹಾಯಿದರೊಮ್ಮೆ ಮತ್ತಂ
ತೆಲೆಮಿಡುಕದಾಲಿಸಿ ನಿಧಾನಿಸಿ ಸಾರಿದರು ಮರನ
ಬಳಲಿಕೆಯು ಬೇಸರಿನೊಳಾ ಕೃಪ
ಮಲಗಿದನು ಕೃತವರ್ಮನೊಲೆದಾ
ಗುಳಿಸಿ ತೂಕಡಿಸಿದನು ತೆಗೆದುದು ನಿದ್ರೆ ತನುಮನವ ೩

ಕುಸಿದು ಜೊಮ್ಮಿನ ಜಾಡ್ಯದಲಿ ಝೊಂ
ಪಿಸಿದರಿಬ್ಬರು ರಾಯಗರುಡಿಯ
ಜಸದ ಜಹಿಯಲಿ ಸ್ವಾಮಿಕಾರ್ಯದ ಹೊತ್ತಹೊರಿಗೆಯಲಿ
ಉಸುರು ಮಿಡುಕದೆ ನಿದ್ರೆ ನೆನಹಿನ
ಮುಸುಕನುಗಿಯಧ್ಯೆಯಿಷ್ಟಸಿದ್ಧಿಯ
ವಿಷಮ ಸಮಸಂಧಿಗಳ ಸರಿವಿನೊಳಿರ್ದನಾ ದ್ರೌಣಿ ೪

ಭಾಗ ಬೀತುದು ರಜನಿಯಲಿ ಸರಿ
ಭಾಗವಿದ್ದುದು ಮೇಲೆ ತತ್ಕ್ಷಣ
ಗೂಗೆ ಬಂದುದದೊಂದು ವಟಕುಜದಗ್ರಭಾಗದಲಿ
ಕಾಗೆಗಳ ಗೂಡುಗಳ ಹೊಯ್ದು ವಿ
ಭಾಗಿಸಿತು ತುಂಡದಲಿ ಬಿದ್ದವು
ಕಾಗೆ ಸುಭಟನ ಸಮ್ಮುಖದಲಿ ಸಹಸ್ರಸಂಖ್ಯೆಯಲಿ ೫

ಇದು ಮದೀಯ ಮನೋರಥದ ಸಂ
ಹೃದಯದೊಲು ಸಂಕಲ್ಪಕಾರ್ಯಾ
ಭ್ಯುದಯ ಸೂಚಕವಾಯ್ತು ನಿದ್ರಾಮುದ್ರಿತೇಕ್ಷಣರ
ಪದವ ಹಿಡಿದಲ್ಲಾಡಿಸಿದಡೆ ಪ್ಪೆ
ಬೆದರುತೇನೇನೆನುತ ನಿದ್ರಾ
ಮದವಿಘೂರ್ಣನವಡಗಿ ಕುಳ್ಳಿರ್ದರು ಮಹಾರಥರು ೬

ಏನು ಗುರುಸುತ ಕಾರ್ಯದನುಸಂ
ಧಾನವೇನೆನೆ ವಾಯಸಂಗಳ
ನಾ ನಿಶಾಟನನಿರಿವುತದೆ ಗೂಡುಂಗಳನಬ್ಬರಿಸಿ
ಈ ನಿದರುಶನದಿಂದ ಪಾಂಡವ
ಸೇನೆಯನು ಕಗ್ಗೊಲೆಯೊಳಗೆ ಕೊಲ
ಲೇನು ಹೊಲ್ಲೆಹ ಮಾವ ಎಂದನು ಗುರುಸುತನು ಕೃಪಗೆ ೭

ಲೇಸಲೈ ಕೃತವರ್ಮ ಬಳಿಕೀ
ನಾಸುರದ ಕಗ್ಗೊಲೆಗೆ ರಾಜಾ
ದೇಶದಲಿ ನಾವ್ ಬಂದೆವೀ ಪಾಂಡವರ ಪಾಳೆಯಕೆ
ಘಾಸಿಯಾಗರು ಪಾಂಡುಸುತರಿಗೆ
ವಾಸುದೇವನ ಕಾಹು ಘನ ಕಾ
ಳಾಸ ತಪ್ಪಿದ ಬಳಿಕ ನಮಗಪಕೀರ್ತಿ ಬಹುದೆಂದ ೮

ಕೃತುಹರನ ಸಮಜೋಳಿ ಗಂಗಾ
ಸುತನ ಜಯಿಸಿದರವರ ತೂಕದ
ವಿತತಬಲರೈ ಭಾವನವರೊಗ್ಗಿದರು ದಿವಿಜರಲಿ
ಅತಿರಥರೊಳಗ್ಗಳಿಯ ರಾಧಾ
ಸುತ ಸುಯೋಧನ ಮಾದ್ರಪತಿಯೀ
ವ್ಯತಿಕರದೊಳೇನಾದರಿದು ಮುರಹರನ ಕೃತಿಯೆಂದ ೯

ಇರಿಸನಿಲ್ಲಿ ಮುರಾರಿ ಕೌಂತೇ
ಯರನಿದೊಂದು ನಿಧಾನ ಮೇಣಿ
ಲ್ಲಿರಿಸಿದಡೆ ಕೋಲಲೀಯನಡ್ಡೈಸುವನು ಚಕ್ರದಲಿ
ಇರುಳು ಹಗಲಡವಿಯಲಿ ಮನೆಯಲಿ
ಶರಧಿಯಲಿ ಪರ್ವತದಲಗ್ನಿಯ
ಲಿರಲಿ ತನ್ನವರಲ್ಲಿ ಹರಿಗವಧಾನ ಬಲುಹೆಂದ ೧೦

ಮರಹಿನಲಿ ಮುಡುಹುವುದು ಧರ್ಮದ
ಹೊರಿಗೆಯಲ್ಲದು ನಿದ್ರೆಗೈದರ
ನಿರಿವುದೇನಿದು ಪಂಥವೇ ಪೌರಾಣಮಾರ್ಗದಲಿ
ಅರಿಯದಾರಂಭಿಸಿದೆವಿದರಲಿ
ಪರಿಸಮಾಪ್ತಿಯ ಕಂಡೆವಾದಡೆ
ನೆರೆ ಕೃತಾರ್ಥರು ವಿಘ್ನಶತವಡ್ಡೈಸದಿರವೆಂದ ೧೧

ತಪ್ಪದಾಚಾರಿಯನ ನುಡಿ ಮೇ
ಲಪ್ಪದನು ದೈವಾಭಿಯೋಗದೊ
ಳೊಪ್ಪವಿಡುವುದು ರಜನಿಯಲಿ ಕಳ್ಳೇರ ಕದನದಲಿ
ಒಪ್ಪದಿದು ಸೌಭಟ ವಿಧಾನಕೆ
ನೊಪ್ಪಿತಹುದಿದರಿಂದ ರಿಪುಗಳ
ತಪ್ಪಿಸುವನಸುರಾರಿಯೆಂದನು ನಗುತ ಕೃತವರ್ಮ ೧೨

ಆದಡಿರಿ ನೀವಿಬ್ಬರಿಲ್ಲಿ ವಿ
ವಾದ ನಿಮ್ಮೊಡನೇಕೆ ಜನಪರಿ
ವಾದ ಭಯವೆಮಗಿಲ್ಲ ಸಾರಥಿ ರಥವ ತಾಯೆನುತ
ಕೈದುಗಳ ಸಂವರಿಸಿ ರಥದಲಿ
ಹಾಯ್ದು ಹೊರವಡೆ ಭೋಜಕೃಪರನು
ವಾದಡೆಮಗೇನೆನುತ ಬಂದರು ಪಾಳೆಯದ ಹೊರಗೆ ೧೩

ಮುರಿದು ಕೋಟೆಯನೊಂದು ಕಡೆಯಲಿ
ತೆರಹುಮಾಡಿ ಮಹಾರಥರು ಜನ
ವರಿಯದವೊಲೊಳಹೊಕ್ಕು ಹೆಬ್ಬಾಗಿಲಲಿ ರಥವಿಳಿದು
ತರವಳರ ತೊಳಲಿಕೆಯ ಮೇಲೆ
ಚ್ಚರಿಕೆ ಮಸುಳಿಸೆ ಮಧ್ಯರಾತ್ರಿಯೊ
ಳರಿತದಂಘವಣೆಯಲಿ ಪರುತವಿಸಿದನು ಗುರುಸೂನು ೧೪

ಎರಡು ಬಾಗಿಲ ಪಾಳೆಯಕೆ ಕೃಪ
ನಿರಲಿ ಮೂಡಲು ಪಶ್ಚಿಮಾಂಗದೊ
ಳಿರಲಿ ಕೃತವರ್ಮಕನು ಬಾಗಿಲೊಳಾಂತ ರಿಪುಜನವ
ಕರಿ ತುರಗ ರಥ ಪತ್ತಿಗಳ ಸಂ
ಹರಿಸುವುದು ನೀವಿಲ್ಲಿ ಮಧ್ಯದೊ
ಳರಸು ಮೊತ್ತಕೆ ಮಿತ್ತು ತಾನಹೆನೆಂದು ಕೈಗೊಂಡ ೧೫

ಎರಡು ಬಾಗಿಲೊಳಿವರನಿಬ್ಬರ
ನಿರಿಸಿ ಚಾಪವ ಮಿಡಿದು ಬಾಣವ
ತಿರುಹುತೊಬ್ಬನೆ ರಥವ ಬಿಟ್ಟನು ರಾಜಬೀದಿಯಲಿ
ಅರಸ ಕೇಳದ್ಭುತವನಾ ನಡು
ವಿರುಳು ನೃಪವೀಥಿಯಲಿ ನಿಂದುದು
ಧರೆಗೆ ಗಗನಕೆ ಕೀಲನಿಕ್ಕಿದವೊಲು ಮಹಾಭೂತ ೧೬

ನಿಟಿಲನಯನದ ಜಡಿವ ಜೂಟದ
ಜಟೆಯ ಫೂತ್ಕೃತಿಯುರಿಯ ನಾಸಾ
ಪುಟದ ವೈಕಕ್ಷಕದ ವಿಷಧರಪತಿಯ ವಾಸುಗಿಯ
ಚಟುಳ ಚಪಳಪ್ರಭೆಯ ಘನಸಂ
ಘಟಿತವೆನೆ ಗರ್ಗರದ ಘೋರ
ಸ್ಫುಟರವದ ರೌದ್ರಾಭಿರತಿಯಲಿ ರಂಜಿಸಿತು ಭೂತ ೧೭

ಬೆಚ್ಚಿದನೆ ಭಾರಣೆಯ ಭೂತವ
ನೆಚ್ಚು ಬೊಬ್ಬಿರಿದಾರಿದನು ಮಗು
ಳೆಚ್ಚನೈದಾರೇಳುನೂರೈನೂರು ಸಾವಿರವ
ಎಚ್ಚು ಹಾಯ್ದಂಬುಗಳು ಭೂತದ
ಬಿಚ್ಚುಗಂಗಳ ಕೊಂಡದುರಿಯಲಿ
ಬಚ್ಚಿಸಿದ ಗರಿ ಸೀದು ಸೀಕರಿಯೋಗಿ ನಿಮಿಷದಲಿ ೧೮

ಉಗಿದು ಮಂತ್ರಾಸ್ತ್ರವನು ತಿರುವಿಂ
ದುಗುಳಿಚಿದಸಾ ಭೂತದಂಘ್ರಿಗೆ
ಮುಗಿದ ಕೈಗಳಲೆರಗಿದರು ಶಸ್ತ್ರಾದಿದೇವಿಯರು
ಉಗಿದನೊರೆಯಲಡಾಯುಧವನು
ಬ್ಬೆಗದಲಪ್ಪಳಿಸಿದಡೆ ಕಯ್ಯಿಂ
ಜಗುಳ್ದು ಬಿದ್ದುದು ಝಂಕೆಯುದ್ದುದು ಭಯದ ಝಾಡಿಯಲಿ ೧೯

ಕಾಕಮುಖದ ಮಯೂರ ಟಿಟ್ಟಿಭ
ಕೋಕವದನದ ಹಂಸ ಕಂಕ ಬ
ಳಾಕವಕ್ತ್ರದ ಗೌಜು ಗೀಜಗ ಚಾತಕಾನನದ
ಘೂಕಮುಖದ ಸೃಗಾಲ ಶಾರ್ದೂ
ಲಾಕೃತಿಯ ಬಹುವಿಧದ ರೂಪದ
ನೇಕ ಭೂತವ್ರಾತ ನೆರೆದುದು ಭೂಪ ಕೇಳೆಂದ ೨೦

ಇದು ವಿರೂಪಾಕ್ಷನ ಮನಃಕ್ಷೋ
ಭದ ವಿಕಾರವಲಾ ಪಿನಾಕಿಯ
ಪದವ ಹಿಡಿದೋಲೈಸುವೆನು ಸರ್ವಾಂಗಯಜ್ಞದಲಿ
ಇದಕುಪಾಯವ ಬಲ್ಲೆನೆಂದು
ಬ್ಬಿದನು ಬೊಬ್ಬಿರಿದಾರಿ ತೋಡಿದ
ನುದರವಹ್ನಿಯನಿದಿರೊಳಗ್ನಿತ್ರಯವ ನಿರ್ಮಿಸಿದ ೨೧

ಸೆರೆನರಂಗಳ ದರ್ಭೆ ಮಿದುಳಿನ
ಚರು ಕಪಾಲದ ಪಾತ್ರೆಯೆಲುವಿನ
ಬೆರಳ ಸಮಿಧೆ ವಿಶಾಳದನುಮಜ್ಜೆಗಳ ಪೃಷದಾಜ್ಯ
ಅರುಣಜಲದಾಜ್ಯಾಹುತಿಯ ವಿ
ಸ್ತರವ ವಿರಚಿಸಿ ನಿಗಮಮಂತ್ರೋ
ಚ್ಚರಣೆಯಲಿ ಪೂರ್ಣಾಹುತಿಗೆ ತನ್ನೊಡಲನೊಪ್ಪಿಸಿದ ೨೨

ಮೆಚ್ಚಿದನು ಮದನಾರಿ ಹೋಮದ
ಕಿಚ್ಚು ತುಡುಕದ ಮುನ್ನ ತೆಗೆದನು
ಬಿಚ್ಚುಜಡೆಗಳ ಜಹ್ನುಸುತೆಯಲಿ ನಾದಿದನು ಭಟನ
ಎಚ್ಚ ಶರವಿದೆ ಖಡ್ಗವಿದೆ ಕೋ
ಮುಚ್ಚುಮರೆಯೇಕಿನ್ನು ಸುತರಲಿ
ಚೊಚ್ಚಿಲವ ನೀನೆಂದು ಮೈದಡವಿದನು ಶಶಿಮೌಳಿ ೨೩

ಸಾರಥಿಗಳೊಳಗೆನಿಸಿದನು ಭೂ
ಭಾರಭಂಜಕನಸುರಹರನೀ
ಭಾರ ಬಿದ್ದುದು ನಮಗೆ ಪಾಂಚಾಲಪ್ರಬದ್ಧಕರ
ತೀರಿತಿದು ನಿಮ್ಮಲ್ಲಿ ನಮ್ಮ ವಿ
ಹಾರವೊಡಬೆಚ್ಚಿತು ರಿಪುವ್ರಜ
ಮಾರಣಾಧ್ವರಕೃತಿಯ ನೀ ಕೈಕೊಳಿಸು ಹೋಗೆಂದ ೨೪

ಎನೆ ಪುರಾರಿಯ ಪದಯುಗಕೆ ಗುರು
ತನುಜ ಮೈಯಿಕ್ಕಿದನು ಬೀಳ್ಕೊಂ
ಡನು ತಿರೋಹಿತನಾದನೀಶ್ವರನೀತನನು ಕಳುಹಿ
ಧನುವ ಕೊಂಡನು ಧೂರ್ಜಟಿಯ ರೂ
ಹಿನ ಮಹಾರಥ ರಥವನೇರಿದ
ನನುವರದ ರೌರವವನಂಘೈಸಿದನು ರಜನಿಯಲಿ ೨೫

ಧರಣಿಪತಿ ಕೇಳ್ ರಾಜಬೀದಿಯೊ
ಳುರವಣಿಸಿ ಗುರುಸೂನು ರಥದಲಿ
ಬರುತ ಕಂಡನಲೈ ಯುಧಿಷ್ಠಿರ ರಾಜಮಂದಿರವ
ಇರರು ಪಾಂಡವರಿಲ್ಲಿ ಮೇಣವ
ರಿರಲಿ ಬಳಿಕಾರೈವೆನಯ್ಯನ
ಹರಿಬ ಹೋಗಲಿ ಮುನ್ನ ಕೊಲುವೆನು ದ್ರುಪದನಂದನನ ೨೬

ಎಂದು ರಾಯನ ಗುಡಿಯ ಗೂಢದ
ಮಂದಿರದ ಬಲವಂಕವೀಧಿಯ
ಮುಂದೆ ಧೃಷ್ಟದ್ಯುಮ್ನನರಮನೆಗಾಗಿ ವಹಿಲದಲಿ
ಬಂದು ಬಾಗಿಲ ಮುರಿದು ಕಾಹಿನ
ಮಂದಿಯನು ನಿಡುನಿದ್ರೆಗೈಸಿದ
ನಂದು ಮಿಣ್ಣನೆ ಹೊಕ್ಕನಾತನ ಸೆಜ್ಜೆಯೋವರಿಯ ೨೭

ತೊಳತೊಳಗುವಿಕ್ಕೆಲದ ದೀಪದ
ಬೆಳಗಿನಲಿ ಮಣಿರಚಿಯ ಚಿತ್ರಾ
ವಳಿಯ ಮೇಲ್ಕಟ್ಟಿನಲಿ ಲಲಿತಸ್ತರಣ ಮಧ್ಯದಲಿ
ಹೊಳೆಹೊಳೆವ ನವರತ್ನಭೂಷಣ
ಕಳಿತಕಾಯನ ಕಂಡು ರೋಷ
ಪ್ರಳಯ ಭೈರವರೂಪನೊದೆದನು ವಾಮಪಾದದಲಿ ೨೮

ಘಳಿಲನೆದ್ದನಿದಾರು ನಿದ್ರೆಯ
ನಳಿದವನ ತಿವಿಯೆನುತ ಮುಂದಣ
ವಿಳಯರುದ್ರನ ರಹಿಯ ರೌದ್ರದ ರಣಭಯಂಕರನ
ನಿಲವ ಕಂಡನಡಾಯುಧವ ತಾ
ಹಲಗೆಯಾವೆಡೆಯೆಂಬವನ ಮುಂ
ದಲೆಯ ಹಿಡಿದಡಗೆಡಹಿ ಕುಸುರಿದರಿಯನಸಬಡಿದ ೨೯

ಉಗಿದು ಬಿಲ್ಲಿನ ತಿರುವ ಕೊರಳಲಿ
ಬಿಗಿಯೆ ಭಯದಲಿ ದ್ರುಪದಸುತ ಬೆರ
ಳುಗಳ ಬಾಯಲಿ ಬೇಡಿಕೊಂಡನು ದ್ರೋಣನಂದನನ
ಉಗಿದಡಾಯ್ಧದಲೆನ್ನ ಶಿರವನು
ತೆಗೆದು ಕಳೆಯೈ ಶಸ್ತ್ರಘಾತದಿ
ನುಗುಳಿಸಸುವನು ತನಗೆ ವೀರಸ್ವರ್ಗವಹುದೆಂದ ೩೦

ಅಕಟ ಗುರುಹತ್ಯಾ ಮಹಾಪಾ
ತಕಿಯೆ ನಿನಗೇ ಸ್ವರ್ಗ ದೇವ
ಪ್ರಕರ ನಿನ್ನನು ಹೊಗಿಸಿದಡೆ ಸುಡುವೆನು ಸುರಾಲಯವ
ಕ್ರಕಚ ಕುಂಭೀಪಾಕಮುಖ ನಾ
ರಕದೊಳರಮನೆ ನಿನಗೆ ಕೌಕ್ಷೇ
ಯಕದ ಹತಿ ಗಡ ತನಗೆನುತ ಕಟ್ಟಿದನು ತಿರುವಿನಲಿ ೩೧

ಉರಲ ಹತ್ತಿಸಿ ಸೆಳೆಯೆ ಗೋಣಲಿ
ಗುರುಗುರಿಸಲಸು ಜಾರಿದುದು ಬೊ
ಬ್ಬಿರಿದು ಹೊಕ್ಕನು ಕದವನೊದೆದು ಶಿಖಂಡಿಯರಮನೆಯ
ತರಿದನಾತನನುತ್ತಮೌಂಜಸ
ನರಸಿ ಹೊಯ್ದನು ಹೊಕ್ಕು ಬಾಗಿಲ
ಮುರಿದು ಮೈಯೆರಿಹಿಸಿ ಯುಧಾಮನ್ಯುವ ವಿದಾರಿಸಿದ ೩೨

ಗಜಬಜವಿದೇನೆನುತ ನಿದ್ರೆಯ
ಮಜಡರೊಳಗೊಳಗರಿದರೀತನ
ಭುಜಬಲಕೆ ಮಲೆತವರ ಕಾಣೆನು ಸೃಂಜಯಾದಿಗಳ
ರಜನಿಯಲಿ ರೌಕುಳವ ಮಾಡಿದ
ನಜಿತಸಾಹಸನಿತ್ತ ದ್ರುಪದಾ
ತ್ಮಜೆಯ ಭವನದ ಹೊರೆಗೆ ಬಂದನು ಪಾಂಡವರನರಸಿ ೩೩

ಇದು ಯುಧಿಷ್ಠಿರ ರಾಜಗೃಹವೆಂ
ದೊದೆದು ಕದವನು ಕಾಹಿನವರನು
ಸದೆದು ಹೊಕ್ಕನು ಸಜ್ಜೆಯಲಿ ಧರ್ಮಜನ ನಂದನನ
ಒದೆದಡೆದ್ದನು ಸುರಗಿಯಲಿ ಕಾ
ದಿದನು ಖಡುಗವ ಜಡಿದು ನಿಮಿಷಾ
ರ್ಧದಲಿ ತಲೆಯನು ನೆಗಹಿ ಪ್ರತಿವಿಂಧ್ಯಕನನಸುಗಳೆದ ೩೪

ಜನಪ ಕೇಳ್ಬೈ ಬಳಿಕ ಸುತಸೋ
ಮನನು ಶ್ರುತಕೀರ್ತಿಯ ಶತಾನೀ
ಕನನು ಶ್ರುತವರ್ಮನನು ತರಿದನು ದ್ರೌಪದೀಸುತರ
ಜನಪರೈವರ ತಲೆಗಳೆಂದೇ
ಕನಕರಥದೊಳಗಿರಿಸಿ ಹೊಕ್ಕನು
ಮನೆಮನೆಗಳಲಿ ಸವರಿದನು ಸೋಮಪ್ರಬದ್ಧಕರ ೩೫

ಸೀಳ ಬಡಿದನು ಸಮರಥರ ಪಾಂ
ಚಾಳ ರಾವುತರನು ಮಹಾರಥ
ಜಾಲವನು ಜೋಧರನು ಭಾರಿಯ ಪಾರಕವ್ರಜವ
ಸಾಲ ಹೊಯ್ದನು ಹುಯ್ಯಲಿಗೆ ಹೊಗು
ವಾಳ ತರಿದನು ಖಡ್ಗಮುಷ್ಟಿಯ
ಕಾಲಭೈರವ ಬೀದಿವರಿದನು ಕೇರಿಕೇರಿಯಲಿ ೩೬

ಎಲೆಲೆ ಕವಿ ಕಳ್ಳೇರುಕಾರನ
ತಲೆಯ ಹೊಯ್ ಹೊಯ್ಯೆನುತ ನಿದ್ರಾ
ಕುಳರು ಗರ್ಜಿಸುತಾಗುಳಿಸಿ ತೂಕಡಿಸಿದರು ಮರಳಿ
ಕೆಲಕೆಲಬರರೆ ನಿದ್ರೆಗಳ ಕಳ
ವಳಿಗರೊರೆಗಳ ಕೊಂಡಡಾಯ್ದವ
ನೆಲಕೆ ಬಿಸುಟರು ಭತ್ತಳಿಕೆಯಲಿ ಹೂಡಿದರು ಧನುವ ೩೭

ಗಜವ ಹಲ್ಲಣಿಸಿದರು ವಾಜಿ
ವ್ರಜಕೆ ರೆಂಚೆಯ ಹಾಯ್ಕಿದರು ಗಜ
ಬಜವಿದೇನೆನುತ ಗಾಲಿಗೆ ಬಿಗಿದು ಕುದುರೆಗಳ
ರಜನಿ ಬಂದುದೆ ಹಗಲು ಹೋಯಿತೆ
ಗಜಬಜದೊಳಕಟೆನುತ ಸುಭಟ
ವ್ರಜಸುವಿಹ್ವಳಕರಣರಿರಿದಾಡಿದರು ತಮ್ಮೊಳಗೆ ೩೮

ಲಾಯದಲಿ ಹೊಕ್ಕಿರಿದು ಕುದುರೆಯ
ಬೀಯ ಮಾಡಿದನಂತಕಂಗೆಯು
ಡಾಯುಧದ ಧಾರೆಯಲಿ ಕೊಟ್ಟನು ಕುಂಜರವ್ರಜವ
ರಾಯದಳ ಧರೆಯಂತೆ ನವಖಂ
ಡಾಯಮಾನವಿದಾಯ್ತು ಪಾಂಡವ
ರಾಯ ಕಟಕವ ಕೊಂದನಶ್ವತ್ಥಾಮ ಬೇಸರದೆ ೩೯

ದೊರೆಗಳೇನಾದರೊ ಯುಧಿಷ್ಠಿರ
ನರ ವೃಕೋದರ ನಕುಲ ಸಹದೇ
ವರು ಮುರಾಂತಕ ಸಾತ್ಯಕಿಗಳೊಳಗಿಹರೆ ರೌರವಕೆ
ಹರನ ಖತಿಯೋ ಲಯಕೃತಾಂತನ
ವಿರಸಕೃತಿಯೋ ಸರ್ವದಳಸಂ
ಹರಣಕೇನು ನಿಮಿತ್ತವೆಂದುದು ಭೂಸುರವ್ರಾತ ೪೦

ಉಳಿದುದೇಳಕ್ಷೋಹಿಣೀದಳ
ದೊಳಗೆ ನಾರೀನಿಕರ ವಿಪ್ರಾ
ವಳಿ ಕುಶೀಲವ ಸೂತ ಮಾಗಧ ವಂದಿಸಂದೋಹ
ಸುಳಿವ ಕಾಣೆನು ಕೈದುವಿಡಿದರ
ನುಳಿದು ಜೀವಿಸಿದಾನೆ ಕುದುರೆಗ
ಳೊಳಗೆ ಜವಿಯಿಲ್ಲೇನನಂಬೆನು ಜನಪ ಕೇಳೆಂದ ೪೧

ಕೂಡೆ ಕಟ್ಟಿತು ಕಿಚ್ಚು ತೆರಪಿನ
ಲೋಡುವಡೆ ಗುರುಸುತನ ಶರ ಮಿ
ಕ್ಕೋಡುವಡೆ ಬಾಗಿಲುಗಳಲಿ ಕೃತವರ್ಮ ಕೃಪರೆಸುಗೆ
ಕೂಡೆ ಮುಮ್ಮಳಿಯೋದುದೀ ಶರ
ಝಾಡಿಯಲಿ ಚತುರಂಗಬಲವ
ಕ್ಕಾಡಿತೇನೆಂಬೆನು ಯುಧಿಷ್ಠಿರನೃಪನ ಪರಿವಾರ ೪೨

ಬಸಿವ ರಕುತದಡಾಯುಧದ ನೆಣ
ವಸೆಯ ತೊಂಗಲುಗರುಳ ಬಂಧದ
ವಸನ ಕೈಮೈಗಳ ಕಠೋರಭ್ರುಕುಟಿ ಭೀಷಣದ
ಮಸುಡ ಹೊಗರಿನ ದಂತದಂಶಿತ
ದಶನವಾಸದ ವೈರಿಹಿಂಸಾ
ವ್ಯಸನ ವೀರಾವೇಶಿ ಬಂದನು ಕೃಪನ ಸಮ್ಮುಖಕೆ ೪೩

ಹೇಳಿದನು ಸೃಂಜಯವಧೆಯ ಪಾಂ
ಚಾಲ ರಾಜಕುಮಾರವರ್ಗದ
ಮೌಳಿಗಳ ಬಲಿಗೊಟ್ಟ ಪರಿಯನು ಖಡ್ಗಪೂತನಿಗೆ
ಪಾಳೆಯದೊಳರಸಿದೆನು ಪಾಂಡುನೃ
ಪಾಲತನುಜರನವರು ಕೆಡುವರೆ
ಮೇಲುಗಾಹಿನ ವೀರನಾರಾಯಣನ ಕರುಣದಲಿ ೪೪

## ಹತ್ತನೆಯ ಸಂಧಿ

ಸೂ ರಾಯಕಟಕವನಿರಿದ ಗುರುಸುತ
ನಾಯುಧದ ವಿಗ್ರಹದೊಳಗೆ ಹರಿ
ಕಾಯಿದನು ಕೃಪೆಯಿಂದಲಭಿಮನ್ಯುವಿನ ನಂದನನ

ಕೇಳು ಧೃತರಾಷ್ಟ್ರಾವನಿಪ ರಿಪು
ಜಾಲಗೀರ್ವಾಣೀ ಕದಂಬ
ಸ್ಥೂಲವಕ್ಷನು ಬಂದು ಕಂಡನು ಭೋಜಗೌತಮರ
ಲೀಲೆಯಲಿ ರಥವೇರಿ ಕುರುಭೂ
ಪಾಲನಲ್ಲಿಗೆ ಬಂದರುಬ್ಬಿನ
ಮೇಲುಮದದ ಜಯಪ್ರಚಂಡರು ಕಂಡರವನಿಪನ ೧

ಬಲಿದ ಮರವೆಯ ಕರಣವೃತ್ತಿಯ
ಕಳವಳದ ಪಂಚೇಂದ್ರಿಯದ ಪರಿ
ಚಲನಸಂಚದ ಶಿಥಿಲಮೂಲಾಧಾರಮಾರುತನ
ಅಲಘುತರಪರಿವೇದನಾವಿ
ಹ್ವಳಿತಕಂಠಗತಾತ್ಮನೂರ್ಧ್ವ
ಸ್ಖಲಿತ ದೀರ್ಘಶ್ವಾಸನಿದ್ದನು ಕೌರವರ ರಾಯ ೨

ಕಂಡು ಕಂಬನಿದುಂಬಿದರು ಭೂ
ಮಂಡಲಾಧಿಪ ವೈರಿಮದವೇ
ತಂಡ ಕೇಸರಿಯಿರವಿದೇ ಮಝ ಪೂತುವಿಧಿಯೆನುತ
ಗಂಡುಗಲಿಯವಧಾನರಿಪುಬಲ
ದಂಡಧರನವಧಾನ ಕುರುಕುಲ
ಚಂಡಕರನವಧಾನವೆನುತೆಚ್ಚರಿಸಿದನು ನೃಪನ ೩

ಕೆದರಿದುದು ಕುಡಿನೋಟ ಕರಣದ
ಕದಡು ಹರೆದುದು ಇಂದ್ರಿಯಾವಳಿ
ತುದಿಗೊಳಿಸಿದುದು ಪವನ ನಟಿಸಿತು ನಾಭಿಪರಿಯಂತ
ವದನವನು ನಸು ನೆಗಹಿ ನೃಪ ನುಡಿ
ಸಿದನಿದಾರಸ್ಮತ್ಪುರೋಭಾ
ಗದಲಿ ಸೇವಾಮಧುರವಚನವಿಳಾಸಪರರೆಂದ ೪

ನಾವು ನಿಮ್ಮವರೆಮ್ಮ ಬೊಪ್ಪನ
ಭಾವ ಕೃಪ ಕೃತವರ್ಮನೀತನು
ದೇವರವಧರಿಸುವುದು ರಜನಿಯ ರಾಜಕಾರಿಯವ
ನೀವು ಬಿನ್ನಹಮಾಡಬೇಹುದು
ಮಾವ ರಣಸಂಗತಿಯನಾತ್ಮ
ಸ್ತಾವಕರು ನಾವಲ್ಲವೆಂದನು ಕೃಪಗೆ ಗುರುಸೂನು ೫

ಏನನೆಂಬೆನು ಜೀಯ ದ್ರುಪದನ
ಸೂನು ಪಂಚದ್ರೌಪದೇಯರ
ಹಾನಿಯನು ಸೃಂಜಯ ಶಿಖಂಡಿ ಪ್ರಮುಖರುಪಹತಿಯ
ವೈನತೇಯನ ಲಳಿಯಲಹಿಕುಲ
ವಾನುವುದೆ ಪಾಂಚಾಲಕದಳೀ
ಕಾನನವ ನಿನ್ನಾನೆ ಸವರಿತು ಹೇಳಲೇನೆಂದ ೬

ದೈವಕೃಪೆಜವನಿಕೆಯ ಮರೆಗೊಂ
ಡೈವರುಳಿದರು ಮೇಲೆ ಸಾತ್ಯಕಿ
ದೈವದೊಡಹುಟ್ಟಿದನಲೇ ತಾನಿಲ್ಲ ಶಿಬಿರದಲಿ
ದೈವಬಲವಿನಿತಕ್ಕೆ ಕೇಳ್ ನಿ
ರ್ದೈವಬಲನಿಶ್ಶೇಷವಿನಿತೇ
ದೈವವೆತ್ತಿದ ಛಲದ ವಾಸಿಗೆ ರಾಯ ಕೇಳೆಂದ ೭

ಎಲೆ ಕೃಪಾಚಾರಿಯ ವಿರೋಧಿಗ
ಳುಳಿದರೈವರು ಬಲ್ಲೆನದನಸ
ದಳದ ಕೃಪೆಯಲಿ ಬಸಿದು ಬೀಳಂವನವರಿಗಸುರಾರಿ
ಅಳಿದುದೇ ನಿಶ್ಶೇಷ ಪಾಂಡವ
ದಳ ಕುಮಾರರು ಸಹಿತವಿನ್ನ
ಗ್ಗಳೆಯನಶ್ವತ್ಥಾಮನಹನೆಂದನು ಮಹೀಪಾಲ ೮

ಏನನೊದಗಿದ ನಮಗೆ ಗಂಗಾ
ಸೂನು ಭಾರದ್ವಾಜ ನಮಗೊಲಿ
ದೇನ ಮಾಡಿದ ನಮ್ಮ ಥಟ್ಟಿನ ಭದ್ರಗಜವೆಂಬ
ಮಾನನಿಧಿ ರಾಧಾತನುಜನಿಂ
ದೇನು ಹರಿದುದು ಹರಿಬವನು ಗುರು
ಸೂನುವೇ ಮರಳಿಚಿದನೆಂದನು ಕೌರವರರಾಯ ೯

ಹರಿಬ ಬಂದುದೆ ಪಾಂಡುಸುತರುಳಿ
ದಿರಲಿ ಸಾಕಂತಿರಲಿ ನಿಮ್ಮಡಿ
ಪುರಕೆ ಬಿಜಯಂಗೆಯ್ಯಿರೇ ಚೈತನ್ಯಗತಿಯೆಂತು
ಹರಣವುಳಿದಡೆ ಪಾಂಡುತನುಜರ
ಶಿರವ ಕೇವಣಿಸುವೆನಲೈ ಕೇ
ಸರಿಯ ಪೀಠದೊಳೆಂದನಶ್ವತ್ಥಾಮ ಕೈಮುಗಿದು ೧೦

ಸಾಕದಂತಿರಲಿನ್ನು ವೈರಿ
ವ್ಯಾಕರಣಪಾಂಡಿತ್ಯದಲ್ಲಿ ವಿ
ವೇಕಶೂನ್ಯರು ನಾವು ಮೊದಲಾದೌರ್ಧ್ವದೈಹಿಕವ
ಆಳೆವಾಳರಿಗರುಹಿ ನೀವ
ಸ್ತೋಕಪುಣ್ಯರ ತಿಳುಹಿ ವಿಗಳಿತ
ಶೋಕರೆನಿಸುವುದಂಧನೃಪ ಗಾಂಧಾರಿದೇವಿಯರ ೧೧

ಎನುತ ಕಣ್ ಮುಚ್ಚಿದನು ಜೀವಾ
ತ್ಮನು ಜವಾಯಿಲತನದಲೊಡೆಹಾ
ಯ್ದನು ಸುನಾಸಾಲಂಬಿತಶ್ವಾಸದ ಸಮಾಪ್ತಿಯಲಿ
ಜನಪ ಮರೆದೊರಗಿದನಲಾ ಹಾ
ಯೆನುತ ವದನಾಂಜುಳಿಪುಟದ ತಾ
ಡನದಲಿವರಳಲಿದರು ಕುರುರಾಜಾವಸಾನದಲಿ ೧೨

ತಿರುಗಿದರು ಕೈದುವ ಬಿಸುಟು ಮೂ
ವರು ಮಹಾರಥರಂಧತಿಮಿರಕೆ
ತರಣಿಕಿರಣದ ಧಾಳಿ ಹರಿದುದು ಕೂಡೆ ದೆಸೆದೆಸೆಗೆ
ಅರಸನುಪ್ಪವಡಿಸಿ ಮುರಾರಿಯು
ಸಿರಿಮೊಗವ ನೋಡಿದನು ತಮ್ಮಂ
ದಿರು ಸಹಿತ ಹೊರವಂಟನಾ ಕುರುಪತಿಯ ಪಾಳೆಯವ ೧೩

ಪಾಳೆಯದಲಿ ಕುಮಾರರನು ಪಾಂ
ಚಾಲರನು ನೋಡುವೆವೆನುತ ಭೂ
ಪಾಲ ನಡೆತರಲಿದಿರುವಂದುದು ಯುವತಿನಿಕುರುಂಬ
ಸೂಳುವೊಯ್ಲಿನ ತೆಳುವಸುರ ಕರ
ತಾಳದಲಿ ಹಾಹಾವಿರಾವದ
ಮೇಳವದ ಗೀತದಲಿ ಬಂದಳು ದ್ರೌಪದೀದೇವಿ ೧೪

ಏನಿದೇನದುಭುತವೆನುತ ದು
ಮ್ಮಾನದಲಿ ಹರಿತಂದು ಹಿಡಿದನು
ಮಾನಿನಿಯು ಕೈಗಳನು ಕಂಬನಿದೊಡೆದು ಸೆರಗಿನಲಿ
ಹಾನಿಯೇನೆನೆ ಮಡಿದರೆನ್ನಯ
ಸೂನುಗಳು ತನ್ನನುಜರೆನೆ ಪವ
ಮಾನಸುತ ಕೇಳಿದನು ಕೋಳಾಹಳವ ಗುರುಸುತನ ೧೫

ಸುತರ ತಲೆಯ್ಯೆದಕ್ಕೆ ರಿಪುಗುರು
ಸುತನ ತಲೆಯೇ ಹೊಣೆ ಕಣಾ ಬಿಡು
ಸತಿಯೆ ಶೋಕವನೆನುತ ಬಿಟ್ಟನು ಸೂರಿಯಲಿ ರಥವ
ವ್ಯತಿಕರವಿದವಗಡ ಸಮೀರನ
ಸುತಗೆ ಹರಿಯದು ಬವರ ನಡೆಯೆಂ
ದತಿರಥನ ಬಳಿಸಲಿಸಿದರು ನೃಪ ಹರಿ ಧನಂಜಯರು ೧೬

ನಿಲ್ಲು ಗುರುಸುತ ಶೌರ್ಯಪಣ ನ
ಮ್ಮಲ್ಲಿಯೇ ಹುಲುಜೀವರಿಗೆ ಜವ
ನಲ್ಲಿ ಮೇಳವೆ ಉಗುಳು ಪಂಚದ್ರೌಪದೀಸುತರ
ಬಿಲ್ಲ ಗುರು ನೀನಾದಡೆಮಗೇ
ನಿಲ್ಲಿ ದ್ರೌಪದಿಯಕ್ಷಿಜಲಕೃಪೆ
ಯಲ್ಲಿ ಲಂಬಿಸಬೇಕೆನುತ ಮೂದಲಿಸಿದನು ಭೀಮ ೧೭

ಎಲವೊ ಶರಸಂನ್ಯಾಸವನು ಕುರು
ತಿಲಕನವಸಾನದಲಿ ಮಾಡಿದೆ
ನಳಲಿದಡೆ ಫಲವೇನು ನಮ್ಮಾ ಸ್ವಾಮಿ ಕಾರ್ಯದಲಿ
ತಲೆಯ ಹೊಯ್ದನು ನಿನ್ನವರ ನೀ
ವಳುಕಿ ರಣದೊಳಗಡಗಿ ಜೀವವ
ನುಳುಹಿಕೊಂಡಿರಿ ಕೊಲುವೆನಲ್ಲದೊಡೆಂದನಾ ದ್ರೌಣಿ ೧೮

ಮರುಳಲಾ ಗುರುಸುತ ಯುಧಿಷ್ಠಿರ
ನಿರೆ ವಿಭಾಡಿಸುವಾ ಮೃಗೇಂದ್ರನ
ಗರವಟಿಗೆಯಲಿ ಬಡಸೃಗಾಲನ ಬಾಧೆ ಬಲುಹು ಗಡಾ
ಕುರುನೃಪತಿಯಾಸ್ಥಾನವಲ್ಲು
ಬ್ಬರಿಸಿ ಬೊಬ್ಬಿಡಲಾಹವಾಂತ
ಸ್ಮರಣೆ ಗುರುಸುತ ನಿನಗೆ ಸದರವೆಯೆಂದನಸುರಾರಿ ೧೯

ಕಾಯಬಲ್ಲೈ ಪಾಂಡವರನು ನಿ
ರಾಯುಧರು ನಾವೆಂದು ನೀ ನಿ
ರ್ದಾಯದಲಿ ನಿನ್ನವರು ಹೊಗುವರೆ ಹಸ್ತಿನಾಪುರವ
ಸಾಯಕವ ಪರಿಹರಿಸು ಪಾಂಡವ
ರಾಯಜೀವಿ ಗಡೆನುತ ವರ ಚ
ಕ್ರಾಯುಧನ ಬೋಳೈಸಿ ತೃಣದಿಂದಿಟ್ಟನಾ ದ್ರೌಣಿ ೨೦

ಆ ಮಹಾಮಂತ್ರಾಭಿಮಂತ್ರಿತ
ಭೀಮವಿಕ್ರಮಮತ್ತೃಣವನಸ್ತ್ರ
ತ್ಥಾಮನಿಡೆ ಲೋಕತ್ರಯಕ್ಷೋಭಪ್ರಭಂಜನವ
ವ್ಯೋಮಕೇಶಲಲಾಟ ವಿಸ್ರುತ
ಧೂಮಕೇತುಶಿಖಾವಿಸಂಸ್ಥುಳ
ಧೂಮಚುಂಬಿತ ಖಚರಚಯ ಭೂರಿಸಿತು ರಿಪುನೃಪರ ೨೧

ಅವನಿಪತಿ ಕೇಳೈ ಮಹಾವೈ
ಷ್ಣವದ ಸತ್ರಾಣವನು ಗುರುಸಂ
ಭವನ ಮಂತ್ರದ ಪಾಡಿ ನಡಪಾಡಿಸಿತು ಪಾಂಡವರ
ತವಕದಲಿ ತೃಣಬಾಣವಭಿಮ
ನ್ಯುವಿನ ರಾಣೀವಾಸದುದರೋ
ದ್ಭವದ ಗರ್ಭಕೆ ಮುರಿದು ಹರಿದುದು ಸೂಕ್ಷ್ಮರೂಪದಲಿ ೨೨

ಜಗವ ಹೂಡುವ ವೇಣ್ ಚತುರ್ದಶ
ಜಗದ ಜೀವರನೂಡಿಯುಣಿಸುವ
ಜಗವನಂತರ್ಭಾವದಲಿ ಬಲಿಸುವ ಗುಣತ್ರಯದ
ಸೊಗಡು ತನ್ನ ಸಹಸ್ರಧಾರೆಯ
ಝುಗೆಯೊಳೆನಿಪ ಮಹಾಸುದರ್ಶನ
ಬಿಗಿದು ಸುತ್ತಲು ವೇಢೆಯಾಯ್ತುತ್ತರೆಯ ಗರ್ಭದಲಿ ೨೩

ಸೆಳೆದುಕೊಂಡನು ಮೃತ್ಯುವಿನ ಗಂ
ಟಲಲಿ ಮಾರ್ಕಂಡೇಯನನು ರಣ
ದೊಳಗೆ ಭಗದತ್ತಾಂಕುಶದಿ ನಾರಾಯಣಾಸ್ತ್ರದಲಿ
ಉಳುಹಿದನು ಪಾರ್ಥನನು ಗುರುಸುತ
ಕಳುಹಿದೀ ಕುಶಿಕಾಸ್ತ್ರದಲಿ ಶಶಿ
ಕುಲದ ರಾಜಾಂಕುರವ ಕರುಣಿಸಿ ಕಾಯ್ದನಸುರಾರಿ ೨೪

ತೀರಿತೈ ಕುಶಿಕಾಸ್ತ್ರಘಾತಿ ಮು
ರಾರಿ ಗುರುಸುತರೊಬ್ಬರೊಬ್ಬರ
ವೀರಪಣವಾಸಿಯಲಿ ಶಪಿಸಿದರಧಿಕರೋಷದಲಿ
ನಾರಿಯಂತಸ್ತಾಪವಹ್ನಿ ನಿ
ವಾರಣಕೆ ಜಲವೀತನೆಂದಾ
ಚಾರಿಯನ ನಂದನನ ಹಿಡಿದರು ಭೀಮಫಲುಗುಣರು ೨೫

ಬಂದಳಾ ದ್ರೌಪದಿಯುಹಹ ಗುರು
ನಂದನನ ಕೊಲಬಾರದಕಟೀ
ನಂದನರ ಮರಣದ ಮಹಾವ್ಯಥೆಯಾತನಳಿವಿನಲಿ
ಕೊಂದುಕೂಗದೆ ಕೃಪೆಯನಬಲಾ
ವೃಂದ ಸಮಸುಖದುಃಖಿಗಳು ಸಾ
ರೆಂದು ಭೀಮಾರ್ಜುನರ ತೆಗೆದಳು ಬಳಿಕ ಪಾಂಚಾಲಿ ೨೬

ತಲೆಯ ಕೊಂಬವಗಡದ ಭಾಷೆಯ
ಸಲಿಸಲೆಂದಾ ದ್ರೋಣತನುಜನ
ಹೊಳೆವ ಮಕುಟದ ಮಾಣಿಕವ ಕೊಂಡುತ್ತರಾಯದಲಿ
ಗೆಲಿದು ತಿರುಗಿದರಿವರು ಸಾಹಸ
ವಳುಕಿಸದೆ ಮೂಜಗವ ಯದುಕುಲ
ತಿಲಕ ಗದುಗಿನ ವೀರನಾರಾಯಣನ ಕರುಣದಲಿ ೨೭

## ಹನ್ನೊಂದನೆಯ ಸಂಧಿ

ಸೂ. ರಾಯನಯ್ಯನ ತಿಳುಹಿದನು ದ್ವೈ
ಪಾಯನನು ಸಾಮದಲಿ ಕಮಳದ
ಳಾಯತಾಕ್ಷಿಯು ಶಾಪವಿತ್ತಳು ಮುಳಿದು ಗಾಂಧಾರಿ

ಕೇಳು ಜನಮೇಜಯ ಧರಿತ್ರೀ
ಪಾಲ ಕುರುಪತಿ ವಿಳಯವಾರ್ತಾ
ವ್ಯಾಳವಿಷ ವೇಢೈಸಿದುದು ಗಜಪುರದ ಜನಮನವ
ಹೂಳಿದುಬ್ಬಿನ ಹುದಿದ ಮೋನದ
ಸೂಳು ಚಿಂತೆಯ ಬಲಿದ ಭೀತಿಯ
ಮೇಲುದುಗುಡದ ದಡಿಯ ವದನದಲಿದ್ದುದಖಿಳಜನ ೧

ಆ ಸಮಯದಲಿ ದೇವ ವೇದ
ವ್ಯಾಸಮುನಿ ಬಂದನು ಗತಾಕ್ಷಮ
ಹೀಶನನು ಚರಣದಲಿ ಹೊರಳಿದಡೆತ್ತಿದನು ಹಿಡಿದು
ಆ ಸತಿಯ ಕರಸಿದನು ರಾಣೀ
ವಾಸವೆಲ್ಲವ ಬರಿಸಿ ಧರ್ಮವಿ
ಲಾಸವನು ವಿಸ್ತರಿಸಿದನು ವೈದಿಕ ವಿಧಾನದಲಿ ೨

ನಿನ್ನ ಸುತನುದ್ದಂಡತನದಲಿ
ನಿನ್ನ ತಮ್ಮನ ತನುಜರನು ಪರಿ
ಖಿನ್ನರನು ಮಾಡಿದನು ಕಪಟದ್ಯೂತಕೇಳಿಯಲಿ
ನಿನ್ನ ಮತ ವಿದುರೋಕ್ತಿಗಳ ಮೇಣ್
ಮನ್ನಿಸಿದನೇ ಜಗವರಿಯೆ ಸಂ
ಪನ್ನ ಶತನಹನ್ಯೆ ಸುಯೋಧನನೆಂದನಾ ಮುನಿಪ ೩

ಸೈರಿಸಿದರೇ ಪಾಂಡುಸುತರಂ
ಭೋರುಹಾಕ್ಷಿ ರಜಸ್ವಲೆಯ ಸುಲಿ
ಸೀರೆಯಲಿ ತತ್ಪೂರ್ವಕೃತ ಜತುಗೇಹದಾಹದಲಿ
ವೈರಬಂಧದ ವಿವಿಧ ವಿಷಮ ವಿ
ಕಾರದಲಿ ವಿಗ್ರಹಮುಖವ ವಿ
ಸ್ತಾರಿಸಿದರೇ ಪಾಂಡುಸುತರುತ್ತಮರೆ ಹೇಳೆಂದ ೪

ಅವರು ಸುಚರಿತರೆಂದಲೇ ಮಾ
ಧವನು ನೆರೆ ಮರುಳಾದನವರಿಗೆ
ಶಿವನು ಮೆಚ್ಚಿದು ಶರವನಿತ್ತನು ನರನ ಪತಿಕರಿಸಿ
ಭುವನವೆರಡಾದಲ್ಲಿ ಸಾಧುಗ
ಳವರ ದೆಸೆ ದುಸ್ಸಾಧುಗಳು ನಿ
ನ್ನವರ ದೆಸೆಯಾಯ್ತರ್ಜುನನ ಸೂತಜನ ಸಮರದಲಿ ೫

ಅಹುದು ನಿಮ್ಮ ಯುಧಿಷ್ಠಿರನು ಗುಣಿ
ಯಹನು ಭೀಮಾರ್ಜುನರು ಬಲ್ಲಿದ
ರಹರು ಕೃಷ್ಣನ ಕೂರ್ಮೆಯಲ್ಲಿ ಕಪರ್ದಿಯೊಲವಿನಲಿ
ಕುಹಕಿಯೆನ್ನವನವನೊಳಗೆ ನಿ
ಸ್ಪೃಹರು ವಿದುರಪ್ರಮುಖ ಸುಜನರು
ವಿಹಿತವೆನಗಿನ್ನಾವುದದ ನೀವ್ ಬೆಸಸಿ ಸಾಕೆಂದ ೬

ಧರ್ಮವೆಲ್ಲಿಹುದಲ್ಲಿ ಜಯ ಸ
ತ್ಕರ್ಮವೆಲ್ಲಿಹುದಲ್ಲಿ ಸಿರಿ ಸ
ದ್ಧರ್ಮಸಂರಕ್ಷಕರು ಹರಿ ಧೂರ್ಜಟಿ ಪಿತಾಮಹರು
ಧರ್ಮದೂರನು ನಿನ್ನವನು ಸ
ತ್ಕರ್ಮಬಾಹಿರನಾತ್ಮರಚಿತ ವಿ
ಕರ್ಮದೋಷದಲಳಿದನಿನ್ನೇನೆಂದನಾ ಮುನಿಪ ೭

ಎನಲು ಬಿದ್ದನು ನೆಲಕೆ ಸಿಂಹಾ
ಸನದಿನಾ ಮುನಿವಚನಶರ ಮರು
ಮೊನೆಗೆ ಬಂದುದು ಬಹಳ ಮೂರ್ಛಾಪಾರವಶ್ಯದಲಿ
ಜನಪನಿರೆ ಗಾಂಧಾರಿ ನೃಪ ಮಾ
ನಿನಿಯರೊರಲಿತು ರಾಜಗೃಹ ರೋ
ದನ ಮಹಾಧ್ವನಿ ಮೀರಿ ಮೊಗೆದುದು ಹಸ್ತಿನಾಪುರವ ೮

ಆರು ಸಂತೈಸುವರು ಲೋಚನ
ವಾರಿ ಹೊನಲಾಯ್ತರಮನೆಯ ನೃಪ
ನಾರಿಯರ ಬಹಳ ಪ್ರಳಾಪ ವ್ಯಥೆಯ ಬೇಳುವೆಗೆ
ಆರು ಮರುಗರು ಶೋಕಪನ್ನಗ
ಘೋರವಿಷ ಮುನಿವರನ ಹೃದಯವ
ಗೋರಿತೇನೆಂಬೆನು ಲತಾಂಗಿಯರಳಲ ಕಳವಳವ ೯

ಎತ್ತಿದರು ಧರಣಿಪನ ಕಂಗಳೊ
ಳೊತ್ತಿದರು ಪನ್ನೀರನುಸುರಿನ
ತತ್ತಳವನಾರೈದರೊಯ್ಯನೆ ತಾಳವೃಂತದಲಿ
ಬಿತ್ತಿ ತಂಗಾಳಿಯನು ಶೋಕದ
ಹತ್ತಿಗೆಗೆ ಹೊರೆದೆಗೆದು ಮರವೆಯ
ಚಿತ್ತವನು ಚೇತರಿಸಿ ಮೆಲ್ಲನೆ ನುಡಿಸಿದನು ಮುನಿಪ ೧೦

ಏನನೆಂದೆವು ಹಿಂದೆ ಧರ್ಮ ನಿ
ಧಾನವನು ಕಯ್ಕೊಡನೆ ಮರೆದೆಯಿ
ದೇನು ನಿನ್ನಯ ಮತಿಯ ವಿಭ್ರಮೆ ನಮ್ಮ ಹೇಳಿಕೆಗೆ
ಭಾನುಮತಿಯನು ತಿಳುಹು ನಿನ್ನಯ
ಮಾನಿನಿಯ ಸಂತೈಸು ಸಂಸಾ
ರಾನುಗತಿ ತಾನಿದು ಚತುರ್ದಶ ಜಗದ ಜೀವರಿಗೆ ೧೧

ಬಹ ವಿಪತ್ತಿನ ಶರಕೆ ಜೋಡೆಂ
ದಿಹುದಲಾ ಸುವಿವೇಕಗತಿ ನಿ
ರ್ದಹಿಸದೇ ಶೋಕಾಗ್ನಿ ಧರ್ಮದ್ರುಮದ ಬೇರುಗಳ
ಅಹಿತರೇ ಜನಿಸಿದಡೆ ಸುತರೆನ
ಬಹುದೆ ದುರ್ಯೋಧನನು ಹಗೆ ನಿನ
ಗಿಹಪರದ ಸುಖಗತಿಗೆ ಸಾಧನ ಧರ್ಮಸುತನೆಂದ ೧೨

ಕೇಳು ಮುನಿಭಾಷಿತವ ನೃಪ ನೀ
ನಾಲಿಸುವುದಾತ್ಮಜರನಿಲ್ಲಿಂ
ಮೇಲೆ ಸಲಿಲಾಂಜಲಿಗಳನು ವೈದಿಕವಿಧಾನದಲಿ
ಪಾಲಿಸುವುದಾ ಪಾಂಡುಸುತರ ಸ
ಮೇಳದಲಿ ಸೇರುವುದು ಚಿತ್ತಕೆ
ತಾಳದಿರು ರಾಜಸ ವಿಕಾರವನೆಂದನಾ ವಿದುರ ೧೩

ತಾಯೆ ಹದುಳಿಸು ದೇವಲೋಕದ
ಲಾಯದಲಿ ಸಲಿಸಾ ಕುಮಾರರ
ನಾಯುಷದ ಲಿಪಿ ಹಣೆಯಲೊರಸಿದಡಾರ ವಶವಿದಕೆ
ರಾಯನಲಿ ಸೊಸೆಯರಿಗೆ ಮಿಕ್ಕಬು
ಜಾಯತಾಕ್ಷಿಯರಿಗೆ ವಿಶೋಕದ
ಬಾಯಿನವ ಕೊಡಿಸೆಂದನಾ ಮುನಿ ಸುಬಲನಂದನೆಗೆ ೧೪

ಧರಣಿಪತಿ ಹೊರವಂಟನಂತಃ
ಪುರವ ಬಿಸುಟರು ಭಾನುಮತಿ ಸಹಿ
ತರಸಿಯರು ಹೊರವಂಟರೇಕಾಂಬರದ ಬಿಡುಮುಡಿಯ
ಕರದಬಸುರಿನ ಹೊಯ್ಲ ಕಜ್ಜಳ
ಪರಿಲುಳಿತ ನಯನಾಂಬುಗಳ ಕಾ
ತರಿಪ ಕಮಲಾಕ್ಷಿಯರು ನೆರೆದುದು ಲಕ್ಕ ಸಂಖ್ಯೆಯಲಿ ೧೫

ವಣಿಜಸತಿಯರ ಶಿಲ್ಪಜನವೃಪ
ವಣಿಜದಬಲಾಜನವಘಾಟದ
ಗಣಿಕೆಯರು ನಾನಾದಿಗಂತದ ರಾಜಪತ್ನಿಯರು
ಹಿಣಿಲ ಕಬರಿಯ ಹೊಳೆವ ಮುಂದಲೆ
ವಣೆಯ ಮುಕುರ ಮುಖಾಂಬುಜದ ಪದ
ಝಣಝಣತ್ಕೃತಿ ಜಡಿಯೆ ನಡೆದುದು ಬೀದಿಬೀದಿಯಲಿ ೧೬

ಎಸಳುಗಂಗಳ ಬೆಳಗನಶ್ರು
ಪ್ರಸರ ತಡೆದುದು ಶೋಕಮಯಶಿಖಿ
ಮುಸುಡಕಾಂತಿಯ ಕುಡಿದುದೊಸರುವ ಬಿಸಿಲ ಬೇಗೆಗಳು
ಮಿಸುಪ ಲಾವಣ್ಯಾಂಬುವನು ಬ
ತ್ತಿಸಿದವಂಗುಲಿಯುಪಹತಿಯ ಕೇ
ಣಸರ ಸೆಳೆದುದು ಕುಚದ ಚೆಲುವನು ಕೋಮಲಾಂಗಿಯರ ೧೭

ತಮ್ಮೊಳೇಕತ್ವದ ಸಖಿತ್ವದ
ಸೊಮ್ಮಿನಲಿ ಶ್ರುತಿಯಶ್ರುಜಲವನು
ನಿರ್ವಹಿಸಿದವನೆ ಕರ್ಣಪೂರದ ಮುತ್ತು ಸೂಸಿದವು
ನೆಮ್ಮಿತತಿಶಯ ಶೋಕವಹ್ನಿಯ
ರೊಮ್ಮಗೆಯು ಕರಣಂಗಳಲಿ ನೃಪ
ಧರ್ಮಪತ್ನಿಯರಳುತ ಹೊರವಂಟರು ಪುರಾಂತರವ ೧೮

ಉಡಿದು ಬಿದ್ದವು ಸೂಡಗವು ಬಿಗು
ಹಡಗಿ ಕಳೆದವು ತೋಳ ಬಂದಿಗ
ಳೊಡನೊಡನೆ ಚೆಲ್ಲಿದವು ಮುತ್ತಿನ ಹಾರಚಯ ಹರಿದು
ಬಿಡುಮುಡಿಯ ಕಡುತಿಮಿರ ಕಾರಿದು
ದುಡುಗಣವನೆನೆ ಸೂಸಕದ ಮು
ತ್ತುಡಿಸಿ ಸುರಿದವು ನೆಲಕೆ ನೃಪವನಿತಾಕದಂಬದಲಿ ೧೯

ಗಾಳಿಯರಿಯದು ಮುನ್ನ ರವಿಕಿರ
ಣಾಳಿ ಸೋಂಕದಪೂರ್ವರೂಪಿನ
ಮೇಲೆ ಬೀಳುವವೆಂಬವೊಲು ಕಡುವಿಸಿಲು ಬಿರುಗಾಳಿ
ತೂಳಿದವು ತರುಣಿಯರನಾವವ
ರಾಲಿಯರಿಯದ ನೆಲೆಯನಾ ಚಾಂ
ಡಾಲಜನ ಪರಿಯಂತ ಕಂಡುದು ರಾಯ ರಾಣಿಯರ ೨೦

ಅರಸ ಚಿತ್ತೈಸವರು ಹಸ್ತಿನ
ಪುರವ ಹೊರವಡೆ ದೂರದಲಿ ಕೃಪ
ಗುರುಜ ಕೃತವರ್ಮಕರು ಕಂಡರು ಕೌರವೇಶ್ವರನ
ಅರಸಿಯರ ನಾನಾದಿಗಂತದ
ಧರಣಿಪರ ಭಗದತ್ತ ಮಾದ್ರೇ
ಶ್ವರ ಜಯದ್ರಥ ಕರ್ಣ ದುಶ್ಶಾಸನರ ರಾಣಿಯರ ೨೧

ಗಣಿಕೆಯರನೇಕಾದಶಾಕ್ಷೋ
ಹಿಣಿಯ ನೃಪರಾಣಿಯರನಾ ಪ
ಟ್ಟಣ ಜನದ ಪರಿಜನದ ಬಹುಕಾಂತಾ ಕದಂಬಕವ
ರಣಮಹೀದರುಶನಕೆ ಬಹು ಸಂ
ದಣಿಯ ಕಂಡರು ಧರ್ಮಸುತನಿ
ಸ್ಸಣಲಿ ಧರಣಿಯನೆಂದು ಸುಯ್ದರು ಬಯ್ದು ಕಮಲಜನ ೨೨

ಬಂದ ಧೃತರಾಷ್ಟ್ರಾವನೀಶನ
ಮುಂದೆ ನಿಂದರು ರಾಯಕಟಕವ
ಕೊಂದ ರಜನಿಯ ರಹವನಭಿವರ್ಣಿಸಿದರರಸಂಗೆ
ಸಂದುದೇ ಛಲವೆನ್ನ ಮಗನೇ
ನೆಂದನೈ ಹರಿಬದಲಿ ಹರುಷವ
ತಂದಿರೈ ತಮಗಿನ್ನು ಲೇಸಾಯ್ತೆಂದನಂಧನೃಪ ೨೩

ಪತಿಕರಿಸಿದನು ನಮ್ಮನಹಿತ
ಸ್ಥಿತಿಯನೆಲ್ಲವ ತಿಳಿದನಮರಾ
ವತಿಯ ಸತಿಯರ ಸೋಂಕಿನಲಿ ಸೇರಿದನು ನಿಮಿಷದಲಿ
ಕ್ಷಿತಿಪನಂತ್ಯದೊಳಲ್ಲಿ ಶಸ್ತ್ರ
ಚ್ಯುತಿಯಮಾಡಿ ವಿರಾಗದಲಿ ವನ
ಗತಿಕರಾಪ್ಯೆತಂದೆವೆಂದರು ಗುರುಸುತಾದಿಗಳು ೨೪

ಲೇಸು ಮಾಡಿದಿರಿನ್ನು ನಿಮಗಿ
ನ್ನೈಸಲೇ ಕರ್ತವ್ಯವೆನೆ ಧರ
ಣೀಶನನು ಬೀಳ್ಕೊಂಡರವರಗಲಿದರು ತಮ್ಮೊಳಗೆ
ವ್ಯಾಸಮುನಿಯಾಶ್ರಮದ ಗಂಗಾ
ದೇಶವನು ತದ್ದ್ವಾರಕಿಯ ಸಂ
ವೇಶಿಸಿದರೈ ಗುರುಜ ಕೃಪ ಕೃತವರ್ಮರೊಲವಿನಲಿ ೨೫

ತಿರುಗಿದರು ಬಳಿಕಿತ್ತಲೀ ಪೋ
ಹರದ ಕಾಂತಾಕೋಟಿ ಬಂದುದು
ಹರಳುಮುಳ್ಳುಗಳೊತ್ತುಗಾಲಿನ ದೂರತರಪಥರ
ಉರಿಯ ಜಠರದ ಬಿಸಿಲ ಝಳದಲಿ
ಹುರಿದ ಕದಪುಗಳೆರಡು ಕಡೆಯಲಿ
ಸುರಿವ ನಯನಾಂಬುಗಳ ರಾಜನಿತಂಬಿನೀನಿಕರ ೨೬

ಬಂದುದೀ ಗಜಪುರದ ನಾರೀ
ವೃಂದ ಧೃತರಾಷ್ಟ್ರಾವನೀಶನ
ಮುಂದೆ ವೇದವ್ಯಾಸ ಸಂಜಯ ವಿದುರ ಪೌರಜನ
ಮುಂದಣಾಹವರಂಗಧಾರುಣಿ
ಯೊಂದು ಕೆಲನುಪವನದ ನೆಳಲಲಿ
ನಿಂದುದಿವರಾಗಮನವನು ಕೇಳಿದನು ಯಮಸೂನು ೨೭

ಮುರಮಥನ ಸಾತ್ಯಕಿ ಯುಧಿಷ್ಠಿರ
ಧರಣಿಪತಿ ನರ ಭೀಮ ಮಾದ್ರೀ
ಯರುಗಳೈವರ ಸಾರಥಿಗಳು ಯುಯುತ್ಸು ದಾರುಕರು
ತೆರಳಿತೇಳಕ್ಷೋಹಿಣಿಯ ನೃಪ
ರರಸಿಯರು ದ್ರೌಪದಿಯ ರೋದನ
ಸರದ ಗಾನದ ಜಠರತಾಡನ ತಾಳವೇಳದಲಿ ೨೮

ಇವರು ಬಂದರು ದೂರದಲಿ ಮಾ
ಧವನ ಮತದಲಿ ನಿಂದರಾಚೆಯ
ಯುವತಿಜನ ಗಾಂಧಾರಿ ಕುಂತೀ ಭಾನುಮತಿ ಸಹಿತ
ವಿವಿಧವಿಕೃತವಿಳಾಸನಯನೋ
ದ್ಭವಪಯಸ್ಸಿಮಿರಾಂಶುಕೆಯರು
ದವನಿಯಲಿ ಕೆಡೆದೊರಲುತಿರ್ದರು ತಾರು ಥಟ್ಟಿನಲಿ ೨೯

ಅರಸ ಕೇಳ್ ಧೃತರಾಷ್ಟ್ರ ಸಂಜಯ
ವರ ಮುನಿಪ ವಿದುರಾದಿ ಪರಿಜನ
ಪುರಜನಾವಳಿಯಿದ್ದುದುಪವನದೊಂದು ಬಾಹೆಯಲಿ
ನೆರೆದುದೀಚೆಯಲೊಂದೆಸೆಯಲು
ತ್ತರೆ ಸುಭದ್ರೆಯರಾದಿ ಯಾದವ
ರರಸಿಯರು ಸಹಿತೊರಲುತಿರ್ದಳು ದ್ರೌಪದೀದೇವಿ ೩೦

ಹರಿಸಹಿತ ಪಾಂಡವರದೊಂದೆಸೆ
ಯಿರೆ ಚತುರ್ವಿಧವಾದುದೀ ಮೋ
ಹರದೊಳಾಯ್ತೆಡೆಯಾಟ ವೇದವ್ಯಾಸ ವಿದುರರಿಗೆ
ಧರಣಿಪನ ಕಾಣಿಸುವುದಂಧನ
ನಿರುಪಮಿತ ಶೋಕಾನಳನ ಸಂ
ಹರಿಸುವುದು ನಯವೆಂದು ವೇದವ್ಯಾಸಮುನಿ ನುಡಿದ ೩೧

ಇದಕೆ ಸಂಶಯವೇನು ಬೊಪ್ಪನ
ಪದಯುಗವ ಕಾಣಿಸುವುದೆಮ್ಮನು
ಹದುಳವಿಡುವುದು ಹಸ್ತಿನಾಪುರವರಸುತನ ತನಗೆ
ಒದೆದು ನೂಕಿದ ಹದನ ಮಕುಟಾ
ಗ್ರದಲಿ ಧರಿಸುವೆವೆಂದು ಬಿನ್ನವಿ
ಪುದು ಮಹೀಪತಿಗೆಂದು ಮುನಿಗರುಹಿದನು ಯಮಸೂನು ೩೨

ಲೇಸನಾಡಿದೆ ಮಗನೆ ಧರ್ಮದ
ವಿಾಸಲಲ್ಲಾ ನಿನ್ನ ಮತಿ ಬಳಿ
ಕೈಸಲೇಯೆನುತವರು ಬಂದರು ಭೂಪತಿಯ ಹೊರೆಗೆ
ಆ ಸುಯೋಧನ ನಿನ್ನ ಮಗನ
ಲ್ಲೀ ಸಮಂಜಸ ಧರ್ಮಜನ ಹಿಡಿ
ದೀಸುವುದು ಭವಜಲಧಿಯನೆಂದಮಳಮುನಿ ನುಡಿದ ೩೩

ನೃಪನ ಕಾಣಿಸಿಕೊಂಬುದನಿಬರ
ನುಪಚರಿಸುವುದು ನಿನ್ನ ಮಕ್ಕಳ
ಕೃಪಣತೆಯನಾರ್ಯವರಲ್ಲವರ್ಯವರುತ್ತಮರು
ಉಪಹತಿಯ ನೆನೆಯದಿರು ದುರ್ಜನ
ರಪಕೃತಿಗೆ ಫಲವಾಯ್ತು ಧರ್ಮವೆ
ರಪಣವಿಹಪರಲೋಕಕೆಲೆ ಧೃತರಾಷ್ಟ್ರ ಕೇಳೆಂದ ೩೪

ಪೈ ಹಸಾದವು ನಿಮ್ಮ ಚಿತ್ತಕೆ
ಬೇಹ ಹದನೇ ಕಾರ್ಯಗತಿ ಸಂ
ದೇಹವೇ ಪಾಂಡುವಿನ ಮಕ್ಕಳು ಮಕ್ಕಳವರೆಮಗೆ
ಕಾಹುರರು ಕಲ್ಮಷರು ಬಂಧು
ದ್ರೋಹಿಗಳು ಗತವಾಯ್ತು ನಿಷ್ಪ್ರ
ತ್ಯೂಹವಿನ್ನೇನವರಿಗೆಂದನು ಮುನಿಗೆ ಧೃತರಾಷ್ಟ್ರ ೩೫

ಖಳನ ಹೃದಯದ ಕಾಳಕೂಟದ
ಗುಳಿಗೆಗಳನಿವರೆತ್ತ ಬಲ್ಲರು
ತಿಳುಹಿ ನುಡಿದೊಡಬಡಿಸಿದರು ನಾನಾ ಪ್ರಕಾರದಲಿ
ಘಳಿಲನೀಚೆಗೆ ಬಂದು ಹದನನು
ನಳಿನನಾಭಂಗರುಹೆ ನಸುನಗು
ತೊಳಗೊಳಗೆ ಹರಿ ವಿಶ್ವಕರ್ಮನ ನೆನೆದು ನೇಮಿಸಿದ ೩೬

ನೆನೆದ ಘಳಿಗೆಯೊಳಾತ ಕಟ್ಟು
ಕ್ಕಿನಲಿ ಸರ್ವಾವಯವವನು ಸಂ
ಜನಿಸಿದನು ಪ್ರತಿರೂಪವನು ಪವಮಾನನಂದನನ
ದನುಜರಿಪುಸಹಿತವರು ಬಂದರು
ಮುನಿಯೊಡನೆ ಬಳಿಕಂಧನೃಪತಿಗೆ
ವಿನಯದಲಿ ಮೈಯಿಕ್ಕಿದನು ಭಕ್ತಿಯಲಿ ಯಮಸೂನು ೩೭

ಬಾ ಮಗನೆ ಕುರುರಾಜವಂಶ ಶಿ
ರೋಮಣಿಯೆ ನಿರ್ಧೂತ ರಾಜಸ
ತಾಮಸನೆ ಸತ್ವೈಕನಿಧಿ ಬಾ ಕಂದ ಬಾ ಎನುತ
ಭೂಮಿಪನ ತೆಗೆದಪ್ಪಿ ಬಹಳ
ಪ್ರೇಮದಲಿ ಮುಂಡಾಡಿದನು ಕಲಿ
ಭೀಮನೋ ಬಾ ಮಗನೆ ಬಾರೈ ಕಂದ ಬಾ ಎಂದ ೩೮

ಭೀಮನನು ಹಿಂದಿಕ್ಕಿ ಲೋಹದ
ಭೀಮನನು ಮುಂದಿರಿಸಿದಡೆ ಸು
ಪ್ರೇಮನಪ್ಪಿದನೇನನೆಂಬೆನು ಮೋಹವನು ಮಗನ
ಆ ಮಹಾವಜ್ರಾಯತ ಪ್ರೋ
ದ್ದಾಮದಾಯಸ ಭೀಮತನು ನಿ
ರ್ನಾಮವೆನೆ ನುಗ್ಗಾಗಿ ಬಿದ್ದುದು ನೃಪನ ತಕ್ಕೆಯಲಿ ೩೯

ಮಗನೆ ಹಾ ಹಾ ಭೀಮ ನೊಂದ್ಯೆ
ಮಗನೆ ಕೆಟ್ಟೆನು ಕೆಟ್ಟೆನಕಟಿಂ
ದೊಗುಮಿಗೆಯ ಶೋಕದಲಿ ನೆರೆ ಮರುಗಿದನು ಧೃತರಾಷ್ಟ್ರ
ದುಗಡ ಬೇಡೊಮ್ಮಿಂಗೆ ನಿಮ್ಮಯ
ಮಗನುಳಿದ ನಿಮ್ಮಧಿಕರೋಷದ
ಹಗರಣದ ಹಗೆ ಹೋಯಿತೆಂದನು ನಗುತ ಮುರವೈರಿ ೪೦

ಪ್ರಾಣವಿಮ್ಮಡಿಸಿತ್ತು ಕೋಪದ
ಕೇಣವೆಚ್ಚರಿಸಿದಡೆ ನೃಪ ಸ
ತ್ರಾಣದಲಿ ತನಿಬಗಿಯೆ ನುಗ್ಗಾಯ್ತಾಯಸ ಪ್ರತಿಮೆ
ಮಾಣು ಭಯವನು ಭೀಮ ಭೂಪನ
ಕಾಣು ಹೋಗೆನೆ ನಡುಗಿ ಭುವನ
ಪ್ರಾಣನಾತ್ಮಜ ಬಿದ್ದನಾ ಧೃತರಾಷ್ಟ್ರನಂಘ್ರಿಯಲಿ ೪೧

ಪವನಸುತನೇ ಬಾ ಎನುತ ತ
ಕ್ಕವಿಸಿದನು ಬಳಿಕೆರಗಿದಡೆ ವಾ
ಸವನ ಸುತ ಬಾ ಕಂದ ಎಂದಪ್ಪಿದನು ಫಲುಗುಣನ
ತವಕದಿಂದೆರಗಿದಡೆ ಮಾದ್ರಿಯ
ಜವಳಿ ಮಕ್ಕಳನಪ್ಪಿದನು ಕೌ
ರವಕುಲಾಗ್ರಣಿಗಳಿರ ಕುಳ್ಳಿರಿಯೆಂದನಂಧನೃಪ ೪೨

ಕುರುಮಹೀಪತಿ ನಮ್ಮ ಪೂರ್ವಜ
ರರಸು ತತ್ಸಂತಾನ ಪಾರಂ
ಪರೆಯನಳಿವಡೆ ಕೆಲಬರಾದರು ಹೋದರವರಿಂದು
ಭರತಕುಲವನು ಹೊರೆದು ಮಿಗೆ ವಿ
ಸ್ತರಿಸು ಮಗನೆ ಸುಯೋಧನಾದ್ಯರ
ದುರುಳುತನದವಗುಣವನೆಮ್ಮನು ನೋಡಿ ಮರೆಯೆಂದ ೪೩

ಅವರೊಳವಗುಣವೇ ಚಿರಂತನ
ಭವದ ಕಿಲ್ಬಿಷ ಕರ್ಮಪಾಕ
ಪ್ರವರ ದುರಿಯೋಧನನ ಸವ್ಯಪದೇಶಮಾತ್ರದಲಿ
ಎವಗೆ ರಚಿಸಿತು ರಾಜ್ಯವಿಭ್ರಂ
ಶವನು ತತ್ಸುಕೃತೋದಯಪ್ರಾ
ಭವವೆ ತಿರುಗಿಸಿತೆಂದು ನಯದಲಿ ಧರ್ಮಸುತ ನುಡಿದ ೪೪

ಸಾಕಿದಂತಿರಲಬಲೆಯರೊಳು
ದ್ರೇಕಿ ನಿಮ್ಮಯ ಹಿರಿಯ ತಾಯಿ
ದ್ರೇಕವನು ಪರಿಹರಿಸು ಶೋಕಕ್ರೋಧದುಪಟಳಕೆ
ಆಕೆ ಸೈರಿಸಲರಿಯಳರಿವಿನೊ
ಳಾಕೆವಾಳರು ತಿಳಿಹಿ ತಮ್ಮನ
ನಾಕೆಯನು ಕಾಣಿಸುವುದೆಂದನು ವ್ಯಾಸ ವಿದುರರಿಗೆ ೪೫

ವಿದುರ ವೇದವ್ಯಾಸ ಮುನಿಯೀ
ಹದನನರುಹುವೆವೆಂದು ರಾಯನ
ಸುದತಿಯಲ್ಲಿಗೆ ಬಂದು ನುಡಿದರು ಮಧುರವಚನದಲಿ
ಕದಪನುಂಗುರಗಿತ್ತು ತಲೆಗು
ತ್ತಿದಳು ನಯನೋದಕದ ಪರಿವಾ
ಹದಲಿ ನನೆದಳು ಮಹಿಳೆಯಿದ್ದಳು ಬಹಳ ಮೋನದಲಿ ೪೬

ದುಗುಡವನು ಬಿಡು ಮೋಹಬಂಧ
ಸ್ಥಗಿತ ಚಿತ್ತವ ಕದಡು ಹಣೆಯಲಿ
ಮಗಳೆ ಮರುಳಾದೌ ವಿಳಾಸದ ವಿಹಿತವಿಹಪರಕೆ
ಅಗಡುಮಕ್ಕಳ ತಾಯ್ಗೆ ತಪ್ಪದು
ಬೆಗಡುಬೇಗೆ ಸುಯೋಧನಾದ್ಯರ
ವಿಗಡತನವನು ನೆನೆದು ನೀ ನೋಡೆಂದನಾ ಮುನಿಪ ೪೭

ಮುನಿಯದಿರು ಗಾಂಧಾರಿ ದಿಟ ನಿ
ನ್ನನುಜನಿಕ್ಕಿದ ಸಾರಿ ನಿನ್ನಯ
ತನುಜರನು ನಿನ್ನಖಿಳಮಿತ್ರಜ್ಞಾತಿ ಬಾಂಧವರ
ಮನುಜಪತಿಗಳನಂತವನು ರಿಪು
ಜನಪ ಶರವಹ್ನಿಯಲಿ ಬೇಳಿದು
ದಿನಿತು ಶೋಕೋದ್ರೇಕ ನಿನಗೇಕೆಂದನಾ ಮುನಿಪ ೪೮

ಅಳಿದವರಿಗಳಲುವುದು ಸಲ್ಲದು
ನಿಲಲಿ ಸಾಕದು ನಿಮ್ಮ ಚಿತ್ತದ
ನೆಲೆಯ ಬಯಕೆಯ ಬೆಸಸಿರೇ ಕರ್ತವ್ಯವೇನೆಮಗೆ
ಕಳವಳಿಪ ಕುಂತೀಸುತರ ಕಣು
ವಳೆಗವಗ್ರಹವಾಗು ನಿರ್ಜರ
ರೊಳಗೆ ಮಕ್ಕಳ ಮಾನ್ಯರನು ಮಾಡೆಂದನಾ ಮುನಿಪ ೪೯

ನಂಬಿಸುವುದೈವರನು ಕಾಣಿಸಿ
ಕೊಂಬುದನಿಬರ ಕರಣವೃತ್ತಿಗೆ
ತುಂಬುವುದು ತನಿಹರುಷವನು ಸೌಹಾರ್ದಶೋಭೆಯಲಿ
ರ್ಝೊಂಬಿಸಲಿ ಕೌರವರು ನಾಕ ನಿ
ತಂಬಿನಿಯರಳಕವನು ಮಗಳೆ ವಿ
ಡಂಬಿಸುವ ಖಳರಭಿಮತಕೆ ಮನವೀಯಬೇಡೆಂದ ೫೦

ರಾಯನನು ಕಾಣಿಸಿದಿರೇ ಪ್ರ
ಜ್ಞಾಯತಾಕ್ಷನ ತಿಳಿಹಿ ಬಂದಿರೆ
ತಾಯಿಗಳು ನಾವೈಸಲೇ ಬಲುಹುಂಟೆ ನಮಗಿನ್ನು
ಸಾಯೆ ಸಾವೆನು ಕುರುಕುಲಾಗ್ರಣಿ
ನೋಯೆ ನೋವೆನು ತನಗೆ ದುರಭಿ
ಪ್ರಾಯವುಂಟೇ ಮಾವ ಎಂದಳು ಮುನಿಗೆ ಗಾಂಧಾರಿ ೫೧

ಐಸಲೇ ಗುಣಮಯವಚೋವಿ
ನ್ಯಾಸವಿದು ಸಾರೆನುತ ಮರಳಿದು
ಭೂಸುರಾಗ್ರಣಿ ಬಂದು ನುಡಿದನು ಧರ್ಮನಂದನಗೆ
ರೋಷವಹ್ನಿಯನುಪಶಮಾಂಬು ವಿ
ಳಾಸದಲಿ ನಿಲಿಸೇಳು ನೃಪನ ಮ
ಹಾಸತಿಯ ಖತಿ ಹಿರಿದು ನಮಗೊಳಗಾಗಿ ಭಯವೆಂದ ೫೨

ಹರಿ ವಿದುರ ಪಾರಾಶರಾತ್ಮಜ
ವರ ಮಹೀಪತಿ ಭೀಮ ಮಾದ್ರೇ
ಯರು ಧನಂಜಯ ಸಹಿತ ಬಂದರು ಬಹಳ ವಿನಯದಲಿ
ಚರಣದಲಿ ಮೈಯಿಕ್ಕಿದರೆ ನೃಪ
ವರನ ನೆಗಹಿದಳನಿಲಸುತ ಸಿತ
ತುರಗ ಮಾದ್ರೀಸುತರು ಪದಕೆರಗಿದರು ಭೀತಿಯಲಿ ೫೩

ಏಳಿರೈ ಸಾಕೇಳಿ ಮಕ್ಕಳಿ
ರೇಳಿರೈ ದೇಸಿಗರು ನಾವ್ ಭೂ
ಪಾಲಕರು ನೀವೀಸು ನಮ್ಮಲಿ ಭೀತಿ ನಿಮಗೇಕೆ
ಬಾಲೆಯರು ಸಾವಂಧಕರು ನಿ
ಮ್ಮಾಳಿಕೆಯೊಳೇ ನಿಮ್ಮ ಹಂತಿಯ
ಕೂಳಿನಲಿ ಬೆಂದೊಡಲ ಹೊರೆವವರೆಂದಳಿಂದುಮುಖಿ ೫೪

ತಾಯೆ ಖತಿಬೇಡಿನ್ನು ಧರಣಿಗೆ
ರಾಯನೇ ಧೃತರಾಷ್ಟ್ರನಾತನ
ಬಾಯ ತಂಬುಲ ಬೀಳುಡೆಯ ಬಲದಿಂದ ಬದುಕುವೆವು
ತಾಯೆ ನೀವಿನ್ನೆಮಗೆ ಕುಂತಿಯ
ತಾಯಿತನವಂತಿರಲಿ ಕರುಣಿಸಿ
ಕಾಯಬೇಕೆಂದರಸ ಮಗುಳೆರಗಿದನು ಚರಣದಲಿ ೫೫

ಧರ್ಮ ನಿಮ್ಮದು ಮಗನೆ ಬರಿಯ ವಿ
ಕರ್ಮವೆಮ್ಮದು ತನ್ನ ಮಕ್ಕಳು
ದುರ್ಮತಿಗಳನ್ಯಾಯಶೀಲರಸಾಧುಸಂಗತರು
ನಿರ್ಮಳರು ನೀವೈವರಾಹವ
ಧರ್ಮಕುಶಲರು ಲೋಕ ಮೆಚ್ಚಲು
ಧರ್ಮ ನಿಮಗಿನ್ನೆನುತ ತಲೆಗುತ್ತಿದಳು ಗಾಂಧಾರಿ ೫೬

ಧರ್ಮವಾಗಲಿ ಮೇಣು ರಣದಲ
ಧರ್ಮವಾಗಲಿ ಖಾತಿಯಲಿ ಪರ
ಮರ್ಮಘಾತಕವಾಯ್ತು ಸಾಕಿನ್ನೆಂದು ಫಲವೇನು
ನಿರ್ಮಳಾಂತಃಕರಣಕೃತಪರಿ
ಕರ್ಮವಿಳಸಿತೆ ತಾಯೆ ಸೈರಿಪು
ದುಮ್ಮಳವು ಬೇಡೆಂದು ಮೆಯ್ಯಿಕ್ಕಿದನು ಕಲಿಭೀಮ ೫೭

ಏಳು ತಮ್ಮ ವೃಥಾ ವಿಡಂಬನ
ದಾಳಿಯಾಟವಿದೇಕೆ ಸೈರಿಸ
ಹೇಳಿದೈ ಸೈರಿಸದೆ ಮುನಿದಡೆ ನಿಮಗೆ ಕೇಡಹುದೆ
ಕಾಳೆಗದ ಕೃತಸಮಯಸತ್ಯವ
ಪಾಲಿಸಿದವರು ನೀವಲೇ ದಿಟ
ಖೂಳರಾವೈಸಲೆ ಎನುತ ಗಜರಿದಳು ಗಾಂಧಾರಿ ೫೮

ಹೊರಿಸುವಡೆ ದುಷ್ಕೀರ್ತಿ ನಮ್ಮಲಿ
ಹೊರಿಗೆಯಾಯಿತು ನಾಭಿಯಿಂ ಕೆಳ
ಗೆರಗುವುದು ಗದೆಯಿಂದ ಸಲ್ಲದು ಶಸ್ತ್ರವಿದ್ಯೆಯಲಿ
ಅರಿಕೆಯಿಂದನ್ಯಾಯವೀ ಜಗ
ವರಿಯೆ ನಮ್ಮದು ತಾಯೆ ನೀ ಮನ
ಮುರಿಯದವಧರಿಸುವಡೆ ಬಿನ್ನಹವೆಂದನಾ ಭೀಮ ೫೯

ಅರಗಿನರಮನೆ ಕೊಂಡವೆಮ್ಮ
ವರು ಸಮಿತ್ತುಗಳಾ ಸುಯೋಧನ
ಪರಮಯಜಮಾನನು ಜಯಾಧ್ವರ ವಿಧಿಯಪೂರ್ವವನು
ಕುರುನೃಪತಿಯನುಭವಿಸಿದನು ತ
ಚ್ಚರಿತವೇನನ್ಯಾಯಪಥವೇ
ಧುರದೊಳೆಮಗನ್ಯಾಯವೈಸಲೆ ದೈವಕೃತವೆಂದ ೬೦

ಕಪಟದಲಿ ಜೂಜಾಡಿ ರಾಜ್ಯವ
ನಪಹರಿಸಿದಡೆ ಧರ್ಮ ನಿಮ್ಮದು
ಕೃಪಣತೆಯ ನಾನೇನ ಹೇಳುವೆನಾ ಸುಯೋಧನನ
ದ್ರುಪದಪುತ್ರಿಯ ಗಾಢ ಗರುವಿಕೆ
ಗುಪಹತಿಯ ಮಾಡುವುದು ಧರ್ಮದ
ವಿಪುಳ ಪಥ ನಿಮ್ಮದು ಮಹಾಧರ್ಮಜ್ಞರಹಿರೆಂದ ೬೧

ಲಲನೆ ಋತುಮತಿಯೆಂದಡೆಯು ಸಭೆ
ಗೆಳೆದು ತಂದವರಧಿಕಸಜ್ಜನ
ರಳಿಕುಳಾಳಿಕೆಯುಟ್ಟ ಸೀರೆಯನೂರುಮಧ್ಯದಲಿ
ಸುಲಿಸಿದರು ಧಾರ್ಮಿಕರು ತಾವೇ
ಖಳರು ನೀವೇ ಸುಜನರೆಮ್ಮಾ
ಸ್ಖಲಿತವನು ನೀವಿನ್ನು ಸೈರಿಸಿ ತಾಯೆ ನಮಗೆಂದ ೬೨

ಕದನವಿಜಯದ ಭಂಗಿ ತಲೆಗೇ
ರಿದುದೊ ಮೇಲಂಕಣದಲೊಡವು
ಟ್ಟಿದನ ನೆತ್ತರುಗುಡಿಹಿ ನಿನ್ನೊಡನೆನಗೆ ಮಾತೇನು
ಇದಿರಲಿರದಿರು ಸಾರು ಕರೆ ಧ
ರ್ಮದ ವಿಡಂಬದ ಧರ್ಮಪುತ್ರನ
ಹದನ ಕೇಳುವೆನೆನುತ ಕಳವಳಿಸಿದಳು ಗಾಂಧಾರಿ ೬೩

ಧರಣಿಪತಿ ಕೇಳ್ ಸುಬಲಜೆಯ ನಿ
ಷ್ಠುರದ ನುಡಿಯಲಿ ನಡುಗಿ ಭೂಪತಿ
ಕರವ ಮುಗಿದತಿವಿನಯಭರದಲಿ ಬಾಗಿ ಭೀತಿಯಲಿ
ಕರುಣಿಸೌ ಗಾಂಧಾರಿ ನಿರ್ಮಳ
ಕುರುಕುಲಾನ್ವಯಜನನಿ ಕೋಪ
ಸ್ಫುರಣದಲಿ ಶಪಿಸೆನಗೆ ಶಾಪಾರುಹನು ತಾನೆಂದ ೬೪

ಶಾಪವನು ನೀ ಹೆಸರಿಸೌ ಸ
ರ್ವಾಪರಾಧಿಗಳಾವು ನಿಮ್ಮಯ
ಕೋಪ ತಿಳಿಯಲಿ ತಾಯೆ ಫಲಿಸಲಿ ಬಂಧುವಧೆ ನಮಗೆ
ನೀ ಪತಿವ್ರತೆ ನಿನ್ನ ಖತಿ ಜೀ
ವಾಪಹಾರವು ತಮಗೆ ನಿಮ್ಮನು
ತಾಪವಡಗಲಿ ತನ್ನನುರುಹೆಂದೆರಗಿದನು ಪದಕೆ ೬೫

ನನೆದುದಂತಃಕರಣ ಕರುಣಾ
ವಿನುತರಸದಲಿ ಖತಿಯ ರಝಳ ರೆಝೊ
ಮ್ಮಿನಲಿ ಜಡಿದುದು ಜಾರಿತಗ್ಗದ ಪುತ್ರಶತಶೋಕ
ಜನಪ ಕೇಳೈ ರಾಜಸದ ಸಂ
ಜನಿತ ತಾಮಸಬೀಜಶೇಷದ
ವನಜಮುಖಿ ನೋಡಿದಳು ನಖಪಂಕ್ತಿಗಳನವನಿಪನ ೬೬

ಉರಿದವರಸನ ನಖನಿಕರ ಹೊಗೆ
ವೆರಸಿ ಕೌರಿಡಲೋಡಿ ಹೊಕ್ಕರು
ನರವೃಕೋದರರಸುರರಿಪುವಿನ ಪಶ್ಚಿಮಾಂಗದಲಿ
ಹರಿಯುಭಯಕರವೆತ್ತಿ ಯಮಜಾ
ದ್ಯರನು ಸಂತೈಸಿದನು ರೋಷ
ಸ್ಫುರಣವಡಗಿತು ಸುಬಲಸುತೆಗಿನ್ನಂಜಬೇಡೆಂದ ೬೭

ಕೃತಕ ಭೀಮನ ಕೊಂಡು ಮುಳುಗಿತು
ಕ್ಷಿತಿಪತಿಯ ರೋಷಾಗ್ನಿಯಾತನ
ಸತಿಯ ಖತಿ ಮಗ್ಗಿತು ಮಹೀಶನ ನಖಮರೀಚಿಯಲಿ
ಜಿತವಿರೋಧವ್ಯಾಪ್ತಿ ಬಹಳ
ವ್ಯತಿಕರದೊಳಾಯ್ತೆಂದು ಲಕ್ಷ್ಮೀ
ಪತಿ ನರೇಂದ್ರನ ಸಂತವಿಟ್ಟನು ಸಾರವಚನದಲಿ ೬೮

ಭೀತಿ ಬೇಡೆಲೆ ಮಕ್ಕಳಿರ ನಿ
ರ್ಧೂತ ಧರ್ಮಸ್ಥಿತಿಗಳನ್ವಯ
ಘಾತಕರು ತಮ್ಮಿಂದ ತಾವಳಿದರು ರಣಾಗ್ರದಲಿ
ನೀತಿಯಲಿ ನೀವಿನ್ನು ಪಾಲಿಸಿ
ಭೂತಳವನುರೆ ಕಳಿದ ಬಂಧು
ವ್ರಾತಕುದಕವನೀವುದೆಂದಳು ನೃಪಗೆ ಗಾಂಧಾರಿ ೬೯

ಅನುನಯವ ರಚಿಸಿದಳು ಕೌರವ
ಜನನಿ ಲೇಸಾಯ್ತೆನುತ ಬಂದರು
ವಿನಯದಲಿ ಮೈಯಿಕ್ಕಿದರು ನಿಜ ಮಾತೆಯಂಘ್ರಿಯಲಿ
ನನೆದಳಕ್ಷಿಪಯಃಪ್ರವಾಹದೊ
ಳನಿಬರನು ತೆಗೆದಪ್ಪಿ ಕುಂತೀ
ವನಿತೆ ಸಂತೈಸಿದಳು ನಯದಲಿ ತನ್ನ ನಂದನರ ೭೦

ಏಳು ಧರ್ಮಜ ಪುತ್ರಶೋಕ
ವ್ಯಾಳವಿಷಮೂರ್ಛಿತೆಯಲಾ ಪಾಂ
ಚಾಲಸುತೆಯನು ತಿಳುಹಿ ಕಾಣಿಸು ಸುಬಲನಂದನೆಯ
ಬಾಲೆಯರನಾ ಭಾನುಮತಿ ಥ
ಡಾಳದುಃಖವನಪಹರಿಸು ಪಡಿ
ತಾಳ ಬೇಡೆನೆ ಬಂದರನಿಬರು ದ್ರೌಪದಿಯ ಹೊರೆಗೆ ೭೧

ಕರೆದು ತಂದರು ವಿಗತಲೋಚನ
ನರಸಿಯನು ಕಾಣಿಸಿದರತ್ತೆಯ
ಚರಣಯುಗದೊಳಗೆರಗೆ ಹಿಡಿದೆತ್ತಿದಳು ಗಾಂಧಾರಿ
ಮರುಳು ಮಗಳೆ ಕುಮಾರ ವರ್ಗದ
ಮರಣ ಸೊಸೆಯತ್ತೆಯರಿಗೊಂದೇ
ಪರಿ ವೃಥಾ ವ್ಯಥೆಯೇಕೆನುತ ಸಂತೈಸಿದಳು ಸತಿಯ ೭೨

ಸರಿಯಲೌ ಸುತಶೋಕ ನಮ್ಮ
ಬ್ಬರಿಗೆ ನಮ್ಮೊಳುವೆರಸಿ ವೈರೋ
ತ್ಕರವಿಸಂಸ್ಫುಳರಣವಿಧಾನವ ನಮ್ಮೊಳಗೆ ರಚಿಸಿ
ಎರಡು ಬದಲಲಿ ಸಕಲ ಭೂಮೀ
ಶ್ವರರ ಚಾತುರ್ಬಲವನುಪಸಂ
ಹರಿಸಿದಾತನು ತಾನೆ ಗದುಗಿನ ವೀರನಾರಯಣ ೭೩

## ಹನ್ನೆರಡನೆಯ ಸಂಧಿ

ಸೂ. ರಣವ ಶೋಧಿಸಲೆಂದು ಕಳನೊಳು
ಹೆಣನ ತುಳಿತುಳಿದರಸೆ ಕುರುಧಾ
ರುಣಿಯ ಪತಿಯನು ಕಂಡು ನೆರೆ ಮರುಗಿದಳು ಗಾಂಧಾರಿ

ಕೇಳು ಜನಮೇಜಯ ಧರಿತ್ರೀ
ಪಾಲ ಕೃಷ್ಣನ ಕರೆದು ನಯದಲಿ
ಲೋಲಲೋಚನೆ ನುಡಿದಳಂತಸ್ತಾಪ ಶಿಖಿ ಜಡಿಯೆ
ಏಳು ತಂದೆ ಮುಕುಂದ ಕದನ
ವ್ಯಾಳವಿಷನಿರ್ದಗ್ಧ ಧರಣೀ
ಪಾಲವರ್ಗವ ತೋರಿಸೆಂದಳು ತರಳೆ ಕೈಮುಗಿದು ೧

ನಿನ್ನ ಲೀಲೆಯ ಬೆಳೆಸಿರಿಯ ಸಂ
ಪನ್ನ ಮಾಯಾರಚನೆಯಿದು ನಿ
ರ್ಭಿನ್ನಭಾರತನಿಚಿತ ಬಹಳಾಕ್ಷೋಹಿಣೀ ದಳವ
ತನ್ನೊಡನೆ ಹಗೆಬೆಳೆದ ಶೌರ್ಯವಿ
ಪನ್ನರನು ತೋರೈ ಜನಾರ್ದನ
ಮನ್ನಿಸೆಂದಳು ನಯನಜಲವನು ಮಿಡಿದು ಗಾಂಧಾರಿ ೨

ತಾಯೆ ಬಾ ಗಾಂಧಾರಿ ಮನದಲಿ
ನೋಯದಿರು ಪೌರಾಣಜನ್ಮದ
ದಾಯಭಾಗದ ಭೋಗ ಭಂಗಿಸಲಳುಕಲೇಕಿನ್ನು
ಸಾಯಲಾಗದೆ ಸುಭಟರಸುಗಳು
ಬೀಯವೇ ಬ್ರಹ್ಮಾದಿಗಳಿಗಿದು
ದಾಯವೀ ಸಂಸಾರವೆಂದನು ನಗುತ ಮುರವೈರಿ ೩

ಎಂದು ಕೈಗೊಟ್ಟಬಲೆಯನು ಹರಿ
ತಂದನಾ ಸಂಗ್ರಾಮಭೂಮಿಗೆ
ಹಿಂದೆ ಬರಲಷ್ಟಾದಶಾಕ್ಷೋಹಿಣಿಯ ನಾರಿಯರು
ಮುಂದೆ ಹೆಣದಿನಿಹಿಗಳು ಖಗಮೃಗ
ವೃಂದ ಚೆಲ್ಲಿತು ಭೂತ ಪೂತನಿ
ವೃಂದ ಕೆದರಿತು ಹೊಕ್ಕರಿವರದ್ಭುತರಣಾಂಗಣವ ೪

ಸೂಸಿತಬಲಾವೃಂದ ಕೆದರಿದ
ಕೇಶಪಾಶದ ತೆಳುವಸುರ ನಿ
ಟ್ಟಾಸುರದ ಹೊಯ್ಲುಗಳ ಲೋಚನವಾರಿಧಾರೆಗಳ
ಆಸುರಾಕ್ರಂದನದ ಶೋಕಾ
ವೇಶ ಬಹಳದ ಬಾಲೆಯರು ಪ್ರಾ
ಣೇಶ ಮೈದೋರೆನುತ ಹೊಕ್ಕರಸಿದರು ಕಳನೊಳಗೆ ೫

ಹರಿದರಗಲಕೆ ನಾರಿಯರು ಕುರು
ಧರಣಿಯಲಿ ತಂತಮ್ಮ ಪತಿಗಳ
ಕರಿಗಳಲಿ ತುರಗದಲಿ ರಥದಲಿ ಕಂಡರಲ್ಲಲ್ಲಿ
ಶಿರವ ಮುಂಡಾಡಿದರು ಹೆಣನಲಿ
ಹೊರಳಿದರು ವಿವಿಧ ಪ್ರಳಾಪದ
ಪರಿತಪವನೆಂತರಿದರೋ ವರ್ಣಿಸುವಡರಿದೆಂದ ೬

ನಡೆದಳಾ ಗಾಂಧಾರಿ ಶೋಕದ
ಕಡಲೊಳೇಳುತ ಮುಳುಗುತಂಘ್ರಿಯ
ಕೊಡಹುತರುಣಾಂಬುಗಳ ಹೊನಲಿನ ಜಾನುದಘ್ನಗಳ
ಅಡಗಿನಲಿ ಕಾಲೂರಿ ಸಿಲುಕಿದ
ಡೊಡನೆ ಹರಿ ನೆಗಹುವನು ನರವಿನ
ತೊಡಕ ಬಿಡಿಸುತ ಹೊಕ್ಕಳಂಗನೆ ಹೆಣನ ಮಧ್ಯದಲಿ ೭

ಇತ್ತ ನೋಡೈ ದೇವಕೀಸುತ
ಮತ್ತಗಜ ಕಂಧರದೊಳಾ ಭಗ
ದತ್ತನನು ಕಂಡಾತನರಸಿಯರೈದೆ ಮೊಗವೆತ್ತಿ
ಸುತ್ತಬರುತೈದಾರೆ ದಂತಿಯ
ಹತ್ತಲರಿಯದೆ ನೂರುಮಡಿ ಶೋ
ಕೋತ್ತರದಲದೆ ಶಿವ ಎನುತ ಮರುಗಿದಳು ಗಾಂಧಾರಿ ೮

ದೇವ ನೋಡಾ ಶೋಕವಹ್ನಿಯ
ಡಾವರವ ಕಾಂಭೋಜನರಸಿಯ
ರಾವ ನೋಂಪಿಯ ನೋಂತರೋ ಶಿವಶಿವ ಮಹಾದೇವ
ಆವನಾತನು ನಿಮ್ಮವರುಗಳ
ಮಾವನೇ ಪಾಂಚಾಲ ಸತಿಯರು
ಜೀವದಲಿ ಜಾರಿದರು ರಮಣರ ಮೇಲೆ ತನಿಹೊರಳಿ ೯

ಅದೆ ವಿರಾಟನ ಸತಿಯರೀಚೆಯ
ಲದೆ ಘಟೋತ್ಕಚನಂಗನೆಯರಾ
ಸುದತಿಯರ ಶೋಕವ ನಿರೀಕ್ಷಿಸು ಪಂಚಕೇಕೆಯರ
ಒದರಿ ಪಾಂಡ್ಯನ ಹೆಂಡಿರಾಚೆಯ
ಲದೆ ಸುಸೋಮಕ ಸೃಂಜಯಾದ್ಯರ
ವಧುಗಳೊರಲುತ್ತದೆ ಮುರಾಂತಕ ನಿಮ್ಮ ಸೇನೆಯಲಿ ೧೦

ಸುಖಿ ಕಣಾ ಭೂರಿಶ್ರವನವರ
ಸಖಿಯರದೆ ಪಾಡಳಿದು ನಿಮ್ಮಯ
ಸಖನ ಗೆಲಿಸಿದಿರಿವನ ಮುರಿದಿರಿ ರಾಧೆಯಾತ್ಮಜನ
ನಿಖಿಳ ಯಾಚಕಜನ ಸಹಿತ ತ
ತ್ಸಖಿಯರಳುತದೆ ಕರ್ಣ ಮರಣದೊ
ಳಖಿಳಜಗ ನೀನೊಬ್ಬ ತಪ್ಪಿಸಿ ಮರುಗಿತಿಂದಿನಲಿ ೧೧

ಭಾನುದತ್ತನ ಮೇಲೆ ಹೊರಳುವ
ಮಾನಿನಿಯರ ನಿರೀಕ್ಷಿಸೈ ಮು
ತ್ತೂನುಗಳ ನೋಡಿತ್ತಲಿದೆ ದುಶ್ಶಾಸನಾದಿಗಳ
ಏನನೆಂಬೆನು ತನ್ನ ಸೊಸೆಯರ
ಹಾನಿಯನು ಮಾದ್ರೇಶನರಸಿಯ
ರೇನಧರ್ಮವ ನೆನೆದರೆಂದಳಲಿದಳು ಗಾಂಧಾರಿ ೧೨

ತಂದೆ ನೋಡೈ ಕೃಷ್ಣ ತನ್ನಯ
ನಂದನರು ನೂರ್ವರಿಗೆ ಕಿರಿಯಳ
ನಿಂದುಮುಖಿ ದುಶ್ಶಳೆಯನಾ ಸೈಂಧವನ ವಲ್ಲಭೆಯ
ಅಂದು ವಿವಿಧವ್ಯೂಹದಲಿ ಗುರು
ನಿಂದಡೆಯು ಹುಸಿರಾತ್ರಿಯಲಿ ನೀ
ಕೊಂದಲೆ ತನ್ನಳಿಯನನು ವರ ಸಿಂಧುಭೂಪತಿಯ ೧೩

ಕ್ಷೇಮಧೂರ್ತಿಯನಾ ಕಳಿಂಗನ
ಸೋಮದತ್ತನ ಚಿತ್ರಸೇನನ
ಭೀಮವೈರಿಯಲಂಬುಸನ ಕಿರ್ಮೀರನಂದನನ
ಭೌಮಸುತನ ಸುಶರ್ಮಕನ ಸು
ತ್ರಾಮರಿಪುಗಳ ಭೂರಿಬಲದ ಸ
ನಾಮರರಸಿಯರದೆ ನಿಜೇಶನ ಮೇಲೆ ತನಿಹೊರಳಿ ೧೪

ಎನುತ ಬರೆಬರೆ ಮುಂದೆ ಕಂಡಳು
ತನುಜನನು ಭೀಮನ ಗದಾ ಘ
ಟ್ಟನದ ಘಾಯದ ಮೆಯ್ಯ ಖಂಡಿಸಿದೂರುಮಂಡಲದ
ನನೆದ ಹುಡಿಮಗ್ಗುಲಿನ ರಕುತದ
ಹೊನಲ ಹೊಲಸಿನ ಘೂಕಕಾಕ
ಧ್ವನಿ ಭಯಂಕರ ಸನ್ನಿಧಾನದ ಕೌರವೇಶ್ವರನ ೧೫

ಇತ್ತ ನೋಡೈ ಕೃಷ್ಣ ತನ್ನಯ
ಮತ್ತದಂತಿಯನಿಂದುಕುಲ ರಾ
ಜೋತ್ತಮನನೇಕಾದಶಾಕ್ಷೋಹಿಣಿಯ ವಲ್ಲಭನ
ಹತ್ತೆ ಹಿಡಿದೋಲಗಿಸುವರು ವರ
ಮತ್ತಕಾಶಿನಿಯರುಗಳೀಗಳು
ಸುತ್ತಮುತ್ತಿತು ಘೂಕ ವಾಯಸ ಜಂಬುಕವ್ರಾತ ೧೬

ಎನುತ ಬಿದ್ದಳು ಮೂರ್ಛೆಯಲಿ ಮಾ
ನಿನಿಯನೆತ್ತಿದನಸುರರಿಪು ನೃಪ
ವನಿತೆಯರು ಭಾನುಮತಿ ಮೊದಲಾದಖಿಳ ರಾಣಿಯರು
ಜನಪತಿಯ ಮುಕ್ಕುರುಕಿದರು ತ
ಜ್ಜನಿತ ಶೋಕಾದ್ಭುತದ ಹಾ ಹಾ
ಧ್ವನಿಯು ಘಟ್ಟನೆ ಘಟ್ಟಿಸಿತು ಬ್ರಹ್ಮಾಂಡಮಂಡಲವ ೧೭

ಜನಪ ಕೇಳೀಚೆಯಲಿ ಕುಂತೀ
ವನಿತೆ ಕರ್ಣನ ಮೇಲೆ ಹೊರಳಿದ
ಳಿನತನುಜ ಹಾ ಕರ್ಣ ಹಾ ಹಾ ಕರ್ಣ ಹಾಯೆನುತ
ನಿನಗೆ ಧರ್ಮಸುತಾದಿ ಭೂಮಿಪ
ರನುಜರೈ ಮಾಯಾವಿ ಮಧುಸೂ
ದನನೆ ಮರೆಯಿಸಿ ಕೊಂದನಕಟೆಂದೊರಲಿದಳು ಕುಂತಿ ೧೮

ಅರಿದನಂತಕಸೂನು ಮುರಹರ
ನಿರಿದನೇ ನಾವಿನ್ನು ಕರ್ಣಗೆ
ಕಿರಿಯರೈ ಲೇಸಾಯ್ತು ಗುರುಜನ ಬಂಧುಜನಹನನ
ಉರುವ ಶಶಿವಂಶದ ಮಹಾನೃಪ
ರೆರಗಿದರೆ ಪಾತಕಕೆ ಮುನ್ನೆ
ಚ್ಚರಿಸದಕಟಾ ತಾಯಿ ಕೆಡಿಸಿದಳೆಂದು ಬಿಸುಸುಯ್ದು ೧೯

ಹೋಗಲಿನ್ನಾ ಕ್ಷತ್ರಧರ್ಮ
ತ್ಯಾಗ ದುರ್ವ್ಯಸನ ಪ್ರಪಂಚವ
ನೀಗಿ ಕಳೆಯೆಂದಸುರರಿಪುವೈತಂದು ಮನ್ನಿಸಿದ
ಮೇಗಿವರ ಸಂಸ್ಕಾರಕಾರ್ಯನಿ
ಯೋಗವಿವೆ ಭಾರಂಕ ನಿನಗೆ ಸ
ರಾಗದಲಿ ಸಂತೈಸಿಯೆಂದನು ಭೂಪತಿಗೆ ಶೌರಿ. ೨೦

ವ್ಯಾಸ ನಾರದ ವಿದುರ ಸಾತ್ಯಕಿ
ಕೇಶವನು ದಾರುಕ ಯುಯುತ್ಸು ಮ
ಹೀಶ ಮೊದಲಾದನಿಬರರಸರ ಸಾರಥಿವ್ರಾತ
ಆ ಸಚಿವರಾ ಹಸ್ತಿನಾಪುರ
ದಾ ಸಮಸ್ತಪ್ರಕೃತಿಜನ ಸಂ
ತೈಸಿದರು ಸಂಸ್ಕಾರವಿಧಿಯನು ಹತಮಹೀಶರಿಗೆ ೨೧

ಕುರುಪತಿಯ ರವಿಸುತನ ಮಾದ್ರೇ
ಶ್ವರನ ದುಶ್ಶಾಸನ ವಿಕರ್ಣಾ
ದ್ವರ ಜಯದ್ರಥ ಬಾಹ್ಲಿಕರ ಭಗದತ್ತ ಲಕ್ಷಣರ
ಗುರುವರನ ಪಾಂಚಾಲ ಮತ್ಸ್ಯೇ
ಶ್ವರರ ಕುಂತೀಭೋಜನೃಪಮು
ಖ್ಯರನು ವಿಧಿಪೂರ್ವಕದಿ ದಹಿಸಿದರಾಹಿತಾಗ್ನಿಯಲಿ ೨೨

ಕಳನ ಚೌಕದ ಸುತ್ತಲೊಟ್ಟಿಸಿ
ತಳಿಗಳನು ಬಹಳಾಗ್ನಿಯನು ಕೈ
ಕೊಳಿಸಿದರು ದಹಿಸಿದರು ಬಹಳಾಕ್ಷೋಹಿಣೀಭಟರ
ಬಳಿಕ ಹಸ್ತಿನಪುರದ ಸೀಮಾ
ಸ್ಥಳಕೆ ಬಂದರು ನಿಖಿಳ ಕಾಂತಾ
ವಳಿಸಹಿತ ಗಂಗಾವಗಹನವ ಮಾಡಿದನು ನೃಪತಿ ೨೩

ಆ ನದಿಯ ತೀರದಲಿ ತಿಂಗಳು
ಮಾನನಿಧಿ ತತ್ಪ್ರೇತರಿಗೆ ಜಲ
ದಾನ ವಿಧಿವಿಹಿತಪ್ರಪಂಚಿತ ಸಕಲ ಸಂಸ್ಕೃತಿಯ
ಭೂನುತನು ಮಾಡಿದನು ಬಂದುದು
ಜಾನಪದಜನವೈದೆ ಕುಂತೀ
ಸೂನುವನು ದರುಶನವ ಮಾಡಿತು ಕಾಣಿಕೆಯ ನೀಡಿ ೨೪

ತಿಳುಹಿ ರಾಯನ ಹೃದಯಸಂಚಿತ
ಕಲುಷವನು ಖಂಡಿಸಿ ಗತಾಕ್ಷನ
ಬಲಿದ ಚಿತ್ತವ್ಯಥೆಯನಾರಿಸಿ ನೃಪವಧೂಜನದ
ಅಳಲನಾರಿಸಿ ಗಜಪುರದ ನೃಪ
ನಿಳಯವನು ಹೊಗಿಸಿದನು ಯದುಕುಲ
ತಿಲಕ ಗದುಗಿನ ವೀರನಾರಾಯಣನು ಪಾಂಡವರ ೨೫

## ಹದಿಮೂರನೆಯ ಸಂಧಿ

ಸೂ. ದೇವಸಂತತಿ ನಲಿಯೆ ಪಾಂಡವ
ಜೀವಿ ಹರಿಯೆಂಬೀ ಪ್ರತಿಜ್ಞೆಯ
ಭಾವ ಸಂದುದು ಧರ್ಮಜನ ಪಟ್ಟಾಭಿಷೇಕದಲಿ

ಕೇಳು ಜನಮೇಜಯ ಧರಿತ್ರೀ
ಪಾಲ ಹಿಮಗಿರಿ ತೊಡಗಿ ಸಾಗರ
ವೇಲೆ ಪರಿಯಂತಖಿಳ ನಗರ ಗ್ರಾಮ ಪುರವರದ
ಮೇಲುವರ್ಣಪ್ರಮುಖವಾಹಾಂ
ಡಾಲರವಧಿ ಸಮಸ್ತ ಭೂಜನ
ಜಾಲ ಹಸ್ತಿನಪುರಿಗೆ ಬಂದುದು ಕಂಡುದವನಿಪನ ೧

ಚ್ಯವನ ಮುದ್ಗಲ ಕಣ್ವ ಕಠ ಭಾ
ರ್ಗವ ಭರದ್ವಾಜಾಂಗಿರಸ ಗಾ
ಲವ ಪುಲಸ್ತ್ಯ ರುಮಣ್ವ ಗೌತಮ ಯಾಜ್ಞವಲ್ಕ್ಯಮುನಿ
ಧ್ರುವ ವಿಭಾಂಡಕ ಗಾರ್ಗ್ಯ ಘಟಸಂ
ಭವ ಮೃಕಂಡುಸುತಾದಿ ಭೂಮಿ
ಪ್ರವರ ಮುನಿಗಳು ಬಂದು ಕಂಡರು ಧರ್ಮನಂದನನ ೨

ಜಲಧಿ ಮಧ್ಯದ ಕುರುವ ಘಟ್ಟಾ
ವಳಿಯ ಕೊಳ್ಳದ ಕುಹರ ಕುಂಜದ
ನೆಲೆಯ ಗಿರಿಸಾನುಗಳ ಶಿಖರದ ದುರ್ಗವೀಥಿಗಳ
ನೆಲನಶೇಷಪ್ರಜೆ ನಿಖಿಳ ಮಂ
ಡಳಿಕ ಮನ್ನೆಯ ವಂದಿಜನ ಸಂ
ಕುಲ ಮತಂಗಜಪುರಿಗೆ ಬಂದುದು ನೃಪನ ಕಾಣಿಕೆಗೆ ೩

ವ್ಯಾಸ ನಾರದ ಕೃಷ್ಣ ಮೊದಲಾ
ದೀ ಸಮಸ್ತ ಮುನೀಂದ್ರನಿಕರ ಮ
ಹೀಶನನು ಪಟ್ಟಾಭಿಷೇಕಕೆ ಮನವನೊಡಬಡಿಸಿ
ದೋಷರಹಿತ ಮುಹೂರ್ತ ಲಗ್ನ ದಿ
ನೇಶವಾರ ಶುಭಗ್ರಹೋದಯ
ಲೇಸೆನಲು ನೋಡಿದರು ಮಿಗೆ ಗಾರ್ಗ್ಯಾದಿ ಜೋಯಿಸರು ೪

ತರಿಸಿ ಮಂಗಳ ವಸ್ತುಗಳ ಸಂ
ವರಿಸಿ ಬಹುವಿಧವಾದ್ಯರವ ವಿ
ಸ್ತರದ ಪಂಚಮಹಾನಿನಾದದ ಸರ್ವಜನಮನದ
ಹರುಷಪೂರದ ವೇದಮಂತ್ರೋ
ಚ್ಚರಣಸಾರದ ನೃಪನ ಪಟ್ಟಾ
ಧ್ವರವೆಸೆಯಲುತ್ಸವವನೆಸಗಿದನಸುರರಿಪುವಂದು ೫

ಆದುದಾ ಪಟ್ಟಾಭಿಷೇಕದೊ
ಳಾ ದುರಾತ್ಮಕ ಚಾರ್ವಾಕನ ಪರಿ
ವಾದವನು ಮುನಿನಿಕರ ಕೇಳಿದು ಖತಿಯ ಭಾರದಲಿ
ಭೇದಿಸಿದರವನಸುರನೆಂದು ವಿ
ಷಾದವಹ್ನಿಯಲುರುಹಿದರು ಬಳಿ
ಕಾದರಿಸಿ ಧರ್ಮಜನ ಸಂತೈಸಿದನು ಮುರವೈರಿ ೬

ಅರಸ ಕೇಳೈ ಪಟ್ಟವದು ಹಿರಿ
ಯರಸನದು ಯುವರಾಜಪಟ್ಟವೆ
ಹರಿತನೂಜನೊಳಾಯ್ತು ಸೇನಾಪತಿ ಧನಂಜಯನು
ವರ ಕುಮಾರರು ಯಮಳರಲ್ಲಿಗೆ
ಹಿರಿಯ ಸಚಿವನು ವಿದುರನವನಿಪ
ಪರುತವಿಸಿದ ಯುಯುತ್ಸುವನು ಸರ್ವಾಧಿಕಾರದಲಿ ೭

ವರ ಮುನೀಂದ್ರರ ನಿಖಿಳ ದೇಶಾಂ
ತರದ ಭೂಸುರವರ್ಗವನು ಸ
ತ್ಕರಿಸಿದನು ಗೋ ಭೂಮಿ ವಸನ ಹಿರಣ್ಯದಾನದಲಿ
ಪರಿಜನವ ಪುರಜನವ ರತ್ನಾ
ಕರಪರೀತ ಮಹೀಜನವನಾ
ದರಿಸಿದನು ವೈಭವವಿಹಿತ ಸನ್ಮಾನ ದಾನದಲಿ ೮

ಆ ಸುಯೋಧನನರಮನೆಯನವ
ನೀಶ ಹೊಕ್ಕನು ಪವನಸುತ ದು
ಶ್ಶಾಸನನ ಸದನವನು ಪಾರ್ಥಗೆ ಕರ್ಣಭವನದಲಿ
ವಾಸವಾದುದು ಯಮಳರಿಗೆ ದು
ಶ್ಶಾಸನಾನುಜರರಮನೆಗಳುಳಿ
ದೈಸುಮನೆ ಭಂಡಾರವಾದುದು ಭೂಪ ಕೇಳೆಂದ ೯

ಮನ್ನಣೆಯಲಿ ಯುಯುತ್ಸು ಹೊಕ್ಕನು
ತನ್ನ ಮನೆಯನು ಭೀಷ್ಮ ಗುರುಕೃಪ
ರುನ್ನತಾಲಯವಾಯ್ತು ನೃಪನ ಪಸಾಯ್ತಸಂತತಿಗೆ
ಮುನ್ನಿನವರೇ ಮಂತ್ರಿ ಸಚಿವರು
ಮುನ್ನದಾವಂಗಾವ ಪರುತವ
ಭಿನ್ನವಿಲ್ಲದೆ ಪೌರಜನವೆಸೆದಿರ್ದುದಿಭಪುರಿಯ ೧೦

ಅರಸು ಧರ್ಮಜನಾದ ನಮಗಿ
ನ್ನುರವಣಿಪ ಮನ ಬೇಡ ಬೇಡು
ತ್ತರಿಸುವಿಹಪರವೆರಡ ಪಡೆದವು ನಿಖಿಳ ಜಗ ಹೊಗಳೆ
ಪರಿಮಿತದ ಜನ ತಮ್ಮ ಸುಬಲವ
ನಿರದೆ ಮಾಡುವೆನೆಂದು ಮುನಿಜನ
ಧರಣಿಸುರರೊಳಗಾದ ಪುರಜನರೊಲಿದು ಹರಸಿದರು ೧೧

ಬಳಿಕ ಭೀಷ್ಮನ ಬಾಣಶಯನ
ಸ್ಥಳಕೆ ಧರ್ಮಜ ಬಂದು ಧರ್ಮಂ
ಗಳನು ಕೇಳಿದು ರಾಜಧರ್ಮ ಸಮಸ್ತಧರ್ಮವನು
ತಿಳಿದನಗ್ಗದ ದಾನಧರ್ಮಾ
ವಳಿಯನಾತನ ರಾಜ್ಯಪಾಲನ
ನಳ ನಹುಷ ಭರತಾದಿ ಭೂಪರ ಗತಿಗೆ ಗುರುವಾಯ್ತು ೧೨

ಕದನದಲಿ ಕಯ್ಯಾರೆ ದೈತ್ಯರ
ಸದೆದು ಭೂಭಾರವನು ಪರಹ
ಸ್ತದಲಿ ಕಟ್ಟಿಸಿ ಕೊಟ್ಟಭಾಷೆಯಂಸುತ್ತರಾಯೆನಿಸಿ
ನದಿಯ ನಂದನನನು ಪರಾನಂ
ದದಲಿಸೇರಿಸಿ ಪರಮ ಪರಿತೋ
ಷದಲಿ ಪಯಣವ ಮಾಡಿದನು ಮುರವೈರಿ ನಿಜಪುರಿಗೆ ೧೩

ಯಮಸುತನ ತಕ್ಕೈಸಿ ಭೀಮನ
ಮಮತೆಯನು ಭುಲ್ಲೈಸಿ ಪಾರ್ಥನ
ನಮಿತ ಮಕುಟವ ನೆಗಹಿ ಪುಳಕಾಶ್ರುಗಳ ಪೂರದಲಿ
ಯಮಳರನು ಬೋಳೈಸಿ ರಾಯನ
ರಮಣಿಯನು ಸಂತೈಸಿ ವಿದುರ
ಪ್ರಮುಖರನು ಬೀಳ್ಕೊಟ್ಟು ಬಿಜಯಂಗೈದನಸುರಾರಿ ೧೪

ದೇವ ದುಂದುಭಿರವದ ಗಗನದ
ಹೂವಳೆಯ ಪೂರದ ಸಮಸ್ತ ಜ
ನಾವಳಿಯ ಜಯಜೀಯ ನಿರ್ಘೋಷದ ಗಡಾವಣೆಯ
ದೇವಕಿಯ ವಸುದೇವ ರುಕುಮಿಣಿ
ದೇವಿಯಾದಿಯ ಹರುಷದಾವಿ
ರ್ಭಾವ ಮಿಗೆ ನಿಜಪುರವ ಹೊಕ್ಕನು ವೀರನಾರಯಣ ೧೫

ಭವದುರಿತಹರವಕಟ ಹರಿನಾ
ಮವನು ನೆನೆವರು ಕಾಲಚಕ್ರದ
ಜವನ ಬೇಗೆಯ ಜುಣುಗಿ ಜಾರುವರಖಿಳ ಮಾನವರು
ಕವಿ ಕುಮಾರವ್ಯಾಸಸೂಕ್ತದ
ಸವೆಯದಮೃತವನೊಲಿದೊಲಿದು ಸು
ಶ್ರವಣದಲಿ ಕುಡಿಕುಡಿದು ಪದವಿಯ ಪಡೆವುದೀ ಲೋಕ ೧೬

ಶ್ರೀಮದಮರಾಧೀಶ ನುತಗುಣ
ತಾಮರಸಪದ ವಿಪುಳನಿರ್ಮಳ
ನಾಮನನುಪಮ ನಿಖಿಳಯತಿಪತಿದಿವಿಜವಂದಿತನು
ರಾಮನೂರ್ಜಿತನಾಮ ಸುಧೆಯಾ
ರಾಮನಾಹವಭೀಮ ರಘುಕುಲ
ರಾಮ ಪಾಲಿಸುವೊಲಿದು ಗದುಗಿನ ವೀರನಾರಯಣ ೧೭

ಅರಸ ವೈಶಂಪಾಯನಿಗೆ ನಿಜ
ಕರವ ಮುಗಿದು ಸುವರ್ಣವಸ್ತ್ರಾ
ಭರಣ ಗೋವ್ರಜ ಭೂಮಿ ಕನ್ಯಾದಾನ ಮಣಿಗಣದಿ
ಹಿರಿದು ಪರಿಯಲಿ ಮನದಣಿವವೋ
ಲುರುತರದ ದ್ರವ್ಯಾದಿಗಳ ಭೂ
ಸುರರಿಗಿತ್ತನು ರಾಯ ಜನಮೇಜಯಮಹೀಪಾಲ ೧೮

ಸರ್ಪಯಾಗದೊಳಾದ ಕರ್ಮದ
ದರ್ಪವನು ಕೆಡೆಯೊದೆದು ಬೆಳಗಿದ
ಸುಪ್ಪರದ ರವಿತೇಜದಲಿ ಸುರನರರು ಬೆರಗಾಗೆ
ತಪ್ಪದೀ ಭಾರತವ ಕೇಳ್ದಂ
ಗಪ್ಪುದಮರಸ್ತ್ರೀಕದಂಬದೊ
ಳೊಪ್ಪುವಿಂದ್ರನ ಪದವಿಯೆಂದನು ಸೂತ ಕೈಮುಗಿದು ೧೯

ವೇದಪಾರಾಯಣದ ಫಲ ಗಂ
ಗಾದಿ ತೀರ್ಥಸ್ನಾನಫಲ ಕೃ
ಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮಯಾಗಫಲ
ಮೇದಿನಿಯನೊಲಿದಿತ್ತ ಫಲ ವ
ಸ್ತ್ರಾದಿ ಕನ್ಯಾದಾನಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ ೨೦

ಇತಿ ಶ್ರೀಮದಚಿಂತ್ಯ ಮಹಿಮ ಗದುಗು ವೀರನಾರಾಯಣ ಚರಣಾರವಿಂದ ಮಕರಂದ ಮಧುಪಾನ ಪರಿಪುಷ್ಟ ವಚಃಪಟ್ಟದೀ ನಿಕಾಯ ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತಮಪ್ಪ ಕರ್ಣಾಟ ಭಾರತ ಕಥಾಮಂಜರಿಯೊಳ್ ಗದಾಪರ್ವಂ ಸಮಾಪ್ತಮುದು.

